# ಪ್ರಾಣಚಿಂತನ

(ಮಧ್ಯಮಪ್ರಾಣ ಎನಿಸುವ ಮುಖ್ಯಪ್ರಾಣನ ಕುರಿತಾದ ಸಮಗ್ರ ಚಿಂತನೆ)



"ಓಮಿತ್ಯೇವ ವಹನ್ ನಿತ್ಯಂ ವಾಯುರೋಂವ ಇತೀರಿತಃ"

ಪರವಿದ್ಯಾ ಪ್ರಕಾಶನ
ಶಮ್ಯಾಪ್ರಾಸ
ಮೂಡುಸಗ್ರಿ, ಉಡುಪಿ

# ಪ್ರಾಣಚಿಂತನ

['ಮಧ್ಯಮಪ್ರಾಣ' ಎನಿಸುವ ಮುಖ್ಯಪ್ರಾಣನ ಬಗ್ಗೆ ಸಮಗ್ರ ಚಿಂತನೆ]

ಸಂಪಾದಕ – ಚಿಂತಕ

ಸಗ್ರಿ ರಾಘವೇಂದ್ರ ಉಪಾಧ್ಯಾಯ



ಪ್ರಕಾಶನ - ಪರವಿದ್ಯಾ ಪ್ರಕಾಶನ
ಶಮ್ಯಾಪ್ರಾಸ, ಮೂಡುಸಗ್ರಿ

ಉಡುಪಿ - 576102

**'ಪ್ರಾಣಚಿಂತನ'** – 'ಮಧ್ಯಮಪ್ರಾಣ' ಎನಿಸುವ ಮುಖ್ಯಪ್ರಾಣನ ಬಗ್ಗೆ ಸಮಗ್ರ ಚಿಂತನೆ.

ಚಿಂತಕ-ಸಂಪಾದಕ : **ಸಗ್ರಿ ರಾಘವೇಂದ್ರ ಉಪಾಧ್ಯಾಯ**

ಪ್ರಕಾಶನ : ಪರವಿದ್ಯಾ ಪ್ರಕಾಶನ, 'ಶಮ್ಯಾಪ್ರಾಸ'
ಮೂಡುಸಗ್ರಿ, ಉಡುಪಿ - 576102
ದೂರವಾಣಿ – 0820-2573753

ಪ್ರಥಮ ಮುದ್ರಣ : **2007**
ದ್ವಿತೀಯ ಮುದ್ರಣ : **2010**

ಪ್ರತಿಗಳು : **1000**

ಪುಟಗಳು : ೧೬ + 730

**ಬೆಲೆ : ರೂ. 350.00**

ಅಕ್ಷರ ಜೋಡಣೆ : ಡಾ। ಕೆ. ಪದ್ಮನಾಭ ಕೇಕುಣ್ಣಾಯ ಮತ್ತು ಶ್ರೀಮತಿ ಸ್ವರ್ಣಲತಾ, ಉಡುಪಿ. [Ph. 2531159]
ಕವಚಪುಟ ವಿನ್ಯಾಸ : ಗೋಪ್ಯ ಕಂಪ್ಯೂಟರ್ಸ್, ಉಡುಪಿ.
ಮುದ್ರಣ : ರಾಷ್ಟ್ರೋತ್ಥಾನ ಮುದ್ರಣಾಲಯ, ಬೆಂಗಳೂರು.

ಮುಖಪುಟ ಸಂದೇಶ



## ಭಗವಂತನ ಧಾರಣವೈಭವ

**"ಪರ್ಯಂಕೋಪಾಸನಾ"** ಎಂಬ ಪ್ರಮಾಣಗ್ರಂಥವು (ಛಾಂದೋಗ್ಯಭಾಷ್ಯದಲ್ಲಿ ೮-೧-೧೦ ಉದಾಹೃತ) **"ಓಮಿತ್ಯೇವ ವಹನ್ನಿತ್ಯಂ ವಾಯುರೋಂವ ಇತೀರಿತಃ । ತೇನ ವಾಮತ್ವಮಾಯಾತಿ ಮುಕ್ತಿಕಾಲೇ ಹ್ಯುಪಾಸಕಃ ॥"** – ವಾಯುದೇವನು ಓಂಕಾರವನ್ನು ಪಠಿಸುತ್ತ, ಓಂ ಎನಿಸುವ ಭಗವಂತನನ್ನು ಹೊತ್ತಿರುವ ಪ್ರಯುಕ್ತ **ಓಂವಃ** ಎನಿಸಿರುವನು. ಅಂತಹ ವಾಯುದೇವನ ಅನುಗ್ರಹದಿಂದಲೇ ಉಪಾಸಕನು ಮುಕ್ತಿಕಾಲದಲ್ಲಿ ಮಂಗಳ ಸ್ವರೂಪವನ್ನು ಹೊಂದುವನೆಂದು ಪ್ರತಿಪಾದಿಸುತ್ತಿದೆ.

ವಾಯುದೇವ ಅರ್ಥಾನುಸಂಧಾನಪೂರ್ವಕವಾಗಿ ಓಂಕಾರವನ್ನು ಪಠಿಸುತ್ತಿರುವನೇ ಹೊರತು ಯಾಂತ್ರಿಕವಾಗಿ ಅಲ್ಲ. ಹಾಗೆ ವಾಯುದೇವ ನಡೆಸುತ್ತಿರಬಹುದಾದ ಓಂಕಾರದ ಅರ್ಥಾನುಸಂಧಾನದಲ್ಲಿ ತಾನು ಭಗವಂತನನ್ನು ಹೆಗಲ ಮೇಲೆ ಹೊತ್ತಿರುವ ಪ್ರಕ್ರಿಯೆಗನುಗುಣವಾಗಿ **"ಭರ್ತಾ ಸನ್ ಭ್ರಿಯಮಾಣೋ ಬಿಭರ್ತಿ......."** ಎಂದು ಶ್ರುತಿ ಸಾರುತ್ತಿವಂತೆ ಎಲ್ಲರಿಂದ ತಮ್ಮ ತಮ್ಮ ಹೃದಯದಲ್ಲಿ ಧರಿಸಲ್ಪಡುವವನಾಗಿ ಅವರನ್ನು ಧರಿಸುವ ಭರ್ತಾ ಎನಿಸುವ ಭಗವಂತನು ಎಲ್ಲರನ್ನು ಧರಿಸುವುದಕ್ಕಾಗಿ ಎಲ್ಲರನ್ನೂ ಪ್ರವೇಶಿಸಿರುವನು. **"ಅವತಿ ಪ್ರವಿಶತಿ ಧಾರಕತ್ವೇನ ಸರ್ವಮಿತಿ ಓಮ್"** (ಅವ ಪ್ರವೇಶೇ) ಎಂಬ ಅವನ ಧಾರಣವೈಭವಕ್ಕೆ ಸಂಬಂಧಿಸುವ ಓಂಕಾರದ ಅರ್ಥಾನುಸಂಧಾನವನ್ನಂತೂ ಮಾಡದಿರಲಾರನು.

ಸಾಧಕರು ಸಾಧಕೋತ್ತಮನಾದ ವಾಯುದೇವನ ಈ ಬಗೆಯ ಸಾಧನೆಯನ್ನು ಛಾಂದೋಗ್ಯೋಪನಿಷತ್ತಿನ ಸಂದೇಶಕ್ಕೆ ಸಂಬಂಧಿಸಿದಂತೆ ಅನುಸಂಧಾನ ನಡೆಸಲು ಅನುಕೂಲವಾಗುವಂತೆ ಉಡುಪಿ ಶ್ರೀಕೃಷ್ಣ ಉಪನಿಷತ್ತಿನ ಸಂದೇಶಕ್ಕೆ ಪ್ರಾತ್ಯಕ್ಷಿಕೆಯನ್ನು ನೀಡುತ್ತಿರುವಂತಿದೆ. ಒಂದು ರಾಮನವಮಿಯ ಪರ್ವದಿನದಂದು ಉಡುಪಿ ಶ್ರೀಕೃಷ್ಣ ತನ್ನ ಕೈಗಳಲ್ಲಿರುವ ಕಡೆಗೋಲು ನೇಣುಗಳನ್ನು ಬಿಲ್ಲುಬಾಣಗಳನ್ನಾಗಿಸಿ, ತಾನು ರಾಮಚಂದ್ರನಾಗಿ ಮೆರೆದಿರುವನು. **"ಓಂವಃ"** ಎನಿಸುವ ವಾಯುದೇವನ ರೂಪವಾದ ಆಂಜನೇಯನ ಹೆಗಲನ್ನು ಏರಿರುವನು. ಹಾಗೆ ಭಕ್ತಾಂಜನೇಯನ ಹೆಗಲ ಮೇಲೇರಿ ತಾನು ಯಾರಲ್ಲಿಗೆ ಬರಬೇಕಾದರೂ ತನ್ನನ್ನು ಆಂಜನೇಯ ಹೊತ್ತು ತರಬೇಕು. ಮುಖ್ಯಪ್ರಾಣನ ಮಾಧ್ಯಮದಲ್ಲಿಯೇ ತನ್ನ ಅನುಗ್ರಹ ಹಾಗೂ ಪ್ರಾಪ್ತಿ ಎಂದು ಸೂಚ್ಯವಾಗಿ ಸಂದೇಶಿಸುತ್ತಿರುವನು.

**ಎರಡನೇ ಕವಚಪುಟದ ಸಂದೇಶ**

## ಶ್ರೀವಿಬುಧಪ್ರಿಯತೀರ್ಥರ ಸಾಧನೆಗಳು



ತಮಿಳ್ನಾಡಿನ ಘಟಿಕಾಚಲ ಭಗವಂತನ ಹಾಗೂ ಮುಖ್ಯಪ್ರಾಣನ ಘನಿಷ್ಠ ನಂಟನ್ನು ಸ್ಫುಟವಾಗಿ ಸಾರುತ್ತಿರುವ ಕ್ಷೇತ್ರ. ಅಲ್ಲಿ ಎರಡು ಬೆಟ್ಟಗಳು ವಿರಾಜಿಸುತ್ತಿದ್ದು, ಅವುಗಳಲ್ಲಿ ಸಾವಿರದ ಎಂಟು ಮೆಟ್ಟಲುಗಳನ್ನು ಹೊಂದಿರುವಷ್ಟು ದೊಡ್ಡದಾದ ಬೆಟ್ಟದಲ್ಲಿ ಮೆರೆಯುತ್ತಿರುವ ಯೋಗನರಸಿಂಹ ತನ್ನ ಊರ್ಧ್ವಗ ವ್ಯಕ್ತಿತ್ವದಿಂದ ತನ್ನ ಸರ್ವೋತ್ತಮತ್ವವನ್ನು ಘೋಷಿಸುತ್ತಿದ್ದರೆ, ಮತ್ತೊಂದು ನಾಲ್ನೂರೈವತ್ತು ಮೆಟ್ಟಲುಗಳನ್ನಷ್ಟೇ ಹೊಂದಿದ್ದು ಸ್ವಲ್ಪ ಚಿಕ್ಕ ಬೆಟ್ಟದಲ್ಲಿ ಸಾಧನೆಗೈಯುತ್ತಿರುವ ಮುಖ್ಯಪ್ರಾಣ ತಾನು ನರಸಿಂಹನಂತೆ ಸರ್ವೋತ್ತಮನೆನಿಸದಿದ್ದರೂ ಜೀವೋತ್ತಮ ಎನಿಸಿದ್ದು ರುದ್ರಾದಿ ಜೀವರಿಗಿಂತೆಲ್ಲ ಎತ್ತರದಲ್ಲಿರುವವನು ಎಂದು ಸಾರುತ್ತಿರುವನು. ಮತ್ತೊಂದು ಬೆಟ್ಟದಲ್ಲಿರುವ ನರಸಿಂಹನಿಗೆ ಅಭಿಮುಖವಾಗಿದ್ದುಕೊಂಡು ಅವನನ್ನು ಧ್ಯಾನಿಸುತ್ತಿರುವ ಮುಖ್ಯಪ್ರಾಣ ತನ್ನ ಈ ಬಗೆಯ ಇರುವಿಕೆಗೂ "ಅಭಾಸಕೋಽಸ್ಯ ಪವನಃ........" ಎಂದಿರುವಂತೆ ತಾನು ನರಸಿಂಹನ ಪ್ರತಿಬಿಂಬನಾಗಿರುವುದೇ ಕಾರಣ ಎಂದು ಸೂಚ್ಯವಾಗಿ ತಿಳಿಸುತ್ತ, ಆ ಬಗ್ಗೆ ಕೃತಜ್ಞತಾಪೂರ್ವಕವಾಗಿ ಅವನನ್ನು ಧ್ಯಾನಿಸುತ್ತಿರುವನು.

"ನರಸಿಂಹಪದಾಧಾರಾಃ" ನರಸಿಂಹನ ಪಾದಗಳನ್ನು ಆಶ್ರಯಿಸಿದವರೆಂದೇ ಮಧ್ವವಿಜಯದಲ್ಲಿ (೧೫-೧೨೮) ಉಲ್ಲೇಖಿಸಲ್ಪಟ್ಟಿರುವ ಉಡುಪಿ ಅದಮಾರು ಮಠದ ಯತಿಗಳ ಪರಂಪರೆಯಲ್ಲಿ ೨೯ನೆಯ ಯತಿಗಳಾಗಿ ಮೆರೆದಿದ್ದ ಶ್ರೀವಿಬುಧಪ್ರಿಯತೀರ್ಥರು ತಮ್ಮ ಅಂತ್ಯಕಾಲದಲ್ಲಿ ವಟುರೂಪದಲ್ಲಿ ಬಂದ ಮುಖ್ಯಪ್ರಾಣನ ಸೂಚನೆಯಂತೆ ಘಟಿಕಾಚಲದ ಮುಖ್ಯಪ್ರಾಣ ಹಾಗೂ ಯೋಗನರಸಿಂಹ ಇವರ ಸೆಳೆತಕ್ಕೊಳಗಾಗಿ ಇಲ್ಲಿಗೆ ಚಿತ್ತೈಸಿದ್ದರು. ತಮ್ಮ ಬದುಕಿನಲ್ಲಿ ನಡೆದ ಪ್ರಮುಖ ಸಾಧನೆಗಳನ್ನು ಮುಖ್ಯಪ್ರಾಣಾಂತರ್ಗತ ನರಸಿಂಹನಿಗೆ ಅರ್ಪಿಸಿದ್ದರು.

ಆ ಸಾಧನೆಗಳು ಹೀಗಿವೆ:

೧. ಉಡುಪಿ ಶ್ರೀಕೃಷ್ಣನ ಪೂಜೆಯ ಮೂರು ಪರ್ಯಾಯಗಳನ್ನು ವೈಭವದಿಂದ ನೆರವೇರಿಸಿದ್ದರು.

೨. ಕ್ರೋಧನ ಸಂವತ್ಸರದ ಕಾರ್ತಿಕ ಕೃಷ್ಣ ಪಂಚಮಿಯಂದು (೫-೧೧-೧೯೨೫) ಸರ್ವಜ್ಞಪೀಠದಲ್ಲಿ ಕುಳಿತು ವಟು ನಾರಾಯಣ ತಂತ್ರಿಗೆ ಪ್ರಣವೋಪದೇಶ ನೀಡಿದ್ದರಲ್ಲದೆ, ವೇದಾಂತ ಸಾಮ್ರಾಜ್ಯ ಪಟ್ಟಾಭಿಷೇಕ ಮಾಡಿ ಅವರನ್ನು ಶ್ರೀವಿದ್ಯಾಮಾನ್ಯ ತೀರ್ಥರನ್ನಾಗಿ ರೂಪಿಸಿದರು.

೩. ಉಡುಪಿ ಶ್ರೀಕೃಷ್ಣನಿಗೆ ಅತ್ಯಂತ ಪ್ರಿಯಗಳಾದ ಗೋವುಗಳಿಗಾಗಿ ಉಡುಪಿ ಶ್ರೀಕೃಷ್ಣ ಮಠದ ಬಡಗುಮಾಳಿಗೆಯ ಎದುರು ಗೋಶಾಲೆಯನ್ನು ನಿರ್ಮಿಸಿದರು.

೪. ತಮ್ಮ ಪರ್ಯಾಯಾವಧಿಯಲ್ಲಿ ಮಧ್ವಸರೋವರದ ನೈಋತ್ಯ ದಿಕ್ಕಿನಲ್ಲಿ ಗಮಗೆ ಕಾಣಿಸಿಕೊಂಡದ್ದರ ದಾಖಲೆಗಾಗಿ ಮಧ್ವಸರೋವರದ ನೈಋತ್ಯ ಭಾಗದಲ್ಲಿ ಗಂಗೆಯ ಗುಡಿಯನ್ನು ನಿರ್ಮಿಸಿ ಅಲ್ಲಿ ಗಂಗೆಯನ್ನು ಪ್ರತಿಷ್ಠಾಪಿಸಿದ್ದರು.

೫. ಘಟಿಕಾಚಲದ ಯೋಗನರಸಿಂಹನ ಉತ್ಸವಕ್ಕಾಗಿ ರಥವನ್ನು ನಿರ್ಮಿಸಿ ಸಮರ್ಪಿಸಿದ್ದರು.

೬. ಕಾಣಿಯೂರು ಮಠದ ಶ್ರೀ ವಿದ್ಯಾಸಮುದ್ರತೀರ್ಥರು, ಪಲಿಮಾರು ಮಠದ ಶ್ರೀ ರಘುಮಾನ್ಯ ತೀರ್ಥರು, ಪೇಜಾವರ ಮಠದ ಶ್ರೀ ವಿಶ್ವಮಾನ್ಯ ತೀರ್ಥರು ಹಾಗೂ ಪುತ್ತಿಗೆ ಮಠದ ಶ್ರೀ ಸುಜ್ಞಾನೇಂದ್ರ ತೀರ್ಥರು ಹೀಗೆ ನಾಲ್ಕು ಮಠಾಧಿಪತಿಗಳಿಗೂ, ಹತ್ತಾರು ಗೃಹಸ್ಥರಿಗೂ ವೇದಾಂತಪಾಠ ಮಾಡಿ ಎರಡು ಬಾರಿ ಸುಧಾ ಮಂಗಳೋತ್ಸವವನ್ನು ನಡೆಸಿದ್ದರು.

೭. ಪುತ್ತಿಗೆ ಮಠದ ಶ್ರೀ ಸುಧೀಂದ್ರತೀರ್ಥರನ್ನು ಮುಂದಿಟ್ಟುಕೊಂಡು ಉಳಿದ ಅಷ್ಟಮಠಾಧೀಶರ ನೆರವಿನೊಂದಿಗೆ ಕ್ರಮಬದ್ಧವಾಗಿ ವೇದಾಂತ ವಿದ್ಯೆಯ ಹಾಗೂ ಇತರ ಶಾಸ್ತ್ರಗಳ ಅಧ್ಯಯನ ನಡೆಯಲು ಅನುಕೂಲವಾಗಲೆಂದು (೨೯-೮-೧೯೦೪)ರಂದು ಉಡುಪಿಯ ಶ್ರೀಮನ್ಮಧ್ವಸಿದ್ಧಾಂತಪ್ರಬೋಧಿನೀ ಮಹಾಪಾಠಶಾಲೆಯನ್ನು ಪ್ರಾರಂಭಿಸಿದ್ದರು.

**ತಸ್ಮೈ ಪ್ರಾಣಾತ್ಮನೇ ನಮಃ**

ಶ್ರೀವಿಬುಧಪ್ರಿಯ ತೀರ್ಥರ ಈ ಬಗೆಯ ಸಾಧನೆಗಳಿಂದ ಸಂತುಷ್ಟನಾಗಿರುವ ಮುಖ್ಯಪ್ರಾಣಾಂತರ್ಯಾಮಿ ಯೋಗನರಸಿಂಹನ ಪಾದಾರವಿಂದದಲ್ಲಿ ಶ್ರೀ ವಿಬುಧಪ್ರಿಯತೀರ್ಥರ ಸವಿನೆನಪಿಗಾಗಿಯೇ ಸಿದ್ಧಗೊಂಡ ಈ ಕೃತಿಯೂ ಸಮರ್ಪಿತ "ತಸ್ಮೈ ಪ್ರಾಣಾತ್ಮನೇ ನಮಃ".

**ಮೂರನೇ ಕವಚಪುಟದ ಸಂದೇಶ**

## ವಾಯುವಾಹನತ್ವ



ಪಲಿಮಾರು ಮಠದ ಶ್ರೀ ವಿದ್ಯಾಮಾನ್ಯ ತೀರ್ಥರು ತಮ್ಮ ದ್ವಿತೀಯ ಪರ್ಯಾಯಾವಧಿಯಲ್ಲಿ ಪ್ರಕಟಗೊಳಿಸಿದ ವಿಷ್ಣುಸಹಸ್ರನಾಮದ ಕೃತಿಯಲ್ಲಿ "ವಾಯುವಾಹನ" ಎಂಬ ವಿಷ್ಣುಸಹಸ್ರನಾಮಕ್ಕೆ ಬರೆದಿರುವ ಜಿಜ್ಞಾಸೆ ಶ್ರೀ ವಿಷ್ಣುವಿನ ವಾಯುವಾಹನತ್ವದ ಕುರಿತಾದದ್ದು. ಶ್ರೀ ಮಧ್ವರ ಮಹಾಭಾರತತಾತ್ಪರ್ಯ ನಿರ್ಣಯದ ವಿಚಾರಗಳ ಹಿನ್ನೆಲೆಯಲ್ಲಿ ಹೆಚ್ಚಿನ ನಿರ್ಣಯಗಳನ್ನು ನಡೆಸುತ್ತಿದ್ದ ಶ್ರೀಪಾದರು ಭಗವಂತನ ವಾಯುವಾಹನತ್ವದ ಸಮರ್ಥನೆಗೂ "........ಅನೇನ ನುತೋಽಸ್ಯ ಚಾಂಸಂ

ಪ್ರೀತ್ಯಾऽऽರುರೋಹ ಸ ಹಸನ್ ಸಹ ಲಕ್ಷ್ಮಣೇನ" (ಮ.ಭಾ.ತಾ.ನಿ. ೬-೧) ಎಂಬ ಮಹಾಭಾರತತಾತ್ಪರ್ಯ ನಿರ್ಣಯದ ಮಾತನ್ನೂ ಬಳಸಿಕೊಂಡಿರುವುದು ಗಮನಾರ್ಹ.

## ನಾಲ್ಕನೆಯ ಕವಚ ಪುಟದ ಸಂದೇಶ

# ಮಹತ್ವದ ಪ್ರಸಂಗಗಳಲ್ಲಿ

ಭಗವಂತನ ಅತ್ಯಂತ ಆದರಕ್ಕೆ ಪಾತ್ರನಾಗಿರುವ ಶ್ರೀಮುಖ್ಯಪ್ರಾಣದೇವನ ಅವತಾರ ರೂಪಗಳಾದ ಹನುಮಂತ, ಭೀಮ ಹಾಗೂ ಮಧ್ವ ಇವರ ಮೇಲೆ ಭಗವಂತ ಎಷ್ಟೊಂದು ಆದರವನ್ನು ತೋರಿಸಿರುವನೆಂಬುದನ್ನು ಮಹಾಭಾರತತಾತ್ಪರ್ಯನಿರ್ಣಯ, ಮಹಾಭಾರತ ಹಾಗೂ ಮಧ್ವವಿಜಯ ಇವುಗಳ ಮಾತುಗಳನ್ನು ಪರಿಶೀಲಿಸಿದರೆ ಸ್ಪಷ್ಟವಾಗಬಲ್ಲದು. ಆಂಜನೇಯಾದಿಗಳ ಪ್ರಶಸ್ತಿ ರೂಪದಲ್ಲಿ ಬಂದಿರುವ ಭಗವಂತನ ಈ ಮಾತುಗಳು ತುಂಬ ಮಹತ್ತ್ವದ ಪ್ರಸಂಗಗಳಲ್ಲೇ ಹೊರಹೊಮ್ಮಿರುವವು.



* ರಾಮಾಯಣಯುದ್ಧದಲ್ಲಿ ಪಾಲ್ಗೊಂಡು ಸೇವೆ ಸಲ್ಲಿಸಿದ ಕಪಿಗಳನ್ನೆಲ್ಲ ಸಮ್ಮಾನಿಸುತ್ತ ಆಂಜನೇಯ ನನ್ನು ಸಮ್ಮಾನಿಸಬೇಕೆಂದಾಗ ಶ್ರೀರಾಮಚಂದ್ರ "ಹನೂಮತೋ ನ ಪ್ರತಿಕರ್ತೃತಾ ಸ್ಯಾತ್....." ಹನೂಮಂತನ ಸೇವೆಗೆ ಪ್ರತಿಯಾಗಿ ಏನನ್ನೂ ಕೊಡಲು ಸಾಧ್ಯವೇ ಇಲ್ಲ ಎಂದು ಉದ್ಗಾರ ಎತ್ತಿ, ನಡೆಸಿರುವ ಹನೂಮಂತನ ಗುಣಗಾನ.

* ಕುರು ಪಾಂಡವರ ಸಂಧಾನದ ಪ್ರಸ್ತಾವದಲ್ಲಿ ಹಸ್ತಿನಾಪುರಕ್ಕೆ ದೂತನಾಗಿ ಹೊರಟ ಶ್ರೀಕೃಷ್ಣ ಯುದ್ಧದ ವಿಷಯದಲ್ಲಿ ಭೀಮಸೇನ ತಾನು ನೀಡಿದ ಅನಿಸಿಕೆಯ ಹಿನ್ನೆಲೆಯನ್ನು ಸಮರ್ಥಿಸಿದಾಗ ಎತ್ತಿರುವ ಉದ್ಗಾರ ಭೀಮಸೇನನ ಜೀವೋತ್ತಮತ್ವವನ್ನು ಧ್ವಜದಂತೆ ಸಾರುವಂತಹದ್ದಾಗಿದೆ.

* ಹಿಮಾಲಯದ ನಾರಾಯಣಾಶ್ರಯದಲ್ಲಿ ಶ್ರೀವೇದವ್ಯಾಸರಿಂದ ಕೂಡಿಕೊಂಡು ಶ್ರೀಮಧ್ವರು ಯಮಪುತ್ರನಾದ ನಾರಾಯಣನ ಸಮಾಗಮ ನಡೆಸಿದಾಗ ನಾರಾಯಣ ಶ್ರೀಮಧ್ವರ ಕರ್ತವ್ಯದ ಬಗ್ಗೆ ಸ್ಫೂರ್ತಿ ನೀಡುತ್ತಾ ಶ್ರೀಮಧ್ವರಿಗೆ ಅನುಗ್ರಹಿಸಿದ್ದ ಕಿವಿಮಾತು ರುದ್ರಾದಿ ಇತರ ದೇವತೆಗಳಿಂದ ನಿರ್ವಹಿಸಲು ಆಗದ ಸಾಧನೆಯನ್ನು ನಿರ್ವಹಿಸಬಲ್ಲ ಮಧ್ವರ ದೇವೋತ್ತಮ ವ್ಯಕ್ತಿತ್ವವನ್ನು ಮೌನವಾಗಿ ಸಾರಬಲ್ಲದು.

ಸಂಪಾದಕೀಯ

# ಪ್ರಾಣೋಪಾಸಕರ ಸ್ಫೂರ್ತಿಯ ಬಲ

ಉಡುಪಿ ಅದಮಾರುಮಠದ ಯತಿಪರಂಪರೆಯಲ್ಲಿ ೨೯ನೆಯವರಾಗಿ ಮೆರೆದ ಶ್ರೀ ವಿಬುಧಪ್ರಿಯತೀರ್ಥರು ಶ್ರೀಕೃಷ್ಣನನ್ನು ಹೇಗೋ ಹಾಗೆ ಅವನ ಭಕ್ತೋತ್ತಮನಾದ ಮುಖ್ಯ ಪ್ರಾಣನನ್ನೂ ವಿಶೇಷವಾಗಿ ಉಪಾಸಿಸುತ್ತಿದ್ದರು. ಮುಖ್ಯಪ್ರಾಣ ಮಾಣವಕರೂಪದಿಂದ ಬಂದು ವ್ಯವಹರಿಸುವಷ್ಟೂ ಅವರ ಜೊತೆಗೆ ಸ್ಪಂದಿಸುತ್ತಿದ್ದ. ಆ ರೀತಿಯಾಗಿ ನೀಡಿದ ಸೂಚನೆಗನುಗುಣವಾಗಿಯೇ ಶ್ರೀಪಾದರು ತಮ್ಮ ಕೊನೆಯ ದಿನಗಳಲ್ಲಿ ಘಟಿಕಾಚಲಕ್ಕೆ ಹೋಗಿ ಅಲ್ಲಿಯ ಮುಖ್ಯಪ್ರಾಣ ಹಾಗೂ ಅವನಿಂದ ಉಪಾಸ್ಯನಾಗಿರುವ ನರಸಿಂಹನನ್ನು ಉಪಾಸಿಸಿದ್ದರು.



ಪಲಿಮಾರುಮಠದ ಶ್ರೀ ವಿದ್ಯಾಮಾನ್ಯತೀರ್ಥರ ಆಶ್ರಮಗುರುಗಳಾದ ಶ್ರೀ ವಿಬುಧಪ್ರಿಯತೀರ್ಥರ ಆರಾಧನೆಯನ್ನು ಶ್ರೀ ವಿದ್ಯಾಮಾನ್ಯತೀರ್ಥರ ಆರಾಧನೆಯ ಸಂದರ್ಭದಲ್ಲಿ (ಚೈತ್ರಕೃಷ್ಣ ದ್ವಾದಶಿ) ನಡೆಸಬೇಕೆಂದು ಪಲಿಮಾರುಮಠದ ಶ್ರೀ ವಿದ್ಯಾಧೀಶತೀರ್ಥರು ಸಂಕಲ್ಪಿಸಿರುವರು. ಅದಕ್ಕನುಗುಣವಾಗಿ ನಡೆದ ಕಳೆದ ವರ್ಷದ ಆರಾಧನೆಯ ಸಂದರ್ಭದಲ್ಲಿ ಶ್ರೀ ವಿಬುಧಪ್ರಿಯ ತೀರ್ಥರ ಸವಿನೆನಪಿಗಾಗಿ ಅವರ ಕುರಿತು ಬರೆಯುವುದಕ್ಕಿಂತ ಅವರು ಉಪಾಸಿಸುತ್ತಿದ್ದ ಮುಖ್ಯಪ್ರಾಣನ ಕುರಿತಾಗಿ ಒಂದು ಪುಟ್ಟ ಕೃತಿ ರಚಿಸಬೇಕೆಂದು ಸಂಕಲ್ಪಿಸಿದೆ. ಆದರೆ ಆ ಸಂದರ್ಭದಲ್ಲಿ ಆ ಕೃತಿಯ ಪ್ರಕಟಣೆ ಸಾಧ್ಯವಾಗಿಲ್ಲ. ಆದರೂ ಆ ಕೃತಿಯ ಕುರಿತಾದ ಸ್ಫೂರ್ತಿ ಇಂಗಲಿಲ್ಲ; ಬದಲಾಗಿ ಇನ್ನಷ್ಟು ಮತ್ತಷ್ಟು ಚಿಮ್ಮುತ್ತ ಹೋಯಿತು. ಸುಮಾರು ನೂರು ಪುಟಗಳೊಳಗಿನ ವ್ಯಾಪ್ತಿಯ ಕೃತಿಯ ರಚನೆಯ ಯೋಜನೆ ಏಳುನೂರು ಪುಟಗಳನ್ನೂ ದಾಟಿದ ಕೃತಿ ರಚನೆಯ ಯೋಜನೆಯಾಗಿ ಬೆಳೆಯುವಷ್ಟೂ ಸ್ಫೂರ್ತಿ ಚಿಗುರಿತು. ಸತ್ಯವ್ರತ ರಾಜನೆದುರು ಭಗವಂತನ ಮತ್ಸ್ಯರೂಪ ಹೇಗೆ ಕ್ರಮವಾಗಿ ಬೆಳೆದಿತ್ತೋ ಹಾಗೆ. ಬೆಳೀತಾ

ಬೆಳೀತಾ 'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್' –ಮುಖ್ಯಪ್ರಾಣನ ವಿಷಯದಲ್ಲಿ ಇಲ್ಲಿ ಏನೇನಿದೆಯೋ ಅದಷ್ಟೇ ಉಳಿದೆಡೆ ಇರಲು ಸಾಧ್ಯ. ಇಲ್ಲಿ ಇಲ್ಲದಿದ್ದದ್ದು ಇನ್ನೆಲ್ಲೂ ಕಾಣಸಿಗಲಾರದು –ಎಂಬ ಹೆಗ್ಗಳಿಕೆಗೆ ಪಾತ್ರವಾಗುವಷ್ಟೂ ಬೆಳೆಯಿತು. 'ಗ್ರಂಥಗೌರವ ಭಯ'ದ 'ಇಷ್ಟು ದೊಡ್ಡ ಕೃತಿಯಾದರೆ ಯಾರು ತೆಗೆದುಕೊಳ್ತಾರೆ? ಯಾರು ಓದುತ್ತಾರೆ?..... ಇತ್ಯಾದಿ ಇತ್ಯಾದಿ ಕರಿನೆರಳುಗಳು ಒಂದೆಡೆ ಕುಕ್ಕುತ್ತಿದ್ದರೆ ಮತ್ತೊಂದೆಡೆ ಪ್ರಾಣಚಿಂತನೆಗೆ ಉಪಯುಕ್ತವೆನಿಸಬಲ್ಲ ಬೇರೆ ಬೇರೆ ಬಗೆಯ ದೃಷ್ಟಿಕೋನಗಳ ಸ್ಫುರಣೆ ಆಗಾಗ್ಗೆ ನಡೆಯುತ್ತಿದ್ದು 'ಉತ್ಪತ್ಸ್ಯತೇ ಮಮ ತು ಕೋಽಪಿ ಸಮಾನಧರ್ಮಾ ಕಾಲೋ ಹ್ಯಯಂ ನಿರವಧಿಃ ವಿಪುಲಾ ಚ ಪೃಥ್ವೀ' –ಎಂಬ ಭವಭೂತಿಯ ಮಾತಿನ ನೆನಪಿನೊಂದಿಗೆ ಈ ವಿಚಾರವನ್ನು ಸಹೃದಯತೆಯಿಂದ ಆಸ್ವಾದಿಸುವ ಸಾಧಕರು ಒಬ್ಬಿಬ್ಬರಾದರೂ ಎಲ್ಲಾದರೂ, ಎಂದಾದರೂ ಕಾಣಸಿಕೊಳ್ಳದಿರಲಾರರು –ಎಂಬ ಆಶಾವಾದದ ತೀಕ್ಷ್ಣ ಕಿರಣಗಳು ಗ್ರಂಥಗೌರವ ಭಯದ ಕರಿನೆರಳುಗಳನ್ನು ತಳ್ಳಿಹಾಕುತ್ತಿದ್ದವು! ಅದರ ಫಲವಾಗಿಯೇ 'ಪ್ರಾಣಚಿಂತನ' ಇಷ್ಟೊಂದು ಬೃಹದ್ಗಾತ್ರ ತಾಳಿ ಮೆರೆಯುವಂತಾಗಿದೆ.

ಇದು ಪ್ರಾಣೋಪಾಸಕರಾಗಿದ್ದ ಶ್ರೀ ವಿಬುಧಪ್ರಿಯತೀರ್ಥರ ಸ್ಫೂರ್ತಿಯ ಫಲ –ಎಂಬುದಾಗಿಯೂ ನನ್ನ ಸಾಕ್ಷಿ ಸಾರುತ್ತಿದೆ. ಅವರ ನೆನಪಿಗಾಗಿ ಕೃತಿರಚನೆಯಲ್ಲಿ ತೊಡಗಿ ದಾಗಲೂ ಆ ಕೃತಿಯ ರಚನೆಯ ಮೇಲೆ ಸಾಕಷ್ಟು ಪ್ರಭಾವ ಬೀರುವಷ್ಟು ಬ್ರಹ್ಮವರ್ಚಸ್ಸು ಶ್ರೀ ವಿಬುಧಪ್ರಿಯತೀರ್ಥರದ್ದೆಂಬುದು ಇದರಿಂದ ಸ್ಪಷ್ಟ.

ಭಗವದ್‌ಭಕ್ತರ ಸ್ಮರಣೆಯೂ ಭಗವಂತನ ಅನುಗ್ರಹದಿಂದಾಗಿ ಕೆಲವೊಮ್ಮೆ ಎಷ್ಟೊಂದು ಪ್ರಭಾವಕಾರಿಯಾಗಬಲ್ಲದೆಂಬುದರ ಬಗ್ಗೆ ಸಾಧಕರಿಗೆ ನಂಬಿಕೆಯನ್ನುಂಟು ಮಾಡುವುದಕ್ಕಾಗಿಯಷ್ಟೇ ಇಷ್ಟೊಂದು ದೀರ್ಘವಾದ ಪೀಠಿಕೆಯನ್ನು ಪ್ರಸ್ತುತಪಡಿಸಿರು ವೆನಷ್ಟೇ.

## ವೈಶಿಷ್ಟ್ಯದ ಹತ್ತು ಮುಖಗಳು:

ಹೀಗೆ ಶ್ರೀ ವಿಬುಧಪ್ರಿಯತೀರ್ಥರ ಮಾಧ್ಯಮದಲ್ಲಿ ಮುಖ್ಯಪ್ರಾಣನ ಬಗ್ಗೆ ಆದಷ್ಟು ಸಮಗ್ರ ಮಾಹಿತಿಯನ್ನು ನೀಡುವುದಕ್ಕಾಗಿ ಹೊರಟಿರುವ ಐದು ತರಂಗಗಳಾಗಿ ಹರಡಿ ರುವ, 'ಪ್ರಾಣಚಿಂತನ'ದ ವೈಶಿಷ್ಟ್ಯದ ಹತ್ತು ಮುಖಗಳನ್ನು ಸಾಧಕರ ಸೌಕರ್ಯಕ್ಕಾಗಿ ತೆರೆದಿ ಡಲು ಇಷ್ಟಪಡುವೆನು:

* ವೇದದ ಮೊದಲ ನಲ್ವತ್ತು ಸೂಕ್ತಗಳಲ್ಲಿ, ಉಪನಿಷತ್ತುಗಳಲ್ಲಿ, ಭಾಗವತದಲ್ಲಿ ಹಾಗೂ ಪ್ರಕಾಶಸಂಹಿತೆಯಲ್ಲಿ –ಮುಖ್ಯಪ್ರಾಣನ ಪ್ರಸ್ತಾವ ಹೇಗೆ ಬಂದಿದೆ ಎಂಬುದನ್ನು ತಿಳಿದುಕೊಳ್ಳಬಹುದಾಗಿದೆ.

* ಶ್ರೀ ಮಧ್ವಗುರುಗಳು ಪ್ರಸ್ಥಾನತ್ರಯಾದಿಗಳನ್ನು ವ್ಯಾಖ್ಯಾನಿಸುವಾಗ ತಮ್ಮ ಸರ್ವ ಮೂಲಗ್ರಂಥಗಳಲ್ಲಿ ಮುಖ್ಯಪ್ರಾಣನ ಬಗ್ಗೆ ಉದಾಹರಿಸಿರುವ ೬೦೦ಕ್ಕೂ ಅಧಿಕ ಪ್ರಮಾಣಗಳನ್ನು ವಿಷಯವಿಭಾಗಕ್ಕನುಗುಣವಾಗಿ ತಿಳಿದುಕೊಳ್ಳಬಹುದಾಗಿದೆ.

* ಉಪನಿಷದಾದಿಗಳಲ್ಲೂ, ಸರ್ವಮೂಲಗ್ರಂಥಗಳಲ್ಲೂ ಅಲ್ಲಲ್ಲಿ ಪ್ರಸ್ತುತಗಳಾದ ಮುಖ್ಯ ಪ್ರಾಣನ ೧೭೦ ನಾಮಗಳನ್ನು ವಿಷಯವಿಭಾಗಕ್ಕನುಗುಣವಾಗಿ ತಿಳಿದುಕೊಳ್ಳಬಹು ದಾಗಿದೆ.

* ಬದುಕಿನ ಸುಮಾರು ನೂರು ಚಟುವಟಿಕೆಗಳಲ್ಲಿ, ಘಟನೆಗಳಲ್ಲಿ ಮುಖ್ಯಪ್ರಾಣನ ಪಾತ್ರ ವನ್ನು ವಿವೇಚಿಸಿಕೊಂಡು ಆ ಬಗ್ಗೆ ತಾಳಬೇಕಾದ ಅನುಸಂಧಾನದ ಬೆಳಕನ್ನು ಪಡೆಯ ಬಹುದಾಗಿದೆ.

* ಸಾಧಕೋತ್ತಮನಾದ ಮುಖ್ಯಪ್ರಾಣನ ಮೂಲರೂಪದ ಹಾಗೂ ಮೂರು ಅವತಾರ ಗಳ ಬೇರೆ ಬೇರೆ ಸಾಧನೆಗಳಿಂದ, ನಡತೆಗಳಿಂದ ನಾವು ಸಾಧನಾನುಷ್ಠಾನಕ್ಕೆ ಹೇಗೆ ಸ್ಫೂರ್ತಿ ಪಡೆದುಕೊಳ್ಳಬಹುದೆಂಬುದನ್ನು ಅರಿಯಬಹುದಾಗಿದೆ.

* ಮಧ್ವರ ಚರಿತ್ರೆಯಾಗಿ ಹೊರಟ ಮಧ್ವವಿಜಯದ ಕೆಲವು ವಿಶೇಷಣಗಳಿಂದ, ಮಾತು ಗಳಿಂದ ಸಾಧನಾನುಷ್ಠಾನಕ್ಕೆ ಉಪಯುಕ್ತವಾಗುವಂತೆ ಹೇಗೆ ಮಾರ್ಗದರ್ಶನ ದೊರಕು ವುದೆಂಬುದನ್ನು ಪರಿಶೀಲಿಸಬಹುದಾಗಿದೆ.

* ತ್ರಿವಿಕ್ರಮಪಂಡಿತರ 'ವಾಯುಸ್ತುತಿ'ಯ ನಲ್ವತ್ತೊಂದು ಶ್ಲೋಕಗಳ ಮಾಧ್ಯಮದಲ್ಲಿ ನಡೆಸಬಹುದಾದ ಪುರಶ್ಚರಣಾದಿ ಸಾಧನೆಗೆ ಉಪಯುಕ್ತವಾಗುವಂತೆ ಯಾವ ಯಾವ ಶ್ಲೋಕದಿಂದ ಯಾವ ಯಾವ ಫಲವನ್ನು ಉಪಾಸನೆಗನುಗುಣವಾಗಿ ಪಡೆಯಬಹು ದೆಂಬುದರ ವಿವರವನ್ನು ಪಡೆಯಬಹುದಾಗಿದೆ.

* ಶ್ರೀ ವಾದಿರಾಜಸ್ವಾಮಿಗಳು ತಮ್ಮ ಸರಸಭಾರತೀವಿಲಾಸದಲ್ಲಿ ಮುಖ್ಯಪ್ರಾಣನ ಪರ ಶುಕ್ಲತ್ವದ ಬಗ್ಗೆ ಪ್ರಸ್ತುತಪಡಿಸಿರುವ ವಿಚಾರಗಳನ್ನು, ಶ್ರೀ ರಾಘವೇಂದ್ರಸ್ವಾಮಿಗಳು ತಮ್ಮ ಪ್ರಾತಃಸಂಕಲ್ಪಗದ್ಯದಲ್ಲಿ ಮುಖ್ಯಪ್ರಾಣನ ಸಾಧನೆಯ ಬಗ್ಗೆ ಪ್ರಸ್ತುತಪಡಿಸಿ ರುವ ವಿಚಾರಗಳನ್ನು, ಆನಂದತೀರ್ಥಾಚಾರ್ಯರು ತಮ್ಮ 'ಸತ್ತತ್ವರತ್ನಮಾಲಾ'ದ ಸುಮಾರು ೪೦ ಶ್ಲೋಕಗಳಲ್ಲಿ ಪ್ರತಿಪಾದಿಸಿರುವ ವಾಯುತತ್ವದ ಕುರಿತಾದ ವಿಚಾರ ಗಳನ್ನೂ ತಿಳಯಬಹುದಾಗಿದೆ.

* ವಾಯುದೇವನ ಕುರಿತಾದ ೭೦ಕ್ಕೂ ಅಧಿಕ ಸ್ತೋತ್ರಗಳ ಸ್ಥೂಲ ಮಾಹಿತಿಯನ್ನು ಮೂಲರೂಪ, ಹನೂಮಂತ, ಭೀಮಸೇನ ಹಾಗೂ ಮಧ್ವಗುರುಗಳು –ಹೀಗೆ ಇವು ಗಳಿಗೆ ಸಂಬಂಧಿಸಿದಂತೆ ಅನುಕ್ರಮವಾಗಿ ಪಡೆದುಕೊಳ್ಳಬಹುದಾಗಿದೆ. ತ್ರಿವಿಕ್ರಮಪಂಡಿ ತಾಚಾರ್ಯರು ತಮ್ಮ 'ತತ್ವಪ್ರದೀಪ'ದ ಪ್ರಾರಂಭದಲ್ಲಿ ೨೦ ಶ್ಲೋಕಗಳಲ್ಲಿ ನಡೆಸಿ ರುವ ಮಧ್ವಸ್ತುತಿಯನ್ನು ಅರ್ಥಸಹಿತವಾಗಿ ತಿಳಿಯಬಹುದಾಗಿದೆ.

* ವಾಯುದೇವನ ಕುರಿತಾದ ಹರಿದಾಸಸಾಹಿತ್ಯದ ೧೦೦ಕ್ಕೂ ಅಧಿಕ ಹಾಡುಗಳ ಸ್ಥೂಲ ಮಾಹಿತಿಯನ್ನು ಮೂಲರೂಪ, ಆಂಜನೇಯ, ಭೀಮಸೇನ, ಮಧ್ವಾಚಾರ್ಯ –ಹೀಗೆ ಇವುಗಳಿಗೆ ಸಂಬಂಧಿಸಿದಂತೆ ಅನುಕ್ರಮವಾಗಿ ಹೊಂದಬಹುದಾಗಿದೆ. ವಾಯುದೇವನ ಕುರಿತಾದ ೧೫ ಸುಳಾದಿಗಳ ಮಾಹಿತಿಯನ್ನೂ, ಎಳೆಂಟು ಉಗಾಭೋಗಗಳ ಪೂರ್ಣ ಪಾಠವನ್ನೂ ಪಡೆಯಬಹುದಾಗಿದೆ.

* ಶ್ರೀಪಾದರಾಜರ 'ಮಧ್ವನಾಮ'ವನ್ನು ಅರ್ಥಸಹಿತವಾಗಿ, ವಿವರಣೆ ಸಹಿತವಾಗಿ ತಿಳಿದುಕೊಳ್ಳಬಹುದಾಗಿದೆ.

* ವಾಯುದೇವನಿಗೆ ಸರ್ವಶಬ್ದವಾಚ್ಯತ್ವ 'ಎಷ್ಟರ ಮಟ್ಟಿಗೆ? ಋಜುಗಳಲ್ಲಿ ಇರುವ ಒಂದೇ ಒಂದು ದೋಷ ಎಂದು ಉಲ್ಲೇಖಿಸಲಾಗುವ 'ಪರಮೋತ್ಸಾಹವರ್ಜನ'ದ ಸ್ವರೂಪ ಎಂತಹದ್ದು? ವಾಯುದೇವನ ಅವತಾರರೂಪಗಳಲ್ಲಿ ಜ್ಞಾನವರ್ಜನ ಇದೆಯೇ? ವಾಯುದೇವನಿಗೆ ಜೀವರ ಸ್ವರೂಪದೇಹದೊಳಗೆ ಪ್ರವೇಶ ಇದೆಯೇ? –ಮುಂತಾದ ವಾಯುದೇವರ ವ್ಯಕ್ತಿತ್ವಕ್ಕೆ ಸಂಬಂಧಿಸುವ ಗಂಭೀರ ಪ್ರಮೇಯಗಳ ವ್ಯಾಪಕ ಚರ್ಚೆ ಇಲ್ಲಿ ದೊರಕುವುದು.

* ಉಡುಪಿ, ಘಟಿಕಾಚಲ, ಹಂಪೆ, ಪಲಿಮಾರು, ನವವೃಂದಾವನ, ಹರಿದ್ವಾರ, ಮುಳುಬಾಗಿಲು, ಮಂತ್ರಾಲಯ –ಮುಂತಾದ ಕಡೆಗಳಲ್ಲಿ ಇರುವ ಮುಖ್ಯಪ್ರಾಣನ, ಆಂಜನೇಯನ ಪ್ರತೀಕಗಳ ಭಾವಚಿತ್ರವನ್ನೂ, ವಾಯುವಾಹನತ್ವದ ಪ್ರಾತ್ಯಕ್ಷಿಕೆಯ ಚಿತ್ರವನ್ನೂ, ತ್ರಿವಿಕ್ರಮಪಂಡಿತರ ಭಾವಚಿತ್ರವನ್ನೂ (ಇದುವರೆಗೆ ಎಲ್ಲೂ ಕಾಣಸಿಗದಿದ್ದದ್ದು) ಇಲ್ಲಿ ಕಾಣಬಹುದಾಗಿದೆ.

ಹೀಗೆ ಮುಖ್ಯಪ್ರಾಣನ ಸಮಗ್ರ ಮಾಹಿತಿಯನ್ನು ಪಡೆದುಕೊಳ್ಳುವಲ್ಲೂ, ಮುಖ್ಯಪ್ರಾಣನ ಪಾತ್ರವನ್ನು ಬದುಕಿನಲ್ಲಿ ಅನುಸಂಧಾನಕ್ಕೆ ತಂದುಕೊಳ್ಳುವಲ್ಲೂ, ಮುಖ್ಯಪ್ರಾಣನ ಉಪಾಸನೆ ನಡೆಸುವಲ್ಲೂ ಸಾಕಷ್ಟು ಬೆಳಕುಚೆಲ್ಲಬಲ್ಲ 'ಪ್ರಾಣಚಿಂತನ'ವನ್ನು ಸಾಧಕರು 'ಗ್ರಂಥಗೌರವಭಯ'ಕ್ಕೊಳಗಾಗಿ ಮೂಲೆಗೆ ಸರಿಸದೆ ಮುಖ್ಯಪ್ರಾಣನ ಬಗ್ಗೆ ತಮಗೆ ಬೇಕಾಗುವ ಯಾವುದೇ ವಿಷಯವನ್ನು ಆಯ್ಕೆ ಮಾಡಿಕೊಂಡು ವಿನಿಯೋಗಿಸಿಕೊಳ್ಳಬಹುದೆಂಬುದನ್ನು ವಿಶ್ಲೇಷಿಸಿಕೊಂಡು ಆದರಿಸುವರು; ಗೌರವಿಸುವರೆಂದು ನಂಬಿದ್ದೇನೆ.

## ಕ್ರತೋ ಸ್ಮರ ಕೃತಂ ಸ್ಮರಃ

* 'ಪ್ರಾಣಚಿಂತನ'ದಲ್ಲಿ, ಈಗಾಗಲೇ ಕೆಲವು ಪ್ರಾಣಚಿಂತನಗಳನ್ನು ನಡೆಸಿದ್ದರೆ, ಆ ಚಿಂತನವನ್ನೇ ಇದರಲ್ಲಿ ಸೇರಿಸಿಕೊಂಡಿರುವ ಹಿನ್ನೆಲೆಯಲ್ಲಿ ಶ್ರೀ ವಿದ್ಯಾಧೀಶತೀರ್ಥರ ಸುಂದರಕಾಂಡ ರಾಮಾಯಣದ ಅನುವಾದವನ್ನೂ, ವಿದ್ವಾನ್ ಹರಿದಾಸ ಭಟ್ಟರ 'ಬ್ರಹ್ಮಸೂತ್ರಗಳಲ್ಲಿ ವಾಯುದೇವನ ಮಹಿಮೆ' –ಎಂಬ ಲೇಖನಮಾಲೆಯನ್ನೂ ವಿದ್ವಾನ್ ಉಡುಪಿ ರಾಮನಾಥಾಚಾರ್ಯರ 'ವಾಯುಸ್ತುತಿ ಪುರಶ್ಚರಣೆ' –ಎಂಬ ಲೇಖನವನ್ನೂ ಇಲ್ಲಿ ಬಳಸಿಕೊಳ್ಳಲಾಗಿದೆ. ಶ್ರೀಪಾದರಿಗೂ, ವಿದ್ವಾಂಸರಿಗೂ 'ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ'.

* ವಾಯುದೇವನ ಕುರಿತಾದ ಸ್ತೋತ್ರಗಳನ್ನು ಸಂಗ್ರಹಿಸುವಲ್ಲಿ ಶ್ರೀ ವ್ಯಾಸನಕೆರೆ ಪ್ರಭಂಜನಾಚಾರ್ಯ ಸಂಪಾದಿತ 'ಸ್ತೋತ್ರಮಾಲಿಕಾವನ್ನು ಆಧರಿಸಲಾಗಿದೆ. ಹಾಗೂ ಈ ಕೃತಿಯ ಬಗ್ಗೆ ಆಚಾರ್ಯರು ಶುಭಾಶಂಸನೆ ನಡೆಸಿ ಇದರ ಮೌಲ್ಯವನ್ನು ಹೆಚ್ಚಿಸಿದರು. ಈ ಪ್ರಯುಕ್ತ ಶ್ರೀ ಪ್ರಭಂಜನಾಚಾರ್ಯರಿಗೆ ಕೃತಜ್ಞತೆ.

* ಬೆಂಗಳೂರಿನಲ್ಲಿ ನಡೆದ ಇದರ ಮುದ್ರಣಕಾರ್ಯದಲ್ಲಿ ಸಹಕರಿಸಿದ ಆತ್ಮೀಯರಾದ ಶ್ರೀ ಬಿ. ಜಿ. ರವಿಕುಮಾರ್ ಇವರಿಂದ ಮುಖ್ಯಪ್ರಾಣನ ಸೇವೆ ಇನ್ನಷ್ಟು ನಡೆಯುವಂತಾಗಲಿ.
* ಸಮಗ್ರವಾಗಿ ಸಿದ್ಧಪಡಿಸಲಾದ 'ಹಸ್ತಪ್ರತಿ'ಯನ್ನು ಒಮ್ಮೆಲೇ ಒದಗಿಸಿಕೊಡದೆ, ಸ್ಫೂರ್ತಿ ಚಿಮ್ಮಿದಂತೆ ಆಗಾಗ್ಗೆ, ಅಲ್ಲಲ್ಲಿ ವಿಷಯಗಳ ತೇಪೆ ಹಚ್ಚುತ್ತಿದ್ದುದನ್ನೂ ತಾಳ್ಮೆಯಿಂದ ಗಮನಿಸಿ ಅಕ್ಷರ ಜೋಡಣೆ ನಡೆಸಿದ ಶ್ರೀ ಪದ್ಮನಾಭ ಕೇಕುಣ್ಣಾಯ ದಂಪತಿಗಳಿಗೆ–
* ಮುದ್ರಣ ನಡೆಸಿದ ಬೆಂಗಳೂರಿನ ರಾಷ್ಟ್ರೋತ್ಥಾನ ಮುದ್ರಣಾಲಯಬಂಧುಗಳಿಗೆ–
* ಕವಚ ಪುಟಗಳ ವಿನ್ಯಾಸ ನಡೆಸಿದ 'ಗೋಪ್ಯ ಕಂಪ್ಯೂಟರ್'ನ ಬಂಧುಗಳಿಗೆ–

**ಕೃತಜ್ಞತೆ.**

ವಿಕೃತಿ ಸಂ|ರದ ಶರನ್ನವರಾತ್ರಿ ಪಂಚಮೀ

**ಸಗ್ರಿ ರಾಘವೇಂದ್ರ ಉಪಾಧ್ಯಾಯ**

*ಪರವಿದ್ಯಾ ಪ್ರಕಾಶನ*

# ಶುಭಾಶಂಸನೆ



ಡಾ। ವ್ಯಾಸನಕೆರೆ ಪ್ರಭಂಜನಾಚಾರ್ಯ
ಪಾಜಕ

ಉಡುಪಿ ಪಲಿಮಾರುಮಠದ ಶ್ರೀವಿದ್ಯಾಮಾನ್ಯತೀರ್ಥರ ಎರಡನೇ ಪರ್ಯಾಯಾವಧಿಯಲ್ಲಿ (೧೮-೧-೧೯೮೬ರಿಂದ ೧೭-೧-೧೯೮೮) ಎಂಟು ಅವಧಿಗಳಲ್ಲಿ ಸುಮಾರು ನೂರು ದಿನಗಳ ಕಾಲ ಬೆಂಗಳೂರಿನ ಅನೇಕ ಜಿಜ್ಞಾಸುಗಳನ್ನು ಉಡುಪಿಗೆ ಕರೆತಂದು ಸರ್ವಮೂಲದ ಹೆಚ್ಚಿನ ಗ್ರಂಥಗಳ ಪಾಠವನ್ನು ಉಡುಪಿ ಅನಂತಾಸನನ ಸನ್ನಿಧಿಯಲ್ಲೇ 'ಅದೃಶ್ಯೋ ರೂಪ್ಯಪೀಠೇsಸ್ತಿ.....' ಎಂದಿರುವಂತೆ ಶ್ರೀ ಮಧ್ವಗುರುಗಳು ಅದೃಶ್ಯರಾಗಿ ವಿಶೇಷವಾಗಿ ಸನ್ನಿಹಿತರಾಗಿರುವಲ್ಲೇ ನಡೆಸಿ ಪ್ರತಿಯೊಂದು ಪಾಠಪ್ರವಚನದ ಮಂಗಲೋತ್ಸವವನ್ನೂ ಪರ್ಯಾಯ ಶ್ರೀಪಾದರಾಗಿದ್ದ ಶ್ರೀ ವಿದ್ಯಾಮಾನ್ಯತೀರ್ಥರ ಅಧ್ಯಕ್ಷತೆಯಲ್ಲೇ ನಡೆಸಿ ಶ್ರೀ ಮಧ್ವವಲ್ಲಭ ಅನಂತಾಸನನ ವಿಶೇಷಾನುಗ್ರಹಕ್ಕೆ ಪಾತ್ರರಾಗಿರುವ ಶ್ರೀವಿದ್ಯಾವಾರಿಧಿ ಪ್ರಭಂಜನಾಚಾರ್ಯರು

*

ವಿದ್ವಾಂಸರಾದ ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯಾಯರ ಪ್ರಾಣಚಿಂತನ, ಮುಖ್ಯಪ್ರಾಣತತ್ತ್ವದ ಬಗ್ಗೆ ಸಮಗ್ರ ಮಾಹಿತಿಯನ್ನು ಕೊಡುವ ನಿಟ್ಟಿನಲ್ಲಿ ಪ್ರವೃತ್ತವಾಗಿರುವ ಅಪೂರ್ವ ಕೃತಿ.

ವೇದೋಪನಿಷತ್ತುಗಳು ಮಹಾಭಾರತ ರಾಮಾಯಣಗಳು, ಪುರಾಣಗಳು, ಪರಬ್ರಹ್ಮತತ್ತ್ವವಾದ ಮಹಾವಿಷ್ಣುವಿನ ಪಾರಮ್ಯವನ್ನು ಸಾರುವಂತೆ ಪ್ರಾಣತತ್ತ್ವವಾದ ಶ್ರೀವಾಯುದೇವರ ಜೀವೋತ್ತಮತ್ವವನ್ನು ವಿಶೇಷವಾಗಿ ನಿರೂಪಿಸಿವೆ. ಹಾಗೆ ನೋಡಿದರೆ ಹರಿಮಹಿಮೆ ಇಲ್ಲದ ಶಾಸ್ತ್ರಕೃತಿ ಇಲ್ಲದಿರುವಂತೆ ವಾಯುಮಹಿಮೆ ಇರದ ಶಾಸ್ತ್ರಕೃತಿಯೂ ಇಲ್ಲವೇ ಇಲ್ಲ. ಮಹಾವಿಷ್ಣು ಮೋಕ್ಷ ನೀಡುವ ಪರದೇವತೆಯಾದರೆ, ವಾಯುದೇವರು ಶ್ರೀಹರಿಯನ್ನು ಪ್ರಾರ್ಥಿಸಿ ಮೋಕ್ಷ ಕೊಡಿಸುವ ಮೂಲಗುರುಗಳಾಗಿರುವರು. ಅದಕ್ಕೆಂದೇ

ಹರಿಮಹಿಮೆಯಂತೆ ವಾಯುಮಹಿಮೆಯ ಪರಿಜ್ಞಾನ, ಉಪಾಸನೆಗಳು ವಿಶೇಷವಾಗಿ ಶಾಸ್ತ್ರಗಳಲ್ಲಿ ವಿಹಿತವಾಗಿವೆ.

ಪ್ರಸ್ತುತಕೃತಿಯಲ್ಲಿ ಶ್ರೀಯುತ ಆಚಾರ್ಯರು ಉಪಾಸನಾತರಂಗ, ಅನುಸಂಧಾನ ತರಂಗ, ವಿಮರ್ಶನತರಂಗ, ಕ್ರೋಡೀಕರಣತರಂಗ ಹಾಗೂ ದಾಸಸಾಹಿತ್ಯತರಂಗ ಎಂಬ ಐದು ಪರಿಚ್ಛೇದಗಳಲ್ಲಿ ಪ್ರಾಣತತ್ತ್ವದ ಸಮಗ್ರವಿವರಗಳನ್ನು ದಾಖಲಿಸುವ ವಿಶಿಷ್ಟಪ್ರಯತ್ನ ಮಾಡಿದ್ದಾರೆ. ಮುಖ್ಯಪ್ರಾಣನ ಮೂಲರೂಪ ಹಾಗೂ ಅವತಾರರೂಪಗಳ ವಿವರ ಗಳೊಂದಿಗೆ ಪ್ರಾಣತತ್ತ್ವದ ಹಿರಿಮೆಯನ್ನು ನಿತ್ಯಜೀವನದ ವಿವಿಧಪ್ರಸಂಗಗಳಲ್ಲಿ ಅನು ಸಂಧಾನ ಮಾಡುವ ಬಗೆಯನ್ನು ಮನಮುಟ್ಟುವತೆ ವಿವರಿಸಿದ್ದಾರೆ. ಸುಮಧ್ವವಿಜಯ, ವಾಯುಸ್ತುತಿ, ಸುಂದರಕಾಂಡ ರಾಮಾಯಣ ನಿರ್ಣಯಗಳನ್ನು ಆಧರಿಸಿ ವಾಯುತತ್ವದ ಉಪಾಸನೆಯ ಬಗ್ಗೆ ಅನೇಕ ಮಹತ್ತ್ವದ ವಿವರಗಳನ್ನು ನೀಡಿದ್ದಾರೆ. ಶ್ರೀವಾದಿರಾಜಸ್ವಾಮಿ ಗಳ ಸರಸಭಾರತೀವಿಲಾಸ, ಶ್ರೀರಾಘವೇಂದ್ರಸ್ವಾಮಿಗಳ ಪ್ರಾತಃಸಂಕಲ್ಪಗದ್ಯಗಳಲ್ಲಿ ನಿರೂ ಪಿತವಾಗಿರುವ ವಾಯುತತ್ತ್ವದ ಹಿರಿಮೆಯನ್ನು ಸಂಗ್ರಹಿಸಿದ್ದಾರೆ. ಸರ್ವಮೂಲಗಳಲ್ಲಿ ಬಂದಿರುವ ಪ್ರಾಣತತ್ತ್ವದ ಪ್ರಸ್ತಾವದ ವಿವರಗಳೊಂದಿಗೆ ಮುಖ್ಯಪ್ರಾಣನ ೧೭೦ ನಾಮಗಳನ್ನು ಸಂಗ್ರಹಿಸಿ ಕೊಟ್ಟಿರುವುದು ಗಮನಾರ್ಹವಾದ ಸಂಗತಿ. ಹರಿದಾಸಸಾಹಿತ್ಯ ದಲ್ಲಿ ಮಧ್ವನಾಮ ಮೊದಲಾದ ಕೃತಿಗಳಲ್ಲಿ ಬಂದಿರುವ ವಿವರಗಳನ್ನು ಸಮುಚಿತ ರೀತಿಯಲ್ಲಿ ಕೊಟ್ಟಿರುವರು. ಒಟ್ಟಿನಲ್ಲಿ ಸಾಧಕರಿಗೆ ವಾಯುತತ್ತ್ವದ ಉಪಾಸನೆಗೆ ಅತ್ಯಗತ್ಯ ವಾದ ವಿವರಗಳ ಒಂದು ಕೈಪಿಡಿಯನ್ನಾಗಿ ಈ ಕೃತಿಯನ್ನು ಅವರು ತುಂಬಾ ಶ್ರದ್ಧೆಯಿಂದ ರೂಪಿಸಿರುವರು.

ಪಂ। ಸಗ್ರಿಯವರು ಪಾಂಡಿತ್ಯದೊಂದಿಗೆ ಅಪಾರವಾದ ವೈಷ್ಣವದೀಕ್ಷೆಯನ್ನು, ಮಾಧ್ವ ನಿಷ್ಠೆಯನ್ನು ಅಳವಡಿಸಿಕೊಂಡಿರುವ ಅಪರೂಪದ ವಿದ್ವಾಂಸರು. ಮೂಲಗ್ರಂಥಗಳಿಂದ ಬಗೆಬಗೆಯ ಪ್ರಮಾಣಗಳನ್ನು ಒಂದು ವಿಷಯಕ್ಕೆ ಸಂಬಂಧಿಸಿದಂತೆ ಸಂಗ್ರಹಿಸುವಲ್ಲಿ ಅವರ ಚಾತುರ್ಯ ಅಪೂರ್ವವಾದುದು. ಅವರು ಪ್ರಾತಃಸ್ಮರಣೀಯರಾದ ಶ್ರೀವಿದ್ಯಾಮಾನ್ಯ ತೀರ್ಥರ ನಿರ್ದೇಶನದಲ್ಲಿ ಶ್ರೀವಿಷ್ಣುಸಹಸ್ರನಾಮದ ಬಗ್ಗೆ ನಾಲ್ಕು ಬೃಹತ್ ಸಂಪುಟಗಳಲ್ಲಿ ಪ್ರಚುರಪಡಿಸಿರುವ ಅರ್ಥಕೋಶ ಅವರ ಜೀವನದ ಅತ್ಯಂತ ಮಹತ್ತ್ವಪೂರ್ಣವಾದ ಸಾಧನೆ ಎನ್ನಬಹುದು. ಕಾಲಕಾಲಕ್ಕೆ ಅತ್ಯಂತ ಮೌಲಿಕ ಗ್ರಂಥಗಳನ್ನು ನೀಡುತ್ತಾ ಬಂದಿರು ವುದು ಅವರ ವಾಙ್ಮಯತಪಸ್ಸಿನ ಫಲಶ್ರುತಿ. ಸಹೃದಯತೆ ಅವರ ಮತ್ತೊಂದು ವಿಶಿಷ್ಟ ಗುಣ. ಮಧ್ವಶಾಸ್ತ್ರದ ಬಗ್ಗೆ ಬಗೆಬಗೆಯ ಹೊಳಹುಗಳ ಸುಳಿಯಲ್ಲಿ ಅವರು ಸದಾ ತೊಡಗಿರುವುದು ಅತ್ಯಂತ ಅಭಿನಂದನಾರ್ಹವಾದ ಕಾರ್ಯ.

ಈ ಪ್ರಾಣಚಿಂತನ ಕೃತಿಯು ಸಾಧಕರಿಗೆ ವಿಶೇಷ ಬೆಳಕನ್ನು ನೀಡುವ ವಿಶಿಷ್ಟಕೃತಿ ಯಾಗಿ ಆದರಣೀಯವಾಗಲಿ ಎಂದು ಶ್ರೀಹರಿವಾಯುಗುರುಗಳಲ್ಲಿ ಪ್ರಾರ್ಥಿಸುತ್ತೇನೆ. ಅವರಿಂದ ಇಂತಹ ಮೌಲಿಕ ಕೃತಿಗಳು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಬೆಳಕು ಕಾಣಲಿ ಎಂದೂ ಸಹ ಹಾರೈಸುತ್ತೇನೆ.

ದಿನಾಂಕ : 26-10-2007. ಡಾ। ಪ್ರಭಂಜನಾಚಾರ್ಯ

# ವಿಷಯಾನುಕ್ರಮಣಿಕೆ

## ಪ್ರಾಣಚಿಂತನ - ಪ್ರಾಣಪಾದ

### 'ಉಪಾಸನಾತರಂಗ'

## ಪ್ರಾಣಚಿಂತನ - ಅಪಾನಪಾದ

'ಅನುಸಂಧಾನತರಂಗ'



## ಪ್ರಾಣಚಿಂತನೆ - ವ್ಯಾನಪಾದ

'ವಿವೇಚನತರಂಗ'

## ಪ್ರಾಣಚಿಂತನ -ಉದಾನಪಾದ

### 'ಕ್ರೋಡೀಕರಣತರಂಗ'

## ಪ್ರಾಣಚಿಂತನ – ಸಮಾನಪಾದ

### 'ದಾಸಸಾಹಿತ್ಯತರಂಗ'



* * *

# ಪ್ರಾಣಚಿಂತನ - ಪ್ರಾಣಪಾದ



ಶ್ರೀ ವಾದಿರಾಜತೀರ್ಥ ಪ್ರತಿಷ್ಠಿತ
ಅಯೋಧ್ಯೆಯ ಉಡುಪಿ ಶ್ರೀ ಮುಖ್ಯಪ್ರಾಣ

## ಪ್ರಾಣಚಿಂತನ – ಪ್ರಾಣಪಾದ

### 'ಉಪಾಸನಾತರಂಗ'

# • ವೈದಿಕ ವಾಯುಸ್ತುತಿ •

ತೇ ಪ್ರೀತಾಃ ಪ್ರಾಣಂ ಸ್ತುವಂತಿ ॥[1]

ಏಷೋಽಗ್ನಿಸ್ತಪತ್ಯೇಷ ಸೂರ್ಯ ಏಷ ಪರ್ಜನ್ಯೋ
ಮಘವಾನೇಷ ಪೃಥಿವೀ ರಯಿರ್ದೇವಃ ಸದಸಚ್ಚಾಮೃತಂ ಚ ಯತ್ ॥[2]

ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಮ್ ।
ಋಚೋ ಯಜೂಂಷಿ ಸಾಮಾನಿ ಯಜ್ಞಾಃ ಕ್ಷತ್ರಂ ಚ ಬ್ರಹ್ಮ ಚ ॥[3]

ಪ್ರಜಾಪತಿಶ್ಚರಸಿ ಗರ್ಭೇ ತ್ವಮೇವ ಪ್ರತಿಜಾಯಸೇ ।
ತುಭ್ಯಂ ಪ್ರಾಣ ಪ್ರಜಾಸ್ತ್ವಿಮಾ ಯತ್ ಪ್ರಾಣೈಃ ಪ್ರತಿತಿಷ್ಠಸಿ ॥[4]

ದೇವಾನಾಮಸಿ ವಹ್ನಿತಮಃ ಪಿತೄಣಾಂ ಪ್ರಥಮಾ ಸ್ವಧಾ ।
ಋಷೀಣಾಂ ಚರಿತಂ ಸತ್ಯಮಥರ್ವಾಂಗಿರಸಾಮಪಿ ॥[5]

---

1. ಜೀವಾತ್ಮರ ಶರೀರಧಾರಣೆಯ ವಿಷಯದಲ್ಲಿ ನಡೆದ ಸ್ಪರ್ಧೆಯಲ್ಲಿ ಸೋತ ರುದ್ರನೇ ಮುಂತಾದ ಇಂದ್ರಿಯಾಭಿಮಾನಿದೇವತೆಗಳು ಆ ಸ್ಪರ್ಧೆಯಲ್ಲಿ ಗೆದ್ದ ಪ್ರಾಣನನ್ನು ಸಂತುಷ್ಟರಾಗಿ ಹೀಗೆ ಸ್ತುತಿಸುವರು.

2. ಈ ಪ್ರಾಣನೇ ಅಗ್ನಿಯಾಗಿ ಸುಡುವನು; ಸೂರ್ಯನಾಗಿ ಬೆಳಗುವನು. ಮಳೆಗೆ ನಿಯಾಮಕನಾದ ಪರ್ಜನ್ಯನೂ ಇವನೇ. ಇಂದ್ರನೂ ಇವನೇ. ಪೃಥಿವಿಯೂ ಇವನೇ. ಸಂಪತ್ತೂ ಇವನೇ. ಮೂರ್ತಪದಾರ್ಥಗಳೂ, ಅಮೂರ್ತಪದಾರ್ಥಗಳೂ ಇವನೇ. ಮುಕ್ತರ ಸಮೂಹವೂ ಇವನೇ.

   ಮುಖ್ಯಪ್ರಾಣನನ್ನು ಅಗ್ನ್ಯಾದಿಗಳು ಅತ್ಯಂತವಾಗಿ ಅವಲಂಬಿಸಿಕೊಂಡಿವೆ ಎಂಬ ಆಶಯ.

3. ರಥದ ಚಕ್ರದ ಹೊಕ್ಕುಳಲ್ಲಿ ಹೇಗೆ ಚಕ್ರದ ಅಡ್ಡ ಕೋಲುಗಳೆಲ್ಲ ಆಶ್ರಯಿಸಿವೆಯೋ ಅಂತೆಯೇ ಪ್ರಾಣನಲ್ಲಿ ಎಲ್ಲವೂ ಆಶ್ರಿತವಾಗಿವೆ. ಋಗ್ವೇದ, ಯಜುರ್ವೇದ, ಸಾಮವೇದ, ಯಜ್ಞ, ಕ್ಷತ್ರಿಯವರ್ಣ, ಬ್ರಾಹ್ಮಣವರ್ಣ -ಹೀಗೆ ಎಲ್ಲವೂ ಅವನನ್ನು ಅತ್ಯಂತವಾಗಿ ಆಶ್ರಯಿಸಿಕೊಂಡಿದೆ.

   ಹೀಗೆ ಪ್ರಾಣದೇವನನ್ನು ಪರೋಕ್ಷವಾಗಿ ಸ್ತುತಿಸಿ, ಅಪರೋಕ್ಷವಾಗಿ ಸ್ತುತಿಸಲ್ಪಡುವುದು–

4. ಹೇ ಪ್ರಾಣ, ನೀನು ದಕ್ಷಾದಿ ಪ್ರಜಾಪತಿ ಆಗಿ ಗರ್ಭದ ಶಿಶುವಿಗೆ ಪ್ರೇರಕನಾಗಿ ಗರ್ಭದೊಳಗೆ ಸಂಚರಿಸುವಿ. ಹುಟ್ಟುವ ಚಟುವಟಿಕೆಯನ್ನು ನೀನೇ ನಡೆಸುವಿ. ಈ ದೇವಾದಿಪ್ರಜೆಗಳೆಲ್ಲ ನಿನಗೇ ಸೇರಿರುವವರು. ಯಾಕೆಂದರೆ, ಚಕ್ಷುರಾದಿ ಇಂದ್ರಿಯಗಳಿಂದ ಧಾರಣಾದಿಗಳನ್ನು ನಡೆಸುತ್ತ ಶರೀರದಲ್ಲಿ ಇರುವವನು ನೀನು.

5. ನೀನು ಅಗ್ನಿಯಲ್ಲಿದ್ದು ಸುಡುವ ಚಟುವಟಿಕೆಯನ್ನಷ್ಟೇ ನಿರ್ವಹಿಸುವವನಲ್ಲ; ಮತ್ತೆ ದೇವತೆಗಳಿಗೆ ಅಗ್ನಿಯ ಮೂಲಕ ಯಜ್ಞಭಾಗವನ್ನು ಮುಖ್ಯವಾಗಿ ತಲುಪಿಸುವವನೂ ನೀನೇ. ಪಿತೃ

ಇಂದ್ರಸ್ತ್ವಂ ಪ್ರಾಣ ತೇಜಸಾ ರುದ್ರೋಽಸಿ ಪರಿರಕ್ಷಿತಾ ।
ತ್ವಮಂತರಿಕ್ಷೇ ಚರಸಿ ಸೂರ್ಯಸ್ತ್ವಂ ಜ್ಯೋತಿಷಾಂ ಪತಿಃ ॥6

ಯದಾ ತ್ವಮಭಿವರ್ಷಸ್ಯಥೇಮಾಃ ಪ್ರಾಣ ತೇ ಪ್ರಜಾಃ ।
ಆನಂದರೂಪಾಸ್ತಿಷ್ಠಂತಿ ಕಾಮಾಯಾನ್ನಂ ಭವಿಷ್ಯತೀತಿ ॥7

ವ್ರಾತ್ಯಸ್ತ್ವಂ ಪ್ರಾಣೈಕಋಷಿರತ್ತಾ ವಿಶ್ವಸ್ಯ ಸತ್ಪತಿಃ ।
ವಯಮಾದ್ಯಸ್ಯ ದಾತಾರಃ ಪಿತಾ ತ್ವಂ ಮಾತರಿಶ್ವನಃ ॥8

ಯಾ ತೇ ತನೂರ್ವಾಚಿ ಪ್ರತಿಷ್ಠಿತಾ ಯಾ ಶ್ರೋತ್ರೇ ಯಾ ಚ ಚಕ್ಷುಷಿ ।
ಯಾ ಮನಸಿ ಸಂತತಾ ಶಿವಾಂ ತಾಂ ಕುರು ಮೋತ್ಕ್ರಮೀಃ ॥9

ಪ್ರಾಣಸ್ಯೇದಂ ವಶೇ ಸರ್ವಂ ತ್ರಿದಿವೇ ಯತ್ ಪ್ರತಿಷ್ಠಿತಮ್ ।
ಮಾತೇವ ಪುತ್ರಾನ್ ರಕ್ಷಸ್ವ ಶ್ರೀಶ್ಚ ಪ್ರಜ್ಞಾಂ ಚ ವಿಧೇಹಿ ನ ಇತಿ ॥10 *

---

ಗಳಿಗೆ 'ಸ್ವಧಾ'ವನ್ನು ಮುಖ್ಯವಾಗಿ ತಲುಪಿಸುವವನೂ ನೀನೇ. ಅಥರ್ವಾಂಗಿರಸಋಷಿಗಳ ಆಚಾರ ಹಾಗೂ ಪ್ರಾಮಾಣಿಕತೆ ನಿನ್ನನ್ನೇ ಅವಲಂಬಿಸಿ ಇದೆ.

6. ಹೇ ಪ್ರಾಣ, ನೀನು ತೇಜಸ್ಸಿನಿಂದ ಕೂಡಿದ ಇಂದ್ರನಾಗಿರುವಿ. ಸುತ್ತ ರಕ್ಷಣೆ ನೀಡುವ ರುದ್ರ ಆಗಿರುವಿ. ನೀನು ವಾಯು ಎನಿಸಿ ಅಂತರಿಕ್ಷದಲ್ಲಿ ಅಡ್ಡಾಡುತ್ತಿರುವಿ. ನೀನು ಸೂರ್ಯ ನಾಗಿರುವಿ. ಸೂರ್ಯನಾಗಿ ಸುಡುವುದಷ್ಟೇ ಅಲ್ಲದೆ, ಸೂರ್ಯನ ಜ್ಯೋತಿಷ್ಪತಿತ್ವವನ್ನೂ, ಪ್ರಕಾಶಕ ವಸ್ತುಗಳ ಒಡೆತನವನ್ನೂ ನಿಯಂತ್ರಿಸುವಿ.

7. ಯಾವಾಗ ನೀನು ಪರ್ಜನ್ಯನಲ್ಲಿದ್ದುಕೊಂಡು ಮಳೆ ಸುರಿಸುವಿಯೋ ಆಗ ನಿನ್ನ ಪ್ರಜೆಗಳು ಆನಂದಪೂರ್ಣರಾಗುವರು. ಈ ಮಳೆಯಿಂದಾಗಿ ನಮಗೆ ಯಥೇಷ್ಟವಾಗಿ ಅನ್ನವು ದೊರಕುವುದೆಂದು.

8. ಹೇ ಪ್ರಾಣ, ನೀನು ವ್ರತನಿಷ್ಠವಾದ ಅಥರ್ವವೇದದ ದ್ರಷ್ಟಾ ಏಕರ್ಷಿ ಆಗಿರುವಿ. ಅಂದರೆ ಅವನ ವಿಶೇಷ ನಿಯಾಮಕ. ಸಮಗ್ರ ಜಗತ್ತನ್ನೇ ಕಬಳಿಸುವ ಯಮಾದಿಗಳು ನೀನೇ. ನಿನ್ನಿಂದಲೇ ಅವರ ವ್ಯಕ್ತಿತ್ವ. ಸಜ್ಜನರಿಗೆ ಒಡೆಯ. ಹಾಗೂ ಶ್ರೇಷ್ಠ ಒಡೆಯ. ನಾವು ನಿನ್ನ ಆಹಾರವನ್ನು ಒದಗಿಸಿಕೊಡುವವರು. ಅಂದರೆ ನಿನ್ನ ಆರಾಧಕರು. ಯಾಕೆಂದರೆ ಹೇ ಮಾತರಿಶ್ವನೇ, ನೀನು ನಮ್ಮ ತಂದೆ.

9. ಹೀಗೆ ಸ್ತುತಿಸಿ, ಪ್ರಕೃತವಿಚಾರ ಹೇಳಲ್ಪಡುವುದು–

ಯಾವ ನಿನ್ನ ಮೂರ್ತಿ ವಾಗಿಂದ್ರಿಯದಲ್ಲಿ ನೆಲೆ ನಿಂತಿದೆಯೋ ಯಾವ ಮೂರ್ತಿಯು ಶ್ರೋತ್ರೇಂದ್ರಿಯದಲ್ಲಿ, ಯಾವ ಮೂರ್ತಿಯು ಚಕ್ಷುರಿಂದ್ರಿಯದಲ್ಲಿ, ಯಾವ ಮೂರ್ತಿಯು ಮನಸ್ಸಿನಲ್ಲಿ ಚೆನ್ನಾಗಿ ವ್ಯಾಪಿಸಿದೆಯೋ ಅದನ್ನು ಶಾಂತವನ್ನಾಗಿ ಮಾಡು. ವಾಗಾದಿಂದ್ರಿಯ ಗಳಿಂದ ಹೊರಟುಹೋಗಬೇಕು.

10. ವಾಗಿಂದ್ರಿಯವೇ ಮುಂತಾದುವೆಲ್ಲ ಪ್ರಾಣ ಎನಿಸುವ ನಿನ್ನ ವಶದಲ್ಲಿದೆ. ಆದುದರಿಂದಲೇ ವಾಗಿಂದ್ರಿಯಗಳಲ್ಲಿ ನೀನು ನೆಲೆನಿಂತಿರುವಿ. ದೇಹಕ್ಕೆ ಸಂಬಂಧಿಸುವ ರೂಪಗಳಷ್ಟೇ ಅಲ್ಲದೆ, ಸ್ವರ್ಗದಲ್ಲಿರುವ ಅಧಿದೈವಾದಿರೂಪಗಳೂ ನಿನ್ನ ಅಧೀನದಲ್ಲಿವೆ. ವಾಗಿಂದ್ರಿಯಾದಿಗಳಲ್ಲಿ ಇದ್ದು

# ವೈದಿಕ ವಾಯುಸ್ತುತಿಯ ವೈಭವ

'ವಾಯುಸ್ತುತಿ' ಎಂದಾಕ್ಷಣ ನಮಗೆ ತ್ರಿವಿಕ್ರಮಪಂಡಿತರು ರಚಿಸಿರುವ ವಾಯು ಸ್ತುತಿಯ ನೆನಪು ಬರುವುದು. ಆದರೆ ಇದಕ್ಕಿಂತಲೂ ಅಧಿಕೃತವಾದ, ಇದಕ್ಕೂ ಮೂಲ ದಂತಿರುವ ವೈದಿಕ ವಾಯುಸ್ತುತಿಯೊಂದಿದೆ. ಷಟ್‌ಪ್ರಶ್ನೋಪನಿಷತ್ತಿನಲ್ಲಿ ಪ್ರಸ್ತಾವಿಸಲ್ಪಡುವ ಈ ವೈದಿಕ ವಾಯುಸ್ತುತಿಯು ಇಂದ್ರಿಯಾಭಿಮಾನಿದೇವತೆಗಳ ಮೂಲಕ ಹೊರ ಹೊಮ್ಮಿದುದು. ತ್ರಿವಿಕ್ರಮಪಂಡಿತರ ವಾಯುಸ್ತುತಿಯ ಮೊದಲ ಹದಿನಾಲ್ಕು ಪದ್ಯಗಳು ವಾಯುದೇವರ ಮೂಲರೂಪದ ಮಹಿಮೆಯ ಕುರಿತಾಗಿದ್ದು ಈ ಪದ್ಯಗಳಿಗೆ ಮೂಲ ದಂತೆ ಇರುವಂತಹದ್ದು ವೈದಿಕ ವಾಯುಸ್ತುತಿ. ಆದುದರಿಂದ ಒಂಬತ್ತು ಪದ್ಯಗಳಿಂದ ರೂಪುಗೊಂಡ ಈ 'ವೈದಿಕ ವಾಯುಸ್ತುತಿ'ಯನ್ನು ಪಠಿಸಿ ಬಳಿಕ ಇದಕ್ಕೆ ವ್ಯಾಖ್ಯಾನ ರೂಪದಂತಿರುವ ತ್ರಿವಿಕ್ರಮಪಂಡಿತರ ವಾಯುಸ್ತುತಿಯನ್ನು ಪಠಿಸುವುದು ಸಮುಚಿತ.

ಪಠನೆಗಿಂತ ಮುಂಚೆ ಅದರ ಅಸಾಧಾರಣ ವೈಶಿಷ್ಟ್ಯವನ್ನು ವಿವೇಚಿಸಿಕೊಂಡು ಅದನ್ನು ಅನುಸಂಧಾನದಲ್ಲಿ ತಂದುಕೊಳ್ಳಬೇಕು.

**ಸ್ತುತಿಯ ವಿಸ್ತಾರ ನಿರೂಪಣೆ:** ಇಂದ್ರಿಯಾಭಿಮಾನಿದೇವತೆಗಳು ತಮ್ಮಲ್ಲಿ ಯಾರು ಶ್ರೇಷ್ಠರು? ಎಂಬುದರ ಬಗ್ಗೆ ನಡೆಸಿ ಸ್ಪರ್ಧೆ, ಅದರಲ್ಲಿ ಪ್ರಾಣದೇವನೇ ಶ್ರೇಷ್ಠ ಎಂದು ನಿರ್ಣಯವಾಗುವ ಆಖ್ಯಾಯಿಕೆ, ಐತರೇಯ, ಬೃಹದಾರಣ್ಯಕ, ಛಾಂದೋಗ್ಯೋಪ ನಿಷತ್ತುಗಳಲ್ಲೆಲ್ಲ ಉಲ್ಲೇಖಿಸಲ್ಪಡುವುದು. ಆದರೆ ಸ್ಪರ್ಧೆಯಲ್ಲಿ ಸೋತ ರುದ್ರನೇ ಮುಂತಾದ ಇಂದ್ರಿಯಾಭಿಮಾನಿದೇವತೆಗಳು ಮುಖ್ಯಪ್ರಾಣನ ಕುರಿತು ಸಲ್ಲಿಸಿರುವ ಸ್ತುತಿಯ ವಿಸ್ತಾರ ನಿರೂಪಣೆ ಷಟ್‌ಪ್ರಶ್ನೋಪನಿಷತ್ತಿನಲ್ಲಿ ಬಂದಿದೆ.

**ಅಸಾಧಾರಣ ಮಹಿಮೆಗಳ ಉಲ್ಲೇಖ:** 'ತೇ ಪ್ರೀತಾಃ ಪ್ರಾಣಂ ಸ್ತುವಂತಿ' – ಪ್ರಾಣದೇವನ ಮಹಿಮೆಯನ್ನು ಕಂಡು ಪ್ರೀತರಾದ ರುದ್ರನೇ ಮುಂತಾದ ಇಂದ್ರಿಯಾಭಿಮಾನಿದೇವತೆಗಳು ಪ್ರಾಣದೇವನನ್ನು ಸ್ತುತಿಸುವರೆಂದು ಪ್ರಸ್ತಾವನೆಯಿಂದ ಪ್ರಾರಂಭವಾದ ಒಂಬತ್ತು ಪದ್ಯಗಳ ಈ ಸ್ತುತಿಯ– **'ಯಾ ತೇ ತನೂರ್ವಾಚಿ ಪ್ರತಿಷ್ಠಿತಾ....'** ಇತ್ಯಾದಿ ಪದ್ಯದಲ್ಲಿ ಇಂದ್ರಿಯನಿಯಾಮಕತ್ವ, **'ಏಷೋಽಗ್ನಿಸ್ತಪತಿ....'** **'ಯದಾ ತ್ವಮಭಿವರ್ಷಸಿ....'** ಇತ್ಯಾದಿ ಪದ್ಯಗಳಲ್ಲಿ ದಹನ, ವರ್ಷಣ ಮುಂತಾದ ಪ್ರಾಕೃತಿಕ ಘಟನೆಗಳ ನಿರ್ವಾಹಕತ್ವ, **'ದೇವಾನಾಮಸಿ ವಹ್ನಿತಮಃ....'** ಇತ್ಯಾದಿ ಮಾತಲ್ಲಿ ದೇವತೆಗಳ ಮೂಲಕ ಆಹಾರ ಸ್ವೀಕಾರ **'ಪ್ರಜಾಪತಿಶ್ಚರಸಿ ಗರ್ಭೇ....'** ಎಂಬ ಮಾತಲ್ಲಿ ಗರ್ಭಸ್ರಷ್ಟೃತ್ವ, **'ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಮ್'**– ಎಂಬ ಮಾತಲ್ಲಿ ಸರ್ವಾಧಾರತ್ವ,

---

ಕೊಂಡು ನಮ್ಮನ್ನು ತಾಯಿ ತನ್ನ ಮಕ್ಕಳನ್ನು ಹೇಗೋ ಹಾಗೆ ಪಾಲಿಸು. ಪ್ರಜಾಧಾರಣ ಶೋಭೆ ಯನ್ನು ಬೆಳಗಿಸುವ ಸಾಮರ್ಥ್ಯವನ್ನು ನಮ್ಮಲ್ಲಿ ಉಂಟುಮಾಡು.

ಹೀಗೆ ತತ್ತ್ವಾಭಿಮಾನಿದೇವತೆಗಳು ಮುಖ್ಯಪ್ರಾಣನನ್ನು ಸ್ತುತಿಸುವರು.

'**ಪ್ರಾಣಸ್ಯೈತದ್ ವಶೇ ಸರ್ವಂ ತ್ರಿದಿವೇ ಯತ್ ಪ್ರತಿಷ್ಠಿತಮ್**' ಎಂಬಲ್ಲಿ ಸ್ವರ್ಗಲೋಕಾಧಾರತ್ವ, ಮುಂತಾದ ಪ್ರಾಣದೇವನ ಅಸಾಧಾರಣ ಮಹಿಮೆಗಳನ್ನು ಸರಳವಾಗಿ ಅಧಿಕೃತವಾಗಿ ಉಲ್ಲೇಖಿಸಲಾಗಿದೆ.

'**.....ಪಿತಾ ತ್ವಂ ಮಾತರಿಶ್ವ ನಃ**' '**ಮಾತೇವ ಪುತ್ರಾನ್ ರಕ್ಷಸ್ವ**' ಎಂಬ ಮಾತುಗಳಲ್ಲಿ ತತ್ತ್ವಾಭಿಮಾನಿಗಳು ತಮಗೆ ತಂದೆಯಂತೆ ತಾಯಿಯಂತೆ ಇರುವವರು ವಾಯುದೇವರೆಂದು ನಿವೇದಿಸಿಕೊಂಡು, ತಮ್ಮನ್ನು ಮಕ್ಕಳಂತೆ ಕಾಪಾಡಬೇಕೆಂದೂ, ತಮಗೆ ವಿವಿಧ ಸಂಪತ್ತನ್ನೂ, ಪ್ರಜ್ಞೆಯನ್ನೂ ಅನುಗ್ರಹಿಸಬೇಕೆಂದೂ ಪ್ರಾರ್ಥಿಸಿಕೊಂಡಿರುವರು '**ಶ್ರೀಶ್ಚ ಪ್ರಜ್ಞಾಂ ಚ ವಿಧೇಹಿ ನಃ**'.

**ಬೃಹತೀ ಛಂದಸ್ಸಿನ ಪದ್ಯ:** ಈ ವೈದಿಕವಾಯುಸ್ತುತಿ ಬೃಹತೀಛಂದಸ್ಸಿನ ಪದ್ಯದೊಂದಿಗೆ ಪ್ರಾರಂಭವಾಗುತ್ತದೆಂಬುದು ಗಮನಾರ್ಹವಾದುದು. ಬೃಹತೀಛಂದಸ್ಸಿಗೆ ವಾಯುದೇವನೇ ಅಭಿಮಾನಿಯಾಗಿರುವನು. '**ಅಭಿಮಾನೀ ಬೃಹತ್ಯಾಸ್ತು ವಾಯುರೇವ ಯತಃ ಪ್ರಭುಃ**'–ಐತರೇಯಭಾಷ್ಯ. ಆದುದರಿಂದ ಆ ಛಂದಸ್ಸು ಅವನಿಗೆ ಪ್ರಿಯತಮವಾದುದೆಂದು ಆ ಛಂದಸ್ಸಿನ ಪದ್ಯದಲ್ಲೇ ಮೊದಲು ಸ್ತುತಿಸಲಾಗಿದೆ.

'**ಏಷೋಽಗ್ನಿಸ್ತಪತಿ....**' ಎಂದು ವೈದಿಕ ವಾಯುಸ್ತುತಿಯ ಮೊದಲ ಮಾತು ವಾಕ್ಯರೂಪದಲ್ಲಿರುವಂತಹದ್ದೆಂದು ಸಾಮಾನ್ಯವಾಗಿ ಪರಿಗಣಿಸಲಾಗುವುದು. ಆದರೆ ಉಳಿದೆಲ್ಲ ಮಾತುಗಳು ಶ್ಲೋಕರೂಪದಲ್ಲಿ ಇರುವುದರಿಂದ ಇದೂ ಶ್ಲೋಕಾತ್ಮಕವಾಗಿದೆ –ಎನ್ನುವುದೇ ಸಮುಚಿತ. ಬೃಹತೀಛಂದಸ್ಸು ಆಗಬೇಕಾದರೆ ಮೂವತ್ತಾರು ಅಕ್ಷರಗಳಿರಬೇಕು. ಇದರಲ್ಲಿ ಮೂವತ್ನಾಲ್ಕು ಅಕ್ಷರಗಳಷ್ಟೇ ಇರುವುದು. ಆದರೆ 'ಏಷೋಽಗ್ನಿಸ್ತಪತಿ' ಎಂಬಲ್ಲಿ ಆಕಾರವನ್ನು ವಿಶ್ಲೇಷಮಾಡಿ ಪಠಿಸುವುದರಿಂದ ಹಾಗೂ 'ತಪತ್ಯಯಂ' ಎಂಬಲ್ಲೂ (ತಪತಿ ಅಯಂ) ವಿಶ್ಲೇಷ ಮಾಡಿ ಪಠಿಸುವುದರಿಂದ ಬೃಹತೀಛಂದಸ್ಸಿಗೆ ಬೇಕಾದ ಮೂವತ್ತಾರು ಅಕ್ಷರಗಳನ್ನು ಕೂಡಿಸಬಹುದಾಗಿದೆ.

ಉಳಿದ ಶ್ಲೋಕಗಳೆಲ್ಲ ಅನುಷ್ಟುಪ್ ಛಂದಸ್ಸಿನಲ್ಲಿ ಇರುವುದರಿಂದ ಈ ಶ್ಲೋಕವೂ ಅನುಷ್ಟುಪ್ ಛಂದಸ್ಸಿನಲ್ಲೇ ಇದೆ. ಎರಡು ಅಕ್ಷರಗಳು ಅಧಿಕಗಳಾಗಿವೆ. ಇಷ್ಟು ಮಾತ್ರಕ್ಕೆ ಛಂದಸ್ಸು ಕೆಡುವುದಿಲ್ಲ ತಾನೇ? ಎಂದು ಉಪಪಾದಿಸಬಹುದು. ಆದರೆ ಸ್ವರಸವಾಗಿ ವಿಶ್ಲೇಷಮಾಡಿ ಮೂವತ್ತಾರು ಅಕ್ಷರಗಳ ಬೃಹತೀಛಂದಸ್ಸನ್ನು ಹೊಂದಿಸಲು ಬರುವಾಗ ಎರಡು ಅಕ್ಷರಗಳ ಆಧಿಕ್ಯವುಳ್ಳ ಅನುಷ್ಟುಪ್‌ಛಂದಸ್ಸನ್ನು ಒಪ್ಪುವುದರಲ್ಲಿ ಅರ್ಥವಿಲ್ಲ.

ಹೀಗೆ ವೈದಿಕ ವಾಯುಸ್ತುತಿ ..... ಬೃಹತೀಛಂದಸ್ಸಿನ ಪದ್ಯದೊಂದಿಗೇ ಪ್ರಾರಂಭವಾಗುತ್ತಿದೆ ಎಂಬುದು ಇದರ ಒಂದು ವೈಶಿಷ್ಟ್ಯ.

**ಒಂಬತ್ತು ಪದ್ಯಗಳ ಔಚಿತ್ಯ:** ಈ ವೈದಿಕ ವಾಯುಸ್ತುತಿ ಒಂಬತ್ತು ಪದ್ಯಗಳನ್ನು ಒಳಗೊಂಡಿದ್ದು, ವಾಯುದೇವನ ಒಂಬತ್ತು ರೂಪಗಳನ್ನು ಸ್ತುತಿಸುತ್ತಿದೆ. ವಾಯುದೇವನಿಗೆ ಎಲ್ಲರ ದೇಹದಲ್ಲಿ ನಿಯಾಮಕಗಳಾಗಿ ಪ್ರಾಣ, ಅಪಾನ, ವ್ಯಾನ, ಉದಾನ

ಹಾಗೂ ಸಮಾನ ಎಂಬ ಐದು ರೂಪಗಳಲ್ಲದೆ, ದೇವತೆಗಳಲ್ಲಿ ಅಶನಾ, ಪಿಪಾಸಾ, ಅಪಾನ ಹಾಗೂ ಮೃತ್ಯು –ಎಂಬ ನಾಲ್ಕು ರೂಪಗಳಲ್ಲಿ ವಾಯುದೇವನು ಇರುವನೆಂದು ಐತರೇಯ ಭಾಷ್ಯ ತಿಳಿಸಿದೆ–

**ಅಶನಾ ಪಿಪಾಸಾಽಪಾನಶ್ಚ ಮೃತ್ಯುಶ್ಚೇತಿ ಚತುರ್ವಿಧಃ ।**
**ಏಕ ಏವ ಮಹಾನ್ ವಾಯುಃ ಸರ್ವದೇವೇಷು ಸಂಸ್ಥಿತಃ ।**

ಹೀಗೆ ದೇವತೆಗಳಲ್ಲಿ ಇರುವ ವಾಯುದೇವನ ಒಂಬತ್ತು ರೂಪಗಳನ್ನು ಸ್ತುತಿಸುವುದಕ್ಕೋ ಎಂಬಂತೆ ವೈದಿಕ ವಾಯುಸ್ತುತಿ ಒಂಬತ್ತು ಪದ್ಯಗಳನ್ನೊಳಗೊಂಡಿರುವುದು ಔಚಿತ್ಯ ಪೂರ್ಣ.

**ಕೆಲವು ಉಲ್ಲೇಖಗಳ ಔಚಿತ್ಯ:** ಷಟ್‌ಪ್ರಶ್ನೋಪನಿಷತ್ತು ಅಥರ್ವಣವೇದಕ್ಕೆ ಸಂಬಂಧಿಸಿದ್ದು, ಆ ವೇದದ ಋಷಿಗಳ, ಸೂಕ್ತಗಳ ಪ್ರಸ್ತಾವ ಇದರಲ್ಲೂ ಬಂದಿರುವುದು. ಏಕಋಷಿ ಅಥರ್ವಣವೇದದಲ್ಲಿ ಬರುವ ಋಷಿ. ಆದುದರಿಂದಲೇ '**ತ್ವಂ ಏಕಋಷಿಃ**' ಎಂದು ಉಲ್ಲೇಖಿಸಲಾಗಿದೆ.

ಹಾಗೆಯೇ, 'ವ್ರಾತ್ಯಸೂಕ್ತ' ಅಥರ್ವಣವೇದದಲ್ಲಿ ಬರುವುದರಿಂದ ಇಲ್ಲೂ 'ತ್ವಂ ವ್ರಾತ್ಯಃ' ಎಂದು ಸ್ತುತಿಸಲಾಗಿದೆ.

**ವ್ರಾತಪತಿಯೇ ವ್ರಾತ್ಯ:** 'ವ್ರಾತ್ಯಃ ಸಂಸ್ಕಾರಹೀನಃ ಸ್ಯಾತ್' ಎಂದು ಸಂಸ್ಕಾರಭ್ರಷ್ಟನಾದವನು ವ್ರಾತ್ಯ ಎನಿಸುವನು. ಇಂತಹ ಒಬ್ಬ ಸಂಸ್ಕಾರಭ್ರಷ್ಟ ಋಷಿಕುಮಾರನ ಸ್ತುತಿಯಾಗಿ 'ವ್ರಾತ್ಯಸೂಕ್ತ' ಅಥರ್ವವೇದದಲ್ಲಿ ಹೊರಟಿದೆ ಎಂದು ಅಬದ್ಧವಾಗಿ ವ್ಯಾಖ್ಯಾನಿಸಲಾಗಿದೆ.

ಆದರೆ, ವ್ರಾತ್ಯ ಎಂದರೆ 'ವ್ರಾತಪತಿ' ಎಂದರ್ಥ. ವ್ರಾತ ಎಂದರೆ ಸಮುದಾಯ, ಗಣ. ಇದಕ್ಕೆ ಒಡೆಯನಾದವನೇ ವ್ರಾತ್ಯ. ಅಥವಾ ವ್ರತಗಳಿಂದ ಗಮ್ಯನಾದವನು ವ್ರಾತ್ಯ. ವಾಯುದೇವ ಇಂದ್ರಿಯಗಣವೇ ಮುಂತಾದ ಗಣಗಳಿಗೆ ಒಡೆಯನಾದುದರಿಂದ ಹಾಗೂ ಸಾಧಕನ ವ್ರತದಿಂದ ಗಮ್ಯನಾದುದರಿಂದ 'ವ್ರಾತ್ಯ' ಎಂದು ಅರ್ಥಪೂರ್ಣವಾಗಿ ಕರೆಯಲ್ಪಟ್ಟಿರುವನು. ಅಥರ್ವಣವೇದದಲ್ಲೂ ವ್ರಾತಪತಿಯ ಸ್ತುತಿಯಾಗಿ ಹೊರಟ ಸೂಕ್ತವೇ ವ್ರಾತ್ಯಸೂಕ್ತ.

ಹೀಗೆ ಅನೇಕ ವೈಶಿಷ್ಟ್ಯಗಳನ್ನೊಳಗೊಂಡ 'ವೈದಿಕ ವಾಯುಸ್ತುತಿ'ಯ ನಿತ್ಯಪಠನೆಯನ್ನು ರೂಢಿಯಲ್ಲಿ ಅಳವಡಿಸಿಕೊಳ್ಳುವುದು ಅತ್ಯಗತ್ಯ.[11]

★

11. ವಿದ್ಯಾರತ್ನಾಕರ ಬನ್ನಂಜೆ ಗೋವಿಂದಾಚಾರ್ಯರು ಉಡುಪಿ ಶ್ರೀಕೃಷ್ಣಮುಖ್ಯಪ್ರಾಣರ ಸನ್ನಿಧಿಯಲ್ಲಿ ನೀಡಿದ್ದ ಪ್ರವಚನದಲ್ಲಿ ಪ್ರಸ್ತುತಗಳಾದ ವಿಚಾರಗಳು ಇವು.

# • ಮಹಾಭಾರತದಲ್ಲಿ ವಾಯುದೇವನ ವೈಶಿಷ್ಟ್ಯ •

**ವಾಯುರ್ಭೀಮೋ ಭೀಮನಾದೋ ಮಹೌಜಾಃ**
**ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ ।**
**ಅನಾವೃತ್ತಿರ್ದೇಹಿನಾಂ ದೇಹಪಾತೇ**
**ತಸ್ಮಾದ್ವಾಯುರ್ದೇವದೇವೋ ವಿಶಿಷ್ಟಃ ॥**

ಏಳು ವಿಶೇಷಣಗಳಿಂದ ವಾಯುದೇವನ ಅಸಾಧಾರಣ ಮಹಿಮೆಗಳನ್ನೆಲ್ಲ ಉಲ್ಲೇಖಿಸಿ, ಅಂತಹ ಅಸಾಧಾರಣ ಧರ್ಮಗಳಿಂದ ಕೂಡಿರುವುದರಿಂದಲೇ ವಾಯುದೇವ ರುದ್ರಾದಿ ಉಳಿದೆಲ್ಲ ದೇವತೆಗಳಿಗಿಂತ ವಿಶಿಷ್ಟ ಎನಿಸುವನೆಂದು ವಾಯದೇವನ ವೈಶಿಷ್ಟ್ಯವನ್ನು ಮಹಾ ಭಾರತ ಸಾರುತ್ತಿದೆ.

ಮಹಾಭಾರತ ಶಾಂತಿಪರ್ವದಲ್ಲಿ [264-41] ದಾಕ್ಷಿಣಾತ್ಯ ಪಾಠದ ಪ್ರಕಾರ ಈಗಲೂ ವಿರಾಜಿಸುತ್ತಿರುವ ಈ ಪದ್ಯವನ್ನು ಶ್ರೀಮದಾಚಾರ್ಯರು ತಮ್ಮ ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ [2-157] ತಮ್ಮ ಭಾಗವತತಾತ್ಪರ್ಯನಿರ್ಣಯದಲ್ಲಿ [11-11-43] ಹಾಗೂ ತಮ್ಮ ಬೃಹದಾರಣ್ಯಕ ಭಾಷ್ಯದಲ್ಲಿ [5-9-9] ಹೀಗೆ ಅಲ್ಲಲ್ಲಿ ಉಲ್ಲೇಖಿಸುವ ಮೂಲಕ ತಮಗೆ ತುಂಬ ಇಷ್ಟವಾದ ಪದ್ಯ ಇದಾಗಿದೆ ಎಂದು ಸೂಚಿಸಿರುವರು.

ವಾಯುದೇವನ ವೈಶಿಷ್ಟ್ಯಕ್ಕೆ ಪ್ರಯೋಜಕವಾಗಿ ಹೇಳಲಾದ ಏಳು ವಿಶೇಷಣಗಳಿಂದ ಹೊರಡುವ ಅರ್ಥವಿಶೇಷಗಳನ್ನು ಪರಿಶೀಲಿಸೋಣ.

**ವಾಯುವ್ಯಕ್ತಿತ್ವ:** ಈ ಪದ್ಯದಲ್ಲಿ ಎರಡು ಬಾರಿ ವಾಯು ಶಬ್ದದ ಉಲ್ಲೇಖ ಇದೆ. ಕೊನೆಯಲ್ಲಿ ಪ್ರಯುಕ್ತವಾದ ವಾಯು ಶಬ್ದ ವಿಶೇಷ್ಯನಾದ ವಾಯುದೇವನನ್ನು ತಿಳಿಸುತ್ತಿದ್ದರೆ, ಮೊತ್ತ ಮೊದಲು ಪ್ರಯೋಗಿಸಿರುವ ವಾಯುಶಬ್ದ ವಾಯುದೇವನ ವಾಯು–ವ್ಯಕ್ತಿತ್ವವನ್ನು ಸಾರುತ್ತಿವೆ.

ಜಲದೇವತೆಯಾದ ವಾಯುದೇವ ಎಲ್ಲರೊಳಗೆ ರಕ್ಷಕನಾಗಿ ಇರುವನು ಹಾಗೂ ಪ್ರಾಣಧಾರಕನಾಗಿ ಎಲ್ಲರ ಆಯುಷ್ಯಕ್ಕೆ ನಿಯಾಮಕನು (**ವಾತಿ ಲೋಕಸ್ಯ ಪ್ರಾಣಧಾರಣ ಹೇತುತ್ವಾತ್ ಆಯುಶ್ಚೇತಿ ವಾಯುಃ**)

ಎಲ್ಲರ ಪ್ರವೃತ್ತಿಗೆ ಕಾರಣನಾಗಿರುವವನು (**ವಾಂತಿ ಗಚ್ಛಂತಿ ಪ್ರವರ್ತಂತೇಽಸ್ಮಿನ್ನಿತಿ ವಾಯುಃ**) ಭಗವದಜ್ಞಾನುಸಾರವಾಗಿ ಭವಪಾಶದಿಂದ ಬಂಧಿಸುವವನು ಹಾಗೂ ಸಂಸಾರ ಬಂಧನವನ್ನು ನಾಶಗೊಳಿಸುವವನು (**ವಯತಿ ಬಧ್ನಾತಿ ಸಂಸಾರಬಂಧೇನೇತಿ ವಾಯುಃ । ವ್ಯಯತೇ ವಿನಶ್ಯತಿ ಸಂಸಾರಾದಿರನೇನೇತಿ ವಾಯುಃ**)

ಹೀಗೆ ವಾಯುನಾಮ ವಾಯುದೇವನ ವ್ಯಕ್ತಿತ್ವದ ಅನೇಕ ಪ್ರಮುಖಗುಣಗಳನ್ನು ಸಾರುತ್ತಿದೆ.

**ಭೀಮವ್ಯಕ್ತಿತ್ವ:** ಈ ಪದ್ಯದ ಎರಡನೆಯದಾದ ಭೀಮಶಬ್ದ ವಾಯುದೇವನ ಭೀಮ ವ್ಯಕ್ತಿತ್ವವನ್ನು ಸಾರುತ್ತಿದೆ. ವಾಯುದೇವನು ಭೀಮನಾಗಿ ಅವತರಿಸಿದ್ದರಿಂದಷ್ಟೇ ಭೀಮ ನೆಂದೆನಿಸಿರುವುದಲ್ಲ. ಅವನು ಮೂಲರೂಪದಲ್ಲೂ ಭೀಮ. ಯಾಕೆಂದರೆ–

- ಎಲ್ಲ ವಿದ್ಯೆಗಳ ಧಾರಕನಾಗಿರುವವನು (**ಭೃತಾಃ ಮಾಃ ಯೇನ ಸಃ ಭೀಮಃ**)
- **....ಭೀಃ ಮಾ ಇತಿ ಸಾಂತ್ವಯಂತಮ್** ಎಂದಿರುವಂತೆ. ಭಗವದ್‌ಭಕ್ತರಿಗೆ ಅಭಯ ಪ್ರದಾನ ಮಾಡುವವನು (**ಭೀಃ ಮಾ ಯಸ್ಮಾತ್ ಸಃ ಭೀಮಃ**)
- ಭಗವದ್‌ದ್ವೇಷಿಗಳಿಗೆ ಭಯಂಕರನಾಗಿರುವವನು (**ಭಯಂಕರತ್ವಾತ್ ಭೀಮಃ**)

**ಭೀಮನಾದ:** ಭಗವದ್‌ದ್ವೇಷಿಗಳು ಭಯಪಡುವಂತೆ ಭಯಂಕರ ನಾದವನ್ನು ಹೊರಡಿ ಸುವವನು. ಭೀಮಾವತಾರದಲ್ಲಿ ಇದರ ವಿಶೇಷವಾಗಿ ಅಭಿವ್ಯಕ್ತಿ ನಡೆದಿದೆ.

**ನದ ಅವ್ಯಕ್ತೇ ಶಬ್ದೇ** – ಎಂಬ ಧಾತುವಿನಿಂದ ನಿಷ್ಪನ್ನವಾಗಿರುವ 'ನಾದ' ಶಬ್ದವು ಉರಸ್ಸಿನಿಂದ ಹುಟ್ಟಿಕೊಳ್ಳುವ ಶಬ್ದದ ಸೂಕ್ಷ್ಮರೂಪವನ್ನು ತಿಳಿಸುತ್ತದೆ. **ಮನಃ ಕಾಯಾಗ್ನಿ-ಮಾಹಂತಿ ಸ ಪ್ರೇರಯತಿ ಮಾರುತಂ....** ಎಂದಿರುವಂತೆ ಅಂತಹ ನಾದವನ್ನು ಹೊರಡಿಸು ವುದರಲ್ಲಿ ವಾಯುವಿನ ಪಾತ್ರ ಇದೆ. ಶಬ್ದಗಳು ನಾದರೂಪದಿಂದ ಹುಟ್ಟಿಕೊಳ್ಳುವಾಗಲೇ ಅವು ಭೀಮ ಎನಿಸುವ ಭಗವಂತನ ವಿಷಯಕವಾಗಿ ತೆರೆದುಕೊಳ್ಳುವಂತೆ ಸೃಷ್ಟಿಸುವನು (**ಭೀಮೋ ನಾದಃ ಯಸ್ಮಾತ್ ಸಃ ಭೀಮನಾದಃ**) ಎಂಬ ಅರ್ಥದಲ್ಲೂ ವಾಯುದೇವ ಭೀಮನಾದ ಆಗುವನು.

**ಮಹೌಜಸ್:** ಇತರರನ್ನು ಪರಾಭವಗೊಳಿಸುವ ಶಕ್ತಿ ಓಜಸ್ ಎನಿಸಿದ್ದು, ಅಂತಹ ಶಕ್ತಿಯನ್ನು ದೊಡ್ಡ ಪ್ರಮಾಣದಲ್ಲಿ ವಾಯುದೇವನು ಹೊಂದಿರುವನು. ಐದಾರು ಉಪ ನಿಷತ್ತುಗಳಲ್ಲಿ ಉಲ್ಲೇಖಗೊಂಡಂತೆ ಶರೀರಧಾರಣೆಯ ವಿಷಯದಲ್ಲಿ ಇತರ ಇಂದ್ರಿಯಾಭಿ ಮಾನಿದೇವತೆಗಳನ್ನು ವಾಯುದೇವನು ಮೂಲರೂಪದಲ್ಲಿ ಪರಾಭವಗೊಳಿಸಿರುವಂತೆ, ತನ್ನ ಹನುಮದವತಾರ ಹಾಗೂ ಭೀಮಾವತಾರಗಳಲ್ಲಿ ದೈಹಿಕವಾಗಿ ಶತ್ರುಗಳನ್ನು ಪರಾಭವಗೊಳಿಸಿದ್ದರೆ, ಮಧ್ವಾವತಾರದಲ್ಲಿ ಬೌದ್ಧಿಕವಾಗಿ ಪರಾಭವಗೊಳಿಸಿರುವನು.

ಅಲ್ಲದೆ, ಮಹೌಜಸ್ ಎಂದು ವಾಯುದೇವನನ್ನು ಉಪಾಸನೆ ಮಾಡುವ ಉಪಾಸಕ ನಿಗೂ ದೈಹಿಕವಾಗಿ, ಬೌದ್ಧಿಕವಾಗಿ ಶತ್ರುಗಳನ್ನು ಎದುರಿಸುವ ಸಾಮರ್ಥ್ಯವನ್ನು ಅನುಗ್ರಹಿ ಸುವನು (**ಮಹತ್ ಓಜಃ ಯಸ್ಮಾತ್ ಸಃ**) ಭಕ್ತಪ್ರಹ್ಲಾದ 'ಮಹೌಜಸ್' ಎನಿಸುವ ವಾಯು ದೇವನ ಆವೇಶದಿಂದಾಗಿಯೇ ಹಿರಣ್ಯಕಶಿಪುವಿನ ಪೀಡೆಗಳನ್ನೆಲ್ಲ ಎದುರಿಸಲು ಸಮರ್ಥ ನಾದ.

**ಸರ್ವೇಷಾಂ ಚ ಪ್ರಾಣಭೂತ:** **ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ....** ಎಲ್ಲ ಪ್ರಾಣಿಗಳ ಜೀವಂತಿಕೆಯ ಪ್ರಮುಖ ಲಕ್ಷಣಗಳು ಎರಡು –ಉಸಿರಾಟ ಹಾಗೂ ಚಟುವಟಿಕೆ– ವಾಯುದೇವ ಉಸಿರಿನ ದೇವತೆಯಾಗಿ, ಇಂದ್ರಿಯಗಳ ಮೂಲಕ ಚೇಷ್ಟಪ್ರದನಾಗಿ ಆ ಎರಡು ಲಕ್ಷಣಗಳನ್ನೂ ಪೂರೈಸುವನು. ಹೀಗೆ ಎಲ್ಲ ಪ್ರಾಣಿಗಳಿಗೆ ಪ್ರಾಣಧಾರಕನೇ ಅವನು. ಇಂದ್ರಿಯಾಭಿಮಾನಿ ದೇವತೆಗಳು ಇಂದ್ರಿಯಗಳನ್ನು ತೊಡಗಿಸುವರು. ಅಂತಹ ಚೇಷ್ಟಕರಾಗಿದ್ದು **ಪ್ರಾಣ** ಎನಿಸುವ ಇಂದ್ರಿಯಾಭಿಮಾನಿಗಳಲ್ಲೂ ಪ್ರಾಣನಾಗಿ, ಚೇಷ್ಟಕನಾಗಿ ಇರುವವನು (**ಪ್ರಾಣೇಷು ಪ್ರಾಣಃ ಸನ್ ಭವತೀತಿ**) ವಾಯುದೇವ.

ಹೀಗೆ ಈ ಮಾತಿನಲ್ಲಿ ಪ್ರಾಣದೇವ ಇಂದ್ರಿಯಗಳ ಮೂಲಕ ನಡೆಯುವ ಪ್ರವೃತ್ತಿಗಳಲ್ಲಿ, ಪ್ರಾಣಧಾರಣೆಯಲ್ಲಿ ಎಷ್ಟು ಮಹತ್ತ್ವದ ಪಾತ್ರವನ್ನು ವಹಿಸುವನೆಂದು ಸಾರಲಾಗಿದೆ.

**ಅನಾವೃತ್ತಿ:** 'ದೇಹಿನಾಂ ದೇಹಪಾತೇ' ದೇಹಿಗಳ ದೇಹದ ಪತನಕ್ಕೆ ವಾಯುದೇವನ ಅನಾವೃತ್ತಿ ಅಂದರೆ ಅನುಪಸ್ಥಿತಿಯೇ ಕಾರಣ ಹೊರತು ಇತರ ತತ್ತ್ವಾಭಿಮಾನಿದೇವತೆಗಳ ನಿರ್ಗಮನ ಕಾರಣ ಎನಿಸದು. ಹೀಗೆ ವ್ಯತಿರೇಕಮುಖದಿಂದ ದೇಹಧಾರಣೆಗೆ ವಾಯುದೇವನ ಉಪಸ್ಥಿತಿಯೇ ಕಾರಣ ಎಂಬುದಾಗಿ ಉಪನಿಷತ್ತುಗಳಲ್ಲಿ ಪ್ರಸ್ತುತವಾಗಿರುವ ಇಂದ್ರಿಯಾಭಿಮಾನಿಗಳ ಸ್ಪರ್ಧೆಯ ಹಿನ್ನೆಲೆಯಲ್ಲಿ ಸಾರಲಾಗಿದೆ.

- ದೇಹಿಗಳ ಚರಮದೇಹವು ಪತಿತವಾಗಿ, ಮುಂದೆ ಮೋಕ್ಷವನ್ನು ಪಡೆದ ದೇಹಿಗಳು ಸಂಸಾರಾವಸ್ಥೆಗೆ ಮರಳಿ ಬರದಿರಲು ಶ್ರೀವಾಯುದೇವನ ಅನುಗ್ರಹವೇ ಕಾರಣ. ವಾಯುದೇವನು ತನ್ನ ಗದೆಯಿಂದ ಶರೀರ ಲಿಂಗದೇಹದ ಭಂಗವನ್ನುಂಟುಮಾಡಿದಾಗ ಪ್ರಾಕೃತಿಕಸಂಪರ್ಕವನ್ನು ಕಳಕೊಂಡ ಜೀವರು ಮತ್ತೆ ಸಂಸಾರಾವಸ್ಥೆಗೆ ಒಳಗಾಗುವುದಿಲ್ಲ.

ಹೀಗೆ **ಅನಾವೃತ್ತಿಃ....** ಇತ್ಯಾದಿ ಮಾತಿನಿಂದ ಜೀವರು ಮರಣ ಹಾಗೂ ಮೋಕ್ಷ ಹೊಂದುವುದರಲ್ಲಿ ಮುಖ್ಯಪ್ರಾಣನ ಪಾತ್ರವನ್ನು ಸಾರಲಾಗುತ್ತಿದೆ.

**ದೇವದೇವನ ಪ್ರತಿಬಿಂಬ:** **ತಸ್ಮಾದ್ ವಾಯುರ್ದೇವದೇವೋ ವಿಶಿಷ್ಟಃ** ಎಂಬ ಕೊನೆಯ ಚರಣದಲ್ಲಿ ಹಿಂದಿನ ಚರಣಗಳಲ್ಲಿ ತಿಳಿಸಿದ ಮಹಿಮೆಗಳನ್ನೂ ದೇವದೇವ ವಿಶೇಷಣದಿಂದ ಸೂಚಿತ ಮಹಿಮೆಗಳನ್ನೂ ಪರಾಮರ್ಶಿಸಿ, ಆದುದರಿಂದ ವಾಯುದೇವ ಇತರೆಲ್ಲ ದೇವತೆಗಳಿಂದ ವಿಶಿಷ್ಟನಾದವನು –ಎಂದು ಸಾರಲಾಗಿದೆ– **ತಸ್ಮಾದ್ ವಾಯುರ್ದೇವದೇವೋ ವಿಶಿಷ್ಟಃ**

ಚತುರ್ಮುಖನೇ ಮುಂತಾದ ದೇವತೆಗಳಿಗೂ ದೇವನಾಗಿರುವ, ಸ್ತುತ್ಯನಾಗಿರುವ ಭಗವಂತನೇ ಮುಖ್ಯವಾಗಿ **ದೇವದೇವ**. ಆದರೆ ಇಲ್ಲಿ ವಾಯುದೇವನನ್ನು ದೇವದೇವ ಎಂದು ಕರೆಯಲಾಗಿದೆ. **ಅತದ್ಭಾವೇ ಸಾಮಾನಾಧಿಕರಣ್ಯಂ ಸಾರೂಪ್ಯಂ ಗಮಯತಿ** –ಎಂಬ ನ್ಯಾಯಕ್ಕನುಗುಣವಾಗಿ ವಾಯುದೇವನೇ ದೇವದೇವನಾಗಿರುವನೆಂದು ಅಷ್ಟೊಂದು ಸಮುಚಿತವಾಗದ ಪ್ರಯುಕ್ತ ದೇವದೇವನಾದ ಭಗವಂತನಿಗೆ ಸದೃಶನಾಗಿ, ಅವನಿಗೆ

ಅಧೀನನಾಗಿದ್ದು ಅವನ ಪ್ರತಿಬಿಂಬನಾಗಿರುವವನು –ಎಂಬ ಅರ್ಥ ಕೊಡುವುದು. **ಆಭಾಸ ಕೋऽಸ್ಯ ಪವನಃ....** ಎಂದಿರುವಂತೆ ದೇವದೇವನಾದ ಭಗವಂತನ ಪ್ರತಿಬಿಂಬನಾಗಿರುವವನು ವಾಯುದೇವ –ಎಂದು ಸ್ತುತಿಸಿದಂತಾಗುವುದು.

ಅಥವಾ ಎಲ್ಲರಿಂದ ಸ್ತುತ್ಯರಾಗಿದ್ದು ದೇವ ಎನಿಸುವ ರುದ್ರಾದಿಗಳಿಂದೆಲ್ಲ ಸ್ತುತ್ಯನಾಗಿರುವ ಪ್ರಯುಕ್ತ ವಾಯುದೇವ ದೇವದೇವ!

**ಏಳುವಿಶೇಷಣಗಳಿಂದ ಸಮರ್ಥನೆ:** ಹೀಗೆ ವಾಯು ಮುಂತಾದ ಏಳು ವಿಶೇಷಣಗಳಿಂದ ವಾಯುದೇವನ ಗುಣಮಹಿಮೆಗಳನ್ನೆಲ್ಲ ಕ್ರೋಡೀಕರಿಸಿ, **ತಸ್ಮಾದ್ ವಾಯುರ್ದೇವದೇವೋ ವಿಶಿಷ್ಟಃ** ಆದುದರಿಂದ ವಾಯುದೇವನು ರುದ್ರಾದಿಗಳಿಗಿಂತೆಲ್ಲ ವಿಶಿಷ್ಟನೆನಿಸಿರುವನು –ಎಂದು ಉದ್ಘೋಷಿಸಲಾಗಿದೆ.

ಮಹಾಭಾರತದಲ್ಲಿ ಪ್ರಸ್ತಾವಿಸಲ್ಪಟ್ಟ ವಾಯುದೇವನ ವೈಶಿಷ್ಟ್ಯದ ಕುರಿತಾದ ಈ ಶ್ಲೋಕವನ್ನು ಯಾರು ಬೇಕಾದರೂ ಯಾವಾಗ ಬೇಕಾದರೂ ಪಠಿಸಿ ಹರಿಗುರುಗಳ ಅನುಗ್ರಹಕ್ಕೆ ಪಾತ್ರರಾಗಬಹುದು.

★

# • ಸುಂದರಕಾಂಡದಲ್ಲಿ ಹನೂಮಂತನ ಗುಣಗಳು •

**ಯೇಯೇ ಗುಣಾ ನಾಮ ಜಗತ್ಪ್ರಸಿದ್ಧಾ**
**ಯಂ ತೇಷು ತೇಷು ಸ್ಮ ನಿದರ್ಶಯಂತಿ ।**
**ಸಾಕ್ಷಾನ್ಮಹಾಭಾಗವತಪ್ರಬರ್ಹಂ**
**ಶ್ರೀಮಂತಮೇನಂ ಹನುಮಂತಮಾಹುಃ ॥**

ನಾರಾಯಣ ಪಂಡಿತಾಚಾರ್ಯರು ಮಧ್ವವಿಜಯದಲ್ಲಿ ಹನುಮಂತನ ವ್ಯಕ್ತಿತ್ವವನ್ನು ನಿರೂಪಿಸಿರುವ ಬಗೆ ಇದು. ಜಗತ್ತಿನಲ್ಲಿ ಗುಣಗಳೆಂದು ಪ್ರಸಿದ್ಧವಾದವುಗಳಿಗೆಲ್ಲ ಆಶ್ರಯ ನಾಗಿದ್ದು, ದೃಷ್ಟಾಂತವೆನಿಸಬಹುದಾದವನು ಹನುಮಂತನೆಂದು.

ರಾಮಾಯಣವು ಮುಖ್ಯವಾಗಿ ಶ್ರೀರಾಮಚಂದ್ರನ ಗುಣಗಳನ್ನು ಸಾರುತ್ತಿದ್ದರೆ, ತದನಂತರ ಅವನ ಭಕ್ತೋತ್ತಮನಾದ ಹನುಮಂತನ ಗುಣಗಳನ್ನೂ ಪ್ರತಿಪಾದಿಸುತ್ತಿದೆ.

**ನವ ಗುಣಗಳು:** ಹೀಗೆ ಪ್ರತಿಪಾದ್ಯಗಳಾದ ಹನುಮಂತನ ಅನೇಕಾನೇಕ ಗುಣಗಳಲ್ಲಿ ಒಂಬತ್ತು ಗುಣಗಳು ಪ್ರಧಾನವಾದವು–

**ಜ್ಞಾನೇ ವಿರಾಗೇ ಹರಿಭಕ್ತಿಭಾವೇ ಧೃತಿಸ್ಥಿತಿಪ್ರಾಣಬಲೇಷು ಯೋಗೇ ।**
**ಬುದ್ಧೌ ಚ ನಾನ್ಯೋ ಹನುಮತ್ಸಮಾನಃ ಪುಮಾನ್ ಕದಾಚಿತ್ ಕ್ವ ಚ ಕಶ್ಚ ನೈವ ॥**
(ಮ.ಭಾರ.ತಾ.ನಿ. 2-155)

ಎಂಬ ಪ್ರಮಾಣದಲ್ಲಿ ಹನುಮಂತನ ಭಗವದ್‌ಜ್ಞಾನ, ವಿರಕ್ತಿ, ಭಗವದ್‌ಭಕ್ತಿ, ಧೈರ್ಯ, ನ್ಯಾಯನಿಷ್ಠೆ, ಪ್ರೇರಕತ್ವ, ಬಲ, ಯುಕ್ತಿವಂತಿಕೆ ಹಾಗೂ ಭಗವದಿತರವಿಷಯಕಬುದ್ಧಿ –ಎಂಬ ಒಂಬತ್ತು ಗುಣಗಳನ್ನು ಉಲ್ಲೇಖಿಸಿ, ಅವುಗಳಲ್ಲಿಯ ಒಂದೊಂದು ಗುಣದಲ್ಲೂ ಹನು ಮಂತನಿಗೆ ಸರಿದೂಗುವ ವ್ಯಕ್ತಿ ಎಂದೂ ಎಲ್ಲೂ ಇಲ್ಲವೇ ಇಲ್ಲ –ಎಂದು ದೃಢವಾಗಿದೆ. ಹನುಮಂತನದೇ ಮತ್ತೊಂದು ಅವತಾರ ಎನಿಸಿರುವ ಭೀಮಸೇನನು ಪ್ರತಿನಿಧಿಸಿರುವ ಭಕ್ತ್ಯಾದಿ ಹತ್ತು ಗುಣಗಳಲ್ಲಿ ಈ ಒಂಭತ್ತು ಗುಣಗಳೂ ಸೇರಿಕೊಂಡಿರುವುದೂ ಗಮ ನಾರ್ಹ.

**ಭಕ್ತಿರ್ಜ್ಞಾನಂ ಸವೈರಾಗ್ಯಂ ಪ್ರಜ್ಞಾ ಮೇಧಾ ಧೃತಿಃ ಸ್ಥಿತಿಃ ।**
**ಯೋಗಂ ಪ್ರಾಣೋ ಬಲಂ ಚೈವ ವೃಕೋದರ ಇತೀರಿತಃ ॥**
(ಮ.ಭಾರ.ತಾ.ನಿ. 2-146)

ವೃಕೋದರ ಎಂದರೆ ಹತ್ತು ಗುಣಗಳಿಗೆ ಸಂಕೇತ ಎನ್ನುವ ಇಲ್ಲಿ ಬುದ್ಧಿಯ ಗ್ರಹಣ ಸಾಮರ್ಥ್ಯವನ್ನು 'ಪ್ರಜ್ಞಾ' ಎಂಬ ನಾಮದಿಂದಲೂ, ಧಾರಣಸಾಮರ್ಥ್ಯವನ್ನು 'ಮೇಧಾ' ಎಂಬ ನಾಮದಿಂದಲೂ, ಪ್ರತ್ಯೇಕವಾಗಿ ಪರಿಗಣಿಸಲ್ಪಟ್ಟಿದೆ. ಹನುಮಂತನಲ್ಲಾದರೂ

ಅವೆರಡನ್ನೂ ಒಟ್ಟಿಗೆ ಸೇರಿಸಿ 'ಬುದ್ಧಿ' ಅಥವಾ 'ಜ್ಞಾನ' ಎಂದೇ ಉಲ್ಲೇಖಿಸಲಾಗಿದೆ ಯಷ್ಟೇ. ಅಥವಾ ಜ್ಞಾನ ಮತ್ತು ಬುದ್ಧಿಶಬ್ದಗಳಿಂದ ಪ್ರಜ್ಞೆಯನ್ನೂ, ಮೇಧಾವನ್ನೂ ಇಟ್ಟು ಕೊಳ್ಳಲಾಗಿದೆ ಎಂದು ಅರ್ಥೈಸಿಕೊಳ್ಳಬೇಕು.

**ಸುಂದರಕಾಂಡದಲ್ಲಿ:** ರಾಮಾಯಣದ ಸುಂದರಕಾಂಡವು ಭಕ್ತ್ಯಾದಿಗುಣಗಳಿಂದಾಗಿ ಸುಂದರವಾದ ವ್ಯಕ್ತಿತ್ವವನ್ನು ಒಳಗೊಂಡ ಹನುಮಂತನ ಗುಣಮಹಿಮೆಗಳನ್ನು ಸುಂದರ ವಾಗಿ, ಚೊಕ್ಕವಾಗಿ, ಸ್ಪಷ್ಟವಾಗಿ ಪ್ರತಿಪಾದಿಸುವ ಪ್ರಯುಕ್ತ 'ಸುಂದರಕಾಂಡ' ಎಂದು ಅನ್ವರ್ಥಕವಾಗಿ ಕರೆಸಿಕೊಳ್ಳಲ್ಪಡುವ ಕಾಂಡ. ಈ ಕಾಂಡದಲ್ಲಿ ಹನುಮಂತನ ಜ್ಞಾನಾದಿ ಒಂಭತ್ತು ಗುಣಗಳೂ, ಕೆಲವು ಸ್ಪಷ್ಟವಾಗಿಯೂ ಮತ್ತೆ ಕೆಲವು ಸೂಚ್ಯವಾಗಿಯೂ ಅಭಿ ವ್ಯಕ್ತಗಳಾಗಿವೆ.

**ಜ್ಞಾನ:** ಪ್ರಶಸ್ತವಾದ ಜ್ಞಾನವನ್ನು ಹೊಂದಿರುವುದರಿಂದಲೇ 'ಹನುಮಾನ್' ಎನಿಸಿ ರುವ ಆಂಜನೇಯನನ್ನು ಬಳಿತ್ಥಾಸೂಕ್ತವು 'ಮತಿ' ಶಬ್ದದಿಂದಲೇ ಉಲ್ಲೇಖಿಸಿ ಅವನ ಜ್ಞಾನಾಧಿಕ್ಯವನ್ನು ಸೂಚಿಸಿದೆ– **"ಹನಶಬ್ದೋ ಜ್ಞಾನವಾಚೀ ಹನುಮಾನ್ ಮತಿಶಬ್ದಿತಃ"** ಶ್ರೀರಾಮಚಂದ್ರನ ಹೃದ್ಗತವನ್ನು ಅರ್ಥಮಾಡಿಕೊಳ್ಳುವಷ್ಟು ಸೂಕ್ಷ್ಮವಾದ ಭಗವದ್‌ಜ್ಞಾನ ಹನುಮಂತನದು. ಸೀತಾದೇವಿಯನ್ನು ಅಶೋಕವನದಲ್ಲಿ ಹುಡುಕುವ, ಹಾಗೆಯೇ ಸೀತಾ ದೇವಿಯನ್ನು ಭೇಟಿಯಾದ ಮೇಲೆ ಅಪರಿಚಿತನಂತೆ ಸಂಭಾಷಿಸುವ ಆವಶ್ಯಕತೆ ಅವನಿಗೆ ಇಲ್ಲದಿದ್ದರೂ, ಭಗವಂತನ ಹೃದ್ಗತವನ್ನು ಬಲ್ಲ ಅವನು ಅದಕ್ಕನುಗುಣವಾಗಿ ನಟಿಸಿದನು–

**ನರಲೋಕವಿಡಂಬಸ್ಯ ಜಾನನ್ ರಾಮಸ್ಯ ಹೃದ್ಗತಮ್ ।**
**ತಸ್ಯ ಚೇಷ್ಟಾನುಸಾರೇಣ ಕೃತ್ವಾ ಚೇಷ್ಟಾಶ್ಚ ಸಂವಿದಮ್ ॥**

ರಾವಣನೆದುರು ಶ್ರೀರಾಮಚಂದ್ರನನ್ನು ಪರಿಚಯಿಸಿ ಕೊಡುತ್ತ–

**ನ ರಾಮಬಾಣಧಾರಣೇ ಕ್ಷಮಾಃ ಸುರೇಶ್ವರಾ ಅಪಿ ।**
**ವಿರಿಂಚಿಶರ್ವಪೂರ್ವಕಾಃ ಕಿಮು ತ್ವಮಲ್ಪಸಾರಕಃ ॥**

**ಪ್ರಕೋಪಿತಸ್ಯ ತಸ್ಯ ಕಃ ಪುರಃ ಸ್ಥಿತೋ ಕ್ಷಮೋ ಭವೇತ್ ।**
**ಸುರಾಸುರೋರಗಾದಿಕೇ ಜಗತ್ಯಚಿಂತ್ಯಕರ್ಮಣಃ ॥**

– ಹೇಳಿರುವ ಮಾತು ಹನುಮಂತನು ಶ್ರೀರಾಮಚಂದ್ರನ ಪರಾಕ್ರಮ ಪರಾಕಾಷ್ಠೆಯನ್ನು, ಕ್ಷಮಾತ್ಮಕವಾದ ಕ್ರೋಧದ ವೈಭವವನ್ನು ಎಷ್ಟು ಸ್ಪಷ್ಟವಾಗಿ ತಿಳಿದಿರುವನೆಂದು ವ್ಯಕ್ತವಾಗ ದಿರದು.

**ವಿರಾಗ:** ಯಾವಾಗಲೂ ಭಗವದ್ವಿಷಯದಲ್ಲೇ ಮಗ್ನನಾಗಿರುವ ಹನುಂತನು ವಿಷಯ ಪದಾರ್ಥಗಳಲ್ಲಿ ತೀರಾ ಅನಾಸಕ್ತ. ಅಶೋಕವನದಲ್ಲಿ ಸೀತೆಗಾಗಿ ಹುಡುಕಾಡುತ್ತಾ, ನಿದ್ದೆ ಯಲ್ಲಿದ್ದ, ಅಸ್ತವ್ಯಸ್ತ ಉಡುಪುತೊಡುಪುಗಳನ್ನೊಳಗೊಂಡಿದ್ದ ರಾವಣನ ಅಂತಃಪುರದ

ಸ್ತ್ರೀಯರನ್ನು ಕಂಡರೂ ಆ ಪ್ರಯುಕ್ತ ಕಿಂಚಿತ್ತೂ ವಿಚಲಿತನಾಗದ ದೃಢವಾದ ಮನಸ್ಸು ಹನುಮಂತನದು.

**ಕಾಮಂ ದೃಷ್ಟಾ ಮಯಾ ಸರ್ವಾ ವಿಶ್ವಸ್ತಾ ರಾವಣಸ್ತ್ರಿಯಃ ।**
**ನ ತು ಮೇ ಮನಸಾ ಕಿಂಚಿದ್ ವೈಕೃತ್ಯಮುಪಪದ್ಯತೇ ॥**

–ತಾನು ಮಲಗಿದ್ದ ರಾವಣನ ಸ್ತ್ರೀಯರನ್ನು ಕಂಡರೂ ಏನೂ ಮಾನಸಿಕ ವಿಕಾರಕ್ಕೊಳಗಾಗಲಿಲ್ಲ– ಎಂದು ಹನುಮಂತನು ಆತ್ಮನಿರೀಕ್ಷಣೆ ಮಾಡಿಕೊಂಡಿರುವನೆಂದು ವಾಲ್ಮೀಕಿ ರಾಮಾಯಣದಲ್ಲಿ ಉಲ್ಲೇಖಿಸಲಾಗಿದೆ.

ಹೀಗೆ ಹನುಮಂತನ ಮನಸ್ಸು ಯಾಕೆ ವಿಕಾರಕ್ಕೊಳಗಾಗಲಿಲ್ಲ ಎಂಬುದಕ್ಕೆ ಕಾರಣವನ್ನು ಶ್ರೀಮಧ್ವಾಚಾರ್ಯರು ತಮ್ಮ ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಸೂಚಿಸಿರುವರು–

**ಜಾನನ್ ರಾಮಸ್ಯ ಹೃದ್ಗತಂ ತಸ್ಯ ಚೇಷ್ಟಾನುಸಾರೇಣ ಕೃತ್ವಾ ಚೇಷ್ಟಾಃ ..... ।**

ಶ್ರೀರಾಮಚಂದ್ರನ ಸಂಕಲ್ಪಕ್ಕನುಗುಣವಾಗಿ ಸೀತಾನ್ವೇಷಣೆ ಮುಂತಾದ ಚಟುವಟಿಕೆಗಳನ್ನು ನಡೆಸಿದ ಹನುಮಂತನ ದೃಷ್ಟಿಯಲ್ಲಿ ಅವೆಲ್ಲ ಶ್ರೀರಾಮಚಂದ್ರನ ಪ್ರೀತಿಗಾಗಿ ನಡೆಸುವ ಸೇವೆ. –ಹೀಗಾಗಿ ಶ್ರೀರಾಮಚಂದ್ರನ ಕುರಿತಾದ ಭಕ್ತಿಭಾವವೇ ಜಾಗೃತವಾಗಿದ್ದಾಗ ಹೇಗೆ ತಾನೇ ಬೇರೆ ಭಾವನೆ ಉದ್ಭವಿಸೀತು?

ಸ್ರಕ್‌ಚಂದನವನಿತಾದಿ ವಿಷಯಪದಾರ್ಥಗಳಲ್ಲಿ ವಿರಕ್ತರಾದವರೂ ಸಾಮಾನ್ಯವಾಗಿ ತಮ್ಮ ಕೀರ್ತಿಗಾಗಿ ಹಂಬಲಿಸುವುದುಂಟು. ಹನುಮಂತ ಆ ವಿಷಯದಲ್ಲೂ ವಿರಕ್ತ. ರಾವಣನನ್ನೇ ಸಂಹರಿಸಿ ಅಪಾರವಾದ ಯಶಸ್ಸನ್ನು ಗಳಿಸುವ ಅವಕಾಶವಿದ್ದರೂ, ಅವನ ಸಂಹಾರ ಶ್ರೀರಾಮಚಂದ್ರನಿಂದಲೇ ನಡೆದು ಆ ಪ್ರಯುಕ್ತ ಕೀರ್ತಿ ಅವನಿಗೇ ಸಲ್ಲಬೇಕೆಂದು– 'ನಿಧಾರ್ಯ ಏವ ರಾವಣಃ ಸ ರಾಘವಸ್ಯ ನಾನ್ಯಥಾ' –ರಾವಣನನ್ನು ಸಂಹರಿಸಲು ಬಯಸದಷ್ಟು ನಿಸ್ಪೃಹತೆ ಹನುಮಂತನದು.

ಹನುಮಂತನ ವೈರಾಗ್ಯ ಶ್ರೀರಾಮಚಂದ್ರನ ಗಮನಕ್ಕೂ ಗೋಚರಿಸಿದ್ದು, ಸೀತಾದೇವಿಗೆ ತನ್ನ ಸಂದೇಶವನ್ನು ತಲುಪಿಸಿದ ಹನುಮಂತನಿಗೆ ಶ್ರೀರಾಮಚಂದ್ರ ಯಾವುದೇ ಬಾಹ್ಯ ಪದಾರ್ಥದ ಪ್ರಲೋಭನೆಯನ್ನು ಒಡ್ಡದೆ, ಆದರಪೂರ್ವಕವಾಗಿ ಆಲಿಂಗಿಸಿಕೊಂಡು ಸಾಯುಜ್ಯಮೋಕ್ಷವನ್ನು ದೃಢೀಕರಿಸಿದನು–

**ರಾಮೋಽಪಿ ನಾನ್ಯದನುದಾತುಮಮುಷ್ಯ ಯೋಗ್ಯ–**
**ಮತ್ಯಂತಭಕ್ತಿಭರಿತಸ್ಯ ವಿಲಕ್ಷ್ಯ ಕಿಂಚಿತ್ ।**
**ಸ್ವಾತ್ಮಪ್ರದಾನಮಧಿಕಂ ಪವನಾತ್ಮಜಸ್ಯ**
**ಕುರ್ವನ್ ಸಮಾಶ್ಲಿಷದಮುಂ ಪರಮಾಭಿತುಷ್ಟಃ ॥**

ಇದರಿಂದಾಗಿ ಹನುಮಂತನ ಬಾಹ್ಯವಿಷಯಗಳಲ್ಲಿಯ ವೈರಾಗ್ಯದ ಬಗ್ಗೆ ಶ್ರೀರಾಮಚಂದ್ರನಿಂದಲೇ ಪ್ರಮಾಣಪತ್ರ ಸಂದಂತಾಗಿದೆ.

**ಹರಿಭಕ್ತಿಭಾವ:** ಭಾಗವತೋತ್ತಮನಾದ ಹನುಮಂತನಲ್ಲಿ ಭಗವದ್ಭಕ್ತಿಯು ಅಸಾಧಾರಣವಾಗಿ ಇದೆ. ಅವನ ಪ್ರತಿಯೊಂದು ಚಟುವಟಿಕೆಯೂ ಅವನ ಭಕ್ತಿಭಾವವನ್ನು ಸೂಚಿಸಿಕೊಡಬಲ್ಲದು.

ಯಾವುದೇ ಕಾರ್ಯ ಭಗವದನುಗ್ರಹವಿಶೇಷದಿಂದಲೇ ನಡೆಯುವುದೆಂದು ನಂಬುವ ಭಕ್ತ, ಭಗವತ್‌ಸ್ಮರಣಪೂರ್ವಕವಾಗಿಯೇ ಕಾರ್ಯವನ್ನು ಆರಂಭಿಸುವನು. ಹನುಮಂತನೂ,

**ರಾಮಾಯ ಶಾಶ್ವತಸುವಿಸ್ತೃತಷಡ್ಗುಣಾಯ**
**ಸರ್ವೇಶ್ವರಾಯ ಬಲವೀರ್ಯಮಹಾರ್ಣವಾಯ ।**
**ನತ್ವಾ............ ॥**

ಎಂದಿರುವಂತೆ ಶ್ರೀರಾಮಚಂದ್ರನ ಶಕ್ತಿ, ಪರಾಕ್ರಮ ಮುಂತಾದ ಗುಣಗಳಿಂದ ಪರಿಪೂರ್ಣವಾದ ವ್ಯಕ್ತಿತ್ವವನ್ನು ನೆನೆದು, ಅದಕ್ಕೆ ಮಣಿದು ಸಮುದ್ರೋಲ್ಲಂಘನಕ್ಕೆ ತೊಡಗಿರುವನು. ರಾವಣನೊಡನೆ ಮಾತುಕತೆಯನ್ನು ಆರಂಭಿಸುವ ಮೊದಲೂ ಶ್ರೀರಾಮಚಂದ್ರನನ್ನೊಮ್ಮೆ ಸ್ಮರಿಸಿಕೊಂಡಿರುವನು– **'ಪ್ರಣಮ್ಯ ರಾಮಮೀಶ್ವರಂ.....'**

ತನ್ನ ಪರಿಚಯ ಉದ್ದೇಶಾದಿಗಳನ್ನು ವಿಚಾರಿಸಿದ ರಾವಣನಿಗೆ ಹನುಮಂತನು ಉತ್ತರಿಸುವ ರೀತಿಯೂ ಅವನಿಗೆ ಶ್ರೀರಾಮಚಂದ್ರನ ಮೇಲಿರುವ ಭಕ್ತಿಯನ್ನು ಎತ್ತಿತೋರಿಸುವುದು. **'ಅವ್ಯೈಹಿ ದೂತಮಾಗತಂ ದುರಂತವಿಕ್ರಮಸ್ಯ ಮಾಂ.....'** ಅನಂತವಿಕ್ರಮಶಾಲಿಯಾದ ಶ್ರೀರಾಮಚಂದ್ರನ ದೂತನಾಗಿರುವವನು ತಾನೆಂದು ಹೇಳುವ ಹನುಮಂತನ ಅಭಿಪ್ರಾಯ ತಾನು ಅಂತಹವನ ದೂತನಾಗಿರುವುದರಿಂದಾಗಿ ತನ್ನಿಂದ ವಿಕ್ರಮದ ಕಾರ್ಯಗಳು ನಡೆದಿವೆಯೇ ಹೊರತು ಬರೇ ಹನುಮಂತನಾಗಿರುವುದರಿಂದ ಅಲ್ಲ; ಅಂದರೆ, ಸ್ವತಂತ್ರ ಸಾಮರ್ಥ್ಯದಿಂದ ಅಲ್ಲ –ಎಂಬುದಾಗಿ.

ತನ್ನ ವಿಶ್ರಾಂತಿಗಾಗಿ ಸಮುದ್ರದಿಂದ ಮೇಲೆದ್ದ ಮೈನಾಕಪರ್ವತದಲ್ಲಿ ಹನುಮಂತನು ವಿಶ್ರಾಂತಿ ತೆಗೆದುಕೊಳ್ಳದಿದ್ದುದಕ್ಕೆ ಕಾರಣ ತನಗೆ ವಿಶ್ರಾಂತಿಯ ಆವಶ್ಯತೆ ಇಲ್ಲ ಎಂಬುದು ಹೇಗೋ ಹಾಗೆಯೇ ಸ್ವಾಮಿಕಾರ್ಯವಾದ ಸೀತಾನ್ವೇಷಣೆಯನ್ನು ನಿರ್ವಹಿಸದೆ ವಿಶ್ರಾಂತಿ ಸ್ವೀಕರಿಸುವುದು ಸಮುಚಿತವಲ್ಲ –ಎಂಬ ಭಾವನೆಯೂ ಕೂಡಾ. ಇದಕ್ಕೆ ಭಕ್ತಿಭಾವನೆಯಲ್ಲೇ ಪರ್ಯವಸಾನ.

ಸೀತಾದೇವಿಯ ಚೂಡಾಮಣಿಯನ್ನು ಶ್ರೀರಾಮಚಂದ್ರನ ಪಾದಾರವಿಂದದಲ್ಲಿ ಸಮರ್ಪಿಸುವಾಗ ಹನುಮಂತನು ಬರೇ ಅಷ್ಟಾಂಗಗಳಿಂದ ಅಲ್ಲದೇ, ಸಕಲಾಂಗಗಳಿಂದಲೂ ಪ್ರಣಾಮವನ್ನು ಸಲ್ಲಿಸುವನು. 'ಸರ್ವಾಂಗಕೈಃ ಪ್ರಣತಿಮಸ್ಯ ಚಕಾರ ಭಕ್ತ್ಯಾ' ಅಂದರೆ ಅವನ ಪ್ರತಿಯೊಂದು ಅಂಗವೂ ಪ್ರಣಾಮಕ್ಕೆ ಪೋಷಕವಾದ ಭಾವನೆಗೆ ಪುಷ್ಟಿ ನೀಡುತ್ತಿದ್ದಿತು. ಇಷ್ಟೂ ಪ್ರಬಲವಾದ ಭಕ್ತಿಭಾವ ಅವನದ್ದಾಗಿತ್ತು.

**ಧೃತಿ:** **ಚಿತ್ತದ್ರವಸ್ತಥಾ ಸ್ಥೈರ್ಯಂ ಪ್ರಸಾದೋ ಭಕ್ತಿಲಕ್ಷಣಮ್ ।**

ಚಿತ್ತ ದ್ರವ, ಸ್ಥೈರ್ಯ ಹಾಗೂ ಪ್ರಸನ್ನತೆ ಈ ಮೂರು ಭಕ್ತಿಯ ಲಕ್ಷಣವೆಂದು ಪರಿಗಣಿಸುವ 'ಭಕ್ತಿವಿವೇಕ'ವು (ಭಾಗ.ತಾ.ನಿ. 11-14-24) ಇವುಗಳಲ್ಲೂ 'ಸ್ಥೈರ್ಯ'ವು ವಿಶೇಷವಾಗಿ ಇರುವ ಲಕ್ಷಣಗಳೆಂದು ತಿಳಿಸಿದೆ–

**ಆಧಿಕ್ಯೇನ ತು ತತ್ರಾಪಿ ಸ್ಥೈರ್ಯಮೇವ ವಿಶೇಷತಃ ।**

ಸ್ಥೈರ್ಯಧೈರ್ಯಗಳೆರಡೂ ಒಂದೇ ನಾಣ್ಯದ ಎರಡು ಮಗ್ಗುಲುಗಳಷ್ಟೇ. ಹನುಮಂತನು ಸಮುದ್ರವನ್ನು ದಾಟುವಾಗ ವಿಘ್ನಗಳಂತೆ ಕಾಣಿಸಿಕೊಂಡ ಸುರಸೆ, ಸಿಂಹಿಕೆಯರನ್ನು ಎದುರಿಸುವಲ್ಲಿ, ಲಂಕಾಭಿಮಾನಿನಿಯನ್ನು ಹತ್ತಿಕ್ಕುವಲ್ಲಿ ಧೃತಿಗೆಡದೆ ವರ್ತಿಸಿರುವನು. ಅಶೋಕವನವನ್ನು ಪುಡಿಗೈದ ತನ್ನ ನಿಗ್ರಹಕ್ಕಾಗಿ ಬಂದ ಕೋಟಿಗಟ್ಟಲೆ ರಾಕ್ಷಸರನ್ನು ಕಂಡಾಗಲೂ ಹನುಮಂತನ ಧೈರ್ಯ ಕುಸಿಯಲಿಲ್ಲ.

ರಾವಣನ ಅರಮನೆಯಲ್ಲಿ ಅವನ ಎದುರೇ–

**ನ ಚೇತ್ ಪ್ರದಾಸ್ಯಸಿ ತ್ವರನ್ ರಘೂತ್ತಮಪ್ರಿಯಾಂ ತದಾ ।**
**ಸಪುತ್ರಮಿತ್ರಬಾಂಧವೋ ವಿನಾಶಮಾಶು ಯಾಸ್ಯಸಿ ॥**

ಸೀತಾದೇವಿಯನ್ನು ಶ್ರೀರಾಮನಿಗೆ ಕೂಡಲೇ ಸಮರ್ಪಿಸದಿದ್ದಲ್ಲಿ ಪರಿವಾರಸಹಿತನಾಗಿ ನಾಶ ಹೊಂದುವಿ– ಎಂದು ಎಚ್ಚರಿಸುವಷ್ಟು ಸಾತ್ತ್ವಿಕಧೈರ್ಯ, ಸ್ಥೈರ್ಯ ಹನುಮಂತನದಾಗಿತ್ತು.

**ಸ್ಥಿತಿ:** ನ್ಯಾಯಮಾರ್ಗದಲ್ಲಿರುವಿಕೆಯೇ ಸ್ಥಿತಿ ಎನಿಸುವುದು. ಹನುಮಂತನು ಸಮುದ್ರವನ್ನು ಲಂಘಿಸುವಾಗ ಎದುರಾದ ನಾನಾ ವ್ಯಕ್ತಿಗಳೊಡನೆ ಅವರವರ ವ್ಯಕ್ತಿತ್ವಕ್ಕೆ ಅನುಗುಣವಾಗಿ ಪ್ರತಿಕ್ರಿಯೆಯನ್ನು ತೋರಿಸುವುದರ ಮೂಲಕ ತನ್ನ ನ್ಯಾಯನಿಷ್ಠೆಯನ್ನು ಸೂಚಿಸಿರುವನು. ಮೈನಾಕನ ಗೌರವಪೂರ್ವಕವಾದ ಉಪಚಾರವನ್ನು ಆಲಿಂಗನದ ಮೂಲಕ ಆದರಿಸಿ ಮುಂದುವರಿದ ಹನುಮಂತ ಸುರಸೆಯಾಗಿ ಬಂದಿದ್ದ 'ಕದ್ರು'ವಿಗೆ ಭಕ್ಷ್ಯದಂತೆ ಆಕೆಯ ಬಾಯಿಯೊಳಗೆ ಹೊಕ್ಕು ಹೊರಬಂದಿದ್ದನು. ಛಾಯಾಗ್ರಹಳಾಗಿದ್ದ ಸಿಂಹಿಕೆಯನ್ನು ಸಂಹರಿಸಿದ್ದನು. ನಿಜರೂಪವುಳ್ಳವಳಾಗಿ ಬಂದಿದ್ದ ಲಂಕಾಭಿಮಾನಿಗೆ ಚೆನ್ನಾಗಿ ಹೊಡೆತಗಳನ್ನು ಕೊಟ್ಟು ದಾರಿಗೆ ತಂದಿದ್ದನು. ಇಂದ್ರಜಿತ್ ಪ್ರಯೋಗಿಸಿದ ಬ್ರಹ್ಮಾಸ್ತ್ರವನ್ನು ಗೌರವಿಸುವುದರ ಮೂಲಕ ಚತುರ್ಮುಖನನ್ನು ಗೌರವಿಸಿರುವನು. ಹೀಗೆ ಎಲ್ಲರ ಬಗ್ಗೆಯೂ ಒಂದೇ ರೀತಿಯ ಅನುಗ್ರಹವನ್ನೋ, ನಿಗ್ರಹವನ್ನೋ ಮಾಡುವುದರ ಮೂಲಕ 'ಅನ್ಯಾಯ'ವನ್ನೆಸಗದೆ ಅವರವರ ಸಾಧನೆಗೆ ತಕ್ಕಂತೆ ನಡೆದುಕೊಂಡಿರುವುದು ಹನುಮಂತನ ನ್ಯಾಯಮಾರ್ಗಾನುವರ್ತಿತ್ವದ ಪ್ರಭಾವ.

**ಪ್ರಾಣ:** ಪ್ರಾಣ ಎಂದರೆ ಪ್ರೇರಿಸುವಿಕೆ. '**ಧರ್ಮೋ ಜ್ಞಾನಂ ಚ ವೈರಾಗ್ಯಂ ಐಶ್ವರ್ಯಂ ಚತುರಾತ್ಮಕಃ । ವಾಯುರ್ದೇವ.......... ॥**' –ಐತರೇಯ ಸಂಹಿತೆಯಲ್ಲಿ ವಾಯುದೇವನ ಸ್ವರೂಪಾತ್ಮಕಗಳೆಂದು ಹೇಳಲಾದ ನಾಲ್ಕು ಗುಣಗಳಲ್ಲಿ ಒಂದು ಐಶ್ವರ್ಯ, ಐಶ್ವರ್ಯ ಅಂದರೆ ಪ್ರಭುತ್ವ, ಅರ್ಥಾತ್ ಮತ್ತೊಬ್ಬರನ್ನು ಆಳುವಿಕೆ, ಪ್ರಾಣ ಎಂದರೂ ಇದೇ.

ನಿಜರೂಪ ತಾಳಿ ಬಂದ ಲಂಕಾಭಿಮಾನಿನಿ ಹನುಮಂತನ ಪ್ರವೇಶವನ್ನು ತಡೆದಳು. ಆದರೆ ಬೆಕ್ಕಿನ ರೂಪದಲ್ಲಿದ್ದ ಹನುಮಂತನು ತನ್ನ ಮುಷ್ಟಿಯ ಏಟುಗಳಿಂದಾಗಿ ಆಕೆಯನ್ನು

ಜಯಿಸುವನು. ಮುಂದೆ ಅವಳ ಅನುಮತಿ ಪಡೆದೇ ಲಂಕೆಯನ್ನು ಪ್ರವೇಶಿಸುವನು. **'......ತಯಾಽನುಮತ ಏವ ವಿವೇಶ ಲಂಕಾಮ್'** ಪ್ರಾಣದೇವನ ಅವತಾರನಾದ ಹನುಮಂತನ ಪ್ರೇರಕತ್ವಸಾಮರ್ಥ್ಯಕ್ಕೆ ಇದೊಂದು ಚಿಕ್ಕ ಉದಾಹರಣೆಯಷ್ಟೇ.

**ಬಲ:** ಹನುಮಂತನ ಸಮುದ್ರೋಲ್ಲಂಘನವು ಅವನ ಬಾಹುಬಲಕ್ಕೆ ಉತ್ತಮ ದೃಷ್ಟಾಂತ. ಸಮುದ್ರವೂ ಕ್ಷೋಭೆಗೆ ಒಳಗಾಗುವಂತೆ ಹಾಗೂ ತನ್ನಲ್ಲಿರುವ ಜಲಚರ ಪ್ರಾಣಿಗಳೊಂದಿಗೆ ಅವನನ್ನೇ ಹಿಂಬಾಲಿಸುವಂತೆ ಅಷ್ಟು ರಭಸವಾಗಿ ಹನುಮಂತನ ಸಮುದ್ರೋಲ್ಲಂಘನ ಪ್ರಾರಂಭವಾಗಿತ್ತು. ಪರ್ವತದಲ್ಲಿದ್ದ ಮಂಗಗಳೂ ಅವನನ್ನು ಬೆನ್ನಟ್ಟಿದ್ದವು. ಸಮುದ್ರೋಲ್ಲಂಘನದ ಮಧ್ಯೇ ವಿಶ್ರಾಂತಿಯ ಆವಶ್ಯಕತೆ ಇಲ್ಲದಷ್ಟು ಬಲಾಧಿಕ್ಯ ಅವನದು. ಆದುದರಿಂದಲೇ ಮೈನಾಕನಲ್ಲಿ ವಿಶ್ರಾಂತಿ ತೆಗೆದುಕೊಳ್ಳಲು ಅವನು ಒಪ್ಪಲಿಲ್ಲ. 'ನೈವಾತ್ರ ವಿಶ್ರಮಣಮೈಚ್ಛದವಿಶ್ರಮೋಽಸೌ ನಿಸ್ಸೀಮಪೌರುಷಬಲಸ್ಯ ಕುತಃ ಶ್ರಮೋಽಸ್ಯ.' ಚತುರ್ಮುಖನ ವರದಿಂದ ರಕ್ಷಿತಳಾಗಿದ್ದ ಸಿಂಹಿಕೆಯನ್ನು ಸಂಹರಿಸುವಷ್ಟು ಬಲಾಧಿಕ್ಯ ಹನುಮಂತನದು. ಮುಂದೆ ಅಶೋಕವನವನ್ನು ಪುಡಿಗೈಯುವುದು, ತನ್ನ ನಿಗ್ರಹಕ್ಕಾಗಿ ಬಂದ ಕೋಟಿಗಟ್ಟಲೆ ಸೇನಾಧಿಪತಿಗಳ ಆಧಿಪತ್ಯದಲ್ಲಿದ್ದ ಯೋಧರನ್ನು ಸಂಹರಿಸುವುದು, ರಾವಣನ ಮೂರನೆಯ ಅಂಶವಾಗಿದ್ದ ಅಕ್ಷಕುಮಾರನನ್ನು ಅಪ್ಪಳಿಸುವುದು ಹನುಮಂತನ ಬಲದ ವೈಭವವನ್ನು ಸಾರುವಂತಹವುಗಳು.

**ಯೋಗ:** **'ಕ್ವಚಿದ್ ಯೋಗಃ ಉಪಾಯಃ ಸ್ಯಾತ್.....'** ಎಂದು ದತ್ತಾತ್ರೇಯ ಯೋಗ ತಿಳಿಸುವಂತೆ ಇಲ್ಲಿ ಯೋಗ ಅಂದರೆ ಉಪಾಯ, ಯುಕ್ತಿವಂತಿಕೆ ಎಂದರ್ಥ. ಹನುಮಂತ ಬಲಶಾಲಿಯಾಗಿದ್ದಂತೆ ಯುಕ್ತಿಯುಳ್ಳವನೂ ಆಗಿದ್ದನು.

ಬಯಸಿದ್ದೆಲ್ಲ ಆಹಾರವಾಗಿ ದೊರಕಲಿ ಎಂದು ದೇವತೆಗಳ ವರದಿಂದ ಅನುಗೃಹೀತಳಾಗಿದ್ದ ಸುರಸೆಯ ಬಾಯಿಯ ಒಳ ಹೊಕ್ಕು ಕೂಡಲೇ ಹೊರಬರುವುದರ ಮೂಲಕ ದೇವತೆಗಳ ವರವನ್ನು ರಕ್ಷಿಸಿ, ತನಗೆ ಏನೂ ಹಾನಿಯೂ ಆಗದಂತೆ ನಡೆದುಕೊಂಡಿರುವಿಕೆ ಹನುಮಂತನ ಒಂದು ರೀತಿಯ ಯುಕ್ತಿ ಪ್ರದರ್ಶನವಾಗಿದ್ದರೆ, ಚತುರ್ಮುಖನ ವರದಿಂದ ರಕ್ಷಿತಳಾಗಿದ್ದ ಸಿಂಹಿಕೆಯ ಶರೀರವನ್ನು ಸೀಳಿ ಆಕೆಯನ್ನು ಸಂಹರಿಸುವಲ್ಲಿ ಮತ್ತೊಂದು ಬಗೆಯ ಯುಕ್ತಿಪ್ರದರ್ಶನವಾಗಿತ್ತು. ಬೆಕ್ಕಿನ ಆಕಾರ ತೊಟ್ಟು, ಲಂಕೆಯ ಒಳಹೊಕ್ಕಿದ್ದೂ ಯುಕ್ತಿಯಿಂದಲೇ.

ಸೀತೆಗೆ ಸಂದೇಶವನ್ನು ತಲುಪಿಸುವ ಸ್ವಾಮಿಕಾರ್ಯವನ್ನು ನಿರ್ವಹಿಸಿದ ಮೇಲೆ ತನ್ನ ಮಹಿಮೆಯ ಮಾಹಿತಿಗಾಗಿ ಅಶೋಕವನವನ್ನು ಪುಡಿಗೈದುದೂ ಅವನ ಯುಕ್ತಿವಂತಿಕೆಗೆ ಒಂದು ದೃಷ್ಟಾಂತ. ರಾವಣನ ಸೇನೆಯ ಬಹುಭಾಗವನ್ನು ನಾಶಪಡಿಸಿದ ಹನುಮಂತನು ತಾನು ರಾಕ್ಷಸರ ವಶಕ್ಕೆ ಸಿಕ್ಕಲ್ಲಿ ಅವರು ತನ್ನನ್ನು ಏನು ಮಾಡುವರು? –ಎಂದು ನೋಡುವ ಕುತೂಹಲದಿಂದ ಹಾಗೂ ರಾವಣನಿಗೆ ತಕ್ಕ ಎಚ್ಚರಿಕೆ ನೀಡುವ ಅವಕಾಶ ಪಡೆದುಕೊಳ್ಳಲು ಕೈಗೊಂಡ ಯುಕ್ತಿ. ಇಂದ್ರಜಿತ್ ಪ್ರಯೋಗಿಸಿದ ಬ್ರಹ್ಮಾಸ್ತ್ರಕ್ಕೆ ಬದ್ಧನಾದಂತೆ ಗೌರವಿಸಿದುದು...... **'ಇದಂ ಸಮೀಕ್ಷ್ಯ ಬದ್ಧವತ್ ಸ್ಥಿತಂ ಕಪೀಂದ್ರಮ್ ।**

ರಾವಣ ತನ್ನ ಸೇವಕರ ಮೂಲಕ ಹನುಮಂತನ ಬಾಲಕ್ಕೆ ವಸ್ತ್ರ ಸುತ್ತಿಸಿ ಬೆಂಕಿ ಹಚ್ಚಿಸಲು ತೊಡಗುವಾಗ ಅದನ್ನು ಪ್ರತಿಭಟಿಸಲು ಸಮರ್ಥನಾದರೂ ಅವನು ಅವೆಲ್ಲ ವನ್ನು ಸಹಿಸಿಕೊಂಡಿದ್ದು ಮುಂದೆ ಲಂಕಾಪುರದ ದಹನಕ್ಕೆ ಒಳ್ಳೆಯ ಉಪಾಯವಾಗ ಬಲ್ಲದೆಂಬ ದೃಷ್ಟಿಯಿಂದಲೇ-

**ಮಮರ್ಷ ಸರ್ವಚೇಷ್ಟಿತಂ ಸ ರಕ್ಷಸಾಂ ನಿರಾಮಯಃ ।**
**ಬಲೋದ್ಧತಶ್ಚ ಕೌತುಕಾತ್ ಪ್ರದಗ್ಧುಮೇವ ತಾಂ ಪುರೀಮ್ ॥**

-ಹೀಗೆ ಹನುಮಂತ ಸ್ವಾಮಿಕಾರ್ಯವನ್ನೂ ಸ್ವಕಾರ್ಯವನ್ನೂ ನಿರ್ವಹಿಸುವಲ್ಲಿ ಹೆಜ್ಜೆ ಹೆಜ್ಜೆಗೆ ಬಲದ ಜೊತೆಗೆ ಯುಕ್ತಿಯನ್ನೂ ಅಳವಡಿಸಿಕೊಂಡಿರುವನು.

**ಬುದ್ಧಿ:** ಭಗವದ್ವಿಷಯಕ ಜ್ಞಾನದಂತೆ ಭಗವದಿತರವಿಷಯಕ ಬುದ್ಧಿಯೂ ಹನುಮಂತ ನಲ್ಲಿ ಗರಿಷ್ಠ ಪ್ರಮಾಣದಲ್ಲಿತ್ತು. ಭಗವದಿತರತ್ರ ಆಲೋಚನೆ ಸರ್ವವಿಷಯಕ ಜ್ಞಾನವುಳ್ಳ ಸರ್ವಜ್ಞ ತಾನೇ ಅವನು? ಸಮುದ್ರೋಲ್ಲಂಘನ, ಸೀತೆಗೆ ಸಂದೇಶದ ತಲುಪಿಸುವಿಕೆ -ಇಂತಹ ಸಾಹಸದ, ಮಹತ್ವದ ಕಾರ್ಯಗಳನ್ನು ನಿರ್ವಹಿಸುವಾಗ ಯಾವ ಯಾವ ಸಂದರ್ಭದಲ್ಲಿ ಹೇಗೆ ಹೇಗೆ ನಡೆದುಕೊಳ್ಳಬೇಕೆಂದು ಚೆನ್ನಾಗಿ ವಿಶ್ಲೇಷಿಸಿಕೊಂಡು ನಡೆದು ಕೊಳ್ಳಬೇಕೆಂದರೆ ಇದಕ್ಕೆ ಲೌಕಿಕ ಜ್ಞಾನವೂ ಸಾಕಷ್ಟು ಮಟ್ಟದಲ್ಲಿರಬೇಕು ತಾನೇ? ಮೈನಾಕ, ಸುರಸೆ, ಸಿಂಹಿಕೆ, ಲಂಕಾಭಿಮಾನಿನಿ, ಅಕ್ಷಕುಮಾರ, ಇಂದ್ರಜಿತ್ -ಮುಂತಾದ ವ್ಯಕ್ತಿಗಳ ವರಶಾಪಾದಿಗಳ ಪರಿಜ್ಞಾನ, ಬಲದೌರ್ಬಲ್ಯಗಳ ಸೂಕ್ಷ್ಮಜ್ಞಾನ -ಇವನ್ನು ಹೊಂದಿದ್ದರಿಂದ ತಾನೇ ಹನುಮಂತ ಅವರೆಲ್ಲರ ಜೊತೆಗೆ ವ್ಯವಹರಿಸುವಾಗ ಸಂದರ್ಭೋಚಿತವಾಗಿ ವರ್ತಿಸಲು ಸಾಧ್ಯವಾಯಿತು? ಆದುದರಿಂದ ಹನುಮಂತನ ಈ ಕಾರ್ಯ ಅವನ ಬುದ್ಧಿ ವಂತಿಕೆಯನ್ನು ಸ್ಥೂಲವಾಗಿಯಾದರೂ ಪರಿಚಯಿಸದೆ ಇರದು.

**ಅಧಿಕಫಲ:** ಹೀಗೆ ಒಂಭತ್ತು ಗುಣಗಳಷ್ಟೇ ಅಲ್ಲದೆ, ಸುರಸೆಯ ವಿಷಯದಲ್ಲಿ ದೇವತೆ ಗಳ ಬಗ್ಗೆ ಪ್ರೀತಿಪ್ರದರ್ಶನ, ಶ್ರೀರಾಮನ ಮತ್ತು ಸೀತೆಯ ಸಂದೇಶಗಳನ್ನು ಅನ್ಯೋನ್ಯವಾಗಿ ತಲುಪಿಸುವಷ್ಟು ಅವರ ವಿಶ್ವಾಸಕ್ಕೆ ಪಾತ್ರವಾಗುವಿಕೆ. ಅಸುರ ಮೋಹನ, ಬಾಲಕ್ಕೆ ಬೆಂಕಿ ಕೊಟ್ಟಾಗಲೂ ಸುಡದಂತೆ ಇರಲು ಬೇಕಾದ ಅಗ್ನಿಯ ಗೆಳೆತನ, ವಿಶ್ವಕರ್ಮನ ಸೃಷ್ಟಿಯಾದ ಲಂಕಾಪುರವನ್ನೂ ಸುಡುವ ಸಾಮರ್ಥ್ಯ ಮುಂತಾದ ಹನುಮಂತನ ಇತರ ಗುಣಗಳನ್ನೂ ಸುಂದರಕಾಂಡ ಪ್ರತಿಬಿಂಬಿಸಬಲ್ಲದು.

ಆದರೂ ಮುಖ್ಯ ಗುಣಗಳೆಂದು ಪರಿಗಣಿತಗಳಾದ ಜ್ಞಾನಭಕ್ತ್ಯಾದಿ ಒಂಭತ್ತು ಗುಣ ಗಳನ್ನಾದರೂ ಹನುಮಂತನ ಚರಿತ್ರೆಗೆ ಸಂಬಂಧಿಸಿದಂತೆ ಅನುಸಂಧಾನ ಮಾಡಿಕೊಂಡೆ ವೆಂದರೆ,

**ಬುದ್ಧಿರ್ಬಲಂ ಯಶೋ ಧೈರ್ಯಂ ನಿರ್ಭಯತ್ವಮರೋಗತಾ ।**
**ಅಜಾಡ್ಯಂ ವಾಕ್ಪಟುತ್ವಂ ಚ ಹನೂಮತ್ಸ್ಮರಣಾದ್ಭವೇತ್ ॥**

ಎಂದು ಹನುಮಂತನ ಸ್ಮರಣೆಗೆ ಹೇಳಿದ ಬುದ್ಧ್ಯಾದಿ ಫಲಗಳನ್ನು ಅಧಿಕಪ್ರಮಾಣದಲ್ಲಿ ಹೊಂದಬಲ್ಲೆವು.

★



ಹರಿದ್ವಾರದಲ್ಲಿ ಪ್ರತಿಷ್ಠಾಪಿಸಿದ 32 ಅಡಿ ಎತ್ತರದ ಆಂಜನೇಯನನ್ನು ಶ್ರೀ ವಿದ್ಯಾಧೀಶತೀರ್ಥರು ಆರಾಧಿಸುತ್ತಿರುವುದು.

# • ಮಧ್ವದೃಷ್ಟ ಸುಂದರಕಾಂಡ ರಾಮಾಯಣ •

ರಾಮಾಯ ಶಾಶ್ವತಸುವಿಸ್ತೃತಷಡ್ಗುಣಾಯ
ಸರ್ವೇಶ್ವರಾಯ ಸುಖಸಾರಮಹಾರ್ಣವಾಯ ।
ನತ್ವಾ ಲಿಲಂಘಯಿಷುರರ್ಣವಮುತ್ಪಪಾತ
ನಿಷ್ಪೀಡ್ಯ ತಂ ಗಿರಿವರಂ ಪವನಸ್ಯ ಸೂನುಃ ॥ ೧ ॥

ಚುಕ್ಷೋಭ ವಾರಿಧಿರನುಪ್ರಯಯೌ ಚ ಶೀಘ್ರಂ
ಯಾದೋಗಣೈಃ ಸಹ ತದೀಯಬಲಾಭಿಕೃಷ್ಟಃ ।
ವೃಕ್ಷಾಶ್ಚ ಪರ್ವಗತಾಃ ಪವನೇನ ಪೂರ್ವಂ
ಕ್ಷಿಪ್ತೋಽರ್ಣವೇ ಗಿರಿರುದಾಗಮದಸ್ಯ ಹೇತೋಃ ॥ ೨ ॥

---

**ರಾಮಚಂದ್ರನಿಗೆ ನಮನ:** ಯಾವಾಗಲೂ ಏಕಪ್ರಕಾರವಾಗಿರತಕ್ಕ ಸಕಲ ದೇಶಕಾಲಗಳಲ್ಲಿ ತುಂಬಿ ತುಳುಕುವ ಐಶ್ವರ್ಯಾದಿ ಆರು ಗುಣಗಳ ಸಾಕಾರಮೂರ್ತಿಯಾದ, ಸಕಲರಿಗೂ ನಿಯಾಮಕನಾದ, ಆನಂದಬಲಗಳಿಂದ ಮಹಾಸಮುದ್ರದಂತಿರುವ ಶ್ರೀರಾಮಚಂದ್ರನಿಗೆ ನಮಸ್ಕರಿಸಿ ಸಮುದ್ರವನ್ನು ಹಾರಬಯಸಿದ ಪವನಕುಮಾರ ಆ ಮಹೇಂದ್ರಪರ್ವತವನ್ನು ಜೋರಾಗಿ ಮೆಟ್ಟಿ ಮೇಲೆ ನೆಗೆದ. ॥ ೧ ॥

**ವಿಶ್ರಾಂತಿಯ ಅನಪೇಕ್ಷೆ:** ಹನುಮಂತನ ಬಲದಿಂದ ಸೆಳೆಯಲ್ಪಟ್ಟ ಸಮುದ್ರವು ಅಲ್ಲೋಲಕಲ್ಲೋಲಗೊಂಡಿತು. ಆ ಕ್ಷಣದಲ್ಲಿ ತನ್ನನ್ನಾಶ್ರಯಿಸಿದ್ದ ಜಲಚರಗಣಗಳೊಂದಿಗೆ ಸ್ವತಃ ಸಮುದ್ರವೂ ಪರ್ವತದ ಗಿಡಮರಗಳೂ ಆತನನ್ನು ಹಿಂಬಾಲಿಸಿದವು. ಇತ್ತ ವಾಯು

ಸ್ಕಾಲೋ ಹರಸ್ಯ ಗಿರಿಪಕ್ಷವಿನಾಶಕಾಲೇ
ಕ್ಷಿಪ್ತ್ವಾರ್ಣವೇ ಸ ಮರುತೋರ್ವರಿತಾತ್ಮಪಕ್ಷಃ ।
ಹೈಮೋ ಗಿರಿಃ ಪವನಜಸ್ಯ ತು ವಿಶ್ರಮಾರ್ಥ-
ಮುದ್ಭಿದ್ಯ ವಾರಿಧಿಮವರ್ಧದನೇಕಸಾನುಃ ॥ ೩ ॥

ನೈವಾತ್ರ ವಿಶ್ರಮಣಮೈಚ್ಛತ ನಿಃಶ್ರಮೋಽಸೌ
ನಿಃಸೀಮಪೌರುಷಗುಣಸ್ಯ ಕುತಃ ಶ್ರಮೋಽಸ್ಯ ।
ಆಶ್ಲಿಷ್ಯ ಪರ್ವತವರಂ ಸ ದದರ್ಶ ಗಚ್ಛನ್
ದೇವೈಸ್ತು ನಾಗಜನನೀಂ ಪ್ರಹಿತಾಂ ವರೇಣ ॥ ೪ ॥

ಜಿಜ್ಞಾಸುಭಿರ್ನಿಜಬಲಂ ತವ ಭಕ್ಷಮೇತು
ಯದ್ಯತ್ತ್ವಮಿಚ್ಛಸಿ ತದಿತ್ಯಮರೋದಿತಾಯಾಃ ।
ಆಸ್ಯಂ ಪ್ರವಿಶ್ಯ ಸಪದಿ ಪ್ರವಿನಿಃಸೃತೋಽಸ್ಮಾದ್
ದೇವಾನನಂದಯದುತ ಸ್ವಕೃತಮೇಷು ರಕ್ಷನ್ ॥ ೫ ॥

ದೃಷ್ಟ್ವಾ ಸುರಪ್ರಣಯಿತಾಂ ಬಲಮಸ್ಯ ಚೋಗ್ರಂ
ದೇವಾಃ ಪ್ರತುಷ್ಟುವುರಲಂ ಸುಮನೋಽಭಿವೃಷ್ಟ್ಯಾ ।

---

ದೇವನಿಂದ ಸಮುದ್ರದಲ್ಲಿಟ್ಟು ರಕ್ಷಿಸಲ್ಪಟ್ಟಿದ್ದ ಮೈನಾಕಪರ್ವತವು ಹನುಮಂತನ ವಿಶ್ರಾಂತಿಗಾಗಿ ಮೇಲೆ ಬಂತು. ॥ ೨ ॥

ಹರನ ಸತಿಯ ಸಹೋದರನಾದ ಈ ಮೈನಾಕವು ದೇವೇಂದ್ರನಿಂದ ಎಲ್ಲ ಪರ್ವತಗಳು ತಮ್ಮ ರೆಕ್ಕೆಗಳನ್ನು ಕಳೆದುಕೊಂಡಿದ್ದಾಗ ವಾಯುದೇವರಿಂದ ಸಮುದ್ರದಲ್ಲಿ ಬಿಸುಡಲ್ಪಟ್ಟು ತನ್ನ ರೆಕ್ಕೆಯನ್ನು ಉಳಿಸಿಕೊಂಡಿದ್ದ, ಅನೇಕ ಬಂಗಾರದ ಶಿಖರಗಳಿಂದ ಕೂಡಿದ ಮೈನಾಕವು ಹನುಮಂತನ ವಿಶ್ರಾಂತಿಗಾಗಿ ಜಲಧಿಯನ್ನು ಭೇದಿಸಿ ಮೇಲೆ ಬಂತು. ॥ ೩ ॥

ಶ್ರಮರಹಿತನಾದ ಹನುಮಂತ ಆ ಬೆಟ್ಟದಲ್ಲಿ ವಿಶ್ರಾಂತಿ ಬಯಸಲಿಲ್ಲ. ಎಣೆಯಿಲ್ಲದ ಪರಾಕ್ರಮ, ಶಕ್ತಿಗಳುಳ್ಳ ಆತನಿಗೆ ಶ್ರಮವು ಎತರದು? ಆತನಾದರೋ ಆ ಶ್ರೇಷ್ಠ ಪರ್ವತವನ್ನು ಆಲಿಂಗಿಸಿ ಮುಂದೆ ಸಾಗಿದಾಗ ದೇವತೆಗಳು ಸ್ವತಃ ವರ ನೀಡಿ ಕಳುಹಿಸಿದ ನಾಗಮಾತೆಯಾದ ಕದ್ರುವನ್ನು ಕಂಡ. ॥ ೪ ॥

**ದೇವತೆಗಳ ಆದರ:** ಆತನ ಬಲವನ್ನು ಪರೀಕ್ಷಿಸಬೇಕೆಂಬ ಬಯಕೆಯಿಂದ ದೇವತೆಗಳಿಂದ 'ನೀನು ಬಯಸಿದ್ದೆಲ್ಲಾ ನಿನಗೆ ಆಹಾರವಾಗಲಿ' ಎಂದು ವರ ಪಡೆದ ನಾಗಮಾತೆಯಾದ ಕದ್ರುವಿನ ಬಾಯಿಯನ್ನು ಪ್ರವೇಶಿಸಿ ಮರುಕ್ಷಣದಲ್ಲಿಯೇ ಹೊರಬಂದವನಾಗಿ ದೇವತೆಗಳ ಮಾತನ್ನು ಸತ್ಯಗೊಳಿಸಿ ಅವರನ್ನು ತೃಪ್ತಿಪಡಿಸಿದ. ॥ ೫ ॥

ತಮ್ಮ ಮೇಲಿನ ಸ್ನೇಹ ಹಾಗೂ ಉಗ್ರವಾದ ಬಲವನ್ನು ಕಂಡ ದೇವತೆಗಳು ಪುಷ್ಪವೃಷ್ಟಿಯ ಮೂಲಕ ಆತನನ್ನು ಮುದಗೊಳಿಸಿ ಆತನ ಗುಣಗಾನಗೈದರು. ದೇವತೆಗಳ

ತೈರಾದೃತಃ ಪುನರಸೌ ವಿಯತ್ಯೆವ ಗಚ್ಛನ್
ಛಾಯಾಗ್ರಹಂ ಪ್ರತಿದದರ್ಶ ಚ ಸಿಂಹಿಕಾಖ್ಯಮ್ ॥ ೬ ॥

ಲಂಕಾವನಾಯ ಸಕಲಸ್ಯ ಚ ನಿಗ್ರಹೇಽಸ್ಯಾಃ
ಸಾಮರ್ಥ್ಯಮಪ್ರತಿಹತಂ ಪ್ರದದೌ ವಿಧಾತಾ ।
ಛಾಯಾಮವಾಕ್ಷಿಪದಸೌ ಪವನಾತ್ಮಜಸ್ಯ
ಸೋಽಸ್ಯಾಃ ಶರೀರಮನುವಿಶ್ಯ ಬಿಭೇದ ಚಾಽಶು ॥ ೭ ॥

ನಿಃಸೀಮಮಾತ್ಮಬಲಮಿತ್ಯನುದರ್ಶಯಾನೋ
ಹತ್ವೈವ ತಾಮಪಿ ವಿಧಾತೃವರಾಭಿಗುಪ್ತಾಮ್ ।
ಲಂಬೇ ಸ ಲಂಬಶಿಖರೇ ನಿಪಪಾತ ಲಂಕಾ-
ಪ್ರಾಕಾರರೂಪಕಗಿರಾವಥ ಸಂಚುಕೋಚ ॥ ೮ ॥

ಭೂತ್ವಾ ಬಿಲಾಳಸಮಿತೋ ನಿಶಿ ತಾಂ ಪುರೀಂ ಚ
ಪ್ರಾಪ್ಸ್ಯನ್ ದದರ್ಶ ನಿಜರೂಪವತೀಂ ಸ ಲಂಕಾಮ್ ।
ರುದ್ಧೋಽನಯಾಽಽಶ್ವಥ ವಿಜಿತ್ಯ ಚ ತಾಂ ಸ್ವಮುಷ್ಟಿ-
ಪಿಷ್ಟಾಂ ತಯಾಽನುಮತ ಏವ ವಿವೇಶ ಲಂಕಾಮ್ ॥ ೯ ॥

---

ಆದರಕ್ಕೆ ಪಾತ್ರನಾದ ಹನುಮನು ಗಗನಮಾರ್ಗದಲ್ಲಿ ಸಾಗುತ್ತಾ ನೆರಳಿನ ಮೂಲಕ ಎಲ್ಲರನ್ನೂ ಸೆರೆಹಿಡಿಯುವ ಸಿಂಹಿಕೆಯೆಂಬ ಛಾಯಾಗ್ರಹವನ್ನು ಕಂಡ. ॥ ೬ ॥

**ಚತುರ್ಮುಖನ ವರದ ಉಲ್ಲಂಘನೆ:** ಲಂಕೆಯ ರಕ್ಷಣೆಗಾಗಿ, ಎಲ್ಲರ ನಿಗ್ರಹಕ್ಕಾಗಿ ಚತುರ್ಮುಖಬ್ರಹ್ಮದೇವರು ಸಿಂಹಿಕೆಗೆ ತಡೆಯಿರದ ಬಲವನ್ನು ನೀಡಿದ್ದರು. ಅಂತಹ ಛಾಯಾಗ್ರಹದಿಂದ ಎಳೆಯಲ್ಪಟ್ಟ ಹನುಮಂತ ಆಕೆಯ ದೇಹವನ್ನು ಪ್ರವೇಶಿಸಿ ಅದನ್ನು ಸೀಳಿದ. ॥ ೭ ॥

ಸಾಟಿಯಿಲ್ಲದ ತನ್ನ ತಾಕತ್ತನ್ನು ತೋರುವವನಾಗಿ ಬ್ರಹ್ಮದೇವರ ವರದಿಂದ ರಕ್ಷಿತಳಾದ ಆ ಸಿಂಹಿಕೆಯನ್ನು ಕೊಂದು ಉನ್ನತವಾದ, ಲಂಕೆಯ ಕೋಟೆಯಂತಿರುವ 'ಲಂಬ' ನಾಮಕ ಪರ್ವತದಲ್ಲಿ ಇಳಿದ. ಬಳಿಕ ತನ್ನ ಬೃಹದ್ರೂಪವನ್ನು ಉಪಸಂಹರಿಸಿ ಪುಟ್ಟ ರೂಪವನ್ನು ಸ್ವೀಕರಿಸಿದ. ॥ ೮ ॥

**ಲಂಕಿಣಿಯ ಅನುಮತಿಯೊಂದಿಗೆ ಪ್ರವೇಶ:** ಬೆಕ್ಕಿನಂತಹ ಪುಟ್ಟರೂಪ ಧರಿಸಿದ ಹನುಮ ರಾತ್ರಿಯಲ್ಲಿ ಆ ಲಂಕೆಯನ್ನು ಪ್ರವೇಶಿಸುತ್ತಿರುವಾಗಲೇ ಅಲ್ಲಿ ದುರ್ಗೆಯ ಪರಿವಾರ ದೇವತೆಯಾದ, ತನ್ನ ನಿಜರೂಪವನ್ನು ಧರಿಸಿರುವ ಲಂಕಾಭಿಮಾನಿನಿಯನ್ನು ಕಂಡ. ಆಕೆಯಿಂದ ತಡೆಯಲ್ಪಟ್ಟವನಾಗಿ ಕೂಡಲೇ ಆ ಲಂಕಿಣಿಯನ್ನು ಮುಷ್ಟಿಯಿಂದಲೇ ನಜ್ಜುಗುಜ್ಜು ಮಾಡಿ ಗೆದ್ದು ಅವಳ ಸಹಮತದೊಂದಿಗೆ ಲಂಕೆಯನ್ನು ಪ್ರವೇಶಿಸಿದ. ॥ ೯ ॥

ಮಾರ್ಗಮಾಣೋ ಬಹಿಶ್ಚಾಂತಃ ಸೋಽಶೋಕವನಿಕಾತಳೇ ।
ದದರ್ಶ ಶಿಂಶಪಾವೃಕ್ಷಮೂಲಸ್ಥಿತರಮಾಕೃತಿಮ್ ॥ ೧೦ ॥

ನರಲೋಕವಿಡಂಬಸ್ಯ ಜಾನನ್ ರಾಮಸ್ಯ ಹೃದ್ಗತಮ್ ।
ತಸ್ಯ ಚೇಷ್ಟಾನುಸಾರೇಣ ಕೃತ್ವಾ ಚೇಷ್ಟಾಶ್ಚ ಸಂವಿದಃ ॥ ೧೧ ॥

ತಾದೃಕ್ಚೇಷ್ಟಾಸಮೇತಾಯಾ ಅಂಗುಲೀಯಮದಾತ್ತತಃ ।
ಸೀತಾಯಾ ಯಾನಿ ಚೈವಾಽಸನ್ನಾಕೃತೇಸ್ತಾನಿ ಸರ್ವಶಃ ॥ ೧೨ ॥

ಭೂಷಣಾನಿ ದ್ವಿಧಾ ಭೂತ್ವಾ ತಾನ್ಯೇವಾಽಸಂಸ್ತಥೈವ ಚ ।
ಅಥ ಚೂಳಾಮಣಿಂ ದಿವ್ಯಂ ದಾತುಂ ರಾಮಾಯ ಸಾ ದದೌ ॥ ೧೩ ॥

ಯದ್ಯಪ್ಯೇತನ್ನ ಪಶ್ಯಂತಿ ನಿಶಾಚರಗಣಾಸ್ತು ತೇ ।
ದ್ಯುಲೋಕಚಾರಿಣಃ ಸರ್ವಂ ಪಶ್ಯಂತ್ಯೃಷಯ ಏವಚ ॥ ೧೪ ॥

ತೇಷಾಂ ವಿಡಂಬನಾಯೈವ ದೈತ್ಯಾನಾಂ ವಂಚನಾಯ ಚ ।
ಪಶ್ಯತಾಂ ಕಲಿಮುಖ್ಯಾನಾಂ ವಿಡಂಬೋಽಯಂ ಕೃತೋ ಭವೇತ್ ॥ ೧೫ ॥

ಕೃತ್ವಾ ಕಾರ್ಯಮಿದಂ ಸರ್ವಂ ವಿಶಂಕಃ ಪವನಾತ್ಮಜಃ ।
ಆತ್ಮಾವಿಷ್ಕರಣೇ ಚಿತ್ತಂ ಚಕ್ರೇ ಮತಿಮತಾಂ ವರಃ ॥ ೧೬ ॥

---

**ಸೀತಾನ್ವೇಷಣೆಯ ನಾಟಕ:** ಎಲ್ಲೆಡೆಯೂ ಸೀತೆಯನ್ನು ಅರಸುತ್ತಾ ಹನುಮ ಅಶೋಕ ವನದಲ್ಲಿ ಶಿಂಶಪಾವೃಕ್ಷದ ಬುಡದಲ್ಲಿ ಸೀತಾದೇವಿಯ ಪ್ರತಿಕೃತಿಯನ್ನು ಕಂಡ. ॥ ೧೦ ॥

ಅಜ್ಞ ಜನರ ಅನುಕರಣೆಯನ್ನು ಮಾಡುತ್ತಿರುವ ಶ್ರೀರಾಮಚಂದ್ರನ ಇಂಗಿತವನ್ನು ಬಲ್ಲ ಹನುಮಂತ ಶ್ರೀರಾಮನ ನಡವಳಿಕೆಗಳಿಗನುಗುಣವಾಗಿ ತಾನೂ ಅಜ್ಞನಂತೆ ಸೀತಾನ್ವೇಷಣೆಯ ಚೇಷ್ಟೆಗಳನ್ನು ಮಾಡಿ, ಸೀತಾಕೃತಿಯನ್ನು ಕಂಡು ಅದರ ಜತೆ ಸಂಭಾಷಣೆಯನ್ನು ಮಾಡಿದ.

**ಉಂಗುರದ ದಾನ; ಚೂಡಾಮಣಿಯ ಆದಾನ:** ಅಂತಹ ಚೇಷ್ಟೆಯನ್ನೇ ಮಾಡುತ್ತಿರುವ ಸೀತಾದೇವಿಗೆ ಶ್ರೀರಾಮಚಂದ್ರನ ಉಂಗುರವನ್ನು ನೀಡಿದ. ಸೀತಾದೇವಿಯ ಮೈಮೇಲಿದ್ದ ಎಲ್ಲ ಆಭರಣಗಳೂ ಎರಡು ಪ್ರತಿಯಾಗಿ ರಾವಣ ಅಪಹರಿಸಿದ ಸೀತಾಪ್ರತಿಕೃತಿಯಲ್ಲಿಯೂ ಕಂಗೊಳಿಸಿದವು. ಆದ್ದರಿಂದ ಅಲೌಕಿಕವಾದ ತನ್ನ ಚೂಡಾಮಣಿಯನ್ನು ರಾಮಚಂದ್ರನಿಗರ್ಪಿಸಲೋಸುಗ ಹನುಮನ ಕೈಯಲ್ಲಿಟ್ಟಳು. ॥ ೧೧, ೧೨, ೧೩ ॥

**ನಾಟಕದ ಉದ್ದೇಶ:** ರಕ್ಕಸರ ಗುಂಪು ಈ ನಾಟಕವನ್ನು ನೋಡುತ್ತಿಲ್ಲವೆಂಬುದು ವಾಸ್ತವ ಸಂಗತಿ. ಆದರೆ ಅಂತರಿಕ್ಷದಲ್ಲಿ ಸಂಚರಿಸುವ ದೇವತೆಗಳು ಹಾಗೂ ಋಷಿಗಳು ನೋಡುತ್ತಿದ್ದಾರೆ. ಅವರಿಗೆ ಇದು ವಿಡಂಬನೆಯೆಂದು ತಿಳಿಸಲು ಮಾಡುತ್ತಿರುವ ನಾಟಕ. ಎಚ್ಚೆತ್ತು ನೋಡುತ್ತಿರುವ ಕಲಿ ಮುಂತಾದ ದೈತ್ಯರ ವಂಚನೆಗಾಗಿ ಈ ಅಭಿನಯ. ॥ ೧೪, ೧೫ ॥

ಅಥ ವನಮಖಿಲಂ ತದ್ರಾವಣಸ್ಯಾವಲುಪ್ಯ
ಕ್ಷಿತಿರುಹಮಿಮಮೇಕಂ ವರ್ಜಯಿತ್ವಾಽಽಶು ವೀರಃ ।
ರಜನಿಚರವಿನಾಶಂ ಕಾಂಕ್ಷಮಾಣೋಽತಿವೇಲಂ
ಮುಹುರತಿರವನಾದೀ ತೋರಣಂ ಚಾಽರುರೋಹ ॥ ೧೭ ॥

ಅಥಾಶೃಣೋದ್ದಶಾನನಃ ಕಪೀಂದ್ರಚೇಷ್ಟಿತಂ ಪರಮ್ ।
ದಿದೇಶ ಕಿಂಕರಾನ್ ಬಹೂನ್ ಕಪಿರ್ನಿಗೃಹ್ಯತಾಮಿತಿ ॥ ೧೮ ॥

ಸಮಸ್ತಶೋ ವಿಮೃತ್ಯವೋ ವರಾದ್ಧರಸ್ಯ ಕಿಂಕರಾಃ ।
ಸಮಾಸದನ್ಮಹಾಬಲಂ ಸುರಾಂತರಾತ್ಮನೋಂಗಜಮ್ ॥ ೧೯ ॥

ಅಶೀತಿಕೋಟಿಯೂಥಪಂ ಪುರಃಸರಾಷ್ಟಕಾಯುತಮ್ ।
ಅನೇಕಹೇತಿಸಂಕುಲಂ ಕಪೀಂದ್ರಮಾವೃಣೋದ್ಬಲಮ್ ॥ ೨೦ ॥

ಸಮಾವೃತಸ್ತಥಾಽಽಯುಧೈಃ ಸ ತಾಡಿತಶ್ಚ ತೈರ್ಭೃಶಮ್ ।
ಚಕಾರ ತಾನ್ ಸಮಸ್ತಶಸ್ತಳಪ್ರಹಾರಚೂರ್ಣಿತಾನ್ ॥ ೨೧ ॥

---

**ಸಾಮರ್ಥ್ಯದ ಪರಿಚಯಕ್ಕಾಗಿ ಪ್ರವೃತ್ತಿ:** ವಾಯುಕುಮಾರ ಹನುಮ ಮಾಡಬೇಕಾದುದನ್ನು ನಿರ್ಭಯನಾಗಿ ಮಾಡಿದ. ಜ್ಞಾನಿವರೇಣ್ಯನಾದ ಹನುಮ ತನ್ನ ಮತ್ತು ಸ್ವಾಮಿಯಾದ ಶ್ರೀರಾಮನ ಶಕ್ತಿಯನ್ನು ಈ ದೈತ್ಯರಿಗೆ ಪರಿಚಯಿಸಲು ಸಂಕಲ್ಪಿಸಿದ. ॥ ೧೬ ॥

ತರುವಾಯ ವೀರನಾದ ಮಾರುತಿಯು ಆ ಶಿಂಶಪಾವೃಕ್ಷವೊಂದನ್ನು ಬಿಟ್ಟು ಉಳಿದ ರಾವಣನ ಎಲ್ಲ ಮರಗಳನ್ನೂ ತುಂಡರಿಸಿದ. ರಕ್ಕಸರ ಸಂಪೂರ್ಣ ನಾಶವನ್ನು ಬಯಸಿ ಮತ್ತೆಮತ್ತೆ ಮಿತಿಮೀರಿದ ಧ್ವನಿಯಿಂದ ಗರ್ಜಿಸುತ್ತಾ ಊರ ಹೊರ ಬಾಗಿಲನ್ನೇರಿ ಕುಳಿತ. ॥ ೧೭ ॥

**ಪುಡಿಗೈಯಲ್ಪಟ್ಟ ದೈತ್ಯರ ಪಡೆ:** ಕಪಿಶ್ರೇಷ್ಠನ ಸಹಿಸಲಸಾಧ್ಯವಾದ ವಿಲಕ್ಷಣಕ್ರಿಯೆಗಳನ್ನು ಹತ್ತು ತಲೆಯ ರಾವಣ ಕೇಳಿದ. ಕೋತಿಯನ್ನು ಸೆರೆ ಹಿಡಿಯುವಂತೆ ತನ್ನ ಬಹಳ ಮಂದಿ ಭೃತ್ಯರಿಗೆ ಆಜ್ಞಾಪಿಸಿದ. ॥ ೧೮ ॥

ರುದ್ರದೇವರ ವರದಿಂದ ಸಮಸ್ತ ಭೃತ್ಯರೂ ಮರಣರಹಿತರು. ಆ ಎಲ್ಲ ದೈತ್ಯರ ಪಡೆ ಸಕಲ ಸುರರ ಅಂತರ್ಯಾಮಿಯಾದ ವಾಯುದೇವರ ಮಗನಾದ ಮಹಾಬಲಶಾಲಿಯಾದ ಹನುಮನನ್ನು ಮುತ್ತಿದನು. ॥ ೧೯ ॥

ಎಂಬತ್ತು ಕೋಟಿ ಸೇನಾಧಿಪತಿಗಳು ಹಾಗೂ ಎಂಬತ್ತು ಸಾವಿರ ಮುಂದಾಳುಗಳಿಂದ ಕೂಡಿದ, ನಾನಾ ವಿಧ ಆಯುಧಗಳನ್ನೊಳಗೊಂಡ ಪ್ರಚಂಡ ಸೇನೆಯು ಹನುಮಂತನನ್ನು ಆವರಿಸಿತು. ॥ ೨೦ ॥

ಸುತ್ತುವರಿದ ಸೇನೆಯು ನಾನಾ ವಿಧ ಆಯುಧಗಳಿಂದ ಚೆನ್ನಾಗಿ ಥಳಿಸಲ್ಪಟ್ಟ ಮಾರುತಿಯು ಆ ಎಲ್ಲ ದೈತ್ಯರನ್ನೂ ಕೇವಲ ತನ್ನ ಅಂಗೈಯ ಪೆಟ್ಟಿನಿಂದ ಪುಡಿಗೈದ. ॥ ೨೧ ॥

ಪುನಶ್ಚ ಮಂತ್ರಿಪುತ್ರಕಾನ್ ಸ ರಾವಣಪ್ರಚೋದಿತಾನ್ ।
ಮಮರ್ದ ಸಪ್ತಪರ್ವತಪ್ರಭಾನ್ ವರಾಭಿರಕ್ಷಿತಾನ್ ॥ ೨೨ ॥

ಬಲಾಗ್ರಗಾಮಿನಸ್ತಥಾ ಸ ಶರ್ವವಾಕ್ಸುಗರ್ವಿತಾನ್ ।
ನಿಹತ್ಯ ಸರ್ವರಕ್ಷಸಾಂ ತೃತೀಯಭಾಗಮಕ್ಷಿಣೋತ್ ॥ ೨೩ ॥

ಅನೌಪಮಂ ಹರೇರ್ಬಲಂ ನಿಶಮ್ಯ ರಾಕ್ಷಸಾಧಿಪಃ ।
ಕುಮಾರಮಕ್ಷಮಾತ್ಮನಃ ಸಮಂ ಸುತಂ ನ್ಯಯೋಜಯತ್ ॥ ೨೪ ॥

ಸ ಸರ್ವಲೋಕಸಾಕ್ಷಿಣಃ ಸುತಂ ಶರೈರ್ವವರ್ಷ ಹ ।
ಶಿತೈರ್ವರಾಸ್ತ್ರಮಂತ್ರಿತೈರ್ನಚೈನಮಭ್ಯಚಾಲಯತ್ ॥ ೨೫ ॥

ಸಮಂಡಮಧ್ಯಕಾಸುತಂ ಸಮೀಕ್ಷ್ಯ ರಾವಣೋಪಮಮ್ ।
ತೃತೀಯ ಏಷ ಚಾಂಶಕೋ ಬಲಸ್ಯ ಹೀತ್ಯಚಿಂತಯತ್ ॥ ೨೬ ॥

ನಿಧಾರ್ಯ ಏವ ರಾವಣಃ ಸ ರಾಘವಸ್ಯ ನಾನ್ಯಥಾ ।
ಯದೀಂದ್ರಜಿನ್ಮಯಾ ಹತೋ ನಚಾಸ್ಯ ಶಕ್ತಿರೀಕ್ಷ್ಯತೇ ॥ ೨೭ ॥

ಅತಸ್ತಯೋಃ ಸಮೋ ಮಯಾ ತೃತೀಯ ಏಷ ಹನ್ಯತೇ ।
ವಿಚಾರ್ಯ ಚೈವಮಾಶು ತಂ ಪದೋಃ ಪ್ರಗೃಹ್ಯ ಪುಪ್ಲುವೇ ॥ ೨೮ ॥

---

ರಾವಣ ಕಳುಹಿಸಿದ ಬ್ರಹ್ಮ-ರುದ್ರಾದಿದೇವತೆಗಳ ವರದಿಂದ ರಕ್ಷಿತರಾದ ಏಳು ಮಂದಿ ಪರ್ವತಗಾತ್ರದ ಮಂತ್ರಿಪುತ್ರರನ್ನು ಹನುಮ ಕಾಲಿನಿಂದ ತುಳಿದು ಕೊಂದ. ॥ ೨೨ ॥

ಸೇನೆಯ ಮುಂಚೂಣಿಯಲ್ಲಿ ಸಾಗುತ್ತಿದ್ದ, ರುದ್ರವರಬಲದಿಂದ ಕೊಬ್ಬಿದ ದೈತ್ಯರನ್ನು ಹತ್ಯೆಗೈದ ಹನುಮ ಇಡೀ ಲಂಕೆಯ ರಕ್ಕಸರ ಮೂರನೇ ಒಂದು ಭಾಗವನ್ನು ಕೊಂದು ಮುಗಿಸಿದ. ॥ ೨೩ ॥

**ಅಕ್ಷಕುಮಾರನ ಸಂಹಾರ:** ರಕ್ಕಸರ ಅಧಿಪತಿಯಾದ ರಾವಣನು ಕಪೀಶ್ವರನ ಅಸದೃಶವಾದ ತಾಕತ್ತನ್ನು ತಿಳಿದು ತನ್ನಷ್ಟೆ ಬಲಶಾಲಿಯಾದ ತನ್ನ ಪುತ್ರ ಅಕ್ಷಕುಮಾರನನ್ನು ಕಳುಹಿಸಿದ. ॥ ೨೪ ॥

ಆ ಅಕ್ಷಕುಮಾರನು ಸರ್ವಲೋಕಗಳನ್ನು ಸಾಕ್ಷಾತ್ತಾಗಿ ಕಾಣುತ್ತಿರುವ ವಾಯುದೇವರ ಪುತ್ರನಾದ ಹನುಮನ ಮೇಲೆ ತೀಕ್ಷ್ಣವಾದ, ಪ್ರಬಲವಾದ ಮಂತ್ರಗಳಿಂದ ಶಕ್ತಿಸಂಪನ್ನವಾದ ಬಾಣಗಳ ಮಳೆಗರೆದ. ಆದರೆ ಆತನಿಗೂ ಹನುಮಂತನನ್ನು ಅಲುಗಿಸಲು ಸಾಧ್ಯವಾಗಲಿಲ್ಲ. ॥ ೨೫ ॥

ಹನುಮನು ಮಂಡೋದರಿಯ ಮಗನಾದ, ರಾವಣನಿಗೆ ಸಮನಾದ ಬಲವುಳ್ಳ ಅಕ್ಷಕುಮಾರನನ್ನು ವೀಕ್ಷಿಸಿ 'ಈತ ರಾವಣನ ಸೇನೆಯ ಮೂರನೆ ಬಲಿಷ್ಠ ಯೋಧ'ನೆಂದು ಆಲೋಚಿಸಿದ. ॥ ೨೬ ॥

ರಾವಣನು ಶ್ರೀರಾಮಚಂದ್ರನ ಬಲಿಗಾಗಿಯೇ ಕಾದಿರಿಸಲ್ಪಟ್ಟವ. ಇಂದ್ರಜಿತ್ತನ್ನು ಈಗಲೇ ಮುಗಿಸಿದರೆ ಆತನ ಶಕ್ತಿ ಯಾರಿಗೂ ತಿಳಿಯುವುದಿಲ್ಲ. ಆದ್ದರಿಂದ ಇವರಿಬ್ಬರಿಗೆ

ಸ ಚಕ್ರವದ್ಭ್ರಮಾತುರಂ ವಿಧಾಯ ರಾವಣಾತ್ಮಜಮ್ ।
ಅಪೋಥಯದ್ಧರಾತಳೇ ಕ್ಷಣೇನ ಮಾರುತೀತನುಃ ॥ ೨೯ ॥

ವಿಚೂರ್ಣಿತೇ ಧರಾತಳೇ ನಿಜೇಸುತೇ ಸ ರಾವಣಃ ।
ನಿಶಮ್ಯ ಶೋಕತಾಪಿತಸ್ತದಗ್ರಜಂ ಸಮಾದಿಶತ್ ॥ ೩೦ ॥

ಅಥೇಂದ್ರಜಿನ್ಮಹಾಶರೈರ್ವರಾಸ್ತ್ರಸಂಪ್ರಯೋಜಿತೈಃ ।
ತತಕ್ಷ ವಾನರೋತ್ತಮಂ ನ ಚಾಶಕದ್ವಿಚಾಲನೇ ॥ ೩೧ ॥

ಅಥಾಸ್ತ್ರಮುತ್ತಮಂ ವಿಧೇರ್ಯುಯೋಜ ಸರ್ವದುಃಷಹಮ್ ।
ಸ ತೇನ ತಾಡಿತೋ ಹರಿರ್ವ್ಯಚಿಂತಯನ್ನಿರಾಕುಲಃ ॥ ೩೨ ॥

ಮಯಾ ವರಾ ವಿಲಂಘಿತಾ ಹ್ಯನೇಕಶಃ ಸ್ವಯಂಭುವಃ ।
ಸ ಮಾನನೀಯ ಏವ ಮೇ ತತೋಽತ್ರ ಮಾನಯಾಮ್ಯಹಮ್ ॥ ೩೩ ॥

ಇಮೇ ಚ ಕುರ್ಯುರತ್ರ ಕಿಂ ಪ್ರಹೃಷ್ಟ ರಕ್ಷಸಾಂ ಗಣಾಃ ।
ಇತೀಹ ಲಕ್ಷ್ಯಮೇವ ಮೇ ಸ ರಾವಣಶ್ಚ ದೃಶ್ಯತೇ ॥ ೩೪ ॥

---

ಸರಿಸಮಾನನಾದ ಮೂರನೆಯ ಈ ಅಕ್ಷಸುತನನ್ನು ಮುಗಿಸುತ್ತೇನೆಂದು ನಿರ್ಧರಿಸಿ ಒಡನೆಯೇ ಅಕ್ಷನನ್ನು ಕಾಲುಗಳಲ್ಲಿ ಹಿಡಿದು ಚಂಗನೆ ಗಗನಕ್ಕೆ ನೆಗೆದ. ॥ ೨೭, ೨೮ ॥

ಮರುತ್ಸುತನಾದ ಹನುಮನು ರಾವಣಪುತ್ರನನ್ನು ಚಕ್ರದಂತೆ ತಿರುಗಿಸಿ ಕ್ಷಣಮಾತ್ರದಲ್ಲಿ ನೆಲಕ್ಕೆ ಅಪ್ಪಳಿಸಿದನು. ॥ ೨೯ ॥

ತನ್ನ ಮಗ ನೆಲ ಕಚ್ಚಿ ಸತ್ತ ಸುದ್ದಿ ತಿಳಿದ ರಾವಣ ದುಃಖತಪ್ತನಾಗಿ ಅಕ್ಷಕುಮಾರನ ಅಣ್ಣನನ್ನು ಕಳುಹಿಸಿದ. ॥ ೩೦ ॥

ಕೂಡಲೇ ಬಂದ ಇಂದ್ರಜಿತ್ತು, ದಿವ್ಯಮಂತ್ರಗಳಿಂದ ಬಲಿಷ್ಠನಾದ ಬಾಣಗಳಿಂದ ಕಪಿವರನನ್ನು ಕಾಡಿದನು. ಆದರೆ ಹನುಮನನ್ನು ಅಲುಗಾಡಿಸಲೂ ಅಸಮರ್ಥನಾದ. ॥ ೩೧ ॥

**ಚತುರ್ಮುಖನಿಗೆ ಗೌರವಾರ್ಪಣೆ:** ಅನಂತರ ಬೇರೆಯವರಿಂದ ಸಹಿಸಲಸಾಧ್ಯವಾದ ಅತ್ಯುತ್ತಮವಾದ ಬ್ರಹ್ಮಾಸ್ತ್ರವನ್ನು ಇಂದ್ರಜಿತ್ತು ಪ್ರಯೋಗಿಸಿದ, ಬ್ರಹ್ಮಾಸ್ತ್ರದ ಪೆಟ್ಟು ತಿಂದರೂ ಯಾವುದೇ ವಿಕಾರಕ್ಕೊಳಗಾಗದ ಹನುಮಂತ ಮುಂದಿನ ಕರ್ತವ್ಯದ ಬಗ್ಗೆ ಆಲೋಚಿಸಿದ. ॥ ೩೨ ॥

ಬ್ರಹ್ಮದೇವನ ವರಗಳನ್ನು ಬಹಳ ಬಾರಿ ಮುರಿದವನು ನಾನು; ಆ ಬ್ರಹ್ಮನಾದರೋ ನನಗೂ ಮಾನ್ಯನು. ಆದುದರಿಂದ ಈ ಬ್ರಹ್ಮಾಸ್ತ್ರಕ್ಕೆ ಸಿಕ್ಕುವ ಮೂಲಕ ಬ್ರಹ್ಮನಿಗೆ ಗೌರವವನ್ನು ಸಲ್ಲಿಸುತ್ತೇನೆ. ॥ ೩೩ ॥

ನಾನು ಅಸ್ತ್ರಕ್ಕೆ ಸಿಕ್ಕಿದ್ದೆನೆಂದು ಸಂತೋಷದಿಂದಿರುವ ಈ ರಕ್ಕಸರ ಪಡೆ ಏನು ಮಾಡುತ್ತದೆಂದು ಪ್ರತೀಕ್ಷಿಸಬೇಕಾಗಿದೆ. ಜತೆಗೆ ಅನಾಯಾಸವಾಗಿ ರಾವಣನ ದರ್ಶನವೂ ಆಗುತ್ತದೆ. ॥ ೩೪ ॥

ಇದಂ ಸಮೀಕ್ಷ್ಯ ಬದ್ಧವತ್ ಸ್ಥಿತಂ ಕಪೀಂದ್ರಮಾಶು ತೇ ।
ಬಬಂಧುರನ್ಯಪಾಶಕೈರ್ಜಗಾಮ ಚಾಸ್ತ್ರಮಸ್ಯ ತತ್ ॥ ೩೫ ॥

ಅಥ ಪ್ರಗೃಹ್ಯ ತಂ ಕಪಿಂ ಸಮೀಪಮಾನಯಂಶ್ಚ ತೇ ।
ನಿಶಾಚರೇಶ್ವರಸ್ಯ ತಂ ಸ ಪೃಷ್ಟವಾಂಶ್ಚ ರಾವಣಃ ॥ ೩೬ ॥

ಕಪೇ ಕುತೋಽಸಿ ಕಸ್ಯ ವಾ ಕಿಮರ್ಥಮೀದೃಶಂ ಕೃತಮ್ ।
ಇತೀರಿತಃ ಸಚಾವದದ್ ಪ್ರಣಮ್ಯ ರಾಮಮೀಶ್ವರಮ್ ॥ ೩೭ ॥

ಅವೈಹಿ ದೂತಮಾಗತಂ ದುರಂತವಿಕ್ರಮಸ್ಯ ಮಾಮ್ ।
ರಘೂತ್ತಮಸ್ಯ ಮಾರುತಿಂ ಕುಲಕ್ಷಯೇ ತವೇಶ್ವರಮ್ ॥ ೩೮ ॥

ನ ಚೇತ್ಪ್ರದಾಸ್ಯಸಿ ತ್ವರನ್ ರಘೂತ್ತಮಪ್ರಿಯಾಂ ತದಾ ।
ಸಪುತ್ರಮಿತ್ರಬಾಂಧವೋ ವಿನಾಶಮಾಶು ಯಾಸ್ಯಸಿ ॥ ೩೯ ॥

ನ ರಾಮಬಾಣಧಾರಣೇ ಕ್ಷಮಾಃ ಸುರೇಶ್ವರಾ ಅಪಿ ।
ವಿರಿಂಚಶರ್ವಪೂರ್ವಕಾಃ ಕಿಮು ತ್ವಮಲ್ಪಸಾರಕಃ ॥ ೪೦ ॥

---

ಹೀಗೆ ದೀರ್ಘವಾಗಿ ಆಲೋಚಿಸಿ ಬಂಧನಕ್ಕೆ ಸಿಲುಕಿದಂತೆ ನಟಿಸಿದ ಹನುಮಂತನನ್ನು ಮೂರ್ಖ ರಾಕ್ಷಸರು ಬೇರೆ ಹಗ್ಗದಿಂದ ಕಟ್ಟುತ್ತಿರಲು ಅವಮಾನಗೊಂಡ ಬ್ರಹ್ಮಾಸ್ತ್ರವು ಹನುಮಂತನಿಂದ ದೂರ ಸರಿಯಿತು. ಇಂದ್ರಜಿತ್ತುವಿನ ದೃಷ್ಟಿಯಲ್ಲಿ ನಿಷ್ಫಲವಾಯಿತು. ॥ ೩೫ ॥

**ನಿಶಾಚರೇಶನಿಗೆ ಎಚ್ಚರಿಕೆ:** ಆ ಬಳಿಕ ಎಲ್ಲ ರಕ್ಕಸರೂ ಸೇರಿ ಕಪೀಶ್ವರನನ್ನು ರಾತ್ರಿಚರರೊಡನೆಯನಾದ ರಾವಣನ ಬಳಿಗೆ ಕರೆದೊಯ್ದರು. ಆತ ಹನುಮಂತನನ್ನು ಪ್ರಶ್ನಿಸಲಾರಂಭಿಸಿದ. ॥ ೩೬ ॥

"ಎಲೈ ಕಪಿಯೇ, ನೀನು ಎಲ್ಲಿಂದ ಬಂದವ? ಯಾರ ಕಡೆಯಿಂದ ಬಂದವ? ಏಕೆ ಈ ವಿಧ್ವಂಸಕಕೃತ್ಯವನ್ನು ಮಾಡಿದೆ?" ಈ ರೀತಿಯಾಗಿ ಪ್ರಶ್ನಿಸಲ್ಪಟ್ಟ ಹನುಮಂತನು ಒಡೆಯನಾದ ಶ್ರೀರಾಮನಿಗೆ ಮಣಿದು ಉತ್ತರಿಸಿದ. ॥ ೩೭ ॥

"ವಾಯುಪುತ್ರನಾದ ನನ್ನನ್ನು ಅಪರಿಮಿತ ಪರಾಕ್ರಮಿಯಾದ ರಘುಕುಲತಿಲಕನಾದ ರಾಮಚಂದ್ರನ ದೂತನಾಗಿ ಬಂದವನೆಂದು ತಿಳಿ. ನಾನು ಇಚ್ಛಿಸಿದರೆ ನಿನ್ನ ಕುಲವನ್ನೇ ಧ್ವಂಸ ಮಾಡುವ ತಾಕತ್ತುಳ್ಳವನೆಂದು ಬಲ್ಲೆಯಾ? ॥ ೩೮ ॥

ಈ ಕ್ಷಣದಲ್ಲಿ ರಘೂತ್ತಮನಾದ ರಾಮಚಂದ್ರನ ಪ್ರಿಯ ಮಡದಿಯನ್ನು ಮರಳಿಸದಿದ್ದರೆ ಮಕ್ಕಳು, ಮಿತ್ರರು, ಬಂಧುಬಾಂಧವರೊಡನೆ ಶೀಘ್ರದಲ್ಲಿಯೇ ವಿನಾಶವಾಗುತ್ತೀಯ! ॥ ೩೯ ॥

ಶ್ರೀರಾಮದೇವರ ಬಾಣಕ್ಕೆ ಎದೆ ಕೊಟ್ಟು ನಿಲ್ಲಲು ಬ್ರಹ್ಮ, ರುದ್ರ ಮುಂತಾದ ದೇವೋತ್ತಮರೇ ಅಸಮರ್ಥರಾಗಿರುವಾಗ ನಿರ್ವೀರ್ಯನಾದ ನೀನ್ಯಾವ ಲೆಕ್ಕ? ॥ ೪೦ ॥

ಪ್ರಕೋಪಿತಸ್ಯ ತಸ್ಯ ಕಃ ಪುರಃ ಸ್ಥಿತೌ ಕ್ಷಮೋ ಭವೇತ್ ।
ಸುರಾಸುರೋರಗಾದಿಕೇ ಜಗತ್ಯಚಿಂತ್ಯಕರ್ಮಣಃ ॥ ೪೦ ॥

ಇತೀರಿತೇ ವಧೋದ್ಯತಂ ನ್ಯವಾರಯದ್ವಿಭೀಷಣಃ ।
ಸ ಪುಚ್ಛದಾಹಕರ್ಮಣಿ ನ್ಯಯೋಜಯನ್ನಿಶಾಚರಾನ್ ॥ ೪೧ ॥

ಅಥಾಸ್ಯ ವಸ್ತ್ರಸಂಚಯೈಃ ಪಿಧಾಯ ಪುಚ್ಛಮಗ್ನಯೇ ।
ದಮರ್ದದಾಹ ನಾಸ್ಯ ತನ್ಮರುತ್ಸಖೋ ಹುತಾಶನಃ ॥ ೪೨ ॥

ಮಮರ್ಷ ಸರ್ವಚೇಷ್ಟಿತಂ ಸ ರಕ್ಷಸಾಂ ನಿರಾಮಯಃ ।
ಬಲೋದ್ಧತಶ್ಚ ಕೌತುಕಾತ್ಪ್ರದಗ್ಧುಮೇವ ತಾಂ ಪುರೀಮ್ ॥ ೪೪ ॥

ದದಾಹ ಚಾಖಿಲಂ ಪುರಂ ಸ್ವಪುಚ್ಛಗೇನ ವಹ್ನಿನಾ ।
ಕೃತಿಸ್ತು ವಿಶ್ವಕರ್ಮಣೋಽಪ್ಯದಹ್ಯತಾಸ್ಯ ತೇಜಸಾ ॥ ೪೫ ॥

ಸುವರ್ಣರತ್ನಕಾರಿತಾಂ ಸ ರಾಕ್ಷಸೋತ್ತಮೈಃ ಸಹ ।
ಪ್ರದಹ್ಯ ಸರ್ವಶಃ ಪುರೀಂ ಮುದಾಽನ್ವಿತೋ ಜಗರ್ಜ ಚ ॥ ೪೬ ॥

ಸ ರಾವಣಂ ಸಪುತ್ರಕಂ ತೃಣೋಪಮಂ ವಿಧಾಯ ಚ ।
ತಯೋಃ ಪ್ರಪಶ್ಯತೋಃ ಪುರಂ ವಿಧಾಯ ಭಸ್ಮಸಾದ್ಯಯೌ ॥ ೪೭ ॥

---

ಅರಿವಿಗೇ ನಿಲುಕದ ಅಪಾರವಾದ ವ್ಯಾಪಾರವುಳ್ಳ ಶ್ರೀರಾಮಚಂದ್ರ ಕೋಪಗೊಂಡ ನೆಂದರೆ ಆತನೆದುರು ನಿಲ್ಲುವ ತಾಕತ್ತು ಸುರ–ಅಸುರ–ನಾಗ ಪ್ರಪಂಚದಲ್ಲಿ ಯಾರಿಗಿದೆ? ॥ ೪೦ ॥

**ಲಂಕಾದಹನ:** ಈ ರೀತಿ ಉತ್ತರಿಸಿದ ಹನುಮನಿಗೆ ಪ್ರತ್ಯುತ್ತರಿಸಲು ಅಸಮರ್ಥನಾಗಿ ಕೋಪಗೊಂಡು ಹನುಮನನ್ನು ಕೊಲ್ಲಹೊರಟ ರಾವಣನನ್ನು ವಿಭೀಷಣನು ತಡೆದ. ಅನಂತರ ರಾವಣನು ಹನುಮನ ಬಾಲವನ್ನು ಸುಡಲು ರಕ್ಕಸರನ್ನು ನಿಯೋಜಿಸಿದ. ॥ ೪೧ ॥

ಅನಂತರ ಆ ನಿಶಾಚರರೆಲ್ಲರೂ ಸೇರಿ ವಸ್ತ್ರಗಳ ರಾಶಿಯಿಂದ ಹನುಮನ ಬಾಲವನ್ನು ಸುತ್ತಿ ಬೆಂಕಿಯನ್ನಿಟ್ಟರು. ಆದರೆ ಬೆಂಕಿಗೂ ಗಾಳಿಗೂ ನಂಟಲ್ಲವೇ? ಹಾಗಾಗಿ ಅಗ್ನಿದೇವ, ವಾಯುಪುತ್ರನ ಬಾಲವನ್ನು ಸುಡಲಿಲ್ಲ. ॥ ೪೨ ॥

ಛೇದ–ಭೇದ–ದಾಹ ಮುಂತಾದ ಶೋಕರಹಿತನಾದ, ಬಲದಿಂದ ತುಂಬಿತುಳುಕುವ ಹನುಮಂತ ಸಮಗ್ರ ಲಂಕಾಪಟ್ಟಣವನ್ನು ಸುಡಬೇಕೆಂಬ ಉದ್ದೇಶದಿಂದಲೇ ಆ ರಕ್ಕಸರ ಎಲ್ಲ ಚಾಪಲವನ್ನು ಸಹಿಸಿದ. ॥ ೪೪ ॥

ಹನುಮ ತನ್ನ ಬಾಲದ ಬೆಂಕಿಯಿಂದ ಇಡೀ ಲಂಕೆಯನ್ನು ಸುಟ್ಟ. ವಿಶ್ವಕರ್ಮನಿಂದ ನಿರ್ಮಿತವಾಗಿದ್ದರೇನಂತೆ? ಹನುಮಂತನ ತೇಜಸ್ಸಿನಿಂದ ಉರಿದು ಹೋಯಿತು. ॥ ೪೫ ॥

ಹೊನ್ನು–ರನ್ನಗಳಿಂದ ರೂಪುಗೊಂಡ ಸಮಗ್ರ ಲಂಕೆಯನ್ನು ರಕ್ಕಸ ಮುಖಂಡ ರೊಂದಿಗೆ ಸುಟ್ಟು ಸಂತುಷ್ಟನಾಗಿ ಸಿಂಹನಾದ ಮಾಡಿದ. ॥ ೪೬ ॥

ವಿಲಂಘ್ಯ ಚಾರ್ಣವಂ ಪುನಃ ಸ್ವಜಾತಿಭಿಃ ಪ್ರಪೂಜಿತಃ ।
ಪ್ರಭಕ್ಷ್ಯ ವಾನರೇಶಿತುರ್ಮಧು ಪ್ರಭುಂ ಸಮೇಯಿವಾನ್ ॥ ೪೮ ॥

ರಾಮಂ ಸುರೇಶ್ವರಮಗಣ್ಯಗುಣಾಭಿರಾಮಂ
ಸಂಪ್ರಾಪ್ಯ ಸರ್ವಕಪಿವೀರವರೈಃ ಸಮೇತಃ ।
ಚೂಳಾಮಣಿಂ ಪವನಜಃ ಪದಯೋರ್ನಿಧಾಯ
ಸರ್ವಾಂಗಕೈಃ ಪ್ರಣತಿಮಸ್ಯ ಚಕಾರ ಭಕ್ತ್ಯಾ ॥ ೪೯ ॥

ರಾಮೋಽಪಿ ನಾನ್ಯದನುದಾತುಮಮುಷ್ಯ ಯೋಗ್ಯ-
ಮತ್ಯಂತಭಕ್ತಿಪರಮಸ್ಯ ವಿಲಕ್ಷ್ಯ ಕಿಂಚಿತ್ ।
ಸ್ವಾತ್ಮಪ್ರದಾನಮಧಿಕಂ ಪವನಾತ್ಮಜಸ್ಯ ಕುರ್ವನ್
ಸಮಾಶ್ಲಿಷದಮುಂ ಪರಮಾಭಿತುಷ್ಟಃ ॥ ೫೦ ॥

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
ಶ್ರೀಮಹಾಭಾರತತಾತ್ಪರ್ಯನಿರ್ಣಯೇ ಶ್ರೀರಾಮಚರಿತೇ ಹನೂಮತ್ಪ್ರತಿಯಾನಂ ನಾಮ
ಸಪ್ತಮೋಽಧ್ಯಾಯಃ ॥

* * *

---

ಇಂದ್ರಜಿತ್ತುವಿನೊಂದಿಗಿರುವ ರಾವಣನನ್ನು ಹುಲ್ಲಿನ ಸಮಾನನನ್ನಾಗಿ ಮಾಡಿ ಅಪ್ಪ, ಮಗ ನೋಡುತ್ತಿರುವಂತೆಯೇ ಹನುಮಂತ ಪುರವನ್ನು ಭಸ್ಮಗೊಳಿಸಿ ಹೊರಟು ನಿಂತ. ॥ ೪೭ ॥

ಮತ್ತೊಮ್ಮೆ ಸಮುದ್ರವನ್ನು ದಾಟಿ ತನ್ನ ಜಾತಿಯ ಕಪಿಗಳಿಂದ ಪೂಜಿಸಲ್ಪಟ್ಟವನಾಗಿ ಕಪಿನಾಯಕನಾದ ಸುಗ್ರೀವನ ಮಧುವನದಲ್ಲಿ ಮಧುವನ್ನು ಎಲ್ಲ ಕಪಿಗಳಿಗೂ ಕುಡಿಸಿ ತಾನು ಪಾನ ಮಾಡಿದ ಹನುಮ ಒಡೆಯನಾದ ರಾಮನಲ್ಲಿಗೆ ಬಂದ. ॥ ೪೮ ॥

**ಶ್ರೀರಾಮನಿಗೆ ಸಮರ್ಪಣೆ:** ಎಲ್ಲ ಕಪಿವೀರರಿಂದ ಕೂಡಿದ ಹನುಮಂತ ದೇವ ದೇವೋತ್ತಮನಾದ, ಅನಂತಗುಣಗಳಿಂದ ಕಂಗೊಳಿಸುವ ಶ್ರೀರಾಮನನ್ನು ಹೊಂದಿ ಚೂಡಾ ಮಣಿಯನ್ನು ಶ್ರೀರಾಮನ ಚರಣದ್ವಂದ್ವಗಳಲ್ಲಿಟ್ಟು ಸಕಲಾಂಗಗಳಿಂದ ಭಕ್ತಿಪೂರ್ವಕವಾಗಿ ಪ್ರಣಾಮಗಳನ್ನು ಅರ್ಪಿಸಿದ. ॥ ೪೯ ॥

ಒಡೆಯನಾದ ರಾಮನಾದರೋ ಅತ್ಯಂತ ಸಂತುಷ್ಟನಾಗಿ ಭಕ್ತಾಗ್ರೇಸರನಾದ ಹನುಮಂತನ ಸೇವೆಗೆ ಪ್ರತಿಯಾಗಿ ಯಾವ ಉಚಿತವಾದ ಕೊಡುಗೆಯನ್ನು ಕೊಡಲು ಕಾಣದವನಾಗಿ ತನ್ನನ್ನೇ ತನ್ನ ಭಕ್ತನಿಗೆ ಅರ್ಪಿಸುವವನಾಗಿ ಆತನನ್ನು ಗಾಢವಾಗಿ ಆಲಿಂಗಿಸಿದ. ॥ ೫೦ ॥

॥ ಪಲಿಮಾರುಮಠೀಯೇನ ವಿದ್ಯಾಧೀಶಾಖ್ಯಭಿಕ್ಷುಣಾ ।
ಕೃತಯಾ ಚಾನಯಾ ಕೃತ್ಯಾ ಪ್ರೀಯತಾಂ ಶ್ರೀಪತಿಃ ಸದಾ ॥

ಶ್ರೀ ವಿದ್ಯಾಧೀಶತೀರ್ಥರು ಮಾಡಿರುವ ಅನುವಾದ



'ಕ್ಷಣ ಕ್ಷಣ ನಿನ್ನ ಬಗ್ಗೆ ಭಕ್ತಿ ಹೆಚ್ಚುತ್ತಿರಲೆಂದು ಶ್ರೀ ರಾಮಚಂದ್ರನಲ್ಲಿ ಬೇಡಿಕೊಳ್ಳುತ್ತಿರುವ ಪಲಿಮಾರು ಮಠದ ಆಂಜನೇಯನಿಗೆ ವರ ನೀಡುವ ರಾಮಚಂದ್ರ

# • ವಾಯುಸ್ತುತಿ ಪುರಶ್ಚರಣೆ ಮತ್ತು ಅದರ ಫಲವಿಶೇಷಗಳು •


'ತ್ರಾತಾ ಯಸ್ಯ ತ್ರಿಧಾಮಾ'- ಎಂದು ಉಲ್ಲೇಖಿಸಲ್ಪಟ್ಟಿರುವಂತೆ ಮುಖ್ಯಪ್ರಾಣ ದೇವರಿಗೆ ರಕ್ಷಣೆ ನೀಡುವ, ನಖಸ್ತುತಿಸ್ತುತ್ಯನಾದ ಕಾಣಿಯೂರು ಮಠದ ಶ್ರೀರಾಮತೀರ್ಥ ಪೂಜಿತ ಯೋಗನರಸಿಂಹ

ಆಚಾರ್ಯಮಧ್ವರ ಸ್ವರೂಪ ವನ್ನು ಪ್ರತ್ಯಕ್ಷವಾಗಿ ಕಂಡವರು ತ್ರಿವಿಕ್ರಮಪಂಡಿತರು. ಅದರಂತೆ ವಾಯುದೇವತೆಯನ್ನು 41 ಪದ್ಯ ಗಳಿಂದ ಸ್ತುತಿಸಿದರು. ಇದುವೆ ವಾಯುಸ್ತುತಿಯೆನಿಸಿದೆ. ಈ ಸ್ತುತಿ ಯನ್ನಾಲಿಸಿದ ಮಧ್ವರು ನರಹರಿಯ ನಖಸ್ತುತಿಯನ್ನು ಮಂಗಳ ಪದ್ಯ ವಾಗಿ ನೀಡಿದರು. ನಖಸ್ತುತಿಯ ಸಂಪುಟದೊಂದಿಗೆ ವಾಯು ಸ್ತುತಿಯ ಬಹಳಬಾರಿ ಪಠನವೆ **'ಪುರಶ್ಚರಣ'** ಎನಿಸಿದೆ. ಹೆಚ್ಚಾಗಿ ಪ್ರಾಣಪ್ರತಿಮೆಗೆ ಅಭಿಷೇಕವನ್ನು ಈ ಸ್ತುತಿಗಳಿಂದ ನಡೆಸುತ್ತಾರೆ. ಅಭಿಷೇಕಕ್ಕೆ ದೇವರ ತೀರ್ಥವನ್ನಲ್ಲದೆ ಹಾಲನ್ನೊ ಜೇನುತುಪ್ಪವನ್ನೊ ಬಳಸುವುದುಂಟು. ರೂಢಿಯಲ್ಲಿ ಬಹಳ ರೀತಿಯ ಪುರಶ್ಚರಣಗಳಿವೆ. ವಾಯುಸ್ತುತಿಯ ಪ್ರತಿಯೊಂದು ಶ್ಲೋಕಕ್ಕೂ ಬೇರೆಬೇರೆ ಫಲಗಳಿವೆ. ಇವು ಸಾಧಕನ, ಕೃತಿಕಾರನ ಮನೋಬಲದ ಮೇಲಿನಿಂದ ಸಿದ್ಧವಾದವುಗಳು. ಇದರ ಪ್ರಾಪ್ತಿಗೆ ವಾಯು ತತ್ತ್ವವೆ ಸಾಕ್ಷಿ.

೧. ಮೊದಲು ನಖಸ್ತುತಿಯನ್ನು ಹೇಳಿ ಅನಂತರ ವಾಯುಸ್ತುತಿಯ ಅಭೀಷ್ಟ ಪದ್ಯವ ನ್ನಾರಂಭಿಸಿ ಕೊನೆಯವರೆಗೆ ಹೇಳಬೇಕು. ಮತ್ತೆ ವಾಯುಸ್ತುತಿಯ ಆರಂಭದಿಂದ ಕೊನೆಯವರೆಗೆ ಹೇಳಿ ನಖಸ್ತುತಿಯನ್ನು ಪಠಿಸಬೇಕು. ಇದು ವ್ಯಾಸರಾಜನ ಕ್ರಮ ಎಂದು ತಿಳಿದವರ ಹೇಳಿಕೆ.

೨. ಮೊದಲು ನಖಸ್ತುತಿಯನ್ನು ಹೇಳಿ ಅನಂತರ ವಾಯುಸ್ತುತಿಯನ್ನು ಆರಂಭದಿಂದ ಕೊನೆಯವರೆಗೆ ಹೇಳಬೇಕು. ಅನಂತರ ಅಭೀಷ್ಟ ಪದ್ಯದಿಂದಾರಂಭಿಸಿ ವಾಯುಸ್ತುತಿ ಪೂರ್ತಿಗೊಳಿಸಬೇಕು. ಪುನಃ ವಾಯುಸ್ತುತಿಯನ್ನು ಮೊದಲಿನಿಂದ ಕೊನೆಯವರೆಗೆ ಹೇಳಿ ನಖಸ್ತುತಿಯನ್ನು ಪಠಿಸಬೇಕು. ಇದು ವಾದಿರಾಜರ ರೀತಿ ಎಂದು ಸಾಧಕರ ಮಾತು.

ಈ ಮೇಲಿನ ಎರಡೂ ಒಂದಾವರ್ತಿ ಪುರಶ್ಚರಣವೆನಿಸಿದೆ. ಇದನ್ನು ಒಂದು ದಿನದಲ್ಲಿ ಏಳು ಬಾರಿ ಮಾಡುವುದು ಉತ್ತಮ ಎಂದೂ ಐದು ಬಾರಿ ಮಧ್ಯಮ ಎಂತಲೂ ಸಂಪ್ರದಾಯವಿದೆ. ಕನಿಷ್ಠ ಮೂರು ಬಾರಿಯಾದರೂ ನಡೆಸಬೇಕು.

ಹೀಗೆ ಏಳು ದಿನಗಳ ಕಾಲ ಪುರಶ್ಚರಣ ನಡೆಯಬೇಕು. ಐದು ದಿನವಾಗಲಿ ಮೂರು ದಿನವಾಗಲಿ ನಡೆಸುವುದುಂಟು. ಅನಂತರ ಪುರಶ್ಚರಣದ ಅಂಗವಾಗಿ ವಾಯುಸ್ತುತಿ ಹೋಮ ನಡೆಸುತ್ತಾರೆ.

೩. ನಖಸ್ತುತಿಯನ್ನು ಹೇಳಿ ವಾಯುಸ್ತುತಿಯ ಆರಂಭದಿಂದ ಅಭೀಷ್ಟ ಶ್ಲೋಕದವರೆಗೆ ಪಠಿಸಿ, ಮತ್ತೆ ವಾಯುಸ್ತುತಿಯನ್ನು ಪ್ರಾರಂಭದಿಂದ ಕೊನೆಯವರೆಗೆ ಹೇಳಿ, ನಖಸ್ತುತಿ ಪಠಿಸುವುದೆಂದು ಇನ್ನೊಂದು ರೀತಿಯ ಪುರಶ್ಚರಣವಿದೆ. ಇದು ಅಷ್ಟೇನೂ ಸಮರ್ಪಕ ಎನ್ನುವಂತಿಲ್ಲ.

೪. ನಖಸ್ತುತಿಯೊಂದಿಗೆ ವಾಯುಸ್ತುತಿಯ ಅಭೀಷ್ಟಪದ್ಯದಿಂದಾರಂಭಿಸಿ ಪೂರ್ತಿಯಾದ ನಂತರ ವಾಯುಸ್ತುತಿಯನ್ನು ಕೊನೆಯಿಂದ ಆರಂಭದ ವರೆಗೆ ಹಿಂದು (ವ್ಯತ್ಕ್ರಮವಾಗಿ) ಹಿಂದಕೆ ಹೇಳಿ ಮತ್ತೆ ಅನುಕ್ರಮವಾಗಿ ವಾಯುಸ್ತುತಿಯ ಆರಂಭದಿಂದ ಅಭೀಷ್ಟಪದ್ಯದವರೆಗೆ ಪಠಿಸುವುದೊಂದು ಕ್ರಮ. ಇದು ಬೌದ್ಧಿಕ ಕಸರತ್ತಿನಲ್ಲಿ ನಡೆದ ಪುರಶ್ಚರಣವಿರಬಹುದೇನೊ?

೫. ನಖಸ್ತುತಿಯನ್ನು ಪಠಿಸಿ ವಾಯುಸ್ತುತಿಯ ಪ್ರಾರಂಭದಿಂದ ಅಭೀಷ್ಟಪದ್ಯದವರೆಗೆ ಹೇಳಬೇಕು. ಅಭೀಷ್ಟಪದ್ಯವನ್ನು 108 ಬಾರಿ ಪಠಿಸಿದ ಅನಂತರ ಮುಂದುವರಿದು ವಾಯುಸ್ತುತಿಯನ್ನು ಪೂರ್ತಿಗೊಳಿಸಬೇಕು. ಅನಂತರ ನಖಸ್ತುತಿಯೊಂದಿಗೆ ಪುರಶ್ಚರಣ ಸಮಾಪನವೊಂದು ವಿಶಿಷ್ಟ ಪುರಶ್ಚರಣ. ಇದು ಬೇಗನೆ ಫಲದಾಯಕ.

೬. ನಖಸ್ತುತಿಯ ಸಂಪುಟದೊಂದಿಗೆ ಕೇವಲ ಅಭೀಷ್ಟಪದ್ಯದ 108 ಬಾರಿ ಪಠಣವೂ ಒಂದು ರೀತಿಯ ಪುರಶ್ಚರಣವೆ ಆಗಿದೆ. ಇದನ್ನು ಹೆಚ್ಚಾಗಿ ಮೊದಲೆರಡು ಕ್ರಮದಲ್ಲಿ ಪುರಶ್ಚರಣ ನಡೆಸಿ ಪ್ರತಿನಿತ್ಯ ಕೊನೆಗೆ ನಡೆಸುತ್ತಾರೆ. ಇದೂ ಶೀಘ್ರಫಲದಾಯಕವೆನಿಸಿದೆ.

೭. ವಾಯುಸ್ತುತಿಯ ಪ್ರತಿ ಪದ್ಯದ ನಡುವೆಯೂ ಅಭೀಷ್ಟಪದ್ಯವನ್ನು ಹೇಳುವುದೊಂದು ಅಪರೂಪದ ಪದ್ಧತಿ. ಇಲ್ಲಿಯೂ ನಖಸ್ತುತಿ ಆದ್ಯಂತಗಳಲ್ಲಿ ಪಠಿಸಬೇಕು.

೮. ಮೊದಲೆರಡರಲ್ಲೊಂದು ರೀತಿಯಲ್ಲಿ ಪುರಶ್ಚರಣಮಾಡುತ್ತಾ ವಾಯುಸ್ತುತಿಯ ಎಲ್ಲ ಪದ್ಯಗಳನ್ನೂ ಪುರಶ್ಚರಣಮಾಡುವುದೊಂದು ಸಂಪೂರ್ಣ ಪುರಶ್ಚರಣವೆನಿಸುವುದು. ಇಲ್ಲಿ ಅಭೀಷ್ಟಪದ್ಯದ ಆಯ್ಕೆ ಒಂದೊ ಮೊದಲಿಂದ ಇಲ್ಲವೆ, ಕೊನೆಯಿಂದ ಆಗಿರುವುದು. ಅಥವಾ ಹೆಚ್ಚು ಇಷ್ಟವಾದ ಪದ್ಯದಾರಂಭವೂ ಆಗಬಹುದು. ಇದು ಬಹಳ ಫಲಕಾರಿ.

೯. ಪ್ರತಿ ಪದ್ಯವನ್ನೂ ಪದ್ಯದ ಸಂಖ್ಯೆಯಂತೆ ಪಠಿಸುವುದೊಂದು ವಿಚಿತ್ರವಾದ ಪುರಶ್ಚರಣವಾಗಿದೆ. ಮೊದಲ ಪದ್ಯ ಒಂದು ಬಾರಿ, ಎರಡನೆಯ ಪದ್ಯ ಎರಡು ಬಾರಿ –ಹೀಗೆ 41ನೆಯ ಪದ್ಯವನ್ನು 41 ಬಾರಿ ಪಠಿಸುವುದು. ನಖಸ್ತುತಿ ಹೇಳಲೇ ಬೇಕು.

೧೦. ವಾಯುಸ್ತುತಿಯ ಪ್ರತಿಪದ್ಯವನ್ನೂ ನಖಸ್ತುತಿಯ ಸಂಪುಟದೊಂದಿಗೆ ವಿಶೇಷವಾದ ಹರಿವಾಯುಗಳ ಅನುಗ್ರಹೇಚ್ಛುವಾಗಿ ಮಾಡುವುದೂ ಒಂದು ಬಗೆಯ ಪುರಶ್ಚರಣ.

ಜ್ಯೋತಿಷ್ಯದ ಆಧಾರದ ಮೇಲೆ, ಸಂಖ್ಯಾಶಾಸ್ತ್ರದ ಚೌಕಟ್ಟಿನಲ್ಲಿ ಫಲಕ್ಕೆ ಸಂಬಂಧಿಸಿದಂತೆ ಅಭೀಷ್ಟಪದ್ಯಗಳ ಆವೃತ್ತಿಯೂ ಒಂದು ರೀತಿಯ ಪುರಶ್ಚರಣವೆನಿಸುವುದು. ಇದು ಇತರ ಪುರಶ್ಚರಣ ಕ್ರಮವನ್ನೆ ಸ್ಪಷ್ಟಗೊಳಿಸುವಲ್ಲಿ ಸಹಾಯಕವೆನಿಸಿದೆ.

ಹೀಗೆ ಇನ್ನೂ ಹಲವು ಬಗೆಯ ಪುರಶ್ಚರಣಕ್ರಮ ವಾಯುಸ್ತುತಿಯ ಸಾಧನಾ ಮಾರ್ಗದ ಚಿಂತಕರಲ್ಲಿ ಚಾಲ್ತಿಯಲ್ಲಿದೆ. ಇಲ್ಲಿ ಪ್ರಸ್ತುತವಾದ ಕ್ರಮವನ್ನೂ ಕೇಳಿ ತಿಳಿದು ಮಾಡಿದಲ್ಲಿ ತಪ್ಪಿರದಂತೆ ಎಚ್ಚರವಹಿಸಬಹುದಾಗಿದೆ. ಇವೆಲ್ಲಕ್ಕೂ ಸದಾಚಾರನಿಷ್ಠರೆ ಪ್ರಮಾಣ.

ವಾಯುಸ್ತುತಿಯ ಪ್ರತಿಯೊಂದು ಪದ್ಯದಲ್ಲಿಯೂ ವಾಯುವಿನ ವಿಶೇಷ ಗುಣಕ್ರಿಯಾ ಸ್ವರೂಪಗಳ ಚಿಂತನೆ ನಡೆದಿದೆ. ಈ ಹಿನ್ನೆಲೆಯಲ್ಲಿ ಸಾಧಕರು ಉಪಾಸನೆಯಲ್ಲಿ ಪ್ರತಿ ಪದ್ಯಕ್ಕೂ ಒಂದು ವಿಶಿಷ್ಟವಾದ ಫಲವನ್ನು ಪಡೆದಿದ್ದರು. ಆದರ ಪ್ರಾಚೀನ ದಾಖಲೆಯಂತೆ ಈ ಕೆಳಗೆ ಪ್ರತಿ ಪದ್ಯದ ಬಹುಮುಖದ ಫಲ ಪ್ರತಿಫಲವನ್ನು ಕಾಣಬಹುದು–

೧. ವಾಕ್‌ಸಿದ್ಧಿ, ಪಾವಿತ್ರ್ಯ
೨. ಪ್ರಜ್ಞಾಸಿದ್ಧಿ, ಕೀರ್ತಿಪ್ರಾಪ್ತಿ
೩. ರೋಗಪರಿಹಾರ, ಆನಂದಾದಿ ಗುಣಪ್ರಾಪ್ತಿ, ದ್ವೇಷಿಗಳ ನಾಶ
೪. ಮಂತ್ರಸಿದ್ಧಿ, ವಿಪತ್‌ನಾಶ, ಶ್ರೈಷ್ಠ್ಯಪ್ರಾಪ್ತಿ
೫. ಅಧ್ಯಾತ್ಮಜ್ಞಾನಪ್ರಾಪ್ತಿ, ವೀರ್ಯ–ಸುಮತಿ ಪ್ರಾಪ್ತಿ
೬. ಸಂಸಾರನಾಶ, ಕೀರ್ತಿ ಆನಂದ–ಐಶ್ವರ್ಯಪ್ರಾಪ್ತಿ
೭. ಸಂಸಾರನಾಶ, ಸುಖ–ಭಕ್ತಿಪ್ರಾಪ್ತಿ
೮. ಮಾಯಿಜಯ, ಆಜ್ಞಾಸಿದ್ಧಿ, ಶತ್ರೂನ್ಮಾದಪ್ರಾಪ್ತಿ, ಭಯನಿವೃತ್ತಿ
೯. ಮುಕ್ತಿಪ್ರಾಪ್ತಿ, ಸ್ತ್ರೀಸುಖಪ್ರಾಪ್ತಿ
೧೦. ಸುಗಂಧದ್ರವ್ಯಗಳು–ಸುಖಪ್ರಾಪ್ತಿ, ಮುಕ್ತಿ–ಲಾಭ
೧೧. ಶತ್ರುಜಯ, ಶತ್ರುತಾಪನ, ವಿದ್ವತ್‌ಪ್ರಾಪ್ತಿ
೧೨. ಕ್ಲೇಶನಾಶ, ಭಕ್ತಿಸಿದ್ಧಿ
೧೩. ಶತ್ರುಜಯ, ಕ್ಲೇಶನಾಶ, ಶತ್ರುಮಾರಣ
೧೪. ಶಾಶ್ವತಭಕ್ತಿಪ್ರಾಪ್ತಿ, ಬಂಧುಪ್ರಾಪ್ತಿ

೧೫. ವಾಯ್ವನುಗ್ರಹಪ್ರಾಪ್ತಿ, ಶ್ರೇಷ್ಠಸಿದ್ಧಿ, ಭಕ್ತಿವೃದ್ಧಿ, ರಕ್ಷಣೆ

೧೬. ಯೋಗ್ಯತಾಭಿವ್ಯಕ್ತಿ, ತತ್ವಜ್ಞಾನ-ಸುಖಪ್ರಾಪ್ತಿ

೧೭. ಬ್ರಹ್ಮಚರ್ಯಸಿದ್ಧಿ, ಸಾಮರ್ಥ್ಯ-ಜ್ಞಾನ-ಭಕ್ತಿ-ಲಾಭ, ಅಜ್ಞಾನ-ಅನಿಷ್ಟನಾಶ

೧೮. ಪೌರುಷಪ್ರಾಪ್ತಿ, ಭಕ್ತಿಸಿದ್ಧಿ, ವಿಕ್ರಮ-ಗಮನಸಿದ್ಧಿ

೧೯. ಕೌಶಲಪ್ರಾಪ್ತಿ, ಕಾರ್ಯಜಯ

೨೦. ಅಭೀಷ್ಟಪ್ರಾಪ್ತಿ, ಶತ್ರುನಾಶ

೨೧. ಮೃಷ್ಟಾನ್ನಲಾಭ, ಆನಂದಪ್ರಾಪ್ತಿ, ಶಾಂತಿ-ಪ್ರಸನ್ನತೆಯ ಲಾಭ

೨೨. ವಿಘ್ನಪರಿಹಾರ, ಶತ್ರುನಾಶ, ಶೋಕನಾಶ

೨೩. ಶತ್ರುನಾಶ, ಪ್ರಸನ್ನತೆ-ಯಜ್ಞಪ್ರಾಪ್ತಿ

೨೪. ಆನಂದ-ಭಕ್ತಿ-ಉದ್ದಾಮವಿಕ್ರಮ ಕೀರ್ತಿಸಿದ್ಧಿ

೨೫. ಹೃದ್ರೋಗ ಪರಿಹಾರ, ಅಜ್ಞಾನನಾಶ, ಕವಿತ್ವಪ್ರಾಪ್ತಿ, ಅಮಂಗಳನಾಶ.

೨೬. ಕ್ಷೇಮ, ಜ್ಞಾನಾನಂದಪ್ರಾಪ್ತಿ

೨೭. ಮಾರ್ಗದಲ್ಲಿ ಶುಭಪ್ರಾಪ್ತಿ, ಶತ್ರುಮೋಹನ, ಪೂರ್ಣಜ್ಞಾನಸಿದ್ಧಿ

೨೮. ಪ್ರಿಯಾಪ್ರೀತಿಲಾಭ, ಶತ್ರುನಾಶ

೨೯. ಶಾಸ್ತ್ರಪ್ರಾಪ್ತಿ, ಶತ್ರುನಾಶ

೩೦. ಪ್ರಮೇಯ ಪ್ರಾವೀಣ್ಯ, ಪ್ರತಿವಾದಿಜಯ

೩೧. ಶತ್ರೂಚ್ಚಾಟನೆ, ವ್ಯಾಖ್ಯಾನಸಿದ್ಧಿ

೩೨. ಸುಖ-ಜ್ಞಾನ-ಶಕ್ತಿಪ್ರಾಪ್ತಿ, ಅಪಮೃತ್ಯುಪರಿಹಾರ, ಜಗತ್‌ವಶ್ಯ

೩೩. ಮಧ್ವದರ್ಶನ, ದುರಿತನಾಶ, ಆನಂದಪ್ರಾಪ್ತಿ

೩೪. ಆಚಾರಪ್ರಾಪ್ತಿ, ಶ್ರವಣಭಾಗ್ಯ, ವ್ಯಾಖ್ಯಾನಕೌಶಲ ಸಿದ್ಧಿ

೩೫. ಅಧಿಕಾರಪ್ರಾಪ್ತಿ, ನರ್ತನ-ಸಂಗೀತ ವಿದ್ಯಾಪ್ರಾಪ್ತಿ

೩೬. ಸಂಸಾರನಾಶ, ಪುತ್ರಾದಿರಕ್ಷಕಪ್ರಾಪ್ತಿ

೩೭. ಗುರುಪ್ರಾಪ್ತಿ, ವಿದ್ಯಾಪ್ರಾಪ್ತಿ

೩೮. ವೇದಾಂತಜ್ಞಾನ ಲಾಭ, ಕಾರ್ಯಸಿದ್ಧಿ

೩೯. ಶಾಸ್ತ್ರಾರ್ಥಪ್ರಕಾಶ, ಸಂನ್ಯಾಸಪ್ರಾಪ್ತಿ, ಕ್ಷೇತ್ರದರ್ಶನ

೪೦. ಶ್ರೀಆನಂದಜ್ಞಾನ ಸಿದ್ಧಿ, ಸಂಸಾರನಾಶ

೪೧. ಮುಕ್ತಿಸಿದ್ಧಿ, ಭಕ್ತಿ-ಜ್ಞಾನ-ವೈರಾಗ್ಯ ಸಿದ್ಧಿ

ಇನ್ನೂ ಅನೇಕ ಮುಖದ ಪ್ರಯೋಜನದಲ್ಲಿ ವಾಯುಸ್ತುತಿ ಬಹಳ ಪ್ರಯೋಜನ ಕಾರಿ. ಜೀವೋತ್ತಮನಿಂದ ಎಲ್ಲವೂ ಎಲ್ಲ ಜೀವರಿಗೂ ಲಭಿಸುವಂತಹದು. ಇಲ್ಲಿ ಶತ್ರುಗಳು ಬಾಹ್ಯಕ್ಕಿಂತ ಮೊದಲು ಒಳಗಿನವರು. 'ವಿದ್ಯೆ' ಎಂದರೆ ಜೀವನನ್ನು ಸಾಧನೆಯಲ್ಲಿ ಎತ್ತರಕ್ಕೇರಿಸುವಂತಹದು.[1]

* * *

## ಉಪಾಸನೆಗನುಗುಣವಾದ ಫಲ

ತ್ರಿವಿಕ್ರಮಪಂಡಿತರ ಮೂಲಕ ಬೆಳಕಿಗೆ ಬಂದ 'ವಾಯುಸ್ತುತಿ'ಯು, ಐತಿಹ್ಯ ಪ್ರತಿಪಾದಿಸುತ್ತಿರುವಂತೆ ವಾಯುದೇವರು ತಮ್ಮ ಹನೂಮಂತ, ಭೀಮಸೇನ ಹಾಗೂ ಮಧ್ವ ರೂಪಗಳಿಂದ ರಾಮಚಂದ್ರ, ಕೃಷ್ಣ, ವೇದವ್ಯಾಸರನ್ನು ಕ್ರಮವಾಗಿ ಅರ್ಚಿಸುತ್ತಿರುವುದನ್ನು ಕಂಡಾಗ ಸ್ಫುರಣಗೊಂಡದ್ದು. ತ್ರಿವಿಕ್ರಮ ಪಂಡಿತರು ಭಗವಂತನ ರಾಮ, ಯಾದವಕೃಷ್ಣ ಹಾಗೂ ವಾಸಿಷ್ಠಕೃಷ್ಣ –ಈ ಮೂರು ರೂಪಗಳನ್ನು ಸೇವಿಸುವ ಆಂಜನೇಯ, ಭೀಮಸೇನ ಹಾಗೂ ಮಧ್ವರೂಪಗಳನ್ನು ಬಹಳ ಭಕ್ತಿಯಿಂದ ಸೇವಿಸುತ್ತಿರುವುದನ್ನು ಒಮ್ಮೆ ಕಂಡು ಪರಮಾನಂದಮಗ್ನರಾಗಿ ವಾಯುಸ್ತುತಿಯನ್ನು ರಚಿಸಿದರೆಂದು ತಿಳಿಸುವ ಪ್ರಸಿದ್ಧವಾದ ಶ್ಲೋಕಗಳೆರಡು ಹೀಗಿವೆ–

**ಅದ್ರಾಕ್ಷೀತ್ ತ್ರೀಣಿ ರೂಪಾಣಿ ಕದಾಚಿದ್ ಬಹುಭಾಗ್ಯವಾನ್ ।**
**ಶ್ರೀಮದಾಚಾರ್ಯವರ್ಯಾಣಾಂ ತಥಾ ರಾಮಸ್ಯ ಕೃಷ್ಣಯೋಃ ॥**

**ತತ್ರಾಪಿ ಗುರುಭಿಃ ಸೇವ್ಯಮಾನಾನಿ ಪರಮಾದರಾತ್ ।**
**ಪರಮಾನಂದಮಗ್ನೋಽಸೌ ಚಕ್ರೇ ವಾಯುಸ್ತುತಿಂ ಸುಧೀಃ ॥**

ಆದುದರಿಂದಲೇ ಈ ವಾಯುಸ್ತುತಿ ಮಂತ್ರತುಲ್ಯ ಎಂದು ಪರಿಗಣಿತವಾಗಿದೆ. ನಲ್ವತ್ತೊಂದು ಶ್ಲೋಕಗಳನ್ನೊಳಗೊಂಡ ಈ ಸ್ತೋತ್ರದ ಪ್ರತಿಯೊಂದು ಶ್ಲೋಕವೂ ಉಪಾಸಕರಿಗೆ ಅಭೀಷ್ಟಫಲವನ್ನು ನೀಡಬಲ್ಲದು. ಇದನ್ನು ಪುರಶ್ಚರಣಪದ್ಧತಿಗೆ ಅಳವಡಿಸಿಕೊಂಡು ಉಪಾಸನೆ ನಡೆಸುವ ಕ್ರಮ ಚಾಲ್ತಿಗೆ ಬಂದಿದೆ.

**ಶ್ರೀ ವಾದಿರಾಜತೀರ್ಥರು ಜ್ವಲಂತ ನಿದರ್ಶನ:** ಪುರಶ್ಚರಣೆಯ ಪ್ರಕ್ರಿಯೆಗೆ ಒಳಪಡಿಸಿ ವಾಯುಸ್ತುತಿಯ ಮೂಲಕ ಅನೇಕ ಸಾಧಕರು ಅಭೀಷ್ಟಫಲಗಳನ್ನು ಪಡೆದುಕೊಂಡದ್ದಿದೆ. ಈ ನಿಟ್ಟಿನಲ್ಲಿ ಜ್ವಲಂತ ನಿದರ್ಶನ –ಶ್ರೀ ವಾದಿರಾಜಸ್ವಾಮಿಗಳು. ಅವರು

1. ವಿದ್ವಾನ್ ಉಡುಪಿ ರಾಮನಾಥಾಚಾರ್ಯರ ಈ ಲೇಖನ 'ಪವನವಿಜಯ' ಸ್ಮರಣ ಸಂಚಿಕೆಯಲ್ಲಿ ಪ್ರಕಟವಾದದ್ದು.

ತಮ್ಮ ಎರಡು ಟಿಪ್ಪಣಿ ಕೃತಿಗಳಲ್ಲಿ ತಾವು ವಾಯುಸ್ತುತಿಯ ಮೂಲಕ ಉಪಾಸನೆ ನಡೆಸಿರುವ ಫಲವಾಗಿಯೇ ಆಚಾರ್ಯರ ಗ್ರಂಥಗಳಿಗೆ ವಿಶಿಷ್ಟ ರೀತಿಯಿಂದ ವ್ಯಾಖ್ಯಾನಿಸುವ ಕೌಶಲವನ್ನು ಪಡೆದುಕೊಂಡಿರುವಂತಹದ್ದೆಂದು ಸಾರಿರುವರು.

* **ಮಾಧ್ವಗ್ರಂಥಸ್ಯಾಭಿಸಂಧಿಂ ವಿದುರ್ದೇವಾ ನ ಮಾನವಾಃ ।**
**ವಾಯುಸ್ತುತಿರತಿರ್ನಿತ್ಯಂ ವೇದಾಹಂ ಚ ಕಥಂಚನ ॥**

ಮ.ಭಾರ.ತಾ.ನಿರ್ಣಯ, ಭಾವಪ್ರಕಾಶಿಕಾ (ಉಪಸಂಹಾರದಲ್ಲಿ)

ಶ್ರೀ ಮಧ್ವರ ಗ್ರಂಥಗಳ ಆಂತರ್ಯವನ್ನು ದೇವತೆಗಳಷ್ಟೇ ಬಲ್ಲರು. ಮಾನವರಿಗೆ ತಿಳಿಯಲಾರದು. (ನಾನು ಮಾನವನೇ ಆಗಿದ್ದರೂ) 'ವಾಯುಸ್ತುತಿ'ಯನ್ನು ನಿತ್ಯ ಉಪಾಸನೆ ಮಾಡುತ್ತಿರುವುದರಿಂದಾಗಿ ಮಧ್ವರ ಗ್ರಂಥಗಳ ಆಂತರ್ಯವನ್ನು ಬಲ್ಲವನಾಗಿರುವೆನು.

- **'ಇದಂ ಚ..... ಮಮ ಹೃದಿ ಸ್ಥಿತ್ವಾ ಮಾಮನುದಿನಂ ಪ್ರೇರಯತಃ' 'ಅಯಮಿಹ ಸುಮತಿಂ ವಾಯುದೇವೋ ವಿದಧ್ಯಾತ್' ಇತಿ ಮಯಾ ಸ್ತೂಯಮಾನಸ್ಯ ಪವನಸ್ಯ ಗುರೋ-ರೇವಾಭಿಸಂಧಿರಿತ್ಯನುಸಂಧೇಯಮ್'** –ಈಶಾವಾಸ್ಯೋಪನಿಷತ್ ಪ್ರಕಾಶಿಕಾ. ಮಂತ್ರಗಳಿಗೆ ತಿಳಿಸಿರುವ ಅಭಿಪ್ರಾಯವಿಶೇಷ ಮಧ್ವಗುರುಗಳಿಗೇ ಸೇರಿದ್ದೆಂದು ತಿಳಿಸಲಾಗುವ ಈ ಮಾತಿನಲ್ಲಿ ವಾಯುಸ್ತುತಿಯ **'ಉದ್ಯದ್‌ವಿದ್ಯುತ್‌ಪ್ರಚಂಡಾಂ....'** ಎಂಬ ಶ್ಲೋಕ, ಅದರಲ್ಲೂ **'ಅಯಮಿಹ ಸುಮತಿಂ ವಾಯುದೇವೋ ವಿದಧ್ಯಾತ್'** –ಎಂಬ ಮಾತು ವಿಶೇಷವಾಗಿ ಉಪಾಸನೆಗಾಗಿ ವಿನಿಯೋಗಿಸಲ್ಪಡುತ್ತಿತ್ತೆಂದು ತಿಳಿದುಬರುವುದು.

**ಹರಿವಾಯುಗಳಿಂದಲೇ ಫಲಪ್ರದಾನ:** ವಾಯುಸ್ತುತಿ ಪುರಶ್ಚರಣೆಯಿಂದ ಫಲ ದೊರಕುವುದೆಂದರೆ, ಆ ಫಲಕ್ಕೆ ವಾಯುಸ್ತುತಿ ಪುರಶ್ಚರಣೆಯೇ ಪ್ರಯೋಜಕ ಎಂದು ಭಾವಿಸುವುದುಂಟು. ಆದರೆ ಯಾವುದೇ ಅಚೇತನ ಎಂದೂ ಫಲ ನೀಡುವುದೇ ಇಲ್ಲ. ಔಷಧಾದಿ ಜಡಗಳಲ್ಲಿ ಇರುವ ಅಭಿಮಾನಿದೇವತೆಗಳಷ್ಟೇ ಆಯಾ ಅಚೇತನವಸ್ತುವಿನ ಮಾಧ್ಯಮದಲ್ಲಿ ಫಲ ಕೊಡುವುದೆಂದು 'ಉಪಾಸನಾಲಕ್ಷಣ' ಗ್ರಂಥ (ಛಾಂ.ಉ.ಭಾ. 7-1-2) ಸಾರಿದೆ–

**ನ ಹ್ಯಚೇತನಕಂ ಕಿಂಚಿತ್ ಫಲದಂ ಸ್ಯಾತ್ ಕದಾಚನ ।**
**ಔಷಧಾದಿಷು ಚೈತಸ್ಮಾದ್ ದೇವಾ ಏವ ವರಪ್ರದಾಃ ॥**

ಜಡವೆನಿಸಿರುವ ಯಾವುದೇ ವಸ್ತು ಎಂದೂ ಯಾವುದೇ ಫಲವನ್ನು ನೀಡುವುದಿಲ್ಲ. ಆದುದರಿಂದ ಜಡಗಳಾದ ಔಷಧಾದಿಗಳಿಂದ ದೊರಕುವ ಫಲ ಆಯಾ ಔಷಧಾದಿಗಳ ಅಭಿಮಾನಿದೇವತೆಗಳಿಂದ ಕೊಡಲ್ಪಡುವವುಗಳಷ್ಟೇ.

ಆದುದರಿಂದ ವಾಯುಸ್ತುತಿ ಪುರಶ್ಚರಣೆಯಿಂದ ಫಲ ದೊರಕುವುದೆಂದರೆ, ಪುರಶ್ಚರಣೆಯಿಂದಾಗಿ ಪ್ರಸನ್ನರಾಗುವ ಹರಿಗುರುಗಳೇ ಆ ಫಲವನ್ನು ನೀಡಿರುವರೆಂದರ್ಥ. ಪುರಶ್ಚರಣೆಯಿಂದ ಹರಿಗುರುಗಳು ಪ್ರಸನ್ನರಾಗಬೇಕೆಂದರೆ ಜ್ಞಾನಭಕ್ತಿಪೂರ್ವಕವಾಗಿಯೇ ಪುರಶ್ಚರಣೆಯನ್ನು ನಡೆಸಬೇಕು. ಹರಿಗುರುಗಳ ಮಹಿಮೆಗಳನ್ನು, ಉಪಕಾರವನ್ನು ಚೆನ್ನಾಗಿ ವಿಶ್ಲೇಷಿಸಿಕೊಳ್ಳುವುದು 'ಜ್ಞಾನ' ಎನಿಸಿದರೆ, ಅಂತಹ ಜ್ಞಾನದಿಂದಾಗಿ ಉಂಟಾಗುವ

ಗೌರವ ಭಾವನೆ 'ಭಕ್ತಿ' ಎನಿಸುವುದು. ಪುರಶ್ಚರಣೆಗೆ ಯಾವ ಶ್ಲೋಕವನ್ನು ವಿನಿಯೋಗಿಸಿಕೊಳ್ಳಲಾಗುವುದೋ, ಅದರಲ್ಲಿ ಪ್ರಸ್ತುತಗಳಾದ ಗುಣಧರ್ಮಗಳ ಜ್ಞಾನವೇ ಪುರಶ್ಚರಣೆಯ ಅವಧಿಯಲ್ಲಿ ಇರಬೇಕಾದ ಅಧಿಕೃತಜ್ಞಾನ ಎನಿಸುವುದು. ಅದರಿಂದಾಗಿ ಉಂಟಾಗುವ ಗೌರವಭಾವನೆಯೇ ಅಧಿಕೃತಭಕ್ತಿ ಎನಿಸುವುದು. ಹೀಗೆ ಆಯಾ ಶ್ಲೋಕದ ಮಾಧ್ಯಮದಲ್ಲಿ ನಡೆಸಲಾಗುವ ಪುರಶ್ಚರಣೆಯ ಅವಧಿಯಲ್ಲಿ ಇರಬೇಕಾದ ಅಧಿಕೃತಗಳಾದ ಜ್ಞಾನ-ಭಕ್ತಿಗಳಿಂದಾಗಿ ಆಯಾ ಪುರಶ್ಚರಣೆಯಲ್ಲಿ ತೀವ್ರವಾಗಿ ತನ್ನನ್ನು ತೊಡಗಿಸಿಕೊಳ್ಳಲೂ ಅನುಕೂಲವಾಗುವುದು.

**ತಂ ಯಥಾ ಯಥಾ ಉಪಾಸತೇ.....** ಉಪಾಸನೆಗೆ ಸಂಬಂಧಿಸಿದಂತೆ ಶ್ರೀ ಮಧ್ವ ಗುರುಗಳಿಂದ ಅಲ್ಲಲ್ಲಿ ಉದಾಹರಿಸಲ್ಪಡುವ ನಿಯಮ-

**'ತಂ ಯಥಾಯಥಾ ಉಪಾಸತೇ ತದೇವ ಭವತಿ'**. ಅನಂತಕಲ್ಯಾಣಗುಣಗಳ ಕಡಲಾದ ಭಗವಂತನ ಅಂತಹ ಗುಣರಾಶಿಯಲ್ಲಿ ಯಾವ ಗುಣರತ್ನವನ್ನು ಹೆಕ್ಕಿ ವಿಶೇಷವಾಗಿ ಉಪಾಸಿಸಲ್ಪಡುವುದೋ ಆ ಉಪಾಸನೆಗನುಗುಣವಾಗಿ ಉಪಾಸಕನಿಗೆ ಅವನ ಯೋಗ್ಯತಾನುಗುಣವಾಗಿ ಫಲ ದೊರಕುವುದು. ಅಂದರೆ ಆ ಉಪಾಸನೆಯಿಂದ ಪ್ರಸನ್ನನಾಗುವ ಭಗವಂತನು ಅಂತಹ ಫಲವನ್ನೇ ಅನುಗ್ರಹಿಸುವನು. ಇದೊಂದು ಮಾನಸಿಕ ಪ್ರತಿಕ್ರಿಯೆ. ಯಾವ ಧರ್ಮವನ್ನು ಎತ್ತಿ ಹೊಗಳುತ್ತಿರುವುದನ್ನು, ಉಪಾಸಿಸುವುದನ್ನು ಮನಸ್ಸು ಗಮನಿಸುವುದೋ ಅಂತಹ ಧರ್ಮವನ್ನೇ ಅವನಿಗೆ ಕೊಟ್ಟು ಬಿಡಲು ಮುಂದಾಗುವುದು ಮನಸ್ಸಿನ ಸಹಜವಾದ ಪ್ರವೃತ್ತಿ.

**ಪುರಶ್ಚರಣೆಗೆ ಸಂಬಂಧಿಸಿದಂತೆ:** ವಾಯುಸ್ತುತಿಯ ಪುರಶ್ಚರಣೆಯಲ್ಲಿ ತೊಡಗುವಾಗಲೂ ಈ ನಿಯಮವನ್ನು ಗಮನಿಸಬೇಕಾದದ್ದು. ಭಗವಂತನ ಅನುಗ್ರಹದಿಂದಾಗಿ ವಾಯುದೇವನಲ್ಲಿ ಯಾವ ಗುಣಧರ್ಮ ವಿಶೇಷವಾಗಿ ನೆಲೆವೂರಿದೆ ಎಂದು ವಿಶೇಷವಾಗಿ ಚಿಂತಿಸುವೆವೋ, ಅದರಿಂದಾಗಿ ಪ್ರಸನ್ನರಾಗುವ ಹರಿಗುರುಗಳಿಂದ ಆ ಗುಣಧರ್ಮವೇ ನಮ್ಮ ಯೋಗ್ಯತಾನುಸಾರವಾಗಿ ಅನುಗ್ರಹಿಸಲ್ಪಡುವವು.

ವಾಯುದೇವ ಮೂರು ಬಗೆಯ ಜೀವರಿಗೆ ಮೂರು ಬಗೆಯ ಗತಿಗಳನ್ನು ನೀಡುವನು; ರಾಜಸರಿಗೆ ನಿತ್ಯಸಂಸಾರವನ್ನು ನೀಡುವನು; ತಾಮಸರನ್ನು ಅಂಧಂತಮಸ್ಸಿನಲ್ಲಿ ಬೀಳಿಸಿ ಅವರಿಗೆ ದುಃಖವನ್ನು ಹೊಂದಿಸುವನು -ಮುಂತಾದ ವಾಯುದೇವನ ಮಹಿಮೆಗಳ, ಲೀಲೆಗಳ ಉಲ್ಲೇಖವುಳ್ಳ ಶ್ಲೋಕಗಳ ಉಪಾಸನೆಯಿಂದ **'ತಂ ಯಥಾ ಯಥಾ ಉಪಾಸತೇ ತದೇವ ಭವತಿ'** -ಉಪಾಸನೆಗನುಗುಣವಾಗಿ ಫಲಪ್ರಾಪ್ತಿ -ಎಂಬ ನಿಯಮಾನುಸಾರ ಫಲದ ಪ್ರಾಪ್ತಿ ಅಲ್ಲ; ಬದಲಾಗಿ ಯಾವ ಮಹಿಮೆಯನ್ನು ಉಪಾಸಿಸಲಾಗುವುದೋ ಆ ಉಪಾಸನೆಗೆ ಪರಂಪರಯಾ ಸಂಬಂಧಿಸುವ ಫಲ ಉಪಾಸಕನಿಗೆ ದೊರಕುವುದು. ಹೇಗೆ 'ಜಾರತ್ವದಿ ಮಾಡಿದ ಪಾಪಗಳಿಗೆಲ್ಲ ಹೇ ಗೋಪೀಜನಜಾರ ಎಂದರೆ ಸಾಲದೇ?' ಎಂಬುದಾಗಿ ಗೋಪೀಜನಜಾರ ಎಂಬ ಉಪಾಸನೆಯ ಫಲವಾಗಿ ಜಾರತ್ವ ಪ್ರಯುಕ್ತ ಪಾಪಗಳ ಪರಿಹಾರವಾಗುವುದೆಂದು ಒಪ್ಪಿಕೊಳ್ಳಲಾಗಿದೆಯೋ ಹಾಗೆ. ಆದ್ದರಿಂದ ತ್ರಿವಿಧ

ಜೀವರಿಗೆ ಮೂರು ಬಗೆಯ ಗತಿಗಳನ್ನು ನೀಡುವವನೆಂದು ಮುಖ್ಯಪ್ರಾಣನ ಉಪಾಸನೆ ಮಾಡಿದರೆ ಅದರ ಫಲವಾಗಿ ನಿತ್ಯಸಂಸಾರವಾಗಲೀ, ಅಂಧಂತಮಸ್ಸಾಗಲೀ ದೊರಕದೆ ಮೋಕ್ಷ ದೊರಕುವುದು –ಇತ್ಯಾದಿಯಾಗಿ. ಉಪಾಸನೆಗೆ ದೂರದಿಂದ ಸಂಬಂಧಿಸುವ ಯಾವುದಾದರೊಂದು ಫಲ ದೊರಕುವುದೆಂದು ತೀರ್ಮಾನಿಸಬಹುದಾಗಿದೆ.

ಹಾಗೆಯೇ ವಾಯುದೇವನ ಹನೂಮದವತಾರ ಹಾಗೂ ಭೀಮಾವತಾರಗಳಲ್ಲಿ ಅಸುರರ, ದುಷ್ಟರ ನಿಗ್ರಹದ ಮಹಿಮೆಯ ಉಪಾಸನೆಯ ಫಲವಾಗಿ ಕಾಮಕ್ರೋಧಾದಿ ಆಂತರಿಕ ದೋಷಗಳಿಗೆ ಅಭಿಮಾನಿಗಳಾಗಿದ್ದು ಪ್ರೇರಕರಾಗಿರುವ ಆಸುರೀಶಕ್ತಿಗಳ ನಿಗ್ರಹಕ್ಕೆ ಬೇಕಾದ ತಾಕತ್ತು ಹಾಗೂ ನಮ್ಮ ಬದುಕಿಗೆ, ಸಾಧನಾನುಷ್ಠಾನಕ್ಕೆ ತೊಂದರೆ ಉಂಟು ಮಾಡುವ ಹೊರಗಿನ, ಶತ್ರುಗಳನ್ನು ದುಷ್ಟರನ್ನು ಎದುರಿಸುವ ಸಾಮರ್ಥ್ಯವು ಸಿದ್ಧಿಸ ಬಲ್ಲದು.

● ಶ್ಲೋಕವೊಂದರಲ್ಲಿ ಪ್ರಾಸಂಗಿಕವಾಗಿ ಬೇರೆ ಬೇರೆ ವಿಶೇಷಣಗಳು ನೀಡಲ್ಪಟ್ಟಿದ್ದರೂ ನಾವು ಬಯಸುವ ಫಲಕ್ಕೆ ಸಂಬಂಧಿಸುವ ವಿಶೇಷಣದ ಬಗ್ಗೆ ಹೆಚ್ಚು ಗಮನಹರಿಸ ಬೇಕು. ಆ ವಿಶೇಷಣಕ್ಕೆ ಸಂಬಂಧಿಸಿ ಹರಿವಾಯುಗಳ ಮಹಿಮೆಯನ್ನು ವ್ಯಾಪಕವಾಗಿ ಚಿಂತಿಸಬೇಕು.

ನಿರ್ದಿಷ್ಟವಾದ ಯಾವುದಾದರೊಂದು ಫಲದ ಉದ್ದೇಶದಿಂದ ವಾಯುಸ್ತುತಿಯ ಪುರಶ್ಚರಣೆ ನಡೆಸುವಾಗ ಶಾಸ್ತ್ರೀಯವಾದ, ಸಾರ್ವತ್ರಿಕವಾದ ಈ ಎರಡು ವಿಚಾರಗಳನ್ನು ಗಮನಿಸದೆ ಇರಬಾರದು–

೧. ಯಾವ ಗುಣಕ್ಕೆ ಮಹಿಮೆಗೆ ಸಂಬಂಧಿಸಿದ ಶ್ಲೋಕದಿಂದ ಪುರಶ್ಚರಣೆ ನಡೆಸಲಾಗು ವುದೋ ಆ ಗುಣ ಅಥವಾ ಮಹಿಮೆ ಮೂಲತಃ ವಾಯುದೇವನ ಬಿಂಬರೂಪಿ ಯಾದ ಭಗವಂತನಲ್ಲಿ ಇದ್ದು, 'ಆಭಾಸಕೋಽಸ್ಯ ಪವನಃ' –ಎಂದಿರುವಂತೆ ಅವನ ಪ್ರತಿಬಿಂಬನಾದ ವಾಯುದೇವನಲ್ಲಿ ಅವನ ಅನುಗ್ರಹದಿಂದಾಗಿಯಷ್ಟೇ ಅವನ ಯೋಗ್ಯತಾನುಸಾರ ಆ ಗುಣ, ಆ ಮಹಿಮೆ ವಾಯುದೇವನಲ್ಲಿ ಪ್ರತಿಫಲಿತವಾಗಿದೆ ಯಷ್ಟೇ.

೨. ಪರಮಪುರುಷಾರ್ಥವಾದ ಮೋಕ್ಷಕ್ಕೆ ನೇರವಾಗಿ ಸಾಧನಗಳಾದ ಭಕ್ತಿ–ಜ್ಞಾನ–ವೈರಾಗ್ಯಗಳಷ್ಟೇ ಮುಖ್ಯವಾಗಿ ಪ್ರಾರ್ಥಿಸಲ್ಪಡಬೇಕಾಗಿದ್ದು, ಅಂತಹ ಭಕ್ತ್ಯಾದಿಗಳಿಗೆ ಪೋಷಕಗಳಾಗಿಯಷ್ಟೇ ಆರೋಗ್ಯ, ನೆಮ್ಮದಿ ಇತ್ಯಾದಿ ಫಲಗಳು ಪ್ರಾರ್ಥಿಸಲ್ಪ ಡುತ್ತಿವೆ.

## ಯಾವ ಶ್ಲೋಕದಿಂದ ಯಾವ ಫಲ?

ಈ ಎರಡು ಪ್ರಮುಖ ವಿಚಾರಗಳನ್ನು ಮರೆಯದೆ ವಾಯುಸ್ತುತಿಯ ಯಾವ ಶ್ಲೋಕ ಯಾವ ಫಲಕ್ಕೆ ಪ್ರಯೋಜಕವಾಗುವುದು? ಆ ಶ್ಲೋಕ ಆ ಫಲಕ್ಕೆ ಪ್ರಯೋಜಕ ವಾಗಲು ಆ ಶ್ಲೋಕದ ಯಾವ ಮಾತಿಗೆ ಹೆಚ್ಚು ಗಮನ ಕೊಡಬೇಕು? ಯಾವ ವಿಶೇಷಣ ವನ್ನು ವ್ಯಾಪಕವಾಗಿ ಚಿಂತಿಸಬೇಕು? ಎಂದು ಪರಿಶೀಲಿಸೋಣ.

## ಒಂದನೇ ಶ್ಲೋಕದ ಫಲಶ್ರುತಿ

**ವೈಷ್ಣವನಿಷ್ಠೆ, ಗುರುಪದವಿಯ ಪ್ರಾಪ್ತಿ, ವಾಗ್ಮಿತ್ವದ ಸಿದ್ಧಿ, ವಿದ್ಯಾರ್ಜನ ಕೌಶಲ**

'ಶ್ರೀಮದ್ವಿಷ್ಣ್ವಂಘ್ರಿನಿಷ್ಠಾ.....' –ಎಂಬುದಾಗಿ ಶ್ರೀಮದಾನಂದತೀರ್ಥರ ವೈಷ್ಣವನಿಷ್ಠೆಯ ವರ್ಣನೆಯೊಂದಿಗೇ ಪ್ರಾರಂಭವಾಗುವ ವಾಯುಸ್ತುತಿಯ ಮೊದಲ ಶ್ಲೋಕದಲ್ಲಿ ಆಚಾರ್ಯರ ವೈಷ್ಣವನಿಷ್ಠೆಯ ಮಹತ್ತ್ವ, ಅದರಿಂದಾಗಿ ಅವರು ತ್ರೈಲೋಕ್ಯಾಚಾರ್ಯರಾಗಿ ಮೆರೆಯುತ್ತಿರುವುದು, ವಾಗಭಿಮಾನಿನಿಯಾದ ಶಾರದಾದೇವಿ ಅವರ ಬಗ್ಗೆ ತಾಳಿರುವ ಪ್ರೇಮಾತಿಶಯ –ಇವಿಷ್ಟರ ಉಲ್ಲೇಖ ಬರುವುದರಿಂದ ಈ ಶ್ಲೋಕದ ಉಪಾಸನೆಯಿಂದ ವೈಷ್ಣವನಿಷ್ಠೆಯೇ ಮುಂತಾದ ಫಲಗಳನ್ನು ಹೊಂದಬಹುದಾಗಿದೆ.

## ಎರಡನೇ ಶ್ಲೋಕದ ಫಲಶ್ರುತಿ

**ಗುರುಭಕ್ತಿ, ಪ್ರಜ್ಞಾವೃದ್ಧಿ, ಅಜ್ಞಾನ-ವಿಪರೀತಜ್ಞಾನಗಳ ಪರಿಹಾರ, ದೇವತೆಗಳ ಸೌಮನಸ್ಯ**

'ಉತ್ಕಂಠಾಕುಂಠಕೋಲಾಹಲ.....' ಇತ್ಯಾದಿಯಾಗಿ ಶ್ರೀ ಮಧ್ವರ ಪಾದಸೇವೆಗಾಗಿ ಹಾತೊರೆಯುತ್ತಿರುವ ದೇವತೆಗಳ ಗುರುಭಕ್ತಿಯ ವರ್ಣನೆಯೊಂದಿಗೆ ಪ್ರಾರಂಭವಾಗುವ ಎರಡನೇ ಶ್ಲೋಕದಲ್ಲಿ ಮಧ್ವರ ಬಗ್ಗೆ ಅಳವಡಿಸುವ ಸೇವೆಯಿಂದಾಗಿ ದೇವತೆಗಳಲ್ಲಿ ಆಗುವ ಪ್ರಜ್ಞಾವೃದ್ಧಿ, ಇದರಿಂದಾಗಿ ಅಜ್ಞಾನ, ವಿಪರೀತಜ್ಞಾನಗಳ ಪರಿಹಾರ, ಮಧ್ವರ ವಿಷಯ ದಲ್ಲಿ ದೇವತೆಗಳು ತೋರಿಸುವ ಭಕ್ತ್ಯತಿಶಯ –ಇವುಗಳ ವರ್ಣನೆ ಬಂದಿರುವುದರಿಂದ, ಈ ಶ್ಲೋಕದ ಚಿಂತನೆಯಿಂದಾಗಿ ಗುರುಭಕ್ತ್ಯಾದಿಗಳು ಸಿದ್ಧಿಸುವವು.

## ಮೂರನೇ ಶ್ಲೋಕದ ಫಲಶ್ರುತಿ:

**ಆಧಿ, ವ್ಯಾಧಿಗಳ ಹಾಗೂ ವಿಘ್ನಗಳ ಪರಿಹಾರ, ಸದ್ಗುಣಗಳ ಸಿದ್ಧಿ, ಆನಂದಪ್ರಾಪ್ತಿ, ಆಂತರಿಕ ದ್ವೇಷಿಗಳ ನಾಶ.**

'ಜನ್ಮಾಧಿವ್ಯಾಧ್ಯುಪಾಧಿ......' –ಇತ್ಯಾದಿಯಾಗಿ ಹುಟ್ಟು, ಮಾನಸಿಕ ವ್ಯಥೆ, ರೋಗ ರುಜಿನಗಳು, ಮರಣ –ಇತ್ಯಾದಿಗಳನ್ನು ಒದಗಿಸಿಕೊಡುವ ಮುಖ್ಯಪ್ರಾಣದೇವರ ಮಹಿಮೆಯ ವರ್ಣನೆಯೊಂದಿಗೆ ಪ್ರಾರಂಭವಾಗುವ ಮೂರನೆಯ ಶ್ಲೋಕದಲ್ಲಿ ಮುಖ್ಯ ಪ್ರಾಣದೇವರ ಜನನಾದಿಪ್ರಾಪಕತ್ವ, ಭಕ್ತಿ, [illegible]ಾದಿಗುಣಸಂಪಾದಕತ್ವ, ದೋಷಜನಕ ಗಳಾದ ಆಸುರೀಶಕ್ತಿಗಳ ದಮನ –ಈ ಧರ್ಮಗಳ ನಿರೂಪಣೆ ನಡೆದಿರುವುದರಿಂದ, ಇಂತಹ ಶ್ಲೋಕದ ಉಪಾಸನೆಗೆ ಅನುಗುಣವಾಗಿ ಆಧಿ, ವ್ಯಾಧಿ ಪರಿಹಾರ ಇತ್ಯಾದಿ ಫಲಗಳನ್ನು ಹೊಂದಬಹುದಾಗಿದೆ.

ಮನುಷ್ಯನನ್ನು ಸಂಸಾರದಲ್ಲಿ ಮುಖ್ಯವಾಗಿ ಕಾಡುವ ಸಮಸ್ಯೆಗಳು –ರೋಗಸಮಸ್ಯೆ, ಮಾನಸಿಕ ವ್ಯಥೆಯ ಸಮಸ್ಯೆ ಹಾಗೂ ಮರಣಸಮಸ್ಯೆ. ಈ ಮೂರು ಬಗೆಯ ಸಮಸ್ಯೆಗಳಿಗೂ ಪರಿಹಾರವನ್ನು ಒದಗಿಸಿಕೊಡಬಲ್ಲದು ಈ ಶ್ಲೋಕದ ಉಪಾಸನೆ.

ಈ ಶ್ಲೋಕದ **'ಜನ್ಮಾಧಿವ್ಯಾಧ್ಯುಪಾಧಿಪ್ರತಿಹತಿವಿರಹಪ್ರಾಪಕಾಣಾಂ.....'** –ಎಂದು ಮಧ್ವಗುರುಗಳಿಗೆ ನೀಡಲಾದ ಈ ವಿಶೇಷಣಕ್ಕೆ ಒತ್ತುನೀಡಬೇಕು. ಜನ್ಮ–ಹುಟ್ಟು, ಆಧಿ–ಮಾನಸಿಕ ವ್ಯಥೆ, ವ್ಯಾಧಿ–ಬೇರೆ ಬೇರೆ ಬಗೆಯ ರೋಗಗಳು, ಉಪಾಧಿ–ಜನ್ಮಾದಿಗಳಿಗೆ ಪ್ರಯೋಜಕಗಳಾದ ಅನಾದಿಯಾದ ಅಜ್ಞಾನ, ಪ್ರಾರಬ್ಧಕರ್ಮ, ಕಾಮ ಇತ್ಯಾದಿಗಳು, ಪ್ರತಿಹತಿ–ಅವುಗಳ ಪುನಃ ಪುನಃ ಪ್ರವೃತ್ತಿ, ವಿರಹ –ಇದರ ಅಭಾವವನ್ನು ಪ್ರಾಪಕಾಣಾಂ –ತಂದುಕೊಡುವವರು ಅಥವಾ ಉಪಾಧಿ–ಜನ್ಮಾದಿಗಳಿಗೆ ಕಾರಣವಾದ ದೇಹ, ಪ್ರತಿಹತಿ –ಅದರ ನಾಶ ಅಂದರೆ ಮರಣ, ವಿರಹ ಪ್ರಾಪಕಾಣಾಂ–ಇದರ ಅಭಾವವನ್ನು ತಲುಪಿಸುವವರು, ಅಕಾಲಿಕಮರಣವನ್ನು ತಪ್ಪಿಸುವವರು. ಮಧ್ವಗುರುಗಳು ತಮ್ಮ ಮೂಲ ರೂಪದಿಂದ ನಮ್ಮ ಹುಟ್ಟು, ರೋಗ, ಮರಣಾದಿಗಳಲ್ಲಿ ಎಷ್ಟು ಪ್ರಭಾವಕಾರಿ ಪಾತ್ರವನ್ನು ವಹಿಸುತ್ತಿರುವರೆಂಬುದನ್ನು ಅನುಸಂಧಾನಕ್ಕೆ ತಂದುಕೊಂಡು, ಅಂತಹ ಅರ್ಥಾನುಸಂಧಾನ ಪೂರ್ವಕವಾಗಿ ಈ ವಿಶೇಷಣವನ್ನು ಪಠಿಸಬೇಕು.

- ಜೀವನದಲ್ಲಿ ಆಧಿಯನ್ನು –ಮಾನಸಿಕ ವ್ಯಥೆಯನ್ನು ಉಂಟುಮಾಡುವುದರಲ್ಲಿ ಕಾಮ ಕ್ರೋಧಾದಿ ದೋಷಗಳ ಪಾತ್ರ ಪ್ರಮುಖ. ಆ ದೋಷಗಳನ್ನು ನಿಯಂತ್ರಿಸುವವು ಆಸುರೀಶಕ್ತಿಗಳು– ಅವುಗಳನ್ನು ನಿಗ್ರಹಿಸಿದರಷ್ಟೇ ಅವುಗಳ ಹಿಡಿತದಲ್ಲಿರುವ ದೋಷಗಳ ಪ್ರಭಾವ ಕಡಿಮೆ ಆಗಿ ಮಾನಸಿಕ ವ್ಯಥೆ ದೂರವಾಗಬಲ್ಲದು. ಅದಕ್ಕಾಗಿಯೇ ಈ ಶ್ಲೋಕದ ಉತ್ತರಾರ್ಧದಲ್ಲಿ ದೈತ್ಯರ ನಿಗ್ರಹದ ಪ್ರಸ್ತಾವ ಬಂದಿದೆ ಎಂಬುದಾಗಿ ಅನುಸಂಧಾನ ಮಾಡಿಕೊಳ್ಳಬೇಕು.
- **'ಅಗ್ರ್ಯಾಣಾಂ ಗುಣಾನಾಮರ್ಪಕಾಣಾಂ.....'** –ಎಂಬ ವಿಶೇಷಣ ತಿಳಿಸುತ್ತಿರುವಂತೆ ಶ್ರೀಮಧ್ವರು ಹೊಂದಿಸುವ ಶ್ರೇಷ್ಠ ಗುಣಗಳಲ್ಲಿ ಭಕ್ತಿ, ಜ್ಞಾನ, ವೈರಾಗ್ಯಗಳು ಸೇರಿರುವಂತೆ, 'ಔತ್ಪತ್ತಿಕಗುಣ' ಅಂದರೆ ಗುಣಗಳ ಮೂಲಕ ಶುಭವನ್ನು ಹೊಂದಲು ಬೇಕಾದ ಮುಖ್ಯ ಯೋಗ್ಯತೆ12

ಇದು ಕೂಡಾ ಸೇರಿದ್ದು, ಇದಕ್ಕೆ ಅಭಿಮಾನಿಯಾಗಿ ಇದನ್ನು ಒದಗಿಸಿಕೊಡುವವರು ಪ್ರಾಣದೇವರು –ಎಂಬ ಅನುಸಂಧಾನವನ್ನು ತಂದುಕೊಳ್ಳಬೇಕು.

---

12. ಔತ್ಪತ್ತಿಕಗುಣೋ ನಾಮ ಶುಭಪ್ರಾಪ್ತ್ಯೈಕಯೋಗ್ಯತಾ ।
ತಸ್ಯಾಭಿಮಾನೀ ಪ್ರಾಣಸ್ತು ಸ ಹಿ ಸರ್ವಗುಣಾಧಿಕಃ । *–(ಭಾ.ತಾ.ನಿ. 11-16-10)*

* ಗುಣಿನಾಂ ಗುಣಯೋಗ್ಯತ್ವಂ ಯತ್ ಸರ್ವಗುಣಿಷು ಸ್ಥಿತಮ್ ।
ವಾಯುಸ್ತದಭಿಮಾನ್ಯೇಕಃ ಸರ್ವಗುಣ್ಯಧಿಕಸ್ತತಃ ।
*– ಪ್ರಭಂಜನ (ಭಾ.ತಾ.ನಿ. 11-16-10)*

## ನಾಲ್ಕನೇ ಶ್ಲೋಕದ ಫಲಶ್ರುತಿ

### ಕಲಿಕಾಲುಷ್ಯದ ದೂರೀಕರಣ, ಕಲಿಕಾಲಪ್ರಯುಕ್ತ ದೋಷಗಳ ಪರಿಹಾರ, ಐಹಿಕ ಹಾಗೂ ಪಾರತ್ರಿಕ ಆಪತ್ತುಗಳಿಂದ ಪಾರಾಗುವಿಕೆ

'ಅಸ್ಯಾವಿಷ್ಕರ್ತುಕಾಮಂ.....' ಇತ್ಯಾದಿಯಾಗಿ ಕಲಿಕಾಲುಷ್ಯವನ್ನು ದೂರಮಾಡಿ ಜ್ಞಾನಮಾರ್ಗವನ್ನು ಆವಿಷ್ಕರಿಸುವುದಕ್ಕಾಗಿ ಅವತರಿಸಿರುವರೆಂದು ಮಧ್ವಾವತಾರದ ಪ್ರಮುಖ ಉದ್ದೇಶವನ್ನು ಸಾರುತ್ತ ಪ್ರಾರಂಭವಾಗುವ ವಾಯುಸ್ತುತಿಯ ನಾಲ್ಕನೇ ಪದ್ಯದಲ್ಲಿ ಕಲಿಕಾಲುಷ್ಯವನ್ನು ದೂರಮಾಡುವುದೇ ಮುಂತಾದ ಫಲಗಳ ಪ್ರಸ್ತಾವ ನಡೆದಿದ್ದು ಅದಕ್ಕನುಗುಣವಾಗಿ ಉಪಾಸನೆಯ ಫಲ ಸಿದ್ಧಿಸುವುದು. 'ಪಾತಾರಂ..... ಆಪನ್ನಪುಂಸಾಂ' ಎಂಬ ವಿಶೇಷಣಕ್ಕೆ ಒತ್ತುಕೊಟ್ಟು ನಡೆಸಲಾಗುವ ಉಪಾಸನೆಯ ಫಲವಾಗಿ ಐಹಿಕ ಹಾಗೂ ಪಾರತ್ರಿಕ ಆಪತ್ತುಗಳಿಂದಲೂ ಪಾರಾಗಬಹುದು.

## ಐದನೇ ಶ್ಲೋಕದ ಫಲಶ್ರುತಿ

### ಅನ್ಯಥಾಜ್ಞಾನದ ಪರಿಹಾರ ಹಾಗೂ ಅಧ್ಯಾತ್ಮಜ್ಞಾನದ ಪ್ರೇರಕತ್ವ ಹಾಗೂ ಸಂಪಾದನೆ

'ಉದ್ಯತ್‌ವಿದ್ಯುತ್‌ಪ್ರಚಂಡಾಂ......' –ಎಂಬುದಾಗಿ ಅನ್ಯಥಾಜ್ಞಾನಕ್ಕೆ ಅಭಿಮಾನಿಯಾದ ದುರ್ಯೋಧನ ರೂಪದ ಕಲಿಯ ವಿರುದ್ಧವಾಗಿ ಎತ್ತಲಾದ ಗದೆಯ ವರ್ಣನೆಯಿಂದಲೇ ಪ್ರಾರಂಭವಾಗುವ ವಾಯುಸ್ತುತಿಯ ಐದನೇ ಶ್ಲೋಕದಲ್ಲಿ ಅನ್ಯಥಾಜ್ಞಾನಕ್ಕೆ ಅಭಿಮಾನಿ ಯಾದ ದುರ್ಯೋಧನ ರೂಪದ ಕಲಿಯ ವಿರುದ್ಧ ಗದಾಪ್ರಹಾರ, ಸುಮತಿಯ ಪ್ರದಾನ, ಅಧ್ಯಾತ್ಮಜ್ಞಾನದ ಪ್ರಣಯನ, ಯತಿವರರ ಗೌರವ ಸಂಪಾದನೆ –ಇತ್ಯಾದಿ ವಿಷಯಗಳ ಪ್ರಸ್ತಾವ ನಡೆದಿದ್ದು, ಇದರ ಉಪಾಸನೆಯಿಂದಾಗಿ ಆ ವಿಷಯಗಳಿಗನುಗುಣವಾಗಿ ಅನ್ಯಥಾಜ್ಞಾನಪರಿಹಾರ ಮುಂತಾದ ಫಲಗಳು ಸಿದ್ಧಿಸುವವು. 'ಅಧ್ಯಾತ್ಮಜ್ಞಾನನೇತಾ' ಎಂಬ ವಿಶೇಷಣಕ್ಕೆ ಒತ್ತುಕೊಟ್ಟು 'ಅಯಮಿಹ ಸುಮತಿಂ ವಾಯುದೇವೋ ವಿದಧ್ಯಾತ್' ಎಂದು ನಡೆಸಲಾಗುವ ಪ್ರಾರ್ಥನೆಯಿಂದಾಗಿ ಅಧ್ಯಾತ್ಮಜ್ಞಾನದ ಪ್ರೇರಕತ್ವದ ಜೊತೆಗೆ ಅಧ್ಯಾತ್ಮದ ಕುರಿತು ಸುಮತಿ ಸಿದ್ಧಿಸುವುದು. 'ಯತಿವರಮಹಿತಃ' –ವಿಶೇಷಣಕ್ಕೆ ಒತ್ತು ಕೊಡುವುದರಿಂದಾಗಿ ಯತಿಶ್ರೇಷ್ಠರಿಂದ ಗೌರವಿಸಿಕೊಳ್ಳುವ ಭಾಗ್ಯವೂ ದೊರಕಬಲ್ಲದು.

- ಶ್ರೀ ವಾದಿರಾಜಸ್ವಾಮಿಗಳು ಈ ಶ್ಲೋಕದ ಉಪಾಸನೆಯ ಫಲವಾಗಿಯೇ ತಾವು ಮಾಧ್ವ ಗ್ರಂಥಗಳ ವ್ಯಾಖ್ಯಾನಕೌಶಲವನ್ನು ಪಡೆದಿರುವುದೆಂದು ಘಂಟಾಘೋಷವಾಗಿ ಸಾರಿರುವರು.

## ಆರನೇ ಶ್ಲೋಕದ ಫಲಶ್ರುತಿ

ಸಾಂಸಾರಿಕ ತಾಪಪರಿಹಾರ, ವಿದ್ಯಾದಾನಕ್ಕೆ ಉಚಿತವಾದ ಮಾತುಗಾರಿಕೆ, ಸಾತ್ವಿಕ ಸಂಪತ್ತಿಗೆ ಆಶ್ರಯ, ದುರಿತಪರಿಹಾರ

'ಸಂಸಾರೋತ್ತಾಪನಿತ್ಯೋಪಶಮದ.....' ಇತ್ಯಾದಿಯಾಗಿ ಸಂಸಾರದ ತಾಪಗಳಿಗೆ ಉಪಶಮನ ನೀಡುವ ಆನಂದತೀರ್ಥಕ್ಷೀರಸಾಗರದ ವರ್ಣನೆಗೆ ಮೀಸಲಾದ ವಾಯು ಸ್ತುತಿಯ ಆರನೆಯ ಶ್ಲೋಕದಲ್ಲಿ ಆನಂದತೀರ್ಥರಿಗೆ ಕ್ಷೀರಸಾಗರದ ರೂಪಕ ಕೊಟ್ಟು, ಮಂದಹಾಸಪೂರ್ವಕವಾದ ಮಾತಿನಿಂದ ಮೂಡಿಬರುವ ವಿದ್ಯೆಯ ಬೆಳಕೇ ಕಡಲಿನ ಮಣಿಯ ಬೆಳಕು; ಶ್ರೀವತ್ಸಾಂಕನ ನೆಲೆಯ ವೈಶಿಷ್ಟ್ಯ, ಆಧ್ಯಾತ್ಮಿಕ ಸಂಪತ್ತಿನ ತಾಣ, ದುರಿತಪರಿಹಾರ –ಮುಂತಾದ ವಿಷಯಗಳನ್ನು ಪ್ರಸ್ತಾಪಿಸಲಾಗಿದ್ದು, ಇದಕ್ಕನುಗುಣವಾದ ಉಪಾಸನೆಯಿಂದಾಗಿ ಸಾಂಸಾರಿಕ ತಾಪಪರಿಹಾರ ಮುಂತಾದ ಫಲಗಳು ಸಿದ್ಧಿಸುವವು.

## ಏಳನೇ ಶ್ಲೋಕದ ಫಲಶ್ರುತಿ

ಸಾಂಸಾರಿಕ ಬಂಧನದ ಶಿಥಿಲೀಕರಣ, ಹರಿಗುರುಗಳಲ್ಲಿ ಭಕ್ತಿಯ ಸಿದ್ಧಿ

'ಮೂರ್ಧನ್ಯೇಷೋಽಂಜಲಿರ್ವೇ.....' ಎಂಬುದಾಗಿ ಭಕ್ತ್ಯಾವೇಶಕ್ಕೊಳಗಾಗಿ ಮುಖ್ಯ ಪ್ರಾಣನಿಗಾಗಿ ನೆತ್ತಿಯ ಮೇಲೆ ಕೈಜೋಡಿಸುವ ಉದ್ಗಾರದಿಂದಲೇ ಪ್ರಾರಂಭವಾಗುವ ವಾಯುಸ್ತುತಿಯ ಏಳನೇ ಪದ್ಯದಲ್ಲಿ ಸಂಸಾರಬಂಧನವನ್ನು ಭೇದಿಸುವ, ಮುಕ್ತಿಸುಖ ನೀಡುವ ಹಾಗೂ ಹರಿಗುರುಗಳಲ್ಲಿ ಭಕ್ತಿಯನ್ನು ಅನುಗ್ರಹಿಸುವ ಪ್ರಸ್ತಾವ ನಡೆದಿದ್ದು, ಅದಕ್ಕನುಗುಣವಾದ ಉಪಾಸನೆಯಿಂದಾಗಿ ಹರಿಗುರುಗಳಲ್ಲಿ ಭಕ್ತಿ ಸಿದ್ಧಿಸುವುದು. ಒಂದೇ ಜನ್ಮದಲ್ಲಿ ಸಾಂಸಾರಿಕ ಬಂಧನದ ಭೇದನ ಕಷ್ಟಸಾಧ್ಯವಾದರೂ ಆ ನಿಟ್ಟಿನಲ್ಲಿ ಸಾಧನೆ ನಡೆದು ಸಾಂಸಾರಿಕ ಬಂಧನದ ಶಿಥಿಲೀಕರಣವಾದರೂ ಸಂಭವಿಸುವುದು. ಮೋಕ್ಷಸುಖ ದೊರಕದಿದ್ದರೂ ಅದರ ಪ್ರಾಪ್ತಿಗೆ ಬೇಕಾದ ಸಾಧನಾನುಷ್ಠಾನ ನಡೆಯುವುದು.

## ಎಂಟನೇ ಶ್ಲೋಕದ ಫಲಶ್ರುತಿ

ಭಯದ ಪರಿಹಾರ; ಅನ್ಯಥಾ ಜ್ಞಾನಿಗಳಿಗೆ ಭ್ರಾಂತಿಜನಕತ್ವ

'ಸಾಭ್ರೋಷ್ಣಾಭೀಶುಶುಭ್ರಪ್ರಭಂ....' ಎಂಬುದಾಗಿ ದೇವತೆಗಳ ನಾಡೇ ಮುಂತಾದ ವುಗಳ ಸೃಷ್ಟ್ಯಾದಿಗಳನ್ನು ನಡೆಸುವ ವಾಯುದೇವನ ಮಹಿಮೆಯ ಪ್ರಸ್ತಾವವುಳ್ಳ ವಾಯುಸ್ತುತಿಯ ಎಂಟನೇ ಶ್ಲೋಕದ ಉತ್ತರಾರ್ಧದಲ್ಲಿ ಅನ್ಯಥಾಜ್ಞಾನಿಗಳಿಗೆ ಮೋಹ ವನ್ನುಂಟುಮಾಡುವ ವಾಯುದೇವನ ಮಹಿಮೆಯನ್ನು ಸಾರಲಾಗಿದೆ. ಅದರ ಆಧಾರದಲ್ಲಿ ನಡೆಸಲಾಗುವ ಉಪಾಸನೆಯಿಂದಾಗಿ ನಮ್ಮ ವಿರುದ್ಧ ವಾದಿಸಲು ಬರಬಲ್ಲ ಅನ್ಯಥಾ ಜ್ಞಾನಿಗಳಿಗೆ ತತ್ವಗಳ ವಿಷಯದಲ್ಲಿ ಮೋಹವು ಕವಿಯಬಲ್ಲದು.

'ಅಭಯ' –ಯಾವುದೇ ಬಗೆಯ ಭೀತಿ ಇಲ್ಲದವನೆಂದು ಪ್ರಾಣದೇವನಿಗೆ ನೀಡಲಾದ ಸಂಬೋಧನೆಗೆ ಒತ್ತುಕೊಟ್ಟು ನಡೆಸಲಾಗುವ ಉಪಾಸನೆಯಿಂದಾಗಿ ನಮ್ಮ ಐಹಿಕ ಹಾಗೂ ಪಾರತ್ರಿಕ ಭಯ ಪರಿಹಾರವಾಗಬಲ್ಲದು.

## ಒಂಬತ್ತನೇ ಶ್ಲೋಕದ ಫಲಶ್ರುತಿ

**ಸುಖಭೋಗಗಳ ಪ್ರಾಪ್ತಿ, ಸಜ್ಜನರ ಗೌರವಾದರಗಳಿಗೆ ಪಾತ್ರವಾಗುವಿಕೆ**

**'ಯೇಽಮುಂ ಭಾವಂ ಭಜಂತೇ.....'** ಎಂಬುದಾಗಿ ಪ್ರಾರಂಭಗೊಂಡ ಮುಖ್ಯಪ್ರಾಣ ದೇವರ ತೃತೀಯಾವತಾರದ ಸೇವೆಯ ಫಲವಿಶೇಷವನ್ನು ಬಣ್ಣಿಸುತ್ತಿರುವ ವಾಯುಸ್ತುತಿಯ ಒಂಬತ್ತನೇ ಶ್ಲೋಕದಲ್ಲಿ ಮಧ್ವಾವತಾರದ ಸೇವನೆಯ ಫಲವಾಗಿ ದೊರಕಬಲ್ಲ ಮೋಕ್ಷ ಸುಖಭೋಗದ ವರ್ಣನೆ ನಡೆದಿದ್ದು, ಅದರ ಆಧಾರದಲ್ಲಿ ನಡೆಸಲಾಗುವ ಉಪಾಸನೆ ಯಿಂದಾಗಿ ಕ್ರಮೇಣ ಮೋಕ್ಷಸುಖಭೋಗ ದೊರಕುವುದಾದರೆ, ತಾತ್ಕಾಲಿಕವಾಗಿ ಸುಖ ಭೋಗಗಳ ಪ್ರಾಪ್ತಿ ಆಗುವುದು.

**'ಸುರಮುಖಸುಜನಾರಾಧಿತಂ ತೇ ತೃತೀಯಂ....'** ಮುಖ್ಯಪ್ರಾಣದೇವರ ತೃತೀಯಾವ ತಾರ ದೇವತೆಗಳೇ ಮುಂತಾದ ಸಜ್ಜನರ ಆರಾಧನೆಗೆ ಪಾತ್ರವಾದುದೆಂಬ ಅಂಶಕ್ಕೆ ಒತ್ತುಕೊಟ್ಟು ನಡೆಸಲಾಗುವ ಉಪಾಸನೆಯ ಫಲವಾಗಿ ಸಜ್ಜನರಿಂದ ಗೌರವಿಸಿಕೊಳ್ಳುವ, ಆದರಿಸಿಕೊಳ್ಳುವ ಭಾಗ್ಯವನ್ನು ಪಡೆಯಬಹುದು.

## ಹತ್ತನೇ ಶ್ಲೋಕದ ಫಲಶ್ರುತಿ

**ಸುಖವಿಶೇಷದ ಪ್ರಾಪ್ತಿ**

**'ಆನಂದಾನ್ ಮಂದಮಂದಾ......'** –ಎಂಬುದಾಗಿ ಆರಂಭಗೊಳ್ಳುವ ವಾಯುಸ್ತುತಿಯ ಹತ್ತನೇ ಶ್ಲೋಕದಲ್ಲಿ ಮಧ್ವರ ಸೇವನೆಯ ಫಲವಾಗಿ ದೊರಕಬಲ್ಲ ಮೋಕ್ಷದ ಸುಖದ ವರ್ಣನೆ ನಡೆದಿದ್ದು, ಇದರ ಆಧಾರದಲ್ಲಿ ನಡೆಸಲಾಗುವ ಉಪಾಸನೆಯ ಫಲವಾಗಿ ಕ್ರಮೇಣ ಮೋಕ್ಷಸುಖ ದೊರಕುವುದು; ತಾತ್ಕಾಲಿಕವಾಗಿ ಸುಖವಿಶೇಷದ ಪ್ರಾಪ್ತಿ ಆಗುವುದು.

## ಹನ್ನೊಂದನೇ ಶ್ಲೋಕದ ಫಲಶ್ರುತಿ

**ಮುಖ್ಯಪ್ರಾಣನ ದ್ವೇಷದಿಂದ ದೂರವಾಗುವಿಕೆ**

**'ಉತ್ತಪ್ತಾಽತ್ಯುತ್ಕಟತ್ವಿಟ್.....'** ಇತ್ಯಾದಿಯಾಗಿ ಪ್ರಾರಂಭವಾಗುವ ವಾಯುಸ್ತುತಿಯ ಹನ್ನೊಂದನೇ ಶ್ಲೋಕದಲ್ಲಿ ಮುಖ್ಯಪ್ರಾಣನ ದ್ವೇಷಿಗಳಾದ ತಾಮಸರಿಗೆ ಆ ದ್ವೇಷದ ಫಲವಾಗಿ ದೊರಕಬಲ್ಲ ನರಕದುಃಖಗಳ ವರ್ಣನೆ ನಡೆದಿದ್ದು, ಅದರ ಆಧಾರದಲ್ಲಿ

ನಡೆಸಲಾಗುವ ಉಪಾಸನೆಯ ಫಲವಾಗಿ ಮುಖ್ಯಪ್ರಾಣನ ದ್ವೇಷದಿಂದ ಹಾಗೂ ಮುಖ್ಯ ಪ್ರಾಣನ ಭಕ್ತರ ದ್ವೇಷದಿಂದ ದೂರಾಗಬಹುದಾಗಿದೆ.

## ಹನ್ನೆರಡನೇ ಶ್ಲೋಕದ ಫಲಶ್ರುತಿ

### ತತ್ವಮಾರ್ಗದಲ್ಲಿ ಔದಾಸೀನ್ಯದ ಪರಿಹಾರ

**'ಅಸ್ಮಿನ್ನಸ್ಮದ್ಗುರೂಣಾಂ......'** ಇತ್ಯಾದಿಯಾಗಿ ಪ್ರಾರಂಭವಾಗುವ ವಾಯುಸ್ತುತಿಯ ಹನ್ನೆರಡನೇ ಶ್ಲೋಕದಲ್ಲಿ ಮಧ್ವರ ಸಾಮೀಪ್ಯ ದೊರಕಿದರೂ ಅದನ್ನು ತತ್ವಜ್ಞಾನದ ಸಂಪಾದನೆಗಾಗಿ ಸದುಪಯೋಗಪಡಿಸಿಕೊಳ್ಳುವಲ್ಲಿ ಉದಾಸೀನರಾದ ರಾಜಸಜೀವರಿಗೆ ನಿತ್ಯಸಂಸಾರಫಲವನ್ನು ತಿಳಿಸುತ್ತಿದ್ದು, ಈ ಶ್ಲೋಕದ ಆಧಾರದಲ್ಲಿ ನಡೆಸಲಾಗುವ ಉಪಾಸನೆಯ ಫಲವಾಗಿ ಮಧ್ವರು ತೋರಿದ ತತ್ವಜ್ಞಾನದ ಮಾರ್ಗದಲ್ಲಿ ಸಂಚರಿಸಲು ಕಾಡುವ ಔದಾಸೀನ್ಯವನ್ನು ಕಳೆದುಕೊಳ್ಳಬಹುದಾಗಿದೆ.

## ಹದಿಮೂರನೇ ಶ್ಲೋಕದ ಫಲಶ್ರುತಿ

### ದುರ್ಗತಿ ನಿವಾರಣೆ; ಮುಖ್ಯಪ್ರಾಣದ್ವೇಷದ ದೂರೀಕರಣ

**'ಕ್ಷುತ್‌ಕ್ಷಾಮಾನ್.....'** ಇತ್ಯಾದಿಯಾಗಿ ಪ್ರಾರಂಭವಾಗುವ ವಾಯುಸ್ತುತಿಯ ಹದಿಮೂರನೇ ಶ್ಲೋಕದಲ್ಲಿ ಮುಖ್ಯಪ್ರಾಣನನ್ನು ದ್ವೇಷಿಸುವ ತಾಮಸರು ಅನುಭವಿಸಬೇಕಾದ ದುರ್ಗತಿಯ ವರ್ಣನೆ ನಡೆದಿದ್ದು, ಈ ಶ್ಲೋಕದ ಆಧಾರದಲ್ಲಿ ನಡೆಸಲಾಗುವ ಉಪಾಸನೆಯಿಂದಾಗಿ ದುರ್ಗತಿ ಪರಿಹಾರವಾಗುವುದು; ಅಲ್ಲದೆ ದುರ್ಗತಿಗೆ ಪ್ರಯೋಜಕವಾದ ಮುಖ್ಯಪ್ರಾಣನ ದ್ವೇಷ ಸ್ವಲ್ಪ ಪ್ರಮಾಣದಲ್ಲೂ ಎಸಗಲ್ಪಡದಂತೆ ಆಗುವುದು.

## ಹದಿನಾಲ್ಕನೇ ಶ್ಲೋಕದ ಫಲಶ್ರುತಿ

### ಶುದ್ಧ ಭಕ್ತಿಯ ಸಿದ್ಧಿ; ಭಕ್ತಿಯಲ್ಲಿ ದಾರ್ಢ್ಯಾದಿಗಳ ಸಿದ್ಧಿ, ಮುಖ್ಯಪ್ರಾಣನ ಬಾಂಧವ್ಯದ ಲಾಭ

**'ಮಾತರ್ಮೇ ಮಾತರಿಶ್ವನ್.....'** ಎಂಬುದಾಗಿ ವಾಯುದೇವನ ಜೊತೆಗೆ ಇರುವ ಮಾತೃತ್ವವೇ ಮುಂತಾದ ಆರು ಬಗೆಯ ಬಾಂಧವ್ಯದ ನಂಟನ್ನು ಉಲ್ಲೇಖಿಸಿ ನಡೆಸಲಾದ ಸಂಬೋಧನೆಯೊಂದಿಗೇ ಪ್ರಾರಂಭವಾಗುವ ವಾಯುಸ್ತುತಿಯ ಸಾಧನಾದೃಷ್ಟಿಯಿಂದ ತುಂಬ ಮಹತ್ವಪೂರ್ಣವಾದ ಹದಿನಾಲ್ಕನೆಯ ಶ್ಲೋಕದ ಪೂರ್ವಾರ್ಧದಲ್ಲಿ ಮುಖ್ಯಪ್ರಾಣನನ್ನು ಒಂಬತ್ತು ಸಂಬೋಧನೆಗಳಿಂದ ಕರೆದು, ಉತ್ತರಾರ್ಧದಲ್ಲಿ ಗೋವಿಂದ ವಿಷಯಕವಾದ ನಿರ್ಮಲ ಭಕ್ತಿಯನ್ನು ಪ್ರಾರ್ಥಿಸಲಾಗಿದ್ದು, ಈ ಶ್ಲೋಕದ ಆಧಾರದಲ್ಲಿ ನಡೆಸಲಾಗುವ ಉಪಾಸನೆಯಿಂದಾಗಿ ಗೋವಿಂದನಲ್ಲಿ ಭಕ್ತಿ ಸಿದ್ಧಿಸುವುದು. ಹಾಗೆಯೇ ಈಗಾಗಲೇ ಅಳವಡಿಸಿಕೊಳ್ಳಲಾದ ಗೋವಿಂದವಿಷಯಕ ಭಕ್ತಿ ಹೆಚ್ಚೆಚ್ಚು ನಿರ್ವ್ಯಾಜವಾಗಿ,

ಸ್ಥಿರವಾಗಿ, ನಿಷ್ಕಾಮವಾಗಿ, ಮಾಹಾತ್ಮ್ಯಜ್ಞಾನಪೂರ್ವಕವಾಗಿ ಪರಿಷ್ಕಾರಗೊಳ್ಳುವುದು. ಸಾಧನಾನುಷ್ಠಾನದ ವಿಷಯದಲ್ಲಿ ವಾಯುದೇವನು ತಾಯಿಯಂತೆ, ತಂದೆಯಂತೆ, ಅಸದೃಶ ಗುರುವಿನಂತೆ, ಅಣ್ಣನಂತೆ, ಇಷ್ಟನಂತೆ, ಆಪ್ತಬಂಧುವಿನಂತೆ, ಒಡೆಯನಂತೆ ಉಪಕರಿಸುವನು. ತಾಯಿ ಮುಂತಾದ ಬಂಧುಗಳಲ್ಲಿ ವಿಶೇಷವಾಗಿ ಸನ್ನಿಹಿತನಾಗಿ ಅವರ ಮೂಲಕವೂ ಉಪಕರಿಸುವನು.

## ಹದಿನೈದನೇ ಶ್ಲೋಕದ ಫಲಶ್ರುತಿ

### ಗುರುಪವಮಾನನ ವಿಶೇಷರಕ್ಷಣೆ; ತಾರತಮ್ಯಾನುಸಾರವಾದ ಭಕ್ತಿಗೆ ಸ್ಫೂರ್ತಿ

'ವಿಷ್ಣೋರತ್ಯುತ್ತಮತ್ವಾತ್......' ಇತ್ಯಾದಿಯಾಗಿ ವಿಷ್ಣುಸರ್ವೋತ್ತಮತ್ವದ ಘೋಷಣೆಯೊಂದಿಗೆ ಪ್ರಾರಂಭವಾಗುವ ವಾಯುಸ್ತುತಿಯ ಹದಿನೈದನೇ ಶ್ಲೋಕದಲ್ಲಿ ವಿಷ್ಣುವಿನ ಸರ್ವೋತ್ತಮತ್ವವನ್ನು ದೃಢಪಡಿಸಿಕೊಂಡು ಶ್ರೀ ಹಾಗೂ ಧರೆಯರಿಂದ ಸಹಿತನಾದ ಅವನಲ್ಲಿ ಗರಿಷ್ಠ ಪ್ರಮಾಣದ ಭಕ್ತಿಯನ್ನೂ, ಚತುರ್ಮುಖಾದಿಗಳು ಅವನ ಪರಿವಾರಕ್ಕೆ ಸೇರಿದವರೆಂದು ವಿವೇಚಿಸಿಕೊಂಡು ಅವರವರ ತಾರತಮ್ಯಾನುಸಾರವಾಗಿ ಅವರಲ್ಲಿ ಭಕ್ತಿಯನ್ನೂ ಮಾಡಬೇಕೆಂಬುದಾಗಿ ಪರಮಾತ್ಮನಲ್ಲೂ, ಅವನ ಭಕ್ತರಲ್ಲೂ ಅಳವಡಿಸಿಕೊಳ್ಳಬೇಕಾದ ಭಕ್ತಿಯ ಸ್ವರೂಪದ ಬಗ್ಗೆ, ಪರಿಮಾಣದ ಬಗ್ಗೆ ಚೆನ್ನಾಗಿ ಬೆಳಕುಚೆಲ್ಲಿ, ಹೀಗೆ ಭಕ್ತಿ ಮಾಡುವ ಸಾಧಕರನ್ನು ವಾಯುದೇವರು ಖಂಡಿತಾ ರಕ್ಷಿಸುವರೆಂದು ದೃಢವಾದ ಆಶ್ವಾಸನೆಯನ್ನು ಘೋಷಿಸಲಾಗಿದ್ದು, ಈ ಶ್ಲೋಕದ ಆಧಾರದಲ್ಲಿ ನಡೆಸಲಾಗುವ ಉಪಾಸನೆಯ ಫಲವಾಗಿ ವಾಯುದೇವನಿಂದ ಸಂರಕ್ಷಣೆ ದೊರಕುವುದಲ್ಲದೆ, ತಾರತಮ್ಯಾನುಸಾರವಾಗಿ ಭಕ್ತಿಯ ಅಳವಡಿಕೆಗೆ ಬೇಕಾದ ಸ್ಫೂರ್ತಿ ದೊರಕುವುದು.

## ಹದಿನಾರನೇ ಶ್ಲೋಕದ ಫಲಶ್ರುತಿ

### ತತ್ತ್ವಜ್ಞಾನದ ಲಾಭದೊಂದಿಗೆ ಮುಕ್ತಿಯ ಪ್ರಾಪ್ತಿ, ಮಾಧ್ವಸಿದ್ಧಾಂತದಲ್ಲಿ ದಾರ್ಢ್ಯದ ಪ್ರಾಪ್ತಿ

'ತತ್ತ್ವಜ್ಞಾನ್ ಮುಕ್ತಿಭಾಜ......' ಇತ್ಯಾದಿಯಾಗಿ ಪ್ರಾರಂಭವಾಗುವ ವಾಯುಸ್ತುತಿಯ ಹದಿನಾರನೆಯ ಶ್ಲೋಕದಲ್ಲಿ ವಾಯುದೇವರ ಮುಕ್ತಿಯೋಗ್ಯಾಧಿಕಾರಿಗಳು ಮುಕ್ತಿಯನ್ನು ಹೊಂದುವಂತೆ ಮಾಡುವಲ್ಲೂ, ನಿತ್ಯಸಂಸಾರಿಗಳು ಸಂಸಾರದಲ್ಲಿ ನಿತ್ಯ ಅಡ್ಡಾಡುವಂತೆ ಮಾಡುವಲ್ಲೂ, ತಮೋಯೋಗ್ಯರು ಅಂಧಂತಮಸ್ಸಿನಲ್ಲಿ ಬೀಳುವಂತೆ ಮಾಡುವಲ್ಲೂ ಪಾತ್ರವನ್ನು ಉಲ್ಲೇಖಿಸಲಾಗಿದ್ದು, ಈ ಶ್ಲೋಕದ ಆಧಾರದಲ್ಲಿ ನಡೆಸಲಾಗುವ ಉಪಾಸನೆಯಿಂದಾಗಿ ತತ್ತ್ವಜ್ಞಾನವನ್ನು ಪಡೆದುಕೊಂಡು ಮುಕ್ತಿಯನ್ನು ಹೊಂದುವಂತಾಗುವುದು. ನಿತ್ಯಸಂಸಾರದಲ್ಲಾಗಲೀ, ಅಂಧಂತಮಸ್ಸಿನಲ್ಲಾಗಲೀ ಕೊಳೆಯಬೇಕಾದ ಸ್ಥಿತಿಯಿಂದ ದೂರವಾಗುವುದು.

ಈ ವಿಷಯದಲ್ಲಿ '......ಶ್ರುತಿಶತಮಿತಿಹಾಸಾದಿಚಾಽಕರ್ಣಯಾಮಃ' –ನೂರಾರು ಶ್ರುತಿಗಳನ್ನೂ, ಇತಿಹಾಸಾದಿಗಳನ್ನೂ ಕೇಳುವೆವು' –ಎಂಬ ಮಾತಿಗೆ ಒತ್ತುಕೊಟ್ಟು ನಡೆಸಲಾಗುವ ಉಪಾಸನೆಯ ಫಲವಾಗಿ ಮಾಧ್ವಸಂದೇಶಗಳಿಗೆಲ್ಲ ಶ್ರುತ್ಯಾದಿಗಳ ಸಂವಾದ ದೊರಕಬಲ್ಲದು; ಇದರಿಂದಾಗಿ ಮಾಧ್ವಸಿದ್ಧಾಂತದ ಬಗ್ಗೆ ವಿಶ್ವಾಸ, ದಾರ್ಢ್ಯ ಹೆಚ್ಚುವುದು.

## ಹದಿನೇಳನೇ ಶ್ಲೋಕದ ಫಲಶ್ರುತಿ

### ಬ್ರಹ್ಮಚರ್ಯಾದಿ ಧರ್ಮಗಳ ಸಿದ್ಧಿ, ಪಾಪಮೋಹಗಳ ಪರಿಹಾರ, ಭಕ್ತಿಯ ಲಾಭ

ಶತ್ರುಗಳಿಗೆ ಮಣಿಯದಿರುವಿಕೆ 'ವಂದೇಽಹಂ ತಂ ಹನೂಮಾನಿತಿ.....' –ಎಂಬುದಾಗಿ ಆಂಜನೇಯನ ಮಹಾಪೌರುಷದ ಉದ್ಘೋಷಣೆಯೊಂದಿಗೆ ಪ್ರಾರಂಭವಾಗುವ ವಾಯುಸ್ತುತಿಯ ಹದಿನೇಳನೇ ಶ್ಲೋಕದಲ್ಲಿ ಆಂಜನೇಯನ ಬ್ರಹ್ಮಚರ್ಯ, ಸ್ವಾಮಿನಿಷ್ಠೆ, ವೈರಾಗ್ಯಾದಿ ಗುಣಗಳ ಹಾಗೂ ಶತ್ರುಗಳಿಗೆ ಮಣಿಯದಿರುವ ಸಾಮರ್ಥ್ಯ, ಭಕ್ತರ ಪಾಪಮೋಹಗಳ ಪರಿಹಾರಕತ್ವ, ರಾಮಭಕ್ತಿಗಾಗಿ ಹಂಬಲಿಸುವಿಕೆ ಮುಂತಾದ ಧರ್ಮಗಳ ಪ್ರಸ್ತಾವ ನಡೆದಿದ್ದು, ಈ ಶ್ಲೋಕದ ಆಧಾರದಲ್ಲಿ ನಡೆಸಲಾಗುವ ಉಪಾಸನೆಯಿಂದಾಗಿ ಬ್ರಹ್ಮಚರ್ಯಾದಿ ಧರ್ಮಗಳ ಸಿದ್ಧಿಯೇ ಮುಂತಾದ ಫಲಗಳು ದೊರಕುವವು.

ಆಂಜನೇಯನಿಗೆ ನೀಡಲಾದ 'ಸಹಸ್ವಾನ್' – ಶತ್ರುಗಳಿಂದ ಮಣಿಯದಿರುವ ಸಾಮರ್ಥ್ಯಸಂಪನ್ನ ಎಂಬ ವಿಶೇಷಣಕ್ಕೆ ಒತ್ತುಕೊಟ್ಟು ಉಪಾಸನೆ ನಡೆಸಿದಲ್ಲಿ ಅದರಿಂದ ಶತ್ರುಗಳಿಗೆ ಮಣಿಯದ ಸಾಮರ್ಥ್ಯವು ಸಿದ್ಧಿಸುವುದು.

## ಹದಿನೆಂಟನೇ ಶ್ಲೋಕದ ಫಲಶ್ರುತಿ

### ಪರಿಶ್ರಮಸಾಧ್ಯಕಾರ್ಯವನ್ನು ಅನಾಯಾಸವಾಗಿ ನಿರ್ವಹಿಸುವುದು, ಯಾವುದೇ ಕಾರ್ಯವನ್ನು ದೇವರ ಸೇವೆಯಾಗಿ ನಿರ್ವಹಿಸಲು ಬೇಕಾದ ಸ್ಫೂರ್ತಿ

'ಪ್ರಾಕ್ ಪಂಚಾಶತ್‌ಸಹಸ್ರೈ' ಎಂದು ಪ್ರಾರಂಭವಾಗುವ ವಾಯುಸ್ತುತಿಯ ಹದಿನೆಂಟನೇ ಶ್ಲೋಕದಲ್ಲಿ ಆಂಜನೇಯನು ಗಂಧಮಾದನ ಪರ್ವತವನ್ನು ಅನಾಯಾಸವಾಗಿ ತಂದದ್ದು ಹಾಗೂ ರಾಮಚಂದ್ರನ ಪಾದಾರವಿಂದಕ್ಕೆ ನಮಿಸುವ ಮೂಲಕ ಶ್ರೀರಾಮಚಂದ್ರನಿಗೆ ಆ ಪರ್ವತಾಹರಣಕ್ರಿಯೆಯನ್ನು ಸಮರ್ಪಿಸಿದ್ದು –ಇವುಗಳನ್ನು ಉಲ್ಲೇಖಿಸುತ್ತಿದ್ದು, ಈ ಶ್ಲೋಕದ ಉಪಾಸನೆಯಿಂದಾಗಿ ಪರಿಶ್ರಮಸಾಧ್ಯ ಕೆಲಸವನ್ನು ಅನಾಯಾಸವಾಗಿ ನಿರ್ವಹಿಸಬಹುದಾಗಿದೆ; ಹಾಗೂ ಪ್ರತಿಯೊಂದು ಚಟುವಟಿಕೆಯನ್ನೂ ದೇವರ ಸೇವೆಯಾಗಿ ನಡೆಸಲು ಬೇಕಾದ ಸ್ಫೂರ್ತಿ ಸಿದ್ಧಿಸುವುದು.

## ಹತ್ತೊಂಬತ್ತನೇ ಶ್ಲೋಕದ ಫಲಶ್ರುತಿ

**ಯಾವುದೇ ಕಾರ್ಯವನ್ನು ಅಚ್ಚುಕಟ್ಟಾಗಿ ನಿರ್ವಹಿಸುವ ಕೌಶಲರೂಪವಾದ ಯೋಗದ ಸಿದ್ಧಿ**

**'ಕ್ಲಿಷ್ಟಃ ಪಶ್ಚಾತ್......'** –ಎಂದು ಆರಂಭವಾಗುವ ವಾಯುಸ್ತುತಿಯ ಹತ್ತೊಂಬತ್ತನೇ ಶ್ಲೋಕದಲ್ಲಿ ಹನುಮಂತನು ಗಂಧಮಾದನ ಪರ್ವತವನ್ನು ಲಂಕೆಯಿಂದಲೇ ಎಸೆದು, ಅದರ ಹಿಂದಿನ ಸ್ಥಾನದಲ್ಲೇ ನೆಲೆವೂರುವಂತೆ ಮಾಡಿರುವ ಪೌರುಷದ ಹಾಗೂ ಕೌಶಲದ ವರ್ಣನೆ ನಡೆದಿದ್ದು, ಈ ಶ್ಲೋಕದ ಆಧಾರದಲ್ಲಿ ನಡೆಸಲಾಗುವ ಉಪಾಸನೆಯಿಂದಾಗಿ ಯೋಗ ಎನಿಸುವ ಕಾರ್ಯಕೌಶಲವು ಸಿದ್ಧಿಸುವುದು.

'ಅತುಲಮತೇ' –ಅಸದೃಶಬುದ್ಧಿಯ ಖನಿಯೇ– ಎಂಬ ಸಂಬೋಧನೆಗೆ ಹೆಚ್ಚು ಒತ್ತು ಕೊಟ್ಟಲ್ಲಿ ಕಾರ್ಯಕೌಶಲಕ್ಕೆ ಬೇಕಾದ ಬುದ್ಧಿಸಾಮರ್ಥ್ಯವೂ ಸಿದ್ಧಿಸುವುದು.

## ಇಪ್ಪತ್ತನೇ ಶ್ಲೋಕದ ಫಲಶ್ರುತಿ

**ದೇವರಿಗೆ ಪ್ರಿಯ ಆಗುವಂತಹ ಸಾಧನೆಗಳ ನಿರ್ವಹಣೆಗೆ ಬೇಕಾದ ಪಾಟವದ ಸಿದ್ಧಿ ಹಾಗೂ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಇಷ್ಟಗಳ ಪ್ರಾಪ್ತಿ.**

**'ದೃಷ್ಟ್ವಾ ದುಷ್ಟಾಧಿಪೋರಃ...'** ಇತ್ಯಾದಿಯಾಗಿ ಪ್ರಾರಂಭವಾಗುವ ವಾಯುಸ್ತುತಿಯ ಇಪ್ಪತ್ತನೇ ಶ್ಲೋಕದಲ್ಲಿ ಹನುಮಂತನು ರಾವಣನ ಎದೆಗೆ ಗುದ್ದಿದ ವಿಷಯದ ಪ್ರಸ್ತಾವ ಬಂದಿದೆ.

ಹೀಗೆ ಗುದ್ದಬೇಕೆಂದರೆ ಹನೂಮಂತನ 'ರಾವಣಾರಿಪ್ರಿಯನಟನಪಟು' –ರಾಮ ಚಂದ್ರನಿಗೆ ಪ್ರಿಯವಾಗುವಂತೆ ನಡೆದುಕೊಳ್ಳುವುದರಲ್ಲಿ ಕುಶಲನಾದವನೆಂದು ಉಲ್ಲೇಖಿಸ ಲಾಗಿದೆ ಅಲ್ಲದೆ, ಆಂಜನೇಯನಲ್ಲಿ **'ಇಷ್ಟಂ ಪ್ರದೇಷ್ಟುಂ ಕೀನೇಷ್ಟೇ ಮೇ....'** ಎಂದು ಭಕ್ತರ ಇಷ್ಟಗಳನ್ನು ಪೂರೈಸುವ ಸಾಮರ್ಥ್ಯ ಇಲ್ಲವೇನೋ ಕೇಳಿಕೊಳ್ಳುವ ಮೂಲಕ ಸಾಮರ್ಥ್ಯ ಇದ್ದೇ ಇದೆ ಎಂದು ಸಾರಲಾಗಿದೆ. ಈ ಮಾತುಗಳಿಗೆ ಒತ್ತು ಕೊಟ್ಟು ನಡೆಸಲಾಗುವ ಉಪಾಸನೆಯಿಂದಾಗಿ ದೇವರ ಪ್ರಿಯನಟನಪಾಟವ, ಇಷ್ಟಸಿದ್ಧಿ ಇವು ಲಭಿಸುವವು.

## ಇಪ್ಪತ್ತೊಂದನೇ ಶ್ಲೋಕದ ಫಲಶ್ರುತಿ

**ದೇವರ ಸೇವೆಯ ಫಲಿಸುವಿಕೆ, ಯೋಗ್ಯ ಪದವಿಯ ದೃಢೀಕರಣ**

**'ದೇವ್ಯಾದೇಶಪ್ರಣೀತಿ........'** ಇತ್ಯಾದಿಯಾಗಿ ಹನುಮಂತನಿಂದ ನಡೆದ ಸೇವೆಗಳ ಉಲ್ಲೇಖದೊಂದಿಗೆ ಪ್ರಾರಂಭವಾಗುವ ವಾಯುಸ್ತುತಿಯ ಇಪ್ಪತ್ತೊಂದನೇ ಶ್ಲೋಕದಲ್ಲಿ ಆಂಜನೇಯನ ಸೇವೆಯಿಂದ ಸಂತುಷ್ಟನಾದ ರಾಮಚಂದ್ರ ಅವನಿಗೆ ಬ್ರಹ್ಮಪದವಿಯಲ್ಲಿ ಸಹಭೋಗ ದೊರಕುವಂತೆ ಮಾಡಿದುದರ ವರ್ಣನೆ ಬಂದಿದ್ದು, ಈ ಶ್ಲೋಕದ

ಉಪಾಸನೆಯಿಂದಾಗಿ ಆಂಜನೇಯನ ಸೇವೆ ರಾಮಚಂದ್ರನ ಚಿತ್ತಕ್ಕೆ ಬಂದು ಫಲಿಸಿದಂತೆ ನಾವು ಸಲ್ಲಿಸುವ ದೇವರ ಸೇವೆಯೂ ಅವನ ಚಿತ್ತಕ್ಕೆ ಬರುವಂತಾಗುವುದು; ಅದರ ಫಲವಾಗಿ ಆಂಜನೇಯನಿಗೆ ಮುಂದೆ ದೊರಕಲಿದ್ದ ಬ್ರಹ್ಮಪದವಿಯ ದೃಢೀಕರಣ ಆದಂತೆ ನಮಗೂ ನಮ್ಮ ಯೋಗ್ಯತಾನುಸಾರವಾಗಿ ದೊರಕುವ ಪದವಿಯ ದೃಢೀಕರಣ ನಡೆಯು ವುದು.

## ಇಪ್ಪತ್ತೆರಡನೇ ಶ್ಲೋಕದ ಫಲಶ್ರುತಿ

**ವಿಘ್ನಪರಿಹಾರ, ಸಾಧನಾನುಷ್ಠಾನಕ್ಕೆ ತೊಂದರೆ ಮಾಡುವ ದುಷ್ಟಶಕ್ತಿಗಳ ನಿಗ್ರಹ**

'ಜಘ್ನೇ ನಿಘ್ನೇನ ವಿಘ್ನೋ.....' ಎಂದು ಪ್ರಾರಂಭವಾಗುವ ವಾಯುಸ್ತುತಿಯ ಇಪ್ಪತ್ತೆರಡನೇ ಶ್ಲೋಕದಲ್ಲಿ ಬಕಾಸುರನ ಸಂಹಾರದ ಮೂಲಕ ಏಕಚಕ್ರಾನಗರದ ಜನರ ಬದುಕಿನ ಸುಖದ ಅಡ್ಡಿಯ ಪರಿಹಾರ, ಕಿರ್ಮೀರನ ಸಂಹಾರ –ಇವುಗಳ ಪ್ರಸ್ತಾವ ನಡೆದಿದ್ದು, ಇದಕ್ಕನುಗುಣವಾಗಿ ಈ ಶ್ಲೋಕದ ಮೂಲಕ ನಡೆಸುವ ಉಪಾಸನೆಯಿಂದ ನೆಮ್ಮದಿಯಿಂದ ಬದುಕಲು ಬರುವ ವಿಘ್ನಗಳ ಪರಿಹಾರ, ಸಾಧನಾನುಷ್ಠಾನಕ್ಕೆ ತೊಂದರೆ ಮಾಡುವ ಆಸುರೀಶಕ್ತಿಗಳ ನಿಗ್ರಹ –ಈ ಫಲಗಳು ದೊರಕುವವು.

## ಇಪ್ಪತ್ತಮೂರನೇ ಶ್ಲೋಕದ ಫಲಶ್ರುತಿ

**ದುರ್ವಾದಿಗಳನ್ನು ಗೆಲ್ಲುವ ಸಾಮರ್ಥ್ಯದ ಸಿದ್ಧಿ, ದೇವರಿಗೆ ಪ್ರಿಯಗಳಾದ ಸಾಧನಾನುಷ್ಠಾನಕ್ಕೆ ಅವಕಾಶದ ಲಾಭ, ಸಾಧನಾನುಷ್ಠಾನದಿಂದ ತೃಪ್ತಿ.....**

'ನಿರ್ಮೃದ್ನನ್ನತ್ಯಯತ್ನಂ......' ಇತ್ಯಾದಿಯಾಗಿ ಪ್ರಾರಂಭವಾಗುವ ವಾಯುಸ್ತುತಿಯ ಇಪ್ಪತ್ತಮೂರನೆಯ ಶ್ಲೋಕದಲ್ಲಿ ಪಾಂಡವರ ಮೂಲಕ ಇಂದ್ರಪ್ರಸ್ಥದಲ್ಲಿ ನಡೆಯಬೇಕಾಗಿದ್ದ ರಾಜಸೂಯಯಾಗದ ಮೊದಲ ಹಾಗೂಪ್ರಮುಖ ಅಂಗವಾಗಿ ನಡೆದ ಜರಾಸಂಧನ ಸಂಹಾರ, ಅದನ್ನು ಕೃಷ್ಣನ ಸಮಕ್ಷಮದಲ್ಲಿ ಭೀಮಸೇನನಿಂದ ಅವನ ಪೂಜೆಯಾಗಿ ನಡೆಸಿದ ಸಮರ್ಪಣೆ, ಒಳ್ಳೆಯ ಅನುಸಂಧಾನದಿಂದ ನಡೆಸಲಾದ ಆ ಸಾಧನೆಯನ್ನು ಕೃಷ್ಣ ತುಂಬ ಪ್ರೀತಿಯಿಂದ ಸ್ವೀಕರಿಸಿದ್ದು –ಇವಿಷ್ಟರ ಪ್ರಸ್ತಾವ ನಡೆದಿದ್ದು ಈ ಪ್ರಮೇಯಗಳಿಗೆ ಅನು ಗುಣವಾಗಿ ಇವುಗಳ ಉಪಾಸನೆಯ ಫಲ ದೊರಕುವುದು. ಕೃಷ್ಣನ ಅನುಗ್ರಹದಿಂದಾಗಿ ಭೀಮಸೇನ ಜರಾಸಂಧನನ್ನು ಸೋಲಿಸುವುದಕ್ಕೆ ಸಮರ್ಥನಾದಂತೆ ಹರಿಗುರುಗಳ ಅನು ಗ್ರಹದಿಂದಾಗಿ ತತ್ವಜ್ಞಾನಕ್ಕೆ ಅಪಚಾರವನ್ನೆಸಗುವ ಎಂತಹ ಪ್ರಬಲ ದುರ್ವಾದಿಗಳನ್ನೂ ಸೋಲಿಸುವ ಸಾಮರ್ಥ್ಯ ಸಿದ್ಧಿಸುವುದು. ಕೃಷ್ಣನಿಗೆ ಅತ್ಯಂತ ಪ್ರಿಯವಾದ ಜರಾಸಂಧನ ಸಂಹಾರದ ರೂಪವಾದ ಸಾಧನೆಯ ಅನುಷ್ಠಾನಕ್ಕೆ ಶ್ರೀಕೃಷ್ಣನೇ ಭೀಮಸೇನನಿಗೆ ಅವಕಾಶ ವನ್ನು ಕಲ್ಪಿಸಿಕೊಟ್ಟಂತೆ ನಮಗೂ ನಮ್ಮ ಯೋಗ್ಯತಾನುಸಾರ ಸಾಧನಾನುಷ್ಠಾನಕ್ಕೆ ಅವಕಾಶ ವನ್ನು ದೊರಕಿಸಿಕೊಡುವನು. ಭೀಮಸೇನನಿಂದ ನಡೆದ ಜರಾಸಂಧನ ಸಂಹಾರರೂಪವಾದ

ಸಾಧನೆಯನ್ನು ಕರ್ಮಾಧ್ಯಕ್ಷನಾದ ಶ್ರೀಕೃಷ್ಣ .ತುಂಬ ತೃಪ್ತಿಯಿಂದ ಸ್ವೀಕರಿಸಿದಂತೆ ನಮ್ಮ ಸಾಧನೆಯಿಂದಲೂ ಕರ್ಮಾಧ್ಯಕ್ಷ ತೃಪ್ತಿಪಡುವಂತಾಗುವುದು; ಅದರ ಪ್ರತಿಫಲನವಾಗಿ ನಮಗೂ ಸಾಧನಾನುಷ್ಠಾನದಿಂದ ತೃಪ್ತಿ ದೊರಕುವುದು.

## ಇಪ್ಪತ್ತನಾಲ್ಕನೇ ಶ್ಲೋಕದ ಫಲಶ್ರುತಿ

**ಅನಾಯಾಸವಾಗಿ ಪರವಾದಿಗಳ ನಿಗ್ರಹ, ಆಂತರಿಕ ಶತ್ರುಗಳ ದಮನ ಕರ್ತವ್ಯಗಳನ್ನು ಕರ್ಮಾಧ್ಯಕ್ಷನ ಶುಶ್ರೂಷೆಯಾಗಿ ನಡೆಸಲು ಬೇಕಾದ ಅನುಸಂಧಾನದ ಸಿದ್ಧಿ.**

**'ಕ್ಷ್ವೇಲಾಕ್ಷೀಣಾಟ್ಟಹಾಸಂ......'** ಎಂಬುದಾಗಿ ಭೀಮಸೇನ ಮಹಾಭಾರತಯುದ್ಧದಲ್ಲಿ ನಡೆಸಿದ ಸಿಂಹನಾದ, ಅಟ್ಟಹಾಸ, ಗದಾಯುದ್ಧ ಇತ್ಯಾದಿಗಳ ಚಿತ್ರಣದೊಂದಿಗೇ ಪ್ರಾರಂಭವಾಗುವ ವಾಯುಸ್ತುತಿಯ ಇಪ್ಪತ್ತನಾಲ್ಕನೇ ಶ್ಲೋಕದಲ್ಲಿ ಭೀಮಸೇನನ ಮೂಲಕ ಮಹಾಭಾರತಯುದ್ಧದಲ್ಲಿ ಲೀಲಾಜಾಲವಾಗಿ ನಡೆದ ಶತ್ರುಗಳ ಸಂಹಾರ, ಅದನ್ನು ಶ್ರೀಕೃಷ್ಣನ ಶುಶ್ರೂಷಾರೂಪದಿಂದ ನಡೆಸಿದ ಪ್ರಮೇಯ –ಇವುಗಳ ಪ್ರಸ್ತಾವ ನಡೆದಿದ್ದು ಇದಕ್ಕನುಗುಣವಾಗಿ ನಡೆಸಲಾಗುವ ಉಪಾಸನೆಯಿಂದ ತತ್ತ್ವಜ್ಞಾನಕ್ಕೆ ಅಪಚಾರ ಮಾಡುವ ಪರವಾದಿಗಳನ್ನು ಲೀಲಾಜಾಲವಾಗಿ ಜಯಿಸಲು ಬೇಕಾದ ಸಾಮರ್ಥ್ಯ, ಆಂತರಿಕಶತ್ರುಗಳನ್ನು ಅನಾಯಾಸವಾಗಿ ನಿಗ್ರಹಿಸಲು ಬೇಕಾದ ತಾಕತ್ತು, ಇಂತಹ ಕರ್ತವ್ಯಗಳನ್ನು ದೇವರ ಶುಶ್ರೂಷೆಯಾಗಿ ನಡೆಸಲು ಬೇಕಾದ ಅನುಸಂಧಾನ –ಇವುಗಳು ಸಿದ್ಧಿಸುವುವು.

## ಇಪ್ಪತ್ತೈದನೆಯ ಶ್ಲೋಕದ ಫಲಶ್ರುತಿ

**ಅನಾದ್ಯಜ್ಞಾನದ ಪರಿಹಾರ, ಆ ಅಜ್ಞಾನದ ಶಿಥಿಲೀಕರಣ, ನಿದ್ರೆ, ಆಲಸ್ಯ, ಆಕಳಿಕೆಗಳ ಪರಿಹಾರ, ಗ್ರಂಥಾದಿಗಳ ರಚನಪಾಟವ, ಸಾಧನಾನುಷ್ಠಾನದ ರಚನಪಾಟವ, ಅಮಂಗಳದ ಪರಿಹಾರ.**

**'ದ್ರುಹ್ಯಂತೀಂ ಹೃದ್ರುಹಂ ಮಾಂ.............'** –ಎಂದು ಹೃದಯದೊಳಗೆ ಬೆಳೆದು ನಿಂತು, ಶ್ರೇಯಸ್ಸಿನತ್ತ ಸಾಗಲು ತಡೆಗಟ್ಟುತ್ತಿರುವ ಅವಿದ್ಯಾನಿದ್ರೆಯ ದುಷ್ಪ್ರಭಾವದ ವರ್ಣನೆಯೊಂದಿಗೇ ಪ್ರಾರಂಭವಾಗುವ ವಾಯುಸ್ತುತಿಯ ಇಪ್ಪತ್ತೈದನೇ ಶ್ಲೋಕದಲ್ಲಿ ಅವಿದ್ಯಾನಿದ್ರೆಯನ್ನು ಹೊಡೆದೋಡಿಸಿ ರಚನಪಾಟವವನ್ನು ಅನುಗ್ರಹಿಸಲು ಪ್ರಾರ್ಥಿಸಲಾಗುತ್ತಿದ್ದು, ವಿದ್ಯೆಗೆ ಅವಾಂತರಾಭಿಮಾನಿಯಾದ ದ್ರೌಪದಿಯ ಹಾಗೂ ಅರ್ಥಾಭಿಮಾನಿನಿಯರಾದ ಪಾರ್ವತೀ, ಸೌಪರ್ಣೀ ಹಾಗೂ ವಾರುಣಿಯರ ಪ್ರಾಸಂಗಿಕವಾದ ಪ್ರಸ್ತಾವದೊಂದಿಗೆ ಅವರ ಅನುಗ್ರಹದಿಂದ ವಿದ್ಯೆಯ ಮೂಲಕ ಹಾಗೂ ಶಬ್ದ, ರಸ ಮುಂತಾದ ಅರ್ಥಗಳ ಸದುಪಯೋಗದ ಮೂಲಕ ಅಮಂಗಳವನ್ನು ದೂರ ಮಾಡಿ ಮಂಗಳವನ್ನೊದಗಿಸಿಕೊಡಲು ಪ್ರಾರ್ಥಿಸಲಾಗುತ್ತಿದ್ದು, ಈ ಬಗೆಯ ಪ್ರಸ್ತಾವಪ್ರಾರ್ಥನೆಗಳಿಗನುಗುಣವಾಗಿ ಉಪಾಸನೆಯಿಂದ ಅನಾದಿಕಾಲದಿಂದ ಜೀವದ ಸ್ವರೂಪದ ಜೊತೆಗೇ ಇದ್ದು ಕಾಡುವ ಅನಾದಿ ಅಜ್ಞಾನ ದೂರವಾಗುವುದು; ಪೂರ್ಣವಾಗಿ ದೂರವಾಗದಿದ್ದರೂ

ಅದರ ದುಷ್ಪ್ರಭಾವ ಕುಗ್ಗುವುದು, ಅಜ್ಞಾನದ ಪರಿಣಾಮವಾಗಿ ಕಾಣಿಸಿಕೊಳ್ಳುವ ಅಕಾಲದ ನಿದ್ದೆ, ಆಕಳಿಕೆ, ಆಲಸ್ಯ, ಇವುಗಳ ಪರಿಹಾರ –ಹೀಗೆ ಅಜ್ಞಾನಾದಿಗಳ ಪರಿಹಾರಪ್ರಯುಕ್ತ ವಾಗಿ ಉತ್ಸಾಹ, ಸ್ಫೂರ್ತಿ, ಹುರುಪುಗಳ ವೃದ್ಧಿಯಾಗಿ ಕೃತಿಗಳ, ಸಾಧನಾನುಷ್ಠಾನದ ರಚನ ಪಾಟವದ ಸಿದ್ಧಿ, ವಿದ್ಯೆಯ ಜೃಂಭಣದಿಂದಾಗಿ ಅವಿದ್ಯಾಪ್ರಯುಕ್ತ ಅಮಂಗಳದ ಪರಿಹಾರ ಹಾಗೂ ರೂಪರಸಾದಿ ಅರ್ಥಗಳ ದುರುಪಯೋಗದಿಂದಾಗಿ ಉಂಟಾಗುವ ಕಾಮ, ರಾಗ ಇತ್ಯಾದಿ ದೋಷದೌರ್ಬಲ್ಯಗಳ ಪರಿಹಾರ ನಡೆದು, ಅವುಗಳ ಸದುಪಯೋಗ ನಡೆಯು ವಂತಾಗಿ ಶ್ರೇಯಸ್ಸಿನ ಪ್ರಾಪ್ತಿ –ಇವು ಸಂಭವಿಸುವವು.

## ಇಪ್ಪತ್ತಾರನೆಯ ಶ್ಲೋಕದ ಫಲಶ್ರುತಿ

**ಯಾದವಕೃಷ್ಣನ ಹಾಗೂ ವಾಸಿಷ್ಠಕೃಷ್ಣನ ಸೇವಾವಿಶೇಷ ನಡೆಸಲು ಅವಕಾಶದ ಪ್ರಾಪ್ತಿ, ವೇದವ್ಯಾಸರ ಸ್ವರೂಪದ ಬಗ್ಗೆ, ವಿಚಾರಧಾರೆಯ ಬಗ್ಗೆ ವಿಶ್ವಾಸದಾರ್ಢ್ಯದ ಸಿದ್ಧಿ, ಕ್ಷೇಮದ ಲಾಭ.**

**'ಯಾಭ್ಯಾಂ ಶುಶ್ರೂಷುರಾಸೀಃ......'** –ಎಂಬುದಾಗಿ ಭಗವಂತನ ಯಾದವಕೃಷ್ಣ ವಾಸಿಷ್ಠಕೃಷ್ಣ ಈ ಎರಡು ಭಗವದ್ರೂಪಗಳ ಶುಶ್ರೂಷೆಯನ್ನು ಎರಡು ರೂಪಗಳಿಂದ ನಡೆಸಿದ ಉಲ್ಲೇಖದೊಂದಿಗೆ ಪ್ರಾರಂಭವಾಗುವ ವಾಯುಸ್ತುತಿಯ ಇಪ್ಪತ್ತಾರನೆಯ ಶ್ಲೋಕದಲ್ಲಿ ಯಾದವಕೃಷ್ಣನ ಹಾಗೂ ವಾಸಿಷ್ಠಕೃಷ್ಣನ ಬ್ರಹ್ಮತ್ವಾದಿ ಕೆಲವು ಅಸಾಧಾರಣ ಗುಣಗಳ ಪ್ರಸ್ತಾವದೊಂದಿಗೆ ಅನ್ಯೋನ್ಯವಾಗಿ ಅತ್ಯಂತಾಭಿನ್ನಗಳಾಗಿದ್ದು ಭೇದ ಪ್ರತಿನಿಧಿ ವಿಶೇಷದಿಂದಾಗಿಯಷ್ಟೇ ಬೇರೆಬೇರೆಯಾಗಿ ಕಾಣಿಸುತ್ತಿದ್ದ ಯಾದವಕೃಷ್ಣನ ಹಾಗೂ ವಾಸಿಷ್ಠಕೃಷ್ಣನ ದುಷ್ಕರ ನಿಗ್ರಹರೂಪದ ಸೇವೆಯನ್ನು ಭೀಮರೂಪದಿಂದಲೂ, ವಾಙ್ಮಯ ಸೇವೆಯನ್ನು ಮಧ್ವರೂಪದಿಂದಲೂ ನಡೆಸಿದ ಉಲ್ಲೇಖವಿದ್ದು, ಈ ಶ್ಲೋಕದ ಉಪಾಸನೆ ಯಿಂದಾಗಿ ಯಾದವಕೃಷ್ಣನ ಸೇವೆಯಾಗಿ ಸಾಮಾಜಿಕ ಚಟುವಟಿಕೆಗಳನ್ನೂ, ವಾಸಿಷ್ಠಕೃಷ್ಣನ ಸೇವೆಯಾಗಿ ವಾಙ್ಮಯಸೇವೆಯನ್ನೂ ನಡೆಸಲು ಬೇಕಾದ ಅವಕಾಶ, ಸಾಮರ್ಥ್ಯ ಸಿದ್ಧಿಸು ವವು. ವಾಸಿಷ್ಠಕೃಷ್ಣ ಎನಿಸುವ ವೇದವ್ಯಾಸರು ಸಾಮಾನ್ಯ ಋಷಿಗಳಲ್ಲದೆ, ಯಾದವಕೃಷ್ಣ ನಂತೆ ಸಾಕ್ಷಾತ್ ಪರಮಾತ್ಮನೇ ಎಂಬ ತತ್ತ್ವವು ದೃಢವಾಗಿ ಶ್ರೀವೇದವ್ಯಾಸರ ಸ್ವರೂಪ ದಲ್ಲೂ, ಅವರ ಉಪದೇಶ, ಸಂದೇಶಗಳಲ್ಲೂ ವಿಶ್ವಾಸಾಧಿಕ್ಯವು ಮೂಡುವುದು. ವಾಯು ದೇವನ ಭೀಮಾವತಾರಕ್ಕೂ ಮಧ್ವಾವತಾರಕ್ಕೂ ಕೊಟ್ಟಿರುವ 'ಕ್ಷೇಮದೇಭ್ಯಃ' ಕ್ಷೇಮ ವನ್ನುಂಟುಮಾಡುವವರೆಂಬ ವಿಶೇಷಣಕ್ಕೆ ಒತ್ತುಕೊಟ್ಟಲ್ಲಿ ಧಾರ್ಮಿಕ, ಆಧ್ಯಾತ್ಮಿಕಕ್ಷೇತ್ರದಲ್ಲಿ ಶ್ರೇಯಸ್ಸು ಉಂಟಾಗುವುದು; ಹಾಗೆಯೇ 'ಪ್ರಾಪ್ತಸ್ಯ ಪರಿರಕ್ಷಣಂ ಕ್ಷೇಮಃ' ಎಂದಿರುವಂತೆ ಬೇರೆಬೇರೆ ಬಗೆಯ ಸಾಧನಾನುಷ್ಠಾನದಿಂದ ಗಳಿಸಿರುವ ಪುಣ್ಯ ಹಾಗೂ ಕೀರ್ತಿ ನಶಿಸದೆ, ಕ್ಷೀಣಿಸದೆ ಮೋಕ್ಷಪ್ರಾಪ್ತಿಗೆ ಉಪಯುಕ್ತವಾಗುವಂತೆ ಪರಿರಕ್ಷಿತವಾಗುವುದು.

## ಇಪ್ಪತ್ತೇಳನೆಯ ಶ್ಲೋಕದ ಫಲಶ್ರುತಿ

**ಭಗವದವತಾರಗಳ ನಡತೆಗಳಲ್ಲಿ ನಟನೆ, ವಿಡಂಬನೆಗಳ ವಿಶ್ಲೇಷಣೆಯ ಚಾತುರ್ಯದ ಲಾಭ, ಭಗವದವತಾರಗಳ ನಟನೆಗಳಿಂದ ಆನಂದಾನುಭವ, ಜ್ಞಾನ ಓಜಸ್ಸುಗಳ ಸಿದ್ಧಿ.**

**'ಗಚ್ಛನ್ ಸೌಗಂಧಿಕಾರ್ಥಂ.....'** ಎಂದು ದ್ರೌಪದಿಯ ಅಪೇಕ್ಷೆಯಂತೆ ಸೌಗಂಧಿಕಾ ಪುಷ್ಪಾಹರಣಕ್ಕಾಗಿ ಸಾಗಿದ ಸಂಗತಿಯಿಂದ ಪ್ರಾರಂಭವಾಗುವ ವಾಯುಸ್ತುತಿಯ ಇಪ್ಪತ್ತೇಳನೆಯ ಶ್ಲೋಕದಲ್ಲಿ ಭೀಮಸೇನ ಆಂಜನೇಯರ ನಡುವೆ ನಡೆದ ನಾಟಕದ ಪ್ರಸ್ತಾವವಿದ್ದು, ಅದರ ಉದ್ದೇಶಾದಿಗಳನ್ನು ಸ್ಪಷ್ಟಪಡಿಸುತ್ತಿರುವ ಈ ಶ್ಲೋಕದ ಉಪಾಸನೆಯಿಂದಾಗಿ ಭಗವದವತಾರಗಳಲ್ಲಿ ಅನ್ಯೋನ್ಯವಾಗಿ ನಡೆಯುವ ನಟನೆ, ವಿಡಂಬನಾದಿಗಳ ಆಂತರ್ಯದ ವಿಶ್ಲೇಷಣೆ ನಡೆಸುವಂತಾಗುವುದು, ಭಕ್ತರ ಮೋಜಿಗಾಗಿ ನಡೆಸುವ ಭಗವಂತನ ನಟನೆಯಿಂದಾಗಿ ಆನಂದಿಸುವಂತಾಗುವುದು; ಬದಲಾಗಿ ಆ ವಿಷಯದಲ್ಲಿ ಸಂಶಯ, ವಿಪರೀತಜ್ಞಾನಗಳಿಗೆ ಬಲಿಯಾಗದಂತಾಗುವುದು.

**'ಪೂರ್ಣಜ್ಞಾನೌಜಸೋಃ......'** –ಎಂದು ಭೀಮಾವತಾರವೂ ಆಂಜನೇಯಾವತಾರವೂ ತಿಳಿವಳಿಕೆಯಿಂದಲೂ ಪೂರ್ಣ, ಓಜಸ್ ಎನಿಸುವ ಶತ್ರುಗಳನ್ನು ಮಣಿಸುವ ಸಾಮರ್ಥ್ಯದಿಂದಲೂ ಪೂರ್ಣ –ಎಂಬ ವಿಶೇಷಣಕ್ಕೆ ಒತ್ತು ಕೊಟ್ಟಲ್ಲಿ ನಮ್ಮಲ್ಲೂ ನಮ್ಮನಮ್ಮ ಯೋಗ್ಯತಾನುಸಾರವಾಗಿ ತಿಳಿವಳಿಕೆಯೂ ಓಜಸ್ಸೂ ಸಿದ್ಧಿಸುವುದು.

## ಇಪ್ಪತ್ತೆಂಟನೆಯ ಶ್ಲೋಕದ ಫಲಶ್ರುತಿ

**ಆಸುರೀಶಕ್ತಿಗಳನ್ನು ನಿಗ್ರಹಿಸುವ ಸಾಮರ್ಥ್ಯ, ದುರ್ವಾದಿಗಳನ್ನು ಸೋಲಿಸುವ ತಾಕತ್ತು ಪತ್ನ್ಯಂತರ್ಗತನ ಪ್ರೀತಿಗಾಗಿ ಪುಷ್ಪಾದಿಗಳನ್ನು ಒದಗಿಸುವ ಹೃದಯವಂತಿಕೆಯ ಪ್ರಾಪ್ತಿ.**

**'ಬಹ್ವೀಃ ಕೋಟೀರಟೀಕಃ.....'** –ಎಂದು ಪ್ರಾರಂಭವಾಗುವ ವಾಯುಸ್ತುತಿಯ ಇಪ್ಪತ್ತೆಂಟನೆಯ ಶ್ಲೋಕದಲ್ಲಿ ಭೀಮಸೇನ ಸೌಗಂಧಿಕಾಹರಣದ ಅವಧಿಯಲ್ಲಿ ಕೋಟಿ ಕೋಟಿ ಸಂಖ್ಯೆಯ ದುಷ್ಟರನ್ನು ದಮನ ಮಾಡಿದ ವಿಷಯವೂ ಅಷ್ಟೊಂದು ಸಾಹಸ ಮಾಡಿ, ಪುಷ್ಪಗಳನ್ನು ತಂದುಕೊಡುವ ಮೂಲಕ ದ್ರೌಪದಿಯನ್ನು ತೃಪ್ತಿಪಡಿಸಿದ ವಿಷಯವೂ ಪ್ರಸ್ತಾಪಿಸಲ್ಪಟ್ಟಿದ್ದು, ಈ ಶ್ಲೋಕದ ಉಪಾಸನೆಯಿಂದಾಗಿ ಕಾಮಕ್ರೋಧಾದಿ ದೋಷಗಳಿಗೆ ಪ್ರೇರಕರಾದ ಆಸುರೀಶಕ್ತಿಗಳನ್ನು ನಿಗ್ರಹಿಸುವ ಸಾಮರ್ಥ್ಯ ಸಿದ್ಧಿಸುವುದು. ತತ್ತ್ವಜ್ಞಾನಕ್ಕೆ ಅಪಚಾರ ಎಸಗುವ ದುರ್ವಾದಿಗಳ ದುರ್ವಾದವನ್ನು ಖಂಡಿಸುವ ತಾಕತ್ತು ಲಭಿಸುವುದು. ಭಾಗವತಧರ್ಮನಿಷ್ಠನಾದ ಭೀಮಸೇನ ಒಬ್ಬ ಸಾಮಾನ್ಯ ಹೆಣ್ಣಿಗನಂತೆ ತನ್ನ ಪ್ರೇಯಸಿಯಾದ ದ್ರೌಪದಿಯನ್ನಷ್ಟೇ ತೃಪ್ತಿಪಡಿಸುವ ಉದ್ದೇಶದಿಂದ ಅಷ್ಟೊಂದು ಶ್ರಮ ಪಟ್ಟು ಸೌಗಂಧಿಕಾಪುಷ್ಪಗಳನ್ನು ದ್ರೌಪದಿಗೆ ತಂದೊಪ್ಪಿಸಲು ಸಾಧ್ಯವೇ ಇಲ್ಲ; ಭಾಗವತ ಧರ್ಮಾನುಷ್ಠಾನದ ಆಧಾರದಲ್ಲಿ ಪ್ರತಿಯೊಬ್ಬರಲ್ಲೂ ಬಿಂಬರೂಪಿ ಪರಮಾತ್ಮನನ್ನು

ಕಾಣುವ ಭೀಮಸೇನ ತನ್ನ ಪತ್ನಿ ದ್ರೌಪದಿಯಲ್ಲೂ ಆಕೆಯ ಬಿಂಬರೂಪಿಪರಮಾತ್ಮನನ್ನು ಕಂಡು ಅವನ ಪ್ರೀತಿಗಾಗಿಯೇ ಸೌಗಂಧಿಕಾಪುಷ್ಪಗಳನ್ನು ತಂದೊಪ್ಪಿಸಿರುವನೆಂಬ ಅನುಸಂಧಾನದ ಹಿನ್ನೆಲೆಯಲ್ಲಿ ನಡೆಸಲಾಗುವ '**.....ಪ್ರಾಯಚ್ಛಃ ಸ್ವಪ್ರಿಯಾಯೈ ಪ್ರಿಯತಮ ಕುಸುಮಂ......**' –ಎಂಬ ಮಾತಿನ ಉಪಾಸನೆಯ ಫಲವಾಗಿ ಪತ್ನಿಯ ಅಂತರ್ಯಾಮಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಆಕೆಯ ಬೇಕುಬೇಡಗಳನ್ನು ಪೂರೈಸಿ, ಆಕೆಯನ್ನು ಸಂತೋಷಪಡಿಸುವಿಕೆ ಸಿದ್ಧಿಸಬಲ್ಲದು.

## ಇಪ್ಪತ್ತೊಂಬತ್ತನೆಯ ಶ್ಲೋಕದ ಫಲಶ್ರುತಿ

**ಮಣಿಮಂತನ ಕೆಟ್ಟ ಶಾಸ್ತ್ರದ ಹಾಗೂ ಆ ಶಾಸ್ತ್ರದಿಂದ ಪ್ರಭಾವಿತ ಗ್ರಂಥಗಳ, ಕೃತಿಗಳ ದುಷ್ಪ್ರಭಾವಕ್ಕೆ ಒಳಗಾಗದಿರುವಿಕೆಯ ಸಿದ್ಧಿ**

'**ದೇಹಾದುತ್ಕ್ರಾಮಿತಾನಾಂ.......**' –ಎಂಬುದಾಗಿ ಪ್ರಾರಂಭವಾಗುವ ವಾಯುಸ್ತುತಿಯ ಇಪ್ಪತ್ತೊಂಬತ್ತನೆಯ ಶ್ಲೋಕದಲ್ಲಿ ಮಣಿಮಂತನಿಂದ ರಚಿತವಾದ ದುಃಶಾಸ್ತ್ರದ ಪ್ರಮುಖ ವಿಷಯ ಹಾಗೂ ಉದ್ದೇಶಗಳ ಉಲ್ಲೇಖವಿದ್ದು, '**ಕ್ರಕಚಮಿವ ಸತಾಂ ಚೇತಸಃ ಕಷ್ಟಶಾಸ್ತ್ರಂ....**' ಸಜ್ಜನರಿಗೆ ಗರಗಸದಿಂದ ಸೀಳಿದಷ್ಟು ಹೃದಯಕ್ಕೆ ನೋವನ್ನುಂಟುಮಾಡುವ ಅದರ ಸ್ವರೂಪದ ಚಿತ್ರಣವೂ ನಡೆದಿದ್ದು, ಈ ಶ್ಲೋಕದ ಉಪಾಸನೆಯ ಫಲವಾಗಿ ಆ ಶಾಸ್ತ್ರದ ಬಗ್ಗೆ ಹಾಗೂ ಆ ಶಾಸ್ತ್ರದಿಂದ ಪ್ರಭಾವಿತ ಗ್ರಂಥಗಳ, ಕೃತಿಗಳ ಬಗ್ಗೆ ಮಹಾದ್ವೇಷ ಉಂಟಾಗುವುದು. ಅನುಭವವಿರುದ್ಧವಾದ ಆ ವಾದದ ಒಂದೊಂದು ಪ್ರಮೇಯವೂ ಎದೆಗೆ ಚುಚ್ಚಿದ ಗರಗಸದಂತೆ ನೋವನ್ನುಂಟುಮಾಡುವುದೆಂಬ ಅದರ ಹೇಯತೆ ಸ್ಪಷ್ಟವಾಗುವುದು.

## ಮೂವತ್ತನೇ ಶ್ಲೋಕದ ಫಲಶ್ರುತಿ

**ಅದ್ವೈತವಾದದ ಪಾಷಂಡವಾದವ್ಯಕ್ತಿತ್ವದ ಸ್ಪಷ್ಟತೆಯ ಸಿದ್ಧಿ, ಮಧ್ವರಿಂದ ನಡೆದ ಅದರ ನಿರಾಕರಣೆಯಲ್ಲಿ ಪೂರ್ಣವಿಶ್ವಾಸದ ಲಾಭ**

'**ತದ್‌ದುಷ್ಪ್ರೇಕ್ಷಾನುಸಾರಾತ್......**' –ಎಂದು ಪ್ರಾರಂಭವಾಗುವ ವಾಯುಸ್ತುತಿ ಮೂವತ್ತನೇ ಶ್ಲೋಕದಲ್ಲಿ ಅದ್ವೈತವಾದವನ್ನು ಪಾಷಂಡವಾದವನ್ನಾಗಿ ಪರಿಚಯಿಸಿಕೊಟ್ಟು ಅದನ್ನು ನಿಗ್ರಹಿಸುವಲ್ಲಿ ಮಧ್ವಾವತಾರದ ವಿಜಯದ ಉಲ್ಲೇಖ ಇರುವುದರಿಂದ ಈ ಶ್ಲೋಕದ ಮಾಧ್ಯಮದಲ್ಲಿ ನಡೆಸಲಾಗುವ ಪುರಶ್ಚರಣೆಯ ಫಲವಾಗಿ ಅದ್ವೈತವಾದದ ಹೇಯತೆ ಸ್ಪಷ್ಟವಾಗುವುದು; ಮಧ್ವರಿಂದ ನಡೆದ ಅದರ ನಿರಾಕರಣೆಯಲ್ಲೂ ಪೂರ್ಣ ವಿಶ್ವಾಸ ಮೂಡಬಲ್ಲುದು.

'**.......ತರೂದ್ದಾಹದಕ್ಷಪ್ರಮಾಣಜ್ವಾಲಾಮಾಲಾಧರಾಗ್ನಿಃ**' –ಅದ್ವೈತಮತದ ಸುಡುವಿಕೆಯಲ್ಲಿ ಸಮರ್ಥವಾದ ಪ್ರಮಾಣಗಳೆಂಬ ಜ್ವಾಲಾಮಾಲೆಯನ್ನು ಧರಿಸಿರುವ ಅಗ್ನಿ ಎಂದು ಮಧ್ವರಿಗೆ ಕೊಟ್ಟ ರೂಪಕಕ್ಕೆ ಹೆಚ್ಚು ಒತ್ತುಕೊಟ್ಟಲ್ಲಿ ಪರಮತದ ನಿರಾಕರಣೆಗೆ ಬೇಕಾಗುವ ಪ್ರಮಾಣಗಳ ಬಾಹುಲ್ಯ ಸಿದ್ಧಿಸುವುದು.

## ಮೂವತ್ತೊಂದನೆಯ ಶ್ಲೋಕದ ಫಲಶ್ರುತಿ

**ದುರ್ವಾದಿಗಳ ದೂರೀಕರಣ, ಪಾಠಪ್ರವಚನಗಳಲ್ಲಿ ಗಾಂಭೀರ್ಯದ ಸಿದ್ಧಿ**

**'ಆಕ್ರೋಶಂತೋ ನಿರಾಶಾಃ.............'** – ಎಂದು ಶ್ರೀಮಧ್ವರ ಸತ್ಸಿದ್ಧಾಂತದ ಕುರಿತ ನಡೆಸಲಾಗುತ್ತಿದ್ದ ಪಾಠಪ್ರವಚನದ ಗಾಂಭೀರ್ಯಕ್ಕೆ ಭಯಪಟ್ಟು ಪಲಾಯನ ನಡೆಸುತ್ತಿದ್ದ ದುರ್ವಾದಿಗಳ ದೈನ್ಯಸ್ಥಿತಿಯ ಚಿತ್ರಣ ನಡೆದಿದ್ದು, ಈ ಶ್ಲೋಕದ ಉಪಾಸನೆಯ ಫಲವಾಗಿ ದುರ್ವಾದಿಗಳ ದೂರೀಕರಣವೂ, ಪಾಠಪ್ರವಚನಗಳಲ್ಲಿ ಗಾಂಭೀರ್ಯವೂ ಸಿದ್ಧಿಸುವುದು.

## ಮೂವತ್ತೆರಡನೆಯ ಶ್ಲೋಕದ ಫಲಶ್ರುತಿ

**ಬಾಹ್ಯ ಹಾಗೂ ಆಂತರ ಶತ್ರುಗಳ ಆಕ್ರಮಣವನ್ನು ತಡೆಗಟ್ಟುವಿಕೆ. ಸಜ್ಜನರಿಗೆ ಸುಖವನ್ನು ಹೊದಿಸುವಿಕೆ, ನಡೆನುಡಿಗಳಲ್ಲಿ ಶಾಸ್ತ್ರೀಯತೆಯ ಸ್ವಚ್ಛತೆಯ ಸಿದ್ಧಿ, ಅಕಾಲಿಕ ಮರಣದ ಪರಿಹಾರ**



**'ತ್ರಿಷ್ವಪ್ಯೇವಾವತಾರೇಷು...........'** –ಎಂಬುದಾಗಿ ಮುಖ್ಯಪ್ರಾಣ ತನ್ನ ಹನುಮಂತ, ಭೀಮ ಹಾಗೂ ಮಧ್ವ ಈ ಮೂರು ಅವತಾರಗಳಲ್ಲೂ ಶತ್ರುಗಳ ಆಕ್ರಮಣದ ಯತ್ನಕ್ಕೊಳಗಾದ ಸಂಗತಿಯೊಂದಿಗೆ ಪ್ರಾರಂಭವಾಗುತ್ತಿರುವ ವಾಯುಸ್ತುತಿಯ ಮೂವತ್ತೆರಡನೆಯ ಶ್ಲೋಕದಲ್ಲಿ ವಾಯುದೇವರ ಮೂರು ಅವತಾರಗಳಲ್ಲೂ ಅವರ ಶತ್ರುಗಳಿಂದ ಎಸಗಲ್ಪಟ್ಟ ಹಿಂಸೆಯ ಯತ್ನದ ಪ್ರಸ್ತಾವ, ಅದಕ್ಕೆ ದೈಹಿಕವಾಗಿಯಾಗಲೀ, ವೈಚಾರಿಕವಾಗಿಯಾಗಲೀ ಕಿಂಚಿತ್ತೂ ಬಲಿಯಾಗದ ವಾಯುದೇವನ **ಅಖಣ್ಡಾತ್ಮವ್ಯಕ್ತಿತ್ವದ** ವರ್ಣನೆ, ಅದಕ್ಕೆ ಮುಖ್ಯ ಪ್ರಯೋಜಕವಾಗಿ ದೇಹ, ಮಾತು ಹಾಗೂ ಮನಸ್ಸು –ಈ ಮೂರು ಕರಣಗಳಲ್ಲೂ ನೆಲೆಸಿದ್ದು 'ತ್ರಿಧಾಮಾ' ಎನಿಸಿ ಆ ತ್ರಿಕರಣಗಳ ಮೇಲೂ ಆಸುರೀಶಕ್ತಿಗಳ ಆಕ್ರಮಣ ಆಗದಂತೆ ರಕ್ಷಣೆ ನೀಡುತ್ತಿದ್ದ ಭಗವಂತನ ರಕ್ಷಣೆಯ ವೈಖರಿಯ ಉದ್ಗಾರ ಇವು ನಡೆದಿದ್ದು, ಈ ಶ್ಲೋಕದ ಉಪಾಸನೆಯ ಫಲವಾಗಿ ಬಾಹ್ಯ ಹಾಗೂ ಆಂತರ ಶತ್ರುಗಳ ಆಕ್ರಮಣವನ್ನು ತಪ್ಪಿಸಿಕೊಳ್ಳಬಹುದಾಗಿದೆ.

- ವಾಯುದೇವನಿಗೆ ಕೊಟ್ಟಿರುವ 'ಸ್ವಚ್ಛ:' –ದುಷ್ಟರು ಆಕ್ರಮಣ ನಡೆಸಿದರೆಂದು ಅದಕ್ಕೆ ಪ್ರತಿಯಾಗಿ ವಿವೇಕವನ್ನು ಕಳ ಕೊಂಡು ಅವರನ್ನು ಬೈಯುವುದು, ಅವರಿಗೆ ಹೊಡೆಯುವುದು, ಮಾನಸಿಕವಾಗಿ ಶಪಿಸುವುದು –ಮುಂತಾದ ತ್ರಿಕರಣಗಳಿಗೆ ಸಂಬಂಧಿಸುವ ಕಾಲುಷ್ಯವನ್ನು ದೂರಮಾಡಿ ವೈಚಾರಿಕವಾಗಿ, ವಾಚಿಕವಾಗಿ, ದೈಹಿಕವಾಗಿ ನಿರ್ಮಲ ನಾಗಿದ್ದ ಅವನ ವ್ಯಕ್ತಿತ್ವದ ಚಿಂತನೆಗೆ ಒತ್ತುಕೊಟ್ಟಲ್ಲಿ ಅದರ ಫಲವಾಗಿ ಆ ಬಗೆಯ ಸ್ವಚ್ಛತೆಯನ್ನು ಗಳಿಸಬಹುದಾಗಿದೆ.
- 'ಸ್ವಚ್ಛಂದಮೃತ್ಯು:' –ಎಂಬ ವಿಶೇಷಣಕ್ಕೆ ಒತ್ತು ನೀಡಿದಲ್ಲಿ ಅವನಂತೆ ನಮ್ಮ ಇಚ್ಛೆಗನು ಗುಣವಾಗಿ ಮರಣವನ್ನು ಹೊಂದಲು ಸಾಧ್ಯವಾಗದಿದ್ದರೂ ಅಕಾಲದಲ್ಲಿ ಮರಣ ಕ್ಕೊಳಗಾಗುವ ದುಃಸ್ಥಿತಿಯಿಂದ ಪಾರಾಗಬಹುದು.
- 'ಸುಖಯಸಿ ಸುಜನಂ......' –ಭಗವದ್‌ಭಕ್ತರಾದ ಸುಜನರನ್ನು ಸಂತೋಷಪಡಿಸು ವವನೆಂಬುದಕ್ಕೆ ಒತ್ತು ನೀಡಿದಲ್ಲಿ ನಮ್ಮ ಮೂಲಕವೂ ಭಗವದ್‌ಭಕ್ತರಿಗೆ ಸಾಧನಾನು ಕೂಲತೆಯನ್ನು ಒದಗಿಸಿಕೊಡುವ ಮೂಲಕ ಅವರಿಗೆ ಸಾತ್ವಿಕ ಸಂತೋಷವನ್ನುಂಟು ಮಾಡುವ ಸೌಭಾಗ್ಯ ದೊರಕಬಲ್ಲುದು.
- 'ಜಗದುತ ವಶಗಂ......' – ರುದ್ರಾದಿಸಮಸ್ತ ಜಗತ್ತು ವಾಯುದೇವರ ಅಧೀನ ವಾಗಿದ್ದು ಸಾಧನಾನುಷ್ಠಾನದ ವಿಷಯದಲ್ಲಿ ಅವರು ಹೇಳಿದಂತೆ ನಡೆದುಕೊಳ್ಳು ವುದೆಂಬ ಮಾತಿಗೆ ಒತ್ತು ಕೊಡುವುದರಿಂದ ನಮ್ಮ ಅಧೀನದಲ್ಲಿರುವ ನಮ್ಮ ಪತ್ನಿ, ಪುತ್ರ, ಶಿಷ್ಯ –ಇವರೆಲ್ಲ ಸಾಧನಾನುಷ್ಠಾನದ ವಿಷಯದಲ್ಲಿ ನಮ್ಮನ್ನು ಉಲ್ಲಂಘಿಸದೆ ನಾವು ಹೇಳಿದಂತೆ ನಡೆದುಕೊಳ್ಳುವ ಸ್ಥಿತಿ ಸಿದ್ಧಿಸುವುದು.

## ಮೂವತ್ತಮೂರನೆಯ ಶ್ಲೋಕದ ಫಲಶ್ರುತಿ

**ಸುಜನರ ಕಣ್ಮನಗಳಿಗೆ ಮುದ ನೀಡುವ ಪ್ರವಚನದ ಆಕರ್ಷಕ ಶೈಲಿಯ ಸಿದ್ಧಿ, ಗುರುಗಳಲ್ಲಿ ಶ್ರೀಮಧ್ವರ ದರ್ಶನ, ದುರಿತ ಪರಿಹಾರ**

'ಉದ್ಯನ್ಮಂದಸ್ಮಿತಶ್ರೀ........' –ಇತ್ಯಾದಿಯಾಗಿ ಪ್ರವಚನದ ಅವಧಿಯಲ್ಲಿ ಸೂಸಲ್ಪ ಡುವ ಮಧ್ವರ ಮಂದಹಾಸದ ಸವಿಯ ವರ್ಣನೆಯೊಂದಿಗೆ ಪ್ರಾರಂಭವಾಗುವ ವಾಯು ಸ್ತುತಿಯ ಮೂವತ್ತಮೂರನೆಯ ಶ್ಲೋಕದಲ್ಲಿ ಶ್ರೀಮಧ್ವರ ಪ್ರವಚನದ ಸೌಂದರ್ಯ ಹಾಗೂ ಆ ಅವಧಿಯಲ್ಲಿಯ ಶೋಭಿಸುವ ಮುಖಚಂದ್ರನ ಸೊಗಸು, ಅದರ ಸವಿಯನ್ನು ಉಣ್ಣುವುದಕ್ಕಾಗಿ ಶ್ರೋತೃಗಳು ಹಂಬಲಿಸುವುದು –ಇವುಗಳ ಪ್ರಸ್ತಾವ ನಡೆದಿದ್ದು, ಈ ಶ್ಲೋಕದ ಉಪಾಸನೆಯ ಫಲವಾಗಿ ಆಕರ್ಷಕ ಪ್ರಚನದ ಶೈಲಿಯು ಸಿದ್ಧಿಸುವುದು.

- 'ಸಂದ್ರಕ್ಷ್ಯೇ....... ನಿತ್ಯದಾऽಹಂ ಕದಾ ನು' –ಆನಂದವನ್ನು ಸೂಸುವ, ದುರಿತವನ್ನು ಪರಿಹರಿಸುವ ಆನಂದತೀರ್ಥರ ಮುಖಚಂದ್ರನ ಬಿಂಬವನ್ನು ಪ್ರತಿನಿತ್ಯ ಯಾವಾಗ ಕಂಡೇನು! –ಎಂಬ ಹಂಬಲಿಕೆಯ ಫಲವಾಗಿ ತ್ರಿವಿಕ್ರಮಪಂಡಿತರಿಗೆ ದೊರಕುತ್ತಿದ್ದಂತೆ ನೇರವಾಗಿ ಶ್ರೀಮಧ್ವರ ಮುಖವನ್ನು ಕಾಣುವ ಸೌಭಾಗ್ಯ ದೊರಕದಿದ್ದರೂ ಗುರು

ಗಳಲ್ಲಿ ಆವಿಷ್ಟರಾಗಿ, ಅಂತಹ ಗುರುಗಳ ಮುಖದ ದರ್ಶನದ ಸೌಭಾಗ್ಯ ದೊರಕು ವಂತಾಗುವುದು. ಹಾಗೆಯೇ ಉಡುಪಿ, ಪಾಜಕ ಮುಂತಾದ ಕ್ಷೇತ್ರಗಳಲ್ಲಿ ಇರುವ ಮಧ್ವರ ಜಡಪ್ರತೀಕಗಳಲ್ಲಿ ಮಧ್ವರ ಅಂತಹ ಮುಖದ ದರ್ಶನವನ್ನು ಪಡೆಯು ವಂತಾಗುವುದು.

- **'ದುರಿತನುತ್'** –ದುರಿತಪರಿಹಾರಕವಾದುದೆಂಬ ವಿಶೇಷಣವನ್ನು ಶ್ರೀಮಧ್ವರ ಮುಖ ಚಂದ್ರನಿಗೆ ನೀಡಲಾಗಿದ್ದು, ಚಂದ್ರ ಕತ್ತಲೆಯನ್ನು ದೂರ ಮಾಡುವಂತೆ ಪ್ರವಚನದ ಮೂಲಕ ತತ್ತ್ವಜ್ಞಾನಸಂಪಾದನೆಗೆ ಅಡ್ಡಿ ಮಾಡುವ ಪ್ರಾರಬ್ಧಕರ್ಮರೂಪದಲ್ಲಿರುವ ಪಾಪವನ್ನು ಪರಿಹಾರ ಮಾಡುವಂತಹದ್ದು, ಪೂರ್ಣ ಪರಿಹಾರವಲ್ಲದಿದ್ದರೂ ಉಪ ಮರ್ದಕ್ಕೊಳಪಡಿಸಿ ಪಾಪದ ಪ್ರಭಾವವನ್ನು ಕುಗ್ಗಿಸುವಂತಹದ್ದು ಮಧ್ವರ ಮುಖ ಚಂದ್ರ ಎಂಬ ಅನುಸಂಧಾನದೊಂದಿಗೆ 'ದುರಿತನುತ್' ಮಾತಿನಿಂದ ಅವರ ಮುಖ ಚಂದ್ರನ ಉಪಾಸನೆ ನಡೆಸಿದರೆ ತತ್ತ್ವಜ್ಞಾನಸಂಪಾದನೆಗೆ ಅಡ್ಡಿತರುವ ನಮ್ಮ ದುರಿತ ಪರಿಹಾರವಾಗಬಲ್ಲದು; ಪೂರ್ಣವಾಗಿ ಪರಿಹಾರವಾಗದಿದ್ದರೂ ದುರಿತದ ಪ್ರಭಾವ ಕ್ಷೀಣವಾಗಬಲ್ಲದು.

## ಮೂವತ್ತನಾಲ್ಕನೇ ಶ್ಲೋಕದ ಫಲಶ್ರುತಿ

**ಮಧ್ವಶಾಸ್ತ್ರಶ್ರವಣಸೌಭಾಗ್ಯದ ಪ್ರಾಪ್ತಿ, ಶಾಸ್ತ್ರಶ್ರವಣದಿಂದ ಸಂಶಯ, ಪ್ರಶ್ನೆಗಳ ಪರಿಹಾರದಿಂದಾಗಿ ಮಾನಸಿಕ ನೆಮ್ಮದಿಯ ಪ್ರಾಪ್ತಿ, ಕೇಳುಗರ ಪ್ರಶ್ನೆಗಳನ್ನು ಪರಿಹರಿಸುವ ಸಾಮರ್ಥ್ಯದ ಸಿದ್ಧಿ, ಸಂಶಯಾದಿಗಳ ಪ್ರಯುಕ್ತ ಕೇಳುಗರಲ್ಲಿಯ ಮಾನಸಿಕ ದುಗುಡವನ್ನು ಕಿತ್ತೆಸೆಯುವ ಸಾಮರ್ಥ್ಯದ ಲಾಭ, ಸಚ್ಛಾಸ್ತ್ರಗಳ ರಚನೆಯ ಭಾಗ್ಯದ ಸಿದ್ಧಿ**

'ಪ್ರಾಚೀನಾಚೀರ್ಣ.......' ಇತ್ಯಾದಿಯಾಗಿ ಶ್ರೀಮಧ್ವರಿಂದ ನೇರವಾಗಿ ಪಾಠ ಕೇಳುವ ಸೌಭಾಗ್ಯಕ್ಕೆ ಒಳಗಾಗಿದ್ದ ವಿಷ್ಣುತೀರ್ಥರೇ ಮುಂತಾದ ಮಹನೀಯರ ಸದಾಚಾರಸಂಪತ್ತಿಯ ಹೆಗ್ಗಳಿಕೆಯಿಂದ ಪ್ರಾರಂಭವಾಗುವ ವಾಯುಸ್ತುತಿಯ ಮೂವತ್ತನಾಲ್ಕನೆಯ ಶ್ಲೋಕದಲ್ಲಿ ಮಧ್ವರ ಮಾತುಗಾರಿಕೆಯ ವೈಶಿಷ್ಟ್ಯದ ಪ್ರತಿಪಾದನೆ ನಡೆದಿದ್ದು, ಅದಕ್ಕೆ ಸಂಬಂಧಿಸಿದಂತೆ ಕೇಳುಗರ ಪ್ರಶ್ನೆಗಳನ್ನು ಪರಿಹರಿಸಿ ಸಂತೋಷಪಡಿಸುವಿಕೆ, ತತ್ತ್ವದ ವಿಷಯದಲ್ಲಿ ಗೊಂದಲದ ಪ್ರಯುಕ್ತ ದುಃಖವನ್ನು ಕಿತ್ತೆಸೆಯುವಿಕೆ ಇವುಗಳ ಪ್ರಸ್ತಾವ ಬಂದಿದ್ದು ಈ ಶ್ಲೋಕದ ಉಪಾಸನೆಯ ಫಲವಾಗಿ ವೈಶಿಷ್ಟ್ಯಪೂರ್ಣವಾದ ಮಾತುಗಾರಿಕೆ, ಸಂಶಯ ಪರಿಹಾರದ ಸಾಮರ್ಥ್ಯ –ಇತ್ಯಾದಿಗಳು ಸಿದ್ಧಿಸುವವು.

- **'ಸಚ್ಛಾಸ್ತ್ರಕರ್ತಃ'** –ಸತ್‌ಸಿದ್ಧಾಂತದ ಆಧಾರದಲ್ಲಿ ನಿರ್ದುಷ್ಟಗಳಾದ ಶಾಸ್ತ್ರಗಳನ್ನು ರಚನೆ ಮಾಡಿದವರೇ –ಎಂದು ಶ್ರೀಮಧ್ವರಲ್ಲಿ ಸಲ್ಲಿಸಲಾಗುವ ಸಂಬೋಧನೆಗೆ ಒತ್ತು ನೀಡಿದಲ್ಲಿ ಸಚ್ಛಾಸ್ತ್ರರಚನೆಯ ಸಾಮರ್ಥ್ಯ ಸಿದ್ಧಿಸುವುದು.

- '.....ಶ್ರಾವಯಾಸ್ಮಾಂಶ್ಚ ಕಿಂಚಿತ್' – ನಮಗೂ ಸಚ್ಛಾಸ್ತ್ರದ ಶ್ರವಣ ಕಿಂಚಿತ್ ಪ್ರಮಾಣ ದಲ್ಲಾದರೂ ಆಗುವಂತೆ ಅನುಗ್ರಹಿಸಿ ಎಂದು ಮಧ್ವರಲ್ಲಿ ಸಲ್ಲಿಸಲಾಗುವ ಬಿನ್ನಹಕ್ಕೆ ಒತ್ತು ನೀಡಿದಲ್ಲಿ ನಮಗೆ ಮಧ್ವಶಾಸ್ತ್ರದ ಶ್ರವಣಭಾಗ್ಯ ದೊರಕುವುದು.

ಈಗಾಗಲೇ ಕಿಂಚಿತ್ ಪ್ರಮಾಣದಲ್ಲಿ ಆ ಭಾಗ್ಯ ದೊರಕಿದ್ದರೆ ಇನ್ನಷ್ಟು ಪ್ರಮಾಣ ದಲ್ಲಿ ಹೆಚ್ಚೆಚ್ಚು ಶ್ರೇಷ್ಠಶ್ರೇಷ್ಠ ಗುರುಗಳ ಮೂಲಕ ಸಚ್ಛಾಸ್ತ್ರದ ಶ್ರವಣಭಾಗ್ಯ ದೊರಕ ಬಲ್ಲುದು. ಆ ಗುರುಗಳಲ್ಲಿ ಶ್ರೀಮಧ್ವಗುರುಗಳ ಸನ್ನಿಧಾನದ ಅನುಭವವು ಸಿದ್ಧಿಸುವುದು.

## ಮೂವತ್ತೈದನೇ ಶ್ಲೋಕದ ಫಲಶ್ರುತಿ

### ವೈದಿಕಾದಿವಿದ್ಯೆಗಳ ಸಿದ್ಧಿ ವಿದ್ಯೆಯಿಂದಾಗಿ ಗೌರವದ ಲಾಭ

'ಪೀಠೇ ರತ್ನೋಪಕ್ಲಪ್ತೇ.....' ಎಂದು ಪ್ರಾರಂಭವಾಗುವ ವಾಯುಸ್ತುತಿಯ ಮೂವ ತ್ತೈದನೆಯ ಶ್ಲೋಕದಲ್ಲಿ ಪ್ರತಿಯೊಂದು ದೇವಸಭೆಯಲ್ಲೂ ಪೀಠದಲ್ಲಿ ಸಮಾಸೀನರಾದ ವಾಯುದೇವರಿಗೆ ವೈದಿಕಾದಿವಿದ್ಯಾಭಿಮಾನಿದೇವತೆಗಳು ದೇಹಸಹಿತರಾಗಿ ಬಂದು ಗಾನ, ನರ್ತನಗಳಿಂದ ಸಹಿತವಾಗಿ ವೈಭವದಿಂದ ಸೇವಿಸುವ ಘಟನೆಯ ಉಲ್ಲೇಖ ನಡೆದಿದ್ದು, ಈ ಶ್ಲೋಕದ ಉಪಾಸನೆಯ ಫಲವಾಗಿ ವೈದಿಕಾದಿ ವಿದ್ಯಾಭಿಮಾನಿಗಳ ಅನುಗ್ರಹ ಪೂರ್ವಕವಾಗಿ ವಿದ್ಯೆಗಳ ಫಲಪ್ರಾಪ್ತಿರೂಪವಾದ ಸಿದ್ಧಿಯು ದೊರಕುವುದು. ವಿದ್ಯಾ ಸಂಪಾದನೆಯ ಫಲವಾಗಿ ಗೌರವವೂ ಲಭಿಸುವುದು.

- 'ಸುಚರಿತ' –ನಿರ್ದುಷ್ಟವಾದ ಚಾರಿತ್ರ್ಯಸಂಪನ್ನನೇ –ಎಂದು ವಾಯುದೇವನಿಗೆ ನೀಡ ಲಾದ ಸಂಬೋಧನೆಗೆ ಒತ್ತು ಕೊಡುವುದರಿಂದ ಸಚ್ಚಾರಿತ್ರ್ಯಸಂಪತ್ತಿ ಸಿದ್ಧಿಸುವುದು.

## ಮೂವತ್ತಾರನೆಯ ಶ್ಲೋಕದ ಫಲಶ್ರುತಿ

### ಶರಣದಾತೃವಿನ ಲಾಭ, ದೇಹಸೌಷ್ಠವದ ಸಿದ್ಧಿ. ವ್ಯಾಸಾವತಾರದ ವಿಶ್ವಾಸದಲ್ಲಿ ದಾರ್ಢ್ಯದ ಲಾಭ

'ಸಾನುಕ್ರೋಶೈರಜಸ್ರಂ........' –ಎಂದು ಪ್ರಾರಂಭವಾಗುವ ವಾಯುಸ್ತುತಿಯ ಮೂವತ್ತಾರನೆಯ ಶ್ಲೋಕದಲ್ಲಿ ಸಂಸಾರಮಗ್ನರಿಗೆ ರಕ್ಷಣೆ ನೀಡಲು ಸಲ್ಲಿಸಿದ ವಾಯು ದೇವನ ಪ್ರಾರ್ಥನೆಗೆ ಸ್ಪಂದಿಸಿ ವೇದವ್ಯಾಸರಾಗಿ ಅವತರಿಸಿರುವ ಘಟನೆಯ ಉಲ್ಲೇಖವೂ, ಹಾಗೆ ಅವತರಿಸಿರುವ ವೇದವ್ಯಾಸರ ಶರೀರ ಜ್ಞಾನಾತ್ಮಕವೇ ಹೊರತು ಪ್ರಕೃತಿನಿರ್ಮಿತ ವಾದುದಲ್ಲ ಎಂಬ ಉದ್ಘೋಷಣೆಯೂ ಪ್ರಸ್ತುತವಾಗಿದ್ದು, ಈ ಶ್ಲೋಕದ ಉಪಾಸನೆಯ ಫಲವಾಗಿ ಸಂಸಾರದಲ್ಲಿ ಒದ್ದಾಡುವವರಿಗೆ ಅದರಿಂದ ಪಾರುಮಾಡುವ ರಕ್ಷಕರು ದೊರಕ ಬಲ್ಲರು. ವೇದವ್ಯಾಸರ ದೇಹದ ಸೌಷ್ಠವದ ಚಿಂತನೆಯ ಫಲವಾಗಿ ದೇಹಸೌಷ್ಠವವು ಸಿದ್ಧಿಸ ಬಲ್ಲದು. ವೇದವ್ಯಾಸರು ಭಗವಂತನ ಸಾಕ್ಷಾದವತಾರ ಎಂಬ ವಿಶ್ವಾಸ ದೃಢವಾಗಬಲ್ಲದು.

## ಮೂವತ್ತೇಳನೆಯ ಶ್ಲೋಕದ ಫಲಶ್ರುತಿ

**ಶುದ್ಧತತ್ತ್ವಜ್ಞಾನದ ಸಂಪ್ರಾಪ್ತಿ, ತತ್ತ್ವಜ್ಞಾನದ ನಿರ್ಣಯಗಳನ್ನು ಸ್ಪಷ್ಟಪಡಿಸುವ ಮೂಲಕ ಜ್ಞಾನಾಧಿಕಾರಿಗಳಿಗೆ ಉಪಕಾರದ ಸಲ್ಲಿಕೆ, ಗುರುತ್ವದ ಲಾಭ**

'ಅಸ್ತವ್ಯಸ್ತಂ ಸಮಸ್ತಶ್ರುತಿಗತಂ.......' ಇತ್ಯಾದಿಯಾಗಿ ಪ್ರಾರಂಭವಾಗುವ ವಾಯು ಸ್ತುತಿಯ ಮೂವತ್ತೇಳನೆಯ ಶ್ಲೋಕದಲ್ಲಿ ಜ್ಞಾನಯೋಗ್ಯರಾಗಿದ್ದು 'ಲೋಕ' (ಲೋಕ್ಯ ದರ್ಶನೇ) ಎನಿಸಿದ್ದ ಯೋಗ್ಯಾಧಿಕಾರಿಗಳಿಗೆ ನಿಶ್ಚಿತಜ್ಞಾನವನ್ನು ಒದಗಿಸುವ ಉಪಕಾರಕ್ಕಾಗಿ ಶ್ರೀವೇದವ್ಯಾಸರ ಮೂಲಕ ನಡೆದ ಬ್ರಹ್ಮಸೂತ್ರಗ್ರಂಥದ ರಚನೆ ಅದರ ಉದ್ದೇಶಪೂರ್ವಕ ವಾಗಿ ಪ್ರಸ್ತಾವಿಸಲ್ಪಟ್ಟಿದ್ದು, ಅಂತಹ ಸೂತ್ರಕಾರರ ಅನುಗ್ರಹದಿಂದಾಗಿ ತತ್ತ್ವಜ್ಞಾನದ ಲಾಭ ಆಗುವಂತೆ ಅವರಿಗೆ ನಮಸ್ಕರಿಸುವುದೂ ಉಲ್ಲೇಖಗೊಂಡಿದ್ದು, ಈ ಶ್ಲೋಕದ ಉಪಾಸನೆ ಯಿಂದಾಗಿ ಶುದ್ಧ ತತ್ತ್ವಜ್ಞಾನದ ಪ್ರಾಪ್ತಿ, ತತ್ತ್ವಜಿಜ್ಞಾಸುಗಳಿಗೆ ತಾತ್ತ್ವಿಕ ನಿರ್ಣಯವನ್ನು ಒದಗಿಸುವ ಮೂಲಕ ಉಪಕರಿಸುವ ಭಾಗ್ಯದ ಲಾಭ ಆಗುವುದು. ವೇದವ್ಯಾಸರಿಗೆ ಕೊಟ್ಟ 'ಗುರುತಮ' ವಿಶೇಷಣಕ್ಕೆ ಒತ್ತು ನೀಡಿದಲ್ಲಿ ನಮ್ಮ ಯೋಗ್ಯತಾನುಸಾರ ನಮಗೆ ಗುರು ತ್ವವೂ ಸಿದ್ಧಿಸಬಲ್ಲುದು.

## ಮೂವತ್ತೆಂಟನೆಯ ಶ್ಲೋಕದ ಫಲಶ್ರುತಿ

**ಹರಿಯ ಆಜ್ಞಾರೂಪದಲ್ಲಿರುವ ಶ್ರುತಿಸ್ಮೃತಿಗಳ ಸಂದೇಶ ಆದೇಶಗಳನ್ನು ಶಿರಸಾ ಪಾಲಿಸಲು ಬೇಕಾದ ನಿಷ್ಠೆಯ ಸಿದ್ಧಿ, ಕಾರ್ಯವನ್ನು ಅನಾಯಾಸವಾಗಿ ನಿರ್ವಹಿಸುವ ಕೌಶಲ, ಸೂತ್ರಸಿದ್ಧಾಂತಕ್ಕೆ ವಿರುದ್ಧ ವಿಚಾರಗಳನ್ನು ನಿರಾಕರಿಸಿ, ಅದಕ್ಕೆ ಸಮ್ಮತ ಪ್ರಮೇಯಗಳನ್ನು ಪ್ರಚುರಪಡಿಸಲು ಬೇಕಾದ ದೀಕ್ಷೆಯ ಲಾಭ**

'ಆಜ್ಞಾಮನ್ಯೈರಧಾರ್ಯಾಂ.......' –ಎಂಬುದಾಗಿ ಪ್ರಾರಂಭವಾಗುವ ವಾಯು ಸ್ತುತಿಯ ಮೂವತ್ತೆಂಟನೆಯ ಶ್ಲೋಕದಲ್ಲಿ ಭಗವದಾದೇಶವನ್ನೂ, ದೇವತೆಗಳ ಪ್ರಾರ್ಥನೆ ಯನ್ನೂ ಮನ್ನಿಸಿ ಅವತಾರ ತಾಳಿದ ಮಧ್ವಾಚಾರ್ಯರು ಬ್ರಹ್ಮಸೂತ್ರದ ಬಗ್ಗೆ ಹೊರಟ ದುರ್ಭಾಷ್ಯಗಳ ಖಂಡನಪೂರ್ವಕ ನಿರ್ದುಷ್ಟಭಾಷ್ಯವನ್ನು ರಚಿಸಿದ್ದನ್ನು ಪ್ರಸ್ತಾವಿಸಲಾಗಿದ್ದು, ಈ ಶ್ಲೋಕದ ಉಪಾಸನೆಯ ಫಲವಾಗಿ ಶ್ರುತಿಸ್ಮೃತಿಗಳ ಸಂದೇಶ ಆದೇಶಗಳ ರೂಪ ದಲ್ಲಿರುವ ಭಗವದಾಜ್ಞಾನುಸರಣೆಯ ಬಗ್ಗೆ ನಿಷ್ಠೆ, ಸೂತ್ರಸಿದ್ಧಾಂತಕ್ಕೆ ಅಪಚಾರ ಎಸಗುವ ದುರ್ಭಾಷ್ಯಗಳ ಖಂಡನಪೂರ್ವಕಸೂತ್ರಸಿದ್ಧಾಂತದ ನೈಜತಾತ್ಪರ್ಯವನ್ನು ಸಾರುವ ನಿರ್ದುಷ್ಟಭಾಷ್ಯದ ಆಂತರ್ಯವನ್ನು ಪ್ರಚುರಪಡಿಸುವಲ್ಲಿ ಬೇಕಾದ ದೀಕ್ಷೆ– ಇವುಗಳು ಸಿದ್ಧಿಸುವವು.

- ಶ್ರೀಮಧ್ವಗುರುಗಳಿಗೆ 'ಅಕ್ಲಿಷ್ಟಕರ್ಮಾ' –ಜ್ಞಾನಕಾರ್ಯಗಳನ್ನು ಅನಾಯಾಸವಾಗಿ ನಡೆಸುವವರೆಂಬ ವಿಶೇಷಣ ನೀಡಲಾಗಿದ್ದು ಆ ವಿಶೇಷಣಕ್ಕೆ ಒತ್ತು ನೀಡಿದಲ್ಲಿ

ಯಾವುದೇ ಜ್ಞಾನಕಾರ್ಯವನ್ನು ಅನಾಯಾಸವಾಗಿ ನಿರ್ವಹಿಸುವ ಕೌಶಲವು ಸಿದ್ಧಿಸ ಬಲ್ಲದು.

## ಮೂವತ್ತೊಂಭತ್ತನೆಯ ಶ್ಲೋಕದ ಫಲಶ್ರುತಿ

**ಸಂನ್ಯಾಸಶ್ರಮಕ್ಕೆ ಯೋಗ್ಯತೆಯುಳ್ಳ ವ್ಯಕ್ತಿಗಳಿಗೆ ಸಂನ್ಯಾಸದ ಸಾರಭೌಮರಾಗಿ ಮೆರೆಯುವಿಕೆ, ಬದರೀಕ್ಷೇತ್ರಕ್ಕೆ ತೀರ್ಥಯಾತ್ರೆ, ವೇದವ್ಯಾಸರ ದರ್ಶನ, ಗೀತಾಭಾಷ್ಯಾದಿಗಳ ಬಗ್ಗೆ, ಮಹಾಭಾರತದ ಬಗ್ಗೆ ಗ್ರಂಥರಚನೆಯ ಸಾಮರ್ಥ್ಯದ ಸಿದ್ಧಿ.**

**'ಭೂತ್ವಾ ಕ್ಷೇತ್ರೇ ವಿಶುದ್ಧೇ.......'** –ಎಂದು ವಾಯುದೇವ ಮಧ್ವರಾಗಿ ಅವತರಿಸಿದ ಕ್ಷೇತ್ರಾದಿಗಳ ವೈಶಿಷ್ಟ್ಯವನ್ನು ಸಾರುತ್ತ ಪ್ರಾರಂಭಗೊಂಡ ವಾಯುಸ್ತುತಿಯ ಮೂವತ್ತೊಂಭತ್ತನೆಯ ಶ್ಲೋಕದಿಂದ ನಡೆಸಲಾಗುವ ಉಪಾಸನೆಯ ಫಲವಾಗಿ ಬದರೀಕ್ಷೇತ್ರಯಾತ್ರೆ, ಅಲ್ಲಿ ವೇದವ್ಯಾಸರ ಸಂದರ್ಶನ, ಗೀತಾಭಾಷ್ಯಾದಿಗ್ರಂಥಗಳ ವಿಶೇಷ ಚಿಂತನಪ್ರಯುಕ್ತವಾಗಿ ಅವುಗಳಿಗೆ ಸಂಬಂಧಿಸುವ ಕೃತಿಗಳ ರಚನಾಪಾಟವ –ಇತ್ಯಾದಿಗಳು ಸಿದ್ಧಿಸುವವು.

- **'ಪಾರಿವ್ರಾಜ್ಯಾಧಿರಾಜಃ'** –ಸಂನ್ಯಾಸಾಶ್ರಮಕ್ಕೆ ಸಾರ್ವಭೌಮನಾಗಿರುವವನೆಂದು ಶ್ರೀಮಧ್ವರಿಗೆ ಕೊಡಲಾದ ವಿಶೇಷಣಕ್ಕೆ ಒತ್ತು ನೀಡಿದಲ್ಲಿ ಯಾರಿಗೆ ಸಂನ್ಯಾಸ ಸ್ವೀಕರಿಸಲು ಯೋಗ್ಯತೆ ಇದೆಯೋ ಅಂತಹವರು ಸಂನ್ಯಾಸಸಾರ್ವಭೌಮರಾಗಿ ಮೆರೆಯಬಲ್ಲರು.

## ನಲ್ವತ್ತನೆಯ ಶ್ಲೋಕದ ಫಲಶ್ರುತಿ

**ಶ್ರೀಸಹಿತ ಶ್ರೀಪತಿಗೆ ವಂದಿಸುತ್ತ ಇರುವ ಶೀಲದ ಸಿದ್ಧಿ, ಶುದ್ಧಿಯ ಪ್ರಾಪ್ತಿ, ಪಾವಿತ್ರ್ಯದ ಲಾಭ, ಭವಭಯದ ಪರಿಹಾರ, ಅಥವಾ ಶಿಥಿಲೀಕರಣ, ಸಜ್ಜನರನ್ನು ಸಂತೋಷಪಡಿಸುವ ಸೌಭಾಗ್ಯ**

**'ವಂದೇ ತಂ ತ್ವಾ.....'** – ಎಂದು ಪ್ರಾರಂಭವಾಗುವ ವಾಯುಸ್ತುತಿಯ ನಲ್ವತ್ತನೇ ಶ್ಲೋಕದಲ್ಲಿ ಶ್ರೀಮದಾನಂದತೀರ್ಥರ ದೇವವೃಂದಸೇವ್ಯತ್ವ, ಈಶನಿಗೆ ವಂದಾರುತ್ವ, ಗಂಗಾ ಸಂಗಕ್ಕಿಂತಲೂ ಅಧಿಕಪಾವಿತ್ರ್ಯಪ್ರದತ್ವ, ಭವಭಯದಾಹಕತ್ವ, ಸಜ್ಜನರನ್ನು ಸಂತೋಷ ಪಡಿಸುವಿಕೆ –ಇವಿಷ್ಟು ಗುಣಗಳ ಉಲ್ಲೇಖ ನಡೆದಿದ್ದು, ಈ ಶ್ಲೋಕದ ಉಪಾಸನೆಯ ಫಲ ವಾಗಿ ಈಶನಿಗೆ ವಂದಿಸುತ್ತ ಇರುವಿಕೆಯೇ ಮುಂತಾದ ಫಲಗಳು ಸಿದ್ಧಿಸುವವು.

- ಶ್ರೀಮದಾನಂದತೀರ್ಥರಿಗೆ **'ಭವಭಯದಹನಂ'** –ಸಂಸಾರಭಯಕ್ಕೆ ಬೆಂಕಿಯಂತೆ ಇರುವವರೆಂದು ನೀಡಲಾದ ವಿಶೇಷಣಕ್ಕೆ ಒತ್ತು ನೀಡಿದಲ್ಲಿ ಸಂಸಾರಭಯ ದೂರ ವಾಗುವುದು; ಪೂರ್ಣ ದೂರವಾಗದಿದ್ದರೂ ಸಡಿಲವಾಗುವುದು.
- **'ಸಜ್ಜನಾನ್ ಮೋದಯಂತಂ......'** ಸಜ್ಜನರನ್ನು ಸಂತೋಷಪಡಿಸುವವರೆಂದು ಶ್ರೀಮಧ್ವರಿಗೆ ನೀಡಲಾದ ವಿಶೇಷಣಕ್ಕೆ ಹೆಚ್ಚು ಒತ್ತು ನೀಡಿದಲ್ಲಿ ಶಾಸ್ತ್ರಾರ್ಥದ ಪ್ರಸಾರದ ಮೂಲಕ ಸಜ್ಜನರನ್ನು ಮೋದಪಡಿಸುವ ಸೌಭಾಗ್ಯ ಸಿದ್ಧಿಸುವುದು.

● 'ಮಂದಾಕಿನೀಸತ್ಸರಿದಮಲಜಲಾಸೇಕಸಾಧಿಕ್ಯಸಂಗಂ...................' ಮಂದಾಕಿನಿಯ ಜಲಾಭಿಷೇಕದಿಂದ ದೊರಕುವ ಪಾವಿತ್ರ್ಯಕ್ಕಿಂತಲೂ ಅಧಿಕ ಪಾವಿತ್ರ್ಯವನ್ನು ನೀಡುವವ ರೆಂದು ಶ್ರೀಮಧ್ವರಿಗೆ ನೀಡಲಾದ ವಿಶೇಷಣಕ್ಕೆ ಒತ್ತು ನೀಡಿದಾಗ ಮಧ್ವರ ಸನ್ನಿಧಾನ ದಿಂದಾಗಿ, ಅವರ ವಿಚಾರಧಾರೆಯನ್ನು ಸಾರುವ ಸರ್ವಮೂಲಗ್ರಂಥಗಳ ವೈಚಾರಿಕ ಸಂಪರ್ಕದಿಂದಾಗಿ ಅಧಿಕ ಪಾವಿತ್ರ್ಯವು ಸಿದ್ಧಿಸುವುದು.

## ನಲ್ವತ್ತೊಂದನೆಯ ಶ್ಲೋಕದ ಫಲಶ್ರುತಿ

**ಸ್ತುತಿರೂಪವಾದ ಹಾರದ ಅರ್ಪಣೆಯೊಂದಿಗೆ ಹರಿಗುರುಗಳನ್ನು ಪೂಜಿಸುವ ಸೌಭಾಗ್ಯದ ಲಾಭ; ಭಕ್ತಿಜ್ಞಾನಾದಿಗಳ ಅಭಿವೃದ್ಧಿ**

ವಾಯುಸ್ತುತಿಯ 'ಸುಬ್ರಹ್ಮಣ್ಯಾಖ್ಯಸೂರೇಃ.......' ಇತ್ಯಾದಿಯಾಗಿ ಪ್ರಾರಂಭವಾಗುವ ಉಪಸಂಹಾರದ ಶ್ಲೋಕವು ಸ್ತುತಿಯ ಕರ್ತೃವಿನ ಪರಿಚಯ, ರಚನೆಯ ಉದ್ದೇಶ ಹಾಗೂ ಸ್ತುತಿಯ ಫಲಶ್ರುತಿ –ಇವನ್ನು ಪ್ರಸ್ತುತಪಡಿಸಲು ಉಪಸಂಹಾರದ ಮಾತಾಗಿ ಹೊರಟದ್ದು. ಆದರೂ ಮಂತ್ರದ ಮೆರುಗು ಪಡೆದಿರುವ ವಾಯುಸ್ತುತಿಯ ಘಟಕವಾದ ಉಪ ಸಂಹಾರದ ಮಾತಿನಲ್ಲೂ ಸ್ತುತಿಮಾಲೆಯ ಮೂಲಕ ಹರಿಗುರುಗಳ ಸಂರಾಧನೆಯ ಉಲ್ಲೇಖವೂ, ಆ ಆರಾಧನೆಯ ಫಲವಾಗಿ ಬುದ್ಧಿ, ಭಕ್ತ್ಯಾದಿಗಳ ಅಭಿವೃದ್ಧಿಯೊಂದಿಗೆ ಕ್ರಮೇಣ ಮುಕ್ತಿಯನ್ನು ತಲುಪುವ ಫಲದ ಉಲ್ಲೇಖವೂ ಬಂದಿರುವುದರಿಂದ, ಈ ಅಂಶ ಗಳಿಗೆ ಒತ್ತುಕೊಟ್ಟು ಈ ಶ್ಲೋಕದ ಮಾಧ್ಯಮದಲ್ಲಿ ನಡೆಸಲಾಗುವ ಉಪಾಸನೆಯ ಫಲ ವಾಗಿ ಈ ವಾಯುಸ್ತುತಿಯಂತಹ ಸ್ತುತಿಯನ್ನು ರಚಿಸಿ, ಅದರ ಮೂಲಕ ಹರಿಗುರುಗಳನ್ನು ಆರಾಧಿಸುವ ಸೌಭಾಗ್ಯವೂ, ಇದರ ಫಲವಾಗಿ ಬುದ್ಧಿಭಕ್ತ್ಯಾದಿಗಳಲ್ಲಿಯ ಅಭಿ ವೃದ್ಧಿಯೂ ಕ್ರಮೇಣ ಮುಕ್ತಿಯೂ ದೊರಕಬಲ್ಲುದು.

★

# ಶ್ರೀ ತ್ರಿವಿಕ್ರಮಪಂಡಿತಾಚಾರ್ಯವಿರಚಿತಮ್

## • ಶ್ರೀಮಧ್ವಾಷ್ಟಕಮ್[13] •

ಅಜ್ಞಾನನಾಶಾಯ ಸತಾಂ ಜನಾನಾಂ
ಕೃತಾವತಾರಾಯ ವಸುಂಧರಾಯಾಮ್ ।
ಮಧ್ವಾಭಿಧಾನಾಯ ಮಹಾಮಹಿಮ್ನೇ
ಹತಾಘಸಂಘಾಯ ನಮೋಽನಿಲಾಯ ॥ ೧ ॥

ಸಜ್ಜನರ ಅಜ್ಞಾನ ನಾಶಕ್ಕಾಗಿ ಭೂಮಿಯ ಮೇಲೆ ಅವತರಿಸಿರುವ, ಮೂಲರೂಪದಲ್ಲಿ ಅ ಎನಿಸುವ ಭಗವಂತನಿಗೆ ವಿಶೇಷವಾಗಿ ನಿವಾಸಸ್ಥಾನವಾಗಿದ್ದು 'ಅನಿಲ' ಎನಿಸಿರುವ, ಉಪನಿಷತ್‌ಪ್ರತಿಪಾದ್ಯಗಳಾಗಿದ್ದು ಶ್ರೇಷ್ಠಗಳೆನಿಸುವ ಮಹಿಮೆಗಳಿಂದ ಕೂಡಿದ, ಸಜ್ಜನರ ಪಾಪಸಮೂಹವನ್ನು ಪರಿಹರಿಸುವ, ಮಧ್ವ ಎಂಬ ಹೆಸರಿನ ಗುರುಗಳಿಗೆ ಪ್ರಣಾಮ.

---

13. ಶ್ರೀ ತ್ರಿವಿಕ್ರಮಪಂಡಿತಾಚಾರ್ಯರು ಶ್ರೀ ಮಧ್ವಗುರುಗಳ ಸಾಕ್ಷಾತ್ ಶಿಷ್ಯರು. ಮಧ್ವಗುರುಗಳ ಗುಣಮಹಿಮೆಗಳನ್ನು ಕಂಡವರು; ಅನುಭವಿಸಿದವರು. ಆದ್ದರಿಂದ ಕೇಳಿ ಬರೆದ ಉಳಿದವರ ಮಧ್ವಸ್ತುತಿಗಳಿಗಿಂತ ತ್ರಿವಿಕ್ರಮಪಂಡಿತರು ರಚಿಸಿದ ಸ್ತುತಿ ಅಧಿಕ ಅಧಿಕೃತವೆನಿಸುವುದು. ಅಲ್ಲದೆ ಶ್ರೀ ಮಧ್ವರ ಸಮಕಾಲೀನರಾಗಿದ್ದ ತ್ರಿವಿಕ್ರಮಪಂಡಿತರು ರಚಿಸಿರುವ ಸ್ತುತಿ ಶ್ರೀ ಮಧ್ವರ ದೃಷ್ಟಿಗೂ ಬಿದ್ದು ಅವರ ಸಮ್ಮತಿಯ ಅನುಗ್ರಹಕ್ಕೆ ಒಳಗಾಗದಿರುವ ಸಾಧ್ಯತೆಯೂ ಇಲ್ಲ. ಈ ದೃಷ್ಟಿಯಿಂದಲೂ ಅದು ಮತ್ತಷ್ಟು ಅಧಿಕೃತವೆನಿಸಬಲ್ಲದು. ಈ ಕಾರಣದಿಂದಾಗಿ ಇದನ್ನು ಹೆಚ್ಚಾಗಿ ವಿನಿಯೋಗಿಸಿಕೊಳ್ಳುವಂತಾಗಬೇಕೆಂದು ಈ ಸ್ತುತಿಯನ್ನು ಅನುವಾದಸಹಿತವಾಗಿ ಪ್ರಕಟಿಸಲಾಗಿದೆ.

ಹಾಗೆಯೇ ತ್ರಿವಿಕ್ರಮಪಂಡಿತಾಚಾರ್ಯರು ತಮ್ಮ ತತ್ವದೀಪಿಕಾಟೀಕೆಯ ಪ್ರಾರಂಭದಲ್ಲಿ ಇಪ್ಪತ್ತು ಶ್ಲೋಕಗಳಲ್ಲಿ [4 ರಿಂದ 23ರ ವರೆಗೆ] ಶ್ರೀ ಮಧ್ವರನ್ನು ಹೃತ್ಪೂರ್ವಕವಾಗಿ ಸ್ತುತಿಸಿದ್ದು, ಅದೊಂದು ಪ್ರತ್ಯೇಕವಾಗಿ ಮಧ್ವಸ್ತುತಿ ಎಂದೇ ಪರಿಗಣಿಸಲು ಅರ್ಹವಾಗಿದೆ. ಇಪ್ಪತ್ತು ಶ್ಲೋಕಗಳ ಈ ಮಧ್ವಸ್ತುತಿಯೂ ಮಧ್ವರನ್ನು ಕಂಡು, ಅವರ ಗುಣಮಹಿಮೆಗಳನ್ನು ಅನುಭವಿಸಿ ರಚಿತವಾಗಿರುವ ಪ್ರಯುಕ್ತ ಅಧಿಕೃತತ್ವವನ್ನೂ, ಮಧ್ವರ ದೃಷ್ಟಿಗೆ ಬಿದ್ದು ಅವರ ಸಮ್ಮತಿಗೆ ಪಾತ್ರವಾಗಿರುವ ಪ್ರಯುಕ್ತ ಅಧಿಕೃತತ್ವವನ್ನೂ ಪಡೆದಿರುವಂತಹದ್ದು. ಆದ್ದರಿಂದ ಸಾಧಕರು 'ವಾಯುಸ್ತುತಿ'ಯಂತೆ ಇದನ್ನೂ ಪ್ರತಿನಿತ್ಯ ಪಠಿಸಿ ಶ್ರೀ ಮಧ್ವಗುರುಗಳ ಪ್ರಭಾವಕ್ಕೆ ಒಳಗಾಗುವಂತಾಗಬೇಕೆಂಬ ಉದ್ದೇಶದಿಂದ ಅನುವಾದಸಹಿತವಾಗಿ ಪ್ರಕಟಿಸಲಾಗಿದೆ.

ಯೇನ ಸ್ವಸಿದ್ಧಾಂತಸರೋಜಮದ್ಧಾ
ವಿಕಾಸಿತಂ ಗೋಭಿರಲಂ ವಿಶುದ್ಧೈಃ ।
ದುಸ್ತರ್ಕನೀಹಾರಕುಲಂ ಚ ಭಿನ್ನಂ
ತಸ್ಮೈ ನಮೋ ಮಧ್ವದಿವಾಕರಾಯ ॥ ೨ ॥

ವೇದದ ಹಾಗೂ ವೇದವ್ಯಾಸಾದಿ ಭಗವದ್ರೂಪಗಳ ಮಾತುಗಳ ಸಂವಾದಕ್ಕೊಳಗಾಗಿದ್ದು, ಚೆನ್ನಾಗಿ ಪರಿಶುದ್ಧಗಳೆನಿಸಿರುವ ತಮ್ಮ ಮಾತುಗಳಿಂದ ಯಾರು ತಮ್ಮ ಸಿದ್ಧಾಂತವೆಂಬ ಕಮಲವನ್ನು ಚೆನ್ನಾಗಿ ಅರಳಿಸಿರುವರೋ, ಹೀಗೆ ತಮ್ಮ ಸಿದ್ಧಾಂತವನ್ನು ಅರಳಿಸುವ ಮೂಲಕ ಕೆಟ್ಟ ಯುಕ್ತಿಗಳೆಂಬ ಮಂಜು ಮುದ್ದೆ ಯಾರಿಂದ ಭೇದಿಸಲಾಗಿದೆಯೋ ಅಂತಹ ಮಧ್ವಸೂರ್ಯನಿಗೆ ಪ್ರಣಾಮ.

ಪ್ರಪನ್ನತಾಪಪ್ರಶಮೈಕಹೇತುಂ
ದುರ್ವಾದಿವಾದೇಂಧನಧೂಮಕೇತುಮ್ ।
ನಿರಂತರಂ ನಿರ್ಜಿತಮೀನಕೇತುಂ
ನಮಾಮ್ಯಹಂ ಮಧ್ವಮುನಿಪ್ರಕಾಂಡಮ್ ॥ ೩ ॥

ಶರಣಾಗತರಾದ ಭಕ್ತರ ಮೂರೂ ಬಗೆಯ ತಾಪಗಳನ್ನು ಪರಿಹರಿಸುವಲ್ಲಿ ಮುಖ್ಯ ಕಾರಣರಾದ, ಕೆಟ್ಟ ವಾದಿಗಳ ವಾದ ಎಂಬ ಕಟ್ಟಿಗೆಯನ್ನು ಸುಟ್ಟುಹಾಕುವಲ್ಲಿ ಧೂಮಕೇತುವೆನಿಸಿರುವ, ಮೀನಧ್ವಜನಾದ ಮನ್ಮಥನನ್ನು ಯಾವಾಗಲೂ ಗೆದ್ದಿದ್ದು ಅವನ ದುಷ್ಟ ಭಾವಕ್ಕೆ ಒಳಗಾಗದಿರುವ, ಜ್ಞಾನಿಶ್ರೇಷ್ಠರಾದ ಶ್ರೀ ಮಧ್ವರನ್ನು ನಾನು ನಮಿಸುವೆನು.

ಶಾಂತಂ ಮಹಾಂತಂ ನತಪಾದಕಾಂತಂ
ಕಾಂತಂ ನಿತಾಂತಂ ಕಲಿತಾಗಮಾಂತಮ್ ।
ಸ್ವಾಂತಂ ನಯಂತಂ ತ್ರಿಪುರಾರಿಕಾಂತಂ
ಕಾಂತಂ ಶ್ರಿಯೋ ಮಧ್ವಗುರುಂ ನಮಾಮಿ ॥ ೪ ॥

ಯಾವಾಗಲೂ ಭಗವನ್ನಿಷ್ಠರಾದ, ಪೂಜ್ಯರಾದ, ರುದ್ರಾದಿಗಳಿಂದ ನಮಿಸಲ್ಪಡುವ ಪಾದಗಳ ಪ್ರಯುಕ್ತ ಸುಂದರರಾಗಿರುವ, ಮೂವತ್ತೆರಡು ಶಾರೀರಿಕ ಲಕ್ಷಣಗಳಿಂದ ಕೂಡಿದ್ದು ಚೆನ್ನಾಗಿ ಸುಂದರರಾದ, ವೇದಾದಿ ಆಗಮಗಳ ನಿರ್ಣಯವನ್ನು ಚೆನ್ನಾಗಿ ಪಡೆದುಕೊಂಡಿರುವ, ರುದ್ರನಿಗೆ ಒಡೆಯನಾದ ಶ್ರೀಕಾಂತನಾದ ಭಗವಂತನೆಡೆಗೆ ಮನಸ್ಸನ್ನು ಸದಾ ಕೊಂಡೊಯ್ದಿರುವ ಶ್ರೀ ಮಧ್ವಗುರುಗಳನ್ನು ನಮಿಸುವೆನು.

ಪುನಾನನಾಮ್ನೇ ಮುರವೈರಿಧಾಮ್ನೇ
ಸಂಪೂರ್ಣನಾಮ್ನೇ ಸಮಧೀತಸಾಮ್ನೇ ।
ಸಂಕೀರ್ತಿತಾಧೋಕ್ಷಜಪುಣ್ಯನಾಮ್ನೇ
ನಮೋಽಸ್ತು ಮಧ್ವಾಯ ವಿಮುಕ್ತಿಸೀಮ್ನೇ ॥ ೫ ॥

ಪವಿತ್ರಗೊಳಿಸುವ ಹೆಸರುಗಳನ್ನು ಹೊಂದಿರುವ, ಮುರಾರಿಯ ವಿಶೇಷ ಸನ್ನಿಧಾನಕ್ಕೆ ಪಾತ್ರವಾಗಿದ್ದು ಅವನ ಮನೆಯಂತಿರುವ, ಅರ್ಥದಿಂದ ಪೂರ್ಣವಾದ ಹೆಸರುಗಳನ್ನು ಹೊಂದಿರುವ, ಮೂಲರೂಪದಲ್ಲಿ ಸಾಮವೇದಕ್ಕೆ ಅಭಿಮಾನಿಯಾಗಿದ್ದು, ಅಂತಹ ಸಾಮವೇದವನ್ನು ಚೆನ್ನಾಗಿ ಅಧ್ಯಯನ ನಡೆಸಿರುವ, ಅಧೋಕ್ಷಜನ ಪವಿತ್ರ ನಾಮಗಳನ್ನು ಭಕ್ತಿಪೂರ್ವಕವಾಗಿ ಕೀರ್ತನೆ ನಡೆಸುತ್ತಿರುವ, ಸಂಸಾರಬಂಧನದ ಬಿಡುಗಡೆಗೆ ಗಡು ವಾಗಿರುವ ಶ್ರೀ ಮಧ್ವರೇ ಇದೋ ನಿಮಗೆ ಪ್ರಣಾಮ.

ಸನ್ಮಾನಸಂಸಜ್ಜನತಾಶರಣ್ಯಂ
ಸನ್ಮಾನಸಂ ತೋಷಿತರಾಮಚಂದ್ರಮ್ ।
ಸನ್ಮಾನಸಂನ್ಯಸ್ತಪದಂ ಪ್ರಶಾಂತಂ
ನಮಾಮ್ಯಹಂ ಮಧ್ವಮಹಾಮುನೀಶಮ್ ॥ ೬ ॥

ಒಳ್ಳೆಯ ಗೌರವಾರ್ಹ ಸಭ್ಯ ಜನರ ಸಮೂಹಕ್ಕೆ ಆಸರೆಯಾಗಿರುವ, ನಿರ್ದುಷ್ಟವಾದ ಮನಸ್ಸುಳ್ಳ, ಆಂಜನೇಯ ರೂಪದಿಂದ ವಿಶೇಷವಾಗಿ ರಾಮಚಂದ್ರನನ್ನು ಸಂತೋಷ ಪಡಿಸಿರುವ, ಗೌರವಾರ್ಹ ವ್ಯಕ್ತಿಗಳಿಗೆ ಸಂನ್ಯಾಸ ಪದವಿಯನ್ನು ಅನುಗ್ರಹಿಸಿರುವ, ಚೆನ್ನಾಗಿ ಭಗವನ್ನಿಷ್ಠರಾಗಿರುವ, ಶ್ರೇಷ್ಠ ಜ್ಞಾನಿಗಳಾದ ಮಧ್ವರನ್ನು ನಾನು ನಮಿಸುವೆನು.

ಸಂಸ್ತೂಯಮಾನಾಯ ಸತಾಂ ಸಮೂಹೈ-
ಶ್ಚಂದ್ರಾಯಮಾನಾಯ ಚಿದಂಬುರಾಶೇಃ ।
ದೀಪಾಯಮಾನಾಯ ಹರಿಂ ದಿದೃಕ್ಷೋ-
ರಲಂ ನಮೋ ಮಧ್ವಮುನೀಶ್ವರಾಯ ॥ ೭ ॥

ಸಜ್ಜನರ ಸಮೂಹಗಳಿಂದ ಅಂದರೆ ಒಳ್ಳೆಯವರಾದ ದೇವತೆಗಳು, ಋಷಿಗಳು, ಮನುಷ್ಯರು –ಹೀಗೆ ಬೇರೆ ಬೇರೆ ಸಮೂಹದಿಂದ ಭಕ್ತಿಪೂರ್ವಕವಾಗಿ ಹೊಗಳಲ್ಪಡುತ್ತಿ ರುವ, ಸಮುದ್ರದ ಭರತಕ್ಕೆ ಚಂದ್ರ ಹೇಗೋ ಹಾಗೆ ಜೀವರ ವಿಕಾಸಕ್ಕೆ ಕಾರಣರಾಗಿರುವ, ಶ್ರೀಹರಿಯನ್ನು ಚೆನ್ನಾಗಿ ಕಾಣಬಯಸುವ ಅಧಿಕಾರಿಗಳ ಪಾಲಿಗೆ ದೀಪ ಆಗಿರುವ, ಶ್ರೇಷ್ಠರಾದ ಮಧ್ವಮುನಿಗಳಿಗೆ ಪ್ರಣಾಮ.

ಗುಣೈಕಸಿಂಧುಂ ಗುರುಪುಂಗವಂ ತಂ
ಸದೈಕಬಂಧುಂ ಸಕಲಾಕಲಾಪಮ್ ।
ಮನೋಜಬಂಧುಂ ನತಪಾದಪದ್ಮಂ
ನಮಾಮ್ಯಹಂ ಮಧ್ವಮುನಿಂ ಪರೇಣ್ಯಮ್ ॥ ೮ ॥

ಹರಿಭಕ್ತ್ಯಾದಿಸದ್ಗುಣಗಳಿಗೆ ಸಾಗರದಂತಿರುವ, ಗುರುಶ್ರೇಷ್ಠರಾದ, ಸಜ್ಜನರಿಗೆ ಮುಖ್ಯ ಬಂಧುಗಳಾದ, ಎಲ್ಲ ವಿದ್ಯೆಗಳ ಸಾಧನಗಳನ್ನೂ ಹೊಂದಿರುವ, ಕಾಮನನ್ನು ತಮ್ಮ ಹಿಡಿತ ದಲ್ಲಿಟ್ಟುಕೊಂಡು ಅವನಿಗೆ ಬಂಧುವಿನಂತಿರುವ, ಅವನಿಂದ ನಮಸ್ಕರಿಸಲ್ಪಡುವ ಪಾದಪದ್ಮ ವುಳ್ಳ, ಶ್ರೇಷ್ಠರಾದ ಮಧ್ವಮುನಿಗಳನ್ನು ನಮಿಸುವೆನು.

ಮಧ್ವಾಷ್ಟಕಂ ಪುಣ್ಯತಮಂ ತ್ರಿಸಂಧ್ಯಂ
ಪಠಂತ್ಯಲಂ ಭಕ್ತಿಯುತಾ ಜನಾ ಯೇ ।
ತೇಷಾಮಭೀಷ್ಟಂ ಪ್ರತನೋತಿ ವಾಯುಃ
ಶ್ರೀಮಧ್ವನಾಮಾ ಗುರುಪುಂಗವೋಽಯಮ್ ॥ ೯ ॥

ಭಕ್ತಿಯಿಂದ ಕೂಡಿದ ಯಾವ ಜನರು ಅತ್ಯಂತ ಪವಿತ್ರವಾದ ಈ ಮಧ್ವಾಷ್ಟಕವನ್ನು ಚೆನ್ನಾಗಿ ಪಠಿಸುವರೋ ಅದರಿಂದ ಪ್ರಸನ್ನರಾಗುವ ಮಧ್ವ ಹೆಸರಿನ ಗುರುಶ್ರೇಷ್ಠರಾದ ವಾಯುದೇವರು ಅಂತಹವರ ಅಭೀಷ್ಟಗಳನ್ನು ಚೆನ್ನಾಗಿ ಪೂರೈಸುವನು.

ಸಮಸ್ತಶಾಸ್ತ್ರಾಣಿ ಚ ಸಮ್ಯಗೇವ
ಕೃತ್ವಾ ಹರೇಃ ಶಾಶ್ವತಸದ್ಗುಣಾನ್ ಯಃ ।
ಪ್ರಕಾಶಯಾಮಾಸ ಸಮಸ್ತಯುಕ್ತಿಭಿಃ
ಶ್ರೀಮಧ್ವನಾಮಾ ಚ ಸದಾ ಪ್ರಸೀದತಾಮ್ ॥ ೧೦ ॥

ಯಾರು ಎಲ್ಲ ಬಗೆಯ ಶಾಸ್ತ್ರಗಳನ್ನು ಚೆನ್ನಾಗಿ ರಚಿಸಿ ಶ್ರೀಹರಿಯ ಸದ್ಗುಣಗಳನ್ನು ಎಲ್ಲ ಬಗೆಯ ಯುಕ್ತಿಗಳಿಂದ ಚೆನ್ನಾಗಿ ಬೆಳಗಿಸಿರುವರೋ ಅಂತಹ ಮಧ್ವ ಹೆಸರಿನ ಗುರುಗಳು ಯಾವಾಗಲೂ ನಮ್ಮ ಬಗ್ಗೆ ಪ್ರಸನ್ನರಾಗಿಯೇ ಇರಲಿ.

ಪರಮಪುರುಷಶ್ರೀಚರಣಸರೋರುಹ-
ಮಧುಕರರೂಪಕಮಾನಸಮುದಿತಮ್ ।
ಗುರುಕುಲತಿಲಕಶ್ರೀಮದಾನಂದತೀರ್ಥ-
ಯೋಗಿವರಂ ಸತತಮಹಂ ವಂದೇ ॥ ೧೧ ॥

ಪುರುಷೋತ್ತಮನ ಪಾದಕಮಲದಲ್ಲಿ ಜೇನುಹುಳದಂತಿರುವ ಮನಸ್ಸುಳ್ಳ, ಆದುದರಿಂದಲೇ ಯಾವಾಗಲೂ ಉದಯಿಸಿರುವ, ಗುರುಗಳ ಸಮೂಹಕ್ಕೆ ತಿಲಕದಂತಿರುವ ಶ್ರೀಮದಾನಂದತೀರ್ಥರೆಂಬ ಶ್ರೇಷ್ಠ ಯೋಗಿಗಳನ್ನು ಯಾವಾಗಲೂ ನಾನು ವಂದಿಸುವೆನು.

ಶ್ರೀಮಲ್ಲಿಕುಚವಂಶ್ಯೇನ ಮಧ್ವಾಷ್ಟಕಮುದೀರಿತಮ್ ।
ಶ್ರೀಮತ್ತ್ರಿವಿಕ್ರಮಾಖ್ಯೇನ ಗುರ್ವನುಗ್ರಹಕಾರಕಮ್ ॥ ೧೨ ॥

ಶೋಭಾಸಂಪನ್ನವಾದ ಪೆಜತ್ತಾಯ ವಂಶಕ್ಕೆ ಸೇರಿರುವ, ತ್ರಿವಿಕ್ರಮ ಹೆಸರಿನವರಿಂದ ಗುರುಗಳ ಅನುಗ್ರಹಕ್ಕೆ ಪ್ರಯೋಜಕನಾದ ಈ ಮಧ್ವಾಷ್ಟಕವು ಹೇಳಲ್ಪಟ್ಟಿದೆ.

*

# ತ್ರಿವಿಕ್ರಮಪಂಡಿತಾಚಾರ್ಯ ವಿರಚಿತ

# • ಮಧ್ವಸ್ತುತಿವಿಂಶತಿಕಮ್ •

[ತತ್ವದೀಪಿಕಾಟೀಕೆಯ ಪ್ರಾರಂಭದಲ್ಲಿ ತ್ರಿವಿಕ್ರಮಪಂಡಿತರು ನಡೆಸಿರುವ ಇಪ್ಪತ್ತು ಪದ್ಯಗಳ ಮಧ್ವಸ್ತುತಿ]



ಶ್ರೀ ಮಧ್ವ ಗುರುಗಳ ಸಾಕ್ಷಾಚ್ಛಿಷ್ಯರಾದ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು ಮಧ್ವ ಗುರುಗಳನ್ನು ಸ್ತುತಿಸುವುದು.

ಮಹಾಕವಿಗಳಾದ ತ್ರಿವಿಕ್ರಮಪಂಡಿತರ ನಾಳಿಕೇರಪಾಕದ ಸಾಹಿತ್ಯವನ್ನು ಟಿಪ್ಪಣಿಯ ನೆರವಿಲ್ಲದೆ ಅರ್ಥೈಸಿಕೊಳ್ಳುವುದು ಕಷ್ಟಸಾಧ್ಯವಾದುದರಿಂದ ಶ್ರೀ ಮಧ್ವಗುರುಗಳ ಕುರಿತಾಗಿ ಭಕ್ತ್ಯತಿಶಯದಿಂದ ಅರಳಿ ಬಂದಿರುವ ಅವರ ಪದ್ಯಗಳಿಗೆ ನಡೆಸಿರುವ ಅನುವಾದ ನೂರಕ್ಕೆ ನೂರುಪಾಲು ಸರಿಯಾದುದೆಂದೇನೂ ಹೇಳುವಂತಿಲ್ಲ. ಆ ಪದ್ಯಗಳ ಸವಿಯನ್ನುಣ್ಣುವ ನಿಟ್ಟಿನಲ್ಲಿ ಗಮನ ಹರಿಯುವಂತಾಗಲೆಂಬ ದೃಷ್ಟಿಯಿಂದಷ್ಟೇ ಅನುವಾದಿಸುವ ಸಾಹಸಕ್ಕೆ ಇಳಿಯಲಾಗಿದೆ.

ಇವುಗಳಲ್ಲಿಯ 'ಸದ್ಗುಣರಾಜಭಾವಂ ವಿಪ್ರಾ ವ್ರಜಂತಿ' (ಹನ್ನೆರಡನೇ ಶ್ಲೋಕದಲ್ಲಿ), 'ಯಸ್ಯೋದಯಸ್ಸ ಭಗವಾನ್' (ಹದಿಮೂರನೇ ಶ್ಲೋಕದಲ್ಲಿ), '...ಪ್ರತಿಕ್ಲಪ್ತಮಾಯುರ್ವೇದೇ ಸುಸಿದ್ಧಮಮುನೇತ್ಯವಿಚಾರ್ಯಮೇತತ್' (ಹದಿಮೂರನೇ ಶ್ಲೋಕದಲ್ಲಿ), '....ಜಗತಾಂ ಸಪ್ತಕೇ ಸಪ್ತಕೇ ವಾ' (ಹದಿನಾಲ್ಕನೇ ಶ್ಲೋಕದಲ್ಲಿ), 'ಪಂಚರಾತ್ರೇಷ್ವಪರಿಮಿತಭಿದಾಃ....' (ಹದಿನಾರನೇ ಶ್ಲೋಕದಲ್ಲಿ), 'ಹರಿಗುರುವಿಹಿತಃ' (ಹದಿನೇಳನೇ ಶ್ಲೋಕದಲ್ಲಿ), 'ಏಕೈಕಂ ಸಕರತರಂ ತದೇಷು ಭಾಷ್ಯಮ್' (ಹತ್ತೊಂಬತ್ತನೇ ಶ್ಲೋಕದಲ್ಲಿ), 'ಭ್ರೂನಿದೇಶ್ಯಾದ್ದ್ಯುದೇಶಾಃ ಪ್ರಾಪ್ತಾಃ' (ಇಪ್ಪತ್ತನೇ ಶ್ಲೋಕದಲ್ಲಿ), 'ಯಸ್ಮಿನ್ ಗುಹ್ಯೇ ಸ್ಮ ದೇವಾ ಅಪಿ ಮುನಿಪಿತೃಭಿಃ ಪ್ರಾಯ ಆಲೋಚ್ಯ ನಿತ್ಯಂ ನಿಷ್ಠಾಂ ನಾಯಯಾಂತಿ ಭೂಯಶ್ಚಿರತರ ಭಗವದ್‌ಭಕ್ತಿಭಿಸ್ಸಾಧಯಂತಿ' (ಇಪ್ಪತ್ತೆರಡನೇ ಶ್ಲೋಕದಲ್ಲಿ) ಈ ಮಾತುಗಳ ಅಭಿಪ್ರಾಯ ಅಸ್ಪಷ್ಟ.

**ಮಧ್ವಸ್ತುತಿವಿಂಶತಿಕದಲ್ಲಿ ಪ್ರಸ್ತುತ ಪ್ರಮೇಯ:** ಇಲ್ಲಿ ಕ್ರೋಢೀಕರಿಸಲಾದ ಇಪ್ಪತ್ತೊಂದು ಶ್ಲೋಕಗಳಲ್ಲಿಯ ಎಂಟು ಶ್ಲೋಕಗಳಲ್ಲಿ [15, 16, 17, 18, 19, 20, 21

ಹಾಗೂ 22] ಶ್ರೀ ಮಧ್ವರ ಬೇರೆ ಬೇರೆ ಶಾಸ್ತ್ರಕ್ಕೆ ಸಂಬಂಧಿಸಿದ ವಿದ್ವತ್ತೆಯ ಬಗ್ಗೆ ಬೆಳಕು ಚೆಲ್ಲಲಾಗಿ. ಇವುಗಳಲ್ಲೂ ಹದಿನೇಳನೆಯ ಪದ್ಯದಲ್ಲಿ ಯಾಜ್ಞಿಕಪ್ರಯೋಗಗಳ ಕುರಿತು ಗ್ರಂಥರಚನೆಗೆ ಪ್ರಾರ್ಥಿಸುವಂತೆ, ಹತ್ತೊಂಭತ್ತನೆಯ ಪದ್ಯದಲ್ಲಿ ವೇದಭಾಷ್ಯದ ರಚನೆಗೆ ಬಿನ್ನವಿಸಿಕೊಳ್ಳುವಂತೆ ನಿರೂಪಣೆ ಬಂದಿದೆ. ನಾಲ್ಕನೇ ಪದ್ಯದಲ್ಲಿ ಮಧ್ವರ ಬಾಯಿಯಿಂದ ಹೊರ ಸೂಸಿದ ವಾಗ್ದೇವಿಯ ವೈಭವದ ವರ್ಣನೆ ನಡೆದಿದ್ದರೆ, ಒಂಬತ್ತನೆಯ ಪದ್ಯದಲ್ಲಿ ಶ್ರೀ ಮಧ್ವರ ಪ್ರವಚನದ ಪ್ರಭಾವದ ಚಿತ್ರಣ ನಡೆದಿದೆ. ಹನ್ನೊಂದನೆಯ ಪದ್ಯದಲ್ಲೂ ಮಧ್ವರ ವಿಜ್ಞಾನಶಕ್ತಿಯ ಹಾಗೂ ಶಾಸ್ತ್ರಪ್ರವಚನ ಸಾಮರ್ಥ್ಯದ ಮಹತ್ತ್ವ ಸಾರಲ್ಪಟ್ಟಿದೆ. ಆರು ಮತ್ತು ಏಳನೆಯ ಪದ್ಯಗಳಲ್ಲಿ ಮಧ್ವಾವತಾರದ ಹಿನ್ನೆಲೆಯನ್ನು ಪ್ರತಿಪಾದಿಸಲಾಗಿದೆ. ಹತ್ತನೇ ಪದ್ಯದಲ್ಲಿ ಶ್ರೀ ಮಧ್ವರ ಮೂಲಕ ಬೇರೆ ಬೇರೆ ಬಗೆಯ ಕೊಡುಗೆಯ ವರ್ಣನೆ ಬಂದಿದ್ದರೆ, ಹದಿಮೂರನೆಯ ಶ್ಲೋಕದಲ್ಲಿ ಮಧ್ವರ ಕರಸ್ಪರ್ಶಾದಿಗಳ ವೈಶಿಷ್ಟ್ಯ ಪ್ರತಿಪಾದಿಸಲಾಗಿದೆ. ಎಂಟನೆಯ ಶ್ಲೋಕದಲ್ಲಿ ಪಾದಧೂಳಿಯ ಹಿರಿಮೆ ಸಾರಲಾಗಿದೆ. ಹದಿನಾಲ್ಕನೆಯ ಪದ್ಯದಲ್ಲಿ ಹಿಂದಿನ ಎರಡು ಅವತಾರಗಳ ಸಾಧನೆಯ ಉಲ್ಲೇಖದೊಂದಿಗೆ ಅವರಲ್ಲಿಯ ವಿಜಯಸಾಮರ್ಥ್ಯದ ಉದ್ಘೋಷಣೆ ನಡೆದಿದೆ. ಇಪ್ಪತ್ತಮೂರನೆಯ ಶ್ಲೋಕದಲ್ಲಿ ಬಳಿತ್ಥಾ ಸೂಕ್ತದ ಛಾಯಾನುವಾದ ನಡೆದಿದೆ. ತತ್ವದೀಪಿಕಾದ ಉಪಸಂಹಾರದ ಪದ್ಯವು ಸಾಧಕರ ಅನುಸಂಧಾನಕ್ಕೆ ಹೆಚ್ಚು ಉಪಯುಕ್ತವಾದುದೆಂದು ಈ ಸ್ತುತಿಯ ಇಪ್ಪತ್ತೊಂದನೆಯ ಪದ್ಯವಾಗಿ ಉಲ್ಲೇಖಿಸಲ್ಪಟ್ಟಿದ್ದು ಅದರಲ್ಲಿ ಜಗನ್ನಾಥನಿಗೆ ಪ್ರಣಾಮವನ್ನು ಮತ್ತೆ ಮತ್ತೆ ಸಾರುತ್ತ, ಅಂತಹ ಜಗನ್ನಾಥನಿಗೆ ಸರ್ವದಾ ನಮಸ್ಕರಿಸುತ್ತಿರುವ ಗುರುಗಳಾದ ಶ್ರೀ ಮಧ್ವರಿಗೂ ಮತ್ತೆ ಮತ್ತೆ ಪ್ರಣಾಮ –ಎಂಬುದಾಗಿ ಘೋಷಿಸುವ ಮೂಲಕ ಶ್ರೀ ಮಧ್ವರ ಸ್ತುತಿ ಅವರು ಭಗವಂತನ ಏಕಾಂತಭಕ್ತರಾಗಿರುವರೆಂಬ ಅನುಸಂಧಾನದೊಂದಿಗೆ ನಡೆಯ ಬೇಕೆಂಬ ಆಧ್ಯಾತ್ಮಿಕ ಜಾಗೃತಿಯ ಸೂಚನೆಯನ್ನು ನೀಡಲಾಗಿದೆ.

### ಭಾರತೀದೇವಿಯ ನಾಥ:

ಒಂದೂವರೆ ಶ್ಲೋಕದಲ್ಲಿ ಭಾರತೀದೇವಿಯ ವೈಭವವನ್ನು ಸಾರಿ, ಮುಂದಿನ ಶ್ಲೋಕಾರ್ಧದಲ್ಲಿ ಅಂತಹ ಭಾರತೀದೇವಿಗೆ ನಾಥನಾಗಿರುವ ಅನಿಲದೇವನಿಗೆ ಪ್ರಣಾಮವನ್ನು ಅರ್ಪಿಸಲಾಗುವುದು–

ಜಿಹ್ವಾಸೂಲ್ಲಸಿತಾ ಸತಾಂ ಪ್ರತಿಪದಂ ತತ್ತ್ವಪ್ರತಿದ್ಯೋತಿಕಾ
ನೃತ್ಯಂತೀ ಪರಮೇರಿತ್ಯೈವ ಪರಮಾ ವಾಗೀಶ್ವರೀ ಶ್ರೀಃ ಸ್ವಯಮ್ ।
ಯಸ್ಯಾಽಸ್ಯಾದುದಿತಾಽಖಿಲಾಗಮವಪುಃ ಸತ್ಸೂತ್ರಭೂಷಾಮಣೀಃ
ಸರ್ವಜ್ಞಾತ್ ಕವಯಶ್ಚ ಪುಷ್ಕರಭುವೋ ಜಾತಾ ಯದೀಯೇಚ್ಛಯಾ ॥ ೧ ॥

ಯಸ್ಸರ್ವಜೀವನವಿಬೋಧವಿಚೇಷ್ಟಿತೇಶೋ
ದೇವ್ಯಾಶ್ಚ ವಾಙ್ಮಯತನೋರಖಿಲಾರ್ಚಿತಾಯಾಃ ।
ನಾಥಸ್ಸದಾ ಹರಿಮಹಾಗುಣದೃಷ್ಟಿತೃಪ್ತ–
ಸ್ತಸ್ಮೈ ನಮೋ ಭಗವತೇ ಪರಮಾನಿಲಾಯ ॥ ೨ ॥

ಸುಖರೂಪಿಯಾದ ವಾಯುದೇವನನ್ನು ಯಾವಾಗಲೂ ಆಶ್ರಯಿಸಿರುವುದರಿಂದ ಶ್ರೀ ಎನಿಸಿರುವ[14] ಉತ್ತಮ ಜ್ಞಾನವುಳ್ಳ ವಾಗಭಿಮಾನಿನಿಯಾಗಿದ್ದು ವಾಗೀಶ್ವರಿಯಾಗಿರುವ, ಭಾರತೀದೇವಿ ಸಜ್ಜನರ ನಾಲಗೆಗಳಲ್ಲಿ ವಿರಾಜಿಸುವವಳಾಗಿ ಅವರಿಗೆ ಪದಪದಕ್ಕೂ ತತ್ತ್ವವನ್ನು ಬೆಳಗಿಸುವಳೋ, ಪರಮಾತ್ಮನಿಂದ ಪ್ರೇರಿತಳಾಗಿ, ಯಾವ ವಾಯುದೇವನ ಬಾಯಿಯಿಂದ ಉದಯಿಸಿದವಳಾಗಿ, ಅಖಿಲಾಗಮ ಶರೀರವುಳ್ಳವಳಾಗಿ, ಬ್ರಹ್ಮಸೂತ್ರ ಗಳೆಂಬ ಮಂಗಳಸೂತ್ರ ಉಳ್ಳವಳಾಗಿ ನರ್ತಿಸುತ್ತಿರುವಳೋ, ಸರ್ವಜ್ಞನಾದ ಕಮಲಸಂಭವ ಚತುರ್ಮುಖನಿಂದ ಹುಟ್ಟಿದ ರುದ್ರಸನಕಾದಿಗಳೂ ಯಾರ ಇಚ್ಛೆಯಿಂದಾಗಿಯೇ ಜ್ಞಾನಿ ಗಳಾಗಿರುವರೋ, ಸಕಲ ವಾಙ್ಮಯವೇ ವಿಗ್ರಹವಾಗಿವುಳ್ಳ, ಎಲ್ಲರಿಂದಲೂ ಪೂಜ್ಯಳಾದ, ಭಾರತೀದೇವಿಗೆ ನಾಥನಾದ, ಎಲ್ಲರ ಜೀವನ, ವಿಶಿಷ್ಟ ತಿಳಿವಳಿಕೆ ಹಾಗೂ ಚಟುವಟಿಕೆಗಳಿಗೆ ಒಡೆಯನಾಗಿರುವನೋ, ಯಾವಾಗಲೂ ಶ್ರೀಹರಿಯ ಮಹಾಗುಣಗಳನ್ನು ಸಾಕ್ಷಾತ್ಕರಿಸಿ ಕೊಂಡು ತೃಪ್ತನಾಗಿರುವ ಅಂತಹ ಭಗವಂತನ ಮುಖ್ಯ ಪ್ರತೀಕನಾಗಿ ಭಗವಾನ್ ಎನಿಸುವ ಶ್ರೇಷ್ಠನಾದ ಮುಖ್ಯಪ್ರಾಣನಿಗೆ ಪ್ರಣಾಮ.

**ಮಧ್ವಾವತಾರದ ಹಿನ್ನೆಲೆ:** ಭೀಮನಿಂದ ಹತರಾದ ಮಣಿಮಂತ ಮುಂತಾದ ದೈತ್ಯರು ಶ್ರುತಿಗಳಲ್ಲಿಯ ಭಗವದ್ಗುಣಗಳನ್ನು ಅಡಗಿಸಿಡುವುದಕ್ಕಾಗಿ ಮಾಯಾವಿಗಳಾಗಿ ಬರಲು ಅವರ ನಿರಾಸಕ್ಕಾಗಿ ಮಧ್ವಾವತಾರ ಆಗಿದೆ ಎಂದು ಮುಂದಿನ ಎರಡು ಪದ್ಯಗಳಲ್ಲಿ ತಿಳಿಸಲಾಗುವುದು–

ಯೇ ವೈ ಪುರಾ ಜಗತಿ ಶಾರ್ಙ್ಗಭೃತಾऽಮುನಾ ಚ
ದೇವೇನ ಭೀಮಗದಯಾ ಹತಬಾಹುವೀರ್ಯಾಃ ।
ದೇವದ್ವಿಷಾಂ ಮತಿರಭೂನ್ಮನುಜೇಷು ತೇಷಾಂ
ವಾಗ್ಯೋಧನೇನ ಭಗವದ್‌ಗುಣದೂಷಣಾಯ ॥ ೩ ॥

ಸಂರಂಭತಃ ಶ್ರುತಿಷು ವಿಷ್ಣುಪರಾಸು ಗೂಢಾದ್
ವಿದ್ವೇಷತಃ ಪರಗುಣೇಷು ಮಹತ್ಸು ಗಾಢಾತ್ ।
ವೇದಾಂತವಾದಕಪಟೈರತಿದುಷ್ಟವಾಚಾಂ
ಮಾಯಾವಿನಾಂ ನಿರಸನೇ ಸ ಕೃತಾವತಾರಃ ॥ ೪ ॥

ಹಿಂದೆ ಅಂದರೆ ದ್ವಾಪರಯುಗದ ಕೊನೆಯಲ್ಲಿ ಯಾರು ಶಾರ್ಙ್ಗಧನುರ್ಧಾರಿ ಶ್ರೀಕೃಷ್ಣನಿಂದ ಹಾಗೂ ಭೀಮನ ಗದೆಯ ಮೂಲಕ ನಾಶಮಾಡಲ್ಪಟ್ಟ ಬಾಹುಸಾಮರ್ಥ್ಯ ವುಳ್ಳವರಾಗಿದ್ದರೋ ಅಂತಹ ದೇವದ್ವೇಷಿಗಳಾದ ಅಸುರರ ಬುದ್ಧಿ ಲೋಕದಲ್ಲಿ ವಾಗ್ ಯುದ್ಧ–ವಾದವಿವಾದಗಳ ಮೂಲಕ ಭಗವಂತನ ಗುಣಗಳನ್ನು ಕೆಡಿಸುವುದಕ್ಕಾಗಿ ತೊಡ ಗಿತು.

---

14. '.....ಸರಸ್ವತೀ । ಶಂ ರೂಪೇ ತು ರತೇರ್ವಾಯೌ ಶ್ರೀರಿತ್ಯೇವ ಚ ಕೀರ್ತ್ಯತೇ ॥
– –ಮ.ಭಾ.ತಾ.ನಿ. *2-127*

ವಿಷ್ಣುಪರಗಳಾದ ವೇದಗಳಲ್ಲಿ ಗೂಢವಾದ ಸಿಟ್ಟಿನಿಂದಾಗಿ, ಶ್ರೇಷ್ಠಗಳಾದ ಭಗವದ್ಗುಣಗಳಲ್ಲಿ ಗಾಢವಾದ ವಿದ್ವೇಷದಿಂದಾಗಿ, ಕಪಟರೀತಿಯಲ್ಲಿ ವೇದಾಂತಚಿಂತನೆಯನ್ನು ಮಾಡಿರುವುದರಿಂದ ಅತಿ ದುಷ್ಟ ಮಾತಿನ ಮಾಯಾವಿಗಳನ್ನು ನಿರಾಸ ಮಾಡುವುದಕ್ಕಾಗಿ ಮಧ್ವರಾಗಿ ಅವತರಿಸಿರುವವನು ಆ ಅನಿಲದೇವ.

## ಗುರುಗಳ ಪಾದಧೂಳಿಯ ಮಹಿಮೆ:

ಸೋಽಯಂ ಗುಣಾಮೃತಮಹಾಬ್ಧಿರಿಹಾವತೀರ್ಣ
ಆನಂದತೀರ್ಥಭಗವಾನ್ ಪರಮೋ ಗುರುರ್ಮೇ ।
ಯತ್ಪಾದಪದ್ಮರಜಸಾ ಶಿರಸಾ ಧೃತೇನ
ಸದ್ಯಃ ಪ್ರಯಾಂತಿ ಪರಿಶುದ್ಧಿಮಶೇಷಲೋಕಾಃ ॥ ೫ ॥

ಹೀಗೆ ಭೂಮಿಯ ಮೇಲೆ ಅವತರಿಸಿರುವ ಗುಣಾಮೃತಕ್ಕೆ ಮಹಾಸಾಗರದಂತಿರುವ, ಭಗವಾನ್ ಆನಂದತೀರ್ಥರೇ ನನ್ನ ಶ್ರೇಷ್ಠಗುರುಗಳು! ಯಾರ ಪಾದಕಮಲದ ಧೂಳಿಯನ್ನು ತಲೆಯಲ್ಲಿ ಧರಿಸುವುದರಿಂದ ಕೂಡಲೇ ಎಲ್ಲ ಜನರೂ ಪಾವಿತ್ರ್ಯವನ್ನು ಹೊಂದುವರೋ ಅಂತಹ ಗುರುಗಳು.

## ಗುರುಗಳ ಪ್ರವಚನದ ವೈಶಿಷ್ಟ್ಯ:

ಯಸ್ಯಾಽದ್ಯಾನಾಂ ಮುನೀನಾಂ ಸತತಹರಿಗುಣಧ್ಯಾನಶಿಕ್ಷಾಯಮಾಣಾ
ವಾದೀಂದ್ರಾ ಮತ್ತನಾಗಪ್ರಮಿತಿಬಲತಿರಸ್ಕಾರಸಿಂಹಾಯಮಾನಾ ।
ಸರ್ವಜ್ಞಸ್ಯ ಶ್ರುತೀನಾಮಖಿಲಜನಮನೋಧ್ವಾಂತಸೂರ್ಯಾಯಮಾಣಾ
ವ್ಯಾಖ್ಯಾ ವಿಖ್ಯಾತಕೀರ್ತೇರ್ಜಯತಿ ಸುಮನಸಾಂ ಕರ್ಣಪೂರಾಯಮಾಣಾ ॥
॥ ೬ ॥

ಸರ್ವಜ್ಞರಾದ ಎಲ್ಲೆಡೆ ಹರಡಿದ ಕೀರ್ತಿವುಳ್ಳ ಯಾವ ಮಧ್ವರ, ಶ್ರುತಿಗಳಿಗೆ ಸಂಬಂಧಿಸುವ ವ್ಯಾಖ್ಯೆ ಅಂದರೆ ಪ್ರವಚನವು ಹೃಷೀಕೇಶತೀರ್ಥರು, ಪದ್ಮನಾಭತೀರ್ಥರೇ ಮುಂತಾದ ಹಿರಿಯ ಮುನಿಗಳು ಯಾವಾಗಲೂ ಶ್ರೀಹರಿಯ ಗುಣಗಳನ್ನು ಧ್ಯಾನಿಸಲು ಬೇಕಾದ ಶಿಕ್ಷಣ ನೀಡುವಂತಹದ್ದಾಗಿತ್ತೊ, ಪ್ರಬಲ ದುರ್ವಾದಿಗಳೆಂಬ ಚೆನ್ನಾಗಿ ಮದೋನ್ಮತ್ತರಾದ ಆನೆಗಳ ಬುದ್ಧಿಬಲವನ್ನು ಕಡೆಗಣಿಸುವಲ್ಲಿ ಸಿಂಹದಂತಿರುವುದೋ, ಎಲ್ಲ ಜನರ ಮನಸ್ಸಿನ ಕತ್ತಲಿನ ಪಾಲಿಗೆ ಸೂರ್ಯನಂತಿರುವುದೋ, ದೇವತೆಗಳ ಕಿವಿಯ ಆಭರಣದಂತಿರುವ ಅಂತಹ ವ್ಯಾಖ್ಯೆಯು=ಪ್ರವಚನವು ಸೋಲಿಲ್ಲದೆ ಮೆರೆದಿದೆ.

ಆಚಾರ್ಯರ ಆಚಾರದ, ಸಂನ್ಯಾಸದ, ಪರಮಹಂಸಾಶ್ರಮದ ಪ್ರಕಟಣೆ, ಅಯೋಗ್ಯ ಸಹವಾಸದ ದೋಷದ ದೂರೀಕರಣ, ಮನುಜಮತಿಗೆ ಮೆರುಗು, ಶಾಸ್ತ್ರಪ್ರವಚನದ ವೈಭವ, ಪ್ರಾಜ್ಞರನ್ನೂ ಮೂಕರನ್ನಾಗಿಸುವ ಶಾಸ್ತ್ರಪ್ರವಚನದ ಶೈಲಿ -ಇವೆಲ್ಲವುಗಳನ್ನೊಳಗೊಂಡ ಮಧ್ವಗುರುಗಳ ವರ್ಣನೆ ಮೂರು ಪದ್ಯಗಳಲ್ಲಿ ಹೀಗೆ ಬಂದಿದೆ-

ಯೇನೈಕಾಂತಯತಾತ್ಮನಾಮೃಜುವರೇಣಾಚಾರ ಆಚಾರ್ಯವಾನ್
ಸಂನ್ಯಾಸೇನ ನಿಜಾ ಸ್ವಯಂ ಪ್ರಕಟಿತಾ ನಿಃಸಂಗತಾ ಸಂಸೃತೌ ।
ಶ್ಲಾಘ್ಯಃ ಪಾರಮಹಂಸ್ಯ ಆಶ್ರಮವರೋ ಯಚ್ಛೀಲಗಂಗಾಜಲ–
ಸ್ನಾತೋ ವ್ಯಕ್ತಮಯೋಗ್ಯಸಂಗಮಭುವೋ ದೋಷಾತ್ ಪುನರ್ಮೋಕ್ಷಿತಃ ॥ ೭ ॥

ಲೇಶೇನೋದ್ಭಾಸಿತಾಂಶಾಂ ಭುವಿ ಮನುಜಮತಿಂ ವೀಕ್ಷ್ಯ ವಿಜ್ಞಾನಶಕ್ತಿಂ
ಶಾಸ್ತ್ರವ್ಯಾಖ್ಯಾಂ ಚ ಚಿತ್ರಾಂ ಪ್ರವಿತತಯಶಸಃ ಪ್ರಾಶ್ನಿಕಾನಾಂ ಪ್ರಸಂಗೇ ।
ಯಸ್ಯ ಸ್ತೋತುಂ ಪ್ರವೃತ್ತಾಃ ಪ್ರವರಗುಣಮಯೀಂ ಪ್ರಸ್ಖಲಂತ್ಯಾ ಸ್ವವಾಚಾ
ಪ್ರಾಜ್ಞಾಃ ಪ್ರೋದ್ಯತ್ಪ್ರಮೋದ ಪ್ರಚುರಭರನಮತ್ಸಾಶ್ರುಕಂಠಾ ಭವಂತಿ ॥
॥ ೮ ॥

ತಸ್ಯಾಸ್ಯ ಚಾರುಚರಣಪ್ರಣತಿಂ ಪ್ರಪನ್ನಾ
ಗೋಭಿರ್ವಿಧೂತತಮಸಃ ಸುನಯಾಮೃತಾನಾಮ್
ಉದ್ಗಾರಿಣೀಭಿರಿಹ ಸದ್ಗುಣರಾಜಭಾವಂ
ವಿಪ್ರಾ ವ್ರಜಂತಿ ವಿಶದಾ ವಿತತಾಭಿರುಚ್ಚೈಃ ॥ ೯ ॥

ಏಕಾಂತಭಕ್ತರಾದ ಋಜುಗಳಿಗೆ ಶ್ರೇಷ್ಠ ಋಜುಗಳೆನಿಸಿರುವ ಯಾರಿಂದ ಋಜುಗಳ ಸದಾಚಾರ ಗುರೂಪದೇಶವುಳ್ಳದ್ದೆನಿಸಿತೋ, ಯಾರ ಸಂನ್ಯಾಸದಿಂದ ಸಂಸಾರದಲ್ಲಿ ಸ್ವಾಭಾವಿಕವಾದ ಅನಾಸಕ್ತಿ ತಂತಾನೇ ಪ್ರಕಟಿಸಲ್ಪಟ್ಟಿದೆಯೋ, ಹಾಗೆಯೇ ಅಂತಹ ಆಶ್ರಮಶ್ರೇಷ್ಠವಾದ ಪರಮಹಂಸಸಂನ್ಯಾಸ ಹೊಗಳಲು ಯೋಗ್ಯವಾಯಿತೋ, ಯಾರ ನಡತೆ ಎಂಬ ಗಂಗಾಜಲದ ಸ್ನಾನದಿಂದಾಗಿ ಅಯೋಗ್ಯಸಂಪರ್ಕದಿಂದ ಉಂಟಾಗಿದ್ದ ದೋಷದಿಂದ ಪೂರ್ತಿ ಬಿಡುಗಡೆ ಉಂಟಾಗಿದೆಯೋ, ಭೂಮಿಯಲ್ಲಿಯ ಮನುಜರ ಬುದ್ಧಿಯನ್ನು ನೋಡಿ ಸ್ವಲ್ಪ ಪ್ರಮಾಣದಿಂದ ಜ್ಞಾನಶಕ್ತಿಯನ್ನು ಹೊಳೆಯಿಸಿದ, ಚಿಂತಕರ ಗುಂಪಿನಲ್ಲಿ ಹರಡಿದ ಯಶಸ್ಸುಳ್ಳ, ಮಧ್ವರ ಶ್ರೇಷ್ಠಗುಣಸಂಪನ್ನವಾದ ಅದ್ಭುತವಾದ ತಿಳಿವಳಿಕೆಯ ಸಾಮರ್ಥ್ಯವನ್ನೂ ವೇದಪ್ರವಚನದ ಶೈಲಿಯನ್ನೂ, ಎಡವುತ್ತಿರುವ ತಮ್ಮ ಮಾತಿನಿಂದ ಹೊಗಳಲು ಹೊರಟ ಜ್ಞಾನಿಗಳು ಉಕ್ಕುವ ಸಂತೋಷಾತಿಶಯದಿಂದಾಗಿ ಗದ್ಗದಿತಕಂಠರಾಗುವರೋ, ಆನಂದಬಾಷ್ಪದಿಂದ ಕೂಡಿದವರಾಗುವರೋ ಅಂತಹ ಗುರುಗಳ ಸುಂದರ ಪಾದಗಳಿಗೆ ಪ್ರಣಾಮವನ್ನು ಸಲ್ಲಿಸುತ್ತ, ಶ್ರೇಷ್ಠಯುಕ್ತಿಗಳೆಂಬ ಅಮೃತವನ್ನು ಸುರಿಸುವ, ವ್ಯಾಪ್ತಗಳಾದ ಪ್ರವಚನದ ಮಾತುಗಳಿಂದ ಅಜ್ಞಾನವನ್ನು ಕಳಕೊಂಡ ವಿಪ್ರರು ಗುಣಶ್ರೇಷ್ಠವಾದ ನಿರ್ದುಷ್ಟಭಕ್ತಿಯನ್ನು ಚೆನ್ನಾಗಿ ಹೊಂದಿರುವರು.

**ಅಮೃತ ಔಷಧಗಳಾಗಿ ಪರಿವರ್ತನೆ:**

ಸ್ಪೃಷ್ಟಂ ಕರೇಣ ವಿಷಮಪ್ಯಮೃತಾಯ ದೃಷ್ಟಂ
ಯಸ್ಯೋದಯಸ್ಸ ಭಗವಾನ್ ಯದು ರಾತಿ ಕಿಂಚಿತ್ ।

ತದ್ಭೇಷಜಂ ಗದವತಾಂ ಪ್ರತಿಕ್ಷಪ್ತಮಾಯು–
ರ್ವೇದೇ ಸುಸಿದ್ಧಮಮುನೇತ್ಯವಿಚಾರ್ಯಮೇತತ್ ॥ ೧೦ ॥

ಯಾರು ಮತ್ತೊಬ್ಬನನ್ನು ಬದುಕಿಸಿಕೊಡುವನೋ ಆ ವೈದ್ಯ ಧನ್ವಂತರಿಯ ಕೃಪೆಗೆ ಪಾತ್ರನೆಂದೂ, ಆತನು ಏನು ನೀಡಿದರೂ ರೋಗಿಗಳಿಗದು ಮದ್ದು ಆಗುವುದೆಂದೂ, ಆತನ ಕೈಗೆ ಸಿಕ್ಕಿದ ವಿಷವೂ ಅಮೃತವಾಗಿ ಕಂಡಿದೆ ಎಂದೂ ಆಯುರ್ವೇದದಲ್ಲಿ ಪ್ರಸಿದ್ಧವಾದ ಸಂಗತಿಯು ಈ ಪ್ರಾಣನ ಶಕ್ತಿಯಿಂದಲೇ ಎನ್ನುವುದು ನಿರ್ವಿವಾದ.

**ವಿವರಣೆ:**

'ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ ।
ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ ।'

ಎಂಬ ಋಗ್ವೇದದ ಮಂತ್ರ(೧೦–೬೦–೧೨)ವನ್ನು ಜಪಿಸುವ ವೈದ್ಯನ ಹಸ್ತದಲ್ಲಿ ಅಂತರ್ಯಾಮಿಯಾಗಿರುವ ಧನ್ವಂತರಿಯ ಹಾಗೂ ಅವನ ಅನುಗ್ರಹಕ್ಕೆ ಪಾತ್ರನಾದ ಪ್ರಾಣನ ಶಕ್ತಿಯ ಪ್ರಭಾವದಿಂದಾಗಿ ಮಂತ್ರದಲ್ಲಿ ತಿಳಿಸಿರುವಂತೆ ಆ ಹಸ್ತದಲ್ಲಿ ಎಲ್ಲ ಔಷಧಗಳೂ ಸಿದ್ಧಿಸುವವು.

**ಮುಖ್ಯಪ್ರಾಣನ ಗೆಲ್ಲುವ ಸಾಮರ್ಥ್ಯ:**

ಯೋದ್ಧ್ರೃಣಾಂ ರಾಘವಾರ್ಥೇ
ಕೃತಮಹಿತರಣೋ ಯೋಽದ್ವಿತೀಯೋ ದ್ವಿತೀಯೋ
ವಿಷ್ಣೋಃ ಕೃಷ್ಣಪ್ರಿಯಾರ್ಥಂ
ಪುನರಪಿ ವಿಪುಲೈಸ್ಸಂಯುಗೈರ್ವ್ಯಕ್ತಕೀರ್ತಿಃ ।
ಯದ್ವೀರ್ಯಂ ಯೋಧವೀರೈಃ
ಕೃತನುತಿ ಜಗತಾಂ ಸಪ್ತಕೇ ಸಪ್ತಕೇ ವಾ
ದೇವೇಽಸ್ಮಿನ್ ಜೈತ್ರಶಕ್ತಿರ್ನಿವಸತಿ
ಸಕಲೇತ್ಯತ್ರ ಕಿಂ ವಿಸ್ಮಯಃ ಸ್ಯಾತ್ ॥ ೧೧ ॥

ಶ್ರೀವಿಷ್ಣುವಿನ ಸೇವಕರಾದ ಯಾರು ಶ್ರೀರಾಮಚಂದ್ರನಿಗಾಗಿ ಯುದ್ಧ ನಡೆಸುವವರಲ್ಲಿ ಯಾರಿಗೆ ಸರಿದೂಗುವ ಮತ್ತೊಬ್ಬರಿಲ್ಲ ಎನ್ನುವಂತೆ ಸ್ತುತಿಸಲ್ಪಟ್ಟ ಕಾದಾಟವುಳ್ಳವರಾಗಿದ್ದರೋ, ಭೀಮಸೇನನಾಗಿ ಯಾದವಕೃಷ್ಣನ ಪ್ರೀತಿಗಾಗಿ ಪುನಃ ದೊಡ್ಡ ಯುದ್ಧಗಳಿಂದ ಸಾರಲ್ಪಟ್ಟ ಕೀರ್ತಿವುಳ್ಳವರಾಗಿದ್ದರೋ, ಯಾರ ಪರಾಕ್ರಮವು ಹದಿನಾಲ್ಕು ಲೋಕಗಳಲ್ಲಿ ಶ್ರೇಷ್ಠ ಯೋಧರಿಂದ ಹೊಗಳಲ್ಪಟ್ಟದ್ದಾಗಿದೆಯೋ ಅಂತಹ ಮುಖ್ಯಪ್ರಾಣನಲ್ಲಿ ಪೂರ್ಣ ಪ್ರಮಾಣದ ಗೆಲ್ಲುವ ಶಕ್ತಿಯು ನೆಲೆಸಿದೆ ಎಂಬಲ್ಲಿ ಏನೂ ಆಶ್ಚರ್ಯ ಇಲ್ಲ.

**ಗುರುಗಳಿಂದ ಪಾಠ ಕೇಳದೆಯೇ ವೇದಗಳನ್ನೆಲ್ಲ ಬಲ್ಲವರು:**

ಸಬ್ರಾಹ್ಮಣೋಪನಿಷದೋ ನಿಖಿಲಾಸ್ಸುಸಿದ್ಧಾ
ವೇದಾಃ ಸ್ಫುಟಂ ಯದನಧೀತವತಸ್ಸ್ವಶಾಖಾಮ್ ।
ಯಾನ್ ವೈ ಪಠಂತಿ ಮುನಯೋಽಪ್ಯಸಕೃದ್ ಗುರುಭ್ಯೋ
ವೇತ್ತುಂ ತದಸ್ಯ ಮಹಿಮಾಯಮಚಿಂತನೀಯಃ ॥ ೧೨ ॥

ಜ್ಞಾನಿಗಳೂ ಕೂಡ ಯಾವ ವೇದಾದಿಗಳನ್ನು ತಿಳಿದುಕೊಳ್ಳಬೇಕೆಂದು ಗುರುಗಳಿಂದ ಅನೇಕ ಬಾರಿ ಪಾಠ ಕೇಳುವರೋ ಅಂತಹ ಬ್ರಾಹ್ಮಣ, ಉಪನಿಷತ್ತುಗಳಿಂದ ಕೂಡಿದ ಎಲ್ಲ ವೇದಗಳೂ ತಮ್ಮ ಶಾಖೆಯಾದ ಋಕ್‌ಶಾಖೆಯನ್ನೂ ಗುರುಗಳಿಂದ ಅಧ್ಯಯನ ನಡೆಸದ ಯಾರಿಗೆ ಚೆನ್ನಾಗಿ ತಿಳಿಯಲ್ಪಟ್ಟಿವೆಯೋ ಅಂತಹ ಮಧ್ವರ ಇದೊಂದು ಮಹಿಮೆ ಯೋಚನೆಗೆ ಎಟುಕದ್ದು!

**ವೇದಾಂಗಪಂಚರಾತ್ರಪುರಾಣಾದಿಗಳಲ್ಲಿ ಆಳವಾದ ವಿದ್ವತ್ತೆ:**

ಜ್ಯೋತಿಶ್ಶಾಸ್ತ್ರಂ ಯದೇಕಂ ಭವತಿ ಭುವಿ ಭವಿಷ್ಯತ್ಯತೀತೇ ಚ ಸಾಕ್ಷಾ-
ಚ್ಚಕ್ಷುಃ ಪ್ರತ್ಯಕ್ಷಮಸ್ಯ ಪ್ರಕಟಮಪಿ ತದಾದ್ಯಂಗಷಟ್ಕಂ ಯಥಾಸ್ವಮ್ ।
ಕೋ ಹ್ಯಸ್ಮಾತ್ ಪಂಚರಾತ್ರೇಷ್ವಪರಿಮಿತಭಿದಾಸ್ತಂತ್ರಸಾರಪ್ರಣೇತು-
ರ್ವಿದ್ಯಾಃ ಪೌರಾಣಿಕಾನಾಂ ಬಹುವಿಧವಿಶಯಚ್ಛೇತ್ತುರನ್ಯಃ ಪ್ರವೇದ ॥ ೧೩ ॥

ಇಂದೂ ಹಿಂದೆಯೂ ಮುಂದೆಯೂ ಸಮಾನವಾಗಿರುವ ಜ್ಯೋತಿಶ್ಶಾಸ್ತ್ರ ತನ್ನ ಚಕ್ಷುರಿಂದ್ರಿಯದಂತೆ ಯಾರಿಗೆ ಪ್ರತ್ಯಕ್ಷವಾಗಿದೆಯೋ, ಹಾಗೆಯೇ ಜ್ಯೋತಿಶ್ಶಾಸ್ತ್ರವೇ ಮುಂತಾದ ಷಡಂಗಗಳು ಯಾರಿಗೆ ಚೆನ್ನಾಗಿ ಪ್ರಕಟವಾಗಿವೆಯೋ, ತಂತ್ರಸಾರವನ್ನು ರಚಿಸಿರುವ, ಪೌರಾಣಿಕರ ಬೇರೆಬೇರೆ ಸಂಶಯವನ್ನು ಪರಿಹರಿಸಿದ ಇಂತಹ ಆಚಾರ್ಯರಿಗಿಂತ ಬೇರೆ ಯಾರು ತಾನೇ ಪಂಚರಾತ್ರಗಳಲ್ಲಿ ಅಸಂಖ್ಯಪ್ರಭೇದಗಳನ್ನೂ ಚೆನ್ನಾಗಿ ಬಲ್ಲವರಿರುವರು?

**ವೈದಿಕಕರ್ಮಗಳ ಭಗವದರ್ಪಣೆಯ ನೀತಿಸೂತ್ರಗಳ ವ್ಯಾಖ್ಯೆಗೆ ಪ್ರಾರ್ಥನೆ:**

ಹವ್ಯಂ ಗೃಹ್ಣಾತಿ ಸರ್ವಕ್ರತುಷು
ಮಖಪತಿರ್ಯೋಽನುಯಜ್ಞೇಶಮೀಶೋ
ಮಂತ್ರಾಣಾಂ ದೇವತಾನಾಂ ಪ್ರತಿಹೃದಯ-
ಗತೋಽಪ್ಯೃತ್ವಿಜಾಂ ಪ್ರೇರಕಶ್ಚ ।
ಸೋಽಯಂ ಕರ್ಮಪ್ರಣೇತಾ
ಹರಿಗುರುವಿಹಿತಃ ಕರ್ಮಣಾಂ ಸತ್ಪ್ರಯೋಗ-
ನ್ಯಾಯಾನಾಂ ಸೂತ್ರಜಾತಂ ಯದಿ ಚ ಬುಧಜನ್ಯೈ-
ರರ್ಥ್ಯತೇ ಕಿಂ ನ ಕುರ್ಯಾತ್ ॥ ೧೪ ॥

ಮುಖ್ಯವಾಗಿ ಯಜ್ಞೇಶನಾದ ಶ್ರೀಹರಿಯನ್ನು ಅನುಸರಿಸಿ, ಅವನ ಬಳಿಕ ಯಜ್ಞಪತಿಯಾದ ಯಾರು ಎಲ್ಲ ಯಜ್ಞಗಳಲ್ಲಿ ಹವಿಸ್ಸನ್ನು ಸ್ವೀಕರಿಸುವನೋ, ಮಂತ್ರಗಳಿಗೆ-ದೇವತೆಗಳಿಗೆ ಒಡೆಯನಾಗಿರುವನೋ, ಎಲ್ಲ ಋತ್ವಿಜರ ಹೃದಯದಲ್ಲಿದ್ದವನಾಗಿ ಪ್ರೇರಕನಾಗಿರುವನೋ, ಅಂತಹ ಕರ್ಮಪ್ರೇರಕನಾದ ವಾಯುದೇವ ಶ್ರೀಹರಿಯಿಂದ ಹಾಗೂ ಗುರುಗಳಾದ ವೇದವ್ಯಾಸರಿಂದ ನಿಯೋಜಿಸಲ್ಪಟ್ಟವನಾದಲ್ಲಿ, ವಿದ್ವಾಂಸರಿಂದ ಪ್ರಾರ್ಥಿಸಲ್ಪಟ್ಟವನಾದಲ್ಲಿ ಯಜ್ಞಾದಿ ಕರ್ಮಗಳ ಸರಿಯಾದ ಪ್ರಯೋಗಕ್ಕೆ ಸಂಬಂಧಿಸುವ ನ್ಯಾಯಗಳ ಸೂತ್ರಸಮೂಹವನ್ನು ಯಾಕೆ ತಾನೇ ಮಾಡಲಾರ?

ರಾಮಾಯಣವನ್ನೂ ಮಹಾಭಾರತವನ್ನೂ ಚೆನ್ನಾಗಿ ತಿಳಿದವರು-

ರಾಮಕ್ರೀಡಾಮನುವಿಹರತಾ ಪೂರ್ವಮಾಪೂರ್ಣಭಕ್ತ್ಯಾ
ತೇನ ಜ್ಞಾತಾ ನ ಕಿಮು ವಿಮಲಾಸ್ತತ್ಕಥಾಗ್ರಂಥಕೋಟ್ಯಃ ।
ಸೋಽಯಂ ರೇಜೇ ಕುರುಷು ವಿಜಯೀ ಸರ್ವತೋ ಭಾರತಾಗ್ರ್ಯೋ
ಜಾನೀತೇಽತಃ ಪ್ರವಿತತಮತಿರ್ಭಾರತಾರ್ಥಾನ್ ಕೃತಾರ್ಥಃ ॥ ೧೫ ॥

ಹಿಂದೆ ಶ್ರೀರಾಮನ ಲೀಲೆಗೆ ಅನುಗುಣವಾಗಿ ಚೆನ್ನಾಗಿ ಪೂರ್ಣವಾದ ಭಕ್ತಿಯಿಂದ ಆಂಜನೇಯನಾಗಿ ಲೀಲೆಗಳನ್ನು ನಡೆಸಿದ್ದ ಆ ಮುಖ್ಯಪ್ರಾಣನಿಂದ ನಿರ್ಮಲಗಳಾದ ಶ್ರೀರಾಮಚಂದ್ರನ ಕಥೆಯ ಗ್ರಂಥಕೋಟಿ ತಿಳಿಯಲ್ಪಡದಿರಲು ಸಾಧ್ಯವೇ? ಆ ಮುಖ್ಯಪ್ರಾಣನೇ ಭೀಮಸೇನನಾಗಿ ಕುರುವಂಶದಲ್ಲಿ ಎಲ್ಲ ವಿಷಯಗಳಲ್ಲಿ ಜಯಶಾಲಿಯಾಗಿ ಕುರುಶ್ರೇಷ್ಠನಾಗಿ ಮೆರೆದಿರುವನೆಂದ ಮೇಲೆ ಅಂತಹ ಧನ್ಯನಾದ, ವ್ಯಾಪಕ ಬುದ್ಧಿಯುಳ್ಳ ಅವನು ಮಹಾಭಾರತದ ಅರ್ಥಗಳನ್ನು ತಿಳಿದಿರಲೇ ಬೇಕು ತಾನೆ?

### ವೇದಭಾಷ್ಯ ರಚನೆಯ ಸಾಮರ್ಥ್ಯ:

ಭಾಷ್ಯಂತೇ ಹ್ಯಪರಿಮಿತಾಸ್ಸಮಸ್ತವೇದೇ-
ಷ್ವೇತೇನ ಪ್ರತಿಪದಮಪ್ರಯತ್ನಮರ್ಥಾಃ ।
ಏಕೈಕಂ ಸುಕರತರಂ ತದೇಷು ಭಾಷ್ಯಂ
ಕಿಂ ನ ಸ್ಯಾತ್ ಸುರವರಸೇವಿತೇನ ತೇನ ॥ ೧೬ ॥

ಸಮಸ್ತವೇದಗಳ ಬಗ್ಗೆ ಒಂದೊಂದು ಪದಕ್ಕೂ ಸಂಬಂಧಿಸಿದಂತೆ ತಿಳಿಯಲಾರದಷ್ಟು ಅರ್ಥಗಳನ್ನು ಅನಾಯಾಸವಾಗಿ ಹೇಳುತ್ತಿರುವ, ದೇವಶ್ರೇಷ್ಠರಿಂದ ಸೇವಿಸಲ್ಪಡುವ ಇವರಿಂದ ವೇದಗಳ ವಿಷಯದಲ್ಲಿ ಪ್ರಧಾನವಾದ ಒಂದು ಭಾಷ್ಯ ಚೆನ್ನಾಗಿ ರಚಿತವಾಗಲಾರದೇ?

### ದೇವತೆಗಳ ರೂಪಸ್ಥಿತ್ಯಾದಿಗಳ ಪರಿಜ್ಞಾನ:

ಪ್ರತ್ಯಕ್ಷಸ್ಯ ಸ್ವಹೃದಿ ವಿಶದೇ ಸತ್ಯಕಾಮಸ್ಯ ಕಾಮಾನ್
ಸಾಕ್ಷಾತ್ಕರ್ತುಃ ಖಲು ಭಗವತೋ ಭ್ರೂನಿದೇಶಾದ್ ದ್ಯುದೇಶಾಃ ।

ಪ್ರಾಪ್ತಾ ದೇವೈಃ ಪ್ರತಿಪದಮಸೌ ನಿತ್ಯಮಾಸೇವಿತಸ್ತೈ-
ಸ್ತೇಷಾಂ ರೂಪಂ ಸ್ಥಿತಿಮಪಿ ಬಲಂ ವೇತ್ತಿ ಚಿತ್ರಂ ಕಿಮೇತತ್ ॥ ೧೭ ॥

ತಮ್ಮ ನಿರ್ಮಲವಾದ ಹೃದಯದಲ್ಲಿ ಪ್ರತ್ಯಕ್ಷನಾದ ಸತ್ಯಸಂಕಲ್ಪನಾದ ಭಗವಂತನ ಸಂಕಲ್ಪಗಳನ್ನೆಲ್ಲ ಚೆನ್ನಾಗಿ ನೆರವೇರಿಸಿಕೊಡುವ ಭಗವಾನ್ ಮಧ್ವಗುರುಗಳ ಹುಬ್ಬಿನ ಕುಣಿತಕ್ಕನುಗುಣವಾಗಿ ಸ್ವರ್ಗದ ದೇವತೆಗಳು ಭೂಮಿಯಲ್ಲಿ ಅವತರಿಸಿರುವರು. ಅಂತಹ ದೇವತೆಗಳಿಂದ ಹೆಜ್ಜೆಹೆಜ್ಜೆಗೆ ಸೇವಿಸಲ್ಪಡುವ ಮಧ್ವರು ಆ ದೇವತೆಗಳ ಸ್ವರೂಪವನ್ನೂ, ಸ್ಥಿತಿಗತಿಯನ್ನೂ, ಸಾಮರ್ಥ್ಯವನ್ನೂ ತಿಳಿದಿರುವರೆಂಬುದು ಏನು ಆಶ್ಚರ್ಯ!

## ಕೈಯಲ್ಲಿಯ ಚೆಂಡಿನಂತೆ ವೇದೇತರ ವಿದ್ಯೆಗಳ ಪರಿಜ್ಞಾನ:

ಗಂಧರ್ವವಿದ್ಯಾನಿಪುಣಸ್ಯ ನಿತ್ಯಂ
ಗಂಧರ್ವವರ್ಯೈರನುಗೀತಕೀರ್ತೇಃ ।
ಕಲಾಶ್ಚ ಶೇಷಾ ಹೃದಯೇ ಗುರೋರ್ನಃ-
ಕರೋಲ್ಲಸತ್ಕಂದುಕವದ್ವಿಭಾಂತಿ ॥ ೧೮ ॥

ಯಾವಾಗಲೂ ಗಂಧರ್ವಶ್ರೇಷ್ಠರು ಯಾರ ಕೀರ್ತಿಯನ್ನು ಹಾಡುತ್ತಿರುವರೋ, ಅಂತಹ ಗಂಧರ್ವವಿದ್ಯೆಯಲ್ಲಿ -ಸಂಗೀತವಿದ್ಯೆಯಲ್ಲಿ ಪಟುಗಳಾದ ನಮ್ಮ ಗುರುಗಳ ಹೃದಯದಲ್ಲಿ ಸಂಗೀತವಿದ್ಯೆಯಂತೆ ಉಳಿದೆಲ್ಲ ವಿದ್ಯೆಗಳೂ ಕೈಯಲ್ಲಿ ಶೋಭಿಸುವ ಚೆಂಡಿನಂತೆ ವಿರಾಜಿಸುತ್ತಿವೆ.

ಏವಂ ಧರ್ಮಾರ್ಥದರ್ಶೀ
ನೃಪನಯಕುಶಲೋ ನ್ಯಾಯವಿತ್ ಸುಪ್ರಮಾಣ್ಯೈಃ
ಸರ್ವಜ್ಞಸ್ತತ್ತ್ವಮಾರ್ಯಃ
ಕ್ಷಿತಿತಲಮಗಮತ್ ಕೇವಲಂ ಸಂಪ್ರಣೇತುಮ್ ।
ಯಸ್ಮಿನ್ ಗುಹ್ಯೇ ಸ್ಮ ದೇವಾ ಅಪಿ
ಮುನಿಪಿತೃಭಿಃ ಪ್ರಾಯ ಆಲೋಚ್ಯ ನಿತ್ಯಂ
ನಿಷ್ಠಾಂ ನಾಽಯಾಂತಿ ಭೂಯ-
ಶ್ಚಿರತರಭಗವದ್‌ಭಕ್ತಿಭಿಸ್ಸಾಧಯಂತಿ ॥ ೧೯ ॥

ಇದೇ ರೀತಿಯಾಗಿ ಧರ್ಮದ ಶಾಸ್ತ್ರವನ್ನೂ ಅರ್ಥಶಾಸ್ತ್ರವನ್ನೂ ಬಲ್ಲವರಾದ, ರಾಜನೀತಿಯಲ್ಲಿ ನಿಪುಣರಾದ, ನ್ಯಾಯಶಾಸ್ತ್ರವನ್ನು ಬಲ್ಲ, ಎಲ್ಲವನ್ನೂ ಬಲ್ಲವರಾದ, ಪೂಜ್ಯರಾದ ಮಧ್ವಗುರುಗಳು ಸ್ವತಂತ್ರತತ್ತ್ವ ಆದ ಶ್ರೀಹರಿಯನ್ನು ಉತ್ತಮ ಸಾತ್ವಿಕರಲ್ಲಿಗೆ ತಲುಪಿಸುವುದಕ್ಕಾಗಿಯೇ ಭೂಮಿಯ ಮೇಲೆ ಅವತರಿಸಿರುವರು. ರಹಸ್ಯವಾದ ಯಾವ ತತ್ತ್ವದ ವಿಷಯದಲ್ಲಿ ಮುನಿಗಳಿಂದ, ಪಿತೃಗಳಿಂದ ಕೂಡಿದ ದೇವತೆಗಳೂ ಯಾವಾಗಲೂ ಚೆನ್ನಾಗಿ ವಿಮರ್ಶಿಸಿದರೂ ಪೂರ್ಣವಾದ ವಿಶ್ವಾಸವನ್ನು ಹೊಂದಿರುವುದಿಲ್ಲ. ಅವರು ಜಗದ್ಗುರುಗಳ ಬಹುಕಾಲದ ಭಕ್ತಿಯಿಂದ ತತ್ತ್ವನಿರ್ಣಯನಿಷ್ಠೆಯನ್ನು ಹೊಂದುವರಷ್ಟೆ!

**ಬಳಿತ್ಥಾಸೂಕ್ತದ ತಿರುಳು:**

> **ತ್ರೇಧಾऽವತಾರಮವನಾಯ ಸತಾಂ ಬಳಿತ್ಥೇ-**
> **ತ್ಯಾದ್ಯಾ ಶ್ರುತಿರ್ಭಗವತೀ ಗುರುಮೇನಮಾಹ ।**
> **ಮುಖ್ಯಾನಿಲೋऽತಿಬಲವಾನ್ ಮತಿರೀಶಧೇನಾ**
> **ನೇತೇತಿ ಪೃಕ್ಷ ಇತಿ ಮಧ್ವ ಇತಿ ಕ್ರಮೇಣ ॥ ೨೦ ॥**

ಋಗ್ವೇದದ ಬಳಿತ್ಥಾ ಎಂದು ಆರಂಭವಾಗುವ ಸೂಕ್ತವು ನಮ್ಮ ಗುರುಗಳನ್ನು ಭೂಮಿಯಲ್ಲಿ ಸಜ್ಜನರ ರಕ್ಷಣೆಗಾಗಿ ಹನುಮಂತ-ಭೀಮಸೇನ ಹಾಗೂ ಮಧ್ವ ಎಂಬ ಮೂರು ಅವತಾರಗಳನ್ನು ಹೊಂದಿರುವವರನ್ನಾಗಿ ಪರಿಚಯಿಸಿಕೊಡುತ್ತಿದೆ. ಅತಿ ಬಲಿಷ್ಠನಾದವನು ಮುಖ್ಯಪ್ರಾಣನು ಎಂದು ರಾಮಚಂದ್ರನ ಅಮೃತಸ್ರಾವಿ ಮಾತನ್ನು ಸೀತೆಯಲ್ಲಿಗೆ ಕೊಂಡೊಯ್ದ ಹನುಮಂತನನ್ನು ಅತಿಶಯವಾದ ಬುದ್ಧಿವುಳ್ಳವನೆಂಬ ಆಶಯದಿಂದ 'ಮತಿಃ' ಎಂದೂ ದುಷ್ಟರ ಸೇನೆಯನ್ನು ವಿಶೇಷವಾಗಿ ದಮನ ಮಾಡಿದ ಭೀಮಸೇನನನ್ನು 'ಪೃಕ್ಷಃ' ಎಂದೂ, ಆನಂದಸಂದಾಯಿಶಾಸ್ತ್ರವನ್ನು ನೀಡಿದ ಆನಂದತೀರ್ಥರನ್ನು 'ಮಧ್ವ' ಎಂದೂ ಗುರುತಿಸಿಕೊಟ್ಟಿದೆ.

**ಗುರುಗಳಿಂದ ಯಾವಾಗಲೂ ನಮಿಸಲ್ಪಡುವವನಿಗೆ ಪ್ರಣಾಮ:**

> **ನಮಸ್ತಸ್ಮೈ ನಮಸ್ತಸ್ಮೈ ಸಮಸ್ತಸ್ವಾಮಿನೇऽಸ್ತು ತೇ ।**
> **ನಮಸ್ತಸ್ಮೈ ಚ ಯಸ್ತಸ್ಮೈ ನಮಸ್ಕರ್ತಾ ಗುರುಸ್ಸದಾ ॥**

[ತತ್ತ್ವಪ್ರದೀಪದ ಉಪಸಂಹಾರದ ಪದ್ಯ]

ಸಮಸ್ತ ಪ್ರಪಂಚಕ್ಕೆ ಒಡೆಯನಾದ, ಶಾಸ್ತ್ರಪ್ರಪಂಚದಲ್ಲಿ ಪ್ರಸಿದ್ಧನಾದ ನಿನಗೆ ಮತ್ತೆ ಮತ್ತೆ ಪ್ರಣಾಮ. ಅಂತಹ ನಿನಗೆ ಸರ್ವದಾ ನಮಸ್ಕರಿಸುತ್ತಿರುವ ಮಧ್ವಗುರುಗಳಿಗೂ ಪ್ರಣಾಮ.

*



ಶ್ರೀ ಮಧ್ವ ಗುರುಗಳು ತ್ರಿವಿಕ್ರಮ ಪಂಡಿತಾಚಾರ್ಯರಿಗೆ ಅನುಗ್ರಹಿಸಿರುವ 'ಶ್ರೀವತ್ಸನಾರಾಯಣ'ನಲ್ಲಿ ಗುರ್ವಂತರ್ಯಾಮಿಯ ಸ್ತುತಿಯ ಸಮರ್ಪಣೆ.

# ಶ್ರೀವಿಷ್ಣುಸಹಸ್ರನಾಮ

## • ವಾಯುದೇವನ ಅನ್ನದ ಸಾರ •

ಬೃಹತೀಸಹಸ್ರ ಭಗವಂತನನ್ನು ಪ್ರತಿಪಾದಿಸುತ್ತಿದ್ದು ಅವನಿಗೆ ಅತಿಪ್ರಿಯವಾಗಿರುವುದರಿಂದ ಅವನ ಅನ್ನ ಎನಿಸಿದೆ ಎಂದು ಪ್ರತಿಪಾದಿಸಲಾಗಿದೆ. ಅದು ಭಗವಂತನ ಬಳಿಕ ವಾಯುದೇವನಿಗೂ ಪ್ರಿಯವಾಗಿರುವುದರಿಂದ ಭಗವದಾಜ್ಞಾನುಸಾರವಾಗಿ ಅದು ವಾಯುದೇವನಿಗೂ 'ಅನ್ನ' ಎನಿಸುವುದೆಂದು ಶ್ರೀ ಮಧ್ವರು ಉಪಪಾದಿಸಿರುವರು.[1] ಆದುದರಿಂದಲೇ ದೇವೇಂದ್ರನ ಮಹಾವ್ರತದಲ್ಲಿ ವಿಶ್ವಾಮಿತ್ರರು ನಡೆಸಿದ ಬೃಹತೀಸಹಸ್ರದ ಶಂಸನವನ್ನು ನಡೆಸಲು ವಾಯುಸಹಿತನಾದ ಕೇಶವ ದೇವೇಂದ್ರನನ್ನು ಆವೇಶಗೊಂಡು ಬೃಹತೀಸಹಸ್ರದ ಶಂಸನವನ್ನು ಕೇಳಿ ಕೇಶವನಂತೆ ವಾಯುದೇವನೂ ತುಷ್ಟನಾದನೆಂದು ನಿರೂಪಿಸಲಾಗಿದೆ.[2] ಬೃಹತೀಸಹಸ್ರ ವಾಯುದೇವನಿಗೆ ಪ್ರಿಯ ಎನಿಸಲು ಕಾರಣ ಅದು ಭಗವಂತನನ್ನು ಪ್ರತಿಪಾದಿಸುತ್ತಿದೆ ಎನ್ನುವುದರ ಜೊತೆಗೆ ಗೌಣವಾಗಿ ತನ್ನ ಪ್ರತಿಪಾದಕವೂ ಆಗಿರುವುದೆಂದು. ಆದುದರಿಂದ ಬೃಹತೀಸಹಸ್ರ ಭಗವಂತನ ಬಳಿಕ ಭಗವದಾಜ್ಞಾನುಸಾರವಾಗಿ ವಾಯುದೇವನಿಗೆ ಅನ್ನ ಎಂದರೆ ಅವನ ಗುಣಧರ್ಮಗಳ ಪ್ರತಿಪಾದಕವೂ ಆಗಿದ್ದು, ಆ ಪ್ರಯುಕ್ತವೂ ಅವನಿಗೆ ತುಷ್ಟಿಪ್ರದ ಎಂದೇ ಅರ್ಥ. ಐತರೇಯೋಪನಿಷತ್ತಿನಲ್ಲಿ 'ತಾ ವಾ ಏತಾಃ....' ಎಂಬ ಮಾತಿನಿಂದ ಭಗವಂತನ ಜೊತೆಗೆ ವಾಯುದೇವನಿಗೂ ಸರ್ವವೇದಪ್ರತಿಪಾದ್ಯತ್ವವನ್ನು ಸೂಚಿಸಿ, ಆ ಪ್ರಸಂಗದಲ್ಲೇ ಬೃಹತೀಸಹಸ್ರ ಭಗವಂತನಿಗೆ ಹೇಗೋ ಹಾಗೆ ವಾಯುದೇವನಿಗೂ 'ಅನ್ನ' ಎಂದು ನಿರೂಪಿಸಲಾಗಿದೆ.[3] ಎಂದರೆ

---

1. ಅನ್ಯದೇವತಾವಿಷಯತ್ವೇನ ಪ್ರತೀಯಮಾನಾ ಅಪ್ಯೃಚೋ ಭಗವದ್ವಿಷಯಾ ಏವ ಮುಖ್ಯತಃ । ತದನಂತರಂ ವಾಯುವಿಷಯಾಶ್ಚ । ತಸ್ಮಾದ್ ಬೃಹತೀಸಹಸ್ರಂ ಸರ್ವಂ ಮುಖ್ಯತೋ ನಾರಾಯಣಸ್ಯಾನ್ನಮ್ । ತದಾಜ್ಞಯಾ ವಾಯೋಶ್ಚ ।
*– [ಐ.ಉ.ಭಾ. 2-1-2-13]*

2. .....ತಸ್ಮಾತ್ ತಚ್ಛಂಸನೇನ ಭಗವಾನ್ ವಾಯುಶ್ಚಾತಿಪ್ರೀತ ಇತಿ ದರ್ಶಯತಿ –ವಿಶ್ವಾಮಿತ್ರಂ ಹ್ಯೇತದಹರಿತ್ಯಾದಿನಾ...

* ವಾಯುನಾ ಸಹ ದೇವೇಶಸ್ತದಾ ವಾಸವಮಾವಿಶತ್.... ತಚ್ಛ್ರುತ್ವಾ ತುಷ್ಟಿಮಗಮತ್ ಕೇಶವೋ ವಾಯುಸಂಯುತಃ *– ಬ್ರಹ್ಮಾಂಡೇ [ಐ.ಉ.ಭಾ. 2-1-2-13]*

3. ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ.....ಏಕೈವ ವ್ಯಾಹೃತಿಃ ಪ್ರಾಣ ಏವ.... ವಿಶ್ವಾಮಿತ್ರಂ ಹ್ಯೇತದಹಃ..... *– [ಐ.ಉ. 2-1-2-12, 13]*

* *....ತದನಂತರಂ ವಾಯುವಿಷಯಾಶ್ಚ । ತಸ್ಮಾದ್ ಬೃಹತೀಸಹಸ್ರಂ ಸರ್ವಂ ಮುಖ್ಯತೋ ನಾರಾಯಣಸ್ಯಾನ್ನಮ್ । ತದಾಜ್ಞಯಾ ವಾಯೋಶ್ಚ ।

ಬೃಹತೀಸಹಸ್ರಪ್ರತಿಪಾದ್ಯತ್ವಪ್ರಯುಕ್ತವಾಗಿಯೇ ಬೃಹತೀಸಹಸ್ರಕ್ಕೆ ಅನ್ನತ್ವದ ನಿರೂಪಣೆ ನಡೆದಿದೆ ಎಂಬುದು ಸ್ಪಷ್ಟವಾಗಬಲ್ಲದು.

## ಅನ್ನದ ಸಾರ ವಿಷ್ಣುಸಹಸ್ರನಾಮ

ಹೀಗೆ ವಾಯುದೇವನಿಗೆ ಗೌಣವಾಗಿ 'ಅನ್ನ' ಎನಿಸಿರುವ ಬೃಹತೀಸಹಸ್ರದ ಮೂಲ ವಿಷ್ಣುಸಹಸ್ರನಾಮ.[4] ಅಂದಮೇಲೆ ಆ ವಿಷ್ಣುಸಹಸ್ರನಾಮ ಭಗವಂತನ ಪಾಲಿಗೆ ಅನ್ನದ ಸಾರ ಎನಿಸಿದಂತೆ, ಭಗವಂತನ ಬಳಿಕ, ಗೌಣವಾಗಿ ವಾಯುದೇವನ ಪಾಲಿಗೂ ಅನ್ನದ ಸಾರ ಎನಿಸಬಲ್ಲದು. ಬೃಹತೀಸಹಸ್ರದಂತೆಯೇ ವಿಷ್ಣುಸಹಸ್ರನಾಮವೂ ಅತಿತುಷ್ಟಿಪ್ರದವಾಗಿ 'ಅನ್ನದ ಸಾರ' ಎನಿಸುವುದು. ಅತಿತುಷ್ಟಿಪ್ರದವೆನಿಸಲು ಕಾರಣ ಬೃಹತೀಸಹಸ್ರ ಹೇಗೋ ಹಾಗೆಯೇ ವಿಷ್ಣುಸಹಸ್ರನಾಮವೂ ಮುಖ್ಯವಾಗಿ ಭಗವಂತನ ಪ್ರತಿಪಾದಕವಾಗಿರುವಂತೆ, ಅವನ ಬಳಿಕ ಅವನ ಆದೇಶಾನುಸಾರವಾಗಿ ವಾಯುದೇವನ ಪ್ರತಿಪಾದಕವೂ ಆಗಿರುವುದು.

ಭಗವಂತನಿಗೆ ತನ್ನನ್ನು ಸರ್ವೋತ್ತಮನನ್ನಾಗಿ ಭಕ್ತರು ತಿಳಿಯುವುದು ಹೇಗೆ ಅತ್ಯಂತ[5] ಪ್ರಿಯವಾದುದೋ ಹಾಗೆಯೇ ವಾಯುದೇವನು ರುದ್ರಾದಿ ದೇವತೆಗಳಿಗಿಂತೆಲ್ಲ ಉತ್ತಮನಾದವನೆಂದು ಅವನನ್ನು ತಿಳಿಯುವುದೂ ಅತ್ಯಂತ[6] ಪ್ರಿಯವಾದುದು. ಆದುದರಿಂದ ಬೃಹತೀಸಹಸ್ರದ ತಿರುಳಾದ ವಿಷ್ಣುಸಹಸ್ರನಾಮವನ್ನು ಭಗವಂತನ ಸರ್ವೋತ್ತಮತ್ವಕ್ಕೆ ಪೂರಕವಾಗಿ ಅನುಸಂಧಾನ ಮಾಡಬೇಕಾದಂತೆ ವಾಯುದೇವನ ರುದ್ರಾದಿದೇವೋತ್ತಮತ್ವಕ್ಕೆ ಜೀವೋತ್ತಮತ್ವಕ್ಕೆ ಪೂರಕವಾಗಿಯೂ ಅನುಸಂಧಾನ ಮಾಡಬೇಕು. ಇದರಿಂದ ಹರಿವಾಯುಗಳಿಬ್ಬರ ಅನುಗ್ರಹಕ್ಕೂ ಪಾತ್ರರಾಗಬಹುದಾಗಿದೆ.

## ಆರು ಬಗೆಯ ನಾಮಗಳಿಗೆ ಆರು ಬಗೆಯ ಸಮನ್ವಯ

### ವಿಷ್ಣುಸಹಸ್ರನಾಮದಲ್ಲಿ ಆರು ಬಗೆಯ ನಾಮಗಳು:

ವಿಷ್ಣುಸಹಸ್ರನಾಮಸ್ತೋತ್ರದ ಸಾವಿರ ನಾಮಗಳನ್ನು ಬೇರೆ ಬೇರೆ ಧರ್ಮದ ಆಧಾರದ ಮೇಲೆ ಆರು ವಿಭಾಗಗಳಾಗಿ ವಿಂಗಡಿಸಬಹುದಾಗಿದೆ.

೧. ಶ್ರೀವಿಷ್ಣುವಿನಲ್ಲೇ ಪ್ರಸಿದ್ಧಗಳಾಗಿರುವ ನಾಮಗಳು –ವಿಷ್ಣು, ನಾರಾಯಣ, ಕೃಷ್ಣ, ಕೇಶವ, ಜನಾರ್ದನ ಇತ್ಯಾದಿಗಳು.

---

4. ವಿಷ್ಣೋಃ ಸಹಸ್ರನಾಮ್ನಸ್ತು ಯತ್ ತದ್ ರೂಪಸಹಸ್ರಕಮ್ ।
ಬೃಹತೀಸಹಸ್ರಮೇತಚ್ಚ ತದ್ ವಕ್ತಿ ಹಿ ಪೃಥಕ್ ಪೃಥಕ್ ॥ – *[ಐ.ಉ.ಭಾ. 2-2-4-1]*

5. ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋರ್ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್....
– *ಸೌಪರ್ಣಶ್ರುತಿ [ವಿ.ತ.ವಿ.]*

6. ಸರ್ವದೇವೋತ್ತಮೋ ವಾಯುರಿತಿ ಜ್ಞಾನಾನ್ನ ಚಾಪರಂ ಪ್ರಿಯಮಸ್ತಿ ತಥಾ ವಿಷ್ಣೋಃ......

೨. [ಶ್ರೀವಿಷ್ಣುವಿನ ಬಳಿಕ] ವಾಯುದೇವನಲ್ಲೂ ಪ್ರಸಿದ್ಧಗಳಾದ ನಾಮಗಳು –ಪ್ರಾಣ, ವಾಯು, ಸಮೀರಣ, ಅನಿಲ, ಪವನ, ಭೀಮ –ಇತ್ಯಾದಿಗಳು.

೩. ವಾಯುದೇವನ ಸಂಪರ್ಕದ ಉಲ್ಲೇಖದೊಂದಿಗೆ ಶ್ರೀವಿಷ್ಣುವನ್ನು ಪ್ರತಿಪಾದಿಸುವ ನಾಮಗಳು –ಪ್ರಾಣದಃ, ವಿಶ್ವಾತ್ಮಾ, ಪ್ರಾಣನಿಲಯಃ, ಆತ್ಮಯೋನಿಃ, ಗದಾಧರಃ –ಇತ್ಯಾದಿಗಳು.

೪. [ಶ್ರೀವಿಷ್ಣುವಿನ ಬಳಿಕ] ಇತರ ದೇವಾದಿಗಳಲ್ಲೂ ಪ್ರಸಿದ್ಧಗಳಾದ ನಾಮಗಳು –ಶರ್ವಃ, ಶಿವಃ, ಸ್ವಯಂಭೂಃ, ಆದಿತ್ಯಃ, ವಹ್ನಿಃ, ಸ್ಕಂದಃ –ಮುಂತಾದವು.

೫. ಇತರ ದೇವಾದಿಗಳ ಸಂಪರ್ಕದ ಉಲ್ಲೇಖದೊಂದಿಗೆ ಶ್ರೀವಿಷ್ಣುವನ್ನು ಪ್ರತಿಪಾದಿಸುವ ನಾಮಗಳು –ಅಮರಪ್ರಭುಃ, ಪ್ರಧಾನಪುರುಷೇಶ್ವರಃ, ಚಂದ್ರಾಂಶುಃ, ಭಾಸ್ಕರದ್ಯುತಿಃ, ಸ್ಕಂದಧರಃ –ಮುಂತಾದವು.

೬. ಯಾವುದೇ ನಿರ್ದಿಷ್ಟ ವ್ಯಕ್ತಿಯನ್ನು ತಿಳಿಸದೆ, ಯಾವುದಾದರೊಂದು ಧರ್ಮವನ್ನು ಸಾರುತ್ತಿರುವ ನಾಮಗಳು –ಸಾಕ್ಷೀ, ಭರ್ತಾ, ಮಹಾತಪಾಃ, ಸತ್ಕರ್ತಾ, ಮಹಾಬುದ್ಧಿಃ –ಮುಂತಾದವು.

## ಆರು ಬಗೆಯ ಸಮನ್ವಯಗಳು

### ವಿಷ್ಣು ಮುಂತಾದ ನಾಮಗಳ ಸಮನ್ವಯ:

ಎಲ್ಲ ನಾಮಗಳಿಗೂ ಒಡೆಯನಾಗಿರುವ ಭಗವಂತನು ನಾರಾಯಣಾದಿನಾಮಗಳನ್ನು ತಾನೇ ಇಟ್ಟುಕೊಂಡು, ಚತುರ್ಮುಖಾದಿ ನಾಮಗಳನ್ನಷ್ಟೇ ಉಳಿದವರಿಗೆ ನೀಡಿರುವನೆಂಬ ಪ್ರಮಾಣ[7]ದಿಂದ ನಾರಾಯಣಾದಿ ನಾಮಗಳಿಂದ ಉಳಿದವರು ಪ್ರತಿಪಾದ್ಯರಾಗಲಾರ ರೆಂದು ತಿಳಿದು ಬರುವುದು. ಆದ್ದರಿಂದ ವಾಯದೇವ ವಿಷ್ಣು, ನಾರಾಯಣ ಇತ್ಯಾದಿ ನಾಮಗಳಿಂದ ಪ್ರತಿಪಾದ್ಯನಾಗಲಾರ.

ಆದರೂ ಭಗವಂತನ ಆ ನಾರಾಯಣಾದಿ ನಾಮಗಳಿಗೆ ಅಭಿಮಾನಿಯಾಗಿರುವುದ ರಿಂದ ಅಭಿಮಾನಾಸ್ಪದ ಪದಾರ್ಥದ ಹೆಸರಿನಿಂದ ಅಭಿಮಾನಿಯೂ ವ್ಯವಹರಿಸಲ್ಪಡುವ ಪ್ರಕ್ರಿಯೆಗನುಗುಣವಾಗಿ[8] ಆ ನಾಮಗಳಿಂದ ಅವನು ವಾಚ್ಯನಾಗಬಹುದು. ಓಂಕಾರ ಮತ್ತು ಅಕಾರ ಭಗವಂತನಿಗೆಷ್ಟೇ ಸೇರಿದ ಹೆಸರುಗಳೆಂದು ತಿಳಿಸಿ, ಚತುರ್ಮುಖವಾಯು

---

7. ಋತೇ ನಾರಾಯಣಾದೀನಿ ನಾಮಾನಿ ಪುರುಷೋತ್ತಮಃ ।
ಪ್ರಾದಾದನ್ಯತ್ರ ಭಗವಾನ್ ರಾಜೇವರ್ತೇ ಸ್ವಕಂ ಪುರಮ್ ।
*– ಸ್ಕಾಂದೇ [ಬ್ರ.ಸೂ.ಭಾ. 1-3-3]*

* ನ ತು ನಾರಾಯಣಾದೀನಾಂ ನಾಮ್ನಾಮನ್ಯತ್ರ ಸಂಭವಃ.....
*– –ವಾಮನೇ [ಬ್ರ.ಸೂ.ಭಾ. 1-3-3]*

8. 'ಅಭಿಮಾನಿವ್ಯಪದೇಶಸ್ತು.....' *– [ಬ್ರ.ಸೂ. 2-1-6]*

ಗಳು ಆ ಅಕಾರಕ್ಕೆ ಹಾಗೂ ಭಗವಂತನ ಇತರ ನಾಮಗಳಿಗೂ ಅಭಿಮಾನಿಗಳೆಂದು ಹೇಳಲಾಗಿದೆ.[9] ಆದ್ದರಿಂದ ಆಯಾ ನಾಮದಿಂದ ವಾಯುದೇವ ಅಭಿಮಾನಿಯಾಗಿ ಅಂದರೆ ಆಯಾ ನಾಮ ಆಯಾ ಅರ್ಥವನ್ನು ಹೊರಡಿಸಲು ನಿಯಾಮಕವಾಗಿ ವಾಚ್ಯನೆನಿಸಬಲ್ಲನು.

● ಹಾಗೆಯೇ ಆಯಾ ನಾಮದ ಘಟಕವಾಗಿಯೂ ವಾಯುದೇವ ವಾಚ್ಯನಾಗಬಲ್ಲ.

ಉದಾಹರಣೆಗೆ: ವಿಷ್ಣುನಾಮದ ಷಕಾರದ ಅರ್ಥ ಪ್ರೇರಕತ್ವ ಹಾಗೂ ವ್ಯಾಪ್ತಿ ಇವುಗಳಿಗೆ ಸಂಬಂಧಿಸಿದಂತೆ ಜೀವೋತ್ತಮನಾದ ವಾಯುದೇವನನ್ನು ಪ್ರೇರಿಸುವವನು; ಅವನಲ್ಲಿ ವಿಶೇಷವಾಗಿ ವ್ಯಾಪಿಸಿರುವವನು –ಎಂದು ಅರ್ಥೈಸಿಕೊಳ್ಳಬೇಕು. ಣಕಾರದ ಅರ್ಥ 'ಬಲ'ಕ್ಕೆ ಸಂಬಂಧಿಸಿದಂತೆ ಶ್ರೀವಿಷ್ಣುವಿನ ಬಲ ಅವನ ಪ್ರತಿಬಿಂಬನಾದ ವಾಯು ದೇವನಲ್ಲಿ ಪ್ರತಿಬಿಂಬಿತವಾಗಿದ್ದು, ಆದುದರಿಂದಲೇ ಅವನು ಬಲದೇವತೆಯಾಗಿರುವನು ಎಂದು ವಿವೇಚಿಸಿಕೊಳ್ಳಬೇಕು.

ಇದರಿಂದಾಗಿ ವಾಯುದೇವನ ವ್ಯಕ್ತಿತ್ವದ ಆಧಾರದ ಮೇಲೆ ವಿಷ್ಣುನಾಮಾರ್ಥವನ್ನು ವಿವೇಚಿಸಿದಂತಾಗಿ ವಿಷ್ಣುನಾಮದಿಂದ ಗೌಣವಾಗಿ ವಾಯುದೇವನ ಪ್ರತಿಪಾದನೆಯೂ ನಡೆದಂತಾಗುವುದು.

ಹೀಗೆಯೇ ನಾರಾಯಣ, ಜನಾರ್ದನ ಮುಂತಾದ ನಾಮಗಳ ಅರ್ಥವನ್ನು ಜೀವೋತ್ತಮನಾದ ವಾಯುದೇವನಿಗೆ ಸಂಬಂಧಿಸಿದಂತೆ ವಿಶ್ಲೇಷಿಸುವ ಮೂಲಕ ಆ ಎಲ್ಲ ನಾಮಗಳಿಂದಲೂ ವಾಯುದೇವ ಗೌಣವಾಗಿ ಪ್ರತಿಪಾದ್ಯನೆನಿಸುವನೆಂದು ಅನುಸಂಧಾನ ಮಾಡಬಹುದಾಗಿದೆ.

## ಪ್ರಾಣ ಇತ್ಯಾದಿ ನಾಮಗಳ ಸಮನ್ವಯ:

ವಿಷ್ಣುಸಹಸ್ರನಾಮದಲ್ಲಿ '**ವಾಯುಃ, ಪ್ರಾಣಃ, ಅನಿಲಃ, ಶುಚಿಃ, ಸಮೀರಣಃ, ಧರ್ಮಃ, ಯೋಗಃ, ಪವನಃ, ಯಜ್ಞಃ, ಭೀಮಃ**' –ಇತ್ಯಾದಿಯಾಗಿ ಹತ್ತಕ್ಕಿಂತಲೂ ಅಧಿಕ ನಾಮಗಳು ಶ್ರೀವಿಷ್ಣುವಿನ ಬಳಿಕ ವಾಯುದೇವನನ್ನು ತಿಳಿಸುವವುಗಳಾಗಿವೆ.

ಇವುಗಳಿಂದ ಬೇರೆ ಬೇರೆ 'ಪ್ರವೃತ್ತಿನಿಮಿತ್ತಧರ್ಮ'ದ ಆಧಾರದ ಮೇಲೆ ಶ್ರೀವಿಷ್ಣು ವನ್ನು ಸ್ತುತಿಸುವಾಗ, '**ಆಭಾಸಕೋಽಸ್ಯ ಪವನಃ....**' ಎಂದಿರುವಂತೆ ಭಗವಂತನ ನೇರ ಪ್ರತಿಬಿಂಬನಾದ ವಾಯುದೇವನಲ್ಲಿ ಆಯಾ ಪ್ರವೃತ್ತಿನಿಮಿತ್ತಧರ್ಮವು ಪ್ರತಿಬಿಂಬಿತವಾಗಿರು ವುದರಿಂದ ವಾಯುದೇವನೂ ಗೌಣವಾಗಿ ಆಯಾ ನಾಮದಿಂದ ವಾಚ್ಯನಾಗುವನೆಂದು ಅನುಸಂಧಾನ ಮಾಡಿಕೊಳ್ಳಬೇಕು.

---

9. ಪ್ರಣವಶ್ಚ ತತೋಽಕಾರಃ ಪ್ರಧಾನಂ ನಾಮ ಚಕ್ರಿಣಃ ।
.....ಅಕಾರೋ ನೈವಾಯುಂ ವಿಹಿತಸ್ತಮ್ಪ್ರತೇ ಪ್ರಭುಮ್ ।
ವಾಯುರ್ಬ್ರಹ್ಮಾಪಿ ಚಾಕಾರದೇವತೇ ನ ತು ನಾಮಿನೌ ।
ಯಥಾ ವೇದಾಭಿಧೇಯೋಽನ್ಯೋ ವೇದಾಖ್ಯಾ ದೇವತಾ ಪರಾ ।
ಏವಂ ನಾಮಾಭಿಮಾನೀ ತು ವಾಯುಃ.... – *ಬ್ರಹ್ಮಸಾರೇ [ಐ.ಉ.ಭಾ. 2-2-6-5]*

ಉದಾಹರಣೆಗೆ- ಪ್ರೇರಕತ್ವರೂಪವಾದ ಪ್ರವೃತ್ತಿನಿಮಿತ್ತಧರ್ಮದ ಆಧಾರದಲ್ಲಿ ಮುಖ್ಯವಾಗಿ ಪ್ರಾಣ ಎನಿಸುವ ಭಗವಂತನ ಆ ಪ್ರೇರಕತ್ವಧರ್ಮವು ಪ್ರತಿಫಲಿತವಾಗಿ ವಾಯುದೇವನಲ್ಲಿ ಬಂದಿರುವುದರಿಂದ ಅವನೂ ಗೌಣವಾಗಿ ಪ್ರಾಣ ಎನಿಸುವನು.

## ವಾಯುವಾಹನ ಇತ್ಯಾದಿ ನಾಮಗಳ ಸಮನ್ವಯ:

ಪ್ರಾಣದಃ, ಸಂವತ್ಸರಃ, ವಿಶ್ವಯೋನಿಃ, ಅತೀಂದ್ರಃ, ಧೃತಾತ್ಮಾ, ವಿಶ್ವಾತ್ಮಾ, ಪ್ರಸನ್ನಾತ್ಮಾ, ವಿಶ್ವಧೃಕ್, ವಿಶ್ವಭುಗ್, ಪಾವನಃ, ವಾಯುವಾಹನಃ, ಯಜ್ಞವಾಹನಃ, ಯಜ್ಞಾಂಗಃ, ವೃದ್ಧಾತ್ಮಾ, ವಿಶ್ವಮೂರ್ತಿಃ, ಜ್ಞಾನಗಮ್ಯಃ, ಇಂದ್ರಕರ್ಮಾ, ಅನಾದಿಃ, ಪ್ರಾಣನಿಲಯಃ, ಆಧಾರನಿಲಯಃ, ಪ್ರಾಣಭೃತ್, ಪ್ರಾಣಜೀವನಃ, ಯಜ್ಞಪತಿ, ಆತ್ಮಯೋನಿಃ, ಗದಾಧರಃ, ವಿಶುದ್ಧಾತ್ಮಾ, ಬ್ರಹ್ಮವಿವರ್ಧನಃ, ವಿಜಿತಾತ್ಮಾ, ವಿಧೇಯಾತ್ಮಾ, ಅಪಾಂನಿಧಿಃ, ಸದ್ಭೂತಿಃ, ಸತ್ವರಾಯಣಃ, ಸನ್ನಿವಾಸಃ, ಭೀಮಪರಾಕ್ರಮಃ, ಶಿಷ್ಟೇಷ್ಟ, ವಾಸುದೇವಃ, ಕಪೀಂದ್ರ -ಇತ್ಯಾದಿಯಾಗಿ ಸುಮಾರು ಐವತ್ತಕ್ಕಿಂತಲೂ ಅಧಿಕ ಸಂಖ್ಯೆಯಲ್ಲಿ ಇರುವ ವಾಯದೇವನ ಸಂಪರ್ಕದೊಂದಿಗೆ ವಿಷ್ಣುವನ್ನು ಸ್ತುತಿಸುವ ನಾಮಗಳಿಂದಲೂ ಆಯಾ ನಾಮದ ಘಟಕವಾಗಿ ವಾಯುದೇವನ ಪ್ರಸ್ತಾವದೊಂದಿಗೆ ಗೌಣವಾಗಿ ವಾಯುದೇವನ ಪ್ರತಿಪಾದನೆ ನಡೆದೇ ತೀರುವುದು.

ಉದಾಹರಣೆಗೆ: ಆತ್ಮ ಎನಿಸುವ ವಾಯುದೇವನೇ ಯೋನಿ -ಜ್ಞಾನಕ್ಕೆ ಕಾರಣನಾಗಿ ಉಳ್ಳವನು 'ಆತ್ಮಯೋನಿ' ಎನಿಸುವ ಭಗವಂತನೆಂದು ಭಗವಂತನನ್ನು ಆತ್ಮಯೋನಿ ನಾಮದಿಂದ ಸ್ತುತಿಸುವಾಗ ಅಂತಹ ಭಗವಂತನ ಯಥಾರ್ಥ ತಿಳುವಳಿಕೆಯನ್ನುಂಟು ಮಾಡುವ ವಾಯುದೇವನ ಮಹಿಮೆಯ ಪ್ರತಿಪಾದನೆಯೂ ನಡೆದಂತಾಗುವುದು.

'ಪ್ರಾಣನಿಲಯಃ' -ಎಂಬ ನಾಮದಿಂದ ಮುಖ್ಯಪ್ರಾಣನಿಗೆ ಆಧಾರನಾಗಿರುವವನೆಂಬ ಭಗವಂತನ ಮಹಿಮೆಯನ್ನು ಅನುಸಂಧಾನ ಮಾಡುವಾಗ ವಿಶೇಷವಾಗಿ ಆಧಾರನಾಗಿ ಅನುಗ್ರಹಿಸುತ್ತಿರುವ ಭಗವಂತನ ಅನುಗ್ರಹಕ್ಕೆ ಪಾತ್ರನಾದ ಮುಖ್ಯಪ್ರಾಣನ ಮಹಿಮೆಯೂ, ಮುಖ್ಯಪ್ರಾಣನೇ ಮುಖ್ಯವಾಗಿ ನಿಲಯನಾಗಿ ಇರುವವನೆಂಬ ಭಗವಂತನ ಮಹಿಮೆಯನ್ನು ಅನುಸಂಧಾನ ನಡೆಸುವಾಗ ಭಗವಂತನ ವಿಶೇಷ ಸನ್ನಿಧಾನಕ್ಕೆ ಪಾತ್ರನಾಗಿ ಅವನ 'ನಿಲಯ' ಎನಿಸುವ ಮುಖ್ಯಪ್ರಾಣನ ಮಹಿಮೆಯೂ ಸೂಚಿತವಾಗುವುದು.

ಹೀಗೆ ಈ ಎಲ್ಲ ನಾಮಗಳಿಂದ ಭಗವಂತನ ಪರಿವಾರದವನಾಗಿ, ಅವನ ಅನುಗ್ರಹಕ್ಕೆ ಪಾತ್ರದವನಾಗಿ ವಾಯುದೇವನ ಸ್ತುತಿ ನಡೆದಂತಾಗುವುದು.

## ಶಂಭು, ಆದಿತ್ಯಾದಿ ನಾಮಗಳ ಸಮನ್ವಯ:

ಮುಖ್ಯವಾಗಿ ಭಗವಂತನನ್ನು ಪ್ರತಿಪಾದಿಸಿ, ಬಳಿಕ ಚತುರ್ಮುಖಾದಿ ಇತರ ದೇವತೆಗಳಲ್ಲೂ ತೆರೆದುಕೊಳ್ಳಬಲ್ಲ 'ಸ್ವಯಂಭೂ', 'ರುದ್ರ', 'ಸ್ಕಂದ', 'ಆದಿತ್ಯ', 'ವಹ್ನಿ' -ಮುಂತಾದ ನಾಮಗಳು ಇತರ ದೇವತೆಗಳನ್ನು ಪ್ರತಿಪಾದಿಸುವುದಕ್ಕಿಂತಲೂ ಅಧಿಕವಾಗಿ

ವಾಯುದೇವನನ್ನು ಪ್ರತಿಪಾದಿಸುವವೆಂಬುದು ತ್ರಿವೃತ್ಕರಣ ಪ್ರಕ್ರಿಯೆಯನ್ನು ಪರಿಶೀಲಿಸಿದರೆ ಸ್ಪಷ್ಟವಾಗಬಲ್ಲದು.

ಛಾಂದೋಗ್ಯೋಪನಿಷತ್ತು ಪ್ರಸ್ತುತಪಡಿಸುವ 'ತ್ರಿವೃತ್ಕರಣ'ದ ಪ್ರಕ್ರಿಯೆಗನುಗುಣವಾಗಿ ಲಕ್ಷ್ಮೀದೇವಿ, ವಾಯುದೇವ ಹಾಗೂ ರುದ್ರ –ಈ ಮೂವರನ್ನು ಅನಿರುದ್ಧರೂಪದಿಂದ ಪ್ರವೇಶಿಸುವ ಭಗವಂತನು ಆ ಮೂವರೂ ಅನ್ಯೋನ್ಯವಾಗಿ ಪ್ರವೇಶಿಸಿ ತ್ರಿವೃತರಾಗುವಂತೆ ಮಾಡಿ ಅವರ ಮೂಲಕ ಇಂದ್ರಾದಿ ದೇವತೆಗಳ ನಾಮಗಳನ್ನೂ, ರೂಪಗಳನ್ನೂ ಮಾಡುವನು. ಆದುದರಿಂದ ಇಂದ್ರಾದಿಗಳ ನಾಮಗಳೂ, ರೂಪಗಳೂ ಲಕ್ಷ್ಮ್ಯಾದಿಗಳಿಗೆ ಮುಖ್ಯವಾಗಿ ಸೇರಿರುವವು. ಯಾಕೆಂದರೆ ಅವು ಅವರ ಅಧೀನವಾದವು; ಅವರಿಗೆ ಆಯಾ ನಾಮರೂಪಗಳನ್ನು ಹೊಂದಲು ಇಂದ್ರಾದಿಗಳಿಗಿಂತ ಅಧಿಕ ಸಾಮರ್ಥ್ಯ ಇದೆ. ಇದೇ ನ್ಯಾಯದಿಂದ ರುದ್ರನ ನಾಮಗಳೂ ಮುಖ್ಯವಾಗಿ ವಾಯುದೇವನಿಗೆ ಸೇರುವವು. ವಾಯುದೇವನ ನಾಮಗಳೂ ಲಕ್ಷ್ಮೀದೇವಿಗೆ, ಲಕ್ಷ್ಮೀದೇವಿಯ ನಾಮಗಳೂ ಶ್ರೀಹರಿಗೆ ಸೇರಿದವು. ಆದುದರಿಂದ ಸರ್ವೇಶನಾದ ಅವನೇ ಎಲ್ಲರ ರೂಪಗಳನ್ನೂ, ನಾಮಗಳನ್ನೂ ಹೊಂದಿರುವವನು. ಉಳಿದವರಿಗೆ ರೂಪ ಮತ್ತು ನಾಮ ಅವನಿಂದ ಪ್ರತಿಬಿಂಬಿತವಾದವುಗಳಷ್ಟೇ –ಎಂದು 'ಸಾಮಸಂಹಿತೆ'ಯ ವಿವರಣೆ[10]ಯಿಂದ ಭಗವಂತ ಮತ್ತು ಲಕ್ಷ್ಮೀದೇವಿಯ ಅನಂತರ ಇಂದ್ರಾದಿ ದೇವತೆಗಳ ರೂಪವೂ, ನಾಮವೂ ವಾಯುದೇವನಿಗೆ ಸೇರಿದವೆಂದು ಸ್ಪಷ್ಟವಾಗುವುದು. ಆದುದರಿಂದಲೇ 'ಬ್ರಹ್ಮಾಂಡ'ವು ಲಕ್ಷ್ಮಿ ಮತ್ತು ವಾಯುದೇವರು ಕೂಡಾ ವಿಷ್ಣುವಿನಂತೆ ಅಲ್ಲದಿದ್ದರೂ ಅಮಿತನಾಮವುಳ್ಳವರೆಂದು ಸಾರಿದೆ.[11]

---

10. ....ಪ್ರವಿಶ್ಯಾಥ ತೇಭ್ಯ ಇಂದ್ರಾದಿನಾಮಪಿ ।
ನಾಮರೂಪಾಣಿ ಕೃತವಾಂಸ್ತಾಂಶ್ಚಾನ್ಯೋಽನಪ್ರವೇಶಿನಃ ।
ಕೃತ್ವಾಗ್ನಿಸೋಮಸೂರ್ಯಾದಿಷ್ವೇತಾಂಸ್ತ್ರೀನ್ ನಿದಧೇ ಪುನಃ....
ಇಂದ್ರಾದಿನಾಮರೂಪಾಣಿ ಯಥೈವ ತ್ರಿಷು ಮುಖ್ಯತಃ ।
ತದಧೀನತ್ವತಸ್ತೇಷಾಮೇಷಾಮುಚ್ಚಬಲತ್ವತಃ ।
ಶಿವನಾಮಾನಿ ರೂಪಾಣಿ ತಥಾ ವಾಯೋಸ್ತು ಮುಖ್ಯತಃ ।
ತದೀಯಾನಿ ತಥಾ ಲಕ್ಷ್ಮ್ಯಾಸ್ತದೀಯಾನಿ ಹರೇಸ್ತಥಾ ।
ತಸ್ಮಾತ್ ಸ ಏವ ಸರ್ವೇಶಃ ಸರ್ವರೂಪಃ ಸ ಏವ ಚ ।
ಸರ್ವನಾಮಾ ಸ ಏವೈಕಃ ಸರ್ವಶಕ್ತಿಸ್ತಥೈವ ಚ ।
ಅನ್ಯೇಷಾಂ ಯಚ್ಚ ರೂಪಾದ್ಯಂ ತತ್ ತಸ್ಮಾತ್ ಪ್ರತಿಬಿಂಬಿತಮ್ ।
*– ಸಾಮಸಂಹಿತೆ [ಛಾಂ.ಉ.ಭಾ. 6-2-6]*

11. ....ತಸ್ಮಾದಮಿತನಾಮಾನಾವಪಿ ತೌ ಮಿತನಾಮವತ್ ।
ಶ್ರೀಶ್ಚ ವಾಯುಶ್ಚ ವಿಷ್ಣುಸ್ತು ಮುಖ್ಯೋಕ್ತೇರಮಿತಾಭಿಧಃ ।
*– ಬ್ರಹ್ಮಾಂಡ [ಐ.ಉ.ಭಾ. 2-1-2-12]*

ಹಾಗೆಯೇ 'ಬೃಹತ್ಸಂಹಿತೆ'ಯೂ [ಐ.ಉ.ಭಾ. 2-1-2-12] ರುದ್ರಾದಿಗಳ ನಾಮಗಳು ಭಗವಂತನಲ್ಲಿ ಎಷ್ಟು ಮುಖ್ಯವೃತ್ತಿಯಿಂದಲೋ ಅಷ್ಟು ಮುಖ್ಯವೃತ್ತಿಯಿಂದ ಅಲ್ಲದೆ, ಉಳಿದ ರುದ್ರಾದಿಗಳಿಗಿಂತ ಅಧಿಕ ಮುಖ್ಯವೃತ್ತಿಯಿಂದ ವಾಯುದೇವನಲ್ಲಿ ಪ್ರವರ್ತಿಸುವವು. ವಾಯುದೇವ ಸೂರ್ಯನಲ್ಲಿದ್ದುಕೊಂಡು ಜಗತ್‌ತ್ರಯವನ್ನೂ ಬೆಳಗುವವನು; ಉಷ್ಣವನ್ನುಂಟುಮಾಡುವವನು. ಶ್ರೀಹರಿಯ ಹಾಗೂ ವಾಯುದೇವನ ಆಜ್ಞೆಗನುಗುಣವಾಗಿ ಸೂರ್ಯನು ಬೆಳಗುವನು.[12] ಉಷ್ಣವನ್ನು ನೀಡುವನು –ಎಂದು ತಿಳಿಸಿದೆ.

ಆದುದರಿಂದ ವಿಷ್ಣುಸಹಸ್ರನಾಮದ ರುದ್ರಾದಿನಾಮಗಳಿಂದ ಭಗವಂತನ ಬಳಿಕ ಪ್ರತಿಪಾದ್ಯನಾಗುವವನು ವಾಯುದೇವ. ಈ ಅನುಸಂಧಾನದಿಂದ ಪಠಿಸಿದಲ್ಲಿ ವಿಷ್ಣುವಿನ ಸ್ತುತಿಯಂತೆ ವಾಯುದೇವನ ಸ್ತುತಿಯೂ ಮಾಡಲ್ಪಟ್ಟಂತಾಗುವುದು.

## ಸುರೇಶ್ವರಾದಿ ನಾಮಗಳ ಸಮನ್ವಯ:

ಇತರ ದೇವಾದಿಗಳ ಸಂಬಂಧದ ಪ್ರಸ್ತಾವದೊಂದಿಗೆ ಭಗವಂತನನ್ನು ಸ್ತುತಿಸುವ **'ಸುರೇಶ್ವರ', 'ಅಮರಪ್ರಭು', 'ಇಂದ್ರಕರ್ಮಾ', 'ಚಂದ್ರಾಂಶು', 'ಪ್ರಧಾನಪುರುಷೇಶ್ವರ', 'ಸುರಾಧ್ಯಕ್ಷ'** –ಮುಂತಾದ ನಾಮಗಳಿಂದ ವಾಯುದೇವನ ಪ್ರಸ್ತಾವ ಎರಡು ಬಗೆಗಳಲ್ಲಿ ನಡೆಯುವುದು. 'ಪ್ರಾಣಪ್ರಾಣ' ಎನಿಸುವ ಭಗವಂತನು ದೇವಾದಿಗಳನ್ನೊಳಗೊಂಡ ಜಗತ್ತಿಗೆ ಸಂಬಂಧಿಸುವ ಯಾವುದೇ ಪ್ರವೃತ್ತಿಯನ್ನು ತಾನೇ ನೇರವಾಗಿ ನಡೆಸದೆ ವಾಯುದೇವನ ಮಾಧ್ಯಮದಲ್ಲಿ ನಡೆಸುವನು.[13] ಆದುದರಿಂದ 'ಅಮರಪ್ರಭು' ನಾಮ ಸೂಚಿಸುವ ಅಮರಪ್ರಭುತ್ವ ಇರಬಹುದು, 'ಇಂದ್ರಕರ್ಮಾ' ನಾಮ ಸೂಚಿಸುವ ಇಂದ್ರನ ಕರ್ಮಕರ್ತೃತ್ವ ಇರಬಹುದು –ಇವೆಲ್ಲ ವಾಯುದೇವ ಮಾಧ್ಯಮದ ಧರ್ಮಗಳು. ಅಂದರೆ ಭಗವಂತನು ವಾಯುದೇವನ ಮೂಲಕ ಅಮರರ ವಿಷಯದಲ್ಲಿ ತನ್ನ ಪ್ರಭುತ್ವವನ್ನು ಸಾಧಿಸುವುದು; ವಾಯುದೇವನ ಮೂಲಕ ದೇವೇಂದ್ರನ ಕರ್ಮಗಳನ್ನು ನಡೆಸುವುದು. ಆದುದರಿಂದ ಭಗವಂತನ ಬಳಿಕ ವಾಯುದೇವನೂ ಅಮರಪ್ರಭು; ಇಂದ್ರಕರ್ಮಾ. ಈ ಅನುಸಂಧಾನದೊಂದಿಗೆ ಇತರ ದೇವತೆಗಳ ಪ್ರಸ್ತಾವ ಪೂರ್ವಕ ಭಗವಂತನನ್ನು ಸಾರುವ ನಾಮಗಳನ್ನು ಓದುತ್ತಿರುವಾಗ ದೇವತಗಳ ಸಂಬಂಧದ ವಿಷಯದಲ್ಲಿ ವಾಯುದೇವನ ಪಾತ್ರವನ್ನು ಉಲ್ಲೇಖಿಸಿ ಸ್ತುತಿಸಿದಂತಾಗುವುದು.

---

12. .....ತಥೈವ ಸರ್ವನಾಮಾನಿ ಪ್ರವರ್ತಂತೇ ಚ ಮಾರುತೇ ।
ನ ತಾವನ್ಮುಖ್ಯವೃತ್ತ್ಯೈವ ಮುಖ್ಯತೋಽನ್ಯವ್ಯಪೇಕ್ಷಯಾ ।
.....ಅನ್ಯವ್ಯಪೇಕ್ಷಯಾ ವಾಯೌ ಮುಖ್ಯವೃತ್ತಿರ್ವಿಧೀಯತೇ ।
ವಾಯುಶ್ಚ ಸೂರ್ಯಸಂಸ್ಥಃ ಸಂಸ್ತಪತ್ಯೇತಜ್ಜಗತ್ ತ್ರಯಮ್ ।
ಆಜ್ಞಯೈವ ಹರೇರ್ವಾಯೋಃ ಶಕ್ತ್ಯಾ ಸೂರ್ಯಸ್ತಪತ್ಯಯಮ್ ।
*– ಬೃಹತ್ಸಂಹಿತಾ [ಐ.ಉ.ಭಾ. 2-1-12-2]*

13. ವಾಯೋಃ ಸಕಾಶಾಜ್ಜಗತಃ ಪ್ರವೃತ್ತಿಂ ಕಾಮಯತ್ಯಜಃ ।
ಪ್ರಾಣಪ್ರಾಣಮತಃ ಪ್ರಾಹುರ್ವಿಷ್ಣುಂ ವಾಯೋರಪಿ ಪ್ರಭುಮ್ ॥
*– [ಭಾಗ.ತಾ.ನಿ. 10-15-50]*

ಇತರ ದೇವಾದಿಗಳನ್ನು ಸಮಷ್ಟಿಯಾಗಿ ತಿಳಿಸುವ 'ಸುರ' 'ಅಮರ' ಇತ್ಯಾದಿ ನಾಮಗಳೂ, ವ್ಯಷ್ಟಿಯಾಗಿ ತಿಳಿಸುವ 'ಸ್ಕಂದ' 'ಭಾಸ್ಕರ' 'ಚಂದ್ರ' –ಇತ್ಯಾದಿ ನಾಮಗಳೂ ತ್ರಿವೃತ್ಕರಣಪ್ರಕ್ರಿಯೆಗನುಗುಣವಾಗಿ ಆಯಾ ವ್ಯಕ್ತಿಗಳಿಗಿಂತಲೂ ಮುಖ್ಯವಾಗಿ ವಾಯು ದೇವನಿಗೇ ವಾಚಕಗಳಾಗಿರುವುದರಿಂದ ಆ ಎಲ್ಲ ನಾಮಗಳಲ್ಲಿ ನಾಮಘಟಕ ಶಬ್ದ ವಾಚ್ಯವಾಗಿ ವಾಯುದೇವನೇ ಪ್ರಸ್ತುತನಾಗುವನು. ಆದುದರಿಂದ ಆ ನಾಮಗಳಲ್ಲಿ ತಿಳಿಸಲಾಗುವ ಭಗವಂತನ ಪ್ರಭುತ್ವಾದಿ ಸಂಬಂಧಗಳು ಮುಖ್ಯವಾಗಿ ವಾಯುದೇವನಲ್ಲೇ ಸಮನ್ವಯಗೊಳ್ಳುವವು. ಆದುದರಿಂದ ಆಯಾ ನಾಮಗಳಿಂದ ಭಗವಂತನ ಬಳಿಕ ವಾಯುದೇವನ ಸ್ತುತಿಯೂ ನಡೆದಂತಾಗುವುದು.

## ಪವಿತ್ರಂ ಇತ್ಯಾದಿ ನಾಮಗಳ ಸಮನ್ವಯ:

ನಿರ್ದಿಷ್ಟವಾಗಿ ಯಾವುದೇ ವ್ಯಕ್ತಿಯನ್ನು ಉಲ್ಲೇಖಿಸದೆ ಧರ್ಮವನ್ನು ಮಾತ್ರ ಸಾರುತ್ತಿರುವ **'ಪವಿತ್ರಂ', 'ಮಂಗಲಂ', 'ಭಿಷಕ್', 'ಭೇಷಜಂ', 'ಸತ್ಕರ್ತಾ', 'ಅವ್ಯಯಃ'** ಮುಂತಾದ ನಾಮಗಳು 'ಅಸಾಧಾರಣ್ಯೇನ ವ್ಯಪದೇಶಾ ಭವಂತಿ' –ಭಗವಂತನಲ್ಲಿ ಅಸಾಧಾರಣವಾಗಿ ಇರುವ ಗುಣವನ್ನು, ಧರ್ಮವನ್ನು ಸಾರುವ ಮೂಲಕ ಆಯಾ ಗುಣಸಂಪನ್ನನಾಗಿ, ಧರ್ಮಸಂಪನ್ನನಾಗಿ ಭಗವಂತನನ್ನೇ ಮುಖ್ಯವಾಗಿ ಪ್ರತಿಪಾದಿಸುವವು.

ಜೊತೆಗೆ, ಆಯಾ ಗುಣವನ್ನು, ಧರ್ಮವನ್ನು ಉಳಿದ ಜೀವರಿಗಿಂತೆಲ್ಲ ಅಧಿಕ ಪ್ರಮಾಣದಲ್ಲಿ ಹೊಂದಿರುವ ವಾಯುದೇವನನ್ನೂ ಆ ನಾಮಗಳು ಧ್ವನಿಸುವವು.

ಪ್ರತಿಯೊಂದು ಗುಣದ ವಿಷಯದಲ್ಲೂ ವಾಯುದೇವ ಉಳಿದೆಲ್ಲರಿಗಿಂತಲೂ ಮುಖ್ಯ ನಾಗಿರುವುದರಿಂದ, ಅಂತಹ ವಾಯುವಿಗಿಂತಲೂ ಭಗವಂತನು ಆ ಗುಣದ ವಿಷಯದಲ್ಲಿ ಮುಖ್ಯವಾಗಿರುವನೆಂದು ತಿಳಿದಲ್ಲಿ ಭಗವಂತನಿಗೆ ತುಂಬ ಸಂತೋಷ ವಾಗುವುದೆಂದು 'ಪ್ರಧ್ಯಾನ' ಎಂಬ ಗ್ರಂಥ ತಿಳಿಸಿದೆ.14 ಶ್ರೀಕೃಷ್ಣನೂ ಈ ಅಭಿಪ್ರಾಯವನ್ನೇ '**ವಾಯೌ ಮುಖ್ಯಧಿಯಾ**' ಎಂಬ ಸಂದೇಶದಿಂದ ತಿಳಿಸಿರುವನು.

ಆದ್ದರಿಂದ ಗುಣವಾಚಕ ನಾಮಗಳಿಂದ ನೇರವಾಗಿ ಭಗವಂತನನ್ನು ಸ್ತುತಿಸುವ ಬದಲು, ಜೀವಸಮೂಹದಲ್ಲಿ ಅತ್ಯಧಿಕವಾಗಿ ಆ ಗುಣವನ್ನು ಹೊಂದಿರುವ ವಾಯುದೇವ ನನ್ನು ಸ್ಮರಿಸಿಕೊಂಡು ಅವನಿಗಿಂತಲೂ ಅಧಿಕವಾಗಿ ಆ ಗುಣವನ್ನು ಹೊಂದಿರುವ ದೇವನನ್ನು ಸ್ತುತಿಸಿದಲ್ಲಿ ಅದರಿಂದ ಭಗವಂತ ವಿಶೇಷವಾಗಿ ಸಂತುಷ್ಟನಾಗಬಲ್ಲ.

ಉದಾಹರಣೆಗೆ: 'ಮಂಗಲಂ ಪರಂ' –ನಾಮದಿಂದ ಅತ್ಯಂತ ಮಂಗಲಸ್ವರೂಪಿ ಯಾದ ಭಗವಂತನನ್ನು ಸ್ತುತಿಸುವ ಮುಂಚೆ ಜೀವಸಮುದಾಯದಲ್ಲಿ ಅತ್ಯಂತ ಮಂಗಲಾ ತ್ಮಕವಾದ ವಾಯುದೇವನನ್ನು ಸ್ಮರಿಸಿಕೊಂಡು ಅವನಿಗೂ ಆ ಬಗೆಯ ಗುಣವನ್ನು ಅನುಗ್ರಹಿಸಿರುವ, ಅವನಿಗಿಂತಲೂ ಅನಂತಪಟ್ಟು ಮಂಗಲಾತ್ಮಕನಾಗಿರುವವನು ಭಗ

14. ಯಸ್ಮಾತ್ ವಾಯೌ ಸ್ಮೃತೋ ವಿಷ್ಣುರ್ವಾಯೋರ್ಮುಖ್ಯತಯಾಖಿಲಾತ್ ।
ಸ್ವಸ್ಯ ಮುಖ್ಯತಯಾ ತಸ್ಮಾತ್ ಪರಾಂ ತುಷ್ಟಿಂ ಗಮಿಷ್ಯತಿ ।
*– ಪ್ರಧ್ಯಾನೇ [ಛಾಂ.ಉ.ಭಾ. 1-2-1]*

ವಂತನು ಎಂಬ ಅರ್ಥಾನುಸಂಧಾನ ನಡೆಸಿದಲ್ಲಿ ವಾಯುದೇವನ ಸ್ತುತಿಯೂ ನಡೆದಂತಾಗುವುದಲ್ಲದೆ, ವಾಯುದೇವನ ವ್ಯಕ್ತಿತ್ವದ ಆಧಾರದಲ್ಲಿ ನಡೆದ ಆ ಭಗವಂತನ ಗುಣಗಾನ ಅವನ ಅತ್ಯಂತ ತುಷ್ಟಿಗೆ ಪ್ರಯೋಜಕವೂ ಆಗಬಲ್ಲದು.

## ಇಬ್ಬರ ಪಾಲಿಗೂ 'ಅನ್ನದ ಸಾರ':

ಹೀಗೆ ವಿಷ್ಣುಸಹಸ್ರನಾಮದ ಆರು ವಿಧಧ ನಾಮಗಳನ್ನೂ ವಾಯುದೇವನ ಸ್ಮರಣೆಗೆ, ಸ್ತುತಿಗೆ ಪೋಷಕವಾಗುವಂತೆ ಭಗವಂತನಲ್ಲಿ ಸಮನ್ವಯಿಸಬಹುದಾಗಿದೆ. ಇದರಿಂದ ಮುಖ್ಯವಾಗಿ ಭಗವಂತನ ಸ್ತುತಿಯೂ ನಡೆಸಲಾಗುವ ಪ್ರಯುಕ್ತ ವಿಷ್ಣುಸಹಸ್ರನಾಮಪಠನ ಅವನ ತುಷ್ಟಿಗೆ ಪ್ರಯೋಜಕವಾಗಿ ಅವನ 'ಅನ್ನದಸಾರ' ಎನಿಸಬಹುದಾದಂತೆಯೇ ಗೌಣವಾಗಿ ವಾಯುದೇವನ ಸ್ತುತಿಯಾಗಿ ನಡೆಸಲ್ಪಟ್ಟಪ್ರಯುಕ್ತ ಅವನ ತುಷ್ಟಿಗೂ ಪ್ರಯೋಜಕವಾಗಿ ಅವನ 'ಅನ್ನದಸಾರ' ಎಂದೂ ಎನಿಸಬಲ್ಲದು.

★

# ಪ್ರಾಣಚಿಂತನ – ಅಪಾನಪಾದ



ಹಂಪೆಯ ಯಂತ್ರೋದ್ಧಾರಕ ಮುಖ್ಯಪ್ರಾಣ
ಶ್ರೀ ವ್ಯಾಸರಾಜತೀರ್ಥ ಪ್ರತಿಷ್ಠಿತ ಹಂಪೆಯ
ಯಂತ್ರೋದ್ಧಾರಕ ಮುಖ್ಯಾಪ್ರಾಣ

# ಪ್ರಾಣಚಿಂತನ - ಅಪಾನಪಾದ

'ಅನುಸಂಧಾನತರಂಗ'

ಅನುಸಂಧಾನತರಂಗ

## • ಶ್ರೀಮುಖ್ಯಪ್ರಾಣನಿಂದ ಸೂಚಿತ ಸಂದೇಶಗಳು •

ಉದ್ಯದ್ರವಿಪ್ರಕರಸನ್ನಿಭಮಚ್ಯುತಾಂಕೇ
ಸ್ವಾಸೀನಮಸ್ಯ ನುತಿನಿತ್ಯವಚಃಪ್ರವೃತ್ತಿಮ್ ।
ಧ್ಯಾಯೇದ್ ಗದಾಭಯಕರಂ ಸುಕೃತಾಂಜಲಿಂ ತಂ
ಪ್ರಾಣಂ ಯಥೇಷ್ಟತನುಮುನ್ನತಕರ್ಮಶಕ್ತಿಮ್ ॥ (ತಂ.ಸಾ.ಸಂ. 4-69)

ಮಧ್ವರು ತಮ್ಮ ಮೂಲರೂಪವನ್ನು ಬಣ್ಣಿಸಿರುವ ಬಗೆ ಇದು.

*"ಉದಿಸುತ್ತಿರುವ ಸೂರ್ಯರ ಸಮೂಹದಂತೆ ಬೆಳಗುವ, ಶ್ರೀಹರಿಯ ತೊಡೆಯ ಮೇಲೆ ಕುಳಿತುಕೊಂಡು ಯಾವಾಗಲೂ ಅವನ ಸ್ತುತಿಯನ್ನು ನಡೆಸುತ್ತಿರುವ, ಎರಡು ಕೈಗಳಿಂದ ಗದೆಯನ್ನೂ, ಅಭಯ ಮುದ್ರೆಯನ್ನೂ ಧರಿಸಿ, ಇನ್ನೆರಡು ಕೈಗಳನ್ನು ಜೋಡಿಸಿಕೊಂಡು ಭಗವಂತನನ್ನು ನಮಿಸುತ್ತಿರುವ, ಅದ್ಭುತಕಾರ್ಯಸಮರ್ಥನಾದ, ಹಾಗೂ ತಾನು ಬಯಸಿದಂತಹ ರೂಪವನ್ನು ಧರಿಸಬಲ್ಲ ಬಹುರೂಪನಾದ ಪ್ರಾಣದೇವನನ್ನು ಧ್ಯಾನಿಸಬೇಕು."*



'ಉದ್ಯದ್ರವಿಪ್ರಕರಸನ್ನಿಭಂ...' ಇತ್ಯಾದಿಯಾಗಿ ತಂತ್ರಸಾರ ಸಂಗ್ರಹದಲ್ಲಿ ಪ್ರಸ್ತುತವಾದ ಮುಖ್ಯಪ್ರಾಣನ ಧ್ಯಾನ ಶ್ಲೋಕಕ್ಕನುಗುಣವಾಗಿ ಪಲಿಮಾರಿನ ಮುಖ್ಯಪ್ರಾಣ ಪ್ರತೀಕದ ಮಾಧ್ಯಮದಲ್ಲಿ ನಡೆಸಲಾಗುವ ಚಿಂತನೆ.

ಜ್ಞಾನಿಶ್ರೇಷ್ಠರಾದ ಶ್ರೀಪ್ರಾಣದೇವರು ಭಗವಂತನ ಅತ್ಯಂತ ಪ್ರೀತಿಗೆ ಪಾತ್ರರಾದವರು. ಆದುದರಿಂದಲೇ ಹೇಗೆ ತಂದೆ ತನ್ನ ಪ್ರೀತಿಯ ಪುತ್ರನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುವನೋ ಹಾಗೆ ವಾಯುದೇವರನ್ನು ಭಗವಂತನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡಿದ್ದಾನೆ.

ಪ್ರಾಣದೇವರು ತಮ್ಮ ಚತುರ್ಹಸ್ತಗಳಿಂದ ತಾವು ಪಾಲಿಸುತ್ತಿರುವ ಆದರ್ಶವನ್ನು ಸಾತ್ತ್ವಿಕರಿಗೆ ಸಾಂಕೇತಿಕವಾಗಿ ಸಂದೇಶಿಸುತ್ತಿರುವರು.

ಎರಡು ಹಸ್ತಗಳಿಂದ ಯಾವಾಗಲೂ ಭಕ್ತಿಪೂರ್ವಕವಾಗಿ ಭಗವಂತನನ್ನು ನಮಿಸುತ್ತಿರುವ ಮುಖ್ಯಪ್ರಾಣದೇವರು –ನಾವು ಯಾವಾಗ ಏನನ್ನು ಮಾಡುತ್ತಿದ್ದರೂ ಭಗವಂತನಿಗೆ ವಿನೀತರಾಗಿಯೇ ಇರಬೇಕು. '**ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮ ಚಾಖಿಲಮ್ ।**' ಎಂಬ ಭಾವನೆ ಯಾವಾಗಲೂ ಜಾಗೃತವಾಗಿರಬೇಕು.

**ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಮ್ ।**
**ಹರಿಪಾದವಿನಮ್ರಧಿಯಾ ಸತತಮ್ ॥**

ಎಂಬ ದ್ವಾದಶಸ್ತೋತ್ರದಲ್ಲಿ ನೀಡಿದ ಸಂದೇಶ ಇದೇ. ಪ್ರಾಣದೇವರ ಸರ್ವದಾ ನಮಿಸುತ್ತಿರುವ ಎರಡು ಹಸ್ತಗಳು ಈ ಸಂದೇಶವನ್ನೇ ಸಾರುತ್ತಿವೆ.

ಪ್ರಾಣದೇವರ ಮತ್ತೊಂದು ಹಸ್ತ ಅಭಯಮುದ್ರೆಯನ್ನು ತೋರಿಸುತ್ತ, ಸಾತ್ವಿಕರಿಗೆ ಅಭಯಪ್ರದಾನ ನಡೆಸಬೇಕೆಂದು ಸಂದೇಶಿಸುತ್ತಿದೆ. ಹೀಗೆ 'ನಾನಾಜನಸ್ಯ ಶುಶ್ರೂಷಾ ಕರ್ತವ್ಯಾ ಕರವನ್ಮಿತೇ ।' ಎಂಬುದಾಗಿ ನೀಡಲಾದ ಸಾತ್ತ್ವಿಕ ನಾನಾಜನಶುಶ್ರೂಷೆಯ ಸಂದೇಶ ಈ ಹಸ್ತದಿಂದ ಸೂಚಿತವಾಗಿದೆ.

ಪ್ರಾಣದೇವರು ಮತ್ತೊಂದು ಹಸ್ತದಿಂದ ಗದೆಯನ್ನು ಧರಿಸಿಕೊಂಡಿದ್ದು, ಭಗವದ್ ದ್ವೇಷಿಗಳನ್ನು, ಧರ್ಮದ್ವೇಷಿಗಳನ್ನು ಯಾವಾಗಲೂ ಪ್ರತಿಭಟಿಸಬೇಕು, ಸದೆಬಡಿಯಬೇಕು ಎಂದು ಸಂದೇಶಿಸುತ್ತಿರುವರು.

ಸಾತ್ತ್ವಿಕರಿಗೆ ಶುಶ್ರೂಷೆಯನ್ನು ಸಲ್ಲಿಸುವಾಗಾಗಲೀ ಭಗವದ್‌ದ್ವೇಷಿಗಳನ್ನು, ಧರ್ಮದ್ವೇಷಿಗಳನ್ನು ಸದೆಬಡಿಯುವಾಗಾಗಲೀ ಯಾವುದೇ ರೀತಿಯ ಸ್ವಾರ್ಥದ ವೈಯಕ್ತಿಕ ದ್ವೇಷದ ಸೋಂಕು ಇರಬಾರದು. ಕೇವಲ ಭಗವಂತನ ಪ್ರೀತಿಯ ಉದ್ದೇಶದಿಂದ ಅವನ ಆರಾಧನಾರೂಪವಾಗಿಯೇ ಅವನ್ನು ನಡೆಸಬೇಕು. ಇದನ್ನು ಮುಖ್ಯಪ್ರಾಣದೇವರು ತಮ್ಮ ಎರಡು ಕೈಗಳಿಂದ ಅಭಯಪ್ರದಾನ, ಗದಾಧಾರಣೆಯನ್ನು ನಡೆಸುತ್ತಿರುವಾಗಲೇ ಮತ್ತೆರಡು ಕೈಗಳಿಂದ ಭಗವಂತನಿಗೆ ನಮಿಸುತ್ತಿರುವ ಮೂಲಕ ಸೂಚಿಸಿರುವರು.

ಈ ಆದರ್ಶವನ್ನು ಶ್ರೀಮುಖ್ಯಪ್ರಾಣದೇವರು ತಮ್ಮ ಮೂರೂ ಅವತಾರಗಳಲ್ಲಿ ಅಳವಡಿಸಿಕೊಂಡಿದ್ದಾರೆ.

ದುರ್ಯೋಧನ ಭೀಮಸೇನನಿಗೆ ಸಾಕಷ್ಟು ತೊಂದರೆ ಕೊಟ್ಟಿದ್ದಾನೆ. ಆದರೆ ಭೀಮಸೇನ ಕೊನೆಗೆ ಅವನನ್ನು ನೆತ್ತಿಯ ಮೇಲೆ ತುಳಿದು ಹಿಂಸಿಸುತ್ತಿದ್ದಾಗ, ಶ್ರೀಕೃಷ್ಣನನ್ನು ಕಟ್ಟಿ ಹಾಕಲು ಮಂತ್ರಾಲೋಚನೆ ನಡೆಸಿದವನೆಂಬುದನ್ನು ಮುಖ್ಯವಾಗಿ ಪರಿಗಣಿಸಿದ್ದಾನೆಯೇ ಹೊರತು ತನಗೆ ವೈಯಕ್ತಿಕವಾಗಿ ಇಷ್ಟು ಅಪಕಾರವನ್ನು ಎಸಗಿದವನು ಎಂಬುದನ್ನು ಅಲ್ಲ– "**ಕೃಷ್ಣಬಂಧೇ ಕೃತೋ ಮಂತ್ರ ಇತಿ ಮೂರ್ಧ್ನಿ ಪದಾऽಹನತ್**" (ಮ.ಭಾರ.ತಾ.ನಿ. 28-76 ) ಎಂಬುದಾಗಿ ಶ್ರೀಮದಾಚಾರ್ಯರು ಸ್ಪಷ್ಟೀಕರಿಸಿದ್ದಾರೆ.

ಹೀಗೆ ಶ್ರೀಮುಖ್ಯಪ್ರಾಣದೇವರು ತಮ್ಮ ನಾಲ್ಕು ಕೈಗಳ ಮೂಲಕ ಸಾಂಕೇತಿಕವಾಗಿ ನೀಡುತ್ತಿರುವ ಭಕ್ತಿ ಮತ್ತು ಕರ್ತವ್ಯಗಳ ಸಂದೇಶಗಳನ್ನು ಗುರುತಿಸಿಕೊಂಡು ಜೀವನದಲ್ಲಿ ಅಳವಡಿಸಿಕೊಳ್ಳಲು ಯತ್ನಿಸಬೇಕು.

ಈ ಚಿಂತನೆ ಶ್ರೀಶ್ರೀ ವಿದ್ಯಾಮಾನ್ಯತೀರ್ಥರಿಂದ ಮಿಂಚಿದ್ದು.

*

# • ಬದುಕಿನಲ್ಲಿ ಮುಖ್ಯಪ್ರಾಣನ ಪಾತ್ರ ಮತ್ತು ಅದರ ಅನುಸಂಧಾನ •

ನಮ್ಮ ಬದುಕಿನಲ್ಲಿ ಹುಟ್ಟಿದ ಕ್ಷಣದಿಂದಾರಂಭಿಸಿ ಸಾಯುವ ಕೊನೆಯ ಕ್ಷಣದ ವರೆಗೂ, ಮಧ್ಯೇ ಒಂದು ಕ್ಷಣವನ್ನೂ ಬಿಡದೆ ವ್ಯಾಪಕವಾಗಿ ನಡೆಯುವ ಚಟುವಟಿಕೆ ಉಸಿರು. ಹೀಗೆ ಉಸಿರಿನದ್ದು ಹೇಗೋ ಹಾಗೆ ಬದುಕಿನಲ್ಲಿ ಹಾಸುಹೊಕ್ಕಾದ ಪಾತ್ರ ಉಸಿರಿನ ದೇವತೆಯಾದ ಮುಖ್ಯಪ್ರಾಣನದ್ದು. ಬದುಕಿನ ಯಾವುದೇ ಚಟುವಟಿಕೆ ಮುಖ್ಯಪ್ರಾಣನ ಪ್ರೇರಣೆ, ಅನುಗ್ರಹ ಇಲ್ಲದೆ ಆಗುವುದೇ ಇಲ್ಲ ಎನ್ನುವಷ್ಟು ನಮ್ಮ ಬದುಕಿನಲ್ಲಿ ಮುಖ್ಯಪ್ರಾಣ ತುಂಬಿಕೊಂಡಿರುವನು. ಶಾಸ್ತ್ರದ ಉಪನಿಷತ್ತೇ ಮುಂತಾದ ಗ್ರಂಥಗಳಲ್ಲಿ ಅಲ್ಲಲ್ಲಿ ಮುಖ್ಯಪ್ರಾಣನ ಪ್ರಸ್ತಾವ ಬಂದಿದೆ.

ನಮ್ಮ ಬದುಕಿನ ಚಟುವಟಿಕೆಗಳನ್ನು ಸ್ಥೂಲವಾಗಿ ಎರಡು ವಿಭಾಗವಾಗಿ ವಿಂಗಡಿಸ ಬಹುದಾಗಿದೆ–

೧. ದೈನಂದಿನ, ಸಾಮಾಜಿಕ ಚಟುವಟಿಕೆಗಳು.

೨. ಆಧ್ಯಾತ್ಮಿಕ, ಧಾರ್ಮಿಕ ಚಟುವಟಿಕೆಗಳು.

ಈ ಎರಡು ಬಗೆಯ ಚಟುವಟಿಕೆಗಳಲ್ಲಿ ಮುಖ್ಯಪ್ರಾಣನ ಪಾತ್ರ ಯಾವ ಬಗೆಯದ್ದು? ದೈನಂದಿನ ಚಟುವಟಿಕೆಗಳ ನಿರ್ವಹಣೆಗಾಗಿ ಪ್ರಾಕೃತಿಕ ಘಟನೆಗಳಲ್ಲಿ ಅವನು ಹೇಗೆ ಪಾತ್ರ ವಹಿಸುತ್ತಿದ್ದಾನೆ? ಎಂಬುದನ್ನು ಪರಿಶೀಲಿಸಿ, ಆ ಪರಿಶೀಲನೆಯ ಆಧಾರದಲ್ಲಿ ಅವನ ಬಗ್ಗೆ ನಾವು ಮಾಡಬೇಕಾದ ಅನುಸಂಧಾನ, ಚಿಂತನೆ, ಸ್ತುತಿಗಳನ್ನೂ ವಿವೇಚಿಸಿಕೊಳ್ಳೋಣ.

## ದೈನಂದಿನ, ಸಾಮಾಜಿಕ ಚಟುವಟಿಕೆಗಳಲ್ಲಿ

**ಭಗವಂತನ ಪ್ರವೇಶಕ್ಕೆ ದ್ವಾರ:** ಚರ್ಮ, ಮಾಂಸ, ಎಲುಬು, ರಕ್ತ –ಇತ್ಯಾದಿ ಅಪವಿತ್ರ ಗಳಾದ ಸಪ್ತಧಾತುಗಳ ಗೂಡು ಆಗಿರುವ ಮಾನವದೇಹಕ್ಕೆ ಭಗವಂತನ ಪ್ರವೇಶದಿಂದಾಗಿ ಅವನ 'ದೇಗುಲ' ಎನಿಸುವ ಮಹತ್ತ್ವ, ಪಾವಿತ್ರ್ಯ ಸಿದ್ಧಿಸುವುದು. ಭಗವಂತನ ಪ್ರವೇಶಕ್ಕೆ ಮುಖ್ಯಪ್ರಾಣ ದ್ವಾರದಂತೆ ಇರುವವನು. "ಯಾರು ಶರೀರವನ್ನು ಪ್ರವೇಶಿಸಲು ಅವನನ್ನು ಅನುಸರಿಸಿ ನಾನು ಪ್ರವೇಶಿಸುವೆನು; ಯಾರು ಶರೀರದಿಂದ ಹೊರಡಲು ನಾನೂ ಅಲ್ಲಿಂದ ಹೊರಡುವೆನು. ಹೀಗೆ ಯೋಚಿಸಿದ ಭಗವಂತ ಅಂತಹ ವ್ಯಕ್ತಿಯನ್ನಾಗಿ ಮುಖ್ಯಪ್ರಾಣ ನನ್ನು ಸೃಷ್ಟಿಸಿರುವನು.[1] ಜೀವರ ದೇಹವನ್ನು ಪ್ರವೇಶಿಸಲು ಭಗವಂತನಿಗೆ ಮುಖ್ಯ

---

1. ಸ ಈಕ್ಷಾಂಚಕ್ರೇ ಕಸ್ಮಿನ್ನಹಮುತ್ಕ್ರಾಂತ ಉತ್ಕ್ರಾಂತೋ ಭವಿಷ್ಯಾಮಿ ಕಸ್ಮಿನ್ ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ । ಸ ಪ್ರಾಣಮಸೃಜತ....... ।

– *ಪ.ಉ. 6-5.*

ಪ್ರಾಣನು ಪ್ರವೇಶದ್ವಾರದಂತೆ ಇರುವುದರಿಂದಲೇ ಭಗವಂತ 'ಪರಿಸರಪದ್ಧತಿ' ಎಂದು ಕರೆಸಿಕೊಳ್ಳುವನು.2

ಋಷ್ಯಮೂಕಪರ್ವತದಲ್ಲಿ ಆಂಜನೇಯ ರಾಮ ಮತ್ತು ಲಕ್ಷ್ಮಣರನ್ನು ತನ್ನ ಹೆಗಲ ಮೇಲೆ ಹೊತ್ತು ಸುಗ್ರೀವನಲ್ಲಿಗೆ ಕರೆದೊಯ್ದ ಚಿತ್ರಣದ ಹಿನ್ನೆಲೆಯಲ್ಲಿ,3 ಭಗವಂತನ 'ವಾಯುವಾಹನ' 'ಪರಿಸರಪದ್ಧತಿ' 'ಪ್ರಾಣಪದ್ಧತಿ' –ಮುಂತಾದ ನಾಮಗಳ ಮೂಲಕ ನಮ್ಮ ಶರೀರಕ್ಕೆ ದೇಗುಲದ ಮೆರುಗು, ಪಾವಿತ್ರ್ಯ ಸಿದ್ಧಿಸುವಂತೆ ಮಾಡುವಲ್ಲಿ ವಾಯು ದೇವನ ಪಾತ್ರವನ್ನು ಅನುಸಂಧಾನಕ್ಕೆ ತಂದುಕೊಳ್ಳುತ್ತಿರಬೇಕು.

**ಉಸಿರಾಟದ ನಿರ್ವಹಣೆ:** ಜೀವಂತಿಕೆಯ ಪ್ರಮುಖ ಲಕ್ಷಣ ಎಂದು ಪರಿಗಣಿತ ವಾಗಿರುವ ಉಸಿರಾಟದ ನಿರ್ವಹಣೆ ಮುಖ್ಯಪ್ರಾಣನಿಂದ ನಡೆಯುವುದು. ಪ್ರಾಣ, ಅಪಾನ –ಇತ್ಯಾದಿಯಾಗಿ ಐದು ರೂಪಗಳನ್ನು ಹೊಂದಿರುವ ಮುಖ್ಯಪ್ರಾಣನು ತನ್ನ ಪ್ರಾಣ ಎಂಬ ರೂಪದಿಂದ ನಮ್ಮೆಲ್ಲರ ಉಸಿರಾಟವನ್ನು ನಿಯಂತ್ರಿಸುತ್ತಿರುವನು. ನಮ್ಮ ಶರೀರದ ಕಣ್ಣು, ಕಿವಿ, ಬಾಯಿ ಹಾಗೂ ಮೂಗು –ಈ ಸ್ಥಳಗಳಲ್ಲಿ ಇರುವ ಪ್ರಾಣ ಎಂಬ ಗಾಳಿಯಲ್ಲಿ ಇದ್ದುಕೊಂಡು, ಆ ಗಾಳಿಯ ಮೂಲಕವೇ ನಮ್ಮ ಉಸಿರಾಟವನ್ನು ನಡೆಸು ವನು.4 ಶ್ವಾಸೋಚ್ಛ್ವಾಸಗಳನ್ನು ಪ್ರೇರಿಸುತ್ತಿರುವವನೆಂಬ ಅರ್ಥದಲ್ಲಿಯೇ ಅವನನ್ನು 'ಪ್ರಾಣ' –ಎಂಬ ಹೆಸರಿನಿಂದ ಧ್ಯಾನಿಸುತ್ತಿರಬೇಕು.

ಮುಖ್ಯಪ್ರಾಣನು ತನ್ನ ಪ್ರಾಣಾದಿರೂಪಗಳಿಂದ ಜೀವರ ಶರೀರದ ಧಾರಣರೂಪ ವಾದ ಯಜ್ಞವನ್ನು ನಡೆಸುತ್ತಿದ್ದಾನೆಂದು ಷಟ್‌ಪ್ರಶ್ನೋಪನಿಷತ್ತು ನೀಡುವ ಅನುಸಂಧಾನಕ್ಕೆ ಸಂಬಂಧಿಸಿದಂತೆ, ಮುಖ್ಯಪ್ರಾಣನು ತನ್ನ ಸಮಾನರೂಪದಿಂದ ಯಜ್ಞದ ಅಧ್ವರ್ಯು

---

2. ಪರಿಸರಃ ಪ್ರಾಣಃ ಪದ್ಧತಿರ್ಮಾರ್ಗೋ ಯಸ್ಯ ಸ ಪರಿಸರಪದ್ಧತಿಃ ।
*– ಭಾಗ.ತಾ.ನಿ. 10-94-18.*

3. ..........................ಅಂಸಂ
ಪ್ರೀತ್ಯಾಽರುರೋಹ ಸ ಹಸನ್ ಸಹ ಲಕ್ಷ್ಮಣೇನ ।
ಆರೋಪ್ಯ ಚಾಂಸಯುಗಲಂ ಭಗವಂತಮೇನಂ
ತಸ್ಯಾನುಜಂ ಚ ಹನೂಮಾನ್ ಪ್ರಯಯೌ ಕಪೀಂದ್ರಮ್ ॥
*– ಮ.ಭಾರ.ತಾ.ನಿ. 6-1, 2.*

* ಹಸನ್ ಇತ್ಯನೇನ ತ್ವಂ ಮೂಲರೂಪೇಽಪಿ ಮಾಂ ಚ ಜೀವಂ ಚ ಸ್ಕಂಧೇ ಆರೋಪ್ಯ ಶರೀರಾಚ್ಛರೀರಾಂತರಂ ಗಚ್ಛಸಿ । ನೇದಮಪೂರ್ವಮಿತಿ ಸೂಚಯತಿ ।
*– ಭಾವಪ್ರಕಾಶಿಕಾ.*

4. ..........ಚಕ್ಷುಃಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರತಿಷ್ಠತೇ ।
*– ಷಟ್‌ಪ್ರಶ್ನೋಪನಿಷತ್ 3-1-7.*

* ಪ್ರಾಣಃ ಸ್ವಯಂ ಮುಖ್ಯ ಏವ ಶ್ವಾಸಾದಿಪ್ರಣಯನಾತ್ ಪ್ರಾಣನಾಮ್ನಾ ರೂಪೇಣ ಪ್ರಾಣವಾಯುಮಧಿಷ್ಠಾಯ ಪ್ರತಿತಿಷ್ಠತಿ । *– ಟೀಕಾ.*

ಎನಿಸಿ, ಅವನ ಚಟುವಟಿಕೆಯಾಗಿ ಶ್ವಾಸ ಹಾಗೂ ಉಚ್ಛ್ವಾಸ ಎಂಬ ಎರಡು ಆಹುತಿಗಳನ್ನು ಆಯಾ ಕಾಲದಲ್ಲಿ ನೀಡುತ್ತಿರುವನು. ಶ್ವಾಸ ಯಾವ ಕಾಲದಲ್ಲಿ ನಡೆಬೇಕು? ಉಚ್ಛ್ವಾಸ ಯಾವ ಕಾಲದಲ್ಲಿ ನಡೆಯಬೇಕು? –ಎಂಬುದನ್ನು ವಿಶ್ಲೇಷಿಸಿಕೊಂಡು ಸರಿಯಾದ ಕಾಲದಲ್ಲೇ ಅವನು ನಡೆಸುವುದರಿಂದಲೇ ಅವನು 'ಸಮಾನ' ಎನಿಸುವನೆಂದು ತಿಳಿಸಲಾಗಿದೆ.5

ಆದ್ದರಿಂದ ಉಚ್ಛ್ವಾಸ–ನಿಃಶ್ವಾಸಗಳನ್ನು ಸರಿಯಾದ ಕಾಲದಲ್ಲಿಯೇ ನಡೆಸುವ ಮುಖ್ಯಪ್ರಾಣನ ಮಹಿಮೆಯನ್ನು 'ಸಮಾನ' ನಾಮರೂಢವಾಗಿ ಧ್ಯಾನಿಸಬೇಕು.

**ಉಸಿರಾಟಕ್ಕೆ ಆಧ್ಯಾತ್ಮಿಕ ಮೆರುಗು:** ಹೀಗೆ ಮುಖ್ಯಪ್ರಾಣ ತನ್ನ ಪ್ರಾಣ ಮತ್ತು ಸಮಾನರೂಪಗಳಿಂದ ನಮ್ಮ ಉಸಿರಾಟವನ್ನು ನಿಯಂತ್ರಿಸುವುದಲ್ಲದೆ, ಅದೇ ಅವಧಿಯಲ್ಲಿ ಹಂಸಮಂತ್ರವನ್ನು ಜಪಿಸುತ್ತ, ಉಸಿರಾಟಕ್ಕೆ 'ಹಂಸವ್ರತ'ದ ಮೆರುಗು ದೊರಕುವಂತೆಯೂ ಅನುಗ್ರಹಿಸುವನು. ಹಗಲು–ರಾತ್ರಿಗಳನ್ನೊಳಗೊಂಡ ಸಮಗ್ರದಿನದಲ್ಲಿ ಒಟ್ಟು ೨೧,೬೦೦ ಬಾರಿ ಉಸಿರಾಟ ನಡೆಯುತ್ತಿದ್ದು, ಒಂದೊಂದು ಉಸಿರಾಟಕ್ಕೆ ಒಂದೊಂದು ಹಂಸಮಂತ್ರದ ಜಪದಂತೆ ಸಮಗ್ರ ದಿನಕ್ಕೆ ೨೧,೬೦೦ ಹಂಸಮಂತ್ರದ ಜಪಗಳು ವಾಯುದೇವನ ಮೂಲಕ ನಡೆಯುವುವು. ಇದನ್ನು ವಾಯುದೇವ ಪ್ರತಿನಿತ್ಯ ಬೆಳಗ್ಗೆ ನಮ್ಮ ಹೃದಯದೊಳಿರುವ ದೇವರಿಗೆ ಅರ್ಪಿಸುವನು. ಆದ್ದರಿಂದಲೇ ಇದು ಬೆಳಗ್ಗೆ ಅರ್ಪಿಸಲು ಯೋಗ್ಯವಾದ ಮಂತ್ರ ಎಂಬ ಆಶಯದಲ್ಲಿ 'ಪ್ರಾತರ್ಯೋಗ' ಎಂದೇ ಕರೆಸಿಕೊಳ್ಳಲ್ಪಡುವುದು.6

ನಾವೂ ಹಂಸಮಂತ್ರವನ್ನು ಹತ್ತು ಬಾರಿ ಜಪಿಸಬೇಕು. ಅಲ್ಲದೆ, ನಮ್ಮ ಅಧಿಷ್ಠಾನದಲ್ಲಿದ್ದುಕೊಂಡು ವಾಯುದೇವ ನಡೆಸಿದ ಸಮಗ್ರದಿನದ ಹಂಸಮಂತ್ರದ ಜಪವನ್ನು ದೇವರಿಗೆ ಅರ್ಪಿಸಬೇಕು. ಹೀಗೆ ಅರ್ಪಿಸುವಾಗ ವಾಯುದೇವ ನಮ್ಮಲ್ಲಿದ್ದುಕೊಂಡು ನಡೆಸಿದ ಜಪ ಇದು –ಎಂಬ ಅನುಸಂಧಾನ ಇರಬೇಕು. ಅಲ್ಲದೆ, ಪ್ರತಿಯೊಂದು ಉಸಿರಾಟದ 'ನಿಃಶ್ವಾಸ'ದ ಅವಧಿಯಲ್ಲಿ ಭಗವಂತನ ದೋಷದೂರತ್ವದ ಅನುಸಂಧಾನದೊಂದಿಗೆ (**'ಜಹಾತಿ ದೋಷಜಾತಂ ಇತಿ ಹಂ'**) **'ಹಂ'** –ಎಂಬ ಅಕ್ಷರವನ್ನೂ,

---

5. .......ಯದುಚ್ಛ್ವಾಸನಿಃಶ್ವಾಸಾವೇತಾವಾಹುತೀ ಸಮಂ ನಯತಿ ಸ ಸಮಾನಃ .......।
*– ಷಟ್‌ಪ್ರಶ್ನೋಪನಿಷತ್ 4-1-5.*

* ಯತ್ ಯಸ್ಮಾತ್ ದ್ವಾವೇತೌ ಉಚ್ಛ್ವಾಸನಿಃಶ್ವಾಸೌ ತೇ ಏವ ಆಹುತೀ ಸಮಂ ಯಥಾಕಾಲಂ ನಯತಿ ತಸ್ಮಾದಾಹುತ್ಯೋಃ ಸಮಂ ನಯನಸಾಮ್ಯಾತ್ ಸಮಾನಃ ಸೋಽಧ್ವರ್ಯುರಿತಿ ಯಾವತ್ । *– ಟೀಕಾ.*

6. ಶ್ವಾಸರೂಪೋ ಜಪೋ ನಿತ್ಯಮುಭಯೋರ್ವಿದ್ವದಜ್ಞಯೋಃ ।
ಏಕವಿಂಶತ್ಸಹಸ್ರಾತ್ಮಾ ಸ ಷಟ್‌ಶತಮಹರ್ನಿಶಮ್ ॥
ಅರ್ಪಣೀಯೋ ಹರೌ ನಿತ್ಯಂ ಪ್ರಾತರ್ಯೋಗೋ ಮಹಾನಯಮ್ ।
*– ತಂ.ಸಾ.ಸಂ. 4, 22, 23.*

* ಹಂಸರೂಪೌ ಹಿ ತೌ ದೇವೌ ಶ್ವಾಸೋಚ್ಛ್ವಾಸಪ್ರವರ್ತಕೌ ।
*– ನಾರಾಯಣಶ್ರುತಿ, ಬೃ.ಉ.ಭಾ. 3-6-28.*

'ಉಚ್ಛ್ವಾಸ'ದ ಅವಧಿಯಲ್ಲಿ ಭಗವಂತನ ಗುಣಸಾರತ್ವದ ಅನುಸಂಧಾನದೊಂದಿಗೆ (**'ಗುಣಸಾರತ್ವಾತ್ ಸಃ'**) **'ಸಃ'** –ಎಂಬ ಅಕ್ಷರವನ್ನೂ ಪಠಿಸುತ್ತ ಹಂಸಮಂತ್ರವನ್ನು ಜಪಿಸುತ್ತಿರುವ ಅನುಸಂಧಾನವನ್ನು ತಂದುಕೊಳ್ಳಬಹುದು.

ಶ್ರೀಹರಿ ಮತ್ತು ವಾಯುದೇವ ಹಂಸರೂಪದಲ್ಲಿದ್ದುಕೊಂಡು ಶ್ವಾಸೋಚ್ಛ್ವಾಸಗಳನ್ನು ನಿರ್ವಹಿಸುವರೆಂದು ನಾರಾಯಣಶ್ರುತಿಯ ಸಂದೇಶದಂತೆ ಅವರ ಹಂಸರೂಪಗಳನ್ನೂ ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಭೋಜನನಿರ್ವಹಣೆ:** ಬದುಕಲು ಉಸಿರಾಟದ ಬಳಿಕ ಅತ್ಯವಶ್ಯವಾಗಿ ಬೇಕಾದದ್ದು ಭೋಜನ. ಭೋಜನದ ಎರಡು ಅಂಶಗಳಲ್ಲಿ ವಾಯುದೇವನ ಪಾತ್ರವಿದೆ. ಉಂಡ ಆಹಾರವನ್ನು ಪಚನ ಮಾಡುವುದರಲ್ಲಿ ಹಾಗೂ ಪಚನಗೊಂಡ ಆಹಾರದ ಭಾಗವನ್ನು ಆಯಾ ಅವಯವದೆಡೆಗೆ ತಲುಪಿಸುವುದರಲ್ಲಿ ಗೀತಾಚಾರ್ಯನು ತಾನು ವೈಶ್ವಾನರ ನಾಮಕನಾಗಿ ಎಲ್ಲರ ದೇಹಗಳಲ್ಲಿರುವ ಜಾಠರಾಗ್ನಿಯಲ್ಲಿದ್ದುಕೊಂಡು ಮುಖ್ಯಪ್ರಾಣನ ಪ್ರಾಣ ಹಾಗೂ ಅಪಾನರೂಪಗಳಿಂದ ಕೂಡಿಕೊಂಡು ಉಂಡ ಆಹಾರವನ್ನು ಜೀರ್ಣಗೊಳಿಸುವೆನೆಂದು ನೀಡಿರುವ ಸಂದೇಶದಿಂದ[7] ಆಹಾರವನ್ನು ಜೀರ್ಣಗೊಳಿಸುವಲ್ಲಿ ಪ್ರಾಣಾಪಾನಗಳ ಪಾತ್ರವಿದೆ ಎಂದು ತಿಳಿದುಬರುವುದು. ಅಂದರೆ, ಜಾಠರಾಗ್ನಿಯನ್ನು ಉರಿಸುವುದರಲ್ಲಿ ಪ್ರಾಣಾಪಾನರೂಪಗಳ ಪಾತ್ರ ಎಂದು ಭಾವಿಸಬಹುದು. ಹಾಗೆಯೇ ಉದರಾಗ್ನಿಯಲ್ಲಿ ವೈಶ್ವಾನರನಾಮಕನಾಗಿ ಭಗವಂತ ಇರುವನೆಂಬುದನ್ನು ಪ್ರಸ್ತುತ ಪಡಿಸಿರುವ ಬೃಹದಾರಣ್ಯಕೋಪನಿಷತ್ತು, ಅಂತಹ ವೈಶ್ವಾನರನ ಸ್ತುತಿಯನ್ನು ವಾಯುದೇವನು ನಡೆಸುವನೆಂದೂ ಕಿವಿಗಳನ್ನು ಮುಚ್ಚಿಕೊಂಡಾಗ ಆ ಸ್ತುತಿಯನ್ನು ಯಾರೂ ಕೇಳಬಹುದಾಗಿದೆ ಎಂದೂ ತಿಳಿಸಿದೆ.[8] ಪ್ರತಿಯೊಬ್ಬರ ದೇಹದ ಹೊಕ್ಕುಳಿನ ಜಾಗದಲ್ಲಿರುವ ಸಮಾನ ಎಂಬ ವಾಯು ವನ್ನು ಆಧರಿಸಿಕೊಂಡು ಇರುವ ಮುಖ್ಯಪ್ರಾಣನ ಸಮಾನ ಎಂಬ ರೂಪವು ತಿಂದ ಆಹಾರದ ಭಾಗವನ್ನು ಯಾವಯಾವ ಅವಯವಕ್ಕೆ ಎಷ್ಟೆಷ್ಟು ಆವಶ್ಯಕವೋ ಅಷ್ಟಷ್ಟೇ ಪ್ರಮಾಣದಲ್ಲಿ ತಲುಪಿಸುವುದು. ಆದುದರಿಂದಲೇ ಸಮಾನ ಎನಿಸುವುದು.[9]

---

7. ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥ *– ಗೀ. 15-14.*

* ಸ ಏವಾಗ್ನಿಸ್ಥಿತೋ ವಿಷ್ಣುಃ ನಾಮ್ನಾ ವೈಶ್ವಾನರಃ ಸದಾ......... ।

8. ..........ತಸ್ಯ ವಿಷ್ಣೋಃ ಸ್ತುತಿರಿಯಂ ಕ್ರಿಯತೇ ವಾಯುನಾ ಸದಾ । ಕರ್ಣೌ ಪಿಧಾಯ ಯಾ ನಿತ್ಯಂ ಶ್ರೋತುಂ ಶಕ್ಯಾಖಿಲೈಃ ಸದಾ ॥ *– ತಂತ್ರಮಾಲಾ (ಬೃ.ಉ.ಭಾ. 7-11-1)*

9. ಮಧ್ಯೇ ಸಮಾನಃ । ಏಷ ಹ್ಯೇತದ್ಹುತಮನ್ನಂ ಸಮಂ ನಯತಿ....... ।
*– ಷಟ್‌ಪ್ರಶ್ನೋಪನಿಷತ್.*

* ಸ ಚೈಷ ಯಸ್ಮಾದೇತದ್ಹುತಂ ಭುಕ್ತಮನ್ನಂ ಸಮಂ ಯಥಾ ಶರೀರಾವಯವಂ ನಯತಿ ತೇನ ಸಮಾನನಾಮೇತಿ ಶೇಷಃ । *– ಟೀಕಾ.*

**ಆನಂದಮಯನ ಪುಚ್ಛದ ಚಿಂತನೆಯಲ್ಲಿ:** ಭೋಜನಕಾಲದಲ್ಲಿ ದೇಹದ ಅನ್ನಮಯಾದಿ ಕೋಶಗಳಲ್ಲಿರುವ ಅನ್ನಮಯಾದಿ ಹೆಸರಿನ ಅನಿರುದ್ಧಾದಿರೂಪಗಳ ಸ್ಮರಣೆ ನಡೆಸಬೇಕಾಗಿದ್ದು, ಅದರಲ್ಲಿ ಆನಂದಮಯ ಎನಿಸುವ ನಾರಾಯಣರೂಪದ ಚಿಂತನೆಗೆ ಸಂಬಂಧಿಸಿದಂತೆ ಆನಂದಮಯದ ಪುಚ್ಛ ಅಂದರೆ ಪಾದ ಬ್ರಹ್ಮ ಎನಿಸುವುದೆಂದು ನಿರೂಪಿಸಲಾಗುವುದು. ಸೃಷ್ಟಿಯಿಂದಾಗಿ ವಿಸ್ತರಿಸುವ ಪ್ರಯುಕ್ತ ಅದು ಬ್ರಹ್ಮ ಎನಿಸುವುದಲ್ಲದೆ, ಬ್ರಹ್ಮ ಎನಿಸುವ ಪ್ರಧಾನ ವಾಯುವಿನಲ್ಲಿ ಯಾವಾಗಲೂ ಪ್ರತಿಷ್ಠಾಪಿಸಲ್ಪಟ್ಟಿರುವುದರಿಂದಲೂ ಬ್ರಹ್ಮ ಎನಿಸುವುದೆಂದು ಸೂಚಿಸಲಾಗಿದೆ.[10]

ಆದುದರಿಂದ ಭೋಜನಕಾಲದಲ್ಲಿ ಆನಂದಮಯನ ಚಿಂತನೆ ನಡೆಸುವಾಗ ಅವನ ಪಾದ ಮುಖ್ಯಪ್ರಾಣನಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದೆ ಎಂಬ ಅನುಸಂಧಾನವನ್ನು ತಂದುಕೊಳ್ಳಬೇಕು.

**ಹಸಿವುನೀರಡಿಕೆಗಳ ನಿರ್ವಹಣೆ:** ಭೋಗಶಕ್ತಿಯು ಹಸಿವನ್ನೂ, ನೀರಡಿಕೆಯನ್ನೂ ಅವಲಂಬಿಸಿರುವುದು. ಹಸಿವೇ ಇಲ್ಲದ, ನೀರಡಿಕೆಯೇ ಇಲ್ಲದ ವ್ಯಕ್ತಿಗೆ ಯಾವ ಪದಾರ್ಥದ ತಿನ್ನುವಿಕೆಯಾಗಲೀ, ಕುಡಿಯುವಿಕೆಯಾಗಲೀ ಹೇಗೆ ತಾನೇ ತೃಪ್ತಿಯನ್ನು ಕೊಡಬಲ್ಲುದು?

ದೇವತೆಗಳಿಗೆ ಭೋಗಶಕ್ತಿಯನ್ನು ನೀಡುವುದಕ್ಕಾಗಿ ಭಗವಂತನು ಹಸಿವಿಗೆ ಅಭಿಮಾನಿಯಾಗಿ 'ಅಶನಾ' ಎಂಬ ರೂಪದಿಂದಲೂ, ನೀರಡಿಕೆಗೆ ಅಭಿಮಾನಿಯಾಗಿ 'ಪಿಪಾಸಾ' ಎಂಬ ರೂಪದಿಂದಲೂ ವಾಯುದೇವನು ಪ್ರವೇಶಿಸುವಂತೆ ಆದೇಶಿಸಿದನೆಂಬ ಮಾತಿನಿಂದ[11] ವಾಯುದೇವರ ಈ ಎರಡು ರೂಪಗಳು ಉಳಿದ ವ್ಯಕ್ತಿಗಳಲ್ಲೂ ಹಸಿವನ್ನು ಹಾಗೂ ನೀರಡಿಕೆಯನ್ನು ನಿಯಮಿಸುತ್ತಿವೆ ಎಂದು ತಿಳಿದುಬರುವುದು.

ಆದ್ದರಿಂದ ಹಸಿವೆಗೆ ಒಳಗಾಗಿ ಊಟ ಮಾಡುವಾಗ 'ಅಶನಾ' ಎಂಬ ವಾಯುದೇವನ ರೂಪವನ್ನೂ, ನೀರಡಿಕೆಗೆ ಒಳಗಾಗಿ ನೀರು ಕುಡಿಯುವಾಗ 'ಪಿಪಾಸಾ' ಎಂಬ ವಾಯುದೇವನ ರೂಪವನ್ನೂ ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಎಲ್ಲರೂ ತಿನ್ನುವ ಅನ್ನವನ್ನು ಉಣ್ಣುವವನು:** ಇಂದ್ರಿಯಾಭಿಮಾನಿದೇವತೆಗಳಿಗಿಂತ ಶ್ರೇಷ್ಠನೆಂದು ಹೊಗಳಿಸಿಕೊಳ್ಳಲ್ಪಟ್ಟ ಮುಖ್ಯಪ್ರಾಣ ತನಗೆ ಅನ್ನ ಬೇಕು ಎಂದಾಗ ಉತ್ತಮ ಜೀವರಿಂದ ಆರಂಭಿಸಿ ನಾಯಿಯವರೆಗೂ, ಪಕ್ಷಿಯವರೆಗೂ ಎಲ್ಲ ಪಶುಪಕ್ಷಿಗಳು ತಮಗೆ

---

10. .........ಬ್ರಹ್ಮ ಸೃಷ್ಟ್ಯಾ ತು ಬೃಂಹಯತ್ ।
ಪುಚ್ಛಂ ಪ್ರಧಾನವಾಯೌ ಚ ಬ್ರಹ್ಮಾಖ್ಯೇ ಸಂಸ್ಥಿತಂ ಸದಾ ॥
*– ಯಜುಃಸಂಹಿತಾ (ತೈ.ಉ.ಭಾ. 2-9)*

11. ತದಾಽಶನಾಪಿಪಾಸಾಖ್ಯಂ ದ್ವಿರೂಪಂ ಮಾರುತಂ ಪುನಃ ।
ತಸ್ಮಿನ್ ದೇವಸಮೂಹೇ ತು ವಿಷ್ಣುಃ ಪ್ರಾವೇಶಯತ್ ಪುನಃ ॥
ಅಶನಾಪಿಪಾಸಾಮಾನೀ ತು ದ್ವಿರೂಪೋ ಮಾರುತಃ ......... ॥
*– ಐ.ಉ.ಭಾ. 2-3-2-3.*

12. ಸ ಹೋವಾಚ 'ಕಿಂ ಮೇ ಅನ್ನಂ ಭವಿಷ್ಯತಿ ಇತಿ । ಯತ್ಕಿಂಚಿದಿದಂ ಆಶ್ವಭ್ಯ ಆ ಶಕುನಿಭ್ಯ ಇತಿ ಹೋಚುಃ । ತದ್ವಾ ಏತದನ್ನಸ್ಯಾನ್ನಂ....... ॥ *– ಛಾಂ.ಉ. 5-1-12.*

ಯಾವಯಾವ ಯೋಗ್ಯವಾದ ಅನ್ನವನ್ನು ಉಣ್ಣುವವೋ ಅವೆಲ್ಲವೂ ಮುಖ್ಯಪ್ರಾಣನಿಗೆ ಅನ್ನವೆಂದು ದೇವತೆಗಳು ಅರ್ಪಿಸುವರು.[12] ಹಾಗೆಯೇ ಮುಖ್ಯಪ್ರಾಣನು ತನಗೆ ಬಟ್ಟೆ ಬೇಕೆಂದಾಗ ಎಲ್ಲ ಪ್ರಾಣಿಗಳು ಕುಡಿಯುವ ನೀರನ್ನೇ ಅವನಿಗೆ ಬಟ್ಟೆಯನ್ನಾಗಿ ದೇವತೆಗಳು ಅರ್ಪಿಸುವರು.[13] ಶ್ರೀವಿಷ್ಣುವು ಸ್ವತಂತ್ರನಾಗಿರುವುದರಿಂದ ಅವನ ಅಧೀನದಲ್ಲಿಯೇ ಇರುವ ಅನ್ನವಸ್ತ್ರಾದಿಗಳನ್ನು ಭಕ್ತನು ತನ್ನ ಶ್ರೇಯಸ್ಸಿಗಾಗಿ ಹೇಗೆ ಸಮರ್ಪಿಸುವನೋ ಹಾಗೆಯೇ ದೇವತೆಗಳು ಮೊದಲಿನಿಂದಲೇ ಪ್ರಾಣದೇವರ ವಶದಲ್ಲಿದ್ದ ಅನ್ನವಸ್ತ್ರಾದಿ ಗಳನ್ನೂ ತಮ್ಮ ಶ್ರೇಯಸ್ಸಿಗಾಗಿ ಸಮರ್ಪಿಸುವರು.[14]

ನಾವು ಅನ್ನವನ್ನು ಉಣ್ಣುವಾಗ ಅದರ ಒಂದು ಅಂಶ ಮುಖ್ಯಪ್ರಾಣನಿಂದ ಕಬಳಿಸ ಲ್ಪಡುವುದೆಂದೂ, ನಾವು ಕುಡಿಯುವ ನೀರು ಮುಖ್ಯಪ್ರಾಣನ ಬಟ್ಟೆ ಎನಿಸುವುದೆಂದೂ ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಪ್ರಾಣದೇವನಿಗೆ ಎರಡು ವಸ್ತ್ರಗಳು:** ಜೀವರು ಕುಡಿಯುವ ನೀರೇ ಪ್ರಾಣದೇವರಿಗೆ 'ವಸ್ತ್ರ' ಎಂದು ತಿಳಿಸಿದ ಉಪನಿಷತ್ತು, ಆದುದರಿಂದಲೇ ಜ್ಞಾನಿಗಳು ಭೋಜನದ ಮೊದಲು ಪೂರ್ವಾಪೋಶನರೂಪವಾಗಿಯೂ ಭೋಜನದ ಕೊನೆಯಲ್ಲಿ ಉತ್ತರಾಪೋಶನ ರೂಪವಾಗಿಯೂ ನೀರಿನಿಂದ ಅನ್ನವನ್ನು ಮುಚ್ಚುವರು –ಎಂದು ತಿಳಿಸಿದೆ.[15]

ಹೀಗೆ ಭೋಜನದಲ್ಲಿ ಪೂರ್ವಾಪೋಶನರೂಪದಿಂದ, ಉತ್ತರಾಪೋಶನರೂಪದಿಂದ ಸ್ವೀಕರಿಸಲ್ಪಡುವ ನೀರು ಪ್ರಾಣದೇವರಿಗೆ ವಸ್ತ್ರರೂಪದಲ್ಲಿ ಇರುವುದು –ಎಂಬ ಅನು ಸಂಧಾನದಿಂದ ಪೂರ್ವಾಪೋಶನವನ್ನೂ, ಉತ್ತರಾಪೋಶನವನ್ನೂ ತೆಗೆದುಕೊಳ್ಳಬೇಕು.

**ನೀರಿನ ಮೂಲಕ ಪ್ರಾಣಧಾರಣೆಯಲ್ಲಿ:** ಮನುಷ್ಯರ ಪ್ರಾಣವು **'ಆಪೋಮಯ'** –ಅಂದರೆ ಅವರು ಕುಡಿದ ನೀರಿನ ಸೂಕ್ಷ್ಮಭಾಗದಿಂದ ಪುಷ್ಟವಾಗುವಂತಹದ್ದು. ಆದುದ ರಿಂದಲೇ ಹದಿನೈದು ದಿನಗಳ ಕಾಲ ಅನ್ನವನ್ನು ತಿನ್ನದಿದ್ದರೂ ನೀರು ಕುಡಿದು ಬದುಕಬಲ್ಲ ಎಂದು ಸಮರ್ಥಿಸಿ ತೋರಿಸಿದ ಉಪನಿಷತ್ತು, ಅಂತಹ ನೀರಿಗೆ ಅಭಿಮಾನಿ ಪ್ರಾಣದೇವ ನಾಗಿದ್ದು, ಪ್ರಾಣದೇವನು ನೀರಿನ ಮೂಲಕ ಪ್ರಾಣಾಧಾರಕನಾಗಿರುವನೆಂದು ಅಭಿಪ್ರಾಯ ಪಟ್ಟಿದೆ.[16]

---

13. ಸ ಹೋವಾಚ – 'ಕಿಂ ಮೇ ವಾಸೋ ಭವಿಷ್ಯತೀ'ತಿ । ಆಪ ಇತಿ ಹೋಚುಃ ॥ ಛಾಂ.ಉ.

14. ಸಿದ್ಧಮೇವಾನ್ನವಸ್ತ್ರಾದ್ಯಂ ವಿಷ್ಣೋಃ ಸ್ವಾತಂತ್ರ್ಯತಃ ಸದಾ ।
ಸ್ವಾರ್ಥಂ ಸಮರ್ಪಯೇತ್ ವಿಷ್ಣೌ ಯಥಾ ಪ್ರಾಣೇ ಸುರಾಃ ಪುರಾ ॥
*– ಕರ್ಮಾನುಪೂರ್ವೀ (ಛಾಂ.ಉ.ಭಾ. 5-1-11)*

15. .......ಆಪ ಇತಿ ಹೋಚುಃ । ತಸ್ಮಾದ್ವಾ ಏತದಶಿಷ್ಯಂತಃ ಪುರಸ್ತಾತ್ ಚೋಪರಿಷ್ಟಾತ್ ಚಾದ್ಭಿಃ ಪರಿದಧತಿ........ ॥ *– ಛಾಂ. ಉ. 5-1-12.*

* ಪ್ರಾಣಸ್ಯ ವಸ್ತ್ರಬುದ್ಧ್ಯಾ ತು ಭೋಜನೋಭಯತಃ ಪಿಬನ್ ।
*– ಪ್ರಭಂಜನೇ (ಛಾಂ.ಉ.ಭಾ.)*

16. '.........ಪಂಚದಶಾಹಾನಿ ಮಾಽಶೀಃ ಕಾಮಮಪಃ ಪಿಬಾಽಪೋಮಯಃ ಪ್ರಾಣೋ ನ ಪಿಬತೋ ವಿಚ್ಛೇತ್ಸ್ಯತ ಇತಿ... ಆಪೋಮಯಃ ಪ್ರಾಣಃ..... ॥ ಛಾಂ.ಉ. 6-2-11, 13)

ಆದುದರಿಂದ ಭೋಜನಾವಧಿಯೇ ಮುಂತಾದ ಸಂದರ್ಭಗಳಲ್ಲಿ ನೀರನ್ನು ಕುಡಿಯುವಾಗ, ನೀರಿಗೆ ಅಭಿಮಾನಿಯಾಗಿರುವ ಪ್ರಾಣದೇವ ನೀರಿನ ಮೂಲಕ ಪ್ರಾಣಶಕ್ತಿಯನ್ನು ಪೋಷಿಸುತ್ತ ಬದುಕುವಂತೆ ಮಾಡುವನೆಂದು ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ನಿದ್ದೆಯ ನಿರ್ವಹಣೆ:** ಬದುಕಿನಲ್ಲಿ ಸ್ವಪ್ನಾವಸ್ಥೆಯ ಬಳಿಕ ಅನುಭವಿಸಲಾಗುವ ನಿದ್ರಾವಸ್ಥೆ ತುಂಬ ಸುಖ ಪ್ರದವಾದದ್ದು. ಆನಂದನಿಧಿಯಾದ ಪ್ರಾಜ್ಞನಾಮಕ ಭಗವಂತನ ವಿಶೇಷ ಸಂಪರ್ಕದಿಂದಾಗಿ ಉಂಟಾಗುವ ಆ ಅವಧಿಯ ಆನಂದ ಮೋಕ್ಷಾನಂದಕ್ಕೆ ಸದೃಶವಾದುದು. ನಿದ್ರಾವಸ್ಥೆಯ ಆ ಬಗೆಯ ಆನಂದ ಬರಲು ಕಾರಣನಾಗಿರುವವನು 'ಉದಾನ' ಹೆಸರಿನ ಮುಖ್ಯಪ್ರಾಣನ ರೂಪ. ಯಾಕೆಂದರೆ ಅವನೇ ಜೀವನನ್ನು ಪ್ರತಿನಿತ್ಯ ನಿದ್ರಾವಸ್ಥೆಯಲ್ಲಿ ಸುಷುಮ್ನಾನಾಡಿಯಲ್ಲಿರುವ ಪ್ರಾಜ್ಞನಾಮಕ ಭಗವಂತನೆಡೆಗೆ ಕೊಂಡೊಯ್ಯುವವನು.[17] ಹೀಗೆ ಉದಾನನಿಂದ ಕೊಂಡೊಯ್ಯಲ್ಪಟ್ಟ ಜೀವನಿಗೆ ಆನಂದದ ಕಡಲಾದ ಪ್ರಾಜ್ಞನ ಸಂಪರ್ಕವಾಗಿ ಆನಂದಾತಿಶಯ ದೊರಕುವುದು.

ಆದುದರಿಂದ ಸರ್ವೋತ್ಕೃಷ್ಟನಾಗಿ, ಆನಂದನಿಧಿಯಾಗಿ 'ಉದಾ' –ಎನಿಸಿರುವ ಪ್ರಾಜ್ಞನಾಮಕ ಭಗವಂತನೆಡೆಗೆ ಕೊಂಡೊಯ್ಯುವವನು (**'ಉತ್ಕೃಷ್ಟತ್ವಾತ್ ಆನಂದತ್ವಾಚ್ಚ ಉದಾನಾಮಕಂ ಪ್ರಾಜ್ಞಂ ಪ್ರತಿನಯತೀತಿ'**) ಎಂಬ ಅಭಿಪ್ರಾಯದಲ್ಲಿ ಉದಾನನಾಮದಿಂದ ಮುಖ್ಯಪ್ರಾಣನ ಈ ಲೀಲೆಯನ್ನು ಅನುಸಂಧಾನ ನಡೆಸುತ್ತಿರಬೇಕು.

**ನಿದ್ರೆಯಲ್ಲಿಯ ಗೊರಕೆಗೆ ಆಧ್ಯಾತ್ಮಿಕ ಮೆರುಗು:** ರಾತ್ರಿ ನಿದ್ರಿಸುವಾಗ ಸಂಭವಿಸುವ ಗೊರಕೆಯಲ್ಲಿ **'ಭೂಃ'** ಎಂಬ ಶಬ್ದ ಹೊರಡುವುದು. ವಾಯುದೇವ ಮಲಗಿರುವವರಲ್ಲಿದ್ದು ಕೊಂಡು ಭಗವಂತನ ಭೂತಿಸ್ವರೂಪವನ್ನೂ, ಜ್ಞಾನಾನಂದಾದಿ ಗುಣಸಂಬಂಧಿಯಾದ ಐಶ್ವರ್ಯಸ್ವರೂಪವನ್ನು **'ಭೂಃ'** ಎಂಬ ಶಬ್ದದಿಂದ ಉಪಾಸನೆ ನಡೆಸುವವನೆಂದು ಉಪನಿಷತ್ತು ಸಂದೇಶಿಸಿದ್ದನ್ನು ಶ್ರೀಮಧ್ವರು ಸ್ಪಷ್ಟಪಡಿಸಿರುವರು.[18]

ಆದ್ದರಿಂದ ಮತ್ತೊಬ್ಬರು **'ಭೂಃ' 'ಭೂಃ'** –ಎಂದು ಗೊರಕೆ ಹೊಡೆಯುತ್ತಿದ್ದಲ್ಲಿ ವಾಯುದೇವ ಅವರಲ್ಲಿದ್ದುಕೊಂಡು ಭಗವಂತನ ಭೂತಿಸ್ವರೂಪವನ್ನು ಉಪಾಸನೆ ನಡೆಸು

---

* '.....ಪ್ರಾಣಸ್ತ್ವಭಿಮಾನವಾನ್......... । – *ಬ್ರಹ್ಮಾಂಡ (ಛಾಂ.ಉ.ಭಾ.)*

17. ......ಇಷ್ಟಫಲಮೇವೋದಾನಃ । ಸ ಏನಂ ಯಜಮಾನಮುಹರಹರ್ಬ್ರಹ್ಮ ಗಮಯತಿ । – *ಷಟ್‌ಪ್ರಶ್ನೋಪನಿಷತ್ 4-1-5.*

* 'ಇಷ್ಟಂ ಫಲಂ' ಇತ್ಯತ್ರೇಷ್ಟಂ ಫಲಂ ಯ ಉದ್ಗಾಯತಿ ಸ ಉದ್ಗಾತೋದಾನ ಇತ್ಯರ್ಥಃ । ಇಷ್ಟಫಲಪ್ರತಿಪಾದಕಸಾಮ್ನಾಂ ಗಾನಕರ್ತೋದ್ಗಾತೇವೋದಾನೋಽಪ್ಯುತ್ಕೃಷ್ಟಂ ಬ್ರಹ್ಮ ಸುಷುಮ್ನಾ ನಾಡ್ಯಾ ಪ್ರಾಪಯಿತ್ವಾ ಇಷ್ಟಫಲಂ ಭೋಜಯತಿ । ತಸ್ಮಾದುದಾನ ಉದ್ಗಾತೇತಿ ಭಾವಃ । ಏತದೇವ ಸ್ಪಷ್ಟಯತಿ – ಸ ಯ ಏವಮಿತಿ – ಪ್ರಕಾಶಿಕಾ

18. ದೇವಾನಾಮಪಿ ಸರ್ವೇಷಾಂ ಪ್ರಧಾನೋಽದ್ಯಾಪಿ ಮಾರುತಃ । ಸ್ಥಿತ್ವಾ ಸುಪ್ತೇಷು ವಿಷ್ಣುಂ ಭೂರ್ಭೂರಿತ್ಯೇವ ಶಂಸತಿ । ಭೂಶಬ್ದಾರ್ಥೋ ಭೂತಿರಿತಿ.... ॥ – *ಐ.ಉ.ಭಾ. 1-6-2.*

ತ್ರಿದ್ದಾನೆಂದು ಅನುಸಂಧಾನಕ್ಕೆ ತಂದುಕೊಳ್ಳಬೇಕು. 'ಭೂಃ' ಎಂಬುದಕ್ಕೂ 'ಭೂತಿ' ಎಂದೇ ಅರ್ಥ.

ನಾವು ಗೊರಕೆ ಹೊಡೆಯುತ್ತಿರುವಾಗ ಈ ಅನುಸಂಧಾನ ಅಸಾಧ್ಯವಾದರೂ ನಿದ್ದೆಯಿಂದ ಎದ್ದ ಮೇಲಾದರೂ ನನ್ನ ಅಧಿಷ್ಠಾನದಲ್ಲಿದ್ದುಕೊಂಡು ನನ್ನ ಗೊರಕೆಯ ಮಾಧ್ಯಮದಲ್ಲಿ ವಾಯುದೇವ 'ಭೂಃ'ನಾಮದ ಮೂಲಕ ಭಗವಂತನ ಭೂತಿಸ್ವರೂಪದ ಉಪಾಸನೆ ನಡೆಸಿದ್ದರೆ ಅದರಿಂದ ಭೂತ್ಯಾತ್ಮಕ ಭಗವಂತ ಪ್ರಸನ್ನನಾಗಲೆಂದು ಅನುಸಂಧಾನ ನಡೆಸಬೇಕು.

**ಮಲಮೂತ್ರವಿಸರ್ಜನೆಯಲ್ಲಿ:** ಉಂಡ ಆಹಾರದ, ಕುಡಿದ ನೀರಿನ ತ್ಯಾಜ್ಯಾಂಶ ಮಲಮೂತ್ರಗಳ ರೂಪದಲ್ಲಿ ಹೊರಹೊಮ್ಮಿದರಷ್ಟೇ ದೇಹವು ಆರೋಗ್ಯಪೂರ್ಣವಾಗಿರುವುದು. ಯಾವುದೇ ಸಾಧನೆ ನಡೆಸಲು ಮನಸ್ಸು ಪ್ರಸನ್ನವಾಗಿ ಏಕಾಗ್ರತೆಗೆ ಒಳಗಾಗುವುದು. ಅಪಾನ ಎಂಬ ಹೆಸರಿನ ವಾಯು ದೇಹದ ಮಲಮೂತ್ರ ವಿಸರ್ಜಿಸುವ ಇಂದ್ರಿಯಗಳಲ್ಲಿ ಇದ್ದುಕೊಂಡು ಮಲಮೂತ್ರಗಳನ್ನು ಹೊರಗೆ ತಳ್ಳುವುದು. ಆ ಅಪಾನವಾಯುವನ್ನು ನಿಯಮಿಸುವವನು ಅಪಾನ ಹೆಸರಿನ ಮುಖ್ಯಪ್ರಾಣ.[19]

ಅಪಾನವಾಯುವಿನ ಮೂಲಕ ಮಲಮೂತ್ರಗಳನ್ನು ಕೆಳಗೆ ದಬ್ಬುವನೆಂಬ ಅಭಿಪ್ರಾಯದಲ್ಲಿಯೇ (**'ಅಪಾನವಾಯುದ್ವಾರಾ ಅಪನಯತಿ ಬಹಿಃ ನಿಸ್ಸಾರಯತಿ ಮಲಮೂತ್ರಾದಿಕಮಿತಿ'**) ಅಪಾನ ಎನಿಸುವನೆಂದು ಮಲಮೂತ್ರಾದಿಗಳ ವಿಸರ್ಜನೆಯ ಕಾಲದಲ್ಲಿ ಹಾಗೂ ವಿಸರ್ಜನೆ ನಡೆದ ಮೇಲೆ ಅನುಸಂಧಾನ ನಡೆಸಬೇಕು.

**ಶರೀರಧಾರಣೆಯಲ್ಲಿ:** ರುದ್ರನೇ ಮುಂತಾದ ಇಂದ್ರಿಯಾಭಿಮಾನಿಗಳು ಇದ್ದರೂ ಶರೀರದ ಧಾರಣೆ ಮುಖ್ಯ ಪ್ರಾಣನಿಂದಲೇ. ನಾಲ್ಕು ಉಪನಿಷತ್ತುಗಳಲ್ಲಿ ಉಲ್ಲೇಖಗೊಂಡಿರುವಂತೆ[20] ಇಂದ್ರಿಯಾಭಿಮಾನಿ ದೇವತೆಗಳು ಶರೀರಧಾರಣೆಯ ವಿಷಯದಲ್ಲಿ ಸ್ಪರ್ಧೆಯನ್ನು ಏರ್ಪಡಿಸಿ, ಆ ಸ್ಪರ್ಧೆಯ ನಿಯಮಕ್ಕನುಗುಣವಾಗಿ ಉಳಿದ ಯಾವ ಇಂದ್ರಿಯಾಭಿಮಾನಿದೇವತೆ ಹೊರಟು ಹೋದರೂ ಆ ಶರೀರ ಬಿದ್ದುಹೋಗುವುದಿಲ್ಲ; ಮುಖ್ಯಪ್ರಾಣ ಹೊರಟಾಗ ದೇಹ ಬಿದ್ದುಹೋಗುವುದು. ಅಂತೆಯೇ, ಉಳಿದ ಇಂದ್ರಿಯಾಭಿಮಾನಿಗಳು ಕ್ರಮೇಣ ಪ್ರವೇಶಿಸಿದಾಗ ದೇಹ ಎದ್ದು ನಿಲ್ಲುವುದಿಲ್ಲ. ಮುಖ್ಯಪ್ರಾಣ ಪ್ರವೇಶಿಸಿದಾಗ ಎದ್ದುನಿಲ್ಲುವುದು. ಈ ಬಗೆಯ ಸ್ಪರ್ಧೆ ಚತುರ್ಮುಖನ ಶರೀರದ ಮಾಧ್ಯಮದಲ್ಲಿ ನಡೆದದ್ದಾದರೂ,[21] ಇತರ ಶರೀರಗಳಲ್ಲೂ ಹೀಗೆಯೇ ನಡೆಯುವುದು.

---

19. ..........ಪಾಯೂಪಸ್ಥೋऽಪಾನಂ...... । – ಪ್ರ.ಉ. 3-1-7.

* ಪಾಯುಶ್ಚೋಪಸ್ಥಶ್ಚ ಪಾಯೂಪಸ್ಥಮ್ । ತತ್ರ ಮಲಾದೇರಪನಯನಾತ್ ಅಪಾನಂ ವಾಯುಮಾತ್ಮನೋ ರೂಪೇಣಾಪಾನೇನಾಧಿಷ್ಠಿತಂ ಸನ್ನಿಧತ್ತೇ ಇತಿ ಸಂಬಂಧಃ । – ಪ್ರ.ಉ.ಟೀಕಾ.

20. ತಾ ಅಹಿಂಸತಾಹಮುಕ್ಥಮಸ್ಮ್ಯಹಮುಕ್ಥಮಸ್ಮಿ....... । – ಐ.ಉ. 1-4-3.

21. ತೇ ವಿಷ್ಣೋರಾಜ್ಞಯಾऽವೋಚನ್ನುತ್ಕ್ರಾಮಾಮ ಪೃಥಕ್‌ಪೃಥಕ್ । ದೇಹಾದಬ್ಜಭವಸ್ಯಾಸ್ಮಾದ್ ಯಸ್ಮಿನ್ನುತ್ಕ್ರಾಂತ ಏವ ಹಿ । ಶರೀರಂ ಪದ್ಯತೇ ಶ್ರೇಯಾನ್ ಸ ನ ಇತ್ಯವಧಾರ್ಯತಾಮ್ । – ಐ.ಉ.ಭಾ.

ತತ್ತ್ವಾಭಿಮಾನಿದೇವತೆಗಳೆಲ್ಲ ಮುಖ್ಯಪ್ರಾಣನನ್ನು 'ದೇಹವನ್ನು ಮೇಲಕ್ಕೆ ಎಬ್ಬಿಸುವವನು' ಎಂಬ ಅಭಿಪ್ರಾಯದಲ್ಲಿ 'ಉಕ್ಥ' ಎಂದೇ ಸ್ತುತಿಸುವರು.22

ಮಹಾಭಾರತದಲ್ಲಿ ಸರ್ವಧಾರಕನಾಗಿರುವುದರಿಂದ ವಾಯುದೇವ 'ವಿಧೃತಿ' ಎನಿಸುವನೆಂದು ತಿಳಿಸಲಾಗಿದೆ.23

ರಾಮಾಯಣಯುದ್ಧದಲ್ಲಿ ಇಂದ್ರಜಿತ್ ಪ್ರಯೋಗಿಸಿದ ಅಸ್ತ್ರಗಳಿಗೆ ಬಲಿಯಾಗಿ ಲಕ್ಷ್ಮಣನೇ ಮುಂತಾದವರೆಲ್ಲ ಮೂರ್ಛಿತರಾಗಿ ಬಿದ್ದುಕೊಳ್ಳಲು ಜಾಂಬವಂತನ ಸಲಹೆಯ ಮೇರೆಗೆ ಗಂಧಮಾದನಪರ್ವತವನ್ನು ಹೊತ್ತು ತಂದ ಹನೂಮಂತ ಆ ಗಂಧಮಾದನ ಪರ್ವತದಲ್ಲಿದ್ದ ಮೃತಸಂಜೀವಿನೀ ಮುಂತಾದ ಸಸ್ಯಗಳ ಗಾಳಿಯಿಂದಲೇ ಮೂರ್ಛಿತರಾಗಿದ್ದ ಲಕ್ಷ್ಮಣಾದಿಗಳು ಎದ್ದುನಿಲ್ಲುವಂತೆ ಮಾಡಿರುವ ಆಂಜನೇಯನ ಎಬ್ಬಿಸಿರುವ ಮಹಿಮೆಯ24 ಹಿನ್ನೆಲೆಯಲ್ಲಿ 'ಉಕ್ಥ'ನಾಮದಿಂದ ಶರೀರವನ್ನು ಎಬ್ಬಿಸಿ ಧಾರಣೆ ಮಾಡುವ ಆಂಜನೇಯನ ಮಹಿಮೆಯನ್ನು ಅನುಸಂಧಾನ ಮಾಡಿಕೊಳ್ಳಬೇಕು. ಹಾಗೆಯೇ 'ವಿಧೃತಿ' –ಎಂಬ ನಾಮದಿಂದಲೂ ವಾಯುದೇವನ ಧಾರಣೆಯ ಮಹಿಮೆಯನ್ನು ಚಿಂತನೆ ಮಾಡಬೇಕು.

**ಇಂದ್ರಿಯಗಳ ಪ್ರವೃತ್ತಿಯಲ್ಲಿ:** ಮನಸ್ಸು ಮುಂತಾದ ಇಂದ್ರಿಯಗಳು ತಮ್ಮತಮ್ಮ ಚಟುವಟಿಕೆಯನ್ನು ನಡೆಸಲು ಪ್ರೇರಿಸುವಂತೆ ರುದ್ರ ಮುಂತಾದ ಬೇರೆಬೇರೆ ಅಭಿಮಾನಿ ದೇವತೆಗಳು ಇರುವರು. ಆದರೆ, ಆ ದೇವತೆಗಳೂ ಮುಖ್ಯಪ್ರಾಣನು ಆ ದೇಹದಲ್ಲಿ ಇದ್ದರಷ್ಟೇ ಆ ದೇಹದಲ್ಲಿದ್ದುಕೊಂಡು ತಮ್ಮತಮ್ಮ ಕರ್ತವ್ಯವನ್ನು ನಿರ್ವಹಿಸಲು ಸಮರ್ಥರೆನಿಸುವರು. ಮುಖ್ಯಪ್ರಾಣ ಆ ದೇಹದಲ್ಲಿ ಇಲ್ಲದಿದ್ದಲ್ಲಿ ಆ ದೇವತೆಗಳು ಅಲ್ಲಿ ಇರುವುದಕ್ಕೇ ಅಸಮರ್ಥರೆಂದ25 ಮೇಲೆ ಅವರು ಅಲ್ಲಿ ಚಟುವಟಿಕೆಗಳಿಗೆ ಪ್ರೇರಣೆಯನ್ನಾದರೂ ಹೇಗೆ ನೀಡಿಯಾರು?

---

* ಪ್ರಾಣೋ ವಾ ಉಕ್ಥಮ್ । ಪ್ರಾಣೋ ಹಿ ಇದಂ ಸರ್ವಮುತ್ಥಾಪಯತಿ । – *ಬೃ.ಉ. 7-16-1.*

* ಉತ್ಥಾಪನಾದುಕ್ಥನಾಮಾ.......ವಾಯುರೇವ ಜಗತ್ಪತಿಃ । – *ಬೃ.ಉ.ಭಾ.*

22. .....ತಂ ದೇವಾ ಅಬ್ರುವನ್ ತ್ವಮುಕ್ಥಮಸಿ..... । – *ಐ.ಉ. 1-4-3.*

23. ........ವಿಧಾರಕತ್ವಾಚ್ಚ ವಿಧೃತಿರ್ವಾಯುರುಚ್ಯತೇ । – *ಭಾರತೇ (ಭಾರ.ತಾ.ನಿ. 2-5-25.)*

24. ಪುನಶ್ಚ ತಸ್ಯಾಸ್ತ್ರನಿಪೀಡಿತಾಸ್ತೇ ನಿಪೇತುರುರ್ವ್ಯಾಂ ಕಪಯಸ್ಸಲಕ್ಷಣಾಃ । ......... ತಚ್ಛೈಲವಾತಸ್ಪರ್ಶಾತ್ ಸಮುತ್ಥಿತಾಸ್ಸಮಸ್ತಶೋ ವಾನರಯೂಥಪಾಃ ಕ್ಷಣಾತ್ । – *ಮ.ಭಾರ.ತಾ.ನಿ. 8-148....157.*

25. ಐ.ಉ. 1-4-3....9, ಬೃ.ಉ. 8-1-1.....14, ಛಾಂ.ಉ. 5-1-1.....11, ಪ್ರ.ಉ. 2-1-3....17.

ಆದ್ದರಿಂದ ಆಯಾ ಇಂದ್ರಿಯಗಳಲ್ಲಿದ್ದುಕೊಂಡು ಮುಖ್ಯಪ್ರಾಣನೇ ಪ್ರತಿಯೊಂದು ಇಂದ್ರಿಯದ ಕಾರ್ಯವನ್ನು ನಡೆಸುವನು.26 ಆದುದರಿಂದಲೇ ಜ್ಞಾನಿಗಳು ವಾಗಿಂದ್ರಿಯವನ್ನೂ, ಅದರ ಅಭಿಮಾನಿಯನ್ನೂ, ಚಕ್ಷುರಿಂದ್ರಿಯವನ್ನೂ, ಅದರ ಅಭಿಮಾನಿಯನ್ನೂ ಹೀಗೆಯೇ ಪ್ರತಿಯೊಂದು ಇಂದ್ರಿಯವನ್ನೂ, ಅದರ ಅಭಿಮಾನಿಯನ್ನೂ ವಾಕ್, ಚಕ್ಷು ಇತ್ಯಾದಿ ಆಯಾ ಹೆಸರಿನಿಂದ ಕರೆಯದೆ, ಮುಖ್ಯಪ್ರಾಣನನ್ನೇ ಆಯಾ ಹೆಸರಿನಿಂದ ಕರೆಯುವರು.27

ಹೀಗೆ ಮುಖ್ಯಪ್ರಾಣ ಆಯಾ ಇಂದ್ರಿಯಪ್ರೇರಕನಾಗಿ ಇಂದ್ರಿಯಗಳಲ್ಲಿರುವುದರಿಂದ 'ಪ್ರತ್ಯಕ್ಷ' ಎನಿಸುವನು.28 ಇಂದ್ರಿಯಗಳ ಮೂಲಕ, ಇಂದ್ರಿಯಾಭಿಮಾನಿಗಳ ಮೂಲಕ ಬೇರೆಬೇರೆ ಇಂದ್ರಿಯಗಳ ಚಟುವಟಿಕೆಯನ್ನು ನಡೆಸುವುದರಿಂದ 'ಪ್ರಾಣ' ಎನಿಸುವನು.29 ಆದುದರಿಂದ ಅವನ ಈ ಎರಡು ನಾಮಗಳಿಂದ ಅವನ ಇಂದ್ರಿಯಪ್ರೇರಕತ್ವ ಮಹಿಮೆಯನ್ನು ಅನುಸಂಧಾನ ನಡೆಸಬಹುದು.

ಮುಖ್ಯವಾಗಿ ಭಗವಂತನೇ ಜಗತ್ತಿನ ಎಲ್ಲ ಪ್ರವೃತ್ತಿಗಳನ್ನೂ ನಡೆಸುವವನಾದರೂ, ಅವನು ವಾಯುದೇವನ ಮಾಧ್ಯಮದಲ್ಲಿ ಆ ಪ್ರವೃತ್ತಿಗಳನ್ನು ನಡೆಸುವ ಪ್ರಯುಕ್ತ ಅವನು 'ಪ್ರಾಣಪ್ರಾಣ' ಎನಿಸುವನು. ಅವನ ಪ್ರೇರಣೆಗನುಗುಣವಾಗಿ ವಾಯುದೇವನು ಎಲ್ಲರ ಪ್ರವೃತ್ತಿಗಳನ್ನು ನಡೆಸುವುದರಿಂದ ವಾಯುದೇವ 'ಪ್ರಾಣ' ಎನಿಸುವನು.30

ಮುಖ್ಯಪ್ರಾಣನ ತೃತೀಯಾವತಾರರಾದ ಶ್ರೀ ಮಧ್ವರು ಬದರಿಯತ್ತ ಪಯಣಿಸುವಾಗ ದಾರಿಹೋಕರಿಂದೆಲ್ಲ ಭೂಮಿಯನ್ನು ಅಗೆಸುತ್ತಿದ್ದ, 'ಈಶ್ವರದೇವ' ಎಂಬ ರಾಜನು ಆ ದಾರಿಯಲ್ಲಿ ಸಾಗುತ್ತಿದ್ದ ಶ್ರೀ ಮಧ್ವರಿಗೂ ಭೂಮಿಯನ್ನು ಅಗೆಯಲು ಹೇಳುವನು. ತಮಗೆ ಅಗೆಯಲು ಗೊತ್ತಿಲ್ಲ; ಹೇಗೆ ಅಗೆಯಬೇಕೆಂದು ತೋರಿಸಿಕೊಡು –ಎಂದು ಅಗೆಸುವುದರಲ್ಲಿ ಈಶ್ವರದೇವನನ್ನೇ ತೊಡಗಿಸಿದ ಶ್ರೀ ಮಧ್ವರು, ಅವನು ಮೈಮರೆತು ನಿರಂತರವಾಗಿ ಅಗೆಯುವುದನ್ನು ನಡೆಸುತ್ತಿರುವಂತೆ ಪ್ರೇರಿಸಿದರೆಂದು ಉಲ್ಲೇಖಗೊಂಡ31

---

26. ಸರ್ವೇಂದ್ರಿಯಾಣಾಂ ವ್ಯಾಪಾರಾನ್ ಪ್ರಾಣ ಏವ ಕರೋತ್ಯಯಮ್ । ಇಂದ್ರಿಯಸ್ಥಃ.... । *– ಛಾಂ.ಉ.ಭಾ. 5-1-11.*

27. ನ ವೈ ವಾಚೋ ನ ಚಕ್ಷೂಂಷಿ ನ ಶ್ರೋತ್ರಾಣಿ ನ ಮನಾಂಸೀತ್ಯಾಚಕ್ಷತೇ ಪ್ರಾಣೋ ಹ್ಯೇವೈತಾನಿ ಸರ್ವಾಣಿ ಭವತಿ । *– ಛಾಂ.ಉ. 5-1-11.*

28. ಅಕ್ಷೇಷು ಪ್ರತಿಪ್ರತಿ ಸ್ಥಿತತ್ವಾದನಃ ಪ್ರತ್ಯಕ್ಷಮ್ । *– ಛಾಂ.ಉ.ಭಾ. 5-1-12.*

29. ಸರ್ವಚೇಷ್ಟಯಿತೃತ್ವಾತ್ತು ಪ್ರಾಣಃ....... । *– ಭಾರತೇ (ಭಾಗ.ತಾ.ನಿ. 2-5-25)*

30. 'ವಾಯೋಃ ಸಕಾಶಾಜ್ಜಗತಃ ಪ್ರವೃತ್ತಿಂ ಕಾಮಯತ್ಯಜಃ ।
ಪ್ರಾಣಪ್ರಾಣಮತಃ ಪ್ರಾಹುರ್ವಿಷ್ಣುಂ ವಾಯೋರಪಿ ಪ್ರಭುಮ್ ॥
*– ಭಾಗ.ತಾ.ನಿ. 10-15-50.*

31. ಕ್ವಚಿದೀಶ್ವರದೇವಂ....... ಖನನ್ ಖಲಃ । *– ಮ.ವಿ. 10-4, 5.*

ಶ್ರೀ ಮಧ್ವರ ಚಮತ್ಕಾರ ಅವರು ತಮ್ಮ ಮೂಲರೂಪ ಮುಖ್ಯಪ್ರಾಣನಾಗಿ ಹೇಗೆ ಪ್ರೇರಕರಾಗಬಲ್ಲರೆಂಬುದಕ್ಕೆ ಸೂಚಕವಾಗಬಲ್ಲದು.

**ದೇಹದ ಉದರ ಮತ್ತು ಉರಸ್ ಇವುಗಳ ನಿರ್ಮಾಣದಲ್ಲಿ:** ಮಾನವದೇಹದ ಪ್ರತಿಯೊಂದು ಅಂಗಾಂಗವೂ ಭಗವಂತನ ಪ್ರಭಾವಕ್ಕೊಳಗಾಗಿ ಆಯಾ ಹೆಸರಿನಿಂದ ರೂಪುಗೊಂಡದ್ದು. ಉಪನಿಷತ್ತಿನಲ್ಲಿ ಚತುರ್ಮುಖನ ಶರೀರಕ್ಕೆ ಸಂಬಂಧಿಸಿದಂತೆ ಹೇಳ ಲಾಗುವ ಈ ವಿಚಾರವನ್ನು ಉಳಿದೆಲ್ಲರ ದೇಹಗಳಿಗೂ ಅನ್ವಯಿಸಿ ಕೊಳ್ಳಬಹುದು.[32]

ವಾಯುದೇವನಿಂದ ಕೂಡಿಕೊಂಡು ವಾಸುದೇವನಾಮಕನಾದ ಪರಮಾತ್ಮನು ತೊಡೆಗಳ ಮೇಲೇರುತ್ತ ಹೊಟ್ಟೆಯನ್ನು ಸೇರಿ, ಅಲ್ಲಿ ವಾಯುದೇವನಿಗೆ ಚೆನ್ನಾಗಿ ಉಣ್ಣಲು ಹಾಗೂ ಚೆನ್ನಾಗಿ ತನ್ನನ್ನು ಸ್ತುತಿಸಲು ಆದೇಶಿಸುವನು. ಅದರಂತೆ ವಾಯುದೇವ ಆ ಸ್ಥಳದಲ್ಲಿ ಚೆನ್ನಾಗಿ ಉಂಡನು ಹಾಗೂ ಚೆನ್ನಾಗಿ ಪರಮಾತ್ಮನನ್ನು ಸ್ತುತಿಸಿದನು.[33] ಆದುದರಿಂದಲೇ ಅದು '**ಉದರ**' ಎನಿಸಿದೆ. 'ಉದ್' ಚೆನ್ನಾಗಿ 'ಅರ' ಉಂಡ ಹಾಗೂ ಸ್ತೋತ್ರ ಮಾಡಿದ ಸ್ಥಳ.

ಉದರದಿಂದ ಸ್ವಲ್ಪ ಮೇಲೆ ಏರಿದ ವಾಸುದೇವ, ಆ ಎದೆಯ ಸ್ಥಾನದಲ್ಲಿ ವಾಯು ದೇವನಿಗೆ 'ನೀನಿಲ್ಲಿ ನನಗೆ ವಿಸ್ತಾರವಾದ ವಾಸಸ್ಥಾನ ಮಾಡಿಕೊಡು' ಎನ್ನುವನು. ಅದರಂತೆ ವಾಯುದೇವನು ಮಾಡುವನು. ಆದುದರಿಂದಲೇ ಎದೆಯ ವಿಸ್ತಾರ ಸ್ಥಳ 'ಉರಸ್' ಎನಿಸಿದೆ. ಎದೆಯ ಹೃದಯದಲ್ಲಿ ದೇವರು ನೆಲೆಸುವನು.[34]

ಹೀಗೆ ನಮ್ಮ ಶರೀರದ ಹೊಟ್ಟೆ ಪರಮಾತ್ಮನ ಸ್ಪರ್ಶದಿಂದಾಗಿ '**ಉದರ**' ಎನಿಸುವು ದರಲ್ಲೂ, ಎದೆ 'ಉರಸ್' ಎನಿಸುವುದರಲ್ಲೂ, ಉರಸ್ಸಿನ ಹೃದಯದಲ್ಲಿ ಪರಮಾತ್ಮ ನಿತ್ಯ ನೆಲೆಸುವುದರಲ್ಲೂ ಮುಖ್ಯಪ್ರಾಣನ ಪಾತ್ರವನ್ನು ವಿವೇಚಿಸಿಕೊಳ್ಳಬೇಕು. ಹೊಟ್ಟೆಯನ್ನು 'ಉದರ' ಎಂದು ಉಲ್ಲೇಖಿಸುವಾಗ, ಎದೆಯನ್ನು 'ಉರಸ್' –ಎಂದು ಕರೆಯುವಾಗ ಅವುಗಳಲ್ಲಿ ಮುಖ್ಯಪ್ರಾಣನ ಪ್ರಭಾವವನ್ನು ಮೆಲುಕು ಹಾಕಬೇಕು.

ಅಲ್ಲದೆ, ಮುಖ್ಯಪ್ರಾಣ ಉದರದಲ್ಲಿ ತಿನ್ನುವ ಪ್ರಕ್ರಿಯೆಯನ್ನು ನಡೆಸಿದ್ದರಿಂದಲೇ ಮುಂದೆ ವೈಶ್ವಾನರಾಗ್ನಿಯ ಮೂಲಕ ಆಹಾರದ ಪಚನಕಾರ್ಯ ಅಲ್ಲಿಯೇ ನಡೆಯುತ್ತಿದೆ.

---

32. ತಥಾ ಜೀವೇಷು ಸರ್ವೇಷು ಪ್ರವಿಷ್ಟಃ ಪ್ರೇರಣೇಚ್ಛಯಾ ।
– *ಐತರೇಯಸಂಹಿತಾ (ಐ.ಉ.ಭಾ. 2-3-3-7)*

33. ........ಉರು ಗೃಣೇಹೀತ್ಯಬ್ರವೀತ್ ತದುದರಮಭವದುರ್ವೇವ ಮೇ ಕುರ್ವಿತ್ಯಬ್ರವೀತ್ । ತದುರೋಽಭವತ್ । – *ಐ.ಉ.ಭಾ. 1-3-8.*

34. ಕಿಂಚಿದೂರ್ಧ್ವಂ ತತೋ ಗತ್ವಾ ವಾಯುನಾ ಸಹ ಕೇಶವಃ । ವಾಯುಮಾಹೋರುಗರಣಂ ಕುರ್ವತ್ರ ಸ್ಥಿತ ಇತ್ಯಪಿ । ಉರ್ವೇವ ಗರಣಂ ಚಕ್ರೇ ವಾಯುರ್ಯತ್ರ ಸ್ಥಿತಃ ಸದಾ । ತತ್ ಸ್ಥಾನಮುದರಂ ನಾಮ ಪುನರಾಹ ಜನಾರ್ದನಃ । ಉರು ಸ್ಥಾನಂ ನಿವಾಸಂ ಮೇ ಕುರು ವಿಸ್ತಾರಸಂಯುತಮ್ । ತಥಾಽಕರೋತ್ ಸ ವಾಯುಶ್ಚ ತದುರೋಽಭೂದುರುತ್ವತಃ । ಉರೋಮರ್ಧ್ಯೇ ಚ ಹೃದಯಂ ತತ್ರ ವಾಸೋ ಹರೇಃ ಸದಾ । – *ಐ.ಉ.ಭಾ.*

ಮುಖ್ಯಪ್ರಾಣ ಉದರದಲ್ಲಿ ಸ್ತುತಿ ನಡೆಸಿರುವುದರಿಂದಲೇ ಮುಂದೆ ಓಂಕಾರಾದಿಗಳಿಂದ ಸ್ತುತಿ ನಡೆಸುವಾಗ **'ಮನಃ ಕಾಯಾಗ್ನಿಮಾಹಂತಿ ಸ ಪ್ರೇರಯತಿ ಮಾರುತಮ್'** –ಎಂದಿರುವಂತೆ ಸ್ತುತಿಯ ಶಬ್ದವನ್ನು ಉಚ್ಚರಿಸಬೇಕೆಂದು ಮನಸ್ಸಿಗೆ ತೋಚಿದಾಗ, ಅದರಿಂದಾಗಿ ಉದರದಲ್ಲಿರುವ ವೈಶ್ವಾನರಾಗ್ನಿಗೆ ಚಾಲನೆ ದೊರಕುವುದು; ಅದರಿಂದ ನಾಭಿಯ ಮೂಲದಲ್ಲಿ ವಾಯುವಿನ ಅಲೆ ಹುಟ್ಟಿಕೊಂಡು, ಅನುಕ್ರಮೇಣ ಹೃದಯ, ಕಂಠ, ಬಾಯಿ ಇವುಗಳ ಮೂಲಕ ಸ್ತುತಿಯಾಗಿ ಹೊರಹೊಮ್ಮುವುದು. ಹೀಗೆ ಸ್ತುತಿಯ ಮೂಲ ತಾಣವೂ ಉದರವಾಗಿರುವುದು ಎಂದು ವಿವೇಚಿಸಿಕೊಳ್ಳಬೇಕು.

ಮುಖ್ಯಪ್ರಾಣ ವಾಸುದೇವನಿಗೆ ಉರಸ್ಸನ್ನು ವಾಸಸ್ಥಾನವನ್ನಾಗಿ ಕಲ್ಪಿಸಿದ್ದರಿಂದಲೇ ಈಗಲೂ ಭಗವಂತ ನಮ್ಮೆಲ್ಲರ ಎದೆಯ ಹೃದಯಸ್ಥಾನದಲ್ಲಿ ವಿಶೇಷವಾಗಿ ಇದ್ದುಕೊಂಡು ನಮ್ಮ ಸ್ಮರಣೆ-ಧಾರಣೆ-ಧ್ಯಾನಗಳಿಗೆ ಗೋಚರಿಸುತ್ತಿರುವನೆಂದೂ ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಕಾಲಘಟಕಗಳ ನಿಯಂತ್ರಣದಲ್ಲಿ:** 'ಸರ್ವಾಧಾರಃ ಕಾಲಃ' –ಎಂದಿರುವಂತೆ ಯಾವುದೇ ಚಟುವಟಿಕೆ ನಡೆಯಬೇಕೆಂದರೂ ಕಾಲ ಆಧಾರವಾಗಿ ಬೇಕೇಬೇಕಾಗಿರುವುದರಿಂದ ಯಾವುದೇ ವಸ್ತುವಿನ ಹಾಗೂ ಘಟನೆಯ ಸೃಷ್ಟಿಗೂ ಆಧಾರವಾಗಿ ಅದು ಬೇಕೇಬೇಕು. ಅಂತಹ ಕಾಲದ ಉತ್ತರಾಯಣ, ಶುಕ್ಲಪಕ್ಷ ಹಾಗೂ ಹಗಲು[35] –ಈ ಘಟಕಗಳಲ್ಲಿದ್ದು ವಾಯುದೇವ ಅವು ಬೇರೆಬೇರೆ ವಸ್ತುಗಳ ಸೃಷ್ಟ್ಯಾದಿಗಳಿಗೆ ಕಾರಣವಾಗುವಂತೆ ಪ್ರೇರಿಸುವನು.

ಅಂತೆಯೇ, ವಾಯುದೇವ ತನ್ನ ಪ್ರಾಣರೂಪದಿಂದ ಪ್ರಾತಃಕಾಲಕ್ಕೂ ಅಪಾನರೂಪದಿಂದ ಸಾಯಂಕಾಲಕ್ಕೂ ನಿಯಾಮಕನಾಗಿರುವನು.[36]

ಆದುದರಿಂದ ಈ ಎಲ್ಲ ಕಾಲಘಟಕಗಳಲ್ಲಿ ಏನಾದರೂ ಸಾಧನೆಯನ್ನು ನಡೆಸುವಾಗ ಅದಕ್ಕೆ ನಿಯಾಮಕವಾಗಿ ವಾಯುದೇವ ಇರುವನೆಂಬ ಅನುಸಂಧಾನ ಇರಬೇಕು. ಪ್ರಾಣದೇವನ ಸಂಪರ್ಕದಿಂದಾಗಿಯೇ ಪ್ರಾತಃಕಾಲ ಹಾಗೂ ಸಾಯಂಕಾಲ ಸಂಧ್ಯಾವಂದನೆ ಇತ್ಯಾದಿ ಸಾಧನೆಗಳ ಅನುಷ್ಠಾನಕ್ಕೆ ಯೋಗ್ಯವೆನಿಸಿರುವುದೆಂಬುದನ್ನು ವಿವೇಚಿಸಿಕೊಳ್ಳಬೇಕು.

ಹಾಗೆಯೇ, ಹಗಲಿನಲ್ಲಿ ಪತಿಯಲ್ಲಿ ಪ್ರಾಣದೇವನ ಸನ್ನಿಧಾನವಿಶೇಷವಿರುವುದರಿಂದ ಹಗಲಿನಲ್ಲಿ ಮೈಥುನವನ್ನು ನಡೆಸಿದರೆ ಪ್ರಾಣದೇವನ ಸನ್ನಿಧಾನದಿಂದ ದೂರ ಆಗಬೇಕಾದೀತು! ನಿಷಿದ್ಧಗಳಾದ ದಿನಗಳ ರಾತ್ರಿಯಲ್ಲಷ್ಟೇ ಮೈಥುನವನ್ನು ನಡೆಸುವುದರಿಂದ

---

35. ........ವಾಗೀರಾವಯನಸ್ಥಿತೌ । – *ಷ.ಉ.ಭಾ. 1-2-1.*

* .........ಶುಕ್ಲಃ ಪ್ರಾಣಃ । – *ಷ.ಉ. 1-3-1.*

* ತಸ್ಮಾಹರೇವ ಪ್ರಾಣಃ । – *ಷ.ಉ. 1-3-2.*

36. ........ತತ್ ಪ್ರಾತರಭವತ್ । ....... ತತ್ ಸಾಯಮಭವತ್ । – *ಐ.ಉ. 1-4-11.*

ಪ್ರಾಣದೇವನ ಸನ್ನಿಧಾನವನ್ನು ಕಳೆದುಕೊಳ್ಳದ ಪ್ರಯುಕ್ತ ಬ್ರಹ್ಮಚರ್ಯವನ್ನೇ ಪಾಲಿಸಿ ದಂತಾಗುವುದೆಂಬುದನ್ನೂ[37] ಮರೆಯಬಾರದು.

'ಕಾಲ'[38] 'ಅಹಃ' 'ಪ್ರಾತಃ' 'ಸಾಯಂ' –ಮುಂತಾದ ನಾಮಗಳಿಂದ ಮುಖ್ಯ ಪ್ರಾಣನ ಕಾಲನಿಯಾಮಕತ್ವದ ಮಹಿಮೆಯನ್ನೂ, ಕಾಲಘಟಕ ಅಹರಾದಿನಿಯಾಮಕತ್ವ ಮಹಿಮೆಯನ್ನೂ ಅನುಸಂಧಾನಕ್ಕೆ ತಂದುಕೊಳ್ಳಬಹುದು.

**ಮೈಥುನ ಚಟುವಟಿಕೆಗೆ ಸಂಬಂಧಿಸಿದಂತೆ:** ಪತ್ನಿಯಲ್ಲಿ ಭಾರತೀದೇವಿ ಸನ್ನಿಹಿತ ಳಾಗಿದ್ದರೆ, ಪತಿಯಲ್ಲಿ ವಾಯುದೇವನು ಸನ್ನಿಹಿತನಾಗಿರುವನು.[39]

ಪತಿಯ ಮಜ್ಜೆಯಲ್ಲಿ ಮುಖ್ಯಪ್ರಾಣ ಸನ್ನಿಹಿತನಾಗಿರುವುದರಿಂದಲೇ ಮಜ್ಜೆಯು ರೇತಸ್ಸಾಗುವುದು. ರೇತಸ್ಸಿನಲ್ಲಿ ಪ್ರಾಣನ ಸನ್ನಿಧಾನವಿಶೇಷವಿರುವುದರಿಂದಲೇ ರೇತಸ್ಸು ಗರ್ಭವಾಗಿ ಪರಿಣಾಮ ಹೊಂದುವುದು. ಪ್ರಾಣನ ವಿಶೇಷ ಸನ್ನಿಧಾನ ಇಲ್ಲದವರ ರೇತಸ್ಸು ಗರ್ಭವಾಗಿ ಪರಿಣಾಮ ಹೊಂದುವುದಿಲ್ಲ. ಹಾಗೆಯೇ, ಮಾಂಸಾದಿಗಳಲ್ಲಿ ಪ್ರಾಣನ ವಿಶೇಷ ಸನ್ನಿಧಾನ ಇಲ್ಲದಿರುವುದರಿಂದಲೇ ಮಾಂಸಾದಿಗಳು ಗರ್ಭವಾಗಿ ಪರಿಣಾಮ ಹೊಂದು ವುದಿಲ್ಲ.[40]

ಆದುದರಿಂದ ಮೈಥುನದ ಕಾಲದಲ್ಲಿ ಪತಿಯಾದವನು ತನ್ನಲ್ಲಿ ವಾಯುದೇವ ವಿಶೇಷವಾಗಿ ಸನ್ನಿಹಿತನಾಗಿರುವನೆಂದೂ, ರೇತಸ್ಸಿನಲ್ಲೂ ಅವನ ವಿಶೇಷಸನ್ನಿಧಾನ ಇದೆ ಎಂದೂ ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಗರ್ಭಧಾರಣೆಯ ವಿಷಯದಲ್ಲಿ:** ತತ್ತ್ವಾಭಿಮಾನಿದೇವತೆಗಳು ವಾಯುದೇವನನ್ನು ಸ್ತುತಿಸುತ್ತ, "ಪ್ರಜಾಪತಿ ಎನಿಸಿರುವ ಪ್ರದ್ಯುಮ್ನರೂಪಿ ಪರಮಾತ್ಮನಿಗೆ ಪ್ರತೀಕನಾಗಿ, ನೀನೇ ಗರ್ಭದಲ್ಲಿ ರಕ್ಷಕನಾಗಿ ಸಂಚರಿಸುತ್ತಿರುವಿ. ತಾಯಿಯ ಗರ್ಭದಿಂದ ಹೊರಗೆ ಬರಲು

---

37. ಪ್ರಾಣಂ ವಾ ಏತೇ ಪ್ರಸ್ಕಂದಂತಿ ಯೇ ದಿವಾ ರತ್ಯಾ ಸಂಯುಜ್ಯಂತೇ ।
ಬ್ರಹ್ಮಚರ್ಯಮೇವ ತದ್ ಯದ್ ರಾತ್ರೌ ರತ್ಯಾ ಸಂಯುಜ್ಯಂತೇ ।
– *ಷ.ಪ್ರ.ಉ. 1-3-2.*

38. ಹರಿಶ್ಚ ಪ್ರಕೃತಿಶ್ಚೈವ ಬ್ರಹ್ಮವಾಯೂ ತಥೈವ ಚ ।
ಸುಪರ್ಣಶೇಷರುದ್ರಾಶ್ಚ....... ಕಾಲಶಬ್ದೋದಿತಾಃ ಕ್ರಮಾತ್ ॥
– *ಉದಾರಸಂಹಿತಾ (ಭಾಗ.ತಾ.ನಿ. 2-2-18).*

39. .......ಭಾರ್ಯಾಸ್ಥಾ ತು ಸರಸ್ವತೀ । ಭರ್ತೃಸ್ಥಃ ಸ ಸ್ವಯಂ ವಾಯುಃ ....... ।
– *ಪ್ರಜಾಪತಿಸಂಹಿತೆ (ಷ.ಉ.) 1-3-2.*

40. '........ಪ್ರಾಣೋ ಮಜ್ಜಾಸು ಸಂಸ್ಥಿತಃ । ಮಜ್ಜೈವ ರೇತೋ ಭವತಿ ರೇತಸಿಸ್ಥೋ ವಿಶೇಷತಃ । ಪ್ರಾಣಸ್ತೇನ ಹಿ ತದ್ರೇತೋ ಯುಕ್ತಂ ಪ್ರಾಣೇನ ಸರ್ವದಾ । ಯದಿ ಪ್ರಾಣೋ ನ ತದ್ರೇತೋ ನ ಗರ್ಭತ್ವಂ ವ್ರಜೇತ್ ಕ್ವಚಿತ್ । ವಿಶೇಷ ಪ್ರಾಣಸಂಬಂಧವರ್ಜಿತಾನ್ಯತ ಏವ ಹಿ । ನ ಮಾಂಸಾದೀನಿ ಗರ್ಭತ್ವಂ ಯಾಂತ್ಯತಃ ಸ ರೇತಸಿ । ವಿಶೇಷೇಣ ಸ್ಥಿತಃ ಪ್ರಾಣಃ......... ।
– *ಐತರೇಯಭಾಷ್ಯ 2-8-2-4.*

ಮುಖ್ಯಕಾರಣನಾಗಿ ಪ್ರಜಾಪತಿ ಎನಿಸಿರುವ ಪ್ರದ್ಯುಮ್ನನ[41] ಪ್ರೇರಣೆಗೆ ಅನುಗುಣವಾಗಿ 'ಸೂತಿಕಾವಾಯು'ವನ್ನು ಮಾಧ್ಯಮವಾಗಿ ಇಟ್ಟುಕೊಂಡು ನೀನೇ ಮಗು ತಾಯಿಯ ಗರ್ಭದಿಂದ ಹೊರಬರಲು ಕಾರಣನಾಗಿರುವಿ" -ಎಂದು ಹೇಳಿರುವ ಮಾತಿನಿಂದ ವಾಯುದೇವ ಪ್ರಜಾಪತಿ ಎನಿಸಿರುವ ಪ್ರದ್ಯುಮ್ನನಿಗೆ ಪ್ರತಿಮೆಯಾಗಿ ಹೇಗೆ ಗರ್ಭದ ವಿಷಯದಲ್ಲಿ ಪಾತ್ರ ವಹಿಸುವನೆಂದು ಸೂಚಿಸಿದಂತಾಗುವುದು.

ಗರ್ಭಿಣಿಸ್ತ್ರೀಯರು ಹಾಗೂ ಅವರಿಗೆ ಸಂಬಂಧಿಸುವ ಬಂಧುಗಳು ಆ ಗರ್ಭಿಣಿಯ ಗರ್ಭದಲ್ಲಿ ವಾಯುದೇವ ಪ್ರಜಾಪತಿ ಎನಿಸುವ ಪ್ರದ್ಯುಮ್ನನ ಪ್ರತಿಮೆಯಾಗಿ ಪಾತ್ರ ವಹಿಸುವುದರಲ್ಲಿ 'ಪ್ರಜಾಪತಿ'ನಾಮದಿಂದಲೇ ಅನುಸಂಧಾನ ಮಾಡಬಹುದು.

**ಸೂರ್ಯನಲ್ಲಿದ್ದುಕೊಂಡು ಸೃಷ್ಟಿ:** ವಾಯುದೇವನು ಸೂರ್ಯನಲ್ಲಿ ಇದ್ದುಕೊಂಡು ಸೂರ್ಯನು ಉದಯಿಸುವಾಗ ತಾನೂ ಉದಯಿಸಿ, ತನ್ನ ರಶ್ಮಿಗಳಿಂದ ಪೂರ್ವಾದಿ ದಿಕ್ಕುಗಳಲ್ಲಿರುವ ಇಂದ್ರಾದಿದೇವತೆಗಳನ್ನು ವ್ಯಾಪಿಸುವನು.[42] ಹೀಗೆ ಎಲ್ಲರಲ್ಲಿ ಪ್ರಕಾಶಕನಾಗಿದ್ದುಕೊಂಡು ಪ್ರಜೆಗಳ ಉತ್ಪತ್ತಿಗೆ ಪ್ರಯೋಜಕನಾಗುವನು. ಹಾಗೆಯೇ ವೈಶ್ವಾನರ ಅಗ್ನಿಯ ಸಂಬಂಧವನ್ನು ಹೊಂದಿ ಸುಡುವಿಕೆ, ಪಾಕ ಮಾಡುವಿಕೆ, ಒಣಗಿಸುವಿಕೆ -ಇತ್ಯಾದಿಗಳಿಂದ ಎಲ್ಲ ಪ್ರಜೆಗಳ ಉತ್ಪತ್ತಿಗೆ ಕಾರಣನಾಗುವನು.[43] ಆರೋಗ್ಯವನ್ನುಂಟು ಮಾಡುವ ಮೂಲಕವೂ ಪ್ರಜೆಗಳ ಉತ್ಪತ್ತಿಗೆ ಕಾರಣನಾಗುವನು.[44]

ಆದುದರಿಂದ, ಭಗವಂತನ ಆದೇಶಾನುಸಾರವಾಗಿ ವಾಯುದೇವನೇ ಸೂರ್ಯನಲ್ಲಿ ಇದ್ದುಕೊಂಡು ಮೂರು ಜಗತ್ತುಗಳನ್ನೂ ಸುಡುವನು. ವಾಯುದೇವನ ಆದೇಶಕ್ಕನುಗುಣ

---

41. ಪ್ರಜಾಪತಿಶ್ಚರಸಿ ಗರ್ಭೇ ತ್ವಮೇವ ಪ್ರತಿಜಾಯಸೇ...... । *– ಪ್ರ.ಉ. 2-1-11.*

* ಪ್ರಜಾಪತಿಃ ಪ್ರಜಾಪಾತಾತ್....... ಪ್ರಜಾಪತಿಸ್ತು ಪ್ರದ್ಯುಮ್ನಃ...... । *– ಛಾಂ.ಉ.ಭಾ. 2-1-9.*

* 'ತ್ವಮೇವ ಪ್ರತಿಜಾಯಸೇ......' 'ವ್ಯತ್ಯಯೋ ಭೇದಸ್ವಾತಂತ್ರ್ಯಕರಣೇಷು' (ಭಾಗ.ತಾ.ನಿ. 2-5-1) ಎಂಬ ವೈದಿಕವ್ಯಾಕರಣಸೂತ್ರದ ಪ್ರಕಾರ ಹುಟ್ಟಿಸುವಿಕೆಯಲ್ಲಿ ವಾಯುದೇವನ ಸ್ವಾತಂತ್ರ್ಯದ ಸೂಚನೆಗಾಗಿ ಪ್ರೇರಣೆಗಾಗಿ ಪ್ರೇರಣಾರ್ಥಕಪ್ರತ್ಯಯವನ್ನು ಬಳಸದೆಯೇ, 'ಪ್ರತಿಜಾಯಸೇ' -ಎಂಬ ಬದಲಾವಣೆಯನ್ನು ಮಾಡಲಾಗಿದೆ.

42. ಆದಿತ್ಯಸ್ಥಃ ಸ ವಾಯುಸ್ತು ಪ್ರಾಣಾನಾತ್ಮನಿ ಸನ್ನಯೇತ್ ।
ಪ್ರಾಚ್ಯಾಃ ಪ್ರಾಣಾಸ್ತಥೇಂದ್ರಾದ್ಯಾಃ.......... ॥ *– ಪ್ರ.ಉ.ಭಾ.*

43. ನ ಕೇವಲಮೇತಾವತ್, ಕಿಂ ನಾಮ? ಸ ಏವ ಆದಿತ್ಯೇ ಸ್ಥಿತಃ....... ಅದನಾದಗ್ನಿಃ ಪ್ರಾಣೋ ವೈಶ್ವಾನರೋ ವಿಶ್ವನರಸಂಬಂಧೀ ತಾಪನಪಾಚನಶೋಷಣಾದಿನಾ ಸರ್ವಪ್ರಜೋತ್ಪತ್ತಿಹೇತುಃ ಸನ್ನುದಯತೇ । *– ಟೀಕಾ.*

44. ........ಪಾಚನಶೋಷಣಾದಿನಾಽಽರೋಗ್ಯಜನಕತ್ವೇನಾಪಿ ಪ್ರಜೋತ್ಪತ್ತೌ ಉಪಯೋಗಿತ್ವಂ..... । *– ಪ್ರಕಾಶಿಕಾ.*

ವಾಗಿ ಸೂರ್ಯನು ಸುಡುವನಷ್ಟೇ.[45] ಸೂರ್ಯನ ಬೆಳಗುವಿಕೆ, ಸುಡುವಿಕೆ –ಇವನ್ನೆಲ್ಲ ಅನುಭವಿಸುವಾಗ ವಾಯುದೇವನ ಪಾತ್ರವನ್ನು ವಿವೇಚಿಸಿಕೊಳ್ಳಬೇಕು.

**ಬಲಾದಿಗಳ ಪ್ರದಾನದ ವಿಷಯದಲ್ಲಿ:** ವಾಯುದೇವ ಬಲದೇವತೆ. ವಾಯು ದೇವನ ಪರಿಚಯಕ್ಕಾಗಿ ಹೊರಟ ಬಳಿತ್ಥಾಸೂಕ್ತ ಅವನನ್ನು 'ಬಟ್' –ಎಂದು ಮೊತ್ತ ಮೊದಲು ಬಲದೇವತೆಯನ್ನಾಗಿಯೇ ಸಾರುತ್ತಿದೆ.[46] ವಾಯು ಎಂಬ ಅವನ ಪ್ರಸಿದ್ಧ ನಾಮದ ಮೊದಲ ವಕಾರವು ಅವನ ಬಲಸ್ವರೂಪವನ್ನೇ ತಿಳಿಸುತ್ತಿದೆ.[47]

ಹೀಗೆ ಬಲದೇವತೆಯಾದ ವಾಯುದೇವ ಬಲರೂಪವಾದ ಗುಣದ ಬೇರೆಬೇರೆ ಚಟುವಟಿಕೆಗಳನ್ನು ನಿರ್ವಹಿಸುವಲ್ಲಿ ಪ್ರಮುಖ ಪಾತ್ರ ವಹಿಸುವನು. ದುರ್ಜನರನ್ನು, ಆಸುರೀಶಕ್ತಿಗಳನ್ನು ಮಣಿಸುವ 'ಓಜಃ' –ಎಂಬ ಧರ್ಮವನ್ನೂ, ದುರ್ಜನರ, ಆಸುರೀಶಕ್ತಿಗಳ ಆಕ್ರಮಣಕ್ಕೆ ಒಳಗಾಗದಂತೆ ತಡೆಯುವ 'ಸಹಃ' –ಎಂಬ ಧರ್ಮವನ್ನೂ ನೀಡುವನು. ಭಗವಂತನ ಸಂಕಲ್ಪಕ್ಕನುಗುಣವಾಗಿ ನಾವು ಬಯಸುವ ಯಾವುದೇ ಒಳ್ಳೆಯ ಕಾರ್ಯಗಳನ್ನು ನಡೆಸಲು ಬೇಕಾದ ದೈಹಿಕ ಬಲ ಹಾಗೂ ಮಾನಸಿಕ ಬಲವನ್ನು ನೀಡುವನು. ಈ ನಿಟ್ಟಿನಲ್ಲಿ ನಮ್ಮನ್ನು ಅನುಸರಿಸಲು ಬಂದ ಸಾಧಕರನ್ನು ಧರಿಸಲು ಬೇಕಾದ ತಾಕತ್ತನ್ನೂ ನೀಡುವನು.[48]

ಈ ಬಗೆಯ ಬಲದ ಚಟುವಟಿಕೆಗಳು ನಮ್ಮಿಂದ ನಡೆಯುವಾಗ, ಅಥವಾ ಇತರರ ಮೂಲಕ ನಡೆಸುತ್ತಿರುವಾಗ ಅಲ್ಲಿ ಮುಖ್ಯಪ್ರಾಣನ ಪಾತ್ರವನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ರೋಗನಿವಾರಣೆಯಲ್ಲಿ:** ಮನುಷ್ಯನಿಗೆ ಹೆಚ್ಚಿನ ರೋಗಗಳು ಉಸಿರಾಟಕ್ಕೆ ಸಂಬಂಧಿಸಿದಂತೆ, ಪಚನಕ್ಕೆ ಸಂಬಂಧಿಸಿದಂತೆ ಹಾಗೂ ಮಲಮೂತ್ರಗಳ ವಿಸರ್ಜನೆಗೆ ಸಂಬಂಧಿಸಿದಂತೆ ಇರುವವು. ಈ ಮೂರು ಚಟುವಟಿಕೆಗಳ ಲೋಪದೋಷ ಪ್ರಯುಕ್ತವಾಗಿ ಸಂಭವಿಸುವ ರೋಗಗಳನ್ನೂ ಪರಿಹರಿಸಬಲ್ಲನು.

---

45. ವಾಯುಶ್ಚ ಸೂರ್ಯಸಂಸ್ಥಃ ಸನ್ ತಪತ್ಯೇತಜ್ಜಗತ್‌ತ್ರಯಮ್ । ಆಜ್ಞಯೈವ ಪರೇರ್ವಾಯೋಃ ಶಕ್ತ್ಯಾ ಸೂರ್ಯಸ್ತಪತ್ಯಯಮ್ । – *ಐ.ಉ.ಭಾ. 2-1-12.*

46. ಬಟ್ - ಬಲಾತ್ಮಕಂ - ಭಾವಪ್ರಕಾಶಿಕಾ । – *ಮ.ಭಾರ.ತಾ.ನಿ. 2-152.*

47. ವಬಯೋರಭೇದಾದ್ ವಕಾರೋ ಬಲವಾಚೀ । – *ನ್ಯಾಯದೀಪಿಕಾ ಗೀ.ತಾ. 11-39.*

48. ಸರ್ವ ಚೇಷ್ಟಯಿತೃತ್ವಾತ್ತು ಪ್ರಾಣೋಽಭಿಭವಶಕ್ತಿತಃ । ಓಜಸ್ತ್ವನಭಿಭಾವ್ಯತ್ವಾತ್ ಸಹಶ್ಚ ಸ್ವೇಚ್ಛಯಾ ಕೃತೇಃ । ಬಲಂ ವಿಧಾರಕತ್ವಾಚ್ಚ ವಿಧೃತಿರ್ವಾಯುರುಚ್ಯತೇ । – *ಭಾರತೇ (ಭಾಗ.ತಾ.ನಿ. 2-5-25.)*

* ಅಭಿಭವಶಕ್ತಿಪ್ರದತ್ವಾದೋಜ ಇತಿ । ಅನಭಿಭವಶಕ್ತಿದತ್ವಾತ್ ಸಹ ಇತಿ । ಸ್ವೇಚ್ಛಾಕರಣ ಶಕ್ತಿದತ್ವಾತ್ ಬಲಮಿತ್ಯುಚ್ಯತೇ । – *ಅನಂತತೀರ್ಥಾಃ ।*

* ಪ್ರಾಣಾದಭೂದ್ ಯಸ್ಯ ಚರಾಚರಾಣಾಂ ಪ್ರಾಣಃ ಸಹೋ ಬಲಮೋಜಶ್ಚ ವಾಯುಃ । – *ಭಾಗ. 8-5-37.*

ಅಂತೆಯೇ ದೇಹದ ಆರೋಗ್ಯವು ದೇಹದಲ್ಲಿ ಪಸರಿಸಿರುವ ನಾಡಿಗಳ ಶುದ್ಧಿಯನ್ನು ಅವಲಂಬಿಸಿದೆ. ನಾಡಿಗಳ ಶುದ್ಧಿ ವಾಯುವಿನಿಂದಲೇ ಆಗುವಂತಹದ್ದು. ಇಡಾ ಮತ್ತು ಪಿಂಗಲಾದಲ್ಲಿ ಸಂಚರಿಸುತ್ತಿರುವ ಪ್ರಾಣ ಮತ್ತು ಅಪಾನವಾಯುಗಳನ್ನು ಮುಖ್ಯಪ್ರಾಣನ ಪ್ರಾಣಾಪಾನರೂಪಗಳು ನಿಯಂತ್ರಿಸುತ್ತಿರುತ್ತದೆ. ಎಲ್ಲ ಸಂಧಿಗಳಲ್ಲಿ ಸಂಚರಿಸುವ ವ್ಯಾನ ವಾಯುವನ್ನು ವ್ಯಾನರೂಪವು ನಿಯಂತ್ರಿಸುತ್ತಿರುತ್ತದೆ. ಬ್ರಹ್ಮನಾಡಿಯಲ್ಲಿರುವ ಉದಾನ ವಾಯುವನ್ನು ಉದಾನರೂಪವು ನಿಯಂತ್ರಿಸುತ್ತಿರುತ್ತದೆ. ದೇಹದ ಎಲ್ಲೆಡೆ ಸಮಪ್ರಮಾಣ ದಲ್ಲಿ ಸಂಚರಿಸುತ್ತಿರುವ ಸಮಾನವಾಯುವನ್ನು ಸಮಾನರೂಪವು ನಿಯಂತ್ರಿಸುತ್ತಿರುತ್ತದೆ.[49]

ಹಾಗೆಯೇ ರೋಗಗಳಿಗೆ ಪ್ರಾರಬ್ಧಕರ್ಮಗಳೂ ಪ್ರಯೋಜಕಗಳಾಗುವುದರಿಂದ, ಅಂತಹ ಕರ್ಮಗಳನ್ನು 'ಉಪಮರ್ದ'ಕ್ಕೆ ಒಳಪಡಿಸಿ, ಅವುಗಳ ಪ್ರಭಾವವನ್ನು ಕುಗ್ಗಿಸುವ ಮೂಲಕವೂ ರೋಗಗಳ ಉಪಶಮನದಲ್ಲಿ ವಾಯುದೇವನು ಪಾತ್ರವಹಿಸುವನು.

ವಾಯುದೇವನ 'ರುದ್ರ' –ಎಂಬ ಹೆಸರು ಅವನ ರೋಗನಿವಾರಣೆಯ ಈ ಮಹಿಮೆಯನ್ನು ಸಾರುತ್ತಿರುವುದು.[50]

**ಅಪಮೃತ್ಯುವನ್ನು ಪರಿಹರಿಸುವಲ್ಲಿ:** ಋಗ್ವೇದದ ಪವಮಾನಮಂಡಲದ '**ಯದಂತಿ ಯಚ್ಚ ದೂರಕೇ.......**' ಎಂಬ ಋಕ್‌ನಲ್ಲಿ[51] 'ಹೇ ಪವಮಾನ, ಹತ್ತಿರದಲ್ಲಾಗಲೀ ದೂರ ದಲ್ಲಾಗಲೀ ಏನೇನು ಭಯ ನನ್ನನ್ನು ಆಕ್ರಮಿಸುತ್ತಿದೆಯೋ ಅದನ್ನು ಪರಿಹರಿಸು' –ಎಂದು ಕೇಳಿಕೊಳ್ಳಲಾಗುತ್ತಿದ್ದು ಈ ಋಕ್‌ನ ಜಪದಿಂದ ಅಪಮೃತ್ಯು ಪರಿಹಾರವಾಗುವುದೆಂದು 'ಫಲಶ್ರುತಿ' ಇದೆ.[52] ಜಡಮಂತ್ರ ಫಲವನ್ನು ನೀಡಲಾದ ಪ್ರಯುಕ್ತ ಮಂತ್ರಪ್ರತಿಪಾದ್ಯನಾದ ಪವಮಾನ ಹಾಗೂ ಅವನ ಅಂತರ್ಯಾಮಿ ನರಸಿಂಹ ಈ ಮಂತ್ರದ ಜಪದಿಂದ ಪ್ರಸನ್ನ ರಾಗಿ ಜಪಿಸುವವನ ಅಪಮೃತ್ಯುವನ್ನು ದೂರ ಮಾಡುವರೆಂದು ಒಪ್ಪಿಕೊಳ್ಳಲೇಬೇಕು.

ಹೀಗೆ ಅಪಮೃತ್ಯು ಪರಿಹರಿಸುವಲ್ಲಿ ವಾಯುದೇವನ ಅನುಗ್ರಹದಿಂದಾಗಿ ನಾವು ಅಪಮೃತ್ಯುವಿಗೆ ಬಲಿಯಾಗದೆ ಸುರಕ್ಷಿತವಾಗಿದ್ದೇವೆ –ಎಂದು ಅನುಸಂಧಾನಕ್ಕೆ ತಂದು ಕೊಳ್ಳಬೇಕು. ಯಾವ ಕ್ಷಣದಲ್ಲೂ ಯಾವ ಬಗೆಯಲ್ಲೂ ಅಪಮೃತ್ಯು ಬಂದರೂ ಆಶ್ಚರ್ಯ ವಿಲ್ಲ –ಎಂದು ಹೇಳಬೇಕಾದ ಈ ವಾತಾವರಣದಲ್ಲೂ ಅಪಮೃತ್ಯುವಿಗೆ ತುತ್ತಾಗದಂತೆ ಮುಖ್ಯಪ್ರಾಣನೂ, ಅವನ ಅಂತರ್ಯಾಮಿ ನರಸಿಂಹನೂ ಅನುಗ್ರಹಿಸುತ್ತಿದ್ದಾನೆಂದು ವಿವೇಚಿಸಿಕೊಳ್ಳಬೇಕು.

---

49. ಪ್ರಾಣಾಪಾನಾವಿಡಾಯಾಂ ಚ ಪಿಂಗಲಾಯಾಂ ಚ ವರ್ತತಃ ।
ವ್ಯಾನಃ ಸಂಧಿಷು ಸರ್ವತ್ರ ಉದಾನೋ ಬ್ರಹ್ಮನಾಡಿಗಃ ।
ಸರ್ವತ್ರೈವ ಸಮಾನಸ್ತು ಸಮಂ ಚರತಿ ಸರ್ವಗಃ ॥
*– ಭಾರತೇ (ಭಾಗ.ತಾ.ನಿ. 2-2-21)*

50. ರುಜಾಂ ದ್ರವಣತೋ ರುದ್ರೋ ವಾಯುಃ ...... । *– ಋಗ್ಭಾಷ್ಯ (3-3)*

51. 'ಯದಂತಿ ಯಚ್ಚ ದೂರಕೇ....... ವಿತಜ್ಜಹಿ' – ಋ.ವೇ.

52. ಅಪಮೃತ್ಯುಭಯಂ ತಸ್ಯ ಯದಂತೀತ್ಯೃಗ್‌ಜಪಾದ್ ವ್ರಜೇತ್ ।
*– ಐ.ಉ.ಭಾ. 2-8-47.*

**ಆಯುಷ್ಯದ ನಿಯಂತ್ರಣದಲ್ಲಿ:** ಅಪಾನನಾಮಕನಾದ ಮುಖ್ಯವಾಯುವಿನಿಂದಾಗಿಯೇ ಚತುರ್ಮುಖನು ತನ್ನ ಅನ್ನರೂಪವಾದ ಶರೀರವನ್ನು ಭೋಗಿಸಲು ಶಕ್ತನಾದನು. ರುದ್ರಾದಿಗಳೂ, ಇಂದ್ರಾದಿಗಳೂ ಅವನ ಅನುಗ್ರಹದಿಂದಾಗಿಯೇ ಭೋಗ್ಯಪದಾರ್ಥಗಳನ್ನು ಭೋಗಿಸುವರೆಂದು ತಿಳಿಸಿ,[53] ಅಂತಹ ಅನ್ನದಿಂದಾಗಿ ಶರೀರವುಳ್ಳವರಿಗೆ ಆಯುಷ್ಯವನ್ನು ನೀಡುವವನೂ ವಾಯುವೇ ಎನ್ನಲಾಗಿದೆ. ಅನ್ನದೇವನಾದ ಚತುರ್ಮುಖನಿಗೂ ಆಯುಷ್ಯವನ್ನು ನೀಡುವವನು ವಾಯುದೇವ.

ಆದ್ದರಿಂದ ನಾವು ಕೂಡಾ ಅನ್ನವುಂಡು ಆಯುಷ್ಯ ಪಡೆದಿರುವಲ್ಲಿ ವಾಯುದೇವನ ಪಾತ್ರವನ್ನು 'ವಾಯು' 'ಅನ್ನಾಯು'ನಾಮಗಳಿಂದ ಅನುಸಂಧಾನ ಮಾಡಬೇಕು. 'ವಾಯು' ಹೆಸರಿನಲ್ಲಿಯ ಆಯು ಎಂಬ ಭಾಗವು ಆಯುಷ್ಯಪ್ರದಾನವನ್ನು ತಿಳಿಸಿದರೆ, 'ಅನ್ನಾಯು' ಎಂಬ ಹೆಸರು ಅನ್ನಾಭಿಮಾನಿಯಾಗಿದ್ದು ಅನ್ನ ಎನಿಸುವ ಚತುರ್ಮುಖನಿಗೂ, ಅನ್ನಾತ್ಮಕಶರೀರವುಳ್ಳ ದೇವತೆಗಳೇ ಮುಂತಾದವರಿಗೂ ಆಯುಷ್ಯ ಕೊಡುವವನೆಂಬ ಅರ್ಥವನ್ನೇ ಹೊಂದಿರುವುದು.

**ಇಷ್ಟವನ್ನು ಒದಗಿಸುವಲ್ಲಿ:** ಎಲ್ಲರ ಇಷ್ಟಗಳನ್ನು, ಇಚ್ಛೆಯ ವಿಷಯಗಳನ್ನು ಒದಗಿಸಿ ಕೊಡುವವನು ವಾಯುದೇವ.[54] ಎಲ್ಲರ ಇಷ್ಟವನ್ನು ನೀಡುವವನೆಂಬುದಕ್ಕಾಗಿಯೇ 'ಇಂದು' ಎನಿಸುವನು.

ನಾವು ಇಷ್ಟವಾದುದನ್ನು ಹೊಂದಬೇಕಾದಲ್ಲಿ ಅಥವಾ ಇಷ್ಟವಾದುದನ್ನು ಹೊಂದುವಲ್ಲಿ ಮುಖ್ಯಪ್ರಾಣನ ಪಾತ್ರವನ್ನು ವಿವೇಚಿಸಿಕೊಂಡು 'ಇಂದು'ನಾಮದಿಂದ ಅದನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಐಶ್ವರ್ಯವನ್ನು ನೀಡುವಲ್ಲಿ:** ಧರ್ಮ, ಜ್ಞಾನ, ವೈರಾಗ್ಯ ಹಾಗೂ ಐಶ್ವರ್ಯ –ಎಂಬ ನಾಲ್ಕು ಗುಣಸ್ವರೂಪಿ ಆಗಿರುವ[55] ವಾಯುದೇವನ ಹಿಡಿತದಲ್ಲೇ ಐಶ್ವರ್ಯ ಇರುವುದು. ಐಶ್ವರ್ಯ ಎಂಬುದಕ್ಕೆ ಸಾಮರ್ಥ್ಯ, ಒಡೆತನ ಎಂದು ಅರ್ಥ. ತಾನು ಅಂತಹ

---

53. .........ಸೈಷೋಽನ್ನಸ್ಯ ಗ್ರಹೋ ಯದ್ ವಾಯುರನ್ನಾಯುರ್ವಾ ಏಷ ಯದ್ ವಾಯುಃ ।
– *ಐ.ಉ. 2-3-3-6.*

* ಅನ್ನಮೂರ್ತಿಂ ತತೋ ಬ್ರಹ್ಮಾ ಪ್ರಧಾನೇನೈವ ವಾಯುನಾ । ಅಪಾನಾಖ್ಯೇನಾತ್ತುಮೈಚ್ಛತ್ ತದ್ವೈವಾಶಕದಾಶು ಸಃ । ತಸ್ಮಾತ್ ಭೋಕ್ತೈಕ ಏವಾಸೌ ಸರ್ವಸ್ಯಾನ್ನಸ್ಯ ಮಾರುತಃ । ತತ್ಪ್ರಸಾದಾತ್ ಪರೇಽಶ್ನಂತಿ ಕಿಂಚಿತ್ ಕಿಂಚಿನ್ನ ಚಾಖಿಲಮ್ । ಆಯೂರೂಪೋಽಖಿಲಾನಾಂ ಚ ದೇವಾನಾಂ ವಾಯುರೇವ ಹಿ । ಅನ್ನದೇವಸ್ಯ ಚಾಽಯುಃ ಸ ತಸ್ಮಾದ್ ದೇವೋತ್ತಮೋ ಮರುತ್ । – *ಐತರೇಯಭಾಷ್ಯ.*

54. ಇಂದುರಿಷ್ಟಪ್ರದತ್ವಾದ್ ಯೋ ವಾಯುಃ ....... । – *ಐ.ಉ.ಭಾ. 2-8-4-8.*

* ಸರ್ವೇಷ್ಟದ ಜಗತ್ಪ್ರಾಣ....... । – *ಐ.ಉ.ಭಾ. 2-8-4-8.*

55. ಧರ್ಮೋ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚತುರಾತ್ಮಕಃ । ವಾಯುರ್ದೇವೋಽ ।
– *ಐ.ಉ.ಭಾ. 1-1-3.*

ಐಶ್ವರ್ಯವನ್ನೂ ವಿಶೇಷವಾಗಿ ಹೊಂದಿರುವುದಲ್ಲದೆ, ಉಳಿದ ಯೋಗ್ಯ ವ್ಯಕ್ತಿಗಳಿಗೆ 'ಐಶ್ವರ್ಯ'ವನ್ನು ಹೊಂದಿಸುವನು. ಆದ್ದರಿಂದ ಬೇರೆಬೇರೆ ಸ್ತರದಲ್ಲಿ 'ಐಶ್ವರ್ಯ'ವನ್ನು ಒಡೆತನವನ್ನು, ಹೊಂದಿ ಅನುಭವಿಸುವಾಗ, ಅಂತಹ ಐಶ್ವರ್ಯಕ್ಕೆ ಅಭಿಮಾನಿಯನ್ನಾಗಿ ವಾಯುದೇವನನ್ನೂ ಸ್ಮರಿಸಿಕೊಳ್ಳಬೇಕು.

**ಸರ್ವಪ್ರಾಣಿಗಳಲ್ಲಿ ಕರುವಿನ ರೂಪದಲ್ಲಿ:** ವಾಯುದೇವ ಸರ್ವಪ್ರಾಣಿಗಳಲ್ಲೂ ಗೋವತ್ಸರೂಪದಿಂದ, ಕರುವಿನ ರೂಪದಿಂದ ಇರುವನು.56

ಕರು ಆಕರ್ಷಣೆಯ ಪ್ರಾಣಿ. ವಾಯುದೇವ ಇಂತಹ ರೂಪದಿಂದ ಪಶುಗಳಲ್ಲಿ ಇರುವುದರಿಂದಲೇ ಹೆಚ್ಚಿನ ಪಶುಗಳು ಆಕರ್ಷಣಾರ್ಹವೆನಿಸುವವು. ಆದುದರಿಂದ ಕರುವಿನ ರೂಪದ ವಾಯುದೇವನ ಅನುಸಂಧಾನದೊಂದಿಗೆ ಇತರ ಪಶುಗಳ ಜೊತೆಗೆ ವ್ಯವಹಾರ ವನ್ನು ನಡೆಸಿದಲ್ಲಿ ಅದು ಪ್ರಾಣಾರಾಧನೆಯಾಗಿ ಪರಿಣಾಮಗೊಳ್ಳಬಲ್ಲದು.

**ಧೈರ್ಯನಿಯಾಮಕನಾಗಿ:** ದೇವತೆಗಳ ಧಾರಣೆಗಾಗಿ, ಸದ್ಗತಿಯ ಪ್ರಾಪ್ತಿಗಾಗಿ ವಾಯು ದೇವನ ರೂಪವನ್ನು ಸೃಷ್ಟಿಸಿದ ಪರಮಾತ್ಮನು, ಪ್ರಾಣಿಗಳ ಧೈರ್ಯನಿಯಾಮಕವಾಗಿಯೂ ವಾಯುದೇವನ ಒಂದು ರೂಪವನ್ನು ಸೃಷ್ಟಿಸುವನು.57

ಆದುದರಿಂದ ಮೋಕ್ಷಮಾರ್ಗದತ್ತ ಸಾಗುವಾಗ ಅದಕ್ಕೆ ಪ್ರತಿಬಂಧಕವಾದ ಶಕ್ತಿಯ ವಿರುದ್ಧ ಧೈರ್ಯ ತಾಳುವಾಗ ವಾಯುದೇವನ ಧೈರ್ಯನಿಯಾಮಕರೂಪವನ್ನು ಅನು ಸಂಧಾನಕ್ಕೆ ತಂದುಕೊಳ್ಳಬೇಕು.

ಬದರೀಕ್ಷೇತ್ರದತ್ತ ಯಾತ್ರೆಗೈಯುತ್ತಿದ್ದ ಶ್ರೀ ಮಧ್ವರು ದಾರಿಯ ಮಧ್ಯದಲ್ಲಿ ಮುಸಲ್ಮಾನ ರಾಜನೊಬ್ಬನ ಭಟರ ತೊಂದರೆಗೊಳಗಾದಾಗ, ಅದನ್ನು ಧೈರ್ಯದಿಂದ ಎದುರಿಸಿ, ಅವರ ಆ ಬಗೆಯ ಧೈರ್ಯವನ್ನು ಕಂಡೇ ಆ ರಾಜ ಅವರಿಗೆ ಶರಣಾಗತನಾಗುವಂತೆ ನಡೆದ ಘಟನೆಯನ್ನು ಸಾತ್ತ್ವಿಕ ಧೈರ್ಯಗುಣಕ್ಕೆ ಪೂರಕವಾಗಿ ಚಿಂತಿಸಬೇಕು.

**ಮಳೆ ಬರಿಸುವಿಕೆಯಲ್ಲಿ:** ಷಟ್‌ಪ್ರಶ್ನೋಪನಿಷತ್ತಿನಲ್ಲಿ ಪ್ರಸ್ತುತಪಡಿಸಿರುವಂತೆ ಸ್ಪರ್ಧೆ ಯಲ್ಲಿ ಸೋತ ದೇವತೆಗಳು ವಾಯುದೇವನನ್ನು ಸ್ತುತಿಸುತ್ತ– ವಾಯುದೇವನೇ ನಿಜವಾದ ಪರ್ಜನ್ಯ –ಎನ್ನುವ ಮೂಲಕ58 ಪರ್ಜನ್ಯ ಎನಿಸುವ ಭಗವಂತನಿಗೆ59 ಪ್ರತಿಮೆಯಾಗಿರು ವುದಲ್ಲದೆ, ಮೋಡ ಹಾಗೂ ಅದನ್ನು ನಿಯಂತ್ರಿಸುವ ದೇವೇಂದ್ರಾದಿಗಳನ್ನು ನಿಯಂತ್ರಿಸಿ ಮಳೆ ಸುರಿಸುವ ಮೂಲಕ ಒಳ್ಳೆಯ ಸಸ್ಯಗಳ ಉತ್ಪತ್ತಿಗೆ ಕಾರಣನಾಗಿರುವವನು

56. ವಾಯುಃ ಗೋವತ್ಸರೂಪೇಣ ಸರ್ವಪ್ರಾಣಿಷು ಸಂಸ್ಥಿತಃ । – *ಬೃ.ಉ.ಭಾ. 4-2-1.*

57. ಪ್ರಾಣಿನಾಂ ಧೈರ್ಯರೂಪಂ ಚ ವಾಯೋಃ ರೂಪಾಂತರಂ ಪುನಃ । ಸಸರ್ಜ...... ।
– *ನಾರದೀಯ (ಬೃ.ಉ.ಭಾ. 3-5-1).*

58. ತೇ ಪ್ರೀತಾಃ ಪ್ರಾಣಂ ಸ್ತುವಂತಿ..... । ಏಷ ಪರ್ಜನ್ಯಃ ....... । – *ಷ.ಉ. 2-1-10.*

59. ಪರಂ ಜನಯತೀತಿ ಪರ್ಜನ್ಯನಾಮಾ ವಿಷ್ಣುಃ । – *ಐ.ಉ.ಭಾ. 2-7-2-1.*

**ಆಯುಷ್ಯದ ನಿಯಂತ್ರಣದಲ್ಲಿ:** ಅಪಾನನಾಮಕನಾದ ಮುಖ್ಯವಾಯುವಿನಿಂದಾಗಿಯೇ ಚತುರ್ಮುಖನು ತನ್ನ ಅನ್ನರೂಪವಾದ ಶರೀರವನ್ನು ಭೋಗಿಸಲು ಶಕ್ತನಾದನು. ರುದ್ರಾದಿಗಳೂ, ಇಂದ್ರಾದಿಗಳೂ ಅವನ ಅನುಗ್ರಹದಿಂದಾಗಿಯೇ ಭೋಗ್ಯಪದಾರ್ಥಗಳನ್ನು ಭೋಗಿಸುವರೆಂದು ತಿಳಿಸಿ,[53] ಅಂತಹ ಅನ್ನದಿಂದಾಗಿ ಶರೀರವುಳ್ಳವರಿಗೆ ಆಯುಷ್ಯವನ್ನು ನೀಡುವವನೂ ವಾಯುವೇ ಎನ್ನಲಾಗಿದೆ. ಅನ್ನದೇವನಾದ ಚತುರ್ಮುಖನಿಗೂ ಆಯುಷ್ಯವನ್ನು ನೀಡುವವನು ವಾಯುದೇವ.

ಆದ್ದರಿಂದ ನಾವು ಕೂಡಾ ಅನ್ನವುಂಡು ಆಯುಷ್ಯ ಪಡೆದಿರುವಲ್ಲಿ ವಾಯುದೇವನ ಪಾತ್ರವನ್ನು 'ವಾಯು' 'ಅನ್ನಾಯು'ನಾಮಗಳಿಂದ ಅನುಸಂಧಾನ ಮಾಡಬೇಕು. 'ವಾಯು' ಹೆಸರಿನಲ್ಲಿಯ ಆಯು ಎಂಬ ಭಾಗವು ಆಯುಷ್ಯಪ್ರದಾನವನ್ನು ತಿಳಿಸಿದರೆ, 'ಅನ್ನಾಯು' ಎಂಬ ಹೆಸರು ಅನ್ನಾಭಿಮಾನಿಯಾಗಿದ್ದು ಅನ್ನ ಎನಿಸುವ ಚತುರ್ಮುಖನಿಗೂ, ಅನ್ನಾತ್ಮಕಶರೀರವುಳ್ಳ ದೇವತೆಗಳೇ ಮುಂತಾದವರಿಗೂ ಆಯುಷ್ಯ ಕೊಡುವವನೆಂಬ ಅರ್ಥವನ್ನೇ ಹೊಂದಿರುವುದು.

**ಇಷ್ಟವನ್ನು ಒದಗಿಸುವಲ್ಲಿ:** ಎಲ್ಲರ ಇಷ್ಟಗಳನ್ನು, ಇಚ್ಛೆಯ ವಿಷಯಗಳನ್ನು ಒದಗಿಸಿ ಕೊಡುವವನು ವಾಯುದೇವ.[54] ಎಲ್ಲರ ಇಷ್ಟವನ್ನು ನೀಡುವವನೆಂಬುದಕ್ಕಾಗಿಯೇ 'ಇಂದು' ಎನಿಸುವನು.

ನಾವು ಇಷ್ಟವಾದುದನ್ನು ಹೊಂದಬೇಕಾದಲ್ಲಿ ಅಥವಾ ಇಷ್ಟವಾದುದನ್ನು ಹೊಂದುವಲ್ಲಿ ಮುಖ್ಯಪ್ರಾಣನ ಪಾತ್ರವನ್ನು ವಿವೇಚಿಸಿಕೊಂಡು 'ಇಂದು'ನಾಮದಿಂದ ಅದನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಐಶ್ವರ್ಯವನ್ನು ನೀಡುವಲ್ಲಿ:** ಧರ್ಮ, ಜ್ಞಾನ, ವೈರಾಗ್ಯ ಹಾಗೂ ಐಶ್ವರ್ಯ –ಎಂಬ ನಾಲ್ಕು ಗುಣಸ್ವರೂಪಿ ಆಗಿರುವ[55] ವಾಯುದೇವನ ಹಿಡಿತದಲ್ಲೇ ಐಶ್ವರ್ಯ ಇರುವುದು. ಐಶ್ವರ್ಯ ಎಂಬುದಕ್ಕೆ ಸಾಮರ್ಥ್ಯ, ಒಡೆತನ ಎಂದು ಅರ್ಥ. ತಾನು ಅಂತಹ

---

53. .........ಸೈಷೋಽನ್ನಸ್ಯ ಗ್ರಹೋ ಯದ್ ವಾಯುರನ್ನಾಯುರ್ವಾ ಏಷ ಯದ್ ವಾಯುಃ ।
– *ಐ.ಉ. 2-3-3-6.*

* ಅನ್ನಮೂರ್ತಿಂ ತತೋ ಬ್ರಹ್ಮಾ ಪ್ರಧಾನೇನೈವ ವಾಯುನಾ । ಅಪಾನಾಖ್ಯೇನಾತ್ತುಮೈಚ್ಛತ್ ತದ್ವೈವಾಶಕದಾಶು ಸಃ । ತಸ್ಮಾತ್ ಭೋಕ್ತೈಕ ಏವಾಸೌ ಸರ್ವಸ್ಯಾನ್ನಸ್ಯ ಮಾರುತಃ । ತತ್ಪ್ರಸಾದಾತ್ ಪರೇಽಶ್ನಂತಿ ಕಿಂಚಿತ್ ಕಿಂಚಿನ್ನ ಚಾಖಿಲಮ್ । ಆಯೂರೂಪೋಽಖಿಲಾನಾಂ ಚ ದೇವಾನಾಂ ವಾಯುರೇವ ಹಿ । ಅನ್ನದೇವಸ್ಯ ಚಾಽಯುಃ ಸ ತಸ್ಮಾದ್ ದೇವೋತ್ತಮೋ ಮರುತ್ । – *ಐತರೇಯಭಾಷ್ಯ.*

54. ಇಂದುರಿಷ್ಟಪ್ರದತ್ವಾದ್ ಯೋ ವಾಯುಃ ....... । – *ಐ.ಉ.ಭಾ. 2-8-4-8.*

* ಸರ್ವೇಷ್ಟದ ಜಗತ್ಪ್ರಾಣ....... । – *ಐ.ಉ.ಭಾ. 2-8-4-8.*

55. ಧರ್ಮೋ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚತುರಾತ್ಮಕಃ । ವಾಯುರ್ದೇವೋಃ ।
– *ಐ.ಉ.ಭಾ. 1-1-3.*

ಐಶ್ವರ್ಯವನ್ನೂ ವಿಶೇಷವಾಗಿ ಹೊಂದಿರುವುದಲ್ಲದೆ, ಉಳಿದ ಯೋಗ್ಯ ವ್ಯಕ್ತಿಗಳಿಗೆ 'ಐಶ್ವರ್ಯ'ವನ್ನು ಹೊಂದಿಸುವನು. ಆದ್ದರಿಂದ ಬೇರೆಬೇರೆ ಸ್ತರದಲ್ಲಿ 'ಐಶ್ವರ್ಯ'ವನ್ನು ಒಡೆತನವನ್ನು, ಹೊಂದಿ ಅನುಭವಿಸುವಾಗ, ಅಂತಹ ಐಶ್ವರ್ಯಕ್ಕೆ ಅಭಿಮಾನಿಯನ್ನಾಗಿ ವಾಯುದೇವನನ್ನೂ ಸ್ಮರಿಸಿಕೊಳ್ಳಬೇಕು.

**ಸರ್ವಪ್ರಾಣಿಗಳಲ್ಲಿ ಕರುವಿನ ರೂಪದಲ್ಲಿ:** ವಾಯುದೇವ ಸರ್ವಪ್ರಾಣಿಗಳಲ್ಲೂ ಗೋವತ್ಸರೂಪದಿಂದ, ಕರುವಿನ ರೂಪದಿಂದ ಇರುವನು.[56]

ಕರು ಆಕರ್ಷಣೆಯ ಪ್ರಾಣಿ. ವಾಯುದೇವ ಇಂತಹ ರೂಪದಿಂದ ಪಶುಗಳಲ್ಲಿ ಇರುವುದರಿಂದಲೇ ಹೆಚ್ಚಿನ ಪಶುಗಳು ಆಕರ್ಷಣಾರ್ಹವೆನಿಸುವವು. ಆದುದರಿಂದ ಕರುವಿನ ರೂಪದ ವಾಯುದೇವನ ಅನುಸಂಧಾನದೊಂದಿಗೆ ಇತರ ಪಶುಗಳ ಜೊತೆಗೆ ವ್ಯವಹಾರ ವನ್ನು ನಡೆಸಿದಲ್ಲಿ ಅದು ಪ್ರಾಣಾರಾಧನೆಯಾಗಿ ಪರಿಣಾಮಗೊಳ್ಳಬಲ್ಲದು.

**ಧೈರ್ಯನಿಯಾಮಕನಾಗಿ:** ದೇವತೆಗಳ ಧಾರಣೆಗಾಗಿ, ಸದ್ಗತಿಯ ಪ್ರಾಪ್ತಿಗಾಗಿ ವಾಯು ದೇವನ ರೂಪವನ್ನು ಸೃಷ್ಟಿಸಿದ ಪರಮಾತ್ಮನು, ಪ್ರಾಣಿಗಳ ಧೈರ್ಯನಿಯಾಮಕವಾಗಿಯೂ ವಾಯುದೇವನ ಒಂದು ರೂಪವನ್ನು ಸೃಷ್ಟಿಸುವನು.[57]

ಆದುದರಿಂದ ಮೋಕ್ಷಮಾರ್ಗದತ್ತ ಸಾಗುವಾಗ ಅದಕ್ಕೆ ಪ್ರತಿಬಂಧಕವಾದ ಶಕ್ತಿಯ ವಿರುದ್ಧ ಧೈರ್ಯ ತಾಳುವಾಗ ವಾಯುದೇವನ ಧೈರ್ಯನಿಯಾಮಕರೂಪವನ್ನು ಅನು ಸಂಧಾನಕ್ಕೆ ತಂದುಕೊಳ್ಳಬೇಕು.

ಬದರೀಕ್ಷೇತ್ರದತ್ತ ಯಾತ್ರೆಗೈಯುತ್ತಿದ್ದ ಶ್ರೀ ಮಧ್ವರು ದಾರಿಯ ಮಧ್ಯದಲ್ಲಿ ಮುಸಲ್ಮಾನ ರಾಜನೊಬ್ಬನ ಭಟರ ತೊಂದರೆಗೊಳಗಾದಾಗ, ಅದನ್ನು ಧೈರ್ಯದಿಂದ ಎದುರಿಸಿ, ಅವರ ಆ ಬಗೆಯ ಧೈರ್ಯವನ್ನು ಕಂಡೇ ಆ ರಾಜ ಅವರಿಗೆ ಶರಣಾಗತನಾಗುವಂತೆ ನಡೆದ ಘಟನೆಯನ್ನು ಸಾತ್ತ್ವಿಕ ಧೈರ್ಯಗುಣಕ್ಕೆ ಪೂರಕವಾಗಿ ಚಿಂತಿಸಬೇಕು.

**ಮಳೆ ಬರಿಸುವಿಕೆಯಲ್ಲಿ:** ಷಟ್‌ಪ್ರಶ್ನೋಪನಿಷತ್ತಿನಲ್ಲಿ ಪ್ರಸ್ತುತಪಡಿಸಿರುವಂತೆ ಸ್ಪರ್ಧೆ ಯಲ್ಲಿ ಸೋತ ದೇವತೆಗಳು ವಾಯುದೇವನನ್ನು ಸ್ತುತಿಸುತ್ತ– ವಾಯುದೇವನೇ ನಿಜವಾದ ಪರ್ಜನ್ಯ –ಎನ್ನುವ ಮೂಲಕ[58] ಪರ್ಜನ್ಯ ಎನಿಸುವ ಭಗವಂತನಿಗೆ[59] ಪ್ರತಿಮೆಯಾಗಿರು ವುದಲ್ಲದೆ, ಮೋಡ ಹಾಗೂ ಅದನ್ನು ನಿಯಂತ್ರಿಸುವ ದೇವೇಂದ್ರಾದಿಗಳನ್ನು ನಿಯಂತ್ರಿಸಿ ಮಳೆ ಸುರಿಸುವ ಮೂಲಕ ಒಳ್ಳೆಯ ಸಸ್ಯಗಳ ಉತ್ಪತ್ತಿಗೆ ಕಾರಣನಾಗಿರುವವನು

---

56. ವಾಯುಃ ಗೋವತ್ಸರೂಪೇಣ ಸರ್ವಪ್ರಾಣಿಷು ಸಂಸ್ಥಿತಃ । – *ಬೃ.ಉ.ಭಾ. 4-2-1.*

57. ಪ್ರಾಣಿನಾಂ ಧೈರ್ಯರೂಪಂ ಚ ವಾಯೋಃ ರೂಪಾಂತರಂ ಪುನಃ । ಸಸರ್ಜ...... ।
– *ನಾರದೀಯ (ಬೃ.ಉ.ಭಾ. 3-5-1).*

58. ತೇ ಪ್ರೀತಾಃ ಪ್ರಾಣಂ ಸ್ತುವಂತಿ..... । ಏಷ ಪರ್ಜನ್ಯಃ ....... । – *ಪ.ಉ. 2-1-10.*

59. ಪರಂ ಜನಯತೀತಿ ಪರ್ಜನ್ಯನಾಮಾ ವಿಷ್ಣುಃ । – *ಐ.ಉ.ಭಾ. 2-7-2-1.*

ವಾಯುದೇವ ಎಂದು ಅಭಿಪ್ರಾಯಪಟ್ಟಿರುವರು. ಅಲ್ಲದೆ, ಪ್ರಾಣ ಮಳೆ ಸುರಿಸುವಾಗ ಪ್ರಜೆಗಳೆಲ್ಲ ಸಂತೋಷಪಡುವರು. ಒಳ್ಳೆಯ ಬೆಳೆ ಬಂದು ಸಾಕಷ್ಟು ಆಹಾರ ದೊರಕುವುದೆಂದೂ ದೇವತೆಗಳು ಸ್ತುತಿಸುವರು.60 ಸಮುದ್ರದಲ್ಲಿ ನದ್ಯಭಿಮಾನಿ ದೇವತೆಗಳಿಗೂ ತಮ್ಮತಮ್ಮ ನೀರಿನ ಪ್ರತ್ಯೇಕತೆ ತಿಳಿಯುವುದಿಲ್ಲ. ಆದರೆ, ವಾಯುದೇವ ಮಾತ್ರ ಅದನ್ನು ಪ್ರತ್ಯೇಕ ಪ್ರತ್ಯೇಕವಾಗಿ ವಿವೇಚಿಸಿಕೊಂಡು ಆಯಾ ಸ್ಥಳದ ಮೇಘದಲ್ಲಿ ತುಂಬಿಸಿ ಅಲ್ಲಲ್ಲಿಗೆ ಮಳೆ ಬರುವಂತೆ ಮಾಡುವನು.61

ಆದುದರಿಂದ ಮಳೆ ಸುರಿಯುತ್ತಿರುವಾಗ ಹಾಗೂ ಸುರಿದ ಮಳೆಯಿಂದಾಗಿ ಸಸ್ಯಗಳು ಹುಟ್ಟಿಕೊಂಡಾಗ, ಚಿಗುರಿಕೊಂಡಾಗ ಅದರಲ್ಲಿ ವಾಯುದೇವನ ಪಾತ್ರವನ್ನು 'ಪರ್ಜನ್ಯ' 'ವೃಷಭ' ಮುಂತಾದ ನಾಮಗಳಿಂದ ಅನುಸಂಧಾನಕ್ಕೆ ತಂದುಕೊಳ್ಳಬಹುದು. ಶ್ರೇಷ್ಠವಾದ ಸಸ್ಯಾದಿಗಳು ಯಾರಿಂದ ಜನ್ಯವಾಗುವವೋ (**'ಪರಂ ಜನ್ಯಂ ಸಸ್ಯಾದ್ಯಂ ಯಸ್ಮಾತ್ ಸಃ'**) ಅಂತಹವನು 'ಪರ್ಜನ್ಯ' ಎನಿಸಿದರೆ ನೀರನ್ನು ಮಳೆಯ ಮೂಲಕ ಸುರಿಸುವವನು (**'ವರ್ಷತೀತಿ ವೃಷಭಃ'**) ಎಂಬ ಅರ್ಥದಲ್ಲಿ ವೃಷಭ ಎನಿಸುವನು.

**ಗುಡುಗುಸಿಡಿಲಿನ ನಿಯಂತ್ರಣ:** ಮೋಡಗಳಲ್ಲಿ ನೀರು ತುಂಬಿಸುವ ವಾಯುದೇವನೇ ಹಾಗೆ ನೀರಿನಿಂದ ತುಂಬಿದ ಮೋಡಗಳಿಂದ ಪರಸ್ಪರ ತಿಕ್ಕಾಟಕ್ಕೆ ಒಳಗಾಗಿ ಗುಡುಗು ಸಿಡಿಲುಗಳು ಹೊರಡುವಂತೆ ಮಾಡುವನು. ಗುಡುಗಿನಲ್ಲಿ 'ಸ್ತನಯಿತ್ನು'ನಾಮಕನಾಗಿ ವಾಯುದೇವ ಇರುವನು –ಎಂದು ಬೃಹದಾರಣ್ಯಕ ಘೋಷಿಸಿದೆ.62

ಆದ್ದರಿಂದ ಗುಡುಗುಸಿಡಿಲು ಬರುವಾಗ 'ಸ್ತನಯಿತ್ನು' ನಾಮಕ ವಾಯುವಿನ ಪಾತ್ರವನ್ನು ವಿವೇಚಿಸಿಕೊಳ್ಳಬೇಕು.

**ಅಲಂಕಾರಸ್ವರ್ಣದಲ್ಲಿ ಪಾತ್ರ:** ಉದ್ಗಾತೃವಿನ ಸ್ವರಕ್ಕೆ ಅಭಿಮಾನಿಯಾಗಿ ಅಲ್ಲಿರುವ ವಾಯುದೇವನೇ ಅಲಂಕಾರರೂಪವಾದ ಸ್ವರ್ಣಕ್ಕೆ ಅಭಿಮಾನಿ ಎನ್ನಲಾಗಿದೆ.63

ಆದ್ದರಿಂದ ಸುವರ್ಣದ ಆಭರಣವನ್ನು ತಾನಾಗಲೀ, ಇತರರಾಗಲೀ ಧರಿಸಿರುವಾಗ ಅದರಲ್ಲಿ ಅಭಿಮಾನಿಯಾಗಿ ವಾಯುದೇವನ ಸನ್ನಿಧಾನವನ್ನು ಚಿಂತಿಸಬೇಕು.

ಅಲ್ಲದೆ, ಪ್ರತಿನಿತ್ಯ ಪೂಜಾಕಾಲದಲ್ಲಿ ಪದ್ಯಮಾಲಾದಲ್ಲಿ ತಿಳಿಸಿರುವಂತೆ64 ಒಂದು ನೂತನವಾದ ಭೂಷಣವನ್ನು ಅರ್ಪಿಸಬೇಕಾಗಿದ್ದು, ಆ ಸಂದರ್ಭದಲ್ಲಿ ಆ ಭೂಷಣದಲ್ಲಿ

---

60. ಯದಾ ತ್ವಮಭಿವರ್ಷಸ್ಯಥೇಮಾಃ ಪ್ರಾಣ ತೇ ಪ್ರಜಾಃ ।
ಆನಂದರೂಪಾಸ್ತಿಷ್ಠಂತಿ ಕಾಮಾಯಾನ್ನಂ ಭವಿಷ್ಯತೀತಿ । – *ಪ.ಉ.ಭಾ. 2-1-14.*

61. ಸ್ವಕೀಯಮುದಕಂ ನದ್ಯಃ ಸಮುದ್ರೇ ನೈವ ಜಾನತೇ ।
ವಾಯುಸ್ತು ತತ್ ಪೃಥಗ್ ಜ್ಞಾತ್ವಾ ಮೇಘೇ ಕೃತ್ವಾ ಪ್ರವರ್ಷತಿ ॥
– *ಅಥ.ಉ.ಭಾ. 4-1-8.*

62. ಅಯಂ ಸ್ತನಯಿತ್ನುಃ....... । – *ಬೃ.ಉ. 4-5-9.*

63. ಭೂಷಣಸ್ವರ್ಣರೂಪೀ ಚ ಸ ಏವಾಪಿ ಸ್ವರಸ್ಥಿತಃ । – *ಬೃ.ಉ.ಭಾ. 3-3-26.*

64. ........ಭೂಷಣಂ ಕಿಂಚಿನ್ನವಮರ್ಪಯೇತ್ ಸುಧೀಃ । – *ಪ.ಮಾ. 79.*

ವಾಯುದೇವನ ಸನ್ನಿಧಾನವನ್ನು ಚಿಂತಿಸುತ್ತ, ಭೂಷಣದ ಅರ್ಪಣೆ ಎಂದರೆ ವಾಯು ದೇವನ ಅರ್ಪಣೆ ಎಂಬ ಅನುಸಂಧಾನ ತಂದುಕೊಳ್ಳಬೇಕು.

**ಸೌಹಾರ್ದವನ್ನು ಸ್ಥಾಪಿಸುವುದರಲ್ಲಿ:** ಎಲ್ಲ ಚೇತನಗಳೂ ಪರಸ್ಪರ ಸೌಹಾರ್ದದಿಂದ ಇರುವಂತೆ ಮಾಡುವುದರಿಂದ ಮುಖ್ಯಪ್ರಾಣನು 'ಸಾಮ' ಎನಿಸುವನೆಂದು ತಿಳಿಸುವ ಉಪನಿಷತ್ತು ಹೀಗೆ ಸಾಮನಾಮದಿಂದ ವಾಯುದೇವನನ್ನು ಉಪಾಸನೆ ಮಾಡುವವರನ್ನೂ ಎಲ್ಲರೂ ಸೌಹಾರ್ದದಿಂದ ಕಾಣುವರು. ಯಾರೂ ವಿರೋಧಿಸುವುದಿಲ್ಲ. ಅವನ ಶ್ರೇಷ್ಠತೆ ಯನ್ನು ಒಪ್ಪಿಕೊಳ್ಳುವರು –ಎಂದು ಸಾಮ ಉಪಾಸನೆಯ ಫಲಶ್ರುತಿಯನ್ನೂ ಪ್ರಸ್ತುತ ಪಡಿಸಿದೆ.65

ತನ್ನ ಮನೆಯಲ್ಲಾಗಲೀ, ಸಂಸ್ಥೆಯಲ್ಲಾಗಲೀ, ಸಮಾಜದಲ್ಲಾಗಲೀ ಸೌಹಾರ್ದದಿಂದ ಇದ್ದಲ್ಲಿ ಅಲ್ಲಿ ಸಾಮನಾಮಕ ವಾಯುದೇವನ ಅನುಸಂಧಾನ ನಡೆಸಬೇಕು.

**ಅಪಾಯದಿಂದ ಪಾರು ಮಾಡುವಲ್ಲಿ:** ಮುಖ್ಯಪ್ರಾಣನು ಜೀವನನ್ನು ಅಪಾಯ ದಿಂದ ಪಾರು ಮಾಡುವುದರಿಂದಾಗಿ 'ಕ್ಷತ್ರ' ಎನಿಸುವನೆಂದು ತಿಳಿಸಿರುವ ಉಪನಿಷತ್ತು ಹೀಗೆ ಮುಖ್ಯಪ್ರಾಣನನ್ನು 'ಕ್ಷತ್ರ' ಎಂದು ಉಪಾಸನೆ ನಡೆಸುವುದರಿಂದಾಗಿ ಮುಖ್ಯ ಪ್ರಾಣನಿಂದಲೇ ರಕ್ಷಣೆ ಪಡೆಯುವನು. ಅಂತಹವನು ಬೇರೆಯವರಿಂದ ರಕ್ಷಣೆ ಪಡೆಯ ಬೇಕಾದ ಆವಶ್ಯಕತೆ ಇಲ್ಲ –ಎಂದು ತಿಳಿಸಿದೆ.66

ಆದ್ದರಿಂದ ಜೀವನದಲ್ಲಿ ಅಪಘಾತ, ರೋಗ, ಪ್ರಾಕೃತಿಕವಿಪತ್ತು ಮುಂತಾದ ಬೇರೆ ಬೇರೆ ಬಗೆಯ ಅಪಾಯಗಳಿಂದ ಪಾರಾಗುವ ಸಂದರ್ಭಗಳಲ್ಲಿ 'ಕ್ಷತ್ರ'ನಾಮಕ ವಾಯು ದೇವನ ಅನುಸಂಧಾನ ನಡೆಸಬೇಕು.

**ಆಸುರೀಶಕ್ತಿಗಳನ್ನು ಹಾಗೂ ತತ್ಪ್ರಯುಕ್ತ ದುರ್ವಿಚಾರಗಳನ್ನು ಭಂಗಪಡಿಸುವಲ್ಲಿ:** ಶ್ರೀರಾಘವೇಂದ್ರ ಗುರುಗಳ 'ಪ್ರಾತಃಸಂಕಲ್ಪಗದ್ಯ'ದಲ್ಲಿ ಸೂಚಿತವಾಗಿರುವಂತೆ67 ಅನ್ವರ್ಥಕ ವಾಗಿ ಪ್ರಭಂಜನ ಎನಿಸಿರುವ ವಾಯುದೇವನು ಸತ್ಕಾರ್ಯಗಳನ್ನು ಕೆಡಿಸಯತ್ನಿಸುವ

---

65. ಪ್ರಾಣೋ ವೈ ಸಾಮ ಪ್ರಾಣೇ ಹೀಮಾನಿ ಸರ್ವಾಣಿ ಭೂತಾನಿ ಸಮ್ಯಂ ಚಿ ಸಮ್ಯಂಚಿ ಹ ಅಸ್ಮೈ ಸರ್ವಾಣಿ ಭೂತಾನಿ ಶ್ರೈಷ್ಠ್ಯಾಯ ಕಲ್ಪಂತೇ । *– ಬೃ.ಉ. 7-17-1.*

* '.......ಸಮ್ಯಕ್ಸಂಕರಣಾತ್ ಸರ್ವೇಷಾಂ ಸಾಮ ಚ ಪ್ರೋಕ್ತೋ ವಾಯುರೇವ ಜ್ಞಾನತತ್ತ್ವಭಾ।

66. ಪ್ರಾಣೋ ವೈ ಕ್ಷತ್ರಂ ಪ್ರಾಣೋ ಹಿ ವೈ ಕ್ಷತ್ರಂ ತ್ರಾಯತೇ ಹೈನಂ ಪ್ರಾಣಃ ಕ್ಷಣಿತೋಃ ಪ್ರ ಕ್ಷತ್ರಮತ್ರಮಾಪ್ನೋತಿ..... । *– ಬೃ.ಉ. 7-18.*

* .........ಕ್ಷತಾತ್ ತ್ರಾಣಾತ್ ಕ್ಷತ್ರಂ..... ಸರ್ವೇಷಾಂ ..... ಪ್ರೋಕ್ತೋ ವಾಯುರೇವ ಜಗತ್ಪತಿಃ । *– ಬೃ.ಉ.ಭಾ.*

67. ........ಸರ್ವತಾತ್ವಿಕಾಸುರಭಂಜಕೇನ ತಥಾ ತತ್ಪ್ರೇರಣಾಪ್ರಯುಕ್ತಾ ಶೇಷ ದುರ್ಮತಭಂಜ ಕೇನ ಅತ ಏವ ಪ್ರಭಂಜನಶಬ್ದವಾಚ್ಯೇನ........ । *– ಪ್ರಾತಃಸಂಕಲ್ಪಗದ್ಯ.*

ಆಸುರೀಶಕ್ತಿಗಳನ್ನು ಭಂಗಪಡಿಸುವನು. ಅಂತಹ ಆಸುರೀಶಕ್ತಿಗಳ ಪ್ರೇರಣೆಯ ಮೂಲಕ ಹರಡುವ ದುರ್ವಿಚಾರಗಳನ್ನೂ ತಡೆಯುವನು.

ಆಸುರೀಶಕ್ತಿಗಳ ಆಕ್ರಮಣ ನಮಗೆ ಪ್ರತ್ಯಕ್ಷವಾಗಿ ಕಾಣಸಿಗದು. ಆದರೆ ಅದರ ದುಷ್ಫಲಗಳು ಅನುಭವವೇದ್ಯ. ದೇವರ, ಧರ್ಮದ, ಗುರುಹಿರಿಯರ ವಿರುದ್ಧ ಕೆಟ್ಟ ಚಿಂತನೆಗಳು, ಅವಿಶ್ವಾಸ, ಕಾಮ, ರಾಗ ಇತ್ಯಾದಿ ದೋಷಗಳು –ಇವೆಲ್ಲ ಆಸುರೀಶಕ್ತಿಗಳ ಪ್ರಭಾವದಿಂದಲೇ ಕಾಣಿಸುವವು. ಇವುಗಳ ಉಪಶಮನ ಆಗಬೇಕೆಂದರೆ '**ಅಖಣಾಶ್ಮಸಮ**' –ಎನಿಸಿ ದುಷ್ಟಶಕ್ತಿಗಳನ್ನು ಎದುರಿಸುವಲ್ಲಿ ಬಂಡೆಗಲ್ಲಿನಂತಹ ದೃಢವಾದ ವ್ಯಕ್ತಿತ್ವವುಳ್ಳ, ದುಷ್ಟಶಕ್ತಿಗಳನ್ನು ಬಗ್ಗುಬಡಿಯುವ ಪ್ರಯುಕ್ತವಾಗಿಯೇ 'ಪ್ರಭಂಜನ' ಎನಿಸುವ ವಾಯು ದೇವನ ಅನುಸಂಧಾನ ಮಾಡುತ್ತಿರಬೇಕು.

ವಾಯುದೇವ ತನ್ನ ಆಂಜನೇಯ ಹಾಗೂ ಭೀಮ ಅವತಾರಗಳಲ್ಲಿ ಆಸುರೀಶಕ್ತಿಗಳ ವಿರುದ್ಧ ಕಾದಾಡಿ ಜಯಿಸಿದ್ದನ್ನೂ, ಮಧ್ವಾವತಾರದಲ್ಲಿ ದುರ್ವಿಚಾರಗಳ ವಿರುದ್ಧ ಕಾದಾಡಿ ಜಯಿಸಿದ್ದನ್ನೂ ಅನುಸಂಧಾನಕ್ಕೆ ತಂದುಕೊಳ್ಳಬೇಕು.

## ಎಲ್ಲವೂ ವ್ಯವಸ್ಥಿತವಾಗಿ ಸಂಯೋಜಿಸಲ್ಪಟ್ಟಿರುವುದರಲ್ಲಿ:

ಶ್ರೀಕೃಷ್ಣನು ಹಗ್ಗದ ಆಧಾರದಲ್ಲಿ ಮಣಿಗಳು ಹೇಗೆ ಪೋಣಿಸಲ್ಪಟ್ಟಿರುವವೋ ಹಾಗೆ ಎಲ್ಲವೂ –ಅಂದರೆ, ಬ್ರಹ್ಮಾಂಡದ ಹಾಗೂ ಪಿಂಡಾಂಡದ ಪ್ರತಿಯೊಂದು ವಸ್ತುವೂ, ಘಟನೆಯೂ ತನ್ನ ಆಧಾರದಲ್ಲಿ ಓತಪ್ರೋತವಾಗಿದೆ –ಎಂದು ಸಂದೇಶ ನೀಡಿರುವನು.[68] ಹೀಗೆ ಬ್ರಹ್ಮಾಂಡದಲ್ಲಾಗಲೀ, ಪಿಂಡಾಂಡದಲ್ಲಾಗಲೀ ವ್ಯವಸ್ಥಿತವಾಗಿ, ಒಂದಕ್ಕೊಂದು ಪೂರಕವಾಗಿ ಸಂಯೋಜಿಸಲ್ಪಟ್ಟಿರುವುದರಲ್ಲಿ ಭಗಂತನದ್ದು ಪ್ರಧಾನಪಾತ್ರವಾದರೆ, ಅವನ ನಿಯೋಜನೆಗೆ, ಪ್ರೇರಣೆಗೆ ಅನುಗುಣವಾಗಿ ಅದನ್ನು ಕಾರ್ಯಗತಗೊಳಿಸುವವನು ಮುಖ್ಯ ಪ್ರಾಣ.

'ಸೂತ್ರ' ಎನಿಸುವ ಮುಖ್ಯಪ್ರಾಣನಿಂದ ಐಹಿಕ ಹಾಗೂ ಪಾರತ್ರಿಕ ವಸ್ತುಗಳೆಲ್ಲ ಅನ್ಯೋನ್ಯವಾಗಿ ವ್ಯವಸ್ಥಿತವಾಗಿ ಸಂಯೋಜಿಸಲ್ಪಡುವವು.[69] ಹೀಗೆ ಪರಸ್ಪರವಾಗಿ ಒಂದಕ್ಕೊಂದು ಬಂಧಿಸುವುದರಿಂದಲೂ ಅವನು ವಾಯು ಎನಿಸುವನು.[70]

ಆದ್ದರಿಂದ ಬ್ರಹ್ಮಾಂಡದಲ್ಲಾಗಲೀ, ಪಿಂಡಾಂಡದಲ್ಲಾಗಲೀ ಧಾರಣೆಗೆ ಅನುಕೂಲ ವಾದ ವ್ಯವಸ್ಥೆ ಎಲ್ಲೆಲ್ಲಿ ಕಾಣಿಸುವುದೋ ಅಲ್ಲಿ ಸೂತ್ರನಾಮಕ, ವಾಯುನಾಮಕ ಮುಖ್ಯ

---

68. ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ । – *ಗೀ. 7-7.*

69. ವಾಯುನಾ ವೈ ಗೌತಮ ಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ ಭವಂತಿ । – *ಬೃ.ಉ. 5-7-1.*

* ಸ್ಯೂತಂ ಜಗದಿದಂ ಯಸ್ಮಿನ್ ಸೂತ್ರಂ ವಾಯುರಸೌ ಸ್ಮೃತಃ । – *ಬೃ.ಉ.ಭಾ.*

70. .........ವಾಯುರ್ವಯತಿ ಯಜ್ಜಗತ್ । – *ವ್ಯಾಹೃತಿತತ್ತ್ವೇ (ತೈ.ಉ.ಭಾ. 1-11)*

ಪ್ರಾಣನ ಪಾತ್ರವನ್ನು ಭಗವಂತನ ಪಾತ್ರದ ಬಳಿಕ ಸೂತ್ರ ಹಾಗೂ ವಾಯುನಾಮಗಳಿಂದಲೇ ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ದೇಹಾದಿಗಳು ಸುವ್ಯವಸ್ಥಿತವಾಗಿ ಇರುವಲ್ಲಿ:** ನಮ್ಮ ಬದುಕು ಸಾಧನಾನುಷ್ಠಾನಪರವಾಗಿ, ಸಾರ್ಥಕವಾಗಿ ಸಾಗಬೇಕೆಂದರೆ ನಮ್ಮ ಸಾಧನಾಶರೀರ, ಅದರ ಘಟಕಗಳಾದ ಪಂಚಭೂತಗಳು, ಅವುಗಳ ನಿಯಾಮಕಗಳಾದ ಅಭಿಮಾನಿದೇವತೆಗಳು, ಅಂತಃಕರಣದ ಭಾಗವಾದ ಮನಸ್ಸು, ಬುದ್ಧಿ, ಅಹಂಕಾರ –ಇವು, ಇವುಗಳ ಅಭಿಮಾನಿದೇವತೆಗಳು –ಇವರೆಲ್ಲ ಅನುಕೂಲರಾಗಿ ಇರಬೇಕು. ಇವರಲ್ಲಿ ಯಾರಾದರೂ ಒಬ್ಬಿಬ್ಬರು ತಮ್ಮ ಚಟುವಟಿಕೆಯನ್ನು ಉಪಸಂಹಾರ ಮಾಡಿದರೆಂದರೂ ನಮ್ಮ ಜೀವನ ಸ್ಥಗಿತವಾಗಿ ಬಿಡುವುದು.

ಹೀಗಾಗದಂತೆ ವಾಯುದೇವನು ನೋಡಿಕೊಳ್ಳುತ್ತಿರುತ್ತಾನೆ. ವಾಯುದೇವನು ಸಮಷ್ಟಿ ಎಂಬ ತನ್ನ ರೂಪದಿಂದ ಪ್ರತಿಯೊಂದು ದೇಹದಲ್ಲೂ ಅದರ ಘಟಕಗಳಾದ ಪಂಚಭೂತಗಳು, ಮನಸ್ಸು, ಬುದ್ಧಿ ಹಾಗೂ ಅಹಂಕಾರತತ್ತ್ವ –ಇವುಗಳ ಅಭಿಮಾನಿದೇವತೆಗಳನ್ನು ಹೊರಗಿನಿಂದಲೂ ಪ್ರೇರಿಸುತ್ತಿರುವನು. ವ್ಯಷ್ಟಿ ಎಂಬ ತನ್ನ ಮತ್ತೊಂದು ರೂಪದಿಂದ ಒಳಗಿನಿಂದಲೂ ಪ್ರೇರಿಸುತ್ತಿರುವನು.[71]

ಆದ್ದರಿಂದ ದೇಹ, ಮನಸ್ಸು, ಬುದ್ಧಿ –ಇವೆಲ್ಲ ಅನುಕೂಲಗಳಾಗಿ ಇವೆ ಎಂದರೆ ಅಲ್ಲಿ ಮುಖ್ಯಪ್ರಾಣನ ಸಮಷ್ಟಿ ಹಾಗೂ ವ್ಯಷ್ಟಿರೂಪಗಳ ಅನುಸಂಧಾನವನ್ನು ತಂದುಕೊಳ್ಳಬೇಕು.

**ಮರಣಕಾಲದಲ್ಲಿ ಜೀವನ ಜೊತೆಗೆ ಪಯಣ:** ಜೀವನು ತನ್ನ ದೇಹತ್ಯಾಗರೂಪವಾದ ಮರಣಕ್ಕೆ ಒಳಗಾಗುವಾಗ ಅವನ ಜೊತೆಗೆ ಪರಮಾತ್ಮನನ್ನು ಅನುಸರಿಸಿ ರಮಾದೇವಿ, ಚತುರ್ಮುಖ, ಗರುಡ –ಇವರಂತೆ ವಾಯುದೇವನೂ ಪ್ರಾಣವಾಯುವಿಗೆ ಒಡೆಯನಾಗಿಯೂ, ಆ ಜೀವನ ಜ್ಞಾನಕ್ಕೆ ಒಡೆಯನಾಗಿಯೂ ಆ ಜೀವನ ಜೊತೆಗೆ ಸಾಗುವನು.[72]

ಯಾರಾದರೂ ಮರಣಕ್ಕೊಳಗಾದಾಗ ಆ ಜೀವನ ಜೊತೆಗೆ ವಾಯುದೇವ ಎರಡು ರೂಪಗಳಿಂದ ಹೊರಟುಹೋದನೆಂದು ಅನುಸಂಧಾನಕ್ಕೆ ತಂದುಕೊಳ್ಳಬೇಕು.

---

71. ಪಂಚಭೂತಮನೋಬುದ್ಧಿರುದ್ರಾಣಾಂ ಪ್ರತಿದೇಹಕಮ್ ।
ಬಾಹ್ಯತಶ್ಚಾಪಿ ನೇತೃತ್ವಾದ್ ವಾಯುರ್ವ್ಯಷ್ಟಿಃ ಸಮಷ್ಟಿಕಃ ॥
– *ಪ್ರಭಂಜನೇ (ಭಾಗ.ತಾ.ನಿ. 11-11-43)*

* ರುದ್ರಾಂತಾನಾಂ ಸಕಲತತ್ವದೇವಾನಾಂ ಜೀವಾನಾಂ ಚ ಪ್ರತಿದೇಹಮಂತರ್ನೇತೃತ್ವಾದ್ ವ್ಯಷ್ಟಿಃ । ಬಹಿರ್ನೇತೃತ್ವಾತ್ ಸಮಷ್ಟಿರಿತ್ಯರ್ಥಃ । – *ಬ.ಗೋ.*

72. ವಾಯುರ್ಜ್ಞಾನಾತ್ಮಕಶ್ಚೈವ ಪ್ರಾಣಾತ್ಮಕ ಇತಿ ದ್ವಿಧಾ ।
ಅನುಯಾತಿ ಹೃಷೀಕೇಶಂ ಸರ್ವೈರ್ದೇವೈಃ ಸಮನ್ವಿತಃ ॥ – *ಬೃಹದ್ಭಾಷ್ಯ (6-4-2)*

ನಾವು ಸಾಯುವ ಆತುರಕಾಲದಲ್ಲಿ ನಮ್ಮ ಜೊತೆಗೆ ಪ್ರಾಣದೇವ ಅನುಸರಿಸುವುದನ್ನು ಅನುಸಂಧಾನ ಮಾಡಲಿಕ್ಕೆ ಅನುಕೂಲವಾಗುವಂತೆ ಮೊದಲೇ ಈ ಪ್ರಮೇಯವನ್ನು ದೃಢಪಡಿಸಿಕೊಂಡಿದ್ದಿರಬೇಕು.

**ಗುಣಗಳನ್ನು ಹೊಂದುವಿಕೆಯಲ್ಲಿ:** ಭಗವಂತನ ಅನುಗ್ರಹದಿಂದಾಗಿ ವಾಯುದೇವ ಗುಣಗಳನ್ನು ಹೊಂದಿದ್ದರೆ, ಭಗವಂತ ಮತ್ತು ವಾಯುದೇವನ ಅನುಗ್ರಹದಿಂದ ಭಾರತಿ ಗುಣಗಳನ್ನು ಹೊಂದುವಳು. ಭಗವಂತ, ವಾಯುದೇವ ಹಾಗೂ ಭಾರತಿ –ಇವರ ಅನುಗ್ರಹದಿಂದಾಗಿ ಶೇಷನೇ ಮುಂತಾದವರೆಲ್ಲ ತಮ್ಮತಮ್ಮ ಯೋಗ್ಯತೆಗೆ ಅನುಗುಣವಾಗಿ ಗುಣಗಳನ್ನು ಹೊಂದುವರು.[73]

ಆದ್ದರಿಂದ ನಮ್ಮಲ್ಲಿ ಕೆಲವು ಗುಣಗಳು ಕಾಣಿಸಿಕೊಳ್ಳುವಲ್ಲಿ ಹಾಗೂ ಇತರರಲ್ಲಿ ಕೆಲವು ಗುಣಗಳು ಕಾಣಿಸಿಕೊಳ್ಳುವಲ್ಲಿ ಭಗವಂತನ ಅನುಗ್ರಹದಂತೆ, ವಾಯುದೇವನ ಹಾಗೂ ಭಾರತೀದೇವಿಯ ಅನುಗ್ರಹವನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಗುಣಗಳಿಂದಾಗಿ ಶುಭಪ್ರಾಪ್ತಿಯ ಯೋಗ್ಯತೆಯನ್ನು ನಿಯಮಿಸುವಲ್ಲಿ:** ಗುಣಗಳನ್ನು ಹೊಂದಿರುವವರಲ್ಲಿ ಆಯಾ ಗುಣವನ್ನು ಹೊಂದಲಿಕ್ಕೆ ಬೇಕಾದ ಯೋಗ್ಯತೆ[74] ಹಾಗೂ ಆಯಾ ಗುಣಪ್ರಯುಕ್ತವಾದ ಶುಭವನ್ನು ಹೊಂದಲು ಬೇಕಾದ ಯೋಗ್ಯತೆ[75] 'ಔತ್ಪತ್ತಿಕಗುಣ' ಎನಿಸಿದ್ದು ಇದಕ್ಕೆ ಅಭಿಮಾನಿ ಆಗಿರುವ ವಾಯುದೇವನು ಗುಣಗಳ ಆಯಾ ಗುಣವನ್ನು ಹೊಂದಲು ಬೇಕಾದ ಯೋಗ್ಯತೆಯನ್ನು ನಿಯಂತ್ರಿಸುವಲ್ಲೂ, ಆಯಾ ಗುಣದಿಂದ ಶುಭವನ್ನು ಹೊಂದಲು ಬೇಕಾದ ಯೋಗ್ಯತೆಯನ್ನು ನಿಯಂತ್ರಿಸುವಲ್ಲೂ ಪಾತ್ರ ವಹಿಸುವನು.

ಆದ್ದರಿಂದ ಗುಣಸಂಪನ್ನ ವ್ಯಕ್ತಿಗಳಲ್ಲಿ ಬೇರೆಬೇರೆ ಸದ್ಗುಣಗಳನ್ನು ಕಾಣುವಾಗ ಅದಕ್ಕೆ ಬೇಕಾದ ಯೋಗ್ಯತೆಯನ್ನು ನಿಯಂತ್ರಿಸುವಲ್ಲಿ ವಾಯುದೇವನ ಪಾತ್ರವನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು. ಹಾಗೆಯೇ ನಮ್ಮಲ್ಲೂ ಕೆಲವು ಗುಣಗಳು ಕಾಣಿಸಿಕೊಂಡಾಗ, ಆ

---

73. ಸರ್ವೇ ಗುಣಾಸ್ತು ಪ್ರಾಣಸ್ಯ ಪರಮಾತ್ಮಪ್ರಸಾದತಃ ।
ಪ್ರಾಣವಿಷ್ಣ್ವೋರ್ವ್ಯೋಃ ಪ್ರಸಾದೇನ ಭಾರತ್ಯಾಃ ಸಂಪ್ರಕೀರ್ತಿತಾಃ ।
ಪ್ರಸಾದಾತ್ ತತ್ತ್ರಯಾಣಾಂ ಚಾಪ್ಯನಂತಾದೇಃ ಸದಾ ಗುಣಾಃ ॥
– ಇತಿ ಮಾಹಾತ್ಮ್ಯೇ (ಭಾಗ.ತಾ.ನಿ. 11-15-14)

74. ಗುಣಿನಾಂ ಗುಣಯೋಗ್ಯತ್ವಂ ಯತ್ ಸರ್ವಗುಣಿಷು ಸ್ಥಿತಮ್ ।
ವಾಯುಸ್ತದಭಿಮಾನ್ಯೇಕಃ ಸರ್ವಗುಣ್ಯಧಿಕಸ್ತತಃ ॥
– ಪ್ರಭಂಜನೇ (ಭಾಗ.ತಾ.ನಿ. 11-16-10.)

75. ಔತ್ಪತ್ತಿಕಗುಣೋ ನಾಮ ಶುಭಪ್ರಾಪ್ತ್ಯೇಕಯೋಗ್ಯತಾ ।
ತಸ್ಯಾಭಿಮಾನೀ ಪ್ರಾಣಸ್ತು ಸ ಹಿ ಸರ್ವಗುಣಾಧಿಕಃ ॥ – ಭಾಗ.ತಾ.ನಿ. 11-16-10.

ಗುಣಗಳ ಪ್ರಯುಕ್ತ ಶುಭ ಸಂಭವಿಸಿದಾಗ ಅದಕ್ಕೆ ಬೇಕಾದ ಯೋಗ್ಯತೆಯ ನಿಯಂತ್ರಣದಲ್ಲಿ ವಾಯುದೇವನನ್ನು ಸ್ಮರಿಸುತ್ತಿರಬೇಕು.

**ಅಭೀಷ್ಟಕಾರ್ಯದ ಸಿದ್ಧಿಗೆ ಸಂಬಂಧಿಸಿದಂತೆ:** ಮೊದಲು ವಾಯುದೇವನ ಉಪಾಸನೆ ನಡೆಸಿ, ಅವನನ್ನು ಚೆನ್ನಾಗಿ ಸಾಕ್ಷಾತ್ಕರಿಸಿಕೊಂಡ ಮೇಲೆ, ಅವನ ಅನುಜ್ಞೆ ಪಡೆದು ಬಳಿಕ ಅವನಲ್ಲಿರುವ ಶ್ರೀಹರಿಯನ್ನು ಸ್ಮರಿಸಿ, ಅವನನ್ನೂ ಸಾಕ್ಷಾತ್ಕರಿಸಿಕೊಳ್ಳಬೇಕು. ಮತ್ತೆ ಕಾಲಕಾಲದಲ್ಲಿ ಪುನಃಪುನಃ ಅವನನ್ನು ಸ್ಮರಿಸುತ್ತ ಇರಬೇಕು. ಅಂತಹ ವ್ಯಕ್ತಿಗೆ ನಿಶ್ಚಿತವಾಗಿ ಅಭೀಷ್ಟಕಾರ್ಯದ ಸಿದ್ಧಿ ಆಗುವುದೆಂದು 'ನಿವೃತ್ತ'ದ76 ಸಂದೇಶಕ್ಕನು ಗುಣವಾಗಿ ಅಭೀಷ್ಟಕಾರ್ಯ ಸಿದ್ಧಿಸಬೇಕಾದರೆ ಮೊದಲು ವಾಯುದೇವನ ಉಪಾಸನೆ ಆವಶ್ಯಕ.

ಆದುದರಿಂದ ನಮ್ಮ ಬದುಕಿನಲ್ಲಾಗಲೀ, ಮತ್ತೊಬ್ಬರ ಜೀವನದಲ್ಲಾಗಲೀ ಆಂಶಿಕವಾಗಿಯಾದರೂ 'ಅಭೀಷ್ಟಕಾರ್ಯಸಿದ್ಧಿ' ಆಯಿತೆಂದರೆ ಅಲ್ಲಿ ವಾಯುದೇವನ ಅನುಗ್ರಹ ಇದ್ದೇ ಇದೆ ಎಂದು ಅನುಸಂಧಾನ ನಡೆಸಬೇಕು.

**ಮಿಂಚಿನಲ್ಲಿ ಪಾತ್ರ:** 'ವಿದ್ಯುತ್ವತಿರ್ವಾಯುರೇವ.....' –ಎಂದು ಬೃಹತ್ತಂತ್ರ (ಬ್ರ.ಸೂ.ಭಾ. 4-3-6) ಭಾರತೀದೇವಿಯನ್ನು 'ವಿದ್ಯುತ್' –ಎಂದು ಕರೆದಿದ್ದರೆ, ತೈತ್ತಿರೀಯೋಪನಿಷತ್ತಿನಲ್ಲಿ ಬೇರೆಬೇರೆ ದೇವತೆಗಳಲ್ಲಿ ಭಗವಂತನ ಬೇರೆಬೇರೆ ರೂಪಗಳನ್ನು ತಿಳಿಸುತ್ತ ವಿದ್ಯುತ್ತಿನಲ್ಲಿ ಬಲನಾಮಕನಾಗಿರುವನೆಂದು ವಾಯುದೇವನನ್ನು 'ವಿದ್ಯುತ್' 'ಎಂದೇ ಕರೆಯಲಾಗಿದೆ.77 ವಿದ್ಯುತ್ತಿಗೆ ಭಾರತಿಯು ಅಭಿಮಾನಿನಿಯಾಗಿದ್ದರೆ, ಭಾರತೀಪತಿ ವಾಯುದೇವ ಅದಕ್ಕೆ ಅಭಿಮಾನಿ ಆಗಿಯೇ ತೀರುವನು.

ಆದ್ದರಿಂದ ಮಿಂಚು ಬೆಳಗುತ್ತಿರುವಾಗ ಅದನ್ನು ಅಭಿಮಾನಿಯಾಗಿ ವಾಯುದೇವನು ನಿಯಂತ್ರಿಸುತ್ತಿದ್ದರೆ, ಅವನಿಗೆ ಅದಕ್ಕೆ ಬೇಕಾದ ಬಲಪ್ರದನಾಗಿ ಭಗವಂತನಿರುವನೆಂಬ ಅನುಸಂಧಾನ ತಂದುಕೊಳ್ಳಬೇಕು. ಮಿಂಚಿನ ಹೊಡೆತದಿಂದ ಹಾನಿ ಆಗದಂತೆಯೂ ವಾಯುದೇವನನ್ನೇ ಪ್ರಾರ್ಥಿಸಿಕೊಳ್ಳಬೇಕು.

**ಅಮಾವಾಸ್ಯೆಯಂದು ವಿಶೇಷ ಸನ್ನಿಧಾನ:** ಅಮಾವಾಸ್ಯೆಯ ರಾತ್ರಿಯಲ್ಲಿ ವಾಯುದೇವನು ಪ್ರಾಣಗಳಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವನು. ಆದುದರಿಂದ ಅಮಾವಾಸ್ಯೆ

---

76. ಉಪಾಸ್ಯ ವಾಯುಂ ಪ್ರಥಮಂ ವಾಯೌ ಸುಷ್ಠಪರೋಕ್ಷಿತೇ ।
ಅನುಜ್ಞಾತಸ್ತತಸ್ತದ್ಗಂ ತತ್ರತತ್ರ ಹರಿಂ ಸ್ಮರೇತ್ ॥
ಕೃತ್ವಾಪರೋಕ್ಷಂ ತಂ ಚಾಪಿ ಕಾಲೇಕಾಲೇ ಸ್ಮರೇತ್ ಪುನಃ ।
ಅಭೀಷ್ಟಕಾರ್ಯಸಿದ್ಧಿಃ ಸ್ಯಾತ್ ತಸ್ಯ ನಾಸ್ತ್ಯತ್ರ ಸಂಶಯಃ ॥
– ನಿವೃತ್ತ *(ಭಾಗ.ತಾ.ನಿ. 11-15-32)*

77. ಬಲಮಿತಿ ವಿದ್ಯುತಿ । – *ತೈ.ಉ. 3-11.*

* ವಾಯೌ ತು ಬಲನಾಮಾ ಚ ಬಲದತ್ವಾತ್ ಸದೈವ ಹಿ ।
– *ಯಜುಃಸಂಹಿತಾ (ತೈ.ಉ.ಭಾ.)*

ಯಂದು ಪ್ರಾಣಿಗಳ ವಧೆ ತುಂಬ ದೋಷಪ್ರದವಾದುದು. ಓತಿಕೇತದಲ್ಲಿ ಕಲಿಯ ಆವೇಶ ವಿರುವುದರಿಂದ ಅದರ ವಧೆ ಇತರ ದಿನಗಳಲ್ಲಿ ಅಲ್ಪದೋಷಕ್ಕೆ ಕಾರಣವಾದರೂ ಅಮಾವಾಸ್ಯೆಯಂದು ಅದರ ವಧೆಯೂ ಮಹಾದೋಷಪ್ರದ ಎನಿಸುವುದು.78

ಅಮಾವಾಸ್ಯೆಯಂದು ಇತರ ಪ್ರಾಣಿಗಳ ಜೊತೆಗೆ ಒಳ್ಳೆಯ ರೀತಿಯಿಂದಾಗಲೀ, ಕೆಟ್ಟ ರೀತಿಯಿಂದಾಗಲೀ ವ್ಯವಹರಿಸುವಾಗ ಅವುಗಳಲ್ಲಿ ಪ್ರಾಣದೇವನ ವಿಶೇಷಾವೇಶವಿದೆ ಎಂಬ ಅನುಸಂಧಾನವನ್ನು ತಂದುಕೊಳ್ಳಬೇಕು. ಈ ಅನುಸಂಧಾನದ ಹಿನ್ನೆಲೆಯಲ್ಲೇ ಅಮಾವಾಸ್ಯೆಯ ರಾತ್ರಿಯಂದು ಯಾವುದೇ ಪ್ರಾಣಿಯ ವಧೆಯಾಗಲೀ, ಹಿಂಸೆಯಾಗಲೀ ಎಸಗಲ್ಪಡದಂತೆ ಎಚ್ಚರ ವಹಿಸಬೇಕು.

**ಆಧಾರದ ಸ್ವಾಮಿಯಾಗಿ:** ಯಾವುದೇ ಚಟುವಟಿಕೆ ನಡೆಸಲು ದೇಶ ಹಾಗೂ ಕಾಲ ಆಧಾರವಾಗಿ ಬೇಕೇಬೇಕು. ಇಂತಹ ಆಧಾರಗಳನ್ನು ಒದಗಿಸಿಕೊಟ್ಟು, ಅವುಗಳನ್ನು ರಕ್ಷಿಸುತ್ತ ಅವುಗಳಿಗೆ ಅಧಿಪನಾಗಿರುವವನು ವಾಯುದೇವ.79

ಆದುದರಿಂದ ಯಾವುದೇ ಚಟುವಟಿಕೆಯನ್ನು ನಿರ್ವಹಿಸುವಾಗ ಅದಕ್ಕೆ ಬಳಸಿಕೊಳ್ಳುವ ಆಧಾರಗಳಿಗೆ ಸ್ವಾಮಿಯಾಗಿರುವವನು ವಾಯುದೇವ. ಅವನು ಆಮೆಯ ರೂಪದಿಂದ ಶೇಷನಿಗೆ ಆಧಾರನಾಗಿ ಬ್ರಹ್ಮಾಂಡಕ್ಕೆ ಮೂಲಾಧಾರನಾಗಿರುವುದಲ್ಲದೆ, ಅಂತಹ ಬ್ರಹ್ಮಾಂಡದೊಳಗೆ ಆಧಾರಗಳೆನಿಸುವ ದೇಶಕಾಲಾದಿಗಳಿಗೂ ಒಡೆಯನಾಗಿದ್ದು ಅವೆಲ್ಲ ನಮಗೆ ಆಧಾರಗಳಾಗಿ ಕಾರ್ಯನಿರ್ವಹಿಸುವಂತೆ ಅನುಗ್ರಹಿಸುವನೆಂಬ ಅನುಸಂಧಾನವನ್ನು ತಂದುಕೊಳ್ಳಬೇಕು.

**ಪ್ರಾಣನಲ್ಲಿರುವ ಭಗವಂತನ ಇಚ್ಛೆಯಿಂದಲೇ ಪ್ರವೃತ್ತಿ:** ಪ್ರಾಣನಲ್ಲಿರುವ ಭಗವಂತನ ಪ್ರೀತಿಗಾಗಿಯೇ ಜ್ಞಾನಿಗಳು ಭೋಜನವನ್ನು ನಡೆಸುವರು. ಅವಿವೇಕಿಗಳು ಕಳ್ಳತನ ಮುಂತಾದ ಹೇಯಕೃತ್ಯಗಳನ್ನೂ ಪ್ರಾಣಸ್ಥ ವಿಷ್ಣುವಿನ ಇಚ್ಛೆಯಿಂದಲೇ ನಡೆಸುವರು. ಆದರೆ ಅವರು ತಮ್ಮ ಇಚ್ಛೆಗನುಗುಣವಾಗಿಯೇ ತಾವು ಹೀಗೆ ನಡೆದುಕೊಳ್ಳುತ್ತಿರುವೆವೆಂದು ಭ್ರಮಿಸುವರೇ ಹೊರತು ಪ್ರಾಣಸ್ಥ ವಿಷ್ಣುವಿನ ಇಚ್ಛೆಯಿಂದಾಗಿ ತಾವು ಹೀಗೆ ನಡೆದುಕೊಳ್ಳುತ್ತಿರುವುದೆಂಬುದನ್ನು ಅವರು ವಿವೇಚಿಸಿಕೊಳ್ಳುವುದಿಲ್ಲ.80

---

78. ಸೋಽಮಾವಾಸ್ಯಾಂ ಯತೋ ರಾತ್ರೌ ಪ್ರಾಣಭೃತ್ಸು ವ್ಯವಸ್ಥಿತಃ । ಕಲ್ಯಾವೇಶಾದಲ್ಪ-ದೋಷಃ ಕೃಕಲಾಸವಧೋಽಪಿ ಸನ್ । ತಸ್ಯಾಂ ರಾತ್ರೌ ಮಹಾದೋಷೋ ದೇವತಾ-ವೇಶತೋ ಭವೇತ್ ॥ *– ಬೃ.ಉ.ಭಾ. 3-6-21.*

79. '..........ವಾಯುರಾಧಾರಪಃ ಸ್ಮೃತಃ । *– ಬ್ರಹ್ಮತರ್ಕ (ಭಾಗ.ತಾ.ನಿ.5-18-37.*

80. ಪ್ರಾಣಸಂಸ್ಥಸ್ಯ ವೈ ವಿಷ್ಣೋಃ ಸಂಪ್ರೀತ್ಯೈ ಭೋಜನಂ ಭವೇತ್ ।
ತದಿಚ್ಛಯೈವ ಚೌರ್ಯಾದಿ ಕುರ್ಯುರಜ್ಞಾ ಅಪಿ ಧ್ರುವಮ್ ।
ತಥಾಽಪಿ ತಂ ನ ಜಾನೀಯುಃ ಪ್ರಾಣಾತ್ಮಾನಂ ಜನಾರ್ದನಮ್ ॥
*– ಪ್ರವೃತ್ತೇ, ಬೃ.ಉ.ಭಾ. 6-1-4.*

ನಮ್ಮ ಮೂಲಕವಾಗಲೀ, ಇತರರ ಮೂಲಕವಾಗಲೀ ಯಾವುದೇ ಹೇಯಕೃತ್ಯ ಎಸಗಲ್ಪಡುವ ಹಿನ್ನೆಲೆಯಲ್ಲೂ ಪ್ರಾಣಸ್ಥ ವಿಷ್ಣುವಿನ ಅಂದರೆ ವಿಷ್ಣುವಿನಿಂದ ಪ್ರಾಣನ ಮೂಲಕ ಕಾಣಿಸಿಕೊಂಡ ಇಚ್ಛೆಯ ಪಾತ್ರವನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಶಿಶುಗಳ ಮಾನಸಿಕ ಕ್ರಿಯೆ ಪ್ರಾಣನಿಂದಲೇ:** ಆರು ತಿಂಗಳಿಗಿಂತ ಕಡಿಮೆ ವಯಸ್ಸಿನ ಶಿಶುಗಳ ಎಲ್ಲ ಮಾನಸಿಕ ಕ್ರಿಯೆಗಳು ಮುಖ್ಯಪ್ರಣನಿಂದಲೇ ನಡೆಯುವುದು.[81] ಆದುದರಿಂದಲೇ ಆ ವಯಸ್ಸಿನಲ್ಲಿ ಅನುಭವಕ್ಕೆ ಬಂದ ಯಾವ ವಿಷಯದ ಸ್ಮರಣೆಯೂ ದೊಡ್ಡವರಾದ ಮೇಲೆ ಆ ಮಕ್ಕಳಿಗೆ ಇರುವುದಿಲ್ಲ.

ಆದ್ದರಿಂದ ಆರು ತಿಂಗಳ ಒಳಗಿನ ಶಿಶುಗಳ ಜೊತೆ ವ್ಯವಹಾರ ನಡೆಸುವಾಗ ಅವುಗಳಲ್ಲಿ ಮುಖ್ಯಪ್ರಾಣನ ವಿಶೇಷ ಪಾತ್ರದ ಅನುಸಂಧಾನ ನಡೆಸಬೇಕು.

**ಕಣ್ಣಿನಲ್ಲಿ ವಾಯುದೇವ:** 'ಸತ್' ಎನಿಸುವ ವಾಯುದೇವ, 'ತಿ' ಎನಿಸುವ ಚತುರ್ಮುಖ ಹಾಗೂ 'ಯ' ಎನಿಸುವ ಆದಿತ್ಯ –ಹೀಗೆ ಒಟ್ಟು ಸೇರಿ 'ಸತ್ಯ' ಎನಿಸುವ ಈ ಮೂರು ದೇವತೆಗಳು ಕಣ್ಣಿನ ಬಿಳಿಯ ಗುಡ್ಡೆ, ಕಪ್ಪುಗುಡ್ಡೆ ಹಾಗೂ ಕಣ್ಣಿನ ಪಾಪೆ ಇವುಗಳಲ್ಲಿದ್ದುಕೊಂಡು ಅವುಗಳ ಕಾರ್ಯವನ್ನು ನಿರ್ವಹಿಸುವರೆಂದು ಉಪಾಸನೆ ನಡೆಸಬೇಕು.[82]

ಹಾಗೆಯೇ, ಋಗಭಿಮಾನಿನಿಯಾದ ಸರಸ್ವತಿ ಕಣ್ಣಿನಲ್ಲಿರುವ ಬಿಳಿಯ ಪ್ರಕಾಶದಲ್ಲಿರುವಳು; ಸಾಮನಾಮಕ ವಾಯುದೇವ ಕಣ್ಣಿನಲ್ಲಿರುವ ಅತಿ ಕಪ್ಪಾದ ಪ್ರಕಾಶದಲ್ಲಿರುವನು.[83]

ಹೀಗೆ ನಮ್ಮ ಹಾಗೂ ಉಳಿದವರ ಕಣ್ಣಿನ ಮಾಧ್ಯಮದಲ್ಲಿ ವಾಯುದೇವನ ಪಾತ್ರದ ಅನುಸಂಧಾನ ನಡೆಸುತ್ತಿರಬೇಕು.

**ತಿಂದದ್ದನ್ನು ರಸಾದಿರೂಪದಿಂದ ಪರಿಣಮಿಸುವಂತೆ ಮಾಡುವಿಕೆ:** ಅನ್ನವೇ ಮುಂತಾದ ತಿಂದ ಆಹಾರವನ್ನು ರಸಾದಿರೂಪವಾಗಿ ಪರಿಣಮಿಸುವಂತೆ ಮಾಡುವವನು ಪ್ರಾಣದೇವ. ಹಸು ತಿಂದ ಹುಲ್ಲು, ಹಿಂಡಿ ಹಾಲಾಗಿ ಪರಿಣಮಿಸುವಂತೆ ಮಾಡುವವನು ಪ್ರಾಣದೇವ.[84]

---

81. ಷಣ್ಮಾಸಾತ್ ಪೂರ್ವಬಾಲಾನಾಂ ಕೇವಲಪ್ರಾಣತೋ ಭವೇತ್ ।
ವ್ಯಾಪಾರ್ಯಂ ಮನಸಾ ಸರ್ವಮತಃ ಪಶ್ಚಾದಸಂಸ್ಮೃತಿಃ ॥ – *ಛಾ.ಉ.ಭಾ. 5-1-11.*

82. ದೇವತಾತ್ರಯಮೇತತ್ತು ಸಹಿತಂ ಸತ್ಯಮುಚ್ಯತೇ ।
ಶುಕ್ಲಕೃಷ್ಣಕನೀನಾಸು ಚಕ್ಷುಷೋಽಪ್ಯೇತ ಆಸ್ಥಿತಾಃ ॥ – *ಐ.ಉ.ಭಾ. 1-4-13.*

83. ಅಥ ಯದೇತದಕ್ಷ್ಣಃ ಶುಕ್ಲಂ ಭಾಃ ಸೈವರ್ಗಥ ಯನ್ನೀಲಂ ಪರಃ ಕೃಷ್ಣಂ ತತ್ ಸಾಮ..... ॥
– *ಛಾ.ಉ.ಭಾ. 1-3-8.*

84. ಗೋಷು ಕ್ಷೀರಂ ದೃಶ್ಯಮಾನಮಪಿ ಪ್ರಾಣಾದೇವ ಜಾಯತೇ ।– *ಬ್ರ.ಸೂ.ಭಾ. 2-1-25.*
* 'ಅನ್ನಂ ರಸಾದಿರೂಪೇಣ ಪ್ರಾಣಃ ಪರಿಣಯತ್ಯಸೌ' । – *ಬ್ರ.ಸೂ.ಭಾ.*
* ಪ್ರಾಣಾತ್ - ಮುಖ್ಯಪ್ರಾಣಾತ್ ...... । ಅನ್ನಂ- ಭುಕ್ತಂ ವಸ್ತ್ವಿತ್ಯರ್ಥಃ । ಅಸೌ ಸರ್ವ-ಶರೀರಪ್ರೇರಕತ್ವೇನ ಪ್ರಸಿದ್ಧಃ । – *ದೀಪಿಕಾ.*

ಆದ್ದರಿಂದ ನಾವು ಭೋಜನ ಮಾಡುವಾಗ, ಭುಕ್ತವಾದದ್ದು ಜೀರ್ಣವಾದಾಗ- ಅಲ್ಲಿ ಪ್ರಾಣದೇವನ ಈ ಬಗೆಯ ಪಾತ್ರವನ್ನು ವಿವೇಚಿಸಿಕೊಳ್ಳಬೇಕು. ಅಲ್ಲದೆ, ಹಾಲು ಕುಡಿಯುವಾಗ ಹಸು ತಿಂದ ಹುಲ್ಲು, ಹಿಂಡಿ ಇತ್ಯಾದಿಗಳನ್ನು ಹಾಲಾಗಿ ಪರಿಣಮಿಸುವಂತೆ ಮಾಡಿ ನಮಗೆ ಒದಗಿಸಿಕೊಡುವ ಮುಖ್ಯಪ್ರಾಣನ ಅನುಗ್ರಹವನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಅಗ್ನ್ಯಾದಿಗಳ ಶುಕ್ಲರೂಪಕ್ಕೆ ಆಧಾರ:** 'ತ್ರಿವೃತ್ಕರಣ'ದ ಪ್ರಕ್ರಿಯೆಗನುಗುಣವಾಗಿ ಅಗ್ನ್ಯಾದಿಗಳ ಕೆಂಪುರೂಪ ಹೇಗೆ ಶ್ರೀದೇವಿಗೆ ಸೇರಿದ್ದೋ, ಕಪ್ಪು ರೂಪ ಹೇಗೆ ರುದ್ರನಿಗೆ ಸೇರಿದ್ದೋ ಹಾಗೆ ಬಿಳಿರೂಪ ವಾಯುದೇವನಿಗೆ ಸೇರಿದ್ದು.85

ಆದುದರಿಂದ ಯಾವುದೇ ವಸ್ತುವಿನ ಬಿಳಿರೂಪವನ್ನು ಕಾಣವಾಗ ಅದು ಜಲಾಭಿಮಾನಿ ವಾಯುದೇವನಿಂದಾಗಿ ಪ್ರಾಪ್ತವಾದ ರೂಪ ಎಂದು ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಧ್ವನ್ಯಾತ್ಮಕ ವರ್ಣಾತ್ಮಕಶಬ್ದಗಳಿಂದ ಅಮುಖ್ಯವಾಗಿ ವಾಚ್ಯ:** ಎಲ್ಲ ಋಙ್ಮಂತ್ರಗಳು, ಎಲ್ಲ ವೇದಗಳು, ಎಲ್ಲ ಧ್ವನ್ಯಾತ್ಮಕಶಬ್ದಗಳು ಪ್ರಾಣನ ನಾಮಗಳೇ ಆಗಿವೆ –ಎಂದು ಸಾರುತ್ತಿರುವ ಐತರೇಯೋಪನಿಷತ್ತಿನಿಂದ86 ಮುಖ್ಯವಾಗಿ, ಪ್ರಾಣ ಎನಿಸುವ ಭಗವಂತನಿಗೆ ಮುಖ್ಯವಾಗಿ ಸರ್ವಶಬ್ದವಾಚ್ಯತ್ವವು ಸಿದ್ಧಿಸುವಂತೆ ಅಮುಖ್ಯವಾಗಿ ಪ್ರಾಣ ಎನಿಸುವ ಮುಖ್ಯಪ್ರಾಣನಿಗೆ ಅಮುಖ್ಯವಾಗಿ ಸರ್ವಶಬ್ದವಾಚ್ಯತ್ವವು ಸಿದ್ಧಿಸುವುದು.

ಆದುದರಿಂದ ವೇದಾದಿಗಳ ಹಾಗೂ ಲೌಕಿಕ ಪ್ರಪಂಚದ ಯಾವುದೇ ಶಬ್ದವನ್ನು ಕೇಳುವಾಗ ಅದರಿಂದ ಮುಖ್ಯವಾಚ್ಯನನ್ನಾಗಿ ಹೇಗೆ ಭಗವಂತನನ್ನು ಅನುಸಂಧಾನ ಮಾಡಬೇಕೋ ಹಾಗೆ ಅಮುಖ್ಯವಾಚ್ಯನನ್ನಾಗಿ ಮುಖ್ಯಪ್ರಾಣನನ್ನು ಅನುಸಂಧಾನ ಮಾಡಬೇಕು.

**ತಂದೆತಾಯಿ ಮುಂತಾದ ಬಂಧುಗಳ ಸಂಬಂಧದಲ್ಲಿ:** 'ತಂದೆಯನ್ನೋ ತಾಯಿಯನ್ನೋ, ಸಹೋದರನನ್ನೋ, ತಂಗಿಯನ್ನೋ ಗುರುಗಳನ್ನೋ, ಬ್ರಾಹ್ಮಣನನ್ನೋ ಸ್ವಲ್ಪ ಕಠಿನವಾಗಿ ಅವಮಾನಿಸಿದರೂ, ಅಂತಹವನನ್ನು 'ನಿನಗೆ ಧಿಕ್ಕಾರ! ನೀನು ತಂದೆಯನ್ನು ಕೊಂದವ, ತಾಯಿಯನ್ನು ಕೊಂದವ, ಸಹೋದರನನ್ನೂ ಕೊಂದವ. ತಂಗಿಯನ್ನು ಕೊಂದವ,

---

85. ಅತೋ .......ಯತ್ ಶುಕ್ಲಂ ವಾಯುಜಂ ವಿದ್ಯಾತ್ ......।
*– ಸಾಮಸಂಹಿತಾ (ಛಾ.ಉ.ಭಾ.6-2-7)*

86. 'ತಾ ವಾ ಏತಾಃ ಸರ್ವಾಃ ಋಚಃ ಸರ್ವೇ ವೇದಾ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ....' *– ಐ.ಉ.ಭಾ. 2-1-2-12.*

* .......ತಥೈವ ಸರ್ವನಾಮಾನಿ ಪ್ರವರ್ತಂತೇ ಚ ಮಾರುತೇ । ನ ತಾವನ್ಮುಖ್ಯವೃತ್ತ್ಯೈವ ಮುಖ್ಯತೋಽನ್ಯಪೇಕ್ಷಯಾ ........ ಅನ್ಯಪೇಕ್ಷಯಾ ವಾಯೌ ಮುಖ್ಯವೃತ್ತಿರ್ವಿಧೀಯತೇ । *– ಬೃಹತ್ಸಂಹಿತಾ (ಐ.ಉ.ಭಾ.)*

ಆಚಾರ್ಯರನ್ನು ಕೊಂದವ, ಬ್ರಾಹ್ಮಣನನ್ನು ಕೊಂದವ –ಎಂದು ಹೀಗಳೆಯುವರು. ಆದರೆ ಅದೇ ಪ್ರಾಣೋತ್ಕ್ರಮಣಕ್ಕೆ ಒಳಗಾದ ತಂದೆತಾಯಿ ಮುಂತಾದವರನ್ನು ಶೂಲದಿಂದ ತಿವಿದರೂ, ಸುಟ್ಟರೂ ಪಿತೃಘಾತುಕ, ಮಾತೃಘಾತುಕ...... ಇತ್ಯಾದಿಯಾಗಿ ಜರೆಯುವುದಿಲ್ಲ. ಇದರಿಂದ ಸ್ಪಷ್ಟವಾಗುವುದು ತಂದೆ ಮುಂತಾದವರೆಲ್ಲ ಮುಖ್ಯಪ್ರಾಣನ ಅಧೀನರು.[87] ಅವರಲ್ಲಿ ಮುಖ್ಯಪ್ರಾಣ ನಿಯಾಮಕನಾಗಿ ಇರುವಾಗಷ್ಟೇ ಅವರು ತಂದೆ, ತಾಯಿ ಮುಂತಾದ ಬಂಧುಗಳೆನಿಸಿ ಗೌರವಾರ್ಹರೂ, ಆದರಾರ್ಹರೂ ಆಗುವರು.

ಆದುದರಿಂದ ನಾವು ಮನೆಯಲ್ಲಿ, ಸಮಾಜಗಳಲ್ಲಿ ತಂದೆ, ತಾಯಿ ಮುಂತಾದ ಬೇರೆಬೇರೆ ಬಂಧುಗಳ ಜೊತೆಗೆ ವ್ಯವಹರಿಸುವಾಗ ಪ್ರಾಣದೇವನ ನಿಯಂತ್ರಣಕ್ಕೊಳಪಟ್ಟು ಅವರು ಆಯಾ ಬಂಧುಗಳಾಗಿ ನಮಗೆ ಪ್ರೀತಿ, ಸುಖಾದಿಗಳನ್ನು ನೀಡುತ್ತಿರುವರೆಂದು ಅನುಸಂಧಾನಕ್ಕೆ ತಂದುಕೊಳ್ಳಬೇಕು. ಈ ಅನುಸಂಧಾನಕ್ಕೆ ಪುಷ್ಟಿ ನೀಡುವಂತೆ 'ಮಾತರ್ಮೇ ಮಾತರಿಶ್ವನ್..... ' ಎಂಬ ವಾಯುಸ್ತುತಿಯ ಶ್ಲೋಕವನ್ನೂ, 'ಹನುಮ ನಮ್ಮ ತಾಯಿ ತಂದೆ....' ಇತ್ಯಾದಿ ಪುರಂದರದಾಸರ ಹಾಡನ್ನೂ ವಿನಿಯೋಗಿಸಿಕೊಳ್ಳಬೇಕು.

**ಗಾಳಿ–ಸೂರ್ಯ–ಅಗ್ನಿಗಳಲ್ಲಿ ವಾಯುದೇವನ ಪಾತ್ರ:** 'ವಾಯುದೇವನು ಗಾಳಿಯ ರೂಪದಿಂದ ಶರೀರದಲ್ಲಿದ್ದವನಾಗಿ ಜೀವರ ಶರೀರವನ್ನು ರಕ್ಷಿಸುವವನು; ಆದಿತ್ಯನಲ್ಲಿರುವವನಾಗಿ ಬೆಳಕು ನೀಡುವನು. ಹಾಗೆಯೇ ಎಲ್ಲರ ಆಯುಷ್ಯವನ್ನು ಹೀರುವನು. ಅಗ್ನಿಯಲ್ಲಿದ್ದವನಾಗಿ ಯಾಜ್ಞಿಕರಿಂದ ಹೋಮಿಸಲ್ಪಡುವನು'.[88]

ಆದುದರಿಂದ ಗಾಳಿಯ ಮೂಲಕ ಬದುಕುತ್ತಿರುವಾಗ ಆ ಗಾಳಿಯನ್ನು ಒದಗಿಸುವ ವಾಯುದೇವನ ಅನುಸಂಧಾನದಂತೆ, ಸೂರ್ಯನ ಮೂಲಕ ಬೆಳಕನ್ನು ಪಡೆಯುವಾಗಲೂ ವಾಯುದೇವನ ಅನುಸಂಧಾನ ಬೇಕು. ಅಗ್ನಿಮಾಧ್ಯಮದ ಆರಾಧನೆಗಳನ್ನು ನಡೆಸುವಾಗ ಅಗ್ನಿದೇವನಲ್ಲಿ ವಾಯುದೇವನ ಪಾತ್ರದ ಅನುಸಂಧಾನವನ್ನು ನಡೆಸುತ್ತಿರಬೇಕು.

---

87. ಸ ಯದಿ ಪಿತರಂ ವಾ ಮಾತರಂ ವಾ ಭ್ರಾತರಂ ವಾ ಸ್ವಸಾರಂ ವಾಽಚಾರ್ಯಂ ವಾ ಬ್ರಾಹ್ಮಣಂ ವಾ ಕಿಂಚಿತ್ ಭೃಶಮಿವ ಪ್ರತ್ಯಾಹ 'ಧಿಕ್ ತ್ವಾಽಸ್ತು' ಇತ್ಯೇವೈನಮಾಹುಃ । ಪಿತೃಹಾ ವೈ ತ್ವಮಸಿ ಮಾತೃಹಾ ವೈ ತ್ವಮಸಿ ಭ್ರಾತೃಹಾ ವೈ ತ್ವಮಸಿ ಸ್ವಸೃಹಾ ವೈ ತ್ವಮಸಿ ಆಚಾರ್ಯಹಾ ವೈ ತ್ವಮಸಿ ಬ್ರಾಹ್ಮಣಹಾ ವೈ ತ್ವಮಸಿ ಇತಿ । ಅಥ ಯದ್ಯಪ್ಯೇನಾನುತ್ಕ್ರಾಂತಪ್ರಾಣಾನ್ ಶೂಲೇನ ಸಮಾಸಂ ವ್ಯತಿಷಂ ದಹೇತ್ ನೈವೈನಂ ಬ್ರೂಯುಃ ಪಿತೃಹಾಽಸೀತಿ ನ ಮಾತೃಹಾಽಸೀತಿ ನ ಭ್ರಾತೃಹಾಽಸೀತಿ ನ ಸ್ವಸೃಹಾಽಸೀತಿ ನಾಚಾರ್ಯಹಾಽಸೀತಿ ನ ಬ್ರಾಹ್ಮಣಹಾಽಸೀತಿ । ಪ್ರಾಣೋಹ್ಯೇವೈತಾನಿ ಸರ್ವಾಣಿ ಭವತಿ ।

*– ಛಾ.ಉ. 7-1-17.*

88. ಸ ವಾಯುರ್ವಾಯುರೂಪೇಣ ಜಗತ್ ಪಾತಿ ಶರೀರಗಃ ।
ಆದಿತ್ಯಸ್ಥೇನ ರೂಪೇಣ ಜಗದ್ ಯಾತಿ ಪ್ರಕಾಶಯನ್ ॥
ಅಗ್ನಿಸ್ಥೇನ ರೂಪೇಣ ಹೂಯತೇ ಸರ್ವಯಷ್ಟೃಭಿಃ ।
ಆದಾಯ ಯಾತ್ಯಾಯುರಿತಿ ಸ ಏವಾದಿತ್ಯ ಉಚ್ಯತೇ ॥

*– ಪ್ರಭಂಜನೇ (ಬೃ.ಉ.ಭಾ. 3-2-3)*

# ಆಧ್ಯಾತ್ಮಿಕ, ಧಾರ್ಮಿಕ ಚಟುವಟಿಕೆಗಳಲ್ಲಿ

**ಜ್ಞಾನಕಾರ್ಯಗಳಲ್ಲಿ ವಾಯುದೇವನ ಪಾತ್ರ:** ಋಗ್ವೇದದ ಒಂದು ಮಂತ್ರ (8-29-8) ಸಾರುತ್ತಿರುವಂತೆ89 ಮುಖ್ಯಪ್ರಾಣನು ಪಾಪಿಗಳಿಂದ ಪಾಪವನ್ನು ಮಾಡಿಸಿ ಅಂಧಂತಮಸ್ಸಿನಲ್ಲಿ ಬೀಳಿಸುವನು. ಪುಣ್ಯಶಾಲಿಗಳಿಂದ ಪುಣ್ಯವನ್ನು ಮಾಡಿಸಿ ಮೋಕ್ಷವನ್ನು ಹೊಂದಿಸುವನು. ಮಧ್ಯಮಜೀವರನ್ನು ಸಂಸಾರದಲ್ಲಿ ತೊಡಗಿಸುವನು. ಹೇಗೆ ಕಳ್ಳನು ಭೂಮಿಯಲ್ಲಿ ಹೂತಿರುವ ನಿಧಿಗಳನ್ನು ಬಲ್ಲನೋ ಅಂತೆ ವಾಯುದೇವ ಶಾಸ್ತ್ರದಲ್ಲಿ ಮುಚ್ಚಿಡಲ್ಪಟ್ಟಿರುವ ಜ್ಞಾನಗಳ ಮಾರ್ಗವನ್ನು ಬಲ್ಲವನಾಗಿರುವನು. ಜ್ಞಾನದಾನ ಮಾಡಿ ಭಕ್ತರ ಪಾಪವನ್ನೂ, ದುಷ್ಟರ ಪುಣ್ಯವನ್ನೂ ಕಳ್ಳತನ ಮಾಡುವನು.

ನಮ್ಮ ಮೂಲಕ ಪಾಠಪ್ರವಚನ, ಲೇಖನರೂಪವಾದ ಜ್ಞಾನಕಾರ್ಯಗಳು ನಡೆಯುತ್ತಿರುವಾಗ ನಮ್ಮ ಜೊತೆಗೇ ಇದ್ದು ಜ್ಞಾನಕಾರ್ಯಗಳಿಗೆ ಸ್ಫೂರ್ತಿ ನೀಡುವ ವಾಯುದೇವನ ಪಾತ್ರವನ್ನು ವಿವೇಚಿಸಿಕೊಳ್ಳಬೇಕು.

ವಾಯುದೇವನ ಮಧ್ವಾವತಾರದಲ್ಲಿ ವಿಷ್ಣುತೀರ್ಥರು, ಪದ್ಮನಾಭತೀರ್ಥರು ಮುಂತಾದ ಅನೇಕಾನೇಕ ಸಾತ್ತ್ವಿಕರಿಗೆ ಜ್ಞಾನದಾನ ಮಾಡಿ ಜ್ಞಾನಕಾರ್ಯದ ಸ್ಫೂರ್ತಿ ನೀಡಿದ್ದರೂ, ಅವರ ಗುರುಗಳಾಗಿದ್ದ ಅಚ್ಯುತಪ್ರಜ್ಞರನ್ನು ತಿದ್ದುವುದಕ್ಕೆ ವಿಶೇಷವಾದ ಕಾಳಜಿ ಹಾಗೂ ಯತ್ನ ಕೈಗೊಂಡಂತಿದೆ. ಮಧ್ವವಿಜಯದ ಮೂರು ಶ್ಲೋಕಗಳಲ್ಲಿ90 ಅಚ್ಯುತಪ್ರಜ್ಞರನ್ನು ಜ್ಞಾನಮಾರ್ಗಕ್ಕೆ ಎಳೆತಂದ ಪರಿಯನ್ನು ನಿರೂಪಿಸಲಾಗಿದೆ. ಸುಲಭವಾಗಿ ಅದ್ವೈತವಾಸನೆಯಿಂದ ಹೊರಬರಲಾರದಂತಿದ್ದ ಅಚ್ಯುತಪ್ರಜ್ಞರ ಮನಸ್ಸಿನಲ್ಲಿ ಅಡಗಿದ್ದ ಕಲಿಕಾಲುಷ್ಯರೂಪವಾದ ಮೂಲದೋಷವನ್ನು ದೂರಮಾಡಿ, ತಮ್ಮ ಸೂತ್ರಭಾಷ್ಯದ ಸವಿಯನ್ನು ಉಣ್ಣಿಸಿದವರು ಮಧ್ವರು.91

---

89. ಪಥ ಏಕಃ ಪೀಪಾಯ ತಸ್ಕರೋ ಯಥಾ೭ ಏಷ ವೇದ ನಿಧೀನಾಮ್ ।
— *ಭಾಗ.ತಾ.ನಿ. 11-21-28.*

* ಏಕಃ ಮುಖ್ಯಪ್ರಾಣಃ ಪಾಪಸ್ಯ ಪುಣ್ಯಸ್ಯ ಚ ಪಥೋ ಮಾರ್ಗಾನ್ ಪೀಪಾಯ । ಪಾಪಕೃತಃ ಪಾಪೇ ಮಾರ್ಗೇ ನಯತಿ, ತಮಶ್ಚ ಪ್ರಾಪಯತಿ । ಪುಣ್ಯಕೃತಃ ಪುಣ್ಯೇ ಮಾರ್ಗೇ ನಯತಿ ಮೋಕ್ಷಂ ಚ ಪ್ರಾಪಯತಿ, ಮಧ್ಯಮಾನ್ ಸಂಸಾರಮಾರ್ಗೇ ಪರಿವರ್ತಯತೀತ್ಯೇತತ್ । ಕುತಃ? ಯತ ಏವ ನಿಧೀನಾಂ ಶಾಸ್ತ್ರೇಷು ಪಿಹಿತಾನಾಂ ಜ್ಞಾನಾನಾಂ ಪಥೋ ವೇದ ಜಾನಾತಿ । ತದ್ ಯಥಾ ತಸ್ಕರಃ ಭೂಮೌ ನಿಹಿತಾನಾಂ ನಿಧೀನಾಂ ವೇದ । ಅಯಮಪಿ ಪ್ರಾಣನಿಧಿರೂಪಸ್ಯ ಜ್ಞಾನಸ್ಯ ದಾನೇನ ಭಕ್ತಾನಾಂ ಪಾಪಸ್ಯ ದುಷ್ಟಾನಾಂ ಪುಣ್ಯಸ್ಯ ಚ ಚೋರಯಿತೃತ್ವಾತ್ ತಸ್ಕರ ಇವೇತ್ಯುಪಮೀಯತೇ । ತೇನ ಚ ಸ್ತುತಿರೇವ ಪೂಜ್ಯತೇ । — *ಬ.ಗೋ.ಟಿ.*

90. ಸಾನುನೀತಿರಥ.......ಚಿತ್ತಮಚ್ಯುತಮತೇರ್ಭೃಶಂ ಬಭೌ । — *ಮ.ವಿ. 9-33....36.*

91. ಸ್ತೇಯಸೋ ಭಿಷಗಿವಾಸ್ಯ ಹೃದ್ಗತಂ ಮೂಲದೋಷಮರುಚೇರಚಿಂತಯತ್...............
ಹಂಸರಾಟ್ ಕಲಿಮಲಂ ನಿರಾಕರೋತ್....... । — *ಮ.ವಿ. 9-34, 35.*

ಮಧ್ವರ ಈ ಪ್ರವೃತ್ತಿಯನ್ನು ನೆನಪಿಸಿಕೊಂಡು ಯೋಗ್ಯ ಅಧಿಕಾರಿಗಳನ್ನು ಜ್ಞಾನ ಕಾರ್ಯಗಳಲ್ಲಿ ಬಲಾತ್ಕಾರವನ್ನು ತೊಡಗಿಸುವ ವಾಯುದೇವನ ಮಹಿಮೆಯನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು.

ಜೊತೆಗೆ ತತ್ತ್ವಜ್ಞಾನದ ಮಾರ್ಗ ಇಷ್ಟೊಂದು ಸುಂದರವಾಗಿದ್ದರೂ, ಮಧುರವಾಗಿದ್ದರೂ ಅದರ ಕಡೆಗೆ ಹಾಯದೆಯೇ ಆ ಬಗ್ಗೆ ಉದಾಸೀನರಾಗಿ ನಡೆದುಕೊಳ್ಳುತ್ತಿರುವ, ಹಾಗೆಯೇ ಅದಕ್ಕೆ ವಿರುದ್ಧವಾಗಿ ನಡೆದುಕೊಳ್ಳುತ್ತಿರುವ ವ್ಯಕ್ತಿಗಳ ಪ್ರವೃತ್ತಿಗಳಲ್ಲೂ ವಾಯುದೇವರ ಪ್ರೇರಣೆಯನ್ನು ಗುರುತಿಸಿಕೊಳ್ಳಬೇಕು.

**ಧರ್ಮ ಮತ್ತು ಸತ್ಯಗಳ ನಿಯಂತ್ರಣದಲ್ಲಿ:** ಧರ್ಮಕ್ಕೂ, ಸತ್ಯಕ್ಕೂ ವಾಯುದೇವ ಅಭಿಮಾನಿಯಾಗಿದ್ದು[92] ಧಾರ್ಮಿಕರಲ್ಲಿ, ಸಾತ್ವಿಕರಲ್ಲಿ ಧರ್ಮದ ಹಾಗೂ ಸತ್ಯದ ಮೌಲ್ಯಗಳು ಪ್ರಚಾಲನೆಯಲ್ಲಿ ಇರುವಂತೆ ಪ್ರೇರಿಸುತ್ತಿರುವನು.

ಆದುದರಿಂದ ನಮ್ಮ ಮೂಲಕ ಅಥವಾ ಇತರರ ಮೂಲಕ ಧರ್ಮಕಾರ್ಯಗಳು ನಡೆಯುವಾಗ ಅದಕ್ಕೆ ಪ್ರೇರಕನಾಗಿ ಧರ್ಮಾಭಿಮಾನಿ ವಾಯುದೇವನ ಅನುಸಂಧಾನಕ್ಕೆ ತಂದುಕೊಳ್ಳಬೇಕು. ಸತ್ಯನಿಷ್ಠೆಯ ಹಿನ್ನೆಲೆಯಲ್ಲೂ ಸತ್ಯಾಭಿಮಾನಿ ವಾಯುದೇವನ ಪ್ರೇರಣೆಯನ್ನು ಅನುಸಂಧಾನಕ್ಕೆ ತಂದುಕೊಳ್ಳಬಹುದು.

ಪಾಂಡವರ 36 ವರ್ಷಗಳ ಅವಧಿಯ ಆಡಳಿತದಲ್ಲಿ ಭೀಮಸೇನ ಯುವರಾಜನಾಗಿ ಧರ್ಮ ಮತ್ತು ಸತ್ಯ ಮೌಲ್ಯಗಳಿಗೆ ವಿಶೇಷವಾಗಿ ಮನ್ನಣೆ ಕೊಟ್ಟದ್ದನ್ನು ಆ ಅನುಸಂಧಾನಕ್ಕೆ ಪೂರಕವಾಗಿ ಚಿಂತಿಸಬೇಕು.

**ಭಕ್ತ್ಯಾದಿಗಳ ಪ್ರತಿಷ್ಠಾಪನೆಯಲ್ಲಿ:** ಬೇರೆಬೇರೆ ದೇವತೆಗಳನ್ನು ಸೃಷ್ಟಿ ಮಾಡಿದ ಚತುರ್ಮುಖ ಭಗವಂತನ ಆದೇಶಾನುಸಾರವಾಗಿ ಈ ಜಗತ್ತಿನ ಧಾರಣೆಗಾಗಿ, ಸದ್ಗತಿ ಸಂಪಾದನೆಗಾಗಿ ಶ್ರೀಹರಿಯ ಭಕ್ತಿ ಹಾಗೂ ಧರ್ಮರೂಪವಾದ ವಾಯುದೇವನ ಬೇರೊಂದು ರೂಪವನ್ನು ಸೃಷ್ಟಿ ಮಾಡಿದನು. ಆದುದರಿಂದ ದುರ್ಬಲನಾದವನೂ ವಿಷ್ಣುಭಕ್ತ್ಯಾದಿರೂಪಿಯಾದ ವಾಯುವಿನ ನೆರವಿನಿಂದ ಶ್ರೀವಿಷ್ಣುವನ್ನು ಹೊಂದಬಹುದು; ಹೇಗೆ ಯುವರಾಜನ ನೆರವಿನಿಂದ ಮಹಾರಾಜನನ್ನು ಹೊಂದಲು ಸಾಧ್ಯವೋ ಹಾಗೆ –ಎಂದು ನಾರದೀಯವು ದೃಷ್ಟಾಂತಪೂರ್ವಕವಾಗಿ ವಾಯುದೇವ ಶ್ರೀವಿಷ್ಣುವಿನ ಭಕ್ತಿ ಹಾಗೂ ಧರ್ಮ ಇವುಗಳನ್ನು ವಿಶೇಷವಾಗಿ ನೀಡುವವನೆಂದು ಸಾರಿದೆ.[93]

---

92. ಧರ್ಮಾಭಿಮಾನೀ ಸ ವಾಯುಃ ಸತ್ಯಾಭಿಮಾನವಾನ್ ।

*– ನಾರದೀಯ (ಬೃ.ಉ.ಭಾ. 4-5-12)*

93. 'ಸ್ರಷ್ಟಾ ಸ್ವಯಂ ಸಮುದ್ದಿಷ್ಟಃ......ಧಾರಣಂ ಕಥಮಸ್ಯ ಸ್ಯಾದ್ ಗತಿಶ್ಚಾಸ್ಯ ಕಥಂ ಪರಾ । ಇತಿ ಮತ್ವಾ ಹರೇರ್ಭಕ್ತಿಜ್ಞಾನರೂಪಂ ಪುನರ್ವಿಭುಃ । ....... ವಾಯೋ ರೂಪಾಂತರಂ ಪುನಃ । ಸಸರ್ಜ ಮತಿಮಾನ್ ಬ್ರಹ್ಮಾ ವಿಷ್ಣೋರಾಜ್ಞಾಪುರಃಸರಃ । .....ಅಬಲೋಽಪಿ ತತೋ ವಾಯೋರ್ವಿಷ್ಣುಭಕ್ತ್ಯಾದಿರೂಪಿಣಃ । ಪ್ರಾಪ್ತುಮಿಚ್ಛತಿ ಯುಕ್ತಃ ಸನ್ ವಿಷ್ಣುಂ ಸುಬಲವತ್ತರಮ್ । ಯಥೈವ ಯುವರಾಜೇನ ಮಹಾರಾಜಮಭೀಪ್ಸತಿ..... ।

*– ನಾರದೀಯ (ಬೃ.ಉ.ಭಾ. 3-5-8.)*

ಆದುದರಿಂದ ನಮ್ಮ ಮೂಲಕ ಅಥವಾ ಇತರ ಭಕ್ತರ ಮೂಲಕ ಪೂಜೆ ಇತ್ಯಾದಿ ಭಕ್ತಿಕಾರ್ಯಗಳು, ಪಾಠಪ್ರವಚನ ಇತ್ಯಾದಿ ನಿವೃತ್ತಧರ್ಮಕಾರ್ಯಗಳು ನಡೆಯುತ್ತಿದ್ದಲ್ಲಿ ಅಲ್ಲಿ ವಾಯುದೇವನ ಪ್ರೇರಣೆಯನ್ನು ಗುರುತಿಸಬೇಕು.

ವಾಯುದೇವನ ಅನೇಕರೂಪಗಳಲ್ಲಿ 'ವಿಷ್ಣುಭಕ್ತಿ' ಎಂಬುದೂ ಒಂದಾಗಿ ಪರಿಗಣಿತವಾಗಿರುವುದನ್ನು ವಿವೇಚಿಸಿಕೊಳ್ಳಬೇಕು.[94] ಭಗವಂತನ ಬೇರೆಬೇರೆ ಅಂಗಗಳಿಂದ ಹುಟ್ಟಿದ ದೇವತೆಗಳು ತಮ್ಮ ಉತ್ಪತ್ತಿಗೆ ಕಾರಣವಾದ ಅಂಗಕ್ಕೆ ಸಂಬಂದಿಸುವ ಸೇವೆಯನ್ನು ಸಲ್ಲಿಸುವರೆಂದು ತಿಳಿಸುತ್ತ, ಭಗವಂತನ ಪ್ರಾಣದಿಂದ ಹುಟ್ಟಿದ ವಾಯುದೇವ ಜೀವರಿಗೆ ಭಗವದ್ವಿಷಯಕವಾದ ಭಕ್ತಿ ಮತ್ತು ಜ್ಞಾನವನ್ನು ನೀಡುವನೆಂದು ನಿರೂಪಿಸಿರುವುದನ್ನು[95] ಗಮನದಲ್ಲಿಟ್ಟುಕೊಳ್ಳಬೇಕು.

**ಪುಷ್ಪಗಳ ಹಾಗೂ ಧೂಪದ ಗಂಧವನ್ನು ಅರ್ಪಿಸುವಾಗ:** ಭಗವಂತನ ಪ್ರಾಣದಿಂದ ಹುಟ್ಟಿದ ವಾಯುದೇವ ತನ್ನ ಉತ್ಪತ್ತಿಗೆ ಆಶ್ರಯವಾದ 'ಪ್ರಾಣ'ದ ಭಾಗವಾದ ಘ್ರಾಣೇಂದ್ರಿಯಕ್ಕೆ ಸಂಬಂಧಿಸಿದಂತೆ ಭಗವಂತನ ಯಜ್ಞಾದಿಕರ್ಮಗಳಿಗೆ ಉಪಯುಕ್ತವಾಗುವಂತೆ ಸುಗಂಧವನ್ನು ನೀಡುವನು.[96]

ಆದುದರಿಂದ ಭಗವಂತನಿಗೆ ಪುಷ್ಪಾದಿಗಳನ್ನು ಅರ್ಪಿಸುವಾಗ ಅವುಗಳ ಸುಗಂಧವನ್ನು ವಾಯುದೇವನು ಅರ್ಪಿಸುವನೆಂದೂ, ಧೂಪವನ್ನು ಅರ್ಪಿಸುವಾಗ ಅದರಿಂದ ಹೊರಡುವ ಹೊಗೆಯ ಸುಗಂಧವನ್ನು ವಾಯುದೇವನು ಅರ್ಪಿಸುವನೆಂದೂ ಅನುಸಂಧಾನಕ್ಕೆ ತಂದುಕೊಳ್ಳಬಹುದು.

**ವೈರಾಗ್ಯದ ನಿರ್ವಹಣೆಯಲ್ಲಿ:**

ಆಧ್ಯಾತ್ಮಿಕ, ಧಾರ್ಮಿಕ ಸಾಧನೆಗಳನ್ನು ನಡೆಸಲು ಜ್ಞಾನ ಮತ್ತು ಭಕ್ತಿಯಂತೆ, ಸಾಂಸಾರಿಕ ವಸ್ತುಗಳ ಬಗ್ಗೆ ಅನಾಸಕ್ತಿರೂಪವಾದ ವೈರಾಗ್ಯವೂ ಬೇಕು. ವೈರಾಗ್ಯಕ್ಕೂ ವಾಯುದೇವ ಮುಖ್ಯಾಭಿಮಾನಿ. ವೈರಾಗ್ಯವನ್ನು ನಿಯಂತ್ರಿಸುವ ವೈರಾಗ್ಯ ಎಂಬ ಹೆಸರಿನ ಒಂದು ರೂಪವೇ ವಾಯುದೇವನಿಗೆ ಇದೆ.[97] ವಾಯುದೇವ ಚತುರಾತ್ಮಕನೆಂದು ತಿಳಿಸುವ

---

94. ಪ್ರಾಣಃ ಸೂತ್ರಂ ಮಹಾನ್..... ವಿಷ್ಣುಭಕ್ತಿರಾದಿಗೋಪ್ತೋ .... ಇತ್ಯಾದಿಬಹುರೂಪಿಣಃ । *– ಪೈಂಗಿಶ್ರುತಿ (ಬೃ.ಉ.ಭಾ. 3-5-4)*

95. ವಾಯುಃ...... ಅಸ್ಯ ಭಕ್ತಿಜ್ಞಾನಪ್ರದಸ್ತಥಾ । ಭೂತಾನಾಂ ತಸ್ಯ ವಿಷಯೇ...... । *– ಐ.ಉ.ಭಾ. 1-5-1.*

* ಸರ್ವಪ್ರವರ್ತಕೋ ವಾಯುರ್ಜ್ಞಾನಮೋಕ್ಷಪ್ರದಸ್ತಥಾ । *– ನಾರಾಯಣಶ್ರುತಿ (ಬೃ.ಉ.ಭಾ. 3-6-28)*

96. .........ವಾಯುರ್ಗಂಧವಹಶ್ಚಾಸ್ಯ ಭಕ್ತಿಜ್ಞಾನಪ್ರದಸ್ತಥಾ । *– ಐ.ಉ.ಭಾ. 1-5-1*

97. 'ಸ್ಥಿತಿರ್ಯೋಗಶ್ಚ ವೈರಾಗ್ಯಂ..... ಇತ್ಯಾದಿಬಹುರೂಪಿಣಃ । *– ಬೃ.ಉ.ಭಾ. 3-5-4.*

ಐತರೇಯಭಾಷ್ಯದಲ್ಲಿ ಧರ್ಮ, ಜ್ಞಾನ ಹಾಗೂ ಐಶ್ವರ್ಯ ಎಂಬ ಮೂರು ರೂಪಗಳಂತೆ 'ವೈರಾಗ್ಯ' –ಎಂಬ ಒಂದು ರೂಪವನ್ನೂ ತಿಳಿಸಲಾಗಿದೆ.[98]

ಹೀಗೆ ವೈರಾಗ್ಯನಿಯಾಮಕನಾಗಿ ವೈರಾಗ್ಯ ಎಂಬ ಒಂದು ರೂಪವನ್ನೇ ತಾಳಿರುವ ವಾಯುದೇವ ಯೋಗ್ಯರಲ್ಲಿ ವೈರಾಗ್ಯವನ್ನು ಉಂಟುಮಾಡುವನು. ಆದ್ದರಿಂದ ಸಾಧಕರು ಸಾಧನಾನುಷ್ಠಾನವನ್ನು ನಡೆಸುತ್ತಿರುವಾಗ ಆ ನಿಟ್ಟಿನಲ್ಲಿ ವೈರಾಗ್ಯ ಉಂಟಾಯಿತೆಂದರೆ ಅಲ್ಲಿ ವಾಯುದೇವನ ಪಾತ್ರವನ್ನು ಗುರುತಿಸಬೇಕು.

ವಾಯುದೇವ ತನ್ನ ಭೀಮರೂಪದಿಂದ ವೃದ್ಧಾಪ್ಯಕ್ಕೊಳಗಾಗಿದ್ದ ಧೃತರಾಷ್ಟ್ರನಲ್ಲಿ ವೈರಾಗ್ಯವನ್ನುಂಟುಮಾಡುವುದಕ್ಕಾಗಿ ನಾಯಿಗೆ ಆಹಾರವನ್ನು ಹಾಕುವಂತೆ ಆಹಾರವನ್ನು ಎಸೆಯುತ್ತಿದ್ದುದೇ ಮೊದಲಾದ ಸೇಡಿಗೊಳಗಾದವನಂತೆ ನಡೆಸುತ್ತಿದ್ದ ಚಟುವಟಿಕೆಗಳನ್ನು ಸ್ಮರಿಸಿಕೊಳ್ಳಬೇಕು.

**ಸಾಮಗರ ಸ್ವರದಲ್ಲಿ:** ಸಾಮಗಾನದ ಕಾಲದಲ್ಲಿ ಸಾಮಗನ ವಾಗಿಂದ್ರಿಯವೇ ಮುಖ್ಯಪ್ರಾಣನ ಪೀಠ. ಆ ವಾಗಿಂದ್ರಿಯದಲ್ಲಿ ಮುಖ್ಯಪ್ರಾಣನು ಪ್ರತಿಷ್ಠಿತನಾಗಿರುವನು –ಎಂಬ ಬೃಹದಾರಣ್ಯಕೋಪನಿಷತ್ತಿನ ಸಂದೇಶದಡಿ[99] ಸಾಮಗರು ಸಾಮಗಾನ ನಡೆಸುತ್ತಿರುವಾಗ ಅವರ ವಾಗಿಂದ್ರಿಯದಲ್ಲಿದ್ದುಕೊಂಡು ಮುಖ್ಯಪ್ರಾಣ ಸಾಮಗಾನದ ಸ್ವರವನ್ನು ಹೊರಡಿಸುವನೆಂದು ಅನುಸಂಧಾನ ನಡೆಸಬೇಕು.

**ನೀರಿನಲ್ಲಿ ಮಾಧ್ಯಮದ ಸಾಧನೆಗಳ ನಿರ್ವಹಣೆಯಲ್ಲಿ:** ಭಗವಂತನಿಂದ ತನ್ನ ಅರ್ಚನೆಯ ಸಾಧನವಾಗಿಯೇ ಸೃಷ್ಟಿಸಲ್ಪಟ್ಟಿರುವ ನೀರಿಗೆ[100] ಜಪ, ಪೂಜೆ ಮುಂತಾದ ಸಾಧನಾನುಷ್ಠಾನದಲ್ಲಿ ತುಂಬ ಪ್ರಾಶಸ್ತ್ಯವಿದೆ. ಅಂತಹ ನೀರಿಗೆ ವಾಯುದೇವ ಅಭಿಮಾನಿ.[101] ಆದುದರಿಂದ ನೀರಿನ ಮಾಧ್ಯಮದ ಸಾಧನೆಗಳ ಅನುಷ್ಠಾನದಲ್ಲೆಲ್ಲ ಅವನ ಪಾತ್ರ ಸ್ಮರಣಾರ್ಹ.

- 'ಉದನ್ಯಾ' –ಎಂಬ ರೂಪದಿಂದ ನೀರಡಿಕೆಯನ್ನು ಉಂಟುಮಾಡುವ ವಾಯುದೇವ, ನೀರಡಿಕೆಯ ಪರಿಹಾರಕ್ಕಾಗಿ ಕುಡಿದ ನೀರಿಗೆ ಅಭಿಮಾನಿಯಾಗಿದ್ದು, ಆ ನೀರಿನ

---

98. 'ಧರ್ಮೋ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚತುರಾತ್ಮಕಃ । ವಾಯುರ್ದೇವೋ....... ।
– *ಐತರೇಯಭಾಷ್ಯ (1-1-3)*

99. ವಾಚಿ ಹಿ ಖಲ್ವೇಷ ಏತತ್ ಪ್ರಾಣಃ ಪ್ರತಿಷ್ಠಿತೋ ಗೀಯತೇ । – *ಬೃ.ಉ. 3-3-27.*
* ವಾಗಿಂದ್ರಿಯಂ ಪೀಠರೂಪಂ ತಸ್ಯ ಪ್ರಾಣಸ್ಯ ಸಂಸ್ಥಿತಮ್ । ಗಾನಕಾಲೇ...... ।
– *ಬೃಹದ್ಭಾಷ್ಯ.*

100. ಅತೋಽರ್ಚತೋ ಯತೋ ಜಾತಾ ಆಪೋಽತೋಽರ್ಚನಸಾಧನಾಃ ।
– *ಬ್ರಹ್ಮಾಂಡೇ (ಬೃ.ಉ.ಭಾ. 3-2-1)*

101. .........ವಾಯುಶ್ಚಾಬಭಿಮಾನವಾನ್ । – *ಬ್ರಹ್ಮಾಂಡೇ (ಬೃ.ಉ.ಭಾ. 3-5-4)*

ಮಧ್ಯಮಭಾಗ ರಕ್ತವಾಗಿ, ಸೂಕ್ಷ್ಮಭಾಗ ಪ್ರಾಣಶಕ್ತಿಯಾಗಿ ಪರಿಣಾಮ ಹೊಂದುವಂತೆ ಪ್ರೇರಿಸುವನು.102

ಆದ್ದರಿಂದ ನೀರನ್ನು ಕುಡಿಯುವಾಗ ಆ ನೀರಿನ ಮಧ್ಯಮಭಾಗದಿಂದ ರಕ್ತವೂ, ಸೂಕ್ಷ್ಮಭಾಗದಿಂದ ಪ್ರಾಣಶಕ್ತಿಯೂ ಉಂಟಾಗುವಂತೆ ವಾಯುದೇವ ನಿಯಮಿಸುವನೆಂಬ ಅನುಸಂಧಾನವನ್ನು ತಂದುಕೊಳ್ಳಬೇಕು.

- ಆಚಮನಾದಿಗಳಲ್ಲಿ ನೀರನ್ನು ಸೇವಿಸುವಾಗಲೂ, ಆ ನೀರಿನಲ್ಲಿ ಅಭಿಮಾನಿಯಾಗಿ ಪ್ರಾಣದೇವನಿದ್ದು, ಅದರ ಮೂಲಕ ಪಾವಿತ್ರ್ಯಾದಿಗಳನ್ನು ಕರುಣಿಸುವನೆಂಬ ಅನುಸಂಧಾನ ಬೇಕು.
- ಯಾವುದೇ ಸಾಧನೆಯ ಆದಿಯಲ್ಲಿ ಸಂಕಲ್ಪ ಮಾಡುವಾಗ, ಕೊನೆಯಲ್ಲಿ ಕೃಷ್ಣಾರ್ಪಣ ಬಿಡುವಾಗ, ಬಲಗೈಯ ಬೆರಳುಗಳ ತುದಿಯಿಂದ ನೀರು ಬಿಡುವಾಗ ಆ ನೀರಿನಲ್ಲಿ ಅಭಿಮಾನಿಯಾಗಿರುವ ವಾಯುದೇವನೂ ಇದ್ದುಕೊಂಡು ನಡೆಸುವ ಸಂಕಲ್ಪ ಕೃಷ್ಣಾರ್ಪಣಗಳಿಗೆ ಪುಷ್ಟಿ ಕೊಡುವನೆಂಬ ಅನುಸಂಧಾನ ಬೇಕು.
- ಪೂಜಾಕಾಲದಲ್ಲಿ ಭಗವಂತನ ಪ್ರತೀಕಗಳಾದ ಸಾಲಿಗ್ರಾಮಾದಿಗಳಿಗೆ ನೀರಿನಿಂದ ಅಭಿಷೇಕ ನಡೆಸುವಾಗ, ಆ ನೀರಿನಲ್ಲಿ ಅಭಿಮಾನಿಯಾಗಿರುವ ವಾಯುದೇವ ಇದ್ದು ಕೊಂಡು ತನ್ನ ಅಭಿಮಾನಕ್ಕೊಳಗಾದ ನೀರನ್ನು ಸ್ನಾನರೂಪದಲ್ಲಿ ಅರ್ಪಿಸುತ್ತಿರುವ ನೆಂಬ ಅನುಸಂಧಾನವನ್ನು ತಂದುಕೊಳ್ಳಬೇಕು.
- ನೈವೇದ್ಯವಸ್ತುಗಳಲ್ಲಿ ಒಂದಾಗಿ ನೀರನ್ನು ದೇವರಿಗೆ ಅರ್ಪಿಸುವಾಗಲೂ ನೀರಿನ ಅಭಿ ಮಾನಿ ವಾಯುದೇವನ ಮೂಲಕ ಅವರ ಸಮರ್ಪಣೆ ನಡೆಯುತ್ತಿದೆ ಎಂಬ ವಿವೇಚನೆ ಬೇಕು.
- ದೇವಪೂಜೆಯ ಅಂಗವಾಗಿ ಅರ್ಘ್ಯ, ಪಾದ್ಯ –ಮುಂತಾದ ಉಪಚಾರಗಳನ್ನು ವಿಧಿ ವತ್ತಾಗಿ ಸಮರ್ಪಿಸಲು ಆಗದಿದ್ದಲ್ಲಿ **'......ಅಶಕ್ತಾಶ್ಚೇಜ್ಜಲೈಃ ಕುರ್ಯುಃ ಪರಾರ್ಚನಮ್'** (3-75) **'ಅಸೌಕರ್ಯಾತ್..... ಅರ್ಘ್ಯಾದಿಕಂ ಜಲೈರ್ದದ್ಯಾತ್....'** (9-29) –ಎಂದು 'ಯೋಗದೀಪಿಕಾ'ದಲ್ಲಿ ತಿಳಿಸಿರುವಂತೆ ನೀರಿನ ಮೂಲಕ ಉಪಚಾರಗಳನ್ನು ಅರ್ಪಿಸುವಾಗ, ವಾಯುದೇವ ಆ ನೀರಲ್ಲಿದ್ದುಕೊಂಡು ಅರ್ಘ್ಯಾದಿ ಉಪಚಾರಗಳನ್ನು ಅರ್ಪಿಸುತ್ತಿರುವನೆಂಬ ಭಾವನೆಯನ್ನು ತಾಳಬೇಕು.

**ಸ್ನಾನದ ನಿರ್ವಹಣೆಯಲ್ಲಿ:** ನೀರಿನ ಮೂಲಕ ನಡೆಸಲಾಗುವ ಪ್ರಮುಖ ಸಾಧನೆ– ಸ್ನಾನ ಹಾಗೂ ಸ್ವಚ್ಛತೆಯ, ಪಾವಿತ್ರ್ಯದ ಪ್ರಕ್ರಿಯೆಗಳು.

ಸ್ನಾನದಿಂದ ಪಾವಿತ್ರ್ಯ ಸಿದ್ಧಿಸಬೇಕೆಂದರೆ ಪಾವಿತ್ರ್ಯದ ದೇವತೆಯಾದ ಪವಮಾನನ ಸ್ಮರಣೆ ಬೇಕೇಬೇಕು. ಸ್ನಾನಕ್ಕಾಗಿ ವಿನಿಯೋಗಿಸಿಕೊಳ್ಳಲ್ಪಡುವ ನೀರಿನ ಅಭಿಮಾನಿ

102. ಆಪಃ ಪೀತಾಸ್ತ್ರೇಧಾ ವಿಧೀಯಂತೇ ತಾಸಾಂ...... ಯೋ ಮಧ್ಯಮಸ್ತಲ್ಲೋಹಿತಂ ಯೋಽಣಿಷ್ಠಃ ಸ ಪ್ರಾಣಃ । *– ಛಾಂ.ಉ. 6-2-9.*

ಯಾಗಿರುವ ಪವಮಾನ ತನ್ನ ಅಭಿಮಾನಕ್ಕೆ ಆಸ್ಪದವಾಗಿರುವ ಆ ಜಲದಲ್ಲಿ ನದ್ಯಾದಿ ಜಲಾಶಯಾಭಿಮಾನಿದೈವೀಶಕ್ತಿಗಳೂ, ಆರೋಗ್ಯಪೋಷಕಗಳಾದ ಔಷಧೀಯಗುಣಧರ್ಮಗಳೂ ಜಾಗೃತಗಳಾಗಿರುವಂತೆ ಅನುಗ್ರಹಿಸುವನು.

ಪಂಚಾಂಗಗಳನ್ನೊಳಗೊಂಡ ಸ್ನಾನದಲ್ಲಿ ಮೂರನೆಯ ಅಂಗ 'ಮಾರ್ಜನ' ಎನಿಸಿದ್ದು, ಪ್ರೋಕ್ಷಣೆ ಎನಿಸುವ ಅಂತಹ ಮಾರ್ಜನೆಗೆ ವಿನಿಯೋಗಿಸಿಕೊಳ್ಳಬೇಕೆಂದು ವಿಧಿಸಲಾದ ಮಂತ್ರಗಳಲ್ಲಿ ಪವಮಾನನಲ್ಲಿ ಸಲ್ಲಿಸಲಾಗುವ ಪ್ರಾರ್ಥನಾರೂಪದಲ್ಲಿರುವ **'ಯದಂತಿ ಯಚ್ಚ ದೂರಕೇ.......'** –ಎಂಬ ಪವಮಾನದ ಮಂತ್ರಗಳೂ ಸೇರಿಕೊಂಡಿವೆ.103 ಅದರಲ್ಲಿ ಮುಖ್ಯವಾಗಿ **'ಪವಿತ್ರಾಣಾಂ ಪವಿತ್ರಂ.........'** ಎಂದಿರುವಂತೆ ಪವಿತ್ರ ಪದಾರ್ಥಗಳಿಗೆಲ್ಲ ಪಾವಿತ್ರ್ಯವನ್ನು ಅನುಗ್ರಹಿಸುವ, ಸ್ವಾಭಾವಿಕವಾಗಿ ಪವಿತ್ರನಾಗಿರುವ ಭಗವಂತನ ಸನ್ನಿಧಾನ ದೊರಕುವಂತೆ ಮಾಡುವ ಮೂಲಕವೂ, **'ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ'** –ಭಗವದ್‌ಜ್ಞಾನಕ್ಕೆ ಸರಿದೂಗುವ ಪವಿತ್ರವಾದ ವಸ್ತು ಮತ್ತೊಂದು ಜಡಪ್ರಪಂಚದಲ್ಲಿ ಇಲ್ಲವೇ ಇಲ್ಲ –ಎಂದು ಗೀತಾಚಾರ್ಯನಿಂದ ಘೋಷಿಸಲ್ಪಟ್ಟಿರುವ ಅತ್ಯಂತ ಪವಿತ್ರವಾದ ಭಗವದ್‌ಜ್ಞಾನದ ಮೂಲಕವೂ ಸರ್ವತೋಮುಖವಾಗಿ ಪವಿತ್ರೀಕರಿಸಲು ಪ್ರಾರ್ಥಿಸಲಾಗುವುದು.104

ಇದರಿಂದ ಸ್ನಾನಕಾಲದಲ್ಲಿ ಪವಮಾನನನ್ನು ಜಲಾಭಿಮಾನಿಯನ್ನಾಗಿಯಷ್ಟೇ ಅಲ್ಲದೆ ಪಾವಿತ್ರ್ಯಸಂಪಾದಕನನ್ನಾಗಿ ಸ್ಮರಿಸಿಕೊಳ್ಳುವುದರಲ್ಲಿಯ ಔಚಿತ್ಯ ಸ್ಪಷ್ಟವಾಗಬಲ್ಲುದು.

ನಾವು ಸ್ನಾನದಿಂದ ನಿರೀಕ್ಷಿಸುವ ಪಾವಿತ್ರ್ಯವು ಅಂತಹ ಪಾವಿತ್ರ್ಯಕ್ಕೆ ಕೇಂದ್ರಬಿಂದು ವಿನಂತಿರುವ ಪರಮಾತ್ಮನ ಸನ್ನಿಧಾನದಿಂದಲೇ ಸಿದ್ಧಿಸಬೇಕಾದದ್ದು. ಪರಮಾತ್ಮನಿಗೆ ಅತ್ಯಂತ ಆಪ್ತನಾದ ಪವಮಾನನಿಂದಲೇ ಪರಮಾತ್ಮನ ವಿಶೇಷ ಸನ್ನಿಧಾನ ಸಿದ್ಧಿಸಲು ಸಾಧ್ಯ.

ಹಾಗೆಯೇ ಸ್ನಾನದಿಂದ ಅಂತಃಕರಣ ಶುದ್ಧವಾಗಬೇಕಾದರೆ ಅಂತಃಕರಣದಲ್ಲಿ ಭಗವಂತನ ಪ್ರಜ್ಞೆಯ ಜ್ವಾಲೆ ಉರಿಯಬೇಕು. ಅದನ್ನು ಸಮರ್ಥವಾಗಿ ಉರಿಸಲು ಸಮರ್ಥನಾದವನು ಪವಮಾನನೇ. ಆದುದರಿಂದಲೇ ಈ ಎರಡರ ಸಂಪರ್ಕದ ಮೂಲಕ ಸ್ನಾನಮಾಧ್ಯಮದಿಂದ ಪಾವಿತ್ರ್ಯ ದೊರಕುವಂತೆ ಅವನಲ್ಲಿ ಪ್ರಾರ್ಥಿಸಿಕೊಳ್ಳುವುದು ಅತ್ಯಂತ ಔಚಿತ್ಯಪೂರ್ಣ.

ಆದುದರಿಂದ ಸ್ನಾನಕಾಲದಲ್ಲಿ ಜಲಾಭಿಮಾನಿಯಾಗಿ, ಪಾವಿತ್ರ್ಯಸಂಪಾದಕನಾಗಿ ಪವಮಾನನ ಅನುಸಂಧಾನ ಅತ್ಯಾವಶ್ಯಕ.

**ಶೌಚ ಚಟುವಟಿಕೆಗಳ ನಿರ್ವಹಣೆಯಲ್ಲಿ:** ಶುದ್ಧಿಯ, ಪಾವಿತ್ರ್ಯದ ಸಂಪಾದಕನಾಗಿ ಸ್ನಾನದಂತೆ ಕೈಕಾಲು ತೊಳೆದುಕೊಳ್ಳುವುದೇ ಮುಂತಾದ ಇನ್ನೂ ಅನೇಕ ಶೌಚ ಚಟುವಟಿಕೆಗಳು ವಿಹಿತವಾಗಿವೆ. ಅವುಗಳು ಕೂಡಾ ನೀರು, ಮಣ್ಣು, ಬಿಸಿಲು, ಬೆಂಕಿ

103. .........ಪಾವಮಾನಿಭಿರೇವ ಚ । ಪುನಂತು ಮಾಂ ಇತಿ ಪಾವಮಾನೀಃ ಪ್ರಯೋಜಯೇತ್ । – *ಬೃಹದ್ಯೋಗಿಯಾಜ್ಞವಲ್ಕ್ಯಸ್ಮೃತಿ 7-22.*

104. ಉಭಾಭ್ಯಾಂ ದೇವ ಸವಿತಃ ಪವಿತ್ರೇಣ ಸವೇನ ಚ । ಮಾಂ ಪುನೀಹಿ ವಿಶ್ವತಃ ॥

–ಇತ್ಯಾದಿಗಳ ಮೂಲಕ ನಡೆಸಬೇಕಾದವು. ನೀರು ಮುಂತಾದವು ಪವಮಾನನ ಸಂಪರ್ಕದಿಂದಾಗಿಯೇ ಪಾವಿತ್ರ್ಯಸಾಧನಗಳೆನಿಸುವವು. ಮಣ್ಣಿನ ಪಾವಿತ್ರ್ಯಸಾಧನತ್ವದ ವಿಷಯದಲ್ಲಿ ವಾಯುದೇವನ ಪಾತ್ರವನ್ನು ಸಾರತಕ್ಕ ಪ್ರಮಾಣ ಉಪಲಬ್ಧವಿಲ್ಲದಿದ್ದರೂ, ನೀರು, ಬೆಂಕಿ, ಸೂರ್ಯನ ಬಿಸಿಲು –ಇತ್ಯಾದಿಗಳಿಗೆ ವಾಯುದೇವನ ಸಂಪರ್ಕವನ್ನು ಅನೇಕ ಪ್ರಮಾಣಗಳು ಸಾರುತ್ತಿವೆ.

ಆದುದರಿಂದ ಆಯಾ ಪಾವಿತ್ರ್ಯ ಸಾಧನದ ಮೂಲಕ ಪಾವಿತ್ರ್ಯವನ್ನು ಸಾಧಿಸು ತ್ತಿರುವಾಗ ಅವುಗಳಿಗೆ ಇರುವ ವಾಯುದೇವನ ನಂಟನ್ನು ಅನುಸಂಧಾನಕ್ಕೆ ತಂದುಕೊಳ್ಳ ಬೇಕು.

**'ಪವನಃ ಪವತಾಮಸ್ಮಿ.....'** (ಗೀ.10-31) ಎಂಬುದಾಗಿ ಪಾವಿತ್ರ್ಯಪ್ರದವಸ್ತುಗಳಲ್ಲೆಲ್ಲ ಪವವನು ಶ್ರೇಷ್ಠ ಎನಿಸುವಂತೆ ಅವನಲ್ಲಿ ಪವನ ಎಂಬ ವಿಭೂತಿರೂಪದಿಂದ ತಾನು ಇರುವುದಾಗಿ ಗೀತಾಚಾರ್ಯ ಸಂದೇಶಿಸಿರುವುದನ್ನು ನೆನಪಿಸಿಕೊಳ್ಳಬೇಕು.

ಕಾಮಕ್ರೋಧಾದಿ ದೋಷಗಳ ಆಕ್ರಮಣದಿಂದ ಮಾನಸಿಕವಾಗಿ ಕಲುಷಿತಗೊಂಡರೂ ದೋಷಾದಿಗಳ ನಿಯಾಮಕನಾದ ಭಗವಂತನ ಪ್ರಜ್ಞೆಯನ್ನು ಉಂಟುಮಾಡುವ ಮೂಲಕ ಪವಿತ್ರಗೊಳಿಸುವ ವಾಯುದೇವನ ಪಾತ್ರವನ್ನು ವಿವೇಚಿಸಿಕೊಳ್ಳಬೇಕು.

**ಯಜ್ಞದ ಪರಿಸರವನ್ನು ಪವಿತ್ರಗೊಳಿಸುವಲ್ಲಿ:** ವಾಯುದೇವ ಯಜ್ಞಾಭಿಮಾನಿಯಾಗಿರುವುದರಿಂದ ಯಜ್ಞ ಎನಿಸುವನು. ಅಲ್ಲದೆ, ಎಲ್ಲೆಡೆ ಸಂಚರಿಸುತ್ತ ಶುದ್ಧಿಯನ್ನು ಉಂಟುಮಾಡುವ ಪ್ರಯುಕ್ತ ಕೂಡಾ ಯಜ್ಞ ಎನಿಸುವನೆಂದು ಸಂದೇಶಿಸುವ ಉಪನಿಷತ್ತು[105] ವಿಶೇಷವಾಗಿ ಯಜ್ಞ ನಡೆಯುವ ಪರಿಸರದಲ್ಲಿ ವಾಯುದೇವನ ಸಂಚಾರದಿಂದಾಗಿ, ಸನ್ನಿಧಾನದಿಂದಾಗಿ ಪಾವಿತ್ರ್ಯ ಸಿದ್ಧಿಸುವುದೆಂದು ಸೂಚಿಸುವುದು.

ಆದುದರಿಂದ ಯಜ್ಞ ಅಂದರೆ, ಸರ್ವಜ್ಞನಾಗಿದ್ದು ಜ್ಞ ಎನಿಸುವ ಭಗವಂತನ ಪ್ರೀತಿಗಾಗಿ ನಡೆಸುವ ವಿಹಿತಕರ್ಮಗಳು ನಡೆಯುವಲ್ಲೆಲ್ಲ[106] 'ಯಜ್ಞ' ಎನಿಸುವ ಪವಮಾನನಿಂದಾಗಿ ಪಾವಿತ್ರ್ಯವನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಯಜ್ಞದ ನಿರ್ವಹಣೆಯಲ್ಲಿ:** ಯಜ್ಞಾಭಿಮಾನಿಯಾಗಿದ್ದು ಯಜ್ಞ ಎನಿಸುವ ವಾಯುದೇವನು ತನ್ನ ಅಭಿಮಾನಕ್ಕೆ ಆಸ್ಪದವಾದ 'ಯಜ್ಞ' ಸುಸುತ್ರವಾಗಿ ನಡೆಯುವಂತೆ ಯಜಮಾನ, ಪುರೋಹಿತ, ಋತ್ವಿಜರು –ಮುಂತಾದವರನ್ನೂ, ಸಮಿತ್, ದರ್ಭೆ, ತುಪ್ಪ

---

105. ಯಜ್ಞಾಭಿಮಾನೀ ಯಜ್ಞಾಖ್ಯೋ ವಾಯುರ್ಯಜ್ಞೇ ಪ್ರತಿಷ್ಠಿತಃ । ಜ್ಞ ಶುದ್ಧಭಾವ ಇತ್ಯಸ್ಮಾದ್ ಯನ್ನಯಂ ಪಾವಯೇದ್ ಯತಃ । ಅತೋ ವಾಯುರ್ಯಜ್ಞನಾಮಾ..... ।
*– ಛಾಂ.ಉ.ಭಾ. 4-4-1.*

106. ಜ್ಞೋ ನಾಮ ಭಗವಾನ್ ವಿಷ್ಣುಸ್ತಂ ಯಾತ್ಯುದ್ದೇಶ ಏಷ ಯಃ । ಸ ಯಜ್ಞ ಇತಿ ಸಂಪ್ರೋಕ್ತೋ ವಿಹಿತೇ ಕರ್ಮಣಿ ಸ್ಥಿತಃ । *– ಬರ್ಕಶ್ರುತಿ (ಗೀ.ತಾ. 3-9)*

–ಇತ್ಯಾದಿಗಳನ್ನೂ ಪ್ರೇರಿಸುವನು. ಯಜ್ಞವನ್ನು ಕೆಡಿಸಲು ಹವಣಿಸುತ್ತಿರುವ ಆಸುರೀಶಕ್ತಿಗಳ ವಿರುದ್ಧ ಕಾದಾಡುವುದಕ್ಕೆ ಸಿದ್ಧನಾಗಿರುವನು.

ಅಗ್ನಿಮುಖದ ಆರಾಧನಾರೂಪವಾದ ಯಜ್ಞ ಹಾಗೂ ಭಗವಂತನ ಪ್ರೀತಿಗಾಗಿ ನಡೆಯುವ ಯಜ್ಞ ಎನಿಸುವ ಶಾಸ್ತ್ರವಿಹಿತಗಳಾದ ಚಟುವಟಿಕೆಗಳು ನಡೆಯುವಲ್ಲೆಲ್ಲ 'ಯಜ್ಞ'ನಾಮಕ ವಾಯುದೇವನು ಅವುಗಳ ನಿರ್ವಹಣೆಯಲ್ಲಿ ತೊಡಗಿರುವನೆಂದು ಅನುಸಂಧಾನ ನಡೆಸಬೇಕು.

ಇಂದ್ರಪ್ರಸ್ಥದಲ್ಲಿ ಯುಧಿಷ್ಠಿರನ ಯಾಜಮಾನ್ಯದಲ್ಲಿ ನಡೆದಿದ್ದ ರಾಜಸೂಯಯಾಗದಲ್ಲಿ ಭೀಮರೂಪದಿಂದ ಪಾತ್ರ ವಹಿಸಿದ್ದನ್ನೂ, ಮಧ್ವರೂಪದಿಂದ ತಮ್ಮ ಗುರುಪುತ್ರ ವಾಸುದೇವನ ಯಾಜಕತ್ವದಲ್ಲಿ ನಡೆದ ಮಹಾಕ್ರತುವಿನಲ್ಲಿ ಪಾತ್ರ ವಹಿಸಿದ್ದನ್ನೂ ಪೂರಕವಾಗಿ ವಿವೇಚಿಸಿಕೊಳ್ಳಬೇಕು.

**ಅಶನಾಪಿಪಾಸಾರೂಪಗಳಿಂದ ಹವಿಸ್ಸಿನ ಭೋಗ:** ಅಶನಾ ಪಿಪಾಸಾ ಎಂಬುದಾಗಿ ವಾಯುದೇವನ ಎರಡು ರೂಪಗಳು. ಅವುಗಳಲ್ಲಿ ಅಶನಾ ಎಂಬುದು ಹಸಿವೆಗೂ, ಪಿಪಾಸಾ ಎಂಬುದು ನೀರಡಿಕೆಗೂ ಅಭಿಮಾನಿಗಳಾದ ರೂಪಗಳು. ಅವುಗಳು ಭಗವದಾಜ್ಞಾನುಸಾರವಾಗಿ ಎಲ್ಲ ದೇವತೆಗಳಲ್ಲೂ ಪ್ರವೇಶಿಸುವರು. ಆದುದರಿಂದ ಎಲ್ಲ ದೇವತೆಗಳ ಹವಿರ್ಭಾಗವನ್ನು ವಾಯುದೇವನು ತನ್ನ ಅಶನಾ ಪಿಪಾಸಾ ಎಂಬ ರೂಪಗಳಿಂದ ಭುಂಜಿಸುವನು.[107]

ಆದುದರಿಂದ ಯಾವುದೇ ದೇವತೆಗಳ ಹೆಸರಿನಲ್ಲಿ ಯಜ್ಞ ನಡೆಯಲಿ ಅಲ್ಲಿ ವಾಯುದೇವನು ಆಯಾ ದೇವತೆಗಳಲ್ಲಿ ಅಶನಾ ಮತ್ತು ಪಿಪಾಸಾ ರೂಪಗಳಿಂದ ಇದ್ದುಕೊಂಡು ಯಜ್ಞದ ಹವಿಸ್ಸನ್ನು ಸ್ವೀಕರಿಸುತ್ತಿರುವರೆಂದು ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಕರ್ಮಗಳ ಸಮರ್ಪಣೆಯಲ್ಲಿ:** ಬೇರೆಬೇರೆ ಜೀವಾತ್ಮರ ಯೋಗ್ಯತಾನುಸಾರವಾಗಿ ಬೇರೆಬೇರೆ ಕರ್ಮಗಳನ್ನು ನಡೆಸಿ, ಅವನ್ನು ಕರ್ಮಾಧ್ಯಕ್ಷನಾದ ಭಗವಂತನ ಪಾದಾರವಿಂದಕ್ಕೆ ಅರ್ಪಿಸುವವನು ವಾಯುದೇವನು.[108]

---

107. ತದಾಽಶನಾಪಿಪಾಸಾಖ್ಯಂ ದ್ವಿರೂಪಂ ಮಾರುತಂ ಪುನಃ ।
ತಸ್ಮಿನ್ ದೇವಸಮೂಹೇ ತು ವಿಷ್ಣುಃ ಪ್ರಾವೇಶಯತ್ ಪ್ರಭುಃ ॥
ತೇಽಬ್ರುವನ್ ದೇಹಿನೋ ವಾಸಂ ಯತ್ರ ಚಾನ್ನಮದಾಮಹೇ ।
............ಹರಿಃ ಸರ್ವತ್ರ ಪ್ರವಿಶೇತ್ಯಮುಮ್ ॥
ಆಹ ತಸ್ಮಾದ್ ದೇವತಾನಾಂ ಸರ್ವಾಸಾಂ ಭಾಗಭುಙ್ಮರುತ್ ।
ಏಕ ಏವ ಪ್ರಾಣಾನಾಮಾ.......... ॥ *– ಐ.ಉ.ಭಾ. 2-3-2-4.*

108. ಮಾರುತ್ಯೇವ ಯತಶ್ಚೇಷ್ಟಾ ಸರ್ವಾ ತಾಂ ಹರಯೇಽರ್ಪಯೇತ್ ।
*– ಬ್ರಹ್ಮಾಂಡ (ಯಾ.ಉ. 1.1.4)*

ನಮ್ಮ ಮೂಲಕ ನಡೆಯುತ್ತಿರುವ ಒಂದೊಂದು ಕರ್ಮವನ್ನೂ ಆಯಾ ಕರ್ಮ ನಡೆದಾಕ್ಷಣ **'ನಾಹಂ ಕರ್ತಾ ಹರಿಃ ಕರ್ತಾ:..... ಕರ್ಮನ್ಯಾಸೋ ಹರಾವೇವಂ ವಿಭೋಸ್ಮೃತಿ-ಕರಃ ಸದಾ'** –ಎಂದು 'ಬ್ರಹ್ಮತರ್ಕ' (ಗೀ.ತಾ.3-27) ಪ್ರಸ್ತುತಪಡಿಸುತ್ತಿರುವ ಅನುಸಂಧಾನಿಕ ಸಮರ್ಪಣೆಗೆ ಆಯಾ ಕರ್ಮವನ್ನು ಒಳಪಡಿಸುತಿಗ್ತಿರಬೇಕು. ಇಲ್ಲದಿದ್ದಲ್ಲಿ ಅದರ ಸ್ವತಂತ್ರ ಕರ್ತೃತ್ವವನ್ನು ನಮ್ಮಲ್ಲಿ ಆರೋಪಿಸಿಕೊಂಡಂತಾಗಿ ಅಪರಾಧ ಎನಿಸುವುದು. ಆದರೆ ನಾವು ಈ ಬಗೆಯ ಸಮರ್ಪಣೆಯನ್ನು ನಡೆಸುತ್ತಿರುವುದಿಲ್ಲ. ಜಪ, ಪೂಜೆ ಮುಂತಾದ ಕೆಲವು ಆಧ್ಯಾತ್ಮಿಕ, ಧಾರ್ಮಿಕ ಚಟುವಟಿಕೆಗಳನ್ನು **'ಕೃಷ್ಣಾರ್ಪಣಮಸ್ತು'** –ಎಂಬ ಶಾಬ್ದಿಕ ಸಮರ್ಪಣೆಗಷ್ಟೇ ಒಳಪಡಿಸುವೆವು.

ವಾಯುದೇವ ಹೇಗೆ ನಮ್ಮ ಶ್ವಾಸಗಳನ್ನು ಜಪದ ಮೂಲಕ ದೇವರಿಗೆ ಅರ್ಪಿಸು ವನೋ ಹಾಗೆ ನಮ್ಮ ರೆಪ್ಪೆ ಅಲ್ಲಾಡಿಸುವುದೇ ಮುಂತಾದ ಚಿಕ್ಕಪುಟ್ಟ ಕರ್ಮಗಳನ್ನೂ ಕರ್ಮಾಧ್ಯಕ್ಷನಿಗೆ ಅನುಸಂಧಾನಿಕ ಸಮರ್ಪಣೆ ನಡೆಸುತ್ತಿರುವರು. ಪ್ರತಿನಿತ್ಯ ಬೆಳಗ್ಗೆ ಶ್ವಾಸಮಂತ್ರದ ಜಪದ ಅನುಸಂಧಾನವನ್ನು ನಾವು ಮಾಡುವಂತೆ ಮುಖ್ಯಪ್ರಾಣನ ಮೂಲಕ ನಡೆಯುವ ಕರ್ಮಸಮರ್ಪಣೆಯ ಅನುಸಂಧಾನವನ್ನೂ ಪ್ರತಿನಿತ್ಯ ಬೆಳಗ್ಗೆ ಹಾಗೂ ರಾತ್ರಿ ಮಲಗುವ ಮುಂಚೆ ನಡೆಸುತ್ತಿರಬೇಕು.

ಅಲ್ಲದೆ, ಜಪ, ಪೂಜೆ ಇತ್ಯಾದಿ ಆಧ್ಯಾತ್ಮಿಕ ಹಾಗೂ ಧಾರ್ಮಿಕ ಚಟುವಟಿಕೆಗಳಿಗಾಗಿ ಸಂಕಲ್ಪ ಹಾಗೂ ಕೃಷ್ಣಾರ್ಪಣ ನಡೆಸುವಾಗ ಮುಖ್ಯಪ್ರಾಣ ನಮ್ಮಲ್ಲಿದ್ದು ಮನಸ್ಸಿನ, ಬುದ್ಧಿಯ ಹಾಗೂ ಇಂದ್ರಿಯಗಳ ಮೂಲಕ ಆ ಚಟುವಟಿಕೆಯನ್ನು ನಡೆಸುತ್ತಿರುವುದರಿಂದ ಅವನೂ ನಮ್ಮ ಜೊತೆಗೆ ಆ ಚಟುವಟಿಕೆಗೆ ಸಂಬಂಧಿಸಿದಂತೆ ಸಂಕಲ್ಪ ಹಾಗೂ ಕೃಷ್ಣಾರ್ಪಣ ನಡೆಸುತ್ತಿರುವನೆಂಬ ಅನುಸಂಧಾನವನ್ನು ತಂದುಕೊಳ್ಳಬೇಕು.

**ಗದಾಮುದ್ರೆಯ ಧಾರಣೆಗೆ ಸಂಬಂಧಿಸಿದಂತೆ:** ಈ ದೇಹವನ್ನು ಭಗವಂತನ ಸೇವೆಗಾಗಿ ಸಮರ್ಪಿಸುವಲ್ಲಿ ಊರ್ಧ್ವಪುಂಡ್ರಗಳ ಧಾರಣೆ ಹೇಗೋ ಹಾಗೆಯೇ ಭಗವಂತನ ಚಿಹ್ನೆಗಳೆನಿಸಿರುವ ಚಕ್ರಶಂಖಾದಿಗಳ ಧಾರಣೆಯೂ ವಿಹಿತವಾಗಿದೆ.

ಪಂಚಮುದ್ರೆಗಳಲ್ಲಿ ಗದಾಮುದ್ರೆಯೂ ಒಂದು. ಕೌಮೋದಕೀ ಎಂಬ ಹೆಸರಿನ ಭಗವಂತನ ಆ ಆಯುಧ ವಾಯುದೇವನ[109] ಸ್ವರೂಪ. ಆದುದರಿಂದ ಹಣೆಯಲ್ಲಿ ಒಂದು, ಹೊಟ್ಟೆಯ ಎಡಬದಿಯಲ್ಲಿ ಒಂದು, ಎದೆಯ ಎಡಬದಿಯಲ್ಲಿ ಒಂದು ಹಾಗೂ ಎಡ ತೋಳಿನ ನಾಮದ ಎರಡು ಬದಿಗಳಲ್ಲಿ ಎರಡು –ಹೀಗೆ ದೇಹದ ನಾಲ್ಕು ಸ್ಥಾನಗಳಲ್ಲಿ ಐದು ಗದಾಮುದ್ರೆಗಳನ್ನು ಧರಿಸುವಾಗ[110] ಬಲ ಹಾಗೂ ಜ್ಞಾನಸ್ವರೂಪಿಯಾದ ವಾಯುದೇವನ ಸ್ವರೂಪವಾದ ಗದೆಯನ್ನು ಸಂಕೇತಿಸುವ ಚಿಹ್ನೆಗಳಿಂದಾಗಿ ಸನ್ನಿಹಿತನಾಗುವ

---

109. ಗದಾ ತು ವಾಯುರ್ಬಲಸಂವಿದಾತ್ಮಾ....... । – *ಮ.ಭಾರ.ತಾ.ನಿ. 3-75.*

110. ಲಲಾಟೇ ತು ಗದಾ ಧಾರ್ಯಾ ವಾಮಪಾರ್ಶ್ವೇ ತಥಾ ಸ್ತನೇ ।
ಬಾಹುಜೇ ತಿಲಕೇ ದ್ವೇ ತು ಶಂಖಾಧೋಭಾಗಭೇದತಃ ॥ – *ವರಾಹಪುರಾಣ.*

ವಾಯುದೇವನು ಬಲದಿಂದಾಗಿ ದೇಹದ ಮೇಲೆ ಆಸುರೀಶಕ್ತಿಗಳ ಆಕ್ರಮಣ ಆಗದಂತೆ ತಡೆಯುವನಾದರೆ, ಜ್ಞಾನದಿಂದಾಗಿ ದೇಹವು ಮಾನಸಿಕವಾಗಿ, ಬೌದ್ಧಿಕವಾಗಿ ಕಲುಷಿತ ಗೊಳ್ಳದಂತೆ ರಕ್ಷಣೆ ನೀಡುವನೆಂಬ ಅನುಸಂಧಾನವನ್ನು ತಂದುಕೊಳ್ಳಬೇಕು.

**ಗದಾಧಾರಣೆಗೆ ಸಂಬಂಧಪಡುವಂತೆ:** 'ಶಂಖಚಕ್ರಗದಾಪದ್ಮಧರಾಶ್ಚಿಂತ್ಯಾಃ ಹರೇ ರ್ಭುಜಾಃ......' –ಎಂದು ಶ್ರೀಮಧ್ವರು ದ್ವಾದಶಸ್ತೋತ್ರದಲ್ಲಿ ಸಂದೇಶಿಸಿರುವಂತೆ ಶ್ರೀಹರಿಯ ನಾಲ್ಕು ಭುಜಗಳಲ್ಲಿ ಚಕ್ರಾದಿ ಆಯುಧಗಳು ಹೇಗೋ ಹಾಗೆ ಕೆಳಗಿನ ಬಲಗೈಯಲ್ಲಿ ಗದೆ ಧರಿಸಲ್ಪಟ್ಟಿದೆ ಎಂದು ಚಿಂತಿಸಬೇಕು.

ಜಡ ಗದೆಯನ್ನಾಗಿಯಷ್ಟೇ ಚಿಂತಿಸದೆ ಬಲಜ್ಞಾನಸ್ವರೂಪ ವಾಯುದೇವನೇ ಗದಾ ಯುಧವಾಗಿ ಶ್ರೀಹರಿಯ ಕೆಳಗಿನ ಬಲಗೈಯಲ್ಲಿ ಮೆರೆಯುತ್ತಿದ್ದಾನೆ. ಭಗವದಾದೇಶಾನು ಸಾರವಾಗಿ ಭಕ್ತರ ವಿರುದ್ಧ ಸಂಭವಿಸುವ ಆಸುರೀಶಕ್ತಿಯನ್ನು ದಮನ ಮಾಡುವುದರಲ್ಲೂ, ದುರ್ವಿಚಾರಗಳನ್ನು ದೂರೀಕರಿಸುವಲ್ಲೂ ಮಗ್ನನಾಗಿರುವನೆಂಬ ಅನುಸಂಧಾನ ತಂದು ಕೊಳ್ಳಬೇಕು.

**ಸಾಧಕನಾಗಿ ನರೋತ್ತಮನ ಸ್ಮರಣೆ:** ಮಹಾಭಾರತ, ಭಾಗವತಾದಿಗಳಲ್ಲಿ ಪ್ರಾರಂಭ ದಲ್ಲಿಯೇ ಪ್ರಸ್ತುತವಾದ ಆರು ವ್ಯಕ್ತಿಗಳ ಉಲ್ಲೇಖವುಳ್ಳ ಒಂದು ಸ್ತುತಿಯಲ್ಲಿ ನರೋತ್ತಮ ನಾದ ವಾಯುದೇವನಿಗೆ ನಮಸ್ಕರಿಸಿ, ಬಳಿಕ 'ಜಯ' ಎನಿಸುವ ಮಹಾಭಾರತಾದಿಗಳ ಪ್ರವಚನ ನಡೆಸಬೇಕೆಂದು ವಿಧಿಸಲಾಗಿದೆ.111 ವಾಯುದೇವ ಮುಖ್ಯ ಸಾಧಕನಾಗಿರು ವುದರಿಂದ ಅವನು ಸಾಧಕನಾಗಿ ಸಾಧನೆಯ ಮೆಟ್ಟಲು ಏರುತ್ತಿರುವ ನಮ್ಮನ್ನು ಕೈಹಿಡಿದು ಮೇಲಕ್ಕೆ ಎತ್ತುವಂತಾಗಬೇಕೆಂಬ ದೃಷ್ಟಿಯಿಂದ ಅವನ ಸ್ಮರಣೆ ವಿಧಿಸಲ್ಪಟ್ಟಿದೆ ಎಂದು ಶ್ರೀಮಧ್ವರು ಸ್ಪಷ್ಟಪಡಿಸಿರುವರು.112

ಆದುದರಿಂದ ನಾವು ಜಯ ಎನಿಸುವ ಮಹಾಭಾರತದ ಪಾಠಪ್ರವಚನಾದಿಗಳಲ್ಲಿ ತೊಡಗುವಾಗ 'ನಾರಾಯಣಂ ನಮಸ್ಕೃತ್ಯ........' ಸಾಧಕರನ್ನಾಗಿ ವಾಯುದೇವನನ್ನು ನಮಸ್ಕರಿಸಬೇಕು. ಇದರಿಂದ ಪ್ರಸನ್ನರಾಗುವ ವಾಯುದೇವರು ನಮಗೆ ಪಾಠಪ್ರವಚನ ರೂಪದ ಸಾಧನೆಗೆ ಪುಷ್ಟಿ ನೀಡುವರೆಂದು ಅನುಸಂಧಾನ ನಡೆಸಬೇಕು.

**ಶಾಂತಿಪಾಠದಲ್ಲಿ ವಾಯುದೇವನ ಸ್ಮರಣೆ:** ಯಜುರ್ವೇದಕ್ಕೆ ಸೇರಿದ ತೈತ್ತಿರೀಯೋ ಪನಿಷತ್ತಿನ 'ಶಂ ನೋ ಮಿತ್ರಃ ಶಂ ವರುಣಃ........' ಇತ್ಯಾದಿಯಾಗಿ ಇರುವ ಯಜು ರ್ವೇದೀಯ ಶಾಂತಿಪಾಠದಲ್ಲಿ 'ನಮಸ್ತೇ ವಾಯೋ.......' –ಎಂದು ವಾಯುದೇವನನ್ನು

---

111. ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥
– *ಮ.ಭಾರ.ತಾ.ನಿ. 3-4.*

112. ಜಯೋ ನಾಮೇತಿಹಾಸೋಽಯಂ ಕೃಷ್ಣದ್ವೈಪಾಯನೇರಿತಃ ।
ವಾಯುರ್ನರೋತ್ತಮೋ ನಾಮ ........ । – *ಮ.ಭಾರ.ತಾ.ನಿ. 3-5.*

ಸಂಬೋಧಿಸಿ, ಅವನಿಗೆ ಪರಬ್ರಹ್ಮನ ಪ್ರತಿಮೆಯಾಗಿ ಶಾಸ್ತ್ರಪ್ರತಿಪಾದ್ಯತ್ವವನ್ನು ತಿಳಿಸಲಾಗಿದೆ.[113]

ಅಲ್ಲದೆ, ತನ್ನ ರಕ್ಷಣೆಗಾಗಿಯೂ, ಗುರುಗಳ ರಕ್ಷಣೆಗಾಗಿಯೂ ಬಿನ್ನವಿಸಿಕೊಳ್ಳಲಾಗಿದೆ.[114]

ಇದರಿಂದ ಸಿದ್ಧವಾಗುವ ಅಂಶ – ಈ ಶಾಂತಿಪಾಠ ಹೇಳಿ ಪ್ರಾರಂಭಿಸಲಾಗುವ ಪಾಠಪ್ರವಚನದಲ್ಲಿ ವಾಯುದೇವನೂ ದೇವರಿಗೆ ಪ್ರತಿಮೆಯಾಗಿ ಪ್ರತಿಪಾದ್ಯನಾಗುತ್ತಿರುವನು.

ಹಾಗೆಯೇ ವಾಯುದೇವ ಪ್ರವಚನಕಾರರನ್ನೂ, ಅವರ ಗುರುಗಳನ್ನೂ ಐಹಿಕವಾದ ಸಮೃದ್ಧಾದಿಗಳನ್ನು ನೀಡಿಯೂ ಪಾರತ್ರಿಕವಾಗಿ ಅವರಿಗೆ ಸದ್ಗತಿ ದೊರಕುವಂತೆ ಮಾಡಿಯೂ ಐಹಿಕವಾಗಿಯೂ, ಪಾರತ್ರಿಕವಾಗಿಯೂ ರಕ್ಷಣೆ ನೀಡುತ್ತಿರುವನು.

ಶಾಂತಿಪಾಠದ 'ನಮಸ್ತೇ ವಾಯೋ......' ಇತ್ಯಾದಿ ಮಾತುಗಳಿಂದ ಹೀಗೆ ಅನುಸಂಧಾನ ಮಾಡುತ್ತಿರಬೇಕು.

**ಪ್ರತಿಮಾದರ್ಶನದಲ್ಲಿ:** ಪ್ರತಿಮೆಯೇ ದೇವರು ಅಲ್ಲ ಹೇಗೋ ಹಾಗೆ ಪ್ರತಿಮೆಯಲ್ಲಿ ನೇರವಾಗಿ ದೇವರು ಸನ್ನಿಹಿತನಾಗಿರುವುದಿಲ್ಲ ಎಂಬುದು ಕೂಡಾ. ಭಗವಂತನ ಪ್ರತಿಮೆಗಳಾಗಿದ್ದರೆ, ಆ ಪ್ರತಿಮೆಗಳಲ್ಲಿ ತೇಜೋಮಯನಾದ ವಾಯುದೇವ ಸನ್ನಿಹಿತನಾಗಿದ್ದು, ಅಂತಹ ವಾಯುದೇವನಲ್ಲಿ ದೇವರು ನೆಲೆಸಿರುವನು. ಇತರ ದೇವತೆಗಳ ಪ್ರತಿಮೆಗಳಾಗಿದ್ದರೆ, ಆ ಪ್ರತಿಮೆಗಳಲ್ಲಿ ಆಯಾ ದೇವತೆಗಳು ಸನ್ನಿಹಿತರಾಗಿರುವರು. ಆ ದೇವತೆಗಳಲ್ಲಿ ತೇಜೋಮಯ ವಾಯುದೇವ; ಅವನಲ್ಲಿ ಭಗವಂತ ಸನ್ನಿಹಿತನಾಗಿರುವನು. ಇದೇ 'ಗೋಲಕದ್ವಯ' 'ಗೋಲಕತ್ರಯ' –ಚಿಂತನೆ ಎಂದು ಪಾರಿಭಾಷಿಕವಾಗಿ ಪರಿಗಣಿಸಲ್ಪಡುವುದು.[115]

ಹೀಗೆ ಭಗವಂತನ ಪ್ರತಿಮೆಯನ್ನಾಗಲೀ, ಭಗವದ್‌ಭಕ್ತರ ಪ್ರತಿಮೆಗಳನ್ನಾಗಲೀ ಕಾಣುವಾಗ ಅವರಲ್ಲಿ ದೇವರ ದರ್ಶನ ಪಡೆದುಕೊಳ್ಳಬೇಕೆಂದರೆ ಮೊದಲು ಮುಖ್ಯಪ್ರಾಣನ ದರ್ಶನ ಪಡೆಯಬೇಕು.

---

113. '......ನಮಸ್ತೇ ವಾಯೋ ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಾಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ......... ।' – *ತೈ.ಉ. 1-1.*

* ಅತೋ ಬ್ರಹ್ಮಣಃ ಸ್ವಯಂ ಮುಖ್ಯತಃ ಸನ್ನಿಹಿತತ್ವೇನ ತವ ವಿಷ್ಣೋಃ ಮುಖ್ಯತಃ ಪ್ರತಿಮಾತ್ವೇನ ರಂಗನಾಥಾದಿಪ್ರತಿಮಾದೌ ತ್ವಮೇವ ರಂಗನಾಥ ಇತ್ಯುಕ್ತಿರ್ಯಥಾ ತಥಾ ವಾಯೋರಪಿ ಪ್ರತ್ಯಕ್ಷಬ್ರಹ್ಮತ್ವೋಕ್ತಿಃ । – *ಪ್ರಕಾಶಿಕಾ.*

114. ತನ್ಮಾಮವತು । ತದ್ವಕ್ತಾರಮವತು ......... । – *ತೈ.ಉ. 1-1.*

115. ಗೋಳಕಾದ್ವಿತಯಂ ವಿಷ್ಣೋಸ್ತ್ರಿತಯಂ ವಾ ಪ್ರಕೀರ್ತಿತಮ್ ।
ಅನ್ಯದೇವಪ್ರತಿಷ್ಠಾಸು ತದಂತಶ್ಚಿಂತಯೇದ್ಧರಿಮ್ ॥ – *ತಂ.ಸಾ.ಸಂ. 3-123.*

ಪ್ರತಿಮಾದರ್ಶನದಲ್ಲಷ್ಟೇ ಅಲ್ಲದೆ, ಪೂಜೆಯ ಸಂದರ್ಭದಲ್ಲೂ ಪ್ರತಿಮೆಗಳಲ್ಲಿ ದೇವರ ದರ್ಶನವನ್ನು ಹೀಗೆಯೇ ಪಡೆಯಬೇಕು.

**ಉಪಾಂಶು ಉಚ್ಚಾರಣೆಗೆ ದೇವತೆಯಾಗಿ:** ಮಂತ್ರಗಳನ್ನು ಗಟ್ಟಿಯಾಗಿ ಹೇಳುವುದಕ್ಕೆ ಭಾರತೀದೇವಿ ಅಭಿಮಾನಿನಿಯಾದರೆ, ಉಪಾಂಶು ಎನಿಸುವ ಮೆಲ್ಲನೆ ಉಚ್ಚರಿಸುವಿಕೆಗೆ ವಾಯುದೇವನು ಅಭಿಮಾನಿ. ಆದುದರಿಂದ ಮಂತ್ರಗಳನ್ನು ಗಟ್ಟಿಯಾಗಿ ಪಠಿಸುವುದಕ್ಕಿಂತ ಮೆಲ್ಲನೆ ಪಠಿಸುವುದು ಅಧಿಕ ಫಲಪ್ರದ.116

ಆದುದರಿಂದ ಮಂತ್ರಗಳನ್ನು ಆದಷ್ಟು ಮೆಲ್ಲನೆ ಪಠಿಸುತ್ತ, ಅದಕ್ಕೆ ವಾಯುದೇವ ಅಭಿಮಾನಿಯಾಗಿ ಆ ರೀತಿಯಾಗಿ ಪಠಿಸಲು ಪ್ರೇರಿಸುತ್ತಿರುವನೆಂದು ಅನುಸಂಧಾನ ನಡೆಸುತ್ತಿರಬೇಕು. ಹಾಗೆಯೇ ಮೆಲ್ಲನೆ ಪಠಿಸುವಿಕೆ ಗಟ್ಟಿಯಾಗಿ ಪಠಿಸುವುದಕ್ಕಿಂತ ಅಧಿಕ ಫಲಪ್ರದವಾಗುವಂತೆ ಮಾಡಿರುವವರು ವಾಯುದೇವನೆಂದೂ ವಿವೇಚಿಸಿಕೊಳ್ಳುವರು.

**ಬೃಹತೀ ಛಂದಸ್ಸಿನ ಅಭಿಮಾನಿಯಾಗಿ:** ಪ್ರತಿಯೊಂದು ಪಾದದಲ್ಲೂ ಒಂಭತ್ತು ಅಕ್ಷರಗಳನ್ನೊಳಗೊಂಡಿದ್ದು, ಶ್ಲೋಕದ ನಾಲ್ಕು ಚರಣಗಳಲ್ಲಿ ಒಟ್ಟು ಮೂವತ್ತಾರು ಅಕ್ಷರಗಳನ್ನು ಹೊಂದಿದ್ದಲ್ಲಿ ಅದು 'ಬೃಹತೀಛಂದಸ್ಸು' ಎನಿಸುವುದು. ಇದಕ್ಕೆ ವಾಯುದೇವನು ಅಭಿಮಾನಿಯಾಗಿರುವುದರಿಂದಲೇ ಛಂದಸ್ಸುಗಳಲ್ಲೆಲ್ಲ ಶ್ರೇಷ್ಠವಾದ ಛಂದಸ್ಸು ಎನಿಸಿದೆ.117 ಬೃಹತೀಛಂದಸ್ಸಿನ ಮಂತ್ರಗಳನ್ನು ಪಠಿಸುವಾಗ ಆ ಮಂತ್ರಗಳ ಛಂದಸ್ಸಿನ ಅಭಿಮಾನಿಯನ್ನಾಗಿ ವಾಯುದೇವನನ್ನು ಸ್ಮರಿಸುತ್ತಿರಬೇಕು; ಅಲ್ಲದೆ ಆ ಛಂದಸ್ಸು ಉಳಿದೆಲ್ಲ ಛಂದಸ್ಸುಗಳಿಗಿಂತ ಶ್ರೇಷ್ಠವೆನಿಸುವಂತೆ ಮಾಡಿರುವವನೂ ವಾಯುದೇವನೆಂಬ ಅನುಸಂಧಾನ ಇರಬೇಕು.

**ಬೃಹತೀಸಹಸ್ರ ವಿಷ್ಣುಸಹಸ್ರನಾಮ ಪ್ರತಿಮೆ:** ಮೂವತ್ತಾರು ಅಕ್ಷರಗಳ ಬೃಹತೀ ಛಂದಸ್ಸಿನಿಂದ ಬದ್ಧಗಳಾದ ಸಾವಿರ ಋಙ್ಮಂತ್ರಗಳ ಸಮುಚ್ಚಯ 'ಬೃಹತೀಸಹಸ್ರ' –ಎನಿಸುತ್ತಿದ್ದು ಅದು ತನ್ನಲ್ಲಿ ಘಟಕಗಳಾದ ಮೂವತ್ತಾರು ಸಾವಿರ ಸ್ವರಾಕ್ಷರಗಳಿಂದಲೂ, ಮೂವತ್ತಾರು ಸಾವಿರ ವ್ಯಂಜನಾಕ್ಷರಗಳಿಂದಲೂ ಪ್ರತಿಯೊಬ್ಬ ಮನುಷ್ಯನ ಶರೀರದಲ್ಲಿರುವ ಎಪ್ಪತ್ತೆರಡುಸಾವಿರ ನಾಡಿಗಳಲ್ಲಿರುವ ಎಪ್ಪತ್ತೆರಡುಸಾವಿರ ಭಗವದ್ರೂಪಗಳನ್ನೂ, ಪ್ರತಿಯೊಬ್ಬ ಮನುಷ್ಯನ ನೂರು ವರ್ಷ ಆಯುಷ್ಯದ ಮೂವತ್ತಾರುಸಾವಿರ ಹಗಲುಗಳನ್ನೂ, ಮೂವತ್ತಾರುಸಾವಿರ ರಾತ್ರಿಗಳನ್ನೂ ನಿಯಂತ್ರಿಸುತ್ತ ಸೂರ್ಯನಲ್ಲಿರುವ ಎಪ್ಪತ್ತೆರಡುಸಾವಿರ ಭಗವದ್ರೂಪಗಳನ್ನೂ ಪ್ರತಿಪಾದಿಸುತ್ತ ಉತ್ತಮ ಸ್ತೋತ್ರ ಎನಿಸಿದೆ.

---

116. ಭಾರತ್ಯುಚ್ಚೋದಿತಸ್ಯಾಪಿ ಹ್ಯಕಾರಸ್ಯಾಭಿಮಾನಿನೀ ।
ತಸ್ಮಾದುಚ್ಚಾದುಪಾಂಶುರ್ಹಿ ಜಪಾದಿಷು ಫಲಾಧಿಕಃ ।
ವಾಯುಃ ಪತಿರ್ಹಿ ಭಾರತ್ಯಾ ಉಪಾಂಶೋರ್ದೇವತಾ ಮತಃ ॥
– *ಐ.ಉ.ಭಾ. 2-2-6-7.*

117. ಅಭಿಮಾನೀ ಬೃಹತ್ಯಾಸ್ತು ವಾಯುರೇವ ಯತಃ ಪ್ರಭುಃ ।
ತಸ್ಮಾದೇಷಾ ಛಂದಸಾಂ ಹಿ ವರಿಷ್ಠಾ ಬೃಹತೀ ಸ್ಮೃತಾ ॥ – *ಐ.ಉ.ಭಾ. 2-2-5-5.*

ಇಂತಹ ಬೃಹತೀಸಹಸ್ರವು ವಾಯುದೇವನ ಪ್ರತಿಮಾರೂಪದಲ್ಲಿ ಇರುವಂತಹದ್ದು. ಅಂತಹ ವಾಯುದೇವ ಶ್ರೀವಿಷ್ಣುವಿನ ಮುಖ್ಯಪ್ರತಿಮೆಯಾಗಿರುವುದರಿಂದ ಬೃಹತೀಸಹಸ್ರ ವಿಷ್ಣುವಿನ ಪ್ರತಿಮೆ ಎನಿಸುವುದು.[118] ಶ್ರೀವಿಷ್ಣು ಬೃಹತೀಛಂದಸ್ಸಿನ ಮಂತ್ರದ ಮೂವತ್ತಾರು ಅಕ್ಷರಗಳನ್ನೊಳಗೊಂಡಿರುವಿಕೆಯೇ ಮುಂತಾದ ಧರ್ಮಗಳನ್ನು ನಿಯಮಿಸುವನು. ಅವನ ಅನುಗ್ರಹದಿಂದ ವಾಯುದೇವನೂ ನಿಯಮಿಸುವನು.[119]

ಆದುದರಿಂದ ಬೃಹತೀಸಹಸ್ರದ ಪಠನ, ಅದರ ಮೂಲಕದ ಹೋಮ –ಮುಂತಾದ ಸಂದರ್ಭಗಳಲ್ಲಿ ವಾಯುದೇವನ ಅನುಸಂಧಾನವನ್ನೂ ತಂದುಕೊಳ್ಳಬೇಕು. ಹಾಗೆಯೇ ಬೃಹತೀಸಹಸ್ರದ ಮೂಲದಂತೆ ಇರುವಂತಹದ್ದು ವಿಷ್ಣುಸಹಸ್ರನಾಮ.[120] ಬೃಹತೀಸಹಸ್ರ ವಾಯುದೇವನ ಪ್ರತಿಮೆ ಎಂದಲ್ಲಿ ಅಂತಹ ಬೃಹತೀಸಹಸ್ರದ ಮೂಲರೂಪವಾದ ವಿಷ್ಣುಸಹಸ್ರನಾಮವೂ ವಾಯುದೇವನ ಪ್ರತಿಮೆ –ಎಂಬುದಾಗಿ ವಿಷ್ಣುಸಹಸ್ರನಾಮದ ಪಠನ, ಚಿಂತನಾದಿಗಳ ಸಂದರ್ಭಗಳಲ್ಲಿ ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಬೃಹತೀಸಹಸ್ರದ ಊಷ್ಮವರ್ಣಾಭಿಮಾನಿಯಾಗಿ:** ಬೃಹತೀಸಹಸ್ರದ ಶ, ಷ, ಸ ಹಾಗೂ ಹ ಊಷ್ಮ ಎನಿಸುವ ಈ ನಾಲ್ಕು ವರ್ಣಗಳಿಗೆ ಅಭಿಮಾನಿದೇವತೆ ವಾಯುದೇವ.[121]

ಆದುದರಿಂದ ಬೃಹತೀಸಹಸ್ರದಲ್ಲಿ ಶ, ಷ, ಸ ಹಾಗೂ ಹ ಈ ನಾಲ್ಕು ವರ್ಣಗಳು ಎಲ್ಲೇ ಬಂದರೂ ಅವುಗಳ ಉಚ್ಚಾರಣೆಗೆ ಪೋಷಕನಾಗಿ ವಾಯುದೇವ ಅನುಗ್ರಹಿಸುವನೆಂಬ ಅನುಸಂಧಾನ ಇರಬೇಕು.

**ಬೃಹತೀಸಹಸ್ರ ವಾಯುದೇವನಿಗೂ ಅನ್ನ:** ಅನ್ಯದೇವತಾವಿಷಯಕಗಳಾದ ಋಕ್‌ಗಳು ಹೇಗೆ ಮುಖ್ಯವಾಗಿ ಭಗವದ್ವಿಷಯಕಗಳೋ ಹಾಗೆಯೇ, ಭಗವಂತನ ಬಳಿಕ ಅವು ವಾಯುದೇವನನ್ನೂ ತಿಳಿಸುವವು ಎಂದು ಐತರೇಯಭಾಷ್ಯದಲ್ಲಿ ಉಪಪಾದಿಸಿದ ಶ್ರೀಮಧ್ವರು, ಆದುದರಿಂದಲೇ ಬೃಹತೀಸಹಸ್ರ ಮುಖ್ಯವಾಗಿ ನಾರಾಯಣನಿಗೆ ಅನ್ನ ಎನಿಸಿದ್ದು ಅವನಿಗೆ ಅತ್ಯಂತ ಪ್ರಿಯವಾಗಿದೆಯೋ ಅಂತೆಯೇ ಅವನ ಆದೇಶಾನುಸಾರವಾಗಿ

---

118. ಯಃ ಪ್ರಾಣದೇವತಾ ವಾಯುಃ ತಸ್ಯ ಪ್ರತಿಮಾರೂಪಮಿದಂ ಬೃಹತೀಸಹಸ್ರಮ್ । ಸ ಚ ವಾಯುರ್ವಿಷ್ಣೋರ್ಮುಖ್ಯಪ್ರತಿಮಾ । ತಸ್ಮಾದ್ ವಿಷ್ಣೋರೇವ ಪ್ರತಿಮಾ ಬೃಹತೀಸಹಸ್ರಮ್ । *– ಐ.ಉ.ಭಾ. 2-2-5-4.*

119. ಸ ಹಿ ತಸ್ಯಾ ಷಟ್‌ತ್ರಿಂಶದಕ್ಷರಾದಿತ್ವಮಪಿ ನಿಯಮಯತಿ ತತ್‌ಪ್ರಸಾದಾತ್ ವಾಯುಶ್ಚ । ವಾಯುರೇವ ಯದ್ ಭಗವನ್ನಿಯತೋ ನಿಯಮಯತಿ ತಸ್ಮಾತ್ .... । *– ಐ.ಉ.ಭಾ. 2-2-6-4.*

120. ವಿಷ್ಣೋಃ ಸಹಸ್ರನಾಮ್ನಸ್ತು ಯತ್ ತದ್ ರೂಪಸಹಸ್ರಕಮ್ ।
ಬೃಹತೀಸಹಸ್ರಮೇತಚ್ಚ ತದ್ ವಕ್ತಿ ಹಿ ಪೃಥಕ್ ಪೃಥಕ್ ॥ *– ಐ.ಉ.ಭಾ. 2-2-4-4.*

121. ಊಷ್ಮಾಭಿಮಾನೀ ವಾಯುಶ್ಚ ...... । *– ಐ.ಉ.ಭಾ. 2-1-2-2.*

ಬೃಹತೀಸಹಸ್ರವು ವಾಯುದೇವನಿಗೂ ಅನ್ನ ಎನಿಸಿದೆ. ಆದುದರಿಂದಲೇ ಬೃಹತೀಸಹಸ್ರದ ಶಂಸನದಿಂದ ಭಗವಂತನಂತೆಯೇ ವಾಯುದೇವನೂ ಪ್ರೀತನಾಗುವನು. ದೇವೇಂದ್ರನ ಮಹಾವ್ರತದಲ್ಲಿ ವಿಶ್ವಾಮಿತ್ರಋಷಿಗಳು ನಡೆಸಿದ ಬೃಹತೀಸಹಸ್ರದ ಶಂಸನವನ್ನು ವಾಯು ಸಹಿತನಾದ ಪರಮಾತ್ಮನೇ ದೇವೇಂದ್ರನಲ್ಲಿ ಆವಿಷ್ಟನಾಗಿ ಕೇಳಿ ಸಂತೋಷಪಟ್ಟಿದ್ದನು –ಎಂದು ಸಮರ್ಥಿಸಿರುವರು.[122]

ಆದುದರಿಂದ ಬೃಹತೀಸಹಸ್ರದ ಶಂಸನ ನಡೆಯುವಲ್ಲಿ ವಾಯುದೇವನೂ ಸಂತೋಷ ಪಡುತ್ತಿರುವನೆಂದು ಅನುಸಂಧಾನ ಮಾಡಬಹುದಾಗಿದೆ. ಹಾಗೆಯೇ ಬೃಹತೀಸಹಸ್ರವು ವಾಯುದೇವನಿಗೆ ಅನ್ನ ಎನಿಸಿದೆ ಎಂದರೆ, ಅಂತಹ ಬೃಹತೀಸಹಸ್ರದ ಮೂಲದಂತಿರುವ ವಿಷ್ಣುಸಹಸ್ರನಾಮವೂ ವಾಯುದೇವನಿಗೆ ಅನ್ನದ ಸಾರ ಎನಿಸಿದ್ದು, ಅದರ ಪಠನ ದಿಂದಲೂ ಅವನು ಪ್ರಸನ್ನನಾಗುವನೆಂದು ಅನುಸಂಧಾನ ನಡೆಸಬಹುದು.

ಅಕಾರಕ್ಕೆ ಅಭಿಮಾನಿ: ವಾಯುದೇವ ಮತ್ತು ಚತುರ್ಮುಖರು ಅಕಾರದ ದೇವತೆ ಗಳೆನಿಸುವರೇ ಹೊರತು 'ಅ' ಎಂಬ ಹೆಸರುಳ್ಳವರಲ್ಲ ಎಂದು ಪ್ರತಿಪಾದಿಸಿದ 'ಬ್ರಹ್ಮ ಸಾರ'ವು ವೇದಾಭಿಮಾನಿದೇವತೆ ಬೇರೆ, ವೇದವಾಚ್ಯ ಬೇರೆ ಹೇಗೋ ಹಾಗೆ 'ಅ' –ಎಂಬ ಭಗವಂತನ ಅಸಾಧಾರಣನಾಮಕ್ಕೆ ವಾಯುದೇವನು ಅಭಿಮಾನಿ ಆದರೆ, ಅದರಿಂದ ವಾಚ್ಯನಾಗುವವನು ಭಗವಂತನು ಮಾತ್ರ –ಎಂದು ಸಾರಿದೆ.[123]

ಆದುದರಿಂದ ಅಕಾರ ಎಲ್ಲಿ ಕಾಣಿಸಿಕೊಂಡರೂ ಅದಕ್ಕೆ ಅಭಿಮಾನಿಯಾಗಿ ವಾಯು ದೇವನು, ಅದು ಅಸಾಧಾರಣವಾಗಿ ಭಗವಂತನನ್ನು ಪ್ರತಿಪಾದಿಸುವಂತೆ ನಿಯಂತ್ರಿಸುತ್ತಿರು ವನೆಂದು ಅನುಸಂಧಾನ ಮಾಡಬಹುದು.

**ತಕಾರ ಥಕಾರಗಳಿಗೆ ಅಭಿಮಾನಿ:** ವ್ಯಾಪ್ತಿ ಅರ್ಥವನ್ನು ತಿಳಿಸುವ 'ತ'ಕಾರವೂ, ಸ್ಥಿತಿ ಅರ್ಥವನ್ನು ತಿಳಿಸುವ 'ಥ'ಕಾರವೂ ಮುಖ್ಯಪ್ರಾಣನೇ ಅಭಿಮಾನಿಯಾಗಿ ಉಳ್ಳವುಗಳು. ಆದುದರಿಂದ ಎಲ್ಲ ಬಗೆಯ ಸೂತ್ರಗಳಲ್ಲಿ **'ಅಥಾತೋ ಬ್ರಹ್ಮಜಿಜ್ಞಾಸಾ' 'ಅಥಾತೋ**

---

122. ಅನ್ಯದೇವತಾವಿಷಯತ್ವೇನ ಪ್ರತೀಯಮಾನಾ ಅಪ್ಯೃಚೋ ಭಗವದ್ವಿಷಯಾ ಏವ ಮುಖ್ಯತಃ । ತದನಂತರಂ ವಾಯುವಿಷಯಾಶ್ಚ । ತಸ್ಮಾದ್ ಬೃಹತೀಸಹಸ್ರಂ ಸರ್ವಂ ಮುಖ್ಯತೋ ನಾರಾಯಣಸ್ಯಾನ್ನಮ್ । ತದಾಜ್ಞಯಾ ವಾಯೋಶ್ಚ । ತಸ್ಮಾತ್ ತಚ್ಛಂಸನೇನ ಭಗವಾನ್ ವಾಯುಶ್ಚಾತಿಪ್ರೀತಃ...... ಬೃಹತೀಸಹಸ್ರಂ ಶಂಸಿಷ್ಯನ್ ಯದಾ ಸಸ್ಮಾರ ಕೇಶವಮ್ । ವಾಯುನಾ ಸಹ ದೇವೇಶಸ್ತದಾ ವಾಸವಮಾವಿಶತ್ ...... ।

*– ಐ.ಉ.ಭಾ. 2-1-2-13.*

123. ವಾಯುರ್ಬ್ರಹ್ಮಾಪಿ ಚಾಽಕಾರದೇವತೇ ನ ತು ನಾಮಿನೌ ।
ಯಥಾ ವೇದಾಭಿಧೇಯೋಽನ್ಯೋ ವೇದಾಖ್ಯಾ ದೇವತಾ ಪರಾ ।
ಏವಂ ನಾಮಾಭಿಮಾನೀ ತು ವಾಯುರ್ವಾಚ್ಯೋ ಜನಾರ್ದನಃ ॥

*– ಬ್ರಹ್ಮಸಾರ (ಐ.ಉ.ಭಾ. 2-2-6-5)*

ಧರ್ಮಜಿಜ್ಞಾಸಾ......' ಇತ್ಯಾದಿಯಾಗಿ ಎರಡನೆಯ, ಮೂರನೆಯ ಶಬ್ದವಾಗಿ ನಿಯತವಾಗಿ ಪ್ರಯೋಗಿಸಲ್ಪಡುವುದು –ಎಂದು ಗಾರುಡ ತಿಳಿಸಿದೆ.[124]

ಆದುದರಿಂದ ಪ್ರತಿಯೊಂದು ಶಾಸ್ತ್ರದ ಮೊದಲ ಸೂತ್ರದಲ್ಲಿ '**ಅಥಾತೋ.....**' ಭಾಗವು ಸೇರಿದ್ದು, ಅದಕ್ಕೆ ಪ್ರಾಥಮಿಕ ಉಚ್ಚಾರಣೆಗೆ ಅರ್ಹತೆ ಬರಲು ಕಾರಣ ವಾಯು ದೇವ ಅಭಿಮಾನಿಯಾಗಿರುವುದೂ ಒಂದು ಎಂಬ ಅನುಸಂಧಾನ ಇರಬೇಕು.

'**ಅಥ**' ಮತ್ತು '**ಅತಃ**' –ಎಂಬ ಶಬ್ದಗಳು ಎಲ್ಲೇ ಬರಲಿ, ಅಥವಾ ಬೇರೆ ಶಬ್ದ ಗಳಲ್ಲೂ ತಕಾರ ಹಾಗೂ ಥಕಾರ ಬರಲಿ –ಅದಕ್ಕೆ ಮುಖ್ಯಪ್ರಾಣ ಅಭಿಮಾನಿಯಾಗಿರು ವನೆಂಬ ಅನುಸಂಧಾನ ಬೇಕು.

**ಸಕಲವೇದಗಳಿಗೆ ಆಧಾರ:** ಮುಖ್ಯಪ್ರಾಣನು ಸರ್ವವೇದಗಳಿಗೂ ಆಧಾರನಾಗಿರು ವುದರಿಂದ '**ವೇದಾಣೀ**' ಎನಿಸುವನೆಂದು 'ಶಬ್ದತತ್ತ್ವ' ತಿಳಿಸಿದೆ.[125]

ಆದುದರಿಂದ ವೇದದ ಅಧ್ಯಯನ, ಅಧ್ಯಾಪನ, ಪಾರಾಯಣಾದಿಗಳ ಸಂದರ್ಭ ಗಳಲ್ಲಿ, ಆಯಾ ಸಂದರ್ಭದಲ್ಲಿ ವಿನಿಯೋಗಿಸಲ್ಪಡುವ ವೇದದ ಪ್ರತಿಯೊಂದು ಭಾಗಕ್ಕೂ ಆಧಾರ '**ವೇದಾಣೀ**' ಎನಿಸುವ ಮುಖ್ಯಪ್ರಾಣ ಎಂಬ ಅನುಸಂಧಾನ ಬೇಕು.

**ಸಾಮವೇದಕ್ಕೆ ಅಭಿಮಾನಿ:** '......ವೇದೇಷ್ವೃಗ್ವೇದ ಏವ ಚ' –ಎಂದು ವಿಭೂತಿತತ್ತ್ವ (ಗೀ.ತಾ. 10-22) ವೇದಗಳಲ್ಲಿ ಋಗ್ವೇದ ಶ್ರೇಷ್ಠವೆನಿಸಿದ್ದು, ಅದರಲ್ಲಿ ಭಗವಂತನ ವಿಭೂತಿರೂಪ ಇದೆ ಎಂದು ತಿಳಿಸಿದ್ದರೂ, '**ವೇದಾನಾಂ ಸಾಮವೇದೋಽಸ್ಮಿ......**' (10-22) ಎಂಬುದಾಗಿ ಗೀತಾಚಾರ್ಯನು ಸಾಮವೇದದಲ್ಲಿ ತನ್ನ ವಿಭೂತಿರೂಪ ಇದೆ; ಆದುದರಿಂದಲೇ ವೈದಿಕವಾಙ್ಮಯದಲ್ಲೇ ಸಾಮವೇದ ಶ್ರೇಷ್ಠ ಎನಿಸಿದೆ ಎಂದು ಸಂದೇಶಿಸಿ ರುವನು; '**ಋಚಃ ಶ್ರೀರ್ಗೀರುಮಾದ್ಯಾಶ್ಚ ಸಾಮ್ನಃ ಪ್ರಾಣಶಿವಾದಯಃ**' –ಎಂಬ ಪ್ರಮಾಣದ ಆಧಾರದಲ್ಲಿ ಶ್ರೀಮಧ್ವರು ಸಾಮವೇದಕ್ಕೆ ಮುಖ್ಯಪ್ರಾಣನೇ ಮುಂತಾದವರು ಅಭಿಮಾನಿ ಗಳಾಗಿರುವುದರಿಂದ ಅದು ವೇದಗಳಲ್ಲೆಲ್ಲ ಶ್ರೇಷ್ಠ ಎಂಬ ಮಾತು ಅಲ್ಲಲ್ಲಿ ಬಂದಿರು ವುದೆಂದು ಪ್ರತಿಪಾದಿಸಿರುವರು.

ಆದುದರಿಂದ ಸಾಮವೇದದ ಪಾರಾಯಣ, ಚಿಂತನಾದಿಗಳು ನಡೆಯುತ್ತಿರುವಾಗ ಅದಕ್ಕೆ ಮುಖ್ಯಪ್ರಾಣ ಅಭಿಮಾನಿಯಾಗಿದ್ದು, ಆದುದರಿಂದಲೇ ಅದು ಗೀತಾಚಾರ್ಯನಿಂದ ತನ್ನ ವಿಭೂತಿರೂಪ ಎಂದು ಪರಿಗಣಿತವಾಗಿದೆ ಎಂಬ ಅನುಸಂಧಾನ ಬೇಕು.

---

124. ಓಂಕಾರಶ್ಚಾಥಶಬ್ದಶ್ಚ ತಸ್ಮಾತ್ ಪ್ರಾಥಮಿಕೌ ಕ್ರಮಾತ್ ।
ತದ್ಧೇತುತ್ವಂ ವದಂಶ್ಚಾಪಿ ತೃತೀಯೋಽತ ಉದಾಹೃತಃ ॥ ......
ತಥೌ ಪ್ರಾಣಾತ್ಮಕೌ ಪ್ರೋಕ್ತೌ ವ್ಯಾಪ್ತಿಸ್ಥಿತಿವಿಧಾಯಕೌ ।
ಅತಶ್ಚ ಪೂರ್ವಮುಚ್ಚಾರ್ಯಾಸ್ಸರ್ವ ಏತೇ ಸತಾಂ ಮತಾಃ ॥
*– ಗಾರುಡ (ಬ್ರ.ಸೂ.ಭಾ. 1-1-1)*

125. ಆಧಾರಃ ಸರ್ವವೇದಾನಾಂ ವೇದಾಣೀ ಪ್ರಾಣ ಉಚ್ಯತೇ ।
*– ಶಬ್ದತತ್ತ್ವ (ಐ.ಉ.ಭಾ. 2-6-1-1)*

**ಪ್ರಾಣಾಯಾಮದಲ್ಲಿ ಸ್ಮರಣೆ:** ರೇಚಕ, ಪೂರಕ ಹಾಗೂ ಕುಂಭಕ –ಎಂಬ ಮೂರು ಅಂಗಗಳನ್ನೊಳಗೊಂಡ ಪ್ರಾಣಾಯಾಮದಲ್ಲಿ ರೇಚಕರೂಪದಲ್ಲಿ ಬಲಭಾಗದಲ್ಲಿರುವ ಪಿಂಗಲಾನಾಡಿಯಿಂದ ದೇಹದ ಗಾಳಿಯನ್ನೆಲ್ಲ ಹೊರಗೆ ಚೆಲ್ಲಿ ಪೂರಕರೂಪದಲ್ಲಿ ಎಡಭಾಗದಲ್ಲಿರುವ ಇಡಾನಾಡಿಯಿಂದ ಒಳ್ಳೆಯ ಗಾಳಿಯನ್ನು ದೇಹದೊಳಗೆ ತೆಗೆದುಕೊಂಡು, ಕುಂಭಕರೂಪವಾಗಿ ಮಧ್ಯದಲ್ಲಿರುವ ಸುಷುಮ್ನಾನಾಡಿಯಲ್ಲಿ ವಾಯುವನ್ನು ಸ್ಥಗಿತಗೊಳಿಸಬೇಕು. ಅಂತಹ ಕುಂಭಕದ ಸ್ಥಿತಿಯಲ್ಲಿಯೇ ಯಾವ ಮಂತ್ರದ ಅಂಗವಾಗಿ ಪ್ರಾಣಾಯಾಮವನ್ನು ನಡೆಸಲಾಗುವುದೋ ಆಯಾ ಮಂತ್ರದ ಅರ್ಥಕ್ಕೆ ಪೂರಕವಾಗಿ ವಿಷ್ಣುವನ್ನು ಹೇಗೋ ಹಾಗೆಯೇ ವಾಯುವನ್ನೂ ಸ್ಮರಿಸಿಕೊಳ್ಳಬೇಕು.[126]

ಪ್ರತಿಯೊಂದು ಮಂತ್ರದ ಮುಖ್ಯಾರ್ಥ ಶ್ರೀವಿಷ್ಣುವೇ ಆಗಿರುವುದರಿಂದ ಪ್ರಣವ, ನಾರಾಯಣಾಷ್ಟಾಕ್ಷರ ಮುಂತಾದ ಮಂತ್ರವನ್ನು ಚಿಂತಿಸುವಾಗ ಆಯಾ ಮಂತ್ರಪ್ರತಿಪಾದ್ಯನನ್ನಾಗಿ ಶ್ರೀವಿಷ್ಣುವಿನ ಸ್ಮರಣೆಯನ್ನು ನಡೆಸಬಹುದು. ಆದರೆ ವಾಯುದೇವನನ್ನು ಮಂತ್ರಪ್ರತಿಪಾದ್ಯನನ್ನಾಗಿ ಸ್ಮರಿಸಿಕೊಳ್ಳಲಾಗುವುದಿಲ್ಲ. ಬದಲಾಗಿ, ಪ್ರಾಣಾಯಾಮದ ಅವಧಿಯಲ್ಲಿ ಆಯಾ ಮಂತ್ರವನ್ನು ಮನಸ್ಸಿನಲ್ಲೇ ಮೆಲ್ಲನೆ ಉಚ್ಚರಿಸುತ್ತಿರುವುದರಿಂದ 'ಉಪಾಂಶು' ಎನಿಸುವ ಆ ಬಗೆಯ ಉಚ್ಚಾರಣೆಗೆ ಅಭಿಮಾನಿಯನ್ನಾಗಿಯೂ, ಮಂತ್ರಗಳಲ್ಲಿ ಘಟಕಗಳಾಗಿರುವ ಅಕಾರ, ತಕಾರ, ಥಕಾರ ಇವುಗಳಿಗೆ ಅಭಿಮಾನಿಯನ್ನಾಗಿಯೂ, ವಿಷ್ಣುವಿನ ಸಂಸ್ಮರಣೆಗಾಗಿ ವಿನಿಯೋಗಿಸಲ್ಪಡುವ ಜ್ಞಾನ, ಭಕ್ತಿಗಳಿಗೆ ಅಭಿಮಾನಿಯನ್ನಾಗಿಯೂ ವಾಯುದೇವನನ್ನು ಸ್ಮರಿಸುತ್ತಿರಬೇಕು. ಅಲ್ಲದೆ, ವಾಯುದೇವನಿಗೂ ಅಮುಖ್ಯವಾಗಿ ಸಕಲಶಬ್ದವಾಚ್ಯತ್ವವನ್ನು ಒಪ್ಪಿಕೊಳ್ಳಲಾಗುವ ಪ್ರಯುಕ್ತ[127] ಆಯಾ ನಾಮಕ್ಕೆ ಮುಖ್ಯವಾಚ್ಯನಾದ ಭಗವಂತನಿಗೆ ಪ್ರತಿಮೆಯಾಗಿ ಪ್ರಣವ, ನಾರಾಯಣಾಷ್ಟಾಕ್ಷರ ಮುಂತಾದ ಮಂತ್ರಗಳಿಂದ ವಾಯುದೇವನೂ ವಾಚ್ಯನಾಗುವನೆಂದು ಅನುಸಂಧಾನ ಮಾಡಬಹುದಾಗಿದೆ.

**ಚೂಡಾಮಣಿಗೆ ಅಭಿಮಾನಿಯಾಗಿ:** ಭಗವಂತನ ಕೌಸ್ತುಭವು ಚತುರ್ಮುಖನ ರೂಪವಾದರೆ, ಚೂಡಾಮಣಿಯು ವಾಯುದೇವನ ರೂಪ.[128]

ಆದುದರಿಂದ ಭಗವಂತನ ಪ್ರತಿಮೆ ಮುಂತಾದುವುಗಳಲ್ಲಿ 'ಚೂಡಾಮಣಿ' ಆಭರಣ ಕಂಡಲ್ಲಿ, ಅಲ್ಲಿ ಮುಖ್ಯಪ್ರಾಣನ ಅನುಸಂಧಾನ ಮಾಡಬೇಕು. ಹಾಗೆಯೇ, ಭಗವಂತನಿಗೆ ಬೇರೆಬೇರೆ ಆಭರಣವನ್ನು ಅರ್ಪಿಸುತ್ತ 'ಚೂಡಾಮಣಿ'ಯನ್ನು ಅರ್ಪಿಸಿದಾಗ, ಅದು

126. ರೇಚಯಿತ್ವಾ ದಕ್ಷಿಣತಃ ಪೂರಯಿತ್ವಾ ತು ವಾಮತಃ । ಕುಂಭಕಂ ಚ ಸುಷುಮ್ನಾಯಾಂ ವಿಷ್ಣುಂ ವಾಯುಂ ಚ ಸಂಸ್ಮರೇತ್ । *– ತಂ.ಸಾ.ಸಂ. 4-149.*

127. ಅತಃ ಸರ್ವವೇದಾದ್ಯಭಿಧೇಯತ್ವಂ ವಾಯೋರಪ್ಯಸ್ತಿ । *– ಐ.ಉ.ಭಾ. 2-1-2-12.*

128. ಕೌಸ್ತುಭೋ ಬ್ರಹ್ಮಣೋ ರೂಪಂ ಪ್ರಾಣಶ್ಚೂಳಾಮಣಿಸ್ತಥಾ । *– ಭಾಗ.ತಾ.ನಿ. 3-16-39.*

ವಾಯುವಿನ ರೂಪ ಆಗಿರುವುದರಿಂದಲೇ ಭಗವಂತನಿಗೆ ಅತ್ಯಂತ ಪ್ರಿಯವಾದುದೆಂಬ ಅನುಸಂಧಾನ ಇರಬೇಕು.

**ಭಗವಂತನ ಸಮರ್ಥನೆಯಲ್ಲಿ ದೃಷ್ಟಾಂತ:** ಅಧಮಜೀವರು ತಮ್ಮ ದೇಹದಲ್ಲಿ ಇರುವ ಪರಮಾತ್ಮನನ್ನು ಜೀವ ಎಂದೇ ಹೇಳುವರು. ಮಧ್ಯಮಜೀವರು ಪರಮಾತ್ಮನು ಜೀವರಿಗಿಂತ ಬೇರೆಯಾಗಿರುವನೋ? ಜೀವನೇ ಪರಮಾತ್ಮನೋ ಜೀವರಿಗಿಂತ ಬೇರೆ ಯಾಗಿದ್ದರೆ ಹೇಗೆ ಇರುವರು? –ಇತ್ಯಾದಿಯಾಗಿ ಗೊಂದಲಕ್ಕೆ ಒಳಗಾಗಿರುವರು. ಉತ್ತಮ ಜೀವರಾದರೆ ಜೀವರಿಗಿಂತ ಬೇರೆ ಆಗಿಯೇ ಇರುವ ಪರಮಾತ್ಮನು ಪೂರ್ಣಾನಂದಾದಿ ಸ್ವರೂಪನಾಗಿರುವನು –ಎಂದು ಹೇಳುವರು –ಎಂದು ತಿಳಿಸಿ, ಈ ಪ್ರಮೇಯಕ್ಕೆ ಮುಖ್ಯ ಪ್ರಾಣನನ್ನು ದೃಷ್ಟಾಂತವಾಗಿ ಹೀಗೆ ಉಪಪಾದಿಸಲಾಗುವುದು– ಅಧಮಜೀವರು ಶರೀರ ದಲ್ಲಿರುವ ಶ್ವಾಸ ಗಾಳಿ ಮಾತ್ರ 'ಪ್ರಾಣ' ಎನ್ನುವರು. ಮಧ್ಯಮಜೀವರು– ಶ್ವಾಸ ಗಾಳಿಗಿಂತ ಬೇರೆಯಾದ ಪ್ರಾಣ ಇರುವನೋ? ಇಲ್ಲವೋ? ಇದ್ದರೆ ಅವನ ಸ್ವರೂಪ ಎಂತಹದು? ಈ ಎಲ್ಲ ಬಗೆಯ ಗೊಂದಲದಲ್ಲಿ ಮುಳುಗಿರುವರು. ಉತ್ತಮ ಜೀವರು ದೇವದೇವೇಶ್ವರನಾಗಿ 'ಸೂತ್ರ' ಎನಿಸುವ ವಾಯುದೇವನು ಮುಖ್ಯವಾಗಿ ಪ್ರಾಣ ಎನಿಸುವರು –ಎಂದು ಪ್ರಾಣ ವೇದಿಗಳು ಹೇಳುವರು.129

ಹೀಗೆ ಜೀವನದಲ್ಲಿ ಪ್ರಸಿದ್ಧನಾಗಿರುವ 'ಪ್ರಾಣ'ನನ್ನು ದೃಷ್ಟಾಂತವಾಗಿ ಇಟ್ಟುಕೊಂಡು ದೇವರನ್ನು ಸಮರ್ಥಿಸುವುದರಿಂದ, ಉಸಿರಾಟದ ಸಂದರ್ಭದಲ್ಲಿ ಪ್ರಾಣವಾಯುವಿಗೆ ನಿಯಾಮಕನಾಗಿ ವಾಯುದೇವನನ್ನು ವಿವೇಚಿಸಿಕೊಂಡು ಅವನಂತೆಯೇ ದೇಹದಲ್ಲಿ ಜೀವನಿಗಿಂತ ಬೇರೆಯಾಗಿ ಪರಮಾತ್ಮನಿರುವನೆಂದು ಅನುಸಂಧಾನ ನಡೆಸಬಹುದಾಗಿದೆ.

**ಗಾಯತ್ರಿಯ ಮೂರನೆಯ ಪಾದದ ಪ್ರತಿಪಾದ್ಯ:** ಗಾಯತ್ರಿಯ ಮೂರು ಪಾದ ಗಳಲ್ಲಿ ಪ್ರತಿಪಾದ್ಯಗಳಾದ ಭಗವದ್ರೂಪಗಳನ್ನು ತಿಳಿಸುತ್ತ ಉಪನಿಷತ್ತು **'ಧಿಯೋ ಯೋ ನಃ ಪ್ರಚೋದಯಾತ್'** –ಎಂಬ ಮೂರನೆಯ ಪಾದದಿಂದ ಪ್ರಾಣ, ಅಪಾನ ಹಾಗೂ ವ್ಯಾನ ಎಂಬ ಮೂರು ರೂಪಗಳ ವಾಯು ದೇವನಲ್ಲಿಯ ಸಂಕರ್ಷಣನು ಪ್ರತಿಪಾದ್ಯ ನೆಂದು ಹೇಳಿದೆ.130

---

129. ಸ್ವದೇಹಸ್ಥಂ ಹರಿಂ ಪ್ರಾಹುರಧಮಾ ಜೀವಮೇವ ತು ।
ಮಧ್ಯಮಾಶ್ಚಾಪ್ಯನಿರ್ಣೀತಂ ಜೀವಾದ್ ಭಿನ್ನಂ ಜನಾರ್ದನಮ್ ॥
ಪೂರ್ಣಾನಂದಾದಿಗುಣಕಂ ಸರ್ವಜೀವವಿಲಕ್ಷಣಮ್ ।
ಉತ್ತಮಾಸ್ತು ಹರಿಂ ಪ್ರಾಹುಸ್ತಾರತಮ್ಯೇನ ತೇಷು ಚ ॥
ಬುದ್ಧಿಶುದ್ಧ್ಯನುಸಾರೇಣ ಯಥಾ ಪ್ರಾಣಂ ಶರೀರಗಮ್ ।
ಶ್ವಾಸಮಾತ್ರಂ ಜನಾಃ ಪ್ರಾಹುರನಿರ್ಣೀತಂ ಚ ಮಧ್ಯಮಾಃ ।
ದೇವದೇವೇಶ್ವರಂ ಸೂತ್ರಮಾನಂದಂ ಪ್ರಾಣವೇದಿನಃ ॥ *– ಭಾಗ.ತಾ.ನಿ. 6-4-34.*

130. ಪ್ರಾಣೋಽಪಾನೋ ವ್ಯಾನ ಇತ್ಯಷ್ಟಾವಕ್ಷರಾಣಿ ।
ಅಷ್ಟಾಕ್ಷರಂ ಹ ವಾ ಏಕಂ ಗಾಯತ್ರ್ಯೈ ಪದಮ್ ॥ *– ಛಾಂ.ಉ. 7-19-3.*

* .........ತೃತೀಯೇನ ಸಮೀರಗಃ । *– ಛಾಂ.ಉ.ಭಾ. 7-19-3.*

ಹೀಗೆ ಗಾಯತ್ರಿಯನ್ನು ಜಪಿಸುವಾಗ ಮೂರನೆಯ ಪಾದದಿಂದ ಪ್ರತಿಪಾದ್ಯನಾದ ಸಂಕರ್ಷಣನಿಗೆ ಪ್ರತಿಮೆಯಾಗಿ ವಾಯುದೇವನನ್ನು ಸ್ಮರಿಸಿಕೊಳ್ಳಬೇಕು.

ಯಾವ ಬ್ರಾಹ್ಮಣನೂ ಚತುರ್ಮುಖನಷ್ಟು ಗಾಯತ್ರೀಮಂತ್ರಜಪಕ್ಕೆ ಪೂರ್ಣ ಯೋಗ್ಯನಾಗದಿದ್ದರೂ ಸರ್ವಥಾ ಅಯೋಗ್ಯನೂ ಆಗಿರುವುದಿಲ್ಲ.131 ಆದುದರಿಂದ ಅವನವನ ಯೋಗ್ಯತಾನುಗುಣವಾಗಿ ಉಪಾಸನೆ ನಡೆಸಿ ಫಲವನ್ನು ಹೊಂದಬಹುದಾಗಿದೆ.

**ತನ್ನ ಮಹಿಮೆಗಳನ್ನು ಬಲ್ಲವರಲ್ಲಿ ಪ್ರವೇಶಿಸುವವನು:** ವಾಯುದೇವನು ತನ್ನ ಗುಣಮಹಿಮೆಗಳನ್ನು ಯಾರು ತಿಳಿದುಕೊಳ್ಳುವರೋ ಅವರಲ್ಲಿ ಪ್ರವೇಶಿಸುವನು. ಪ್ರವೇಶಿಸುವುದರಿಂದ, ವ್ಯಾಪ್ತವಾಗುವನು. ಹೀಗೆ ವ್ಯಾಪ್ತನಾಗುವುದರಿಂದಲೂ 'ಪ್ರಾತಃ' ಎನಿಸುವನು.132

ಆದುದರಿಂದ ನಾವು ವಾಯುದೇವನ ಗುಣಮಹಿಮೆಗಳನ್ನು ಯೋಚಿಸಿದಾಗ, ಮನನ ಮಾಡಿದಾಗ, ಹೇಳಿದಾಗ ಅವನು ನಮ್ಮಲ್ಲಿ ಪ್ರವೇಶಿಸುವನು. ಪಾತ್ರ ಎನಿಸುವ ವಾಯುದೇವ ನನ್ನನ್ನು ಪ್ರವೇಶಿಸುತ್ತ ಇದ್ದಾನೆಂಬ ಅನುಸಂಧಾನವನ್ನು ತಾಳಬೇಕು.

**ಪುರುಷತತ್ತ್ವ, ಮಹತ್ತತ್ತ್ವಗಳಿಗೆ ಅಭಿಮಾನಿಯಾಗಿ:** ಪುರುಷತತ್ತ್ವ, ಮಹತ್ತತ್ತ್ವಗಳಿಗೆ ಚತುರ್ಮುಖ ಹೇಗೋ ಹಾಗೆ ವಾಯುದೇವನೂ ಅಭಿಮಾನಿ ಎನಿಸಿರುವರು.133

ಆದುದರಿಂದ ತತ್ತ್ವನ್ಯಾಸದಲ್ಲಿ ವಾಯುವಿನ ಸ್ಮರಣೆಯಷ್ಟೇ ಅಲ್ಲದೆ, ಪ್ರತಿಯೊಂದು ಪ್ರಾಕೃತಪದಾರ್ಥವೂ ಪುರುಷತತ್ತ್ವವೇ ಮುಂತಾದ ಇಪ್ಪತ್ತೈದು ತತ್ತ್ವಗಳಿಂದ ರಚಿತ ವಾಗಿರುವುದರಿಂದ ಯಾವ ಪದಾರ್ಥದ ಸಂಪರ್ಕಕ್ಕೆ ಒಳಗಾದಾಗಲೂ ಅದರ ಘಟಕವಾಗಿ ಪುರುಷತತ್ತ್ವಾದಿಗಳನ್ನೂ, ಅದಕ್ಕೆ ಅಭಿಮಾನಿಯಾಗಿ ವಾಯುದೇವನನ್ನೂ ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಆದಿಗುರುಗಳಾಗಿ ಸ್ಮರಣೆ:** ನೇರವಾದ ಗುರುಗಳನ್ನು, ಪರಮಗುರುಗಳನ್ನು, ಆದಿ ಗುರುಗಳನ್ನು ಹಾಗೂ ಮೂಲಗುರುಗಳನ್ನು, ವಿದ್ಯಾಪ್ರತಿಪಾದ್ಯ ದೇವತೆಯನ್ನು ಹಾಗೂ ಮೋಕ್ಷಫಲಪ್ರದ ವಾಸುದೇವನನ್ನು –ಹೀಗೆ ಆರು ವ್ಯಕ್ತಿಗಳನ್ನು ಭಕ್ತಿಪೂರ್ವಕವಾಗಿ ಸ್ಮರಿಸಿಕೊಂಡು ವಿದ್ಯಾಭ್ಯಾಸದಲ್ಲಿ ತೊಡಗಿದವನಷ್ಟೇ ವಿದ್ಯಾಭ್ಯಾಸದ ಸಿದ್ಧಿಯನ್ನು ಹೊಂದುವನೆಂದು ತಿಳಿಸುವ ಮೂಲಕ ವಿದ್ಯಾಭ್ಯಾಸ ಸಿದ್ಧಿಸಬೇಕಾದರೆ ಆದಿಗುರುಗಳಾದ

---

131. ಗಾಯತ್ರ್ಯಾ ನ ಹ್ಯಯೋಗ್ಯೋಽಪಿ ದ್ವಿಜೋ ಯೋಗ್ಯೋಽಪಿ ನ ಕ್ವಚಿತ್ ।
– *ಛಾಂ.ಉ.ಭಾ. 7-19-3.*

132. ಯೇ ಯೇ ಗುಣಾನ್ ವಿಜಾನಂತಿ ವಾಯೋಸ್ತಾನಾವಿಶನ್ಮರುತ್ ತತ್ರತತ್ರ ಪ್ರವಿಷ್ಟತ್ವಾತ್ ಪ್ರತತೋಽಸೌ ಬಭೂವ ಹ । ಪ್ರತತತ್ವಾತ್ ಪ್ರಾತರಿತಿ ತಸ್ಯ ನಾಮಾಭವದ್ ವಿಭೋಃ ।
– *ಐ.ಉ.ಭಾ. 1-4-11.*

133. ಬ್ರಹ್ಮಾ ತು ಪುರುಷಃ ಸ್ಮೃತಃ । ಮಹಾಂಶ್ಚ ......... ಏವಂ ವಾಯುರಪಿ ಜ್ಞೇಯೋ...... ।
– *ತಂ.ಸಾ.ಸಂ. 3-131.*

ಮುಖ್ಯಪ್ರಾಣನ ಅವತಾರರಾದ ಶ್ರೀ ಮಧ್ವಗುರುಗಳನ್ನು ಸ್ಮರಿಸಿಕೊಳ್ಳಬೇಕೆಂದು ಹೇಳಲಾಗಿದೆ.[134]

ಆದುದರಿಂದ ಯಾವುದೇ ವಿದ್ಯೆಯ ಅಭ್ಯಾಸದ ಆರಂಭದಲ್ಲಿ ಆದಿಗುರುಗಳಾಗಿ ಶ್ರೀಮಧ್ವರು ಅನುಗ್ರಹಿಸುವರೆಂಬ ಅನುಸಂಧಾನ ಆವಶ್ಯಕ.

**'ಐ' ಮತ್ತು 'ಅಃ' ವರ್ಣಗಳಿಂದ ಪ್ರಾಣನ ಸಂಪರ್ಕದೊಂದಿಗೆ ಸ್ಮರಣೆ:** ಐವತ್ತು ವರ್ಣಗಳಿಂದ ವಾಚ್ಯಗಳಾದ ಭಗವಂತನ ಐವತ್ತು ರೂಪಗಳನ್ನು ತಿಳಿಸುತ್ತ, ಐವರ್ಣ ವಾಚ್ಯವಾಗಿ 'ಐರ' ಹೆಸರಿನ ರೂಪವನ್ನೂ, 'ಅಃ' ವರ್ಣವಾಚ್ಯವಾಗಿ 'ಅರ್ಧಗರ್ಭ' ಹೆಸರಿನ ರೂಪವನ್ನೂ ಉಲ್ಲೇಖಿಸಲಾಗಿದೆ.[135] ಈರ ಎನಿಸುವ ಮುಖ್ಯಪ್ರಾಣನನ್ನು ನಿಯಮಿಸುವ ರೂಪವು ಐರ ಎನಿಸಿದರೆ, ಜೀವರಲ್ಲೆಲ್ಲ ಸಮೃದ್ಧನಾಗಿದ್ದು 'ಅರ್ಧ' ಎನಿಸುವ ಮುಖ್ಯಪ್ರಾಣನನ್ನು ಗರ್ಭದಲ್ಲಿ ಧರಿಸಿಕೊಂಡಿರುವ ರೂಪವು 'ಅರ್ಧಗರ್ಭ' ಎನಿಸಿದೆ.

ಹೀಗೆ ಯಾವುದೇ ಭಾಷೆಯ ಯಾವುದೇ ಶಬ್ದದಲ್ಲಿ 'ಐ' ಹಾಗೂ 'ಅಃ' –ಎಂಬ ವರ್ಣಗಳಿದ್ದರೆ ಅವುಗಳಿಂದ ಮುಖ್ಯಪ್ರಾಣಾನುಗ್ರಾಹಕಗಳಾದ ಭಗವದ್ರೂಪಗಳು ವಾಚ್ಯಗಳಾಗಿದ್ದು, ಆ ರೂಪಗಳಿಗೆ ಸಂಬಂಧಿಸಿದಂತೆ ಮುಖ್ಯಪ್ರಾಣನ ಅನುಸಂಧಾನವನ್ನೂ ತಂದುಕೊಳ್ಳಬೇಕು.

**ಸರ್ವವೇದಾದ್ಯಭಿಧೇಯತ್ವ:** 'ಸಕಲವೇದಗಳು, ಸಕಲ ಋಙ್ಮಂತ್ರಗಳು, ಸಕಲ ಧ್ವನಿಗಳೂ ಪ್ರಾಣನ ನಾಮವೇ ಆಗಿವೆ' –ಎಂಬುದಾಗಿ ಐತರೇಯೋಪನಿಷತ್ತಿನಲ್ಲಿ ಪರಮಾತ್ಮನಿಗೆ ಸರ್ವವೇದಾದ್ಯಭಿಧೇಯತ್ವವನ್ನು ಸಾರುವಾಗ[136] ಪ್ರಾಣ ಎಂಬ ಹೆಸರನ್ನು ಉಲ್ಲೇಖಿಸಲಾಗಿದ್ದು, ಅಂತಹ ಪ್ರಾಣನಾಮದ ಮುಖ್ಯಾರ್ಥ ಭಗವಂತನಾದರೂ, ಭಗವಂತನ ಬಳಿಕ ಪ್ರಾಣನಾಮದಿಂದ ಮುಖ್ಯಪ್ರಾಣನೂ ವಾಚ್ಯನಾಗಿರುವುದರಿಂದ ಅವನಿಗೂ ಅಮುಖ್ಯವಾಗಿ ಸರ್ವವೇದ್ಯಾದ್ಯಭಿಧೇಯತ್ವವನ್ನು ಹೇಳಿದಂತಾಗಿದೆ.[137]

---

134. ಸ್ಮೃತ್ವಾ ಗುರುಂ ಪೂರ್ವಗುರುಮಾದಿಮೂಲಗುರೂ ತಥಾ ।
ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸೀ ತು ಸಿದ್ಧಿಭಾಕ್ ॥
*– ತಂ.ಸಾ.ಸಂ. 4-110.*

* ಆದಿಗುರುಂ ಶ್ರೀಮಧ್ವಾಚಾರ್ಯಂ

135. ......ಐರ ಓಜಭೃದೌರಸಃ .....ಅಂತೋಽರ್ಧಗರ್ಭಃ......... ಪಂಚಾಶನ್ಮೂರ್ತಯಸ್ತ್ವೇತಾಃ ಮಮಾಕಾರಾದಿಲಕ್ಷಕಾಃ ॥ *– ತಂ.ಸಾ.ಸಂ. 1-6,7,10.*

136. 'ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ.......' *– ಐ.ಉ. 2-1-2-12.*

* ಏಕಮೇವ ವ್ಯಾಹರಣಮ್ । ಏಕಪ್ರಕಾರಮೇವ ನಾಮ । ಪ್ರಾಣೇ ನಾರಾಯಣೇ ಏವ । ನಾರಾಯಣವಿಷಯ ಏವ ವ್ಯವಹಾರಃ । *– ಐ.ಉ.ಭಾ.*

137. ಪ್ರಾಣಶಬ್ದಶ್ಚ ಮುಖ್ಯತೋ ವಿಷ್ಣೌ ವರ್ತಮಾನೋಽಪಿ ವಾಯಾವಪಿ ವರ್ತತೇ । ಅತಃ ಸರ್ವವೇದಾದ್ಯಭಿಧೇಯತ್ವಂ ವಾಯೋರಪ್ಯಸ್ತಿ । *– ಐ.ಉ.ಭಾ.*

ಭಗವಂತನಿಗೆ ಸರ್ವವೇದಾದಿವಾಚ್ಯತ್ವವನ್ನು ಸಾರುತ್ತಿರುವ ಐತರೇಯೋಪನಿಷತ್ತಿನ ಮಾತನ್ನು ವ್ಯಾಖ್ಯಾನಿಸುವಾಗ ಶ್ರೀಮಧ್ವರು ಉದಾಹರಿಸಿರುವ 'ಬ್ರಹ್ಮಾಂಡ'ವು ವೇದಗಳಲ್ಲಿ ನಾರಾಯಣ ಹಾಗೂ ವಾಯುದೇವ ಈ ಇಬ್ಬರು ಪ್ರಾಣರು ಶಬ್ದದಿಂದ ಹೇಳಲ್ಪಡುವವರೆಂದು ತಿಳಿಸಿ ಈ ಇಬ್ಬರೂ ಸರ್ವಶಬ್ದಗಳಿಂದಲೂ ವಾಚ್ಯರಾಗುವರು –ಎಂದು ಹೇಳಿದೆ.[138]

ಆದುದರಿಂದ ಯಾವುದೇ ವೇದದ ಮಾತನ್ನು, ಬೇರೆಬೇರೆ ಭಾಷೆಗಳ ಶಬ್ದಗಳನ್ನು, ಸಮುದ್ರದ ಉದ್ಘೋಷ ಮುಂತಾದ ಧ್ವನ್ಯಾತ್ಮಕಶಬ್ದಗಳನ್ನು ಹೇಳುವಾಗ, ಕೇಳುವಾಗ ಅವುಗಳಿಂದ ಮುಖ್ಯವಾಚ್ಯನಾಗಿ ಭಗವಂತನನ್ನು ಹೇಗೆ ಅನುಸಂಧಾನ ಮಾಡಬೇಕೋ ಹಾಗೆ ಅಮುಖ್ಯವಾಚ್ಯನನ್ನಾಗಿ ವಾಯುದೇವನನ್ನೂ ಅನುಸಂಧಾನ ಮಾಡಬೇಕು.

ಐತರೇಯೋಪನಿಷತ್ತು ಪ್ರಸ್ತುತಪಡಿಸುವ ಋಗ್ವೇದದ ಶಾಂತಿಪಾಠದಲ್ಲಿ 'ವೇದ ಸ್ಥಾಪಕನಾದ ಮುಖ್ಯಪ್ರಾಣನಲ್ಲಿ ಇರುವವನಾಗಿ ಯಾವಾಗಲೂ ನನಗೆ ವಿದ್ಯಾಗೋಚರ ನಾಗು' –ಎಂದು ಪರಮಾತ್ಮನಲ್ಲಿ ಪ್ರಾರ್ಥನೆಯನ್ನು ಸಲ್ಲಿಸಲಾಗಿದ್ದರೆ,[139] ತೈತ್ತಿರೀಯೋಪ ನಿಷತ್ತು ಪ್ರಸ್ತುತಪಡಿಸುವ ಯಜುರ್ವೇದದ ಶಾಂತಿಪಾಠದಲ್ಲಿ 'ನಿನ್ನನ್ನು ಪರಬ್ರಹ್ಮನ ಪ್ರತಿಮೆಯನ್ನಾಗಿ ಇಟ್ಟುಕೊಂಡು ಶಾಸ್ತ್ರಪ್ರವಚನ ನಡೆಸುವೆನೆಂದು ವಾಯುದೇವನಲ್ಲಿ ಪ್ರಾರ್ಥಿಸಲಾಗಿದೆ.[140]

ಆದುದರಿಂದ ಶಾಸ್ತ್ರಪ್ರಪಂಚದಲ್ಲೂ, ಲೌಕಿಕಪ್ರಪಂಚದಲ್ಲೂ ಪ್ರತಿಯೊಂದು ಶಬ್ದ ದಿಂದಲೂ ಭಗವಂತನು ಮುಖ್ಯವಾಚ್ಯನಾದರೆ, ಅವನ ಪ್ರತಿಮೆಯಾಗಿ ವಾಯುದೇವನು ಅಮುಖ್ಯವಾಗಿ ವಾಚ್ಯನಾಗುವನು –ಎಂಬ ಅನುಸಂಧಾನವನ್ನು ತಂದುಕೊಳ್ಳಬೇಕು.

**ಮೋಕ್ಷಾವಸ್ಥೆಯಲ್ಲಿ ಪ್ರಾಣದೇವರ ಪಾತ್ರ:** ಎಲ್ಲ ಇಂದ್ರಿಯಗಳ ಚಟುವಟಿಕೆ ಗಳನ್ನೂ ಪ್ರಾಣದೇವನೇ ಆಯಾ ಇಂದ್ರಿಯಗಳಲ್ಲೂ, ಅವುಗಳ ಅಭಿಮಾನಿದೇವತೆಗಳಲ್ಲೂ ಇದ್ದುಕೊಂಡು ನಡೆಸುವನು. ಆದುದರಿಂದಲೇ ಮೋಕ್ಷಾವಸ್ಥೆಯಲ್ಲಿ ಪ್ರಾಕೃತ ಇಂದ್ರಿಯಗಳು

---

138. ದ್ವಾವಾತ್ಮಾನೌ ಹಿ ವೇದೇಷು ದ್ವೌ ಪ್ರಾಣೌ ದ್ವೌ ಚ ಚೇತನೌ ...... ಮಧ್ಯಮೋ ವಾಯುರೇವೈಕ ಉತ್ತಮಃ ಕೇವಲೋ ಹರಿಃ । ಸರ್ವಶಬ್ದೋದಿತೌ ತಸ್ಮಾದೇತೌ ದ್ವಾವೇವ ನಾಪರಃ । – *ಬ್ರಹ್ಮಾಂಡ (ಐ.ಉ.ಭಾ.)*

139. '......ಆವಿರಾವೀರ್ಮ ಏಧಿ ವೇದಸ್ಯ ಮ ಆಣೀಸ್ಥ ಶ್ರುತಂ ಮೇ ಮಾ ಪ್ರಹಾಸೀಃ......' – *ಐ.ಉ. 2-6-1-1.*

* .....ಆಣೀಸ್ಥಿತ ಅಣ್ವಾಂ ಸ್ಥಿತ ವಿಷ್ಣವಿತಿ ಸಂಬೋಧನಾ । ...... ಮಮ ವಿದ್ಯಾಗೋಚರ ಏವ ಸರ್ವದಾ ಭವ । – *ಐ.ಉ.ಭಾ.*

140. 'ನಮಸ್ತೇ ವಾಯೋ ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ .....' – *ತೈ.ಉ.*

* ಬ್ರಹ್ಮಣಃ ಸ್ವಯಂ ಮುಖ್ಯತಃ ಸನ್ನಿಹಿತತ್ವೇನ ತವ ವಿಷ್ಣೋರ್ಮುಖ್ಯತಃ ಪ್ರತಿಮಾತ್ವೇನ ರಂಗನಾಥಾದಿಪ್ರತಿಮಾದೌ ತ್ವಮೇವ ರಂಗನಾಥ ಇತ್ಯುಕ್ತಿರ್ಯಥಾ ತಥಾ ವಾಯೋರಪಿ ಪ್ರತ್ಯಕ್ಷ ಬ್ರಹ್ಮತ್ವೋಕ್ತಿಃ । – *ಪ್ರಕಾಶಿಕಾ.*

ಇಲ್ಲದಿದ್ದು ಇತರ ಇಂದ್ರಿಯಾಭಿಮಾನಿಗಳು ಇಲ್ಲದಿದ್ದರೂ ಮುಖ್ಯಪ್ರಾಣನ ಮೂಲಕವೇ ಇತರ ಇಂದ್ರಿಯಗಳ ಪ್ರಯುಕ್ತವಾದ ಜ್ಞಾನವು ಉಂಟಾಗುವುದು.

ಪ್ರಾಣನನ್ನು ಭಕ್ತಿಯಿಂದ ಒಲಿಸಿಕೊಂಡಿದ್ದರಿಂದ, ಅವರನ್ನು ಒಲಿಸಿಕೊಂಡರೆ ರುದ್ರನೂ, ಇತರ ಇಂದ್ರಿಯಾಭಿಮಾನಿಗಳೂ ಒಲಿಸಿಕೊಳ್ಳಲ್ಪಟ್ಟಂತೆಯೇ ಎಂಬುದಾಗಿ, ಸಂಸಾರಾವಸ್ಥೆಯಲ್ಲಿ ಅನುಭವಿಸಿದ್ದ ವಿಚಾರಗಳ ಸ್ಮರಣೆ ಮೋಕ್ಷದಲ್ಲೂ ಬರುವಂತೆ ರುದ್ರ ಮುಂತಾದ ದೇವತೆಗಳು ನಡೆಸುವರು.

ಹೀಗೆ ಮೋಕ್ಷಾವಸ್ಥೆಯಲ್ಲಿ ಎಲ್ಲ ಇಂದ್ರಿಯಗಳ ಮೂಲಕ ಜ್ಞಾನವನ್ನೂ ಪಡೆದು ಕೊಳ್ಳುವಲ್ಲೂ, ಮೋಕ್ಷಾವಸ್ಥೆಯಲ್ಲಿ ಇಂದ್ರಿಯಾಭಿಮಾನಿಗಳು ಇಲ್ಲದಿದ್ದರೂ ಪ್ರಾಣ ದೇವನನ್ನೂ ಒಲಿಸಿಕೊಂಡಿದ್ದರಿಂದಾಗಿ ಸಂಸಾರಾವಸ್ಥೆಯಲ್ಲಿಯ ಸ್ಮರಣೆಯನ್ನೂ ಪಡೆಯು ವುದರಲ್ಲೂ ಪ್ರಾಣದೇವನ ಪಾತ್ರವನ್ನು ವಿವೇಚಿಸಿಕೊಳ್ಳಬೇಕು.141

ಇದರಿಂದಾಗಿ ಸಂಸಾರಾವಸ್ಥೆಯಲ್ಲೂ ಇಂದ್ರಿಯಗಳ ಮೂಲಕ ಜ್ಞಾನವನ್ನು ಪಡೆಯು ವುದರಲ್ಲಿ ಇಂದ್ರಿಯಾಭಿಮಾನಿಗಳಿಗಿಂತಲೂ ಮುಖ್ಯಪ್ರಾಣನ ಪಾತ್ರವೇ ಹಿರಿಯದಾದ ದ್ದೆಂದು ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಭಗವಂತನಿಗೆ ಉತ್ತಮ ಪ್ರತಿಮೆಯಾಗಿ:** ಸೂರ್ಯನೇ ಮುಂತಾದ ಹನ್ನೊಂದು ಪ್ರತಿಮೆಗಳಲ್ಲಿ ತನ್ನ ಆರಾಧನೆ ನಡೆಸಬಹುದೆಂದು ತಿಳಿಸಿದ ಶ್ರೀಕೃಷ್ಣ ವಾಯುದೇವನನ್ನೂ ತನ್ನ ಒಂದು ಪ್ರತೀಕವನ್ನಾಗಿ ಉಲ್ಲೇಖಿಸಿರುವನು.142

ವಾಯುದೇವನಲ್ಲಿ ಮುಖ್ಯತ್ವದ ಬುದ್ಧಿಯಿಂದ, ಅಂದರೆ ವಾಯುದೇವನು ರುದ್ರಾದಿ ದೇವತೆಗಳಿಗಿಂತೆಲ್ಲ ಮುಖ್ಯನಾಗಿರುವವನೆಂಬ ತಿಳಿವಳಿಕೆಯನ್ನು ತಾಳುವುದೇ ವಾಯು ಪ್ರತೀಕದ ಪೂಜೆ ಎಂದೂ ತಿಳಿಸಿರುವನು.143 ವಾಯುದೇವನು ಉಳಿದ ಇಂದ್ರಾದಿ ದೇವತೆ ಗಳಿಗಿಂತೆಲ್ಲ ಉತ್ತಮನಾಗಿರುವವನೆಂಬ ತಿಳಿವಳಿಕೆ ಭಗವಂತನಿಗೆ ಅತ್ಯಂತ ಪ್ರಿಯವಾಗಿ

141. ಸರ್ವೇಂದ್ರಿಯಾಣಾಂ ವ್ಯಾಪಾರಾನ್ ಪ್ರಾಣ ಏವ ಕರೋತ್ಯಯಮ್ ।
ಇಂದ್ರಿಯಸ್ಥಃ....... ॥
ತುರೀಯಾಯಾಮವಸ್ಥಾಯಾಂ ಪ್ರಾಣಾದೇವ ವಿಬೋಧನಮ್ ।
ತಥಾಪಿ ಸಂಸ್ಮೃತಿಃ ತತ್ರ ಪ್ರಾಣವಶತಯಾ ಭವೇತ್ ॥
ಪ್ರಾಣಸ್ಯ ವಶತಾ ನಾಮ ಭಕ್ತ್ಯಾ ಸ್ಯಾತ್ ತತ್ಪ್ರಸಾದತಃ ।
ಪ್ರಾಣೇ ವಶ್ಯೇ ಮನೋವಶ್ಯಂ ಇಂದ್ರಿಯಾಣಿ ಚ ಸರ್ವಶಃ ॥
*– ಛಾಂ.ಉ.ಭಾ. 5-1-11.*

142. ಸೂರ್ಯೋಽಗ್ನಿರ್ಬ್ರಾಹ್ಮಣಾ ಗಾವೋ ವೈಷ್ಣವಃ ಖಂ ಮರುತ್ ...... ।
*– ಭಾಗ. 11-11-42.*

143. ವಾಯೌ ಮುಖ್ಯಧಿಯಾ..... । *– ಭಾಗ. 11-11-44.*

ರುವುದರಿಂದ ವಾಯು ದೇವೋತ್ತಮತ್ವದ ತಿಳಿವಳಿಕೆಯೇ ವಾಯುಪ್ರತೀಕದಲ್ಲಿ ಸಲ್ಲಿಸುವ ಪೂಜೆ –ಎಂದು ಶ್ರೀ ಮಧ್ವಗುರುಗಳು ಸ್ಪಷ್ಟಪಡಿಸಿರುವರು.144

ಛಾಂದೋಗ್ಯಭಾಷ್ಯದಲ್ಲಿ 'ವಾಯೌ ಮುಖ್ಯಧಿಯಾ.......' –ಎಂಬ ಕೃಷ್ಣನ ಮಾತಿಗೆ ಭಗವಂತನು ವಾಯುದೇವನಿಗಿಂತಲೂ ಮುಖ್ಯನಾಗಿರುವವನೆಂಬ ಅರ್ಥವನ್ನಿಟ್ಟುಕೊಂಡು ಜೀವೋತ್ತಮನಾಗಿರುವ ವಾಯುದೇವನಿಗಿಂತಲೂ ಭಗವಂತನು ಉತ್ತಮನಾಗಿರುವನೆಂಬ ತಿಳಿವಳಿಕೆಯೇ ವಾಯುಪ್ರತೀಕದ ಪೂಜೆ –ಎಂದು ಅರ್ಥೈಸಲಾಗಿದೆ.145

ಆದುದರಿಂದ ಬದುಕಿನ ಹೆಜ್ಜೆಹೆಜ್ಜೆಯಲ್ಲಿ ಪಾತ್ರ ವಹಿಸುತ್ತಿರುವ ಮುಖ್ಯಪ್ರಾಣನ ಪಾತ್ರವನ್ನು ಗುರುತಿಸಿ, ಅವನ 'ಮುಖ್ಯತ್ವ'ವನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು. ಇದರಿಂದಾಗಿ ಮುಖ್ಯಪ್ರಾಣಪ್ರತೀಕದಲ್ಲಿ ಭಗವಂತನನ್ನು ಆರಾಧಿಸಿದಂತಾಗುವುದು.

ಹಾಗೆಯೇ ಜೀವನದ ಹೆಜ್ಜೆಹೆಜ್ಜೆಗೆ ಪಾತ್ರ ವಹಿಸುತ್ತಿರುವ ಮುಖ್ಯಪ್ರಾಣನ ಗುಣ ಧರ್ಮಗಳನ್ನು, ಮಹಿಮೆಗಳನ್ನು, ಲೀಲೆಗಳನ್ನು ತಿಳಿದುಕೊಂಡು, ಹೇಗೆ ಜೀವೋತ್ತಮ ನಾದ ವಾಯುದೇವನಿಗಿಂತ ಉತ್ತಮನಾಗಿರುವವನು ಭಗವಂತನು –ಎಂದು ಭಗವಂತನ ಪಾರಮ್ಯವನ್ನು ವಾಯುಜೀವೋತ್ತಮತ್ವದ ಸೋಪಾನದ ಮೇಲೇರಿ ಸಾಧಿಸಬೇಕು. ಇದರಿಂದಲೂ ಭಗವಂತನನ್ನು ಮುಖ್ಯಪ್ರಾಣಪ್ರತೀಕದಲ್ಲಿ ಪೂಜಿಸಿದಂತಾಗುವುದು.

**ಹೊಸ ಜ್ಞಾನದ ಉತ್ಪತ್ತಿ, ಜ್ಞಾನದ ಅಭಿವೃದ್ಧಿ –ಇವುಗಳಲ್ಲಿ:** ಮುಖ್ಯಪ್ರಾಣನಲ್ಲಿ ಇರುವ ಭಗವಂತನನ್ನು ತಿಳಿದ ಸಾಧಕನ ಪಾಲಿಗೆ ಭಗವಂತನು ಮುಖ್ಯಪ್ರಾಣನ ಮೂಲಕ ಹೊಸ ಜ್ಞಾನಕಿರಣದ ಉತ್ಪತ್ತಿ, ಜ್ಞಾನದ ಅಭಿವೃದ್ಧಿ ಇತ್ಯಾದಿಗಳನ್ನುಂಟುಮಾಡುವ ಮೂಲಕ ಮುಖ್ಯಪ್ರಾಣನಲ್ಲಿ ವಿಶೇಷವಾಗಿ ಆವೇಶಗೊಳ್ಳುವನು.146

ಆದ್ದರಿಂದ ಮುಖ್ಯಪ್ರಾಣಪ್ರತೀಕದಲ್ಲಿ ಭಗವಂತನ ಉಪಾಸನೆ ನಡೆಸಿ ತಾನು ವಿಶೇಷವಾಗಿ ತಿಳಿವಳಿಕೆಯ ಬೆಳಕಿಗೆ ಒಳಗಾಗುವಾಗ ಅಥವಾ ಉಳಿದ ಉಪಾಸಕರು ಹಾಗೆ ತಿಳಿವಳಿಕೆಯನ್ನು ಪಡೆದುಕೊಂಡಾಗ ತನ್ನ ಪಾಲಿಗೆ, ಅವರ ಪಾಲಿಗೆ ಮುಖ್ಯಪ್ರಾಣಾವಿಷ್ಟ ನಾದ ಭಗವಂತನು ಮುಖ್ಯಪ್ರಾಣನ ಮೂಲಕ ಆ ಬಗೆಯ ಜ್ಞಾನದ ಬೆಳಕನ್ನು ಅನು ಗ್ರಹಿಸುತ್ತಿರುವನೆಂದು ಅನುಸಂಧಾನ ನಡೆಸಬೇಕು.

---

144. ಸರ್ವದೇವೋತ್ತಮೋ ವಾಯುರಿತಿ ಜ್ಞಾನಾನ್ನ ಚಾಪರಮ್ ।
ಪ್ರಿಯಮಸ್ತಿ ಹರೇಃ ಕಿಂಚಿತ್..... ಮಾಹಾತ್ಮ್ಯ । – *(ಭಾಗ.ತಾ.ನಿ. 11-11-43)*

145. ಯಸ್ಮಾದ್ ವಾಯೌ ಸ್ಮೃತೋ ವಿಷ್ಣುರ್ವಾಯೋರ್ಮುಖ್ಯತಯಾಖಿಲಾತ್ ।
ಸ್ವಸ್ಯ ಮುಖ್ಯತಯಾ ತಸ್ಮಾತ್ ಪರಾಂ ತುಷ್ಟಿಂ ಗಮಿಷ್ಯತಿ ॥
– *ಪ್ರಧ್ಯಾನೇ (ಛಾಂ.ಉ.ಭಾ. 1-24)*

146. '....... ಉಪಾಯೈರ್ಯೋರ್ವಿಜಾನೀಯಾತ್ ಪ್ರಾಣಸ್ಥಂ ಪರಮೇಶ್ವರಮ್ । ತಸ್ಯ ಪ್ರಾಣೇ ಹರಿರ್ನಿತ್ಯಮಾವಿಷ್ಟೋ ಭವತಿ ಧ್ರುವಮ್ । ನಿತ್ಯಂ ಪ್ರಾಣಸ್ಥಿತಸ್ಯೈವ ವಿಷ್ಣೋರಾವೇಶ ಏವ ಹಿ । ಪ್ರಾಣದ್ವಾರೇಣ ಯಜ್ಞಾನದೀಪನಂ ಜ್ಞಾನಿನಃ ಸದಾ । ಸನ್ನಿಧಾನಂ...... ವಿಷ್ಣೋಃ ಸದಾ ಪ್ರಾಣಸ್ಥಿತೋಽಪಿ ಸನ್ । ಜ್ಞಾನದೀಪ್ತ್ಯಾದಿಕಂ ಕುರ್ಯಾಜ್ಜ್ಞಾನಿನಃ ಪುನರೇವ ತು ॥' – *ಆಥ. ಉ. ಭಾ. 4-1-1.*

**ಚಂದ್ರನಲ್ಲಿ ವಿಶೇಷವಾಗಿ ಸನ್ನಿಧಾನ:** ವಾಯುದೇವ ಚಂದ್ರನಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವನು.147

ಭಗವಂತನ ಹಂಸಮಂತ್ರಧ್ಯೇಯರೂಪ,148 ದಧಿವಾಮನಮಂತ್ರದ ಧ್ಯೇಯರೂಪ, ಹಯಗ್ರೀವಮಂತ್ರದ ಧ್ಯೇಯರೂಪ, ಧನ್ವಂತರಿಮಂತ್ರಧ್ಯೇಯರೂಪ –ಹೀಗೆ ನಾಲ್ಕೈದು ರೂಪಗಳ ಸನ್ನಿಧಾನ ಚಂದ್ರಮಂಡಲದಲ್ಲಿರುವುದಕ್ಕೆ ಒಂದು ಕಾರಣ ಅಲ್ಲಿಯ ಚಂದ್ರನಲ್ಲಿ ಮುಖ್ಯಪ್ರಾಣ ವಿಶೇಷವಾಗಿ ಸನ್ನಿಹಿತನಾಗಿರುವುದು –ಎಂಬುದನ್ನು ವಿವೇಚಿಸಿಕೊಂಡು ಚಂದ್ರಮಂಡಲದಲ್ಲಿ ಆಯಾ ಭಗವದ್ರೂಪವನ್ನು ಧ್ಯಾನಿಸುವಾಗ 'ಗೋಲಕತ್ರಯ ಚಿಂತನೆ'ಯ ಪ್ರಕ್ರಿಯೆಗನುಗುಣವಾಗಿ ವಾಯುದೇವನ ಅನುಸಂಧಾನವನ್ನೂ ನಡೆಸಬೇಕು. ಚಂದ್ರನ ಮೂಲಕ ಆಹ್ಲಾದಕತ್ವಾದಿಗಳನ್ನು ಪಡೆಯುವಾಗ ಅಲ್ಲಿ ವಾಯುದೇವನ ಪಾತ್ರವನ್ನು ವಿವೇಚಿಸಿಕೊಳ್ಳಬೇಕು.

**ಪಾವಮಾನಮಂಡಲ ವಿಷ್ಣು ನೀರಾಜನ:** ಋಗ್ವೇದದ ಒಂಬತ್ತನೆಯ ಮಂಡಲ ಪಾವಮಾನ ಮಂಡಲ ಎನಿಸಿದ್ದು ಅದರಲ್ಲಿ ಭಗವಂತನಿಗೆ ಅತ್ಯಂತ ಪ್ರಿಯವಾದ149 ಪವಮಾನನ ಸರ್ವದೇವೋತ್ತಮತ್ವದ ಪ್ರತಿಪಾದನೆ ನಡೆದಿರುವುದರಿಂದ ಅದು ಶ್ರೀವಿಷ್ಣುವನ್ನು ಚೆನ್ನಾಗಿ ಸಂತೋಷಪಡಿಸುತ್ತಿದೆ. ಆದುದರಿಂದಲೇ ಜ್ಞಾನಿಗಳಿಂದ 'ವಿಷ್ಣುನೀರಾಜನ' –ಎಂದೇ ಆ ಮಂಡಲ ಕರೆಸಿಕೊಳ್ಳಲ್ಪಡುವುದು.150

ಆದುದರಿಂದ ಈ ಮಂಡಲದ ಮಾಧ್ಯಮದಲ್ಲಿ ಪಾರಾಯಣ, ಹೋಮಾದಿ ಸಾಧನೆಗಳನ್ನು ನಡೆಸುವಾಗ ಶ್ರೀವಿಷ್ಣುವಿನ ಅತ್ಯಂತ ರಂಜನೆಗೆ ಸಂಬಂಧಿಸಿದ ಸಾಧನೆ ನಮ್ಮಿಂದ ನಡೆಯುತ್ತಿದೆ ಎಂಬ ಅನುಸಂಧಾನವನ್ನು ತಂದುಕೊಳ್ಳಬೇಕು.

**ಶರೀರಕ್ಕೆ ಶೋಭೆಯನ್ನುಂಟುಮಾಡುವವನು:** ರಥ ಎನಿಸುವ ಪ್ರಾಣಿಗಳ ಶರೀರದಲ್ಲಿ ಶೋಭೆಯನ್ನುಂಟುಮಾಡುವ ವಾಯುದೇವನನ್ನು ಸ್ತುತಿಸಲು ಋಗ್ವೇದ ಕರೆ ನೀಡಿದೆ.151

---

147. ವಾಯುಃ ಪ್ರಜಾಪತಿಃ ಸೋಽಸೌ ಚಂದ್ರಸಂಸ್ಥೋ ವಿಶೇಷತಃ । – *ಬೃ.ಉ.ಭಾ. 3-6-20.*

148. '.......ಪ್ರಿಯಾಸಹಿತಮಾಶ್ರಿತಮಿಂದುಬಿಂಬೇ (ತಂ.ಸಾ.ಸಂ. 4-25) '.......ಶೀತಾಂಶುಮಂಡಲಗತಂ ರಮಯಾ ಸಮೇತಮ್ । (4-30) 'ವಂದೇ ತುರಂಗವದನಂ ಶಶಿಬಿಂಬಸಂಸ್ಥಂ........' (4-50) '.........ಶೀತಾಂಶುಮಂಡಲಗತಂ ಸ್ಮರತಾತ್ಮಸಂಸ್ಥಮ್ ।' (ತಂ.ಸಾ.ಸಂ. 4-95)

149. ಸರ್ವದೇವೋತ್ತಮೋ ವಾಯುರಿತಿ ಜ್ಞಾನಾನ್ನ ಚಾಪರಮ್ । ಪ್ರಿಯಮಸ್ತಿ ಹರೇಃ ಕಿಂಚಿತ್..... । – *ಮಾಹಾತ್ಮ್ಯೇ (ಭಾಗ.ತಾ.ನಿ. 11-11-43)*

150. ನಿತರಾಂ ರಂಜಯೇದ್ ಯಸ್ಮಾತ್ ಪಾವಮಾನಂ ತು ಮಂಡಲಮ್ । ವಿಷ್ಣುನೀರಾಜನಂ ತಸ್ಮಾದ್ ವಿದ್ವದ್ಭಿಃ ಸಮುದಾಹೃತಮ್ । – *ಭಾಗ.ತಾ.ನಿ. 11-27-30.*

151. '......ಮಾರುತಂ ......ರಥೇಽಶುಭಮ್ । ಕಣ್ವಾ ಅಭಿಪ್ರಗಾಯತ । – *ಋ.ವೇ. 37-1.*

* ......ರಥೇ ದೇಹೇ ಶುಭಶ್ಚ ನಃ । – *ಋ.ಭಾ.*

'ಬ್ರಹ್ಮಣಾ ತ್ಯಕ್ತದೇಹಸ್ತು ಮೃತ ಇತ್ಯುಚ್ಯತೇ ಬುಧೈಃ' –ಎಂಬ ಮಾತಿನಲ್ಲಿ ಮುಖ್ಯವಾಗಿ ಬ್ರಹ್ಮ ಎನಿಸುವ ಭಗವಂತ ಹೇಗೋ ಹಾಗೆ ಅಮುಖ್ಯವಾಗಿ ಬ್ರಹ್ಮ ಎನಿಸುವ ಮುಖ್ಯ ಪ್ರಾಣನೂ ದೇಹವನ್ನು ತ್ಯಜಿಸಿದಲ್ಲಿ ಅದು ಹೆಣ ಎನಿಸಿ ಹೇಯವಾಗುವುದೆಂದು ತಿಳಿಸುತ್ತಿದೆ. ಅಲ್ಲದೆ, ದೇಹದ ಮುಖ್ಯಸಂಪತ್ತೇ ಇಂದ್ರಿಯಗಳು. ಅವು ಕ್ರಿಯಾಶೀಲಗಳಾಗು ವುದು ಮುಖ್ಯಪ್ರಾಣನಿಂದಲೇ. ಹೀಗೆ ಮುಖ್ಯಪ್ರಾಣನಿದ್ದರಷ್ಟೇ ಪ್ರಾಣಗಳು ದೇಹಕ್ಕೆ ಶೋಭೆ.

ನಮ್ಮ ಹಾಗೂ ಉಳಿದವರ ದೇಹ ಶೋಭಾಯುಕ್ತವಾಗಿ ವಿರಾಜಿಸುತ್ತಿರುವಾಗ ಅದಕ್ಕೆ ಪ್ರಯೋಜಕವಾಗಿ ಮುಖ್ಯಪ್ರಾಣನ ಪಾತ್ರವನ್ನು ಅನುಸಂಧಾನಕ್ಕೆ ತಂದುಕೊಳ್ಳ ಬೇಕು.

**ದೇಹ ಎಂಬ ವಾಹನದಲ್ಲಿ ಸಾರಥಿ:** ವಾಹನದಲ್ಲಿ ಸಾರಥಿ ಹೇಗೋ ಹಾಗೆ ಜೀವರ ಶರೀರದಲ್ಲಿ ವಾಯುದೇವನು ಪಾತ್ರ ವಹಿಸುವನು. ಶ್ರೀವಿಷ್ಣು ರಥಿಕನಾಗಿದ್ದರೆ ಜೀವ ಮತ್ತೊಬ್ಬರ ರಥದಲ್ಲಿ ಕುಳಿತು ಪಯಣಿಸುವವನಂತೆ ಇರುವವನು.152

ನಮ್ಮ ದೇಹದ ಮೂಲಕ ಬೇರೆಬೇರೆ ವ್ಯವಹಾರಗಳ್ನನು ನಡೆಸುವಾಗ, ವಿಶೇಷವಾಗಿ ಆ ಕಡೆ ಈಕಡೆ ಚಲಿಸುತ್ತಿರುವಾಗ ಶ್ರೀವಿಷ್ಣುವಿಗೆ ಸೇರಿರುವ ದೇಹ ಎಂಬ ರಥದಲ್ಲಿ ಅವನ ಜೊತೆಗೆ ಕುಳಿತು ಪಯಣಿಸುತ್ತಿದ್ದೇನೆ; ಈ ರಥ ವಾಯುದೇವನ ಸಾರಥ್ಯದಲ್ಲಿ ಪಯಣಿಸು ತ್ತಿದೆ ಎಂಬ ಅನುಸಂಧಾನವನ್ನು ತಂದುಕೊಳ್ಳಬೇಕು.

**ಎಲ್ಲ ಗುರುಗಳಲ್ಲಿ ಅಂತರ್ಯಾಮಿಯಾಗಿರುವವರು:** ಶ್ರೀಮಧ್ವಗುರುಗಳು ಎಲ್ಲ ಗುರುಗಳಲ್ಲಿ ಅಂತರ್ಯಾಮಿಗಳಾಗಿರುವರೆಂದು ಪ್ರಾತಃಸಂಕಲ್ಪಗದ್ಯದಲ್ಲಿ ಶ್ರೀರಾಘವೇಂದ್ರ ಗುರುಗಳು ತಿಳಿಸಿರುವರು.153

ಆದ್ದರಿಂದ ಯಾವುದೇ ಗುರುಗಳಿಂದ ಉಪದೇಶವನ್ನು ಪಡೆಯುವಾಗ ಅವರಲ್ಲಿ ಶ್ರೀಮಧ್ವರು ಸನ್ನಿಹಿತರಾಗಿರುವರೆಂದು ಅನುಸಂಧಾನ ನಡೆಸಬೇಕು.

**ಮುದ್ರಾಧಾರಣೆಯ ಸಂದರ್ಭದಲ್ಲಿ:** 'ವೈಷ್ಣವದೀಕ್ಷೆ'ಯನ್ನು ತೊಡಿಸುವಲ್ಲಿ ಶಂಖ ಚಕ್ರ ಮುದ್ರೆಗಳ ಧಾರಣೆಯ ಪಾತ್ರ ಮಹತ್ವದ್ದು. ಇಂತಹ ಮುದ್ರಾಧಾರಣೆಯಲ್ಲಿ ಪವ ಮಾನನ ಪಾತ್ರ ಎರಡು ಬಗೆಯದ್ದೆಂದು ಶ್ರೀವಾದಿರಾಜಸ್ವಾಮಿಗಳು ತಮ್ಮ 'ಯುಕ್ತಿ ಮಲ್ಲಿಕಾ'ದಲ್ಲಿ ಗುರುತಿಸಿಕೊಟ್ಟಿರುವರು. ಪವಮಾನನೇ ಸುದರ್ಶನ ಹೋಮದ ಅಗ್ನಿಯಲ್ಲಿ ಹಾಕಿದ ಸುದರ್ಶನಚಕ್ರವನ್ನು ತನ್ನ ಪುಣ್ಯಪ್ರದಜ್ವಾಲೆಗಳಿಂದ ಬಿಸಿಗೊಳಿಸುವನು. ಹಾಗೆಯೇ, ಅವನೇ ತನ್ನ ಮಧ್ವರೂಪದಿಂದ ಮುದ್ರಾಧಾರಣಕರ್ತೃಗಳಾದ ಗುರುಗಳಲ್ಲಿದ್ದು

---

152. ಯಥೈವ ಸಾರಥಿರ್ಯಾನ ಏವಂ ದೇಹೇ ಚ ಮಾರುತಃ । ಯಥಾ ರಥೀ ತಥಾ ವಿಷ್ಣುರ್ಜೀವೋಽನ್ಯರಥಗೋ ಯಥಾ ॥ – *ಸಾಮಸಂಹಿತಾ (ಛಾಂ.ಉ.ಭಾ. 8-4-3)*

153. ......ಅಶೇಷಗುರ್ವಂತರ್ಯಾಮಿಣಾಂ..... ಶ್ರೀಮದಾನಂದತೀರ್ಥಶ್ರೀಮಚ್ಚರಣಾನಾಂ....।
– *ಪ್ರಾತಃಸಂಕಲ್ಪಗದ್ಯ.*

ಕೊಂಡು ಮುದ್ರಾಧಾರಣ ನಡೆಸುವನು.154 ಆದುದರಿಂದ ಮುದ್ರಾಧಾರಣ ಮಾಡುವಾಗ ಹಾಗೂ ಮಾಡಿಸಿಕೊಳ್ಳುವಾಗ ಪವಮಾನನ ಈ ಬಗೆಯ ಪಾತ್ರವನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು.

**ಬ್ರಹ್ಮಯಜ್ಞದ ಅನುಸಂಧಾನ:** ವಾಗಭಿಮಾನಿನಿಯಾದ ಉಮಾದೇವಿ ಮನೋಽಭಿಮಾನಿ ರುದ್ರನಿಂದ ಹುಟ್ಟಿರುವಳು. ರುದ್ರನಾದರೂ ಪ್ರಾಣನಾಮಕ ವಾಯುವಿನಿಂದ, ಪ್ರಾಣನಾದರೂ ತನ್ನದ್ದೇ ಸ್ವರೂಪನಾದ ಅಪಾನನಿಂದ, ಅಪನಾನಾದರೂ ತನ್ನದ್ದೇ ಸ್ವರೂಪನಾದ ವ್ಯಾನನಿಂದ ಅಭಿವ್ಯಕ್ತನಾಗುವನು. ಪ್ರಾಣ, ಅಪಾನ, ವ್ಯಾನರಿಂದ ಸಮಾನ, ಉದಾನರ ಅಭಿವ್ಯಕ್ತಿ. ಇನ್ನೊಂದು ಪಕ್ಷದಲ್ಲಿ ಮೊದಲು ವ್ಯಾನ, ಅವನಿಂದ, ಉದಾನ, ಅವನಿಂದ ಸಮಾನ, ಪುನಃ ವ್ಯಾನನಿಂದಲೇ ಅಪಾನ, ಅಪಾನನಿಂದ ಪ್ರಾಣ ಅಭಿವ್ಯಕ್ತರಾಗುವರು. ಮತ್ತೊಂದು ಪಕ್ಷ– ಮೂಲರೂಪ ಪ್ರಾಣನಿಂದಲೇ ಪ್ರಾಣಾಪಾನವ್ಯಾನರ ಅಭಿವ್ಯಕ್ತಿ ಬಳಿಕ ಆ ಮೂವರಿಂದ ಸಮಾನೋದಾನರ ಅಭಿವ್ಯಕ್ತಿ. ಇನ್ನೊಂದು ಪಕ್ಷದಲ್ಲಿ ಪಂಚ ಪ್ರಾಣರು ಮೂಲರೂಪ ಪ್ರಾಣನಿಂದಲೇ ಅಭಿವ್ಯಕ್ತರಾಗುವರು. ಆ ಪ್ರಾಣನಾದರೂ ಹೃದಯದಲ್ಲಿರುವ ಆತ್ಮ ಎನಿಸುವ ಪರಮಾತ್ಮನಿಂದ ಅಭಿವ್ಯಕ್ತನಾಗುವನು. ಆ ಆತ್ಮನಾದರೂ ವಿಶ್ವರೂಪನಾದ ಪರಬ್ರಹ್ಮನಿಂದ155 ಅಭಿವ್ಯಕ್ತನಾಗುವನು. ಹೀಗೆ ಪರಬ್ರಹ್ಮ

---

154. ಅತೋಽಗ್ನಾವಾಹಿತಂ ಚಕ್ರಂ ಸ್ವಾರ್ಚಿಷಾ ಪುಣ್ಯದಾಯಿನಾ ।
ಸ ಏವ ತಪ್ತಂ ಕುರುತೇ ಗುರುಭರ್ೂತ್ವಾ ಸ ಏವ ಚ ॥
ಸತಾಂ ಭುಜೇ ಧಾರಯತಿ ಮುನೀನಾಂ ಮಧ್ವರೂಪಧೃಕ್ ।
ಸ ಏವ ಧಾರಯೇದ್ವಾಯುರನ್ಯತ್ರ ಗುರುಷು ಸ್ಥಿತಃ ॥
ಮಧ್ವಾಖ್ಯಗುರುರೂಪೇಣ ಪೂಯಮಾನಸ್ಯ ಪಾವಯನ್ ।
ಧಾರಯೇತ್ತಾನಿ ರೂಪಾಣಿ ಮಧ್ವಸ್ಯೈವ ಬಹೂನಿ ತತ್ ॥
*– ಯುಕ್ತಿಮಲ್ಲಿಕಾ, ಫಲಸೌರಭ, 615, 616, 617.*

155. ಉಮಾ ವಾಗಾತ್ಮಿಕಾ ರುದ್ರಾಜ್ಜಾತಾ ಸಾ ಮನಆತ್ಮನಃ ।
ಪ್ರಾಣಾಹ್ವಯಾತ್ ಸ ವಾಯೋಶ್ಚ ಸೋಽಪಾನಾದಾತ್ಮರೂಪತಃ ॥
ಸ್ವರೂಪಾದೇವ ಸ ವ್ಯಾನಾದುದಾನೋ ವ್ಯಾನತಸ್ತಥಾ ।
ತಸ್ಮಾತ್ ಸಮಾನೋ ವ್ಯಾನಾಚ್ಚಾಪ್ಯಪಾನಃ ಪ್ರಾಣ ಏವ ಚ ॥
ಅಪಾನಾತ್ ತಿಸೃಭಿಶ್ಚಾಪಿ ಸಮಾನೋದಾನಯೋರ್ಜನಿಃ ।
ತ್ರಯಾಣಾಮಥ ಪಂಚಾನಾಮನಾದ್ ವಾ ಪ್ರಾಣತೋ ಭವಃ ॥
ಏಕಸ್ಯೈವ ಸ್ವರೂಪಾಣಿ ಪ್ರಾಣಸ್ಯೈತಾನಿ ಪಂಚ ಚ ।
ಸ ಚ ಪ್ರಾಣೋ ಹರೇರ್ಜಾತೋ ಹೃದಿಸ್ಥಾದಾತ್ಮನೋ ಮತಃ ॥
ಸ ಆತ್ಮಾ ಬ್ರಹ್ಮಣೋ ಜಾತೋ ವಿಶ್ವರೂಪಾಜ್ಜನಾರ್ದನಾತ್ ।
ಏತೇಷಾಂ ಬ್ರಹ್ಮಪರ್ಯಂತಂ ವಿಲಯೋತ್ಪತ್ತಿಚಿಂತನಮ್ ।
ಬ್ರಹ್ಮಯಜ್ಞ ಇತಿ ಪ್ರೋಕ್ತಃ ಸರ್ವಸಂಸಾರಮೋಚಕಃ ॥
*– ನಾರಾಯಣಾಧ್ಯಾತ್ಮೇ (ಭಾಗ.ತಾ.ನಿ. 1-15-11)*

ನಿಂದ ಅಭಿವ್ಯಕ್ತರಾದ ಆತ್ಮಾದಿಗಳು ಉತ್ಪತ್ತಿಯ ಕ್ರಮಕ್ಕನುಗುಣವಾಗಿ ತಮ್ಮತಮ್ಮ ಉತ್ಪಾದಕರಲ್ಲಿ ಮುಂದೆ ಲಯ ಹೊಂದುವರೆಂಬ ಚಿಂತನವು ಬ್ರಹ್ಮಯಜ್ಞ ಎನಿಸುವುದು.[156]

ಸಂಸಾರಬಂಧನದ ಬಿಡುಗಡೆಗೆ ಕಾರಣವಾದ ಈ ಬ್ರಹ್ಮಯಜ್ಞವನ್ನು ನಡೆಸುತ್ತ ಪ್ರಾಣದೇವ ಹೃದಯದಲ್ಲಿರುವ ಆತ್ಮನಾಮಕ ಭಗವಂತನಿಂದ ಅಭಿವ್ಯಕ್ತನಾಗುವನು. ಹಾಗೆಯೇ ಅವನಿಂದ ಅವನ ಸ್ವರೂಪರಾದ ಪ್ರಾಣಾದಿಗಳು ಅಭಿವ್ಯಕ್ತರಾಗುವರು. ಮುಂದೆ ಹಾಗೆಯೇ ಲಯ ಹೊಂದುವರೆಂಬ ಚಿಂತನೆಯನ್ನು ನಡೆಸುತ್ತಿರಬೇಕು. ವಿಶೇಷವಾಗಿ ರಾತ್ರಿ ಮಲಗುವ ಮುಂಚೆ ಈ 'ಬ್ರಹ್ಮಯಜ್ಞ'ವನ್ನು ನಡೆಸಬೇಕು. ಹೀಗೆ ಪ್ರತಿನಿತ್ಯ ನಡೆಸುತ್ತ ಬಂದರೆ ಪ್ರಾಣೋತ್ಕ್ರಮಣಕಾಲದಲ್ಲಿ ಯುಧಿಷ್ಠಿರ ಹೇಗೆ ನಡೆಸಿರುವನೋ[157] ಹಾಗೆ ನಾವೂ ಈ ಬಗೆಯ ಬ್ರಹ್ಮಯಜ್ಞವನ್ನು ನಡೆಸಬಹುದಾಗಿದೆ.

**ಭಕ್ತ್ಯಾದಿಗಳಿಗೆ ಅಭಿಮಾನಿ:** ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞೆ, ಮೇಧಾ, ಸಾತ್ವಿಕ ಧೈರ್ಯ, ನ್ಯಾಯಮಾರ್ಗಸ್ಥಿತಿ, ಉಪಾಯ, ಪ್ರೇರಕತ್ವ ಹಾಗೂ ಬಲ –ಈ ಹತ್ತು ಗುಣಗಳಿಗೆ ಅಭಿಮಾನಿನಿಯಾಗಿದ್ದು ಅಂತಹ ಗುಣಾತ್ಮಕನೆನಿಸಿರುವವನು ವಾಯುದೇವ.[158]

ಆದ್ದರಿಂದ ನಮ್ಮಲ್ಲಾಗಲೀ, ಇತರರಲ್ಲಾಗಲೀ ಈ ಬಗೆಯ ಗುಣಗಳು, ಇವುಗಳಲ್ಲೂ ಧೃತಿ ಎನಿಸುವ ಸಾತ್ವಿಕಧೈರ್ಯ, ಸ್ಥಿತಿ ಎನಿಸುವ ನ್ಯಾಯಮಾರ್ಗಸ್ಥಿತಿ, ಪುಣ್ಯಪಾಪಗಳ ಲೇಪ ಅಂಟದಂತೆ ಕರ್ಮವನ್ನಾಚರಿಸುವ ಯೋಗ, ಪ್ರೇರಕತ್ವ –ಮುಂತಾದ ಗುಣಗಳ ಅಭಿವ್ಯಕ್ತಿಯ ಸಂದರ್ಭದಲ್ಲಿ ವಿಶೇಷವಾಗಿ ಆ ಗುಣಗಳ ಅಭಿಮಾನಿಯನ್ನಾಗಿ ವಾಯುದೇವನ ಅನುಸಂಧಾನ ನಡೆಸಬೇಕು.

**ವಿಧಿನಿಷೇಧಗಳ ಆಚರಣೆಯ ಅವಧಿಯಲ್ಲಿ:** ಭಗವಂತನು ಹೇಗೆ ವಿಧಿನಿಷೇಧಾತ್ಮಕವಾದ ವೇದದ ಮಾತೆಂಬ ಹಗ್ಗದಿಂದ ಚತುರ್ಮುಖಾದಿಗಳನ್ನು ಬಂಧಿಸಿರುವನೋ ಹಾಗೆಯೇ ವಾಯುದೇವನೂ ಗರುಡ, ಶೇಷ ಮುಂತಾದ ಜಗತ್ತನ್ನು ವಿಧಿನಿಷೇಧಾತ್ಮಕ ವೇದದ ಮಾತೆಂಬ ಹಗ್ಗದಿಂದ ಬಂಧಿಸಿರುವನು.[159]

---

156. ಅಸ್ಮಾಸ್ಮಿನ್ ವಿಲಯೋ ಭಾವೀತ್ಯೇವಂ ವಿಜ್ಞಾನಮಾಹುತಿಃ ।
ನ ತು ತತ್ಕಾಲವಿಲಯಸ್ತನ್ಯೋ ವಾ ತಸ್ಯ ದರ್ಶನಾತ್ ॥
– ಬ್ರಹ್ಮತರ್ಕೇ *(ಭಾಗ.ತಾ.ನಿ. 1-15-11)*

157. ಭಾಗವತೇ 1-15-8...13

158. ಭಕ್ತಿರ್ಜ್ಞಾನಂ ಸ ವೈರಾಗ್ಯಂ ಪ್ರಜ್ಞಾ ಮೇಧಾ ಧೃತಿಃ ಸ್ಥಿತಿಃ ।
ಯೋಗಃ ಪ್ರಾಣೋ ಬಲಂ ಚೈವ ವೃಕೋದರ ಇತಿ ಸ್ಮೃತಃ ॥
ಏತಾದೃಶಾತ್ಮಕೋ ವಾಯುಃ ...... ॥ – *ಮ.ಭಾರ.ತಾ.ನಿ. 2-142, 143.*

159. ....... ತಸ್ಯ ನಾರಾಯಣಸ್ಯೈವ ಸರ್ವವೇದಾತ್ಮಾಕಾ ಹಿ ವಾಕ್ । .......ದಾಮ ತೇನೈವ ಬಧ್ನಾತಿ ಸಕಲಂ ಜಗದಚ್ಯುತಃ ...... ತಥೈವ ವಾಯುನಾ ಬದ್ಧಂ ಜಗದೇತತ್ ತತೋಽವರವ್ । ಸುಪರ್ಣಶೇಷಗಿರಿಶಶಕ್ರಸೂರ್ಯಾದ್ಯಮಂಜಸಾ ..... ।
– *ಐ.ಉ.ಭಾ. 1-4-14.*

ಆದುದರಿಂದ ನಾವು ಕ್ಷಣಕ್ಷಣಕ್ಕೂ ಹೆಜ್ಜೆಹೆಜ್ಜೆಗೂ ಒಂದಿಲ್ಲ ಒಂದು ಶಾಸ್ತ್ರದ ವಿಧಿಯನ್ನೋ ನಿಷೇಧವನ್ನೋ ಅಳವಡಿಸಿಕೊಳ್ಳುತ್ತ ಇರುವುದರಿಂದ ಆ ಎಲ್ಲ ಅವಧಿಯಲ್ಲಿ ಆ ವಿಧಿನಿಷೇಧಾತ್ಮಕವಾದ ಹಗ್ಗವನ್ನು ಬಂಧಿಸಿರುವವನು ಹೇಗೆ ಭಗವಂತನೋ ಹಾಗೆ ವಾಯುದೇವನೂ –ಎಂಬ ಅನುಸಂಧಾನವನ್ನು ತಾಳಬೇಕು.

**ಎರಡೂ ಬಗೆಯ ಭಯವನ್ನು ಪರಿಹರಿಸುವಲ್ಲಿ:** ನಮ್ಮನ್ನು ಕಾಡುವ ಭಯ ಸ್ಥೂಲವಾಗಿ ಎರಡು ಬಗೆಯದ್ದು. ಐಹಿಕ ಭಯ ಹಾಗೂ ಪಾರತ್ರಿಕ ಭಯ. ಅಂದರೆ ಈ ಲೋಕಕ್ಕೆ ಸಂಬಂಧಿಸುವಂತಹದ್ದು ಹಾಗು ಸತ್ತ ಮೇಲೆ ಸಾಗಬೇಕಾದ ಲೋಕಕ್ಕೆ ಸಂಬಂಧಿಸುವಂತಹದ್ದು. ಇವುಗಳಲ್ಲಿ ಐಹಿಕ ಭಯ ಆಧ್ಯಾತ್ಮಿಕ, ಆಧಿಭೌತಿಕ ಹಾಗೂ ಆಧಿದೈವಿಕ –ಹೀಗೆ ಮೂರು ಬಗೆಯ ತಾಪಗಳಿಗೆ ಸಂಬಂಧಿಸಿ ಸಾವಿರಾರು ರೂಪಗಳನ್ನು ತಾಳುವುದು. ಪಾರತ್ರಿಕಭಯವಾದರೂ ಸತ್ತ ಮೇಲೆ ಯಾವ ಲೋಕವನ್ನು ಹೊಂದ ಬೇಕಾಗುವುದೋ? ಅಲ್ಲಿ ಯಾವಯಾವ ಶಿಕ್ಷೆಯನ್ನು ಅನುಭವಿಸಬೇಕಾಗುವುದೋ? ಪರಮ ಪುರುಷಾರ್ಥವಾದ ಮೋಕ್ಷ ದೊರಕಬೇಕೆಂದರೆ ನಡೆಸಬೇಕಾದ ಸಾಧನೆಗಳಾದ ಜ್ಞಾನ–ಭಕ್ತಿ–ವೈರಾಗ್ಯಗಳಲ್ಲಿ ಏನೇನು ಕೊರತೆ ಸಂಭವಿಸಿತೋ? –ಇತ್ಯಾದಿ ರೂಪದಲ್ಲಿರುವುದು.

ಈ ಎರಡೂ ಬಗೆಯ ಭಯವನ್ನು ಮುಖ್ಯವಾಗಿ 'ಭಯಕೃದ್‌ಭಯನಾಶನಃ' ಎನಿಸಿರುವ ಭಗವಂತ ಪರಿಹರಿಸುವನಾದರೆ, ಅಂತಹ ಭಗವಂತನ ಅನುಗ್ರಹಕ್ಕೆ ಪಾತ್ರನಾದ ಮುಖ್ಯಪ್ರಾಣ ಭಗವಂತನ ಬಳಿಕ ಈ ಭಯವನ್ನು ಪರಿಹರಿಸುವವನಾಗಿರುವನು. ರುದ್ರಾದಿ ತತ್ತ್ವಾಭಿಮಾನಿದೇವತೆಗಳನ್ನೆಲ್ಲ ತನ್ನ ಅಧೀನದಲ್ಲಿ ಕೊಟ್ಟುಕೊಂಡಿರುವ ವಾಯುದೇವನಿಗೆ ಅಂತಹ ತತ್ತ್ವಾಭಿಮಾನಿಗಳ ನಿಯಂತ್ರಣದಲ್ಲಿರುವ ಆಧ್ಯಾತ್ಮಿಕ, ಆಧಿಭೌತಿಕ ಹಾಗೂ ಆಧಿದೈವಿಕ ಭಯಗಳನ್ನು ಸಡಿಲಿಸುವುದಕ್ಕಾಗಲೀ, ದೂರಮಾಡುವುದಕ್ಕಾಗಲೀ ಪೂರ್ಣ ಸಾಮರ್ಥ್ಯವಿದೆ.

ಹಾಗೆಯೇ ಪ್ರತಿಯೊಬ್ಬ ಜೀವರ ಒಳ್ಳೆಯ ಹಾಗೂ ಕೆಟ್ಟ ಕರ್ಮಗಳನ್ನು ಮಾಡಿಸುವ ಮುಖ್ಯಪ್ರಾಣನಿಗೆ ಕರ್ಮಪ್ರಯುಕ್ತ ಪಡೆಯಬೇಕಾದ ಪಾರತ್ರಿಕ ಲೋಕದ ವಿಷಯದಲ್ಲೂ, ಅಲ್ಲಿ ಅನುಭವಿಸಬೇಕಾದ ತಿರಸ್ಕಾರಪುರಸ್ಕಾರಗಳ ವಿಷಯದಲ್ಲೂ ಪ್ರಭುತ್ವ ಇದೆ. ಜ್ಞಾನ–ಭಕ್ತಿ–ವೈರಾಗ್ಯಗಳಿಗೆ ಅಭಿಮಾನಿಯಾಗಿರುವ ಅವನಿಗೆ ಆ ಗುಣಗಳಲ್ಲಿಯ ಕೊರತೆಯನ್ನು ಪರಿಹರಿಸಿ ಅವು ಮೋಕ್ಷಸಾಧನೆಗೆ ಉಪಯುಕ್ತವಾಗುವಂತೆ ಮಾಡುವ ಸಾಮರ್ಥ್ಯವೂ ಇದೆ. ಆದುದರಿಂದಲೇ ನಾರದೀಯ ಹೀಗೆ ಸಾರಿದೆ– ಸಾಧನಾನುಷ್ಠಾನದಲ್ಲಿ ದುರ್ಬಲನಾದರೂ ಭಗವಂತನ ಭಕ್ತ್ಯಾದಿಗುಣಗಳಿಗೆ ಅಭಿಮಾನಿಯಾಗಿರುವ ವಾಯುದೇವನನ್ನು ಆಶ್ರಯಿಸಿ ಶ್ರೀವಿಷ್ಣುವನ್ನು ಪಡೆಯಲು ಬಯಸಬಹುದಾಗಿದೆ. ಯುವರಾಜನ ನೆರವಿನಿಂದ ಮಹಾರಾಜನನ್ನು ಹೇಗೆ ಹೊಂದಬಹುದೋ ಹಾಗೆ –ಎಂಬುದಾಗಿ.[160]

---

160. ಪ್ರಥಮೋ ಹನೂಮಾನ್ನಾಮ ದ್ವಿತೀಯೋ ಭೀಮ ಏವ ಚ ।
ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥ – *ಮ.ಭಾರ.ತಾ.ನಿ. 2-125.*

ಈ ರೀತಿಯಾಗಿ ವಾಯುದೇವ ಐಹಿಕ ಹಾಗೂ ಪಾರತ್ರಿಕಗಳೆಂಬ ಎರಡೂ ಬಗೆಯ ಭಯಗಳನ್ನು ಪರಿಹರಿಸಬಲ್ಲವನಾದುದರಿಂದ ಋಗ್ವೇದದ ಪವಮಾನ ಮಂಡಲದ ಮಂತ್ರವೊಂದು ವಾಯುದೇವನಲ್ಲಿ 'ಪವಮಾನ' ಎಂದು ಸಂಬೋಧಿಸಿ ಸಮೀಪದ ಹಾಗೂ ದೂರದ ಅಂದರೆ ಐಹಿಕ ಹಾಗೂ ಪಾರತ್ರಿಕ ಭಯಗಳನ್ನೆಲ್ಲ ದೂರ ಮಾಡಲು ಸಲ್ಲಿಸಬೇಕಾದ ನಿವೇದನೆಯೊಂದನ್ನು ಪ್ರಸ್ತುತಪಡಿಸಿದೆ.161

ನಾವು ಯಾವುದೇ ಬಗೆಯ ಭಯದಿಂದ ದೂರವಾದಾಗ ಅಥವಾ ದೂರವಾಗಬೇಕಾದ ಭಯವನ್ನು ಪರಿಹರಿಸುವಲ್ಲಿ ಭಗವಂತನ ಪ್ರತಿಬಿಂಬವಾಗಿ ಮುಖ್ಯಪ್ರಾಣನ ಪಾತ್ರವನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು.

ಮುಖ್ಯಪ್ರಾಣ ತನ್ನ ಹನೂಮಂತ ಹಾಗೂ ಭೀಮಸೇನರೂಪಗಳಿಂದ ಸುಗ್ರೀವ, ಜಾಂಬವಂತ ಮುಂತಾದವರ, ಅರ್ಜುನ, ಯುಧಿಷ್ಠಿರ ಮುಂತಾದವರ ಐಹಿಕಭಯವನ್ನೂ, ಮಧ್ವರೂಪದಿಂದ ತ್ರಿವಿಕ್ರಮಪಂಡಿತಾಚಾರ್ಯ, ವಿಷ್ಣುತೀರ್ಥರು, ಪದ್ಮನಾಭತೀರ್ಥರು –ಮುಂತಾದವರ ಪಾರತ್ರಿಕ ಭಯವನ್ನೂ ಪರಿಹರಿಸುವಲ್ಲಿ ಪಾತ್ರವಹಿಸಿದ್ದನ್ನು ವಿಶ್ಲೇಷಿಸಿಕೊಂಡು ಆ ಅನುಸಂಧಾನವನ್ನು ದೃಢಪಡಿಸಿಕೊಳ್ಳಬೇಕು.

**ಮೂರು ಬಗೆಯ ಸಾಧನಾನುಷ್ಠಾನಕ್ಕೆ ಸ್ಫೂರ್ತಿ:** 'ಮೊದಲನೆಯ ಅವತಾರ ಹನೂಮಾನ್ ಎಂದು ಪ್ರಸಿದ್ಧವಾದುದು. ಎರಡನೆಯ ಅವತಾರ ಭೀಮ ಎಂದು ಪ್ರಸಿದ್ಧವಾದುದು. ಮೂರನೆಯ ಅವತಾರ ಪೂರ್ಣಪ್ರಜ್ಞ ಎಂದು ಪ್ರಸಿದ್ಧವಾದುದು. ಮುಖ್ಯಪ್ರಾಣನ ಈ ಮೂರು ಅವತಾರಗಳೂ ತಾವು ಭಗವಂತನ ಸೇವಾರೂಪವಾಗಿ ಭಕ್ತರಿಗೆ ಭಗವಂತನ ಸಂದೇಶವನ್ನು ತಲಪಿಸುವುದು, ಭಗವದ್ವಿರೋಧಿಗಳನ್ನು ಸದೆಬಡಿಯುವುದು, ಭಗವಂತನ ಶುದ್ಧವಾದ ತತ್ವಜ್ಞಾನವನ್ನು ಪ್ರಚುರಪಡಿಸುವುದು ಇತ್ಯಾದಿ ಬೇರೆಬೇರೆ ಕಾರ್ಯಗಳನ್ನು ನಡೆಸಿದ್ದವಲ್ಲದೆ, ಸಾಧಕರಾದ ಸುಗ್ರೀವಾದಿಗಳಿಗೂ ಅರ್ಜುನಾದಿಗಳಿಗೂ, ವಿಷ್ಣುತೀರ್ಥ, ಪದ್ಮನಾಭತೀರ್ಥಾದಿಗಳಿಗೂ ಸಾಧನಾನುಷ್ಠಾನಕ್ಕೆ ಬೇಕಾದ ಪ್ರೇರಣೆಯನ್ನು ಅನುಗ್ರಹಿಸಿರುವವು.162

---

* ಭಗವತ್ಕಾರ್ಯಸಾಧಕಃ – ಭಗವತ್ಕಾರ್ಯಾಣಿ ಸ್ವಯಂ ಸಾಧಯತಿ, ಅನ್ಯೈಃ ಸಾಧಕೈಃ ಸಾಧಯತಿ ಚ ಸಾಧಯಿತುಂ ಪ್ರೇರಯತಿ ಚೇತಿ – ತಾನು ಭಗವಂತನ ಕಾರ್ಯವನ್ನು ಸಾಧಿಸುವುದಲ್ಲವೆ, ಉಳಿದ ಸಾಧಕರು ಭಗವತ್ಕಾರ್ಯಗಳನ್ನು ಸಾಧಿಸುವಂತೆ ಪ್ರೇರಿಸುವನು ಎಂಬ ಅರ್ಥ ಹೊರಡುವುದು.

161. ಅಬಲೋಽಪಿ ತತೋ ವಾಯೋರ್ವಿಷ್ಣುಭಕ್ತ್ಯಾದಿರೂಪಿಣಃ । ಪ್ರಾಪ್ತುಮಿಚ್ಛತಿ ಯುಕ್ತಃ ಸನ್ ವಿಷ್ಣುಂ ಸುಬಲವತ್ತರಮ್ । ಯಥೈವ ಯುವರಾಜೇನ ಮಹಾರಾಜಮಭೀಪ್ಸತಿ । ಪ್ರಾಪ್ತುಂ..... । *– ನಾರದೀಯ (ಬೃ.ಉ.ಭಾ. 3-5-8.)*

162. ಯದಂತಿ ಯಚ್ಚ ದೂರಕೇ ಭಯಂ ವಿಂದತಿ ಮಾಮಿಹ । ಪವಮಾನ ವಿತಜ್ಜಹಿ .... ॥ *– ಋ.ವೇ. 9-67-21.*

ಮೇಲಿನ ಪ್ರಮಾಣ ಸಾರುತ್ತಿರುವಂತೆ ವಾಯುದೇವನ ಆಂಜನೇಯರೂಪ ಭಕ್ತ ಭಗವಂತರನ್ನು ಸಂಯೋಜಿಸುವುದೇ ಮುಂತಾದ ಕಾರ್ಯಗಳಿಗೆ ಸ್ಫೂರ್ತಿ ನೀಡುವುದು; ಭೀಮಸೇನರೂಪ ಭಗವಂತನ ಸರ್ವೋತ್ತಮವ್ಯಕ್ತಿತ್ವಕ್ಕೆ ಅಪಚಾರ ಎಸಗುವ ದುಷ್ಟಶಕ್ತಿಗಳ ವಿರುದ್ಧವಾಗಿ ನಡೆದುಕೊಳ್ಳಲು ಬೇಕಾದ ಸಾತ್ವಿಕ ಧೈರ್ಯವನ್ನು ನೀಡುವುದು; ಮಧ್ವರೂಪ ಭಗವಂತನ ಹಾಗೂ ಶಾಸ್ತ್ರದ ಸರಿಯಾದ ತಿಳಿವಳಿಕೆಯನ್ನು ಗಳಿಸುವಲ್ಲಿ ಹಾಗೂ ಯೋಗ್ಯರಿಗೆ ಅದನ್ನು ವಿತರಿಸುವಲ್ಲಿ ಬೇಕಾದ ಸ್ಫೂರ್ತಿಯನ್ನು ನೀಡುವುದು.

ಆಯಾ ಬಗೆಯ ಸಾಧನೆಗಳು ನಮ್ಮಿಂದ ನಡೆದಾಗ ವಾಯುದೇವನ ಆಯಾ ರೂಪದ ಅನುಗ್ರಹದ ಅನುಸಂಧಾನವನ್ನು ಮಾಡುತ್ತಿರಬೇಕು.

★

# • ಸಾಧಕೋತ್ತಮನಿಂದ ಸಾಧನೆಗೆ ಸ್ಫೂರ್ತಿ •

ಲೌಕಿಕ ವ್ಯವಹಾರಗಳಲ್ಲಿ ಹೇಗೋ ಹಾಗೆ ಆಧ್ಯಾತ್ಮಿಕ ಹಾಗೂ ಧಾರ್ಮಿಕ ಸಾಧನೆಗಳಲ್ಲೂ ಶಿಕ್ಷಣದ ಜೊತೆಗೆ ಸಾಧಕರ ಅನುಷ್ಠಾನದಿಂದಲೂ ಸ್ಫೂರ್ತಿಯನ್ನು ಗಳಿಸ ಬಹುದಾಗಿದೆ. ಉತ್ತಮ ಸಾಧಕರ ಸಾಧನೆಯನ್ನು ಪರಿಶೀಲಿಸಿದಲ್ಲಿ ಆ ಸಾಧನೆಯನ್ನು ನಾವೂ ಆಚರಿಸಬೇಕೆಂಬ ಇಚ್ಛೆಯ ಜೊತೆಗೆ ಆ ಸಾಧನೆಯ ಆಚರಣೆಯ ಬಗ್ಗೆ ಪ್ರೇರಣೆಯೂ ದೊರಕಬಲ್ಲುದು.

ಅಲ್ಲದೆ, ಸಾಧನೆಯನ್ನು ಹೇಗೆ ಅಳವಡಿಸಿಕೊಳ್ಳಬೇಕೆಂಬುದರ ಬಗ್ಗೆ ಮಾಹಿತಿಯನ್ನೂ ಪಡೆದುಕೊಳ್ಳಬಹುದಾಗಿದೆ.

**ಸಾಧಕೋತ್ತಮರು:** ಪ್ರಾಣದೇವರು ಸಾಧಕರಲ್ಲೇ ಉತ್ತಮರೆಂದು ಸಿದ್ಧಾಂತಿಸಲ್ಪಟ್ಟಿರು ವವರು. ಬ್ರಹ್ಮ ಸೂತ್ರದ **'ಇಯದಾಮನನ'** –ಎಂಬ ಒಂದು ಅಧಿಕರಣ[1] ಅವರ ಸಾಧ ಕೋತ್ತಮತ್ವದ ಸಿದ್ಧಾಂತಕ್ಕಾಗಿಯೇ ಹೊರಟಿದೆ. ಆ ಅಧಿಕರಣದ ಮೊದಲ ಸೂತ್ರದಲ್ಲಿ ಸಾಧಕರಲ್ಲಿ ಮುಖ್ಯಪ್ರಾಣನೇ ತುತ್ತತುದಿಯಲ್ಲಿರುವವನೆಂಬುದಕ್ಕೆ ಕೌಂಠರವ್ಯಶ್ರುತಿಯ ಉದ್ಘೋಷಣೆ ಯನ್ನು ಹೇತುವನ್ನಾಗಿ ತೋರಿಸಲಾಗಿದೆ.[2] ಆ ಶ್ರುತಿಯಾದರೂ 'ಎಲ್ಲ ಸಾಧಕರಿಗಿಂತಲೂ ಪ್ರಾಣನೇ ಶ್ರೇಷ್ಠ' –ಎಂಬ ವಿಚಾರವನ್ನು ತಿರುಗಿಸಿ, ತಿರುಗಿಸಿ ಮೂರು ಬಾರಿ ಘೋಷಿಸಿರುವುದಲ್ಲದೆ, ಹೀಗೆ ಸಾಧಕರಲ್ಲಿ ಶ್ರೇಷ್ಠನಾಗಿರುವುದರಿಂದಲೇ **'ಭೂಯಾನ್'** ಶ್ರೇಷ್ಠನಾದವ ನೆಂದೇ ಪ್ರಸಿದ್ಧನಾಗಿರುವನು –ಎಂದು ಯುಕ್ತಿಯಿಂದಲೂ ಸಮರ್ಥಿಸಿದೆ.[3]

ಆದುದರಿಂದ ಸಾಧಕೋತ್ತಮರಾದ ಮುಖ್ಯಪ್ರಾಣದೇವರನ್ನೇ ಸಾಧನಾನುಷ್ಠಾನದ ವಿಷಯದಲ್ಲಿ ಅನುಕರಿಸುವುದು ಉತ್ತಮ. ಅವರು ತಮ್ಮ ಮೂಲರೂಪದಲ್ಲೂ ತಮ್ಮ ಅವತಾರಗಳಾದ ಆಂಜನೇಯ, ಭೀಮಸೇನ ಹಾಗೂ ಮಧ್ವ –ಈ ರೂಪಗಳಿಂದ ಅನೇಕಾನೇಕ ಸಾಧನೆಗಳನ್ನು ನಡೆಸಿ, ಭಗವಂತನ ಅನುಗ್ರಹಕ್ಕೆ ಪಾತ್ರರಾಗಿರುವರು. ಅವರ ಅಂತಹ ಸಾಧನೆಗಳಿಂದ ಸ್ಫೂರ್ತಿ ಪಡೆದು ನಾವೂ ಆ ಬಗೆಯ ಸಾಧನೆಗಳ ಅನುಷ್ಠಾನದಲ್ಲಿ ತೊಡಗೋಣ. ಭಗವಂತನು ಮೆಚ್ಚಿಕೊಳ್ಳುವಂತೆ ಸಾಧನೆಗಳನ್ನು ಹೇಗೆ ನಡೆಸಬೇಕೆಂಬುದರ ಬಗ್ಗೆಯೂ ಬೆಳಕನ್ನು ಪಡೆದುಕೊಳ್ಳೋಣ.

---

1. ಬ್ರ.ಸೂ. 3-3-21.
2. 'ಇಯದಾಮನನಾತ್'

* ಇಯದೇವಾಧಿಕಾರಿಣಾಂ ಪ್ರಾಣಾವಸಾನತ್ವಮೇವ । 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್.......' ಇತಿ ಶ್ರುತೇಃ । – *ತತ್ತ್ವಪ್ರಕಾಶಿಕಾ.*

3. ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್ನ ಹಿ ಪ್ರಾಣಾದ್ ಭೂಯಾನ್ ಪ್ರಾಣೋ ಹ್ಯೇವ ಭೂಯಾಂಸ್ತಸ್ಮಾದ್ ಭೂಯಾನ್ನಾಮ' – *ಕೌಂಠರವ್ಯಶ್ರುತಿ.*

ಮುಖ್ಯಪ್ರಾಣದೇವರಾಗಲೀ, ಅವರ ಅವತಾರರೂಪಗಳಾಗಲೀ ನಡೆಸಿದಂತೆ ಸಾಧನೆಗಳನ್ನು ನಡೆಸಲು ಸಾಧ್ಯವೇ ಇಲ್ಲ ಎಂಬುದನ್ನು ಮೊದಲು ಮನವರಿಕೆ ಮಾಡಿಕೊಂಡು, **'ಮಹಾಜನೋ ಯೇನ ಗತಃ ಸ ಪಂಥಾಃ'** –ಎಂದಿರುವಂತೆ ಸಾಧನಾಮಾರ್ಗದಲ್ಲಿ ಅವರಿಟ್ಟ ಹೆಜ್ಜೆಗಳನ್ನು ಅನುಕರಿಸಲು ಯತ್ನಿಸೋಣ.

ಮುಖ್ಯಪ್ರಾಣದೇವರ ಮೂಲದ ಕೆಲವು ಗುಣಧರ್ಮಗಳನ್ನೂ, ಅವತಾರತ್ರಯದ ಗುಣಧರ್ಮಗಳನ್ನೂ ಅನುಸರಿಸೋಣ.

## ಮುಖ್ಯಪ್ರಾಣನನ್ನು ಅನುಸರಿಸೋಣ

### ಆದಷ್ಟು ದೇವರ ಸಾಮೀಪ್ಯ:

ತಂತ್ರಸಾರಸಂಗ್ರಹದಲ್ಲಿ ಉಲ್ಲೇಖಿಸಿರುವ ಮುಖ್ಯಪ್ರಾಣದೇವನ ಧ್ಯಾನಶ್ಲೋಕದಲ್ಲಿ[4] ಅಚ್ಯುತನ ತೊಡೆಯಲ್ಲಿ ಕುಳಿತುಕೊಂಡು ನಿರಂತರವೂ ಅವನ ಸ್ತುತಿಗೈಯುತ್ತಿರುವುದಾಗಿಯೂ, ಎರಡು ಕೈಗಳನ್ನು ಜೋಡಿಸಿ ಅವನನ್ನು ನಮಿಸುತ್ತಿರುವುದಾಗಿಯೂ ತಿಳಿಸಲಾಗಿದೆ.

**'ದ್ವಾ ಸುಪರ್ಣಾ ಸಯುಜಾ ಸಖಾಯೌ.........' –ಎಂದು ಉಪನಿಷತ್ತು ಸಾರುತ್ತಿರುವಂತೆ ಭಗವಂತನು ತಮ್ಮ ಜೊತೆಗೇ ಇರುವ ಆಪ್ತಮಿತ್ರ. ಕಣ್ಣಿಗೆ ಎವೆಯಂದದಿ ನಮ್ಮ ಜೊತೆಗೇ ಇದ್ದು, ನಮ್ಮ ರಕ್ಷಣೆಯಲ್ಲಿ ತೊಡಗಿರುವ ಅವನ ಸಾಮೀಪ್ಯವನ್ನು ಸರ್ವದಾ ಅನುಸಂಧಾನಕ್ಕೆ ತಂದುಕೊಳ್ಳುವುದಕ್ಕಾಗಿ ಪ್ರತಿಮೆ, ಫೋಟೋ, ಗುರುಹಿರಿಯರು ಪಿಮುಂತಾದವರಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವ ಅವನ ಸಾಮೀಪ್ಯ ಅಧಿಕವಾಗಿ ದೊರಕುವಂತೆ ಅಂತಹ ವಸ್ತುಗಳ, ವ್ಯಕ್ತಿಗಳ ಸಮೀಪದಲ್ಲಿಯೇ ಆದಷ್ಟು ಇರಬೇಕು. ಹಾಗೆಯೇ, ಲೌಕಿಕ ವ್ಯವಹಾರಗಳಲ್ಲಿ ಮುಳುಗಿದ್ದರೂ ಆದಷ್ಟು 'ಹರೇ ರಾಮ ಹರೇ ಕೃಷ್ಣ .....' ಇತ್ಯಾದಿಯಾಗಿ ಅವನ ನಾಮಪಠನರೂಪವಾದ ಸ್ತುತಿಯನ್ನಾದರೂ ನಡೆಸುತ್ತಿರಬೇಕು. ಉತ್ತಮರಿಗೆ ನಮಸ್ಕಾರಾದಿಗಳನ್ನು ಆಗಾಗ್ಗೆ ಮಾಡುವ ಮೂಲಕ ದೈಹಿಕವಾಗಿಯೂ ವಿನಯವನ್ನು, ಭಕ್ತಿಯನ್ನು ತೋರಿಸುತ್ತಿರಬೇಕು.**

**ಒಂದೆರಡು ಬಾರಿಯಾದರೂ ಅರ್ಪಿಸಲು ಸ್ಫೂರ್ತಿ:** ಎಲ್ಲರ ಉಸಿರನ್ನು ನಿಯಂತ್ರಿಸುತ್ತಿರುವ ಮುಖ್ಯಪ್ರಾಣದೇವರು ಪ್ರತಿನಿತ್ಯ ೨೧೬೦೦ ಬಾರಿ ನಡೆಯುವ ಉಸಿರಾಟದ ಅವಧಿಯಲ್ಲಿ ಶ್ವಾಸಮಂತ್ರವನ್ನು ಜಪಿಸುತ್ತ, ತಾನು ನಡೆಸುವ ಆ ಜಪವನ್ನು ಶ್ರೀಹರಿಯಲ್ಲಿ ಪ್ರತಿನಿತ್ಯ ಬೆಳಗ್ಗೆ ಬರೇ ಅರ್ಪಿಸುವ ಪ್ರಯುಕ್ತ ಉಸಿರಾಡುವ ವ್ಯಕ್ತಿಗಳಿಗೆ ಪುಣ್ಯ ಬರುವಂತೆ ಅನುಗ್ರಹಿಸುವರು.[5]

---

4. ಉದ್ಯದ್ರವಿಪ್ರಕರಸನ್ನಿಭಮಚ್ಯುತಾಂಕೇ ಸ್ವಾಸೀನಮಸ್ಯ ನುತಿನಿತ್ಯವಚಃಪ್ರವೃತ್ತಿಮ್ ।
ಧ್ಯಾಯೇದ್..... ಸುಕೃತಾಂಜಲಿಂ ತಂ ಪ್ರಾಣಂ...... ॥ *– ತಂ.ಸಾ.ಸಂ. 4-69.*

5. ಶ್ವಾಸರೂಪೋ ಜಪೋ ನಿತ್ಯಂ....... ಅರ್ಪಣೀಯೋ ಹರೌ ನಿತ್ಯಂ....... ।
*– ತಂ.ಸಾ.ಸಂ. 4-22,23.*

**'.......ತತ್ಪೂಜಾ ಕರ್ಮ ಚಾಖಿಲಮ್' -ಎಂದಿರುವಂತೆ ಜೀವನದ ಪ್ರತಿಯೊಂದು ಚಟುವಟಿಕೆಯನ್ನೂ ಭಗವಂತನ ಪೂಜೆಯನ್ನಾಗಿ ನಡೆಸಲು ಬೇಕಾದಷ್ಟು ಪಕ್ವತೆ ಇಲ್ಲದ ಸಾಧಕರಿಗೆ ಬೆಳಗ್ಗೆ ಎದ್ದಾಕ್ಷಣ ಹಾಗೂ ರಾತ್ರಿ ಮಲಗುವ ಮುನ್ನ 'ಪ್ರಾತಃಪ್ರಭೃತಿ......' ಇತ್ಯಾದಿಯಾಗಿ ದಿನವಿಡೀ ನಡೆಸುವ ಎಲ್ಲ ಚಟುವಟಿಕೆಗಳನ್ನು ಅವನ ಪೂಜೆಯಾಗಿ ಸಂಕಲ್ಪಿಸಲು ಹಾಗೂ ಅರ್ಪಿಸಲು ಬೇಕಾದ ಸ್ಫೂರ್ತಿಯನ್ನಾದರೂ ನೀಡುತ್ತಿರಬೇಕು.**

**ದೇವರ ಪ್ರವೇಶಕ್ಕೆ ದ್ವಾರ:** ಷಟ್‌ಪ್ರಶ್ನೋಪನಿಷತ್ತಿನಲ್ಲಿ ತಿಳಿಸಿರುವಂತೆ6 ದೇವರು ಜೀವಾತ್ಮರ ಶರೀರವನ್ನು ಪ್ರವೇಶಿಸುವುದು ಮುಖ್ಯಪ್ರಾಣದೇವರ ಮೂಲಕ. ಹಾಗೆಯೇ ಕೊನೆಗೆ ದೇವರ ಬಳಿಗೆ ಕರೆದೊಯ್ಯುವವನೂ ಮುಖ್ಯಪ್ರಾಣದೇವರು.7

**ಕೆಲವೊಮ್ಮೆ ಸಾತ್ವಿಕರು ಕೂಡಾ ಆಸುರೀಶಕ್ತಿಗಳ ಆಕ್ರಮಣದಿಂದಾಗಿ ದೇವರು, ಧರ್ಮ, ಅಧ್ಯಾತ್ಮ -ಇವುಗಳಿಂದೆಲ್ಲ ದೂರ ಇರುವರು. ಅಂತಹವರನ್ನು ಗುರುತಿಸಿ, ಅವರ ಜೀವನದಲ್ಲಿ ದೇವರ ಪ್ರವೇಶ ಆಗುವಂತೆ ಮಾಡಬೇಕು. ದೇವರ ಬಗ್ಗೆ ಪಾಠ ಪ್ರವಚನಾದಿಗಳು ನಡೆಯುವಲ್ಲಿಗೆ ಅವರನ್ನು ಕರೆದೊಯ್ಯಬೇಕು.**

**ಭಕ್ತರ ರಕ್ಷಣೆ ಹಾಗೂ ಕೀರ್ತಿದಾನ:** ಚಾಕ್ಷುಷ ಮನ್ವಂತರದಲ್ಲಿ ಸಮುದ್ರಮಥನ ನಡೆದಾಗ ಕಾಲಕೂಟವಿಷವು ಕಾಣಿಸಿಕೊಳ್ಳಲು ವಾಯುದೇವನು ಅದರ ದಮನಪ್ರಯುಕ್ತ ವಾಗಿ ರುದ್ರದೇವನಿಗೆ ಕೀರ್ತಿ ಬರಬೇಕೆಂದು ಭಗವಂತನ ಸಂಕಲ್ಪವನ್ನು ಅರಿತು, ಆ ವಿಷದ ಹೆಚ್ಚಿನ ಭಾಗವನ್ನು ತಾನೇ ಕುಡಿದು, ಅದರ ಸ್ವಲ್ಪ ಭಾಗವನ್ನಷ್ಟೇ ತೇದು, ತೇದು ನಿಸ್ಸತ್ವ ವನ್ನಾಗಿಸಿ ರುದ್ರದೇವನಿಗೆ ನೀಡುವನು.8 ಅಷ್ಟನ್ನು ಕುಡಿದುದರಿಂದಲೇ ರುದ್ರದೇವನಿಗೆ ಕಾಲಕೂಟವಿಷವನ್ನು ದಮನ ಮಾಡಿದ ಕೀರ್ತಿ ಬರುವಂತಾಯಿತು.

**ವಿಷಭಕ್ಷಣೆಯೇ ಮುಂತಾದ ಆಪತ್ತುಗಳಿಂದ ಭಗವದ್‌ಭಕ್ತರನ್ನು ರಕ್ಷಿಸುವುದರಿಂದ ಭಗವಂತನು ಪ್ರಸನ್ನನಾಗುವನು. ಹಾಗೆಯೇ ಭಗವದ್‌ಭಕ್ತರಿಗೆ ಕೀರ್ತಿ ಸಲ್ಲುವಂತೆ ನಡೆದುಕೊಳ್ಳುವುದೂ ಭಗವಂತನ ಸಂತೋಷಕ್ಕೆ ಪ್ರಯೋಜಕವಾಗುವುದು.**

**.....ತಸ್ಯಾಂ ಜಾಗರ್ತಿ ಸಂಯಮೀ:** ಜೀವನು ನಿದ್ರಿಸುವಾಗ ಉಳಿದೆಲ್ಲ ಇಂದ್ರಿಯಾಭಿ ಮಾನಿಗಳು ತಮ್ಮತಮ್ಮ ಚಟುವಟಿಕೆಯನ್ನು ಉಪಸಂಹಾರಗೊಳಿಸಲು ಮುಖ್ಯಪ್ರಾಣ ತನ್ನ ಪ್ರಾಣಾದಿರೂಪಗಳಿಂದ ಶರೀರದ ರಕ್ಷಣೆ ಇತ್ಯಾದಿಗಳನ್ನು ನಡೆಸುವನು.9

---

6. ಸ ಈಕ್ಷಾಂಚಕ್ರೇ ಕಸ್ಮಿನ್ನಹಂ..... । *– ಷ.ಉ. 6-1-5.*
7. ವಿದ್ಯುತ್ಪತಿರ್ವಾಯುರೇವ ನಯೇದ್ ಬ್ರಹ್ಮ ನ ಚಾಪರಃ ।
*– ಬೃಹತ್ತಂತ್ರ (ಬ್ರ.ಸೂ.ಭಾ. 3-5)*
8. ರುದ್ರಸ್ಯ ಯಶಸೋಽರ್ಥಾಯ ಸ್ವಯಂ ವಿಷ್ಣುರ್ವಿಷಂ ಪ್ರಭುಃ ।
ನ ಸಂಜಹ್ರೇ ಸಮರ್ಥೋಽಪಿ ವಾಯುಂ ಚೋಚೇ ಪ್ರಶಾಂತಯೇ ॥
*– ಭಾಗ.ತಾ.ನಿ. 8-7-19.*
9. ಪ್ರಾಣಾಗ್ನಯ ಏವೈತಸ್ಮಿನ್ ಪುರೇ ಜಾಗ್ರತಿ..... । *– ಷ.ಉ. 4-1-4.*

ಮನೆಯಲ್ಲಾಗಲೀ, ಸಮಾಜದಲ್ಲಾಗಲೀ ದೇವರ ಬಗ್ಗೆ, ಧರ್ಮದ ಬಗ್ಗೆ, ಆಧ್ಯಾತ್ಮದ ಬಗ್ಗೆ ಉಳಿದೆಲ್ಲರು ಅನಾಸಕ್ತರಾಗಿದ್ದು ನಿದ್ರಿಸುವವರಂತಿದ್ದರೂ ಸಾಧಕರು ಅವರ ಜೊತೆಗೆ ಸೇರದೆ ತಾವು ಮಾತ್ರ ದೇವರು, ಧರ್ಮಾದಿಗಳ ಬಗ್ಗೆ ಎಚ್ಚೆತ್ತೇ ಇರಬೇಕು. ಅಷ್ಟೇ ಅಲ್ಲದೆ, ಉಳಿದವರೂ ಆ ನಿಟ್ಟನಲ್ಲಿ ಎಚ್ಚೆತ್ತುಕೊಳ್ಳುವಂತೆ ಸ್ಫೂರ್ತಿ, ಪ್ರೇರಣೆಯನ್ನು ನೀಡುತ್ತಿರ ಬೇಕು.

**ವಿಷ್ಣುಪಾರಮ್ಯದ ತಿಳಿವಳಿಕೆಯನ್ನು ಪ್ರೀತಿಸಬೇಕು:** ಶ್ರೀವಿಷ್ಣುವಿಗೆ ವಾಯುದೇವ ಜೀವೋತ್ತಮ ಎಂಬ ತಿಳಿವಳಿಕೆ ತುಂಬ ಪ್ರಿಯವಾದುದು ಹೇಗೋ ಹಾಗೆ ವಾಯು ದೇವನಿಗೆ ಶ್ರೀವಿಷ್ಣು ಸರ್ವೋತ್ತಮನಾಗಿರುವನೆಂಬ ತಿಳಿವಳಿಕೆ ಅತ್ಯಂತ ಪ್ರಿಯವಾದದ್ದು.[10]

ಶ್ರೀವಿಷ್ಣುವನ್ನು ಪ್ರೀತಿಸುವೆವಾದರೆ, ಅವನ ಸರ್ವೋತ್ತಮತ್ವದ ವಿಷಯಕವಾದ ತಿಳಿವಳಿಕೆಯನ್ನೂ ನಾವು ಪ್ರೀತಿಸಲೇಬೇಕು. ಹೀಗೆ ಪ್ರೀತಿಸುವ ಪ್ರಯುಕ್ತ ಯಾವ ಘಟನೆ ಯಿಂದ, ಯಾವ ಗ್ರಂಥದ ಯಾವ ಮಾತಿನಿಂದ ವಿಷ್ಣುಸರ್ವೋತ್ತಮತ್ವದ ತಿಳಿವಳಿಕೆಯನ್ನು ಹೊಂದಬಹುದೆಂದು ಹಾತೊರೆಯುತ್ತಿರಬೇಕು.

**ಭಗವಂತನ ತಿಳಿವಳಿಕೆಯಿಂದ ಪವಿತ್ರೀಕರಣ:** ಭಗವದ್‌ಜ್ಞಾನದಷ್ಟು ಪವಿತ್ರವಾದ ವಸ್ತು ಸಮಗ್ರ ಜಡಪ್ರಪಂಚದಲ್ಲಿ ಇಲ್ಲ –ಎಂದು ಗೀತಾಚಾರ್ಯ ತಿಳಿಸಿರುವಂತೆ[10A] ಅಂತಹ ಪವಿತ್ರ ಭಗವದ್‌ಜ್ಞಾನವನ್ನು ನೀಡುವ ಮೂಲಕ ವಾಯುದೇವನು ಒಂದು ಬಗೆಯಲ್ಲಿ ಜಗತ್ತನ್ನು ಪವಿತ್ರೀಕರಿಸುವನು.[11]

ನೀರು, ವಾಯು, ಮಣ್ಣು, ಸ್ನಾನ –ಇತ್ಯಾದಿಗಳ ಮೂಲಕ ಪವಿತ್ರವನ್ನಾಗಿಸುವ ಪ್ರಕ್ರಿಯೆ ಪ್ರಸ್ತುತವಾಗುವಾಗ, ಅವೆಲ್ಲವುಗಳಿಗಿಂತ ಭಗವದ್‌ಜ್ಞಾನ ಅತ್ಯಧಿಕ ಪವಿತ್ರ ಪದಾರ್ಥವೆಂದು ಪರಿಚಯಿಸಿಕೊಟ್ಟು ಉಳಿದ ಪವಿತ್ರವಸ್ತುಗಳ ಸೇವನೆ ಭಗವದ್ ಜ್ಞಾನಕ್ಕೆ ಪೂರಕವಾಗುವಂತೆ ಪ್ರೇರಣೆ ನೀಡಬೇಕು.

**ಅಪಮೃತ್ಯುಭಯದ ಪರಿಹಾರ:** ಪವಮಾನಮಂಡಲದ 'ಯದಂತಿ ಯಚ್ಚ ದೂರಕೇ...' –ಎಂಬ ಋಚೆಯ[13] ಜಪದಿಂದಾಗಿ ಅಪಮೃತ್ಯುಭಯ ಪರಿಹಾರವಾಗುವುದೆಂದು

---

10. ಸರ್ವದೇವೋತ್ತಮೋ ವಾಯುರಿತಿ ಜ್ಞಾನಾನ್ನ ಚಾಪರವ್ ।
ಪ್ರಿಯಮಸ್ತಿ ಹರೇಃ ಕಿಂಚಿತ್ ತಥಾ ವಾಯೋರ್ಹರೇರ್ವಿದಃ ॥
– ಮಾಹಾತ್ಮ್ಯೇ *(ಭಾಗ.ತಾ.ನಿ. 11-11-43)*

* ಹರೇರ್ವಿದಃ ಜ್ಞಾನಾದಪರಂ ಪ್ರಿಯಂ ನಾಸ್ತಿ ।

10A ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ । *– ಗೀ.*

11. ಪರಸ್ಯ ಬ್ರಹ್ಮಣೋ ವಿಷ್ಣೋರ್ಜ್ಞಾಪನಾಖ್ಯ ಪ್ರಸೂತಿಭಿಃ ।
ವಾಯುಃ ಪುನಾತಿ ಯಲ್ಲೋಕಾನ್ ಸವಿತಾ ತೇನ ಕಥ್ಯತೇ ॥ *– ಐತರೇಯಭಾಷ್ಯ.*

13. ಯದಂತಿ ಯಚ್ಚ ದೂರಕೇ ಭಯಂ ವಿಂದತಿ ಮಾಮಿಹ । ಪವಮಾನ ವಿತಜ್ಜಹಿ ।

ತಿಳಿಸುವ ಮೂಲಕ[14] ಆ ಋಚೆಯ ಜಪದಿಂದಾಗಿ ಪ್ರಸನ್ನನಾಗುವ ವಾಯುದೇವ ಅಪಮೃತ್ಯುವನ್ನು ಪರಿಹರಿಸುವನೆಂದು ಸೂಚಿಸಿದಂತಾಗಿದೆ.

**ಗ್ರಹಾದಿಗಳ ಸೂಚನೆಯಿಂದ ಅಪಮೃತ್ಯುಭಯಕ್ಕೆ ಒಳಗಾದ ಸಾತ್ವಿಕರು ಅದರಿಂದ ಪಾರಾಗಲು ಪವಮಾನದ 'ಯದಂತಿ ಯಚ್ಚ ದೂರಕೇ.........' –ಎಂಬ ಋಚೆಯ ಜಪ ನಡೆಸಲು ಸೂಚಿಸೋಣ.**

**ಮೋಕ್ಷಸಾಧನೆಯಲ್ಲಿ ಪರಮೋತ್ಸಾಹವರ್ಜನ:** ಋಜುಗಳಲ್ಲಿ 'ಪರಮೋತ್ಸಾಹ ವರ್ಜನ' –ಪರಮೋತ್ಸಾಹವನ್ನು ತಾಳದಿರುವುದೊಂದೇ ದೋಷ[15] –ಎಂದು ಉಲ್ಲೇಖಿಸುವ ಮೂಲಕ ಋಜುಗಳಾದ ವಾಯುದೇವರಲ್ಲಿ ಪರಮೋತ್ಸಾಹ ತಾಳದಿರುವ ದೋಷವನ್ನು ಸೂಚಿಸಿದಂತಾಗಿದೆ.

ಭಗವಂತನ ಸಾಕ್ಷಾತ್ಕಾರವನ್ನು ಪಡೆದಿರುವ ಋಜುಗಳು ಕೂಡಲೇ ಮೋಕ್ಷಸಂಪಾದನೆಗಾಗಿ ಮಹೋತ್ಸಾಹವನ್ನು ಕೈಗೊಳ್ಳುವುದಿಲ್ಲ. ಕಲ್ಪಕಾಲಾವಾಧಿಯ ಸಾಧನೆಯನ್ನು ಯಾಕೆ ನಡೆಸುವರೆಂಬ ಶಂಕೆಯ ಹಿನ್ನೆಲೆಯಲ್ಲಿ ಈ ಮಾತು ಹೊರಟಿದ್ದು, ಮೋಕ್ಷದಲ್ಲಿ ಆನಂದಾತಿಶಯವನ್ನು ಹೊಂದುವುದಕ್ಕಾಗಿಯೇ ಅಷ್ಟು ದೀರ್ಘಾವಧಿಯಲ್ಲಿ ಸಾಧನೆ ನಡೆಸುವರು. ಕೂಡಲೇ ಮೋಕ್ಷ ಸಿಗುವಂತೆ ಪರಮೋತ್ಸಾಹ ತಾಳುವುದಿಲ್ಲ –ಎಂದು ನ್ಯಾಯಸುಧಾದಲ್ಲಿ ಸೂಚಿಸಲಾಗಿದೆ.

**ನಾವು ಕೂಡಾ ಸಾಧನಾನುಷ್ಠಾನದ ವಿಷಯದಲ್ಲಿ ಉತ್ಸಾಹಿಗಳಾಗಿರಬೇಕೇ ಹೊರತು ಸಾಧನಾನುಷ್ಠಾನದ ಫಲವನ್ನು ಆದಷ್ಟು ಬೇಗ ಹೊಂದುವಂತಾಗಬೇಕೆಂದು ಆತುರಪಡಬಾರದು. ಒಂದೊಮ್ಮೆ ಜಪ, ತಪ ಇತ್ಯಾದಿ ಸಾಧನಾನುಷ್ಠಾನದಲ್ಲಿ ನಮ್ಮ ಯೋಗ್ಯತೆಗೂ ಮೀರಿ ಪರಮೋತ್ಸಾಹ ತೋರಿದೆವೆಂದರೆ 'ಏಧಮಾನದ್ವಿಟ್' ಎನಿಸಿರುವ ಪರಮಾತ್ಮನ ನಿಗ್ರಹಕ್ಕೆ ಪಾತ್ರರಾಗಿ ನಿರಾಶರಾಗಬೇಕಾದ ಅಪಾಯ ಇದೆ.**

**ಸಾಧನೆಗಳನ್ನೂ ಮಾಡಿಸಿ, ಸಮರ್ಪಿಸುವುದು:** ಭಗವಂತನಲ್ಲಿ ಎಲ್ಲರ ಕರ್ಮಗಳನ್ನು ವಾಯುದೇವನು ಸಮರ್ಪಿಸುವನೆಂಬ ಯಾಜ್ಞೀಯೋಪನಿಷತ್ತಿನ ಸಂದೇಶವನ್ನು[16] ಶ್ರೀಮಧ್ವರು ಬ್ರಹ್ಮಾಂಡಪುರಾಣದ ಮೂಲಕ ಹೀಗೆ ಸ್ಪಷ್ಟಪಡಿಸಿರುವರು– ಇಂದ್ರಿಯಗಳನ್ನೂ, ಇಂದ್ರಿಯಾಭಿಮಾನಿಗಳನ್ನೂ ಪ್ರೇರಿಸುವ ಮೂಲಕ ಮಾರುತಿಯೇ ಎಲ್ಲರ ಚಟುವಟಿಕೆಗಳನ್ನು ಎಲ್ಲರ ಮೂಲಕ ನಡೆಸುವವನಾದುದರಿಂದ, ಹೀಗೆ ನಡೆದ ಆ ಎಲ್ಲ ಚಟುವಟಿಕೆಗಳನ್ನು ಅವನೇ ಭಗವಂತನಿಗೆ ಸಮರ್ಪಿಸುವನು.[17]

---

14. ಅಪಮೃತ್ಯುಭಯಂ ತಸ್ಯ ಯದಂತೀತ್ಯೃಗ್‌ಜಪಾದ್ ವ್ರಜೇತ್ । – *ಐ.ಉ.ಭಾ.*

15. ಋಜೂನಾಂ ಏಕಮೇವಾಸ್ತಿ ಪರಮೋತ್ಸಾಹವರ್ಜನಮ್ ।
*– ಅನುವ್ಯಾಖ್ಯಾನ (3-3-51)*

16. '.......ತಸ್ಮಿನ್ನಪೋ ಮಾತರಿಶ್ವಾ ದಧಾತಿ । *– ಯಾಜ್ಞೀಯೋಪನಿಷತ್ 1-4.*

17. ಮಾರುತ್ಯೇವ ಯತಶ್ಚೇಷ್ಟಾ ಸರ್ವಾ ತಾಂ ಹರಯೇಽರ್ಪಯೇತ್ ।
*– ಬ್ರಹ್ಮಾಂಡ (ಯಾ.ಉ.ಭಾ.)*

ನಾವು ಕೂಡಾ ಎಲ್ಲರ ಮೂಲಕ ಅಲ್ಲದಿದ್ದರೂ ಪ್ರಾತಃಸಂಕಲ್ಪಗದ್ಯದಲ್ಲಿ ಶ್ರೀರಾಘವೇಂದ್ರಗುರುಗಳು ಸೂಚಿಸಿರುವಂತೆ[18] ನಮ್ಮ ವಶದಲ್ಲಿ ಇರುವ ನಮ್ಮ ಪತ್ನೀಪುತ್ರಾದಿಗಳೂ, ನಮ್ಮ ಶಿಷ್ಯಾದಿಗಳೂ ಬೇರೆಬೇರೆ ಸಾಧನೆಗಳನ್ನು ನಡೆಸುವಂತೆ ಪ್ರೇರಿಸಿ, ಆ ಸಾಧನೆಗಳನ್ನು ಭಗವಂತನಿಗೆ ಸಮರ್ಪಿಸಲೂ ಪ್ರೇರಿಸಬೇಕು. ಹಾಗೆಯೇ, ಆ ಬಗೆಯ ಪ್ರೇರಣೆಯನ್ನೂ ಭಗವಂತನಿಗೆ ಸಮರ್ಪಿಸಬೇಕು.

**ಭಗವದ್ವಿರೋಧಿಗಳಿಗೆ ತಿರಸ್ಕಾರ; ಭಗವದ್ಭಕ್ತರಿಗೆ ಗೌರವಾದರಗಳು:** 'ವಾಯುದೇವರು ಭಗವದ್ವಿರೋಧಿಗಳನ್ನು ತಮಸ್ಸಿನಲ್ಲಿ ಬೀಳಿಸಿ ದಂಡಿಸುವರು. ವಿಷ್ಣುಭಕ್ತರನ್ನು ಮೋಕ್ಷದೆಡೆಗೆ ಕೊಂಡೊಯ್ಯುವರು.[19]

ನಮಗೆ ವಾಯುದೇವನಂತೆ ದಂಡಿಸಲು ಅಥವಾ ಪುರಸ್ಕರಿಸಲು ಆಗದಿದ್ದರೂ ಭಗವದ್ವಿರೋಧಿಗಳು ನಮ್ಮ ಬಂಧುಗಳೇ ಆಗಿದ್ದರೂ ಅವರ ಬಗ್ಗೆ ತಿರಸ್ಕಾರವನ್ನೂ, ಭಗವದ್‌ಭಕ್ತರು ಲೌಕಿಕವಾಗಿ ನಮ್ಮ ಬಂಧುಗಳಲ್ಲದಿದ್ದರೂ ಅವರ ಬಗ್ಗೆ ಗೌರವಾದರಗಳನ್ನೂ ತೋರೋಣ.

## ಆಂಜನೇಯನ ಆದರ್ಶಗಳನ್ನು ಪಾಲಿಸೋಣ

**ದೇವರ ಸರಿಯಾದ ಪರಿಚಯ:** ಲಕ್ಷ್ಮಣಸಹಿತನಾದ ರಾಮಚಂದ್ರ ಸೀತೆಯನ್ನು ಹುಡುಕಿಕೊಂಡು ಋಷ್ಯಮೂಕಪರ್ವತಕ್ಕೆ ಬರುವನು. ಸುಗ್ರೀವ ಮುಂತಾದ ಕಪಿಗಳೆಲ್ಲ ರಾಮಲಕ್ಷ್ಮಣರನ್ನು ತಮ್ಮ ಶತ್ರುಪಕ್ಷದವರೆಂದು ಭ್ರಮಿಸಿ ಅವರ ಬಗ್ಗೆ ಭಯಗ್ರಸ್ತರಾಗುವರು. ಅಲ್ಲಿಂದ ಓಡಲು ಪ್ರಾರಂಭಿಸುವರು.

ಆದರೆ ಆಂಜನೇಯ ಶ್ರೀರಾಮಚಂದ್ರನನ್ನು ಚೆನ್ನಾಗಿ ಬಲ್ಲವನಾಗಿದ್ದು, ಸುಗ್ರೀವಾದಿಗಳಿಗೆ ಶ್ರೀರಾಮನನ್ನು ಪರಿಚಯಿಸಿಕೊಡುವನು. ರಾಮನ ಬಗ್ಗೆ ಭಯ ತಾಳದಂತೆ ಮಾಡುವನು.

ದೇವರನ್ನು ಸರಿಯಾಗಿ ತಿಳಿಯದವರು ದೆವ್ವದ ಬಗ್ಗೆ ಹೇಗೋ ಹಾಗೆ ದೇವರ ಬಗ್ಗೆ ಭಯಪಡುವುದಿದೆ. ಅವನ ದಯಾಮಯ ವ್ಯಕ್ತಿತ್ವವನ್ನು ಗುರುತಿಸದೆ ಅವನೊಬ್ಬ ಕಠೋರ ವ್ಯಕ್ತಿ ಎಂದು ಭ್ರಮಿಸುವುದಿದೆ.

ದೇವರನ್ನು ನಂಬುವವರಲ್ಲೂ ದೇವರ ನರಸಿಂಹ ಸಾಲಿಗ್ರಾಮಾದಿಗಳ ಬಗ್ಗೆ ಭಯಪಡುವುದಿದೆ.

---

18. ಮದಾಜ್ಞಾಕಾರಿಭಿಃ ವಿದ್ಯಾಸಂಬಂಧಿಭಿಃ ದೇಹಸಂಬಂಧಿಭಿಶ್ಚ ತ್ವದೀಯೈಃ ಅಶೇಷಜನ್ಯೈಃ ತ್ವತ್ಸರ್ವಕರ್ತೃತ್ವಕಾರಯಿತೃತ್ವಾದ್ಯನುಸಂಧಾನಪೂರ್ವಕಂ ಕಾರಯಿಷ್ಯೇ ಚ ।
*– ಪ್ರಾತಃಸಂಕಲ್ಪಗದ್ಯ.*

19. ವಿಷ್ಣ್ವಭಕ್ತಾನ್ ಸದಾ ವಾಯುಃ ಶಾಸಯೇತ್ ತಮಸಿ ಕ್ಷಿಪನ್ । ವಿಷ್ಣುಭಕ್ತಾನ್ ವಿಮೋಕ್ಷಾಯ ಪ್ರಾಪಯಿತ್ವಾ ಸುಖಂ ನಯೇತ್ । *– ಭಾಗ.ತಾ.ನಿ. 11-21-28.*

**ಆಗ ಸಾಧಕರು, ಆಂಜನೇಯ ಸುಗ್ರೀವಾದಿಗಳಿಗೆ ಶ್ರೀರಾಮಚಂದ್ರನನ್ನು ಪರಿಚಯಿಸಿಕೊಟ್ಟಂತೆ ಅಂತಹ ವ್ಯಕ್ತಿಗಳಿಗೆ ದೇವರ ಕರುಣಾಮಯ ಮುಖವನ್ನು ಸ್ಪಷ್ಟಪಡಿಸೋಣ. ನರಸಿಂಹ ಸಾಲಿಗ್ರಾಮಾದಿಗಳೂ ಅವುಗಳಲ್ಲಿ ಸನ್ನಿಹಿತನಾದ ನರಸಿಂಹನ ಮೂಲಕವೇ ಫಲಪ್ರದಗಳಾಗಿರುವುದರಿಂದ ದಯಾಮಯನಾದ ನರಸಿಂಹ ತನ್ನ ಸನ್ನಿಧಾನಕ್ಕೆ ಪಾತ್ರವಾದ ಸಾಲಿಗ್ರಾಮದ ಮಾಧ್ಯಮದಲ್ಲಿ ಪೂಜಿಸುವವರಿಗೆ ಯಾಕೆ ಅನಿಷ್ಟಫಲ ನೀಡಿಯಾನು? -ಎಂದು ದೇವರ ಸರಿಯಾದ ಮಾಹಿತಿಯನ್ನು ಒದಗಿಸಿ, ದೇವರ ವಿಷಯದಲ್ಲಿ ಭಯಕ್ಕೊಳಗಾಗದಂತೆ ಮಾಡೋಣ.**

**ಮಾತುಗಾರಿಕೆಯ ಪ್ರಭಾವ:** ಆಂಜನೇಯ ರಾಮಲಕ್ಷ್ಮಣರ ಸಮೀಪಕ್ಕೆ ಹೋಗಿ ತನ್ನ ಪರಿಚಯವನ್ನು, ತಾನು ಬಂದ ಉದ್ದೇಶವನ್ನು ಎಲ್ಲ ತಿಳಿಸುವನು.

ಆಂಜನೇಯನ ಮಾತಿನ ಮೋಡಿಗೆ ಶ್ರೀರಾಮಚಂದ್ರನೂ ಮರುಳಾಗುವನು. ಲಕ್ಷ್ಮಣನೆದುರು ಆಂಜನೇಯನ ಮಾತಿನ ಮೋಡಿಯನ್ನು ಬಾಯ್ತುಂಬ ಹೊಗಳುವನು. ಋಗ್ವೇದ, ಯಜುರ್ವೇದ, ಸಾಮವೇದ ಅಧ್ಯಯನ ನಡೆಸದವರು ಈ ರೀತಿಯಾಗಿ ಮಾತನಾಡಲು ಸಾಧ್ಯವೇ ಇಲ್ಲ. ಒಂದೂ ಅಪಶಬ್ದವನ್ನು ಪ್ರಯೋಗಿಸಿಲ್ಲ ಅಂದಮೇಲೆ ಬಹಳ ಬಾರಿ ವ್ಯಾಕರಣವನ್ನು ಚೆನ್ನಾಗಿ ಅಭ್ಯಾಸ ಮಾಡಿರಬೇಕು. ಮಾತನಾಡುವಾಗ ಮುಖ, ಕಣ್ಣು, ಹಣೆ, ಹುಬ್ಬು –ಮುಂತಾದ ಅಂಗಾಂಗಗಳಲ್ಲಿ ಯಾವ ದೋಷವೂ ಕಾಣಿಸುವುದಿಲ್ಲ. ಹೃದಯವನ್ನು ಸಂತೋಷಪಡಿಸುವ ಕಲ್ಯಾಣ ಮಾತುಗಳನ್ನಾಡುವ ಇವನ ಮಾತುಗಾರಿಕೆ ಶತ್ರುವನ್ನೂ ಸಂತೋಷಪಡಿಸಬಲ್ಲದು...... ಹೀಗೆಲ್ಲ ಆಂಜನೇಯನ ಮಾತುಗಾರಿಕೆಯನ್ನು ಹೊಗಳುವ ರಾಮಚಂದ್ರ ಆಂಜನೇಯನ ಚಿಕ್ಕ ಅವಧಿಯ ಮಾತುಗಾರಿಕೆಯಿಂದ ಎಷ್ಟೊಂದು ಪ್ರಭಾವಿತನಾಗಿರುವನೆಂಬುದು ಸ್ಪಷ್ಟ.

**ಈ ನಿಟ್ಟಿನಲ್ಲಿ ಆಂಜನೇಯನನ್ನು ಅನುಕರಿಸಿ ನಾವೂ ನಮ್ಮ ಮಾತುಗಾರಿಕೆ ಉಳಿದವರ ಮೇಲೆ ಪ್ರಭಾವ ಬೀರುವಂತೆ ಅದರಲ್ಲಿ ವಿಷಯಗಾಂಭೀರ್ಯವೂ, ವ್ಯಾಕರಣ ಪರಿಶುದ್ಧಿಯೂ ಉಚ್ಚಾರಣಸೌಷ್ಠವವೂ ಮೇಳೈಸುವಂತೆ ಗಮನ ಹರಿಸೋಣ.**

**ಭಗವಂತನನ್ನೂ ಭಕ್ತರನ್ನೂ ಜೊತೆಗೂಡಿಸುವಿಕೆ:** ಆಂಜನೇಯ ಶ್ರೀರಾಮಚಂದ್ರನನ್ನು ಸುಗ್ರೀವನಲ್ಲಿಗೆ ಕರೆದೊಯ್ದು ಶ್ರೀರಾಮಚಂದ್ರನೂ ಸುಗ್ರೀವನೂ ಪರಸ್ಪರ ಸಖ್ಯಕ್ಕೆ ಒಳಗಾಗುವಂತೆ ಮಾಡುವನು. ಈ ಸಖ್ಯದಿಂದಾಗಿಯೇ ಸುಗ್ರೀವ ತನ್ನ ಅಧಿಕಾರಾದಿಗಳನ್ನು ಗಳಿಸಿಕೊಳ್ಳುವಂತಾಗುವುದು.

**ಆಂಜನೇಯನ ಈ ಆದರ್ಶವನ್ನು ಅನುಸರಿಸಿ, ನಾವೂ ಭಕ್ತರೆನಿಸಲು ಯೋಗ್ಯರಾಗಿರುವ ವ್ಯಕ್ತಿಗಳನ್ನು ಹುಡುಕಿ ಅವರಿಗೆ ಭಗವಂತನ ಸರಿಯಾದ ಮಾಹಿತಿಯನ್ನು ಒದಗಿಸಿ ಅವರು ಭಗವಂತನ 'ಸಖಾ' ಎನಿಸಿ ಮೆರೆಯುವಂತೆ ಮಾಡೋಣ. ಇವರಿಂದಾಗಿ ಅವರು ಭಗವಂತನ ಅನುಗ್ರಹಕ್ಕೆ ಪಾತ್ರರಾಗಿ ತಮ್ಮ ಮೋಕ್ಷರೂಪದ ಸ್ವರೂಪಾತ್ಮಕ ಆನಂದವನ್ನು ಕ್ರಮೇಣ ಹೊಂದಬಲ್ಲರು.**

**ಚಿಹ್ನೆಯಿಂದ ಭಕ್ತರನ್ನು ಬೇರ್ಪಡಿಸುವಿಕೆ:** ವಾಲಿಸುಗ್ರೀವರು ಕಾದಾಟದಲ್ಲಿ ತೊಡಗಿದಾಗ ವಾಲಿಯು ನಿಗ್ರಹಯೋಗ್ಯನೂ, ಸುಗ್ರೀವನು ಅನುಗ್ರಹಯೋಗ್ಯನೂ ಎಂದು ಶ್ರೀರಾಮಚಂದ್ರನಿಗೆ ತೋರಿಸಿಕೊಡುವುದಕ್ಕಾಗಿ ಶ್ರೀರಾಮಚಂದ್ರನ ಆದೇಶದ ಮೇರೆಗೆ ಆಂಜನೇಯನು ಸುಗ್ರೀವನ ಕೊರಳಿಗೆ ಒಂದು ಮಾಲೆಯನ್ನು ಹಾಕುವನು. ಇದರಿಂದಾಗಿ ವಾಲಿಯಿಂದ ಪ್ರತ್ಯೇಕಿಸಲ್ಪಟ್ಟ ಸುಗ್ರೀವನನ್ನು ಉಳಿಸಿ ವಾಲಿಯನ್ನು ಶ್ರೀರಾಮ ನಿಗ್ರಹಿಸುವನು.

**ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗಬೇಕಾದ ಭಕ್ತರನ್ನು ಅಭಕ್ತರಿಂದ ಪ್ರತ್ಯೇಕಿಸುವುದಕ್ಕಾಗಿ ತಮ್ಮ ದೇಹವನ್ನು ಭಗವಂತನಿಗೆ ಅರ್ಪಿಸುವ ಸಂಕೇತವಾಗಿ ಅವರು ಊರ್ಧ್ವಪುಂಡ್ರಗಳನ್ನೂ, ಪಂಚಮುದ್ರೆಗಳನ್ನೂ ಧರಿಸಿಕೊಳ್ಳುವಂತೆ ಪ್ರೇರಿಸೋಣ.**

**ದೇವರ ಕಾರ್ಯದಲ್ಲಿ ವಿಸ್ಮರಣೆ ಸಲ್ಲ:** ರಾಮನಿಂದ ಸಾಕಷ್ಟು ಉಪಕಾರ ಪಡೆದುಕೊಂಡ ಸುಗ್ರೀವ ಭೋಗದಲ್ಲಿ ಮಗ್ನನಾಗಿ ಶ್ರೀರಾಮನಿಗೆ ಕೊಟ್ಟ ಮಾತಿಗೆ ಅನುಗುಣವಾಗಿ ಸೀತಾನ್ವೇಷಣೆಯಲ್ಲಿ ತೊಡಗುವಲ್ಲಿ ವಿಸ್ಮರಣೆ ತಾಳಿದಾಗ ಆಂಜನೇಯ ಸುಗ್ರೀವನನ್ನು ಎಚ್ಚರಿಸುವನು– 'ಭಗವಂತನ ಪ್ರೀತಿಗಾಗಿ ನಡೆಸಬೇಕಾದ ಕಾರ್ಯದಲ್ಲಿ ವಿಸ್ಮರಣೆ ಸಲ್ಲ. ಒಂದೊಮ್ಮೆ ವಿಸ್ಮರಣೆಗೊಳಗಾಗಿ ರಾಮಕಾರ್ಯದಿಂದ ಹಿಂಜರಿದರೆ ನಾನು ಬಲಾತ್ಕಾರವಾಗಿ ಆ ಕಾರ್ಯವನ್ನು ಮಾಡಿಸುವೆನು' –ಎಂದು.

**ಭಗವಂತನಿಂದ ಕ್ಷಣಕ್ಷಣಕ್ಕೆ ಹೆಜ್ಜೆಹೆಜ್ಜೆಗೆ ಉಪಕಾರಪಡೆಯುತ್ತಿರುವ ಜೀವರು ಕೃತಜ್ಞತಾಸೂಚಕವಾಗಿ ಶಾಸ್ತ್ರದಲ್ಲಿ ವಿಧಿಸಿರುವಂತೆ ಕಾಲಕಾಲಕ್ಕೆ ಸಂಧ್ಯಾವಂದನ, ಪೂಜೆ ಇತ್ಯಾದಿಗಳನ್ನು ನಡೆಸುತ್ತಿರಬೇಕು. ಇದಕ್ಕೆ ಬದಲಾಗಿ ಆ ಕಾರ್ಯಗಳನ್ನು ನಡೆಸಲು ಹಿಂಜರಿದರೆ ಅಂತಹವರಿಗೆ ಭಗವಂತನ ಉಪಕಾರವನ್ನು ಸ್ಪಷ್ಟಪಡಿಸಿ, ಅವರು ದೇವರ ಕಾರ್ಯಗಳಲ್ಲಿ ತೊಡಗುವಂತೆ ಮಾಡೋಣ. ಒಂದೊಮ್ಮೆ ಸಹಜವಾಗಿ ಅವರು ತೊಡಗದೆ ಹಿಂಜರಿದರೆಂದರೆ ಕೃತಘ್ನತಾದೋಷದ ಹೇಯತ್ವಾದಿಗಳನ್ನು ಸ್ಪಷ್ಟಪಡಿಸಿ ಬಲಾತ್ಕಾರವಾಗಿಯಾದರೂ ಅವರನ್ನು ಸಂಧ್ಯಾವಂದನ, ದೇವರ ಸ್ಮರಣೆ -ಇತ್ಯಾದಿ ದೇವಕಾರ್ಯಗಳಲ್ಲಿ ತೊಡಗಿಸೋಣ.**

**ಭಗವದ್ವಿರೋಧಿ ಚಟುವಟಿಕೆಗೆ ಪ್ರತಿಭಟನೆ:** ಸೀತಾನ್ವೇಷಣೆಯಲ್ಲಿ ತೊಡಗಿದ ಆಂಜನೇಯನ ತಂಡದ ಕಪಿಗಳು ವಿಂಧ್ಯಗಿರಿಯ ಮಯನಿರ್ಮಿತ ಗುಹೆಯನ್ನು ಪ್ರವೇಶಿಸುವರು. ಆಗಾಗಲೇ ಸುಗ್ರೀವ ಕೊಟ್ಟಿದ್ದ ಅವಧಿ ಮುಗಿದುಹೋಗಿದ್ದರಿಂದ ಹಿಂತಿರುಗದೆ ಅಲ್ಲೇ ಇದ್ದುಬಿಡುವುದೆಂದು ಅಂಗದ, ಜಾಂಬವಂತ ಮುಂತಾದ ಕಪಿಶ್ರೇಷ್ಠರೆಲ್ಲ ನಿರ್ಣಯಿಸುವರು. ಉಳಿದ ಕಪಿಗಳೂ ಒಪ್ಪಿಕೊಳ್ಳುವರು. ಶ್ರೀರಾಮಚಂದ್ರನಿಗೆ ವಿರುದ್ಧವಾಗಿ ನಡೆದುಕೊಳ್ಳಲು ತೊಡಗಿದ್ದ ಈ ಪ್ರವೃತ್ತಿಯನ್ನು ಆಂಜನೇಯ ತೀವ್ರವಾಗಿ ಪ್ರತಿಭಟಿಸುವನು. ತನ್ನನ್ನು ದುರ್ಮಾರ್ಗಕ್ಕೆ ಯಾರಿಂದಲೂ ಎಳೆದುಕೊಳ್ಳಲು ಸಾಧ್ಯವಿಲ್ಲ ಎನ್ನುವನಲ್ಲದೆ, ರಾಮಚಂದ್ರನಿಗೆ ವಿರುದ್ಧವಾಗಿ ನಡೆದುಕೊಳ್ಳಲು ಹೊರಟವರನ್ನು ಬಲಾತ್ಕಾರವಾಗಿ ಸನ್ಮಾರ್ಗದಲ್ಲಿ ತೊಡಗಿಸುವ ತಾಕತ್ತು ತನ್ನಲ್ಲಿದೆ ಎಂದು ಉದ್ಘೋಷಿಸಿ ಅಂಗದಾದಿಗಳನ್ನು ಸನ್ಮಾರ್ಗದಲ್ಲಿ ತೊಡಗಿಸುವನು.

ನಾವೂ ದೇವರ, ಧರ್ಮದ ಹಾಗೂ ಸನಾತನ ಸಂಸ್ಕೃತಿಯ ವಿರುದ್ಧ ಯಾರಾದರೂ ನಡೆಯಲು ತೊಡಗಿದಾಗ ಅವನ್ನು ತೀವ್ರವಾಗಿ ಪ್ರತಿಭಟಿಸೋಣ. ನಮ್ಮನ್ನೂ ಆ ದುರ್ಮಾರ್ಗದಲ್ಲಿ ಹೊರಳಿಸಲು ಯತ್ನಿಸಿದಾಗ ಖಂಡಿತಾ ಅದು ಸಾಧ್ಯವಿಲ್ಲ ಎನ್ನೋಣ. ದುರ್ಮಾರ್ಗದತ್ತ ಸಾಗುವವರನ್ನು ಬಲಾತ್ಕಾರವಾಗಿ ಸನ್ಮಾರ್ಗಕ್ಕೆ ಎಳೆಯುವೆವೆಂದು ಘೋಷಿಸುತ್ತಾ ಆ ನಿಟ್ಟನಲ್ಲಿ ಹೆಜ್ಜೆ ಇಡೋಣ.

**ಉಳಿದವರ ಶಕ್ತಿ ಪ್ರಕಟಣೆಗೆ ಅವಕಾಶ:** ನೂರು ಯೋಜನಗಳ ಸಮುದ್ರವನ್ನು ಹಾರುವಲ್ಲಿ ಯಾವ ಯಾವ ಕಪಿಗೆ ಎಷ್ಟೆಷ್ಟು ಸಾಮರ್ಥ್ಯವಿದೆ ಎಂದು ಜಾಂಬವಂತ ವಿಚಾರಿಸಿದಾಗ ಬೇರೆಬೇರೆ ಕಪಿಗಳು ತಮ್ಮತಮ್ಮ ಹಾರುವ ಸಾಮರ್ಥ್ಯದ ಮಿತಿಯನ್ನು ಹೇಳುತ್ತ ಬಂದವು. ಆಂಜನೇಯ ಕೊನೆಯತನಕವೂ ತನ್ನ ಸಾಮರ್ಥ್ಯದ ಪರಿಚಯವನ್ನು ನೀಡುವುದಿಲ್ಲ. ಜಾಂಬವಂತ ಕೇಳಿಕೊಂಡ ಮೇಲಷ್ಟೇ ನೂರು ಯೋಜನದ ಸಮುದ್ರವನ್ನು ದಾಟಲು ಒಪ್ಪಿಕೊಳ್ಳುವನು.

ಉಳಿದ ಅಂಗದ, ಜಾಂಬವಂತ ಮುಂತಾದ ಶ್ರೇಷ್ಠಕಪಿಗಳ ಸಾಮರ್ಥ್ಯದ ಇತಿಮಿತಿಗಳನ್ನು ಬೆಳಕಿಗೆ ತಂದು ತಾನು ಅವರೆಲ್ಲರಿಗಿಂತ ಎತ್ತರದಲ್ಲಿರುವನೆಂದು ಸಾತ್ವಿಕ-ಸಾಧಕರಿಗೆ ತೋರಿಸಿಕೊಡುವುದು ಈ ಪ್ರವೃತ್ತಿಯ ಉದ್ದೇಶ.

ನಾವು ಕೂಡಾ ಯಾವುದೇ ದೊಡ್ಡ ಕಾರ್ಯವನ್ನು ನೆರವೇರಿಸಬೇಕಾದ ಪ್ರಸಂಗ ಒದಗಿ ಬಂದಾಗ, ಕೂಡಲೇ ಅದ್ದಕಾಗಿ ಧುಮುಕದೆ ಉಳಿದ ಯಾರಿಗೂ ಅದನ್ನು ನಿರ್ವಹಿಸುವ ತಾಕತ್ತು ಇಲ್ಲ ಎಂದು ಸ್ಪಷ್ಟವಾದ ಮೇಲಷ್ಟೇ ಆ ಕಾರ್ಯವನ್ನು ನಿರ್ವಹಿಸಲು ತೊಡಗೋಣ. ಇದರಿಂದಾಗಿ ಉಳಿದವರಿಗೆಲ್ಲ ನಮ್ಮ ಕಾರ್ಯಾಚರಣೆಯ ಮಹತ್ವ ಸ್ಪಷ್ಟವಾಗುವುದು. ಒಂದೊಮ್ಮೆ ಆ ಕಾರ್ಯಾಚರಣೆಯಲ್ಲಿ ಸ್ವಲ್ಪ ಲೋಪದೋಷಗಳು ಕಂಡುಬಂದರೂ ಅದಕ್ಕಾಗಿ ನಮ್ಮನ್ನು ದೂಷಿಸುವ ಪ್ರವೃತ್ತಿಯೂ ಕಡಮೆಯಾಗುವುದು.

**ಕಾರ್ಯಾಚರಣೆಯ ಮುಂದೆ ವರ್ಧಿಸಿಕೊಳ್ಳಬೇಕು:** ಶ್ರೀರಾಮಚಂದ್ರನ ಸೀತಾನ್ವೇಷಣಕಾರ್ಯದ ನಿರ್ವಹಣೆಗಾಗಿ ಶ್ರೀರಾಮಚಂದ್ರನನ್ನು ಭಕ್ತಿಪೂರ್ವಕವಾಗಿ ನೆನಪಿಸಿಕೊಂಡು ತನ್ನ ಶರೀರವನ್ನು ದೊಡ್ಡದಾಗಿಸಿಕೊಂಡನು.

ನಾವೂ ದೇವರ, ಧರ್ಮದ ಕಾರ್ಯದಲ್ಲಿ ತೊಡಗುವಾಗ ಆ ಕಾರ್ಯದ ನಿರ್ವಹಣೆಗೆ ನಮ್ಮ ಪೂರ್ಣಶಕ್ತಿಯ ವಿನಿಯೋಗ ನಡೆಯುವಂತೆ ನಮ್ಮನ್ನು ನಾವು ಬೆಳೆಸಿಕೊಳ್ಳೋಣ. ನಮ್ಮ ಶರೀರವನ್ನು ದೊಡ್ಡದಾಗಿಸಿಕೊಳ್ಳಲಾಗದಿದ್ದರೂ ಶರೀರದ ಶಕ್ತಿಯನ್ನೆಲ್ಲ ಒಟ್ಟುಗೂಡಿಸುವ ಮೂಲಕ ನಮ್ಮನ್ನು ನಾವು ಹಿಗ್ಗಿಸಿಕೊಳ್ಳಬಹುದು. ಈ ನಿಟ್ಟನಲ್ಲಿ ಸಮೃದ್ಧ ವ್ಯಕ್ತಿತ್ವದ ದೇವರ 'ವೃದ್ಧಿ'ಯನ್ನು 'ವರ್ಧನೋ ವರ್ಧಮಾನಶ್ಚ......' ನಾಮಗಳಿಂದ ಚಿಂತಿಸೋಣ.

**ದೇವರ ಸ್ಮರಣೆಯೊಂದಿಗೆ ಕಾರ್ಯಾರಂಭ:** ನೂರು ಯೋಜನ ವಿಸ್ತಾರದ ಸಮುದ್ರದ ತರಣಕ್ಕಾಗಿ ತೊಡಗಿದ ಆಂಜನೇಯ ಶ್ರೀರಾಮಚಂದ್ರನನ್ನು ಸ್ಮರಿಸಿಕೊಂಡು ನಮಿಸು

ವನು. ಅನಂತಕಲ್ಯಾಣಗುಣಗಳನ್ನು 'ಭಗವಾನ್' ನಾಮಾರೂಢವಾಗಿ ಸ್ಥೂಲವಾಗಿ ಚಿಂತಿಸು ವನಲ್ಲದೆ, ಆ ಗುಣಗಳಲ್ಲೂ 'ಸರ್ವೈಶ್ವರ್ಯ' – ಸರ್ವಸಾಮರ್ಥ್ಯ, ಅದಕ್ಕೆ ಪೋಷಕವಾಗಿ ಬಲಾಧಿಕ್ಯ, ಪರಾಕ್ರಮಾಧಿಕ್ಯ ಇವುಗಳನ್ನು ವಿಶೇಷವಾಗಿ ಚಿಂತಿಸಿ '**ತಂ ಯಥಾ ಯಥಾ ಉಪಾಸತೇ ತದೇವ ಭವತಿ**' –ಎಂಬ ನಿಯಮದಂತೆ ಭಗವಂತನ ಗುಣಗಳ ಉಪಾಸನೆ ಗನುಗುಣವಾಗಿ ಫಲವನ್ನು ಹೊಂದಬಹುದಾದ್ದರಿಂದ ಸಮುದ್ರತರಣಕ್ಕೆ ಬೇಕಾದ ಐಶ್ವರ್ಯ (ಸಾಮರ್ಥ್ಯ) ಬಲ, ವೀರ್ಯ ಇವು ತನ್ನಲ್ಲಿ ಸಿದ್ಧಿಸುವಂತೆ ನಡೆದುಕೊಳ್ಳುವನು.

**ನಾವೂ ದೇವರ ಪೂಜೆಗೆ ಹೇಗೋ ಹಾಗೆ ಯಾವುದೇ ಕಾರ್ಯಕ್ಕೆ ತೊಡಗುವಾಗ, ವಿಶೇಷವಾಗಿ ದೊಡ್ಡ ದೊಡ್ಡ ಕಾರ್ಯಗಳಲ್ಲಿ ತೊಡಗುವಾಗ ಆ ಕಾರ್ಯದ ಕುರಿತಾದ ನಮ್ಮ ಸಂಕಲ್ಪ ಸಿದ್ಧಿಸುವಂತೆ, ಆ ಕಾರ್ಯ ಸಿದ್ಧಿಸಿ, ಅದರ ಫಲ ನಮಗೆ ದೊರಕುವಂತೆ ಅನುಗ್ರಹಿಸುವ ಭಗವಂತನನ್ನು 'ಸಿದ್ಧಾರ್ಥಃ ಸಿದ್ಧಸಂಕಲ್ಪಃ ಸಿದ್ಧಿದಃ ಸಿದ್ಧಿಸಾಧನಃ'ಎಂಬ ನಾಮಗಳಿಂದ ಸ್ತುತಿಸೋಣ. ಅಲ್ಲದೆ ಆಯಾ ಕಾರ್ಯಕ್ಕೆ ಉಪಯುಕ್ತವಾಗುವ ಗುಣಗಳು ನಮ್ಮಲ್ಲಿ ಪ್ರಕಟವಾಗುವಂತೆ ಅಂತಹ ಗುಣಗಳಿಂದ ಸಂಪನ್ನನಾದ ಭಗವಂತನ ವ್ಯಕ್ತಿತ್ವವನ್ನೇ ವಿಶೇಷವಾಗಿ ಚಿಂತಿಸೋಣ.**

**ದೇವರ ಕಾರ್ಯದ ಮಧ್ಯೆ ವಿಶ್ರಾಂತಿ ಸಲ್ಲ:** ಸಮುದ್ರದ ಮೇಲೆ ಹಾರುತ್ತಿದ್ದ ಆಂಜನೇಯನ ವಿಶ್ರಾಂತಿಗಾಗಿ ಮೈನಾಕಪರ್ವತ ಸಮುದ್ರದ ಮಧ್ಯದಿಂದ ಬೆಳೆದು ನಿಲ್ಲು ವುದು. ಆದರೆ ಆಂಜನೇಯ ಅದನ್ನು ಆಶ್ರಯಿಸಿ ವಿಶ್ರಾಂತಿ ಪಡೆಯುವುದಿಲ್ಲ. ಅಮಿತ ಪರಾಕ್ರಮಿಯಾದ ಅನಂತಬಲಸಂಪನ್ನನಾದ ಆಂಜನೇಯನಿಗೆ ವಿಶ್ರಾಂತಿಯ ಆವಶ್ಯಕತೆ ಇಲ್ಲ. ಅಲ್ಲದೆ, ದೇವಕಾರ್ಯದಲ್ಲಿ ತೊಡಗಿದ ಭಕ್ತ ಆ ಕಾರ್ಯವನ್ನು ಮುಗಿಸುವವರೆಗೂ ವಿಶ್ರಾಂತಿಗಾಗಿ ವಿಳಂಬ ಮಾಡುವುದು ಸರಿಯಲ್ಲ ಎಂದು ಸಾಧಕರಿಗೆ ಸೂಚ್ಯವಾಗಿ ತೋರಿಸಿಕೊಡುವ ಉದ್ದೇಶವೂ ಅಡಗಿದೆ.

**ನಾವೂ ದೇವರ, ಧರ್ಮದ ಕಾರ್ಯದಲ್ಲಿ ತೊಡಗಿದಾಗ ಮಧ್ಯೇಮಧ್ಯೇ ವಿಶ್ರಾಂತಿ ತೆಗೆದುಕೊಳ್ಳುವ ಪರಿಪಾಟವನ್ನು ದೂರ ಮಾಡೋಣ. ವಿಶ್ರಾಂತಿಯ ಆವಶ್ಯಕತೆ ಇಲ್ಲ ಎಂದು ಮನಸ್ಸಿನಲ್ಲಿ ದೃಢಪಡಿಸಿಕೊಂಡೆವೆಂದಾದರೆ ದೇಹದಲ್ಲಿ, ಅಂಗಾಂಗಗಳಲ್ಲಿ ದಣಿವು ಕಾಣಿಸದೆ, ವಿಶ್ರಾಂತಿ ಬೇಕೆನಿಸುವುದಿಲ್ಲ. ಅಲ್ಲದೆ, ವಿಶ್ರಾಂತಿಯಿಲ್ಲದೆ ಕಾರ್ಯ ವನ್ನು ನಡೆಸುವ ಮೂಲಕ ಆ ಕಾರ್ಯದ ನಿರ್ವಹಣೆಯಲ್ಲಿಯ ಉತ್ಸಾಹಾತಿಶಯ ವನ್ನು, ಆದರಾತಿಶಯವನ್ನು ಸ್ಪಷ್ಟಪಡಿಸಿ, ಭಗವಂತನ ವಿಶೇಷಾನುಗ್ರಹಕ್ಕೆ ಪಾತ್ರ ರಾಗೋಣ.**

**ಉಪಕಾರಸ್ಮರಣೆ:** ಆಂಜನೇಯ ತನ್ನ ವಿಶ್ರಾಂತಿಗಾಗಿ ಬೆಳೆದುನಿಂತ ಮೈನಾಕಪರ್ವತದ ಉಪಯೋಗವನ್ನು ಪಡೆದುಕೊಂಡಿಲ್ಲ. ಆದರೆ ತನಗೆ ಉಪಕರಿಸಲು ಬಂದ ಮೈನಾಕವನ್ನು ಆಲಿಂಗಿಸಿಕೊಳ್ಳುವ ಮೂಲಕ ಅವನ ಉಪಕಾರದ ಪ್ರವೃತ್ತಿಯನ್ನು ಅಭಿನಂದಿಸಲು ಹಿಂಜರಿಯುವುದಿಲ್ಲ.

**ನಾವು ಕೂಡಾ ನಮಗೆ ಉಪಕರಿಸಿದವನನ್ನು ಅಭಿನಂದಿಸಲು ಮರೆಯಬಾರದಷ್ಟೇ ಅಲ್ಲದೆ ಉಪಕರಿಸಲು ಮುಂದೆಬಂದ ವ್ಯಕ್ತಿಯ ಉಪಕಾರದ ಆವಶ್ಯಕತೆ ನಮಗೆ ಇಲ್ಲದೆ, ಅವನ ಉಪಕಾರವನ್ನು ಪಡೆದುಕೊಳ್ಳದಿದ್ದರೂ ಅವನ ಉಪಕಾರದ ಪ್ರವೃತ್ತಿಯನ್ನು ಅಭಿನಂದಿಸಲು ಮರೆಯಬಾರದು.**

**ದೇವತೆಗಳನ್ನು ಮೆಚ್ಚಿಸುವಿಕೆ:** ಸಮುದ್ರತರಣದಲ್ಲಿ ತೊಡಗಿದ್ದ ಆಂಜನೇಯನನ್ನು ಸಮುದ್ರದ ಮಧ್ಯದಲ್ಲಿ ನಾಗಜನನಿಯಾದ ಕದ್ರೂ ನುಂಗಲು ತೊಡಗುವಳು. ಅವಳ ಆಕ್ರಮಣವನ್ನು ತಪ್ಪಿಸುವ ಸಾಮರ್ಥ್ಯ ಆಂಜನೇಯನಿಗಿದ್ದರೂ ಅದನ್ನು ಬಳಸಿಕೊಳ್ಳದೆ, ಅವಳ ಬಾಯಿಯೊಳಗೆ ಹೊಕ್ಕು ಹೊರಬರುವನು. 'ನೀನು ಏನೇನನ್ನು ತಿನ್ನಲು ಇಚ್ಛಿಸುವಿಯೋ ಅವೆಲ್ಲ ನಿನಗೆ ದೊರಕುವಂತಾಗಲಿ ಎಂದು ದೇವತೆಗಳಿಂದ ವರ ಪಡೆದು ಕೊಂಡಿದ್ದ ಕದ್ರೂವಿನ ಬಾಯಿಯೊಳಗೆ ಹೊಕ್ಕು ಹೊರಬರುವ ಮೂಲಕ ದೇವತೆಗಳು ಆಕೆಗೆ ಕೊಟ್ಟ ವರವನ್ನೂ ಈಡೇರಿಸಿದಂತಾಗುವುದು, ದೇವತೆಗಳ ವರವನ್ನು ಅತಿಕ್ರಮಿಸಲು ಸಮರ್ಥನಾದರೂ ಅತಿಕ್ರಮಿಸದೆ ಅವರನ್ನು ಸಂತೋಷಪಡಿಸಿದಂತೆಯೂ ಆಗುತ್ತದೆ.

**ನಾವು ಕೂಡಾ 'ಬೇಡಿದರೆ ನಿನ್ನ ಬೇಡುವೆನು; ಕಾಡಿದರೆ ನಿನ್ನ ಕಾಡುವೆನು......' ಎಂದೆಲ್ಲ ಹೇಳಿರುವಂತೆ ಭಗವಂತನನ್ನೇ ಮುಖ್ಯಾಧಾರನನ್ನಾಗಿ ಆಶ್ರಯಿಸಿಕೊಂಡಿದ್ದರೂ ಉಳಿದ ದೇವತೆಗಳ ಹಂಗೇ ಬೇಡ ಎಂದು ಅವರನ್ನು ದೂರೀಕರಿಸದೆ ಭಗವದ್ಭಕ್ತರಾದ, ಭಗವಂತನ ಪರಿವಾರದ ಘಟಕರಾದ ಅವರನ್ನು ಮೆಚ್ಚಿಸುವುದೂ ಅತ್ಯಾವಶ್ಯಕವೆಂದು ವಿವೇಚಿಸಿಕೊಂಡು ವೈದಿಕರಾದ ಇತರ ದೇವತೆಗಳನ್ನೂ ಸಂತೋಷಪಡಿಸೋಣ.**

**ವಿಘ್ನಗಳನ್ನು ಎದುರಿಸುವಾಗ ತಾಳಬೇಕಾದ ಅನುಸಂಧಾನ:** 'ಶ್ರೇಯಾಂಸಿ ಬಹು ವಿಘ್ನಾನಿ.....' –ಎಂದಿರುವಂತೆ ಶ್ರೇಯಸ್ಕರಸಾಧನೆಗಳನ್ನು ನಡೆಸಲು ತೊಡಗುವಾಗ ಅಧಿಕ ವಿಘ್ನಗಳನ್ನು ಎದುರಿಸಬೇಕಾಗುವುದು. ಹಾಗೆ ಎದುರಿಸುವಾಗ ಅದಕ್ಕಾಗಿ ನಾವು ತುಂಬ ಉದ್ವೇಗಕ್ಕೊಳಗಾಗುವುದುಂಟು. ಯಾರುಯಾರನ್ನೋ ಶಪಿಸುತ್ತೇವೆ; ಬೈಯುತ್ತೇವೆ.

ವಿಘ್ನಗಳು ಎರಡು ಬಗೆಯಲ್ಲಿ ಇರುವವು. ಯೋಗ್ಯತೆಗೆ ಮೀರಿದ ಸಾಧನೆಯಲ್ಲಿ ತೊಡಗಿದಾಗ ಆ ಸಾಧನೆಯಿಂದ ಹಿಮ್ಮೆಟ್ಟಿಸುವುದಕ್ಕಾಗಿಯೇ ಒದಗಿಬರುವವು ಕೆಲವು ವಿಘ್ನಗಳಾದರೆ, ಮತ್ತೆ ಕೆಲವು ವಿಘ್ನಗಳು ನಮ್ಮ ಸಾಧನೆಗೆ ಇನ್ನಷ್ಟು ಮೆರುಗು ನೀಡಿ ಅದು ಅಧಿಕಫಲಪ್ರದವಾಗುವಂತೆ ಮಾಡುವುದಕ್ಕಾಗಿಯೇ ಒದಗಿಬರುವವು. ವಿಘ್ನಗಳು ಬಂದರೂ ಹಿಂಜರಿಯದೆ, ನಿರುತ್ಸಾಹನಾಗದೆ ಸಾಧನೆಯನ್ನು ನಡೆಸಿದನೆಂದರೆ ಅದಕ್ಕೆ ಅಧಿಕ ಫಲ ತಾನೇ? ಕರ್ಮಾಧ್ಯಕ್ಷನಾದ ಭಗವಂತನ ಪ್ರೇರಣೆಗನುಗುಣವಾಗಿ ದೇವತೆಗಳು ಹೀಗೆ ಬೇರೆಬೇರೆ ಉದ್ದೇಶದಿಂದ ವಿಘ್ನಗಳನ್ನು ತಂದೊಡ್ಡುವರೆಂದು 'ಬ್ರಹ್ಮಾಂಡ' (ಭಾಗ.ತಾ.ನಿ. 4-8-80) ತಿಳಿಸಿದೆ–

> **ಯತ್ರ ದೇವೈಃ ಕೃತೇ ವಿಘ್ನೇ ಖಂಡಿತೋ ನ ಪುಮಾನ್ ಭವೇತ್ ।**
> **ತತ್ರ ತದ್ಯಶಸೇ ವಿಘ್ನಂ ಕುರ್ಯುರ್ನ ತು ವಿಘಾತನೇ ॥**
> **ಯತ್ರ ಖಂಡಿತತಾ ತತ್ರ ಖಂಡನಾಯೈವ ಕೇವಲಮ್ ॥**

ವನು. ಅನಂತಕಲ್ಯಾಣಗುಣಗಳನ್ನು 'ಭಗವಾನ್' ನಾಮಾರೂಢವಾಗಿ ಸ್ಥೂಲವಾಗಿ ಚಿಂತಿಸುವನಲ್ಲದೆ, ಆ ಗುಣಗಳಲ್ಲೂ 'ಸರ್ವೈಶ್ವರ್ಯ' – ಸರ್ವಸಾಮರ್ಥ್ಯ, ಅದಕ್ಕೆ ಪೋಷಕವಾಗಿ ಬಲಾಧಿಕ್ಯ, ಪರಾಕ್ರಮಾಧಿಕ್ಯ ಇವುಗಳನ್ನು ವಿಶೇಷವಾಗಿ ಚಿಂತಿಸಿ '**ತಂ ಯಥಾ ಯಥಾ ಉಪಾಸತೇ ತದೇವ ಭವತಿ**' –ಎಂಬ ನಿಯಮದಂತೆ ಭಗವಂತನ ಗುಣಗಳ ಉಪಾಸನೆಗನುಗುಣವಾಗಿ ಫಲವನ್ನು ಹೊಂದಬಹುದಾದ್ದರಿಂದ ಸಮುದ್ರತರಣಕ್ಕೆ ಬೇಕಾದ ಐಶ್ವರ್ಯ (ಸಾಮರ್ಥ್ಯ) ಬಲ, ವೀರ್ಯ ಇವು ತನ್ನಲ್ಲಿ ಸಿದ್ಧಿಸುವಂತೆ ನಡೆದುಕೊಳ್ಳುವನು.

**ನಾವೂ ದೇವರ ಪೂಜೆಗೆ ಹೇಗೋ ಹಾಗೆ ಯಾವುದೇ ಕಾರ್ಯಕ್ಕೆ ತೊಡಗುವಾಗ, ವಿಶೇಷವಾಗಿ ದೊಡ್ಡ ದೊಡ್ಡ ಕಾರ್ಯಗಳಲ್ಲಿ ತೊಡಗುವಾಗ ಆ ಕಾರ್ಯದ ಕುರಿತಾದ ನಮ್ಮ ಸಂಕಲ್ಪ ಸಿದ್ಧಿಸುವಂತೆ, ಆ ಕಾರ್ಯ ಸಿದ್ಧಿಸಿ, ಅದರ ಫಲ ನಮಗೆ ದೊರಕುವಂತೆ ಅನುಗ್ರಹಿಸುವ ಭಗವಂತನನ್ನು 'ಸಿದ್ಧಾರ್ಥಃ ಸಿದ್ಧಸಂಕಲ್ಪಃ ಸಿದ್ಧಿದಃ ಸಿದ್ಧಿಸಾಧನಃ'ಎಂಬ ನಾಮಗಳಿಂದ ಸ್ತುತಿಸೋಣ. ಅಲ್ಲದೆ ಆಯಾ ಕಾರ್ಯಕ್ಕೆ ಉಪಯುಕ್ತವಾಗುವ ಗುಣಗಳು ನಮ್ಮಲ್ಲಿ ಪ್ರಕಟವಾಗುವಂತೆ ಅಂತಹ ಗುಣಗಳಿಂದ ಸಂಪನ್ನನಾದ ಭಗವಂತನ ವ್ಯಕ್ತಿತ್ವವನ್ನೇ ವಿಶೇಷವಾಗಿ ಚಿಂತಿಸೋಣ.**

**ದೇವರ ಕಾರ್ಯದ ಮಧ್ಯೆ ವಿಶ್ರಾಂತಿ ಸಲ್ಲ:** ಸಮುದ್ರದ ಮೇಲೆ ಹಾರುತ್ತಿದ್ದ ಆಂಜನೇಯನ ವಿಶ್ರಾಂತಿಗಾಗಿ ಮೈನಾಕಪರ್ವತ ಸಮುದ್ರದ ಮಧ್ಯದಿಂದ ಬೆಳೆದು ನಿಲ್ಲುವುದು. ಆದರೆ ಆಂಜನೇಯ ಅದನ್ನು ಆಶ್ರಯಿಸಿ ವಿಶ್ರಾಂತಿ ಪಡೆಯುವುದಿಲ್ಲ. ಅಮಿತ ಪರಾಕ್ರಮಿಯಾದ ಅನಂತಬಲಸಂಪನ್ನನಾದ ಆಂಜನೇಯನಿಗೆ ವಿಶ್ರಾಂತಿಯ ಆವಶ್ಯಕತೆ ಇಲ್ಲ. ಅಲ್ಲದೆ, ದೇವಕಾರ್ಯದಲ್ಲಿ ತೊಡಗಿದ ಭಕ್ತ ಆ ಕಾರ್ಯವನ್ನು ಮುಗಿಸುವವರೆಗೂ ವಿಶ್ರಾಂತಿಗಾಗಿ ವಿಳಂಬ ಮಾಡುವುದು ಸರಿಯಲ್ಲ ಎಂದು ಸಾಧಕರಿಗೆ ಸೂಚ್ಯವಾಗಿ ತೋರಿಸಿಕೊಡುವ ಉದ್ದೇಶವೂ ಅಡಗಿದೆ.

**ನಾವೂ ದೇವರ, ಧರ್ಮದ ಕಾರ್ಯದಲ್ಲಿ ತೊಡಗಿದಾಗ ಮಧ್ಯೇಮಧ್ಯೇ ವಿಶ್ರಾಂತಿ ತೆಗೆದುಕೊಳ್ಳುವ ಪರಿಪಾಟವನ್ನು ದೂರ ಮಾಡೋಣ. ವಿಶ್ರಾಂತಿಯ ಆವಶ್ಯಕತೆ ಇಲ್ಲ ಎಂದು ಮನಸ್ಸಿನಲ್ಲಿ ದೃಢಪಡಿಸಿಕೊಂಡೆವೆಂದಾದರೆ ದೇಹದಲ್ಲಿ, ಅಂಗಾಂಗಗಳಲ್ಲಿ ದಣಿವು ಕಾಣಿಸದೆ, ವಿಶ್ರಾಂತಿ ಬೇಕೆನಿಸುವುದಿಲ್ಲ. ಅಲ್ಲದೆ, ವಿಶ್ರಾಂತಿಯಿಲ್ಲದೆ ಕಾರ್ಯವನ್ನು ನಡೆಸುವ ಮೂಲಕ ಆ ಕಾರ್ಯದ ನಿರ್ವಹಣೆಯಲ್ಲಿಯ ಉತ್ಸಾಹಾತಿಶಯವನ್ನು, ಆದರಾತಿಶಯವನ್ನು ಸ್ಪಷ್ಟಪಡಿಸಿ, ಭಗವಂತನ ವಿಶೇಷಾನುಗ್ರಹಕ್ಕೆ ಪಾತ್ರರಾಗೋಣ.**

**ಉಪಕಾರಸ್ಮರಣೆ:** ಆಂಜನೇಯ ತನ್ನ ವಿಶ್ರಾಂತಿಗಾಗಿ ಬೆಳೆದುನಿಂತ ಮೈನಾಕಪರ್ವತದ ಉಪಯೋಗವನ್ನು ಪಡೆದುಕೊಂಡಿಲ್ಲ. ಆದರೆ ತನಗೆ ಉಪಕರಿಸಲು ಬಂದ ಮೈನಾಕವನ್ನು ಆಲಿಂಗಿಸಿಕೊಳ್ಳುವ ಮೂಲಕ ಅವನ ಉಪಕಾರದ ಪ್ರವೃತ್ತಿಯನ್ನು ಅಭಿನಂದಿಸಲು ಹಿಂಜರಿಯುವುದಿಲ್ಲ.

**ನಾವು ಕೂಡಾ ನಮಗೆ ಉಪಕರಿಸಿದವನನ್ನು ಅಭಿನಂದಿಸಲು ಮರೆಯಬಾರದಷ್ಟೇ ಅಲ್ಲದೆ ಉಪಕರಿಸಲು ಮುಂದೆಬಂದ ವ್ಯಕ್ತಿಯ ಉಪಕಾರದ ಆವಶ್ಯಕತೆ ನಮಗೆ ಇಲ್ಲದೆ, ಅವನ ಉಪಕಾರವನ್ನು ಪಡೆದುಕೊಳ್ಳದಿದ್ದರೂ ಅವನ ಉಪಕಾರದ ಪ್ರವೃತ್ತಿಯನ್ನು ಅಭಿನಂದಿಸಲು ಮರೆಯಬಾರದು.**

**ದೇವತೆಗಳನ್ನು ಮೆಚ್ಚಿಸುವಿಕೆ:** ಸಮುದ್ರತರಣದಲ್ಲಿ ತೊಡಗಿದ್ದ ಆಂಜನೇಯನನ್ನು ಸಮುದ್ರದ ಮಧ್ಯದಲ್ಲಿ ನಾಗಜನನಿಯಾದ ಕದ್ರೂ ನುಂಗಲು ತೊಡಗುವಳು. ಅವಳ ಆಕ್ರಮಣವನ್ನು ತಪ್ಪಿಸುವ ಸಾಮರ್ಥ್ಯ ಆಂಜನೇಯನಿಗಿದ್ದರೂ ಅದನ್ನು ಬಳಸಿಕೊಳ್ಳದೆ, ಅವಳ ಬಾಯಿಯೊಳಗೆ ಹೊಕ್ಕು ಹೊರಬರುವನು. 'ನೀನು ಏನೇನನ್ನು ತಿನ್ನಲು ಇಚ್ಛಿಸುವಿಯೋ ಅವೆಲ್ಲ ನಿನಗೆ ದೊರಕುವಂತಾಗಲಿ ಎಂದು ದೇವತೆಗಳಿಂದ ವರ ಪಡೆದು ಕೊಂಡಿದ್ದ ಕದ್ರೂವಿನ ಬಾಯಿಯೊಳಗೆ ಹೊಕ್ಕು ಹೊರಬರುವ ಮೂಲಕ ದೇವತೆಗಳು ಆಕೆಗೆ ಕೊಟ್ಟ ವರವನ್ನೂ ಈಡೇರಿಸಿದಂತಾಗುವುದು, ದೇವತೆಗಳ ವರವನ್ನು ಅತಿಕ್ರಮಿಸಲು ಸಮರ್ಥನಾದರೂ ಅತಿಕ್ರಮಿಸದೆ ಅವರನ್ನು ಸಂತೋಷಪಡಿಸಿದಂತೆಯೂ ಆಗುತ್ತದೆ.

**ನಾವು ಕೂಡಾ 'ಬೇಡಿದರೆ ನಿನ್ನ ಬೇಡುವೆನು; ಕಾಡಿದರೆ ನಿನ್ನ ಕಾಡುವೆನು......' ಎಂದೆಲ್ಲ ಹೇಳಿರುವಂತೆ ಭಗವಂತನನ್ನೇ ಮುಖ್ಯಾಧಾರನನ್ನಾಗಿ ಆಶ್ರಯಿಸಿಕೊಂಡಿದ್ದರೂ ಉಳಿದ ದೇವತೆಗಳ ಹಂಗೇ ಬೇಡ ಎಂದು ಅವರನ್ನು ದೂರೀಕರಿಸದೆ ಭಗವದ್ಭಕ್ತರಾದ, ಭಗವಂತನ ಪರಿವಾರದ ಘಟಕರಾದ ಅವರನ್ನು ಮೆಚ್ಚಿಸುವುದೂ ಅತ್ಯಾವಶ್ಯಕವೆಂದು ವಿವೇಚಿಸಿಕೊಂಡು ವೈದಿಕರಾದ ಇತರ ದೇವತೆಗಳನ್ನೂ ಸಂತೋಷಪಡಿಸೋಣ.**

**ವಿಘ್ನಗಳನ್ನು ಎದುರಿಸುವಾಗ ತಾಳಬೇಕಾದ ಅನುಸಂಧಾನ:** 'ಶ್ರೇಯಾಂಸಿ ಬಹು ವಿಘ್ನಾನಿ.....' –ಎಂದಿರುವಂತೆ ಶ್ರೇಯಸ್ಕರಸಾಧನೆಗಳನ್ನು ನಡೆಸಲು ತೊಡಗುವಾಗ ಅಧಿಕ ವಿಘ್ನಗಳನ್ನು ಎದುರಿಸಬೇಕಾಗುವುದು. ಹಾಗೆ ಎದುರಿಸುವಾಗ ಅದಕ್ಕಾಗಿ ನಾವು ತುಂಬ ಉದ್ವೇಗಕ್ಕೊಳಗಾಗುವುದುಂಟು. ಯಾರುಯಾರನ್ನೋ ಶಪಿಸುತ್ತೇವೆ; ಬೈಯುತ್ತೇವೆ.

ವಿಘ್ನಗಳು ಎರಡು ಬಗೆಯಲ್ಲಿ ಇರುವವು. ಯೋಗ್ಯತೆಗೆ ಮೀರಿದ ಸಾಧನೆಯಲ್ಲಿ ತೊಡಗಿದಾಗ ಆ ಸಾಧನೆಯಿಂದ ಹಿಮ್ಮೆಟ್ಟಿಸುವುದಕ್ಕಾಗಿಯೇ ಒದಗಿಬರುವವು ಕೆಲವು ವಿಘ್ನಗಳಾದರೆ, ಮತ್ತೆ ಕೆಲವು ವಿಘ್ನಗಳು ನಮ್ಮ ಸಾಧನೆಗೆ ಇನ್ನಷ್ಟು ಮೆರುಗು ನೀಡಿ ಅದು ಅಧಿಕಫಲಪ್ರದವಾಗುವಂತೆ ಮಾಡುವುದಕ್ಕಾಗಿಯೇ ಒದಗಿಬರುವವು. ವಿಘ್ನಗಳು ಬಂದರೂ ಹಿಂಜರಿಯದೆ, ನಿರುತ್ಸಾಹನಾಗದೆ ಸಾಧನೆಯನ್ನು ನಡೆಸಿದನೆಂದರೆ ಅದಕ್ಕೆ ಅಧಿಕ ಫಲ ತಾನೇ? ಕರ್ಮಾಧ್ಯಕ್ಷನಾದ ಭಗವಂತನ ಪ್ರೇರಣೆಗನುಗುಣವಾಗಿ ದೇವತೆಗಳು ಹೀಗೆ ಬೇರೆಬೇರೆ ಉದ್ದೇಶದಿಂದ ವಿಘ್ನಗಳನ್ನು ತಂದೊಡ್ಡುವರೆಂದು 'ಬ್ರಹ್ಮಾಂಡ' (ಭಾಗ.ತಾ.ನಿ. 4-8-80) ತಿಳಿಸಿದೆ–

ಯತ್ರ ದೇವೈಃ ಕೃತೇ ವಿಘ್ನೇ ಖಂಡಿತೋ ನ ಪುಮಾನ್ ಭವೇತ್ ।
ತತ್ರ ತದ್ಯಶಸೇ ವಿಘ್ನಂ ಕುರ್ಯುರ್ನ ತು ವಿಘಾತನೇ ॥
ಯತ್ರ ಖಂಡಿತತಾ ತತ್ರ ಖಂಡನಾಯೈವ ಕೇವಲಮ್ ॥

ವನು. ಅನಂತಕಲ್ಯಾಣಗುಣಗಳನ್ನು 'ಭಗವಾನ್' ನಾಮಾರೂಢವಾಗಿ ಸ್ಥೂಲವಾಗಿ ಚಿಂತಿಸು ವನಲ್ಲದೆ, ಆ ಗುಣಗಳಲ್ಲೂ 'ಸರ್ವೈಶ್ವರ್ಯ' – ಸರ್ವಸಾಮರ್ಥ್ಯ, ಅದಕ್ಕೆ ಪೋಷಕವಾಗಿ ಬಲಾಧಿಕ್ಯ, ಪರಾಕ್ರಮಾಧಿಕ್ಯ ಇವುಗಳನ್ನು ವಿಶೇಷವಾಗಿ ಚಿಂತಿಸಿ '**ತಂ ಯಥಾ ಯಥಾ ಉಪಾಸತೇ ತದೇವ ಭವತಿ**' –ಎಂಬ ನಿಯಮದಂತೆ ಭಗವಂತನ ಗುಣಗಳ ಉಪಾಸನೆ ಗನುಗುಣವಾಗಿ ಫಲವನ್ನು ಹೊಂದಬಹುದಾದ್ದರಿಂದ ಸಮುದ್ರತರಣಕ್ಕೆ ಬೇಕಾದ ಐಶ್ವರ್ಯ (ಸಾಮರ್ಥ್ಯ) ಬಲ, ವೀರ್ಯ ಇವು ತನ್ನಲ್ಲಿ ಸಿದ್ಧಿಸುವಂತೆ ನಡೆದುಕೊಳ್ಳುವನು.

**ನಾವೂ ದೇವರ ಪೂಜೆಗೆ ಹೇಗೋ ಹಾಗೆ ಯಾವುದೇ ಕಾರ್ಯಕ್ಕೆ ತೊಡಗುವಾಗ, ವಿಶೇಷವಾಗಿ ದೊಡ್ಡ ದೊಡ್ಡ ಕಾರ್ಯಗಳಲ್ಲಿ ತೊಡಗುವಾಗ ಆ ಕಾರ್ಯದ ಕುರಿತಾದ ನಮ್ಮ ಸಂಕಲ್ಪ ಸಿದ್ಧಿಸುವಂತೆ, ಆ ಕಾರ್ಯ ಸಿದ್ಧಿಸಿ, ಅದರ ಫಲ ನಮಗೆ ದೊರಕುವಂತೆ ಅನುಗ್ರಹಿಸುವ ಭಗವಂತನನ್ನು 'ಸಿದ್ಧಾರ್ಥಃ ಸಿದ್ಧಸಂಕಲ್ಪಃ ಸಿದ್ಧಿದಃ ಸಿದ್ಧಿಸಾಧನಃ'ಎಂಬ ನಾಮಗಳಿಂದ ಸ್ತುತಿಸೋಣ. ಅಲ್ಲದೆ ಆಯಾ ಕಾರ್ಯಕ್ಕೆ ಉಪಯುಕ್ತವಾಗುವ ಗುಣಗಳು ನಮ್ಮಲ್ಲಿ ಪ್ರಕಟವಾಗುವಂತೆ ಅಂತಹ ಗುಣಗಳಿಂದ ಸಂಪನ್ನನಾದ ಭಗವಂತನ ವ್ಯಕ್ತಿತ್ವವನ್ನೇ ವಿಶೇಷವಾಗಿ ಚಿಂತಿಸೋಣ.**

**ದೇವರ ಕಾರ್ಯದ ಮಧ್ಯೆ ವಿಶ್ರಾಂತಿ ಸಲ್ಲ:** ಸಮುದ್ರದ ಮೇಲೆ ಹಾರುತ್ತಿದ್ದ ಆಂಜನೇಯನ ವಿಶ್ರಾಂತಿಗಾಗಿ ಮೈನಾಕಪರ್ವತ ಸಮುದ್ರದ ಮಧ್ಯದಿಂದ ಬೆಳೆದು ನಿಲ್ಲು ವುದು. ಆದರೆ ಆಂಜನೇಯ ಅದನ್ನು ಆಶ್ರಯಿಸಿ ವಿಶ್ರಾಂತಿ ಪಡೆಯುವುದಿಲ್ಲ. ಅಮಿತ ಪರಾಕ್ರಮಿಯಾದ ಅನಂತಬಲಸಂಪನ್ನನಾದ ಆಂಜನೇಯನಿಗೆ ವಿಶ್ರಾಂತಿಯ ಆವಶ್ಯಕತೆ ಇಲ್ಲ. ಅಲ್ಲದೆ, ದೇವಕಾರ್ಯದಲ್ಲಿ ತೊಡಗಿದ ಭಕ್ತ ಆ ಕಾರ್ಯವನ್ನು ಮುಗಿಸುವವರೆಗೂ ವಿಶ್ರಾಂತಿಗಾಗಿ ವಿಳಂಬ ಮಾಡುವುದು ಸರಿಯಲ್ಲ ಎಂದು ಸಾಧಕರಿಗೆ ಸೂಚ್ಯವಾಗಿ ತೋರಿಸಿಕೊಡುವ ಉದ್ದೇಶವೂ ಅಡಗಿದೆ.

**ನಾವೂ ದೇವರ, ಧರ್ಮದ ಕಾರ್ಯದಲ್ಲಿ ತೊಡಗಿದಾಗ ಮಧ್ಯೇಮಧ್ಯೇ ವಿಶ್ರಾಂತಿ ತೆಗೆದುಕೊಳ್ಳುವ ಪರಿಪಾಟವನ್ನು ದೂರ ಮಾಡೋಣ. ವಿಶ್ರಾಂತಿಯ ಆವಶ್ಯಕತೆ ಇಲ್ಲ ಎಂದು ಮನಸ್ಸಿನಲ್ಲಿ ದೃಢಪಡಿಸಿಕೊಂಡೆವೆಂದಾದರೆ ದೇಹದಲ್ಲಿ, ಅಂಗಾಂಗಗಳಲ್ಲಿ ದಣಿವು ಕಾಣಿಸದೆ, ವಿಶ್ರಾಂತಿ ಬೇಕೆನಿಸುವುದಿಲ್ಲ. ಅಲ್ಲದೆ, ವಿಶ್ರಾಂತಿಯಿಲ್ಲದೆ ಕಾರ್ಯ ವನ್ನು ನಡೆಸುವ ಮೂಲಕ ಆ ಕಾರ್ಯದ ನಿರ್ವಹಣೆಯಲ್ಲಿಯ ಉತ್ಸಾಹಾತಿಶಯ ವನ್ನು, ಆದರಾತಿಶಯವನ್ನು ಸ್ಪಷ್ಟಪಡಿಸಿ, ಭಗವಂತನ ವಿಶೇಷಾನುಗ್ರಹಕ್ಕೆ ಪಾತ್ರ ರಾಗೋಣ.**

**ಉಪಕಾರಸ್ಮರಣೆ:** ಆಂಜನೇಯ ತನ್ನ ವಿಶ್ರಾಂತಿಗಾಗಿ ಬೆಳೆದುನಿಂತ ಮೈನಾಕಪರ್ವತದ ಉಪಯೋಗವನ್ನು ಪಡೆದುಕೊಂಡಿಲ್ಲ. ಆದರೆ ತನಗೆ ಉಪಕರಿಸಲು ಬಂದ ಮೈನಾಕವನ್ನು ಆಲಿಂಗಿಸಿಕೊಳ್ಳುವ ಮೂಲಕ ಅವನ ಉಪಕಾರದ ಪ್ರವೃತ್ತಿಯನ್ನು ಅಭಿನಂದಿಸಲು ಹಿಂಜರಿಯುವುದಿಲ್ಲ.

**ನಾವು ಕೂಡಾ ನಮಗೆ ಉಪಕರಿಸಿದವನನ್ನು ಅಭಿನಂದಿಸಲು ಮರೆಯಬಾರದಷ್ಟೇ ಅಲ್ಲದೆ ಉಪಕರಿಸಲು ಮುಂದೆಬಂದ ವ್ಯಕ್ತಿಯ ಉಪಕಾರದ ಆವಶ್ಯಕತೆ ನಮಗೆ ಇಲ್ಲದೆ, ಅವನ ಉಪಕಾರವನ್ನು ಪಡೆದುಕೊಳ್ಳದಿದ್ದರೂ ಅವನ ಉಪಕಾರದ ಪ್ರವೃತ್ತಿಯನ್ನು ಅಭಿನಂದಿಸಲು ಮರೆಯಬಾರದು.**

**ದೇವತೆಗಳನ್ನು ಮೆಚ್ಚಿಸುವಿಕೆ:** ಸಮುದ್ರತರಣದಲ್ಲಿ ತೊಡಗಿದ್ದ ಆಂಜನೇಯನನ್ನು ಸಮುದ್ರದ ಮಧ್ಯದಲ್ಲಿ ನಾಗಜನನಿಯಾದ ಕದ್ರೂ ನುಂಗಲು ತೊಡಗುವಳು. ಅವಳ ಆಕ್ರಮಣವನ್ನು ತಪ್ಪಿಸುವ ಸಾಮರ್ಥ್ಯ ಆಂಜನೇಯನಿಗಿದ್ದರೂ ಅದನ್ನು ಬಳಸಿಕೊಳ್ಳದೆ, ಅವಳ ಬಾಯಿಯೊಳಗೆ ಹೊಕ್ಕು ಹೊರಬರುವನು. 'ನೀನು ಏನೇನನ್ನು ತಿನ್ನಲು ಇಚ್ಛಿಸುವಿಯೋ ಅವೆಲ್ಲ ನಿನಗೆ ದೊರಕುವಂತಾಗಲಿ ಎಂದು ದೇವತೆಗಳಿಂದ ವರ ಪಡೆದು ಕೊಂಡಿದ್ದ ಕದ್ರೂವಿನ ಬಾಯಿಯೊಳಗೆ ಹೊಕ್ಕು ಹೊರಬರುವ ಮೂಲಕ ದೇವತೆಗಳು ಆಕೆಗೆ ಕೊಟ್ಟ ವರವನ್ನೂ ಈಡೇರಿಸಿದಂತಾಗುವುದು, ದೇವತೆಗಳ ವರವನ್ನು ಅತಿಕ್ರಮಿಸಲು ಸಮರ್ಥನಾದರೂ ಅತಿಕ್ರಮಿಸದೆ ಅವರನ್ನು ಸಂತೋಷಪಡಿಸಿದಂತೆಯೂ ಆಗುತ್ತದೆ.

**ನಾವು ಕೂಡಾ 'ಬೇಡಿದರೆ ನಿನ್ನ ಬೇಡುವೆನು; ಕಾಡಿದರೆ ನಿನ್ನ ಕಾಡುವೆನು......' ಎಂದೆಲ್ಲ ಹೇಳಿರುವಂತೆ ಭಗವಂತನನ್ನೇ ಮುಖ್ಯಾಧಾರನನ್ನಾಗಿ ಆಶ್ರಯಿಸಿಕೊಂಡಿದ್ದರೂ ಉಳಿದ ದೇವತೆಗಳ ಹಂಗೇ ಬೇಡ ಎಂದು ಅವರನ್ನು ದೂರೀಕರಿಸದೆ ಭಗವದ್ಭಕ್ತರಾದ, ಭಗವಂತನ ಪರಿವಾರದ ಘಟಕರಾದ ಅವರನ್ನು ಮೆಚ್ಚಿಸುವುದೂ ಅತ್ಯಾವಶ್ಯಕವೆಂದು ವಿವೇಚಿಸಿಕೊಂಡು ವೈದಿಕರಾದ ಇತರ ದೇವತೆಗಳನ್ನೂ ಸಂತೋಷಪಡಿಸೋಣ.**

**ವಿಘ್ನಗಳನ್ನು ಎದುರಿಸುವಾಗ ತಾಳಬೇಕಾದ ಅನುಸಂಧಾನ:** **'ಶ್ರೇಯಾಂಸಿ ಬಹು ವಿಘ್ನಾನಿ.....'** –ಎಂದಿರುವಂತೆ ಶ್ರೇಯಸ್ಕರಸಾಧನೆಗಳನ್ನು ನಡೆಸಲು ತೊಡಗುವಾಗ ಅಧಿಕ ವಿಘ್ನಗಳನ್ನು ಎದುರಿಸಬೇಕಾಗುವುದು. ಹಾಗೆ ಎದುರಿಸುವಾಗ ಅದಕ್ಕಾಗಿ ನಾವು ತುಂಬ ಉದ್ವೇಗಕ್ಕೊಳಗಾಗುವುದುಂಟು. ಯಾರುಯಾರನ್ನೋ ಶಪಿಸುತ್ತೇವೆ; ಬೈಯುತ್ತೇವೆ.

ವಿಘ್ನಗಳು ಎರಡು ಬಗೆಯಲ್ಲಿ ಇರುವವು. ಯೋಗ್ಯತೆಗೆ ಮೀರಿದ ಸಾಧನೆಯಲ್ಲಿ ತೊಡಗಿದಾಗ ಆ ಸಾಧನೆಯಿಂದ ಹಿಮ್ಮೆಟ್ಟಿಸುವುದಕ್ಕಾಗಿಯೇ ಒದಗಿಬರುವವು ಕೆಲವು ವಿಘ್ನಗಳಾದರೆ, ಮತ್ತೆ ಕೆಲವು ವಿಘ್ನಗಳು ನಮ್ಮ ಸಾಧನೆಗೆ ಇನ್ನಷ್ಟು ಮೆರುಗು ನೀಡಿ ಅದು ಅಧಿಕಫಲಪ್ರದವಾಗುವಂತೆ ಮಾಡುವುದಕ್ಕಾಗಿಯೇ ಒದಗಿಬರುವವು. ವಿಘ್ನಗಳು ಬಂದರೂ ಹಿಂಜರಿಯದೆ, ನಿರುತ್ಸಾಹನಾಗದೆ ಸಾಧನೆಯನ್ನು ನಡೆಸಿದನೆಂದರೆ ಅದಕ್ಕೆ ಅಧಿಕ ಫಲ ತಾನೇ? ಕರ್ಮಾಧ್ಯಕ್ಷನಾದ ಭಗವಂತನ ಪ್ರೇರಣೆಗನುಗುಣವಾಗಿ ದೇವತೆಗಳು ಹೀಗೆ ಬೇರೆಬೇರೆ ಉದ್ದೇಶದಿಂದ ವಿಘ್ನಗಳನ್ನು ತಂದೊಡ್ಡುವರೆಂದು 'ಬ್ರಹ್ಮಾಂಡ' (ಭಾಗ.ತಾ.ನಿ. 4-8-80) ತಿಳಿಸಿದೆ–

**ಯತ್ರ ದೇವೈಃ ಕೃತೇ ವಿಘ್ನೇ ಖಂಡಿತೋ ನ ಪುಮಾನ್ ಭವೇತ್ ।**
**ತತ್ರ ತದ್ಯಶಸೇ ವಿಘ್ನಂ ಕುರ್ಯುರ್ನ ತು ವಿಘಾತನೇ ॥**
**ಯತ್ರ ಖಂಡಿತತಾ ತತ್ರ ಖಂಡನಾಯೈವ ಕೇವಲಮ್ ॥**

ಹನೂಮಂತ ಸೀತಾನ್ವೇಷಣೆಗಾಗಿ ಸಮುದ್ರತರಣ ಮಾಡುವಾಗ ಎದುರಿಸಬೇಕಾದ ಮೊತ್ತಮೊದಲ ವಿಘ್ನ ನಾಗಮಾತೆ ಕದ್ರೂ ಮೂಲಕವಾದದ್ದು. 'ನಿನಗೆ ಇಷ್ಟ ಬಂದದ್ದನ್ನೆಲ್ಲ ತಿನ್ನುವ ತಾಕತ್ತು ನಿನಗೆ ಬರಲಿ' –ಎಂದು ದೇವತೆಗಳು ನಾಗಮಾತೆಗೆ ವರನೀಡಿದ್ದರು. ಆ ಬಗೆಯ ವರಬಲವನ್ನು ಪಡೆದುಕೊಂಡು ವಿಘ್ನ ಒಡ್ಡಲು ಬಂದ ಕದ್ರೂವಿನ ವಿಘ್ನಕ್ಕಾಗಿ ಹನೂಮಂತ ಕಂಗೆಡಲಿಲ್ಲ. ಬದಲಾಗಿ, ದೇವತೆಗಳು ತನ್ನ ಬಲಪ್ರದರ್ಶನಕ್ಕೆ ಎಡೆ ದೊರಕುವಂತಾಗಲೆಂದೇ ಹೀಗೆ ವರ ಕೊಟ್ಟು ಕದ್ರೂವಿನ ಮೂಲಕ ವಿಘ್ನ ಬರುವಂತೆ ಮಾಡುತ್ತಿರುವರೆಂದು ವಿವೇಚಿಸಿಕೊಂಡು, ಆ ವಿಘ್ನದ ಹಿನ್ನೆಲೆಯಲ್ಲಿ ದೇವತೆಗಳ ಸದ್ಭಾವನೆಯನ್ನು ಗುರುತಿಸಿಕೊಂಡು ತೆರೆದ ಅವಳ ಬಾಯಿಯೊಳಗೆ ಹೊಕ್ಕು ಹೊರಗೆ ಬಂದು ಬಿಡುವನು. ಇದರಿಂದಾಗಿ ದೇವತೆಗಳಿಗೆ ಗೌರವಿಸಿಯೇ ಆ ವಿಘ್ನವನ್ನು ಪರಿಹರಿಸಿದಂತಾಯಿತು.

**ನಾವು ಕೂಡಾ ಒಳ್ಳೆಯ ಸಾಧನೆಗಳ ಅನುಷ್ಠಾನದಲ್ಲಿ ತೊಡಗಿದಾಗ ಬರಬಹುದಾದ ವಿಘ್ನಗಳ ಬಗ್ಗೆ ತೀವ್ರ ಭಾವೋದ್ವೇಗಕ್ಕೊಳಗಾಗದೆ ನಮ್ಮ ಆ ಅನುಷ್ಠಾನಕ್ಕೆ ಮತ್ತಷ್ಟು ಮೆರುಗು ನೀಡುವುದಕ್ಕಾಗಿಯೇ ದೇವತೆಗಳು ಹಾಗೆ ವಿಘ್ನಗಳನ್ನೊಡ್ಡಿರಬಹುದೆಂದು ಭಾವಿಸಿ ತಾಳ್ಮೆಯಿಂದ, ಜಾಣ್ಮೆಯಿಂದ ವಿಘ್ನಗಳನ್ನು ಎದುರಿಸೋಣ.**

**ಪ್ರಭಂಜನನ ಪ್ರಭಾವದಿಂದ ದುಷ್ಟಶಕ್ತಿಯ ದಮನ:** ಆಂಜನೇಯನ ಹಾರಾಟಕ್ಕೆ ಮತ್ತೆ ವಿಘ್ನವನ್ನು ಒಡ್ಡಿದವಳು ಸಿಂಹಿಕೆ. ಆ ರಾಕ್ಷಸಿ ಸಮುದ್ರದ ಮೇಲೆ ಹಾರುವ ಜೀವಿಗಳ ನೆರಳಿನಿಂದ ಅವುಗಳನ್ನು ತನ್ನೆಡೆಗೆ ಸೆಳೆದುಕೊಳ್ಳುವ ವರವನ್ನು ಚತುರ್ಮುಖನಿಂದ ಪಡೆದುಕೊಂಡಿದ್ದಳು. ಆಂಜನೇಯನನ್ನೂ ಅವನ ನೆರಳಿನ ಮೂಲಕ ತನ್ನೆಡೆಗೆ ಸೆಳೆದುಕೊಂಡ ಆಕೆಯ ಒಳಗೆ ಹೊಕ್ಕ ಆಂಜನೇಯ ಅಲ್ಲಿಯೇ ಬೆಳೆದು, ಆ ಮೂಲಕ ಆಕೆಯನ್ನು ಸೀಳಿ ಹೊರಹೊಮ್ಮುವನು. ಇದರಿಂದಾಗಿ ಚತುರ್ಮುಖನ ವರವನ್ನೂ ಉಲ್ಲಂಘಿಸುವ ಅವನ ಸಾಮರ್ಥ್ಯ ಸ್ಪಷ್ಟವಾಗುವುದು.

**ಬೇರೆಬೇರೆ ಬಗೆಯ ದುಷ್ಟಶಕ್ತಿಗಳ ಆಕ್ರಮಣದಿಂದ ತಪ್ಪಿಸಿಕೊಳ್ಳಲು ಏನೇನೋ ಉಪಾಯಕ್ಕೆ ಶರಣುಹೋಗದೆ ಭಗವದ್ಭಕ್ತ ಆಂಜನೇಯನ ಉಪಾಸನೆಯನ್ನೇ ನಡೆಸೋಣ. ದೇವೋತ್ತಮನಾದ ಚತುರ್ಮುಖನ ವರವನ್ನೂ ಕಡೆಗಣಿಸಿ ದುಷ್ಟಶಕ್ತಿಯ ವಿರುದ್ಧವಾಗಿ ರಕ್ಷಣೆ ಕೊಡುವ ತಾಕತ್ತು ಆಂಜನೇಯನಿಗಿದೆ ಎಂಬುದನ್ನು ಮರೆಯದಿರೋಣ.**

**ಮನಸ್ಸು ವಿಚಲಿತವಾಗಬಾರದು:** ಆಂಜನೇಯ ರಾತ್ರಿಕಾಲ ಅಶೋಕವನದಲ್ಲಿ ಸೀತಾನ್ವೇಷಣೆಯಲ್ಲಿ ತೊಡಗಿದ್ದ. ಸೀತೆ ರಾಕ್ಷಸಿಯರ ಮಧ್ಯೆ ಇರುವ ಸಂಭವವಿರುವುದರಿಂದ ರಾಕ್ಷಸಿಯರ ಸಮುದಾಯದಲ್ಲಿಯೇ ಹುಡುಕಾಟ ನಡೆಸಬೇಕಾಗಿತ್ತು. ನಿದ್ರೆಯಲ್ಲಿ ಮಗ್ನರಾಗಿದ್ದ ರಾಕ್ಷಸಿಯರ ವೇಷಭೂಷಣಗಳೆಲ್ಲ ಅಸ್ತವ್ಯಸ್ತಗಳಾಗಿದ್ದವು. ಆ ರೀತಿಯ ರಾಕ್ಷಸಿಯರ ವಿಕೃತ ದೃಶ್ಯಗಳನ್ನೆಲ್ಲ ಕಂಡ ಆಂಜನೇಯನು ತಾನು ಹಾಗೆ ಅರೆಬತ್ತಲೆ ಸ್ತ್ರೀಯರನ್ನು ಕಂಡರೂ ತನ್ನ ಬ್ರಹ್ಮಚರ್ಯಕ್ಕೇನೂ ಚ್ಯುತಿ ಬರಲಿಲ್ಲ. ಯಾಕೆಂದರೆ ತನ್ನ ಮನಸ್ಸು ಸೀತೆಯನ್ನು ಪತ್ತೆ ಹಚ್ಚುವುದರಲ್ಲಿ ಮಗ್ನವಾಗಿತ್ತೇ ಹೊರತು ಆ ವಿಕೃತ ದೃಶ್ಯಗಳನ್ನು ಕಂಡು

ಅನುಭವಿಸುವ ಹವಣಿಕೆಗೆ ಒಳಗಾಗಿದ್ದಿರಲಿಲ್ಲ ಎಂದು ಆಂಜನೇಯನು ಆತ್ಮನಿರೀಕ್ಷಣೆ ಮಾಡಿಕೊಳ್ಳುವನು.

**ನಾವು ಕೂಡಾ ಇತರ ಸ್ತ್ರೀಯರನ್ನು ಕಾಣುವಾಗ ಅಥವಾ ಅವರ ಜೊತೆಗೆ ಸಂಭಾಷಣಾದಿ ವ್ಯವಹಾರಗಳನ್ನು ನಡೆಸುವಾಗ ಮನಸ್ಸು ಅವರನ್ನು ವಿಷಯಪದಾರ್ಥ ವಾಗಿ ಸವಿಯುವ ಕೆಟ್ಟ ಪ್ರವೃತ್ತಿಗೆ ಇಳಿಯದೆ, ಸಂಭಾಷಣಾದಿ ವ್ಯವಹಾರಗಳಲ್ಲಷ್ಟೇ ಮುಳುಗುವಂತೆ ಎಚ್ಚರ ವಹಿಸೋಣ. ಈ ನಿಟ್ಟಿನಲ್ಲಿ ನಾವು ಕೂಡಾ ಆಂಜನೇಯನಂತೆ ಇಂದ್ರಿಯನಿಗ್ರಹವನ್ನು, ಮನೋನಿಗ್ರಹವನ್ನು ದೃಢಪಡಿಸಿಕೊಳ್ಳುತ್ತಿರೋಣ.**

**ದೇವರ ಕಾರ್ಯಕ್ಕೆ ಕೈಹಾಕಬಾರದು:** ಆಂಜನೇಯನು, ಶ್ರೀರಾಮನಿಂದಲೇ ಸಂಹಾರಕ್ಕೆ ಯೋಗ್ಯನಾಗಿರುವವನು ರಾವಣ. ಅಂತಹವನನ್ನು ನಾನು ಕೊಲ್ಲಬಾರದೆಂದು ರಾವಣನನ್ನು ಕೊಲ್ಲುವ ಸಾಮರ್ಥ್ಯ ತನಗಿದ್ದರೂ ಅವನನ್ನು ಕೊಲ್ಲುವುದಿಲ್ಲ.

**ಆಂಜನೇಯನಿಗೆ ಹೇಗೋ ಹಾಗೆ ದೇವರು ಕೊಲ್ಲಬೇಕಾದ ವ್ಯಕ್ತಿಯನ್ನು ಕೊಲ್ಲುವ ಪ್ರಸಂಗ ನಮಗೆ ದೊರಕದೆ ಇರಬಹುದು. ಆದರೆ ದೇವರ ಮೂಲಕವೇ ನಡೆಯಬೇಕಾದ ಕೆಲವು ಕೆಲಸಗಳಿಗೆ ನಾವು ಕೈ ತೂರಿಸುವುದುಂಟು. ಉದಾಹರಣೆಗೆ, ನಮ್ಮ ಬಗ್ಗೆ ಕೆಟ್ಟದನ್ನು ಎಸಗಿದ ವ್ಯಕ್ತಿಗೆ ಕರ್ಮಸಿದ್ಧಾಂತಕ್ಕನುಗುಣವಾಗಿ ಕರ್ಮಾಧ್ಯಕ್ಷನಾದ ಭಗವಂತನೇ ದಂಡಿಸುವನು. ಆದರೆ ನಾವು ಕೆಲವೊಮ್ಮೆ ನಾವೇ ದಂಡಿಸಲು ಮುಂದುವರಿಯುತ್ತೇವೆ. ಮತ್ತೆ ಕೆಲವೊಮ್ಮೆ ಅಷ್ಟು ಮುಂದುವರಿಯದಿದ್ದರೂ ಅವನಿಗೆ ಹಾಗಾಗಬೇಕು, ಹೀಗಾಗಬೇಕು -ಎಂದೆಲ್ಲ ಶಪಿಸುತ್ತಿರುತ್ತೇವೆ. ಇದರಿಂದಲೂ ನಾವು ದೇವರ ಕೆಲಸದಲ್ಲಿ ಕೈತೂರಿಸಿದಂತಾಗುವುದು. ಹೀಗೆ ಮಾಡದೆ ದೇವರು ನಡೆಸುವನೆಂದು ಶಾಸ್ತ್ರದಲ್ಲಿ ಯಾವಯಾವ ಚಟುವಟಿಕೆಯನ್ನು ಪರಿಚಯಿಸಿಕೊಡಲಾಗಿದೆಯೋ ಆ ಬಗ್ಗೆ ನಾವು ದೈಹಿಕವಾಗಿ ಮಾತ್ರವಲ್ಲ, ಮಾನಸಿಕವಾಗಿಯೂ ತೊಡಗದೆ ಇರೋಣ.**

**ದೇವರ ಪ್ರಣಾಮದೊಂದಿಗೆ ಮಾತಿನಾರಂಭ:** ತನ್ನ ಎದುರು ತರಲ್ಪಟ್ಟ ಆಂಜನೇಯನಲ್ಲಿ ರಾವಣನು ಮಾಡಿದ ಪ್ರಶ್ನೆಗಳಿಗೆ ಉತ್ತರಿಸುವ ಮುನ್ನ ಆಂಜನೇಯನು ಶ್ರೀರಾಮನನ್ನು ನಮಿಸುವನು.

**ಪಾಠಪ್ರವಚನ ಮುಂತಾದ ಮೇಲ್ಮಟ್ಟದ ವಾಗ್ವ್ಯಾಪಾರಗಳಷ್ಟೇ ಅಲ್ಲದೆ, ಸಾಮಾನ್ಯ ಸಂಭಾಷಣೆಯ ವಾಗ್ವ್ಯಾಪಾರವೂ ಶ್ರೋತೃವಿನ ಮೇಲೆ ಪ್ರಭಾವಶಾಲಿಯಾಗಬೇಕೆಂದರೆ, 'ಕ್ಷೇಮ ಇತಿ ವಾಚಿ' ಎಂದು ತೈತ್ತಿರೀಯೋಪನಿಷತ್ತು ಸಂದೇಶಿಸುತ್ತಿರುವಂತೆ ಕ್ಷೇಮನಿರ್ವಾಹಕನಾಗಿ ಕ್ಷೇಮನಾಮಕನಾದ ಭಗವಂತನು ವಿಶೇಷವಾಗಿ ವಾಗಿಂದ್ರಿಯದಲ್ಲಿ ಸನ್ನಿಹಿತನಾಗಿದ್ದಿರಬೇಕು. ಅದಕ್ಕಾಗಿ ಇನ್ನೊಬ್ಬರ ಜೊತೆಗೆ ಮಹತ್ವದ ಮಾತುಗಳನ್ನು ಆಡುವ ಮುನ್ನ ಆಂಜನೇಯನಂತೆ ಕ್ಷೇಮನಾಮಕ ಭಗವಂತನನ್ನು ನೆನಪಿಸಿಕೊಂಡು ನಮಿಸೋಣ.**

**ದೇವರ ದಾಸನಾಗಿ ಪರಿಚಯ:** ರಾವಣ ತನ್ನೆದುರು ಕುಳಿತಿದ್ದ ಆಂಜನೇಯನನ್ನು 'ನೀನು ಯಾರು? ಎಲ್ಲಿಂದ ಬಂದಿರುವಿ? ಯಾರ ವತಿಯಿಂದ ಬಂದಿರುವಿ? ಯಾಕೆ ಹೀಗೆ ಮಾಡಿರುವಿ? ಎಂದೆಲ್ಲ ವಿಚಾರಿಸಲು, ಆಂಜನೇಯನು ತನ್ನನ್ನು ಶ್ರೀರಾಮಚಂದ್ರನ ದೂತನನ್ನಾಗಿ ಪರಿಚಯಿಸಿ, ಶ್ರೀರಾಮನ ದುರಂತವಿಕ್ರಮಾದಿ ಮಹಿಮೆಗಳನ್ನು ವರ್ಣಿಸುವನು. ಭಗವಂತನು ಅಂತಹ ಗುಣಸಂಪನ್ನನಾಗಿರುವುದರಿಂದ ಅವನ ಪ್ರತಿಬಿಂಬನಾಗಿರುವ ತನ್ನಲ್ಲೂ ಕೆಲವು ಗುಣಗಳು ಕಾಣಿಸಿಕೊಳ್ಳುತ್ತಿವೆ ಎಂಬ ಆಂತರ್ಯ ಸೂಚಿತವಾಗುವಂತೆ ಹೇಳುವನು.

**ನಾವು ಕೂಡಾ ನಮ್ಮ ಪರಿಚಯವನ್ನು ಹೇಳಿಕೊಳ್ಳಬೇಕಾದ ಪ್ರಸಂಗ ಒದಗಿ ಬಂದಾಗ, ಬರೇ ನಮ್ಮ ಡಿಗ್ರಿ, ಪದವಿ, ಪ್ರಶಸ್ತಿ ಮುಂತಾದವುಗಳನ್ನು ಹೇಳಿಕೊಳ್ಳದೆ ಭಗವಂತನ ಸಂಬಂಧ ಹಚ್ಚಿ ಅಂದರೆ, ಭಗವದನುಗ್ರಹದಿಂದಾಗಿ 'ಡಿಗ್ರಿ ಹೋಲ್ಡರ್' ಆಗಿರುವೆ 'ಪದವೀಧರನಾಗಿರುವೆ' 'ಪ್ರಶಸ್ತಿಗಳನ್ನು ಹೊಂದಿರುವೆ' ಎಂದು ನಮ್ಮನ್ನು ಪರಿಚಯಿಸಿಕೊಳ್ಳೋಣ.**

**ಪ್ರಣಾಮದೊಂದಿಗೆ ಸೇವಾಸಮರ್ಪಣೆ:** ಸೀತಾದೇವಿ ಕೊಟ್ಟಿರುವ ಚೂಡಾಮಣಿಯನ್ನು ಶ್ರೀರಾಮಚಂದ್ರನ ಪಾದಾರವಿಂದದಲ್ಲಿ ಇಡುವ ಮೂಲಕ ಸೀತಾನ್ವೇಷಣೆಯ ಸೇವೆಯನ್ನು ಅವನಿಗೆ ಅರ್ಪಿಸಿದ ಆಂಜನೇಯನು ತಾನು ಆ ಸೇವೆಯನ್ನು ಭಕ್ತಿಪೂರ್ವಕವಾಗಿ ನಡೆಸಿರುವನೆಂದು ಸ್ಪಷ್ಟಪಡಿಸುವುದಕ್ಕಾಗಿ ಸಾಷ್ಟಾಂಗ ಪ್ರಣಾಮವನ್ನು ಸಲ್ಲಿಸುವನು.

**'ಭಕ್ತ್ಯೈಕವಶ್ಯ'ನೆನಿಸಿರುವ ಭಗವಂತನಿಗೆ ಯಾವುದೇ ಸೇವೆಯನ್ನು ಸಲ್ಲಿಸುವಾಗ ಅದು ಭಕ್ತಿಪೂರ್ವಕವಾಗಿದ್ದಿರಬೇಕು. ಹಾಗಾದರಷ್ಟೇ ಅದನ್ನು ಅವನು ಸ್ವೀಕರಿಸುವನು. ಪ್ರಣಾಮವು ಭಕ್ತಿಸೂಚಕವಾದ ಪ್ರಮುಖ ಚಟುವಟಿಕೆ. ಆದುದರಿಂದ ನಾವೂ ಭಗವಂತನಿಗೆ ಪೂಜೆ, ಸಂಧ್ಯಾವಂದನೆ ಮುಂತಾದ ಯಾವುದೇ ಸೇವೆಯನ್ನು ಸಲ್ಲಿಸುವಾಗ ಮತ್ತೆಮತ್ತೆ ನಮಿಸುತ್ತ ಭಗವಂತನ ಕುರಿತಾದ ನಮ್ಮ ಭಕ್ತಿಯನ್ನು ಬೆಳಗಿಸುತ್ತಿರೋಣ.**

**ಸೀತಾರಾಮರ ಸಂಯೋಜನೆ:** ಆಂಜನೇಯನು ರಾಮನ ಉಂಗುರವನ್ನು ಸೀತೆಗೂ, ಸೀತೆಯ ಚೂಡಾಮಣಿಯನ್ನು ರಾಮಚಂದ್ರನಿಗೂ ತಲುಪಿಸಿರುವ ಮೂಲಕ ಮೇಲ್ನೋಟಕ್ಕೆ ಬೇರೆಬೇರೆಯಾಗಿದ್ದ ಸೀತಾರಾಮರನ್ನು ಒಂದು ಹಂತದಲ್ಲಿ ಸಂಯೋಜಿಸಿದಂತಾಗಿದೆ.

**ಹೀಗೆ ಲಕ್ಷ್ಮೀನಾರಾಯಣರನ್ನು ಸಂಯೋಜಿಸುವ ಸೌಭಾಗ್ಯ ನಮ್ಮ ಪಾಲಿಗೆ ದೊರಕದಿದ್ದರೂ ವೈದಿಕವಾಙ್ಮಯದಲ್ಲಿ ಪ್ರತಿಪಾದ್ಯನಾಗಿರುವವನು ನಾರಾಯಣನೇ ಎಂದು ಸಮರ್ಥಿಸುವ ಮೂಲಕ ವೈದಿಕವಾಙ್ಮಯದ ಮುಖ್ಯಾಭಿಮಾನಿನಿಯಾದ ಲಕ್ಷ್ಮೀದೇವಿಯನ್ನೂ ವೈದಿಕವಾಙ್ಮಯದಿಂದ ಮುಖ್ಯ ಪ್ರತಿಪಾದ್ಯನಾದ ನಾರಾಯಣನನ್ನೂ ಸಂಯೋಜಿಸುವ ಸೇವೆಯನ್ನಾದರೂ ತಪ್ಪದೆ ಮಾಡುತ್ತಿರೋಣ.**

**ಆದರಸ್ತತ್ರ ಕರ್ತವ್ಯಃ:** ಶತ್ರುಪಕ್ಷದಿಂದ ಬಂದ ವಿಭೀಷಣನನ್ನು ರಾಜನೀತಿಗನುಗುಣವಾಗಿ ತಮ್ಮ ಪಕ್ಷಕ್ಕೆ ಸೇರಿಸಿಕೊಳ್ಳಬಾರದೆಂದು ಜಾಂಬವಂತಾದಿಗಳು ಪ್ರಬಲವಾಗಿ ಪ್ರತಿ

ಪಾದಿಸಿದರೆ, ಆಂಜನೇಯನು ವಿಭೀಷಣನಲ್ಲಿರುವ ಶ್ರೀರಾಮಭಕ್ತಿ, ತತ್ಪೂರ್ವಕವಾದ ಅವನ ಶರಣಾಗತಿ ಇವನ್ನು ಮುಖ್ಯವಾಗಿ ಪರಿಗಣಿಸಿ ತಮ್ಮ ಪಕ್ಷಕ್ಕೆ ಅವನನ್ನು ಸೇರಿಸಿ ಕೊಳ್ಳಬೇಕೆಂದು ಸಮರ್ಥಿಸಲು ಅದನ್ನು ಒಪ್ಪಿಕೊಳ್ಳುವ ರಾಮಚಂದ್ರ ಭಗವದ್ಭಕ್ತಿಗೆ ಪ್ರಾಶಸ್ತ್ಯ ನೀಡಿ ವ್ಯಕ್ತಿಗೆ ಮಾನ್ಯತೆ ಕೊಡಬೇಕೆಂಬ ಆಂಜನೇಯನ ನಿಲುವನ್ನು ಅಂಗೀಕರಿಸಿದಂತಾಗಿದೆ.

**'ಆದರಸ್ತತ್ರ ಕರ್ತವ್ಯಃ ಯತ್ರ ಭಕ್ತಿರ್ಹರೇರ್ವರಾ' -ಶ್ರೀಹರಿಯ ಭಕ್ತಿ ಯಾರಲ್ಲಿ ಅಧಿಕಪ್ರಮಾಣದಲ್ಲಿರುವುದೋ ಆ ವ್ಯಕ್ತಿಯ ಬಗ್ಗೆ ಗೌರವಾದರಗಳನ್ನು ತೋರ್ಪಡಿಸ ಬೇಕು -ಎಂದು ಶ್ರೀ ಮಧ್ವರು ಸಾರಿರುವ, ಆದರಾರ್ಪಣೆಗೆ ಸಂಬಂಧಿಸಿದ ಈ ನಿಯಮ ವನ್ನು ಆಂಜನೇಯ ವಿಭೀಷಣನನ್ನು ತಮ್ಮ ಪಕ್ಷಕ್ಕೆ ಸೇರಿಸಿಕೊಳ್ಳುವಲ್ಲಿ ಆಧರಿಸಿ ಕೊಂಡಿದ್ದು, ನಾವು ಕೂಡಾ ಮನೆಯಲ್ಲಿ, ಸಮಾಜದಲ್ಲಿ ವ್ಯಕ್ತಿಗಳ ಬಗ್ಗೆ ಆದರ ತೋರಿಸ ಬೇಕಾದ ಪ್ರಸಂಗಗಳಲ್ಲಿ ಭಗವದ್ಭಕ್ತಿಯನ್ನೇ ಮುಖ್ಯ ಆಧಾರವನ್ನಾಗಿ ಇಟ್ಟುಕೊಳ್ಳೋಣ. ಈ ಆಧಾರದ ಮೇಲೆ ಆದರಾರ್ಪಣೆ ನಡೆಸಿದೆವೆಂದರೆ ಆಂಜನೇಯನ ಅನಿಸಿಕೆಯನ್ನು ಶ್ರೀರಾಮಚಂದ್ರ ಅಭಿನಂದಿಸಿದಂತೆ ನಮ್ಮ ನಡತೆಯನ್ನು ದೇವರು ಅಭಿನಂದಿಸಿಯಾನು.**

**ಪ್ರಣಾಮದ ಮೂಲಕ ಸಮರ್ಪಣೆ:** ಇಂದ್ರಜಿತ್ ಪ್ರಯೋಗಿಸಿದ ಅಸ್ತ್ರಗಳ ಪ್ರಭಾವ ವನ್ನು ಕಳೆಯಲು ಮೃತಸಂಜೀವನ ಮುಂತಾದ ಔಷಧಿಗಳಿಂಧ ಕೂಡಿದ್ದ ಗಂಧ ಮಾದನ ಪರ್ವತವನ್ನು ಲಂಕೆಗೆ ತಂದ ಆಂಜನೇಯ ರಾಮನ ಪಾದಾರವಿಂದಕ್ಕೆ ನಮಿಸುವ ಮೂಲಕ ಗಂಧಮಾದನಪರ್ವತವನ್ನು ಹೊತ್ತು ತಂದುದನ್ನು ಶ್ರೀರಾಮಚಂದ್ರನ ಸೇವೆ ಎಂದು ಪರಿಗಣಿಸಿ, ಅವನಿಗೆ ನಮಿಸುವ ಮೂಲಕ ಅದನ್ನು ಅವನಿಗೆ ಅರ್ಪಿಸಿದನೆಂದು ತ್ರಿವಿಕ್ರಮ ಪಂಡಿತರು ತಮ್ಮ ವಾಯುಸ್ತುತಿಯಲ್ಲಿ ತಿಳಿಸಿರುವರು.

**ನಾವೂ ಯಾವುದೇ ಲೌಕಿಕ ಪ್ರಯೋಜನಕ್ಕಾಗಿ ನಡೆಸುವ ಕಾರ್ಯವನ್ನೂ ಭಗ ವಂತನ ಸೇವೆಯನ್ನಾಗಿ ನಡೆಸೋಣ. ಆ ಕಾರ್ಯವನ್ನು ಪೂರೈಸಿದವರೇ ಭಗವಂತನಿಗೆ ನಮಿಸುವ ಮೂಲಕ ಆ ಸೇವೆಯನ್ನು ಭಗವಂತನಿಗೆ ಅರ್ಪಿಸಲು ಮರೆಯದಿರೋಣ.**

**ದೇವರಲ್ಲಿ ಸಲ್ಲಿಸಬೇಕಾದ ಬೇಡಿಕೆ:** ಆಂಜನೇಯನ ಸೇವೆಯಿಂದ ತೃಪ್ತನಾದ ರಾಮ ಚಂದ್ರ ಆಂಜನೇಯನನ್ನಲ್ಲಿ ಏನನ್ನಾದರೂ ಕೇಳಿಕೊಳ್ಳು. ಅದನ್ನು ಅನುಗ್ರಹಿಸುವೆನೆಂದಾಗ ಆಂಜನೇಯ ಶ್ರೀರಾಮಚಂದ್ರನೆದುರು ಸಲ್ಲಿಸಿದ ಬೇಡಿಕೆ- 'ಯಾರು ನಿನ್ನ ಕಥಾಸೇವಕನಾಗಿ, ಯಾವಾಗಲೂ ನಿನ್ನಲ್ಲಿ ಆಸಕ್ತನಾಗಿ, ನಿನ್ನ ಬಗ್ಗೆ ನಿಶ್ಚಲಭಕ್ತಿಯನ್ನು ತಾಳುವನೋ ಅವನೇ ನಿಜವಾಗಿ ಬದುಕುವವನೆನಿಸಿದ್ದು, ಅಂತಹ ಸಾರ್ಥಕ ಬದುಕು ಉಳಿದೆಲ್ಲರಿಗಿಂತಲೂ ಅಧಿಕಪ್ರಮಾಣದಲ್ಲಿ ನನ್ನದಾಗಬೇಕು.'

'ಸ್ವಾಮಿನ್! ಎಂದೂ ಕಡಮೆಯಾಗದ, ನಿನ್ನ ಬಗೆಗಿನ ಭಕ್ತಿ ಕ್ಷಣಕ್ಷಣಕ್ಕೆ ನನ್ನಲ್ಲಿ ಹೆಚ್ಚುತ್ತ ಇರಲಿ. ಹಾಗೆಯೇ ನನ್ನ ಬಗ್ಗೆ ನಿನ್ನ ಅನುಗ್ರಹವೂ ಯಾವಾಗಲೂ ಹೆಚ್ಚುತ್ತ ಇರಲಿ. ಯಾವುದೇ ಉಪಾಧಿಯ, ನಿಮಿತ್ತದ ಹಿನ್ನೆಲೆಯಿಲ್ಲದೆ ಸ್ವಾಭಾವಿಕವಾಗಿ ಕಾಣಿಸಿ ಕೊಳ್ಳುವ ಈ ಎರಡೇ ನನ್ನ ಸರ್ವ ಬಯಕೆಗಳು'

**ಏಕಾಂತಭಕ್ತರೆನಿಸುವವರಷ್ಟೇ ದೇವರಲ್ಲಿ ಇಂತಹ ಬೇಡಿಕೆಯನ್ನು ಸಲ್ಲಿಸಲು ಅರ್ಹರಾಗಿದ್ದು, ನಮ್ಮಂತಹ ಭಕ್ತರು ಪೂರ್ಣಪ್ರಮಾಣದಲ್ಲಿ ಈ ಬಗೆಯ ಬೇಡಿಕೆಯನ್ನು ಸಲ್ಲಿಸಲಾಗದಿದ್ದರೂ ಆದಷ್ಟು ಅವನ ಕುರಿತಾದ ಭಕ್ತಿ, ಅವನ ಅನುಗ್ರಹ ಇವುಗಳಿಗೆ ಪೋಷಕವಾಗುವಂತೆಯೇ ನಮ್ಮ ಬೇಡಿಕೆಗಳನ್ನು ಪರಿಷ್ಕೃತಗೊಳಿಸೋಣ. ಆರೋಗ್ಯ ಆಯುಷ್ಯ ಸಂಪತ್ತು, ಸಂತಾನ, ಗೌರವ -ಮುಂತಾದ ಲೌಕಿಕಕಾಮನೆಗಳನ್ನು ದೇವರಲ್ಲಿ ಬೇಡಿಕೊಳ್ಳುವಾಗಲೂ 'ನಿನ್ನ ಬಗ್ಗೆ ಭಕ್ತಿ ಹಾಗೂ ನಿನ್ನ ಅನುಗ್ರಹ ಇವನ್ನು ಗಳಿಸಿಕೊಳ್ಳಲು, ಹೆಚ್ಚಿಸಿಕೊಳ್ಳಲು ಪೋಷಕವಾಗುವಂತೆ ನನಗೆ ಆರೋಗ್ಯಾದಿಗಳನ್ನು ನೀಡು' ಎಂದು ಕೇಳಿಕೊಳ್ಳುವ ಮೂಲಕ ಲೌಕಿಕಕಾಮನೆಗಳ ಬೇಡಿಕೆಯೂ ಭಕ್ತಿ, ಅನುಗ್ರಹಗಳ ಬೇಡಿಕೆಯಲ್ಲೇ ಪರ್ಯವಸಾನಗೊಳ್ಳುವಂತೆ ಮಾಡೋಣ.**

**ಹಿರಿಯರಿಂದ ಶ್ರವಣ, ಕಿರಿಯರಿಗೆ ಕೀರ್ತನ:** ಆಂಜನೇಯ ಒಂದು ರೂಪದಿಂದ ಬದರೀಕ್ಷೇತ್ರದಲ್ಲಿ ನೆಲಸಿ ಅಲ್ಲಿ ಶ್ರೀವೇದವ್ಯಾಸರಿಂದ ತತ್ತ್ವಗಳ ಶ್ರವಣ ನಡೆಸುತ್ತಿರುವನು. ರುದ್ರಾದಿದೇವತೆಗಳಿಗೂ, ಮುನಿಗಳಿಗೂ ತತ್ತ್ವಗಳನ್ನು ಉಪದೇಶಿಸುತ್ತಿರುವನು.

**ನಾವು ನಮಗಿಂತ ಹಿರಿಯರಿಂದ ತತ್ತ್ವಗಳ ಶ್ರವಣವನ್ನು ನಡೆಸುತ್ತಾ ಇರೋಣ. ನಾವು ಕೇಳಿ, ಮನವರಿಕೆ ಮಾಡಿಕೊಂಡ ತತ್ತ್ವಗಳನ್ನು ನಮಗಿಂತ ಕಿರಿಯರಿಗೆ ಹೇಳುತ್ತ ಇರೋಣ.**

**ಪೂಜೆಗೆ ಪುಷ್ಪ ತರುವಾಗ ಜಾಗೃತಿ:** ಭಕ್ತ ಆಂಜನೇಯ ಶ್ರೀರಾಮಚಂದ್ರನ ಪೂಜೆಗಾಗಿ ಎರಡು ಹಸ್ತಗಳನ್ನೂ ಬಳಸಿ ಪುಷ್ಪ ತರುವಲ್ಲಿ ಎಷ್ಟು ಯತ್ನವನ್ನು ತಾಳುತ್ತಿದ್ದನೋ, ಒಂದು ಕೈಯಿಂದ ಗಂಧಮಾದನಪರ್ವತವನ್ನು ತರುವಾಗ ಅಷ್ಟು ಯತ್ನವನ್ನು ಪಟ್ಟಿರಲಿಲ್ಲ -ಎಂದು ನಾರಾಯಣಪಂಡಿತರು ಮಧ್ವವಿಜಯದಲ್ಲಿ ಗಂಧಮಾದನಪರ್ವತವನ್ನು ಒಂದೇ ಕೈಯಲ್ಲಿ ಅನಾಯಾಸವಾಗಿ ತರಬಲ್ಲ ಪೌರುಷಸಂಪನ್ನನಾಗಿದ್ದ ಹನುಮಂತ ಶ್ರೀರಾಮನ ಪೂಜೆಗೆ ಹೂ ತರುವಾಗ ಎರಡು ಕೈಗಳನ್ನೂ ಬಳಸಿಕೊಂಡು, ಆ ಹೂವಿಗೆ ತನ್ನ ಉಸಿರಿನ ಗಾಳಿ ಇತ್ಯಾದಿಗಳ ಸೋಂಕು ಆಗದಂತೆ ತುಂಬ ಪ್ರಯಾಸಪಟ್ಟು ಎಚ್ಚರ ವಹಿಸುವಷ್ಟು ನಿಷ್ಠಭಕ್ತನಾಗಿದ್ದ, ಸಾಧಕನಾಗಿದ್ದ ಎಂದು ಅಭಿಪ್ರಾಯಪಟ್ಟಿರುವರು.

**ಭಗವಂತನ ಪೂಜೆಯ ಒಂದೊಂದು ಅಂಗಕ್ಕೂ ನೀಡಲಾಗುವ ಪ್ರಾಶಸ್ತ್ಯ ಪೂಜೆಗೆ ನೀಡಲಾಗುವ ಪ್ರಾಶಸ್ತ್ಯ. ಪೂಜೆಗೆ ನೀಡಲಾಗುವ ಪ್ರಾಶಸ್ತ್ಯ ಪೂಜ್ಯನಾದ ಭಗವಂತನಿಗೆ ನೀಡಲಾಗುವ ಪ್ರಾಶಸ್ತ್ಯ. ಆದ್ದರಿಂದ ಭಗವಂತನಿಗೆ ಎಷ್ಟೆಷ್ಟು ಪ್ರಾಶಸ್ತ್ಯ ನೀಡಬೇಕೆನಿಸುವುದೋ ಅಷ್ಟಷ್ಟು ಪ್ರಾಶಸ್ತ್ಯ ಅವನ ಪೂಜೆಗೂ, ಪೂಜೆಯ ಅಂಗಗಳಿಗೂ ನೀಡಬೇಕು.**

**ಪೂಜೆಗೆ ಬೇಕಾದ ಪ್ರಮುಖ ಸಾಧನಗಳಲ್ಲಿ ಪುಷ್ಪವೂ ಒಂದು. ಪೂಜೆಯಲ್ಲಿ ಮುಖ್ಯವಾಗಿ ಸಮರ್ಪಿಸಬೇಕಾದ ಎಂಟು ಭಾವಪುಷ್ಪಗಳನ್ನು ಬಾಹ್ಯಪುಷ್ಪವೇ ಪ್ರತಿನಿಧಿಸಬೇಕಾದದ್ದು. ಅಂತಹ ಪುಷ್ಪಕ್ಕೆ ಸಂಬಂಧಿಸಿ ಹತ್ತುಹಲವು ನಿಯಮಗಳಿರುವಂತೆ**

ಗಿಡದಿಂದ ಕಿತ್ತ ಪುಷ್ಪವನ್ನು ಪೂಜಾಸ್ಥಳಕ್ಕೆ ತರುವಾಗಲೂ ಅನೇಕ ನಿಯಮಗಳನ್ನು ಪಾಲಿಸಬೇಕಾದದ್ದು.

ತರುವ ಪುಷ್ಪದ ಪಾವಿತ್ರ್ಯಕ್ಕೆ ಸಂಬಂಧಿಸುವಂತಹ ಆ ನಿಯಮಗಳು ಹೀಗಿವೆ:

- ತರಲ್ಪಡುವ ಪುಷ್ಪ ಕೆಳಗೆ ಬೀಳಬಾರದು.
- ತರುವ ರಭಸಕ್ಕೆ ಪುಷ್ಪದ ಎಸಳುಗಳು ಕಿತ್ತುಹೋಗಬಾರದು.
- ತರುವವನ ಉಸಿರಿನ ಗಾಳಿ ಅದಕ್ಕೆ ತಗಲಬಾರದು.
- ಅದರ ಸೌಂದರ್ಯವನ್ನಾಗಲೀ, ಸೌರಭವನ್ನಾಗಲೀ ನಾವು ಅನುಭವಿಸಬಾರದು.
- ಇದನ್ನು ನಾನು ಮುಡಿದುಕೊಂಡರೆ ಹೇಗೆ? ನನ್ನ ಪತ್ನಿ, ಮಗಳು ಮುಡಿದು ಕೊಂಡರೆ ಹೇಗೆ? ಎಂಬ ಭಾವನೆಯನ್ನು ತಾಳಬಾರದು.
- ಇನ್ನಾವುದೋ ಕೆಟ್ಟ ಯೋಚನೆಗೂ ಒಳಗಾಗದೆ, ಆ ಪುಷ್ಪದ ಬೆಳವಣಿಗೆಯಲ್ಲಿ, ಅರಳುವಲ್ಲಿ, ಸುಗಂಧದಲ್ಲಿ, ಮಾರ್ದವದಲ್ಲಿ, 'ಪುಷ್ಪಹಾಸ'ನಾಮಕ ಭಗವಂತನ ಪಾತ್ರವನ್ನೂ, ಅವನಿಂದ ನಿಯೋಜಿತರಾದ ಆಯಾ ಪುಷ್ಪದ ಅಭಿಮಾನಿ ದೇವತೆಗಳ ಪಾತ್ರವನ್ನೂ ಸ್ಮರಿಸುತ್ತ ತರಬೇಕು. ಹೀಗಾದಲ್ಲಿ ಪುಷ್ಪದ ಮೂಲಕ ನಡೆಸುವ ಚಟುವಟಿಕೆಯಷ್ಟೇ ಅಲ್ಲದೆ, ಪುಷ್ಪವನ್ನು ತರುವ ಚಟುವಟಿಕೆಯೂ ಪ್ರತ್ಯೇಕವಾಗಿ ಒಂದು ಪೂಜೆ ಎನಿಸಬಲ್ಲದು.

ಆಂಜನೇಯ ನಡೆಸುತ್ತಿದ್ದ ಈ ಬಗೆಯ ಪುಷ್ಪಾಹರಣದ ಬಗ್ಗೆ ನಾವೂ ತೊಡಗೋಣ.

## ಭೀಮನನ್ನು ಹಿಂಬಾಲಿಸೋಣ

ಪ್ರಾಣದೇವರ ಎರಡನೇ ಅವತಾರ ಭೀಮಸೇನ ಕ್ಷತ್ರಿಯ ವರ್ಣದಲ್ಲಿ ಅವತರಿಸಿದವನು. ಯುವರಾಜನಾಗಿ ಮೆರೆದ ಶುದ್ಧ ಭಾಗವತ ಧರ್ಮನಿಷ್ಠನಾಗಿ, ಮಹಾ ಭಗವದ್ಭಕ್ತನಾಗಿ, ನಿಷ್ಠಸಾಧಕನಾಗಿ ವಿರಾಜಿಸಿದ. ಅವನ ಈ ವ್ಯಕ್ತಿತ್ವದ ಈ ಮುಖದ ಸಾಧನೆಗಳನ್ನು, ನಡತೆಗಳನ್ನು ಆದರ್ಶವಾಗಿಟ್ಟುಕೊಂಡು ಅವನನ್ನು ಹಿಂಬಾಲಿಸೋಣ. ಅವನಷ್ಟು ವೇಗವಾಗಿ, ಅವನು ಕ್ರಮಿಸಿದಷ್ಟು ದೂರ ಸಾಗಲು ಖಂಡಿತ ಸಾಧ್ಯವಿಲ್ಲವಾದರೂ ಅವನು ಹೆಜ್ಜೆಯಿಟ್ಟ ದಿಕ್ಕಿನಲ್ಲಾದರೂ ಮುಂದುವರಿಯಬಹುದು ತಾನೇ?

**ಕಿರಿಯರಿಗೆ ಸತ್ಕಾರ್ಯದಲ್ಲಿ ಪ್ರೇರಣೆ:** ನನ್ನ ಇಷ್ಟವನ್ನು ಸಾಧಿಸಿಕೊಡುವ ಪ್ರತಿಜ್ಞೆ ಮಾಡುವವರನ್ನು ಧನುರ್ಧಾರಿಗಳಲ್ಲಿ ಶ್ರೇಷ್ಠರನ್ನಾಗಿ ಮಾಡುವೆನೆಂದ ದ್ರೋಣಾಚಾರ್ಯರ ಮಾತಿಗನುಗುಣವಾಗಿ ಪ್ರತಿಜ್ಞೆಯನ್ನು ಮಾಡಲು ಅರ್ಜುನನಿಗೆ ಭೀಮಸೇನ ಪ್ರೇರಿಸುವನು. ಅವನ ಪ್ರೇರಣೆಯಿಂದಾಗಿ ಪ್ರತಿಜ್ಞೆಗೈದ ಅರ್ಜುನ ದ್ರೋಣಾಚಾರ್ಯರ ವಿಶೇಷಾನುಗ್ರಹಕ್ಕೆ ಪಾತ್ರನಾಗುವಂತಾಯಿತು.

**ಪರಿಶ್ರಮಸಾಧ್ಯವಾದ ಚಟುವಟಿಕೆಯನ್ನು ತಮಗೆ ನಡೆಸಲು ಸಾಧ್ಯವಾಗ ಬಹುದೋ ಎಂದು ಹಿಂಜರಿಯುತ್ತಿರುವ ಕಿರಿಯರಿಗೆ ಹಿರಿಯರು ಪ್ರೋತ್ಸಾಹ ನೀಡಿ, ಆ ನಿಟ್ಟಿನಲ್ಲಿ ಕಿರಿಯರು ಮುಂದುವರಿಯುವಂತೆ ಮಾಡೋಣ.**

**ವರ್ಣಾಶ್ರಮಧರ್ಮದ ಸಾಂಕರ್ಯವನ್ನು ತಡೆಗಟ್ಟಬೇಕು:** ಕೌರವ ಪಾಂಡವ ರಾಜಕುಮಾರರು ರಂಗಸ್ಥಳದಲ್ಲಿ ತಮ್ಮ ಅಸ್ತ್ರಶಸ್ತ್ರವಿದ್ಯಾಪಾಂಡಿತ್ಯದ ಪರೀಕ್ಷೆಯಲ್ಲಿ ತೊಡಗಿದಾಗ ಕರ್ಣನೂ ತನ್ನ ಅಸ್ತ್ರಶಸ್ತ್ರವಿದ್ಯಾಪಾಂಡಿತ್ಯದ ಪ್ರದರ್ಶನಕ್ಕೆ ತೊಡಗುವನು. ಅರ್ಜುನನು ಅವನನ್ನು ಯುದ್ಧಕ್ಕೆ ಆಹ್ವಾನಿಸಲು ಕ್ಷತ್ರಿಯರಲ್ಲದವನನ್ನು ಯುದ್ಧಕ್ಕೆ ಕರೆಯುವುದು ಕ್ಷತ್ರಿಯ ಧರ್ಮವಿರುದ್ಧ ಎಂದು ತಿಳಿದ ಭೀಮಸೇನ ಅರ್ಜುನನನ್ನು ತಡೆಯುವನು.

**ಯಾವುದೇ ವ್ಯಕ್ತಿಯ ಮೂಲಕ ವರ್ಣಾಶ್ರಮಧರ್ಮಕ್ಕೆ ವಿರುದ್ಧವಾದ ಚಟುವಟಿಕೆ ನಡೆದಾಗ ಅದನ್ನು ನಿಃಸಂಕೋಚವಾಗಿ ತಡೆಯಬೇಕು. ಹೊರತು ಅದನ್ನು ತಡೆಯುವುದರಲ್ಲಿ ದಾಕ್ಷಿಣ್ಯವನ್ನಾಗಲೀ, ಉಪೇಕ್ಷೆಯನ್ನಾಗಲೀ ತಾಳಬಾರದು. ಶ್ರೀಹರಿಯ ಆದೇಶ ರೂಪದಲ್ಲಿರುವ ಶ್ರುತಿಸ್ಮೃತಿಗಳಲ್ಲಿ ವಿಹಿತಗಳಾದ ವರ್ಣಾಶ್ರಮಧರ್ಮಗಳ ಉಲ್ಲಂಘನೆ ಎಂದರೆ ಅದರಿಂದಾಗಿ ಪರೋಕ್ಷವಾಗಿ ಶ್ರೀಹರಿಯ ಆದೇಶವನ್ನೇ ಅತಿಕ್ರಮಿಸಿದಂತಾಗಿ ಶ್ರೀಹರಿಯನ್ನೇ ಅವಮಾನಿಸಿದಂತೆ ಎಂಬುದನ್ನು ಮರೆಯದಿರೋಣ.**

**ಹಿರಿಯರ ಅಧರ್ಮಪ್ರವೃತ್ತಿಯನ್ನು ಪ್ರತಿಭಟಿಸಬೇಕು:** ಪುತ್ರವ್ಯಾಮೋಹಕ್ಕೊಳಗಾದ ಧೃತರಾಷ್ಟ್ರ ಪ್ರಜೆಗಳಿಗೆ ಪಾಂಡವರಲ್ಲಿಯ ಸೌಹಾರ್ದವನ್ನು ಕಡಮೆ ಮಾಡುವುದಕ್ಕಾಗಿ ದುರ್ಯೋಧನಾದಿಗಳು ಹೇಳಿದಂತೆ ಪಾಂಡವರನ್ನು ವಾರಣಾವತಕ್ಕೆ ಕಳುಹಿಸುವ ಕುತಂತ್ರದಲ್ಲಿ ತೊಡಗಿದಾಗ ಭೀಮಸೇನ ಅಣ್ಣ ಯುಧಿಷ್ಠಿರನಲ್ಲಿ ದೊಡ್ಡಪ್ಪನ ಈ ಕುತಂತ್ರವನ್ನು ಒಪ್ಪಿಕೊಳ್ಳದೆ ಪ್ರತಿಭಟಿಸಬೇಕು ಎನ್ನುವನು.

**ಹಿರಿಯರಿಗೆ ಗೌರವವನ್ನು ಸಲ್ಲಿಸಬೇಕು. ಆದರೆ ಅಂತಹ ಹಿರಿಯರೂ ಕೂಡಾ ಅಧರ್ಮದ, ಅನೀತಿಯ ಮಾರ್ಗವನ್ನು ಹಿಡಿದಾಗ ಅದನ್ನು ಪ್ರತಿಭಟಿಸಲೇಬೇಕು. ಇದಕ್ಕೆ ಬದಲಾಗಿ ಅವರು ಹಿರಿಯರು ಎಂದು ಅವರು ಮಾಡಿದ್ದನ್ನೆಲ್ಲ ಕಣ್ಣುಮುಚ್ಚಿಕೊಂಡು ಒಪ್ಪಿಕೊಳ್ಳಬಾರದು.**

**ಆದ್ದರಿಂದ ಹಿರಿಯರೂ ಅಧರ್ಮಪ್ರವೃತ್ತಿಗೆ ಇಳಿದಾಗ ಅದನ್ನು ವಿರೋಧಿಸೋಣ.**

**ಜ್ಯೇಷ್ಠಭ್ರಾತಾ ಪಿತೃಸಮಃ:** ದೊಡ್ಡ ಅಣ್ಣ ತಂದೆಗೆ ಸಮಾನ ಎಂಬ ಮಾತೂ ಇದೆ. ಹಿರಿಯರು ತಪ್ಪನ್ನು ಎಸಗಿದಾಗಲೂ ಅದನ್ನು ಎತ್ತಿ ತೋರಿಸಬೇಕು ಎಂದೂ ಇದೆ. ಈ ಎರಡು ಮಾತುಗಳನ್ನೂ ತನ್ನ ದೊಡ್ಡ ಅಣ್ಣನಾದ ಯುಧಿಷ್ಠಿರನ ವಿಷಯದಲ್ಲಿ ಸಮತೋಲನದಿಂದ ಅಳವಡಿಸಿಕೊಂಡವನು ಭೀಮಸೇನ. ಯುಧಿಷ್ಠಿರನಿಗೆ ಗೌರವಕೊಟ್ಟು ಅವನು ಹೇಳಿದಂತೆ ನಡೆದುಕೊಳ್ಳುತ್ತಿದ್ದ ಹಾಗೂ ಯುಧಿಷ್ಠಿರ ಎಸಗಿದ ತಪ್ಪನ್ನು ಎತ್ತಿ ತೋರಿಸುತ್ತಿದ್ದ ಕೂಡಾ. ದ್ರೌಪದಿಯ ವಸ್ತ್ರಾಪಹರಣದ ಸಂದರ್ಭದಲ್ಲಿ 'ದ್ರೌಪದಿಯನ್ನು ಪಣಕ್ಕಿಟ್ಟ ಯುಧಿಷ್ಠಿರನ ಕೈಗಳನ್ನು ಸುಡಬೇಕು' –ಎಂದು ಉದ್ಘೋಷಿಸುವ ಮೂಲಕ

ಹಿರಿಯರು ಅಪರಾಧವನ್ನೆಸಗಿದಾಗ ಕಿರಿಯರು ಮಾತಿನಿಂದ ವಿರೋಧಿಸಬೇಕು ಹೊರತು ಕೃತಿಯಿಂದಲ್ಲ ಎಂಬ ನಿಯಮವನ್ನೂ ಪಾಲಿಸಿದ್ದನು.

**ನಾವು ಕೂಡಾ ಹಿರಿಯಣ್ಣನಿಗೆ ತಂದೆಗೆ ಸಲ್ಲಬೇಕಾದ ಸ್ಥಾನಮಾನಗಳನ್ನು ಕೊಡುವಲ್ಲಿ ಹಿಂಜರಿಯದಿರೋಣ. ಆದರೆ ಅಂತಹ ಅಣ್ಣನೂ ಯಾವುದೇ ಸಂದರ್ಭದಲ್ಲಿ ಅಧಾರ್ಮಿಕವಾಗಿ, ಅಶಾಸ್ತ್ರೀಯವಾಗಿ ನಡೆದುಕೊಂಡರೆ ಆ ತಪ್ಪನ್ನು ಎತ್ತಿಹೇಳಬೇಕೆಂಬುದನ್ನು ಮರೆಯದಿರೋಣ.**

**ಆಧ್ಯಾತ್ಮಿಕ ಜಾಗೃತಿ:** ಅರಗಿನ ಮನೆಯಲ್ಲಿದ್ದ ಪಾಂಡವರನ್ನು ಸುಟ್ಟುಹಾಕಬೇಕೆಂದು ಪುರೋಚನ ಆರು ತಿಂಗಳ ಕಾಲ ಅವಕಾಶಕ್ಕಾಗಿ ನಿರೀಕ್ಷಿಸುತ್ತ ಇದ್ದ. ಆದರೆ, ಆ ಆರು ತಿಂಗಳ ಅವಧಿಯ್ಲಲೂ ಭೀಮಸೇನ ಕ್ಷಣಕಾಲವನ್ನು ಬಿಡದೆ ಎಚ್ಚತ್ತೇ ಇದ್ದುದರಿಂದ ಪುರೋಚನನಿಗೆ ತನ್ನ ದುಷ್ಕೃತ್ಯವನ್ನೆಸಗಲು ಆಗಲೇ ಇಲ್ಲ.

**ಕಾಮಾಭಿಮಾನಿ ಕಾಲನೇಮಿ, ಕ್ರೋಧಾಭಿಮಾನಿ ಕ್ರೋಧ ಮುಂತಾದ ಆಸುರೀ ಶಕ್ತಿಗಳು ನಮ್ಮ ಮೇಲೂ ಆಕ್ರಮಿಸಿ ನಮ್ಮ ವ್ಯಕ್ತಿತ್ವವನ್ನು ಕಾಮಾದಿ ದೋಷಗಳಿಗೊಳಪಡಿಸಿ ಸುಟ್ಟುಹಾಕುವುದಕ್ಕಾಗಿ ಹವಣಿಸುತ್ತಿರುತ್ತವೆ. ಭೀಮಸೇನ ಪ್ರತಿನಿಧಿಸುವ ಆಧ್ಯಾತ್ಮಿಕಪ್ರಜ್ಞೆಯನ್ನು ಯಾವಾಗಲೂ ಜಾಗೃತಗೊಂಡಿರುವಂತೆ ಮಾಡೋಣ. ಅಂತಹ ಜಾಗೃತಿಯಿಂದಾಗಿ ಆ ಆಸುರೀಶಕ್ತಿಗಳ ಆಕ್ರಮಣವನ್ನು ತಡೆಗಟ್ಟೋಣ.**

**ಹಿರಿಯರ ಮಾತನ್ನೂ ಪಾಲಿಸಬೇಕಿಲ್ಲ:** ಅಣ್ಣನಾದ ಯುಧಿಷ್ಠಿರನಿಗೆ ಇನ್ನೂ ಮದುವೆಯಾಗದಿರುವಾಗ ತಾನು ಹಿಡಿಂಬೆಯನ್ನು ಮದುವೆಯಾದಲ್ಲಿ ಅಧಾರ್ಮಿಕವಾಗಿ ನಡೆದುಕೊಂಡಂತಾಗುವುದು; ಅಣ್ಣನಿಗೆ ಮದುವೆಯಾಗುವ ಮೊದಲೇ ಮದುವೆಯಾಗುವ ತಮ್ಮನನ್ನು 'ಪರವಿತ್ತಿ' ಎಂದು ಕರೆದು ಶಾಸ್ತ್ರ ದೂಷಿಸಿದೆ. ಹೀಗೆ ಶಾಸ್ತ್ರನಿಷಿದ್ಧವಾದ ಚಟುವಟಿಕೆಯನ್ನು ನಡೆಸಲು ಭೀಮ ಒಪ್ಪುವುದಿಲ್ಲ. ಅಣ್ಣ ಯುಧಿಷ್ಠಿರ ಹಾಗೂ ತಾಯಿ ಕುಂತಿ ಹಿಡಿಂಬೆಯನ್ನು ಮದುವೆಯಾಗುವಂತೆ ಭೀಮನನ್ನು ಒತ್ತಾಯಿಸಿದರೂ ಭೀಮ ಅದಕ್ಕೆ ಒಪ್ಪುವುದಿಲ್ಲ. ಬೇರೆ ಪ್ರಸಂಗಗಳಲ್ಲಿ ಅಣ್ಣ ಹಾಗೂ ತಾಯಿ ಇವರ ಮಾತಿಗೆ ಬೆಲೆ ಕೊಟ್ಟಿರುವ ಭೀಮಸೇನ ಶಾಸ್ತ್ರನಿಷಿದ್ಧ ಚಟುವಟಿಕೆಯನ್ನು ನಡೆಸಲು ಪ್ರೇರಿಸುವ ಅವರ ಮಾತುಗಳನ್ನು ಪಾಲಿಸಲು ಒಪ್ಪುವುದಿಲ್ಲ.

**ನಾವು ಕೂಡಾ ಕಾಮಪುರುಷಾರ್ಥದ ವಿಷಯದಲ್ಲಿ ನಮ್ಮಿಂದ ಸ್ವಲ್ಪವೂ ಧರ್ಮದ, ಶಾಸ್ತ್ರದ ಉಲ್ಲಂಘನೆ ನಡೆಯದಂತೆ ಎಚ್ಚರ ವಹಿಸೋಣ. ಕೆಲವು ಪ್ರಸಂಗಗಳಲ್ಲಿ ಗುರುಹಿರಿಯರೂ ಬಂಧುವ್ಯಾಮೋಹಕ್ಕೊಳಗಾಗಿ ಧರ್ಮವಿರುದ್ಧವಾಗಿ ನಡೆದುಕೊಳ್ಳಲು ಪ್ರಚೋದಿಸುವುದೂ ಉಂಟು. ಆಗಲೂ ನಾವು ಗುರುಹಿರಿಯರ ಮೇಲಿನ ಗೌರವಕ್ಕಾಗಿ ಧರ್ಮವನ್ನು, ಶಾಸ್ತ್ರವನ್ನು ಉಲ್ಲಂಘಿಸದಿರೋಣ.**

**ದೇವರ ಆದೇಶ:** ಕುಂತಿ ಯುಧಿಷ್ಠಿರರ ಮಾತಿಗೂ ಒಪ್ಪದ ಭೀಮಸೇನ ಶ್ರೀವೇದವ್ಯಾಸ ದೇವರ ಮಾತಿಗೆ ಅನುಗುಣವಾಗಿ ಹಿಡಿಂಬೆಯನ್ನು ವಿವಾಹವಾಗಲು ಭೀಮಸೇನ ಒಪ್ಪಿಕೊಂಡ.

ಶಾಸ್ತ್ರದ ವಿಧಿನಿಷೇಧಗಳು ಭಗವಂತನ ಪ್ರೀತಿ ಹಾಗೂ ಅಪ್ರೀತಿಯ ಆಧಾರದಲ್ಲಿ ರೂಪಿತವಾದವುಗಳು. ಅಣ್ಣನಿಗೆ ಮದುವೆಯಾಗದೆ ತಮ್ಮ ಮದುವೆ ಮಾಡಿಕೊಳ್ಳ ಬಾರದೆಂಬ ಶಾಸ್ತ್ರದ ನಿಷೇಧವೂ ಆ ನಡತೆ ಭಗವಂತನಿಗೆ ಅಪ್ರಿಯ ಎಂಬುದಾಗಿಯೇ ರೂಪುಗೊಂಡದ್ದು. ಸಾಮಾನ್ಯವಾಗಿ ಆ ನಡತೆ ಭಗವಂತನಿಗೆ ಅಪ್ರಿಯವಾಗಿದ್ದು ನಿಷಿದ್ಧ ವೆನಿಸಿದ್ದರೂ, ಅಣ್ಣನಾದ ಯುಧಿಷ್ಠಿರನಿಗೆ ಮದುವೆಯಾಗದೆಯೇ ಭೀಮಸೇನ ಹಿಡಿಂಬೆ ಯನ್ನು ಮದುವೆಯಾಗುವುದು ವೇದವ್ಯಾಸರೂಪ ಪರಮಾತ್ಮನಿಗೆ ಪ್ರಿಯವಾಗಿರುವುದ ರಿಂದ ಶಾಸ್ತ್ರನಿಷಿದ್ಧವೆನಿಸದು ಎಂಬ ವಿವೇಚನೆಯೊಂದಿಗೆ ಭೀಮಸೇನ ಹಿಡಿಂಬೆಯನ್ನು ವಿವಾಹವಾಗಬೇಕೆಂಬ ಮಾತು ವೇದವ್ಯಾಸರ ಮೂಲಕ ಹೊರಹೊಮ್ಮಿದಾಗ ಕೂಡಲೇ ಅದನ್ನು ಪಾಲಿಸುವನು.

**ಭೀಮಸೇನನಿಗೆ ಒದಗಿಬಂದಂತೆ ಶಾಸ್ತ್ರದಿಂದ ನಿಷಿದ್ಧವಾದರೂ ಪರಮಾತ್ಮನ ಆದೇಶದ ಮೂಲಕ ಆಚರಿಸಬೇಕಾದ ಪ್ರಸಂಗ ನಮ್ಮ ಪಾಲಿಗೆ ಒದಗಿಬರಲಾರದು. ಆದರೆ ಯಾವುದೇ ಶಾಸ್ತ್ರೀಯ ವಿಧಿಯನ್ನೋ, ನಿಷೇಧವನ್ನೋ ಪಾಲಿಸುವಾಗ-**

**ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತುಚಿತ್ ।**
**ಸರ್ವೇ ವಿಧಿನಿಷೇಧಾಃ ಸ್ಯುಃ ಏತಯೋರೇವ ಕಿಂಕರಾಃ ॥**

**-ಎಂದಿರುವಂತೆ ಭಗವಂತನಿಗೆ ಪ್ರಿಯವಾದುದೆಂದು ಶಾಸ್ತ್ರವಿಧಿಯೂ, ಅಪ್ರಿಯ ವಾದುದೆಂದು ನಿಷೇಧವೂ ಹೊರಟರುವುದೆಂದು ಅವನ ಸ್ಮರಣೆಯನ್ನು ತಂದು ಕೊಳ್ಳಲು ಮರೆಯದಿರೋಣ.**

**ಅರ್ಪಣೆ ಮತ್ತು ಸಂಕಲ್ಪ:** ಹಿಡಿಂಬವನದಲ್ಲಿ ಶ್ರೀವೇದವ್ಯಾಸರು ಕಾಣಿಸಿಕೊಂಡಾಗ ಭೀಮಸೇನ ಅದುವರೆಗೆ ತಾನು ನಡೆಸಿದ ಅರಗಿನ ಮನೆಯ ದಹನ ಮುಂತಾದ ಕರ್ಮ ಗಳನ್ನು ಶ್ರೀವೇದವ್ಯಾಸರಿಗೆ ಸಮರ್ಪಿಸಿ ಮುಂದೆ ನಡೆಸಲಿರುವ ಬಕಸಂಹಾರ ಮುಂತಾದ ಕರ್ಮಗಳನ್ನು ಅವರೆದುರು ಸಂಕಲ್ಪಿಸದನು –ಎಂದು ಮಧ್ವವಿಜಯ ಉಲ್ಲೇಖಿಸಿದೆ.

ಭೀಮಸೇನ ದೇವರನ್ನು ಯಾವಾಗಲೂ ಕಾಣುತ್ತಿರುವವನು. ಆದುದರಿಂದ ಹಾಗೆ ಕಂಡ ದೇವರಿಗೆ ತಾನು ಆಯಾ ಅವಧಿಯಲ್ಲಿ ಮಾಡಿದ ಕರ್ಮದ ಅರ್ಪಣೆಯನ್ನೂ ಮುಂದೆ ಮಾಡಲಿರುವ ಕರ್ಮದ ಸಂಕಲ್ಪವನ್ನೂ ಆಯಾ ಅವಧಿಯಲ್ಲಿಯೇ ನೆರವೇರಿಸ ದಿರುವುದಿಲ್ಲ. ಆದರೂ ಭಗವಂತನ ರೂಪವಿಶೇಷವೆನಿಸಿರುವ ಶ್ರೀವೇದವ್ಯಾಸರೆದುರು ಅರ್ಪಣ ಸಂಕಲ್ಪಗಳನ್ನು ವಿಶೇಷವಾಗಿ ಮಾಡಿದನು.

**ಅಂತೆಯೇ ನಾವು ಪ್ರತಿನಿತ್ಯ ಮಾಡುವ ಸಂಧ್ಯಾವಂದನೆ, ಪೂಜೆ, ಪಾಠ, ಪ್ರವಚನ ಮುಂತಾದ ಸಾಧನೆಗಳಿಗೆ ಸಂಬಂಧಿಸುವ ಸಂಕಲ್ಪ, ಅರ್ಪಣೆಗಳನ್ನು ಆಯಾ ದಿನದಲ್ಲಿಯೇ ನಡೆಸುವೆವಾದರೂ ದೇವರ ವಿಶೇಷ ಸನ್ನಿಧಾನವುಳ್ಳ ಬದರಿಕ್ಷೇತ್ರ, ಉಡುಪಿಕ್ಷೇತ್ರ, ತಿರುಪತಿ –ಇತ್ಯಾದಿ ಕ್ಷೇತ್ರಗಳಿಗೆ ಹೋದಾಗ ಅಲ್ಲಲ್ಲಿಯ ಭಗವದ್ರೂಪ ಗಳೆದುರು ಅದುವರೆಗಿನ ನಮ್ಮ ಸಾಧನೆಗಳನ್ನು 'ಕ್ರಿಯಾಪುಷ್ಪ'ವನ್ನಾಗಿ ಸಮರ್ಪಿ ಸೋಣ; ಮುಂದಿನ ಸಾಧನೆಗಳ ಸಂಕಲ್ಪವನ್ನೂ ಕೈಗೊಳ್ಳೋಣ.**

**ಆಪತ್ತಿನ ಪ್ರಸಂಗದಲ್ಲೂ ಧರ್ಮಾಚರಣೆ:** ಬಕಾಸುರನ ಸಂಹಾರಕ್ಕೆ ತೊಡಗಿದ್ದ ಭೀಮಸೇನ ಬಕಾಸುರನಿಗಾಗಿ ಕಳುಹಿಸಲ್ಪಟ್ಟಿದ್ದ ಬಂಡಿ ಅನ್ನವನ್ನು ತಾನೇ ಉಣ್ಣುವನು. ಆ ಬಕಾಸುರನ ಸ್ಪರ್ಶ ಆಗುವ ಮೊದಲೇ ಉಣ್ಣಬಯಸಿದನೆಂದು ನಿರೂಪಿಸಲಾಗಿದೆ. ಹಾಗೆಯೇ ಅನ್ನವನ್ನು ಉಂಡು, ಪಾನೀಯವನ್ನು ಕುಡಿದು ಬಕಾಸುರನ ವಿರುದ್ಧ ಕಾದಾಡುವ ಮುಂಚೆ ಆಚಮನವನ್ನು ನಡೆಸುವನೆಂದೂ ನಿರೂಪಿಸಲಾಗಿದೆ.

ಸಹಜ ಸ್ಥಿತಿಯಲ್ಲಿ ಧರ್ಮಾಚರಣೆ ಮಾಡುವವರೂ ಆಪತ್ತು ಮುಂತಾದ ವಿಶೇಷ ಸಂದರ್ಭಗಳಲ್ಲಿ ಆ ಆಪತ್ತು ಇತ್ಯಾದಿಗಳ ಪರಿಹಾರದಲ್ಲಿ ತೊಡಗಿದವರಾಗಿ ಧರ್ಮಾಚರಣೆಯನ್ನು ಕೈ ಬಿಡುವರು; ಇಲ್ಲವೇ ಸಡಿಲಗೊಳಿಸುವರು. ಆದರೆ ಭೀಮಸೇನ ಬಕಾಸುರನನ್ನು ಎದುರಿಸಬೇಕಾದ ಆಪತ್ತಿನ ಸ್ಥಿತಿಯಲ್ಲೂ ಆಹಾರವನ್ನು ಸ್ವೀಕರಿಸುವಾಗ ಅಸುರ ಸ್ಪರ್ಶ ಆಗದೆ ಪವಿತ್ರನಾಗಿರಬೇಕು. ಆಹಾರ ಸ್ವೀಕರಿಸಿದ ಮೇಲೆ ಆಚಮನ ನಡೆಸಬೇಕು ಇತ್ಯಾದಿ ಚಿಕ್ಕಪುಟ್ಟ ಧರ್ಮಾಚರಣೆಯ ಕುರಿತೂ ಗಮನಹರಿಸಿ, ಮನಃಪೂರ್ವಕವಾಗಿ ಆಚರಿಸಿದ್ದನು.

**ನಾವು ಕೂಡಾ ದಿನನಿತ್ಯದ ಸ್ಥಿತಿಯಲ್ಲಷ್ಟೇ ಅಲ್ಲದೆ, ರೋಗರುಜಿನಗಳ ಸ್ಥಿತಿಯಲ್ಲೂ ಪ್ರಯಾಣ ಇತ್ಯಾದಿಗಳ ಸ್ಥಿತಿಯಲ್ಲೂ ಆದಷ್ಟು ಧರ್ಮವನ್ನು ಪಾಲಿಸೋಣ.**

**ಧರ್ಮಾಚರಣೆಗೆ ಅನುಕೂಲವಾದ ವಾತಾವರಣ ಇಲ್ಲದ ಕಲಿಯುಗದಲ್ಲಿ ಚಿಕ್ಕಪುಟ್ಟ ಧರ್ಮದ ಆಚರಣೆಗೂ ಅಧಿಕ ಫಲ ದೊರಕುವಂತೆ, ಧರ್ಮಾಚರಣೆಗೆ ಅನನುಕೂಲವಾದ ವಾತಾವರಣವುಳ್ಳ ಆಪತ್ತು ಮುಂತಾದ ಪ್ರಸಂಗಗಳಲ್ಲಿ ಪರಿಶ್ರಮದಿಂದ ಆಚರಿಸಲ್ಪಡುವ ಚಿಕ್ಕಪುಟ್ಟ ಧರ್ಮಗಳಿಗೂ ಮಹಾಫಲ ದೊರಕುವುದನ್ನು ಮರೆಯದಿರೋಣ.**

**ಭೀಮನಿಂದ ನರಸಿಂಹನಿಗೆ ಅರ್ಪಣೆ:** ಏಕಚಕ್ರಾನಗರದ ಪ್ರಜೆಗಳು ಬಕಾಸುರನಿಗೆ ಕಳುಹಿಸಿದ್ದ ಅನ್ನರೂಪದ ಕಪ್ಪವನ್ನು ಬಕಾಸುರನನ್ನು ಕೊಂದು ಉಪಕರಿಸಿದ ಈ ಭೀಮಸೇನನಿಗೆ ಕೃತಜ್ಞತೆಯ ಸಂಕೇತವಾಗಿ ನೀಡಿದರೆ ಅವನು ಅದನ್ನು ಏಕಚಕ್ರಾನಗರದ ದೇವಾಲಯದ ನರಸಿಂಹನಿಗೆ ಸಮರ್ಪಿಸುವನು. ತನ್ನ ಮೂಲಕ ನಡೆದ ಬಕಾಸುರನ ಸಂಹಾರದ ವಿಷಯದಲ್ಲಿ 'ತ್ರಾತಾ ಯಸ್ಯ ತ್ರಿಧಾಮಾ' –ಎಂದಿರುವಂತೆ ಭೀಮನನ್ನು ರಕ್ಷಿಸುತ್ತಿದ್ದ ನರಸಿಂಹರೂಪ ಪರಮಾತ್ಮನದ್ದೇ ದೊಡ್ಡ ಪಾತ್ರ. ಆದುದರಿಂದ ಅವನೇ ಮುಖ್ಯವಾಗಿ ಆ ಕುರಿತಾದ ಕೃತಜ್ಞತೆಗೆ ಪಾತ್ರನೆಂದು ಅದರ ಸಂಕೇತವಾಗಿ ನೀಡಿದ ಅನ್ನದ ಅರ್ಪಣೆಗೂ ಅವನೇ ಮುಖ್ಯ ಎಂದು ವಿವೇಚಿಸಿಕೊಂಡ ಭೀಮಸೇನ ಅವನಿಗೆ ಸಮರ್ಪಿಸಿದನು.

**ನಾವು ಕೂಡಾ ನಮ್ಮ ಮೂಲಕ ಯಾವುದೇ ಬಗೆಯ ಉಪಕಾರ ಯಾರಿಗಾದರೂ ಸಂದು ಆ ಪ್ರಯುಕ್ತ ಅವರು ಸಲ್ಲಿಸುವ ಕೃತಜ್ಞತೆಯನ್ನೂ ಅವರ ಸಂಕೇತವಾಗಿ ನೀಡುವ ವಸ್ತುಗಳನ್ನೂ ಭಗವಂತನಿಗೇ ಸಮರ್ಪಿಸೋಣ. ಅವನು ಸ್ವೀಕರಿಸಿ ಬಿಟ್ಟದ್ದನ್ನಷ್ಟೇ ಅವನ ಉಚ್ಛಿಷ್ಟ ಪ್ರಸಾದವನ್ನಾಗಿ ಸ್ವೀಕರಿಸೋಣ.**

**ಸಾಧನಾನುಷ್ಠಾನದ ಬಗ್ಗೆ ನಿರಾಶಾವಾದ ಸಲ್ಲ:** ಜರಾಸಂಧನನ್ನು ಸಂಹರಿಸಿ ನಡೆಸಬೇಕಾದ ರಾಜಸೂಯಯಾಗವನ್ನು ನಡೆಸಲು ತಮ್ಮಿಂದ ಸಾಧ್ಯವಿಲ್ಲ ಎಂದು ಯುಧಿಷ್ಠಿರ ಹಿಂಜರಿದಾಗ ಭೀಮಸೇನ ಜರಾಸಂಧನನ್ನು ಸಂಹರಿಸಿ ರಾಜಸೂಯಯಾಗವನ್ನು ನಾವು ಯಾಕೆ ಮಾಡಬಾರದೆಂದು ಉತ್ಸಾಹ ತೋರಿಸುವನು. ಸಾಧಕರು ಆಯಾ ಸಾಧನಾನುಷ್ಠಾನಕ್ಕೆ ಬೇಕಾದ ಸ್ವರೂಪಯೋಗ್ಯತೆ, ಅದು ಅಭಿವ್ಯಕ್ತಗೊಳ್ಳಲು ಬೇಕಾದ ಭಗವದನುಗ್ರಹ, ಅದನ್ನು ಪಡೆಯಲು ಬೇಕಾದ ತಮ್ಮ ಪ್ರಯತ್ನ ಈ ಮೂರು ಇಲ್ಲದೆ ಜೀವನದಲ್ಲಿ ಉನ್ನತಿಯನ್ನು ಪಡೆಯಲು ಸಾಧ್ಯವೇ ಇಲ್ಲ ಎಂದು ಆ ಸಂದರ್ಭದಲ್ಲಿ ಶ್ರೀಕೃಷ್ಣನ ಸಮಕ್ಷಮದಲ್ಲಿ ಉದ್ಘೋಷಿಸುವ ಭೀಮಸೇನ ಜೀವನದಲ್ಲಿ ಶ್ರೇಯಸ್ಸನ್ನು ಬಯಸುವ ಸಾಧಕರು ಅವಶ್ಯವಾಗಿ ಆಯಾ ಸಾಧನಾನುಷ್ಠಾನಕ್ಕೆ ಸಂಬಂಧಿಸುವ ಪ್ರಯತ್ನವನ್ನು ಮಾಡಬೇಕು. ಇದಕ್ಕನುಗುಣವಾಗಿ ಭಗವದನುಗ್ರಹ, ಸ್ವರೂಪಯೋಗ್ಯತೆ ಕೂಡಿ ಬಂದರೆ ಅದು ಫಲಿಸಿಯೇ ತೀರುವುದು. ಯತ್ನಿಸಿಯೂ ಫಲಿಸಿಲ್ಲ ಎಂದರೆ ಆ ನಿಟ್ಟಿನಲ್ಲಿ ಸ್ವರೂಪ ಯೋಗ್ಯತೆಯೇ ಇಲ್ಲ ಎಂದು ಸಮಾಧಾನಪಟ್ಟುಕೊಳ್ಳಬೇಕು ಎಂದು ಸೂಚಿಸಿರುವನು.

**ಅನೇಕ ಬಾರಿ ಆಧ್ಯಾತ್ಮಿಕ, ಧಾರ್ಮಿಕ ಸಾಧನಾನುಷ್ಠಾನದಲ್ಲಿ ತೊಡಗುವಾಗ 'ನಮಗೆ ಈ ಸಾಧನೆ ಎಟಕುವುದೋ ಇಲ್ಲವೋ' ಎಂದು ಸಂದೇಹಿಸುವ, ಹಿಂಜರಿಯುವ ನಾವು ಭೀಮಸೇನನ ಈ ಉದ್ಘೋಷಣೆಯನ್ನು ಮನವರಿಕೆ ಮಾಡಿಕೊಂಡು ಮುಂದುವರಿಯೋಣ. ಇಷ್ಟಾದರೂ ಆಧ್ಯಾತ್ಮಿಕ ಕ್ಷೇತ್ರದಲ್ಲಿ, ಧಾರ್ಮಿಕ ಕ್ಷೇತ್ರದಲ್ಲಿ ಮುಂದುವರಿದಿದ್ದೇವೆಂದರೆ ಸಾಧನಾನುಷ್ಠಾನಕ್ಕೆ ಬೇಕಾದ ಸ್ವರೂಪಯೋಗ್ಯತೆ ಇದ್ದೇ ಇದೆ ಎಂದು ವಿಶ್ವಾಸ ತಾಳೋಣ. 'ಅಸ್ಮದಿಷ್ಟೈಕಕಾರ್ಯ'ನಾದ ಭಕ್ತವತ್ಸಲ ಭಗವಂತ ಅನುಗ್ರಹದೃಷ್ಟಿಯನ್ನು ಬೀರದಿರಲಾರನೆಂದು ನಂಬಿ ಮುಂದುವರಿಯೋಣ. ನಾವೇ ಆಶ್ಚರ್ಯಪಡಬೇಕಾದಂತೆ ನಮ್ಮ ಮೂಲಕ ಆಧ್ಯಾತ್ಮಿಕ, ಧಾರ್ಮಿಕ ಸಾಧನೆ ನಡೆಯುವುದು.**

**ಒಂದೊಮ್ಮೆ ಸಾಧನಾನುಷ್ಠಾನ ನಡೆಯದಿದ್ದರೂ, ಮಧ್ಯದಲ್ಲಿಯೇ ನಿಂತು ಹೋದರೂ ಅದೂ ಪೂರ್ಣಗೊಳ್ಳುವಷ್ಟು ಸ್ವರೂಪಯೋಗ್ಯತೆ ನಮ್ಮಲ್ಲಿಲ್ಲ ಎಂದು ಸಮಾಧಾನ ಪಡುವುದಲ್ಲದೇ, ಅಷ್ಟು ಪ್ರಮಾಣದ ಸಾಧನಾನುಷ್ಠಾನಕ್ಕೂ ಫಲ ದೊರಕದಿರುವುದಿಲ್ಲ ಎಂದು ಸಮಾಧಾನಿಸಿಕೊಳ್ಳಬೇಕು.**

ಆದ್ದರಿಂದ ಸಾಧನಾನುಷ್ಠಾನದ ಬಗ್ಗೆ ನಿರಾಶಾವಾದ ಎಂದೂ ಸಲ್ಲ.

**ಸ್ವಕರ್ಮಣಾ ತಮಭ್ಯರ್ಚ್ಯ:** ಸಂಹಾರಕ್ರಿಯೆ ಕ್ರೋಧದ್ವೇಷಾದಿಭಾವೋದ್ವೇಗಕ್ಕೆ ಪ್ರಯೋಜಕವಾದ ಕ್ರಿಯೆ. ಜರಾಸಂಧನ ಅಂತಹ ಸಂಹಾರವನ್ನು ನಡೆಸುವಾಗಲೂ ಭೀಮಸೇನ ಭಗವದ್ಭಕ್ತಿ ಜ್ಞಾನಗಳೊಂದಿಗೆ ಅದಕ್ಕೆ ಪೂಜೆಯ ಮೆರುಗನ್ನು ನೀಡಿ ಎದುರಲ್ಲಿದ್ದ ಶ್ರೀಕೃಷ್ಣನಿಗೆ ಸಮರ್ಪಿಸಿದನು. 'ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ' ಎಂಬ ಗೀತಾಚಾರ್ಯನ ಸಂದೇಶಕ್ಕೆ ಪ್ರಾತ್ಯಕ್ಷಿಕೆಯನ್ನು ಒದಗಿಸಿದನು.

**ನಾವು ಕೂಡಾ ಭಗವಂತನಿಗೆ ಪೂಜೆ ಪುರಸ್ಕಾರಾದಿಗಳನ್ನಷ್ಟೇ ಅಲ್ಲದೆ, ಬದುಕಿನ ಬೇರೆಬೇರೆ ಚಟುವಟಿಕೆಗಳಿಗೂ ಪೂಜೆಯ ವೈಭವವನ್ನು ಕೊಟ್ಟು ಅವುಗಳನ್ನು ಭಗವಂತನಿಗೆ ಅರ್ಪಿಸೋಣ. ಭಕ್ತವತ್ಸಲ ಭಗವಂತ ಭೀಮಸೇನನ ಸಮೀಪಕ್ಕೆ ತೆರಳಿ ಅವನ ಪೂಜಾಸೇವೆಯನ್ನು ಸ್ವೀಕರಿಸಿ ಅನುಗ್ರಹಿಸಿದಂತೆ ನಮ್ಮ ಸೇವೆಯನ್ನು ಸ್ವೀಕರಿಸಲು ಸಮೀಪಿಸುವಂತೆ ಮಾಡೋಣ.**

**ಗಳಿಕೆಯ ಧನವನ್ನು ದೇವರಿಗೆ ಅರ್ಪಿಸೋಣ:** ರಾಜಸೂಯಯಾಗದ ಅಂಗವಾಗಿ ದಿಗ್ವಿಜಯ ನಡೆಸಿ ಗಳಿಸಿದ್ದ ಮಹಾಸಂಪತ್ತನ್ನು ಭೀಮಸೇನ ವೇದವ್ಯಾಸ ಹಾಗೂ ಕೃಷ್ಣರೂಪಗಳಲ್ಲಿದ್ದ ಶ್ರೀಹರಿಯ ಮುಂದೆ ಇಟ್ಟು ನಮಿಸುವನು. ತಾನು ಗಳಿಸಿದ ಸಂಪತ್ತಾದರೂ ಅದು ಶ್ರೀಹರಿಯ ಅನುಗ್ರಹದಿಂದಲೇ ತಾನು ಗಳಿಸುವಂತಾದುದರಿಂದ ಅವನಿಗೇ ಸೇರಬೇಕಾದದ್ದು ಹಾಗೂ ಅವನಿಗೆ ಪ್ರಿಯವೆನಿಸುವ ಯಾಗಕ್ಕೇ ವಿನಿಯೋಗಿಸಲು ಬೇಕಾದದ್ದು ಎಂಬ ಅನುಸಂಧಾನಪೂರ್ವಕವಾಗಿ ಸಮರ್ಪಿಸುವ ಸಂಕೇತವಾಗಿ ಶ್ರೀಹರಿಯ ಎದುರಿಗಿಟ್ಟು ನಮಿಸಿರುವನು.

**ನಾವು ಕೂಡಾ ಉದ್ಯೋಗದಿಂದಲೋ, ದಾನದಕ್ಷಿಣೆಯಿಂದಲೋ ಗಳಿಸಿದ ಸಂಪತ್ತನ್ನು ದೇವರ ಪ್ರತಿಮೆಯ ಎದುರಿಗಿಟ್ಟು ಅವನ ಅನುಗ್ರಹದಿಂದಲೇ ದೊರೆತ ಅದು ಅವನಿಗೇ ಪ್ರಿಯವಾಗುವ ಕಾರ್ಯಗಳಿಗೇ ವಿನಿಯೋಗಿಸಲ್ಪಡುವಂತಾಗಲೆಂಬ ಅನುಸಂಧಾನದೊಂದಿಗೆ ಅವನಿಗೆ ಅರ್ಪಿಸೋಣ.**

**ಭಗವಂತನ ಸೂಚನೆಯಿಂದಾಗಿ ಧರ್ಮದ ಮೆರುಗು:** ದುರ್ಯೋಧನ ಮಯ ನಿರ್ಮಿತ ಸಭೆಯನ್ನು ಜಲವನ್ನು ನೆಲವೆಂದು ಭ್ರಮಿಸಿ ಬಿದ್ದಾಗ ಭೀಮಸೇನ ಗಟ್ಟಿಯಾಗಿ ನಗುವನು. ಬಿದ್ದಾಗ ಅನುಕಂಪೆ ತೋರಿಸುವ ಬದಲು, ನಕ್ಕು ಅಪಹಾಸ್ಯ ಮಾಡುವುದು ಲೌಕಿಕ ದೃಷ್ಟಿಯಿಂದ ಸರಿಯಲ್ಲ. ಆದರೆ ಧರ್ಮಾಧ್ಯಕ್ಷನಾದ ಶ್ರೀಕೃಷ್ಣನ ಸೂಚನೆಯ ಮೇರೆಗೆ ಭೀಮಸೇನ ನಕ್ಕದ್ದರಿಂದ ಅದು ಧರ್ಮವೆಂದೇ ಪರಿಗಣಿಸಲ್ಪಡುವುದು.

**ಲೌಕಿಕ ದೃಷ್ಟಿಯಿಂದ ಅಪರಾಧ ಎನಿಸುವ ಅನೇಕ ಚಟುವಟಿಕೆಗಳಿಗೆ ಶಾಸ್ತ್ರೀಯ ವಾಗಿ ಧರ್ಮದ ಮುದ್ರೆ ಹಾಕಲ್ಪಟ್ಟತೆಂದರೆ ಪರಮಾತ್ಮನಿಗೆ ಅದು ಪ್ರಿಯವಾದು ದೆಂಬುದಾಗಿ ಪರಿಗಣಿಸಲ್ಪಟ್ಟು ಧರ್ಮ ಎಂದೇ ಗುರುತಿಸಲ್ಪಡುವುದು. ದುರ್ಮತಗಳ ಖಂಡನೆ ಇಂತಹ ಒಂದು ಚಟುವಟಿಕೆ, ಸಾಮಾಜಿಕ ಸಾಮರಸ್ಯಕ್ಕೆ ಧಕ್ಕೆ ತರುವಂತಹ ದ್ದೆಂದು ಲೌಕಿಕ ದೃಷ್ಟಿಯಿಂದ ಅದನ್ನು ಅಪರಾಧ ಎಂದು ಭಾವಿಸಲಾಗುವುದು. ಆದರೆ ಶಾಸ್ತ್ರೀಯವಾಗಿ ಅದು ಅವಶ್ಯಕರ್ತವ್ಯ ಧರ್ಮ ಎನಿಸಿದ್ದು, ಧರ್ಮಾಧ್ಯಕ್ಷನಿಗೆ ಪ್ರಿಯ ವಾಗಿರುವುದರಿಂದ ಅದನ್ನು ಅವಶ್ಯವಾಗಿ ನಡೆಸಬೇಕೆಂದು ಒಪ್ಪಿಕೊಳ್ಳಲಾಗುವುದು.**

**ಭಗವಂತನ ಸಂಕಲ್ಪಕ್ಕೆ ಮಾನ್ಯತೆ:** ದ್ರೌಪದಿಯನ್ನು ಅವಮಾನಿಸಲು ತೊಡಗಿದ್ದ ದುರ್ಯೋಧನಾದಿಗಳನ್ನು ಭೀಮಸೇನ ಆ ಕ್ಷಣದಲ್ಲಿಯೇ ಮುಗಿಸಿಬಿಡುತ್ತಿದ್ದ. ಆದರೆ ಹದಿಮೂರು ವರ್ಷಗಳ ಬಳಿಕ ದುರ್ಯೋಧನಾದಿಗಳ ಪಾಪದ ಕೊಡ ತುಂಬಿದ ಬಳಿಕ

ಮಹಾಭಾರತಯುದ್ಧದಲ್ಲಿ ಅವರ ಸಂಹಾರ ನಡೆಯಬೇಕೆಂಬುದು ಶ್ರೀಕೃಷ್ಣನ ಸಂಕಲ್ಪ ಎಂಬುದನ್ನು ಅರಿತು ಅದಕ್ಕೆ ಅನುಗುಣವಾಗಿಯೇ ಭೀಮಸೇನ ನಡೆದುಕೊಳ್ಳುವನು.

**ನಮಗೆ ಭಗವಂತನ ಸಂಕಲ್ಪ ತಿಳಿಯಲಾಗದ ಪ್ರಯುಕ್ತ ಅವನ ಸಂಕಲ್ಪಕ್ಕನುಗುಣ ವಾಗಿ ನಡೆಯಲು ಆಗದಿರಬಹುದು. ಆದರೆ ಜಗತ್ತಿನ ಪ್ರತಿಯೊಂದು ಆಗುಹೋಗು ಕೂಡಾ ಅವನ ಸಂಕಲ್ಪಕನುಗುಣವಾಗಿಯೇ ನಡೆಯುವಂತೆ ನಮ್ಮ ಬದುಕಿನ ಪ್ರತಿ ಯೊಂದು ಆಗುಹೋಗಿನ ಹಿನ್ನೆಲೆಯಲ್ಲೂ ಭಗವಂತನ ಸಂಕಲ್ಪ ಇದ್ದೇ ಇದೆ ಎಂಬುದನ್ನು ವಿಶ್ಲೇಷಿಸಿಕೊಂಡು ಶುಭಘಟನೆ ನಡೆದಾಗ ಅದನ್ನು ಸಂಯೋಜಿಸಿದ ಅವನ ಸಂಕಲ್ಪಕ್ಕಾಗಿ ಕೃತಜ್ಞತೆಯನ್ನು ಅರ್ಪಿಸೋಣ. ಅಶುಭ ಘಟನೆ ನಡೆದಾಗ ಅದಕ್ಕೆ ಪ್ರಯೋಜಕವಾಗಿ ಭಗವಂತನ ಸಂಕಲ್ಪ ಇದ್ದೇ ಇರುವುದರಿಂದ ಅಂತಹ ಸಂಕಲ್ಪಾನುಸಾರವಾಗಿ ನಡೆದ ಆ ಅಶುಭ ಘಟನೆಯನ್ನೂ ಅವನ ಪ್ರಸಾದವನ್ನಾಗಿ 'ಬಂದದ್ದೆಲ್ಲ ಬರಲಿ ಗೋವಿಂದನ ದಯೆ ಇರಲಿ' ಎಂಬ ನಿಲುವಿನೊಂದಿಗೆ ಸ್ವೀಕರಿ ಸೋಣ.**

**ಪೌರುಷವಾದದ ಮಂಡನೆ:** ಪಾಂಡವರ ವನವಾಸದ ಒಂದು ವರ್ಷ ಕಳೆದಿದೆ. ಯುಧಿಷ್ಠಿರ ವನವಾಸ ಅಜ್ಞಾತವಾಸಗಳ ಅವಧಿ ಮುಗಿದ ಮೇಲಾದರೂ ಕೌರವರ ವಿರುದ್ಧ ಕಾದಾಡಲು ಸಿದ್ಧನಾಗುವಂತಾಗಬೇಕೆಂದು ದ್ರೌಪದಿ ಮತ್ತು ಭೀಮಸೇನ ಯುಧಿಷ್ಠಿರನೆದುರು ಪೌರುಷವಾದವನ್ನು ಮಂಡಿಸುವರು. ಶ್ರೀವಿಷ್ಣುವಿನ ಸ್ವಾತಂತ್ರ್ಯ, ಸರ್ವೋತ್ತಮತ್ವ –ಇವುಗಳಿಗೆ ಪೋಷಕವಾಗುವಂತೆ ಜೀವಾತ್ಮನ ಕರ್ತವ್ಯವನ್ನು ಸ್ಪಷ್ಟ ಪಡಿಸುವರು. ತನ್ನ ಕರ್ತವ್ಯವನ್ನು ಪಾಲಿಸದೆ ಎಲ್ಲವನ್ನೂ ದೇವರೇ ಮಾಡುವನೆಂದು ವಾದಿಸುವುದು ಮೂಢರ ಲಕ್ಷಣ ಎಂದು ಟೀಕಿಸುವರು.

**ನಾವು ಕೂಡಾ ನಮ್ಮ ಕರ್ತೃತ್ವದ ಇತಿಮಿತಿಗಳನ್ನು ಚೆನ್ನಾಗಿ ವಿಶ್ಲೇಷಿಸಿಕೊಂಡು ನಡೆದುಕೊಳ್ಳಬೇಕು. ಆಸ್ತಿಕತೆ ಪಲಾಯನವಾದದಲ್ಲಿ ಪರ್ಯವಸಾನವಾಗುವಂತಾಗ ಬಾರದು. ಹೀಗೆ ಆಸ್ತಿಕತೆಗೆ ಹೊಂದಿಕೊಳ್ಳುವ ಪೌರುಷವಾದವನ್ನು ನಾವು ಅಳವಡಿಸಿ ಕೊಳ್ಳಬೇಕಲ್ಲದೆ, ಯುಧಿಷ್ಠಿರನಂತೆ ಕೆಲವು ಆಸ್ತಿಕರು ಪಲಾಯನವಾದಕ್ಕೊಳಗಾದರೆಂದರೆ ಅವರಿಗೂ ಶಾಸ್ತ್ರೀಯವಾದ ಪೌರುಷವಾದವನ್ನು ಮನವರಿಕೆ ಮಾಡಬೇಕು. ತಮ್ಮ ತಮ್ಮ ಕರ್ತವ್ಯದಲ್ಲಿ ಉನ್ಮುಖರಾಗುವಂತೆ ಪ್ರೇರಿಸಬೇಕು. ಸಾಧಕರು ಆಸ್ತಿಕತೆಯನ್ನು ಸಮರ್ಥಿಸಬೇಕಾದಂತೆಯೇ ಆಸ್ತಿಕತೆಯ ಹೆಸರಲ್ಲಿ ನುಸುಳಿಕೊಂಡಿರುವ ಪಲಾಯನ ವಾದ ಮುಂತಾದ ವಿಕೃತ ವಿಚಾರಗಳನ್ನು ನಿರಾಕರಿಸಬೇಕು ಕೂಡಾ.**

**ಪತ್ನಿಗಾಗಿ ಪುಷ್ಪಾಹರಣ:** ವನವಾಸದ ಸಂದರ್ಭದಲ್ಲಿ ಭೀಮಸೇನ ದ್ರೌಪದಿಯ ಬೇಡಿಕೆಯ ಮೇರೆಗೆ ತುಂಬ ಪರಿಶ್ರಮಪಟ್ಟು ಎರಡು ಬಾರಿ ಪುಷ್ಪಗಳನ್ನು ತಂದು ಕೊಟ್ಟಿದ್ದನು. ಒಮ್ಮೆ ಸೌಗಂಧಿಕಾಪುಷ್ಪಗಳನ್ನು ಮತ್ತೊಮ್ಮೆ ಪಂಚವರ್ಣದ ಪುಷ್ಪಗಳನ್ನು. ಸ್ತ್ರೀಯರು ನ್ಯಾಯಯುತವಾಗಿ ಸಲ್ಲಿಸಿದ ಬೇಡಿಕೆಗಳನ್ನು ಈಡೇರಿಸಿ ಅವರನ್ನು ಸಂತೋಷ ಪಡಿಸುವುದು ಗಂಡಂದಿರ ಕರ್ತವ್ಯ.

**ಆ ಬೇಡಿಕೆಗಳು ಪುರುಷರ ದೃಷ್ಟಿಯಲ್ಲಿ ಅರ್ಥಹೀನಗಳಾಗಿದ್ದರೂ ಸ್ತ್ರೀಯರ ಹೃದಯವನ್ನರಿತು ಅದಕ್ಕನುಗುಣವಾಗಿ ಸಹೃದಯರಾಗಿ ಸ್ಪಂದಿಸಬೇಕು. ಸೀತೆಯ ಚಿನ್ನದ ಜಿಂಕೆಯ ಬಗೆಗಿನ ಬೇಡಿಕೆಯನ್ನು ಈಡೇರಿಸತೊಡಗಿದ್ದ ರಾಮಚಂದ್ರನಂತೆ, ದ್ರೌಪದಿಯ ಪುಷ್ಪಗಳ ಕುರಿತಾದ ಬೇಡಿಕೆಯನ್ನು ಈಡೇರಿಸಿದ್ದ ಭೀಮಸೇನ ಅಸುರ ಸಂಹಾರರೂಪವಾದ ಕಾರ್ಯನಿರ್ವಹಣೆಯ ಜೊತೆಗೆ ಈ ನಿಟ್ಟಿನಲ್ಲೂ ಅನುಕರಣಾರ್ಹವೆನಿಸಬಲ್ಲನು.**

**ವಿದ್ಯೋಪಜೀವನ ಸಲ್ಲ:** ಶಾಪದಿಂದಾಗಿ ನಹುಷ ಸರ್ಪರೂಪ ತಾಳಿದ್ದು, ಅವನ ಆಕ್ರಮಣಕ್ಕೆ ಒಳಗಾಗಿದ್ದ ಭೀಮಸೇನ 'ವಿದ್ಯೋಪಜೀವನ' ನಡೆಸಬಾರದೆಂಬ ದೃಷ್ಟಿಯಿಂದ ಆ ಸರ್ಪ ಕೇಳಿದ ಪ್ರಶ್ನೆಗಳಿಗೆ ಉತ್ತರಿಸಿ, ಅದರ ಆಕ್ರಮಣದಿಂದ ತಪ್ಪಿಸಿಕೊಳ್ಳಲು ಇಷ್ಟ ಪಡಲಿಲ್ಲ.

ಅತ್ಯಮೂಲ್ಯವಾದ ವಿದ್ಯೆಯನ್ನು ಕ್ಷುಲ್ಲಕ ಪ್ರಯೋಜನಗಳಿಗಾಗಿ ಬಳಸಿಕೊಂಡ ಅದರ ಅಪಮೌಲ್ಯ ಆದಂತಾಗುವುದೆಂದು ಶಾಸ್ತ್ರದಲ್ಲಿ ವಿದ್ಯೋಪಜೀವನವನ್ನು ನಿಷೇಧಿಸಲಾಗಿದೆ. ಭೀಮಸೇನ ಆಪತ್ತಿನ ಸಂದರ್ಭದಲ್ಲೂ ವಿದ್ಯೋಪಜೀವನವನ್ನು ನಡೆಸಲು ಇಷ್ಟಪಟ್ಟಿಲ್ಲ. ಮುಂದೆ ಯಕ್ಷರೂಪದ ಯಮಧರ್ಮ ಕೇಳಿದ ಪ್ರಶ್ನೆಗಳಿಗೆ 'ವಿದ್ಯೋಪಜೀವನ' ಆಗಬಾರದೆಂದು ಭೀಮಸೇನ ಉತ್ತರಿಸುವುದಿಲ್ಲ.

**ಹೀಗೆ 'ವಿದ್ಯೋಪಜೀವನ'ದ ವಿರುದ್ಧ ಭೀಮಸೇನ ತಾಳಿದ್ದ ನಿಷ್ಠೆಯ ಒಂದಂಶವನ್ನಾದರೂ ನಾವು ತಾಳೋಣ. ಜೀವನದಲ್ಲಿ ವಿದ್ಯೋಪಜೀವನ ಎಸಗಲ್ಪಡದಂತೆ ಎಚ್ಚರ ವಹಿಸೋಣ. ಒಂದೊಮ್ಮೆ ಈಗಿನ ಕಾಲಕ್ಕೆ ವಿದ್ಯೋಪಜೀವನವನ್ನು ಅನಿವಾರ್ಯವಾಗಿ ಅಳವಡಿಸಿಕೊಳ್ಳಲೇ ಬೇಕಾದರೂ ಅದು ಸಮರ್ಥನೀಯ ಎಂದು ಭಾವಿಸದೆ ಆ ಬಗ್ಗೆ ಸಾಕಷ್ಟು ಪಶ್ಚಾತ್ತಾಪ ಪಡೋಣ. ಅದರ ಪ್ರಾಯಶ್ಚಿತ್ತರೂಪದಲ್ಲಿ ಯೋಗ್ಯರಿಗೆ ವಿದ್ಯಾದಾನ ಮಾಡಲು ಮರೆಯದಿರೋಣ.**

**ಗೃಹಸ್ಥರಿಗೆ ಪರಪಾಕ ಸಲ್ಲ:** ಪಾಂಡವರ ಅಜ್ಞಾತವಾಸದ ಸಂದರ್ಭದಲ್ಲಿ ಭೀಮಸೇನ ಅಡುಗೆಯವನಾಗಿ ನಾಟಕ ಹೂಡಿದ್ದ. ಯಾಕೆಂದರೆ, ಸಾಮಾನ್ಯವಾಗಿ ಭ್ರಮಿಸುವಂತೆ ಬೇಕಾದಷ್ಟು ತಿನ್ನಲು ಆಗುವುದೆಂಬ ನಿಮಿತ್ತ ಅಲ್ಲ. ಮತ್ತೆ ಗೃಹಸ್ಥರಿಗೆ ಪರಪಾಕವು ನಿಷಿದ್ಧವಾಗಿತ್ತು. ವಿರಾಟನ ಆಸ್ಥಾನದಲ್ಲಿ ಅಂತಹ 'ಪರಪಾಕ'ವನ್ನು ದೂರೀಕರಿಸಿ ಅಜ್ಞಾತವಾಸದ ಅವಧಿಯನ್ನು ಕಳೆಯಲು ಒಂದೇ ಒಂದು ಉಪಾಯ ಅಡುಗೆಯವನಾಗಿ ತಾನೇ ಅಲ್ಲಿ ಅಡುಗೆ ಮಾಡುವುದು. ಇದರಿಂದಾಗಿ 'ಸ್ವಯಂಪಾಕ'ವನ್ನೇ ಅಳವಡಿಸಿಕೊಂಡಂತಾಗುವುದು –ಎಂಬ ಕಾರಣ. ಮಾನಸಿಕ ಶುದ್ಧಿಗೆ ಪ್ರಯೋಜಕವಾದ ಆಹಾರಶುದ್ಧಿಯ ಬಗ್ಗೆ ಅಂತಹ ಆಪತ್ತಿನ ಪ್ರಸಂಗದಲ್ಲೂ ಭೀಮಸೇನ ಎಚ್ಚರ ವಹಿಸಿದ್ದ.

**ನಾವು ಕೂಡ ಆಹಾರಶುದ್ಧಿಗೆ ಸಂಬಂಧಿಸುವ ಹತ್ತುಹಲವು ನಿಯಮಗಳನ್ನೆಲ್ಲ ಅರಿತು ಅವುಗಳಲ್ಲಿ ಆದಷ್ಟು ಪಾಲಿಸಲು ಯತ್ನಿಸಬೇಕು. ಆಹಾರಶುದ್ಧಿಗೆ ಸಂಬಂಧಿಸುವ ಒಂದು ನಿಯಮ 'ಪರಪಾಕದ ದೂರೀಕರಣ'ವೂ ಆಗಿದ್ದು, ಅವನ್ನು ಆದಷ್ಟು ಪಾಲಿಸ**

ಬೇಕು. ಪೂರ್ಣಪ್ರಮಾಣದಲ್ಲಿ ವರ್ಜಿಸಲು ಆಗದಿದ್ದರೂ ಅಯೋಗ್ಯರಿಗೆ, ದುಷ್ಟರಿಗೆ, ಆಚಾರಶೂನ್ಯರಿಗೆ ಸಂಬಂಧಿಸುವ 'ಪರಪಾಕ'ವನ್ನಾದರೂ ವರ್ಜಿಸಲು ಯತ್ನಿಸಬೇಕು. ಯುವ ವಯಸ್ಸಿನಲ್ಲಿ ಆಗದಿದ್ದರೂ ಐವತ್ತು, ಅರುವತ್ತು ದಾಟಿತೆಂದರೆ ಕ್ರಮೇಣ 'ಪರಪಾಕ'ವನ್ನು ದೂರಮಾಡುತ್ತಾ 'ಸ್ವಯಂಪಾಕ'ದ ನಿಯಮವನ್ನು ಅಳವಡಿಸಿ ಕೊಳ್ಳಬೇಕು.

**ಲೋಕಾಪವಾದವನ್ನು ತಪ್ಪಿಸಿಕೊಳ್ಳಬೇಕು:** ಕೌರವ ಪಾಂಡವರ ಸಂಧಾನದ ಪ್ರಸ್ತಾವ ಕ್ಕಾಗಿ ಹಸ್ತಿನಪುರಕ್ಕೆ ಹೊರಡಲು ಸಿದ್ಧನಾದ ಶ್ರೀಕೃಷ್ಣ ಯುಧಿಷ್ಠಿರಾದಿಗಳಲ್ಲಿ ಸಂಧಾನದ ಬಗ್ಗೆ ಅಭಿಪ್ರಾಯವನ್ನು ವಿಚಾರಿಸುತ್ತ, ಭೀಮಸೇನನಲ್ಲಿ ವಿಚಾರಿಸಲು ಭೀಮಸೇನ ಸಂಧಾನಕ್ಕೇ ತನ್ನ ಒಲವನ್ನು ತೋರಿಸುವನು. ಯಾಕೆಂದರೆ ತಮ್ಮ ನಿಮಿತ್ತವಾಗಿ ಭರತಕುಲದ ನಾಶ ಆಯಿತೆಂಬ ಲೋಕಾಪವಾದ ತಮ್ಮ ಮೇಲೆ ಬರದಿರಲೆಂದು. ಹೊರತು, ದುರ್ಯೋಧನನ ದುಷ್ಟತನವನ್ನು ಕ್ಷಮಿಸುವ ಉದ್ದೇಶದಿಂದ ಅಲ್ಲ.

ವ್ಯಕ್ತಿ ತನ್ನ ಸಚ್ಚಾರಿತ್ರ್ಯವನ್ನು ಉಳಿಸಿಕೊಳ್ಳಬೇಕಲ್ಲದೆ, ಅದರ ಬಗ್ಗೆ ವೃಥಾ ಅಪವಾದ ಹೊರಿಸಲ್ಪಡದಂತೆಯೂ ಎಚ್ಚರವಹಿಸಬೇಕು. ಅಂತಹ ಅಪವಾದದಿಂದಾಗಿ ಅವನ ವ್ಯಕ್ತಿತ್ವಕ್ಕೆ ಮಸಿ ಹಚ್ಚಿದಂತಾಗುವುದೆಂಬುದಕ್ಕಿಂತಲೂ ಹೆಚ್ಚಾಗಿ ಅಪವಾದಾಸ್ಪದವಾದ ಈ ದುರ್ನಡತೆ ಇತರರಿಗೂ ಆದರ್ಶವೆನಿಸುವ ಅಪಾಯ ಇದೆ. ಆದುದರಿಂದ ಅಪವಾದಾ ರೋಪಕ್ಕೆ ಆಸ್ಪದ ಕೊಡದಂತೆ ನಡೆದುಕೊಳ್ಳಬೇಕು. ಅದಕ್ಕಾಗಿ ಸ್ವಲ್ಪ ಪ್ರಮಾಣದ ತನ್ನತನದ ತ್ಯಾಗಕ್ಕೂ ಸಿದ್ಧನಾಗಬೇಕಾಗುವುದು.

**ತನ್ನ ಬಲಸಾಮರ್ಥ್ಯಾದಿಗಳ ಪರಿಚಯ:** ದುರ್ಯೋಧನಾದಿಗಳ ಜೊತೆಗೆ ಸಂಧಾ ನಕ್ಕೂ ಸಿದ್ಧನಾದ ಭೀಮಸೇನನ ಪ್ರತಿಕ್ರಿಯೆಯ ಬಗ್ಗೆ ಕೃಷ್ಣ ಆಕ್ಷೇಪಿಸಿದಾಗ, ಭೀಮಸೇನ ತನ್ನ ಪೌರುಷವನ್ನು, ಬಲವನ್ನು ಹೊಗಳಿಕೊಳ್ಳುವನು. 'ಸರ್ವಥಾಽನಾರ್ಯಕರ್ಮೈತತ್ ಪ್ರಶಂಸಾ ಸ್ವಯಮಾತ್ಮನಃ!' ಸ್ವಪ್ರಶಂಸೆ ಕೆಟ್ಟ ವ್ಯಕ್ತಿಗಳ ನಡತೆ ಎಂಬುದು ಖಂಡಿತಾ ಗೊತ್ತಿದೆ ಎಂದು ಪ್ರಾರಂಭದಲ್ಲಿಯೇ ಒಪ್ಪಿಕೊಳ್ಳುವ ಭೀಮಸೇನ ತನ್ನ ಬಗ್ಗೆ ನಡೆಸಿದ ಅವಗಣನೆಗೆ ವಿರುದ್ಧವಾಗಿಯಷ್ಟೇ ನನ್ನ ಪರಾಕ್ರಮವನ್ನು ಹೇಳಿಕೊಳ್ಳುವೆನೆಂದು ತನ್ನ ಪೌರುಷವನ್ನು ವರ್ಣಿಸುವನು. ಮೇಲ್ನೋಟಕ್ಕೆ ಇದು ಭೀಮಸೇನನ ಆತ್ಮಪ್ರಶಂಸೆ ಎನಿಸಿದರೂ ಇದು ಆತ್ಮಪರಿಚಯವೇ ಹೊರತು ಆತ್ಮಪ್ರಶಂಸೆ ಅಲ್ಲ.[20] ಆದುದರಿಂದಲೇ ಮುಂದೆ ಶ್ರೀಕೃಷ್ಣನು ಭೀಮಸೇನನನ ಈ ನಿರೂಪಣೆಯನ್ನು ಒಪ್ಪಿಕೊಳ್ಳುವನೇ ಹೊರತು ಟೀಕಿಸುವುದಿಲ್ಲ.

**ಆತ್ಮಪ್ರಶಂಸೆ ನಿಷಿದ್ಧವೆನಿಸಿದರೂ ಆತ್ಮಪರಿಚಯ ಕೆಲವೊಮ್ಮೆ ಅತ್ಯವಶ್ಯ ಎನಿಸು ವುದು. ಅಹಂಕಾರಪೂರ್ವಕವಾಗಿ ತನ್ನ ಗುಣಧರ್ಮಗಳನ್ನು ಹೇಳಿಕೊಂಡರೆ ಅದು ಆತ್ಮ ಪ್ರಶಂಸೆ ಎಂದೆನಿಸದರೆ, ವಿನೀತನಾಗಿ ಹರಿಗುರುಗಳ ಅನುಗ್ರಹದಿಂದಾಗಿ ತನ್ನಲ್ಲಿ ಇರುವ ಗುಣಧರ್ಮಗಳನ್ನು ನಿರೂಪಿಸಿದರೆ ಅದು ಆತ್ಮಪರಿಚಯ ಎಂದಷ್ಟೇ**

20. 'ಯಥಾಸ್ವರೂಪವಿಜ್ಞಾನಮಾತ್ಮನ್ಯಪಿ ನ ದೋಷಕೃತ್'
*– ವ್ಯಾಸಸ್ಮೃತಿ (ಮ.ಭಾರ.ತಾನಿ. 32-73)*

ಆಗುವುದು. ಎಷ್ಟೋ ಬಾರಿ ನಾವು ನಮ್ಮ 'ಆತ್ಮಪರಿಚಯ'ವನ್ನು ಮಾಡಿಕೊಳ್ಳುವುದು ಅನಿವಾರ್ಯವಾಗುವುದು. ನಮ್ಮ ಮೂಲಕ ನಡೆಯಬೇಕಾದ ಸಾಧನಾನುಷ್ಠಾನಕ್ಕೆ ಪೂರಕವೆನಿಸಬಲ್ಲದು. ಆದ್ದರಿಂದ ಎಂದೂ ಆತ್ಮಪ್ರಶಂಸೆಯನ್ನು ಮಾಡದಿರೋಣ. ಆದರೆ ಉಚಿತ ಪ್ರಸಂಗಗಳಲ್ಲಿ ವಿನೀತರಾಗಿ 'ಆತ್ಮಪರಿಚಯ' ಮಾಡಿಕೊಳ್ಳಲು ಹಿಂಜರಿಯದಿರೋಣ.

**ನಿಷ್ಕಾಮ ಭಕ್ತಿ:** ಅಶ್ವತ್ಥಾಮಾಚಾರ್ಯರು ಪ್ರಯೋಗಿಸಿದ ನಾರಾಯಣಾಸ್ತ್ರಕ್ಕೆ ಶ್ರೀಕೃಷ್ಣನ ಆಣತಿಯ ಮೇರೆಗೆ ಅರ್ಜುನಾದಿಗಳೆಲ್ಲ ನಮಸ್ಕರಿಸಿದರೂ ಭೀಮಸೇನ ಮಾತ್ರ ನಮಸ್ಕರಿಸಲಿಲ್ಲ. ಇತರರಿಗೆ ನಮಸ್ಕರಿಸಬೇಡಿ ಎಂದೂ ತಿಳಿಸುವನು. ನಾರಾಯಣಾಸ್ತ್ರ ಎಲ್ಲರಿಗೂ ನಮಸ್ಕಾರಯೋಗ್ಯವೇ ಆಗಿರುವುದಾದರೂ, ಶತ್ರುಗಳು ಪ್ರಯೋಗಿಸಿದ ನಾರಾಯಣಸ್ತ್ರದ ವಿರುದ್ಧ ಬದುಕಬೇಕೆಂಬ ಇಚ್ಛೆಯಿಂದ ಅದಕ್ಕೆ ನಮಸ್ಕರಿಸುವಂತಾಗಬಾರದು. ಅದು ಕಾಮಭಕ್ತಿಯಾಗುವುದೇ ಹೊರತು ನಿಷ್ಕಾಮ ಭಕ್ತಿ ಎನಿಸುವುದಿಲ್ಲ.

ಮಿತ್ರರಿಗೂ ಧರ್ಮವನ್ನು ತ್ಯಜಿಸದಂತೆ ಎಚ್ಚರಿಕೆ ನೀಡುವುದು ಕರ್ತವ್ಯ. ಈ ಉದ್ದೇಶದಿಂದಲೇ ಭೀಮ ತಾನೂ ನಾರಾಯಣಾಸ್ತ್ರಕ್ಕೆ ನಮಿಸಿಲ್ಲ. ಉಳಿದವರನ್ನೂ ನಮಿಸಬೇಡಿ ಎಂದು ಹೇಳಿದ.

ಶುದ್ಧ ಭಾಗವತಧರ್ಮನಿಷ್ಠನಾಗಿದ್ದ ಭೀಮಸೇನನಷ್ಟು ಪೂರ್ಣಪ್ರಮಾಣದಲ್ಲಿ ನಮಗೆ ನಿಷ್ಕಾಮಭಕ್ತಿಯನ್ನು ಅಳವಡಿಸಿಕೊಳ್ಳಲಾಗುವುದಿಲ್ಲ. ಆದರೆ ಸಕಾಮಭಕ್ತಿಯನ್ನೂ ನಿಷ್ಕಾಮಭಕ್ತಿಯನ್ನಾಗಿ ಪರ್ಯವಸಾನಗೊಳಿಸಬಹುದು. ಆರೋಗ್ಯ ಆಯುಷ್ಯ ಸಂಪತ್ತು ಇತ್ಯಾದಿ ಯಾವುದೇ ಕಾಮಗಳಿಗಾಗಿ ಭಕ್ತಿಯನ್ನು ಮಾಡಿದರೂ, ಆ ಕಾಮಗಳನ್ನು ಗಳಿಸಿ, ಅವುಗಳ ಗಳಿಕೆಯಿಂದಾಗಿ ಭಗವಂತನನ್ನು ವಿಶೇಷವಾಗಿ ಭಜಿಸುವಂತಾಗಬೇಕು. ಅವನ ಅನುಗ್ರಹವನ್ನು ಪಡೆದುಕೊಳ್ಳುವಂತಾಗಬೇಕು ಎಂದು ಬಯಸುವ ಮೂಲಕ ಸಕಾಮ ಭಕ್ತಿಗೂ ನಿಷ್ಕಾಮಭಕ್ತಿಯ ಮೆರುಗು ನೀಡಿದಂತಾಗುವುದು. ಆದ್ದರಿಂದ ಬರೇ ಕ್ಷುಲ್ಲಕ ಕಾಮನೆಗಳಿಗಾಗಿ ಭಗವದ್ಭಕ್ತಿ ಮಾಡದೆ ನಿಷ್ಕಾಮ ಭಕ್ತಿಗೆ ಪೂರಕವಾಗುವಂತಾದರೂ ಸಕಾಮಭಕ್ತಿಯನ್ನು ಮಾಡಲು ಯತ್ನಿಸೋಣ.

ನಾವು ಅಳವಡಿಸಿಕೊಂಡ ಸಾಧನಾಮಾರ್ಗ ಶ್ರೇಯಸ್ಕರ ಎಂದು ನಮಗೆ ಮನವರಿಕೆಯಾಯಿತೆಂದರೆ ಅದನ್ನು ನಮ್ಮ ಸಹೃದಯ ಮಿತ್ರರೂ ಅಳವಡಿಸಿಕೊಳ್ಳುವಂತೆ ಪ್ರೇರಿಸೋಣ.

**ಸಂಹಾರಕಾಲದಲ್ಲೂ ತಾತ್ತ್ವಿಕಪ್ರಜ್ಞೆ:** ದುಶ್ಶಾಸನನ ಸಂಹಾರಕಾಲದಲ್ಲಿ ಭೀಮಸೇನ ನರಸಿಂಹನನ್ನು ಸ್ಮರಿಸಿಕೊಂಡು, ನರಸಿಂಹನನ್ನು ಪ್ರತಿಪಾದಿಸುವ ಮನ್ಯುಸೂಕ್ತದ ದರ್ಶನಕ್ಕೆ ಒಳಗಾಗುವನು.

'ಮೋದೇತ ಸಾಧುರಪಿ ವೃಶ್ಚಿಕಸರ್ಪಹತ್ಯಾ.....' (7-9-14) ಎಂದು ಭಾಗವತದ ಮಾತಿಗನುಗುಣವಾಗಿ ವಿಷಜಂತುಗಳಾದ ಚೇಳು, ಕೆಟ್ಟ ಹಾವು ಇತ್ಯಾದಿಗಳ ಹತ್ಯೆ ನಡೆಸಬಹುದಾಗಿದೆ. ಆದರೆ ಆ ಹತ್ಯೆ ನಡೆಸುವಾಗ ಅವುಗಳ ಬಗ್ಗೆ ವೈಯಕ್ತಿಕದ್ವೇಷ

**ತಾಳದೆ ಸಮುದ್ರಮಥನಕಾಲದಲ್ಲಿ ಉದ್ಭವಿಸಿದ ಕಾಲಕೂಟ ವಿಷದ ಭಾಗದಿಂದ ಹುಟ್ಟಿ ಕೊಂಡಿರುವ ಪ್ರಯುಕ್ತ[21] ವಧಾರ್ಹವೆನಿಸಿವೆ -ಎಂಬ ತಾತ್ವಿಕ ದ್ವೇಷಕಕ್ಷ್ಯೇ ಒಳಗಾಗಿದ್ದಿರ ಬಹುದು.**

**ಭಗವದ್ದ್ವೇಷದ ನೆನಪಿಸುವಿಕೆ:** ಭೀಮಸೇನ ದುರ್ಯೋಧನನ್ನು ಸಂಹರಿಸುವಾಗ ಶ್ರೀಕೃಷ್ಣನ ವಿಷಯದಲ್ಲಿ ದುರ್ಯೋಧನ ನಡೆಸಿರುವ ಅಪಚಾರಗಳನ್ನು ವಿಶೇಷವಾಗಿ ಸ್ಮರಿಸಿಕೊಂಡು, ಅದಕ್ಕೆ ದಂಡನೆಯನ್ನು ನೀಡುತ್ತಿದ್ದನು. ಜೂಜಿನಲ್ಲಿ ಶ್ರೀಕೃಷ್ಣನನ್ನೂ ಪಣಕ್ಕಿಡು ಎಂದು ದುರ್ಯೋಧನ ಹೇಳಿದ್ದು ಅದಕ್ಕಾಗಿ ಮಾಡಿದ ಪ್ರತಿಜ್ಞೆಗನುಗುಣವಾಗಿ ಭೀಮಸೇನ ಅವನ ತಲೆಯನ್ನು ತುಳಿಯುತ್ತಿದ್ದನು. ಸಂಧಾನಕ್ಕಾಗಿ ಬಂದಿದ್ದ ಶ್ರೀಕೃಷ್ಣನನ್ನು ಬಂಧಿಸುವುದಕ್ಕಾಗಿ ಈ ತಲೆಯಿಂದಲೇ ಮಂತ್ರಾಲೋಚನೆ ನಡೆಸಿದ್ದೆಂದು ಮತ್ತೊಮ್ಮೆ ಕಾಲಿನಿಂದ ತುಳಿಯುತ್ತಿದ್ದರು.

ಆಸುರೀಶಕ್ತಿಗಳನ್ನು ನಾವು ದ್ವೇಷಿಸುವಾಗ ಅವುಗಳಿಂದ ನಮಗೆ ತೊಂದರೆಯಾಗು ವುದೆಂಬ ದೃಷ್ಟಿಗಿಂತಲೂ ಭಗವಂತನಿಗೆ ಪ್ರಿಯಗಳಾದ ಕಾರ್ಯಗಳನ್ನು ನಡೆಸಲು ಅವು ತೊಂದರೆ ಮಾಡುತ್ತಿವೆ ಎಂಬುದಾಗಿ ಭಗವಂತನ ಸಂಬಂಧದ ಹಿನ್ನೆಲೆಯನ್ನು ಇಟ್ಟುಕೊಳ್ಳ ಬೇಕು. ಆಗ ನಾವು ಆಸುರೀಶಕ್ತಿಗಳ ವಿರುದ್ಧ ಎಸಗುವ ದ್ವೇಷಕ್ಕೆ ಆಧ್ಯಾತ್ಮಿಕಸಾಧನೆಯ ಮೆರುಗು ಸಿದ್ಧಿಸುವುದು.

**ಕಾಮದ ತಾರತಮ್ಯ:** ತ್ರಿವಿಧ ಪುರುಷಾರ್ಥಗಳಲ್ಲಿ ಕಾಮವೇ ಶ್ರೇಷ್ಠ ಎಂದು ಪ್ರತಿ ಪಾದಿಸುವ ಭೀಮಸೇನ ಕಾಮದ ಬಗ್ಗೆ ತಾರತಮ್ಯವನ್ನು ತಿಳಿಸುತ್ತ ಧರ್ಮ ಮತ್ತು ಅರ್ಥ ಗಳೆರಡರಿಂದಲೂ ಕೂಡಿದ್ದರೆ ಕಾಮ ಶ್ರೇಷ್ಠ. ಧರ್ಮ ಅರ್ಥಗಳಲ್ಲಿ ಯಾವುದಾದರೊಂದಕ್ಕೆ ಮಾತ್ರ ಅವಿರುದ್ಧ ಎನಿಸಿದ್ದರೆ ಆ ಕಾಮ ಮಧ್ಯಮ, ಧರ್ಮಾರ್ಥಗಳೆರಡಕ್ಕೂ ವಿರೋಧಿ ಯಾಗಿದ್ದರೆ ಅದು ಅಧಮಕಾಮ ಎಂದು ವಿವೇಚಿಸಿದನು.

**ಭೀಮಸೇನನ ಈ ವಿವೇಚನೆಗನುಗುಣವಾಗಿ ಧರ್ಮಾರ್ಥಗಳಿಗೆ ಹೊಂದಿಕೊಳ್ಳುವ ಕಾಮವನ್ನೇ ಅಳವಡಿಸಿಕೊಳ್ಳೋಣ. ಧರ್ಮಾರ್ಥಗಳಿಗೆ ವಿರೋಧಿ ಕಾಮಕ್ಕೆ ಎಂದೂ ಜೀವನದಲ್ಲಿ ಆಸ್ಪದ ನೀಡದಿರೋಣ.**

**ಧರ್ಮಾಚರಣೆಯಲ್ಲಿ ತ್ವರೆ ಮಾಡಬೇಕು:** ಒಬ್ಬ ಬ್ರಾಹ್ಮಣ ಯಾಗ ನಡೆಸಲು ಹಣ ಬೇಕೆಂದು ರಾತ್ರಿಕಾಲ ಬಂದಾಗ ಯುಧಿಷ್ಠಿರ ಅವನನ್ನು ಮರುದಿನ ಬರಲು ತಿಳಿಸುವನು. ಆ ಬ್ರಾಹ್ಮಣ ಹೋಗಿ ಭೀಮನಲ್ಲಿ ಕೇಳಲು ಅವನು ಕೂಡಲೇ ತನ್ನ ಕೈಯ ಆಭರಣವನ್ನು ನೀಡುವನಲ್ಲದೆ, ಆನಂದದ ಭೇರಿನಾದವನ್ನು ಹೊಡಿಸಿದನು. ಅದರ ನಿಮಿತ್ತವನ್ನು ಯುಧಿಷ್ಠಿರ ವಿಚಾರಿಸಲು, ಯಜ್ಞ ನಡೆಸಲು ಹಣ ಕೇಳಲು ಬಂದ ಬ್ರಾಹ್ಮಣನಿಗೆ ನಾಳೆ ಕೊಡುವೆ ಎಂದು ಹೇಳಿದ್ದಿ ಎಂದ ಮೇಲೆ ಮರಣಶೀಲದ ದೇಹವನ್ನು ಧರಿಸಿಕೊಂಡಿದ್ದರೂ

21. ಪ್ರಸ್ಕನ್ನಂ ಪಿಬತಃ ಪಾಣೇರ್ಯತ್ ಕಿಂಚಿಜ್ಜಗೃಹುಃ ಸ್ಮ ತತ್ ।
ವೃಶ್ಚಿಕಾಹಿವಿಷೌಷಧ್ಯೋ ದಂದಶೂಕಶ್ಚ ಯೇ ಪರೇ ॥ *– ಭಾಗ. 8-8-46*

ನಾಳೆಯ ವರೆಗೆ ಬದುಕಿರುವೆನೆಂದು ನಿರ್ಧಾರಕ್ಕೊಳಗಾಗಿರುವಿ –ಎಂಬ ಸಂತೋಷದ ಸುದ್ದಿಯನ್ನು ಕೇಳಿ ನಂದಿಘೋಷವನ್ನು ಬಡಿಸಿದೆನೆಂದು ವಿವರಿಸಿದ ಭೀಮನ ಆಂತರ್ಯ ಧರ್ಮದ ಆಚರಣೆಯಲ್ಲಿ ತ್ವರೆ ಮಾಡಬೇಕೆಂಬುದನ್ನು ಮನವರಿಕೆ ಮಾಡಿಕೊಂಡನು.

**'ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್.......' ಎಂದಿರುವಂತೆ ಮೃತ್ಯುದೇವತೆ ಮುಂದಿನ ಕ್ಷಣದಲ್ಲೇ ಒಯ್ಯಲು ಕೂದಲುಗಳಲ್ಲಿ ಹಿಡಿದುಕೊಂಡೇ ಬಿಟ್ಟಿರುವನೆಂಬ ಭಾವನೆಗೆ ಒಳಗಾಗಿ ಧರ್ಮಕಾರ್ಯದಲ್ಲಿ ಮುಂದುವರಿಕೆಯ ಪ್ರವೃತ್ತಿಯನ್ನು ಅಳವಡಿಸಿಕೊಳ್ಳದೆ ಆದಷ್ಟು ಬೇಗಬೇಗ ಧರ್ಮಕಾರ್ಯಗಳನ್ನು ನಡೆಸುತ್ತಿರೋಣ.**

**ಸಾತ್ವಿಕ ಪ್ರಕೃತಿಯ ಕೆಲವು ವ್ಯಕ್ತಿಗಳು ಏನೋ ಕುಂಟು ನೆಪ ಒಡ್ಡಿ ಧರ್ಮಾಚರಣೆ ಯಲ್ಲಿ ವಿಳಂಬಪ್ರವೃತ್ತಿಗೆ ಒಳಗಾದರೆಂದರೆ ಅವರನ್ನೂ ಯಾವುದಾದರೊಂದು ಪ್ರಭಾವಕಾರಿ ಉಪಾಯದಿಂದ ಆ ವಿಷಯದಲ್ಲಿ ಎಚ್ಚರಿಸೋಣ.**

**ಧಾರ್ಮಿಕ, ಆಧ್ಯಾತ್ಮಿಕಸಾಧನಾನುಷ್ಠಾನದ ಬಗ್ಗೆ ಅನುಕಂಪ:** ಧೃತರಾಷ್ಟ್ರ ನೂರು ಮಕ್ಕಳನ್ನೇ ಕಳೆದುಕೊಂಡವನೆಂಬ ಅನುಕಂಪೆಗೊಳಗಾಗಿ ಯುಧಿಷ್ಠಿರಾದಿಗಳೆಲ್ಲ ಅವನನ್ನು ಚೆನ್ನಾಗಿ ಸತ್ಕರಿಸುತ್ತಿದ್ದರು. ಆದರೆ ಭೀಮನಿಗೆ ಧೃತರಾಷ್ಟ್ರನ ಬಗ್ಗೆ ಅನುಕಂಪ – ತೀವ್ರ ತಪಸ್ಸು ಮಾಡದೆ ಧೃತರಾಷ್ಟ್ರನಿಗೆ ತನ್ನ ಗಂಧರ್ವಲೋಕದ ಪ್ರಾಪ್ತಿ ಆಗದು. ವಿಷಯಾಸಕ್ತ ನಾದ ಅವನು ತಪಸ್ಸನ್ನು ಮಾಡಲಾರ ಎಂಬುದಾಗಿ.

ಈ ಬಗ್ಗೆ ಅನುಕಂಪೆಯ ಹಿನ್ನೆಲೆಯಲ್ಲಿ ಧೃತರಾಷ್ಟ್ರನಿಗೆ ವಿಷಯಾಸಕ್ತಿ ದೂರವಾಗಿ ವೈರಾಗ್ಯ ಮೂಡುವಂತಾಗಬೇಕೆಂದು "ಈ ತೋಳುಗಳಿಂದಲೇ ಆ ಮುದುಕನ ಎಲ್ಲ ಮಕ್ಕಳನ್ನು ಕೊಂದಿರುವೆ" ಇತ್ಯಾದಿ ಮಾತುಗಳನ್ನು ಅವನಿಗೆ ಕೇಳುವಂತೆಯೇ ಗುಡುಗುತ್ತಿದ್ದನು.

**ವೃದ್ಧಾಪ್ಯಕ್ಕೊಳಗಾಗುತ್ತಿರುವ ಸಾಧಕರು ತಿನ್ನುವುದು, ಉಣ್ಣುವುದು ಮುಂತಾದ ವಿಷಯಭೋಗದ ಬಗ್ಗೆ ಹೆಚ್ಚು ಗಮನಹರಿಸದೆ ಜಪ-ನಾಮಸ್ಮರಣೆ-ಶಾಸ್ತ್ರಶ್ರವಣ ಮುಂತಾದ ಆಧ್ಯಾತ್ಮಿಕ, ಧಾರ್ಮಿಕ ಸಾಧನೆಗಳ ಅನುಷ್ಠಾನದ ಲೋಪದೋಷಗಳನ್ನು ಪರಿಹರಿಸಿ, ಅವುಗಳಲ್ಲಿ ತೀವ್ರತೆಯನ್ನು ಸಾಧಿಸುವ ನಿಟ್ಟಿನಲ್ಲೇ ಹೆಚ್ಚು ಗಮನ ಹರಿಸೋಣ. ಅವರಲ್ಲಿ ಆದಷ್ಟು ವಿಷಯಾ ಸಕ್ತಿ ಮೂಡುವಂತೆ ನಡೆದುಕೊಳ್ಳೋಣ.**

**ನಾವೈಷ್ಣವಾಯ ದಾತವ್ಯಂ.........:** ದುರ್ಯೋಧನಾದಿಗಳಿಗೆ ಶ್ರಾದ್ಧ ನಡೆಸಲು ಭೀಮಸೇನ ಧೃತರಾಷ್ಟ್ರನಿಗೆ ಹಣ ಕೊಡಲು ಒಪ್ಪುವುದಿಲ್ಲ. ಭಗವದ್ದ್ವೇಷಿಗಳಿಗೆ ಪಾರ ಲೌಕಿಕ ಸಹಾಯವನ್ನೂ ಮಾಡಕೂಡದು. ಅಂತಹವರ ಶ್ರಾದ್ಧಕ್ಕಾಗಿ ಹಣ ವಿನಿಯೋಗಿಸ ಲ್ಪಡುವುದೆಂದು ಗೊತ್ತಿದ್ದೂ ಧನವನ್ನು ನೀಡಿದರೆ ಆ ಧನ ಆ ಭಗವದ್ದ್ವೇಷಿಗಳ ಸುಖ ಕ್ಕಾಗಿ ವಿನಿಯೋಗಿಸಲ್ಪಟ್ಟು ಆ ಪ್ರಯುಕ್ತ ದೋಷವೇ ಸಂಭವಿಸುವುದೆಂದು ಭೀಮನು ಸಮರ್ಥಿಸುವನು.

**ತಾಳದೆ ಸಮುದ್ರಮಥನಕಾಲದಲ್ಲಿ ಉದ್ಭವಿಸಿದ ಕಾಲಕೂಟ ವಿಷದ ಭಾಗದಿಂದ ಹುಟ್ಟಿ ಕೊಂಡಿರುವ ಪ್ರಯುಕ್ತ[21] ವಧಾರ್ಹವೆನಿಸಿವೆ -ಎಂಬ ತಾತ್ತ್ವಿಕ ದ್ವೇಷಕ್ಕಷ್ಟೇ ಒಳಗಾಗಿದ್ದಿರ ಬಹುದು.**

**ಭಗವದ್ದ್ವೇಷದ ನೆನಪಿಸುವಿಕೆ:** ಭೀಮಸೇನ ದುರ್ಯೋಧನನ್ನು ಸಂಹರಿಸುವಾಗ ಶ್ರೀಕೃಷ್ಣನ ವಿಷಯದಲ್ಲಿ ದುರ್ಯೋಧನ ನಡೆಸಿರುವ ಅಪಚಾರಗಳನ್ನು ವಿಶೇಷವಾಗಿ ಸ್ಮರಿಸಿಕೊಂಡು, ಅದಕ್ಕೆ ದಂಡನೆಯನ್ನು ನೀಡುತ್ತಿದ್ದನು. ಜೂಜಿನಲ್ಲಿ ಶ್ರೀಕೃಷ್ಣನನ್ನೂ ಪಣಕ್ಕಿಡು ಎಂದು ದುರ್ಯೋಧನ ಹೇಳಿದ್ದು ಅದಕ್ಕಾಗಿ ಮಾಡಿದ ಪ್ರತಿಜ್ಞೆಗನುಗುಣವಾಗಿ ಭೀಮಸೇನ ಅವನ ತಲೆಯನ್ನು ತುಳಿಯುತ್ತಿದ್ದನು. ಸಂಧಾನಕ್ಕಾಗಿ ಬಂದಿದ್ದ ಶ್ರೀಕೃಷ್ಣನನ್ನು ಬಂಧಿಸುವುದಕ್ಕಾಗಿ ಈ ತಲೆಯಿಂದಲೇ ಮಂತ್ರಾಲೋಚನೆ ನಡೆಸಿದ್ದೆಂದು ಮತ್ತೊಮ್ಮೆ ಕಾಲಿನಿಂದ ತುಳಿಯುತ್ತಿದ್ದರು.

ಆಸುರೀಶಕ್ತಿಗಳನ್ನು ನಾವು ದ್ವೇಷಿಸುವಾಗ ಅವುಗಳಿಂದ ನಮಗೆ ತೊಂದರೆಯಾಗು ವುದೆಂಬ ದೃಷ್ಟಿಗಿಂತಲೂ ಭಗವಂತನಿಗೆ ಪ್ರಿಯಗಳಾದ ಕಾರ್ಯಗಳನ್ನು ನಡೆಸಲು ಅವು ತೊಂದರೆ ಮಾಡುತ್ತಿವೆ ಎಂಬುದಾಗಿ ಭಗವಂತನ ಸಂಬಂಧದ ಹಿನ್ನೆಲೆಯನ್ನು ಇಟ್ಟುಕೊಳ್ಳ ಬೇಕು. ಆಗ ನಾವು ಆಸುರೀಶಕ್ತಿಗಳ ವಿರುದ್ಧ ಎಸಗುವ ದ್ವೇಷಕ್ಕೆ ಆಧ್ಯಾತ್ಮಿಕಸಾಧನೆಯ ಮೆರುಗು ಸಿದ್ಧಿಸುವುದು.

**ಕಾಮದ ತಾರತಮ್ಯ:** ತ್ರಿವಿಧ ಪುರುಷಾರ್ಥಗಳಲ್ಲಿ ಕಾಮವೇ ಶ್ರೇಷ್ಠ ಎಂದು ಪ್ರತಿ ಪಾದಿಸುವ ಭೀಮಸೇನ ಕಾಮದ ಬಗ್ಗೆ ತಾರತಮ್ಯವನ್ನು ತಿಳಿಸುತ್ತ ಧರ್ಮ ಮತ್ತು ಅರ್ಥ ಗಳೆರಡರಿಂದಲೂ ಕೂಡಿದ್ದರೆ ಕಾಮ ಶ್ರೇಷ್ಠ. ಧರ್ಮ ಅರ್ಥಗಳಲ್ಲಿ ಯಾವುದಾದರೊಂದಕ್ಕೆ ಮಾತ್ರ ಅವಿರುದ್ಧ ಎನಿಸಿದ್ದರೆ ಆ ಕಾಮ ಮಧ್ಯಮ, ಧರ್ಮಾರ್ಥಗಳೆರಡಕ್ಕೂ ವಿರೋಧಿ ಯಾಗಿದ್ದರೆ ಅದು ಅಧಮಕಾಮ ಎಂದು ವಿವೇಚಿಸಿದನು.

**ಭೀಮಸೇನನ ಈ ವಿವೇಚನೆಗನುಗುಣವಾಗಿ ಧರ್ಮಾರ್ಥಗಳಿಗೆ ಹೊಂದಿಕೊಳ್ಳುವ ಕಾಮವನ್ನೇ ಅಳವಡಿಸಿಕೊಳ್ಳೋಣ. ಧರ್ಮಾರ್ಥಗಳಿಗೆ ವಿರೋಧಿ ಕಾಮಕ್ಕೆ ಎಂದೂ ಜೀವನದಲ್ಲಿ ಆಸ್ಪದ ನೀಡದಿರೋಣ.**

**ಧರ್ಮಾಚರಣೆಯಲ್ಲಿ ತ್ವರೆ ಮಾಡಬೇಕು:** ಒಬ್ಬ ಬ್ರಾಹ್ಮಣ ಯಾಗ ನಡೆಸಲು ಹಣ ಬೇಕೆಂದು ರಾತ್ರಿಕಾಲ ಬಂದಾಗ ಯುಧಿಷ್ಠಿರ ಅವನನ್ನು ಮರುದಿನ ಬರಲು ತಿಳಿಸುವನು. ಆ ಬ್ರಾಹ್ಮಣ ಹೋಗಿ ಭೀಮನಲ್ಲಿ ಕೇಳಲು ಅವನು ಕೂಡಲೇ ತನ್ನ ಕೈಯ ಆಭರಣವನ್ನು ನೀಡುವನಲ್ಲದೆ, ಆನಂದದ ಭೇರಿನಾದವನ್ನು ಹೊಡಿಸಿದನು. ಅದರ ನಿಮಿತ್ತವನ್ನು ಯುಧಿಷ್ಠಿರ ವಿಚಾರಿಸಲು, ಯಜ್ಞ ನಡೆಸಲು ಹಣ ಕೇಳಲು ಬಂದ ಬ್ರಾಹ್ಮಣನಿಗೆ ನಾಳೆ ಕೊಡುವೆ ಎಂದು ಹೇಳಿದ್ದಿ ಎಂದ ಮೇಲೆ ಮರಣಶೀಲದ ದೇಹವನ್ನು ಧರಿಸಿಕೊಂಡಿದ್ದರೂ

---

21. ಪ್ರಸ್ಕನ್ನಂ ಪಿಬತಃ ಪಾಣೇರ್ಯತ್ ಕಿಂಚಿಜ್ಜಗೃಹುಃ ಸ್ಮ ತತ್ ।
ವೃಶ್ಚಿಕಾಹಿವಿಷೌಷಧ್ಯೋ ದಂದಶೂಕಶ್ಚ ಯೇ ಪರೇ ॥ *– ಭಾಗ. 8-8-46*

ನಾಳೆಯ ವರೆಗೆ ಬದುಕಿರುವೆನೆಂದು ನಿರ್ಧಾರಕ್ಕೊಳಗಾಗಿರುವಿ –ಎಂಬ ಸಂತೋಷದ ಸುದ್ದಿಯನ್ನು ಕೇಳಿ ನಂದಿಘೋಷವನ್ನು ಬಡಿಸಿದೆನೆಂದು ವಿವರಿಸಿದ ಭೀಮನ ಆಂತರ್ಯ ಧರ್ಮದ ಆಚರಣೆಯಲ್ಲಿ ತ್ವರೆ ಮಾಡಬೇಕೆಂಬುದನ್ನು ಮನವರಿಕೆ ಮಾಡಿಕೊಂಡನು.

**'ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್.......' ಎಂದಿರುವಂತೆ ಮೃತ್ಯುದೇವತೆ ಮುಂದಿನ ಕ್ಷಣದಲ್ಲೇ ಒಯ್ಯಲು ಕೂದಲುಗಳಲ್ಲಿ ಹಿಡಿದುಕೊಂಡೇ ಬಿಟ್ಟಿರುವನೆಂಬ ಭಾವನೆಗೆ ಒಳಗಾಗಿ ಧರ್ಮಕಾರ್ಯದಲ್ಲಿ ಮುಂದುವರಿಕೆಯ ಪ್ರವೃತ್ತಿಯನ್ನು ಅಳವಡಿಸಿಕೊಳ್ಳದೆ ಆದಷ್ಟು ಬೇಗಬೇಗ ಧರ್ಮಕಾರ್ಯಗಳನ್ನು ನಡೆಸುತ್ತಿರೋಣ.**

**ಸಾತ್ವಿಕ ಪ್ರಕೃತಿಯ ಕೆಲವು ವ್ಯಕ್ತಿಗಳು ಏನೋ ಕುಂಟು ನೆಪ ಒಡ್ಡಿ ಧರ್ಮಾಚರಣೆ ಯಲ್ಲಿ ವಿಳಂಬಪ್ರವೃತ್ತಿಗೆ ಒಳಗಾದರೆಂದರೆ ಅವರನ್ನೂ ಯಾವುದಾದರೊಂದು ಪ್ರಭಾವಕಾರಿ ಉಪಾಯದಿಂದ ಆ ವಿಷಯದಲ್ಲಿ ಎಚ್ಚರಿಸೋಣ.**

**ಧಾರ್ಮಿಕ, ಆಧ್ಯಾತ್ಮಿಕಸಾಧನಾನುಷ್ಠಾನದ ಬಗ್ಗೆ ಅನುಕಂಪ:** ಧೃತರಾಷ್ಟ್ರ ನೂರು ಮಕ್ಕಳನ್ನೇ ಕಳೆದುಕೊಂಡವನೆಂಬ ಅನುಕಂಪೆಗೊಳಗಾಗಿ ಯುಧಿಷ್ಠಿರಾದಿಗಳೆಲ್ಲ ಅವನನ್ನು ಚೆನ್ನಾಗಿ ಸತ್ಕರಿಸುತ್ತಿದ್ದರು. ಆದರೆ ಭೀಮನಿಗೆ ಧೃತರಾಷ್ಟ್ರನ ಬಗ್ಗೆ ಅನುಕಂಪ – ತೀವ್ರ ತಪಸ್ಸು ಮಾಡದೆ ಧೃತರಾಷ್ಟ್ರನಿಗೆ ತನ್ನ ಗಂಧರ್ವಲೋಕದ ಪ್ರಾಪ್ತಿ ಆಗದು. ವಿಷಯಾಸಕ್ತ ನಾದ ಅವನು ತಪಸ್ಸನ್ನು ಮಾಡಲಾರ ಎಂಬುದಾಗಿ.

ಈ ಬಗ್ಗೆ ಅನುಕಂಪೆಯ ಹಿನ್ನೆಲೆಯಲ್ಲಿ ಧೃತರಾಷ್ಟ್ರನಿಗೆ ವಿಷಯಾಸಕ್ತಿ ದೂರವಾಗಿ ವೈರಾಗ್ಯ ಮೂಡುವಂತಾಗಬೇಕೆಂದು "ಈ ತೋಳುಗಳಿಂದಲೇ ಆ ಮುದುಕನ ಎಲ್ಲ ಮಕ್ಕಳನ್ನು ಕೊಂದಿರುವೆ" ಇತ್ಯಾದಿ ಮಾತುಗಳನ್ನು ಅವನಿಗೆ ಕೇಳುವಂತೆಯೇ ಗುಡುಗುತ್ತಿದ್ದನು.

**ವೃದ್ಧಾಪ್ಯಕ್ಕೊಳಗಾಗುತ್ತಿರುವ ಸಾಧಕರು ತಿನ್ನುವುದು, ಉಣ್ಣುವುದು ಮುಂತಾದ ವಿಷಯಭೋಗದ ಬಗ್ಗೆ ಹೆಚ್ಚು ಗಮನಹರಿಸದೆ ಜಪ-ನಾಮಸ್ಮರಣೆ-ಶಾಸ್ತ್ರಶ್ರವಣ ಮುಂತಾದ ಆಧ್ಯಾತ್ಮಿಕ, ಧಾರ್ಮಿಕ ಸಾಧನೆಗಳ ಅನುಷ್ಠಾನದ ಲೋಪದೋಷಗಳನ್ನು ಪರಿಹರಿಸಿ, ಅವುಗಳಲ್ಲಿ ತೀವ್ರತೆಯನ್ನು ಸಾಧಿಸುವ ನಿಟ್ಟಿನಲ್ಲೇ ಹೆಚ್ಚು ಗಮನ ಹರಿಸೋಣ. ಅವರಲ್ಲಿ ಆದಷ್ಟು ವಿಷಯಾ ಸಕ್ತಿ ಮೂಡುವಂತೆ ನಡೆದುಕೊಳ್ಳೋಣ.**

**ನಾವೈಷ್ಣವಾಯ ದಾತವ್ಯಂ.........:** ದುರ್ಯೋಧನಾದಿಗಳಿಗೆ ಶ್ರಾದ್ಧ ನಡೆಸಲು ಭೀಮಸೇನ ಧೃತರಾಷ್ಟ್ರನಿಗೆ ಹಣ ಕೊಡಲು ಒಪ್ಪುವುದಿಲ್ಲ. ಭಗವದ್ದ್ವೇಷಿಗಳಿಗೆ ಪಾರ ಲೌಕಿಕ ಸಹಾಯವನ್ನೂ ಮಾಡಕೂಡದು. ಅಂತಹವರ ಶ್ರಾದ್ಧಕ್ಕಾಗಿ ಹಣ ವಿನಿಯೋಗಿಸ ಲ್ಪಡುವುದೆಂದು ಗೊತ್ತಿದ್ದೂ ಧನವನ್ನು ನೀಡಿದರೆ ಆ ಧನ ಆ ಭಗವದ್ದ್ವೇಷಿಗಳ ಸುಖ ಕ್ಕಾಗಿ ವಿನಿಯೋಗಿಸಲ್ಪಟ್ಟು ಆ ಪ್ರಯುಕ್ತ ದೋಷವೇ ಸಂಭವಿಸುವುದೆಂದು ಭೀಮನು ಸಮರ್ಥಿಸುವನು.

ನಾವು ಕೂಡಾ ಭಗವದ್ದ್ವೇಷಿಗಳು ಎಂದು ನಿಶ್ಚಿತವಾಗಿದ್ದರೆ ಅಂತಹವರಿಗೆ ಖಂಡಿತಾ ನೆರವು ನೀಡಬಾರದು. 'ಸಾವೈಷ್ಣವಾಯ ದಾತವ್ಯಂ ನೋದಬಿಂದುಂ ನ ತಂಡುಲಮ್' (ಕೃಷ್ಣಾಮೃತಮಹಾರ್ಣವ, 277) –ಅವೈಷ್ಣವರಿಗೆ ಅಂದರೆ ವೈಷ್ಣವ ಅಲ್ಲದಿದ್ದವನಿಗೆ ಎಂದಷ್ಟೇ ಅಲ್ಲ, ವಿಷ್ಣುದ್ವೇಷಿಯಾಗಿದ್ದು 'ಅವೈಷ್ಣವ' ಎಂದು ನಿಶ್ಚಿತ ನಾದವನಿಗೆ ಒಂದು ಹನಿ ನೀರನ್ನಾಗಲೀ, ಒಂದು ಅಗುಳು ಅನ್ನವನ್ನಾಗಲೀ ನೀಡ ಬಾರದೆಂದು ಎಚ್ಚರಿಸಲಾಗಿದೆ. ಭಗವದ್ದ್ವೇಷಿಗೆ ಕೊಡುವ ನೀರು, ಅನ್ನ ಎಲ್ಲವೂ ಕ್ರಮೇಣ ಅವನ ಭಗವದ್ದ್ವೇಷಕ್ಕೂ ಪೋಷಕವಾಗಿ ಆ ಪ್ರಯುಕ್ತ ನಾವು ಭಗವದ್ದ್ವೇಷಕ್ಕೆ ಪುಷ್ಟಿ ನೀಡಿದಂತಾದೀತು! ಆದ್ದರಿಂದ ವಿಷ್ಣುದ್ವೇಷಿ ಎಂದು ನಿಶ್ಚಿತವಾಗಿದ್ದ ವ್ಯಕ್ತಿಗೆ ಯಾವುದೇ ರೀತಿಯ ಸಹಾಯವನ್ನು ಮಾಡದಿರೋಣ.

ಬದುಕಿದ್ದಾಗ ವಿಷ್ಣುದ್ವೇಷಿಯಾಗಿದ್ದ ವ್ಯಕ್ತಿ ಸತ್ತನೆಂದರೆ ಅವನು ಸ್ವಾಭಾವಿಕವಾಗಿ ವಿಷ್ಣುದ್ವೇಷಿಯಾಗಿದ್ದು ವಿಷ್ಣುದ್ವೇಷವನ್ನು ಎಸಗುತ್ತಿದ್ದಾನೆಯೆ? ಅಥವಾ ಆನುವಂಶಿಕತೆ, ಪರಿಸರ ಇತ್ಯಾದಿಗಳ ಪ್ರಭಾವದಿಂದಾಗಿಯಷ್ಟೇ ವಿಷ್ಣುದ್ವೇಷವನ್ನು ಎಸಗುತ್ತಿದ್ದನೇ? -ಎಂದು ನಮಗೆ ಭೀಮಸೇನನು ದುರ್ಯೋಧನಾದಿಗಳ ಬಗ್ಗೆ ತಾಳಿದ್ದಂತೆ ನಿರ್ಧಾರ ತಾಳಲು ಬರದಿರುವುದರಿಂದ ಭೀಮಸೇನನಂತೆ ಖಡಾಖಡಿಯಾಗಿ ಅವನಿಗೆ ಪಾರ ಲೌಕಿಕ ಸಹಾಯವನ್ನು ನಿರಾಕರಿಸದೆ, ಸ್ವರೂಪತಃ ಒಳ್ಳೆಯವನಾಗಿದ್ದರಷ್ಟೇ ಈ ನನ್ನ ಸಹಾಯ ಅವನಿಗೆ ದೊರಕುವಂತಾಗಲೆಂಬ ಭಾವನೆಯನ್ನಿಟ್ಟುಕೊಂಡು ಪಾರಲೌಕಿಕ ಸಹಾಯವನ್ನು ನೀಡಬೇಕಷ್ಟೆ.

**ಭಾವಪುಷ್ಪಗಳಿಂದ ಪೂಜೆ:** 'ಭಗವದಿಚ್ಛೆಯಿಂದ ನಿರ್ಮಿತವಾದ ಈ ಶರೀರವೆಂಬ ಪುರದಲ್ಲಿ ಹೃದಯಕಮಲದಲ್ಲಿ ಆಸೀನರಾಗಿರುವ, ಇಂದ್ರನೀಲಮಣಿಯಂತೆ ಹಸುರಾಗಿ ರುವ ಪ್ರತಿಬಿಂಬನಾದ ಜೀವನ ಬಿಂಬನಾದ ಭಗವಂತನ ರೂಪವನ್ನು ಶ್ರದ್ಧೆ ಎಂಬ ನದಿಯ ಚಿತ್ತ ಎಂಬ ನೀರಿನಿಂದ ಅಭಿಷೇಕ ಮಾಡಿಸಿ, ಅಹಿಂಸೆ ಮುಂತಾದ ಎಂಟು ಭಾವಪುಷ್ಪ ಗಳಿಂದ ಆರಾಧಿಸುವೆನು ಎಂದು ಭೀಮಸೇನ ಅನುಸಂಧಾನಿಕವಾದ ಭಗವದಾರಾಧನೆಗೆ ಸಂಬಂಧಿಸುವ ಮಹಾಭಾರತದ ಮಾತೊಂದು ಯೋಗದೀಪಿಕಾದಲ್ಲಿ (3-71) ಉಲ್ಲೇಖ ಗೊಂಡಿದೆ.

ಭೀಮಸೇನನ ಆ ಅನುಸಂಧಾನಿಕ ಭಗವತ್ಪೂಜಾವಿಧಾನವನ್ನು ನಾವೂ ಯಥಾ ಶಕ್ತಿ ಅಳವಡಿಸಿಕೊಳ್ಳೋಣ. ನಮ್ಮ ಹೃದಯಮಂಟಪದಲ್ಲಿ ದೇವರ ಪ್ರತಿಷ್ಠಾಪನೆ ಮಾಡಿ, ಶ್ರದ್ಧಾನದಿಯ ನೀರಿನಿಂದ ಅಭಿಷೇಕ ಮಾಡಿ, ಅಹಿಂಸಾ, ಇಂದ್ರಿಯನಿಗ್ರಹ -ಇತ್ಯಾದಿ ಭಾವಪುಷ್ಪಗಳಿಂದ ಅರ್ಚಿಸೋಣ. ನಮ್ಮ ಬಾಹ್ಯ ಪೂಜೆಯನ್ನು ಈ ಬಗೆಯ ಅನುಸಂಧಾನಿಕ ಪೂಜೆಗೆ ಪುಷ್ಟಿ ನೀಡುವಂತೆ ನಡೆಸೋಣ.

**ಭಾಗವತಧರ್ಮಗಳ ಛಾಯಾನುಸರಣೆ:** ಶುದ್ಧಭಾಗವತಧರ್ಮದಲ್ಲಿ ನಿರತನಾಗಿದ್ದ ಭೀಮಸೇನ ಇಂತಹ ಭಾಗವತಧರ್ಮದ ಅಂಗವಾಗಿ ಹೀಗೆ ನಡೆದುಕೊಳ್ಳುತ್ತಿದ್ದನು.

- ಶ್ರೀವಿಷ್ಣುವಿನಿಂದಲೂ ಜ್ಞಾನ, ಭಕ್ತಿ ಹಾಗೂ ಅವನ ತೃಪ್ತಿ ಈ ಮೂರನ್ನೇ ಹೊರತುಪಡಿಸಿ ಬೇರೇನನ್ನೂ ಬೇಡುತ್ತಿರಲಿಲ್ಲ.
- ಶ್ರೀಹರಿಯನ್ನು ಕಾಮ್ಯಫಲಕ್ಕಾಗಿ ಎಂದೂ ಬೇಡಿದವನಲ್ಲ.
- ದೇವತೆಗಳನ್ನಾಗಲೀ, ಮನುಷ್ಯರನ್ನಾಗಲೀ ಯಾವುದಕ್ಕಾಗಿಯೂ ಬೇಡುತ್ತಿರಲಿಲ್ಲ.
- ಕಾಮ್ಯಕರ್ಮಗಳನ್ನು ಮಾಡುತ್ತಿರಲಿಲ್ಲ.
- ವಾಸುದೇವನಿಗಿಂತ ಬೇರೆ ಯಾವುದೇ ದೇವತೆಯನ್ನು ನಮಸ್ಕರಿಸುತ್ತಿರಲಿಲ್ಲ, ಪೂಜಿಸುತ್ತಿರಲಿಲ್ಲ.
- ಶ್ರೀಹರಿಗೆ ಯಾವ ಕಾಲದಲ್ಲೂ ಯಾವ ರೀತಿಯಲ್ಲೂ ವಿರೋಧ ಮಾಡುತ್ತಿರಲಿಲ್ಲ.
- ಅವೈಷ್ಣವರೊಡನೆ ಗೆಳೆತನ ಮಾಡುತ್ತಿರಲಿಲ್ಲ.
- ಪರೋಕ್ಷದಲ್ಲಿಯೂ ಶ್ರೀಹರಿಯನ್ನು ನಿಂದಿಸುವವರ ನಾಲಗೆಯನ್ನೇ ಸೀಳಿ ಹಾಕುತ್ತಿದ್ದನು.
- ವಿಷ್ಣುವಿಗೆ ವಿರೋಧ ಮಾಡುವವರನ್ನು ತಾನೂ ಕೊಲ್ಲುತ್ತಿದ್ದ ಇನ್ನೊಬ್ಬರಿಂದಲೂ ಕೊಲ್ಲಿಸುತ್ತಿದ್ದ.
- ಭಾಗವತ ಧರ್ಮದ ವಿಷಯದಲ್ಲಾಗಲೀ, ತತ್ತ್ವಜ್ಞಾನದ ವಿಷಯದಲ್ಲಾಗಲೀ ಎಂದೂ ಸಂಶಯಕ್ಕೊಳಗಾಗುತ್ತಿದ್ದಿಲ್ಲ.
- ಆಪತ್ತಿನ ಸ್ಥಿತಿಯಲ್ಲೂ ವಿದ್ಯೋಪಜೀವನವನ್ನು ಮಾಡುತ್ತಿರಲಿಲ್ಲ.
- ವಿಷ್ಣುದ್ವೇಷಿಗಳ ಅಂತ್ಯಕ್ರಿಯೆ ಮಾಡಲು ಇತರರಿಗೆ ಅನುಮತಿ ನೀಡುತ್ತಿರಲಿಲ್ಲ.
- ತಾನೂ ಅವೈಷ್ಣವರಿಗೆ ಅಂತ್ಯಕ್ರಿಯೆ ಮಾಡುತ್ತಿರಲಿಲ್ಲ.
- ಅವೈಷ್ಣವರಿಗೆ ಪ್ರಿಯವನ್ನು ಎಂದೂ ಆಚರಿಸುತ್ತಿರಲಿಲ್ಲ.
- ಪ್ರತ್ಯಕ್ಷರಾಗಿ ಬರುವ ದೇವತೆಗಳಿಗೂ, ವಯಸ್ಸಿನಿಂದ ಹಿರಿಯರಾದ ಬಂಧುಗಳಿಗೂ ನಮಸ್ಕರಿಸುತ್ತಿದ್ದವನಾದರೂ, ಅವರಲ್ಲಿದ್ದ ಶ್ರೀವಿಷ್ಣುವನ್ನು ಗಮನದಲ್ಲಿಟ್ಟುಕೊಂಡಷ್ಟೇ ನಮಸ್ಕರಿಸುತ್ತಿದ್ದನು.

ಶ್ರೀವಿಷ್ಣುವಿನ ಪಾರಮ್ಯಪ್ರಜ್ಞೆಗೆ ಪೋಷಕಗಳಾದ ಈ ಎಲ್ಲ ಭಾಗವತ ಧರ್ಮಗಳನ್ನು ಪೂರ್ಣ ಪ್ರಮಾಣದಲ್ಲಿ ನಮಗೆ ಆಚರಿಸಲಿಕ್ಕೆ ಆಗದಿದ್ದರೂ ಅವುಗಳ ಮೂಲಸ್ಫೂರ್ತಿಯನ್ನು ಪತ್ತೆ ಹಚ್ಚಿ ಅದಕ್ಕೆ ಪೂರಕವಾಗುವಂತೆ ಸಾಧ್ಯವಾದಷ್ಟು ಮಟ್ಟಿಗೆ ಆ ನಿಯಮಗಳನ್ನು ಪಾಲಿಸೋಣ. ನಿಯಮಪಾಲನೆಯಲ್ಲಿ ದಾರ್ಢ್ಯವನ್ನು ಹೆಚ್ಚುಹೆಚ್ಚಿಸುತ್ತ ಹೋಗಲು ಯತ್ನಿಸೋಣ.

* * *

# ಮಧ್ವಗುರುಗಳ ಆದರ್ಶಗಳನ್ನು ಪಾಲಿಸೋಣ

**ಶ್ರೀ ಮಧ್ವರು ಬರೇ ಜಗದ್ಗುರುಗಳಲ್ಲ, ತ್ರೈಲೋಕ್ಯಾಚಾರ್ಯರಾಗಿ ಮೆರೆದವರು. ಸನ್ಯಾಸಾಶ್ರಮವನ್ನು ಅಳವಡಿಸಿಕೊಂಡಿದ್ದವರು. ಆದರೂ ಭಗವದ್ಭಕ್ತರಾಗಿ, ಸಾಧಕರಾಗಿ ವಿರಾಜಿಸಿದ ಅವರ ವ್ಯಕ್ತಿತ್ವದ ಆ ಮುಖದ ಸಾಧನೆಗಳನ್ನೇ ದಾರಿದೀಪವಾಗಿಟ್ಟು ಕೊಂಡು ಅದರ ಬೆಳಕಿನಲ್ಲಿ ನಾವೇಕೆ ಹೆಜ್ಜೆಗಳನ್ನಿಡಬಾರದು?**

**ಕುಲದೇವತಾಪ್ರಣಾಮದೊಂದಿಗೆ ಪ್ರಾರಂಭ:** ವ್ಯಾಪ್ತ್ಯೋಪಾಸಕರಾದ ಮಧ್ವಾಚಾರ್ಯರಾಗಲೀ, ಅವರ ಮೂಲರೂಪ ಪ್ರಾಣದೇವರಾಗಲೀ ಎಲ್ಲೆಡೆ ದೇವರನ್ನು ಕಾಣುವವರು. ಉಪಾಸನಾವಿಶೇಷದ ದೃಷ್ಟಿಯಿಂದಷ್ಟೇ ಪ್ರತಿಮಾಮಾಧ್ಯಮದಲ್ಲಿ ಉಪಾಸನೆಗಳನ್ನು ಮಾಡುವವರು. ಹೀಗಿದ್ದರೂ ಪ್ರಾಣದೇವರು ಮಧ್ವರಾಗಿ ಪಾಜಕದಲ್ಲಿ ಅವತರಿಸುವ ಮುನ್ನ ಉಡುಪಿಯ ಅನಂತಾಸನ ದೇವಾಲಯದ ಅನಂತಾಸನನಿಗೆ ನಮಿಸಿ ಮುಂದೆ ಪಾಜಕಕ್ಕೆ ಹೋಗಿ ಅಲ್ಲಿ ನಡಿಲ್ಲಾಯರ ಪತ್ನಿಯ ಮೂಲಕ ಕಾಣಿಸಿಕೊಳ್ಳುವರು. ಉಡುಪಿಯ ಅನಂತಾಸನನ ಪ್ರತೀಕವೇನೂ 'ಸ್ವಯಂವ್ಯಕ್ತ' ಪ್ರತಿಮೆ ಅಲ್ಲ. ಅಥವಾ ಮುಖ್ಯಪ್ರಾಣನಿಗಿಂತಲೂ ಉತ್ತಮರಿಂದ ಪ್ರತಿಷ್ಠಿತವೂ ಅಲ್ಲ.

**ಪೂರ್ವೇಽಪಿ ಕರ್ದಮಪರಾಶರಪಾಂಡುಮುಖ್ಯಾಃ**
**ಯತ್ಸೇವಯಾ ಗುಣಗಣಾಢ್ಯಮಪತ್ಯಮಾಪುಃ ।**

ಎಂದು ಮಧ್ವವಿಜಯದ ಮಾತಿಗೆ ಅನಂತಾಸನನ ಪ್ರತೀಕದಲ್ಲಿ ಸನ್ನಿಹಿತನಾದ ನಾರಾಯಣನ ಸೇವೆಯಿಂದ ಕರ್ದಮಾದಿಗಳು ಸತ್ಪುತ್ರರನ್ನು ಪಡೆದಿರುವರೆಂಬುದೇ ಹೊರತು ಆ ಪ್ರತಿಮಾಮಾಧ್ಯಮದ ಸೇವೆಯಿಂದ ಎಂಬ ಅರ್ಥವಲ್ಲ.

ಹೀಗೆ ಬೇರೆ ಯಾವ ಬಗೆಯ ವೈಶಿಷ್ಟ್ಯವನ್ನೂ ಒಳಗೊಳ್ಳದ ಉಡುಪಿ ಅನಂತಾಸನ ಪ್ರತೀಕ ಶ್ರೀ ಮಧ್ವಗುರುಗಳ ಭಕ್ತಿವಿಶೇಷಕ್ಕೆ ಪಾತ್ರವಾದುದು ಅದು ಅವರ ಮನೆತನದ ಕುಲದೇವರು ಎಂಬ ದೃಷ್ಟಿಯಿಂದಷ್ಟೇ.

**ವ್ಯಾಪ್ತ್ಯೋಪಾಸಕರಾಗಿದ್ದು ಕುಲದೇವರ ಪ್ರತಿಮಾಮಾಧ್ಯಮದ ಉಪಾಸನೆಯ ಆವಶ್ಯಕತೆ ಇಲ್ಲದಿದ್ದರೂ ಶ್ರೀ ಮಧ್ವರು ಉಳಿದ ಸಾಧಕರಿಗೆ ಆ ನಿಟ್ಟಿನ ಮಾರ್ಗದರ್ಶನ ನೀಡುವುದಕ್ಕಾಗಿ ಹಾಗೆ ಸ್ಪಂದಿಸಿರುವರೆಂದರೆ ನಾವು ಕೂಡಾ ಬದರಿ, ತಿರುಪತಿ ಇತ್ಯಾದಿ ಸ್ವಯಂವ್ಯಕ್ತ ಪ್ರತಿಮೆ ಯಳ್ಳಲ್ಲಿಯ ಪ್ರತಿಮೆಗಳ ಮಾಧ್ಯಮದಲ್ಲಿ ಸೇವೆ ಉಪಾಸನೆ ನಡೆಸುವವರೂ ಕುಲದೇವತಾಪ್ರತಿಮಾಮಾಧ್ಯಮದಲ್ಲಿ ಉಪಾಸನೆ, ಸೇವೆ ಮುಂತಾದ ಸಾಧನೆಗಳನ್ನು ನಡೆಸಲು ಮರೆತು ಬಿಡಬಾರದು.**

**ಶ್ರೀ ಮಧ್ವರು ತಮ್ಮ ಅವತಾರ ಕಾರ್ಯವನ್ನು ಕುಲದೇವತಾನಮನದೊಂದಿಗೆ ಪ್ರಾರಂಭಿಸಿದಂತೆ ನಮ್ಮ ಬದುಕಿನ ಪ್ರತಿಯೊಂದು ಪ್ರಮುಖ ಸಾಧನೆಯನ್ನೂ ಕುಲದೇವತೆಗೆ ನಮಿಸಿ, ಅವರ ಅನುಮತಿಯೊಂದಿಗೇ ಪ್ರಾರಂಭಿಸೋಣ.**

**ಎತ್ತಿನ ಬಾಲ ಹಿಡಿದು ಸಂಚಾರ:** ಶ್ರೀ ಮಧ್ವರು ವಾಸುದೇವನಾಗಿದ್ದಾಗ, ಎರಡು ಮೂರು ವರ್ಷದ ವಯಸ್ಸಿನಲ್ಲಿ ಒಮ್ಮೆ ಒಂದು ಎತ್ತಿನ ಬಾಲವನ್ನು ಗಟ್ಟಿಯಾಗಿ ಹಿಡಿದುಕೊಂಡು ಅರಣ್ಯಪೂರ್ತಿ ಅಲೆದು ಹಿಂತಿರುಗುವರು. ಮುಂದೆ ತಾವು ಶಾಸ್ತ್ರಪ್ರಪಂಚದ ಧರ್ಮ ಎಂಬ ಎತ್ತಿನ ಹಿಂದೆಯೇ ಇದ್ದುಕೊಂಡು ಸಂಚರಿಸುವವರೆಂದು ತಮ್ಮ ಮುಂದಿನ ಸಾಧನೆಯನ್ನು ಹೀಗೆ ಸಾಂಕೇತಿಕವಾಗಿ ಸೂಚಿಸಿರುವರು.

> **ನಮ್ಮ ಬದುಕಿನಲ್ಲೂ ಅರ್ಥ, ಕಾಮ, ಮೋಕ್ಷ ಪುರುಷಾರ್ಥಗಳ ಸಂಪಾದನೆಗಾಗಿ ವೈದಿಕ ಧರ್ಮದ ಹಿಂದೆಯೇ ಸಂಚರಿಸೋಣ.**

**ಪಿತೃಋಣಪರಿಹಾರ:** ನಡಿಲ್ಲಾಯರು ಎತ್ತೊಂದನ್ನು ಕೊಂಡುಕೊಳ್ಳುವಾಗ ಧನಿಕನೊಬ್ಬನ ಮೂಲಕ ಸಾಲ ಪಡೆದಿದ್ದರು. ಹುಣಿಸೆಬೀಜದ ನೆಪದಲ್ಲಿ ಮೋಕ್ಷದ ಬೀಜಗಳನ್ನೇ ಆ ಧನಿಕನಿಗೆ ನೀಡಿ ವಾಸುದೇವ ತಂದೆ ನಡಿಲ್ಲಾಯರ ಋಣವನ್ನು ಪರಿಹರಿಸಿದನು.

> **ತಂದೆತಾಯಿಯರ ಮೂಲಕ ಸಾಧನಾಶರೀರವನ್ನು ಪಡೆದುಕೊಳ್ಳುವ ಮಕ್ಕಳು ತಮಗೆ ಅಂತಹ ಶರೀರವನ್ನು ನಿರ್ಮಿಸಿಕೊಡಲು ಹಾಗೂ ಅದಕ್ಕೆ ಪೋಷಿಸಲು ಪ್ರತ್ಯಕ್ಷವಾಗಿಯಾಗಲೀ, ಪರೋಕ್ಷವಾಗಿಯಾಗಲೀ ತಮ್ಮ ತಂದೆತಾಯಿಯಂದಿರು ಪಡುವ ಪರಿಶ್ರಮ, ಅನುಭವಿಸುವ ಕಷ್ಟಕಾರ್ಪಣ್ಯ -ಇವುಗಳ ವಿಷಯದಲ್ಲಿ ತುಂಬ ಕೃತಜ್ಞರಾಗಿದ್ದಿರಬೇಕು. ಅವುಗಳ ವ್ಯಾಪ್ತಿಯಲ್ಲಿಯೇ ಬರುವ 'ಸಾಲದ ವ್ಯವಹಾರ'ಕ್ಕೂ ತನ್ನ ಹೊಣೆಗಾರಿಕೆಯನ್ನು ಗುರುತಿಸಿ, ಅದರ ಬಗ್ಗೆ ಆದಷ್ಟು ಸ್ಪಂದಿಸಬೇಕು.**

**ದೇವರ ಜೊತೆಗಾರಿಕೆ:** 'ನಿಡಿಯೂರು' ಎಂಬಲ್ಲಿ ನಡೆದ ಸಮಾರಂಭದಲ್ಲಿ ತಂದೆ ತಾಯಿಯಂದಿರ ಜೊತೆಗೆ ಪಾಲ್ಗೊಂಡಿದ್ದ ಮೂರು ವರ್ಷದ ವಾಸುದೇವ ತಂದೆತಾಯಿಯಂದಿರಿಗೆ ತಿಳಿಸದೆಯೇ ಕೊಡವೂರಿನ ಶಂಕರನಾರಾಯಣ ದೇವಾಲಯಕ್ಕೆ ಬಂದು ಅಲ್ಲಿ ನಾರಾಯಣನನ್ನು ನಮಿಸಿ, ಅಲ್ಲಿಂದ ಬನ್ನಂಜೆ ದೇವಾಲಯಕ್ಕೆ ಬಂದು ಅಲ್ಲಿ ರುದ್ರಾಂತರ್ಗತ ನಾರಾಯಣನನ್ನು ನಮಿಸಿ ಅಲ್ಲಿಂದ ಉಡುಪಿಯ ಅನಂತಾಸನ ದೇವಾಲಯಕ್ಕೆ ಬಂದು ಅನಂತಾಸನನಿಗೆ ನಮಿಸುವನು. ಮಗುವನ್ನು ವಿಚಾರಿಸಿಕೊಂಡು ಬಂದ ತಂದೆ ನಡ್ಡಿಲ್ಲಾಯರಲ್ಲಿ ವಾಸುದೇವ ತಿಳಿಸುವನು– 'ತಾನೊಬ್ಬನೇ ಅಲ್ಲಿಂದ ಬಂದಿರುವಂತಹದ್ದಲ್ಲ ಅಲ್ಲ ದೇವಾಲಯಕ್ಕೆ ಬರುವಾಗ ಅಲ್ಲಲ್ಲಿಯ ಭಗವದ್ರೂಪ ನನ್ನ ಜೊತೆಗಾರನಾಗಿ ಬಂದಿದ್ದನು'.

> **ಆಯಾ ದೇವಾಲಯದಲ್ಲಿರುವ ಭಗವದ್ರೂಪದ ದರ್ಶನ ಪಡೆಯಬೇಕೆಂದು ತುಂಬ ಭಕ್ತಿಯಿಂದ ಉತ್ಕಂಠೆಯಿಂದ ನಾವು ಹೊರಟಲ್ಲಿ ಆಯಾ ಭಗವದ್ರೂಪ ಅದೃಶ್ಯವಾಗಿಯಾದರೂ ನಮ್ಮ ಜೊತೆಗೆ ಇದ್ದು ರಕ್ಷಣೆ ನೀಡುತ್ತಿರುವುದು.**

**ಪ್ರಣಾಮದ ಶಿಕ್ಷಣ:** ಮೂರು ವರ್ಷದ ವಾಸುದೇವ 'ನಿಡಿಯೂರು'ವಿನಿಂದ ಉಡುಪಿ ಅನಂತಾಸನ ದೇವಾಲಯಕ್ಕೆ ಬಂದವನೇ ಅನಂತಾಸನನಿಗೆ ಸಾಷ್ಟಾಂಗಪ್ರಣಾಮ ಸಲ್ಲಿಸುವನು. ಯಾವಾಗಲೂ ದೇವರನ್ನು ಕಾಣುತ್ತ, ನಮಿಸುತ್ತ, ಸ್ತುತಿಸುತ್ತ ಇರುವ ವಾಸುದೇವ

ರೂಪದ ವಾಯುದೇವ ಸಜ್ಜನರಿಗೆ ಪ್ರಣಾಮದ ವಿಧಾನದ ಬಗ್ಗೆ, ಹಿರಿಮೆಗರಿಮೆಗಳ ಬಗ್ಗೆ ಶಿಕ್ಷಣ ನೀಡುವ ಉದ್ದೇಶದಿಂದಲೇ ಹಾಗೆ ನಮಿಸುವನು.

**ಶಾಸ್ತ್ರದಲ್ಲಿ ಅತಿ ಫಲಪ್ರದವಾಗಿ ನಿರೂಪಿತವಾಗಿರುವ ಪ್ರಣಾಮವನ್ನು ಎದೆಯೇ ಮುಂತಾದ ಎಂಟು ಪ್ರಮುಖ ಅಂಗಗಳನ್ನು ಬಳಸಿಕೊಂಡೇ ನಡೆಸಬೇಕು. ಪೂಜೆ, ಸಂಧ್ಯಾವಂದನೆ, ಪ್ರಣಾಮ, ನಾಮಕೀರ್ತನ ಇತ್ಯಾದಿ ಸಾಧನೆಗಳನ್ನು ಇತರ ಸಾಧಕರ ಮೇಲೆ ಪ್ರಭಾವ ಬೀರುವಂತೆ ನಡೆಸಬೇಕು. ಹೊರತು ಅವರ ಎದುರು ಆ ಸಾಧನೆ ಗಳನ್ನು ನಡೆಸಲು ಸಂಕೋಚಪಡಬಾರದು. ಮಾಡಬಾರದಾದ ಕೆಲಸಗಳನ್ನು ಮಾಡು ವಲ್ಲಿ ಸಂಕೋಚ ಪಡಬೇಕೇ ಹೊರತು ಮಾಡಬೇಕಾದ ಕೆಲಸಗಳನ್ನು ಮಾಡಲು ಯಾಕೆ ಸಂಕೋಚಪಡಬೇಕೆಂಬುದನ್ನು ಮನವರಿಕೆ ಮಾಡಿಕೊಳ್ಳಬೇಕು.**

**ಲೌಕಿಕ ಘಟನೆಗಳಲ್ಲಿ ಆಧ್ಯಾತ್ಮಿಕಾನುಸಂಧಾನ:** ಚೆಂಡಾಟದ ಚೆಂಡಿನ ಏರಿಳಿತಗಳ ಗತಿಯನ್ನು ಕಾಣುತ್ತ ಅದರಲ್ಲಿ ಕಾಳಿಯಮರ್ದನ ಕೃಷ್ಣನ ಪಾದದ ಗುಣಧರ್ಮಗಳನ್ನು ಸಾಂಕೇತಿಕವಾಗಿ ಅನುಸಂಧಾನ ನಡೆಸಿದ್ದ 'ವಾಸುದೇವ'ನ ಆ ಅನುಸಂಧಾನದ ಫಲ ವಾಗಿಯೇ 'ಕಂದುಕಸ್ತುತಿ' ರೂಪುಗೊಂಡಿದೆ.

**ನಾವು ಕೂಡಾ ಲೋಕವ್ಯವಹಾರಗಳನ್ನು ನಿರ್ವಹಿಸುವಾಗ ಆದಷ್ಟು ಒಳ ಮುಖ ರಾಗಿ ಬಾಹ್ಯ ಘಟನೆಗಳಿಂದ ಸಾಂಕೇತಿಕವಾಗಿಯಾಗಲೀ, ಅನುಸಂಧಾನಿಕವಾಗಿಯಾಗಲೀ ಭಗವಂತನ ಲೀಲೆಗಳನ್ನು, ಮಹಿಮೆಗಳನ್ನು ನೆನಪಿಸಿಕೊಳ್ಳುವಂತಾಗಬೇಕು.**

**ಪ್ರವಚನದಲ್ಲಿಯ ತಪ್ಪನ್ನು ತಿದ್ದದಿರಬಾರದು:** ನೇಯಂಪಲ್ಲಿಯ 'ಶಿವ' ಎಂಬ ಪೌರಾಣಿಕ ನಡೆಸುತ್ತಿದ್ದ ಪುರಾಣಪ್ರವಚನದಲ್ಲಿ ಏನೋ ಅತಾತ್ವಿಕ ವಿಚಾರ ಬಂದಾಗ ಅದು ತಪ್ಪು ಎಂದು ತಿಳಿಸಿದ ವಾಸುದೇವ ಜನರ ಅಪೇಕ್ಷೆಯ ಮೇರೆಗೆ ಅದರ ಯುಕ್ತವಾದ ಅಭಿ ಪ್ರಾಯವನ್ನು ತಿಳಿಸುವನು.

**ಹೀಗೆ ಪ್ರವಚನ ಅವಧಿಯಲ್ಲಿಯೇ ವಿಚಾರಿಸಿದರೆ ಪ್ರವಚನಕಾರನಿಗೆ ಅವಮಾನಿಸಿ ದಂತಾಗಿ ಆ ಪ್ರಯುಕ್ತ ಸ್ವಲ್ಪ ದೋಷ ಬರುವ ಸಂಭವವಿದೆ. ಆದರೆ ತತ್ವಗಳ ವಿಷಯ ದಲ್ಲಿ ವಿಪರೀತ ಜ್ಞಾನ ತುಂಬ ಅಪಾಯಕಾರಿ. ಪ್ರವಚನಕಾರನಿಗೆ ಅವಮಾನವಾದೀ ತೆಂದು ಅವನಿಂದ ಹೊರಟ ತಪ್ಪು ವಿಚಾರವನ್ನು ತಿದ್ದದೇ ಬಿಟ್ಟರೆ ಅವನಲ್ಲಿ ವಿಪರೀತ ಜ್ಞಾನ ಹಾಗೆಯೇ ಉಳಿದುಕೊಳ್ಳುವುದಲ್ಲದೆ, ಅವನ ಪ್ರವಚನವನ್ನು ಕೇಳಿದ ಹತ್ತಾರು ಜಿಜ್ಞಾಸುಗಳಲ್ಲೆಲ್ಲಾ ವಿಪರೀತಜ್ಞಾನವೇ ಉಳಿದುಕೊಂಡಂತಾಗುವುದು. ಹಾಗಾಗಬಾರ ದೆಂದರೆ ಆಗಿಂದಾಗಲೇ ತಪ್ಪುವಿಚಾರವನ್ನು ತಿದ್ದಬೇಕು. ಇದರಿಂದಾಗಿ ಪ್ರವಚನ ಕಾರನನ್ನು ಅವಮಾನಿಸಿದಂತಹ ಚಿಕ್ಕದೋಷದಿಂದ, ಪ್ರವಚನಕಾರನಲ್ಲಿಯು ಹಾಗೂ ಶ್ರೋತೃಗಳಲ್ಲಿಯ ತಾತ್ವಿಕವಾದ ವಿಪರೀತ ತಿಳಿವಳಿಕೆ ಎಂಬ ದೊಡ್ಡ ದೋಷವನ್ನು ದೂರ ಮಾಡಿದಂತಾಗುವುದು. ಆದುದರಿಂದ ತತ್ವ ವಿಷಯದಲ್ಲಿಯ ವಿಪರೀತ ಜ್ಞಾನ ಚಿಕ್ಕಪ್ರಮಾಣದಲ್ಲಿಯೇ ಇದ್ದರೂ ಕೆಟ್ಟ ಪರಿಣಾಮಕ್ಕೆ ಪ್ರಯೋಜಕವಾಗಿ ದೊಡ್ಡ ದೋಷ**

**ಎನಿಸಿರುವುದರಿಂದ ಅದನ್ನು ದೂರ ಮಾಡುವುದರಲ್ಲಾಗಲೀ ತಿದ್ದುವುದರಲ್ಲಾಗಲಿ ಸ್ವಲ್ಪವೂ ಸಂಕೋಚಪಡದಿರೋಣ.**

**ಸಮುಚಿತ ಗುರುದಕ್ಷಿಣೆ:** ವಾಸುದೇವ ತನ್ನ ವೇದಾಧ್ಯಾಪಕರಾಗಿದ್ದ ತೋಟಂತಿಲ್ಲಾಯರಿಗೆ ಏಕಾಂತದಲ್ಲಿ ಐತರೇಯೋಪನಿಷತ್ತಿನ ಪಾಠ ಹೇಳುವ ಮೂಲಕ ಮೋಕ್ಷಪ್ರಾಪ್ತಿಗೆ ಬೇಕಾದ ಶ್ರೀಹರಿಭಕ್ತಿ ಸಿದ್ಧಿಸುವಂತೆ ಮಾಡಿದನು.

**ಧರ್ಮ ಹಾಗೂ ಮೋಕ್ಷ ಪುರುಷಾರ್ಥಗಳಿಗೆ ಉಪಯುಕ್ತವಾಗುವಂತಹ ಗುರುದಕ್ಷಿಣೆಯನ್ನು ನೀಡಬೇಕು. ಹೊರತು ಭೌತಿಕ ಜೀವನಕ್ಕೆ ಉಪಯುಕ್ತವಾಗುವ ಒಡವೆ ವಸ್ತುಗಳನ್ನಲ್ಲ. ಆ ಬಗೆಯ ಗುರುದಕ್ಷಿಣೆಯಿಂದ ಅವರ ಉದ್ಧಾರಕ್ಕೆ ಬೇಕಾದ ಉಪಯೋಗ ದೊರಕುವುದಲ್ಲದೆ, ಅವರಲ್ಲಿ ಪಾಠ ಕೇಳಲು ಬರುವ ಜಿಜ್ಞಾಸುಗಳಿಗೂ ಆ ಗುರುದಕ್ಷಿಣೆಯ ಪ್ರಯೋಜನ ದೊರೆತಂತಾಗುವುದು.**

**ಉಪಯುಕ್ತ ವಸ್ತುಗಳಲ್ಲಿಯ ಭಗವದ್ರೂಪಗಳಿಂದ ಅನುಮತಿ:** ಸನ್ಯಾಸಾಶ್ರಮವನ್ನು ಸ್ವೀಕರಿಸಬೇಕೆಂದು ನಿರ್ಧರಿಸಿದ ವಾಸುದೇವ ಅದುವರೆಗೆ ತಾನು ಉಪಯೋಗಿಸುತ್ತಿದ್ದ ವಸ್ತುಗಳಿಗೆಲ್ಲ ನಮಸ್ಕರಿಸುತ್ತ ಅವುಗಳಲ್ಲಿರುವ ಭಗವದ್ರೂಪಗಳಿಂದ ಸನ್ಯಾಸಾಶ್ರಮಕ್ಕೆ ಅನುಮತಿ ಪಡೆದುಕೊಂಡಿದ್ದ.

**ನಮಗೆ ವಸ್ತುಗಳನ್ನು ತ್ಯಜಿಸುವ ಪ್ರಸಂಗ ಬಾರದು. ಬದಲಾಗಿ ವಸ್ತುಗಳನ್ನು ಉಪಯೋಗಿಸುತ್ತ ಇರಬೇಕಾದ ಸ್ಥಿತಿಯೇ ಇರುವುದು. ನಾವು ಉಪಯೋಗಿಸುತ್ತಿರುವ ವಸ್ತುಗಳೆಲ್ಲ ಭಗವಂತನಿಗೆ ಸೇರಿದವು. ಅವ್ಯಕ್ತತತ್ವವೇ ಮುಂತಾದ ಇಪ್ಪತ್ತನಾಲ್ಕು ತತ್ವಗಳಿಂದಾಗಿ ನಿರ್ಮಿತಗಳಾಗಿರುವ ಆಯಾ ವಸ್ತುಗಳಲ್ಲಿ ಆ ತತ್ವಗಳನ್ನು ನಿಯಂತ್ರಿಸುವ ಭಗವದ್ರೂಪಗಳಿರುವವು. ಹೀಗೆ ವಿಶ್ಲೇಷಿಸಿಕೊಂಡು ಪ್ರಕೃತಿಗೆ ಸೇರಿದ ಯಾವುದೇ ವಸ್ತುವನ್ನು ಬಳಸಿಕೊಳ್ಳುವಾಗ ಅವರಲ್ಲಿರುವ ಭಗವದ್ರೂಪವನ್ನು ನಮಿಸಿ, ಅದರ ಅನುಮತಿಯನ್ನು ಪಡೆದುಕೊಳ್ಳಬೇಕು.**

**ಈ ಪ್ರಕ್ರಿಯೆಯನ್ನು ಅಳವಡಿಸಿಕೊಳ್ಳಲಾಗದಿದ್ದಲ್ಲಿ ಇದರ ಪ್ರತಿನಿಧಿಯಾಗಿ 'ತತ್ವನ್ಯಾಸ'ವನ್ನಾದರೂ ಮಾಡಿಕೊಂಡು ಅದರಿಂದ ಈ ಅನುಸಂಧಾನವನ್ನು ಅಳವಡಿಸಿಕೊಳ್ಳೋಣ.**

**ಶುಭಕಾರ್ಯಕ್ಕೆ ಅಡ್ಡಿ ಮಾಡಬಾರದು:** ವಾಸುದೇವನ ಸಂನ್ಯಾಸಾಶ್ರಮಸ್ವೀಕಾರಕ್ಕೆ ಅವನ ತಂದೆತಾಯಿಯಂದಿರು ಅನುಮತಿಯನ್ನು ನೀಡುವುದೇ ಇಲ್ಲ. ಆದರೆ ಅವರ ಯಾವುದೇ ಬಗೆಯ ಒತ್ತಾಯಕ್ಕೂ ಮಣಿಯದ ವಾಸುದೇವ ತನ್ನ ನಿರ್ಧಾರವನ್ನು ಸ್ವಲ್ಪವೂ ಸಡಿಲಿಸುವುದಿಲ್ಲ. ಅಲ್ಲದೆ, ನಿಮ್ಮಂತಹ ವಿದ್ವಾಂಸರು ಸಂನ್ಯಾಸ ಸ್ವೀಕಾರದಂತಹ ಶುಭ ಕೆಲಸಗಳಿಗೆ ಕಲ್ಲು ಹಾಕುವ ಪ್ರವೃತ್ತಿಗೆ ಇಳಿಯಬಾರದು '**ಶುಭಾಂತರಾಯಂ ನ ಭವಾಂಶ್ಚರೇತ್**' –ಎಂದು 'ಕಿವಿಮಾತ'ನ್ನು ಹೇಳುವನು.

ಮಕ್ಕಳು ಆಧ್ಯಾತ್ಮಿಕ, ಧಾರ್ಮಿಕಸಾಧನೆಗಳಲ್ಲಿ ತೊಡಗಿದಾಗ ತಂದೆತಾಯಿಯಂದಿರು ಪುತ್ರವ್ಯಾಮೋಹಕ್ಕೊಳಗಾಗಿ ಏನೇನೋ ನೆಪವನ್ನೊಡ್ಡಿ ಹಿಮ್ಮೆಟ್ಟಿಸಲು ಯತ್ನಿಸುವುದುಂಟು.

ಆದರೆ ವ್ಯಾಮೋಹಪೂರ್ವಕವಾಗಿರುವ ಅಂತಹ ಯಾವುದೇ ವಿಚಾರಗಳಿಗೂ ಸ್ಪಂದಿಸಬಾರದು. ಅವರಿಗೆ ತಮ್ಮ ನಿಲುವನ್ನು ಸಮರ್ಥಿಸುವ ಶಾಸ್ತ್ರಸಂದೇಶಗಳನ್ನು ತಿಳಿಯಪಡಿಸಬೇಕು.

ಮುಖ್ಯವಾಗಿ ಹರಿಗುರುಗಳು ಮೆಚ್ಚುವ ಶುಭಸಾಧನೆಗಳಿಂದಾಗಿಯೇ ಮಾನವಜನ್ಮ ಸಾರ್ಥಕವೆನಿಸುವುದೆಂದ ಮೇಲೆ ಅಂತಹ ಶುಭಸಾಧನೆಗಳನ್ನು ಆದಷ್ಟು ಅಧಿಕ ಪ್ರಮಾಣದಲ್ಲಿ ನಡೆಯುವುದಕ್ಕೆ ಪ್ರೋತ್ಸಾಹ ನೀಡಬೇಕೆ ಹೊರತು ಯಾವುದೋ ತನ್ನ ಲೌಕಿಕಸ್ವಾರ್ಥದ ಹಿನ್ನೆಲೆಯಲ್ಲಿ ಅಂತಹ ಶುಭಸಾಧನೆಗೆ ಅಡ್ಡಿ ಬರುವಂತೆ ಮಾಡಬಾರದು.

**ಶುಭಕಾರ್ಯದ ವಿವೇಚನೆ:** ಸಂನ್ಯಾಸಾಶ್ರಮಸ್ವೀಕಾರದಂತಹ ಶುಭಕಾರ್ಯಕ್ಕೆ ಅಡ್ಡಿ ಮಾಡಬಾರದೆಂದು ವಾಸುದೇವ ಹೇಳಿದಾಕ್ಷಣ ನಡಿಲ್ಲಾಯರು ಆಕ್ಷೇಪಿಸುವರು– ತಂದೆ ತಾಯಿಯಂದಿರ ರಕ್ಷಣೆಯೂ ಪುತ್ರನ ಪಾಲಿಗೆ ಶುಭಕಾರ್ಯ ತಾನೇ? ಅದಕ್ಕೆ ವಾಸುದೇವನ ಸಮಾಧಾನ– 'ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್' –ಎಂಬುದಾಗಿ ಶ್ರುತಿಯಲ್ಲಿ ವ್ಯಕ್ತಿಗೆ ಯಾವ ಕ್ಷಣದಲ್ಲಿ ವಿರಕ್ತಿ ಉಂಟಾಗುವುದೋ ಆ ಕ್ಷಣದಲ್ಲೇ ಸಂನ್ಯಾಸವನ್ನು ಸ್ವೀಕರಿಸಬೇಕೆಂದು ಮಕ್ಕಳು ತಂದೆತಾಯಿಯಂದಿರನ್ನು ರಕ್ಷಿಸಬೇಕೆಂಬ ಸಾಮಾನ್ಯ ನಿಯಮಕ್ಕೆ ಅಪವಾದವಾಗಿ, ವಿಶೇಷ ನಿಯಮವಾಗಿ ವಿಧಿಸಿರುವ ಪ್ರಯುಕ್ತ ವಿರಕ್ತನಾದವನ ಪಾಲಿಗೆ ಸಂನ್ಯಾಸಾಶ್ರಮಸ್ವೀಕಾರವೇ ಮುಖ್ಯವಾದ ಶುಭ ಎನಿಸುವುದು.

ಬದುಕಿನಲ್ಲಿ ಎರಡು ಶುಭಕಾರ್ಯಗಳಿಗೆ ಪರಸ್ಪರವಾಗಿ ತಿಕ್ಕಾಟ ಬಂದಾಗ ದೇಶ ವಿಶೇಷ, ಕಾಲವಿಶೇಷ, ವ್ಯಕ್ತಿ ವಿಶೇಷಗಳಿಗೆ ಸಂಬಂಧಿಸಿದಂತೆ ಯಾವುದು ಅಧಿಕ ಮೌಲ್ಯದ 'ಶುಭ', ಯಾವುದು ಸ್ವಲ್ಪ ಕೆಳಮಟ್ಟದ 'ಶುಭ' ಎಂದು ವಿವೇಚಿಸಿಕೊಂಡು ಅಧಿಕಮಟ್ಟದ ಶುಭಕಾರ್ಯಕ್ಕೆ ಪ್ರಾಶಸ್ತ್ಯ ನೀಡಬೇಕು.

ಸಂನ್ಯಾಸಾಶ್ರಮವನ್ನು ಸ್ವೀಕರಿಸಲು ಬೇಕಾದ ವ್ಯಕ್ತಿತ್ವದಿಂದ ಕೂಡಿದವನಿಗೆ, ಆ ಆಶ್ರಮದ ಅನುಷ್ಠಾನದಿಂದಲೇ ಸಿದ್ಧಿಯಾಗುವ ಪ್ರಯುಕ್ತ ಅಂತಹವನು ತನಗೆ ವಿರಕ್ತಿ ಉಂಟಾಯಿತೆಂದಾಕ್ಷಣ ಸಂನ್ಯಾಸಾಶ್ರಮವನ್ನು ಅಳವಡಿಸಿಕೊಂಡು ಸಾಧನಾವಿಶೇಷದಲ್ಲಿ ತೊಡಗಬೇಕು. ವಿರಕ್ತಿ ಉಂಟಾದವನಿಗೆ ಸಂನ್ಯಾಸಾಶ್ರಮವನ್ನು ಅಳವಡಿಸಿಕೊಂಡಿದ್ದರಿಂದಾಗುವಷ್ಟು ಸಾಧನೆ ಇತರ ಆಶ್ರಮಗಳಲ್ಲಿ ಆಗುವುದಿಲ್ಲ. ಆದ್ದರಿಂದ ಅಂತಹವನು ತನ್ನ ಸಾಧನಾನುಷ್ಠಾನದ ಅವಕಾಶವನ್ನು ಕಡಿಮೆ ಮಾಡಿಕೊಳ್ಳುವಂತಾಗಬಾರದೆಂದು ಕೂಡಲೇ ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಕೆಂದು ಶ್ರುತಿ ಸಂದೇಶಿಸಿದೆ.

ಸಂನ್ಯಾಸಾಶ್ರಮ ಪಡೆಯಲು ಯೋಗ್ಯ ವ್ಯಕ್ತಿಗಳು ಈ ಸಂದೇಶಕ್ಕನುಗುಣವಾಗಿ ನಡೆದುಕೊಳ್ಳಲು ಯತ್ನಿಸಬೇಕು. ಅವರಿಗಿಂತ ಇತರ ವ್ಯಕ್ತಿಗಳು ಈ ಸಂದೇಶದ

ಸ್ಫೂರ್ತಿಯನ್ನು ಹೀಗೆ ಪಡೆದುಕೊಳ್ಳಬೇಕು. ಆಧ್ಯಾತ್ಮಿಕ ಧಾರ್ಮಿಕ ಸಾಧನಾನುಷ್ಠಾನಕ್ಕೆ ಪ್ರಾಶಸ್ತ್ಯ ನೀಡಬೇಕಾದ ಮಾನವಜನ್ಮದಲ್ಲಿ ಯಾರಿಗೆ ಯಾವ ಆಶ್ರಮ, ಯಾವ ಪರಿಸ್ಥಿತಿ ಸಾಧನಾನುಷ್ಠಾನಕ್ಕೆ ಅನುಕೂಲವೋ ಅಂತಹವರು ಆಯಾ ಆಶ್ರಮವನ್ನು ಪರಿಸ್ಥಿತಿಯನ್ನು ಆದಷ್ಟು ಬೇಗ ಸ್ವೀಕರಿಸಿ, ಅದರಿಂದ 'ಸಾಧನಾನುಷ್ಠಾನ'ದ ಅವಧಿಯನ್ನು, ಅವಕಾಶವನ್ನು ಹೆಚ್ಚಿಸಿಕೊಳ್ಳಬೇಕು.

**ತಂದೆತಾಯಿಯಂದಿರ ಶುಶ್ರೂಷೆಯ ವ್ಯವಸ್ಥೆ:** ವಾಸುದೇವ ತನ್ನ ತಂದೆ ತಾಯಿಯಂದಿರ ಶುಶ್ರೂಷೆಗಾಗಿ ತನ್ನ ತಮ್ಮ ಹುಟ್ಟಿದ ಬಳಿಕವೇ ತಾನು ಸಂನ್ಯಾಸಾಶ್ರಮವನ್ನು ಸ್ವೀಕರಿಸುವನು.

ತಮ್ಮನ್ನು ನಂಬಿದ್ದ ವ್ಯಕ್ತಿಗಳನ್ನು ಮಧ್ಯೇ ಕೈಬಿಟ್ಟು ಎಂತಹ ಸಾಧನೆ ನಡೆಸುವುದೂ ಉಚಿತವೆನಿಸದು. ನಂಬಿದ್ದ ವ್ಯಕ್ತಿಗಳಿಗೆ ಸರಿಯಾದ ವ್ಯವಸ್ಥೆಯನ್ನು ಮಾಡಿದ ಮೇಲೆಯೇ ಅವರಿಗೆ ಅಧಿಕ ಸಾಧನಾನುಷ್ಠಾನಕ್ಕೆ ಅರ್ಹತೆ ಸಿದ್ಧಿಸುವುದು. ಆದ್ದರಿಂದ ಬ್ರಹ್ಮಚರ್ಯದಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸುವವರು ಅದುವರೆಗೆ ತಮ್ಮನ್ನು ನಂಬಿಕೊಂಡು ಬಂದಿದ್ದ ತಂದೆತಾಯಿಯಂದಿರಿಗೆ ಮುಂದೆ ತಮ್ಮ ಅನುಪಸ್ಥಿತಿಯಲ್ಲೂ ಬದುಕಲು ಸರಿಯಾದ ವ್ಯವಸ್ಥೆಯನ್ನು ಕಲ್ಪಿಸಿಕೊಡಬೇಕಾದಂತೆ ಗೃಹಸ್ಥನಾಗಿದ್ದು ಸಂನ್ಯಾಸಾಶ್ರಮವನ್ನು ಸ್ವೀಕರಿಸುವವರು ಅದುವರೆಗೆ ತನಗೆ ಪತ್ನಿಯಾಗಿದ್ದವಳಿಗೆ ಮುಂದೆ ತನ್ನ ನೆರವಿಲ್ಲದೆ ಬದುಕಲು ಬೇಕಾದ ವ್ಯವಸ್ಥೆಯನ್ನು ಕಲ್ಪಿಸಿಕೊಡಬೇಕಾದದ್ದು ಕರ್ತವ್ಯ.

**ತಾಯಿಯ ಅನುಮತಿ:** ತನ್ನ ಸಂನ್ಯಾಸಾಶ್ರಮಸ್ವೀಕಾರಕ್ಕೆ ಅನುಮತಿ ನೀಡದಿದ್ದರೆ ನಾನು ಮನೆಯಿಂದ ಓಡಿಹೋಗಿ ಬಿಡುವೆನೆಂದು ತಾಯಿಯನ್ನು ಬೆದರಿಸಿ, ಆಕೆಯಿಂದ ವಾಸುದೇವ ತನ್ನ ಸಂನ್ಯಾಸಾಶ್ರಮ ಸ್ವೀಕಾರಕ್ಕೆ ಅನುಮತಿ ಪಡೆದುಕೊಳ್ಳುವನು.

ಸಾಧನಾಶರೀರವನ್ನು ಹೊಂದುವಲ್ಲಿ ತಾಯಿಯ ಪಾತ್ರ ಬಹಳ ದೊಡ್ಡದು. ಆದುದರಿಂದ ಅಂತಹ ಸಾಧನಾಶರೀರದ ಮೂಲಕ ಯಾವುದೇ ಸಾಧನೆ ನಡೆಸುವಾಗಲೂ ಅದಕ್ಕೆ ತಾಯಿಯ ಅನುಮತಿ ಬೇಕೇ ಬೇಕು. ಒಂದೊಮ್ಮೆ ಆ ಅನುಮತಿ ಅನಾಯಾಸವಾಗಿ ದೊರಕುವುದಿಲ್ಲ ಎಂದಲ್ಲಿ ಯಾವುದಾದರೂ ಬಲಾತ್ಕಾರದ ಪ್ರಯೋಗದಿಂದಾದರೂ ಅದನ್ನು ಸಂಪಾದಿಸಿಕೊಳ್ಳಬೇಕು.

**ಗುರುಗಳನ್ನು ಸಂತೋಷಪಡಿಸಿ, ಸಂನ್ಯಾಸದ ಸ್ವೀಕಾರ:** ಅಚ್ಯುತಪ್ರೇಕ್ಷಾಚಾರ್ಯರಲ್ಲಿಗೆ ತೆರಳಿದ ವಾಸುದೇವ ಅವರನ್ನು ಸೇವೆ, ಪ್ರಣಾಮಾದಿಗಳಿಂದ ಸಂತೋಷಪಡಿಸಿ 'ಪ್ರಸಾದ್ಯ' – ಅವರಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದನು.

ಗುರುಗಳು ಪ್ರಸನ್ನಚಿತ್ತರಾಗಿ ನೀಡುವ ವಿದ್ಯೆಯೇ ಶಿಷ್ಯನ ಪಾಲಿಗೆ ವೀರ್ಯವತ್ತರವಾಗುವುದೆಂದು ಇರುವಂತೆ ಪ್ರಣವಮಂತ್ರೋಪದೇಶಾದಿ ಅಂಗಗಳನ್ನೊಳಗೊಂಡ ಸಂನ್ಯಾಸಾಶ್ರಮವೂ ಗುರುಗಳಿಂದ ಪ್ರಸನ್ನಚಿತ್ತರಾಗಿದ್ದುಕೊಂಡೇ ನೀಡಲ್ಪಡಬೇಕು. ಆಗಷ್ಟೇ ಅದು ಹೆಚ್ಚು ಫಲಪ್ರದವಾಗುವುದು. ಇದರಂತೆ ತಂದೆಯಾದವನು ಮಗನಿಗೆ ಉಪನಯನದ ಮೂಲಕ ಬ್ರಹ್ಮಚರ್ಯ ಆಶ್ರಮವನ್ನು ನೀಡುವಾಗಲೂ ಪ್ರಸನ್ನಚಿತ್ತ

ನಾಗಿ ಇರಬೇಕು. ಆದುದರಿಂದಲೇ ತನ್ನ ಚಿತ್ತಪ್ರಸಾದಕ್ಕೆ ಬಾಧಕಗಳಾಗುವ ಕಾರ್ಯಕ್ರಮಗಳನ್ನು ಉಪನಯನದಂದು ಆಯೋಜಿಸಿಕೊಳ್ಳಬಾರದು.

**ಪ್ರಸನ್ನ ಭಗವಂತನ ಪ್ರಸಾದವಿಶೇಷಕ್ಕಾಗಿ ಸಾಧನೆ:** ವಾಸುದೇವ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದ ಉದ್ದೇಶವನ್ನು ಹೀಗೆ ತಿಳಿಸಲಾಗಿದೆ– ಯಾವಾಗಲೂ ಪ್ರಸನ್ನನಾಗಿಯೇ ಇರುವ ಭಗವಂತನ ಪ್ರಸಾದವಿಶೇಷಕ್ಕಾಗಿಯಷ್ಟೇ ಸಂನ್ಯಾಸವನ್ನು ಸ್ವೀಕರಿಸಿದರು.

ಸ್ನಾನ, ಸಂಧ್ಯಾವಂದನೆ, ಪೂಜೆ -ಹೀಗೆ ಪ್ರತಿಯೊಂದು ಸಾಧನೆಯ ಉದ್ದೇಶವೂ 'ತದ್‌ಭಕ್ತಿಸ್ತತ್ಫಲಂ ಮಹ್ಯಂ ತತ್‌ಪ್ರಸಾದಃ ಪುನಃಪುನಃ' ಎಂದು 'ಬ್ರಹ್ಮತರ್ಕ' ತಿಳಿಸುವಂತೆ ಅವನ ಬಗ್ಗೆ ಭಕ್ತಿ ಅವನ ಅನುಗ್ರಹ ಇವು ಮತ್ತೆ ಮತ್ತೆ ಆಗಬೇಕೆಂಬುದೇ ಪೂಜೆ ಇತ್ಯಾದಿ ಸಾಧನೆಗಳ ಉದ್ದೇಶ.

ಭಗವಂತನ ಅನುಗ್ರಹ ಆಗಬೇಕೆಂದರೆ ಅವನು ಪ್ರಸನ್ನನಾಗಬೇಕು, ಸಂತುಷ್ಟನಾಗಬೇಕು. ಯಾವಾಗಲೂ ಸ್ವರೂಪಾನಂದದಿಂದಲೇ ಪ್ರಸನ್ನನಾಗಿರುವ ಭಗವಂತನು ನಮ್ಮ ಚಿಕ್ಕಪುಟ್ಟ ಸಾಧನೆಗಳಿಂದ ಪ್ರಸನ್ನನಾಗುವುದೆಂದರೇನು? ಭಕ್ತವತ್ಸಲನಾದ ಭಗವಂತನು ಭಕ್ತರ ಸಾಧನೆಗನುಗುಣವಾಗಿ ಅನುಗ್ರಹಿಸಿ, ಫಲ ನೀಡಬೇಕೆಂದು, ಅಂತಹ ಅನುಗ್ರಹಕ್ಕೆ ಪ್ರಯೋಜಕವಾಗಿ ಆನಂದಾತಿಶಯವನ್ನು ತನ್ನಲ್ಲಿ ಅಳವಡಿಸಿಕೊಳ್ಳುವನು. ಶ್ರೀ ಮಧ್ವರು ತಮ್ಮ ಸಂನ್ಯಾಸಾಶ್ರಮ ಸ್ವೀಕಾರ ಸಾಧನೆಗೆ ಭಗವಂತನಲ್ಲಿ ಈ ಫಲವನ್ನೇ ಬೇಡಿದ್ದು ನಾವು ಕೂಡಾ ನಮ್ಮ ಪ್ರತಿಯೊಂದು ಸಾಧನೆಗೂ 'ಪ್ರೀಯತಾಂ ಪ್ರೀತ ಏವಾಲಂ' ಎಂದಿರುವಂತೆ ಭಗವಂತನ ಈ ಬಗೆಯ ಫಲವನ್ನೇ ಬೇಡೋಣ.

**ಗುರುಹಿರಿಯರಿಗೆ ಪ್ರಣಾಮ:** ಸಂನ್ಯಾಸವನ್ನು ಸ್ವೀಕರಿಸಿದ ಶ್ರೀ ಮಧ್ವಗುರುಗಳು ಯೋಗ್ಯತೆಯಲ್ಲಿ ತಮಗಿಂತ ಕನಿಷ್ಠರಾಗಿದ್ದವರಾಗಿದ್ದರೂ ಲೋಕದ ದೃಷ್ಟಿಯಲ್ಲಿ ಗುರುಹಿರಿಯರಾಗಿದ್ದ ಪ್ರಯುಕ್ತ ಅಚ್ಯುತಪ್ರೇಕ್ಷಾಚಾರ್ಯರೇ ಮುಂತಾದ ಯತಿಗಳನ್ನು ನಮಿಸಿದ್ದರು. ಲೋಕಮರ್ಯಾದಾ ದೃಷ್ಟಿಯಿಂದ ಹಿರಿಯ ಬಂಧುಗಳಾದ ಧೃತರಾಷ್ಟ್ರಾದಿಗಳಿಗೆ ನಮಸ್ಕರಿಸುತ್ತಿದ್ದ ಭೀಮಸೇನ ಹೇಗೆ ಅವರಲ್ಲಿ ಶ್ರೀವಿಷ್ಣುವನ್ನೇ ಗಮನಿಸಿ ನಮಸ್ಕರಿಸುತ್ತಿದ್ದನೋ ಹಾಗೆಯೇ ಶ್ರೀಮಧ್ವರೂ ಅಚ್ಯುತಪ್ರೇಕ್ಷಾಚಾರ್ಯರೇ ಮುಂತಾದ ಯತಿಗಳಲ್ಲಿ ಭಗವಂತನನ್ನು ಗಮನಿಸಿ ನಮಿಸುತ್ತಿದ್ದರು.

ವಿತ್ತ, ಬಾಂಧವ್ಯ ವಯಸ್ಸು, ಕರ್ಮ ಹಾಗೂ ವಿದ್ಯೆ -ಈ ಐದು ಮಾನ್ಯತೆಗೆ ಮಾಪಕಗಳೆಂದು ಪರಿಗಣಿಸಲ್ಪಟ್ಟಿರುವುದರಿಂದ ಕರ್ಮ, ವಿದ್ಯೆಗಳ ಅಂಶಗಳಿಂದ ಕನಿಷ್ಠರಾಗಿರುವವರಾದರೂ ವಯಸ್ಸು ಮತ್ತು ಬಾಂಧವ್ಯ ಅಂಶಗಳಿಂದ ಜ್ಯೇಷ್ಠರಾಗಿರುವರೆಂದರೆ ಲೋಕಮರ್ಯಾದಾದೃಷ್ಟಿಯಿಂದ ಅಂತಹವರಿಗೂ ಗೌರವವನ್ನು ಅರ್ಪಿಸಲು ಹಿಂಜರಿಯದಿರೋಣ. ಅಂತಹವರ ವ್ಯಕ್ತಿತ್ವವನ್ನು ರೂಪಿಸುವ ಭಗವಂತನ ವಿವೇಚನೆಯೊಂದಿಗೆ ಅವರನ್ನು ನಮಿಸಿದೆವೆಂದರೆ ಅದು ಮತ್ತಷ್ಟು ಫಲಪ್ರದವೆನಿಸಬಲ್ಲದು.

**ಬುಧೋऽಭಿಧಾನಂ.........ಧ್ರುವಂ ವಿದಧ್ಯಾತ್:** ಶ್ರೀಮಧ್ವಗುರುಗಳಿಗೆ ಸತ್ಸಿದ್ಧಾಂತವನ್ನು ಸ್ಥಾಪಿಸುವ ಮೊದಲೇ ಅದ್ವೈತಮತದ ಅಸ್ವಾರಸ್ಯ ತಿಳಿದೇ ಇತ್ತು. 'ಆದರೂ ತಿಳಿದ ವಿದ್ವಾಂಸ ಶಾಸ್ತ್ರ ಹೇಳುವುದನ್ನು, ವಿದ್ವಾಂಸನಲ್ಲದ ಸಾಧಕ ಶಾಸ್ತ್ರಶ್ರವಣವನ್ನು ನಿಯತವಾಗಿ ನಡೆಸಲೇಬೇಕು. ಯತಿಗಳಂತೂ ಇನ್ನಷ್ಟು ವಿಶೇಷವಾಗಿ ಇವನ್ನು ಮಾಡಬೇಕು' ಎಂದು ಮೋಕ್ಷೇಚ್ಛುಗಳಿಗೆ ಜ್ಞಾಪಿಸಿಕೊಡುವುದಕ್ಕಾಗಿಯಷ್ಟೇ ಸತ್ಸಿದ್ಧಾಂತ ಸ್ಥಾಪನೆಯ ಮುಂಚೆ ಮಾಯಾಮತದ ಕುರಿತು ಪಾಠ ಪ್ರವಚನ ನಡೆಸುತ್ತಿದ್ದರಷ್ಟೇ.

ನಾವು ಕೂಡಾ ಹೇಳುವ ಮಹನೀಯರಿದ್ದರೆ ಅವರಿಂದ ಶಾಸ್ತ್ರಶ್ರವಣ ಮಾಡುತ್ತಿರೋಣ. ಹೇಳುವವರಿಲ್ಲದೆ, ಯೋಗ್ಯರಾದ ಕೇಳುವವರಿದ್ದರೆ ಅವರಿಗೆ ಶಾಸ್ತ್ರದ ಪಾಠ ಪ್ರವಚನ ನಡೆಸುತ್ತಿರೋಣ. ಹೀಗೆ 'ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಂ' ಶಾಸ್ತ್ರಚಿಂತನೆ ಹಾಗೂ ಪ್ರವಚನಗಳ ವಿಷಯದಲ್ಲಿ ಎಂದೂ ತಿಳಿಗೇಡಿತನ ತಾಳಬಾರದೆಂಬ ಉಪನಿಷತ್ತಿನ ಆದೇಶವನ್ನು ಆದಷ್ಟು ಪಾಲಿಸೋಣ. ನಮಗೆ ಸಚ್ಛಾಸ್ತ್ರದ ಸೌಲಭ್ಯ ಇರುವುದರಿಂದ ದುಃಶಾಸ್ತ್ರದ ಪಾಠಪ್ರವಚನ ನಡೆಸುವ ಅನಿವಾರ್ಯತೆ ಇಲ್ಲ. ಆದುದರಿಂದ ಪೂರ್ವಪಕ್ಷದ ದೃಷ್ಟಿಯಿಂದಷ್ಟೇ ಮಾಯಾಮತಾದಿಗಳ ಚಿಂತನೆ, ಪ್ರವಚನಗಳನ್ನು ನಡೆಸೋಣ.

**ಮೂಲಗ್ರಂಥಕ್ಕೂ ವ್ಯಾಖ್ಯಾನಗ್ರಂಥಗಳಿಗೂ ಅನ್ಯೋನ್ಯತೆ:** ಶ್ರೀಮಧ್ವರು ಒಮ್ಮೆ ಬ್ರಹ್ಮಸೂತ್ರದ ಶಾಂಕರಭಾಷ್ಯದ ಪಾಠ ಮಾಡುತ್ತಿದ್ದಾಗ, ಯಾವುದೇ ಪೂರ್ವಾಗ್ರಹಕ್ಕೊಳಗಾಗದೆ ಬ್ರಹ್ಮಸೂತ್ರಗಳನ್ನೂ ಅವುಗಳ ಬಗ್ಗೆ ಹೊರಟ ಶಾಂಕರಭಾಷ್ಯವನ್ನೂ ಪರಿಶೀಲಿಸಿದಾಗ ಅವೆರಡಕ್ಕೆ ಅನ್ಯೋನ್ಯತೆಯೇ ಕಾಣುವುದಿಲ್ಲ ಎಂದು ನಗುತ್ತ ತಿಳಿಸಿದರು.

ಮೊತ್ತ ಮೊದಲೇ ವ್ಯಾಖ್ಯಾನಗ್ರಂಥವನ್ನೇ ಆಧರಿಸಿಕೊಂಡು ಅದರ ಬೆಳಕಿನಲ್ಲಿಯೇ ಪಾಠ ನಡೆಸುವ ಕ್ರಮವನ್ನು ಬದಲಾಯಿಸಿಕೊಂಡು ಮೊದಲು ಮೂಲಗ್ರಂಥದ ಆಂತರ್ಯವನ್ನೇ ತಿಳಿಸಲು ಹೊರಟು, ಆ ನಿಟ್ಟಿನಲ್ಲಿ ಅವಶ್ಯವೆನಿಸಿದಾಗಷ್ಟೇ ವ್ಯಾಖ್ಯಾನ ಗ್ರಂಥವನ್ನು ಆಶ್ರಯಿಸುವ ಕ್ರಮವನ್ನು ಅಳವಡಿಸಿಕೊಳ್ಳಬೇಕು ಎಂಬುದು ಶ್ರೀ ಮಧ್ವರ ಈ ಬಗೆಯ ಪ್ರತಿಕ್ರಿಯೆಯಿಂದ ಸೂಚಿತವಾಗುವುದು. ಬ್ರಹ್ಮಸೂತ್ರಕ್ಕೂ ಶಾಂಕರ ಭಾಷ್ಯಕ್ಕೂ ಅನ್ಯೋನ್ಯತೆ ಕಂಡುಬರುವುದಿಲ್ಲ ಎನ್ನುವ ಮಧ್ವರ ಪ್ರಕಾರ ವ್ಯಾಖ್ಯಾನ ಗ್ರಂಥಗಳ ಗ್ರಾಹ್ಯತೆ ಮೂಲಗ್ರಂಥಗಳನ್ನು ಅವು ಎಷ್ಟರ ಮಟ್ಟಿಗೆ ಅನುಸರಿಸಿವೆ ಎಂಬುದರ ಮೇಲೆ. ಆದ್ದರಿಂದ ಈ ಮಾನದಂಡದ ಆಧಾರದಲ್ಲಿಯೇ ವ್ಯಾಖ್ಯಾನಗ್ರಂಥಗಳನ್ನು ಅವಲಂಬಿಸೋಣ.

**ಗುಣಾಂಶಕ್ಕಷ್ಟೇ ಸ್ವೀಕಾರ:** ಶ್ರೀ ಮಧ್ವರಿಗೂ ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರಿಗೂ ಒಮ್ಮೆ ವಿವಾದ ಉಂಟಾದಾಗ ಅಚ್ಯುತಪ್ರೇಕ್ಷಾಚಾರ್ಯರು ನಿಮಗೆ ಸೂತ್ರದ ಸರಿಯಾದ ಅರ್ಥ ಗೊತ್ತಿದ್ದರೆ ಉತ್ತಮ ಭಾವವನ್ನು ರಚಿಸಿ ನೋಡೋಣ ಎಂದು ಆಕ್ಷೇಪಿಸಿದರು.

ಗುರುಗಳ ಈ ಆಕ್ಷೇಪದಲ್ಲಿ 'ಭಾಷ್ಯವನ್ನು ರಚಿಸಿ' ಎಂಬ ಗುಣಾಂಶವನ್ನಷ್ಟೇ ಮಧ್ವರು ಸ್ವೀಕರಿಸಿ ಆ ನಿಟ್ಟಿನಲ್ಲಿ ಯತ್ನಿಸಲು ತೊಡಗಿದರು. ಆಕ್ಷೇಪದ ಉಳಿದ ಅಂಶದ ಬಗ್ಗೆ ಗಮನವನ್ನೇ ಹರಿಸಿಲ್ಲ.

ಗುರುಹಿರಿಯರಿಂದ ಹೀಗೆ ಎಂದಾದರೂ ಬೈಸಿಕೊಳ್ಳದೇ ಆಕ್ಷೇಪಿಸಿಕೊಳ್ಳಬೇಕಾದ ಪ್ರಸಂಗ ಬಂದರೆ ಆ ಬಗ್ಗೆ ತೀವ್ರ ಅಸಮಾಧಾನಕ್ಕೊಳಗಾಗುವ ಬದಲು ಅವುಗಳಲ್ಲಿಯ ಗುಣಾಂಶವನ್ನಷ್ಟೇ ಸ್ವೀಕರಿಸೋಣ. ಉಳಿದ ಅಂಶದ ಬಗ್ಗೆಯೂ ಗಮನಹರಿಸಿದಲ್ಲಿ ಅದಕ್ಕಾಗಿ ಮನಸ್ಸು ಕಲುಷಿತಗೊಂಡು ಸಾಧನಾನುಷ್ಠಾನಕ್ಕೆ ತೊಂದರೆ ಬರುವುದೇ ಹೊರತು ಮತ್ತೇನನ್ನೂ ಸಾಧಿಸಿದಂತಾಗುವುದಿಲ್ಲ.

**ಗುಣಧರ್ಮಾಭಿವ್ಯಕ್ತಿಯಲ್ಲಿ ವಿಶ್ವೇಶನ ಪಾತ್ರಾನುಸಂಧಾನ:** ವಿಷ್ಣುಮಂಗಲದಲ್ಲಿ ಭಿಕ್ಷೆ ಮುಗಿದ ಬಳಿಕ ತಂದುಕೊಟ್ಟ ಬಾಳೆಹಣ್ಣುಗಳ ರಾಶಿಯನ್ನೇ ಅನಾಯಾಸವಾಗಿ ತಿಂದ ಶ್ರೀಮಧ್ವರು ಆ ವಿಷಯದಲ್ಲಿ ತಮ್ಮನ್ನು ವಿಚಾರಿಸಿದ ಅಚ್ಯುತಪ್ರೇಕ್ಷಾಚಾರ್ಯರಿಗೆ ತನ್ನ ಜಠರದಲ್ಲಿ ಹೆಬ್ಬೆರಳ ಗಾತ್ರದಲ್ಲಿರುವ ಬೆಂಕಿಯನ್ನು 'ವಿಶ್ವೇಶಚೇತಸ್ಕ'ರಾಗಿ ಅಂದರೆ ಭಗವಂತನನ್ನು ನೆನೆಯುತ್ತ ಅವನ ಅನುಗ್ರಹದಿಂದ ಸಿದ್ಧಿಸಿರುವಂತಹದೆಂಬ ಅನುಸಂಧಾನ ಪೂರ್ವಕವಾಗಿ ತಿಳಿಸುವರು.

**ನಮ್ಮಲ್ಲಿ ಹರಿಗುರುಗಳ ಅನುಗ್ರಹದಿಂದ ಯಾವುದಾದರೂ ಗುಣ, ಧರ್ಮ ವಿಶೇಷದ ಸಿದ್ಧಿ ಇದ್ದರೆ ಅದನ್ನು ಅಭಿಮಾನಪೂರ್ವಕವಾಗಿ ಸಹೃದಯರಿಗೆ ಪರಿಚಯಿಸಿ ಕೊಡೋಣ. ಆದರೆ ಅದರ ಅಭಿವ್ಯಕ್ತಿಯಲ್ಲಿ ಭಗವಂತನ ಅನುಗ್ರಹದ ಪಾತ್ರವಿದೆ ಎಂಬುದನ್ನು ಮರೆಯದಿರೋಣ.**

**ಆಯಾ ಕ್ಷೇತ್ರದಲ್ಲಿ ನಡೆದ ಘಟನೆಗಳ ಸ್ಮರಣೆ:** ಶ್ರೀ ಮಧ್ವರು ದಕ್ಷಿಣ ದಿಗ್ವಿಜಯದ ಅಂಗವಾಗಿ ಪಯಸ್ವಿನೀನದಿಯ ಸಮೀಪಕ್ಕೆ ಹೋದಾಗ ಮುಂದೆ ಅದರ ತೀರದಲ್ಲಿ ದುರ್ಗಾದೇವಿ ಅವತರಿಸುವಳೆಂಬುದನ್ನು ಸ್ಮರಿಸಿಕೊಂಡರು.

**ಆಯಾ ಕ್ಷೇತ್ರಕ್ಕೆ ಯಾತ್ರೆಗಾಗಿ ಹೋಗುವಾಗ ಅಲ್ಲಿಯ ಭಗವದ್ರೂಪದ ದರ್ಶನಾದಿಗಳನ್ನು ಮಾಡಬೇಕಾದಂತೆ ಆ ಕ್ಷೇತ್ರದಲ್ಲಿ ಭಗವಂತನಿಗೆ ಅಥವಾ ಅವನ ಭಕ್ತರಿಗೆ ಸಂಬಂಧಿಸಿ ಏನಾದರೂ ಘಟನೆ ನಡೆದಿದ್ದರೆ ಅವನ್ನು ಸ್ಮರಿಸಿಕೊಳ್ಳಲೇಬೇಕು. ಆ ಘಟನೆ ಅಲ್ಲಿಯೇ ನಡೆಯಲು ಆ ಕ್ಷೇತ್ರದ ಪ್ರಭಾವವೂ ಕಾರಣವೆನಿಸುವುದರಿಂದ ಆ ಘಟನೆಯೂ ಕ್ಷೇತ್ರದ ಹಿರಿಮೆಯ ವ್ಯಾಪ್ತಿಯಲ್ಲಿಯೇ ಬರುವುದು.**

**ಸಭೆಯಲ್ಲಿ ಶಿಷ್ಯರನ್ನುದ್ದೇಶಿಸಿ ಸೂತ್ರ ಪ್ರವಚನ:** ಶ್ರೀಮಧ್ವರು ದಕ್ಷಿಣದಿಗ್ವಿಜಯದ ಅಂಗವಾಗಿ ತಿರುವನಂತಪುರದ ಶ್ರೀಪದ್ಮನಾಭ ದೇವಾಲಯಕ್ಕೆ ಹೋಗಿ ಅಲ್ಲಿ ಪದ್ಮನಾಭ ನಿಗೆ ವಂದಿಸಿದವರೇ ಅಲ್ಲಿ ನೆರೆದಿದ್ದ ಸಭೆಯಲ್ಲಿ ಶಿಷ್ಯರನ್ನು ಕುರಿತು ಬ್ರಹ್ಮಸೂತ್ರಗಳ ವಿವರಣೆಯನ್ನು ಮಾಡಿದರು.

ಅನಂತಪದ್ಮನಾಭನಿಗೆ ಇಷ್ಟವಾದ ಕಾಣಿಕೆಯಾಗಿ ನಿರ್ಣಾಯಕಗ್ರಂಥಗಳಲ್ಲೇ ಶ್ರೇಷ್ಠ ವಾದ ಬ್ರಹ್ಮಸೂತ್ರಗಳ ಪ್ರವಚನವನ್ನು ನಡೆಸಿದರು.

**'ತೇಷ್ವಯೋಗ್ಯೇಷು ತತ್ತ್ವಜ್ಞಃ ತತ್ತ್ವಂ ನಾತಿಪ್ರಕಾಶಯೇತ್'** ತತ್ತ್ವಜ್ಞಾನಿ ಅಯೋಗ್ಯ ರೆದುರು ತತ್ತ್ವವನ್ನು ಪ್ರಕಟಗೊಳಿಸಬಾರದೆನ್ನುವ ಪ್ರಕಾಶ ಸಂಹಿತೆ (ಗೀ.ತಾ. 3-30)

'ಸಭಾರೂಪೇಣ ವಾ ಬ್ರೂಯಾತ್......' ಎಂದು ಸಭೆಯಲ್ಲಿ ತತ್ತ್ವವನ್ನು ಪ್ರಕಟಿಸ ಬಹುದೆಂದು ಒಪ್ಪಿಕೊಂಡಿದೆ. ಆದರೆ ಯೋಗ್ಯರೂ ಅಯೋಗ್ಯರೂ ಸೇರಿರುವ ಸಭೆಯಲ್ಲಿ ಯೋಗ್ಯರಿಗಷ್ಟೇ ತತ್ತ್ವಜ್ಞಾನ ತಲುಪಲಿ ಎಂಬ ಅನುಸಂಧಾನ ಇಟ್ಟುಕೊಂಡು ತತ್ತ್ವವನ್ನು ಪ್ರಕಟಿಸಬೇಕೆಂಬ ನಿಯಮಕ್ಕನುಗುಣವಾಗಿ ಶ್ರೀಮಧ್ವರು ತಿರುವನಂತಪುರದ ಸಭೆಯಲ್ಲಿ ಸೂತ್ರದ ಆಂತರ್ಯವನ್ನು ಸ್ಪಷ್ಟಪಡಿಸುವಾಗ ಯೋಗ್ಯರಾದ ತಮ್ಮ ಶಿಷ್ಯರಿಗಷ್ಟೇ ತತ್ತ್ವಜ್ಞಾನ ತಲುಪಲಿ ಎಂಬ ಅನುಸಂಧಾನ ಇಟ್ಟುಕೊಂಡಿದ್ದರೆಂಬ ಸೂಚನೆಗಾಗಿ ಮಧ್ವ ವಿಜಯದಲ್ಲಿ 'ವ್ಯಾಖ್ಯಾದಸೌ ಶಿಷ್ಯಗಣಾಯ ಸಂಸದಿ' ಎಂಬುದಾಗಿ ಸಭೆಯಲ್ಲೂ ಶಿಷ್ಯಸಮೂಹವನ್ನುದ್ದೇಶಿಸಿ ಸೂತ್ರದ ಆಂತರ್ಯವನ್ನು ಪ್ರಕಟಿಸಿದರೆಂದು ನಿರೂಪಿಸ ಲಾಗಿದೆ.

**ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ಅನಿವಾರ್ಯವಾಗಿ ಸೂತ್ರ, ಉಪನಿಷತ್ತು, ವೇದ ಮುಂತಾದವುಗಳ ಸಂದೇಶವನ್ನು ಹೇಳಬೇಕಾದ ಪ್ರಸಂಗ ಬಂದರೆ ಆ ಸಭೆ ಸಮಾರಂಭಗಳಲ್ಲಿರುವ ಯೋಗ್ಯರಿಗಷ್ಟೇ ತತ್ತ್ವಜ್ಞಾನ ತಲುಪುವಂತಾಗಲೆಂಬ ಅನು ಸಂಧಾನವಿಟ್ಟಕೊಂಡು ಆ ಸಭೆ ಸಮಾರಂಭದಲ್ಲಿಯ ಯೋಗ್ಯರನ್ನಷ್ಟೇ ಗಮನಿಸಿ ಪ್ರವಚನ ನೀಡೋಣ.**

**ಇತರ ದೇವಾಲಯುಗಳಲ್ಲೂ ಪರಮಪುರುಷನಿಗೇ ಪ್ರಣಾಮ:** ದಕ್ಷಿಣದಿಗ್ವಿಜಯ ವನ್ನು ಮುಗಿಸಿದ ಶ್ರೀಮಧ್ವರು ಉಡುಪಿಯ ಆಸುಪಾಸಿನ ಹಳ್ಳಿಗಳಲ್ಲಿಯ ಸುಬ್ರಹ್ಮಣ್ಯ, ದುರ್ಗೆ, ಗಣಪತಿ ಹೀಗೆ ಬೇರೆಬೇರೆ ದೇವತೆಗಳ ಆಲಯಗಳಿಗೆ ಸಂಚರಿಸುತ್ತ, ಅಲ್ಲಿ ಆಯಾ ದೇವತಾಂತರ್ಯಾಮಿ ಪರಮಪುರುಷನನ್ನೇ ನಮಿಸುತ್ತಿದ್ದರು.

**ನಾವು ಕೂಡಾ ಇತರ ದೇವತೆಗಳ ಮಂದಿರಗಳಿಗೆ ಹೋದಾಗಲೂ 'ಗೋಲಕ ತ್ರಯ' ಚಿಂತನೆ ನಡೆಸಿ, ಅಂದರೆ ಆ ಪ್ರತಿಮೆಯೊಳಗೆ ಆ ದೇವತೆ, ಅವನೊಳಗೆ ತೇಜೋರೂಪ ವಾಯುದೇವ, ಅವನೊಳಗೆ ಆ ದೇವತೆಯ ಬಿಂಬರೂಪಿ ಪರಮಾತ್ಮ ಇರುವನೆಂದು ಚಿಂತನೆ ನಡೆಸಿ ಸ್ತುತಿಸೋಣ, ನಮಿಸೋಣ.**

**ಗೀತಾಧ್ಯಯನದಿಂದ ವಿರಹ ದುಃಖದ ಉಪಶಮನ:** ಬದರಿಯಾತ್ರೆಗೆ ಹೊರಟ ಮಧ್ವರು ತಮ್ಮ ವಿರಹದ ನೋವನ್ನು ತಮ್ಮ ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರೂ, ಜ್ಯೇಷ್ಠ ಯತಿಗಳೂ ಸಹಿಸಿಕೊಳ್ಳಲು ಪ್ರಯೋಜಕವಾಗುವಂತೆ ಗೀತಾಭಾಷ್ಯವನ್ನು ರಚಿಸಿ ಕೊಡುವರು.

ಅರ್ಜುನನ ಬಾಂಧವವ್ಯಾಮೋಹಪ್ರಯುಕ್ತವಾದ ಶೋಕವನ್ನು ದೂರ ಮಾಡಲು ಹೊರಟ ಭಗವದ್ಗೀತೆಯಲ್ಲಿ ಅಂತಹ ಬಾಂಧವವ್ಯಾಮೋಹಪ್ರಯುಕ್ತವಾಗಿ ಕಾಣಿಸಿ ಕೊಳ್ಳುವ ಬಂಧುವಿರಹದುಃಖವನ್ನು ದೂರಮಾಡುವ ಸಾಮರ್ಥ್ಯ ಇದೆ. ಗೀತೆಯನ್ನು ಸರಿಯಾಗಿ ಅರ್ಥೈಸಿಕೊಂಡರಷ್ಟೇ ಅದರ ಆ ಸಾಮರ್ಥ್ಯ ಅಭಿವ್ಯಕ್ತವಾಗಬಲ್ಲದು. ಅದಕ್ಕಾಗಿ ಶ್ರೀಮಧ್ವರು ಗೀತಾಭಾಷ್ಯವನ್ನು ರಚಿಸಿಕೊಟ್ಟು ಅಚ್ಯುತಪ್ರೇಕ್ಷಾಚಾರ್ಯರೂ ಜ್ಯೇಷ್ಠಯತಿ ಗಳೂ ತಮ್ಮ ವಿರಹದುಃಖವನ್ನು ಪರಿಹರಿಸಿಕೊಳ್ಳುವಂತೆ ಮಾಡಿರುವರು.

ಆದುದರಿಂದ ಅನೇಕ ರೀತಿಗಳಿಂದ ಸಂಭವಿಸಬಹುದಾದ ಬಂಧುಗಳ ವಿರಹ ದುಃಖವನ್ನು ತತ್ತ್ವಜ್ಞಾನಸಂಪಾದನೆಯಿಂದಲೇ ಪರಿಹರಿಸಿಕೊಳ್ಳೋಣ. ಅದೂ ಭಗವದ್ ಗೀತೆಯ ಮಾಧ್ಯಮದಲ್ಲೇ ತತ್ತ್ವಜ್ಞಾನವನ್ನು ಗಳಿಸಿಕೊಳ್ಳಲು ಯತ್ನಿಸೋಣ. ಮಧ್ವ ಗುರುಗಳ ಗೀತಾಭಾಷ್ಯದ ಬೆಳಕಿನಲ್ಲೇ ಭಗವದ್ಗೀತೆಯಿಂದ ತತ್ತ್ವಜ್ಞಾನದ ಬೆಳಕನ್ನು ಪಡೆದುಕೊಳ್ಳೋಣ.

**ಭಗವದ್ರಕ್ಷಣೆಯ ಚಿಂತನೆಯೊಂದಿಗೆ ಅನುಮತಿ:** ಬದರಿಯಾತ್ರೆಗೆ ತೆರಳಲು ಶ್ರೀ ಮಧ್ವರು ಗುರುಗಳಲ್ಲಿ ಅನುಮತಿಯನ್ನು ಕೇಳಲು ಅವರು ಭಗವಂತನ ರಕ್ಷಣೆಯನ್ನು ಯೋಚಿಸುತ್ತ ಅನುಮತಿಯನ್ನು ನೀಡಿದರು.

ತೀರ್ಥಯಾತ್ರೆಯೇ ಮುಂತಾದ ಯಾವುದೇ ಸಾಧನೆಗೆ ಕಿರಿಯರು ಹಿರಿಯರಲ್ಲಿ ಅನುಮತಿ ಕೇಳಿದಾಗ ಭಗವಂತನ ಸ್ಮರಣೆಯೊಂದಿಗೇ ಅನುಮತಿಯನ್ನು ನೀಡಬೇಕು. ತನ್ನ ಅನುಮತಿ ಆ ವ್ಯಕ್ತಿಯ ಸಾಧನಾನುಷ್ಠಾನಕ್ಕೆ ಮೆರುಗು ನೀಡಬೇಕೆಂದರೆ ಅದರಲ್ಲಿ ಭಗವಂತನ ಅನುಗ್ರಹ ತುಂಬಿದ್ದಿರಬೇಕು. ಅದಕ್ಕಾಗಿಯೇ ಅವನನ್ನು ಸ್ಮರಿಸುತ್ತಿರಬೇಕು. ಸಾಧನಾನುಷ್ಠಾನಕ್ಕಾಗಿ ಅನುಮತಿಯನ್ನು ಕೇಳಿದಾಗ 'ಓಂ' ಕಾರದೊಂದಿಗೆ ಅನುಮತಿ ಯನ್ನು ನೀಡುವ ಕ್ರಮವೂ ಈ ಹಿನ್ನೆಲೆಯಲ್ಲಿಯೇ ಬಂದಿರುವಂತಹದ್ದು-

ತಸ್ಮಾದೋಮಿತ್ಯನುಜ್ಞಾನಂ ಕುರ್ವಂತ್ಯೇತೇ ಜನಾಃ ಸದಾಃ ।
ತ್ವದುಕ್ತಂ ತತ್ ತಥಾ ಕುರ್ಯಾದ್ಭಗವಾನೇವ ಕೇಶವಃ ।
ಇತ್ಯಭಿಪ್ರಾಯತಃ ಶಬ್ದಃ ಪ್ರವೃತ್ತಃ ಸ ಪುರಾತನೈಃ ॥ (ಭಾ.1-1-4)

ಓಂಕಾರವಾಚ್ಯನಾದ ಭಗವಂತನು ನೀನು ಹೇಳಿದ ಕಾರ್ಯವನ್ನು ಚೆನ್ನಾಗಿ ನಡೆಸಿ ಕೊಡಲಿ ಎಂಬ ಅಭಿಪ್ರಾಯದಲ್ಲಿಯೇ ಓಂಕಾರದಿಂದ ಅನುಮತಿ ನೀಡುವ ಕ್ರಮ ಬಂದಿರುವಂತಹದ್ದು.

ಆದ್ದರಿಂದ ಹಿರಿಯರಲ್ಲಿ ಕಿರಿಯರು ಯಾವುದೇ ಸಾಧನೆ ನಡೆಸುವುದಕ್ಕಾಗಿ ಅನುಮತಿ ಕೇಳಿದರೆಂದರೆ ಆ ಸಾಧನಾನುಷ್ಠಾನದಲ್ಲಿ ಭಗವಂತನ ರಕ್ಷಣೆ ದೊರಕು ವಂತಾಗಲೆಂಬ ಚಿಂತನೆಯೊಂದಿಗೆ ಅನುಮತಿ ನೀಡುವಂತಾಗಲಿ. ಈ ಚಿಂತನೆ ಹರಿದು ಬರುವುದಕ್ಕಾಗಿಯೇ ಓಂಕಾರದ ಮೂಲಕ ಅನುಮತಿ ನೀಡುವಂತಾಗಲಿ.

**ಗೀತಾಭಾಷ್ಯದ ಅರ್ಪಣೆಯ ಔಚಿತ್ಯ:** ಶ್ರೀಮಧ್ವರು ಬದರೀಕ್ಷೇತ್ರಕ್ಕೆ ಹೋಗಿ ಅಲ್ಲಿ ನಾರಾಯಣನ ಸಂದರ್ಶನ ಪಡೆಯುವಾಗ ಅವನಿಗೆ 'ಗೀತಾಭಾಷ್ಯ'ವನ್ನು ಉಡುಗೊರೆ ಯಾಗಿ ಸಮರ್ಪಿಸುವರು. ನಾರಾಯಣ ಇದರಿಂದ ಬಹಳ ಪ್ರಸನ್ನನಾಗಿ ಅದರ ಪ್ರವಚನವನ್ನು ಮತ್ತೆಮತ್ತೆ ಕೇಳಲು ಬಯಸಿದನು. ಭಗವಂತ ಯಾವುದೇ ವಸ್ತುವನ್ನು ಭಕ್ತನಿಂದ ಸ್ವೀಕರಿಸುವಾಗ ಆಯಾ ವಸ್ತು ಸಮರ್ಪಣೆಯ ಹಿನ್ನೆಲೆಯಾಗಿರುವ ಭಕ್ತಿ ಮತ್ತು ಜ್ಞಾನಗುಣಗಳನ್ನು ಪರಿಶೀಲಿಸಿ ಅವುಗಳ ಮಟ್ಟಕ್ಕನುಗುಣವಾಗಿ ಆಯಾ ವಸ್ತುವಿನ ಸ್ವೀಕಾರಕ್ಕೆ ಬೆಲೆ ಕೊಡುವನು.

ಆದ್ದರಿಂದ ಉಡುಗೊರೆಯ ವಸ್ತುಗಳಲ್ಲಿ ಹೂ, ಹಣ್ಣು ಮುಂತಾದ ಜಡವಸ್ತುಗಳಿಗಿಂತ ಭಕ್ತಿಜ್ಞಾನಗಳನ್ನು ತನ್ನಲ್ಲಿ ತುಂಬಿಕೊಂಡಿರುವ ಗ್ರಂಥದ ಪ್ರತಿನಿಧಿಯಾಗಿ ಇರುವ ಪುಸ್ತಕಗಳಿಗೆ ಹೆಚ್ಚು ಪ್ರಾಶಸ್ತ್ಯ. ಪುಸ್ತಕಗಳು ಜಡಗಳಾಗಿದ್ದರೂ ಅವು ಪ್ರತಿನಿಧಿಸುವ ಗ್ರಂಥಗಳು ಭಕ್ತಿಜ್ಞಾನಗಳಿಂದ ತುಂಬಿದ್ದು ಚೇತನದಂತಿರುವುವು. ಅಂತಹ ಪುಸ್ತಕಗಳನ್ನು ಅರ್ಪಿಸಿದಾಗ ಭಕ್ತಿಜ್ಞಾನಗಳನ್ನೇ ಅರ್ಪಿಸಿದಂತಾಗಿ ಭಗವಂತನ ವಿಶೇಷಾನುಗ್ರಹಕ್ಕೆ ಪಾತ್ರವಾಗಬಹುದಾಗಿದೆ. ಆದ್ದರಿಂದ ಆದಷ್ಟು ಭಗವಂತನಿಗೆ ಗ್ರಂಥವನ್ನು ಉಡುಗೊರೆಯಾಗಿ ಅರ್ಪಿಸಲು ಯತ್ನಿಸೋಣ. ಗ್ರಂಥರಚನೆಗೆ ಸಮರ್ಥರಾದವರು ಬದರಿ, ಕಾಶಿ ಇತ್ಯಾದಿಗಳಿಗೆ ಯಾತ್ರೆ ನಡೆಸುವ ಸಂದರ್ಭಗಳಿದ್ದರೆ ಅಲ್ಲಿಯ ಭಗವದ್ರೂಪಗಳಿಗೆ ಅರ್ಪಿಸಲು ವಿಶಿಷ್ಟ ಗ್ರಂಥವನ್ನು ರಚಿಸುವಂತಾಗಬೇಕು.

ಭಗವದ್ಗೀತೆ ಪಂಚರಾತ್ರಾಗಮದ ಸಂಕ್ಷಿಪ್ತರೂಪ. ಪಂಚರಾತ್ರಾಗಮ ನಾರಾಯಣನಿಂದಲೇ ರಚಿತವಾದ ಗ್ರಂಥ. ಆದ್ದರಿಂದ ಅಂತಹ ಗೀತೆಯ ಬಗ್ಗೆ ಬರೆಯಲಾದ ವ್ಯಾಖ್ಯಾನ ನಾರಾಯಣನ ವಿಶೇಷತೃಪ್ತಿಗೆ ಪ್ರಯೋಜಕವಾಗುವುದು ಸಹಜ.

ಆದ್ದರಿಂದ ಆಯಾ ಭಗವದ್ರೂಪಗಳಿಗೆ ಸಮರ್ಪಿಸಲು ಗ್ರಂಥವನ್ನು ರಚಿಸಲು ತೊಡಗುವುದಾದರೆ ಆಯಾ ರೂಪಕ್ಕೆ ಸಂಬಂಧಿಸುವ ಗ್ರಂಥದ ರಚನೆಗೇ ಪ್ರಾಶಸ್ತ್ಯ ನೀಡುವಂತಾಗಲಿ.

**ಪ್ರವಚನದ ಮೂಲಕ ಸಮರ್ಪಣೆ:** ಪುಸ್ತಕರೂಪದಲ್ಲಿದ್ದ ಗೀತಾಭಾಷ್ಯವನ್ನು ನಾರಾಯಣನ ಎದುರಿಗಿಟ್ಟು ಸಮರ್ಪಿಸಿದ ಶ್ರೀಮಧ್ವರು, ಅಂತಹ ಗೀತಾಭಾಷ್ಯದ ಪಾಠ ಪ್ರವಚನವನ್ನು ನಡೆಸುವ ಮೂಲಕ ಅದನ್ನು ಪೂರ್ಣವಾಗಿ ಸಮರ್ಪಿಸಿದರು.

ಗ್ರಂಥದ ಪ್ರತಿನಿಧಿಯಂತಿರುವ ಪುಸ್ತಕವನ್ನು ಎದುರಿಗಿಟ್ಟು ಅರ್ಪಿಸುವುದು ಆಂಶಿಕವಾದ ಸಮರ್ಪಣೆ ಎನಿಸಿದರೆ, ಗ್ರಂಥದ ಪೂರ್ಣಸಮರ್ಪಣೆ ಎಂದರೆ ಅದರಲ್ಲಿ ಪ್ರಸ್ತುತವಾದ ಪ್ರಮೇಯಗಳನ್ನು ಪಾಠ ಪ್ರವಚನದ ಮೂಲಕ ಉದ್ಘೋಷಿಸಿ ಆ ಪ್ರಮೇಯಗಳ ಚಿಂತನೆಯ ಹಿನ್ನೆಲೆಯಲ್ಲಿ ಭಕ್ತಿಜ್ಞಾನಗಳನ್ನು ಸಮರ್ಪಿಸುವುದು. ಆದ್ದರಿಂದ ದೇವರಿಗೆ ಯಾವುದೇ ಗ್ರಂಥದ ಸಮರ್ಪಣೆಯ ಸಂದರ್ಭದಲ್ಲಿ ಈ ವಿಧಾನವನ್ನು ಅಳವಡಿಸಿಕೊಳ್ಳಲು ಮರೆಯದಿರೋಣ.

**ಅರುಣೋದಯಕಾಲದಲ್ಲಿ ಅವಗಾಹನಸ್ನಾನ:** ಬದರಿಯಲ್ಲಿ ಎಷ್ಟು ದಿನಗಳಿದ್ದರೋ ಆ ಎಲ್ಲ ದಿನಗಳಲ್ಲೂ ಶ್ರೀಮಧ್ವರು ಅರುಣೋದಯಕಾಲದಲ್ಲಿ ಅಲಕನಂದಾದಲ್ಲಿ ಅವಗಾಹನಸ್ನಾನ ಮಾಡುತ್ತಿದ್ದರು.

ಸಾಧಕರ ಪ್ರಾತಃಸ್ನಾನದ ಕಾಲ ಅರುಣೋಯದ ಅವಧಿ. ಪ್ರತಿನಿತ್ಯ ಈ ಅವಧಿಯಲ್ಲಿಯೇ ಸ್ನಾನ ಮಾಡಬೇಕೆಂದಿದೆ. ಆದರೆ ತೀರ್ಥಯಾತ್ರೆಗೆ ಹೋದ ಸಂದರ್ಭದಲ್ಲಿ ಇಷ್ಟು ಬೇಗ ಸ್ನಾನ ಮಾಡಲು ಸೌಲಭ್ಯವಿಲ್ಲವೆಂದು ವಿಳಂಬವಾಗಿ ಸ್ನಾನ ಮಾಡಲಾಗುವುದು. ಆದರೆ ಪ್ರತಿನಿತ್ಯ ನಡೆಸಬೇಕಾದ ಸ್ನಾನದ ನಿಯಮವನ್ನು ತೀರ್ಥಕ್ಷೇತ್ರದಲ್ಲೂ ವಿಶೇಷವಾಗಿ ಅಳವಡಿಸಿಕೊಳ್ಳಬೇಕು. 'ಪುಣ್ಯಕ್ಷೇತ್ರಕೃತಂ ಪಾಪಂ ವಜ್ರ

ಲೇಪ್ಯೋ ಭವಿಷ್ಯತಿ.....' ಎಂದು ಎಚ್ಚರಿಸಿರುವಂತೆ ಪುಣ್ಯಕ್ಷೇತ್ರದಲ್ಲಿ ವಿಧಿನಿಷೇಧಗಳನ್ನು ಉಲ್ಲಂಘಿಸಿದರೆ ಅದಕ್ಕೆ ಅಧಿಕ ಪಾಪ. ಆದ್ದರಿಂದ ತೀರ್ಥಯಾತ್ರೆಯ ಪ್ರಸಂಗಗಳಲ್ಲೂ ಅರುಣೋದಯಕಾಲದಲ್ಲಿಯೇ ಸ್ನಾನ ನಡೆಸಲು ಮರೆಯದಿರೋಣ.

**ಮೌನ ಹಾಗೂ ಉಪವಾಸ:** ನಿತ್ಯತುಷ್ಟನಾದ ನಾರಾಯಣನ ಸಂತೋಷವಿಶೇಷಕ್ಕಾಗಿ ಶ್ರೀ ಮಧ್ವರು ಕಾಷ್ಠಮೌನವನ್ನೂ, ಉಪವಾಸವನ್ನೂ ಆಚರಿಸಿದರು. ಪುಣ್ಯಕ್ಷೇತ್ರಗಳಿಗೆ ಸಂದರ್ಶನ ನೀಡುವಾಗ ಅಲ್ಲಿಯ ಅಧಿದೈವದ ವಿಶೇಷಾನುಗ್ರಹಕ್ಕಾಗಿ ಪೂಜೆ ಪುರಸ್ಕಾರ ರೂಪದ ಹರಕೆ ಸೇವೆಗಳನ್ನೆಲ್ಲ ನಡೆಸುವೆವು. ಆದರೆ ಪೂಜೆ, ಸೇವೆ, ಕಾಣಿಕೆ ಇವೆಲ್ಲ ಬಾಹ್ಯ ಸಾಧನೆಗಳು. ಅಲ್ಲದೆ, ಅರ್ಚಕರೇ ಮುಂತಾದ ಇತರರ ಮೂಲಕ ಸಲ್ಲಿಸಲ್ಪಡುವವು. ಆದುದರಿಂದ ಇಂತಹ ಬಾಹ್ಯ ಸಾಧನೆಗಳಿಗಿಂತಲೂ ನಮಗಾಗಿ ನಾವೇ ನಡೆಸಬಹುದಾದ, ಭಕ್ತಿ–ಜ್ಞಾನಗಳಿಗೆ ನೇರವಾಗಿ ಸಂಬಂಧಿಸುತ್ತಿದ್ದು ಆಂತರಸಾಧನೆಗಳೆನಿಸುವ ಜಪ, ಧ್ಯಾನ ಮುಂತಾದವು ಭಗವಂತನ ಅಧಿಕ ಮೆಚ್ಚುಗೆಗೆ ಪ್ರಯೋಜಕವಾಗಬಲ್ಲವು. ಈ ನಿಟ್ಟಿನಲ್ಲಿ ಭಗವದ್ಗುಣಧರ್ಮಗಳ ಮನನಕ್ಕೆ ಪೋಷಕವಾಗುವ ಮೌನ ಹಾಗೂ ಮನನ ನಡೆಸಲು ಬೇಕಾದ ಅಂತಃಕರಣ ಶುದ್ಧಿಗೆ ನಿಮಿತ್ತವಾಗಬಲ್ಲ ಉಪವಾಸ ಇವು ವಿಶಿಷ್ಟಗಳಾದ ಸಾಧನೆಗಳೆನಿಸುವವು.

ಆದುದರಿಂದ ತೀರ್ಥಯಾತ್ರೆ ನಡೆಸಿದಾಗ ಅಲ್ಲಿಯ ಭಗವಂತನ ಪ್ರೀತಿಗಾಗಿ ಪೂರ್ಣ ಅವಧಿಯಲ್ಲಿ ಅಲ್ಲದಿದ್ದರೂ ಸಾಧ್ಯವಾದಷ್ಟು ಅವಧಿಯಲ್ಲಿ ಮೌನವನ್ನು ಅಳವಡಿಸಿಕೊಂಡು ಆಯಾ ಕ್ಷೇತ್ರದ ಭಗವದ್ರೂಪದ ಗುಣಲೀಲೆಗಳ ಮನನ ನಡೆಸೋಣ. ಆದಷ್ಟು ಆಹಾರನಿಯಂತ್ರಣ ನಡೆಸಿ ಇಂದ್ರಿಯಗಳನ್ನೂ ಹತೋಟಿಯಲ್ಲಿಟ್ಟುಕೊಳ್ಳೋಣ. ಅಂತಃಕರಣಶುದ್ಧಿಯನ್ನು ಗಳಿಸೋಣ.

**ಮನನಾರ್ಹ ಸಂದೇಶಗಳು:** ಶ್ರೀ ವೇದವ್ಯಾಸರ ಆಹ್ವಾನದ ಮೇರೆಗೆ ವ್ಯಾಸಾಶ್ರಮಕ್ಕೆ ಹೊರಟ ಶ್ರೀ ಮಧ್ವರು ತಮ್ಮ ಶಿಷ್ಯರಿಗೆ ಬರವಣಿಗೆಯ ಮೂಲಕ ನಾಲ್ಕು ಸಂದೇಶಗಳನ್ನು ನೀಡಿದ್ದರು–

- ಪಾಪಪರಿಹರಿಸುವಲ್ಲಿ ಬದರಿಗೆ ಸರಿದೂಗುವ ಕ್ಷೇತ್ರ ಮತ್ತೊಂದಿಲ್ಲ.
- ಅಲಕನಂದೆಯ ನೀರಿಗೆ ಸದೃಶವಾದ ನೀರು ಮತ್ತೊಂದಿಲ್ಲ.
- ನಮ್ಮ (ಶ್ರೀ ಮಧ್ವಗುರುಗಳ) ಮಾತಿಗೆ ಸಮಾನವಾದ ಹಿತಕರ ಮಾತು ಮತ್ತೊಂದಿಲ್ಲ.
- ಶ್ರೀವಿಷ್ಣುವಿಗೆ ಸದೃಶನಾದ ದೇವತೆ ಮತ್ತೊಬ್ಬನಿಲ್ಲ.

ಆಚರಣೆಗೆ ಸಂಬಂಧಪಡುವ ಎರಡು ಸಂದೇಶಗಳು, ವಿಚಾರಕ್ಕೆ ಸಂಬಂಧಿಸುವ ಇನ್ನೆರಡು ಸಂದೇಶಗಳು –ಎಲ್ಲ ದೇಶದ, ಎಲ್ಲ ಕಾಲದ, ಎಲ್ಲ ವ್ಯಕ್ತಿಗಳಿಗೆ ಅನ್ವಯವಾಗುವಂತಹ ಸಾರ್ವತ್ರಿಕ ಸಂದೇಶಗಳು. ಅಲ್ಲಿಯ, ಆಗಿನ ಶಿಷ್ಯರನ್ನು ಪ್ರತಿನಿಧಿಸಿಕೊಂಡು ನೀಡಲ್ಪಟ್ಟ ಈ ಸಂದೇಶಗಳನ್ನು ಎಲ್ಲ ಕಾಲದಲ್ಲಿ, ಎಲ್ಲ ದೇಶದಲ್ಲಿ ಚಿಂತನ, ಮನನ ಮಾಡುತ್ತಿರಬೇಕು. ವಿಶೇಷವಾಗಿ ಬದರಿಕ್ಷೇತ್ರಕ್ಕೆ ಯಾತ್ರೆ ಕೈಗೊಳ್ಳುವ ಸಾಧಕರು ಅಲ್ಲಿ

ಈ ನಾಲ್ಕು ಸಂದೇಶಗಳ ಬಗ್ಗೆ ವಿಶೇಷವಾಗಿ ಚಿಂತನೆ ಮನನಗಳನ್ನು ನಡೆಸಬೇಕು. ತನ್ನ ಮಹಿಮೆ 'ಈ ಶ್ರವಣ ಮಾಡಿದವರೊಳಗೆ ಒಂದು ರೂಪದಿಂದ ಪ್ರವೇಶಿಸಿ, ವ್ಯಾಪಿಸುವ ಪ್ರಯುಕ್ತ 'ಪ್ರಾತಃ' -ಎಂದೇ ಉಪನಿಷತ್ತುಗಳಲ್ಲಿ ಕರೆಸಿಕೊಳ್ಳಲ್ಪಡುವ ವಾಯುದೇವತೆ ತನ್ನ ಮಧ್ವರೂಪದಿಂದ ನೀಡಿದ ಪ್ರಮುಖ ಸಂದೇಶಗಳನ್ನು ಚಿಂತನ ಮನನ ಮಾಡು ವವರಲ್ಲೂ ಒಂದು ರೂಪದಿಂದ ಪ್ರವೇಶಿಸದಿರನು.

ಹೀಗೆ ಶ್ರೀಮುಖ್ಯಪ್ರಾಣನ ವಿಶೇಷ ಸಾನ್ನಿಧ್ಯವನ್ನು ಪಡೆದಂತಾಗುವುದು.

**ಹಿಮಾಲಯದಲ್ಲಿ ದೇವರ ವ್ಯಕ್ತಿತ್ವಾನುಸಂಧಾನ:** ಶ್ರೀ ಮಧ್ವರು ವ್ಯಾಸಾಶ್ರಮಕ್ಕೆ ಹೋಗುತ್ತಿದ್ದಾಗ ಹಿಮಾಲಯದ ಭವ್ಯ ವ್ಯಕ್ತಿತ್ವವನ್ನು ಕಂಡು ಭಗವಂತನ ಭವ್ಯ ವ್ಯಕ್ತಿತ್ವದ ಅನುಸಂಧಾನವನ್ನು ನಡೆಸುವರು.

ಕಂದುಕಸ್ತುತಿರಚನೆಯ ಹಿನ್ನೆಲೆಯನ್ನು ಪರಿಶೀಲಿಸಿದಾಗ ಪ್ರತಿಯೊಂದು ಘಟನೆಯ ಹಿನ್ನೆಲೆಯಲ್ಲೂ ಭಗವಂತನ ಲೀಲೆಯ ಅನುಸಂಧಾನ ನಡೆಸುತ್ತಿದ್ದ ಮಧ್ವರು ಪ್ರಕೃತಿಯ ಪ್ರತಿಯೊಂದು ಪದಾರ್ಥದ ಹಿನ್ನೆಲೆಯಲ್ಲೂ ಸಾಂಕೇತಿಕವಾಗಿ ಭಗವದ್ವ್ಯಕ್ತಿತ್ವದ ಅನು ಸಂಧಾನ ನಡೆಸುತ್ತಿದ್ದರೆಂದು ತಿಳಿದುಬರುವುದು. ಪ್ರತಿಯೊಂದು ವಸ್ತುವಿನ ಹಿನ್ನೆಲೆ ಯಲ್ಲೂ ಅನುಸಂಧಾನ ನಡೆಸಬೇಕಾದ ಭಗವದ್ವ್ಯಕ್ತಿತ್ವವನ್ನು ವಿಶಿಷ್ಟ ವಸ್ತುಗಳ ಹಿನ್ನೆಲೆ ಯಲ್ಲಂತೂ ಆಯಾ ವೈಶಿಷ್ಟ್ಯಕ್ಕೆ ಪ್ರಯೋಜಕವಾಗಿ ಗುರುತಿಸಿಕೊಳ್ಳಲೇ ಬೇಕು. ಆಗ ಅದು ಕೇವಲ ಪ್ರಕೃತಿದರ್ಶನ ಎನಿಸದೆ ದೇವರ ದರ್ಶನರೂಪವಾದ ಸಾಧನೆಯಾಗಿ ರೂಪುಗೊಳ್ಳುವುದು.

**ದೇವರ ದರ್ಶನದ ಮೊದಲು ಮನನ:** ವೇದವ್ಯಾಸಾಶ್ರಮದಲ್ಲಿ ಶ್ರೀ ವೇದವ್ಯಾಸರ ದರ್ಶನವನ್ನು ಪಡೆಯಲು ತೆರಳಿದ ಶ್ರೀ ಮಧ್ವರು ತನ್ನ ಹೃದಯಮಂದಿರದಲ್ಲಿ ಶ್ರೀ ವೇದವ್ಯಾಸರ ಅಂಗಾಂಗಗಳ ವೈಭವ ಹಾಗೂ ಅವರ ವಾಙ್ಮಯದ ಕೊಡುಗೆ ಇವುಗಳ ಕುರಿತು ಮೆಲುಕುಹಾಕುತ್ತ ಕೊನೆಗೆ ಅವರ ದರ್ಶನವನ್ನು ಪಡೆಯುವರು.

ನಾವು ಕೂಡಾ ದೇವಾಲಯಗಳಲ್ಲಿ ಪ್ರತೀಕಗಳಲ್ಲಿ ಸನ್ನಿಹಿತನಾಗಿರುವ ಭಗವ ದ್ರೂಪದ ದರ್ಶನಕ್ಕೆ ಹೋಗುವಾಗ, ಇದ್ದಕ್ಕಿದ್ದಂತೆ ಪ್ರತೀಕದ ಎದುರುನಿಂತು ದೇವರ ದರ್ಶನಕ್ಕೆ ತೊಡಗದೆ ಮೊದಲು ಆ ಪ್ರತೀಕದಲ್ಲಿ ಸನ್ನಿಹಿತನಾದ ಭಗವದ್ರೂಪದ ಬಗ್ಗೆ ಹೃದಯಮಂದಿರದಲ್ಲಿ ಸಾಕಷ್ಟು ಮನನ ನಡೆಸಿ, ಆ ಬಳಿಕವಷ್ಟೇ ಆ ರೂಪದ ದರ್ಶನ ಪಡೆಯಬೇಕು. ಆಗ ಹಿಂದೆ ನಡೆಸಿದ ಮನನದ ಪರಿಣಾಮವಾಗಿ ಉಂಟಾಗುವ ಭಕ್ತಿ ಜ್ಞಾನ ಪೂರ್ವಕವಾಗಿ ದರ್ಶನವನ್ನು ನಡೆಸಬಹುದಾಗುವುದು. ತಿರುಪತಿ ಇತ್ಯಾದಿ ಕ್ಷೇತ್ರಗಳಲ್ಲಿ ದರ್ಶನಕ್ಕಾಗಿ 'ಕ್ಯೂ' ನಿಲ್ಲಬೇಕಾದ ಪ್ರಸಂಗ ಇದ್ದರೆ ಆ ಪ್ರಸಂಗದಲ್ಲಿ ಏನೇನೋ ಹಾಳುಹರಟೆಯನ್ನೋ, ಕೆಟ್ಟ ಚಿಂತನೆಯನ್ನೋ ನಡೆಸದೆ ಮುಂದೆ ಕಾಣ ಬೇಕಾದ ಭಗವದ್ರೂಪದ ಗುಣಲೀಲೆಗಳ ಬಗ್ಗೆ ಮನನವನ್ನೇ ನಡೆಸುತ್ತಿರಬೇಕು. ಆಗ ಆಯಾ ಭಗವದ್ರೂಪದ ದರ್ಶನಕ್ಕೆ ಅಲ್ಪಾವಧಿಯೇ ನೀಡಲ್ಪಡುವುದಾದರೂ 'ಕ್ಯೂ'

**ನಿಂತ ಅವಧಿಯಿಂದ ಹಿಡಿದು ದರ್ಶನದ ಅವಧಿಯವರೆಗೂ ದರ್ಶನ ಸಾಧನೆಯನ್ನೇ ನಡೆಸಿದಂತಾಗುವುದು.**

**ದರ್ಶನದ ಬಳಿಕ ಹೃದಯದಲ್ಲಿ ಸ್ಥಾಪನೆ:** ಶ್ರೀ ವೇದವ್ಯಾಸರ ಜೊತೆಗೆ ಸ್ವಲ್ಪ ಕಾಲ ಇದ್ದ ಮಧ್ವರು ನಾರಾಯಣ ಮತ್ತು ವೇದವ್ಯಾಸರ ಒತ್ತಾಯದ ಮೇರೆಗೆ ಸತ್ತತ್ವದ ಪ್ರಚಾರಕ್ಕಾಗಿ ಅಲ್ಲಿಂದ ಉಡುಪಿಯ ಕಡೆಗೆ ಹೋಗಬೇಕಾಯಿತು. ಶ್ರೀ ವ್ಯಾಸರ ವಿರಹ ವನ್ನು ಸಹಿಸಲಾರದ ಶ್ರೀಮಧ್ವರು ವ್ಯಾಸರನ್ನು ತಮ್ಮ ಹೃದಯದಲ್ಲಿ ವಿಶೇಷವಾಗಿ ಸನ್ನಿಹಿತ ರಾಗುವಂತೆ ಮಾಡಿಕೊಂಡು ಎಂದೂ ಅವರ ವಿರಹಕ್ಕೆ ಎಡೆಯೂ ಇಲ್ಲದಂತೆ ಮಾಡಿ ಕೊಂಡು ಹೊರಡುವರು.

**ಬೇರೆಬೇರೆ ಕ್ಷೇತ್ರದ ಭಗವದ್ರೂಪದ ಸಂದರ್ಶನ ಪಡೆದುಕೊಳ್ಳುವ ನಾವು ಆ ರೂಪವನ್ನು ಅಲ್ಲಿಯೇ ಬಿಡದೆ, ಅದರ ಮಾನಸಿಕ ಪ್ರತೀಕವೊಂದನ್ನು ಹೃದಯದಲ್ಲಿ ಸ್ಥಾಪಿಸಿಕೊಂಡೇ ಅಲ್ಲಿಂದ ಹೊರಡಬೇಕು. ಆಗ ಯಾತ್ರೆಯ ಪರಿಣಾಮವಾಗಿ ಜೀವನ ಪೂರ್ತಿ ಬೇಕೆಂದಾಗೆಲ್ಲ ಆ ಭಗವದ್ರೂಪದ ದರ್ಶನ ಪಡೆಯಬಹುದಾಗುವುದು. ದಿನ ನಿತ್ಯ ಪೂಜೆಯ ಅವಧಿಯಲ್ಲಿ ಮನೆಯ ಪ್ರತಿಮೆಯಲ್ಲಿ ಆ ಭಗವದ್ರೂಪದ ಸನ್ನಿಧಾನ ವನ್ನು ಚಿಂತಿಸಬಹುದಾಗುತ್ತದೆ. ಅಲ್ಲದೆ, ಕ್ಷೇತ್ರದಲ್ಲಿ ಯಾತ್ರಿಕರ ಗೌಜಿಗಲಾಟೆಗಳಿಂದಾಗಿ ಭಕ್ತಿ ಜ್ಞಾನಪೂರ್ವಕ ಭಗವಂತನ ದರ್ಶನ ಮಾಡಲಾಗದಿದ್ದರೂ, ಹೃದಯದಲ್ಲಿ ಸ್ಥಾಪಿಸಿಕೊಂಡುಬಂದ ಪ್ರತೀಕದ ಮಾಧ್ಯಮದಲ್ಲಿ ಮನೆಯ ಏಕಾಂತ ವಾತಾವರಣದಲ್ಲಿ ಆಯಾ ಭಗವದ್ರೂಪದ ಚಿಂತನೆ ನಡೆಸಬಹುದಾಗಿದೆ.**

**ಮಹನೀಯರಿಂದ ಶಾಸ್ತ್ರಶ್ರವಣ:** ವೇದವ್ಯಾಸಾಶ್ರಮದಲ್ಲಿ ಏಕಾಂತದಲ್ಲಿ ಶ್ರೀ ಮಧ್ವರು ಶ್ರೀ ವೇದವ್ಯಾಸರಿಂದ ಇತಿಹಾಸ, ಪುರಾಣ, ಸೂತ್ರ, ಪಂಚರಾತ್ರಾಗಮ ಮುಂತಾದ ವೈದಿಕ ವಾಙ್ಮಯಗಳ ಬಗ್ಗೆ ಪಾಠ ಕೇಳುವರು. ಋಜುಯೋಗಿಗಳಾದ ಶ್ರೀ ಮಧ್ವರು ಮೊದಲೇ ವೈದಿಕವಾಙ್ಮಯದ ಬಗ್ಗೆ ಸಾಕಷ್ಟು ತಿಳಿದವರಾಗಿದ್ದರು. ಮಹನೀ ಯರು ದೊರೆತಾಗ ಅವರಿಂದ ಇನ್ನಷ್ಟು ಕೇಳಿ ತಿಳಿದುಕೊಳ್ಳಬೇಕೆಂಬ ನಿಯಮಕ್ಕೆ ಅನು ಗುಣವಾಗಿ ಶ್ರೀವೇದವ್ಯಾಸರಿಂದ ಶಾಸ್ತ್ರಶ್ರವಣ ಮಾಡುವರು. ಶ್ರೀ ವೇದವ್ಯಾಸರು ಆಗಾಗಲೇ ಸರ್ವಜ್ಞರಾಗಿದ್ದ ಶ್ರೀ ಮಧ್ವರ ಬುದ್ಧಿಯಲ್ಲಿ ತಮ್ಮ ಅನುಗ್ರಹಬಲದಿಂದ ಮತ್ತಷ್ಟು ಪ್ರಮೇಯ ಗಳನ್ನು ತುಂಬಿದರು.

**ಗೊತ್ತಿರುವ ಪ್ರಮೇಯದ ಕುರಿತೂ ತಿಳಿದವರಿಂದ ಶ್ರವಣ ನಡೆಸಿದಲ್ಲಿ ಮತ್ತಷ್ಟು ವಿಚಾರಗಳು ತಿಳಿಯುವವು. ಆಗಾಗಲೇ ತಿಳಿದ ವಿಷಯಗಳೂ ತಿಳಿದವರ ಅನುಭವದ ಕುಲುಮೆ ಯ ಪಾಕಕ್ಕೊಳಗಾಗಿ ಹೊರಹೊಮ್ಮಿದಾಗ ಬೇರೆಯೇ ಪ್ರಭಾವವನ್ನು ಬೀರುವವು. ಅದಕ್ಕಾಗಿಯೇ ಮಹನೀಯರು ಸಿಕ್ಕಿದಾಗೆಲ್ಲ ಅವರಿಂದ ಬೇರೆ ಬೇರೆ ಪ್ರಮೇಯದ ಬಗ್ಗೆ ವಿಚಾರಿಸಿ ಶ್ರವಣ ನಡೆಸಬೇಕೆಂದು ವಿಧಿಸಲಾಗಿದೆ.**

**ಒಂದು ರೂಪದಲ್ಲಿ ನಾನಾ ರೂಪಗಳ ಅನುಸಂಧಾನ:** ನಾರಾಯಣಾಶ್ರಮದಲ್ಲಿ ಯಮಧರ್ಮನ ಪುತ್ರ ನಾರಾಯಣನನ್ನು ಕಂಡ ಶ್ರೀ ಮಧ್ವರು ಆ ರೂಪದಲ್ಲಿ ಬೇರೆ ಬೇರೆ

ಭಗವದ್ರೂಪಗಳ ಐಕ್ಯಚಿಂತನೆ ನಡೆಸುವರು. 'ಪರಮಾತ್ಮನೇ ಸತತಮೇಕರೂಪಿಣೇ.....' ಎಂಬ ಶ್ಲೋಕಗಳ ಮೂಲಕ ಎಲ್ಲ ಭಗವದ್ರೂಪಗಳನ್ನು ಸ್ಥೂಲವಾಗಿ ಕ್ರೋಡೀಕರಿಸಿ ಆ ಎಲ್ಲ ರೂಪಗಳ ತಾದಾತ್ಮ್ಯವನ್ನು ನಾರಾಯಣನಲ್ಲಿ ಕಂಡಿರುವರು. ಇದರಿಂದಾಗಿ ಶ್ರೀಮಧ್ವರು ನಾರಾಯಣ ರೂಪದ ದರ್ಶನದಿಂದಾಗಿ ಭಗವಂತನ ಅನಂತರೂಪಗಳ ದರ್ಶನ ಪಡೆದಂತಾಗುವುದು.

**ನಾವು ಕೂಡಾ ಯಾವುದಾದರೊಂದು ಭಗವದ್ರೂಪದ ದರ್ಶನವನ್ನು ಆಯಾ ಪ್ರತೀಕದ ಮೂಲಕ ಪಡೆದುಕೊಳ್ಳುವಾಗ ಭಗವಂತನ ಅನೇಕಾನೇಕ ರೂಪಗಳ ಚಿಂತನೆ ನಡೆಸಿ, ಆ ರೂಪಗಳ ಐಕ್ಯಚಿಂತನೆಯನ್ನು ಎದುರಿಗಿರುವ ಪ್ರತೀಕದ ಭಗವದ್ರೂಪದಲ್ಲಿ ಮಾಡಬೇಕು. ಇದರಿಂದಾಗಿ ನಮ್ಮ ಪಾಲಿಗೆ ಆ ಒಂದು ಭಗವದ್ರೂಪದ ದರ್ಶನ ಅನೇಕ ಭಗವದ್ರೂಪಗಳ ದರ್ಶನವಾಗಿ ಫಲಿಸುವುದು.**

**ಅಲ್ಲದೆ, ನಾವು ಕಾಣುತ್ತಿರುವ ಪ್ರತೀಕದಲ್ಲಿ ಸನ್ನಿಹಿತವಾದ ಭಗವದ್ರೂಪಕ್ಕೆ ಸಂಬಂಧಿಸಿದಂತೆ ಗುಣಲೀಲೆಗಳ ವಿಶೇಷ ಮಾಹಿತಿ ಇಲ್ಲದಿದ್ದರೂ, ಆ ರೂಪಕ್ಕಿಂತ ಅತ್ಯಂತಾಭಿನ್ನಗಳಾದ ಇತರ ಭಗವದ್ರೂಪಗಳ ಗುಣಲೀಲೆಗಳನ್ನು ಅಲ್ಲಿ ಅನುಸಂಧಾನ ನಡೆಸಬಹುದಾಗುವುದು. ಈ ಬಗೆಯ ಸಾಧನೆಯ ಪುಷ್ಟಿಗಾಗಿಯೇ ಉಡುಪಿ ಶ್ರೀಕೃಷ್ಣ ಮಠದಲ್ಲಿ ಕೃಷ್ಣನಿಗೆ ಬೇರೆಬೇರೆ ಅವತಾರದ ಅಲಂಕಾರವನ್ನು ತೊಡಿಸಲಾಗುವುದು.**

**ಆಧ್ಯಾತ್ಮಿಕ ಮೆರುಗಿನ ಮಾತುಕತೆ:** ಶ್ರೀಮಧ್ವರು ವ್ಯಾಸಾಶ್ರಮದಲ್ಲಿ ವೇದವ್ಯಾಸರನ್ನು ಮೊತ್ತ ಮೊದಲು ಭೇಟಿಯಾದಾಗ ಹಾಗೂ ಶ್ರೀ ಮಧ್ವರಿಂದ ಕೂಡಿದ ಶ್ರೀವ್ಯಾಸರು ನಾರಾಯಣಾಶ್ರಮದಲ್ಲಿ ನಾರಾಯಣರೂಪ ಪರಮಾತ್ಮನನ್ನು ಭೇಟಿಯಾದಾಗ ಪರಸ್ಪರ ಮಾತುಕತೆ ನಡೆಸಲಾಗುವುದು. ಲೌಕಿಕ ವಿಷಯದ ಸ್ವಲ್ಪವೂ ಸ್ಪರ್ಶವಿಲ್ಲದ ಆದರಲ್ಲಿ ತಾತ್ವಿಕ ವಿಚಾರಗಳ ಪ್ರಸ್ತಾವವಷ್ಟೇ ಇರುವುದೆಂದು 'ಸಂಕಥಾ'ಶಬ್ದದಿಂದ ಸಂಭಾಷಣೆ ಯನ್ನು ಉಲ್ಲೇಖಿಸುವ ಮೂಲಕ ಸೂಚಿಸಲಾಗಿದೆ. 'ಕಥಾ'ಶಬ್ದವೇ ಸಂಭಾಷಣೆಯನ್ನು ತಿಳಿಸುವಾಗ 'ಸಂಕಥಾ' –'ಸಂ' ಎನಿಸುವ ಭಗವಂತನ ಪ್ರಸ್ತಾವವುಳ್ಳ ಸಂಭಾಷಣೆ ಎಂದು ಸೂಚಿತವಾಗಬಲ್ಲದು.

**ಭಾಗವತದ ಉದ್ಧವಗೀತೆಯಲ್ಲಿ (11-11-20) ಭಗವಂತನ ಸೃಷ್ಟ್ಯಾದಿ ಚಟುವಟಿಕೆಗಳ, ಅವತಾರಲೀಲೆಗಳ ಪ್ರಸ್ತಾವವೇ ಇಲ್ಲದ ಪ್ರಯುಕ್ತ ಬಂಜೆ ಎನಿಸುವ ಮಾತನ್ನು ಆಡಲೇಬಾರದು. '......ವಂಧ್ಯಾಂ ಗಿರಂ ತಾಂ ಬಿಭೃಯಾನ್ನ ಧೀರಃ' –ಎಂದು ಸಂದೇಶಿಸಲಾಗಿದೆ. ಸಹಜಸ್ಥಿತಿಯಲ್ಲಿಯೇ ಇಂತಹ ಮಾತನ್ನು ಆಡಬಾರ ದೆಂದಾಗ ಪುಣ್ಯಕ್ಷೇತ್ರಗಳಿಗೆ ಯಾತ್ರಾರೂಪದಿಂದ ಹೋಗಿ ಪುಣ್ಯಕಾರ್ಯ ಮಾಡ ಬೇಕಾದ ಸಂದರ್ಭದಲ್ಲಿ ಲೌಕಿಕ ವಿಷಯಗಳ ಹಾಳುಹರಟೆ ಮಾಡಲೇಬಾರದು. ಭಗ ವಂತನ ಅಥವಾ ತತ್ವಗಳ ವಿಷಯಕವಾದ ಮಾತುಕತೆಯನ್ನೇ ನಡೆಸಿ, ಆ ಮೂಲಕ ಮಾತುಕತೆಗೂ ಆಧ್ಯಾತ್ಮಿಕ ಸಾಧನೆಯ ಮೆರುಗು ಸಿದ್ಧಿಸುವಂತೆ ನಡೆದುಕೊಳ್ಳಬೇಕು.**

**ಕೃತಿಗಳಲ್ಲಿ ಈ ಗುಣಗಳಿರಲಿ:** ಶ್ರೀ ಮಧ್ವರು ರಚಿಸಿದ ಭಾಷ್ಯದಲ್ಲಿಯ ಅನೇಕ ಗುಣಗಳಲ್ಲಿ ಕೆಲವನ್ನು ಹೀಗೆ ಉಲ್ಲೇಖಿಸಬಹುದು– ಸೂತ್ರಕಾರರಾದ ವೇದವ್ಯಾಸರಿಗೆ ಅತ್ಯಂತ ಪ್ರಿಯವಾದುದು. ಸಾಧಕರಲ್ಲಿ ಜ್ಞಾನಭಕ್ತಿಗಳನ್ನು ಉಂಟುಮಾಡಿ ಅವರ ಮೋಕ್ಷಕ್ಕೆ ಪ್ರಯೋಜಕವಾದುದು. ಸಾಮಾನ್ಯವಾಗಿ ಮಂದಮತಿಗಳಿಗೂ ಅರ್ಥವಾಗುವಂತಹದು. ವಿಶೇಷವಾಗಿ ವಿದ್ವಾಂಸರಿಗೂ ಪೂರ್ಣವಾಗಿ ತಿಳಿಯಲ್ಪಡದಿರುವಂತಹದು.

**ಸಾಧಕರು ಆಧ್ಯಾತ್ಮಿಕ ಅಥವಾ ಧಾರ್ಮಿಕ ಕೃತಿಗಳನ್ನು ರಚಿಸುವಲ್ಲಿ ತಮ್ಮ ಕೃತಿಗಳು ವ್ಯಾಖ್ಯಾನರೂಪದವುಗಳಾಗಿದ್ದರೆ ಅವು ಮೂಲಗ್ರಂಥಕ್ಕೆ ಅತ್ಯಂತ ಅನುಗುಣಗಳಾಗಿದ್ದಿರಬೇಕು. ಸಾಧಕರಲ್ಲಿ ಅಧ್ಯಾತ್ಮಜ್ಞಾನವನ್ನು ಭಗವದ್ಭಕ್ತಿಯನ್ನು ಹೆಚ್ಚಿಸುವಂತಹದ್ದಾಗಿರಬೇಕು. ನೇರವಾಗಿ ಅಲ್ಲದಿದ್ದರೂ ಪರೋಕ್ಷವಾಗಿಯಾದರೂ ಮೋಕ್ಷಗಳಿಕೆಗೆ ಪ್ರಯೋಜಕವಾಗಿದ್ದಿರಬೇಕು. ಮಂದಮತಿಗಳಿಗೂ ಎಟಕಬಲ್ಲ ಅರ್ಥವನ್ನೂ, ವಿದ್ವಾಂಸರೂ ಪರಿಶೀಲಿಸಬೇಕಾದ ಅರ್ಥವನ್ನೂ ಒಳಗೊಂಡಿದ್ದಿರಬೇಕು.**

**ಗುರುಗಳ ಕಲಿಮಲದ ನಿರಾಕರಣೆ:** ಶ್ರೀ ಮಧ್ವರು, ತಾವು ನೂತನವಾಗಿ ರಚಿಸಿದ ಸೂತ್ರ ಭಾಷ್ಯದ ಹಿರಿಮೆಯನ್ನು ಗುರುಗಳಿಗೆ ಎಷ್ಟು ವರ್ಣಿಸಿದರೂ ಅವರು ಅದನ್ನು ಒಪ್ಪಿಕೊಳ್ಳುವ ಸ್ಥಿತಿಯಲ್ಲಿ ಇರಲಿಲ್ಲ. ಯಾಕೆ ಹೀಗೆ ಅರುಚಿ ತೋರಿಸುವರೆಂದು ಪರಿಶೀಲಿಸಿದ ಮಧ್ವರು ಕಲಿಕಾಲದ ಕಾಲುಷ್ಯವೇ ಅದಕ್ಕೆ ಮೂಲಕಾರಣವೆಂದು ನಿರ್ಧರಿಸಿ ಅದರ ಪರಿಹಾರಕ್ಕೆ ತೊಡಗಿದ್ದರು. ಸಿದ್ಧಾಂತದ ಯುಕ್ತಿಗಳಿಂದ ಖಂಡಿಸುತ್ತ, ಉಚ್ಚಧ್ವನಿಯಿಂದ ಅಂಜಿಸುತ್ತ ಇದ್ದರು.

**ಒಬ್ಬ ವ್ಯಕ್ತಿ ತತ್ತ್ವಜ್ಞಾನಕ್ಕೆ ಯೋಗ್ಯ ಎಂದು ಸ್ಪಷ್ಟವಾದಾಗ ಪಾಠ, ಪ್ರವಚನದಿಂದಷ್ಟೇ ಅಲ್ಲದೆ, ಗದರಿಸುವುದು, ಟೀಕಿಸುವುದು ಇತ್ಯಾದಿಗಳಿಂದಲೂ ಅವನ ಪರಿವರ್ತನೆಗೆ ತೊಡಗಬೇಕು. ಅವನ ಸ್ವರೂಪೋದ್ಧಾರದ ಒಳ್ಳೆಯ ಉದ್ದೇಶವಿರುವುದರಿಂದ ಯಾವುದೇ ಬಗೆಯ ಸಂಕೋಚಕ್ಕೆ ಅವಕಾಶವಿಲ್ಲ.**

**ತತ್ತ್ವಜ್ಞಾನವನ್ನು ವಿತರಿಸುವಾಗ ಜಿಜ್ಞಾಸುವಿನಲ್ಲಿರುವ ದೌರ್ಬಲ್ಯಗಳನ್ನು ಚೆನ್ನಾಗಿ ಗುರುತಿಸಿ ಅದನ್ನು ಪರಿಹರಿಸುವಲ್ಲೇ ಹೆಚ್ಚು ಗಮನ ಹರಿಸಬೇಕು.**

**ಎರಡು ಸುದರ್ಶನಗಳ ವಿತರಣೆ:** ಶ್ರೀ ಮಧ್ವರು ಭಯಂಕರ ಪಾಪಪರಿಹಾರಗಳಾದ ಸುದರ್ಶನಚಿಹ್ನೆಯನ್ನೂ ತಾವು ಪ್ರತಿಷ್ಠಾಪಿಸಿದ ಉತ್ತಮ ಶಾಸ್ತ್ರವನ್ನೂ ಸಜ್ಜನರಿಗೆ ಆದರಪೂರ್ವಕವಾಗಿ ವಿತರಿಸುತ್ತಿದ್ದರು. ಸುದರ್ಶನಚಕ್ರದ ಚಿಹ್ನೆ ವೈಷ್ಣವದೀಕ್ಷೆಯ ಹೊರಗಿನ ಲಕ್ಷಣವಾದರೆ, ಸಚ್ಛಾಸ್ತ್ರ ವೈಷ್ಣವದೀಕ್ಷೆಯ ಆಂತರಲಕ್ಷಣ. ಇವೆರಡನ್ನೂ ಆದರದಿಂದ ವಿತರಿಸಿದರಷ್ಟೇ ಹೆಚ್ಚು ಫಲಪ್ರದವಾಗುವುದೆಂದು ಶ್ರೀ ಮಧ್ವರು ಮಹಾದರದಿಂದಲೇ ಇವನ್ನು ವಿತರಿಸುತ್ತಿದ್ದರು.

**ಸತ್ಸಿದ್ಧಾಂತದ ಪ್ರಚಾರ ನಡೆಸಲು ಇಚ್ಛಿಸುವವರು ಜಿಜ್ಞಾಸುಗಳಿಗೆ ಚಕ್ರಶಂಖ ಮುದ್ರೆಗಳ ಧಾರಣೆಯ ಆವಶ್ಯಕತೆಯನ್ನು ತಿಳಿಸಿ, ಚಕ್ರಶಂಖಮುದ್ರೆಗಳನ್ನು ಧರಿಸಿ ಹೊರಗಿನಿಂದ ವೈಷ್ಣವದೀಕ್ಷೆಗೊಳಗಾದ ಅವರಿಗೆ ಕ್ರಮೇಣ ಸತ್ಸಿದ್ಧಾಂತದ ಪ್ರಮೇಯ**

ಗಳನ್ನು ತಿಳಿಸಬೇಕು. ಈ ಎರಡು ಕಾರ್ಯಗಳನ್ನು ತುಂಬ ಆದರದಿಂದ ನಡೆಸಬೇಕೇ ಹೊರತು ಬಲಾತ್ಕಾರದಿಂದ ಅಥವಾ ಯಾಂತ್ರಿಕವಾಗಿ ಅಲ್ಲ.

**ಮೋಕ್ಷಪ್ರಾಪ್ತಿಗೆ ಪ್ರತಿಬಂಧಕ ವಿಘ್ನಾದಿದೋಷಗಳ ಪರಿಹಾರ:** '..........ಸತಾಂ ಸಿದ್ಧಿವಿಘ್ನಮುಖದೋಷಭೇಷಜಮ್' (ಮಧ್ವವಿಜಯ) –ಎಂದಿರುವಂತೆ ಮೋಕ್ಷದ ಸಂಪಾದನೆಗೆ ಪ್ರತಿಬಂಧಕಗಳಾದ ವಿಘ್ನ ಮುಂತಾದ ದೋಷಗಳಿಗೆ ಔಷಧದಂತೆ ಪರಿಹಾರಕವಾಗಿ ಶ್ರೀಕೃಷ್ಣ ಉಡುಪಿಯಲ್ಲಿ ಪ್ರತಿಷ್ಠಿತನಾಗಿರುವನು.

ಸಾಧಕರು ಉಡುಪಿ ಶ್ರೀಕೃಷ್ಣನನ್ನು ತಮ್ಮ ಮೋಕ್ಷಸಂಪಾದನೆಗೆ ಪ್ರತಿಬಂಧಕದೋಷಗಳ ಪರಿಹಾರಕ್ಕಾಗಿ ಸ್ತುತಿಸಬೇಕು, ಸೇವಿಸಬೇಕು, ಉಪಾಸಿಸಬೇಕು. ಹೊರತು, ಲೌಕಿಕ ಪ್ರಯೋಜನಗಳ ಪೂರಣೆಗಾಗಿ ಅಲ್ಲ.

ಭಗವದ್ರೂಪಗಳ, ಭಗವದ್ಭಕ್ತದೇವತೆಗಳ ಮಂದಿರಗಳನ್ನು ನಿರ್ಮಿಸಿ, ಆಯಾ ಭಗವ ದ್ರೂಪವನ್ನೋ, ದೇವತೆಯನ್ನೋ, ಪ್ರತಿಷ್ಠಾಪಿಸುವಲ್ಲೂ ಸಾಧಕರಿಗೆ ಪರಮ ಪುರುಷಾರ್ಥವಾದ ಮೋಕ್ಷದ ಗಳಿಕೆಯ ಪ್ರಯೋಜನದ ಉದ್ದೇಶ ಇರಬೇಕೇ ಹೊರತು ಇತರ ಕ್ಷುಲ್ಲಕ ಪ್ರಯೋಜನಗಳ ಉದ್ದೇಶ ಇರಬಾರದು.

ಜ್ಞಾನಿಗಳೂ ಪ್ರತಿಮಾಮಾಧ್ಯಮದಲ್ಲಿ ಪೂಜಿಸಿದರೆ, ಫಲವಿಶೇಷ ದೊರಕದಿರದು ಎಂದು ಜ್ಞಾನಿಗಳಾದ ಶ್ರೀ ಮಧ್ವರು ಉಡುಪಿ ಶ್ರೀಕೃಷ್ಣನ ಆರಾಧನೆಯಿಂದ ತೋರಿಸಿ ಕೊಟ್ಟಂತಾಗಿದೆ.

**ಯಜ್ಞಾದಿಕರ್ಮಗಳ ಆವಶ್ಯಕತೆ:** ಶ್ರೀಮಧ್ವರು ತಮ್ಮ ಗುರುಗಳ ಶಿಷ್ಯರಾದ ವಾಸುದೇವಾಚಾರ್ಯರಿಂದ ಯಜ್ಞ ಮಾಡಿಸಿದರು. ಆ ಮೂಲಕ ಬ್ರಹ್ಮನನ್ನು ತಿಳಿಯಲು ಹೊರಟವರಿಗೆ ಯಜ್ಞಾದಿಕರ್ಮಗಳೂ ಮತ್ತೊಂದು ಸಾಧನ ಎಂದು ಸಾಧಕರಿಗೆ ತೋರಿಸಿ ಕೊಡುವರು.

'ಸಹಿ ಧರ್ಮಃ ಸುಪರ್ಯಾಪ್ತಃ ಬ್ರಹ್ಮಣಃ ಪದವೇದನೇ........' ಎಂದು ಅನುಗೀತೆಯಲ್ಲಿ ತಿಳಿಸಿರುವಂತೆ ಅಪರೋಕ್ಷಜ್ಞಾನಕ್ಕಿಂತ ಮುಂಚೆ ಮಾಡಿದ ಯಜ್ಞಾದಿಧರ್ಮವು ಅಂತಃಕರಣಶುದ್ಧಿಗೆ ಕಾರಣವಾಗಿ, ಅಪರೋಕ್ಷಜ್ಞಾನಸಂಪಾದನೆಗೆ ಉಪಯುಕ್ತವೆನಿಸಿದರೆ, ಅಪರೋಕ್ಷಜ್ಞಾನ ಸಂಪಾದಿಸಿದ ಮೇಲೆ ಆಚರಿಸಲ್ಪಟ್ಟ ಯಜ್ಞಾದಿ ಧರ್ಮವು ಮೋಕ್ಷದಲ್ಲಿ ಪೂರ್ಣ ಆನಂದದ ಅಭಿವ್ಯಕ್ತಿಗೆ ಕಾರಣವಾಗಬಲ್ಲದು. ಹೀಗೆ ಬ್ರಹ್ಮನ ಅಪರೋಕ್ಷಜ್ಞಾನಸಂಪಾದನೆಯ ಮೊದಲೂ, ಅಪರೋಕ್ಷಜ್ಞಾನ ಸಂಪಾದಿಸಿದ ಮೇಲೂ ಸಾಧಕನಿಗೆ ಕರ್ಮದ ಆವಶ್ಯಕತೆ ಇದ್ದೇ ಇದೆ. ಆದುದರಿಂದ ವೇದೋಕ್ತ ಕರ್ಮವನ್ನೆಂದೂ ತ್ಯಜಿಸದಿರೋಣ.

**ದಾರ್ಢ್ಯ ಭಗವದ್‌ಭಕ್ತರ ಮುಖ್ಯ ಲಕ್ಷಣ:** ಎರಡನೇ ಬಾರಿ ಬದರಿಕಾಶ್ರಮಕ್ಕೆ ತೆರಳುವಾಗ ಶ್ರೀ ಮಧ್ವಗುರುಗಳು ಗಂಗಾನದಿಯ ದಡದಲ್ಲಿ ತುರುಷ್ಕರಾಜನ ಭಟರಿಂದ

ಸುತ್ತುವರಿಯಲ್ಪಟ್ಟಿದ್ದರೂ ಭಯಕಂಪಾದಿ ಯಾವುದೇ ವಿಕಾರಗಳಿಗೊಳಗಾಗದ್ದನ್ನು ಕಂಡೇ ತುರುಷ್ಕರಾಜ ಅವರಿಂದ ಸಾಕಷ್ಟು ಪ್ರಭಾವಿತನಾಗಿದ್ದನು.

**ಚಿತ್ತದ್ರವಸ್ತಥಾ ಸ್ಥೈರ್ಯಂ ಪ್ರಸಾದೋ ಭಕ್ತಿ ಲಕ್ಷಣಮ್ ।**
**ಆಧಿಕ್ಯೇನ ತು ತತ್ರಾಪಿ ಸ್ಥೈರ್ಯಮೇವ ವಿಶೇಷತಃ ॥**

ಎಂದು 'ಭಕ್ತಿವಿವೇಕ' (ಭಾಗ.ತಾ.ನಿ. 11-14-24) ವಿವೇಚಿಸಿರುತ್ತಿರುವಂತೆ ಮಾನಸಿಕವಾಗಿ ಕರಗುವಿಕೆ. 'ಸ್ಥಿರತೆ' ಹಾಗೂ ಮಾನಸಿಕ ಪ್ರಸನ್ನತೆ –ಇವು ಭಕ್ತಿಯ ಲಕ್ಷಣಗಳೆನಿಸಿದರೂ, ಇವುಗಳಲ್ಲೂ, ಅಧಿಕವಾಗಿ ಭಕ್ತಿಯ ಲಕ್ಷಣವೆಂದರೆ ಸ್ಥಿರತೆ. ಆದುದರಿಂದ ಅಂತಹ ಸ್ಥೈರ್ಯ ಯಾರ ಮೇಲೂ ಪ್ರಭಾವ ಬೀರಬಲ್ಲದು. ಆದ್ದರಿಂದ ಯಾವ ಬಗೆಯ ವಿಪತ್ತು, ಕಷ್ಟ ಇತ್ಯಾದಿಗಳು ಸಂಭವಿಸಿದರೂ 'ರಕ್ಷತೀತ್ಯೇವ ವಿಶ್ವಾಸಃ.....' ಎಂದಿರುವಂತೆ ಭಗವಂತ ರಕ್ಷಿಸದೆ ಕೈಬಿಡುವುದಿಲ್ಲ ಎಂಬ ಸ್ಥೈರ್ಯವನ್ನು ಅಳವಡಿಸಿಕೊಳ್ಳಬೇಕು.

**ಸಂಕೀರ್ಣಾರ್ಥಕ ಮಾತುಗಳಿಂದ ದೇವರ ಪರಿಚಯ:** ಶ್ರೀ ಮಧ್ವರು ತುರುಷ್ಕ ರಾಜನ 'ನಾವೆಗಳಿಲ್ಲದೆಯೇ ಹೇಗೆ ನದಿಯನ್ನು ದಾಟಿರುವಿರಿ?' –ಎಂಬ ಪ್ರಶ್ನೆಗೆ ಉತ್ತರಿಸುತ್ತ ದೇವರನ್ನು ಹೀಗೆ ಪರಿಚಯಿಸಿರುವರು. ಯಾವ ದೇವ ಸಮಗ್ರವಿಶ್ವವನ್ನು ಬೆಳಗುವನೋ ತುಂಬ ಪ್ರಕಾಶಶಾಲಿಯಾಗಿರುವನೋ ಯಾರ ಪರಮಾನುಗ್ರಹದಿಂದಲೇ ನಾವೆಲ್ಲ ಕರ್ಮವನ್ನು ಮಾಡುವೆವೋ ಅಂತಹವನ ಅನುಗ್ರಹದಿಂದಲೇ ನದಿಯನ್ನು ದಾಟಿರುವೆವು.

ಮೇಲ್ನೋಟಕ್ಕೆ 'ಸೂರ್ಯ' ಎಂಬ ಅರ್ಥ ಹೊರಡಬೇಕು. ಆದರೆ ಅದು ನಿಜವಾಗಿ ಸೂರ್ಯನ ಅಂತರ್ಯಾಮಿ ಸೂರ್ಯನಾರಾಯಣನ ಬಗ್ಗೆ ಪ್ರತಿಪಾದಿಸುತ್ತಿರಬೇಕು. ಆದುದರಿಂದಲೇ ಅದನ್ನೇ 'ಚಿತ್ರವಾಕ್ಯಮ್' –ಎನ್ನಲಾಗಿದೆ. ಅಂತಹ ಮಾತನ್ನು ಮಧ್ವ ಗುರುಗಳು ತುರುಷ್ಕರಾಜನ ಎದುರು ತಿಳಿಸಿದರು. ಸ್ವರೂಪತಃ ಯೋಗ್ಯನಾಗಿದ್ದರೆ ಅವನಿಗೆ ಸೂರ್ಯನಾರಾಯಣನ ಅರಿವು ಮೂಡಲಿ; ಅಯೋಗ್ಯನಾದರೆ ಸೂರ್ಯನನ್ನೇ ದೇವರೆಂದು ಭ್ರಮಿಸುವಂತಾಗಲಿ ಎಂಬ ದೃಷ್ಟಿಯಿಂದ ಸಂಕೀರ್ಣಾರ್ಥವನ್ನು ಹೊರಡಿಸುವ 'ಚಿತ್ರವಾಕ್ಯ'ವನ್ನು ಶ್ರೀಮಧ್ವರು ಪ್ರಯೋಗಿಸಿರುವರು.

**ನಾವೂ ಕೂಡಾ ಅಪರಿಚಿತರ ಎದುರು ದೇವರ ಪರಿಚಯವನ್ನೋ, ಶಾಸ್ತ್ರಾರ್ಥದ ವಿವರಣೆಯನ್ನೋ ನೀಡಬೇಕಾಗಿ ಬಂದಾಗ ಅವನು ಅಯೋಗ್ಯನಾಗಿದ್ದರೆ, ಯೋಗ್ಯನೋ ಅಯೋಗ್ಯನೋ ಎಂಬ ಸಂದೇಹವಿದ್ದರೆ ಅವನಿಗೆ ಸರಿಯಾದ ಅರಿವು ಮೂಡದಂತೆ ಯೋಗ್ಯನಾದರೆಯಷ್ಟೇ ಸರಿಯಾಗಿ ಅರ್ಥೈಸಿಕೊಳ್ಳುವಂತೆ ಆದಷ್ಟು ಸಂಕೀರ್ಣಾರ್ಥದ 'ಚಿತ್ರವಾಕ್ಯ'ವುಳ್ಳ ಮಾತುಗಳನ್ನೇ ಆಡೋಣ.**

**ನೇರವಾಗಿ ಉತ್ತರಿಸದಿರೋಣ:** ಇಂದ್ರಪುರಿಯಲ್ಲೊಬ್ಬ ಸಂನ್ಯಾಸಿಯು ಏನಾದರೂ ಮಾಡಿ ಮಧ್ವಗುರುಗಳನ್ನು ಸೋಲಿಸಬೇಕೆಂದು ಜ್ಞಾನಸಹಾಯದಿಂದ ಕೂಡಿದ ಕರ್ಮಕ್ಕೆ ಮೋಕ್ಷಸಾಧನತ್ವವನ್ನು ಸಮರ್ಥಿಸಲು ತಿಳಿಸುವನು. ಶ್ರೀ ಮಧ್ವರು ಸಮಿರ್ಥಿಸುವರು. ಮಧ್ವರ ಆ ಸಮರ್ಥನೆಯನ್ನು ಅಲುಗಾಡಿಸಲು ಆಗದ ಆ ಸಂನ್ಯಾಸಿ ಹೇಗಾದರೂ ಮಾಡಿ ಮಧ್ವಗುರುಗಳ ಬಾಯಿಕಟ್ಟಿಸಬೇಕೆಂದು 'ಜ್ಞಾನ' ಎಂದರೆ ಏನು? ಎಂಬುದಾಗಿ ಅಡ್ಡ

ಪ್ರಶ್ನೆಯನ್ನು ಕೇಳುವನು. ಶ್ರೀ ಮಧ್ವರು ಅದಕ್ಕೆ ಜ್ಞಾನದ ಪರಿಷ್ಕೃತ ಲಕ್ಷಣವನ್ನು ತಿಳಿಸುವ ಮೂಲಕ ನೇರವಾಗಿ ಉತ್ತರಿಸದೆ, ನೀನು ಜ್ಞಾನಿ ಹೌದೋ ಅಲ್ಲವೋ? ಹೌದಾದರೆ ಜ್ಞಾನವನ್ನು ಹೊಂದಿ ನಿನ್ನಿಂದ ಜ್ಞಾನ ಎಂದರೇನೆಂಬ ಪ್ರಶ್ನೆಯೇ ಕೂಡಲಾರದು; ಜ್ಞಾನಿ ಅಲ್ಲದಿದ್ದರೆ ಜ್ಞಾನಪೂರ್ವಕವಾಗಿರಬೇಕಾದ ಪ್ರಶ್ನೆ ನಿನ್ನಿಂದ ಕೂಡಲಾರದು –ಎಂಬುದಾಗಿ ವಕ್ರವಾಗಿಯೇ ಉತ್ತರಿಸಿ ಅವನ ಬಾಯಿ ಮುಚ್ಚಿಸಿದರು.

**ನಾವು ಕೂಡಾ ತತ್ತ್ವಜಿಜ್ಞಾಸೆಯಿಂದ ಕೇಳಿದ ಪ್ರಶ್ನೆಗಳಿಗೆಲ್ಲ ಆದಷ್ಟು ಪ್ರಾಮಾಣಿಕ ರಾಗಿ ಸಮಾಧಾನಕರ ಉತ್ತರಗಳನ್ನು ನೀಡಲು ಯತ್ನಿಸೋಣ. ಇದಕ್ಕೆ ಬದಲಾಗಿ ನಮ್ಮನ್ನು ಗೆಲ್ಲುವ ಉದ್ದೇಶದಿಂದಲೋ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸುವ ಉದ್ದೇಶ ದಿಂದಲೋ ಪ್ರಶ್ನೆ ಕೇಳಲಾಗಿದೆ ಎಂದಾದರೆ ಅವಕ್ಕೆ ನೇರ ಉತ್ತರ ಕೊಡದೆ ವಕ್ರ ವಾಗಿಯೇ ಉತ್ತರಿಸಿ ಅವರ ಬಾಯಿಯನ್ನು ಮುಚ್ಚಿಸೋಣ.**

* * *

# • ಸಾಧನಾಕೃತಿಯಾಗಿ ಮಧ್ವವಿಜಯ •

ಶ್ರೀ ಮಧ್ವಗುರುಗಳ ಕುರಿತಾದ 'ಮಧ್ವವಿಜಯ' ಕಾವ್ಯವಾಗಿ, ಇತಿಹಾಸವಾಗಿ ಹೇಗೋ ಹಾಗೆಯೇ ಆಧ್ಯಾತ್ಮಿಕ ಮತ್ತು ಧಾರ್ಮಿಕ ಸಾಧನೆಗೆ ಸ್ಫೂರ್ತಿಪ್ರದವಾಗಿ ಅನುಸಂಧಾನಕ್ಕೆ ಪುಷ್ಟಿಪ್ರದವಾಗಿ ತೆರೆದುಕೊಳ್ಳಬಲ್ಲ ಒಂದು ಆಧ್ಯಾತ್ಮಿಕ, ಧಾರ್ಮಿಕ ಕೃತಿಯೂ ಹೌದು. ಈ ದೃಷ್ಟಿಯಿಂದ ಇದನ್ನು ಅಧ್ಯಯನ ಮಾಡಿದೆವೆಂದರೆ ಈ ವರೆಗಿನ ಮಧ್ವವಿಜಯದ ಐದಾರು ವ್ಯಾಖ್ಯಾನಗಳಲ್ಲಿ ಗುರುತಿಸಲ್ಪಡದ ಕೆಲವು ಅಂಶಗಳನ್ನು ಕಾಣ ಬಹುದಾಗಿದೆ. ಕೆಲವು ವಿಶೇಷಣಗಳ, ಮಾತುಗಳ ಸ್ವಾರಸ್ಯವನ್ನು ಅನುಭವಿಸಬಹುದಾಗಿದೆ. ಅವುಗಳಲ್ಲಿ ಕೆಲವನ್ನು ಹೀಗೆ ಪರಿಶೀಲಿಸಬಹುದು.

೧. **ಅಂತ್ಯಕಾಲದಲ್ಲಿ ಮುಕುಂದನ ಸ್ಮರಣೆ:** ಭೀಮಸೇನ ತನ್ನ ಅವತಾರಕಾರ್ಯ ಗಳನ್ನು ಪೂರೈಸಿ ತನ್ನ ಮೂಲರೂಪವನ್ನು ಸೇರುವಾಗ '**........ನಿಧಾಯ........ಹೃದಯೇ ಮುಕುಂದಂ ಭೇಜೇ ಪದಂ ಸ್ವಂ....**' ಎಂಬುದಾಗಿ ಮಧ್ವವಿಜಯದಲ್ಲಿ [1-44]ಹೃದಯದಲ್ಲಿ ಮುಕುಂದನನ್ನು ಸ್ಥಾಪಿಸಿಕೊಂಡು ಅರ್ಥಾತ್ ಮುಕುಂದನ ಸ್ಮರಣೆ ನಡೆಸುತ್ತ ಇದ್ದನೆಂದು ನಿರೂಪಿಸಲಾಗಿದೆ. ಇದರಿಂದ ಭೀಮಸೇನನಂತೆ ದೇಹತ್ಯಾಗದ ಸಂದರ್ಭದಲ್ಲಿ ದೇವರ ಸ್ಮರಣೆ ನಡೆಸುತ್ತಿರಬೇಕೆಂದು ಸಿದ್ಧವಾಯತಲ್ಲದೆ, '**ಹೃದಯೇ ಮುಕುಂದಂ**'–ಎಂದು ಮುಕುಂದ ನಾಮದಿಂದಲೇ ದೇವರನ್ನು ಉಲ್ಲೇಖಿಸಿರುವುದರಿಂದ ದೇವರ ಮುಕುಂದವ್ಯಕ್ತಿತ್ವವನ್ನು ವಿಶೇಷವಾಗಿ ಸ್ಮರಿಸುತ್ತಿರಬೇಕೆಂದೂ ಸೂಚಿತವಾಗುವುದು. ಮುಕ್ತಿಯನ್ನು ನೀಡುವುದ ರಿಂದಲೇ ಮುಕುಂದ ಎನಿಸಿರುವವನು ಭಗವಂತ. ಸಂಸಾರಬಂಧನಕ್ಕೆ ಪ್ರಯೋಜಕಗಳಾದ ಅಹಂಕಾರ ಮಮಕಾರಗಳನ್ನು ತೊಲಗಿಸಿ ಮುಕ್ತಿಯನ್ನು ಕೊಡುವವನು ಭಗವಂತನೇ. ಸಂಸಾರಬಂಧನದಲ್ಲಿ ತೊಳಲುತ್ತಿರುವವರಿಗೆ ತಾನು ಹೇಗೆ ಮುಕ್ತಿಯನ್ನು ನೀಡಿ ಅನುಗ್ರಹಿಸುವೆನೆಂಬುದಕ್ಕೆ ಪ್ರಾತ್ಯಕ್ಷಿಕೆಯಂತೆ ಮೊಸಳೆಯ ಹಿಡಿತಕ್ಕೆ ಸಿಕ್ಕಿ ಬಳಲುತ್ತಿದ್ದ ಗಜೇಂದ್ರನಿಗೆ ಮೊಸಳೆಯ ಹಿಡಿತದಿಂದ ಬಿಡುಗಡೆ ದೊರಕಿಸಿ ಅವನ ಮೂಲರೂಪ ಇಂದ್ರದ್ಯುಮ್ನನಾಗಿ ಮೆರೆಯುವಂತೆ ಮಾಡಿರುವವನು ಭಗವಂತ. ಈಗಾಗಲೇ ಅನಂತಾ ನಂತ ಜೀವರಿಗೆ ಮುಕ್ತಿಯನ್ನು ಅನುಗ್ರಹಿಸಿರುವನು. ಮುಕ್ತಿಪ್ರದಾನ ಪೂರ್ಣವಾಗಿ ಅವನ ಹಿಡಿತದಲ್ಲೇ ಇರುವ ಅಧಿಕಾರ.... ಹೀಗೆ ಮುಕ್ತಿಪ್ರಕ್ರಿಯೆಗೆ ಸಂಬಂಧಿಸುವ ಅವನ ಪಾತ್ರವನ್ನು ವಿವೇಚಿಸಿಕೊಳ್ಳಬೇಕು. '**ತಂ ಯಥಾಯಥಾ ಉಪಾಸತೇ ತದೇವ ಭವತ್**' –ಅವನ ಉಪಾಸನೆಗೆ ಅನುಗುಣವಾಗಿ ಸ್ಪಂದಿಸುವ ಭಗವಂತ ಉಪಾಸನೆಗೆ ತಕ್ಕ ಫಲ ನೀಡುವನೆಂದು ಉಪಾಸನಾನಿಯಮಕ್ಕನುಗುಣವಾಗಿ ಭಗವಂತನ ಮುಕುಂದವ್ಯಕ್ತಿತ್ವದ ಚಿಂತನೆ ನಡೆಸಿದರೆ, ಅದರಿಂದ ಪ್ರಸನ್ನನಾಗುವ ಮುಕುಂದನಿಂದ ನಮಗೂ ಮುಕ್ತಿ ದೊರಕ ಬಲ್ಲವು.

ಹೀಗೆ ಅಂತ್ಯಕಾಲದಲ್ಲಿ ಭಗವಂತನನ್ನು ಮುಕುಂದನನ್ನಾಗಿಯೇ ಸ್ಮರಿಸುತ್ತಿರಬೇಕೆಂದು ಸೂಚಿಸುವುದಕ್ಕಾಗಿಯೆ 'ಹೃದಯೇ ಮುಕುಂದಂ' ಅಂತ್ಯಕಾಲದಲ್ಲಿ ಭೀಮಸೇನ ತನ್ನ ಹೃದಯದಲ್ಲಿ ಮುಕುಂದನನ್ನು ಪ್ರತಿಷ್ಠಾಪಿಸಿರುವನೆಂದು ನಿರೂಪಿಸಲಾಗಿದೆ.

೨. **ವೇದವಿದ್ಯೆಯ ದೃಷ್ಟಾಂತದ ಔಚಿತ್ಯ:** ನಡಿಲ್ಲಾಯರು ವೇದವತಿ(?)ಯನ್ನು ವಿವಾಹಪ್ರಕ್ರಿಯೆಗನುಗುಣವಾಗಿ ಸ್ವೀಕರಿಸಿದರೆನ್ನುವಾಗ ಮಧ್ವವಿಜಯದಲ್ಲಿ **'......ಕನ್ಯಾಂ ಸುವರ್ಣಲಸಿತಾಮಿವ ವೇದವಿದ್ಯಾಂ ಜಗ್ರಾಹ'** [ಮ.ವಿ. 2-12] ವೇದವಿದ್ಯೆಯನ್ನು ಹೇಗೋ ಹಾಗೆ ಎಂದು ವೇದವಿದ್ಯೆಯ ದೃಷ್ಟಾಂತವನ್ನು ಕನ್ಯೆಗೆ ನೀಡಲಾಗಿದೆ.

ಗೃಹಸ್ಥ ತನ್ನ ಪತ್ನಿಯನ್ನು ಹೇಗೆ ವಿನಿಯೋಗಿಸಿಕೊಳ್ಳಬೇಕೆಂಬುದರ ಬಗ್ಗೆ ಈ ದೃಷ್ಟಾಂತ ಬೆಳಕು ಚೆಲ್ಲಬಲ್ಲದು. ಇತರ ಲೌಕಿಕ ವಿದ್ಯೆಗಳನ್ನಾದರೂ ಹೊಟ್ಟೆಪಾಡಿಗಾಗಿ ಬಳಸಿಕೊಳ್ಳಬಹುದು. ಆದರೆ ವೇದವಿದ್ಯೆಯನ್ನು ಮೋಕ್ಷಪುರುಷಾರ್ಥದ ಗಳಿಕೆಗಾಗಿಯೇ ವಿನಿಯೋಗಿಸಿಕೊಳ್ಳಬೇಕು. ಅಂತೆಯೇ ಕನ್ಯೆಯನ್ನು ಪತ್ನಿಯನ್ನಾಗಿ ಸ್ವೀಕರಿಸುವಾಗ ಐಂದ್ರಿಯಕ ಸುಖಭೋಗ ಇತ್ಯಾದಿ ಪ್ರಯೋಜನಗಳಿಗಿಂತಲೂ ಮುಖ್ಯವಾಗಿ ಮೋಕ್ಷ ಪುರುಷಾರ್ಥ ಸಾಧನೆಗೆ ಗೃಹಸ್ಥಧರ್ಮವನ್ನು ವಿನಿಯೋಗಿಸುವಲ್ಲಿ ಆಕೆಯನ್ನು ಚೆನ್ನಾಗಿ ಬಳಸಿಕೊಳ್ಳಬೇಕು ಎಂಬುದಾಗಿ.

೩. **ಮೈಥುನಕ್ಕೆ ಯಜ್ಞದ ಮೆರುಗು:** ಶ್ರೀ ಮಧ್ವರಂತಹ ಸುಪುತ್ರನನ್ನು ಪಡೆಯಲು ನಡಿಲ್ಲಾಯ ದಂಪತಿಗಳು ನಡೆಸಿದ್ದ ಮೈಥುನದಲ್ಲಿ ಅಳವಡಿಸಿದ್ದ ವಾಯುಯಜ್ಞದ ಅನುಸಂಧಾನ ಸೂಚಿತವಾಗುವಂತೆ **'ರೇಮೇಽಚ್ಚಯೋಪನಿಷದೇವ....'** ಎಂಬ ಮಧ್ವವಿಜಯದ ಶ್ಲೋಕದಲ್ಲಿ [1-13] ಮೂರು ದೃಷ್ಟಾಂತಗಳನ್ನು ನೀಡಲಾಗಿದೆ.

ಅ. ಮಹಾವಿವೇಕಿಯಾದವನು ನಿರ್ಮಲವಾದ ಉಪನಿಷತ್ತಿನ ಜೊತೆಗೆ ಕ್ರೀಡಿಸುವಂತೆ.

ಆ. ಅಂತಃಕರಣಶುದ್ಧವುಳ್ಳವನು ಪರಮಾತ್ಮನ ಕುರಿತಾದ ಭಕ್ತಿಯಿಂದ ಕ್ರೀಡಿಸುವಂತೆ.

ಇ. ಮಿಥ್ಯಾಭಿಮಾನದಿಂದ ದೂರನಾದವನು ಮುಕ್ತಿಯನ್ನು ಪಡೆದು ಅದರಲ್ಲಿ ಕ್ರೀಡಿಸುವಂತೆ...

ಈ ದೃಷ್ಟಾಂತಗಳಲ್ಲಿ ಪತ್ನಿಯ ವ್ಯಕ್ತಿತ್ವದಲ್ಲಿ ಉಪನಿಷತ್ತು, ಭಕ್ತಿ ಹಾಗೂ ಮುಕ್ತಿ ಇವುಗಳ ನಿರ್ಮಲತ್ವ, ಮಾಧುರ್ಯ ಹಾಗೂ ಸುಖಮಯತ್ವವನ್ನು ಕಾಣಬೇಕೆಂದು ಧ್ವನಿಸುವಂತೆ ಮೈಥುನಕ್ರಿಯೆ ಪಂಚಾಗ್ನಿವಿದ್ಯೆಯ ಮಹಾವಿವೇಚನೆಯೊಂದಿಗೆ ನಡೆಯಬೇಕು. ಹಾಗಾಗಬೇಕಾದರೆ ಮನಸ್ಸು ಪರಿಶುದ್ಧವಾಗಿರಬೇಕು. ಅಂದರೆ ಮನಸ್ಸಿನಲ್ಲಿ ಪಂಚಾಗ್ನಿವಿದ್ಯೆಗೆ ಸಂಬಂಧಿಸಿರುವ ವಿಚಾರಗಳೇ ತುಂಬಿರಬೇಕು. ಹೊರತು ಮೈಥುನಕ್ಕೆ ವಿನಿಯೋಗಿಸುವ ಅಂಗಾಂಗಗಳಲ್ಲಾಗಲೀ, ಅವುಗಳಿಗೆ ಸಂಬಂಧಿಸುವ ಚಟುವಟಿಕೆಗಳಲ್ಲಾಗಲೀ ಸುಖಭೋಗ, ಸುಖಭೋಗಸಾಧನ ಎಂಬ ಭಾವನೆ ಸುಳಿಯಲೇ ಬಾರದು. ಹೀಗಾಗಬೇಕಾದರೆ ಪತ್ನಿಯ ದೇಹದ ಬಗ್ಗೆ, ಅಂಗಾಂಗಗಳ ಬಗ್ಗೆ, ಅವುಗಳ ಮೂಲಕ ನಡೆಸುವ ಕ್ರಿಯೆಗಳ ಬಗ್ಗೆ 'ಮಿಥ್ಯಾಭಿಮಾನ' ಸಲ್ಲದು. ವಾಮಯಜ್ಞದ ಪ್ರಕ್ರಿಯೆಯಾಗಿ

ನಡೆಸಲಾಗುವ ಅವುಗಳ ಬಗ್ಗೆ ಇಲ್ಲದ ಸಲ್ಲದ ಭಾವನಾಸಾಮ್ರಾಜ್ಯವನ್ನು ಹೊರಿಸುವ ದುರಭಿಮಾನ ಸಲ್ಲದು.

ಹೀಗೆ ಈ ಮೂರು ದೃಷ್ಟಾಂತಗಳ ಮೂಲಕ ನಡಿಲ್ಲಾಯ ದಂಪತಿಗಳ ಮೈಥುನದ ಪಾವಿತ್ರ್ಯವನ್ನು ಸೂಚಿಸುವ ಮೂಲಕ ಉಳಿದ ಸಾಧಕರಿಗೂ ಮೈಥುನಕ್ಕೆ ವಾಮಯಜ್ಞದ ಮೆರುಗು ಬರಬೇಕೆಂದರೆ ಹೇಗೆ ನಡೆದುಕೊಳ್ಳಬೇಕೆಂದು ಮಾರ್ಗದರ್ಶನದ ಸೂಚನೆಯನ್ನೂ ಧ್ವನಿಸಿದಂತಾಗಿದೆ.

೪. **ವಿನಯದಿಂದ ವಿಜ್ಞಾನದ ಪ್ರಭಾವದ ಸೂಚನೆ:** ಜನರು ನಡಿಲ್ಲಾಯರನ್ನು 'ಭಟ್ಟ' ಎಂದು ಗೌರವಿಸಲು ಕಾರಣವಾಗಿ ಮಧ್ವವಿಜಯದಲ್ಲಿ '**ವಿಜ್ಞಾತಭಾರತಪುರಾಣ ಮಹಾರಹಸ್ಯಂ**' –ಭಾರತ ಪುರಾಣಗಳ ಪ್ರಮುಖ ರಹಸ್ಯವನ್ನು ಚೆನ್ನಾಗಿ ಬಲ್ಲವರಾಗಿದ್ದರೆಂದೂ, '**ವಿನೀತಮ್**' –ವಿನಯಸ್ವಭಾವದವರಾಗಿದ್ದರೆಂದೂ ನಿರೂಪಿಸಲಾಗಿದೆ [2-14] ಈ ಎರಡು ವಿಶೇಷಣಗಳಿಂದ ವಿಜ್ಞಾನ ಹಾಗೂ ವಿನಯ ಎಂಬ ಎರಡು ಗುಣಗಳನ್ನು ತಿಳಿಸಿಕೊಡುವ ಉದ್ದೇಶವಷ್ಟೇ ಅಲ್ಲದೆ, ಪುರಾಣಾದಿಗಳ ವಿಜ್ಞಾನ ನಡಿಲ್ಲಾಯರ ಮೇಲೆ ಚೆನ್ನಾಗಿ ಪ್ರಭಾವ ಬೀರಿತ್ತೆಂದು ತಿಳಿಸಿಕೊಡುವುದೂ ಉದ್ದೇಶ. ವಿಜ್ಞಾನ ಅಂತಃಕರಣದ ಮೇಲೆ ಸಾಕಷ್ಟು ಪ್ರಭಾವ ಬೀರಿದಾಗಷ್ಟೇ '**ವಿದ್ಯಾ ದದಾತಿ ವಿನಯಂ....**' ಎನ್ನುವಂತೆ ದೇವರ ಬಗ್ಗೆ, ಗುರುಹಿರಿಯರ ಬಗ್ಗೆ, ಸಮಾಜದ ಬಗ್ಗೆ ವಿನಯ ಕಾಣಿಸಿಕೊಳ್ಳುವುದು. ಇದಕ್ಕೆ ಬದಲಾಗಿ ಹೃದಯವನ್ನು ತಟ್ಟದ ವಿದ್ಯೆ ಛಾಂದೋಗ್ಯೋಪನಿಷತ್ತಿನ ಶ್ವೇತಕೇತುವಿಗೆ ಹೇಗೋ ಹಾಗೆ ಮತ್ತಷ್ಟು ಅಹಂಕಾರಕ್ಕೇ ಕಾರಣವಾಗಬಲ್ಲದು.

ಆದರೆ ನಡಿಲ್ಲಾಯರ 'ವಿಜ್ಞಾನ' ಹಾಗಾಗದೆ ವಿನಯಕ್ಕೆ ಪ್ರಯೋಜಕವಾಗಿದ್ದ ಪ್ರಯುಕ್ತ ಆ ವಿಜ್ಞಾನ ಅವರ ಅಂತಃಕರಣದ ಕದವನ್ನು ತಟ್ಟಿದ್ದಾಗಿತ್ತೆಂದು ಸೂಚಿತವಾಗುವುದು.

೫. **ಕುಮಾರನ ಗುಣದ ಜಯ:** ಉಪನಯನಸಂಸ್ಕಾರಕ್ಕೊಳಗಾದ ವಾಸುದೇವ '**ಜಿತಕುಮಾರಗುಣ**'ನಾಗಿದ್ದ ಎಂದು ಮಧ್ವವಿಜಯ [3-36] '**ಜಿತಕುಮಾರಗುಣಂ ಸುಕುಮಾರಕಂ....**' ಎಂದು ನಿರೂಪಿಸುತ್ತಿದೆ.

ಕೆಲವು ವ್ಯಾಖ್ಯಾನಗಳಲ್ಲಿ ಕಾಣುವಂತೆ ಕುಮಾರ ಎಂದರೆ ಸ್ಕಂದ ಎಂಬ ಅರ್ಥವನ್ನಿಟ್ಟುಕೊಂಡು ಅಂತಹ ಕುಮಾರನ ಗುಣಗಳನ್ನು ಗೆದ್ದವನೆಂದು ಉಪನೀತ ವಟುವನ್ನು ಪ್ರಶಂಸಿಸುವುದರಲ್ಲಿ ಸ್ವಾರಸ್ಯ ಇಲ್ಲ.

ಆದುದರಿಂದ ಕುಮಾರ ಎಂದರೆ 'ಸನತ್ಕುಮಾರ'. ಇಬ್ಬರು ಸನತ್ಕುಮಾರ ಹೆಸರಿನವರು ಇರುವರು. ಬ್ರಹ್ಮನ ಮಾನಸಪುತ್ರರಲ್ಲಿ ಒಬ್ಬ ಸನತ್ಕುಮಾರ ಪ್ರಸಿದ್ಧ. ಇವನು 'ಊರ್ಧ್ವರೇತಸ್ಕ'ನಾಗಿದ್ದು ಬ್ರಹ್ಮಚರ್ಯವನ್ನು ಅಳವಡಿಸಿಕೊಂಡಿದ್ದವನು. ಈ ಸನತ್ಕುಮಾರನಿಗೂ ಬ್ರಹ್ಮಚರ್ಯವನ್ನು ಉಪದೇಶಿಸಿದ, ಚತುರ್ಮುಖನಿಗೂ, ರುದ್ರನಿಗೂ ಬ್ರಹ್ಮಚರ್ಯದ ಪಾಠವನ್ನು ಹೇಳಿಕೊಟ್ಟ 'ಸನತ್ಕುಮಾರ' –ಭಗವಂತನ ಸಾಕ್ಷಾದ್ರೂಪ ಮತ್ತೊಂದಿದೆ ಎಂದು ಶ್ರೀ ಮಧ್ವರು ಪರಿಚಯಿಸಿಕೊಟ್ಟಿರುವರು–

ಕುಮಾರೋ ನಾಮ ಭಗವಾನ್ ಸ್ವಯಂ ಸ್ವಸ್ಮಾದಜಾಯತೇ ।
ದಿದೇಶ ಬ್ರಹ್ಮಣೇ ಬ್ರಹ್ಮ ಬ್ರಹ್ಮಚರ್ಯೇ ಸ್ಥಿತೋ ವಿಭುಃ ।
ಯಸ್ಮಾದ್ ಸನತ್ಕುಮಾರಶ್ಚ ಬ್ರಹ್ಮಚರ್ಯಮಪಾಲಯತ್ ।
ಯಃ ಸ್ಥಾಣೋಃ ಸ್ಥಾಣುತಾಂ ಪ್ರದಾದ್ ಭಗವಾನವ್ಯಯೋ ಹರಿಃ ॥
ಬ್ರಾಹ್ಮ [ಭಾ.ತಾ.ನಿ. 1-3-6]

ಈ ಸನತ್ಕುಮಾರರೂಪಿ ಪರಮಾತ್ಮ ಚತುರ್ಮುಖನಿಗೂ ಬ್ರಹ್ಮಚರ್ಯದ ಉಪದೇಶ ಕೊಟ್ಟಿದ್ದಾನೆಂದರೆ ವಾಯುದೇವನೂ ಅವನಿಂದ ಬ್ರಹ್ಮಚರ್ಯದ ಸ್ಫೂರ್ತಿ ಪಡೆದಿದ್ದಾನೆಂದೇ ಅರ್ಥ. ಆದುದರಿಂದ 'ಜಿತಕುಮಾರಗುಣಂ' ಎಂದರೆ ಸನತ್ಕುಮಾರರೂಪಿ ಪರಮಾತ್ಮನ ಬ್ರಹ್ಮಚರ್ಯವನ್ನು ಪಡೆದವನು –ಎಂಬ ಅರ್ಥ. ಜಿತ ಶಬ್ದಕ್ಕೆ ಗೆದ್ದ ಎಂಬ ಅರ್ಥ ಇರುವಂತೆ 'ಹೊಂದಿದ' ಎಂಬ ಅರ್ಥವೂ ಇದೆ.

ಬ್ರಹ್ಮನ ಮಾನಸಪುತ್ರ ಸನತ್ಕುಮಾರನನ್ನು ಕುಮಾರ ಶಬ್ದದಿಂದ ಇಟ್ಟುಕೊಂಡಾಗ –ಅವನ ಬ್ರಹ್ಮಚರ್ಯಗುಣವನ್ನು ಗೆದ್ದವನು ಎಂಬುದು 'ಜಿತಕುಮಾರಗುಣಂ' ಪದದ ಅರ್ಥ.

ಉಪನೀತವಟುಗಳು ತಮ್ಮಲ್ಲಿ ಬ್ರಹ್ಮಚರ್ಯ ಸಿದ್ಧಿಸುವುದಕ್ಕಾಗಿ ಮುಖ್ಯವಾಗಿ ಸನತ್ಕುಮಾರರೂಪಿ ಪರಮಾತ್ಮನ, ಬಳಿಕ ಬ್ರಹ್ಮನ ಮಾನಸಪುತ್ರ ಸನತ್ಕುಮಾರನ ಸ್ಮರಣೆ ನಡೆಸುತ್ತಿರಬೇಕೆಂಬುದು ಈ ವಿಶೇಷಣದಿಂದ ಧ್ವನಿಸುವುದು.

೬. **ವಾಸುದೇವನ ಸೌಕುಮಾರ್ಯ:** ಉಪನೀತನಾದ ವಾಸುದೇವ 'ಜಿತಕುಮಾರ ಗುಣ – ಸನತ್ಕುಮಾರನ ಗುಣ'ವನ್ನು ಪಡೆದುಕೊಂಡಿದ್ದಾನೆ ಅಥವಾ ಗೆದ್ದಿದ್ದಾನೆ ಎನ್ನಲಾದ ಆ ಗುಣವಾದರೂ ಯಾವುದು? ಈ ಬಗ್ಗೆ ಸೂಚನೆ ದೊರಕುವುದಕ್ಕಾಗಿಯೇ 'ಸುಕುಮಾರಕಂ' ಎಂದು ಮತ್ತೊಂದು ವಿಶೇಷಣವನ್ನು ನೀಡಲಾಗಿದೆ. ಇದಕ್ಕೆ 'ಸುಕೋಮಲ' ಎಂದು ಅರ್ಥೈಸಲಾಗುವುದು. ಆದರೆ ಸುಕೋಮಲತ್ವ ಉಪನೀತ ವಟುವಿನಲ್ಲಿ ಉಲ್ಲೇಖಾರ್ಹ ಗುಣವೇನೂ ಅಲ್ಲ. ಆದುದರಿಂದ ಅಲ್ಲಿಯ ಕುಮಾರ ಶಬ್ದಕ್ಕೆ ಆಕ್ಷರಿಕಾರ್ಥವನ್ನು ಇಟ್ಟುಕೊಳ್ಳಬೇಕು. ಕುತ್ಸಿತಃ ಮಾರಃ ಯೇನ ಸಃ ಕುಮಾರಃ –ಎಂಬುದಾಗಿ ಯಾರು ಕಾಮನ ಬಾಧೆಗೆ ಒಳಗಾಗುವುದಿಲ್ಲವೋ ಅವನು ಕುಮಾರ ಎನಿಸುವವನು. ವಾಸುದೇವ ಈ ಅರ್ಥದಲ್ಲಿ ಸುಕುಮಾರ; ಅಂದರೆ ಕಾಮನ ಪೀಡೆಗೆ ಒಳಗಾಗದವನು. ಇದು ಬ್ರಹ್ಮಚರ್ಯದ ಒಂದು ಅಂಶವಾಗಿರುವುದರಿಂದ 'ಜಿತಕುಮಾರಗುಣ' ಎಂಬ ವಿಶೇಷಣಕ್ಕೆ ಪೂರಕವಾಗಿ ಪ್ರಯುಕ್ತವಾದದ್ದೆಂದು ಇಟ್ಟುಕೊಳ್ಳಬಹುದಾಗಿದೆ.

೭. **ಸ್ವಾಭಾವಿಕವಾದುದು ಪಾರಮಹಂಸ್ಯಾಶ್ರಮ :** ವಾಸುದೇವ ಸಂನ್ಯಾಸಾಶ್ರಮವನ್ನು ಸ್ವೀಕರಿಸಲು ನಿರ್ಧರಿಸಿದನೆಂದು ನಿರೂಪಿಸುವಾಗ 'ನಿಜಂ ಭಜನ್ ಪಾರಮಹಂಸ್ಯಾಶ್ರಮಂ.....' [4-2] ತನ್ನ ಸ್ವಾಭಾವಿಕವಾದ ಯತ್ಯಾಶ್ರಮವನ್ನು ಸ್ವೀಕರಿಸಿ, 'ಅಸಂಗಮಸ್ಮಾತ್ ಪ್ರಕಟೀಕರೋಮ್ಯಹಮ್' –ಅಂತಹ ಪಾರಮಹಂಸ್ಯಾಶ್ರಮದ ಮೂಲಕ ವಿಷಯಪದಾರ್ಥ

ಗಳ ಆಸಕ್ತ್ಯಭಾವವನ್ನು, ಅಂದರೆ ವೈರಾಗ್ಯವನ್ನು ಪ್ರಕಟಗೊಳಿಸುವೆನು –ಎಂದು ಹೇಳಲಾಗಿದೆ.

ಈ ಪದ್ಯದಲ್ಲಿ ಇರುವ 'ನಿಜಂ' –ಎಂಬ ವಿಶೇಷಣವನ್ನು 'ಅಸಂಗ'ಕ್ಕೂ ಅನ್ವಯಿಸಿಕೊಳ್ಳಬೇಕು; ಪಾರಮಹಂಸ್ಯಾಶ್ರಮಕ್ಕೂ ಅನ್ವಯಿಸಿಕೊಳ್ಳಬೇಕು. '**.....ಸ್ವಕೇ ನಿತ್ಯೇ ನಿಜಂ ತ್ರಿಷು**' –ಎಂದಿರುವಂತೆ ನಿಜ ಶಬ್ದಕ್ಕೆ ತನ್ನದ್ದು ಎಂಬುದಾಗಿಯೂ, ನಿತ್ಯವಾದದ್ದೆಂಬುದಾಗಿಯೂ ಅರ್ಥವಿದೆ. 'ಪಾರಮಹಂಸ್ಯಾಶ್ರಮಕ್ಕೆ ಅನ್ವಯಿಸುವಾಗ ನಿಜ ಶಬ್ದಕ್ಕೆ 'ನಿತ್ಯ' ಎಂಬ ಅರ್ಥವನ್ನಿಟ್ಟುಕೊಳ್ಳಬೇಕು. '**ಕೃತ್ಸ್ನಾ ಹ್ಯೇವ ಗೃಹಿಣೋ ದೇವಾಃ ಕೃತ್ಸ್ನಾ ಏತೇ ಯತಯಃ....**' –ಎಂದು ಪೌತ್ರಾಯಣಶ್ರುತಿಯಲ್ಲಿ [ಬ್ರ.ಸೂ.ಭಾ. 3-4-4] ತಿಳಿಸಲಾಗುವಂತೆ ದೇವತೆಗಳು ಯಾವಾಗಲೂ ಗೃಹಸ್ಥರೂ, ಯತಿಗಳೂ ಆಗಿರುವರು. ಆದ್ದರಿಂದ ವಾಯುದೇವರಿಗೂ ಯಾವಾಗಲೂ ಸಂನ್ಯಾಸಾಶ್ರಮವುಳ್ಳವರೂ ಆಗಿರುವರೆಂದು, ಅಂತಹ ವಾಯುದೇವರ ಸಾಕ್ಷಾದವತಾರ ವಾಸುದೇವನಲ್ಲಿ ಪಾರಮಹಂಸ್ಯಾಶ್ರಮ ನಿಜವಾದುದು; ನಿತ್ಯವಾದುದು. ಹೊರತು ಅಚ್ಯುತ ಪ್ರೇಕ್ಷಾಚಾರ್ಯರಿಂದ ಸಂನ್ಯಾಸದೀಕ್ಷೆ ಪಡೆದುಕೊಂಡ ಬಳಿಕ ಸಿದ್ಧಿಸಿದ್ದಲ್ಲ.

ಹೀಗೆ ನಿಜವಾದ, ನಿತ್ಯವಾದ ಪಾರಮಹಂಸ್ಯಾಶ್ರಮವನ್ನು ಸ್ವೀಕರಿಸಿ, ನಿಜವಾದ 'ಅಸಂಗ'ವನ್ನು ಪ್ರಕಟಿಸಬೇಕೆಂದು ವಾಸುದೇವ ನಿರ್ಧರಿಸಿದ. ಅಸಂಗ ಎಂದರೆ ವೈರಾಗ್ಯ ನಿಜ ತನ್ನದ್ದೆಂದು ಅರ್ಥ. ವಾಯುದೇವ ಜ್ಞಾನ, ಭಕ್ತ್ಯಾದಿಗಳಿಗೆ ಹೇಗೋ ಹಾಗೆ ವೈರಾಗ್ಯಕ್ಕೂ ಅಭಿಮಾನಿ. ಆದುದರಿಂದಲೇ '**ಸ್ಥಿತಿರ್ಯೋಗಶ್ಚ ವೈರಾಗ್ಯಂ....ಇತ್ಯಾದಿ ಬಹುರೂಪಿಣಃ**' ಎಂದು ಪೈಂಗಿಶ್ರುತಿ [ಬೃ.ಉ.ಭಾ. 3-5-4] ವಾಯುದೇವನಿಗೆ 'ವೈರಾಗ್ಯ' ಎಂಬುದಾಗಿಯೇ ಒಂದು ರೂಪ ಇದೆ ಎಂದು ಸಾರುತ್ತಿದೆ. ಹೀಗೆ ವೈರಾಗ್ಯಕ್ಕೆ ವಾಯುದೇವ ಅಭಿಮಾನಿಯಾಗಿರುವುದರಿಂದ ಅವನ ಪಾಲಿಗೆ ವೈರಾಗ್ಯ –ನಿಜವಾದುದು– ಅಂದರೆ ಸ್ವಕೀಯ, ಅವನ ಒಡೆತನಕ್ಕೆ ಸೇರಿದ್ದು. ಅದನ್ನು ಸಂನ್ಯಾಸಾಶ್ರಮದ ಮೂಲಕ ಪ್ರಕಟಗೊಳಿಸುವೆನೆಂಬುದು ವಾಸುದೇವನ ಯೋಚನೆ ಎಂದು ಭಾವಿಸಬಹುದಾಗಿದೆ.

೮. **ಉಪಯೋಗಿಸುತ್ತಿದ್ದ ವಸ್ತುಗಳ ತ್ಯಾಗಕ್ಕೆ ಅನುಜ್ಞಾಯಾಚನೆ:** ಸಂನ್ಯಾಸಸ್ವೀಕಾರಕ್ಕಾಗಿ ನಿರ್ಧರಿಸಿದ ವಾಸುದೇವ 'ಶ್ರೀಹರಿಯ ಅನುಜ್ಞೆ ಪಡೆದುಕೊಳ್ಳಲು ಎಲ್ಲ ವಸ್ತುಗಳಲ್ಲಿ ವ್ಯಾಪಿಸಿರುವ, ತನ್ನ ವಸ್ತುಗಳಲ್ಲೆಲ್ಲ ನೆಲೆಸಿರುವ ಶ್ರೀಹರಿಯನ್ನು ನಮಸ್ಕರಿಸಿದ' [4-4] ಎಂದು ನಿರೂಪಿಸಲಾಗಿದೆ. ತಾನು ಅದುವರೆಗೆ ಉಪಯೋಗಿಸುತ್ತಿದ್ದ ವಸ್ತುಗಳಲ್ಲಿರುವ ಭಗವಂತನನ್ನು ಯಾಕೆ ನಮಸ್ಕರಿಸಿದ? ಆ ವಸ್ತುಗಳಲ್ಲಿ ನೆಲೆಸಿರುವ ಭಗವಂತನ ಅನುಜ್ಞೆ ಯಾದರೂ ಯಾಕೆ ಬೇಕು? –ಎಂಬ ಎರಡೂ ಸಂದೇಹಗಳಿಗೆ ಸಮಾಧಾನ ಸೂಚಿತವಾಗುವಂತೆ '**ಅಪಾವನುಜ್ಞಾರ್ಥಮಥಾನಮದ್ಧರಿಂ...**' ಎಂದು ನಿರೂಪಿಸಲಾಗಿದೆ. ಯಾವುದೇ ವಸ್ತುವನ್ನು ನಮ್ಮ ಉಪಯೋಗಕ್ಕೆ ಬಳಸಿಕೊಳ್ಳುವಾಗ, 'ಈಶಾವಾಸ್ಯಮಿದಂ ಸರ್ವಂ...' ಎಂದಿರುವಂತೆ ಈಶನ ಒಡೆತನಕ್ಕೆ ಸೇರಿದ ಆ ವಸ್ತುವಿನಲ್ಲಿರುವ ಭಗವಂತನ ಅನುಜ್ಞೆಯನ್ನು ಪಡೆದುಕೊಳ್ಳಬೇಕಾದಂತೆ, ಹೀಗೆ ಭಗವಂತನ ಅನುಜ್ಞೆ ಪಡೆದು ಉಪಯೋಗಿಸಿಕೊಳ್ಳಲ್ಪಡುತ್ತಿರುವ ವಸ್ತುಗಳನ್ನು ಇದ್ದಕ್ಕಿದ್ದಂತೆ ಉಪಯೋಗಿಸಿಕೊಳ್ಳುವುದನ್ನು ಬಿಡು

ವಾಗಲೂ ಅದರಲ್ಲಿರುವ ಭಗವಂತನ ಅನುಜ್ಞೆಯನ್ನು ಪಡೆದುಕೊಳ್ಳಬೇಕು. ಹೀಗೆ ಮಾಡದೆ ಇದ್ದಕ್ಕಿದ್ದಂತೆ ಆ ವಸ್ತುಗಳನ್ನು ತ್ಯಜಿಸಿದರೆ ಅವುಗಳಲ್ಲಿರುವ ಭಗವದ್ರೂಪಗಳಿಗೆ ಅಪಚಾರ ವೆಸಗಿದಂತಾಗುವುದು. ಅದು ವರೆಗೆ ಆಯಾ ವಸ್ತುಗಳ ಮೂಲಕ ಸಂಪರ್ಕಕ್ಕೊಳಗಾಗುತ್ತಿದ್ದ ಭಗವದ್ರೂಪಗಳನ್ನು ಕೇಳದೆಯೇ ಆ ವಸ್ತುಗಳನ್ನು ತ್ಯಜಿಸಿದರೆ ಒಂದು ಬಗೆಯ ಕೃತಘ್ನತೆ ಯನ್ನು ಎಸಗಿದಂತಾಗುವುದು. ಅದಕ್ಕಾಗಿ ವಾಸುದೇವ ಆಯಾ ವಸ್ತುಗಳಲ್ಲಿದ್ದ ಭಗವ ದ್ರೂಪಗಳಿಗೂ ನಮಸ್ಕರಿಸಿ ಆಯಾ ವಸ್ತುಗಳ ಸಂನ್ಯಾಸಕ್ಕೆ ಅವುಗಳಲ್ಲಿರುವ ಭಗವದ್ರೂಪ ಗಳಿಂದ ಅನು ಮತಿಯನ್ನು ಪಡೆದುಕೊಂಡನು.

ನಾವು ಕೂಡಾ ಯಾವುದಾದರೊಂದು ವಸ್ತುವನ್ನು ಬಳಸಿಕೊಳ್ಳುವಾಗಲೂ '**ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತೀಃ ಪ್ರಬೋಧಯನ್....**' ಎಂದಿರುವಂತೆ ಅಲ್ಲಿಯ ಸಾಮರ್ಥ್ಯವನ್ನು ಬೆಳಕಿಗೆ ತರುವ ಅಲ್ಲಿರುವ ಭಗವದ್ರೂಪದ ಅನುಮತಿಯನ್ನು ಪಡೆದುಕೊಳ್ಳಬೇಕು. ಹಾಗೆಯೇ ಅದುವರೆಗೆ ಉಪಯೋಗಿಸಲ್ಪಡುತ್ತಿದ್ದ ವಸ್ತುಗಳನ್ನು ತ್ಯಜಿಸುವಾಗಲೂ ಅಲ್ಲಿರುವ ಭಗವಂತನ ಅನುಜ್ಞೆ ಪಡೆದುಕೊಳ್ಳಲು ಮರೆಯಬಾರದು.

೯. **ಆನಂದತೀರ್ಥ ನಾಮದ ಸ್ವಾರಸ್ಯ:** ಶ್ರೀ ಮಧ್ವರ 'ಆನಂದತೀರ್ಥ' –ಎಂಬ ಹೆಸರನ್ನು ಕೇಳಿದಾಕ್ಷಣ ಆನಂದಕರ ಶಾಸ್ತ್ರವನ್ನು ಪ್ರಸ್ತುತಪಡಿಸಿದವರೆಂಬ ಅರ್ಥವನ್ನೇ ಹೆಚ್ಚಾಗಿ ಹೇಳಲಾಗುವುದು. ಆದರೆ ಈ ಅರ್ಥಕ್ಕಿಂತ ಮುಖ್ಯವಾದ ಅರ್ಥ ಆನಂದರೂಪಿ ಭಗವಂತನ ಸನ್ನಿಧಾನಕ್ಕೆ ವಿಶೇಷವಾಗಿ ಪಾತ್ರರಾಗಿರುವರೆಂಬುದು.

ಆದುದರಿಂದಲೇ ನಾರಾಯಣಪಂಡಿತರು ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯ ರಿಂದ ಇಡಲ್ಪಟ್ಟ 'ಆನಂದತೀರ್ಥ' ಎಂಬ ಹೆಸರು ಅವರ ವ್ಯಕ್ತಿತ್ವಕ್ಕೆ ಅತ್ಯಂತ ಹೊಂದಿ ಕೊಳ್ಳುವುದೆಂದು ಸಮರ್ಥಿಸುತ್ತ [ಮ.ವಿ. 5-2] ಮೊದಲು ತೋರಿಸುವ ಅರ್ಥ –'**ಆನಂದ ರೂಪಸ್ಯ ಪರಸ್ಯ ಪಾತ್ರಧೀಃ....**' 'ಆನಂದತೀರ್ಥ' ನಾಮದ ಆನಂದ ಹೆಸರು ಆನಂದರೂಪಿ ಪರಮಾತ್ಮನನ್ನು ತಿಳಿಸಿದರೆ, ತೀರ್ಥ ಶಬ್ದವು 'ಪಾತ್ರ' –ಎಂಬ ಅರ್ಥವನ್ನು ತಿಳಿಸಬಲ್ಲದು. '**ತೀರ್ಥಂ.... ಅವತಾರರ್ಷಿಜುಷ್ಟಾಂಬುಪಾತ್ರೋಪಾಧ್ಯಾಯಮಂತ್ರಿಷು**' –ಎಂದು ಮೇದಿನೀ ಕೋಶದಲ್ಲಿ ತೀರ್ಥ ಶಬ್ದಕ್ಕೆ ಪಾತ್ರ ಎಂಬ ಅರ್ಥವನ್ನು ಉಲ್ಲೇಖಿಸಲಾಗಿದೆ. ಶ್ರೀ ಮಧ್ವರು ಆನಂದರೂಪಿ ಪರಮಾತ್ಮನಿಗೆ ಪಾತ್ರರಾದವರೆಂದರೆ ಯಾವಾಗಲೂ ಅವನ ಧ್ಯಾನವನ್ನೇ ನಡೆಸುತ್ತಿರುವವರೆಂಬ ಅಭಿಪ್ರಾಯದಲ್ಲಿ 'ಆನಂದರೂಪಸ್ಯ ಪರಸ್ಯ ಪಾತ್ರಧೀಃ' –ಯಾರ ಬುದ್ಧಿಯು ಆನಂದರೂಪಿ ಪರಮಾತ್ಮನಿಗೆ ಪಾತ್ರವಾಗಿದೆಯೋ ಅಂತಹವರೆಂದು ತಿಳಿಸ ಲಾಗಿದೆಯಷ್ಟೇ.

'ನಾಮ ದದ್ಯಾತ್ ಪ್ರಯತ್ನೇನ ವೈಷ್ಣವಂ ಪಾಪನಾಶನಮ್' ಎಂದು ಧರ್ಮಶಾಸ್ತ್ರ ಸಾರುತ್ತಿರುವಂತೆ ಶ್ರೀವಿಷ್ಣುವಿನ ಸ್ಮರಣೆಗೆ ಪೋಷಕವಾಗುವ ನಾಮವನ್ನೇ ಇಡಬೇಕಾದುದ ರಿಂದ ಅಚ್ಯುತಪ್ರೇಕ್ಷಾಚಾರ್ಯರು ಈ ಅರ್ಥದಲ್ಲಿ 'ಆನಂದತೀರ್ಥ' ನಾಮವು ಆನಂದ ನಾಮಕ ಭಗವಂತನ ಸ್ಮರಣೆಗೆ ಪೂರಕವಾಗುವುದೆಂದು ಮುಖ್ಯವಾಗಿ ಈ ಅರ್ಥದ ಅನುಸಂಧಾನದಿಂದಲೇ 'ಆನಂದತೀರ್ಥ' ಎಂಬ ನಾಮವನ್ನು ಇಟ್ಟಿರುವರೆಂದು ಭಾವಿಸ ಬಹುದಾಗಿದೆ.

ಛಾಂದೋಗ್ಯೋಪನಿಷತ್ತಿನಲ್ಲಿ [3-1-1] ಪ್ರಸ್ತುತವಾದ ಮಧು ವಿದ್ಯೆಗೆ ಸಂಬಂಧಿಸಿದಂತೆ, ಮಧ್ವಪೂಪ -ಜೇನುಗೂಡು ವಾಯುದೇವ; ಯಾಕೆಂದರೆ ಆನಂದರೂಪಿಯಾಗಿದ್ದು ಮಧು ಎನಿಸಿರುವ ಭಗವಂತ ವಾಯುದೇವನಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವನು -'....**ಮಧ್ವಪೂಪಸ್ತು ಮಾರುತಃ । ತಸ್ಮಿನ್ ಸನ್ನಿಹಿತೋ ವಿಷ್ಣುರ್ವಿಶೇಷೇಣ ಯತಃ ಸದಾ**' -ಎಂಬುದಾಗಿ ಸಾಮಸಂಹಿತೆ ನೀಡಿರುವ 'ಮಧ್ವಪೂಪ' ಎಂಬ ವಾಯುದೇವನ ಹೆಸರಿನ ವಿವರಣೆಯನ್ನು ಅನುಸರಿಸಿ ಬಂದಂತೆ ಇದೆ ಈ ಅರ್ಥದ 'ಆನಂದತೀರ್ಥ' ಎಂಬ ಮಧ್ವರ ನಾಮ.

ಆನಂದತೀರ್ಥದ ಮತ್ತೊಂದು ಅರ್ಥ ಹಿಂದಿನ ಅರ್ಥದಿಂದ ಪ್ರಯೋಜ್ಯಪ್ರಯೋಜಕಭಾವಸಂಬಂಧದ ಹಿನ್ನೆಲೆಯನ್ನಿಟ್ಟುಕೊಂಡು ಹೊರಡುವಂತಹದ್ದು. '**ತಂ ಯಥಾ ಯಥೋಪಾಸತೇ ತದೇವ ಭವತಿ**' -ಎಂಬ ಉಪಾಸನಾನಿಯಮಕ್ಕನುಗುಣವಾಗಿ ಶ್ರೀಮಧ್ವರು ಯಾವಾಗಲೂ ಆನಂದರೂಪಿ ಪರಮಾತ್ಮನ ಚಿಂತನೆಯನ್ನೇ ನಡೆಸುತ್ತಿರುವುದರಿಂದ ಅವರ ಮೂಲಕ ಆನಂದಪ್ರದಶಾಸ್ತ್ರ ಹೊರಹೊಮ್ಮುವಂತಾಗಿದೆ- ಎಂದು. ಆದ್ದರಿಂದ ಆನಂದತೀರ್ಥನಾಮದಿಂದ ಶ್ರೀಮಧ್ವರನ್ನು ಸ್ಮರಿಸಿಕೊಳ್ಳುವಾಗ ಮೊದಲು ಆನಂದರೂಪಿ ಪರಮಾತ್ಮನ ಸನ್ನಿಧಾನಕ್ಕೆ ವಿಶೇಷವಾಗಿ ಪಾತ್ರರಾದವರು; ಆದುದರಿಂದಲೇ ಅವನ ಅನುಗ್ರಹದಿಂದಾಗಿ ಸಜ್ಜನರಿಗೆ ಆನಂದಪ್ರದಶಾಸ್ತ್ರಗಳನ್ನು ನೀಡಿದರೆಂಬ ಅರ್ಥಾನುಸಂಧಾನವನ್ನು ಮಾಡಬೇಕು.

೧೧. **ವಿಶ್ವೇಶಚೇತಾ:** ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರಿಗೆ ಶ್ರೀ ಮಧ್ವರು ತಮ್ಮ ಜಠರದಲ್ಲಿರುವ ಅಗ್ನಿಯನ್ನು ಪರಿಚಯಿಸಿಕೊಟ್ಟರೆನ್ನುವಾಗ ಅವರನ್ನು 'ವಿಶ್ವೇಶಚೇತಾಃ' ಎಂಬ ಹೆಸರಿನಿಂದ ಉಲ್ಲೇಖಿಸಲಾಗಿದೆ. [ಮ.ವಿ.5.33]

ತಮ್ಮ ಹೆಗ್ಗಳಿಕೆಯನ್ನು ಮಾಡಿಕೊಳ್ಳುವುದು ಆತ್ಮಹತ್ಯೆಗೆ ಸಮಾನವೆಂದು ಪರಿಗಣಿತವಾದ 'ಆತ್ಮಪ್ರಶಂಸೆ' ಆಗಲಾರದೇ? ಇದಕ್ಕೆ ಒಂದು ಪರಿಹಾರ- '**ಯಥಾಸ್ವರೂಪ ವಿಜ್ಞಾನ ಮಾತ್ರನ್ನೇವ ನ ದೋಷಕೃತ್**' ಎಂಬ ವ್ಯಾಸಸ್ಮೃತಿ[ಮ.ಭಾ.ತಾ.ನಿ. 32-73] ಪ್ರತಿಪಾದಿಸುತ್ತಿರುವಂತೆ ತನ್ನ ನಿಜಸ್ವರೂಪಕ್ಕನುಗುಣವಾಗಿ ತನ್ನ ಬಗ್ಗೆ ತಿಳಿವಳಿಕೆ, ಹೇಳಿಕೆ ದೋಷವೆನಿಸಲಾರದು.

ಮತ್ತೊಂದು ಪರಿಹಾರ- ತನ್ನಲ್ಲಿ ಕಾಣಿಸುವ ಗುಣಗಳಿಗೆ, ಲೀಲೆಗಳಿಗೆ, ಮಹಿಮೆಗಳಿಗೆ ಭಗವಂತನೇ ನಿಯಾಮಕ, ಒಡೆಯ ಎಂದು ತಿಳಿದಾಗ, ಹೇಳಿದಾಗ ಅದು ಭಗವನ್ಮಹಿಮೆಯಾಗಿ ತಿಳಿಸಿದಂತಾಗುವುದು.

ಈ ನೀತಿಗನುಗುಣವಾಗಿ ಶ್ರೀ ಮಧ್ವರು 'ವಿಶ್ವೇಶಚೇತಸ್ಕ'ರಾಗಿ ಅಂದರೆ ವಿಶ್ವೇಶನ ಅನುಗ್ರಹದಿಂದಾಗಿ ಅಂಗುಷ್ಠಗಾತ್ರದ ಅಗ್ನಿ ನನ್ನ ಜಠರದಲ್ಲಿ ಇರುವುದು ಎಂದು ತನ್ನ ಮಹಿಮೆಗಿಂತಲೂ ಹೆಚ್ಚಾಗಿ 'ವಿಶ್ವೇಶ'ನ ಮಹಿಮೆಯಾಗಿ ತಿಳಿಸಿರುವರು.

'**ವಿಶ್ವೋ ವಾಯುಃ ಸಮುದ್ದಿಷ್ಟಃ...**' ಎಂದಿರುವಂತೆ ವಿಶ್ವ ಎಂದರೆ ವಾಯುದೇವ ಎಂಬ ಅರ್ಥವೂ ಇದೆ. ಅಂತಹವನಿಗೆ ಭಗವಂತನು 'ಈಶ' ಎಂದರೆ ಅವನ ವಿಶ್ವತ್ವ

ರೂಪವಾದ ವ್ಯಕ್ತಿತ್ವವನ್ನು ನಿಯಂತ್ರಿಸುವ ಒಡೆಯ ಎಂಬ ಅಭಿಪ್ರಾಯ. ಹೀಗೆ ವಾಯು ದೇವನಿಗೆ ಒಡೆಯನಾಗಿರುವುದರಿಂದ 'ವಿಶ್ವೇಶ' ಎನಿಸಿರುವ ಭಗವಂತನ ಅನುಗ್ರಹ ದಿಂದಾಗಿಯೇ ತಮ್ಮ ಜಠರದಲ್ಲಿ ಅಂಗುಷ್ಠ ಗಾತ್ರದ ಅಗ್ನಿ ಇರುವುದೆಂಬ ಅನುಸಂಧಾನಕ್ಕೆ ಪುಷ್ಟಿ ನೀಡುವಂತೆ 'ವಿಶ್ವೇಶಚೇತಾಃ' ಎಂಬ ವಿಶೇಷಣವನ್ನು ಶ್ರೀ ಮಧ್ವಗುರುಗಳಿಗೆ ನೀಡಲಾಗಿದೆ.

೧೨. **ವ್ಯಾಖ್ಯಾದಸೌ 'ಶಿಷ್ಯಗಣಾಯ'**: ತಿರುವನಂತಪುರದಲ್ಲಿ ಸೇರಿದ್ದ ಸಭೆಯಲ್ಲಿ ಬ್ರಹ್ಮಸೂತ್ರಗಳ ವಿವರಣೆಯನ್ನು 'ಶಿಷ್ಯಗಣಾಯ' ಶಿಷ್ಯಸಮೂಹವನ್ನು ಉದ್ದೇಶಿಸಿ ಮಾಡಿದರು. [ಮ.ವಿ. 5. 37] ಎಂದು ನಿರೂಪಿಸಲಾಗಿದೆ. ಸಭೆಯಲ್ಲಿ [ಸಂಸದಿ] ವ್ಯಾಖ್ಯಾನ ಮಾಡಿದರೆಂದರೆ ಸಭೆಯಲ್ಲಿ ಉಪಸ್ಥಿತರಿದ್ದ ಜಿಜ್ಞಾಸುಗಳಿಗಾಗಿ ವ್ಯಾಖ್ಯಾನ ಮಾಡಿದರೆಂದು ಸಿದ್ಧವಾಗುವಾಗ, 'ಶಿಷ್ಯಗಣಾಯ' ಎಂಬ ಶಬ್ದವನ್ನು ಬಳಸುವ ಮೂಲಕ ಸಭೆಯಲ್ಲಿ ಪ್ರವಚನ ಮಾಡಿದ್ದೇನೋ ನಿಜ, ಆದರೆ ಸಭೆಯಲ್ಲಿಯ ಎಲ್ಲ ಸಭ್ಯರನ್ನು ಉದ್ದೇಶಿಸಿ ಸೂತ್ರದ ಪ್ರವಚನ ನಡೆಸಿದ್ದಲ್ಲ, ಮತ್ತೆ ಶಿಷ್ಯಸಮೂಹಕ್ಕಾಗಿಯಷ್ಟೇ ಪ್ರವಚನ ನಡೆಸಿದ್ದರೆಂದು ಸೂಚಿಸಲ್ಪಡುವುದು. ಇದರ ಆಂತರ್ಯ ಹೀಗಿದೆ– **'ಅನಾವಿಷ್ಕುರ್ವ ನ್ನನ್ವಯಾತ್'** ಎಂಬ ಬ್ರಹ್ಮಸೂತ್ರದಲ್ಲಿ [3.4.49] ಅಯೋಗ್ಯರ ಎದುರು ವಿದ್ಯೆಯನ್ನು ಆವಿಷ್ಕಾರಗೊಳಿಸಬಾರದು ಎಂದು ಎಚ್ಚರಿಸಲಾಗಿದೆ. ಹೀಗಿರುವಾಗ ಯೋಗ್ಯರು ಅಯೋಗ್ಯರು ಸೇರಿರುವ ಸಭೆಯಲ್ಲಿ ಬ್ರಹ್ಮಸೂತ್ರದಂತ ಶ್ರೇಷ್ಠ ಗ್ರಂಥದ ವಿದ್ಯೆಯನ್ನು ಆವಿಷ್ಕರಿಸಿದ್ದು ಎಷ್ಟು ಸಮರ್ಥನೀಯ? **'ತೇಷ್ವಯೋಗ್ಯೇಷು ತತ್ವಜ್ಞಃ ತತ್ವಂ ನಾತಿ ಪ್ರಕಾಶಯೇತ್'** ಎಂದು ಅಯೋಗ್ಯರಲ್ಲಿ ತತ್ವಗಳ ಪ್ರಕಟಣೆಯನ್ನು ಮಾಡಬಾರದು ಎಂದು ಎಚ್ಚರಿಸಿರುವ ಪ್ರಕಾಶಸಂಹಿತೆ [ಗೀ.ತಾ. 3.27] **'ವದೇತ್ ವಿವಾದರೂಪೇಣ ನೋಪ ದೇಶಾತ್ಮನಾ ಕ್ವಚಿತ್ । ಸಭಾರೂಪೇಣ ವಾ ಬ್ರೂಯಾತ್....'** ವಿವಾದರೂಪದಿಂದಾಗಲೀ, ಸಭಾರೂಪದಿಂದಾಗಲೀ ತತ್ವಗಳ ಪ್ರಕಟಣೆ ಮಾಡಬಹುದೆಂದು ಅನುಮತಿ ನೀಡಿದೆ. ಸಭಾರೂಪದಿಂದ ಪ್ರಕಟಿಸುವಾಗ 'ಈ ತತ್ವಜ್ಞಾನ ಯೋಗ್ಯರಿಗಷ್ಟೇ ತಲುಪಲಿ' ಎಂಬ ಅನುಸಂಧಾನ ಇರಬೇಕು. ಈ ಅನುಸಂಧಾನಕ್ಕೆ ಪೋಷಕವಾಗಿಯೇ ಆಚಾರ್ಯರು ತಮ್ಮ 'ಶಿಷ್ಯಗಣ'ವನ್ನೇ ಮುಖ್ಯವಾಗಿ ಉದ್ದೇಶವಾಗಿಟ್ಟುಕೊಂಡು ಸೂತ್ರವ್ಯಾಖ್ಯಾನ ನಡೆಸಿದ್ದ ರೆಂದು ಅವರ ಆ ಬಗೆಯ ಅನುಸಂಧಾನವಿಶೇಷವನ್ನು 'ಶಿಷ್ಯಗಣಾಯ' ಎಂಬ ಮಾತು ಸೂಚಿಸಿಕೊಡಬಲ್ಲುದು.

ಕಣ್ವತೀರ್ಥದಲ್ಲಿ ಗ್ರಹಣಕಾಲದಲ್ಲಿ ಸಾರ್ವಜನಿಕವಾಗಿ ನಡೆಸಿದ ಉಪನಿಷತ್ ಪ್ರವಚನ ಇತ್ಯಾದಿ ಪ್ರಸಂಗಗಲ್ಲೂ 'ಶಿಷ್ಯಗಣಾಯ' ಎಂಬ ಮಾತನ್ನು ಅಧ್ಯಾಹಾರ ಮಾಡಿಕೊಂಡು ಶಿಷ್ಯರಿಗಾಗಿಯೇ ಮುಖ್ಯವಾಗಿ ನಡೆಸಲಾದ ಪ್ರವಚನಗಳೆಂದು ಅರ್ಥೈಸಿ ಕೊಳ್ಳಬೇಕು.

೧೩. **ಸುಂದರೇಷು ಸುರಮಂದಿರವೃಂದೇಷು**: ಶ್ರೀ ಮಧ್ವರ ದಕ್ಷಿಣ ದಿಗ್ವಿಜಯವನ್ನು ಪೂರೈಸುತ್ತ ದಾರಿಯಲ್ಲಿ ಸಿಗುವ ಇತರ ದೇವತೆಗಳ ದೇವಾಲಯಗಳಿಗೂ ಭೇಟಿನೀಡಿ,

ಅಲ್ಲಿ ಆಯಾ ದೇವತೆಗಳ ಅಂತರ್ಯಾಮಿ 'ಇಂದಿರಾರಮಣ'ನನ್ನು ವಂದಿಸಿದರು ಎಂದು ನಿರೂಪಿಸುವಾಗ ಸುರಮಂದಿರ ವೃಂದಕ್ಕೆ 'ಸುಂದರ' ಎಂಬ ವಿಶೇಷಣವನ್ನು ನೀಡಲಾಗುವುದು [6.23]. ಇದರ ಆಂತರ್ಯ ಹೀಗಿದೆ– ಇತರ ದೇವತೆಗಳ ಮಂದಿಗಳಲ್ಲೆಲ್ಲ 'ಗೋಲಕದ್ವಯ' ಚಿಂತನೆಯೊಂದಿಗೆ ಆರಾಧನೆ ನಡೆಸಲಾಗುತ್ತಿತ್ತೆಂದು ಹೇಳಲಾಗದು. ಅಂತಹ ಚಿಂತನೆಯಿಲ್ಲದೆ, ಆಯಾ ದೇವತೆಗಳನ್ನೇ ಗಮನದಲ್ಲಿಟ್ಟುಕೊಂಡು, ಅವರಲ್ಲಿ ಸರ್ವೋತ್ತಮತ್ವಾದಿಗಳನ್ನು ಆರೋಪಿಸಿ ಪೂಜಿಸಲಾಗುವ ದೇವಾಲಯಗಳಲ್ಲಿ ದೈವೀಸನ್ನಿಧಾನಕ್ಕಿಂತ ಆಸುರೀ ಸನ್ನಿಧಾನವೇ ಅಧಿಕವಾಗಿರುವುದು. '**ಪ್ರತಿಮಾಯಾಂ ತು ಸಾನ್ನಿಧ್ಯಂ ಅರ್ಚಕಸ್ಯ ತಪೋ ಬಲಾತ್**' ಎಂದಿರುವಂತೆ ಕೆಟ್ಟ ಚಿಂತನೆಯ ಅರ್ಚಕನ ಸಂಪರ್ಕದಿಂದಾಗಿ ದೈವೀ ಸಾನ್ನಿಧ್ಯವನ್ನೆಲ್ಲ ಕಳಕೊಂಡು ಜಡ ಕಲ್ಲಿನಂತಿರುವ ಪ್ರತಿಮೆಯಲ್ಲಿ ಇತರ ಸಾಧಕರೂ ಅಂತರ್ಯಾಮಿಯ ಅನುಸಂಧಾನ ನಡೆಸುವುದು ಸಮುಚಿತವಲ್ಲ. ಆದ್ದರಿಂದ ಅಂತಹ ಪ್ರತಿಮೆಯುಳ್ಳ ಅಂತಹ ದೇವಾಲಯಗಳಿಗೆ ಸಾಧಕರು ಹೋಗಲೇಬಾರದು. ಶ್ರೀ ಮಧ್ವರು ತಾವು ವ್ಯಾಪ್ತ್ಯೋಪಾಸಕರಾಗಿದ್ದು ಎಂತಹಾ ಪ್ರತಿಮೆಯಲ್ಲೂ ಅಂತರ್ಯಾಮಿಯ ಅನುಸಂಧಾನ ನಡೆಸಲು ಸಮರ್ಥರಾಗಿದ್ದರೂ ಉಳಿದ ಸಾಧಕರಿಗೆ ಮಾರ್ಗದರ್ಶನ ನೀಡುವುದಕ್ಕಾಗಿ ಅಂತಹ ಸುರಮಂದಿರಗಳಿಗೆ ಭೇಟಿ ಕೊಡುತ್ತಿರಲಿಲ್ಲ. ಮತ್ತೆ 'ಸುಂದರ'ಗಳಾದ ಅಂದರೆ ಶಾಸ್ತ್ರೀಯ ಅನುಸಂಧಾನದಿಂದಾಗಿ ದೈವೀ ಸನ್ನಿಧಾನಕ್ಕೆ ಪಾತ್ರವಾಗಿದ್ದು 'ಸುಂದರ ಮಂದಿರತ್ವೇನ ಸುಂದರ' ಎನಿಸಿದ ದೇವಾಲಯಗಳಿಗಷ್ಟೇ ಭೇಟಿನೀಡಿ ಅಲ್ಲಲ್ಲಿ ಆಯಾ ದೇವತೆಯ ಅಂತರ್ಯಾಮಿಗೆ ನಮಿಸಿದ್ದರೆಂದು 'ಸುಂದರ' ವಿಶೇಷಣದಿಂದ ಸೂಚಿಸಿ ಕೊಡಲಾಗಿದೆ.

೧೪. **ಏವಮಧ್ಯಾತ್ಮನಿಷ್ಠಂ ಹಿ ಭಾರತಂ ಸರ್ವಮುಚ್ಯತೇ:** 'ಮನ್ವಾದಿ **ಕೇಚಿದ್** ಬ್ರುವತೇ....' –ಎಂದು ಮಹಾಭಾರತದಲ್ಲಿಯೇ ತಿಳಿಸಿರುವಂತೆ ಸಮಗ್ರ ಮಹಾಭಾರತವು ಭಕ್ತಿ, ಜ್ಞಾನ, ವಿದ್ಯೆ ಮುಂತಾದ ಮೌಲ್ಯ ಪ್ರತಿಪಾದಕವಾಗಿಯೂ ತೆರೆದುಕೊಳ್ಳಬಲ್ಲದೆಂದು ಸಮರ್ಥಿಸಿರುವ ಶ್ರೀಮಧ್ವರು ಮಹಾಭಾರತದ ಯಾವಯಾವ ವ್ಯಕ್ತಿ ಯಾವಯಾವ ಮೌಲ್ಯಕ್ಕೆ ಸಂಕೇತವಾಗುವರೆಂದು ತಿಳಿಸುತ್ತ '**ಸರ್ವವಿದ್ಯಾ ದ್ರೌಪದೀ ತು ಯಸ್ಮಾತ್ ಸೈವ** ಸರಸ್ವತೀ[ಮ.ಭಾ.ತಾ.ನಿ. 2-143] ಮುಂದಿನ ಕಲ್ಪದಲ್ಲಿ ಸರಸ್ವತಿ ಎನಿಸಲಿರುವ ದ್ರೌಪದಿ ವಿದ್ಯಾಭಿಮಾನಿನಿಯಾಗಿರುವುದರಿಂದ ಸರ್ವವಿದ್ಯೆಗಳನ್ನೂ ಸಂಕೇತಿಸುವಳು –ಎಂದು ತೋರಿಸಿಕೊಟ್ಟಿರುವರು. '**ಏವಮಧ್ಯಾತ್ಮನಿಷ್ಠಂ ಭಾರತಂ ಸರ್ವಮುಚ್ಯತೇ**' [2-147]ಸಮಗ್ರ ಮಹಾಭಾರತವು ಹೀಗೆ ವಿದ್ಯೆಯೇ ಮುಂತಾದ ಮೌಲ್ಯಗಳನ್ನು ಸಾಂಕೇತಿಕವಾಗಿ ಪ್ರತಿಪಾದಿಸುತ್ತ ಅಧ್ಯಾತ್ಮಶಾಸ್ತ್ರವಾಗಿ ಮೆರೆಯುವುದೆಂದು ಸಂದೇಶ ನೀಡಿರುವರು.

ಮಧ್ವವಿಜಯದಲ್ಲಿ [6-24....31] ವೇದವಿದ್ಯೆಗೆ ಶೋಷಣೆಗೆ ಒಳಗಾಗಿದ್ದ ದ್ರೌಪದಿಯ ಹೋಲಿಕೆಯನ್ನು ನೀಡಿ ಅಂತಹ ವೇದವಿದ್ಯೆಯನ್ನು ಸೂತ್ರಭಾಷ್ಯಾದಿಗಳನ್ನು ರಚಿಸುವ ಮೂಲಕ ಸಂರಕ್ಷಿಸುವ ಪ್ರತಿಜ್ಞೆ ತೊಟ್ಟ ಮಧ್ವರಿಗೆ ಭೀಮಸೇನನ ಉಪಮೆ ಕೊಟ್ಟಿರುವುದರಿಂದ ಮಹಾಭಾರತದ ದ್ರೌಪದಿಯನ್ನು ಸರ್ವವಿದ್ಯೆಯನ್ನಾಗಿ, ದುರ್ಯೋಧನದುಃಶಾಸನರನ್ನು ಅಜ್ಞಾನವಿಪರೀತಜ್ಞಾನಗಳನ್ನಾಗಿ, ಭೀಮನನ್ನು –ಜ್ಞಾನ, ಭಕ್ತಿ

ಮುಂತಾದವುಗಳನ್ನಾಗಿ ಇಟ್ಟುಕೊಂಡು, '..........ತೇಷಾಂ ವಿಷ್ಣುರ್ನಿಯೋಜಕಃ' [2-146] ಎಂದಿರುವಂತೆ ಶ್ರೀವಿಷ್ಣು ಮಧ್ವರಿಗೆ ವೇದವ್ಯಾಸ, ನಾರಾಯಣ ರೂಪಗಳಿಂದ ಹೇಗೆ ನಿಯೋಜಕನಾಗಿರುವನೆಂಬುದನ್ನೂ ಇಟ್ಟುಕೊಂಡು ಮಹಾಭಾರತದ ಐತಿಹಾಸಿಕ ವ್ಯಕ್ತಿಗಳನ್ನು ಆಧ್ಯಾತ್ಮಿಕಮುಖಕ್ಕೆ ಪೋಷಕವಾಗುವಂತೆ ಹೇಗೆ ಅನುಸಂಧಾನ ಮಾಡಿಕೊಳ್ಳಬೇಕೆಂಬುದನ್ನು ಪ್ರತಿಪಾದಿಸಿದಂತಾಗಿದೆ.

೧೫. **ಆತ್ಮಮಜ್ಜನದಿಂದ ಪರಿಶೋಧನೆ:** ಬದರಿಗೆ ಯಾತ್ರೆ ಹೊರಟ ಮಧ್ವರು ದಾರಿಯಲ್ಲಿ ತೀರ್ಥಗಳನ್ನೂ ಶಾಸ್ತ್ರಗಳನ್ನೂ 'ಆತ್ಮಮಜ್ಜನ'ದಿಂದಾಗಿ ಪರಿಶೋಧಿಸಿದರೆಂದು [6-35] ನಿರೂಪಿಸಲಾಗಿದೆ.

ಇಲ್ಲಿ ತನ್ನ ಮುಳುಗುಹಾಕುವಿಕೆ ಎಂಬ ಅರ್ಥದಲ್ಲಿ 'ಆತ್ಮಮಜ್ಜನ' ಎಂದು ಆತ್ಮಶಬ್ದಪ್ರಯೋಗದ ಆವಶ್ಯಕತೆ ಇಲ್ಲ. ಕೇವಲ 'ಮಜ್ಜನತಃ' –ಎಂದರೆ ತನ್ನ ಮುಳುಗುವಿಕೆಯಿಂದ ಎಂದು ಸಿದ್ಧವಾಗುವುದು. ಆದ್ದರಿಂದ 'ಆತ್ಮ' ಶಬ್ದದ ಬಳಕೆ –ಮನಸ್ಸು ಹಾಗೂ ದೇಹ ಎಂಬ ಅರ್ಥಗಳನ್ನಿಟ್ಟುಕೊಳ್ಳುವುದಕ್ಕಾಗಿ. ಆತ್ಮಶಬ್ದಕ್ಕೆ ಮನಸ್ಸು ಎಂದೂ, ದೇಹ ಎಂದೂ ಅರ್ಥ ಇದೆ. ಮನಸ್ಸಿನಿಂದ ನಡೆಸುವ ಮಜ್ಜನದಿಂದ ಭಾಗವತಾದಿ ಶಾಸ್ತ್ರವನ್ನೂ, ದೇಹದಿಂದ ನಡೆಸುವ ಮಜ್ಜನದಿಂದ ಗಂಗಾದಿ ತೀರ್ಥಗಳನ್ನೂ ಪರಿಶೋಧಿಸಿದರು ಎಂಬ ಆಶಯ.

ಆತ್ಮ ಎಂದರೆ ಮುಖ್ಯಾರ್ಥ ಪರಮಾತ್ಮ. ಅಂತಹ ಪರಮಾತ್ಮನ ಪ್ರತಿಬಿಂಬವಾಗಿದ್ದು ಅವನ ಸನ್ನಿಧಾನಕ್ಕೆ ಪಾತ್ರವಾದ ಮನಸ್ಸು, ಆತನ ಪಾತ್ರವಾದ ದೇಹ –ಎಂಬ ಧ್ವನಿ ಮೂಡುವಂತೆ ಮಾಡುವುದೂ ಆತ್ಮಶಬ್ದದ ಪ್ರಯೋಗದ ಉದ್ದೇಶ. ಮಧ್ವರ ಮನಸ್ಸು ಪರಮಾತ್ಮನ ಸನ್ನಿಧಾನಕ್ಕೆ ಪಾತ್ರವಾಗಿರುವುದರಿಂದಲೇ ಶಾಸ್ತ್ರಪರಿಶೋಧನೆಗೆ ಸಮರ್ಥವಾಗಿತ್ತು. ಹಾಗೆಯೇ ಮಧ್ವರ ದೇಹವೂ ಪರಮಾತ್ಮನ ಸನ್ನಿಧಾನಕ್ಕೆ ಪಾತ್ರವಾಗಿದ್ದುದರಿಂದಲೇ ಗಂಗಾದಿ ತೀರ್ಥಗಳ ಪರಿಶೋಧನೆಗೆ ಸಮರ್ಥವಾಗಿತ್ತು.

**'....ಹರಂತ್ಯಘಂ ತೇಽಂಗಸಂಗಾದ್ ಯೇಃ ಪ್ರಾಪ್ತಾಃ ಸ್ವಹೃದಾ ಹರಿಮ್'** [ಭಾಗ. 9-8-37] ಲೋಕಪಾವನರಾದ ಮಹಾತ್ಮರು ತಮ್ಮ ಶರೀರದ ಸ್ಪರ್ಶದಿಂದ ನಿನ್ನ ಪಾಪವನ್ನು ಪರಿಹರಿಸುವರು. ತಮ್ಮ ಹೃದಯದಲ್ಲಿ ಶ್ರೀಹರಿಯನ್ನು ಹೊಂದಿರುವವರು ತಾನೇ ಅವರು? –ಎಂದು ಭಗೀರಥ ಗಂಗೆಗೆ ನೀಡಿರುವ ಈ ಸಮಾಧಾನದಿಂದ ಸ್ಪಷ್ಟವಾಗುವ ವಿಚಾರ –ಮಧ್ವರೇ ಮುಂತಾದ ಮಹಾತ್ಮರ ಸ್ನಾನದಿಂದಾಗಿ ತೀರ್ಥಗಳು ಪವಿತ್ರಗಳೆನಿಸಲು ಕಾರಣ ಅವರು ತಮ್ಮ ಹೃದಯದಲ್ಲಿ ಶ್ರೀಹರಿಯನ್ನು ಹೊತ್ತುಕೊಂಡು, ಅವನ ಅನುಸಂಧಾನ ನಡೆಸುತ್ತ ಸ್ನಾನ ನಡೆಸುವರು.

ಈ ಹಿನ್ನೆಲೆಯಲ್ಲಿ 'ಆತ್ಮಮಜ್ಜನತಃ' ಎಂಬಲ್ಲಿಯ ಆತ್ಮಶಬ್ದ ದೇಹದಲ್ಲಿ ಪರಮಾತ್ಮನ ಸನ್ನಿಧಾನದ ಧ್ವನಿಯನ್ನು ಮೂಡಿಸಬಲ್ಲದು.

೧೬. **ಕರ್ಮದ ಅನುಸ್ಮರಣೆ:** ಶ್ರೀ ಮಧ್ವರು ಬದರಿಯತ್ತ ಪಯಣಿಸುವಾಗ ಕೆಲವು ಅದ್ಭುತ ಕರ್ಮಗಳನ್ನು ನಡೆಸಿದ್ದು ಅವುಗಳ ಅನುಸ್ಮರಣೆ ಮಾತ್ರದಿಂದ ಸುಖ

ದೊರಕುವುದೆಂದು ನಿರೂಪಿಸಲಾಗಿದೆ– 'ಕರ್ಮ ಶರ್ಮದಮನುಸ್ಮೃತಿಮಾತ್ರಾತ್' [6-37] ಈ ನಿರೂಪಣೆಯಿಂದ ಮಧ್ವರ ಹಾಗೂ ಅವರ ಮೂಲರೂಪ ವಾಯುದೇವನ ಕರ್ಮಗಳ ಸ್ಮರಣೆ ಹೇಗಿರಬೇಕೆಂಬುದರ ಬಗ್ಗೆಯೂ ಸೂಚನೆ ನೀಡಿದಂತಾಗಿದೆ.

**'ಆಭಾಸಕೋऽಸ್ಯ ಪವನಃ.....'** –ಎಂದಿರುವಂತೆ ಭಗವಂತ ಬಿಂಬನಾಗಿದ್ದು ವಾಯುದೇವ ಪ್ರತಿಬಿಂಬ. **'ನ ಹಿ ಪ್ರತಿಬಿಂಬಸ್ಯ ಕ್ರಿಯಾ । ಸ ಹಿ ಬಿಂಬಕ್ರಿಯಯೈವ ಕ್ರಿಯಾವಾನ್'** [ಗೀ.ಭಾ. 2-19] ಎಂದಿರುವಂತೆ ಪ್ರತಿಬಿಂಬದಲ್ಲಿ ಸ್ವತಂತ್ರವಾಗಿ ಕ್ರಿಯೆ ಇರುವುದಿಲ್ಲ. ಬಿಂಬದ ಕ್ರಿಯೆಯಿಂದಷ್ಟೇ ಪ್ರತಿಬಿಂಬದಲ್ಲಿ ಕ್ರಿಯೆ ಬರುವುದು ಈ ವಾಸ್ತವ ಸಂಗತಿಯ ಹಿನ್ನೆಲೆಯಲ್ಲಿ ವಾಯುದೇವನಲ್ಲಾಗಲೀ, ಅವನ ಅವತಾರರಾದ ಮಧ್ವರಲ್ಲಾಗಲೀ ಯಾವುದೇ ಕರ್ಮವನ್ನು ಕಾಣುವಾಗ ಅದು ಮೂಲತಃ ಅವರ ಬಿಂಬರೂಪಿ ಪರಮಾತ್ಮನಿಗೆ ಸೇರಿದ್ದೆಂದೂ ಆ ಕರ್ಮವೇ ಪ್ರತಿಬಿಂಬಿತವಾಗಿ ವಾಯುದೇವನಲ್ಲಿ ಕಾಣಿಸುತ್ತಿದೆಯಷ್ಟೇ ಎಂದು ಸ್ಮರಿಸಿಕೊಳ್ಳಬೇಕು. ಇದೇ ಕರ್ಮದ ಅನುಸ್ಮರಣೆ.

೧೭. **ಮಂಡಯನ್ ಭರತಖಂಡಮಖಂಡಂ....:** ಬದರಿಗೆ ತೆರಳಿದ ಶ್ರೀ ಮಧ್ವರು ಅಲ್ಲಿಯ ನಾರಾಯಣನಿಗೆ ನಮಸ್ಕರಿಸಿದರೆನ್ನುವಾಗ, ನಾರಾಯಣನಿಗೆ **'ಮಂಡಯನ್ ಭರತಖಂಡಮಖಂಡಂ.....'** ಅಖಂಡವಾದ ಭರತದೇಶವನ್ನು ಅಲಂಕರಿಸಿಕೊಂಡು ಇರುವವ ನೆಂಬುದಾಗಿ ವಿಶೇಷಣ ನೀಡಲಾಗಿದೆ. [6-38] ಹಿಮಾಲಯವು ಭರತಖಂಡಕ್ಕೆ ಅಲಂಕಾರ ಪ್ರಾಯವಾಗಿರುವುದರಿಂದ, ಅಲ್ಲಿ ನೆಲೆಸಿರುವ ನಾರಾಯಣನಿಗೂ ಭರತಖಂಡಕ್ಕೆ ಅಲಂಕಾರನೆಂದು ಹೇಳಲಾಗಿದೆ ಎಂದು ಸಾಮಾನ್ಯವಾಗಿ ಭಾವಿಸಲಾಗುವುದು.

ಆದರೆ ಬದರಿಯಲ್ಲಿ ನಾರಾಯಣನಂತೆ ವೇದವ್ಯಾಸರೂ ಇರುವರಾದರೂ ಅವರು 'ಭರತಖಂಡಮಂಡಕ'ರಾಗಿ ವರ್ಣಿತರಾಗದೆ, ನಾರಾಯಣ ಮಾತ್ರ ಹಾಗೆ ವರ್ಣಿತನಾಗಿರುವ ಹಿನ್ನೆಲೆ– **'ಭಾರತೇऽಪಿ ಭಗವಾನ್ ನರನಾರಾಯಣಾಖ್ಯಃ...... ಚರತಿ'** ಎಂದು ಭಾಗವತ [5.19.9] ದಲ್ಲಿ ಭಾರತವರ್ಷದ ಅಧಿದೈವನಾಗಿ, ನಿರೂಪಿತನಾಗಿರುವನು. ಆದುದರಿಂದಲೇ ಅವನನ್ನಷ್ಟೇ **'ಮಂಡಯನ್ ಭರತಖಂಡಮಂಡಂ....'** ಎಂದು ಸ್ತುತಿಸಲಾಗಿದೆ. ವೇದವ್ಯಾಸರ ಬಗ್ಗೆ ಈ ರೀತಿಯ ನಿರೂಪಣೆ ಕೂಡದು. ಯಾಕೆಂದರೆ ಅವರು ಎತ್ತರದ ಹಿಮಾಲಯದಲ್ಲಿಯೇ ಇರುವವರಾದರೂ 'ಭಾರತವರ್ಷದ ಅಧಿದೈವ'ವಾಗಿ ಪರಿಗಣಿತರಾದವರಲ್ಲ.

೧೮. **ನಾರಾಯಣನಿಗೆ ಅರ್ಪಣೆಯ ಔಚಿತ್ಯ:** ಸೂತ್ರಕಾರರ ಆದೇಶ ಪಡೆದುಕೊಂಡು ಸೂತ್ರಭಾಷ್ಯ ರಚಿಸಬೇಕೆಂದು ನಿರ್ಧರಿಸಿ ಬದರಿಯತ್ತ ಸಂಚಾರ ಹೊರಟ ಶ್ರೀ ಮಧ್ವರು ಆಗ ರಚಿತವಾಗಿದ್ದ ಗೀತಾಭಾಷ್ಯವನ್ನು ಶ್ರೀ ವ್ಯಾಸರಿಗೇ ಅರ್ಪಿಸಬೇಕಾದದ್ದು ನ್ಯಾಯ ತಾನೇ? ಭಗವದ್ರೂಪಗಳಲ್ಲಿ ಏನೂ ಭೇದವಿಲ್ಲದಿದ್ದರೂ ಭೇದಪ್ರತಿನಿಧಿ ವಿಶೇಷದ ಆಧಾರವಾಗಿಟ್ಟುಕೊಂಡು ಗೀತೆಗೆ ಗ್ರಾಂಥಿಕರೂಪ ಕೊಟ್ಟವರು ಶ್ರೀ ವೇದವ್ಯಾಸರೇ. ಅಲ್ಲದೆ, ಮುಖ್ಯವಾಗಿ ಅವರನ್ನೇ ಭೇಟಿಯಾಗಿ ಸೂತ್ರಭಾಷ್ಯ ರಚನೆಗೆ ಆದೇಶ ಪಡೆದುಕೊಳ್ಳಲು ಬದರಿಗೆ ಹೋಗಿರುವವರು ಶ್ರೀ ಮಧ್ವರು ಎಂದ ಮೇಲೆ ಗೀತಾಭಾಷ್ಯವನ್ನು ಶ್ರೀ ವ್ಯಾಸರೂಪಕ್ಕೆ ಅರ್ಪಿಸುವುದು ಸಮುಚಿತ ತಾನೇ?

ಗೀತೆಗೆ ಗ್ರಾಂಥಿಕರೂಪ ಕೊಟ್ಟವರು ವ್ಯಾಸರಾದರೂ, ಅವರಿಗಿಂತಲೂ ನಾರಾಯಣ ನಿಗೇ ಗೀತೆಯ ಜೊತೆ ಅಧಿಕ ನಂಟು ಇರುವುದು. ಬ್ರಹ್ಮವೈವರ್ತ [ಗೀ.ತಾ. 4.3] **'ವೇದಾರ್ಥಪೂರಕಂ ಜ್ಞೇಯಂ ಪಂಚರಾತ್ರಂ ಯತೋಽಖಿಲಮ್ । ತತ್‌ಸಂಕ್ಷೇಪಶ್ಚ ಗೀತೇಯಂ...'** ಎಂದಿರುವಂತೆ ಪಂಚರಾತ್ರದ ಸಂಕ್ಷೇಪವೇ ಗೀತೆ. ಪಂಚರಾತ್ರವು ನಾರಾ ಯಣನಿಂದಲೇ ಹೇಳಲ್ಪಟ್ಟದ್ದಾದುದರಿಂದ ಗೀತೆಯ ಉಪದೇಶಕನೂ ನಾರಾಯಣ ರೂಪಿಯೇ ಎಂದಂತಾಗಿರುವುದು. ಆದ್ದರಿಂದ ಅವನಿಗೇ ಅರ್ಪಿಸುವುದು ಉಚಿತ. ಗೀತಾ ಭಾಷ್ಯದ ಮಂಗಲಪದ್ಯದಲ್ಲಿ **'ದೇವಂ ನಾರಾಯಣಂ...'** ಎಂದು ನಾರಾಯಣರೂಪದ ಉಲ್ಲೇಖಕ್ಕೆ ಇದೂ ಒಂದು ಕಾರಣ.

- **'ನಾಸ್ಮದುಕ್ತಿಸದೃಶಂ ಹಿತರೂಪಮ್'** ದೃಶ್ಯ ಬದರಿಕ್ಷೇತ್ರದಿಂದ ಶ್ರೀವೇದವ್ಯಾಸರ ಆಶ್ರಮಕ್ಕೆ ಹೊರಟ ಮಧ್ವರು ತಮ್ಮ ಶಿಷ್ಯರಿಗೆ ಬರವಣಿಗೆಯ ಮೂಲಕ ನೀಡಿದ ನಾಲ್ಕು ಸಂದೇಶಗಳಲ್ಲಿ ಕೊನೆಯ ಸಂದೇಶ– **'ನಾಸ್ಮದುಕ್ತಿಸದೃಶಂ ಹಿತರೂಪಮ್'** ನಮ್ಮ ಸಂದೇಶ– ಉಪದೇಶಗಳಿ ಸರಸಾಟಿಯಾಗಬಲ್ಲ ಹಿತವಚನ ಮತ್ತೊಂದಿಲ್ಲ. **'ಯದ್ವೈ ಕಿಂಚ ಮನುರವ ದತ್ ತದ್ ಭೇಷಜಮ್'** ಎಂದು ತೈತ್ತಿರೀಯ ಸಂಹಿತೆ 2-2-102] ವಿಶಿಷ್ಟಬೋಧವುಳ್ಳ ವರಾಗಿರುವ ಪ್ರಯುಕ್ತ 'ಮನು' ಎನಿಸುವ ವಾಯುದೇವರು ತನ್ನ ಮಧ್ವರೂಪದಿಂದ ಉಪದೇಶಿಸಿದ್ದು ಭವರೋಗಕ್ಕೆ ಔಷಧದಂತಿರುವಂತಹದ್ದೆಂದು ಸಾರುತ್ತಿದ್ದು ಈ ವೈದಿಕ ಸಂದೇಶದ ಪಡಿಯಚ್ಚಿನಂತೆ ಮಧ್ವರ ಮಾತು ಮೂಡಿ ಬಂದಿದೆ. **'ತತ್ವಂ ವೇದಾನುಸಾರೇಣ ಚಿಂತಯನ್ ವೈದಿಕೋ ಭವೇತ್ । ವೇದ ಊಹಾಮನುಸರೇತ್ ಯಸ್ಯ ಸ ತ್ಯಕ್ತವೈದಿಕಃ'** –ಎಂದು ಷಾಡ್ಗುಣ್ಯ [ಭಾ.ತಾ.ನಿ. 4-28-48] ಸಾರುತ್ತಿರುವಂತೆ ವೇದಾನುಸಾರವಾಗಿ ತತ್ವವನ್ನು ಚಿಂತಿಸುವ ವೈದಿಕನ ಲಕ್ಷಣವನ್ನಷ್ಟೇ ಅಲ್ಲದೆ, ತಮ್ಮ ಚಿಂತನೆಗೆ ಅನುಗುಣವಾಗಿ ವೇದದ ಸಂದೇಶ ಸಾಗಿ ಬರುವ ಪ್ರಯುಕ್ತ 'ತ್ಯಕ್ತವೈದಿಕ'ನ ಲಕ್ಷಣವನ್ನೂ ಶ್ರೀ ಮಧ್ವರು ಹೊಂದಿರುವರೆಂಬು ದಕ್ಕೆ **'ನಾಸ್ಮದುಕ್ತಿಸದೃಶಂ ಹಿತರೂಪಮ್'** ಎಂಬ ಮಧ್ವರ ಚಿಂತನೆಯನ್ನು **'ಯದ್ವೈ ಕಿಂಚ ಮನುರವದತ್ ತದ್ ಭೇಷಜಮ್'** ಎಂಬ ತೈತ್ತಿರೀಯಸಂಹಿತೆಯ ಸಂದೇಶ ಅನುಸರಿಸುತ್ತಿರುವುದೇ ಜ್ಞಾಪಕವೆನಿಸಬಲ್ಲದು.

೧೯. **ವಾಯುದೇವ ಜಲಾಧಿಪಃ:** ಶ್ರೀ ಮಧ್ವರು ಬದರಿಯಲ್ಲಿರುವಾಗ ಪ್ರತಿನಿತ್ಯ ಅರುಣೋದಯಕಾಲದಲ್ಲಿ ಅಲಕನಂದೆಯಲ್ಲಿ ಅವಗಾಹನಸ್ನಾನ ಮಾಡುತ್ತಿದ್ದರು. ಹಿಮದ ಭೀತಿಗೆ ಅವರು ಒಳಗಾಗುತ್ತಿರಲಿಲ್ಲ. ಯಾಕೆಂದರೆ –**'ಅಂಶ ಏಷ ಪೃಷತಾಮಧಿಪಸ್ಯ'** [6-43] ಅವರು ಪೃಷತ್ –ಅಧಿಪನ ಅಂಶ ತಾನೇ? ಎಂದು ಉಪಪಾದಿಸಲಾಗಿದೆ.

ವಾಯುದೇವ 'ಪೃಷತಾಮಧಿಪ' –ಎಂದರೇನು? 'ಗಾಳಿಯ ಅಧಿಪ' –ಎಂದು ಅರ್ಥೈಸಲಾಗುವುದು. ಆದರೆ ಪೃಷತ್‌ಶಬ್ದಕ್ಕೆ ನೀರಿನ ಕಣ, ನೀರು ಎಂಬ ಅರ್ಥ ಇದೆಯೇ ಹೊರತು ವಾಯು ಎಂಬ ಅರ್ಥವಿಲ್ಲ. ಆದ್ದರಿಂದ ನೀರಿನ ಅಧಿಪ ಎಂದೇ ಇಟ್ಟುಕೊಳ್ಳ ಬೇಕು. ತ್ರಿವೃತ್‌ಕರಣಪ್ರಕ್ರಿಯೆಯ ಸಂದರ್ಭದಲ್ಲಿ ವಾಯುದೇವ ಜಲಕ್ಕೆ ಅಭಿಮಾನಿ

ಎಂದು 'ಬ್ರಹ್ಮಾಂಡ' ತಿಳಿಸುವುದು– **'ವಾಯುಶ್ಚಾಬಭಿಮಾನವಾನ್'** (ಬೃ.ಉ.ಭಾ. 3-5-3) ಹೀಗೆ ನೀರಿಗೆ ವಾಯುದೇವ ಅಭಿಮಾನಿಯಾಗಿರುವುದರಿಂದಲೇ ನೀರಿಗೆ ಒಡೆಯನೆನಿಸಬಲ್ಲ.

ನೀರಿಗೆ ಅಭಿಮಾನಿಯಾಗಿದ್ದು ಅದಕ್ಕೆ ಒಡೆಯನಾಗಿರುವುದರಿಂದ 'ಶೀತಸ್ಪರ್ಶ' ವಾಯುದೇವನ ಅವತಾರ ಮಧ್ವರಿಗೆ ಬಾಧಿಸಿಲ್ಲ ಎಂಬುದು ಉಚಿತವಾಗುವುದೇ ಹೊರತು ವಾಯುವಿನ ಅಧಿಪನ ಅವತಾರರೆನಿಸಿರುವುದು ಜಲದ ಶೀತಸ್ಪರ್ಶದ ಬಾಧೆಗೆ ಒಳಗಾಗದಿರುವುದಕ್ಕೆ ಪ್ರಯೋಜಕವೆನಿಸದು. ಆದುದರಿಂದ ಇಲ್ಲಿಯ 'ಪೃಷತಾಮಧಿಪ' ಎಂಬುದಕ್ಕೆ ನೀರಿನ ಒಡೆಯ ಎಂಬ ಅರ್ಥವೇ ಹೊರತು ಗಾಳಿಗೆ ಒಡೆಯ ಎಂಬ ಅರ್ಥ ಅಲ್ಲ.

ಮೋಡದ ರೂಪದಲ್ಲಿರುವ ನೀರನ್ನು ಸಾಗಿಸುವವನು ವಾಯು ಎಂಬ ಅಭಿಪ್ರಾಯ ದಲ್ಲಿಯೇ 'ಪೃಷದಶ್ವಃ ಪವಮಾನಃ ಪ್ರಭಂಜನಃ' –ಎಂಬುದಾಗಿ ಪೃಷದಶ್ವನಾಮ ವಾಯು ದೇವನಿಗೆ ಬಂದಿರುವುದು.

೨೦. **ಸತ್ಯತೀರ್ಥರ ಶ್ರವಣದ ವೈಭವ:** ವೇದವ್ಯಾಸರ ಆಶ್ರಮದತ್ತ ಸಾಗಿದ ಶ್ರೀ ಮಧ್ವರನ್ನು ಸತ್ಯತೀರ್ಥರು ಅನುಸರಿಸಿದರೆಂದು ನಿರೂಪಿಸುವಾಗ ಸತ್ಯತೀರ್ಥರನ್ನು ಹೀಗೆ ಪರಿಚಯಿಸಲಾಗುವುದು –**'ಯಸ್ತ್ರಿವಾರಮಿತರಾಸುತಶಾಖಾಸ್ವರ್ಥಮಗ್ರ್ಯಮಶೃಣೋತ್ ಪುರ ಸಂಖ್ಯಾತ್'** [6-50] ಶ್ರೀ ಮಧ್ವರಿಂದ ಐತರೇಯ ಶಾಖೆಯ ಆಧಾರದಲ್ಲಿ ಮುಖ್ಯ ವಾಚ್ಯನಾದ ಶ್ರೀಹರಿಯನ್ನು ಸರ್ವಶ್ರೇಷ್ಠನನ್ನಾಗಿ ಮೂರು ಬಾರಿ ಶ್ರವಣ ಮಾಡಿದವರು. ಐತರೇಯ ಶಾಖೆಯ ಅರ್ಥವನ್ನು ಸತ್ಯತೀರ್ಥ ಯತಿಗಳಿಗೆ ಮೂರು ಬಾರಿ ಕೇಳ ಬೇಕಾಯಿತೇ? ಒಮ್ಮೆ ಅಥವಾ ಎರಡು ಬಾರಿ ಪಾಠ ಕೇಳಿದಾಗಲೇ ಅರ್ಥೈಸಿಕೊಳ್ಳುವಷ್ಟು ಪ್ರಾಜ್ಞರು ಅವರು ಆಗಿದ್ದಿರಲಿಲ್ಲವೇ? ಎಂಬ ಪ್ರಶ್ನೆ ಸಹಜ.

ಆದರೆ ಇಲ್ಲಿ ಐತರೇಯಶಾಖೆಯ ಅರ್ಥವನ್ನು ಕೇಳಿದರೆಂದು ನಿರೂಪಿಸುತ್ತಿರುವು ದಲ್ಲ. ಹಾಗಿದ್ದರೆ **'ಇತರಾಸುತಶಾಖಾಸು ಅರ್ಥಂ'** –ಎಂದು ಅಲ್ಲ. ಆದ್ದರಿಂದ **'ಇತರಾಸುತ ಶಾಖಾಸು'** –ಎಂಬಲ್ಲಿ ಅಧಿಕರಣಾರ್ಥದಲ್ಲಿ ಸಪ್ತಮೀ ಎಂದಿಟ್ಟುಕೊಂಡು ಐತರೇಯ ಶಾಖೆ ಗಳ ಆಧಾರದಲ್ಲಿ ಎಂಬ ಅರ್ಥವನ್ನು ಹೊರಡಿಸಬೇಕು.

ಅರ್ಥ ಎಂದರೆ ಸಕಲವೈದಿಕವಾಙ್ಮಯದ ಮುಖ್ಯವಾಚ್ಯ ಎಂದರ್ಥ. **'ಮುಖ್ಯಾಭಿ ಧೇಯಸ್ತ್ವರ್ಥಃ ಸ್ಯಾತ್....'** –ಎಂದು ಬ್ರಹ್ಮತರ್ಕ [ಭಾ.ತಾ.ನಿ. 3-12-2] ಸಾರುತ್ತಿರುವಂತೆ ಅರ್ಥ ಶಬ್ದಕ್ಕೆ ಮುಖ್ಯವಾಚ್ಯ ಎಂದೇ ಅರ್ಥ. ಯಾವುದರ ಮುಖ್ಯಾಭಿಧೇಯ? ಸಮಸ್ತ ವಾಙ್ಮಯದ ಮುಖ್ಯಾಭಿಧೇಯ ಶ್ರೀಹರಿ. 'ಅರ್ಥೋಽನರ್ಥೋ ಮಹಾಕೋಶೋ....' –ಎಂದು ವಿಷ್ಣುಸಹಸ್ರನಾಮದ ಅರ್ಥ ಎಂಬ ನಾಮ ಈ ಪ್ರಮೇಯವನ್ನು ತಿಳಿಸುತ್ತಿದೆ. ಆದ್ದರಿಂದಲೇ ಅರ್ಥ ಶಬ್ದಕ್ಕೆ ಅಗ್ರ್ಯ ಎಂಬ ವಿಶೇಷಣದ ಆವಶ್ಯಕತೆ ಇಲ್ಲ ಎಂದು ಮುಖ್ಯಾಭಿಧೇಯನಾದ ಶ್ರೀಹರಿಯನ್ನು 'ಅಗ್ರ್ಯ' ಸರ್ವಶ್ರೇಷ್ಠನನ್ನಾಗಿ ಶ್ರವಣಮಾಡಿದರು ಎಂದು ಅರ್ಥೈಸಿಕೊಳ್ಳಬೇಕು.

ಹೀಗೆ ವ್ಯಾಖ್ಯಾನಿಸಿಕೊಂಡರೆ 'ಇತರಾಸುತಶಾಖಾಸು' ಎಂಬಲ್ಲಿಯ ಸಪ್ತಮೀ ವಿಭಕ್ತಿಯ ಔಚಿತ್ಯ ಸ್ಪಷ್ಟವಾಗುವುದಲ್ಲದೆ, ಮೂರು ಬಾರಿ ಶ್ರವಣ ನಡೆಸಿದ ರಹಸ್ಯವೂ ಸ್ಪಷ್ಟವಾಗಬಲ್ಲದು. ದೇವರನ್ನು ಎಷ್ಟು ಬಾರಿ ಕೇಳಿದರೂ ಕಮ್ಮಿಯೇ ತಾನೇ?

೨೧. **ವೃಜಿನನಾಶನನಾಮಾ ವಿಶೇಷಣದ ಔಚಿತ್ಯ:** ಬದರಿಯ ಅನಂತಮಠದಿಂದ ವೇದವ್ಯಾಸರ ಆಶ್ರಮದತ್ತ ಸಾಗಿದ ಮಧ್ವರು ಆಂಜನೇಯನಂತೆ ವಾಯುವೇಗದಿಂದಲೂ ಭೀಮಸೇನನಂತೆ ನಿರ್ಭೀತರಾಗಿಯೂ ಹಿಮಾಲಯದ ಶಿಖರದಲ್ಲಿ ಮೆರೆಯುತ್ತಿದ್ದರೆಂದು ನಿರೂಪಿಸಿದ ಮಧ್ವವಿಜಯದಲ್ಲಿ [6-54] ಅದರ ಉಪಪಾದನೆಗಾಗಿ 'ವೃಜಿನನಾಶನ ನಾಮಾ' –ಪಾಪಪರಿಹಾರಕಗಳಾದ ಹೆಸರುಗಳುಳ್ಳವರೆಂದು ವಿಶೇಷಣವನ್ನು ನೀಡಲಾಗಿದೆ.

ವೇಗದಲ್ಲಿ ಕುಸಿತ, ತಡೆ ಬರುವುದು, ಆಯಾಸ ಉಂಟಾಗುವುದು ಇವೆಲ್ಲ ಪಾಪದ ಪರಿಣಾಮಗಳು. ಭಯವೂ ಪಾಪದ ಪರಿಣಾಮ. ಮಧ್ವರಾದರೂ ತಮ್ಮ ಹೆಸರುಗಳ ಸ್ಮರಣೆ ಮಾತ್ರದಿಂದಲೇ ಸ್ಮರಿಸುವವರ ಪಾಪಗಳನ್ನು ಪರಿಹರಿಸುವವರು. ಅಂದಮೇಲೆ ಅಂತಹವರಿಗೆ ಪಾಪದ ಸಂಪರ್ಕವಾದರೂ ಹೇಗೆ ಇರುವುದು? ಪಾಪದ ಸಂಪರ್ಕವೇ ಇಲ್ಲದ ಅವರಲ್ಲಿ ಪಾಪದ ಕಾರ್ಯಗಳಾದ ಆಯಾಸವಾಗಲೀ, ವೇಗದ ಹಿನ್ನಡೆ, ತಡೆ, ಕುಸಿತ ಇತ್ಯಾದಿಗಳಾಗಲೀ ಭಯವಾಗಲೀ ಇರಲು ಸಾಧ್ಯವೇ ಇಲ್ಲತಾನೆ?

'ವೃಜಿನನಾಶನನಾಮಾ' ವಿಶೇಷಣ ಈ ವಿಚಾರವನ್ನು ಸೂಚಿಸಿಕೊಡಬಲ್ಲದು.

೨೨. **ಅರಳಿದ ತಿಳಿವಳಿಕೆ ಉಳ್ಳವರು:** ಶ್ರೀ ಮಧ್ವರು ಹಿಮಾಲಯಪರ್ವತದಲ್ಲಿ ಸಿಂಹ, ಹುಲಿ ಮುಂತಾದ ಪ್ರಾಣಿಗಳನ್ನೂ, ಸರ್ಪಗಳನ್ನೂ, ಪಕ್ಷಿಗಳನ್ನೂ ಕಂಡರೂ ಭಯಗ್ರಸ್ತರಾಗಿರಲಿಲ್ಲ ಎಂದು ನಿರೂಪಿಸಿ, ಅದಕ್ಕೆ ಉಪಪಾದಕವಾಗುವಂತೆ 'ಫುಲ್ಲದೃಕ್' ಎಂಬ ವಿಶೇಷಣವನ್ನು ನೀಡಲಾಗಿದೆ. ಫುಲ್ಲ ಎಂದರೆ ಅರಳಿದ. 'ದೃಕ್' –ಎಂದರೆ ಕಣ್ಣು. ಆದ್ದರಿಂದ ಅರಳಿದ ಕಣ್ಣುಗಳುಳ್ಳವರಾಗಿ ಶ್ರೀ ಮಧ್ವರು ಹಿಮಾಲಯದ ಪಶುಪಕ್ಷಿ ಸಂಪತ್ತಿನ ವೈಭವವನ್ನೆಲ್ಲ ಕಣ್ತುಂಬ ಕಂಡರೆಂದು 'ಫುಲ್ಲದೃಕ್' ಎಂಬ ವಿಶೇಷಣ ಸೂಚಿಸಿದರೆ, ಫುಲ್ಲ –ಅರಳಿದ, ದೃಕ್ –ಜ್ಞಾನ ಉಳ್ಳ ಅರ್ಥಾತ್ **'ಅನ್ಯತ್ರಾಲೋಚನೇ ಸರ್ವವಿಷಯಕಂ ಋಜುಯೋಗಿಜ್ಞಾನಂ....'** ಎಂದಿರುವಂತೆ ಭಗವದನ್ಯತ್ರ ಆಲೋಚಿಸಿದಲ್ಲಿ ಎಲ್ಲವನ್ನೂ ಗ್ರಹಿಸಬಲ್ಲ ಜ್ಞಾನವುಳ್ಳ ಎಂಬ ಅರ್ಥವನ್ನು ಹೊರಡಿಸಬಲ್ಲ 'ಫುಲ್ಲದೃಕ್' ಎಂಬ ವಿಶೇಷಣವು, ಆದುದರಿಂದಲೇ ಶ್ರೀ ಮಧ್ವರು ಹಿಮಾಲಯದ ಯಾವುದೇ ಪಶುಪಕ್ಷಿಗಳ ವಿಷಯದಲ್ಲಿ ಭಯಕ್ಕೆ ಒಳಗಾಗಿದ್ದಿರಲಿಲ್ಲ –ಎಂದು ಸಮರ್ಥಿಸಬಲ್ಲದು. ಹಿಮಾಲಯದ ಪಶುಪಕ್ಷ್ಯಾದಿಗಳ ಆಯಾ ಪ್ರಸಂಗದ ಭಾವನೆಗಳನ್ನೂ, ಅವುಗಳ ಹಿಂಸೆಗೆ ಒಳಗಾಗಬೇಕಾದಂತೆ ಇರದ ತಮ್ಮ ಪ್ರಾರಬ್ಧಕರ್ಮದ ಸ್ವರೂಪವನ್ನೂ ಚೆನ್ನಾಗಿ ತಿಳಿದು 'ಫುಲ್ಲದೃಕ್' ಆಗಿರುವ ಮಧ್ವರು ಅಲ್ಲಿಯ ಪಶುಪಕ್ಷ್ಯಾದಿಗಳ ಬಗ್ಗೆ 'ಅಸ್ತಭಯ'ರಾಗಿದ್ದರೇ ಹೊರತು 'ಗ್ರಸ್ತಭಯ'ರಾಗಿದ್ದಿರಲು ಸಾಧ್ಯವೇ ಇಲ್ಲ ತಾನೇ?

೨೩. **ಆನಂದತೀರ್ಥರಿಂದ ಆನಂದಾಕೃತಿಯ ಸ್ಮರಣೆ:** ಹಿಮಾಲಯದ ವೈಭವವನ್ನು ಅನುಭವಿಸಿದ ಮಧ್ವರು ಅಂತಹ ಹಿಮಾಲಯದ ಅದ್ಭುತ ಸುಂದರ ವ್ಯಕ್ತಿತ್ವಕ್ಕೆ ಬಿಂಬರೂಪ

ವಾಗಿ ಮುರರಿಪುವಿನ ಆನಂದಾಕಾರವನ್ನು ಸ್ಮರಿಸಿಕೊಂಡರೆಂದು ನಿರೂಪಿಸಲಾಗಿದೆ– '........ಸ್ವಾನಂದಾಕೃತಿಮಸ್ಮರನ್ಮುರರಿಪುಂ ಸ್ವಾನಂದತೀರ್ಥಸ್ತದಾ' [6-57] ಆನಂದರೂಪಿ ಪರಮಾತ್ಮನಿಗೆ ಪಾತ್ರರಾದವರೆಂಬ ಅರ್ಥದಲ್ಲೂ 'ಆನಂದತೀರ್ಥ' ಎನಿಸಿರುವ ಶ್ರೀ ಮಧ್ವರು ಹಿಮಾಲಯದ ದರ್ಶನದಿಂದ ತನ್ನ ಬಿಂಬರೂಪಿ ಆನಂದಮಯ ಭಗವದ್ರೂಪ ವನ್ನು ಸ್ಮರಿಸಿಕೊಂಡರೆಂದು ಯಾವುದೇ ಅದ್ಭುತಕ್ರಿಯೆ ಕಂಡುಬಂದಾಗ ಅದರ ಹಿನ್ನೆಲೆ ಯಾಗಿ ಅವರ ಬಿಂಬರೂಪಿಯಲ್ಲಿ ಆ ಬಗೆಯ ಕ್ರಿಯೆಯ ಸ್ಮರಣೆಯನ್ನು ನಡೆಸಿ, ಅದನ್ನು ಅನುಸರಿಸಿ ಅವರಲ್ಲಿಯ ಕ್ರಿಯೆಯ ಸ್ಮರಣೆಯನ್ನು ಮಾಡಬೇಕು. ಆಗಷ್ಟೇ ಅದು ಪುಣ್ಯಪ್ರದವಾಗಿ ಕ್ರಮೇಣ ಸುಖಪ್ರದವಾಗುವುದು. 'ಸ್ಮೃತಿಮಾತ್ರಾತ್' –ಎನ್ನುವ ಬದಲು 'ಅನುಸ್ಮೃತಿಮಾತ್ರಾತ್' –ಎಂಬ ಶಬ್ದಪ್ರಯೋಗದಿಂದಾಗಿ ಈ ಪ್ರಮೇಯ ಸೂಚಿವಾಗ ಬಲ್ಲದು.

ಆದುದರಿಂದ 'ಗಮನಾಸನ ಸಂಕಥಾದಿಲೀಲಾಃ ಸ್ಮೃತಿಮಾತ್ರೇಣ ಭವಾಪವರ್ಗದಾತ್ರೀಃ' (13-42) ಇತ್ಯಾದಿ ಕಡೆಗಳಲ್ಲಿ 'ಸ್ಮೃತಿಮಾತ್ರ' –ಎಂದು ಪ್ರಯೋಗಿಸಿದ್ದರೂ 'ಅನುಸ್ಮೃತಿ ಮಾತ್ರ' ಎಂದೇ ಇಟ್ಟುಕೊಳ್ಳಬೇಕು.

'ಚರತಂ ವೈಷ್ಣವಾನಾಂ ತು ವಿಷ್ಣೂದ್ರೇಕಾಯ ಕಥ್ಯತೇ' (ಮ.ಭಾರ.ತಾ.ನಿ. 2-130) ವಿಷ್ಣುಭಕ್ತರ ಮಹಿಮೆಗಳನ್ನೊಳಗೊಂಡ ಚರಿತ್ರೆಯನ್ನು ನಿರೂಪಿಸುವ ಉದ್ದೇಶವೇ ಅಂತಹ ಭಕ್ತರಿಗೆ ಅನುಗ್ರಹಿಸಿರುವ ಶ್ರೀವಿಷ್ಣುವಿನ ಮಹಿಮೆಯನ್ನು ಸಾರುವುದೇ ಎಂದು ಶ್ರೀ ಮಧ್ವರು ನೀಡಿರುವ ನಿರ್ಣಯವನ್ನು ಮಧ್ವಮಹಿಮಾನಿರೂಪಣೆಗೂ ಅನ್ವಯಿಸಿಕೊಳ್ಳ ಬೇಕು ತಾನೇ?

೨೪. **ಪರಸ್ಪರ ಮತ್ಸರ ಇಲ್ಲ:** ಶ್ರೀವೇದವ್ಯಾಸರ ಆಶ್ರಮದ ಹೆಗ್ಗಳಿಕೆಯನ್ನು ವೈಕುಂಠಕ್ಕೆ ಹೋಲಿಸುತ್ತ ಅಲ್ಲಿಯ ನಿವಾಸಿಗಳಲ್ಲಿ ಪರಸ್ಪರವಾಗಿ ಮಾತ್ಸರ್ಯ ಇಲ್ಲ ಎನ್ನಲಾಗಿದೆ [7-3]. ಇದಕ್ಕೆ ಉಪಪಾದಕವಾಗಿಯೊ ಎಂಬಂತೆ 'ಸ್ವಮನೋऽಭೀಷ್ಟದಮ್' 'ಅಲ್ಪದುರ್ಗಮಮ್' ಎಂಬ ಎರಡು ವಿಶೇಷಣಗಳನ್ನು ನೀಡಲಾಗಿದೆ. ತನ್ನ ಸಮಾನವ್ಯಕ್ತಿ ಶ್ರೇಯಸ್ಸನ್ನು ಹೊಂದಿದರೂ ತಾನು ಶ್ರೇಯಸ್ಸನ್ನು ಹೊಂದದಿದ್ದಲ್ಲಿ ತಾನೇ ಮಾತ್ಸರ್ಯಕ್ಕೆ ಅವಕಾಶ? ವೈಕುಂಠದಲ್ಲಾಗಲೀ, ವೇದವ್ಯಾಸಾಶ್ರಮದಲ್ಲಾಗಲೀ ಪ್ರತಿಯೊಬ್ಬರೂ 'ಸತ್ಯಕಾಮ'ರಾಗಿದ್ದು ಅವರ ಇಷ್ಟಗಳೆಲ್ಲ ಈಡೇರಿರುವವೆಂದ ಮೇಲೆ ಸಮಾನವ್ಯಕ್ತಿ ಪಡೆದ ಶ್ರೇಯಸ್ಸನ್ನು ತನಗೆ ಪಡೆಯಲಾಗಲಿಲ್ಲವೆಂದು ಮತ್ಸರ ಪಡುವುದಕ್ಕೆ ಯಾರಿಗೂ ಅವಕಾಶವೇ ಇರದು.

ಅಲ್ಲದೆ, ಮಾತ್ಸರ್ಯ ಅಲ್ಪರ ಧರ್ಮ. ರಜೋಗುಣದಿಂದ ಪ್ರಭಾವಿತರಾದ ಅಲ್ಪರಲ್ಲಿ ಅಂತಹ ರಜೋಗುಣದ ಪರಿಣಾಮವಾಗಿ ಮತ್ತೊಬ್ಬರ ಬಗ್ಗೆ ಮಾತ್ಸರ್ಯ ಕಾಣಿಸಿ ಕೊಳ್ಳಬಲ್ಲದು. ಆದರೆ ವೈಕುಂಠವಾಗಲೀ, ವ್ಯಾಸಾಶ್ರಮವಾಗಲೀ 'ಅಲ್ಪದುರ್ಗಮ' –ರಜೋಗುಣದ ಪ್ರಭಾವಕ್ಕೊಳಗಾಗುವ ಅಲ್ಪರಿಂದ ಹೊಂದಲ್ಪಡುವಂತಹದ್ದಲ್ಲ. ಅಂದರೆ ಅಲ್ಲಿ ಇರುವವರು ಪ್ರಾಕೃತಗುಣಗಳ ಪ್ರಭಾವವನ್ನು ಮೆಟ್ಟಿನಿಂತ 'ದೊಡ್ಡ'ವರು. ಅಂತಹ ವರಲ್ಲಿ 'ಅಲ್ಪ'ರ ಲಕ್ಷಣವಾಗಿ ಮಾತ್ಸರ್ಯ ಹೇಗೆ ತಾನೇ ಇದ್ದೀತು?

೨೫. **ವೇದಾಭಿವ್ಯಕ್ತಿಯೇ ವೇದೋದ್ಧಾರ:** ವೇದವ್ಯಾಸರ ಚರಿತ್ರೆಯನ್ನು ನಿರೂಪಿಸುವ ಮಹಾಭಾರತತಾತ್ಪರ್ಯನಿರ್ಣಯದಲ್ಲಿ [10-57] ಪರಾಶರ ಸತ್ಯವತಿಯರ ಮೂಲಕ ಅವತರಿಸಿದ ವ್ಯಾಸರನ್ನು ಚತುರ್ಮುಖಾದಿಗಳು ಹಿಂಬಾಲಿಸುತ್ತಿದ್ದಂತೆ ಅವರು ಮೇರು ಪರ್ವತಕ್ಕೆ ಹೋಗಿ ಅಲ್ಲಿ ಸಕಲ ವೇದಗಳು ಆದಿಸೃಷ್ಟಿಯಲ್ಲಿ ಹೇಗೇ ಹಾಗೆ 'ಉದ್ಧರಿಸಿ' ದೇವತೆಗಳಿಗೂ, ಮುನಿಗಳಿಗೂ ನೀಡಿದರೆಂದು ನಿರೂಪಿಸಲಾಗಿದೆ. '**ವಿವ್ಯಾಸ ವೇದಾನ್ ಸ ವಿಭುಶ್ಚತುರ್ಧಾ....**' ಎಂದು ಮುಂದೆ [10-62] ವೇದವಿಭಾಗವನ್ನು ಪ್ರತ್ಯೇಕವಾಗಿ ತಿಳಿಸಿರುವುದರಿಂದ ಇಲ್ಲಿ ಹೇಳಿರುವ ವೇದದ ಉದ್ಧಾರ ಎಂದರೆ ವೇದವಿಭಾಗ ಅಲ್ಲ. ಸಜ್ಜನರ ಮೇಲಿನ ಕಾರುಣ್ಯದಿಂದಾಗಿ ಶ್ರೀ ವ್ಯಾಸರ ಮನಸ್ಸಿಲ್ಲಿ ವೇದವು ಪ್ರಕಟಗೊಂಡಿತೆಂಬ ಇಲ್ಲಿಯ ನಿರೂಪಣೆಯಿಂದ [7-19] ತಾತ್ಪರ್ಯನಿರ್ಣಯದಲ್ಲಿ ನಿರೂಪಿಸಲಾದ 'ವೇದೋದ್ಧಾರ' ಎಂದರೆ ತಮ್ಮ ಮನಸ್ಸಿನಲ್ಲಿ ವೇದಗಳು ಪ್ರಕಟವಾಗುವಂತೆ ಮಾಡುವುದು ಎಂಬ ಸ್ಪಷ್ಟೀಕರಣ ದೊರೆತಂತಾಗುವುದು.

೨೬. **ಸೂತ್ರಾದಿರಚನೆಯ ಅವಧಿಯ ವ್ಯತ್ಯಾಸ:** ಮಹಾಭಾರತತಾತ್ಪರ್ಯನಿರ್ಣಯ ದಲ್ಲಿ [10-58] ನಿರ್ಣಯಿಸಿರುವಂತೆ ಶ್ರೀ ವೇದವ್ಯಾಸರು ಮೊದಲು ಬ್ರಹ್ಮಸೂತ್ರವನ್ನು ರಚಿಸಿ, ಬಳಿಕ ಮಹಾಭಾರತವನ್ನು ನಿರ್ಮಿಸಿರುವರು [10-59] ಆ ಮೇಲೆ ಪುರಾಣಗಳ ನಿರ್ಮಾಣ [10-62].

ಆದರೆ ಮಧ್ವವಿಜಯದಲ್ಲಿ ಶ್ರೀ ವ್ಯಾಸರಿಗೆ ನೀಡಿದ ಮಥಿತ ಕ್ಷೀರಸಾಗರದ ರೂಪಕ ವನ್ನು ಹೊಂದಿಸುವುದಕ್ಕಾಗಿ ಪುರಾಣಚಂದ್ರ, ಮಹಾಭಾರತಪಾರಿಜಾತ, ಸೂತ್ರಗಣಾಮೃತ ಗಳ ಪ್ರಾದುರ್ಭಾವವಾಯಿತೆಂದು ಅವುಗಳ ಪ್ರಾದುರ್ಭಾವದ ಕ್ರಮದಲ್ಲಿ ವ್ಯತ್ಯಾಸವನ್ನು ಮಾಡಿಕೊಳ್ಳಲಾಗಿದೆಯಷ್ಟೇ ಎಂದು ಇಟ್ಟುಕೊಳ್ಳಬೇಕು.

೨೭. **ಯಜ್ಞೋಪವೀತ ತ್ರಯೀಮಯ ಹಾಗೂ ಬ್ರಹ್ಮಸೂತ್ರ:** ಶ್ರೀವ್ಯಾಸರ ಹೆಗಲಲ್ಲಿ ವಿರಾಜಿಸುತ್ತಿದ್ದ ಯಜ್ಞೋಪವೀತಕ್ಕೆ ಬ್ರಹ್ಮಸೂತ್ರದ ರೂಪಕ ನೀಡಿ, ಬ್ರಹ್ಮಸೂತ್ರವನ್ನು ಹೇಗೋ ಹಾಗೆ [7-33] ಯಜ್ಞೋಪವೀತವನ್ನು 'ತ್ರಯೀಮಯ' ಎಂದೂ 'ಬ್ರಹ್ಮಸೂತ್ರ' ಎಂದೂ ಕರೆಯಲಾಗಿದೆ. ವೇದಾಭಿಮಾನಿಗಳು ಯಜ್ಞೋಪವೀತಕ್ಕೆ ಅಭಿಮಾನಿಗಳಾಗಿರು ವುದರಿಂದ ಅದು ತ್ರಯೀಮಯ ಎನಿಸುವುದು [**ವೇದಾಭಿಮಾನಿಭಿರಭಿಮನ್ಯಮಾನತ್ವಮ್**] ಹೀಗೆ ವೇದಾಧ್ಯಯನಾದಿಗಳಿಗೆ ಸೂಚಕವಾಗಿರುವುದರಿಂದ 'ಬ್ರಹ್ಮಸೂತ್ರ' ಎನಿಸುವುದು. ಈ ರೀತಿಯಾಗಿ ಯಜ್ಞೋಪವೀತದ ರೂಪದಲ್ಲಿರುವ 'ಸೂತ್ರ'ದಲ್ಲಿ ಹಗ್ಗದಲ್ಲಿ ವೈದಿಕ ವ್ಯಕ್ತಿತ್ವ ಇರುವುದರಿಂದಲೆ ಅದು 'ಸುಸೂತ್ರ' ಒಳ್ಳೆಯ ಹಗ್ಗ ಎನಿಸಿದೆ.

ಈ ರೀತಿಯಾಗಿ ವೇದವ್ಯಾಸರ ಯಜ್ಞೋಪವೀತವನ್ನು ವರ್ಣಿಸುವ ನೆಪದಿಂದ ಯಜ್ಞೋಪವೀತದಲ್ಲಿ ಇರುವ ವೈದಿಕ ವ್ಯಕ್ತಿತ್ವವನ್ನು ಸಾರಿದಂತಾಗಿದೆ.

ಇದರಿಂದ ಯಜ್ಞೋಪವೀತದ ತಂತುಗಳಲ್ಲಿ ತಂತುದೇವತೆಗಳನ್ನಷ್ಟೇ ಅಲ್ಲದೆ, ಸಕಲ ವೇದಾಭಿಮಾನಿಗಳನ್ನೂ ಆವಾಹಿಸಿಕೊಳ್ಳಬೇಕೆಂದು ಸಿದ್ಧವಾಗುವುದು.

೨೮. **ವ್ಯಾಸರ ಸತ್ಯವಾಕ್ಯ:** ತಮ್ಮ ಆಶ್ರಮಕ್ಕೆ ಅತಿಥಿಯಾಗಿ ಬಂದ ಮಧ್ವರನ್ನು ಶ್ರೀ ವೇದವ್ಯಾಸರು 'ಆಸ್ಯತಾಂ' –ಕುಳಿತುಕೊಳ್ಳಿರಿ ಎಂದರೆಂದು ನಿರೂಪಿಸುವಾಗ [7-56] ಶ್ರೀ ವ್ಯಾಸರನ್ನು 'ಸತ್ಯವಾಚಿ' ಎಂದು ವಿಶೇಷಿಸುವ ಮೂಲಕ ಮಧ್ವರಿಗೆ ವ್ಯಾಸರ ಆ ಮಾತು ತುಂಬ ಹಿತಕರವಾಗಿತ್ತೆಂದು ಸೂಚಿಸಲಾಗಿದೆ. **'ಯತ್ಸತಾಂ ಹಿತಮತ್ಯಂತಂ ತತ್ಸತ್ಯಮಿತಿ ಗೀಯತೇ'** –ಎಂದಿರುವಂತೆ ಶಾಸ್ತ್ರದ ಮೂಲಕ ಸಜ್ಜನರಿಗೆ ಅತ್ಯಂತ ಹಿತವನ್ನು ಹೇಳಿರುವುದರಿಂದ 'ಸತ್ಯವಾಕ್' ಎನಿಸಿರುವವರು ವೇದವ್ಯಾಸರು. ಅಂತಹವರ ಬಾಯಿ ಯಿಂದ ಹೊರಟ 'ಆಸ್ಯತಾಂ' –ಎಂಬ ಒಂದು ಮಾತು ಕೂಡಾ ಶ್ರೀ ಮಧ್ವರಿಗೆ ಅವರ ಸತ್ಯವಾಕ್ಯದ ಅನುಸಂಧಾನವನ್ನು ತಂದುಕೊಡುವಂತಿತ್ತು.

೨೯. **ಪುರಾಣಗಳೆಲ್ಲ ಸುಂದರಗಳು:** ವ್ಯಾಸಾಶ್ರಮದಲ್ಲಿ ಶ್ರೀ ಮಧ್ವರು ವೇದವ್ಯಾಸ ರಿಂದ ಶ್ರವಣ ನಡೆಸಿದ ಗ್ರಂಥಗಳನ್ನು ಉಲ್ಲೇಖಿಸುವಾಗ **'ಇತಿಹಾಸ ಸುಂದರ ಪುರಾಣ....'** [8-4] ಎಂಬುದಾಗಿ ಪುರಾಣಗಳಿಗೆ ಸುಂದರ ಎಂಬ ವಿಶೇಷಣವನ್ನು ನೀಡಲಾಗುವುದು. ಇದು ಸ್ವರೂಪ ಸಂಕೀರ್ತನಾತ್ಮಕವಾದ ವಿಶೇಷಣವೇ ಹೊರತು ವ್ಯಾವರ್ತಕವಾದುದಲ್ಲ. ಅಂದರೆ ಎಲ್ಲ ಪುರಾಣಗಳೂ ಸುಂದರಗಳಾಗಿದ್ದು, ಅಂತಹ ಪುರಾಣಗಳ ಧ್ವನಿ ಮೂಡು ವಂತೆ ಆನಂದವನ್ನುಂಟುಮಾಡುವ ಶಾಸ್ತ್ರವನ್ನು ಮಾಡಿ ಶ್ರವಣ ನಡೆಸಿದರೆಂಬರ್ಥವೇ ಹೊರತು ಪುರಾಣಗಳಲ್ಲಿ ವೈಷ್ಣವಪುರಾಣಗಳೆನಿಸಿರುವುದರಿಂದ 'ಸುಂದರ'ಗಳಾಗಿರುವವು ಗಳನ್ನಷ್ಟೇ ಶ್ರವಣ ಮಾಡಿದರೆಂಬ ಆಶಯವಲ್ಲ. ತಾಮಸ ಮತ್ತು ರಾಜಸಪುರಾಣಗಳೂ ರುದ್ರಾದಿ ಇತರ ದೇವತೆಗಳ ಪಾರಮ್ಯವನ್ನು ಸಾರುತ್ತಿದ್ದರೂ ದರ್ಶನಭಾಷೆಯಿಂದ, ಆಯಾ ದರ್ಶನಕಾರರ ಅನಿಸಿಕೆಗಳ ಅನುವಾದವಾಗಿ ಪ್ರಸ್ತಾವಿಸಲ್ಪಡುವ ಆಯಾ ಪ್ರಮೇಯಗಳು ಅಪ್ರಾಮಾಣಿಕಗಳಾಗಿರುವವಾದರೂ ಅನುವಾದರೂಪದಿಂದ ಅವುಗಳಿಗೆ ಪ್ರಾಮಾಣ್ಯ ಇದ್ದೇ ಇದೆ. ಆದ್ದರಿಂದಲೇ ಅವುಗಳೂ ಸುಂದರಗಳೇ. ಅಂತಹವುಗಳ ವಿರೋಧವೂ ಬಾರದಂತೆ ಹೇಗೆ ಹೊಂದಿಸಿಕೊಳ್ಳಬೇಕೆಂದು ತಿಳಿಯಲು ಅವುಗಳ ಶ್ರವಣ ವನ್ನು ಶ್ರೀ ಮಧ್ವರು ಮಾಡದೆ ಇರಲಿಲ್ಲ –ಎಂಬ ಅರ್ಥ.

೩೦. **ಬಾದರಾಯಣರ ಸಹಾಯಸಂಪತ್ತು:** ಮಧ್ವರು ನಾರಾಯಣಾಶ್ರಮದಲ್ಲಿ ನಾರಾ ಯಣನ ದರ್ಶನ ಪಡೆಯಲು ಅವನನ್ನು ನಮಸ್ಕರಿಸಲು ವೇದವ್ಯಾಸರ ಜೊತೆಗೆ ಹೋದ ರೆಂದು ತಿಳಿಸುವಾಗ [8-6] **'ಬಾದರಾಯಣಸಹಾಯಸಂಪದಾ...'** ಎಂದು ಬಾದರಾಯಣರ ಸಹಾಯವನ್ನು ಸಂಪತ್ತನ್ನಾಗಿ ಸಾರಲಾಗಿದೆ.

ದೇವರ ಸಾಕ್ಷಾತ್ಕಾರ ಪಡೆಯಲು ವೇದವ್ಯಾಸರ ಭಾರತ ಸೂತ್ರ ಪುರಾಣಾದಿಗಳ ನ್ನೊಳಗೊಂಡ ವಾಙ್ಮಯದ ಸಹಾಯ ಸಂಪತ್ತಿದ್ದಂತೆ –ಎಂಬ ಧ್ವನಿಯನ್ನು ಹೊರಡಿಸು ವುದು 'ಸಹಾಯಸಂಪದಾ' ಶಬ್ದಪ್ರಯೋಗದ ಉದ್ದೇಶ.

೩೧. **ನಾರಾಯಣನ ತಪಸ್ಸಿನ ಪರಿಚಯ:** ನಾರಾಯಣಾಶ್ರಮದಲ್ಲಿ ಶ್ರೀ ಮಧ್ವರು ನಾರಾಯಣರೂಪಿ ಪರಮಾತ್ಮನನ್ನು ಕಂಡ ಪರಿಯನ್ನು ವರ್ಣಿಸುತ್ತ [8-8] ತನ್ನದ್ದೇ ಆದ

ಸುಖವನ್ನು ಅನುಭವಿಸುತ್ತಿದ್ದರೂ ಇಂದ್ರಿಯಜಯಾದಿ ರೂಪದ ತಪಸ್ಸನ್ನು ಅಳವಡಿಸಿ ಕೊಂಡಿರುವವನಂತೆ ನಾರಾಯಣನು ಇದ್ದನೆಂದು ನಿರೂಪಿಸಲಾಗಿದೆ.

ಈ ನಿರೂಪಣೆಯಿಂದ ಭಗವಂತ ತನ್ನ ಕೆಲವು ಅವತಾರರೂಪಗಳಲ್ಲಿ ನಡೆಸುವ 'ತಪಸ್ಸಿ'ನ ಸ್ವರೂಪದ ಬಗ್ಗೆ ಬೆಳಕುಚೆಲ್ಲಿದಂತಾಗಿದೆ.

**'ಅವತಾರೇಷ್ವನುಕೃತಿರ್ಬಾಹ್ಯವೃತ್ತ್ಯಾ ತಪಸ್ವಿನಾಮ್'** –ಎಂದು ಯಜುಃಸಂಹಿತೆ [ತೈ.ಉ.ಭಾ. 3-11] ತಿಳಿಸಿರುವಂತೆ ನಾರಾಯಣಾದಿ ಅವತಾರರೂಪಗಳಲ್ಲಿ ಭಗವಂತ ನಡೆಸುವ ತಪಸ್ಸಿನ ಹೊರಗಿನ ಮುಖ– ತಪಸ್ವಿಗಳ ಅನುಕರಣೆ. **'ಸ್ವೀಯಾನೇವ ಗುಣಾನ್ ವಿಷ್ಣುರ್ಯುಂಜನ್ನಿತ್ಯೇನ ಶೋಚಿಷಾ ಶಾರ್ವಂ ತಪಃ ಕರೋತೀವ....'** ಎಂದು ಮಹಾ ಭಾರತತಾತ್ಪರ್ಯನಿರ್ಣಯದಲ್ಲಿ [22-173] ತನ್ನ ಗುಣಗಳನ್ನೇ ತನ್ನ ಪ್ರಕಾಶಾತ್ಮಕ ಸಾಕ್ಷಿಯಿಂದ ಜೋಡಿಸಿ ರುದ್ರನ ತಪಸ್ಸಿನ ನಟನೆ ಮಾಡಿದನೆಂದು ಕೈಲಾಸಪರ್ವತದಲ್ಲಿ ಶ್ರೀಕೃಷ್ಣನ ಮೂಲಕ ನಡೆದ ರುದ್ರತಪಸ್ಸಿನ ಸ್ವರೂಪವನ್ನು ತಿಳಿಸುವ ಮೂಲಕ ಭಗವಂತ ತನ್ನ ಅವತಾರರೂಪಗಳಲ್ಲಿ ನಡೆಸುವ ತಪಸ್ಸಿನ ಆಂತರಮುಖವನ್ನು ಸ್ಪಷ್ಟಪಡಿಸಲಾಗಿದೆ. ಭಗವಂತನ ತಪಸ್ಸಿನ ಈ ಎರಡು ಮುಖಗಳನ್ನೂ ಈ ಪದ್ಯದಲ್ಲಿ ತಿಳಿಸಲಾಗಿದೆ. ಪೂರ್ವಾರ್ಧದಲ್ಲಿ ತಪಸ್ವಿಗಳ ಅನುಕರಣೆ ಎಂಬ ಬಾಹ್ಯಮುಖವನ್ನೂ, ಉತ್ತರಾರ್ಧದಲ್ಲಿ ತನ್ನದ್ದೇ ಗುಣಗಳನ್ನು ಅನುಭವಿಸುತ್ತ ಆನಂದಪಡುತ್ತಿರುವುದೆಂಬ ಆಂತರಮುಖವನ್ನೂ ಬೆಳಗಿಸಿದಂತಾಗಿದೆ. ತನ್ನ ಸ್ವರೂಪಸುಖದಲ್ಲಿಯೇ ರತನಾಗಿರುವನೆಂದರೆ ತನ್ನ ಗುಣಗಳನ್ನು ಅನುಭವಿಸುತ್ತ, ಅದರಿಂದಾಗಿ ಸುಖದಲ್ಲಿ ಮುಳುಗಿರುವನೆಂದೇ ಅರ್ಥ.

೩.೨. **ಭಗವದವತಾರದ ಉದ್ದೇಶ:** ಭಗವಂತನ ಅವತಾರಗಳ ಉದ್ದೇಶವನ್ನು **'ಅಗಣಯ್ಯಸದ್ಗುಣಗಣಃ.....'** ಈ ಪದ್ಯದಲ್ಲಿ [8-13] ಚೆನ್ನಾಗಿ ಉಪಪಾದಿಸಲಾಗಿದೆ.

- ಭಗವಂತನು ಗುಣಪೂರ್ಣನಾಗಿರುವುದರಿಂದಲೂ, ದೋಷದೂರನಾಗಿರುವುದ ರಿಂದಲೂ ವೈಯಕ್ತಿಕವಾಗಿ ಯಾವುದನ್ನಾದರೂ ಪಡೆದುಕೊಳ್ಳುವುದಕ್ಕಾಗಲೀ, ಯಾವು ದನ್ನಾದರೂ ಕಳೆದುಕೊಳ್ಳುವುದಕ್ಕಾಗಲೀ ಅವತಾರ ತಾಳುವ ಆವಶ್ಯಕತೆ ಅವನಿಗೆ ಇಲ್ಲ ಎಂಬುದನ್ನು ಮೊದಲ ಪಾದದಲ್ಲಿ ತಿಳಿಸಿದಂತಾಗಿದೆ.

- ದುಷ್ಟರ ಸಂಹಾರಕ್ಕಾಗಿ ಶಿಷ್ಟರ ರಕ್ಷಣೆಗಾಗಿ ಅವನು ಅವತಾರಗಳನ್ನು ತಾಳುವನೆಂದು ಕೆಲವೆಡೆ ಹೇಳಲಾಗಿದೆ. ಆದರೆ ದುಷ್ಟರಿಂದ ಕೂಡಿದ ಎಲ್ಲವೂ ತನ್ನ ವಶದಲ್ಲಿರುವ ಅವನಿಗೆ ಅವತಾರ ತಾಳಿ ಅವರನ್ನು ಸಂಹರಿಸುವ ಆವಶ್ಯಕತೆಯಿಲ್ಲ. ಅವರನ್ನು ಹುಟ್ಟ ದಂತೆಯೇ ಮಾಡಬಹುದು. ಹುಟ್ಟಿದ ಅವರು ತಾವೇ ನಾಶಕ್ಕೊಳಗಾಗುವಂತೆಯೂ ಮಾಡಬಹುದು ತಾನೇ?

- ಮನುಷ್ಯರು ಹೇಗೆ ಬದುಕಬೇಕೆಂಬ 'ಮರ್ತ್ಯಶಿಕ್ಷಣ'ವನ್ನು ನೀಡುವುದಕ್ಕಾಗಿ ಮಾನವಾ ವತಾರಗಳನ್ನು ಅವನು ತಾಳುವನೆಂದು ಮತ್ತೆ ಕೆಲವೆಡೆ ತಿಳಿಸಲಾಗಿದೆ. ಆದರೆ ಮರ್ತ್ಯ ಶಿಕ್ಷಣವನ್ನು ಇನ್ನೊಬ್ಬರ ಮೂಲಕವೂ ಕೊಡಿಸಬಹುದು. ಶಾಸ್ತ್ರಾದಿಗಳ ಮೂಲಕವೂ

ಕೊಡಿಸಬಹುದು. ಆದ್ದರಿಂದ ಈ ಉದ್ದೇಶಕ್ಕಾಗಿಯೂ ಅವತಾರ ತಾಳುವ ಅನಿವಾರ್ಯತೆ ಇಲ್ಲ.

ಈ ಎರಡೂ ವಿಚಾರಗಳನ್ನು 'ಸ್ವವಶಾಖಿಲೋಽಪ್ಯನುಪಚಾರತಃ ಸ್ವಯಮ್' –ಎಲ್ಲವನ್ನೂ ಮುಖ್ಯವಾಗಿ ತನ್ನ ವಶದಲ್ಲಿಯೇ ಇಟ್ಟುಕೊಂಡಿರುವನೆಂಬ ಎರಡನೇ ಪಾದದಿಂದ ಸೂಚಿಸಿಕೊಡಲಾಗಿದೆ.

ಹಾಗಾದರೆ ಯಾಕೆ ಬೇರೆಬೇರೆ ಅವತಾರಗಳನ್ನು ತಾಳುವನೆಂಬುದನ್ನು ಮುಂದಿನ ಎರಡು ಚರಣಗಳಿಂದ ಸ್ಪಷ್ಟಪಡಿಸಲಾಗುವುದು –ತನ್ನ ಭಕ್ತರು ವಿಮುಕ್ತಿ ಹೊಂದಬೇಕು. ವಿಮುಕ್ತಿಯನ್ನು ಪಡೆಯಬೇಕೆಂದರೆ ತನ್ನಲ್ಲಿ ಭಕ್ತಿ ತಾಳಬೇಕು. ಶ್ರವಣ, ಕೀರ್ತನ, ಸ್ಮರಣವೇ ಮುಂತಾದ ಒಂಭತ್ತು ಮಜಲುಗಳನ್ನೊಳಗೊಂಡ ಭಕ್ತಿಯನ್ನು ಭಗವಂತನಲ್ಲಿ ತಾಳಬೇಕೆಂದರೆ ಅವನ ಗುಣಗಳನ್ನು ಅವರು ಕಾಣುವಂತಾಗಬೇಕು. ಬೇರೆ ಬೇರೆ ಅವತಾರಗಳನ್ನು ತಾಳಿ ಅವುಗಳಲ್ಲಿ ಬಲ, ಪರಾಕ್ರಮ, ವಾತ್ಸಲ್ಯಾದಿಗಳನ್ನು ತೋರಿಸಿದರಷ್ಟೇ ಭಕ್ತರು ಅವುಗಳನ್ನು ತಿಳಿದುಕೊಳ್ಳಬಹುದಾಗಿದೆ. ಅದಕ್ಕಾಗಿಯೆ ಭಗವಂತನು ಅನೇಕ ರೂಪಗಳನ್ನು ತಾಳಿ ಅದರಲ್ಲಿ ತನ್ನ ಬೇರೆಬೇರೆ ಗುಣಗಳನ್ನು ಬೆಳಗಿಸಿ ಭಕ್ತರು ಅವುಗಳ ಶ್ರವಣ, ಕೀರ್ತನಾದಿಗಳನ್ನು ನಡೆಸುವಂತೆ ಮಾಡುವನು.

ಹೀಗೆ ಭಗವದವತಾರಗಳ ಮೂಲಭೂತ ಉದ್ದೇಶದ ಸ್ಪಷ್ಟೀಕರಣ ಇಲ್ಲಿ ನಡೆದಿದೆ.

೩೩. **ಮಧ್ವರ ಮನಸ್ಸಿನಲ್ಲಿ ಸದಾ ಸನ್ನಿಧಾನ:** **'ತಸ್ಯ ವಲ್ಲಭತಮಾಽಽಸ ವಾಸಭೂಃ....'** ಎಂಬ ಪದ್ಯದಲ್ಲಿ [9-4] ಶ್ರೀ ಮಧ್ವರ ಮನಸ್ಸಿನಲ್ಲಿ ಶ್ರೀ ವೇದವ್ಯಾಸರು ಯಾವಾಗಲೂ ವಿಶೇಷವಾಗಿ ಸನ್ನಿಹಿತರಾಗಿರುವರೆಂದು ನಿರೂಪಿತವಾಗಿದೆ.

ಹೀಗೆ ಸದಾ ವೇದವ್ಯಾಸರ ಸನ್ನಿಧಾನಕ್ಕೆ ಪಾತ್ರವಾದ ಮಧ್ವರ ಮನಸ್ಸಿನಿಂದ ಹೊರಹೊಮ್ಮಿರುವ ಸೂತ್ರಭಾಷ್ಯ ಮುಂತಾದ ಗ್ರಂಥಗಳು ವೇದವ್ಯಾಸರಿಗೆ ಅತ್ಯಂತ ಸಮ್ಮತವಾದವುಗಳೆಂದು ದೃಢೀಕರಿಸಿಕೊಳ್ಳಬಹುದಾಗಿದೆ.

೩೪. **ಸೂತ್ರಭಾಷ್ಯಗಳ ಗುಣದೋಷಗಳು:** ಶ್ರೀ ಮಧ್ವರಲ್ಲಿ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಲು ಆದೇಶಿಸುವ ನಾರಾಯಣನು ಇತರ ಭಾಷ್ಯಕಾರರು ತೋರಿರುವ ಮಹಾದೋಷವನ್ನು ಒಂದು ಮಾತಿನಲ್ಲಿ ಸ್ಪಷ್ಟಪಡಿಸುವನು –ಶ್ರುತಿಸ್ಮೃತಿಗಳ ನಿಜಾರ್ಥವನ್ನು ದೂಷಿಸುವ ಇತರ ಭಾಷ್ಯಕಾರರಿಂದಾಗಿ ತತ್ವಜ್ಞಾನ ಪೂರ್ಣವಾಗಿ ಮರೆಯಾಗಿ ಹೋಗಿದೆ [8-45].

ಶ್ರುತಿಸ್ಮೃತಿಗಳ ನಿಜಾರ್ಥವನ್ನು ದೂಷಿಸಿರುವುದೇ ಇತರ ಭಾಷ್ಯಕಾರರ ದೊಡ್ಡ ದೋಷ ಎಂದು ತಿಳಿಸಿದಂತಾಗಿದೆ.

ಸೂತ್ರಭಾಷ್ಯವನ್ನು ರಚಿಸು ಎಂದು ಆದೇಶಿಸಿದ ನಾರಾಯಣನು 'ಸತ್ಸಿದ್ಧಾಂತ'ದ ಆಧಾರದಿಂದ ಶ್ರುತಿಸ್ಮೃತಿಗಳನ್ನು ಸಂಯೋಜಿಸು [8-46] ಎಂದು ನೀಡಿರುವ ಕರೆಯಿಂದ

ಶ್ರೀ ಮಧ್ವರ ಸೂತ್ರಭಾಷ್ಯದಲ್ಲಿ ಶ್ರುತಿಸ್ಮೃತಿಗಳ ಸಂಯೋಜನೆ ಎಂಬ ದೊಡ್ಡ ಗುಣ ಇದೆ ಎಂದೂ ತಿಳಿದುಬರುವುದು.

೩೫. **ಅವರವರ ಯೋಗ್ಯತೆಗನುಗುಣವಾಗಿ ತೆರೆದುಕೊಳ್ಳುವಿಕೆ:** ಪ್ರತಿಯೊಬ್ಬ ವ್ಯಕ್ತಿಯಲ್ಲೂ ಅವನದ್ದೇ ಆದ 'ಯೋಗ್ಯತೆ' ಎಂಬ ಧರ್ಮವೊಂದಿದ್ದು ಅವನ ಸಾಧನೆಗಳೆಲ್ಲ ಅದಕ್ಕನುಗುಣವಾಗಿಯೇ ನಡೆಯುತ್ತಿರುತ್ತವೆ ಎಂಬ 'ಹಠವಾದ'ವನ್ನು ಪ್ರಸ್ತುತಪಡಿಸಿರುವ ಶ್ರೀ ಮಧ್ವರು ಆ ವಾದದ ಬೆಳಕಲ್ಲೇ ಮತ್ತೊಬ್ಬರ ಜೊತೆಗೆ ಆಧ್ಯಾತ್ಮಿಕವಾಗಿ ವ್ಯವಹರಿಸುತ್ತಿದ್ದರು. ಆದುದರಿಂದಲೇ ಅವರು ರಚಿಸಿದ್ದ ಸೂತ್ರಭಾಷ್ಯದಲ್ಲಿ '**ಬಾಲಸಂಘಮಪಿ ಬೋಧಯದ್ ಭೃಶಂ ದುರ್ನಿರೂಪವಚನಂ ಚ ಪಂಡಿತೈಃ**' [9-10]ಎಂದಿರುವಂತೆ ಸಾಮಾನ್ಯ ಸಾಧಕರಿಗೂ ಅವರ ಯೋಗ್ಯತಾನುಸಾರವಾಗಿ ಒಂದು ಹಂತದಲ್ಲಿ ಅರ್ಥವಾಗುವಂತೆಯೂ, ಸ್ವಲ್ಪ ಮೇಲ್ಮಟ್ಟದ ಸಾಧಕರು ಅವರ ಯೋಗ್ಯತೆಗನುಗುಣವಾಗಿ ಮತ್ತಷ್ಟು ಹೆಚ್ಚು ಪರಿಶ್ರಮ ತಾಳಲು ಅನುಕೂಲವಾಗುವಂತೆಯೂ ವಿಶಿಷ್ಟವಾದ ಶೈಲಿಯನ್ನು ಅಳವಡಿಸಿಕೊಂಡಿದ್ದರು. ಇದರಿಂದಾಗಿ ಅವರವರ ಯೋಗ್ಯತಾನುಗುಣವಾಗಿ ಅಧ್ಯಾತ್ಮ ವಿದ್ಯೆಯ ಕೃಷಿ ನಡೆಸಲು ಸೌಕರ್ಯ ಮಾಡಿಕೊಟ್ಟಂತಾಗಿದೆ. ಅವರ ಸ್ವರೂಪಕ್ಕೆ ಈ ಲಕ್ಷಣವನ್ನು ಅಳವಡಿಸಿಕೊಂಡಾಗ ಅವರ ಪಾಠಪ್ರವಚನಾದಿ ಮಾತುಗಾರಿಕೆಯ ಪ್ರತಿಕ್ರಿಯೆಯಲ್ಲೂ ಈ ಶೈಲಿಯೇ ಅಳವಡಿಸಿಕೊಳ್ಳಲ್ಪಟ್ಟಿದ್ದು, ಆದರ ಉದ್ದೇಶವೂ ಆಯಾ ಜಿಜ್ಞಾಸುಗಳಿಗೆ ಅವರವರ ಯೋಗ್ಯತಾನುಸಾರವಾಗಿ ಜ್ಞಾನವಿತರಣೆ ನಡೆಸುವಂತಹದ್ದು.

೩೬. **ಅನಂತಧೀ ವಿಶೇಷಣದ ಸ್ವಾರಸ್ಯ:** ಶ್ರೀ ಮಧ್ವರು ರಚಿಸಿರುವ ಸೂತ್ರಭಾಷ್ಯ ಹಿಂದಿನ, ಮುಂದಿನ ಹಾಗೂ ಇಂದಿನ ಯಾರಿಂದಲೂ ಯಾವದೇ ಅಂಶದಲ್ಲಿ ದೂಷಿಸಲಾಗದ್ದೆಂದು '**ಅಪ್ಯದೂಷ್ಯಮತನೋದ ಅನಂತಧೀಃ......**' [9-12] ಎಂಬ ಮಾತಿನಲ್ಲಿ ತಿಳಿಸುವಾಗ 'ಅನಂತಧೀ' –ಎಂಬ ವಿಶೇಷಣವನ್ನು ಶ್ರೀ ಮಧ್ವರಿಗೆ ನೀಡಲಾಗಿದೆ. ಶ್ರೀ ಮಧ್ವರು'ಅನಂತಧೀ' ಎನಿಸಿಕೊಂಡು ರಚಿಸಿರುವುದರಿಂದ ಸೂತ್ರಭಾಷ್ಯ ಯಾರಿಂದಲೂ ದೂಷಿಸಲು ಅಯೋಗ್ಯವೆನಿಸುವಂತೆ ರಚಿತವಾಗಿದೆ ಎಂದು.

ಭಗವಂತ ಅನಂತ ಎನಿಸಿರುವುದಕ್ಕೆ ಯಾರಿಂದಲೂ ನಾಶಪಡಿಸಲಾಗದಿರುವವನೆಂಬುದೂ ಒಂದು ಕಾರಣ. ಭಗವಂತನ ಅನಂತನಾಮಸೂಚಿತವಾದ ಈ ಬಗೆಯ ವ್ಯಕ್ತಿತ್ವವನ್ನು ಉಪಾಸನೆ ಮಾಡಿ '**ತಂ ಯಥಾಯಥೋಪಾಸತೇ ತದೇವ ಭವತಿ**' –ಎಂಬ ನಿಯಮಕ್ಕನುಗುಣವಾಗಿ ಆ ಉಪಾಸನೆಯ ಫಲವಾಗಿ ತಮ್ಮಿಂದಲೂ ತಮ್ಮ ಸೂತ್ರಭಾಷ್ಯ ಎಂದೆಂದೂ 'ಅನಂತ' –ಯಾರಿಂದಲೂ ನಿರಾಕರಿಸಲು ಅಯೋಗ್ಯವಾಗುವಂತೆ ರಚಿತವಾಗಿದೆ ಎಂಬ ಧ್ವನಿ ಮೂಡಬಲ್ಲದು. ಹೀಗೆ ಶ್ರೀ ಮಧ್ವರು ತಮ್ಮ ಧೀಯಲ್ಲಿ ಅನಂತನನ್ನು ಹೊತ್ತಿರುವುದರಿಂದಲೇ ಅವರ ಬುದ್ಧಿಯೂ ಅನಂತ; ಯಾರಿಂದಲೂ ನಾಶಪಡಿಸಲು ಆಗದಿದ್ದದು. ಅಂತಹ ಬುದ್ಧಿಯಿಂದ ನಿರ್ಮಿತವಾಗಿರುವುದರಿಂದಲೇ ಮಾಧ್ವ ಸೂತ್ರಭಾಷ್ಯ ಅನಂತ ಎನಿಸಿದ್ದು ಯಾರಿಂದಲೂ ಖಂಡನಾನರ್ಹವಾಗಿ ಮೆರೆಯುತ್ತಿದೆ.

೩೭. **ಮಂದಿರನಿರ್ಮಾಣಕ್ಕಿಂತಲೂ ಅಧಿಕಫಲ:** ಶ್ರೀ ಮಧ್ವರ ಸೂತ್ರಭಾಷ್ಯದ ಒಂದು ಅಕ್ಷರವನ್ನು ಬರೆದವನಿಗೂ ಗಂಗೆಯ ದಡದಲ್ಲಿ ಶ್ರೀಹರಿಮಂದಿರವನ್ನು ರಚಿಸಿದವನಷ್ಟು ಪುಣ್ಯ ಬರುವುದೆಂದು [9-13] ಹೇಳುವ ಮೂಲಕ ಸಮಗ್ರ ಭಾಷ್ಯದ ಲೇಖಕನಿಗೆ ಗಂಗಾನದಿಯಲ್ಲಿ ಹರಿಮಂದಿರವನ್ನು ರಚಿಸಿದವನಿಗಿಂತಲೂ ಅಧಿಕಪುಣ್ಯ ಬರುವುದೆಂದು ಸಾರಿದಂತಾಗಿದೆ.

ದೇವಾಲಯವನ್ನು ನಿರ್ಮಿಸಿದವನಿಗೆ ಅಂತಹ ದೇವಾಲಯದಲ್ಲಿ ಭಕ್ತರಿಗೆ, ಸಾಧಕರಿಗೆ ಭಗವದನುಸಂಧಾನಕ್ಕೆ ಸೌಕರ್ಯವನ್ನು ಒದಗಿಸಿಕೊಟ್ಟ ಪ್ರಯುಕ್ತ ಪುಣ್ಯಾತಿಶಯ. ಭಾಷ್ಯದ ಲೇಖಕನಾದರೂ ತಾನು ಬರೆದ ಭಾಷ್ಯದ ಅಧ್ಯಯನ ನಡೆಸಿ ಅನೇಕಾನೇಕ ಜಿಜ್ಞಾಸುಗಳು, ಸಾಧಕರು ದೇವಾಲಯ ಮಾಧ್ಯಮದ ಸಾಧನೆಗಳಿಗಿಂತಲೂ ಅಧಿಕವಾಗಿ ಭಗವದನು ಸಂಧಾನವನ್ನು ಪಡೆದುಕೊಳ್ಳುವುದಕ್ಕೆ ಸೌಕರ್ಯವನ್ನು ಕಲ್ಪಿಸಿಕೊಟ್ಟದ್ದರಿಂದ ದೇವಾಲಯ ನಿರ್ಮಾತೃಗಿಂತಲೂ ಅತ್ಯಧಿಕ ಪುಣ್ಯಭಾಗಿ ಆಗಲೇ ಬೇಕು ತಾನೇ?

೩೮. **ಗೋದಾವರಿಯ ಗೋದಾನದ ಸ್ಮರಣೆ:** ಬದರಿಯಿಂದ ಶ್ರೀ ಮಧ್ವರು ಗೋದಾವರೀತಟಕ್ಕೆ ಬಂದರೆಂದು ನಿರೂಪಿಸುವಾಗ [9-14] '**......ವಿವಿಧಭೂರತೀತ್ಯ ಗೋ-ದಾವರೀತಟಮುಗಾತ್**' –ಎಂದು ಗೋದಾವರೀ ಶಬ್ದದ ಮಧ್ಯೇ ಯತಿಭಂಗ ಆಗುವಂತೆ ಪದ್ಯವನ್ನು ರಚಿಸಲಾಗಿದೆ. ಕಾವ್ಯದಲ್ಲಿ ಯತಿಭಂಗ ಎಂಬುದೊಂದು ದೋಷ ಎನಿಸಿದ್ದು, ಶಾಸ್ತ್ರದಲ್ಲಿ ಅದು ದೋಷವೆನಿಸಿದ್ದರೂ ತಾತ್ವಿಕವಾದ ಸಂದೇಶವೊಂದನ್ನು ಸೂಚಿಸಿಕೊಡುವುದಕ್ಕಾಗಿ ಉದ್ದೇಶ ಪೂರ್ವಕವಾಗಿಯೇ ಇಲ್ಲಿ ಯತಿಭಂಗವನ್ನು ಮಾಡಲಾಗಿದೆ. ಗೋದಾವರೀನದಿಗೆ ಆ ಹೆಸರು ಬರಲು ಕಾರಣ ಗೌತಮರ ಮೃತ ಗೋವನ್ನು ತನ್ನ ಜಲ ಸ್ಪರ್ಶದಿಂದ ಬದುಕಿಸಿಕೊಟ್ಟು ಆ ಮೂಲಕ ಗೌತಮರಿಗೆ ಗೋದಾನ ಮಾಡಿರುವುದು. ನೇರವಾಗಿ ಓದಿಕೊಂಡು ಹೋಗುವ ಬದಲು ಯತಿಭಂಗಕ್ಕೊಳಪಟ್ಟು 'ಗೋ–ದಾವರೀ' ಎಂದು ಬಿಡಿಸಿ ಓದಬೇಕಾದಾಗ ಆ ನದಿಯ ಗೋದಾನದ ಮಹಿಮೆ ನೆನಪಿಗೆ ಬರುವುದು.

ಗೋದಾವರೀ ದಡಕ್ಕೆ ತೆರಳಿದ ಮಧ್ವರೂ ಆ ನದಿಯ ಗೋದಾನದ ಮಹಿಮೆಯನ್ನು ನೆನಪಿಸಿಕೊಂಡರೆಂದೂ ಧ್ವನಿ ಹೊರಡಬಲ್ಲದು.

೩೯. **ಶೋಭನಭಟ್ಟರ ವೇದಭಾರತ ಪುರಾಣನಿಷ್ಠೆ:** '**ಯಸ್ತು ತಾರ್ಕಿಕಶಿಖಾಮಣಿಃ,,,,**' [9-18] ಎಂದಿರುವಂತೆ ಶೋಭನ ಭಟ್ಟರು ತಾರ್ಕಿಕರಾಗಿದ್ದೂ '**ವೇದಭಾರತಪುರಾಣ ನಿಷ್ಠಿತೋ.........**' ಎಂದಿರುವಂತೆ ವೇದಭಾರತಪುರಾಣಗಳಲ್ಲಿ ನಿಷ್ಠೆಯನ್ನು ಅಳವಡಿಸಿಕೊಂಡಿದ್ದು ಅವರ ಉತ್ತಮ ಸ್ವರೂಪಯೋಗ್ಯತೆಗೆ ಜ್ಞಾಪಕವೆನಿಸಬಲ್ಲದು.

ಅವರಿಗೆ ಮಧ್ವರ ಸೂತ್ರಭಾಷ್ಯದ ಶ್ರವಣದಲ್ಲಿ ಅತ್ಯಾಸಕ್ತಿ ಉಂಟಾದುದಕ್ಕೂ ಅವರಿಗಿದ್ದ ವೇದಭಾರತಪುರಾಣನಿಷ್ಠೆಯೇ ಕಾರಣ. ವೇದಭಾರತಪುರಾಣಗಳ ಸಮನ್ವಯದ ಪಾಕಕ್ಕೊಳಗಾಗಿರುವ 'ಮಧ್ವಭಾಷ್ಯ'ದ ಭೋಜನ ವೇದಭಾರತಪುರಾಣನಿಷ್ಠಿತರಾಗಿ ಆ ನಿಟ್ಟಿನ ಹಸಿವೆಗೊಳಗಾಗಿದ್ದ ಶೋಭನ ಭಟ್ಟರಿಗೆ ರುಚಿಸಲೇ ಬೇಕು ತಾನೇ? 'ವೇದಭಾರತ

**ಪುರಾಣನಿಷ್ಠಿತೋ ಭಾಷ್ಯಮೇತದಶೃಣೋತ್'** –ಎಂಬ ಮಾತಿನಿಂದ ಈ ಆಶಯವೂ ಸೂಚಿತವಾಗಬಲ್ಲದು.

೪೦. **ಶೋಭನಭಟ್ಟರ ಎರಡು ಹೆಗ್ಗಳಿಕೆಗಳು:** ಮಧ್ವವಿಜಯದಲ್ಲಿ ಉಲ್ಲೇಖಗೊಂಡಂತೆ [9-18] ಶ್ರೀ ಮಧ್ವರ ಗ್ರಂಥಶ್ರೇಷ್ಠವಾದ ಸೂತ್ರಭಾಷ್ಯವನ್ನು ಮೊತ್ತಮೊದಲಿಗೆ ಮಧ್ವರಿಂದ ಶ್ರವಣ ನಡೆಸಿದ ಹೆಗ್ಗಳಿಕೆ ಶೋಭನ ಭಟ್ಟರದ್ದಾದರೆ, ಶ್ರೀ ಮಧ್ವರ ಸಿದ್ಧಾಂತವನ್ನು ಪ್ರವಚನದ ಮೂಲಕ ಸಭೆಗಳಲ್ಲಿ ಮೊತ್ತಮೊದಲು ಪ್ರಸಾರ ನಡೆಸಿದ ಹೆಗ್ಗಳಿಕೆಯೂ [9-20] ಶೋಭನ ಭಟ್ಟರದ್ದಾಗಿದೆ.

೪೧. **ಬಲಮುರಿಶಂಖದ ದೃಷ್ಟಾಂತದ ಔಚಿತ್ಯ:** ಮಧ್ವಶಾಸ್ತ್ರವನ್ನು ಕಡೆಗಣಿಸುವವರು, ಸರಿಯಾಗಿ ಉಪಯೋಗಿಸಿಕೊಳ್ಳದವರು ಹಾಗೂ ಚೆನ್ನಾಗಿ ಉಪಯೋಗಿಸಿಕೊಳ್ಳುವವರು –ಹೀಗೆ ಮೂರು ಬಗೆಯ ಅಧಿಕಾರಿಗಳನ್ನು ಬಲಮುರಿಶಂಖದ ಮೂರು ಬಗೆಯ ಬಳಕೆದಾರರ ದೃಷ್ಟಾಂತದೊಂದಿಗೆ ವಿವರಿಸುವಾಗ ಮಧ್ವಶಾಸ್ತ್ರಕ್ಕೆ ಬಲಮುರಿಯ ದೃಷ್ಟಾಂತ ಕೊಟ್ಟಿರುವುದು ಅದೊಂದು ಅಮೂಲ್ಯವಸ್ತು ಎಂದಷ್ಟೇ ಅಲ್ಲ. ಬದಲಾಗಿ **'.....ಚೂರ್ಣನಾಯ ಬಹುಧಾsಪ್ಯಶಕ್ನುವಾನ್'** [9-21]ಎಂದಿರುವಂತೆ ಬಲಮುರಿ ಎಷ್ಟು ಯತ್ನಿಸಿದರೂ ಪುಡಿಗೈಯಲು ಬರಲಾರದು. ಅಂತೆಯೇ ಮಧ್ವಶಾಸ್ತ್ರವನ್ನು ಯಾರಿಗೂ ಖಂಡಿಸಲು ಆಗಲಾರದು –ಎಂದು ಸೂಚಿಸಿಕೊಡುವುದೂ ಒಂದು ಉದ್ದೇಶ.

ಪುಡಿಮಾಡಿ ಸುಣ್ಣಕ್ಕಾಗಿ ಬಳಸಿಕೊಳ್ಳಲು ಉಪಯೋಗವಿಲ್ಲ ಎಂದು ಬಲಮುರಿ ಶಂಖವನ್ನು ಎಸೆದವನೊಬ್ಬನಾದರೆ, ಅದನ್ನು ಕೊಂಡೊಯ್ದು ಅಂಗಡಿಯೊಂದರಲ್ಲಿ ಮಾರಿ ಹಣ ಪಡಕೊಂಡ ವ್ಯಕ್ತಿ ಮತ್ತೊಬ್ಬ. ಮಧ್ವಶಾಸ್ತ್ರವನ್ನು ಓದಿ, ಅದನ್ನು ಅನುಸಂಧಾನಕ್ಕಾಗಿ ವಿನಿಯೋಗಿಸಿಕೊಳ್ಳುವ ಬದಲು ದುಡ್ಡಿಗಾಗಿ, ಕೀರ್ತಿಗಾಗಿ ಪಾಠ–ಪ್ರವಚನಾದಿಗಳಲ್ಲಷ್ಟೇ ಬಳಸಿಕೊಳ್ಳುವವರು ಬಲಮುರಿಯನ್ನು ಮಾರಿ ದುಡ್ಡು ಪಡೆದವನಂತೆ ಅನುಕಂಪಾರ್ಹರು.

ಬಲಮುರಿಯ ಬೆಲೆ ಬಲ್ಲವನೊಬ್ಬ ಅದನ್ನು ಪೀಠದಲ್ಲಿಟ್ಟು ಅರ್ಚಿಸಿ ಅದರ ಫಲವಾಗಿ ಸಕಲ ಐಶ್ವರ್ಯವನ್ನು ಪಡೆದುಕೊಂಡಿದ್ದವನಂತೆ ಮಧ್ವಶಾಸ್ತ್ರವನ್ನು ಪೂಜಿಸುವವನೆಂದರೆ ಅದನ್ನು ತನ್ನ ಬದುಕಿನಲ್ಲಿ ಆನುಸಂಧಾನಿಕವಾಗಿ ವಿನಿಯೋಗಿಸಿಕೊಳ್ಳುವವನೆಂದರ್ಥ. ಇದರ ಫಲವಾಗಿ ಮೋಕ್ಷಪುರುಷಾರ್ಥವನ್ನೂ ಪಡೆಯಬಹುದಾದ ಮಹಾಭಾಗ್ಯ ಇವನ ಪಾಲಿದ್ದಾಗಿದೆ.

೪೨. **ಮಧ್ವಶಾಸ್ತ್ರತ್ಯಾಗಿಗಳ ದೂಷಣೆಯ ವ್ಯವಸ್ಥಿತ ವಿಕಲ್ಪ:** ಮಾಧ್ವರಾಗಿ ಮನೆತನದಲ್ಲಿ ಹುಟ್ಟಿದ್ದು ಮಧ್ವಶಾಸ್ತ್ರವನ್ನು ಅಧ್ಯಯನ ಮಾಡುವ ಸೌಭಾಗ್ಯವನ್ನು ಪಡೆದಿದ್ದರೂ, ಅಥವಾ ಯಾವುದೋ ಘಟನೆಯಿಂದಾಗಿ ಮಾಧ್ವಶಾಸ್ತ್ರವನ್ನು ಓದುವ ಅವಕಾಶ ಇದ್ದರೂ ಅದನ್ನು ಮಧ್ವಶಾಸ್ತ್ರಾಧ್ಯಯನ ಹೊಟ್ಟೆ ತುಂಬಿಸುವುದೇ ಮುಂತಾದ ಐಹಿಕ ಉಪಯೋಗಕ್ಕೆ ಸಹಾಯಕವಾಗಲಾರದೆಂದು ಬಳಸಿಕೊಳ್ಳದವರು ಪುಡಿಮಾಡಿ ಸುಣ್ಣಕ್ಕಾಗಿ ಬಲಮುರಿ ಶಂಖ ಉಪಯೋಗಿಸಲು ಬರಲಾರದೆಂದು ಅದನ್ನು ಎಸೆದವನಷ್ಟೇ ಮೂರ್ಖ– 'ತಸ್ಯ ತುಲ್ಯಮತಿರೇಷ ದುರ್ಜನೋ....' [9-22] ಎಂದು ಹೋಲಿಸಿರುವರು. ಉಪೇಕ್ಷೆ

ಯಿಂದಾಗಿ ಮಧ್ವಶಾಸ್ತ್ರವನ್ನು ತ್ಯಜಿಸುವವರನ್ನು ಹೀಗೆ ದೂಷಿಸಿದ ಶೋಭನ ಭಟ್ಟರು ದ್ವೇಷದಿಂದಾಗಿ, ವಿಪರೀತಜ್ಞಾನದಿಂದಾಗಿ ಮಧ್ವಶಾಸ್ತ್ರವನ್ನು ದೂರಮಾಡುವ ವ್ಯಕ್ತಿಗಳು ಮತ್ತೆ ಕೆಲವರಿದ್ದು ಅವರ ಬಗ್ಗೆ 'ನಾಥವಾಽಸ್ಯ ಸದೃಶೋಽಸ್ತಿ ನೀಚಧೀಃ' –ಅಂತಹ ದುಷ್ಟರಿಗೆ ಸರಿದೂಗುವ ಕೆಟ್ಟ ಬುದ್ಧಿಯವ ಮತ್ತೊಬ್ಬನಿಲ್ಲ –ಎನ್ನುವಷ್ಟೂ ದುಷ್ಟರು ಅಂತಹವರು!

ಹೀಗೆ '**ತಸ್ಯ ತುಲ್ಯಮತಿಃ....**' ಎಂಬ ಮಾತಿನಲ್ಲಿ ಮಧ್ವಶಾಸ್ತ್ರವನ್ನು ತ್ಯಜಿಸುವ ಎರಡು ಬಗೆಯ ದುರ್ಜನರನ್ನು ಗಮನದಲ್ಲಿಟ್ಟುಕೊಂಡು 'ವ್ಯವಸ್ಥಿತವಿಕಲ್ಪ' ಪ್ರಕ್ರಿಯೆಗನುಗುಣ ವಾಗಿ ಅವರನ್ನು ದೂಷಿಸಲಾಗಿದೆ ಎಂದಿಟ್ಟುಕೊಳ್ಳಬೇಕು.

**ಅಸುರಾಣಾಂ ತಮಃಪ್ರಾಪ್ತಿಸ್ತದಾ ನಿಯಮತೋ ಭವೇತ್ ।**
**ಯದಾ ತು ಜ್ಞಾನಿಸದ್ಭಾವೇ ನೈವ ಗೃಹ್ಣಂತಿ ತತ್ಪರಮ್ ॥**

ಜ್ಞಾನಿಗಳಿರುವಾಗಲೂ ಭಗವಂತನ ಪಾರಮ್ಯವನ್ನು ಒಪ್ಪಿಕೊಳ್ಳದವರು ಅಸುರ ಸ್ವಭಾವದವರಾಗಿದ್ದು ಅವರಿಗೆ ಅಂಧಂತಮಸ್ಸೇ ಗತಿ ಎಂದು ನೀಡಿರುವ ನಿರ್ಣಯ [ಮ.ಭಾ.ತಾ.ನಿ. 1-90]ದ ಸ್ಫೂರ್ತಿಯನ್ನು 'ನಾಥವಾಸ್ಯ ಸದೃಶೋಽಸ್ತಿ ನೀಚಧೀಃ' –ಎಂಬ ಮಾತಿನ ಹಿನ್ನೆಲೆಯಾಗಿ ಗುರುತಿಸಬಹುದಾಗಿದೆ.

೪೩. **ಅಚ್ಯುತಪ್ರೇಕ್ಷಾಚಾರ್ಯರ ಮೇಲೆ ಬಲಾತ್ಕಾರದ ಪರಿವರ್ತನೆ:** 'ಸ್ವಭಾವ ವಾದ'ಕ್ಕೆ ಒತ್ತುಕೊಟ್ಟಿದ್ದ ಶ್ರೀ ಮಧ್ವರು ಅವರವರ ಸ್ವಭಾವಕ್ಕನುಗುಣವಾಗಿಯೇ ಅವರ ಆಚಾರವಿಚಾರಗಳು ನಡೆಯುವವವೆಂದು ಪ್ರಬಲವಾಗಿ ನಂಬಿದ್ದರಿಂದ ಯಾರನ್ನೂ ಬಲಾತ್ಕಾರವಾಗಿ ತಮ್ಮ ಸಿದ್ಧಾಂತಕ್ಕೆ ಪರಿವರ್ತನೆಗೊಳಿಸುವ ಪ್ರವೃತ್ತಿಯಲ್ಲಿ ತೊಡಗಿದ್ದಿಲ್ಲ. ಆದರೆ ತಮ್ಮ ಗುರುಗಳಾಗಿದ್ದ ಅಚ್ಯುತಪ್ರೇಕ್ಷಾಚಾರ್ಯರ ವಿಷಯದಲ್ಲಿ ಮಾತ್ರ ತಮ್ಮ ಈ ನಡತೆಗೆ ಅಪವಾದವಾಗಿ ನಡೆದುಕೊಂಡಿದ್ದರು. '**ಶೋಭನಾಯ ಗುರವೇ ಸ್ವಭಾವತಃ ಕಾಲತಃ ಕುಮತಲೀನಬುದ್ಧಯೇ**' [9-33] ಎಂದಿರುವಂತೆ ತಮ್ಮ ಗುರುಗಳು ಸ್ವಾಭಾವಿಕವಾಗಿ ಸಾತ್ವಿಕರೇ. ಕುಮತದ ಪ್ರಭಾವದಿಂದಾಗಿಯಷ್ಟೇ ಈಗ ಅವರ ಬುದ್ಧಿ ಕಲುಷಿತವಾಗಿದೆ ಎಂಬುದನ್ನು ದೃಢಪಡಿಸಿಕೊಂಡಿದ್ದ ಮಧ್ವರು ತಮ್ಮ ಗುರುಗ ತಾತ್ಕಾಲಿಕ ಕಾಲುಷ್ಯದ ಪರಿಹಾರಕ್ಕಾಗಿ ತುಂಬ ಯತ್ನಿಸಿದ್ದರು.

ಶ್ರೀ ಮಧ್ವರು ತಮ್ಮ ಗುರುಗಳ ಮಾನಸಿಕ ಪರಿವರ್ತನೆಗೆ ಕೈಗೊಂಡಿದ್ದ ಪರಿಶ್ರಮ ವನ್ನು ಮಧ್ವವಿಜಯದಲ್ಲಿ ಎರಡು ಶ್ಲೋಕಗಳಲ್ಲಿ [9-34, 35] ನಿರೂಪಿಸಲಾಗುತ್ತಿದ್ದು, ಮಾನಸಸರೋವರದಿಂದ ಕಾಗೆಯನ್ನು ಹೊಡೆದೋಡಿಸುವ ಹಂಸದ ದೃಷ್ಟಾಂತವನ್ನು ನೀಡಿ ಅದನ್ನು ಉಪಪಾದಿಸಲಾಗಿದೆ.

ಮಾನಸಸರೋವರದಿಂದ ಕಾಗೆಯನ್ನು ಓಡಿಸಲು ಹಂಸ ತನ್ನ ರೆಕ್ಕೆಗಳನ್ನು ಬೀಸಿ ಅಪ್ಪಳಿಸುವುದು. ಹಾಗೆಯೇ ದೊಡ್ಡ ಧ್ವನಿಯಿಂದ ಅಂಜಿಸುವುದು. ಅದರಂತೆ ಅಚ್ಯುತ ಪ್ರೇಕ್ಷಾಚಾರ್ಯರ ಮನಸ್ಸಿನಿಂದ ಕಲಿಯ ದೋಷವನ್ನು ಹೊಡೆದೋಡಿಸಲು ತಮ್ಮ ಸಿದ್ಧಾಂತದ ಮೂಲಕ 'ತಾಡನ' –ಮಾನಸಿಕ ಆಘಾತ [ತಡ ಆಘಾತೇ] ನರಕ, ಅಂಧಂ ತಮಸ್ಸು ಇತ್ಯಾದಿಗಳಲ್ಲಿ ಬೀಳಬೇಕಾಗುವುದೆಂಬ ಭಯ ಉಂಟಾಗುವಂತೆ ಮಾಡುತ್ತಿದ್ದರು.

ಅಂತೆಯೇ ಹೀಗೆ ಭಯಪಡಿಸುವಲ್ಲಿ ಅಸಮಾಧಾನದ ಸೂಚನೆಯಾಗಿ ಗಟ್ಟಿಯಾಗಿ ಅರಚಿಕೊಳ್ಳುವಿಕೆಯನ್ನೂ ನಡೆಸುತ್ತಿದ್ದರು.

ಅಂದರೆ ಸ್ವಭಾವತಃ ಯೋಗ್ಯ ಎಂದು ಸ್ಪಷ್ಟವಾಯಿತೆಂದರೆ ಸತ್ಸಿದ್ಧಾಂತಾನುಸರಣೆಯೇ ಉದ್ಧಾರದ ಮಾರ್ಗ ಎಂದು ಸಿದ್ಧವಾಗಿರುವಾಗ ಅಂತಹ ಸಿದ್ಧಾಂತವನ್ನು ಆ ಯೋಗ್ಯನಿಗೆ ಹಿಡಿಸುವಲ್ಲಿ ಏನೂ ಸಂಕೋಚ ತಾಳದೆ ಯಾವ ಉಪಾಯವನ್ನಾದರೂ ಅಳವಡಿಸಿಕೊಳ್ಳಬೇಕೆಂಬುದು ಇದರಿಂದ ಸೂಚಿತ.

೪೪. **ಅತೀಂದ್ರಿಯಾಕೃತಿಮ್:** ಉಡುಪಿಯಲ್ಲಿ ಶ್ರೀ ಮಧ್ವರು ಪ್ರತಿಷ್ಠಾಪಿಸಿದ ಕೃಷ್ಣನನ್ನು ವರ್ಣಿಸುತ್ತ 'ಅತೀಂದ್ರಿಯಾಕೃತಿಮ್' [9.43] ಇಂದ್ರಿಯಗಳಿಗೆ ಗೋಚರಿಸದ ಆಕಾರವುಳ್ಳವನೆಂಬ ವಿಶೇಷಣವನ್ನು ನೀಡಲಾಗಿದೆ. ಉಡುಪಿ ಕೃಷ್ಣನ ಪ್ರತಿಮೆಯಲ್ಲಿಯ ಮಂದಹಾಸ ಇತ್ಯಾದಿ ಲಕ್ಷಣಗಳೂ ಸೂಚಿತವಾಗುವಂತೆ ವಿಶೇಷಣಗಳನ್ನು ನೀಡಿರುವ ಇಲ್ಲಿಯ ಕ್ರಮಕ್ಕೆ ಅನುಗುಣವಾಗಿ 'ಅತೀಂದ್ರಿಯಾಕೃತಿಮ್' ಎಂಬ ವಿಶೇಷಣದ ಔಚಿತ್ಯ ಸ್ಪಷ್ಟವಾಗದು. ಕೃಷ್ಣ ಅತೀಂದ್ರಿಯಾಕೃತಿ ಆಗಿದ್ದಿರಬಹುದು. ಆದರೆ ಪ್ರತಿಮೆಯಲ್ಲಿ ಅವನ ಪ್ರತಿಷ್ಠೆಯ ಪ್ರಸಂಗದಲ್ಲಿ ಅವನ ಆ ಗುಣವನ್ನು ಯಾಕೆ ಉಲ್ಲೇಖಿಸಲಾಗಿದೆ?

ಕೃಷ್ಣನ ಪ್ರತಿಮೆಯಲ್ಲಿ ಕೃಷ್ಣನ ದರ್ಶನ ಪಡೆಯುವುದಕ್ಕೆ ಉಪಾಯವನ್ನು ಸೂಚಿಸಿ ಕೊಡುವುದು ಇದರ ಉದ್ದೇಶ.

ಕೃಷ್ಣನ ಪ್ರತಿಮೆಯಲ್ಲಿ ಕೃಷ್ಣನನ್ನು ಕಾಣಲು ತೊಡಗುವ ಸಾಧಕರು ಸಾಮಾನ್ಯವಾಗಿ 'ನ ಪ್ರತೀಕೇ ನ ಹಿ ಸಃ' ಎಂಬ ಸೂತ್ರ ಸಿದ್ಧಾಂತಿಸುವಂತೆ ಪ್ರತಿಮೆಯೇ ಕೃಷ್ಣನಲ್ಲ. ಪ್ರತಿಮೆಯೊಳಗಿರುವವನು ಕೃಷ್ಣ ಎಂದು ವಿವೇಚಿಸಿಕೊಳ್ಳುವವರಾದರೂ ಪ್ರತಿಮೆಯ ಒಳಗಿರುವ ಕೃಷ್ಣನನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವವರು. ಹೀಗೆ ಮಾನಸಿಕ ದೃಷ್ಟಿಯಿಂದ ಕಂಡ ಕೃಷ್ಣನೇ ಪ್ರತಿಮೆಯಲ್ಲಿ ಸನ್ನಿಹಿತನಾಗಿರುವವನೆಂದು ಭ್ರಮಿಸುವ ಸಾಧ್ಯತೆ ಇದೆ. ಆದರೆ '**ತಥಾಽನ್ಯತ್ ಪ್ರತಿಷೇಧಾತ್**' [3.2.37] ಎಂಬ ಬ್ರಹ್ಮಸೂತ್ರ ಸಿದ್ಧಾಂತಿಸುವಂತೆ ಮನಸ್ಸಿನಿಂದ ಕಂಡ ರೂಪವೂ ಅವನ ರೂಪ ಅಲ್ಲ. ಚಕ್ಷುರಾದಿ ಹೊರಗಿನ ಇಂದ್ರಿಯಗಳಿಗಷ್ಟೇ ಅಲ್ಲ, ಒಳಗಿನ ಮನಸ್ಸಿಗೂ ಗೋಚರಿಸುವ ರೂಪ ಅವನದ್ದಲ್ಲ ಎಂಬುದನ್ನು 'ಅತೀಂದ್ರಿಯಾಕೃತಿಮ್' ಎಂಬ ವಿಶೇಷಣದಿಂದ ಸೂಚಿಸಿಕೊಡಲಾಗಿದೆ. ಆದ್ದರಿಂದ ಪ್ರತಿಮೆಯಲ್ಲಿ ಕೃಷ್ಣನನ್ನು ಕಾಣುವಾಗ ಇದಕ್ಕಿಂತಲೂ ಸುಂದರನಾಗಿ, ಜ್ಞಾನಾನಂದಾತ್ಮಕನಾಗಿ ಇರುವನು ಎಂದಷ್ಟೇ ಚಿಂತಿಸಬೇಕೆಂದು ಹೇಳಿದಂತಾಗುವುದು.

೪೫. **ಕರ್ಮ ತತ್ರ ಕರಣಾಂತರಂ ಭವೇತ್:** ಶ್ರೀ ಮಧ್ವರು ತಮ್ಮ ಗುರುಪುತ್ರನ ಪೌರೋಹಿತ್ಯದಲ್ಲಿ ಯಜ್ಞವನ್ನು ಮಾಡಿಸುವ ಮೂಲಕ '**ಬ್ರಹ್ಮವೇದನನಿವಿಷ್ಟಚೇತಸಾಂ ಕರ್ಮ ತತ್ರ ಕರಣಾಂತರಂ ಭವೇತ್**' [9-51]ಪರಮಾತ್ಮನ ಜ್ಞಾನಸಂಪಾದನೆಯಲ್ಲೇ ಮಗ್ನರಾದರಾದವರೂ ಬ್ರಹ್ಮನ ತಿಳಿಯುವಿಕೆಯಲ್ಲಿ ಶ್ರವಣಾದಿಗಳು ಹೇಗೋ ಹಾಗೆ ಯಜ್ಞಾದಿಕರ್ಮವೂ ಮತ್ತೊಂದು ಸಾಧನವಾಗುವುದೆಂದು ತಿಳಿಸಿಕೊಟ್ಟಿರುವರು.

ಯಿಂದಾಗಿ ಮಧ್ವಶಾಸ್ತ್ರವನ್ನು ತ್ಯಜಿಸುವವರನ್ನು ಹೀಗೆ ದೂಷಿಸಿದ ಶೋಭನ ಭಟ್ಟರು ದ್ವೇಷದಿಂದಾಗಿ, ವಿಪರೀತಜ್ಞಾನದಿಂದಾಗಿ ಮಧ್ವಶಾಸ್ತ್ರವನ್ನು ದೂರಮಾಡುವ ವ್ಯಕ್ತಿಗಳು ಮತ್ತೆ ಕೆಲವರಿದ್ದು ಅವರ ಬಗ್ಗೆ 'ನಾಥವಾಽಸ್ಯ ಸದೃಶೋಽಸ್ತಿ ನೀಚಧೀಃ' –ಅಂತಹ ದುಷ್ಟರಿಗೆ ಸರಿದೂಗುವ ಕೆಟ್ಟ ಬುದ್ಧಿಯವ ಮತ್ತೊಬ್ಬನಿಲ್ಲ –ಎನ್ನುವಷ್ಟು ದುಷ್ಟರು ಅಂತಹವರು!

ಹೀಗೆ 'ತಸ್ಯ ತುಲ್ಯಮತಿಃ....' ಎಂಬ ಮಾತಿನಲ್ಲಿ ಮಧ್ವಶಾಸ್ತ್ರವನ್ನು ತ್ಯಜಿಸುವ ಎರಡು ಬಗೆಯ ದುರ್ಜನರನ್ನು ಗಮನದಲ್ಲಿಟ್ಟುಕೊಂಡು 'ವ್ಯವಸ್ಥಿತವಿಕಲ್ಪ' ಪ್ರಕ್ರಿಯೆಗನುಗುಣವಾಗಿ ಅವರನ್ನು ದೂಷಿಸಲಾಗಿದೆ ಎಂದಿಟ್ಟುಕೊಳ್ಳಬೇಕು.

**ಅಸುರಾಣಾಂ ತಮಃಪ್ರಾಪ್ತಿಸ್ತದಾ ನಿಯಮತೋ ಭವೇತ್ ।**
**ಯದಾ ತು ಜ್ಞಾನಿಸದ್ಭಾವೇ ನೈವ ಗೃಹ್ಣಂತಿ ತತ್ಪರಮ್ ॥**

ಜ್ಞಾನಿಗಳಿರುವಾಗಲೂ ಭಗವಂತನ ಪಾರಮ್ಯವನ್ನು ಒಪ್ಪಿಕೊಳ್ಳದವರು ಅಸುರ ಸ್ವಭಾವದವರಾಗಿದ್ದು ಅವರಿಗೆ ಅಂಧಂತಮಸ್ಸೇ ಗತಿ ಎಂದು ನೀಡಿರುವ ನಿರ್ಣಯ [ಮ.ಭಾ.ತಾ.ನಿ. 1-90]ದ ಸ್ಫೂರ್ತಿಯನ್ನು 'ನಾಥವಾಸ್ಯ ಸದೃಶೋಽಸ್ತಿ ನೀಚಧೀಃ' –ಎಂಬ ಮಾತಿನ ಹಿನ್ನೆಲೆಯಾಗಿ ಗುರುತಿಸಬಹುದಾಗಿದೆ.

೪೩. **ಅಚ್ಯುತಪ್ರೇಕ್ಷಾಚಾರ್ಯರ ಮೇಲೆ ಬಲಾತ್ಕಾರದ ಪರಿವರ್ತನೆ:** 'ಸ್ವಭಾವವಾದ'ಕ್ಕೆ ಒತ್ತುಕೊಟ್ಟಿದ್ದ ಶ್ರೀ ಮಧ್ವರು ಅವರವರ ಸ್ವಭಾವಕ್ಕನುಗುಣವಾಗಿಯೇ ಅವರ ಆಚಾರವಿಚಾರಗಳು ನಡೆಯುವವವೆಂದು ಪ್ರಬಲವಾಗಿ ನಂಬಿದ್ದರಿಂದ ಯಾರನ್ನೂ ಬಲಾತ್ಕಾರವಾಗಿ ತಮ್ಮ ಸಿದ್ಧಾಂತಕ್ಕೆ ಪರಿವರ್ತನೆಗೊಳಿಸುವ ಪ್ರವೃತ್ತಿಯಲ್ಲಿ ತೊಡಗಿದ್ದಿಲ್ಲ. ಆದರೆ ತಮ್ಮ ಗುರುಗಳಾಗಿದ್ದ ಅಚ್ಯುತಪ್ರೇಕ್ಷಾಚಾರ್ಯರ ವಿಷಯದಲ್ಲಿ ಮಾತ್ರ ತಮ್ಮ ಈ ನಡತೆಗೆ ಅಪವಾದವಾಗಿ ನಡೆದುಕೊಂಡಿದ್ದರು. '**ಶೋಭನಾಯ ಗುರವೇ ಸ್ವಭಾವತಃ ಕಾಲತಃ ಕುಮತಲೀನಬುದ್ಧಯೇ**' [9-33] ಎಂದಿರುವಂತೆ ತಮ್ಮ ಗುರುಗಳು ಸ್ವಾಭಾವಿಕವಾಗಿ ಸಾತ್ವಿಕರೇ. ಕುಮತದ ಪ್ರಭಾವದಿಂದಾಗಿಯಷ್ಟೇ ಈಗ ಅವರ ಬುದ್ಧಿ ಕಲುಷಿತವಾಗಿದೆ ಎಂಬುದನ್ನು ದೃಢಪಡಿಸಿಕೊಂಡಿದ್ದ ಮಧ್ವರು ತಮ್ಮ ಗುರುಗ ತಾತ್ಕಾಲಿಕ ಕಾಲುಷ್ಯದ ಪರಿಹಾರಕ್ಕಾಗಿ ತುಂಬ ಯತ್ನಿಸಿದ್ದರು.

ಶ್ರೀ ಮಧ್ವರು ತಮ್ಮ ಗುರುಗಳ ಮಾನಸಿಕ ಪರಿವರ್ತನೆಗೆ ಕೈಗೊಂಡಿದ್ದ ಪರಿಶ್ರಮವನ್ನು ಮಧ್ವವಿಜಯದಲ್ಲಿ ಎರಡು ಶ್ಲೋಕಗಳಲ್ಲಿ [9-34, 35] ನಿರೂಪಿಸಲಾಗುತ್ತಿದ್ದು, ಮಾನಸಸರೋವರದಿಂದ ಕಾಗೆಯನ್ನು ಹೊಡೆದೋಡಿಸುವ ಹಂಸದ ದೃಷ್ಟಾಂತವನ್ನು ನೀಡಿ ಅದನ್ನು ಉಪಪಾದಿಸಲಾಗಿದೆ.

ಮಾನಸಸರೋವರದಿಂದ ಕಾಗೆಯನ್ನು ಓಡಿಸಲು ಹಂಸ ತನ್ನ ರೆಕ್ಕೆಗಳನ್ನು ಬೀಸಿ ಅಪ್ಪಳಿಸುವುದು. ಹಾಗೆಯೇ ದೊಡ್ಡ ಧ್ವನಿಯಿಂದ ಅಂಜಿಸುವುದು. ಅದರಂತೆ ಅಚ್ಯುತಪ್ರೇಕ್ಷಾಚಾರ್ಯರ ಮನಸ್ಸಿನಿಂದ ಕಲಿಯ ದೋಷವನ್ನು ಹೊಡೆದೋಡಿಸಲು ತಮ್ಮ ಸಿದ್ಧಾಂತದ ಮೂಲಕ 'ತಾಡನ' –ಮಾನಸಿಕ ಆಘಾತ [ತಡ ಆಘಾತೇ] ನರಕ, ಅಂಧಂತಮಸ್ಸು ಇತ್ಯಾದಿಗಳಲ್ಲಿ ಬೀಳಬೇಕಾಗುವುದೆಂಬ ಭಯ ಉಂಟಾಗುವಂತೆ ಮಾಡುತ್ತಿದ್ದರು.

ಅಂತೆಯೇ ಹೀಗೆ ಭಯಪಡಿಸುವಲ್ಲಿ ಅಸಮಾಧಾನದ ಸೂಚನೆಯಾಗಿ ಗಟ್ಟಿಯಾಗಿ ಅರಚಿಕೊಳ್ಳುವಿಕೆಯನ್ನೂ ನಡೆಸುತ್ತಿದ್ದರು.

ಅಂದರೆ ಸ್ವಭಾವತಃ ಯೋಗ್ಯ ಎಂದು ಸ್ಪಷ್ಟವಾಯಿತೆಂದರೆ ಸತ್ಸಿದ್ಧಾಂತಾನುಸರಣೆಯೇ ಉದ್ಧಾರದ ಮಾರ್ಗ ಎಂದು ಸಿದ್ಧವಾಗಿರುವಾಗ ಅಂತಹ ಸಿದ್ಧಾಂತವನ್ನು ಆ ಯೋಗ್ಯನಿಗೆ ಹಿಡಿಸುವಲ್ಲಿ ಏನೂ ಸಂಕೋಚ ತಾಳದೆ ಯಾವ ಉಪಾಯವನ್ನಾದರೂ ಅಳವಡಿಸಿಕೊಳ್ಳಬೇಕೆಂಬುದು ಇದರಿಂದ ಸೂಚಿತ.

೪೪. **ಅತೀಂದ್ರಿಯಾಕೃತಿಮ್:** ಉಡುಪಿಯಲ್ಲಿ ಶ್ರೀ ಮಧ್ವರು ಪ್ರತಿಷ್ಠಾಪಿಸಿದ ಕೃಷ್ಣನನ್ನು ವರ್ಣಿಸುತ್ತ 'ಅತೀಂದ್ರಿಯಾಕೃತಿಮ್' [9.43] ಇಂದ್ರಿಯಗಳಿಗೆ ಗೋಚರಿಸದ ಆಕಾರವುಳ್ಳವನೆಂಬ ವಿಶೇಷಣವನ್ನು ನೀಡಲಾಗಿದೆ. ಉಡುಪಿ ಕೃಷ್ಣನ ಪ್ರತಿಮೆಯಲ್ಲಿಯ ಮಂದಹಾಸ ಇತ್ಯಾದಿ ಲಕ್ಷಣಗಳೂ ಸೂಚಿತವಾಗುವಂತೆ ವಿಶೇಷಣಗಳನ್ನು ನೀಡಿರುವ ಇಲ್ಲಿಯ ಕ್ರಮಕ್ಕೆ ಅನುಗುಣವಾಗಿ 'ಅತೀಂದ್ರಿಯಾಕೃತಿಮ್' ಎಂಬ ವಿಶೇಷಣದ ಔಚಿತ್ಯ ಸ್ಪಷ್ಟವಾಗದು. ಕೃಷ್ಣ ಅತೀಂದ್ರಿಯಾಕೃತಿ ಆಗಿದ್ದಿರಬಹುದು. ಆದರೆ ಪ್ರತಿಮೆಯಲ್ಲಿ ಅವನ ಪ್ರತಿಷ್ಠೆಯ ಪ್ರಸಂಗದಲ್ಲಿ ಅವನ ಆ ಗುಣವನ್ನು ಯಾಕೆ ಉಲ್ಲೇಖಿಸಲಾಗಿದೆ?

ಕೃಷ್ಣನ ಪ್ರತಿಮೆಯಲ್ಲಿ ಕೃಷ್ಣನ ದರ್ಶನ ಪಡೆಯುವುದಕ್ಕೆ ಉಪಾಯವನ್ನು ಸೂಚಿಸಿಕೊಡುವುದು ಇದರ ಉದ್ದೇಶ.

ಕೃಷ್ಣನ ಪ್ರತಿಮೆಯಲ್ಲಿ ಕೃಷ್ಣನನ್ನು ಕಾಣಲು ತೊಡಗುವ ಸಾಧಕರು ಸಾಮಾನ್ಯವಾಗಿ 'ನ ಪ್ರತೀಕೇ ನ ಹಿ ಸಃ' ಎಂಬ ಸೂತ್ರ ಸಿದ್ಧಾಂತಿಸುವಂತೆ ಪ್ರತಿಮೆಯೇ ಕೃಷ್ಣನಲ್ಲ. ಪ್ರತಿಮೆಯೊಳಗಿರುವವನು ಕೃಷ್ಣ ಎಂದು ವಿವೇಚಿಸಿಕೊಳ್ಳುವರಾದರೂ ಪ್ರತಿಮೆಯ ಒಳಗಿರುವ ಕೃಷ್ಣನನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವವರು. ಹೀಗೆ ಮಾನಸಿಕ ದೃಷ್ಟಿಯಿಂದ ಕಂಡ ಕೃಷ್ಣನೇ ಪ್ರತಿಮೆಯಲ್ಲಿ ಸನ್ನಿಹಿತನಾಗಿರುವವನೆಂದು ಭ್ರಮಿಸುವ ಸಾಧ್ಯತೆ ಇದೆ. ಆದರೆ '**ತಥಾನ್ಯತ್ ಪ್ರತಿಷೇಧಾತ್**' [3.2.37] ಎಂಬ ಬ್ರಹ್ಮಸೂತ್ರ ಸಿದ್ಧಾಂತಿಸುವಂತೆ ಮನಸ್ಸಿನಿಂದ ಕಂಡ ರೂಪವೂ ಅವನ ರೂಪ ಅಲ್ಲ. ಚಕ್ಷುರಾದಿ ಹೊರಗಿನ ಇಂದ್ರಿಯಗಳಿಗಷ್ಟೇ ಅಲ್ಲ, ಒಳಗಿನ ಮನಸ್ಸಿಗೂ ಗೋಚರಿಸುವ ರೂಪ ಅವನದ್ದಲ್ಲ ಎಂಬುದನ್ನು 'ಅತೀಂದ್ರಿಯಾಕೃತಿಮ್' ಎಂಬ ವಿಶೇಷಣದಿಂದ ಸೂಚಿಸಿಕೊಡಲಾಗಿದೆ. ಆದ್ದರಿಂದ ಪ್ರತಿಮೆಯಲ್ಲಿ ಕೃಷ್ಣನನ್ನು ಕಾಣುವಾಗ ಇದಕ್ಕಿಂತಲೂ ಸುಂದರನಾಗಿ, ಜ್ಞಾನಾನಂದಾತ್ಮಕನಾಗಿ ಇರುವನು ಎಂದಷ್ಟೇ ಚಿಂತಿಸಬೇಕೆಂದು ಹೇಳಿದಂತಾಗುವುದು.

೪೫. **ಕರ್ಮ ತತ್ರ ಕರಣಾಂತರಂ ಭವೇತ್:** ಶ್ರೀ ಮಧ್ವರು ತಮ್ಮ ಗುರುಪುತ್ರನ ಪೌರೋಹಿತ್ಯದಲ್ಲಿ ಯಜ್ಞವನ್ನು ಮಾಡಿಸುವ ಮೂಲಕ 'ಬ್ರಹ್ಮವೇದನನಿವಿಷ್ಟಚೇತಸಾಂ ಕರ್ಮ ತತ್ರ ಕರಣಾಂತರಂ ಭವೇತ್' [9-51]ಪರಮಾತ್ಮನ ಜ್ಞಾನಸಂಪಾದನೆಯಲ್ಲೇ ಮಗ್ನರಾದರಾದವರೂ ಬ್ರಹ್ಮನ ತಿಳಿಯುವಿಕೆಯಲ್ಲಿ ಶ್ರವಣಾದಿಗಳು ಹೇಗೋ ಹಾಗೆ ಯಜ್ಞಾದಿಕರ್ಮವೂ ಮತ್ತೊಂದು ಸಾಧನವಾಗುವುದೆಂದು ತಿಳಿಸಿಕೊಟ್ಟಿರುವರು.

ಶ್ರೀ ಮಧ್ವರ ಪ್ರಕಾರ ಯಜ್ಞಾದಿ ಕರ್ಮಗಳಿಗೆ ಎರಡು ಬಗೆಯ ಪಾತ್ರ. 'ಸ ಹಿ ಧರ್ಮಃ ಸುಪರ್ಯಾಪ್ತೋ ಬ್ರಹ್ಮಣಃ ಪದವೇದನೇ' ಎಂದು ಅನುಗೀತಾಪರ್ವದ ವಚನ [ಗೀತಾಭಾಷ್ಯದ ಉಪೋದ್ಘಾತದಲ್ಲಿ] ಸಾರುತ್ತಿರುವಂತೆ ಪರಬ್ರಹ್ಮನ ಸ್ವರೂಪಜ್ಞಾನ ಬರುವುದಕ್ಕಿಂತ ಮೊದಲು ಆಚರಿಸುವ ಕರ್ಮ ಅಂತಃಕರಣಶುದ್ಧಿಯ ಮೂಲಕ ಪರ ಬ್ರಹ್ಮನ ಸ್ವರೂಪಜ್ಞಾನ ಚೆನ್ನಾಗಿ ಬರಲು ಕಾರಣವೆನಿಸಿದರೆ, ಪರಬ್ರಹ್ಮನ ಸ್ವರೂಪಜ್ಞಾನ ಬಂದಮೇಲೆ ಆಚರಿಸಿದ ಧರ್ಮ ಮೋಕ್ಷದ ಆನಂದಾತಿಶಯಕ್ಕೆ ಕಾರಣವಾಗುವುದು.1

೪೬. **ಚಿತ್ರವಾಕ್ಯಮ್:** 'ದೋಣಿಯಿಲ್ಲದೆ ಹೇಗೆ ಗಂಗಾನದಿಯನ್ನು ದಾಟಿದಿರಿ?' ಎಂಬ ತುರುಷ್ಕರಾಜನ ಪ್ರಶ್ನೆಗೆ ಶ್ರೀ ಮಧ್ವರು 'ವಿಶ್ವವನ್ನೇ ಬೆಳಗುವ....' ಇತ್ಯಾದಿಯಾಗಿ ನೀಡಿರುವ ಸಮಾಧಾನ 'ಚಿತ್ರವಾಕ್ಯ'. ವಿಚಿತ್ರಗಳಾದ ಮಾತುಗಳನ್ನೊಳಗೊಂಡದ್ದೆಂದು ನಿರೂಪಿಸಲಾಗಿದೆ [10.17]. ಇದು ಯಾಕೆ 'ಚಿತ್ರ –ವಾಕ್ಯ' ಎಂದರೆ 'ದರ್ಶನಭಾಷೆ'ಯ ಶೈಲಿಯಲ್ಲಿ ಹೊರಟ ಈ ಮಾತು ಮೇಲ್ನೋಟಕ್ಕೆ ವಿಶ್ವವನ್ನು ಬೆಳಗುವ ಸೂರ್ಯನ ಬಗ್ಗೆ ತಿಳಿಸುವಂತಿದೆ. ಯೋಗ್ಯರಿಗಷ್ಟೇ ಸೂರ್ಯಾಂತರ್ಯಾಮಿ ಸವಿತೃನಾರಾಯಣನ ಪ್ರಜ್ಞೆ ಯನ್ನು ಉಂಟುಮಾಡಬಲ್ಲದ್ದು. ಆದ್ದರಿಂದಲೇ 'ಚಿತ್ರವಾಕ್ಯ' ಎಂದು ಗುರುತಿಸಲಾಗಿದೆ.

೪೭. **ಉದಾರಧೈರ್ಯಸಾರಮ್:** ಶ್ರೀ ಮಧ್ವರು ನಡೆಸುತ್ತಿದ್ದ ಭಾಗವತದ ಪ್ರವಚನಕ್ಕೆ **'ಉದಾರಧೈರ್ಯಸಾರಮ್'** ಎಂಬ ವಿಶೇಷಣವನ್ನು ನೀಡಲಾಗಿದೆ.

'**ರಸಃ ಸಾರೋ ವರಶ್ಚೇತಿ ಶಬ್ದಾ ಏಕಾರ್ಥವಾಚಕಾಃ**' ಎಂದು 'ಸಾರನಿರ್ಣಯ' [ಛಾಂ.ಉ.ಭಾ. 1.1.1] ತಿಳಿಸುವಂತೆ ಸಾರ ಎಂಬುದಕ್ಕೆ ಶ್ರೇಷ್ಠ ಎಂಬ ಅರ್ಥ. ಆತ್ಮ ವಿಶ್ವಾಸವನ್ನೇ ಇಲ್ಲಿ ಧೈರ್ಯ ಎನ್ನಲಾಗಿದೆ. ಆ ಆತ್ಮವಿಶ್ವಾಸ ಪೊಳ್ಳು ಆಗಿರದೆ, ಪೂರ್ಣ ಜ್ಞಾನದಿಂದ, ಪ್ರವಚನಸಾಮರ್ಥ್ಯದಿಂದ ಕಾಣಿಸಿಕೊಂಡಿರುವ ಪ್ರಯುಕ್ತ ಉತ್ಕೃಷ್ಟವಾಗಿದ್ದು 'ಉದಾರ' ಎನಿಸಿದೆ. ಹೀಗೆ ಶ್ರೀ ಮಧ್ವರ ಭಾಗವತಪ್ರವಚನ ಉತ್ಕೃಷ್ಟವಾದ ಆತ್ಮವಿಶ್ವಾಸ ದಿಂದಾಗಿ ಶ್ರೇಷ್ಠವಾಗಿತ್ತು ಎಂಬ ಅಭಿಪ್ರಾಯ 'ಉದಾರಧೈರ್ಯಸಾರಂ' ಎಂಬ ವಿಶೇಷ ಣದ್ದು. ಪ್ರವಚನ ಪ್ರಭಾವಕಾರಿಯಾಗಬೇಕಾದರೆ ಅದು ಆತ್ಮವಿಶ್ವಾಸಪೂರ್ವಕವಾಗಿದ್ದಿರ ಬೇಕಾದುದರಿಂದ ಆ ಅಂಶವನ್ನು ಇಲ್ಲಿ ಉಲ್ಲೇಖಿಸಿರುವುದು ಸಮುಚಿತ.

೪೮. **ವಿಶ್ವಜಯಪ್ರದತ್ವಾದಿಗಳ ಉಪಾಸನೆಯ ಫಲ:** ಮಧ್ವವಿಜಯದ ದಶಮಸರ್ಗ ದಲ್ಲಿ ನಿರೂಪಿತವಾದಂತೆ ಮಧ್ವರ ಒಬ್ಬ ಶಿಷ್ಯ ಬದರಿಯಾತ್ರೆಯ ಪ್ರಸಂಗದಲ್ಲಿ ಮಧ್ವರ ಮೂಲಕ ಸಂಭವಿಸಿದ ಮಹಿಮೆಗಳನ್ನೆಲ್ಲ ತಿಳಿಸಿ, ಅಂತಹ ಮಹಿಮೆಗಳ ಅಭಿವ್ಯಕ್ತಿಗೆ ಪ್ರಯೋಜಕವೆಂಬಂತೆ '**ವಿಷ್ಣುಂ ವಿಶ್ವಜಯಪ್ರದಂ ಸ ಹಿ ನಮನ್ ಸೇವ್ಯಂ ಸುಸೌಖ್ಯಂ ಮುದಾ....**' [10-54] ಎಲ್ಲರಲ್ಲಿ ಬೇರೆ ಬೇರೆ ಬಗೆಯ ಉತ್ಕರ್ಷವನ್ನು ನೀಡುವ, ಲಕ್ಷ್ಮಾದಿಗಳಿಂದೆಲ್ಲ ಭಜಿಸಲ್ಪಡುವ, ಶುದ್ಧ ಸುಖಸ್ವರೂಪಿಯಾದ ವಿಷ್ಣುವನ್ನು ಸಂತೋಷ ದಿಂದ ನಮಿಸುತ್ತ ಇದ್ದರು. '**ತಂ ಯಥಾ ಯಥೋಪಾಸತೇ ತದೇವ ಭವತಿ**' –ಎಂದು ಇರುವಂತೆ ದೇವರಲ್ಲಿ ಯಾವ ಯಾವ ಗುಣವನ್ನು ಉಪಾಸಿಸಲಾಗುವುದೋ ಅದಕ್ಕೆ ತಕ್ಕ ಫಲ ಪಡೆಯಬಹುದಾದ್ದರಿಂದ ಶ್ರೀ ಮಧ್ವರು ಭಗವಂತನನ್ನು 'ವಿಶ್ವಜಯಪ್ರದ' ಎಲ್ಲರ

ಉತ್ಕರ್ಷಪ್ರದನನ್ನಾಗಿ ಉಪಾಸಿಸಿ ಬೇರೆಬೇರೆ ಬಗೆಯ ಉತ್ಕರ್ಷವನ್ನು ಹೊಂದಿದ್ದರೆ, ಸೇವ್ಯನನ್ನಾಗಿ ಸುಸೌಖ್ಯನನ್ನಾಗಿ ಅವನನ್ನು ಉಪಾಸನೆ ನಡೆಸಿದ್ದರ ಫಲವಾಗಿ ತಾವೂ ಎಲ್ಲೆಡೆ ಬೇರೆ ಬೇರೆ ವ್ಯಕ್ತಿಗಳಿಂದ ಭಜಿಸಲ್ಪಡುವವರಾಗಿಯೂ, ಸುಖಿಗಳಾಗಿಯೂ ಇದ್ದರು –ಎಂಬ ಆಶಯ.

ಹಾಗೆಯೇ ಶ್ರೀಮಧ್ವರು ತಮ್ಮಲ್ಲಿ ಉತ್ಕರ್ಷಗಳು, ಸೇವ್ಯತ್ವ, ಸುಸೌಖ್ಯ –ಮುಂತಾದ ಧರ್ಮಗಳು ಕಾಣಿಸಿಕೊಂಡಾಗ ಅವುಗಳಿಗೆ ನಿಮಿತ್ತವನ್ನಾಗಿ ತಮ್ಮ ಬಿಂಬರೂಪಿ ಶ್ರೀವಿಷ್ಣು ವನ್ನು ಆಯಾ ಧರ್ಮಸಂಪನ್ನನನ್ನಾಗಿ ನಮಿಸುತಿದ್ದರು; ಉಪಾಸಿಸುತ್ತಿದ್ದರು –ಎಂಬ ಅಭಿಪ್ರಾಯ.

೪೯. **ಆಮಯಾದಿವಿರಹೀ –ಯೋಗೀ–ಸುಹೃತ್:** ಮಧ್ವರ ಬೇರೆ ಬೇರೆ ಮಹಿಮೆ ಗಳನ್ನು, ಲೀಲೆಗಳನ್ನು ವರ್ಣಿಸಿದ ಅವರ ಶಿಷ್ಯ ಉಪಸಂಹಾರದ ಮಾತಿನಲ್ಲಿ **'ಧನ್ಯೋಽಮಹ್ಯತ.....ಆಮಯಾದಿವಿರಹೀ ಯೋಗೀ ಸುಹೃತ್ ಸರ್ವದಾ'** [10-54] ಎಂದು ಆ ಮಹಿಮೆಗಳಿಂದ, ಲೀಲೆಗಳಿಂದ ಸಾರಲ್ಪಡುವ ಮಧ್ವರ ವ್ಯಕ್ತಿತ್ವದ ಮೂರು ಮುಖ ಗಳನ್ನು ಘೋಷಿಸಿರುವನು–

ಅ. ಆಮಯಾದಿವಿರಹೀ –ಯಾವುದೇ ಬಗೆಯ ರೋಗ,'ಹಾನಿ, ಕ್ರೋಧ –ಮುಂತಾದ ದೋಷಗಳಿಗೆ ಒಳಗಾಗದವರು.

ಆ. ಯೋಗೀ –ಜಲಸ್ತಂಭನ ಮುಂತಾದ ಯೋಗಸಾಮರ್ಥ್ಯಸಂಪನ್ನರಾಗಿದ್ದರು.

ಇ. ಸುಹೃತ್ –ಶಿಷ್ಯರಿಗೆ, ಸಜ್ಜನರಿಗೆ ಪ್ರತ್ಯುಪಕಾರದ ಅಪೇಕ್ಷೆಯಿಲ್ಲದೆ ಉಪಕರಿಸುವ ಗೆಳೆಯರಾಗಿದ್ದರು. ಭಗವಂತನ ಗೆಳೆಯರಾಗಿಯೂ ಮೆರೆದಿದ್ದರು.

- ಮಧ್ವರು ನೂರಾರು ಬಾಳೆಹಣ್ಣುಗಳನ್ನು ತಿನ್ನುವುದು, ಕೊಡಗಟ್ಟಲೆ ಹಾಲು ಕುಡಿಯು ವುದೇ ಮುಂತಾದ ಮಹಿಮೆಗಳು ತಿಂದು, ಕುಡಿದು ದಕ್ಕಿಸಿಕೊಳ್ಳುವ ಅವರು ರೋಗಾದಿಗಳ ಬಾಧೆಗೆ ಒಳಗಾಗದವರೆಂಬುದನ್ನು ಸಾಧಿಸುವವು.
- ದೋಣಿ ಇಲ್ಲದೆಯೇ ನದಿ ದಾಟುವುದು; ಶಿಷ್ಯರನ್ನೂ ದಾಟಿಸುವುದು, ಈಶ್ವರದೇವ ನಿರಂತರವಾಗಿ ಅಗಿಯುವುದರಲ್ಲಿ ತೊಡಗುವಂತೆ ಮಾಡುವುದು –ಇತ್ಯಾದಿ ಲೀಲೆ ಗಳು, ಮಹಿಮೆಗಳು ಅವರ ಯೋಗಸಾಮರ್ಥ್ಯದ ಮೇಲೆ ಬೆಳಕುಚೆಲ್ಲುವವು.
- ಶಿಷ್ಯರನ್ನು ನದೀ ದಾಟುವುದು, ಕಳ್ಳರನ್ನು ಎದುರಿಸುವುದು ಮುಂತಾದ ಆಪತ್ತು ಗಳಿಂದ ಪಾರುಮಾಡುವುದು, ಭಗವಂತನಿಂದ ವ್ಯಾಸಮುಷ್ಟಿಯನ್ನು ಪಡೆದುಕೊಳ್ಳು ವುದು, ಮಹಾಭಾರತತಾತ್ಪರ್ಯನಿರ್ಣಯದ ರಚನೆಗೆ ಆದೇಶ ಪಡೆದುಕೊಳ್ಳುವುದು –ಮುಂತಾದವುಗಳಿಂದ ಮಧ್ವರು ಶಿಷ್ಯರ, ಸಜ್ಜನರ ಪಾಲಿಗೆ ಹೇಗೆ ಸುಹೃತ್ ಆಗಿದ್ದರು? ದೇವರೂ ಅವರನ್ನು ತನ್ನ ಸುಹೃತ್ ಎಂದು ಹೇಗೆ ಪರಿಗಣಿಸಿದ? ಎಂಬುದನ್ನು ತೋರಿಸಿಕೊಡಬಲ್ಲವು.

ಹೀಗೆ ಈ ಮೂರು ಮುಖದ ವ್ಯಕ್ತಿತ್ವವೂ ಮಧ್ವರಲ್ಲಿ ಯಾವಾಗಲೂ ಮೆರೆಯುತ್ತಿತ್ತೆಂದು '**ಆಮಯಾದಿವಿರಹೀ ಯೋಗೀ ಸುಹೃತ್ ಸರ್ವದಾ**' ಎಂದು ಸಾರಲಾಗಿದೆ.

೫೦. **ಆದರಾದಲೋಪಃ:** ವೈಕುಂಠದಲ್ಲಿಯ ಭಗವಂತನ ಮಂದಿರದ ವೈಭವವನ್ನು ನಿರೂಪಿಸುತ್ತ ಭಗವಂತನ ಗೌರವಾರ್ಥವಾಗಿ ಲಕ್ಷ್ಮೀದೇವಿಯೇ ಭಗವಂತನ ಭವನದ ಕಸ ಗುಡಿಸುವುದು, ಶುದ್ಧ ಮಾಡುವುದು –ಇತ್ಯಾದಿ ಕೆಲಸಗಳನ್ನೆಲ್ಲ ನಡೆಸುವಳೆಂದು ಹೇಳಲಾಗಿದೆ.[11-16]

'ಆದರಾದಲೋಪಃ' –ಎಂಬ ಬ್ರಹ್ಮಸೂತ್ರವೊಂದರಲ್ಲಿ [3-3-41] ಲಕ್ಷ್ಮೀದೇವಿ ನಿತ್ಯಮುಕ್ತಳಾಗಿದ್ದು, ಹೊಂದಬೇಕಾದದ್ದನ್ನೆಲ್ಲ ಹೊಂದಿದ್ದು ಯಾವುದೇ ಕರ್ತವ್ಯವನ್ನು ನೆರವೇರಿಸಬೇಕಾದ ಆವಶ್ಯಕತೆ ಇಲ್ಲದಿದ್ದರೂ ಭಗವಂತನ ಬಗೆಗಿನ ಆದರಾತಿಶಯದಿಂದಾಗಿ ನಿತ್ಯ ಅವನ ಉಪಾಸನೆಯನ್ನು ನಡೆಸುತ್ತ ಇರುವಳೆಂದು ಸಿದ್ಧಾಂತಿಸಲಾಗಿದೆ. ಬರೇ ಉಪಾಸನೆಯನ್ನಲ್ಲದೆ, ಅವನ ಪ್ರೀತಿಗೆ ಕಾರಣವಾಗುವ ಯಾವುದನ್ನೂ ಆಚರಿಸದೆ ಇರುವುದಿಲ್ಲ ಎಂದು ಶ್ರೀ ಮಧ್ವರು 'ಉಪಾಸನಾದ್ಯಲೋಪಃ' –ಎಂದು ಆದಿ ಶಬ್ದವನ್ನು ಸೇರಿಸಿ ತಮ್ಮ ಭಾಷ್ಯದಲ್ಲಿ ಸ್ಪಷ್ಟಪಡಿಸಿರುವರು.

ಆದ್ದರಿಂದ ವೈಕುಂಠದಲ್ಲಿರುವ ಭಗವಂತನ ಭವನದ ಬೇರೆ ಬೇರೆ ಬಗೆಯ ಕೆಲಸವನ್ನು ನಿರ್ವಹಿಸುವುದರಿಂದ ಭಗವಂತನಿಗೆ ಪ್ರೀತಿಯಾಗುವುದಾದರೆ ಲಕ್ಷ್ಮೀದೇವಿ ಅವನ್ನು ಯಾಕೆ ಮಾಡದಿರುವಳು?

ಆದ್ದರಿಂದ ಈ ನಿರೂಪಣೆ ಬರೇ ಅತಿಶಯೋಕ್ತಿಯಾಗಿ ಬಂದದ್ದೆಂದು ಭಾವಿಸುವ ಆವಶ್ಯಕತೆ ಇಲ್ಲ.

೫೧. **ವಾಕ್‌ಚಟುವಟಿಕೆಗಳ ಆವೃತ್ತಿಯೂ ಬೇಕು:** '**ಆವೃತ್ತಿರಸಕೃದುಪದೇಶಾತ್**' [4-1-1] ಎಂಬ ಬ್ರಹ್ಮಸೂತ್ರದಲ್ಲಿ ಮೋಕ್ಷಸಾಧನವಾಗಿ ಶಾಸ್ತ್ರಾರ್ಥದ ಶ್ರವಣ ಮನನ ಧ್ಯಾನಗಳನ್ನು ಮತ್ತೆ ಮತ್ತೆ ನಡೆಸಬೇಕೆಂದು ಸಿದ್ಧಾಂತಿಸಲಾಗಿದೆ.

ಇವುಗಳ ಜೊತೆಗೆ ಪಾಠಪ್ರವಚನವೇ ಮುಂತಾದ ವಾಗಿಂದ್ರಿಯದ ಚಟುವಟಿಕೆಗಳ ಆವೃತ್ತಿಯೂ ನಡೆಯಬೇಕೆಂದು '**ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ ಮನೋವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ....ಇಮಂ ಮೋಕ್ಷಮೇತೇ ಭಜಂತೇ ಸದೇತಿ**' [11-79]ಎಂದು ಸೂಚಿಸಲಾಗಿದೆ.

ಹಾಗೆಯೇ ಶ್ರವಣಾದಿಗಳ ಆವೃತ್ತಿ ಮೋಕ್ಷಗಳಿಕೆಗೆ ಹೇಗೆ ಪ್ರಯೋಜಕವಾಗಬಲ್ಲದೆಂಬುದನ್ನೂ '**.....ಮುಕುಂದಪ್ರಸಾದಾದಿಮಂ ಮೋಕ್ಷಮೇತೇ ಭಜಂತೇ**' ಎಂಬ ಮಾತಿನಿಂದ ಸೂಚಿಸಿದಂತಾಗುವುದು.

ಶ್ರವಣಾದಿಗಳನ್ನು ಮತ್ತೆ ಮತ್ತೆ ನಡೆಸುವುದರಿಂದ ತತ್ವಜ್ಞಾನದಲ್ಲಿ ದಾರ್ಢ್ಯ ಸಿದ್ಧಿಸುವುದರ ಜೊತೆಗೆ ಶ್ರವಣಾದಿಗಳ ಆವೃತ್ತಿ ಮುಕುಂದನ ಪ್ರಸಾದಕ್ಕೆ ಪ್ರಯೋಜಕವಾಗಿರುವುದ

ರಿಂದ ಅಂತಹ ಮುಕುಂದನ ಪ್ರಸಾದ ಉಂಟಾಗುವಂತೆ ಮಾಡುವುದರಿಂದಲೂ ಮೋಕ್ಷ ಗಳಿಕೆಗೆ ಉಪಯುಕ್ತವೆನಿಸಬಲ್ಲದು.

೫೨. **ಪುಂಡರೀಕಪುರಿಯ ವಾಕ್‌ಪ್ರೇರಣೆ ಶಾರದೆಯಿಂದ:** ಶ್ರೀಮಧ್ವರು ವೇದ ವ್ಯಾಖ್ಯಾನ ನಡೆಸುತ್ತಿದ್ದ ವಿದ್ವತ್ಸಭೆಯಲ್ಲಿ ಪುಂಡರೀಕಪುರಿ ಅಗ್ನಿಸೂಕ್ತದ 'ಅಗ್ನಿನಾ ರಯಿಮಶ್ನವತ್' –ಎಂಬಲ್ಲಿ 'ಅಗ್ನಿ ನಾರಯಿಂ' ಎಂದು ಪದವಿಭಾಗ ನಡೆಸುವನು. ವ್ಯಾಕರಣ ವಿದ್ವಾಂಸನಾಗಿದ್ದ ಪುಂಡರೀಕಪುರಿಯ ಬಾಯಿಯಿಂದ ಈ ಬಗೆಯ ಅಪದ್ಧ ಶಬ್ದಪ್ರಯೋಗ ಯಾಕೆ ನಡೆಯಿತೆಂಬುದಕ್ಕೆ ಮಧ್ವವಿಜಯಕಾರರೇ ತಮ್ಮ ಭಾವಪ್ರಕಾಶಿಕಾ ಟಿಪ್ಪಣಿಯಲ್ಲಿ '**....ದಶಮತೇರ್ಹಿ ಕಿಂಕರೀ ಸಕಲಸ್ಯ ಚೋದಯತಿ ಶಾರದಾ ಗಿರಃ**' –ಎಲ್ಲರ ಮಾತನ್ನು ಪ್ರೇರಿಸುವ ಶಾರದೆ ಶ್ರೀ ಮಧ್ವಗುರುಗಳ ಕಿಂಕರೀ– ತಾನೇ? ಆದ್ದರಿಂದ ಮಧ್ವರನ್ನು ಜಯಿಸಲು ಬಂದ ಪುಂಡರೀಕಪುರಿಯ ಬಾಯಿಯಿಂದ ಅಷ್ಟೊಂದು ಅಪದ್ಧ ಪ್ರಯೋಗ ಹೊರಹೊಮ್ಮುವಂತೆ ಆಕೆ ಪ್ರೇರಿಸಿದಳೆಂಬುದು ಸ್ಪಷ್ಟ.

ವಾಲ್ಮೀಕಿರಾಮಾಯಣದಲ್ಲಿ [ಉತ್ತರಕಾಂಡ –10-43, 44, 45] ನಿರೂಪಿತವಾದಂತೆ ಸರಸ್ವತಿ ಕುಂಭಕರ್ಣನ ವಾಗಿಂದ್ರಿಯವನ್ನು ಪ್ರವೇಶಿಸಿ, '**ಸ್ವಪ್ತುಂ ವರ್ಷಾಣ್ಯನೇಕಾನಿ ದೇವದೇವ ಮಮೇಪ್ಸಿತಮ್**' –ಅನೇಕ ವರ್ಷಗಳ ಕಾಲ ನಾನು ನಿದ್ರಿಸುವಂತಾಗಬೇಕೆಂಬ ವರವನ್ನು ಕುಂಭಕರ್ಣ ಕೇಳುವಂತೆ ಮಾಡಿರುವಂತೆ ಈ ಪ್ರಸಂಗದಲ್ಲೂ ಶಾರದೆಯ ಪ್ರೇರಣೆ ಅಸಂಭಾವಿತವಲ್ಲ.

ಆದ್ದರಿಂದ ಮಹತ್ತ್ವಪೂರ್ವಕವಾದ ವಾಗ್‌ವ್ಯಾಪಾರವನ್ನು ನಡೆಸುವಾಗ ಅಬದ್ಧ ಮಾತುಗಳು ಹೊರಹೊಮ್ಮದಂತೆ '**ಭವತಿ ಯದನುಭಾವಾತ್... ಸನ್ನಿಧಿಂ ಮಾನಸೇ ಚ**' –ಮುಂತಾದ ಸ್ತುತಿಗಳಿಂದ ಸರಸ್ವತಿಯನ್ನು ಸ್ತುತಿಸಬೇಕೆಂಬ ಎಚ್ಚರಿಕೆ ಇದರಿಂದ ಸೂಚಿತ ವಾಗುವುದು.

೫೩. **ಮಧ್ವರನ್ನು ಯಾರೂ ಸೋಲಿಸಲಾರರು:** ಪರಮಾತ್ಮನೆಂಬ ಆಕಾಶವನ್ನು ಆಶ್ರಯಿಸಿರುವ ಮಧ್ವರೆಂಬ ಸೂರ್ಯನನ್ನು ಯಾರೂ ಮರೆಮಾಡಲಾರರು – ಸೋಲಿಸಲಾರರು [12-50] ಎಂದು ಘೋಷಿಸುವಾಗ ಪರಮಾತ್ಮನ ಸ್ವರೂಪವನ್ನು ಯಥಾರ್ಥವಾಗಿ ವಿವೇಚಿಸಿಕೊಂಡು ಶ್ರೀ ಮಧ್ವರಿಂದ ಆಶ್ರಯಿಸಲಾಗಿದೆ ಎಂಬ ಅಭಿಪ್ರಾಯ ಹೊರಡುವಂತೆ ಪರಮಾತ್ಮ –ಆಕಾಶವನ್ನು ವಿಶೇಷಿಸಲಾಗಿದೆ.

**ಸರ್ವಾಧಾರಂ**– ಲಕ್ಷ್ಮಿಯಿಂದ ಪ್ರಾರಂಭಿಸಿ ಪ್ರತಿಯೊಬ್ಬರಿಗೂ ಆಧಾರವಾಗಿರುವವನು; **ಬ್ರಹ್ಮಸಂಜ್ಞಂ** –ಶಾಸ್ತ್ರದಲ್ಲಿ ಬ್ರಹ್ಮ ಎಂದು ವ್ಯವಹರಿಸಲ್ಪಡುವವನು ಇವನೇ. **ರಮ್ಯಾಕಾರಂ** –ರಮಣೀಯರೂಪಸಂಪನ್ನನು. **ಶಬ್ದಭೇದೈಃ ಸನ್ನಿರ್ಣೀತಂ** –ವೇದದ ಶಬ್ದಗಳಿಂದ ಚೆನ್ನಾಗಿ ನಿರ್ಣಯಿಸಲ್ಪಟ್ಟಿರುವವನು. **ಅಲಂ. ಗುಣೆ** –ಚೆನ್ನಾಗಿ ಗುಣಪರಿಪೂರ್ಣ –ಈ ರೀತಿಯಾಗಿ ಪರಮಾತ್ಮನ ಸ್ವರೂಪವನ್ನು ತಮ್ಮ ಗ್ರಂಥಗಳಲ್ಲಿ ಪ್ರತಿಪಾದಿಸಿ, ಅಂತಹ ಪರಮಾತ್ಮನನ್ನು 'ಸಂಶ್ರಿತಂ' –ಭಕ್ತಿಜ್ಞಾನಗಳಿಂದ ಚೆನ್ನಾಗಿ ಆಶ್ರಯಿಸಿಕೊಂಡವರು ಮಧ್ವರು ಎಂದ ಮೇಲೆ ಅಂತಹವರನ್ನು ಯಾರೂ ಮರೆಮಾಡಲಾರರು; ಸೋಲಿಸಲಾರರು. ಅಂದರೆ

ದೇವರನ್ನು ಸರಿಯಾಗಿ ಗುರುತಿಸಿಕೊಂಡು ಚೆನ್ನಾಗಿ ಅವರನ್ನು ಆಶ್ರಯಿಸಿರುವವರು ಮಧ್ವರೆಂದ ಮೇಲೆ ಅವರನ್ನು ಯಾರೂ ಸೋಲಿಸಲು ಸಾಧ್ಯವೇ ಇಲ್ಲ ಎಂಬುದು ತಾತ್ಪರ್ಯ.

**ವಿಶ್ವೇಶ್ವರಮಜಂ ದೇವಂ ಜಗತಃ ಪ್ರಭವಾಪ್ಯಯಮ್ ।**
**ಭಜಂತಿ ಯೇ ಪುಂಡರೀಕಾಕ್ಷಂ ನ ತೇ ಯಾಂತಿ ಪರಾಭವಮ್ ॥**

–ಎಂದು ಮಹಾಭಾರತ [ಅನುಶಾಸನ 143-142] ಘೋಷಿಸುತ್ತಿರುವಂತೆ ಪುಂಡರೀಕಾಕ್ಷನನ್ನು ಭಜಿಸುವವರೆಲ್ಲ ಪರಾಭವಕ್ಕೆ ಒಳಗಾಗುವುದಿಲ್ಲ ಎಂದಲ್ಲ; ಮತ್ತೆ ಅವನನ್ನು ವಿಶ್ವೇಶ್ವರತ್ವಾದಿ ಗುಣಸಂಪನ್ನನನ್ನಾಗಿ ಚೆನ್ನಾಗಿ ಅರಿತು ಭಜಿಸಬೇಕು. ಅವರಿಗಷ್ಟೇ ಎಂದೂ ಎಲ್ಲೂ ಪರಾಭವ ಇಲ್ಲ. ಶ್ರೀ ಮಧ್ವರಾದರೂ ಮಧ್ವವಿಜಯದಲ್ಲಿ [12-50] ನಿರೂಪಿಸಿರುವಂತೆ ಪುಂಡರೀಕಾಕ್ಷನನ್ನು ಯಥಾರ್ಥವಾಗಿ ತಿಳಿದು ಚೆನ್ನಾಗಿ ಭಜಿಸುವವರು. ಆದ್ದರಿಂದ ಮಹಾಭಾರತದ '**.....ನ ತೇ ಯಾಂತಿ ಪರಾಭವಮ್**' –ಎಂಬ ಘೋಷಣೆಗೆ ಮುಖ್ಯ ವಿಷಯರಾಗಿರುವವರು ಶ್ರೀ ಮಧ್ವರು.

ಅಂದರೆ ತನ್ನನ್ನು ಸರಿಯಾಗಿ ತಿಳಿದು, ಚೆನ್ನಾಗಿ ತನ್ನನ್ನು ಆಶ್ರಯಿಸುವವರನ್ನು ಎಂದೂ ಎಲ್ಲೂ ಸೋಲದಂತೆ ದೇವರೇ ಅನುಗ್ರಹಿಸುವನೆಂಬ ಆಂತರ್ಯ.

೫೪. **ಕಲಿಯುಗದಲ್ಲೂ ನಿರ್ಗುಣ ಉಪಾಸನೆ ಸಲ್ಲ:** ಸುಬ್ರಹ್ಮಣ್ಯಪಂಡಿತರು ತಮ್ಮ ಪುತ್ರ ತ್ರಿವಿಕ್ರಮಪಂಡಿತರಿಗೆ ಒಮ್ಮೆ ಏಕಾಂತದಲ್ಲಿ ಕರೆದು '**ನ ಕಲೌ ನಿರ್ಗುಣಭಾವನಾ ಸುಖಾಯ.....**' [13-52]ಕಲಿಯುಗದಲ್ಲಿ ನಿರ್ಗುಣೋಪಾಸನೆ ಸಲ್ಲ –ಎಂದರು ಎಂದು ನಿರೂಪಿತವಾಗಿದೆ. ತಿಳಿವಳಿಕೆ ಹೇಗೆ ಯಥಾರ್ಥವಾಗಿಯೇ ಇರಬೇಕಾದದ್ದೋ ಹಾಗೆಯೇ ಉಪಸನೆಯೂ ಯಥಾರ್ಥವಾಗಿಯೇ ಇರಬೇಕಾದದ್ದು. ಭಗವಂತ ಗುಣಪೂರ್ಣ ಎನ್ನುವುದು ಶಾಶ್ವತಸತ್ಯ ಎಂದ ಮೇಲೆ ಅಂತಹವನನ್ನು ಪ್ರತಿಯೊಂದು ಯುಗದಲ್ಲೂ ಗುಣಪೂರ್ಣನೆಂದೇ ಉಪಾಸಿಸಬೇಕು ಹೊರತು ನಿರ್ಗುಣ ಎಂದು ಉಪಾಸಿಸಬಾರದು. ಆದುದರಿಂದ ನಿರ್ಗುಣೋಪಾಸನೆ ನಡೆಸಬಾರದೆಂದು ಕಲಿಯುಗಕ್ಕೆ ಮಾತ್ರ ಸಂಬಂಧಿಸುವಂತಹದ್ದಲ್ಲ. ಹೀಗಿರುವಾಗ '**ನ ಕಲೌ ನಿರ್ಗುಣಭಾವನಾ ಸುಖಾಯ....**' –ಎಂದು ಕಲಿಯುಗಕ್ಕೆ ಮಾತ್ರ ಸಂಬಂಧಿಸಿ ನಿರ್ಗುಣ ಉಪಾಸನೆಯನ್ನು ಯಾಕೆ ನಿರಾಕರಿಸಲಾಗಿದೆ? ಎಂಬ ಸಂದೇಹ ಸಹಜ.

ಕಲಿಯುಗದಲ್ಲಿ ಕೆಲವು ಆಚರಣೆಗಳಲ್ಲಿ ರಿಯಾಯಿತಿ ಇದೆ. ಹೀಗಿದ್ದರೂ ಭಗವಂತನ ಉಪಾಸನೆಗೆ ಸಂಬಂಧಿಸಿದಂತೆ ಏನಾದರೂ ರಿಯಾಯಿತಿಯೋ ಬದಲಾವಣೆಯೋ ಇದೆಯೋ –ಎಂಬ ಸಂದೇಹದ ಹಿನ್ನೆಲೆಯಲ್ಲಿ '**ಕಲೌ**'–'**ಕಲೌ ಅಪಿ**' –ಕಲಿಯುಗದಲ್ಲೂ '**ನಿರ್ಗುಣಭಾವನಾ ನ ಸುಖಾಯ**' –ನಿರ್ಗುಣೋಪಾಸನೆ ಸುಖಕ್ಕೆ ಅಂದರೆ ಸುಖಾತ್ಮಕ ಮೋಕ್ಷಕ್ಕೆ ನ –ಪ್ರಯೋಜಕವಾಗಲಾರದು.

ಹೀಗೆ '**ನ ಕಲೌ ನಿರ್ಗುಣಭಾವನಾ ಸುಖಾಯ**' –ಎಂಬುದು ಬರೇ ಒಂದು ಉಪದೇಶ ಆಗಿರದೆ, ಯಾವುದೋ ಒಂದು 'ಕಲಿಯುಗದ ಉಲ್ಲೇಖದೊಂದಿಗೆ ಹೊರಟ ಪೂರ್ವಪಕ್ಷಕ್ಕೆ ಸಮಾಧಾನವಾಗಿ ಹೊರಟಿರುವ ಮಾತು ಎಂದು ಇಟ್ಟುಕೊಳ್ಳಬೇಕು.

೫೫. **ಪ್ರವಚನಪರಿಶುದ್ಧ್ಯೈ:....... ಪ್ರಣೌತಿ:** ಶ್ರೀ ಮಧ್ವರು ಪಾಠಪ್ರವಚನದಲ್ಲಿ ತೊಡಗು ವಾಗ ಪ್ರವಚನದ ಪರಿಶುದ್ಧಿಗಾಗಿ [14.23] ಪ್ರಣವವನ್ನು ಪ್ರಾರಂಭದಲ್ಲಿ ಪಠಿಸಿದರೆಂದು ತಿಳಿಸಲಾಗಿದೆ.

'ಸ್ರವತ್ಯನೋಂಕೃತಂ ಬ್ರಹ್ಮ....' ಇತ್ಯಾದಿ ಪ್ರಮಾಣಗಳಿಗನುಗುಣವಾಗಿ ಪ್ರಣವವನ್ನು ಪಠಿಸದೆ ಬ್ರಹ್ಮವಿದ್ಯೆಯನ್ನು ಪ್ರಾರಂಭಿಸಿದರೆ ಸೋರಿ ಹೋಗುವುದು ಅರ್ಥಾತ್ ನಾಶ ವಾಗುವುದೆಂಬುದು ಪ್ರಸಿದ್ಧ. ಆದರೆ ಇಲ್ಲಿ ಪ್ರವಚನ ಅಶುದ್ಧವಾಗುವುದೆಂದು ಸೂಚಿಸ ಲಾಗಿದೆ.

ಗೀತಾತಾತ್ಪರ್ಯದಲ್ಲಿ [17.23] ಉದಾಹರಿಸುವ **'ಅನೋಂಕೃತಮಾಸುರಂ ಕರ್ಮ'** ಎಂಬ ಶ್ರುತಿಯ ಪ್ರಕಾರ ಓಂಕಾರವಿಲ್ಲದೆ ನಡೆಸಿದ ಕರ್ಮ, ಮಾಡಿದ ಪಾಠಪ್ರವಚನ ಆಸುರ ಎನಿಸುವುದರಿಂದ ಅಶುದ್ಧವೆನಿಸುವುದೆಂದು ಸೂಚಿಸಲಾಗಿದೆ.

೫೬. **ತೇಷಾಮೈಕ್ಯಮಾಪಾದ್ಯ ಸಮ್ಯಕ್:** ಶ್ರೀ ಮಧ್ವರು ನಡೆಸಿದ ಪ್ರಣವೋಚ್ಚಾರಣೆಯ ವೈಭವವನ್ನು ವಿವರಿಸುತ್ತ **'....ತೇಷಾಮೈಕ್ಯಮಾಪಾದ್ಯ ಸಮ್ಯಕ್'** [14.23] ಆ ಅಕಾರ, ಉಕಾರ, ಮಕಾರಗಳನ್ನು ಚೆನ್ನಾಗಿ ಒಟ್ಟು ಸೇರಿಸಿ ಓಂಕಾರವನ್ನು ಪಠಿಸಿದರೆನ್ನಲಾಗುವುದು. ಆದರೆ ಓಂಕಾರ ಘಟಕ ಮೂರು ವರ್ಣಗಳನ್ನು ಒಟ್ಟು ಸೇರಿಸುವುದಷ್ಟೇ ಇಲ್ಲಿ ಹೇಳಿರು ವುದಾಗಿದ್ದರೆ, 'ಸಮ್ಯಕ್', 'ಐಕ್ಯಮಾಪಾದ್ಯ' ಈ ರೀತಿಯ ಶಬ್ದಗಳ ಪ್ರಯೋಗ ಬೇಕಿರ ಲಿಲ್ಲ. ಅಲ್ಲದೆ, ಐತರೇಯ ಬ್ರಾಹ್ಮಣದಲ್ಲಿ ನಿರೂಪಿಸಿರುವಂತೆ ಪೃಥಿವ್ಯಾದಿ ಮೂರು ಲೋಕಗಳು, ಅಗ್ನ್ಯಾದಿ ಮೂರು ಜ್ಯೋತಿಗಳು, ಋಗ್ವೇದಾದಿ ಮೂರು ವೇದಗಳು, ಮೂರು ವ್ಯಾಹೃತಿಗಳು ಇವುಗಳಿಗೆ ಪರಸ್ಪರವಾಗಿ ಅಭಿವ್ಯಕ್ತಿಯನ್ನು ಹೇಳಿ, ಅಂತಹ ವ್ಯಾಹೃತಿಗಳಿಂದ ಅಭಿವ್ಯಕ್ತಗಳಾದ ಮೂರು ವರ್ಣಗಳ ಪ್ರಸ್ತಾವದ ಆವಶ್ಯಕತೆ ಇರಲಿಲ್ಲ. ಆದರೆ ಆ ಹಿನ್ನೆಲೆಯನ್ನು ಉಲ್ಲೇಖಿಸಿರುವುದರಿಂದ ಓಂಕಾರದ ವರ್ಣಗಳಿಗೂ ಮೂರು ಲೋಕಾದಿಗಳಿಗೂ ಇರುವ ನಂಟನ್ನೂ, ವೇದಾದಿಗಳಿಂದ ಇರುವ ಏಕಾರ್ಥತ್ವವನ್ನೂ ಅನು ಸಂಧಾನಕ್ಕೆ ತಂದುಕೊಳ್ಳಬೇಕೆಂಬುದನ್ನೇ 'ತೇಷಾಮೈಕ್ಯಮಾಪಾದ್ಯ ಸಮ್ಯಕ್' ಮಾತಿನಿಂದ ಸೂಚಿಸಲಾಗಿದೆ ಎಂಬುದು ಸ್ಪಷ್ಟ.

ಆದುದರಿಂದ ಶ್ರೀ ಮಧ್ವರು ಓಂಕಾರವನ್ನು ಯಾಂತ್ರಿಕವಾಗಿ ಪಠಿಸದೆ ಅದಕ್ಕೆ ವೇದಾದಿಗಳಿಂದ ಇರುವ ನಂಟನ್ನೆಲ್ಲ ಅನಸಂಧಾನ ಮಾಡುತ್ತ ಪಠಿಸುತ್ತಿದ್ದರು ಎಂಬ ತಾತ್ಪರ್ಯ.

೫೭. ಪರಮಥ ಪರಮಾನ್ನಂ: ಶ್ರೀ ಮಧ್ವರು ಮಾಧ್ಯಾಹ್ನಿಕ ಪೂಜೆಯ ಅನಂತರ ಭೋಜನ ನಡೆಸಿದರೆಂದು ತಿಳಿಸುವಾಗ ಆ ಭೋಜನದ ಪದಾರ್ಥವನ್ನು 'ಪರಂ ಪರ ಮಾನ್ನಂ' ಎನ್ನಲಾಗಿದೆ. ಪರಮಾನ್ನ ಎಂಬುದಕ್ಕೆ ಪಾಯಸ ಎಂಬ ಅರ್ಥ ರೂಢಿಯಲ್ಲಿದೆ. ಆದರೆ ಊಟದ ಪ್ರಸ್ತಾವದಲ್ಲಿ ಬರೇ ಪಾಯಸದ ಸ್ವೀಕಾರ ಉಚಿತವೆನಿಸದು ಅಲ್ಲದೆ, 'ಪರಮಾನ್ನಂ' ಎಂಬುದಕ್ಕೆ ಪಾಯಸ ಎಂದೇ ಅರ್ಥವಾಗಿದ್ದರೆ, **'ಪಪೌ'** ಅಥವಾ **'ಲಿಲಿಹೇ'**

[ಲಿಹ ಆಸ್ವಾದೇ] ಎಂಬ ಪ್ರಯೋಗ ಇರಬೇಕಿತ್ತೇ ಹೊರತು 'ಬುಭುಜೇ' ಎಂಬುದಾಗಿ ತಿಂದರು ಎಂಬ ಅರ್ಥದ ಶಬ್ದ ಪ್ರಯೋಗ ಉಚಿತ ಎನಿಸದು.

ಆದ್ದರಿಂದ 'ಪರಮಾನ್ನಂ' ಎಂಬಲ್ಲಿಯ 'ಪರಮ' ಶಬ್ದಕ್ಕೆ ಶ್ರೇಷ್ಠ ಎಂಬ ಅರ್ಥ. ಮೊದಲ 'ಪರಂ' ಶಬ್ದಕ್ಕೆ ವಿಲಕ್ಷಣವಾದ ಎಂಬ ಅರ್ಥ. ಒಟ್ಟಿನಲ್ಲಿ ವಿಲಕ್ಷಣವಾದ ಶ್ರೇಷ್ಠ ವಾದ ಅನ್ನವನ್ನು, ಆಹಾರವನ್ನು ಉಂಡರು ಎಂಬುದು ಈ ಮಾತಿನ ಆಶಯ.

೫೮. **ಪ್ರಾಪ್ತಮೇವಾಪ್ರಯಾಸಂ:** ಶ್ರೀ ಮಧ್ವರ ಭೋಜನಕ್ಕೆ ಅಂತಹ ವಿಲಕ್ಷಣವಾದ, ಶ್ರೇಷ್ಠವಾದ ಅನ್ನ-ಆಹಾರ ಎಲ್ಲಿಂದ ಬಂತು? ಎಂದರೆ 'ಪ್ರಾಪ್ತಮೇವಾಪ್ರಯಾಸಂ' ಏನೂ ಆಯಾಸವಿಲ್ಲದೆ ಹೊಂದಲ್ಪಟ್ಟದ್ದೆಂದು ಮೇಲ್ನೋಟದ ಅರ್ಥ.

ಯಾರ ಪ್ರಯಾಸವೂ ಇಲ್ಲದೆ, ಅಂದರೆ ಪ್ರಯಾಸಕ್ಕೆ ಪ್ರಯೋಜಕವಾದ ಪ್ರಯತ್ನವೂ ಇಲ್ಲದೆ, ಭಗವಂತನ ಅನುಗ್ರಹದಿಂದಲೇ ಒದಗಿಬಂದಿರುವಂತಹದ್ದು ಎಂಬ ಅಭಿಪ್ರಾಯ.

೫೯. **ಕಾಲವನ್ನು ಸಾರ್ಥಕಗೊಳಿಸುವಿಕೆ: 'ಶ್ರವಣಾದಿ ವಿನಾ ನೈವ ಕ್ಷಣಂ ತಿಷ್ಠೇದಪಿ ಕ್ವಚಿತ್'** -ಎಂದು ಯಾವಾಗಲೂ ಶಾಸ್ತ್ರ ಶ್ರವಣಾದಿಗಳನ್ನು ನಡೆಸುತ್ತಿರಬೇಕೆಂದು ಸಂದೇಶಿ ಸಿರುವ ಮಧ್ವರು, ನಮಗಿಂತ ಉತ್ತಮ ಗುರುಗಳು ಯಾರಾದರೂ ದೊರಕಿದರೆ ಅವರಿಂದ 'ಶ್ರವಣ' ನಡೆಸಬೇಕು. ಗುರುಗಳು ದೊರಕದಿದ್ದರೆ **'....ಬ್ರೂಯಾದಪಿ ಚ ಶಿಷ್ಯೇಭ್ಯಃ ಸತ್ಸಿದ್ಧಾಂತಮಹಾಪಯನ್**[ಅನುವ್ಯಾಖ್ಯಾನ 3-3-77] ಸತ್ಸಿದ್ಧಾಂತದ ಆಧಾರದಲ್ಲಿ ಶಿಷ್ಯರಿಗೆ ಉಪದೇಶಿಸಬೇಕು. ಗುರುಗಳೂ ಇಲ್ಲ; ಶಿಷ್ಯರೂ ಇಲ್ಲ ಎಂದರೆ **'....ಸ್ವತೋಽಧಿಕಾ ಭಾವೇ ಸ್ವಯಮೇವ ಸರ್ವಭ್ಯಸೇತ್**[ಅನುವ್ಯಾಖ್ಯಾನ 3-3-77] ತಾವೇ ಅಭ್ಯಾಸ ಮಾಡಿಕೊಂಡು ಇರಬೇಕು.

ಶ್ರೀ ಮಧ್ವರ ಈ ಸಂದೇಶವನ್ನು ಅಕ್ಷರಶಃ ಅಳವಡಿಸಿಕೊಂಡಿದ್ದವರು ಶ್ರೀವಿಷ್ಣು ತೀರ್ಥರು. **'ಶ್ರವಣೇನಾನುವಾದೇನ.... ವೇದಾಂತಗುರುಸೋದರಃ'** -ಎಂಬ ಪದ್ಯದಲ್ಲಿ [ಮ.ವಿಜಯ 15-99] ಶ್ರೀವಿಷ್ಣುತೀರ್ಥರು ಶ್ರವಣ, ಉಪದೇಶ ಹಾಗೂ ಮನನ ಈ ಮೂರು ಸಾಧನೆಗಳಿಂದ ಕಾಲವನ್ನು ಸಾರ್ಥಕಗೊಳಿಸುತ್ತಿದ್ದರೆಂದು ನಿರೂಪಿಸಲಾಗಿದೆ.

ಈ ಮೂರು ಸಾಧನೆಗಳನ್ನೂ ಏಕಕಾಲದಲ್ಲೇ ನಡೆಸುತ್ತಿದ್ದರೆಂಬಂತೆ ಮೇಲ್ನೋಟಕ್ಕೆ ಕಾಣಿಸುವುದು. ಆದರೆ ತಮಗಿಂತ ಉತ್ತಮರು ದೊರಕಿದಾಗ ಅವರ ಮೂಲಕ ಶ್ರವಣ ನಡೆಸುತ್ತಿದ್ದರು. ಯೋಗ್ಯ ಶಿಷ್ಯರು ಸಿಕ್ಕಿದಾಗ ಅವರಿಗೆ 'ಅನುವಾದ' ನಡೆಸುತ್ತಿದ್ದರು. ಗುರು ಗಳಾಗಲೀ, ಶಿಷ್ಯರಾಗಲೀ ದೊರಕದಿದ್ದಾಗ ತಾವು ತಾವೇ ಮನನ ನಡೆಸುತ್ತಿದ್ದರು.

ಹೀಗೆ ಆಚಾರ್ಯರ **'ಶ್ರವಣಾದಿ.... ತಿಷ್ಠೇದಪಿ ಕ್ವಚಿತ್'** -ಎಂಬ ಸಂದೇಶಕ್ಕೆ ಶ್ರೀ ವಿಷ್ಣುತೀರ್ಥರಿಂದ ಪ್ರಾತ್ಯಕ್ಷಿಕೆಯನ್ನು ಒದಗಿಸಿಕೊಟ್ಟಂತಾಗಿದೆ

೬೦. **ಪ್ರಾಣಾಯಾಮದ ಉಪಯೋಗ:** ಶ್ರೀ ವಿಷ್ಣುತೀರ್ಥರು ರೇಚಕ, ಪೂರಕ, ಕುಂಭಕ ಗಳನ್ನೊಳಗೊಂಡ ಪ್ರಾಣಾಯಾಮದಿಂದ ಪವನನನ್ನು ಜಪಿಸಿ ಮನಸ್ಸೆಂಬ ಸಾರಥಿಯ ಮೂಲಕ ಇಂದ್ರಿಯಗಳೆಂಬ ಕುದುರೆಗಳನ್ನು ವಶಪಡಿಸಿಕೊಂಡರು [15-109] ಎಂಬ

ನಿರೂಪಣೆಯಿಂದ ಪ್ರಾಣಾಯಾಮದಿಂದ ಮನೋನಿಗ್ರಹ, ಇಂದ್ರಿಯನಿಗ್ರಹಗಳನ್ನು ಪಡೆದು ಕೊಳ್ಳಬೇಕು –ಎಂದು ಸೂಚಿತ.

೬೧. **ಧ್ಯಾನದಲ್ಲಿ ಚಿಂತ್ಯರೂಪದಲ್ಲಿ ಗುಣಗಳ ಅನುಸಂಧಾನ:** ಸಮಾಧ್ಯವಸ್ಥೆಗೆ ಒಳಗಾದ ವಿಷ್ಣುತೀರ್ಥರು ಕಂಡ ಭಗವದ್ರೂಪವನ್ನು 'ಮೌಕುಂದೇ ಸುಂದರೇ ರೂಪೇ...' [15-111] ಇತ್ಯಾದಿಯಾಗಿ ನಿರೂಪಿಸುವ ಮೂಲಕ ಅದರಲ್ಲಿ ಅನುಸಂಧಾನ ಮಾಡಬೇಕಾದ ಕೆಲವು ಧರ್ಮಗಳ ಮೇಲೆ ಬೆಳಕುಚೆಲ್ಲಿದಂತಾಗಿದೆ.

**ಮೌಕುಂದೇ–** ಮುಕುಂದನಿಗೆ ಸಂಬಂಧಿಸುವ ರೂಪ ಎನ್ನುವ ಮೂಲಕ ಮೋಕ್ಷ ಪುರುಷಾರ್ಥವನ್ನು ಅನುಗ್ರಹಿಸುವ ರೂಪ ಎಂಬ ಸೂಚನೆಯೊಂದಿಗೆ ಫಲಾಪೇಕ್ಷೆಯ ಮನಸ್ಸು ಆ ರೂಪದಲ್ಲಿ ಮಗ್ನವಾಗುವಂತೆ ಮಾಡಬೇಕೆಂದು ಸೂಚಿಸಲಾಗಿದೆ.

**ಸುಂದರೇ–** ಭಗವದ್ರೂಪದ ಅಲೌಕಿಕ ಸೌಂದರ್ಯವನ್ನು ಸುಂದರ ಪದದಿಂದ ಸೂಚಿಸಿ ಸೌಂದರ್ಯಕ್ಕೆ ಮರುಳಾಗುವ ಮನಸ್ಸು ಆ ರೂಪದಲ್ಲಿ ಮುಳುಗುವಂತೆ ಮಾಡಬೇಕೆಂದು ಸೂಚಿಸಲಾಗಿದೆ.

**ಸ್ವಾನಂದಾದಿಗುಣಾರ್ಣವೇ:** ಸೌಂದರ್ಯಕ್ಕಿಂತಲೂ ಸ್ವಾನಂದಾದಿಗುಣಗಳ ವೈಭವದಿಂದ ಆ ರೂಪಕ್ಕೆ ಅಧಿಕ ಆಕರ್ಷಣೆ. ಅದನ್ನೇ 'ಸ್ವಾನಂದಾದಿಗುಣಾರ್ಣವೇ' ಎಂಬ ವಿಶೇಷಣದಿಂದ ಸೂಚಿಸಲಾಗಿದೆ.

**ಸ್ವಾಶ್ಚರ್ಯರತ್ನೇ:** 'ಗುಣಾರ್ಣವ' ಆಗಿರುವಂತೆ ಅತ್ಯಾಶ್ಚರ್ಯಕರವಾದ ರೂಪ ಭಗವಂತನ ರೂಪ ಎಂಬುದು ಆಕರ್ಷಣೆಗೆ ಮತ್ತೊಂದು ಕಾರಣ.

ಹೀಗೆ ಭಗವದ್ರೂಪಕ್ಕೆ ಕೆಲವು ವಿಶೇಷಣಗಳನ್ನು ನೀಡುವ ಮೂಲಕ ಭಗವಂತನಲ್ಲಿ ಈ ವಿಶೇಷಣಗಳಿಂದ ಸೂಚಿತಗಳಾದ ಗುಣಧರ್ಮಗಳ ಅನುಸಂಧಾನ ನಡೆಸಿದಲ್ಲಿ ಮನಸ್ಸು ಅಂತಹ ಭಗವದ್ರೂಪದಲ್ಲಿ ಮಗ್ನವಾಗಬಲ್ಲದೆಂದು ಸೂಕ್ಷ್ಮಸಂದೇಶವನ್ನು ನೀಡಲಾಗಿದೆ.

೬೨. **ಸಚ್ಛಾಸ್ತ್ರವ್ಯಾಖ್ಯೆಯಿಂದ ಸೌಖ್ಯಾಮೃತಾಬ್ಧಿ:** ಶ್ರೀ ಮಧ್ವರ ಶಿಷ್ಯರ ವೈಶಿಷ್ಟ್ಯಗಳನ್ನು ಸಾರುತ್ತ 'ಸದಾ ಸಕಲಸಚ್ಛಾಸ್ತ್ರವ್ಯಾಖ್ಯಾಸೌಖ್ಯಾಮೃತಾಬ್ಧಿಗಾಃ' [15-133]ಎಂಬ ಮಾತಿನಲ್ಲಿ ಮಧ್ವರ ಶಿಷ್ಯರು ಸದಾ ಸಚ್ಛಾಸ್ತ್ರದ ಪಾಠಪ್ರವಚನದಲ್ಲಿ ಮುಳುಗಿದ್ದರೆಂಬುದನ್ನು ತಿಳಿಸುವ ಮೂಲಕ ಪಾಠಪ್ರವಚನವನ್ನು ಸರ್ವದಾ ನಡೆಸುತ್ತಿರಬೇಕೆಂದು ಸೂಚಿಸಿದಂತಾಯಿತಲ್ಲದೆ, 'ಸಚ್ಛಾಸ್ತ್ರವ್ಯಾಖ್ಯಾಸೌಖ್ಯಾಮೃತಾಬ್ಧಿಗಾಃ' –ಸಚ್ಛಾಸ್ತ್ರದ ಪಾಠಪ್ರವಚನಾತ್ಮಕ ವ್ಯಾಖ್ಯೆಯನ್ನು ಯಾರದ್ದೋ ದಾಕ್ಷಿಣ್ಯಕ್ಕಾಗಿಯೋ, ಪುಣ್ಯದ ದೃಷ್ಟಿಯಿಂದಲೋ ನಡೆಸದೆ ಸ್ವಸಂತೋಷಕ್ಕಾಗಿ ನಡೆಸಬೇಕು. ವ್ಯಾಖ್ಯಾನ ನಡೆಸುವುದರಿಂದ ಉಂಟಾಗುವ ಸೌಖ್ಯವೆಂಬ ಅಮೃತದ ಸಾಗರದಲ್ಲಿ ಮುಳುಗಿದಾಗ ಆಗುವ ಅನುಭವವನ್ನು ತಂದುಕೊಳ್ಳಬೇಕು –ಎಂದು ಸೂಚಿಸಿದಂತಾಗಿದೆ.

೬೩. **ಸದ್ಗುಪ್ತಿಮಾತ್ರದಿಂದ ಮೋಕ್ಷ ದೊರಕುವುದೇ?** ಕೆಲವು ಗ್ರಾಮಾಧಿಪತಿಗಳಾಗಿ ಸೇವೆ ಸಲ್ಲಿಸುತ್ತಿದ್ದ ಬ್ರಾಹ್ಮಣಮುಖಂಡರೂ ಶ್ರೀ ಮಧ್ವರ ಶಿಷ್ಯತ್ವವನ್ನು ಪಡೆದು ಅವರಿಂದ ಪಾಠ ಕೇಳುತ್ತಿದ್ದರು ಎಂದ ನಿರೂಪಿಸಿರುವ ಮಧ್ವವಿಜಯದಲ್ಲಿ [15-137] ಅಂತಹ ಮುಖಂಡರಿಗೆ ತಮ್ಮ ಅಧಿಕಾರದ ಅಡಿಯಲ್ಲಿ ಸಜ್ಜನರನ್ನು ರಕ್ಷಿಸುವುದರಿಂದಲೇ ಮೋಕ್ಷವು ದೊರಕಬಲ್ಲದು– **'ಯೇಷಾಂ ಸದ್ಗುಪ್ತಿಮಾತ್ರೇಣ ಭವೇತ್ ಕಿಲ ಪರಂ ಪದಮ್'** ಎನ್ನಲಾಗಿದೆ.

ಇದು ಲೋಕದರ್ಶನ ಭಾಷೆಯನ್ನು ಅವಲಂಬಿಸಿ ಹೊರಟ ಹೇಳಿಕೆ ಎಂದು ಇಟ್ಟುಕೊಳ್ಳಬೇಕು. ಅಂದರೆ ಲೋಕದಲ್ಲಿ ಸಾಮಾನ್ಯವಾಗಿ ಲೌಕಿಕ ಕ್ಷೇತ್ರಗಳಲ್ಲಿ ಪ್ರಾಮಾಣಿಕವಾಗಿ ದುಡಿಯುತ್ತಿರುವವರಿಗೆ ಅವರ ಪ್ರಾಮಾಣಿಕ ದುಡಿಮೆಯಿಂದಲೇ ಒಳ್ಳೆಯ ಲೋಕ ಲಭಿಸುವುದೆಂದು ಹೇಳಲಾಗುವುದಷ್ಟೇ. ಆದರೆ ನಿಜಸಂಗತಿ ಹೀಗಲ್ಲ.

ಬ್ರಹ್ಮಸೂತ್ರಭಾಷ್ಯದಲ್ಲಿ ಶ್ರೀ ಮಧ್ವರು ಉದಾಹರಿಸಿರುವ 'ನಾರದೀಯ' ಪ್ರಮಾಣವು **'ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿಸ್ತಥೈವ ಚ । ಸಾಧನಂ ಜ್ಞಾನಸಂಪತ್ತೌ ಪ್ರಧಾನಂ ನಾನ್ಯದಿಷ್ಯತೇ'** –ಮುಕ್ತಿಗೆ ಆವಶ್ಯಕವಾದ ಜ್ಞಾನವನ್ನು ಗಳಿಸುವ ಶ್ರವಣಾದಿಗಳು ಮುಖ್ಯ ಸಾಧನಗಳೆನಿಸಿದ್ದು, ಅಂತಹ ಸಾಧನಗಳಿಲ್ಲದೆ ಎಂದೂ ಯಾರೂ, ಎಲ್ಲೂ ಜ್ಞಾನವನ್ನು ಹೊಂದಲು ಸಾಧ್ಯವೇ ಇಲ್ಲ –ಎಂದು ದೃಢವಾಗಿ ಸಾರಿರುವುದರಿಂದ ಶ್ರವಣಾದಿಗಳಿಲ್ಲದೆ ಜ್ಞಾನವನ್ನು ಪಡೆಯಲು ಸಾಧ್ಯವಿಲ್ಲ. ಅಂತಹ ಜ್ಞಾನದ ಹೊರತಾಗಿ ಮೋಕ್ಷ ದೊರಕಲಾರದು.

ಹೀಗಿರುವಾಗ ಸಜ್ಜನರ ರಕ್ಷಣೆ ಮಾತ್ರದಿಂದ ಮೋಕ್ಷ ದೊರಕುವುದಾದರೂ ಹೇಗೆ?

೬೪. **ಎರಡು ಬಗೆಯ ಕೊರತೆಯ ಪರಿಹಾರ:** **'ಭೂರಿಭಕ್ತಿಭರಾಃ ಕೇಚಿತ್.....'** ಎಂಬ ಪದ್ಯದಲ್ಲಿ [15-134] ಮಧ್ವರ ಶಿಷ್ಯರಲ್ಲಿ ಕೆಲವರು ತಮ್ಮಲ್ಲಿದ್ದ ನ್ಯೂನತೆಯನ್ನು ಹೇಗೆ ಪರಿಪರಿಸಿಕೊಳ್ಳುತ್ತಿದ್ದರೆಂದು ಹೀಗೆ ತಿಳಿಸಲಾಗಿದೆ– ಕೆಲವರು ಹೆಚ್ಚು ಶಾಸ್ತ್ರ ಶ್ರವಣ ನಡೆಸಲಾಗದಿದ್ದವರು ತಮ್ಮ ಆ ನ್ಯೂನತೆಯ ಪರಿಹಾರಕ್ಕಾಗಿ ಆ ಬಗ್ಗೆ ಪ್ರಶ್ಚಾತ್ತಾಪ ಪೂರ್ವಕವಾಗಿ ಅಧಿಕವಾಗಿ ಹರಿಗುರುಭಕ್ತಿಯನ್ನು ಅಳವಡಿಸಿಕೊಂಡಿದ್ದರು. ಮತ್ತೆ ಕೆಲವರು ಕಡಿಮೆ ಬುದ್ಧಿವುಳ್ಳವರಾಗಿದ್ದು ತಮ್ಮ ಆ ನ್ಯೂನತೆಯ ಪರಿಹಾರಕ್ಕಾಗಿ ತುಂಬ ಶಾಸ್ತ್ರಶ್ರವಣ ನಡೆಸುತ್ತಿದ್ದರು. ಹೆಚ್ಚಿನ ಸಾಧಕರಲ್ಲಿ ಈ ಬಗೆಯ ನ್ಯೂನತೆಗಳು ಇರುವ ಸಾಧ್ಯತೆ ಇರುವುದರಿಂದ ಅಂತಹವರು ತಮ್ಮ ನ್ಯೂನತೆಯನ್ನು ಚೆನ್ನಾಗಿ ಗುರುತಿಸಿಕೊಂಡು ಅದರ ಪರಿಹಾರಕ್ಕೆ ಬೇಕಾದ ಉಪಾಯವನ್ನು ಅಳವಡಿಸಿಕೊಳ್ಳಬೇಕು.

೬೫. **ಶ್ರೀರಾಮನ ದೃಷ್ಟಾಂತದ ಔಚಿತ್ಯ:** ಶ್ರೀ ಮಧ್ವರು ಕೆಲವು ಸಜ್ಜನರಿಗೆ ಅವರ ಹರಿಗುರುಗಳ ಸೇವೆ, ವೈಷ್ಣವದೀಕ್ಷೆ ಮುಂತಾದ ಗುಣಗಳಿಗಾಗಿಯೇ ಮೋಕ್ಷವನ್ನು ಅನುಗ್ರಹಿಸಿದರೆಂದು ನಿರೂಪಿಸಿ [15-138] ಇದಕ್ಕೆ ಶ್ರೀರಾಮಚಂದ್ರನ ದೃಷ್ಟಾಂತವನ್ನು ನೀಡಲಾಗಿದೆ. ಶ್ರೀರಾಮಚಂದ್ರ ತನ್ನ ಅಯೋಧ್ಯೆಯಲ್ಲಿದ್ದ ತೃಣ, ಪಿಪೀಲಿಕಾದಿ ಜೀವರಿಗೂ ಹೇಗೆ ಮೋಕ್ಷವನ್ನು ಕರುಣಿಸಿದ್ದನೋ ಹಾಗೆ.

ಮೇಲ್ನೋಟಕ್ಕೆ ತತ್ವಜ್ಞಾನವಿಲ್ಲದೆಯೇ ಅವರಿಗೆ ಮೋಕ್ಷವನ್ನು ನೀಡಲಾಯಿತೆಂದು ನಿರೂಪಿತವಾಗಿರುವಂತೆ ಕಾಣಿಸುವುದು.

ಆದರೆ '.....ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಸ್ತಥಾ । ಏತದ್ವಿನಾ ನ ಕಸ್ಯಾಪಿ ವಿಮುಕ್ತಿಃ ಸ್ಯಾತ್ ಕಥಂಚನ ॥

–ಎಂಬುದಾಗಿ ಮಹಾಭಾರತತಾತ್ಪರ್ಯನಿರ್ಣಯದಲ್ಲಿ [1-80] ದೇವತಾತಾರತಮ್ಯ –ವಿಷ್ಣುಸರ್ವೋತ್ತಮತ್ವ ಮುಂತಾದ ಪ್ರಮೇಯಗಳ ತಿಳಿವಳಿಕೆ ಇಲ್ಲದೆ ಯಾರಿಗೂ ಹೇಗೂ ಮುಕ್ತಿ ದೊರಕುವುದೇ ಇಲ್ಲ –ಎಂದು ಶ್ರೀ ಮಧ್ವರು ಉದ್ಘೋಷಿಸಿರುವುದರಿಂದ ತತ್ವಜ್ಞಾನವಿಲ್ಲದೆ ಬರೇ ಸೇವಾದಿಗಳಿಂದ ಮುಕ್ತಿ ನೀಡಲಾಗಿದೆ ಎಂದು ಹೇಳುವಂತಿಲ್ಲ.

ಶ್ರೀರಾಮಚಂದ್ರನಾದರೂ 'ಸಮಘೋಷಯಚ್ಚ ಯ ಇಹೇಚ್ಛತಿ ತತ್ಪದಮಕ್ಷಯಂ ಸಪದಿ ಮೈತ್ವಿತಿ ಸಃ'[ಮ.ಭಾ.ತಾ.ನಿ. 9-6] ಎಂದು ನಿರ್ಣಯಿಸಿರುವಂತೆ ಮೋಕ್ಷವನ್ನು ಬಯಸುವವರೆಲ್ಲ ತನ್ನ ಜೊತೆಗೆ ಬನ್ನಿ ಎಂದು ಘೋಷಿಸಿ, ಆ ಘೋಷಣೆಯನ್ನು ಕೇಳಿ ಬಂದ ತೃಣ, ಪಿಪೀಲಿಕಾದಿಗಳಿಗೆ ಮೋಕ್ಷ ನೀಡಿದನೆಂದು ತಿಳಿದುಬರುವುದು. ಆದರೆ ಆಗ ಶ್ರೀರಾಮನ ಜೊತೆಗೆ ಸಾಗಿದವರೆಲ್ಲ ಗುರುಮುಖದಿಂದ ಒಳ್ಳೆಯ ತತ್ವಜ್ಞಾನ ಪಡೆದು ಕೊಂಡಿದ್ದು, ಯಾವಾಗಲೂ ಶ್ರೀರಾಮನ ಧ್ಯಾನ ನಡೆಸುತ್ತಿದ್ದವನೆಂದು ಶ್ರೀ ಮಧ್ವರು ನಿರ್ಣಯಿಸಿರುವರು–

**ಸದೈವ ರಾಮಭಾವನಾಸ್ಸದಾ ಸುತತ್ತ್ವವೇದಿನಃ ।**
**ಯತೋಽಭವಂಸ್ತತಸ್ತು ತೇ ಯಯುಃ ಪದಂ ಹರೇಸ್ತದಾ ।**

[ಮ.ಭಾ.ತಾ.ನಿ. 9-74]

ಹಾಗಾದರೆ ರಾಮಚಂದ್ರ ತತ್ವಜ್ಞಾನಾದಿಗಳಿಲ್ಲದ ತೃಣಾದಿಗಳಿಗೂ ಮೋಕ್ಷ ಕೊಟ್ಟ ನೆಂದು ಮೇಲ್ನೋಟಕ್ಕೆ ಕಂಡರೂ ಹಿಂದಿನ ಜನ್ಮಗಳ ಸಾಧನೆಗಳಿಂದ ತತ್ವಜ್ಞಾನಿಗಳಾಗಿದ್ದು, ಭಕ್ತರಾಗಿದ್ದ ಆ ಜೀವರಿಗಷ್ಟೇ ಮೋಕ್ಷವನ್ನು ಅನುಗ್ರಹಸಿದ್ದನೋ ಹಾಗೆಯೇ ಶ್ರೀ ಮಧ್ವರೂ ಹರಿಗುರುಗಳ ಸೇವೆಯೇ ಮುಂತಾದವನ್ನಷ್ಟೇ ನಡೆಸಿದವರಿಗೂ ಮೋಕ್ಷವನ್ನು ಅನುಗ್ರಹಿಸಿದರೆಂದು ಮೇಲ್ನೋಟಕ್ಕೆ ಕಂಡರೂ ಹಿಂದಿನ ಜನ್ಮಗಳ ಸಾಧನೆಗಳಿಂದ ತತ್ವ ಜ್ಞಾನಾದಿಗಳನ್ನು ಸಂಪಾದಿಸಿದ್ದವರಿಗಷ್ಟೇ ಅವರು ಮೋಕ್ಷವನ್ನು ಅನುಗ್ರಹಿಸಿದ್ದರೆಂದು ಇಟ್ಟುಕೊಳ್ಳಬೇಕು. ಮೇಲ್ನೋಟಕ್ಕೆ ಬರೇ ಸೇವಾದಿಗಳನ್ನು ನಡೆಸಿದವರಿಗಷ್ಟೇ ಮೋಕ್ಷವನ್ನು ಕರುಣಿಸಿದಂತೆ ಕಾಣುತ್ತಿದ್ದ, ಅಂತಹ 'ಲೋಕದರ್ಶನ'ದ ಭಾಷೆಯನ್ನು ಅವಲಂಬಿಸಿಯಷ್ಟೇ ಈ ಬಗೆಯ ನಿರೂಪಣೆ ಬಂದಿದೆ ಎಂದು ತೀರ್ಮಾನಿಸಿಕೊಳ್ಳಬೇಕು.

೬೬. **ಬೀಜ ಬಿತ್ತುವುದರ ರೂಪಕದ ಔಚಿತ್ಯ:** ಪೆಜತ್ತಾಯವಂಶದ ತ್ರಿವಿಕ್ರಮ ಪಂಡಿತರೇ ಮುಂತಾದವರು ಸದ್ವಿದ್ಯೆಯ ಉಪದೇಶದಲ್ಲಿ ದೀಕ್ಷಿತರಾಗಿದ್ದರೆಂಬುದನ್ನು ಶಿಷ್ಯರೆಂಬ ಗದ್ದೆಗಳಲ್ಲಿ ಸದ್ವಿದ್ಯೆಯ ಬೀಜ ಬಿತ್ತುವುದರಲ್ಲಿ ದೀಕ್ಷಿತರಾಗಿದ್ದರೆಂದು ಗದ್ದೆಯಲ್ಲಿ ಬೀಜಬಿತ್ತುವ ರೂಪಕದೊಂದಿಗೆ ನಿರೂಪಿಸಲಾಗಿದೆ [15-136].

ಇದರ ಉದ್ದೇಶ ಬೀಜವನ್ನು ಹೇಗೆ ಫಲವತ್ತಾದ ಗದ್ದೆಗಳಲ್ಲಷ್ಟೇ ಬಿತ್ತಲಾಗುವುದೋ ಹಾಗೆ ವಿದ್ಯೆಯನ್ನೂ ಜೀವನದಲ್ಲಿ ದಕ್ಕಿಸಿಕೊಳ್ಳಲು ಯೋಗ್ಯರಾದ ಶಿಷ್ಯರಿಗಷ್ಟೇ ಉಪದೇಶಿಸಲಾಗಿತ್ತೆಂದು ಧ್ವನಿ ಹೊರಡಿಸುವುದರ ಜೊತೆಗೆ ಗದ್ದೆಯಲ್ಲಿ ಕಳೆಯನ್ನು ಕಿತ್ತು ಬೀಜವನ್ನು ಬಿತ್ತುವಂತೆ ಶಿಷ್ಯರಲ್ಲೂ ಹಿಂದಿನ ಅವಿದ್ಯೆಯ ಕೆಟ್ಟ ಸಂಸ್ಕಾರಗಳನ್ನೆಲ್ಲ ತೊಡೆದು ವಿದ್ಯೆಯನ್ನು ಉಪದೇಶಿಸಲಾಗುತ್ತಿತ್ತೆಂಬ ಧ್ವನಿಯನ್ನೂ ಹೊರಡಿಸುವುದು.

೬೭. **ಪ್ರಾಯಶಃ ಮಾಧ್ವನಿಯೋಗವನ್ನು ತ್ಯಜಿಸಿಲ್ಲ:** ಪೆಜತ್ತಾಯವಂಶದ ತ್ರಿವಿಕ್ರಮ ಪಂಡಿತರೇ ಮುಂತಾದ ವಿದ್ವಾಂಸರು ಸದ್ವಿದ್ಯೆಯನ್ನು ಶಿಷ್ಯರಲ್ಲಿ ವಿತರಿಸುವುದರಲ್ಲಿ ದೀಕ್ಷಿತರಾಗಿದ್ದು ಪ್ರಾಯಶಃ 'ಮಾಧ್ವನಿಯೋಗ'ವನ್ನು ತ್ಯಜಿಸಿಲ್ಲ –ಎಂದು ನಿರೂಪಿಸಲಾಗಿದೆ [15-136].

ಈ ನಿರೂಪಣೆಗೆ ಸಾಮಾನ್ಯವಾಗಿ ವಿದ್ಯೆಯನ್ನು ಶಿಷ್ಯರಿಗೆ ವಿತರಿಸುವ ಮೂಲಕ **'ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ'** –ವಿಷ್ಣುಸರ್ವೋತ್ತಮತ್ವವನ್ನು ಯಾವಾಗಲೂ ಪ್ರತಿಪಾದಿಸುತ್ತಿರು ಎಂಬ ಮಾಧ್ವರ ಆದೇಶವನ್ನು ತ್ಯಜಿಸಿಲ್ಲ ಎಂದು ಅರ್ಥೈಸಲಾಗುವುದು.

ಆದರೆ ಆ ಮಾತಿಗೆ ಈ ಅಭಿಪ್ರಾಯವಿದ್ದಲ್ಲಿ 'ಮಾಧ್ವನಿಯೋಗವನ್ನು ಪಾಲಿಸಲಾಗಿತ್ತು ಎನ್ನುವ ಬದಲು ತ್ಯಜಿಸಲಾಗಿಲ್ಲ ಎಂಬ ಪ್ರಯೋಗ ಸ್ವರಸ ಎನಿಸದು. ಅಲ್ಲದೆ 'ಪ್ರಾಯಃ' ಶಬ್ದದ ಆವಶ್ಯಕತೆ ಕಾಣದು. ಶಿಷ್ಯರಿಗೆ ಉಪದೇಶಿಸಿದ್ದರೆಂದ ಮೇಲೆ ಮಾಧ್ವನಿಯೋಗವನ್ನು ಪಾಲಿಸಿದಂತೆಯೇ. 'ಪ್ರಾಯಶಃ' ಪಾಲಿಸಿದ್ದರೆಂಬ ನಿರೂಪಣೆ ಉಚಿತವೆನಿಸದು.

ಆದ್ದರಿಂದ ಆ ಮಾತನ್ನು ಹೀಗೆ ಅರ್ಥೈಸಿಕೊಳ್ಳಬೇಕು–

ಶಿಷ್ಯರಿಗೆ ಸದ್ವಿದ್ಯೆಯ ವಿತರಣೆಯಲ್ಲಿ ದೀಕ್ಷಿತರಾಗಿದ್ದರೂ [ದೀಕ್ಷಿತಾ ಅಪಿ] ಮಾಧ್ವರ 'ನಿಯೋಗ'ವನ್ನು ಪ್ರಾಯಶಃ ಕೈಬಿಟ್ಟಿಲ್ಲ. ಯಾವ ನಿಯೋಗ? **'ಅನಾವಿಷ್ಕುರ್ವನ್ನನ್ವಯಾತ್'** ಎಂಬ ಬ್ರಹ್ಮಸೂತ್ರದ [3-4-49] ಭಾಷ್ಯದಲ್ಲಿ ವಿಧಿಸಿದ ಅಯೋಗ್ಯರಿಂದ ಸದ್ವಿದ್ಯೆಯ ಸ್ವೀಕಾರ ಆಗದಂತೆ ಹೆಚ್ಚು ಆವಿಷ್ಕಾರವಿಲ್ಲದೆ ವಿದ್ಯಾದಾನ ನಡೆಸಬೇಕೆಂಬ ನಿಯೋಗವನ್ನು ಉಲ್ಲಂಘಿಸದೆ, ಅಂದರೆ ಅಯೋಗ್ಯ ಶಿಷ್ಯರಿಗೆ ವಿದ್ಯಾದಾನ ಆಗದಂತೆ ಎಚ್ಚರ ವಹಿಸಲಾಗಿತ್ತು. ಯೋಗ್ಯರೆಂದು ಭಾವಿಸಿದ ಶಿಷ್ಯರಲ್ಲೂ ಕೆಲವರು ಅಯೋಗ್ಯರು ಇದ್ದಿರಬಹುದಾದ್ದರಿಂದ 'ಪ್ರಾಯಃ' ಎಂಬ ಶಬ್ದವನ್ನು ಬಳಸಲಾಗಿದೆ. ಆದಷ್ಟು ಯೋಗ್ಯ ಶಿಷ್ಯರಿಗೆ ಸದ್ವಿದ್ಯೆಯ ವಿತರಣೆ ಆಗುವಂತೆ ಎಚ್ಚರ ವಹಿಸಿದ್ದರು ಎಂಬ ಆಶಯ.

೬೮. **ಮಧ್ವಚರಿತೆಗೆ ವೇದಾಂತದ ಮೆರುಗು:** ಮಧ್ವಶಿಷ್ಯರೊಬ್ಬರು ಸಜ್ಜನರಿಗೆ ಮಧ್ವರ ಮಹಿಮೆಯನ್ನು ಸಂಸಾರಬಂಧನದ ಬಿಡುಗಡೆಗೆ ಪ್ರಯೋಜಕವಾದ ವೇದಾಂತಶಾಸ್ತ್ರವನ್ನು ಹೇಗೋ ಹಾಗೆ ಪ್ರವಚನ ನಡೆಸಿದರೆಂದು [16-1] ನಿರೂಪಿಸಿರುವುದರಿಂದ ಮಧ್ವಮಹಿಮೆಗಳನ್ನೊಳಗೊಂಡ ಮಧ್ವಚರಿತ್ರೆಗೆ ವೇದಾಂತಶಾಸ್ತ್ರದ ಮೆರುಗನ್ನು ನೀಡಿದಂತಾಗಿದೆ.

**'ಉತ್ಪತ್ತಿಮಾಯತಿಂ ಸ್ಥಾನಂ ವಿಭುತ್ವಂ ಚೈವ ಪಂಚಧಾ । ಅಧ್ಯಾತ್ಮಂ ಚೈವ ಪ್ರಾಣಸ್ಯ ವಿಜ್ಞಾಯಾಮೃತಮಶ್ನುತೇ'** ಎಂದು ಷಟ್‌ಪ್ರಶ್ನೋಪನಿಷತ್ತಿನಲ್ಲಿ [3-1-12]ಪರಮಾತ್ಮನಿಂದ ಮುಖ್ಯಪ್ರಾಣನ ಉತ್ಪತ್ತಿಯನ್ನೂ ಶರೀರದಲ್ಲಿ ಅವನ ಪ್ರವೃತ್ತಿಯನ್ನೂ, ಶರೀರದಲ್ಲಿ ಅವನ ಇರುವಿಕೆಯನ್ನೂ, ದೇಹದಲ್ಲೂ–ಹೊರಗೂ ಪ್ರಾಣಾಪಾನಾದಿ ಐದು ವಿಧ ರೂಪ ಸ್ವೀಕಾರ ವನ್ನೂ ಚೆನ್ನಾಗಿ ತಿಳಿದವನು ಮೋಕ್ಷವನ್ನು ಪಡೆಯುವನೆಂದು ತಿಳಿಸಿರುವುದರಿಂದ ಪ್ರಾಣನ ವಿಜ್ಞಾನ ಮೋಕ್ಷಕ್ಕೆ ಪ್ರಯೋಜಕ ಎಂದು ಹೇಳಿದಂತಾಗಿದೆ. ಅಂತಹ ಮುಖ್ಯ ಪ್ರಾಣನ ಅವತಾರದ ಮಹಿಮೆಗಳ ತಿಳಿವಳಿಕೆಯೂ ಮೋಕ್ಷಪ್ರಯೋಜಕವಾಗುವುದರಿಂದ ಅಂತಹ ಮೋಕ್ಷಪ್ರಯೋಜಕತ್ವದ ಅಂಶದಲ್ಲಿ ವೇದಾಂತದ ಹೋಲಿಕೆಯನ್ನು ನೀಡಲಾಗಿದೆಯೇ ಹೊರತು ಪ್ರಮೇಯಗಳ ಮಹತ್ವದ ವಿಷಯದಲ್ಲಿ ಅಲ್ಲ.

೬೯. **ಭಗವದ್ಗುಣ ದರ್ಪಣ:** ದೇವತೆಗಳು ಶ್ರೀ ಮಧ್ವಗುರುಗಳನ್ನು ಪ್ರಶಂಸಿಸುವಾಗ 'ಮುರಾರಿಯ ಗುಣಸಮೂಹದ ದರ್ಶನ ಪಡೆಯಲು ಅನುಕೂಲವಾಗುವಂತೆ ಕನ್ನಡಿ ಯಂತೆ ಸಚ್ಛಾಸ್ತ್ರವು ಇವರಿಂದ ರಚಿತವಾಗಿದೆ –ಎಂದು ವರ್ಣಿಸುತ್ತಿದ್ದರೆಂದು ನಿರೂಪಿತ ವಾಗಿದೆ [16-53].

ಶ್ರೀ ಮಧ್ವರು ಪ್ರಸ್ತುತಪಡಿಸಿರುವ ಸಚ್ಛಾಸ್ತ್ರದ ಪ್ರಧಾನ ಲಕ್ಷ್ಯ ಭಗವಂತನ ಪಾರಮ್ಯದ ಸಮರ್ಥನೆಯಾಗಿದ್ದು, ಅದಕ್ಕೆ ಪೋಷಕವಾಗಿ ಅವನ ಗುಣಸಮೂಹದ ನಿರೂಪಣೆಯೇ ವಿಶೇಷವಾಗಿ ನಡೆದಿದೆ. ಆದುದರಿಂದ ಮಾಧ್ವಶಾಸ್ತ್ರ ಮುರಾರಿಯ ಗುಣಗಣದರ್ಶನಕ್ಕಿರುವ ಆದರ್ಶ ಕನ್ನಡಿ ಎಂಬ ವರ್ಣನೆ ಅತ್ಯಂತ ಸಮುಚಿತವಾದುದು.

೭೦. **ಶ್ರೀ ಮಧ್ವರ ಮೂರು ಪ್ರಮುಖ ಸಾಧನೆಗಳು:** ದೇವತೆಗಳು ಶ್ರೀ ಮಧ್ವರನ್ನು ತಮ್ಮ ವಚನಪುಷ್ಪಗಳಿಂದ ಆರಾಧಿಸುತ್ತ –ನಿಮ್ಮ ವಚನಸಮೂಹದಿಂದ ದುರಾಗಮಗಳ ಕತ್ತಲನ್ನು ಪರಿಹರಿಸಿದಿರಿ; ಮುಕುಂದನ ಗುಣಸಮೂಹದ ದರ್ಶನ ಮಾಡಿಸಿದಿರಿ. ನಿಮ್ಮ ಸದ್ಗುಣಗಳಿಂದ ಹದಿನಾಲ್ಕು ಲೋಕಗಳನ್ನೂ ಅತಿಕ್ರಮಿಸಿರುವಿರಿ ಎಂದು ಸ್ತುತಿಸುವ [16-56] ಮೂಲಕ ಶ್ರೀ ಮಧ್ವರಿಂದ ದುರಾಗಮಗಳ ಪರಿಹಾರ, ಶಾಸ್ತ್ರದಲ್ಲಿ ಭಗವದ್ಗುಣ ಗಳ ಪ್ರತಿಪಾದನೆಯ ಪರಿಚಯ ಹಾಗೂ ತನ್ನ ಸದ್ಗುಣಗಳ ಪ್ರಕಟಣೆ –ಈ ಮೂರು ಸಾಧನೆಗಳು ವಿಶೇಷವಾಗಿ ನಡೆದವೆಂದು ಸ್ಪಷ್ಟಪಡಿಸಿದಂತಾಗಿದೆ. ಸಾತ್ವಿಕರ ಉದ್ಧಾರಕ್ಕೆ ಮುಖ್ಯಪ್ರಾಣನ ಗುಣಗಳ ಪ್ರಕಟಣೆಯೂ ಅತ್ಯಾವಶ್ಯಕ.

೭೧. **ಪ್ರಾಣಸ್ತುತಿಯ ವೈಶಿಷ್ಟ್ಯ:** ದೇವತೆಗಳು ಮುಖ್ಯಪ್ರಾಣನ ಮೂರೂ ಅವತಾರ ಗಳನ್ನು ಉಲ್ಲೇಖಿಸಿ ನಡೆಸಿರುವ **'ನಮಸ್ತೇ ಪ್ರಾಣೇಶ.....'** ಎಂಬ ಸ್ತುತಿಯಲ್ಲಿ ಹನೂ ಮಂತನಿಗೆ 'ರಾಮಪ್ರಿಯತಮ' ಎಂಬ ವಿಶೇಷಣವನ್ನೂ, ಭೀಮನಿಗೆ 'ಕೃಷ್ಣೇಷ್ಟ' ಎಂಬ ವಿಶೇಷಣವನ್ನೂ, ಮಧ್ವರಿಗೂ ಕೃಷ್ಣೇಷ್ಟ –ವಾಸಿಷ್ಠಕೃಷ್ಣರಿಗೆ ಪ್ರಿಯರಾದವರೇ ಎಂಬ ವಿಶೇಷಣವನ್ನೂ ನೀಡಿ ಸ್ತುತಿಸುವ ಮೂಲಕ **'ಪ್ರಾಧಾನ್ಯೇನ ಹರಿರ್ಧ್ಯೇಯಃ ತತ್ಸಂಬಂಧಾತ್ ಸುರಾದಯಃ....'** ಶ್ರೀಹರಿಯನ್ನು ಪ್ರಧಾನವಾಗಿ ಧ್ಯಾನಿಸಿ, ಅವನಿಗೆ ಸಂಬಂಧಿಸಿಯಷ್ಟೇ ಉಳಿದ ಸುರಾದಿಗಳನ್ನು ಪೂಜಿಸಬೇಕೆಂಬ 'ಪರಿಸಂಹಿತೆ'[ಭಾ.ತಾ.ನಿ. 11-4-5] ಪ್ರಸ್ತುತ

ಪಡಿಸಿರುವ ಶಾಸ್ತ್ರೀಯ ನಿಯಮವನ್ನು, ಮುಖ್ಯಪ್ರಾಣನನ್ನು ಸ್ತುತಿಸುವಾಗಲೂ ಅಳವಡಿಸಿ ಕೊಂಡಂತಾಯಿತಲ್ಲದೆ, ಆಂಜನೇಯಾದಿ ಅವತಾರಗಳಲ್ಲಿ ಏನೇನೋ ಸಾಧನೆಗಳನ್ನು, ಮಹಿಮೆಗಳನ್ನು ತೋರಿಸಿದ್ದಿರಬಹುದು; ಆದರೆ ಅವುಗಳಲ್ಲೆಲ್ಲ ಮುಖ್ಯವಾದುದು ಹನೂಮಂತ ರಾಮಚಂದ್ರನಿಗೆ ಪ್ರಿಯತಮನಾಗಿ ನಡೆದುಕೊಂಡಿದ್ದನೆಂಬುದೂ, ಭೀಮಸೇನ ಯಾದವಕೃಷ್ಣನಿಗೆ ಇಷ್ಟನಾಗಿ ನಡೆದುಕೊಂಡಿದ್ದನೆಂಬುದೂ, ಮಧ್ವರು ವಾಸಿಷ್ಠಕೃಷ್ಣನಿಗೆ ಇಷ್ಟರಾಗಿ ನಡೆದುಕೊಂಡಿದ್ದರೆಂಬುದೂ ಆಗಿದೆ. **'ವಿಷ್ಣುಭಕ್ತಿರ್ಹಿ ಸರ್ವೇಷಾಂ ಸದ್ಗುಣಾನಾಂ ಸ್ವಲಕ್ಷಣಮ್'** ಎಂದು ಶ್ರೀ ಮಧ್ವರು 'ವಾದಲಕ್ಷಣ' ಗ್ರಂಥದಲ್ಲಿ [14] ತಿಳಿಸಿರುವಂತೆ ಉಳಿದೆಲ್ಲ ಗುಣಗಳ ಸ್ವಲಕ್ಷಣ –ಸ್ವಾಭಾವಿಕಲಕ್ಷಣ ವಿಷ್ಣುಭಕ್ತಿ. ಅಂದರೆ ವಿಷ್ಣುಭಕ್ತಿಯ ಸಂಪರ್ಕದಿಂದಾಗಿ ಉಳಿದೆಲ್ಲವು ಗುಣಗಳೆನಿಸುವವು. ಈ ಪ್ರಮೇಯವನ್ನು ಪ್ರಾಣದೇವರ ಅವತಾರಗಳಿಗೂ ಸಂಬಂಧಿಸಿದಂತೆ ದೇವತೆಗಳು ಸ್ತುತಿಸಿರುವರು.

ಮುಂದೆ ಶ್ರೀ ಮಧ್ವರ ಮೇಲೆ ಪುಷ್ಪವೃಷ್ಟಿ ಗೈದರು ಎನ್ನುವಾಗಲೂ **'ಹರಿದಯಿತ ವರಿಷ್ಠೇ ಶ್ರೀಮದಾನಂದತೀರ್ಥೇ'** –ಎಂದು ಶ್ರೀ ಮಧ್ವರಿಗೆ ಹರಿದಯಿತವರಿಷ್ಠ ಎಂಬ ವಿಶೇಷಣವನ್ನು ನೀಡುವ ಮೂಲಕ ಪುಷ್ಪವೃಷ್ಟಿ ಗೈದ ದೇವತೆಗಳ ಮುಖ್ಯ ಅನುಸಂಧಾನ ಮಧ್ವರು ಶ್ರೀಹರಿಗೆ ಅತ್ಯಂತ ಪ್ರಿಯರಾದವರೆಂಬುದೇ ಎಂದು ಸೂಚಿಸಲಾಗಿದೆ.

**ಸ್ಫೂರ್ತಿಯ ಲಾಭ:** ಹೀಗೆ ಮಧ್ವವಿಜಯವನ್ನು ಸಾಧನಾದೃಷ್ಟಿಯಿಂದಲೇ ಪರಿಶೀಲಿಸುತ್ತ ಹೋದರೆ ಕೆಲವು ಸಂದರ್ಭೋಚಿತ ವಿಶೇಷಣಗಳಿಂದಲೂ, ವಿಶಿಷ್ಟ ಶಬ್ದಾದಿಗಳ ಪ್ರಯೋಗದಿಂದಲೂ ನಮ್ಮ ಸಾಧನಾನುಷ್ಠಾನಕ್ಕೆ ಉಪಯುಕ್ತವಾಗುವ ಸ್ಫೂರ್ತಿಯನ್ನು ಪಡೆದುಕೊಳ್ಳಬಹುದು. ಹೀಗೆ ಪರಿಶೀಲಿಸುವಾಗ ತತ್ತ್ವಜ್ಞಾನ ಹಾಗೂ ಅದಕ್ಕೆ ಸಂಬಂಧಿಸುವ ಪ್ರತಿಯೊಂದು ಪ್ರಮೇಯವೂ ಶಾಶ್ವತವಾಗಿದ್ದು, ಅವುಗಳಿಗೆ ಮೇಲ್ನೋಟಕ್ಕೆ ಬಾಧಕಗಳಂತೆ ಕಾಣುವ ಮಾತುಗಳನ್ನು ಹೊಂದಿಸಿಕೊಳ್ಳಬೇಕೆಂಬುದನ್ನೂ ಮರೆಯಬಾರದು.

★

# ಪ್ರಾಣಚಿಂತನ – ವ್ಯಾನಪಾದ



ಪಲಿಮಾರು ಮಠದ
ಶ್ರೀ ರಘುಪ್ರವೀರತೀರ್ಥರಿಗೆ ಒಲಿದು ಬಂದ
ಘಟಿಕಾಚಲದ ಮುಖ್ಯಪ್ರಾಣ

## ಪ್ರಾಣಚಿಂತನೆ – ವ್ಯಾನಪಾದ

### 'ವಿವೇಚನತರಂಗ'

# ಸರಸಭಾರತೀವಿಲಾಸದಲ್ಲಿ
# • ವಾಯುದೇವನ ಪರಶುಕ್ಲತ್ವ •





ಶ್ರೀ ವಾದಿರಾಜ ಗುರುಗಳು ಉಡುಪಿಯಲ್ಲಿ ಮುಖ್ಯಪ್ರಾಣ ಪ್ರತೀಕವನ್ನು ಪ್ರತಿಷ್ಠಾಪಿಸಿದ್ದು ಅದರ ಮಾಧ್ಯಮದಲ್ಲಿ ಸರಸಭಾರತೀ ವಿಲಾಸದಲ್ಲಿ ಪ್ರಸ್ತುತವಾದ ಮುಖ್ಯಪ್ರಾಣನ ಚಿಂತನೆಯನ್ನು ವೃಂದಾವನಸ್ಥರಾಗಿ ನಡೆಸುತ್ತಿರುವುದು.

ಶ್ರೀ ವಾದಿರಾಜಗುರುಗಳ 'ಸರಸಭಾರತೀ ವಿಲಾಸ'ದ ಐದು, ಆರು, ಏಳು ಹಾಗೂ ಎಂಟು –ಈ ನಾಲ್ಕು ವಿಲಾಸಗಳಲ್ಲಿ ವಾಯುದೇವನ, ವಿಶೇಷವಾಗಿ ಅವನ ಮೂರು ಅವತಾರಗಳ ಗುಣ ಧರ್ಮಗಳ ಪ್ರತಿಪಾದನೆ ನಡೆದಿದೆ. ಅವನ ಗುಣ ಧರ್ಮಗಳಲ್ಲೂ 'ಪರಶುಕ್ಲ'ತ್ವ –ಪರತತ್ವವಾದ ಪರಮಾತ್ಮನ ಬಗ್ಗೆ ಶುಕ್ಲವಾಗಿರುವಿಕೆ ಅಂದರೆ ಶುದ್ಧವಾಗಿರುವಿಕೆ, ಅನ್ಯಥಾಜ್ಞಾನಕ್ಕೆ ಒಳಗಾಗದೆ ಅವನ ವಿರುದ್ಧ ಯಾವುದೇ ತಪ್ಪನ್ನು ಎಸಗದಿರುವಿಕೆ –ಪ್ರಮುಖವಾದ ಗುಣ. ಯಾಕೆಂದರೆ ಉಳಿದೆಲ್ಲ ಗುಣಧರ್ಮಗಳು ಈ ಗುಣವನ್ನೇ ಕೇಂದ್ರೀಕ'ರಿಸಿ ಇರುವವು. ಈ ಗುಣ ಇತ್ತೆಂದರೆ ಉಳಿದೆಲ್ಲ ಸದ್ಗುಣಗಳು ಇದ್ದೇ ಇರುವವು. ಅಲ್ಲದೆ, ದೇವರೇ ಕೇಂದ್ರಬಿಂದುವಾಗಿ ಉಳ್ಳ ಅಧ್ಯಾತ್ಮಶಾಸ್ತ್ರದ ಉಪದೇಶಗಳು, ಸಂದೇಶಗಳು ಸ್ವೀಕಾರಾರ್ಹವೆನಿಸುವುದು, ದೇವರ ಬಗ್ಗೆ ಸರಿಯಾದ ತಿಳಿವಳಿಕೆ ಉಳ್ಳವರಿಂದ ಹೊರಹೊಮ್ಮಿ ದವುಗಳೆಂದು ನಿಶ್ಚಿತವಾದಾಗಷ್ಟೇ. ಶ್ರೀ ಮಧ್ವರು ದೇವರ ಬಗ್ಗೆ, ದೇವರನ್ನು ಕೇಂದ್ರೀಕರಿಸಿ ಹೊರಟ ಅಧ್ಯಾತ್ಮದ ಬಗ್ಗೆ ಹೇಳಿರುವ ಮಾತುಗಳಲ್ಲಿ ಪೂರ್ಣ ವಿಶ್ವಾಸ ಮೂಡುವುದು ಅವರು ಮೂಲರೂಪದಲ್ಲೂ, ಅವತಾರದಲ್ಲೂ ದೇವರ ಬಗ್ಗೆ ಕಿಂಚಿತ್ತೂ ವಿಪರೀತಜ್ಞಾನಕ್ಕೊಳಗಾಗದವರು; ವಿಪರೀತವಾಗಿ ನಡೆದುಕೊಳ್ಳದವರು ಎಂಬುದರಲ್ಲಿ ವಿಶ್ವಾಸ ಮೂಡಿದಾಗಷ್ಟೇ. ಈ ಬಗೆಯ ದೃಢವಿಶ್ವಾಸವನ್ನು ಸಾತ್ವಿಕರಲ್ಲಿ ಉಂಟುಮಾಡುವುದಕ್ಕಾಗಿಯಷ್ಟೇ ಶ್ರೀ ವಾದಿರಾಜಗುರುಗಳು ಶ್ರೀ ಮಧ್ವರ, ಅವರ ಮೂಲರೂಪದ, ಆ ರೂಪದ ಹನೂಮಂತ ಮತ್ತು ಭೀಮಸೇನ ಈ ನಾಲ್ಕು ರೂಪಗಳ ಪರಶುಕ್ಲತ್ವವನ್ನು ಅಂದರೆ ಪರತತ್ವದಲ್ಲಿ ಶುದ್ಧರಾಗಿರುವರೆಂಬುದನ್ನು ಎತ್ತಿ ಸಾರಿರುವರು. ಅದಕ್ಕೆ ಪೂರಕ

ವಾಗಿಯಷ್ಟೇ ವಾಯುದೇವ ರುದ್ರಾದಿದೇವತೆಗಳಿಗಿಂತೆಲ್ಲ ಉತ್ತಮ –ಇತ್ಯಾದಿ ಪ್ರಮೇಯ ಗಳನ್ನು ಅಮುಖ್ಯವಾಗಿ ತಿಳಿಸಿರುವರು. ಆದ್ದರಿಂದ ವಾಯುದೇವನ ಪರಶುಕ್ಲತ್ವಕ್ಕೆ ಸಂಬಂಧಿಸಿ ಪ್ರಸ್ತುತಪಡಿಸಲಾದ ಸುಮಾರು ಇಪ್ಪತ್ತಾರು ಯುಕ್ತಿಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ–

೧. ಛಾಂದೋಗ್ಯೋಪನಿಷತ್ತಿನಲ್ಲಿ ಪ್ರಸ್ತುತವಾದಂತೆ ಉದ್ಗೀಥನಾಮಕ ಭಗವಂತನ ಉಪಾಸನೆಗೆ ನಿರ್ದುಷ್ಟವಾದ ಪ್ರತಿಮೆ ವಾಯುದೇವನಾಗಿರುವುದರಿಂದ, ಅಸುರರ ಆಕ್ರಮಣದ ವಿರುದ್ಧವಾಗಿ ಬಂಡೆಗಲ್ಲಿಗೆ ಸಮಾನನಾಗಿದ್ದು 'ಆಖಣಾಶ್ಮಸಮ' ಎಂದೇ ಉಪನಿಷತ್ತುಗಳಲ್ಲಿ ಪ್ರಸಿದ್ಧನಾಗಿರುವುದರಿಂದ, ಅಸುರಾವೇಶ ಇಲ್ಲದ ಅವನಿಗೆ ಶುಕ್ಲತ್ವ–ಶುದ್ಧತ್ವ ಸಮುಚಿತವಾದುದು.

ಪೂಜೆಗೆ ತೊಂದರೆ ಮಾಡುವ ಆಸುರೀಶಕ್ತಿಗಳನ್ನು ಪುಡಿಗೈಯಲು ಸಮರ್ಥನಾದ ವಾಯುದೇವ ವಿಚ್ಛೇದರಹಿತವಾದ ಪೂಜೆಗೆ ಉತ್ತಮ ಪ್ರತಿಮೆ ಎಂದು ತಿಳಿದೇ ತತ್ವಜ್ಞಾನಿ ಗಳು ತಮಗೆ ಉಪಕರಿಸಿರುವ ವಾಯುದೇವನ ಮೂರನೆಯ ಅವತಾರರಾದ ಶ್ರೀ ಮಧ್ವರ ಹೃದಯದಲ್ಲಿ ಶ್ರೀಹರಿಯನ್ನು ಪೂಜಿಸುವರು.[1]

೨. ವಾಯುದೇವನ ಶುಕ್ಲತ್ವದಲ್ಲಿ–ಶುದ್ಧತ್ವದಲ್ಲಿ ಅವನ ಮೂವರು ಪುತ್ರರು ನಿದರ್ಶನ ವೆನಿಸಬಲ್ಲರು. ಹನುಮಂತ, ಭೀಮ, ಮಧ್ವ ಎನಿಸಿರುವ ಅವರು ಮನೋಮಾಲಿನ್ಯ ರಹಿತರು; ದುಷ್ಟರಾದ ಅಸುರಾದಿಗಳಿಗೆ ಅನಿಷ್ಟಪ್ರದರು. ಆದುದರಿಂದ ಇವರು ಸ್ಪಷ್ಟವಾಗಿ ದೃಷ್ಟಾಂತರಾಗಬಲ್ಲರು.[2]

೩. ಇಂದ್ರಜಿತ್ ಪ್ರಯೋಗಿಸಿದ ಬ್ರಹ್ಮಾಸ್ತ್ರ ಜಾಂಬವಂತನೇ ಮುಂತಾದ ಉಳಿದೆಲ್ಲ ಕಪಿಗಳಿಗೆ ಹಾನಿಯನ್ನುಂಟುಮಾಡಿತು. ಆದರೆ ಹನೂಮಂತನಿಗೆ ಆ ಅಸ್ತ್ರದ ಸ್ಪರ್ಶವೇ ಆಗಲಿಲ್ಲ. ಆ ಅಸ್ತ್ರದಿಂದಾಗಿ ಹನೂಮಂತ ಮೂರ್ಛೆಗೂ ಒಳಗಾಗಲಿಲ್ಲ. ಇಂತಹ ಹನೂಮಂತನನ್ನು ಯಾವ ದುಷ್ಟನು ಮುಟ್ಟಿಯಾನು?[3]

---

1. ಅಸುರಾವೇಶರಹಿತ ವಾಯೋರೇವ ಹಿ ಶುಕ್ಲತಾ ।
ಉಚಿತಾತೋ ಮುಖ್ಯವಾಯುರಾಖಣಾಶ್ಮಸಮಃ ಕಿಲ ।
ಯನ್ಮುಖ್ಯವಾಯುಪ್ರತಿಮಾ ವಿಚ್ಛೇದಕಾಸುರಾನ್ ।
ಚೂರ್ಣೀಕರೋತಿ ತೇನಾಸಾವವಿಚ್ಛಿನ್ನಾರ್ಹಣೋಚಿತಾ ।
ಇತಿ ಮತ್ವಾ ತತ್ವವಿದೋ ಮಧ್ವಸ್ಯ ಸ್ವೋಪಕಾರಿಣಃ ।
ವಾಯೋಸ್ತೃತೀಯರೂಪಸ್ಯ ಹೃದ್ಯರ್ಚಾಂ ಕುರ್ವತೇ ಹರೇಃ ।
– [ಸ.ಭಾ.ವಿ. 5-29, 30, 31]

2. ಕಿಂ ಚ ವಾಯೋಃ ಶುಕ್ಲತಾಯಾಂ ತಸ್ಯ ಪುತ್ರಾಸ್ತು ತೇ ತ್ರಯಃ ।
ಹನುಮದ್ಭೀಮಮಧ್ವಾಖ್ಯಾಃ ಮನೋಮಾಲಿನ್ಯವರ್ಜಿತಾಃ ।
ದುಷ್ಟಾನಿಷ್ಟಪ್ರಥಾಸ್ತೇ ಚ ಸ್ಪಷ್ಟಂ ಸ್ಯುರ್ಹಿ ನಿದರ್ಶನಮ್ ॥ [ಸ.ಭಾರ.ವಿ. 5-28, 29]

3. ಯಸ್ಯೇಂದ್ರಜಿನ್ಮಹಾಸ್ತ್ರೇಣ ಕಪೀನಾಂ ಕ್ಲೇಶಕಾರಿಣಾ ।
ನ ಸ್ಪರ್ಶೋSಭೂನ್ನಾಪಿ ಮೂರ್ಛಾ ತಂ ಸ್ಪೃಶೇತ್ ಕಃ ಖಲೋ ವದ ।
– [ಸ.ಭಾ.ವಿ. 6-2]

೪. ಯಾವ ಭೀಮಸೇನ ಅಂಗೈಯಿಂದಲೂ, ಮುಷ್ಟಿಯಿಂದಲೂ ಹಾಗೆಯೇ ಕಾಲಿನ ಅಡಿಯಿಂದಲೂ ಒದ್ದು ಅಸುರರ ಸೊಕ್ಕನ್ನು ನಾಶಮಾಡುವನೋ ಅಂತಹ ಭೀಮ ಸೇನನನ್ನು ಯಾವ ಅಸುರನು ಸ್ಪರ್ಶಿಸಿಯಾನು?4

೫. ಶ್ರೀ ಮಧ್ವರು ಸೇತುರಾಮೇಶ್ವರದಿಂದ ಹಿಮಾಲಯದ ವರೆಗೆ ಸಂಚಾರಮಾಡಿ ಪ್ರಮಾಣಗಳೆಂಬ ಬಾಣಗಳ ಸಮೂಹದಿಂದ ಕ್ಷುದ್ರಸಿದ್ಧಾಂತವನ್ನು ಪ್ರಚುರಪಡಿಸಿದ ಅಲ್ಪಜ್ಞ ದುರ್ಜನರನ್ನು ಓಡಿಸಿರುವರು. ಇಂತಹ ಮಧ್ವಮುನಿಗಳ ಶುದ್ಧವಾದ ಮನಸ್ಸನ್ನು ಯಾವ ಅಸುರನು ತಾನೇ ಪ್ರವೇಶ ಮಾಡಿಯಾನು?5

೬. ವಾಯುದೇವರ ಪುತ್ರರಾದ ಹನುಮಂತ, ಭೀಮ ಹಾಗೂ ಮಧ್ವರು ಮಾನುಷಾನ್ನ ವನ್ನು ಸ್ವೀಕರಿಸಿದ್ದವರು. ಆದರೂ ಅವರ ಮನಸ್ಸಿನಲ್ಲಿ ಮಾಲಿನ್ಯ ಉಂಟಾಗಲಿಲ್ಲ. ಹೀಗಿರುವಾಗ ಅವರ ಮೂಲರೂಪ ವಾಯುದೇವರಿಗೆ ಪರಾಪರತತ್ವವಿಚಾರದಲ್ಲಿ ಮನಸ್ಸಿನಲ್ಲಿ ಹೇಗೆ ತಾನೇ ಕಾಲುಷ್ಯವು ಇದ್ದೀತು?6

೭. ವಾಯುದೇವ ಮೂಲರೂಪದಲ್ಲಿ ಶುದ್ಧನಾಗಿರುವುದರಿಂದಲೇ ಅವನ ಅವತಾರ ನಾದ ಹನೂಮಂತನ ಬುದ್ಧಿಯೂ, ಶುದ್ಧನಾದ ಭೀಮಸೇನನ, ಮಹಾತ್ಮರಾದ ಮಧ್ವಾಚಾರ್ಯರ ಬುದ್ಧಿಯೂ ಪರತತ್ವ ಎನಿಸುವ ಪರಮಾತ್ಮನ ವಿಷಯದಲ್ಲಿ ಶುದ್ಧವಾಗಿ ಇತ್ತು.7

೮. ದೇವರು ರಾಮನಾಗಿ ಅವತರಿಸಿದಾಗ ಸೂರ್ಯಪುತ್ರನಾದ ಸುಗ್ರೀವನು ರಾಮನಲ್ಲಿ ಭಕ್ತಿವುಳ್ಳವನಾಗಿದ್ದ. ಆದರೆ ಅದೇ ದೇವರು ಶ್ರೀಕೃಷ್ಣನಾಗಿ ಅವತರಿಸಿದಾಗ ಸೂರ್ಯ ಪುತ್ರನೇ ಆದ ಕರ್ಣನನ್ನು ಬಿಟ್ಟು ತನಗೆ ಪ್ರಿಯನಾದ ಭೀಮನಿಗೋಸ್ಕರ ಅರ್ಜುನ ನನ್ನೇ ಭಕ್ತನನ್ನಾಗಿ ಸ್ವೀಕರಿಸಿದನು.8

---

4. ಯಸ್ತು ಹಸ್ತತಲೇನೈವ ತಥಾ ಪಾದತಲೇನಚ ।
ಮುಷ್ಟಿನಾ ಚಾಸುರಮದಚ್ಛೇತ್ತಾ ತಂ ಕೋಽಸುರಃ ಸ್ಪೃಶೇತ್ ।
–[ಸ.ಭಾ.ವಿ. 6-6]

5. ಪ್ರಮಾಣಗಣಬಾಣೌಘೈರಾಸೇತೋರಾಹಿಮಾಚಲಾತ್ ।
ವ್ಯದ್ರಾವಯತ್ ಖಲಾನ್ ಕ್ಷುದ್ರಸಿದ್ಧಾಂತಸ್ಯ ಪ್ರವರ್ತಕಾನ್ ।
ತಸ್ಯ ಮಧ್ವಮುನೇಃ ಶುದ್ಧಾಂ ಬುದ್ಧಿಂ ಕೋ ವಾಽಸುರೋ ವಿಶೇತ್ ॥

6. ಮಾನುಷಾನ್ನೋಪಭೋಗೇಽಪಿ ಸೂನುನಾ ಯಸ್ಯ ಧೀಮತಾಮ್ ।
ಹೀನತಾ ಮಾನಸೇ ನಾಸ್ತಿ ತಸ್ಯ ವಾಯೋಃ ಕುತೋಽಸ್ತಿ ಸಾ । –[6-11]

7. ಬುದ್ಧಿಸ್ತಸ್ಯ ಪರೇ ತತ್ವೇ ಶುದ್ಧಾಽಭೂತ್ತದ್ಧನೂಮತಃ ।
ಶುದ್ಧಸ್ಯ ಭೀಮಸೇನಸ್ಯ ಮಧ್ವಸ್ಯ ಚ ಮಹಾತ್ಮನಃ । –[6-12]

8. ಯತೋ ರಾಮಾಕೃತೌ ಭಕ್ತಮಪಿ ತ್ಯಕ್ತ್ವಾ ರವೇಃ ಸುತಮ್ ।
ಭೀಮಾರ್ಥಂ ಪಾರ್ಥಮೇವಾಂಗೀಚಕ್ರೇ ಚಕ್ರಧರಃ ಪ್ರಭುಃ ॥ –[6-14]

೯. ಭೀಮಸೇನನಾದರೂ ಶ್ರೀಕೃಷ್ಣನ ಪ್ರೀತಿಗಾಗಿಯೇ ಅರ್ಜುನನನ್ನು ಮೂರುಲೋಕ ಗಳಲ್ಲಿಯೂ ಪ್ರಸಿದ್ಧನನ್ನಾಗಿ ಮಾಡಬೇಕೆಂದು ಬಯಸಿ, ರಾಮಾವತಾರದಲ್ಲಿ ತನ್ನ ಮಿತ್ರನಾಗಿದ್ದರೂ ಸೂರ್ಯಪುತ್ರನಾಗಿದ್ದ ಕರ್ಣನನ್ನು ತ್ಯಜಿಸಿದನು.9

೧೦. ದುರ್ಯೋಧನ ಭೀಮಸೇನನಿಗಿಂತ ಹಿರಿಯನಾದ ಅಣ್ಣ. ಆದರೂ ಅಲಕ್ಷ್ಮಿಯ ಪತಿ. ಕಲಿಸ್ವರೂಪಿಯಾಗಿದ್ದು ಶ್ರೀಕೃಷ್ಣನನ್ನು ದೂಷಿಸುವವನಾಗಿದ್ದನೆಂದು ಭೀಮಸೇನ ಬಾಲ್ಯದಿಂದಲೂ ಅವನನ್ನು ಪೀಡಿಸುತ್ತಿದ್ದನು.10

೧೧. ಭೀಮಸೇನ ಬಲರಾಮನಿಂದ ಗದಾಯುದ್ಧದ ಅಭ್ಯಾಸ ಮಾಡುತ್ತಿದ್ದಾಗ, ಶೇಷಾವ ತಾರಿ ಬಲರಾಮ ಯೋಗ್ಯತೆಯಲ್ಲಿ ತನಗಿಂತ ಕೆಳಗಿನವನೆಂಬ ದೃಷ್ಟಿಯಿಂದ ಶ್ರೀಕೃಷ್ಣ ನನ್ನೇ ತನ್ನ ಗುರುವೆಂದು ಭಾವಿಸಿ ಕ್ಷಣಕ್ಷಣಕ್ಕೆ ನಮಿಸುತ್ತಿದ್ದನು.11

೧೨. ಕಪಟ ಪಗಡೆಯಾಟದಲ್ಲಿ ಕೌರವರು ಪಾಂಡವರನ್ನು ಸೋಲಿಸಿ ದ್ರೌಪದಿ ತಮ್ಮ ದಾಸಿಯಾದಳೆಂದು ಅವಳನ್ನು ಸಭೆಗೆ ಎಳೆದು ತಂದು ಅವಮಾನ ಮಾಡಿದಾಗಲೂ ಭೀಮ ಆಗಲೇ ದುರ್ಯೋಧನಾದಿಗಳನ್ನು ಕೊಲ್ಲಲಿಲ್ಲ. ಯಾಕೆಂದರೆ ಪಾಂಡವರು ಧರ್ಮಮಾರ್ಗವನ್ನು ಮೀರದೆ ಇದ್ದು ಕೌರವರ ದುಷ್ಟತನವನ್ನು ಲೋಕದಲ್ಲಿ ಪ್ರಕಟ ಗೊಳಿಸಿ, ಅವರ ಪಾಪದ ಕೊಡ ಪೂರ್ಣವಾಗಿ ತುಂಬಿದ ಮೇಲೆಯೇ ಅವರನ್ನು ಸದೆಬಡಿಯುವಂತಾಗಬೇಕೆಂದು ಶ್ರೀಕೃಷ್ಣ ಸಂಕಲ್ಪಿಸಿದ್ದನು. ಈ ಬಗೆಯ ಶ್ರೀಕೃಷ್ಣನ ಸಂಕಲ್ಪವನ್ನು ಅರಿತಿದ್ದ ಭೀಮ ಆ ಸಂಕಲ್ಪಕ್ಕೆ ಮನ್ನಣೆ ನೀಡಿ ಹಾಗೆ ನಡೆದು ಕೊಂಡನು. ತನ್ನ ಪತ್ನಿಯಾದ ದ್ರೌಪದೀದೇವಿಯನ್ನು ಜಡೆಯಲ್ಲಿ ಹಿಡಿದು ಎಳೆದು ತಂದು ಸಭಾಮಧ್ಯದಲ್ಲಿ ಅವಳಿಗೆ ಅವಮಾನ ಮಾಡಿದಾಗಲೂ ಭೀಮ ಆ ದ್ರೋಹಿಗಳನ್ನು ದಂಡಿಸದೆ, ಅವರ ಅವಮಾನರೂಪವಾದ ಅಪರಾಧವನ್ನು ಸಹಿಸಿ ಕೊಂಡನು. ಯಾಕೆಂದರೆ ಆಗಲೇ ದುರ್ಯೋಧನಾದಿಗಳನ್ನು ಶಿಕ್ಷಿಸದೆ ಅವರಿಂದ ಪೂರ್ಣಪ್ರಮಾಣದ ಅಪರಾಧ ಎಸಗಲ್ಪಟ್ಟ ಬಳಿಕವೇ ಅವರ ದಂಡನೆ ನಡೆಯು ವಂತಾಗಬೇಕೆಂದು ಶ್ರೀಕೃಷ್ಣನ ಸಂಕಲ್ಪವಾಗಿದ್ದು, ಅವನ ಮೇಲಿನ ಭಕ್ತಿಯಿಂದ ಭೀಮಸೇನ ಅದಕ್ಕೆ ಮಾನ್ಯತೆ ನೀಡಿ ಆಗ ಸುಮ್ಮನಿದ್ದನು. ಅಷ್ಟು ಸಮರ್ಥ ನಾಗಿದ್ದರೂ ಭೀಮಸೇನ ತನ್ನ ಪತ್ನಿಯನ್ನು ಅವಮಾನಿಸಿದ ದುರ್ಯೋಧನಾದಿಗಳಿಗೆ ಆಗಲೇ ತಕ್ಕ ಶಾಸ್ತಿ ಮಾಡದಿದ್ದದ್ದು ತುಂಬ ತುಂಬ ಆಶ್ಚರ್ಯಕರವಾದುದು! ಲೌಕಿಕ ದೃಷ್ಟಿಯಿಂದ ಭೀಮಸೇನ ಬಹಳ ಹೀನಾಯಸ್ಥಿತಿಯಲ್ಲಿದ್ದರೂ ಶ್ರೀಕೃಷ್ಣನ ಸಂಕಲ್ಪ

---

9. ಭೀಮೋಽಪಿ ಕೃಷ್ಣಪ್ರೀತ್ಯರ್ಥಂ ಪಾರ್ಥಂ ತ್ರೈಲೋಕ್ಯವಿಶ್ರುತಮ್ ।
ಕರ್ತುಂ ಮಾರ್ತಾಂಡತನಯಂ ಪ್ರಾಜ್ಮಿತ್ರಮಪಿ ತತ್ಯಜೇ ॥ – [6-15]

10. ಕಿಂ ಚ ಜ್ಯೇಷ್ಠಮಪಿ ಜ್ಯೇಷ್ಠಾಪತಿಂ ಕಲ್ಯಾತ್ಮಕಂ ನೃಪಮ್ ।
ಕೃಷ್ಣದೂಷಕಮಾಬಾಲ್ಯಾದ್ ಬಬಾಧೇ ವಿಬುಧಪ್ರಿಯಃ ॥ – [6-16]

11. ರಾಮಾದ್ ಗದಾಭ್ಯಾಸಕಾಲೇ ಯಃ ಕೃಷ್ಣಂ ವೃಷ್ಣಿವಲ್ಲಭಮ್ ।
ಕ್ಷಣೇ ಕ್ಷಣೇ ಪ್ರಣಮತಿ ಮನುತೇ ಚ ಹರಿಂ ಗುರುಮ್ ॥ – [6-17]

ವನ್ನು ಮೀರುವ ಮೂಲಕ ಅವನಿಗೆ ಅಪ್ರಿಯವಾಗಿ ನಡೆದುಕೊಳ್ಳದೆ ಇದ್ದುದರಿಂದ ಅವನು ಶ್ರೀಕೃಷ್ಣನ ವಿಷಯದಲ್ಲಿ ಯಾವುದೇ ದೇಶಕಾಲಗಳಲ್ಲಿ ಶುದ್ಧಬುದ್ಧಿವುಳ್ಳವನಾಗಿದ್ದನೆಂಬುದು ಸಿದ್ಧವಾಗಬಲ್ಲದು.[12]

೧೩. ಅರ್ಜುನ ಶ್ರೀಕೃಷ್ಣನ ಭಕ್ತ. ಅವನಿಗೆ ಕೀರ್ತಿ ಬರುವಂತೆ ಮಾಡಿದರೆ ಶ್ರೀಕೃಷ್ಣ ಪ್ರೀತನಾಗುವನು. ಈ ಉದ್ದೇಶದಿಂದಲೇ ಭೀಮಸೇನ ದ್ರೌಪದಿಯ ಸ್ವಯಂವರದಲ್ಲಿ ತಾನೇ ಬಿಲ್ಲನ್ನು ಎತ್ತಿ ಲಕ್ಷ್ಯವನ್ನು ಭೇದಿಸಲು ಸಮರ್ಥನಾಗಿದ್ದರೂ ತಾನು ಆ ಬಿಲ್ಲನ್ನು ಎತ್ತಲು ಹೋಗಲಿಲ್ಲ.[13]

೧೪. 'ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ.....' ಎಂದಿರುವಂತೆ ಶ್ರೀಕೃಷ್ಣ ಮುಖ್ಯವಾಗಿ ಯಜ್ಞದ ಫಲವನ್ನು ಸ್ವೀಕರಿಸುವವನು. ಭೀಮಸೇನ ಇಂದ್ರಪ್ರಸ್ಥದಲ್ಲಿ ಯುಧಿಷ್ಠಿರನ ಯಾಜಮಾನ್ಯದಲ್ಲಿ ನಡೆದ ರಾಜಸೂಯಯಾಗವನ್ನು ಶ್ರೀಕೃಷ್ಣನಿಗೆ ಅರ್ಪಿಸಿದನು. ಇಂತಹ ಭೀಮಸೇನ ಕೃಷ್ಣನಿಗೆ ಪ್ರಿಯವನ್ನೇ ಮಾಡುವವನು ತಾನೇ?[14]

೧೫. ಜರಾಸಂಧ ಗಂಗೆ ವಿಷ್ಣುಪಾದೋದಕ ಎಂಬ ದೃಷ್ಟಿಯಿಂದ ಅದರಲ್ಲಿ ಸ್ನಾನಮಾಡಲು ಹಿಂಜರಿಯುತ್ತಿದ್ದನು. ಅಂತಹ ಜರಾಸಂಧನನ್ನು ಭೀಮಸೇನ ಬಲಾತ್ಕಾರವಾಗಿ ಗಂಗೆಯ ನೀರಿನಲ್ಲಿ ಮುಳುಗಿಸಿದನು.[15]

೧೬. ಜರಾಸಂಧ ಅನೇಕ ರಾಜರನ್ನು ರುದ್ರಯಜ್ಞದಲ್ಲಿ ಆಹುತಿಯಾಗಿ ಕೊಡಬೇಕೆಂದು ಬಯಸುತ್ತಿದ್ದ. ವಿಷ್ಣುಭಕ್ತರಾಗಿದ್ದ ಅಂತಹವರ ಸಂತೋಷಕ್ಕಾಗಿಯೇ ಭೀಮಸೇನ ಜರಾಸಂಧನನ್ನು ಮುಷ್ಟಿಗಳಿಂದ ಪುಡಿಗೈದ.[16]

---

12. ಕೃಷ್ಣಸಂಕಲ್ಪಸಿದ್ಧ್ಯರ್ಥಂ ಕೃಷ್ಣಾಯೈ ದ್ರೋಹಕಾರಿಣಃ ।
ನ ಜಘಾನಾಕ್ಷಕಿತವಾನ್ ಮತಂ ಜ್ಞಾನನ್ ರಮಾಪತೇಃ ॥
ಇದಂ ತು ಮಹದಾಶ್ಚರ್ಯಂ ಸಭಾಮಧ್ಯೇ ವೃಕೋದರಃ ।
ಸ್ವಭಾರ್ಯಾಯೈ ದ್ರುಹ್ಯತೋಽಪಿ ಸೇಹೇ ಸ್ನೇಹೇನ ಕೇಶವೇ ॥
ಸಸೈನ್ಯಸ್ಯ ಕುರುಕ್ಷೇತ್ರೇ ವಧೋ ಭೂಭಾರಹಾರಿಣಃ ।
ಯತೋ ಮತೋ ಹರೇಃ ತಸ್ಮಾದಿದಾನೀಮಭವತ್ ಕ್ಷಮಾ ॥
ಈದೃಶ್ಯಾಮಪ್ಯವಸ್ಥಾಯಾಂ ಯೋಽಪ್ರಿಯಂ ನಾಕರೋದ್ಧರೌ ।
ಸ ತಸ್ಮಿಂಚ್ಛುದ್ಧಧೀಃ ಸಿದ್ಧೋ ಭೀಮಃ ಸರ್ವತ್ರ ಸರ್ವದಾ ॥ – *[6-18, 19, 20, 21]*

13. ಕೃಷ್ಣಭಕ್ತಸ್ಯ ಪಾರ್ಥಸ್ಯ ಕೀರ್ತ್ಯರ್ಥಂ ದ್ರುಪದಾಲಯೇ ।
ಶಕ್ತೋಽಪಿ ತದ್ಧನುರ್ಧರ್ತುಂ ನೋದತಿಷ್ಠದ್ ವೃಕೋದರಃ । – *[6-24]*

14. ಕ್ರತುನಾ ರಾಜಸೂಯೇನ ಕ್ರತೋರ್ಭೋಕ್ತಾರಮಚ್ಯುತಮ್ ।
ಅತರ್ಪಯದ್ಧಿ ಯೋ ಭೀಮಃ ಸ ತಸ್ಯ ಪ್ರಿಯಕೃನ್ನ ಕಿಮ್ । – *[6-32]*

15. ವಿಷ್ಣುಪಾದೋದಕಂ ಮತ್ವಾ ಯಃ ಸ್ನಾತುಂ ಶಂಕತೇ ಕುಧೀಃ ।
ಅಮಜ್ಜಯಜ್ಜರಾಸಂಧಂ ಬಲಾತ್ತಂ ಜಾಹ್ನವೀಜಲೇ । – *[6-27]*

16. ದ್ರಷ್ಟುಕಾಮಾನ್ ಕೃಷ್ಣಪಾದೌ ಯಷ್ಟುಕಾಮಂ ಶಿವಾಧ್ವರೇ ।
ತುಷ್ಟಯೇ ವೈಷ್ಣವಾನಾಂ ಯೋ ದುಷ್ಟಂ ಮುಷ್ಟಿಭಿರಾರ್ದಯತ್ । – *[6-29]*

೧೭. ಭೀಮಸೇನ ಮಹಾಭಾರತ ಯುದ್ಧದಲ್ಲಾಗಲೀ, ಬೇರೆ ಯುದ್ಧಗಳಲ್ಲಾಗಲೀ ಒಬ್ಬ ವಿಷ್ಣುಭಕ್ತನನ್ನೂ ಸಂಹರಿಸಲಿಲ್ಲ; ಹಾಗೆಯೇ ಒಬ್ಬ ವಿಷ್ಣುದ್ವೇಷಿಯನ್ನೂ ಉಳಿಸಲಿಲ್ಲ. ಇದರಿಂದ ಅವನಿಗೆ ಶ್ರೀಕೃಷ್ಣನ ಮೇಲಿದ್ದ ಭಕ್ತಿ ಸ್ಪಷ್ಟವಾಗುವುದು.17

೧೮. ಆದ್ದರಿಂದ ಶ್ರೀಕೃಷ್ಣನ ಸಂಕಲ್ಪವನ್ನು ಬಲ್ಲವನು ಭೀಮಸೇನನೆಂಬುದು ನಿಶ್ಚಿತ. ಹಾಗೆಯೇ ಭೀಮಸೇನನ ಹಿತಕಾರಿ ಶ್ರೀಕೃಷ್ಣ –ಎಂಬುದೂ ಅಷ್ಟೇ ನಿಶ್ಚಿತ.18

೧೯. ಶ್ರೀಕೃಷ್ಣ ಭೀಮಸೇನನಿಗೆ ತನ್ನ ಬಗೆಗಿರುವ ಅಚಂಚಲವಾದ ಭಕ್ತಿಯನ್ನು ಕಂಡೇ ದ್ರೌಪದಿಗೆ ಸಭಾಮಧ್ಯದಲ್ಲಿ ಅಕ್ಷಯಾಂಬರವನ್ನು ನೀಡಿದನು.19

೨೦. ಹೀಗೆ ಭೀಮಸೇನ ಮತ್ತು ಶ್ರೀಕೃಷ್ಣರು ಅನ್ಯೋನ್ಯವಾಗಿ ಭಕ್ತಿ, ವಾತ್ಸಲ್ಯ ಉಳ್ಳವರು. ಶುದ್ಧರಾಗಿರುವವರು. ಇಂತಹವರಲ್ಲಿ ಪರಸ್ಪರವಾಗಿ ವೈಮನಸ್ಯವನ್ನುಂಟುಮಾಡಲು ಯಾವ ದೇವತೆಯಾಗಲೀ ದಾನವನಾಗಲೀ ಸಮರ್ಥನಾಗಲಾರ.20

ಹೀಗೆ ಭೀಮಸೇನ ಪರತತ್ತ್ವ ಎನಿಸಿರುವ ದೇವರ ಬಗ್ಗೆ ಶುದ್ಧವಾದ ಬುದ್ಧಿವುಳ್ಳವನಾಗಿ ಶುದ್ಧನೆನಿಸಿರುವನು.21

೨೧. ವಾಯುದೇವರೇ ಮಧ್ವಗುರುಗಳೆಂದು ಬಳಿತ್ಥಾಸೂಕ್ತದಲ್ಲಿ ಸ್ಪಷ್ಟವಾಗಿ ಕೇಳಿ ಬರುವುದು. ಈ ವೇದವಾಕ್ಯಗಳಿಂದ ಶ್ರೀ ಮಧ್ವರು ವಾಯುದೇವರ ಅವತಾರ ಎಂಬುದು ದೃಢವಾಗುವುದು. ಹೀಗೆ ಮಧ್ವರನ್ನು ವಾಯುದೇವರ ಅವತಾರ ಎಂದು ಹೊಗಳುವ ಶ್ರುತಿಯಿಂದಲೇ ವಾಯುದೇವನ ಬುದ್ಧಿಶುದ್ಧಿಯೂ ತಿಳಿಸಲ್ಪಟ್ಟಂತಾಗಿ, ಅದರಿಂದ ಅವರ 'ಶುಕ್ಲತ್ವ' ಋಗ್ವೇದದಿಂದಲೂ ಸಿದ್ಧವಾದಂತಾಗುವುದು.22

೨೨. ಶ್ರೀವಾಯುದೇವನ ಅವತಾರರಾದ ಶ್ರೀ ಮಧ್ವರು ಬೇರೆಬೇರೆ ಬಗೆಯಲ್ಲಿ ಹರಿಯನ್ನು ಸೇವಿಸಬೇಕೆಂದು ಉತ್ಕಂಠಿತರಾಗಿದ್ದರು. ಅವರ ಮೇಲಿನ ಆದರದಿಂದ ಶ್ರೀಕೃಷ್ಣನು ಅವರನ್ನು ಕಾಣುವ ಬಯಕೆಯಿಂದ ಅವರಿಗೆ ಆಯಾಸ ಆಗದಿರಲೆಂದು ತಾನೇ ದ್ವಾರಾವತಿಯಿಂದ ಉಡುಪಿಗೆ ಬಂದಿರುವನೆಂಬುದು ಎಲ್ಲರಿಗೂ ಸಮ್ಮತವಾದ ವಿಚಾರ. ಇದರಿಂದಾಗಿ ಶ್ರೀ ಮಧ್ವರು ಶ್ರೀಹರಿಯ 'ಅಚ್ಛಿನ್ನಭಕ್ತರು' –ಏಕಾಂತ

---

17. ಪಶ್ಯ ಶ್ರೀಭೀಮಸೇನಸ್ಯ ಕೃಷ್ಣೇ ಭಕ್ತಿಮಚಂಚಲಾಮ್ ।
ನಾವಧೀದ್ ವೈಷ್ಣವಂ ಯೋಽಸೌ ನಾವಶೇಷಯದವೈಷ್ಣವಮ್ । –[6-29]

18. ಅತಃ ಕೃಷ್ಣಮನಾಭಿಜ್ಞೋ ಭೀಮ ಏವ ನ ಸಂಶಯಃ ।
ಭೀಮಸ್ಯ ಹಿತಕಾರೀ ಚ ಕೃಷ್ಣ ಏವ ನ ಸಂಶಯಃ । –[6-25]

19. ಹರಿಶ್ಚ ಭೀಮಸೇನಸ್ಯ ದೃಷ್ಟ್ವಾ ಭಕ್ತಿಮಚಂಚಲಾಮ್ ।
ಅಕಾರ್ಷೀತ್ ತಸ್ಯ ಮಹಿಷೀಂ ದ್ರೌಪದೀಮಕ್ಷಯಾಂಬರಾಮ್ । –[6-22]

20. ಅನ್ಯೋನ್ಯಸ್ನಿಗ್ಧಯೋರೇವಂ ಶುದ್ಧಯೋಃ ಕೃಷ್ಣಭೀಮಯೋಃ ।
ಕೋಽನ್ಯಥಾ ಕುರುತೇ ಚಿತ್ತಂ ದೇವೋ ವಾ ದಾನವೋಽಪಿ ವಾ । –[6-23]

21. ತಸ್ಮಾದ್ ಭೀಮಃ ಪರೇ ತತ್ತ್ವೇ ಶುದ್ಧೋಽಭೂದ್ ಬುದ್ಧಿಶುದ್ಧಿಮಾನ್ । –[6-33]

ಭಕ್ತರೆಂಬುದು ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾದಂತಾಗುವುದು. ಈ ರೀತಿಯಾಗಿ ಅಚ್ಛಿನ್ನಭಕ್ತರಾಗಿದ್ದಿರಬೇಕಾದರೆ ಅವರ ಬುದ್ಧಿಯೂ ಶುದ್ಧವಾಗಿದ್ದಿರಲೇಬೇಕೆಂಬುದೂ ಸಿದ್ಧವಾಗುವುದು.[23]

೨೩. ಶ್ರೀ ಮಧ್ವರು ಪ್ರತಿಯೊಂದು ಬ್ರಹ್ಮಸೂತ್ರದಲ್ಲೂ ಶ್ರೀಹರಿಯ ಬೇರೆಬೇರೆ ಗುಣಗಳನ್ನು ಪ್ರಸ್ತಾವಿಸಿ ಅವನ ಸರ್ವೋತ್ತಮತ್ವವನ್ನು ಸಾಧಿಸಿರುವರು. ಇದನ್ನು ವಿಚಾರ ಮಾಡಿದಲ್ಲಿ ಅಧ್ಯಾತ್ಮವಿದ್ಯೆಯಲ್ಲಿ ಅವರು ತೋರಿದ ಮಾರ್ಗವೇ ಶುದ್ಧವಾದುದೆಂದು ಸಿದ್ಧವಾಗುವುದು.[24]

೨೪. ಶ್ರೀ ಮಧ್ವರು ತಾವು ಪ್ರತಿಪಾದಿಸಿದ ಪ್ರಮೇಯದ ದಾರ್ಢ್ಯಕ್ಕಾಗಿ ಶ್ರುತಿ, ಸ್ಮೃತಿ, ಇತಿಹಾಸಾದಿಗಳಿಂದ ವಿಮರ್ಶೆ ನಡೆಸಿರುವರು. ಆದುದರಿಂದ ಅವರು ಪ್ರಸ್ತುತಪಡಿಸಿದ್ದೇ ಸಚ್ಛಾಸ್ತ್ರ. ಅದಕ್ಕಿಂತ ಬೇರೆಯಾದುದು ಅಸಚ್ಛಾಸ್ತ್ರ.

ಹೀಗೆ ಸಚ್ಛಾಸ್ತ್ರವನ್ನು ಪ್ರಚುರಪಡಿಸಿದ ಜಗದ್ಗುರುಗಳಾದ ಶ್ರೀ ಮಧ್ವರು ಪರತತ್ತ್ವನಾದ ಶ್ರೀಹರಿಯಲ್ಲಿ ಶುದ್ಧ ಬುದ್ಧಿವುಳ್ಳವರೆಂಬುದು ಚೆನ್ನಾಗಿ ಸಿದ್ಧವಾಗುವುದು.[25]

೨೫. ಶಾಸ್ತ್ರೀಯಗ್ರಂಥದ ಅಧ್ಯಯನದ ಪ್ರಾರಂಭದಲ್ಲಿ ಎಲ್ಲರೂ ಶಾಂತಿಮಂತ್ರವನ್ನು ಪಠಿಸುವರು. 'ಶನ್ನೋ ಮಿತ್ರಃ....' ಇತ್ಯಾದಿಯಾಗಿ ಪ್ರಾರಂಭವಾಗುವ ಆ ಶಾಂತಿ ಮಂತ್ರದಲ್ಲಿ 'ಶನ್ನೋ ವಿಷ್ಣುರುರುಕ್ರಮಃ' –ಎಂದು ಮಿತ್ರಾದಿಗಳಿಗಿಂತ ಕೊನೆಯಲ್ಲಿ

---

22. ಯೋ ಮಧ್ವೋ ಮಾತರಿಶ್ವೇತಿ ವಿಸ್ಪಷ್ಟಂ ಶ್ರೂಯತೇ ಶ್ರುತೌ....
.....ಮರುದಾತ್ಮಕತಾಪ್ಯಸ್ಯ ತತ ಏವ ಸ್ಥಿರಾಭವತ್ ।
ಏವಂ ಗೃಣಂತೀ ಶ್ರೀಮಧ್ವಂ ಶ್ರುತಿರೇಷಾ ಗುರೋರ್ಮಮ ।
ಬುದ್ಧಿಶುದ್ಧಿಮಭಿಪ್ರೈತಿ ತಸ್ಮಾದ್ ವಾಯೋಸ್ತು ಶುಕ್ಲತಾ ।
-ಋಗ್ವೇದಸಂಹಿತಾವಾಕ್ಯಾದಪಿ ಸಿದ್ಧಾ ಮಹಾತ್ಮನಃ । *– [7-13, 16, 17]*

23. ಮರುದ್ರೂಪೇ ಗುರೌ ಪ್ರೇಮ್ಣಾ ಹರಿರ್ದ್ವಾರವತೀಪುರಾತ್ ।
ನಾನಾಸೇವಾತುರಂ ದ್ರಷ್ಟುಕಾಮೋ ದಾಮೋದರಃಪ್ರಭುಃ ।
ಆಯಾದಾಯಾಸಹೃತ್ ಸ್ವಾನಾಮಿತಿ ಸರ್ವಸ್ಯ ಸಂಮತಮ್ ।
ಏವಂ ಚಾಚ್ಛಿನ್ನಭಕ್ತತ್ವಂ ತತ್ಜ್ಞಂ ಪ್ರತ್ಯಕ್ಷಮಾನತಃ ।
ಸಿದ್ಧಮಾಸೀದ್ ಬುದ್ಧಿಶುದ್ಧಿರಪಿ ಸಿದ್ಧಾ ಗುರೋರ್ಮಮ । *– [7-18, 19, 20]*

24. ಅತೋ ಮಧ್ವಮುನೇರಧ್ವಾ ಶುದ್ಧೋಽಭೂಚ್ಚ ವಿಚಾರಣೇ....
ಯಸ್ಮಾದಸ್ಮಾಕಗುರುಣಾ ಸೂತ್ರೇಸೂತ್ರೇ ಹರೇರ್ಗುಣಾನ್ ।
ಪ್ರಸ್ತೂಯ ಸರ್ವೋತ್ತಮತಾ ಹರೇರೇವ ಪ್ರಸಾಧಿತಾ । *– [7-30]*

25. ಏತದುಕ್ತಾರ್ಥದಾರ್ಢ್ಯಾರ್ಥಮೇವಂ ಶ್ರುತ್ಯಾದಿಚರ್ಚಿತಮ್ ।
ಏವಂ ಚ ಪ್ರಾಣರೂಪೇಣ ಗುರುಣಾ ಕರುಣಾವತಾ ।
ಯದುಕ್ತಂ ತದ್ಧಿ ಸಚ್ಛಾಸ್ತ್ರಮಸಚ್ಛಾಸ್ತ್ರಂ ತತಃ ಪರಮ್ ।
ತತಃ ಪರೇ ಬುದ್ಧಿಶುದ್ಧಿಃ ಕಿಂ ವಾಚ್ಯಾಸ್ಯ ಜಗದ್ಗುರೋಃ । *– [7-38, 39]*

ಹೇಳಲ್ಪಟ್ಟ ಸರ್ವೋತ್ತಮನಾದ ಶ್ರೀವಿಷ್ಣುವನ್ನು, 'ಅಥಾತೋ ಬ್ರಹ್ಮಜಿಜ್ಞಾಸಾ' –ಎಂಬ ಮೊದಲ ಬ್ರಹ್ಮಸೂತ್ರದಲ್ಲಿ ಜಿಜ್ಞಾಸಾವಿಷಯನಾಗಿ ಯಾವ ನಾಮದಿಂದ ಉಲ್ಲೇಖಿಸಲ್ಪಟ್ಟಿರುವನೋ ಅದೇ ಬ್ರಹ್ಮನಾಮದಿಂದ ಅವನನ್ನು ನಮೂದಿಸಿ, 'ನಮೋ ಬ್ರಹ್ಮಣೇ' –ಎಂದು ಪುನಃ ನಮಸ್ಕರಿಸಿ ಮತ್ತೆ ಅವನ ಪ್ರಿಯಕಿಂಕರನಾದ ಪ್ರಾಣದೇವನನ್ನು ಪ್ರತಿನಿತ್ಯ ಗ್ರಂಥದ ಆರಂಭದಲ್ಲಿ ನಮಸ್ಕರಿಸುವುದಕ್ಕಾಗಿ 'ನಮಸ್ತೇ ವಾಯೋ' ಎಂದು ಸಂಬೋಧಿಸಿ ನಮಸ್ಕರಿಸಲಾಗಿದೆ. ವ+ಆಯು ಸೇರಿ ವಾಯು ಎಂದು ನಿಷ್ಪನ್ನವಾಗುವುದು. ವಕಾರವು ಬಲವನ್ನು ಸೂಚಿಸಿದರೆ, ಅಯು ಶಬ್ದಜ್ಞಾನ ವನ್ನು ಸೂಚಿಸುವುದು. ವಾಯು ಶಬ್ದದ ಕೊನೆಯಲ್ಲಿರುವ ಉ ಪ್ರತ್ಯಯ ಸ್ವಭಾವ ವನ್ನು ತಿಳಿಸುವುದು. ಆದುದರಿಂದ ವಾಯು ಎಂಬ ನಾಮ ಬಲ ಮತ್ತು ಜ್ಞಾನಗಳೇ ಸ್ವಭಾವವಾಗಿ ಉಳ್ಳವನೆಂದು ತಿಳಿಸುವುದು. ಹೀಗೆ ವಾಯು ಎನಿಸುವ ಮುಖ್ಯ ಪ್ರಾಣ ಅಧ್ಯಯನಾದಿಗಳಿಗೆ ತೊಂದರೆ ಮಾಡತಕ್ಕ ಆಸುರೀಶಕ್ತಿಗಳ ದಮನಕ್ಕೂ ಅಧ್ಯಯನಕ್ಕೆ ಬೇಕಾದ ಜ್ಞಾನದಾನ ಮಾಡುವುದಕ್ಕೂ ಸಮರ್ಥನೆಂದು ಅಂತಹವನ ಅನುಗ್ರಹಕ್ಕಾಗಿ ಅವನನ್ನು ನಮಸ್ಕರಿಸಲಾಗುವುದು.

ಶ್ರೀವಿಷ್ಣುವಿನ ಆರಾಧನೆಯಲ್ಲಿ ಮುಖ್ಯ ಪ್ರತಿಮೆ ವಾಯುದೇವ. ಬೇರೆ ಯಾವ ದೇವತೆಯೂ ಹೀಗೆ ಮುಖ್ಯ ಪ್ರತಿಮೆ ಎನಿಸಲಾರರು. ಇದನ್ನು ತೋರಿಸಿಕೊಡುವುದ ಕ್ಕಾಗಿಯೇ ಶಾಂತಿಪಾಠದಲ್ಲಿ 'ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ...' –ನೀನೇ ಪರಬ್ರಹ್ಮನ ಸಾಕ್ಷಾತ್ ಪ್ರತಿಮೆ ಆಗಿರುವಿ ಎಂದು ಪುನಃ ಪ್ರಶಂಸಿಸಲಾಗುವುದು.

ಆದುದರಿಂದ ವಾಯುದೇವ ಅತಿಶುದ್ಧನೆಂದೂ, ಶ್ರೀಹರಿಗೆ ಅತ್ಯಂತ ಪ್ರಿಯನಾದ ಕಿಂಕರನೆಂದೂ, ರುದ್ರಾದಿ ಉಳಿದೆಲ್ಲ ದೇವತೆಗಳಿಗಿಂತ ಉತ್ತಮನೆಂದೂ ವಿವೇಕಿಯಾದವನು ಒಪ್ಪಿಕೊಳ್ಳಲೇ ಬೇಕು ತಾನೆ?26

---

26. ಕಿಂ ಚ ಸರ್ವೈರಪಿ ಗ್ರಂಥಸ್ಯಾರಂಭೇ ಪಠ್ಯತೇ ತು ಯಾ
ಸಾ ಶಾಂತಿರಂತೇ ಪಠಿತಮುರುಕ್ರಮಪದೋದಿತಮ್ ।
ಸರ್ವೋತ್ತಮಂ ಪುನರ್ನಂತುಂ ಜಿಜ್ಞಾಸ್ಯಬ್ರಹ್ಮಸಂಜ್ಞಯಾ ।
ಸಮಾಹೂಯ ನಮಸ್ಕೃತ್ಯ ಪುನಸ್ತತ್ಪ್ರಿಯಕಿಂಕರಮ್ ॥
ಪ್ರಾಣಂ ಚ ತದ್ವದ್ ಗ್ರಂಥಾದೌ ನಮಸ್ಕರ್ತುಂ ದಿನೇ ದಿನೇ ।
ಬಲಜ್ಞಾನಸ್ವರೂಪತ್ವಾತ್ ಸರ್ವಾಸುರಮರ್ದನೇ ।
ಸಮರ್ಥಂ ವಾಯುದೇವಂ ಚ ಸಮಾಹೂಯ ನನಾಮ ಚ ।
ಯಸ್ಮಾದಯಿರ್ಜ್ಞಾನವಾಚೀ ವಶಬ್ದೋ ಬಲವಾಚಕಃ ।
ತದ್ ಬಲಜ್ಞಾನಶೀಲೋ ಯಃ ಸ ವಾಯುರಿತಿ ಕಥ್ಯತೇ ।
ಸದಾ ವಿಷ್ಣ್ವರ್ಚನೇ ಮುಖ್ಯಪ್ರತಿಮಾತ್ವಮನನ್ಯಗಮ್ ।
ತಸ್ಯೈವಾಸ್ತೀತಿ ಸರ್ವೇಷಾಂ ದರ್ಶಯಂತೀ ಪುನಃ ಶ್ರುತಿಃ ।
ಅಸಿ ತ್ವಮೇವ ಬ್ರಹ್ಮೇತಿ ತಮೇವ ಚ ಪ್ರಶಂಸತಿ ।
.....ಅತಃ ಶುದ್ಧತರೋ ವಾಯುಃ ಹರೇಶ್ಚ ಪ್ರಿಯಕಿಂಕರಃ ।
ಅನ್ಯದೇವೋತ್ತಮಶ್ಚೇತಿ ಕಿಂ ನ ವಾಚ್ಯಂ ವಿವೇಕಿನಾ । [ಸ.ಭಾ.ವಿ. 7-41....46,56]

೨೬. ಮುಖ್ಯಪ್ರಾಣರೂಪರಾದ ಶ್ರೀ ಮಧ್ವರು ವೇದಪ್ರತಿಪಾದ್ಯರಾಗಿರುವುದರಿಂದ ತಮ್ಮ ಗ್ರಂಥದಲ್ಲಿ 'ಪರಶುಕ್ಲತ್ರಯ'ದ ಪ್ರಮೇಯವನ್ನು ಪ್ರಸ್ತಾವಿಸಿ ನಿರ್ಣಯಿಸಿರುವರು. ಈ ನಿರ್ಣಯದ ಹಿನ್ನೆಲೆಯಲ್ಲಿ ಯೋಚಿಸಿದಾಗಲೂ 'ಪರಶುಕ್ಲ' –ಪರತತ್ವನಾದ ಶ್ರೀಹರಿಯಲ್ಲಿ ಶುದ್ಧರು, ಅನ್ಯಥಾಜ್ಞಾನರಹಿತರು–ಎಂದು ಪರಿಗಣಿತರಾದವರು ಲಕ್ಷ್ಮೀದೇವಿ, ಬ್ರಹ್ಮಾ ವಾಯು ಹಾಗೂ ಸರಸ್ವತೀ ಭಾರತೀ –ಎಂಬ ಈ ಮೂರು ಗುಂಪು ಹೊರತು ಈ ಗುಂಪಲ್ಲಿ ಬೇರೆ ಯಾರೂ ಸೇರಿರಲಾರರು.26

'ಪರಶುಕ್ಲತ್ರಯ'ರನ್ನು ಸಾರುತ್ತಿರುವ ಮಹಾಭಾರತತಾತ್ಪರ್ಯನಿರ್ಣಯದ [18-28] ಶ್ಲೋಕ ಹೀಗಿದೆ–

**ತಸ್ಮಾದೇಕೋ ವಾಯುರೇವ ಧರ್ಮೇ ಭಾಗವತೇ ಸ್ಥಿತಃ ।**
**ಲಕ್ಷ್ಮೀಃ ಸರಸ್ವತೀ ಚೇತಿ ಪರಶುಕ್ಲತ್ರಯಂ ಸ್ಮೃತಮ್ ॥**

ವಾಯುಪದದಿಂದ ಚತುರ್ಮುಖನನ್ನೂ, ಸರಸ್ವತಿಪದದಿಂದ ಭಾರತಿಯನ್ನೂ ಇಟ್ಟುಕೊಳ್ಳಬೇಕು.

*

27. ಯತಶ್ಚ ಶ್ರುತಿಷೂಕ್ತೋऽಯಂ ಮರುದ್ರೂಪೋ ಗುರುರ್ವಮ ।
ಇದಂ ಪ್ರಮೇಯಂ ಸ್ವಗ್ರಂಥೇ ಪ್ರಸ್ತಾವ್ಯ ನಿರನೀನಯತ್ ।
ತತೋऽಪಿ ಪರಶುಕ್ಲಾಖ್ಯಮುಕ್ತತ್ರಿತಯಮೇವ ಹಿ ॥ – *[ಸ.ಭಾ.ವಿ. 7-36, 37]*

# ಶ್ರೀ ರಾಘವೇಂದ್ರಯತಿಗಳ

# • ವಾಯುಸ್ತುತಿ •

ಶ್ರೀ ರಾಘವೇಂದ್ರಸ್ವಾಮಿಗಳು 'ವಾಯುಸ್ತುತಿ' ಎಂಬ ಪ್ರತ್ಯೇಕ ಕೃತಿಯನ್ನು ರಚಿಸಿಲ್ಲವಾದರೂ, ಅವರ 'ಪ್ರಾತಃಸಂಕಲ್ಪಗದ್ಯ' ಹರಿವಾಯುಸ್ತುತಿ ಎಂದೇ ಕರೆಸಿಕೊಳ್ಳಬೇಕಾದಷ್ಟೂ ಶ್ರೀಹರಿಯ ಕುರಿತು ಹೇಗೋ ಹಾಗೆಯೇ ಶ್ರೀವಾಯುದೇವರ ಹಾಗೂ ಅವರ ಅವತಾರ ಶ್ರೀ ಮಧ್ವಗುರುಗಳ ಕುರಿತೂ ಬೆಳಕು ಚೆಲ್ಲುತ್ತಿದೆ. ಪ್ರಾತಃಸಂಕಲ್ಪಗದ್ಯದಲ್ಲಿ ಪ್ರಸ್ತುತಗಳಾಗಿರುವ ಸುಮಾರು ಎಂಭತ್ತು ವಿಶೇಷಣಗಳಲ್ಲಿ ನಲ್ವತ್ತಕ್ಕಿಂತಲೂ ಅಧಿಕವಿಶೇಷಣಗಳು ವಾಯುದೇವರ ಹಾಗೂ ಅವರ ಅವತಾರ ಶ್ರೀಮಧ್ವರ ಕುರಿತಾಗಿ ಇರುವವೆಂದರೆ ಪ್ರಾತಃಸಂಕಲ್ಪಗದ್ಯ ಎಷ್ಟರಮಟ್ಟಿಗೆ ವಾಯುಸ್ತುತಿಯಾಗಿದೆ ಎಂಬುದು ಸ್ಪಷ್ಟವಾಗಬಲ್ಲದು.



ಮಂತ್ರಾಲಯದ ವೃಂದಾವನದಲ್ಲಿ ಸನ್ನಿಹಿತರಾದ ಶ್ರೀ ರಾಘವೇಂದ್ರ ಗುರುಗಳು ತಮ್ಮ ಮಠದ ಮುಖ್ಯಪ್ರಾಣನ ಪ್ರತೀಕದ ಮಾಧ್ಯಮದಲ್ಲಿ ಪ್ರಾತಃಸಂಕಲ್ಪ ಗದ್ಯದಲ್ಲಿ ಪ್ರಸ್ತುತವಾಗಿರುವಂತೆ ಮುಖ್ಯಪ್ರಾಣನ ಚಿಂತನೆಯನ್ನು ನಡೆಸುತ್ತಿರುವುದು.

ಇವುಗಳಲ್ಲಿ ಮೊದಲು ಎರಡು ವಿಶೇಷಣಗಳು ಹಾಗೂ ಶ್ರೀರಾಮಚಂದ್ರನನ್ನು ಸಂಬೋಧಿಸಿದ ಮೇಲೆ ಉಲ್ಲೇಖಿಸಲ್ಪಟ್ಟ ಇಪ್ಪತ್ತಕ್ಕಿಂತಲೂ

---

ಸ್ವಗತ: 'ಸಮರ್ಪಣಾ' -ಎಂಬ ನನ್ನ ಕೃತಿಯಲ್ಲಿ ಶ್ರೀ ರಾಘವೇಂದ್ರಗುರುಗಳ 'ಪ್ರಾತಃಸಂಕಲ್ಪ ಗದ್ಯ'ವನ್ನು ಅನುವಾದ, ಲಘು ವಿವರಣೆ ಸಹಿತವಾಗಿ ಸೇರಿಸಿದ್ದು, ಅದರ ಮುನ್ನುಡಿಯಲ್ಲಿ 'ಪ್ರಾತಃಸಂಕಲ್ಪಗದ್ಯ'ವನ್ನು ಸಾಧಕರು ಆಲಂಕಾರಿಕವಾಗಿ ಪರಿಶೀಲಿಸದೆ ಭಾವುಕರಾಗಿ ಸವಿಯಬೇಕೆಂದು ಅಭಿಪ್ರಾಯಪಟ್ಟಿದ್ದೆ. ಆದರೆ ಅದರ ಮೂಲಭೂತವಾದ ಆಂತರ್ಯವನ್ನು ಗ್ರಹಿಸದೆ ಕೆಲವು ರಾಘವೇಂದ್ರಸ್ವಾಮಿಗಳ ಕಟ್ಟಾ ಅಭಿಮಾನಿಗಳೆಂದು ತಮ್ಮನ್ನು ಗುರುತಿಸಿಕೊಳ್ಳುವವರು ಆ ಬಗ್ಗೆ ಕೋಲಾಹಲ ಮಾಡಿ ನನ್ನ ಮುಖಭಂಗ ಮಾಡಲು ಯತ್ನಿಸಿದ್ದರು.

ಶ್ರೀ ರಾಘವೇಂದ್ರಗುರುಗಳಿಗೂ ನನ್ನ ಬಗ್ಗೆ ಈ ವಿಷಯದಲ್ಲಿ ಅಸಮಾಧಾನವಿದ್ದಿರಬಹುದೇನೋ ಎಂದು ಕೊರಗು ನನ್ನನ್ನು ಕಾಡುತ್ತಿತ್ತು. ಆದರೆ ಪ್ರಾಣದೇವರ ಬಗ್ಗೆ ಅವರ ವಿಚಾರಧಾರೆಯ ಆಧಾರದಲ್ಲಿಯೇ ಈ ಚಿಂತನೆಯನ್ನು ಬರೆಯಲು ನನ್ನನ್ನು ಪ್ರೇರಿಸಿದ್ದಾರೆಂದಮೇಲೆ ಶ್ರೀ ರಾಘವೇಂದ್ರಗುರುಗಳು ನನ್ನ ಬರವಣಿಗೆಯನ್ನ ಒಪ್ಪಿಕೊಂಡಿರುವರೆಂದು ಸಂತುಷ್ಟನಾಗಿರುವೆ.

ಅಧಿಕ ವಿಶೇಷಣಗಳು ವಾಯು ದೇವರ ಮೂಲಾವತಾರಕ್ಕೆ ಸಂಬಂಧಿಸಿದವುಗಳಾದರೆ, ಉಳಿದ ಇಪ್ಪತ್ತಕ್ಕಿಂತಲೂ ಅಧಿಕ ವಿಶೇಷಣಗಳು ವಾಯುದೇವರ ಮಧ್ವರೂಪಕ್ಕೆ ಸಂಬಂಧಿಸಿದವುಗಳು. ಮೂಲರೂಪಕ್ಕೆ ಸಂಬಂಧಿಸಿ ಮೊದಲ ಐದು ವಿಚಾರಗಳೂ ಕೊನೆಯ ಏಳು ವಿಚಾರಗಳೂ –ಹೀಗೆ ಒಟ್ಟು ಹದಿಮೂರು ವಿಚಾರಗಳು ಸಂಗ್ರಹಿಸಲ್ಪಟ್ಟಿದ್ದರೆ, ಉಳಿದ ಇಪ್ಪತ್ತೊಂದು ವಿಚಾರಗಳು ಶ್ರೀ ಮಧ್ವರೂಪಕ್ಕೆ ಸಂಬಂಧಿಸಿ ಸಂಗ್ರಹಿಸಲ್ಪಟ್ಟಿದೆ.

೧. 'ಓಂಕಾರೇಣ ಸರ್ವಾ ವಾಕ್ ಸಂತೃಣ್ಣಾ.....' ಪ್ರಣವದಲ್ಲಿ ಎಲ್ಲ ಮಾತುಗಳೂ ಸೇರಿಕೊಂಡಿವೆ ಎಂಬ ಛಾಂದೋಗ್ಯೋಪನಿಷತ್ತಿನ [2-2-17] ಸಂದೇಶದಂತೆ ಶ್ರೀ ಮಧ್ವರು ಪ್ರಣವದ ಉಪಾಸನೆ ನಡೆಸುವಾಗ ಪ್ರಣವವು ಹೇಗೆ ಸಕಲವರ್ಣಾತ್ಮಕ ಧ್ವನ್ಯಾತ್ಮಕ ಶಬ್ದಾರ್ಥವನ್ನು, ಋಗಾದಿಸಕಲವೇದಾರ್ಥವನ್ನು, ವಿಷ್ಣುಮಂತ್ರಾರ್ಥವನ್ನು, ಪುರುಷ ಸೂಕ್ತಾರ್ಥವನ್ನು, ಗಾಯತ್ರ್ಯರ್ಥವನ್ನು, ನಾರಾಯಣಾಷ್ಟಾಕ್ಷರ ಮಂತ್ರದ ಎಂಟು ಅಕ್ಷರಗಳಿಂದ ಅಭಿವ್ಯಕ್ತಗಳಾದ ಮೊದಲ ಎಂಟು ಅಕ್ಷರಗಳನ್ನೊಳಗೊಂಡ ವಾಸುದೇವದ್ವಾದಶಾಕ್ಷರಮಂತ್ರದ ಮೊದಲ ಎಂಟು ಅಕ್ಷರಗಳ ಅರ್ಥವನ್ನೊಳಗೊಂಡ ನಾರಾಯಣಾಷ್ಟಾಕ್ಷರಮಂತ್ರದ ಅರ್ಥವನ್ನು ವಾಸುದೇವದ್ವಾದಶಾಕ್ಷರಮಂತ್ರದ ಕೊನೆಯ ನಾಲ್ಕು ಅಕ್ಷರಗಳಿಂದ ಅಭಿವ್ಯಕ್ತಗಳಾದ ವ್ಯಾಹೃತಿಯ ಅರ್ಥವನ್ನು, ಅಕಾರಾದಿ ಐವತ್ತು ಅಕ್ಷರಗಳ ಅರ್ಥಗಳನ್ನು ಹೇಗೆ ಪ್ರತಿಪಾದಿಸುತ್ತ ಅವುಗಳಿಗೆಲ್ಲ ಹೇಗೆ ವ್ಯಾಖ್ಯೇಯ ಎನಿಸಿದೆ ಎಂಬುದರ ಅನುಸಂಧಾನ ನಡೆಸುವರೆಂದು ತಿಳಿಸುವ ಮೂಲಕ[29] ಶ್ರೀ ಮಧ್ವರು ನಡೆಸುವ ಪ್ರಣವೋಪಾಸನೆಯ ವೈಶಿಷ್ಟ್ಯದ ಒಂದು ಮುಖವನ್ನು ತೋರಿಸಿಕೊಟ್ಟಂತಾಗಿದೆ.

೨. ಶ್ರೀಮುಖ್ಯಪ್ರಾಣದೇವರು ಪಾಪದ ಸಂಪರ್ಕಕ್ಕೆ ಒಳಗಾಗದವರು. ಹಾಗೂ ದೈತ್ಯರ ಸಮೂಹದ ಆಕ್ರಮಣಕ್ಕೆ ಬಲಿಯಾಗದವರು[30] ಎಂದು ಎರಡು ವಿಶೇಷಣಗಳನ್ನು ಜೊತೆಗೆ ನೀಡಿರುವ ಮೂಲಕ ದೈತ್ಯರ ಆಕ್ರಮಣಕ್ಕೆ ಒಳಗಾಗದ ಪ್ರಯುಕ್ತವಾಗಿಯೇ

29. ಲೌಕಿಕವೈದಿಕಭೇದಭಿನ್ನವರ್ಣಾತ್ಮಕಧ್ವನ್ಯಾತ್ಮಕಾಶೇಷಶಬ್ದಾರ್ಥ –ಋಗಾದಿ ಸರ್ವವೇದಾರ್ಥ ವಿಷ್ಣುಮಂತ್ರಾರ್ಥ–ಪುರುಷಸೂಕ್ತಾರ್ಥ–ಗಾಯತ್ರ್ಯರ್ಥ–ವಾಸುದೇವದ್ವಾದಶಾಕ್ಷರಮಂತ್ರಾಂತರ್ಗತಾದ್ಯಾಷ್ಟಾಕ್ಷರಾರ್ಥ ಶ್ರೀಮನ್ನಾರಾಯಣಾಷ್ಟಾಕ್ಷರಮಂತ್ರಾರ್ಥ–ವಾಸುದೇವದ್ವಾದಶಾಕ್ಷರ ಮಂತ್ರಾಂತರ್ಗತಾಂತ್ಯಚತುರಕ್ಷರಾರ್ಥವ್ಯಾಹೃತ್ಯರ್ಥ–ಮಾತೃಕಾಮಂತ್ರಾರ್ಥ–ಪ್ರಣವೋಪಾಸಕಾನಾಂ.....

* ಓಂಕಾರೋ ಬ್ರಹ್ಮಣೋ ನಾಮ ಸರ್ವವಾಗಾತ್ಮಕಶ್ಚ ಸಃ ।
ವ್ಯಾಖ್ಯಾನತ್ವಾತ್ ಸರ್ವವಾಚಾಂ ಸರ್ವವಾಗಾತ್ಮತಾ ಭವೇತ್ ।
–*[ಛಾಂ.ಉ.ಭಾ. 2-2-17]*

* .........ತೇಷಾವೈಕ್ಯಮಾಪಾದ್ಯಸಮ್ಯಕ್......ಪ್ರಣೌತಿ ಪ್ರವೀಣಃ । – *ಮ.ವಿ. 14-23*

30. ಪಾಪಾವಿದ್ಧ ದೈತ್ಯಪೂಗಾವಿದ್ಧ.... ಶ್ರೀಮುಖ್ಯಪ್ರಾಣ....

ಅವರಲ್ಲಿ ಪಾಪದ ಸ್ಪರ್ಶವೂ ಇಲ್ಲದಂತಾಗಿದೆ31 ಎಂದು ಆ ಎರಡು ವಿಶೇಷಣ ಗಳೊಳಗಿರುವ ಪ್ರಯೋಜ್ಯಪ್ರಯೋಜಕತ್ವ ಸಂಬಂಧವನ್ನು ಸೂಚಿಸಿಕೊಡಲಾಗಿದೆ.

೩. **ಶ್ರೀವಿಷ್ಣುಭಕ್ತಿಯೇ ಮುಂತಾದ ಅನಂತಗುಣಪರಿಪೂರ್ಣರಾದವರು.**32 ಸಕಲಸದ್ಗುಣ ಗಳಿಗೂ ಸ್ವರೂಪಭೂತವಾದ ಲಕ್ಷಣ ವಿಷ್ಣುಭಕ್ತಿ ಎಂದು ಶ್ರೀ ಮಧ್ವರೇ ತಿಳಿಸಿರು ವಂತೆ33 ಶ್ರೀ ಮಧ್ವರಲ್ಲಿಯ ಗುಣಗಳ ಪರಿಗಣನೆಯಲ್ಲೂ ವಿಷ್ಣುಭಕ್ತಿಯನ್ನೇ ಮೊತ್ತ ಮೊದಲನೆಯದಾಗಿ ಉಲ್ಲೇಖಿಸಿರುವುದು ಸಮುಚಿತ. ತ್ರಿವಿಕ್ರಮಪಂಡಿತರೂ ತಮ್ಮ ವಾಯುಸ್ತುತಿಯಲ್ಲಿ 'ಶ್ರೀಮದ್ವಿಷ್ಣ್ವಂಘ್ರಿನಿಷ್ಠಾತಿಗುಣಗುರುತಮ ಶ್ರೀಮದಾನಂದತೀರ್ಥ...' ಎಂಬುದಾಗಿ ಶ್ರೀಮದಾನಂದತೀರ್ಥರು ಗುರುತಮರೆನಿಸಲು ಅವರ 'ವಿಷ್ಣ್ವಂಘ್ರಿ ನಿಷ್ಠೆ' –ವಿಷ್ಣುಭಕ್ತಿ ಎಂಬ ದೊಡ್ಡ ಗುಣವೇ ಕಾರಣ ಎಂದು ಸೂಚಿಸಿರುವರು.

● ಗುಣತಃ ಅನಂತತ್ವ ಎಂಬುದು ಭಗವಂತನ ಅಸಾಧಾರಣಧರ್ಮವಾದುದರಿಂದ ಪ್ರಾಣದೇವರಲ್ಲಿ ಅನಂತಗುಣಪರಿಪೂರ್ಣತ್ವ ಬರಲಾರದು. ಆದುದರಿಂದ ಅನೇಕ ಎಂಬ ಅರ್ಥದಲ್ಲಿ ಅನಂತ ಶಬ್ದದ ಬಳಕೆ ಆಗಿದೆ ಎಂದು ಇಟ್ಟುಕೊಳ್ಳಬೇಕು. ಅಥವಾ ಇಲ್ಲಿ ಹೇಳಲಾದ ಗುಣಗಳ ಅನಂತತ್ವ ಎಂದರೆ ಅಸಂಖ್ಯೇಯತ್ವ ಅಲ್ಲ; ಬದಲಾಗಿ ಕಾಲತಃ ಅನಂತತ್ವ ಅಂದರೆ ನಿತ್ಯತ್ವ ಎಂದಿಟ್ಟುಕೊಳ್ಳಬೇಕು. ಅಂದರೆ ವಿಷ್ಣುಭಕ್ತಿಯೇ ಮುಂತಾದ ನಿತ್ಯಗುಣಗಳಿಂದ ಪೂರ್ಣರಾದವರು ವಾಯುದೇವರು ಎಂಬ ಅಭಿ ಪ್ರಾಯ.

೪. ವೇದದಲ್ಲಿ ಪುರುಷಸೂಕ್ತವೇ ಮುಂತಾದ ಕೆಲವು ಭಾಗ ಶ್ರೀವಿಷ್ಣುವಿನಲ್ಲೇ ಪ್ರಸಿದ್ಧ ವಾಗಿದ್ದರೆ, ಅಂಭೃಣೀಸೂಕ್ತವೇ ಮುಂತಾದ ಇನ್ನು ಕೆಲವು ಭಾಗ ಶ್ರೀವಿಷ್ಣುವಿನ ಬಳಿಕ ರಮಾದೇವಿಯಲ್ಲಿಯೇ ಪ್ರಸಿದ್ಧವಾದವು. ಈ ವೇದಭಾಗಗಳನ್ನು ಹೊರತು ಪಡಿಸಿ ಉಳಿದ **ಅನಂತವೇದಗಳಲ್ಲಿ ಪ್ರತಿಪಾದ್ಯರಾದ ಇಂದ್ರಾದಿದೇವತೆಗಳಿಗಿಂತೆಲ್ಲ ಮುಖ್ಯವಾಗಿ ಪ್ರತಿಪಾದ್ಯರಾಗಿರುವವರು ಶ್ರೀ ಪ್ರಾಣದೇವರು.**34

---

31. ಛಾಂದೋಗ್ಯೋಪನಿಷತ್ತಿನಲ್ಲಿ [1-2-1] ಇತರ ನಾಸಿಕ್ಯವಾಯ್ವಾದಿದೇವತೆಗಳ ಪ್ರತೀಕದಲ್ಲಿ ಉದ್ಗೀಥನ ಉಪಾಸನೆ ನಡೆಸಿದಾಗ ಅಸುರರ ಆಕ್ರಮಣದಿಂದಾಗಿ '......ಪಾಪ್ಮನಾ ಹ್ಯೇಷವಿದ್ಧೋ....' -ಎಂದು ಪಾಪದ ಲೇಪವನ್ನು ತಿಳಿಸಿ ಮುಖ್ಯಪ್ರಾಣನನ್ನು ಪ್ರತೀಕವ ನ್ನಾಗಿಟ್ಟುಕೊಂಡಾಗ ಆಕ್ರಮಿಸಿದ ದೈತ್ಯರೇ ಪುಡಿಪುಡಿಯಾದರೆಂದು ತಿಳಿಸಿ '....ಅಪಹತ ಪಾಪ್ಮಾ ಹ್ಯೇಷಃ' -ಎಂದು ವಾಯುದೇವ ದೈತ್ಯರ ಆಕ್ರಮಣಕ್ಕೆ ಒಳಗಾಗದಿರುವುದ ರಿಂದಲೇ ಪಾಪದ ಲೇಪಕ್ಕೆ ಒಳಗಾಗದವನೆಂದು ತಿಳಿಸಲಾಗಿದೆ.

32. ಶ್ರೀವಿಷ್ಣುಭಕ್ತ್ಯಾದ್ಯನಂತಗುಣಪರಿಪೂರ್ಣ....ಶ್ರೀಮುಖ್ಯಪ್ರಾಣ....

33. ವಿಷ್ಣುಭಕ್ತಿರ್ಹಿ ಸರ್ವೇಷಾಂ ಸದ್ಗುಣಾನಾಂ ಸ್ವಲಕ್ಷಣಮ್ -ವಾದಲಕ್ಷಣ -14

34. ರಮಾವ್ಯತಿರಿಕ್ತ ಪೂರ್ವಪ್ರಸಿದ್ಧವ್ಯತಿರಿಕ್ತಾನಂತವೇದಪ್ರತಿಪಾದ್ಯಮುಖ್ಯತಮ.....'

* ಈ ಮಾತಿಗೆ ಪುರುಷಸೂಕ್ತಾದಿಗಳನ್ನು ಬಿಟ್ಟು ಉಳಿದ ವೇದಭಾಗದಲ್ಲಿ ಪ್ರತಿಪಾದ್ಯ ರಾಗಿರುವವರಲ್ಲಿ ಮುಖ್ಯತಮವಾಗಿರುವವನೆಂಬ ಅರ್ಥ ಉಚಿತವಾಗದು. ಯಾಕೆಂದರೆ ವೇದದ ಉಳಿದ ಭಾಗದಲ್ಲೂ ವಿಷ್ಣ್ವಾದಿಗಳೇ ಮುಖ್ಯಪ್ರತಿಪಾದ್ಯ. ಆದುದರಿಂದ ವೇದದ

- ಶ್ರೀವಿಷ್ಣು ಹಾಗೂ ರಮಾದೇವಿ ಇವರಲ್ಲಿ ಪ್ರಸಿದ್ಧಗಳಾದ ವೇದಭಾಗಕ್ಕಿಂತ ಇತರ ವೇದಗಳಿಂದ ಪ್ರತಿಪಾದ್ಯನಾಗಿರುವವನೆನ್ನದೆ, ಅವುಗಳಿಂದ ಪ್ರತಿಪಾದ್ಯರಾಗಿರುವವರಲ್ಲಿ ಅತ್ಯಂತ ಮುಖ್ಯನಾಗಿರುವವನೆನ್ನುವ ಮೂಲಕ ವೇದದ ಆ ಭಾಗದಲ್ಲಿ ಬರುವ ಇಂದ್ರಾದಿನಾಮಗಳಿಂದ ತ್ರಿವೃತ್ಕರಣಪ್ರಕ್ರಿಯೆಗನುಗುಣವಾಗಿ35 ಅಮುಖ್ಯವಾಗಿಯಷ್ಟೇ ಇಂದ್ರಾದಿದೇವತೆಗಳು ಪ್ರತಿಪಾದ್ಯರಾಗಿದ್ದು, ಮುಖ್ಯವಾಗಿ ವಾಯುದೇವನೇ ಪ್ರತಿ ಪಾದ್ಯ ಎಂಬುದನ್ನು ಸೂಚಿಸಿದಂತಾಗಿದೆ.

೫. **ಅನಂತಜೀವರನ್ನು ನಿಯಮಿಸುತ್ತಿರುವ ಅನಂತರೂಪವುಳ್ಳ ಭಗವತ್ಕಾರ್ಯಸಾಧಕ ರಾಗಿರುವ....35A** ಎಂಬ ಈ ಮೂರು ವಿಶೇಷಣಗಳು ಪರಸ್ಪರವಾಗಿ ಸಂಬಂಧವುಳ್ಳ ಅರ್ಥವನ್ನು ಹೊರಡಿಸುವವು –ಅನಂತ ಜೀವರನ್ನು ನಿಯಮಿಸಲು ಅನಂತರೂಪ ಗಳನ್ನು ಸ್ವೀಕರಿಸಿರುವ ವಾಯುದೇವರು ಅಂತಹ ತನ್ನ ಅನಂತರೂಪಗಳಿಂದ ಅನಂತಜೀವರಲ್ಲಿದ್ದುಕೊಂಡು ಹಂಸಮಂತ್ರಜಪಪೂರ್ವಕವಾಗಿ ಅವರ ಉಸಿರಾಟಾದಿ ಗಳನ್ನು ಭಗವತ್ಕಾರ್ಯವಾಗಿ ಸಾಧಿಸುವರಲ್ಲದೆ, ಆಯಾ ಜೀವರು ತಮ್ಮ ತಮ್ಮ ಯೋಗ್ಯತಾನುಗುಣವಾಗಿ ಜಪ, ಪೂಜೆ ಮುಂತಾದ ಭಗವತ್ಕಾರ್ಯಗಳನ್ನು ಸಾಧಿಸು ವಂತೆಯೂ ಮಾಡುವರು.36 ಅಂದರೆ ಭಗವತ್ಕಾರ್ಯಸಾಧಕಗಳಾಗಿ ಅನಂತಜೀವ ರನ್ನು ನಿಯಮಿಸಲು ಅನಂತರೂಪಗಳನ್ನು ಸ್ವೀಕರಿಸಿರುವವರು ವಾಯುದೇವರು.

೬. **ತತ್ವಜ್ಞಾನದಿಂದ ದೂರರಾದ, ಆದರೆ ತತ್ವಜ್ಞಾನದ ಬಗ್ಗೆ ತೃಷೆಯುಳ್ಳ, ತತ್ವಜ್ಞಾನದ ಸಂಪಾದನೆಗೆ ಯೋಗ್ಯರಾದ, ಭಗವಂತನ ಕಾರುಣ್ಯಕ್ಕೆ ಪಾತ್ರರಾದ ಸಜ್ಜನರ ವಿಷಯದಲ್ಲಿ**

---

ವೇದದ ಪುರುಷಸೂಕ್ತಾದಿ ಭಾಗವನ್ನು ಬಿಟ್ಟು ಉಳಿದ ಭಾಗದ ಪ್ರತಿಪಾದ್ಯರಲ್ಲಿ ವಿಷ್ಣು ಹಾಗೂ ರಮಾ ಇವರ ಬಳಿಕ ಪ್ರತಿಪಾದ್ಯರಾದವರಲ್ಲಿ ವಾಯುದೇವ ಮುಖ್ಯನಾದವ ನೆಂಬ ಅರ್ಥವನ್ನು ಈ ಮಾತಿನಿಂದ ಹೊರಡಿಸಬೇಕು. ಈ ಅರ್ಥವನ್ನು ಹೊರಡಿಸು ವಂತಹ ಪಾಠ ಇರುವ ಸಾಧ್ಯತೆಯೂ ಇದೆ.

35. ಇಂದ್ರಾದಿನಾಮರೂಪಾಣಿ ಯಥೈವ ತ್ರಿಷು ಮುಖ್ಯತಃ ।
ತದಧೀನತ್ವತಸ್ತೇಷಾಮೇಷಾಮುಚ್ಚಬಲತ್ವತಃ ।
ಶಿವನಾಮಾನಿ ರೂಪಾಣಿ ತಥಾ ವಾಯೋಸ್ತು ಮುಖ್ಯತಃ ।
ತದೀಯಾನಿ ತಥಾ ಲಕ್ಷ್ಮ್ಯಾಸ್ತದೀಯಾನಿ ಹರೇಸ್ತಥಾ ।
– *ಸಾಮಸಂಹಿತಾ [ಛಾಂ.ಉ.ಭಾ. 6-2-2]*

35A. ಅನಂತಜೀವನಿಯಾಮಕಾನಂತರೂಪಭಗವತ್ಕಾರ್ಯಸಾಧಕಃ..... ।

36. ಸ್ವಯಂ ಸಾಧತೇ ಅನ್ಯಾನ್ ಸಾಧಯತಿ –ಎಂಬ ಎರಡು ಅರ್ಥಗಳನ್ನೂ ಸಾಧಕ ಶಬ್ದ ನೀಡಬಲ್ಲದು.

* '......ಮಾರುತ್ಯೇವ ಯತಶ್ಚೇಷ್ಟಾ ಸರ್ವಾ ತಾ ಹರಯೇऽರ್ಪಯೇತ್' ಎಂದು ಬ್ರಹ್ಮಾಂಡ [ಯಾ.ಉ.ಭಾ. 1-4] ಸಾರುತ್ತಿರುವಂತೆ ವಾಯುದೇವ ಭಗತ್ಪೂಜೆಯಾಗಿ ಜೀವರಿಂದ ಚಟುವಟಿಕೆಗಳನ್ನು ಮಾಡಿಸಿ ಅವುಗಳನ್ನು ಕರ್ಮಾಧ್ಯಕ್ಷನಾದ ಭಗವಂತನಿಗೆ ಸಮರ್ಪಿಸು ವನು.

ದಯಾಲುಗಳಾದ ಬ್ರಹ್ಮರುದ್ರಾದಿಗಳಿಂದ ಪ್ರಾರ್ಥಿತನಾದ ಭಗವಂತನ ಆಜ್ಞಾನುಸಾರವಾಗಿ ಅವತರಿಸಿರುವವರು ಶ್ರೀ ಮಧ್ವರೆಂದು ನಿರೂಪಿಸಿರುವ[37] ಮೂಲಕ ಶ್ರೀ ಮಧ್ವರು ಉದ್ಧಾರ ಮಾಡುವ ಸಜ್ಜನರೆಂದರೆ ಎಂತಹವರೆಂದು ಸ್ಪಷ್ಟಪಡಿಸಿದಂತಾಗಿದೆ. ಅಜ್ಞ-ಜ್ಞಾನಾರ್ಥಿ.... ಇತ್ಯಾದಿಯಾಗಿ ಹೇಳಲಾದ ನಾಲ್ಕು ಅರ್ಹತೆಗಳನ್ನು ಗಳಿಸಿದವರೇ ನಿಜವಾಗಿ ಸಜ್ಜನರೆನಿಸಿದ್ದು ಅಂತಹವರ ಉದ್ಧಾರವಷ್ಟೇ ಶ್ರೀ ಮಧ್ವರಿಂದ ನಡೆದಿದೆ.

೭. ಶ್ರೀ ಮಧ್ವರು ಪ್ರಚುರಪಡಿಸಿರುವ ವೈಷ್ಣವಸಿದ್ಧಾಂತ '.....ಪ್ರವರ್ತಿತಾ ಯಾ ಸನಕಾದಿಭಿಃ ಪುರಾ.....' ಎಂದಿರುವಂತೆ [ಮಣಿಮಂಜರಿ 8-36] ಸನಕಾದಿ ಋಷಿಗಳಿಂದ ಪ್ರವರ್ತಿತವಾದದ್ದು. ಶ್ರೀ ಮಧ್ವರು ಅದನ್ನು ಮತ್ತಷ್ಟು ಬೆಳಕಿಗೆ ತಂದವರಷ್ಟೇ. ಆದುದರಿಂದ ಅನಾದಿಕಾಲದಿಂದ ಸತ್‌ಸಂಪ್ರದಾಯಪರಂಪರೆಯಿಂದ ಪ್ರಾಪ್ತವಾದ ಶ್ರೀಮದ್ವೈಷ್ಣವಸಿದ್ಧಾಂತದ ಪ್ರತಿಷ್ಠಾಪನೆಯನ್ನು ಮಾಡಿದವರಷ್ಟೇ ಶ್ರೀ ಮಧ್ವರು.[38]

೮. 'ತನ್ನ ಗುಣೋತ್ಕರ್ಷವನ್ನು ತಿಳಿದವನ ಬಗ್ಗೆ ಭಗವಂತನಿಗಿರುವ ಪ್ರೀತಿಯಷ್ಟು ಬೇರೆ ಯಾರಲ್ಲೂ ಇರಲಾರದು' –ಎಂದು ಶ್ರುತಿಯು ಸಾರುತ್ತಿರುವಂತೆ[39] ಭಗವಂತನಿಗೆ ತನ್ನ ಗುಣೋತ್ಕರ್ಷದ ತಿಳಿವಳಿಕೆ ಅತ್ಯಂತ ಪ್ರಿಯವಾಗಿದ್ದು ಶ್ರೀ ಮಧ್ವರು ವೈಷ್ಣವ ಸಿದ್ಧಾಂತ ಸ್ಥಾಪನೆಯ ಮೂಲಕ ಭಗವಂತನ ಗುಣೋತ್ಕರ್ಷದ ಸಮರ್ಥನೆಯನ್ನೇ ಮುಖ್ಯವಾಗಿ ನಡೆಸಿದ್ದರಿಂದ ಇಂತಹ ವೈಷ್ಣವಸಿದ್ಧಾಂತದ ಸ್ಥಾಪನೆಯೇ ಶ್ರೀ ಮಧ್ವರು ಭಗವಂತನ ಪರಮಾನುಗ್ರಹಕ್ಕೆ ಪಾತ್ರವಾಗಲು ಮುಖ್ಯ ಕಾರಣವೆನಿಸಿದೆ.[40]

೯. ಯಾವಾಗಲೂ ಭಗವದಾಜ್ಞಾನುಸಾರವಾಗಿ ಭಗವಂತನ ಸನ್ನಿಧಿಯಲ್ಲಿ ಪೂಜ್ಯರಾಗಿರುವವರು ಶ್ರೀ ಮಧ್ವರು. ಹಾಗೆ ಪೂಜ್ಯರೆನಿಸಿರುವುದಕ್ಕೆ ಬೇಕಾದ ವರವನ್ನು ಭಗವಂತನು ಅವರಿಗೆ ಅನುಗ್ರಹಿಸಿರುವನು.[41]

೧೦. ತನ್ನ ಅನುಗ್ರಹಮಾತ್ರದಿಂದಲೇ ತನ್ನ ಭಕ್ತರ ಎಲ್ಲ ಬಗೆಯ ಸಂಶಯಗಳನ್ನೂ ಪರಿಹರಿಸುವವರು.[42]

---

37. ಅಜ್ಞ-ಜ್ಞಾನಾರ್ಥಿ-ಜ್ಞಾನಯೋಗ್ಯ-ಭಗವತ್‌ಕೃಪಾಪಾತ್ರಭೂತಸಲ್ಲೋಕಕೃಪಾಳುಬ್ರಹ್ಮ-ರುದ್ರಾದ್ಯರ್ಥಿತಭಗವದಾಜ್ಞಾಂ ಶಿರಸಿ ಪಕ್ಷಮಾದರೇಣ ಅನರ್ಘ್ಯಶಿರೋರತ್ನವನ್ನಿಧಾಯ.......ಅವತೀರ್ಣಾನಾಮ್....

38. ತಥಾ ಅವತೀರ್ಯ.....ಅನಾದಿತಃ ಸತ್ಸಂಪ್ರದಾಯಪರಂಪರಾಪ್ರಾಪ್ತಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪಕಾನಾಂ.....।

39. ನ ತಾದೃಶೀ ಪ್ರೀತಿರೀಢ್ಯಸ್ಯ ವಿಷ್ಣೋಃ ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್
*– ಸೌಪರ್ಣಶ್ರುತಿ [ವಿಷ್ಣುತತ್ತ್ವವಿನಿರ್ಣಯ ಪ್ರಥಮ ಪರಿಚ್ಛೇದ]*

40. ......ಅತ ಏವ ಭಗವತ್ಪರಮಾನುಗ್ರಹಪಾತ್ರಭೂತಾನಾಮ್.....

41. 'ಸರ್ವದಾ ಭಗವದಾಜ್ಞಯಾ ಭಗವತ್‌ಸನ್ನಿಧೌ ಪೂಜ್ಯಾನಾಂ, ತಥಾ ಭಗವತಾ ದತ್ತವರಾಣಾಂ.....'

42. '.....ಪ್ರಸಾದಮಾತ್ರೇಣ ಸ್ವಭಕ್ತಾಶೇಷಸಂಶಯಚ್ಛೇತೄಣಾಂ....

೧೧. **ಶ್ರೀ ಮಧ್ವರು ತಮ್ಮ ತಂತ್ರಸಾರಸಂಗ್ರಹದಲ್ಲಿ ಪ್ರಣವವೇ ಮುಂತಾದ ಎಪ್ಪತ್ತೈದಕ್ಕಿಂತಲೂ ಅಧಿಕ ವಿಷ್ಣುವಿನ ಹಾಗೂ ವಿಷ್ಣುಭಕ್ತರ ಮಂತ್ರಗಳನ್ನು ಉದ್ಧರಿಸಿರುವರು. ಇದರಿಂದಾಗಿ ಅಶೇಷವೈಷ್ಣವಮಂತ್ರಗಳನ್ನೂ ಉದ್ಧರಿಸಿದಂತಾಗಿದೆ.**43

೧೨. **ಯಾವಾಗಲೂ ಸರ್ವವೈಷ್ಣವಮಂತ್ರಗಳನ್ನೂ ಜಪಿಸುತ್ತಿರುವವರು.**44 **ಈ ಮಾತಿಗೆ** 'ಪ್ರತಿನಿತ್ಯ ಸಕಲವೈಷ್ಣವಮಂತ್ರಗಳನ್ನೂ ಕ್ರಮವಾಗಿ ಜಪಿಸುತ್ತಿರುವವರು' –ಎಂಬ ಸ್ಥೂಲವಾದ ಅರ್ಥವಲ್ಲದೆ, ಸರ್ವದಾ –ಕ್ಷಣಕ್ಷಣಕ್ಕೂ ಪ್ರತಿಯೊಂದು ವೈಷ್ಣವಮಂತ್ರವನ್ನೂ ಜಪಿಸುತ್ತಿರುವವರೆಂಬ ವಿಶಿಷ್ಟಾರ್ಥವಾಗಿರುವುದಾದರೆ '**ಭಗವದುಪಾಸನಾರ್ಥಂ ಸ್ವೇಚ್ಛಯಾ ಗೃಹೀತರೂಪಾಣಾಂ....**' ಭಗವಂತನ ಉಪಾಸನೆಗಾಗಿ ಸ್ವೇಚ್ಛೆಯಿಂದ ಅನೇಕ ರೂಪಗಳನ್ನು ಸ್ವೀಕರಿಸಿರುವವರೆಂಬ ಮುಂದಿನ ಮಾತಿನ ಪ್ರಮೇಯವನ್ನು ಈ ವಿಷಯಕ್ಕೂ ಅನ್ವಯಿಸಿಕೊಂಡು ಅನೇಕ ರೂಪಗಳನ್ನು ಸ್ವೀಕರಿಸಿ ಏಕಕಾಲದಲ್ಲಿ ಪ್ರತಿಯೊಂದು ವೈಷ್ಣವಮಂತ್ರವನ್ನೂ ಬೇರೆ ಬೇರೆ ರೂಪದಿಂದ ಜಪಿಸುತ್ತಿರುವವರೆಂದು ಅರ್ಥೈಸಬಹುದಾಗಿದೆ.

೧೩. **ಏಳುಕೋಟಿ ಮಹಾಮಂತ್ರಗಳನ್ನು ಜಪಿಸಿ, ಜಪಿಸಿ ಅವುಗಳಲ್ಲಿ ಸಿದ್ಧಿ ಪಡೆದಿರು ವವರು**45

೧೪. **ಭಗವಂತನಲ್ಲಿ ಭಕ್ತ್ಯತಿಶಯದಿಂದಾಗಿ ಅವನ ಉಪಾಸನೆಗಾಗಿ ಸ್ವೇಚ್ಛೆಯಿಂದ ಅನೇಕ ರೂಪಗಳನ್ನು ಸ್ವೀಕರಿಸಿರುವವರು.**46

ಶ್ರೀ ಮಧ್ವರ ಮೂಲ ರೂಪಕ್ಕೆ ಸಂಬಂಧಿಸಿ ಈ ಮಾತು ಹೊರಟಿರುವುದೆಂದಾದರೆ ವಾಯುದೇವನ ಆಂಜನೇಯಾದಿ ರೂಪಗಳ ಸ್ವೀಕಾರದ ಬಗ್ಗೆ ಇದು ತಿಳಿಸುತ್ತಿದೆ ಎಂದು ಅರ್ಥೈಸಬಹುದಾಗಿದೆ.

ಆದರೆ '**....ಕರ್ಮಭುವಿ ಅವತೀರ್ಣಾನಾಂ ತಥಾ ಅವತೀರ್ಯ ಸಕಲಸಚ್ಛಾಸ್ತ್ರಕರ್ತೄಣಾಂ....**' ಎಂಬಲ್ಲಿಂದ '**....ಅಸ್ಮದಾದಿಗುರೂಣಾಂ ಶ್ರೀಮದಾನಂದತೀರ್ಥಶ್ರೀಮಚ್ಚರಣಾನಾಂ....**' ಎಂಬಲ್ಲಿಯವರೆಗೆ ವಾಯುದೇವರ ಅವತಾರರಾದ ಶ್ರೀ ಮಧ್ವರ ಕುರಿತೇ ಮಾತುಗಳು ಹೊರಟಿರುವುದರಿಂದ ಅನೇಕ ರೂಪಗಳನ್ನು ಸ್ವೀಕರಿಸಿರುವರೆಂಬ ಮಾತು ಕೂಡ ಮಧ್ವಾವತಾರಕ್ಕೆ ಸಂಬಂಧಿಸಿದ್ದೆಂದು ಇಟ್ಟುಕೊಳ್ಳಬೇಕಾಗುವುದು. ಆದರೆ ಶ್ರೀ ಮಧ್ವರು ಅನೇಕ ರೂಪಗಳನ್ನು ಸ್ವೀಕರಿಸುವರೆಂಬುದಕ್ಕೆ ಪ್ರಮಾಣವನ್ನು ಹುಡುಕಬೇಕಾಗಿದೆ.

೧೫. 'ಬ್ರಹ್ಮಾ ಸರ್ವೈರ್ಗುಣೈಶ್ಚೈವ.....' ಎಂದು ಅನುವ್ಯಾಖ್ಯಾನದಲ್ಲಿ [3-3-131] ಚತುರ್ಮುಖನು ಭಗವಂತನ ಸರ್ವಗುಣಗಳಿಂದಲೂ 'ಉಪಸಂಹಾರ'ವನ್ನು ತಿಳಿಸಿದ್ದು,

---

43. ಪ್ರಣವಾದ್ಯಶೇಷವೈಷ್ಣವಮಂತ್ರೋದ್ಧಾರಕಾಣಾಂ....

44. ಸರ್ವದಾ ಸರ್ವವೈಷ್ಣವಮಂತ್ರಜಾಪಕಾನಾಂ.....

45. ಸಂಸಿದ್ಧಸಪ್ತಕೋಟಿಮಹಾಮಂತ್ರಾಣಾಂ.....

46. ಭಗವತಿ ಭಕ್ತ್ಯತಿಶಯೇನ ಭಗವದುಪಾಸನಾರ್ಥಂ ಸ್ವೇಚ್ಛಯಾ ಗೃಹೀತರೂಪಾಣಾಂ....

ಬ್ರಹ್ಮಪದವಿಗೆ ಬರುವ ವಾಯುದೇವನಿಗೂ ಆ ಬಗೆಯ ಗುಣೋಪಸಂಹಾರ ಸಿದ್ಧವಾಗುವುದು. ಹೀಗೆ ವಾಯುದೇವ ಉಪಸಂಹಾರ ನಡೆಸುವ ಭಗವಂತನ 'ಸರ್ವಗುಣ'ಗಳ ಸ್ಥೂಲ ಪರಿಚಯ ದೊರಕುವಂತೆ ಇಲ್ಲಿ ಹೀಗೆ ನಿರೂಪಿಸಲಾಗಿದೆ– **ಭಗವಂತನ ಉಪಾಸನೆಗಾಗಿ ಅನೇಕ ರೂಪಗಳನ್ನು ಸ್ವೀಕರಿಸುವ ಮಧ್ವಗುರುಗಳು ಆ ತಮ್ಮ ಎಲ್ಲ ರೂಪಗಳಲ್ಲೂ ಪ್ರತ್ಯೇಕವಾಗಿಯೇ ಭಗವಂತನ ಅನಂತರೂಪಗಳ ಪೈಕಿ ಪ್ರತಿಯೊಂದು ರೂಪಕ್ಕೂ ಸಂಬಂಧಿಸಿದಂತೆ ಸಕಲವೇದಗಳಲ್ಲಿ ಪ್ರತಿಪಾದಿಸಲ್ಪಟ್ಟ, ವೇದಗಳಲ್ಲಿ ಪ್ರತಿಪಾದಿಸಲ್ಪಡದೆ ಮಹಾಭಾರತದಲ್ಲಿ ಪ್ರತಿಪಾದಿಸಲ್ಪಟ್ಟ, ಮಹಾಭಾರತದಲ್ಲೂ ಪ್ರತಿಪಾದಿಸಲ್ಪಡದೆ, ಉಪದೇಶಪರಂಪರಾರೂಪವಾದ ಸಂಪ್ರದಾಯದಿಂದ ಹರಿದುಬಂದಿರುವ...... ಅನಂತಗುಣಗಳ ಉಪಸಂಹಾರವನ್ನು –ಅಂದರೆ ಏಕಬುದ್ಧಿಸ್ಥವಾಗಿ ಚಿಂತಿಸುವಿಕೆಯನ್ನು ನಡೆಸುವರು.**[47]

ಇದರಿಂದಾಗಿ ಶ್ರೀ ಮಧ್ವರು ನಡೆಸುವ 'ಗುಣೋಪಸಂಹಾರ'ಕ್ಕೆ ಸಂಬಂಧಿಸಿದಂತೆ ● ತಮ್ಮ ಅನೇಕ ರೂಪಗಳಿಂದಲೂ ನಡೆಸುವರು; ● ಭಗವಂತನ ಪ್ರತಿಯೊಂದು ರೂಪಕ್ಕೆ ಸಂಬಂಧಿಸಿಯೂ ನಡೆಸುವರು. ● ವೇದೋಕ್ತ, ಭಾರತೋಕ್ತ, ಸಂಪ್ರದಾಯಾಗತಗಳಾದ ಎಲ್ಲ ಗುಣಗಳಿಗೆ ಸಂಬಂಧಿಸಿ ನಡೆಸುವರು –ಎಂಬುದಾಗಿ ಮೂರು ಅಂಶಗಳ ಮೇಲೆ ಬೆಳಕು ಚೆಲ್ಲಿದಂತಾಯಿತು.

೧೬. **ವೇದದಲ್ಲಿ ಹೇಳಿದ ಸರ್ವಕ್ರಿಯೆ 'ಆ ಉಪಸಂಹಾರವನ್ನೂ ನಡೆಸುವರು.**

೧೭. **ಅನಂತರೂಪಗಳು, ಅನಂತಾವಯವಗಳು, ಅನಂತಗುಣಗಳು, ಅನಂತಕ್ರಿಯೆ 'ಳು, ಅನಂತ ಜಾತಿಗಳು, ಅನಂತ ಅವಸ್ಥೆಗಳು –ಇವುಗಳಿಂದ ಕೂಡಿದ ಭಗವಂತನನ್ನು ಉಪಾಸಿಸುವವರು.**[48]

---

47. ತತ್ರತತ್ರ ಪೃಥಕ್‌ಪೃಥಕ್ ಭಗವತೋಽನಂತರೂಪೇಷು ಪೃಥಕ್‌ಪೃಥಕ್ ವೇದೋಕ್ತ-ತದನುಕ್ತಭಾರತೋಕ್ತ-ತದನುಕ್ತಸಂಪ್ರದಾಯಾಗತ... ಅನಂತಗುಣೋಪಸಂಹರ್ತ್ರ್ಣಾಂ...

* 'ಬ್ರಹ್ಮಾ ಸರ್ವೈರ್ಗುಣೈಶ್ಚೈವ.....' ಎಂಬ ಅನುವ್ಯಾಖ್ಯಾನದ ಮಾತಿಗೆ ಶ್ರೀಮನ್ನ್ಯಾಯಸುಧಾದಲ್ಲಿ 'ವೇದೋಕ್ತಸಮಸ್ತಗುಣಕ್ರಿಯೋಪೇತತಯಾಽನಂತರೂಪಂ ಹರಿಮುಪಾಸಿತುಂ ಬ್ರಹ್ಮೈವ ಯೋಗ್ಯಃ ಇತ್ಯರ್ಥಃ' –ಎಂಬುದಾಗಿ 'ವೇದೋಕ್ತ' ಎಂಬ ಶಬ್ದವನ್ನು ಉಪಲಕ್ಷಣವನ್ನಾಗಿ ಇಟ್ಟುಕೊಂಡು, '.....ತದನುಕ್ತಭಾರತೋಕ್ತ, ತದನುಕ್ತ ಸಂಪ್ರದಾಯಾಗತಗಳಾದ ಗುಣಕ್ರಿಯೆಗಳನ್ನೆಂದು ಅರ್ಥೈಸಿಕೊಳ್ಳಬೇಕೆಂದು ರಾಘವೇಂದ್ರಗುರುಗಳ ಈ ಮಾತಿನಿಂದ ಸ್ಪಷ್ಟವಾಗಬಲ್ಲದು.

* ಯುಗಪದ್ ಬುದ್ಧೌ ಆರೋಪಣಂ ಉಪಸಂಹಾರಃ ।

48. ತಥಾ ವೇದೋಕ್ತ ಸರ್ವಕ್ರಿಯೋಪಸಂಹರ್ತ್ರ್ಣಾಂ.....

* ಏವಂ ಅನಂತರೂಪಾವಯವಗುಣಕ್ರಿಯಾಜಾತ್ಯವಸ್ಥಾವಿಶಿಷ್ಟಭಗವದುಪಾಸಕಾನಾಂ....

* 'ಅನಂತರೂಪ....' ಎಂಬಲ್ಲಿಯ ಅನಂತ ವಿಶೇಷಣವನ್ನು ಮುಂದಿನ ರೂಪಾದಿಗಳಿಗೂ ಅನ್ವಯಿಸಿಕೊಳ್ಳಬೇಕು.

೧೮. ತಮ್ಮ ಭಕ್ತನಾದ ನನ್ನನ್ನು [ಈ ಸ್ತುತಿಯಿಂದ ಪ್ರಾರ್ಥಿಸುವವನನ್ನು] ದೃಷ್ಟಿಯಲ್ಲಿಟ್ಟು ಕೊಂಡು ಭಗವಂತನೆದುರು ಅನುಕಂಪಾರ್ಹನಾದ ದುಃಖಿಯಾದ, ನಿರ್ಗತಿಕನಾದ, ಶರಣಾಗತನಾದ ಇವನನ್ನು ಉದ್ಧಾರಮಾಡು ಎಂದು ವಿಜ್ಞಾಪಿಸಿಕೊಳ್ಳುವವರು.49

೧೯. ಎಲ್ಲ ಗುರುಗಳ ಅಂತರ್ಯಾಮಿಗಳಾಗಿರುವವರು.50

ಭಗವಂತನು ಪ್ರಾಣದೇವನ ಮೂಲಕ ಜ್ಞಾನಿಗಳ ಜ್ಞಾನಬೆಳಕನ್ನು ನೀಡುವನೆಂಬ ಪ್ರಮಾಣದ51 ಮೂಲಕ ಜ್ಞಾನದಾನ ಮಾಡುವ ಗುರುಗಳಲ್ಲಿ ಶ್ರೀ ಮಧ್ವರು ಅಂತರ್ಯಾಮಿಗಳಾಗಿರುವರೆಂದು ಸೂಚಿತವಾಗಬಲ್ಲದು.

೨೦. ಸರ್ವದಾ ಭಗವತ್ಪರರಾಗಿಯೇ ಇರುವವರು.52 ಭಗವಂತನ ಚಿಂತನೆಯಿಲ್ಲದೆ ಒಂದು ಮುಹೂರ್ತವನ್ನಾಗಲೀ, ಕ್ಷಣವನ್ನಾಗಲೀ ಜೀವನದಲ್ಲಿ ಕಳೆದಲ್ಲಿ ಅದೊಂದು ದೊಡ್ಡ ನಷ್ಟ, ದೊಡ್ಡ ಅಪರಾಧ; ಅಂಧತ್ವ, ಜಡತ್ವ, ಮೂಕತ್ವ –ಎಂದು ಪುರಾಣ ಶ್ಲೋಕದ53 ಮೂಲಕ ಸರ್ವದಾ ಭಗವಚ್ಚಿಂತನೆ ನಡೆಸಬೇಕೆಂದು ಸಂದೇಶ ನೀಡಿರುವ ಶ್ರೀ ಮಧ್ವರು ತಾವು ಸರ್ವದಾ ಭಗವತ್ಪರರಾಗಿರುವುದು ಅಸಂಭಾವಿತವಲ್ಲ. ಅವರ ಸರ್ವಮೂಲಗ್ರಂಥಗಳ ಪ್ರತಿಯೊಂದು ಮಾತೂ ಅವರ ಭಗವತ್ಪರತ್ವವನ್ನು ಸಾರಬಲ್ಲದು.

೨೧. ಭಗವಂತನಿಗಿಂತ ಬೇರೆಯಾದ ಯಾವುದೇ ವಸ್ತುವಿನಲ್ಲಿ ಮಾನಸಿಕ ಆಸಕ್ತಿ ಇಲ್ಲದವರು.54

---

* ಅನಂತಜಾತಿಗಳಿಗೊಳಗಾದ, ಅನಂತ ಅವಸ್ಥೆಗಳಿಗೊಳಗಾದ ಬೇರೆ ಬೇರೆ ಪ್ರಾಣಿಗಳು, ವಸ್ತುಗಳು ಇದ್ದು, ಅವೆಲ್ಲವುಗಳ ಅಂತರ್ಯಾಮಿಯನ್ನಾಗಿ ಭಗವಂತನನ್ನು ಉಪಾಸಿಸುವುದೇ ಅನಂತಜಾತಿ, ಅವಸ್ಥಾ ವಿಶಿಷ್ಟವನ್ನಾಗಿ ಅವನನ್ನು ಚಿಂತಿಸುವುದು.

49. ಸ್ವಭಕ್ತಂ ಮಾಂ ಉದ್ದಿಶ್ಯ ಭಗವತಃ ಪುರಃ 'ಪರಮದಯಾಲೋ, ಕ್ಷಮಾಸಮುದ್ರ, ಭಕ್ತವತ್ಸಲ, ಭಕ್ತಾಪರಾಧಸಹಿಷ್ಣೋ, ದೀನಂ ದೂನಂ ಅನಾಥಂ ಶರಣಾಗತಂ ಏನಂ ಉದ್ಧರ ಇತಿ ವಿಜ್ಞಾಪನಕರ್ತೄಣಾಂ....

* ಶ್ರೀ ಮಧ್ವರು ತಮ್ಮ ಭಕ್ತರ ವಿಷಯದಲ್ಲಿ ಭಗವಂತನೆದುರು ಹೀಗೆ ಶಿಫಾರಸ್ಸು ಮಾಡುವ ವಿಚಾರ ಸರ್ವಮೂಲಗ್ರಂಥಗಳಲ್ಲಾಗಲೀ, ಇತರ ಮಾಧ್ವಕೃತಿಗಳಲ್ಲಾಗಲೀ ಕಂಡುಬರದೆ, ಶ್ರೀ ರಾಘವೇಂದ್ರಗುರುಗಳ ಮೂಲಕವೇ ಬೆಳಕಿಗೆ ಬಂದಿರುವಂತಹದ್ದು.

50. ಅಶೇಷಗುರ್ವಂತರ್ಯಾಮಿಣಾಂ....

51. ಪ್ರಾಣದ್ವಾರೇಣ ಯಜ್ಜ್ಞಾನದೀಪನಂ ಜ್ಞಾನಿನಃ ಸದಾ..... – *[ಐ.ಉ.ಭಾ. 4-1-8]*

52. ಸದಾ ಭಗವತ್ಪರಾಣಾಂ.....

53. ಸಾ ಹಾನಿಸ್ತನ್ಮಹಚ್ಛಿದ್ರಂ ಸಾ ಚಾಂಧಜಡಮೂಕತಾ ।
ಯನ್ಮುಹೂರ್ತಂ ಕ್ಷಣಂ ವಾಽಪಿ ವಾಸುದೇವೋ ನ ಚಿಂತ್ಯತೇ ।
– *[ಕೃಷ್ಣಾಮೃತಮಹಾರ್ಣವ -46]*

54. ಭಗವತೋಽನ್ಯತ್ರ ಸರ್ವವಸ್ತುಷು ಮನಸ್ಸಂಗರಹಿತಾನಾಂ...

ಶ್ರೀ ಮಧ್ವರು ಪರತತ್ವನಾದ ಭಗವಂತನನ್ನು ಹೇಗೋ ಹಾಗೆಯೇ ಅಪರತತ್ವವಾದ ಜಗತ್ತಿನ ಕುರಿತೂ ಗಮನಹರಿಸಿರುವರಾದರೂ ಅದು ಪರತತ್ವದ ಮಹತ್ವಜ್ಞಾನಕ್ಕೆ ಪೋಷಕವಾಗಿಯೇ ಹೊರತು ಅಪರತತ್ವದ ಮೇಲಿನ ಆಸಕ್ತಿಯಿಂದಲೇ ಅಲ್ಲ. ಪ್ರಧಾನ ವಾಗಿ ಶ್ರೀಪರಿಯಷ್ಟೇ ಧ್ಯೇಯ. ಉಳಿದ ದೇವಾದಿಗಳೆಲ್ಲ ಅವನ ಸಂಬಂಧದಿಂದಷ್ಟೇ ಧ್ಯೇಯರು. ಅವನ ವ್ಯಕ್ತಿತ್ವದ ಚಿಂತನೆಗೆ ಉಪಯುಕ್ತವಲ್ಲದ ಇತರ ಯಾವುದನ್ನೂ ಚಿಂತಿಸ ಬಾರದೆಂದು 'ಪರಿಸಂಹಿತೆ'ಯ ಮೂಲಕ ಸಂದೇಶಿಸಿರುವ54A ಶ್ರೀ ಮಧ್ವರಿಗೆ ಭಗವಂತ ನಿಂದ ಹೊರತಾಗಿ ಇತರ ಯಾವುದರಲ್ಲೂ ಆಸಕ್ತಿ ಇಲ್ಲ ಎಂದರೆ ಇತರ ಯಾವುದೇ ವ್ಯಕ್ತಿಯ ಅಥವಾ ವಸ್ತುವಿನ ವೈಯಕ್ತಿಕ ವ್ಯಕ್ತಿತ್ವದ ಆಧಾರದಲ್ಲಿ ಆಸಕ್ತಿ ಇಲ್ಲ ಎಂದಷ್ಟೇ ಅರ್ಥ.

೨೨. ಶ್ರೀ ಮಧ್ವರು ತಮ್ಮ ಸರ್ವಮೂಲಗ್ರಂಥಗಳಲ್ಲಿ ಪ್ರಸ್ತುತಪಡಿಸಿರುವ ಭಗವಂತನ ವ್ಯಕ್ತಿತ್ವ ಅವರಿಂದ ಯಾವಾಗಲೂ ಎಲ್ಲೆಡೆ ಸಾಕ್ಷಾತ್ತಾಗಿ ಕಾಣಲ್ಪಡುವಂತಹದ್ದಾಗಿದ್ದು ಹಾಗೆ ಅವರ ಕಾಣ್ಕೆಗೆ ಗೋಚರಿಸುತ್ತಿರುವ ಭಗವದ್ರೂಪವನ್ನು ಇಪ್ಪತ್ತು ವಿಶೇಷಣ ಗಳೊಂದಿಗೆ ಸರ್ವಮೂಲಗ್ರಂಥ ಪ್ರತಿಪಾದ್ಯಗುಣಧರ್ಮಸಂಪನ್ನವನ್ನಾಗಿ ಹೀಗೆ ಪರಿಚಯಿಸಿಕೊಡಲಾಗಿದೆ55 –ಭಗವಂತ ಪ್ರತಿಯೊಂದು ವ್ಯಕ್ತಿಯ, ವಸ್ತುವಿನ ಬಿಂಬ ರೂಪದಲ್ಲಿರುವನೆಂದ ಮೇಲೆ ಪ್ರತಿಯೊಂದು ವಸ್ತುವಿನ ಆಕಾರದಿಂದ ಆಯಾ ವಸ್ತುವಿಗೆ ಆಶ್ರಯನಾಗಿ, ಆಧಾರನಾಗಿ ಇರುವವನು. ಸರ್ವೋತ್ಪಾದಕ; ಸರ್ವ ಪಾಲಕ, ಸರ್ವ ಸಂಹಾರಕ, ಸರ್ವನಿಯಾಮಕ, ಸರ್ವಪ್ರೇರಕ, ಸರ್ವಪ್ರವರ್ತಕ, ಸರ್ವನಿವರ್ತಕ ಆಗಿ ಇರುವವನು. ಅವರವರ ಯೋಗ್ಯತಾನುಸಾರವಾಗಿ ಜ್ಞಾನವನ್ನೂ, ಮೋಕ್ಷವನ್ನೂ, ಅಜ್ಞಾನವನ್ನೂ, ಸಂಸಾರಬಂಧನವನ್ನೂ ನೀಡುವವನು. ಎಲ್ಲದಕ್ಕೂ ಇರವು ನೀಡಿರು ವವನು. ಸರ್ವಶಬ್ದವಾಚ್ಯನಾದ ಅವನು ಆಯಾ ಶಬ್ದದಿಂದ ವಾಚ್ಯನೆನಿಸಲು ಬೇಕಾದ ಆಯಾ ಶಬ್ದದ ಪ್ರವೃತ್ತಿನಿಮಿತ್ತಗಳಾಗಿರುವ ಸರ್ವಗುಣಗಳಿಂದ ಅತ್ಯಂತ ಪರಿಪೂರ್ಣನಾಗಿ ರುವವನು. ಯಾವುದೇ ದೋಷದ ಸ್ಪರ್ಶವೇ ಇಲ್ಲದವನು. ಯಾರಿಂದಲೂ ಸಮಗ್ರವಾಗಿ ಚಿಂತಿಸಲು ಎಟಕದವನು, ಸರ್ವೋತ್ತಮ-ಸರ್ವೇಶ್ವರ; ಎಲ್ಲರಿಂದಲೂ ಅತ್ಯಂತ ವಿಲಕ್ಷಣ ನಾಗಿರುವವನು; ತನ್ನ ದೇಹ-ಅವಯವ-ಗುಣ-ಕ್ರಿಯೆ-ರೂಪ ಇವುಗಳ ಭೇದವಿಲ್ಲದ ವನು; ಶಾಸ್ತ್ರಪ್ರತಿ ಪಾದ್ಯಗಳಾದ ಇವೇ ಮೊದಲಾದ ಗುಣಸಂಪನ್ನನನ್ನಾಗಿ ಭಗವಂತ ನನ್ನು ಎಲ್ಲೆಡೆ ಯಾವಾಗಲೂ ಕಾಣುತ್ತಿರುವವರು ಶ್ರೀ ಮಧ್ವಗುರುಗಳು.55

---

54A. ಪ್ರಾಧಾನ್ಯೇನ ಪರಿರ್ಧ್ಯೇಯಸ್ತತ್ಸಂಬಂಧಾದ್ ಸುರಾದಯಃ ।
ಧ್ಯೇಯಾ ನಾನ್ಯತ್ ಕ್ವಚಿದ್ ಧ್ಯಾಯೇದ್ದರಾವನುಪಯೋಗಿ ಯತ್
*– ಹರಿಸಂಹಿತೆ [ಭಾ.ತಾ.ನಿ. 11-4-5]*

55. ಸರ್ವತ್ರ ಸರ್ವದಾ ಸರ್ವಾಕಾರ -ಸರ್ವಾಧಾರ-ಸರ್ವಾಶ್ರಯ-ಸರ್ವೋತ್ಪಾದಕ- ಸರ್ವ ಪಾಲನ-ಸರ್ವಸಂಹಾರಕ-ಸರ್ವನಿಯಾಮಕ-ಸರ್ವಪ್ರೇರಕ-ಸರ್ವಪ್ರವರ್ತಕ-ಸರ್ವ ನಿವರ್ತಕ-ಯಥಾಯೋಗ್ಯ ಜ್ಞಾನಾಜ್ಞಾನಬಂಧಮೋಕ್ಷಪ್ರದ -ಸರ್ವಸತ್ತಾಪದ್ರ-ಸರ್ವ ಶಬ್ದವಾಚ್ಯ-ಸರ್ವಶಬ್ದಪ್ರವೃತ್ತಿ ನಿಮಿತ್ತ ಸರ್ವಗುಣಾತಿಪರಿಪೂರ್ಣತಮ-ಸರ್ವದೋಷಾತಿ

- ಸಕಲಸಚ್ಛಾಸ್ತ್ರಗಳಿಂದ ಪ್ರತಿಪಾದ್ಯವಾದ ಭಗವಂತನ ರೂಪ ಈ ಎಲ್ಲ ಗುಣಧರ್ಮ ಸಂಪನ್ನವಾದುದು. ಸರ್ವಸಚ್ಛಾಸ್ತ್ರಗಳಿಗೂ ಮೂಲದಂತಿದ್ದು 'ಸರ್ವಮೂಲ' ಎಂದೇ ಅನ್ವರ್ಥಕವಾಗಿ ವ್ಯವಹರಿಸಲ್ಪಡುವ ಸರ್ವಮೂಲಗ್ರಂಥಗಳಿಂದ ಈ ವ್ಯಕ್ತಿತ್ವದ ಭಗವಂತನ ಪ್ರತಿಪಾದನೆಯೇ ನಡೆದಿದ್ದು ಅದು ಶ್ರೀ ಮಧ್ವರಿಂದ ಗ್ರಂಥಾಧ್ಯಯನದ ಆಧಾರದಿಂದಷ್ಟೇ ಅಲ್ಲದೆ, ಸಾಕ್ಷಾತ್ಕಾರಪೂರ್ವಕವಾಗಿಯೇ ನಡೆದಿದೆ ಎಂಬುದು ಆಂತರ್ಯ.
- ಈ ಮಾತಿನಿಂದಾಗಿ 'ನ ಹರಿಂ ಸತತಂ ನ ನಮತ್ಯಸೌ ನ ಚ ನ ಪಶ್ಯತಿ ನಾಪಿ ನ ವಂದತೇ' ಎಂದು ಮಧ್ವವಿಜಯದಲ್ಲಿ [3-7] ನಿರೂಪಿಸಿರುವಂತೆ ಶ್ರೀ ಮಧ್ವರು ಸತತವಾಗಿ ಭಗವಂತನನ್ನು ಕಾಣುತ್ತಲೇ ಇರುವರೆಂದು ಸಿದ್ಧಿಸುವುದರ ಜೊತೆಗೆ ಭಗ ವಂತನ ಭೂಮಗುಣವನ್ನು ಉಪಾಸಿಸುವ ಮಧ್ವರು ಭಗವಂತನ ಎಲ್ಲೆಡೆ ಇರುವ, ಎಲ್ಲ ಗುಣಸಂಪನ್ನವಾದ, ಎಲ್ಲ ಆಕಾರದ ಭಗವಂತನನ್ನು ಕಾಣುವರೆಂದೂ ಸಿದ್ಧಿಸುವುದು.
- ಈ ಮಾತಿನ 'ಸರ್ವಾಧಾರ-ಸರ್ವಾಶ್ರಯ', ಸರ್ವನಿಯಾಮಕ -ಸರ್ವಪ್ರೇರಕ- ಸರ್ವ ಪ್ರವರ್ತಕ -ಮುಂತಾದ ಶಬ್ದಗಳಲ್ಲಿ ಮೇಲ್ನೋಟಕ್ಕೆ ಪೌನರುಕ್ತ್ಯ ಕಂಡರೂ ಆಯಾ ಪ್ರಮೇಯದಲ್ಲಿ ತಾತ್ಪರ್ಯವಿಶೇಷವನ್ನು ಸೂಚಿಸುವುದಕ್ಕಾಗಿ ಉದ್ದೇಶಪೂರ್ವಕ ವಾಗಿಯೇ ಹೀಗೆ ಪ್ರಯೋಗಿಸಲಾಗಿದೆ ಎಂದು ಭಾವಿಸಬೇಕು.

**೨೩. ದುರಭಿಮಾನವೇ ಮುಂತಾದ ದೋಷಗಳಿಂದ ದೂರರಾಗಿರುವವರು.**[56]

'ಪರಶುಕ್ಲತ್ರಯ'ರಲ್ಲಿ ಒಬ್ಬರಾದ ವಾಯುದೇವರ ಅವತಾರರಾಗಿರುವ ಶ್ರೀ ಮಧ್ವರು ಪರಮಾತ್ಮನ ವಿಷಯದಲ್ಲಿ ಶುದ್ಧರಾಗಿದ್ದುದರಿಂದ ಅಂತಹ ಪರಮಾತ್ಮನ ವ್ಯಕ್ತಿತ್ವಕ್ಕೆ ಅಪಚಾರ ಎಸಗಬಲ್ಲ 'ನಾನು ನನ್ನದು' ಮುಂತಾದ ದುರಭಿಮಾನಗಳಿಗೆ ಹೇಗೆ ತಾನೇ ಒಳಗಾಗಿರಲು ಸಾಧ್ಯ? ಅವರು ತಮ್ಮ ಪೂರ್ವಾಶ್ರಮದ ತಂದೆತಾಯಂದಿರ ವಿಷಯದಲ್ಲಿ, ಉತ್ತರ ಭಾರತದ ಶೋಭನ ಭಟ್ಟರ ವಿಷಯದಲ್ಲಿ ನಡೆದುಕೊಂಡಿದ್ದನ್ನು ಗಮನಿಸಿದರೆ ಬಾಂಧವ್ಯಾಭಿಮಾನ, ಪ್ರಾದೇಶಿಕತೆಯ ಅಭಿಮಾನಗಳಿಂದಲೂ ಅವರು ಹೇಗೆ ದೂರರಾಗಿ ದ್ದರೆಂದು ಸ್ಪಷ್ಟವಾಗಬಲ್ಲದು.

**೨೪. ತಮ್ಮ ಭಕ್ತರ ಅಸೂಯೆ, ಹೊಟ್ಟೆಕಿಚ್ಚು, ಕ್ರೋಧ ಮುಂತಾದ ಮಾನಸಿಕ ದೋಷವನ್ನು ಪರಿಹರಿಸುವವರು.**[57]

'ಹೇ ದೇವ ಪವಿತ್ರನಾದ ಭಗವಂತನಿಂದಲೂ, ಅವನ ಪ್ರಜ್ಞೆಯಿಂದಲೂ ನನ್ನನ್ನು ಪವಿತ್ರೀಕರಿಸು' -ಎಂದು ಪವಮಾನಮಂಡಲದ ಮಾತಿನಿಂದ ಪ್ರಾರ್ಥಿಸಲ್ಪಡುವಂತೆ[58]

---

ದೂರ-ಸರ್ವಾಚಿಂತ್ಯ-ಸರ್ವೋತ್ತಮ-ಸರ್ವೇಶ್ವರ-ಸರ್ವಾಂತ್ಯತವಿಲಕ್ಷಣ-ಸ್ವಗತಭೇದವ ರ್ಜಿತತ್ವಾದಿನಾ ಭಗವದ್ದ್ರಷ್ಟ್ರೂಣಾಂ.....

56. ಅಭಿಮಾನಾದಿ ಸರ್ವದೋಷದೂರಾಣಾಂ....

57. ಅಸೂಯೇರ್ಷ್ಯಾದಶೇಷಮನೋದೋಷನಿವರ್ತಕಾನಾಂ.....

58. ಉಭಾಭ್ಯಾಂ ದೇವ ಸವಿತಃ ಪವಿತ್ರೇಣ ಸವೇನ ಚ ।
ಮಾಂ ಪುನೀಹಿ ವಿಶ್ವತಃ -- ಋಗ್ವೇದ [ಪವಮಾನಮಂಡಲ]

ವಾಯುದೇವರು ತನ್ನ ಭಕ್ತರ ಮನಸ್ಸಿನಲ್ಲಿ ಭಗವಂತನ ಸನ್ನಿಧಾನವನ್ನೂ ಭಗವತ್ಪ್ರಜ್ಞೆಯನ್ನೂ ತುಂಬಿಸುವ ಮೂಲಕ ಅಲ್ಲಿಯ ದೋಷಗಳನ್ನು ಪರಿಹರಿಸುವರು.

೨೫. ರಮಾದೇವಿಯಿಂದ ಕೂಡಿದ ಭಗವಂತನ ಎಲ್ಲ ರೂಪಗಳನ್ನು ನಿತ್ಯ ಪ್ರತ್ಯಕ್ಷವಾಗಿ ಕಾಣುತ್ತಿರುವ, ಹೀಗೆ ಭಗವದ್ರೂಪಗಳನ್ನು ಕಾಣುತ್ತ ಅವುಗಳನ್ನು ಸ್ತುತಿಸುತ್ತಿರುವುದರಿಂದಲೇ ಎಲ್ಲ ಪ್ರಕೃತಿ ಬಂಧನವನ್ನು ಕಳಕೊಂಡಿರುವವರು. ಪ್ರಕೃತಿ ಬಂಧನವನ್ನು ಕಳಕೊಂಡಿರುವುದರಿಂದಲೇ ಎಲ್ಲ ಬಗೆಯ ಅನಿಷ್ಟಗಳಿಂದ ದೂರರಾಗಿರುವವರು; ತಾವು ಅನಿಷ್ಟಗಳನ್ನು ಕಳಕೊಂಡಿರುವುದರಿಂದಲೇ ತಮ್ಮ ಭಕ್ತರ ಎಲ್ಲ ಬಗೆಯ ಅನಿಷ್ಟಗಳನ್ನೂ ಪರಿಹರಿಸುವವರು.59

೨೬. ನಮ್ಮ ಆದಿಗುರುಗಳಾದ ಶ್ರೀಮದಾನಂದತೀರ್ಥರು.60

ವಿದ್ಯಾಭ್ಯಾಸದ ಪ್ರಾರಂಭದಲ್ಲಿ ಗುರುಗಳನ್ನೂ, ಪರಮಗುರುಗಳನ್ನೂ ನೆನಸಬೇಕಾದಂತೆ ಆದಿಗುರುಗಳನ್ನೂ ನೆನಸಬೇಕೆಂದು ತಿಳಿಸಲಾಗಿದ್ದು,61 ಆದಿಗುರುಗಳನ್ನಾಗಿ ಶ್ರೀ ಮಧ್ವರನ್ನು ನೆನೆಯಬೇಕೆಂದು ಇದರಿಂದ ಸ್ಪಷ್ಟವಾಗುವುದು.

೨೭. ಇರವನ್ನು ನೀಡುವ ವಾಯು ಎನಿಸುವ, ಚಟುವಟಿಕೆಗಳನ್ನು ನೀಡುವ ಪ್ರಾಣ ಎನಿಸುವ, ಧಾರಣೆಯನ್ನು ಮಾಡುತ್ತಿರುವ ಧರ್ಮ ಎನಿಸುವ, ಮುಕ್ತಿಪ್ರದ ಭಕ್ತಿ ಎನಿಸುವ ರೂಪ ವಿಶೇಷಗಳಿಂದ ಹೃದಯದಲ್ಲಿ ನೆಲೆಸಿರುವವರು ಪ್ರಾಣದೇವರು.62

೨೮. ತಾತ್ವಿಕಾಸುರಪ್ರೇರಣಾಪ್ರಯುಕ್ತ ರೂಪುಗೊಂಡಿರುವ ಎಲ್ಲ ದುರ್ಮತಗಳನ್ನು ನಾಶ ಮಾಡುವುದರಿಂದಲೇ ವಾಯುದೇವರು ಪ್ರಭಂಜನ ಎನಿಸಿರುವರು.63

- ಪ್ರಾಣದೇವರು ತಮ್ಮ ಮಧ್ವರೂಪದಿಂದಷ್ಟೇ ಅಲ್ಲದೆ, ಮೂಲರೂಪದಿಂದಲೂ ದುರ್ಮತಗಳ ನಾಶವನ್ನು ಮಾಡುವರು. ಅವರ 'ಪ್ರಭಂಜನ' ಹೆಸರು ಮೂಲ ರೂಪಕ್ಕೇ ಸಂಬಂಧಿಸಿದ್ದು, ಆ ಹೆಸರಿನ ಪ್ರವೃತ್ತಿನಿಮಿತ್ತ ದುರ್ಮತಗಳನ್ನು ಭಂಗಗೊಳಿಸುವುದೇ ಆಗಿದೆ.

---

59. ನಿತ್ಯಾಪರೋಕ್ಷೀಕೃತರಮಾಯುಕ್ತಾಶೇಷಭಗವದ್ರೂಪಾಣಾಂ ಅತ ಏವ ವಿಲೀನಾಶೇಷ ಪ್ರಕೃತಿಬಂಧಾನಾಂ ಅತ ಏವ ದೂರೋತ್ಸಾರಿತಾಶೇಷಾನಿಷ್ಟಾನಾಂ ಅತ ಏವಾಶೇಷ ಭಕ್ತಾಶೇಷಾನಿಷ್ಟನಿವರ್ತಕಾನಾಂ....

60. ಅಸ್ಮದಾದಿಗುರೂಣಾಂ ಶ್ರೀಮದಾನಂದತೀರ್ಥಶ್ರೀಮಚ್ಚರಣಾನಾಂ....

61. ಸ್ಮೃತ್ವಾ ಗುರೂಂ ಪೂರ್ವಗುರುಮಾದಿಮೂಲಗುರೂ ತಥಾ....ವಿದ್ಯಾಭ್ಯಾಸೀ ತು ಸಿದ್ಧಿಭಾಕ್ – *[ತಂತ್ರಸಾರಸಂಗ್ರಹ 4-106]*

62. .....ಸತ್ತಾಪ್ರದವಾಯುನಾಮಕ -ಚೇಷ್ಟಾಪ್ರದ ಪ್ರಾಣನಾಮಕ -ಧಾರಣಾಪ್ರದಧರ್ಮನಾಮಕ -ಮುಕ್ತಿಪ್ರದಭಕ್ತಿನಾಮಕರೂಪವಿಶೇಷೈಃ ಮದ್‌ಹೃದಿಸ್ಥೇನ.....ಶ್ರೀಮುಖ್ಯಪ್ರಾಣೇನ...

63. ...ತತ್ಪ್ರೇರಣಾಪ್ರಯುಕ್ತಾಶೇಷದುರ್ಮತಭಂಜಕೇನ ಅತ ಏವ ಪ್ರಭಂಜನಶಬ್ದವಾಚ್ಯೇನ....

೨೯. **ಪ್ರತಿದಿನ ಪ್ರತಿಯೊಂದು ಕ್ಷಣದಲ್ಲೂ ಯೋಗ್ಯಾಧಿಕಾರಿಗಳ ಬುದ್ಧಿಯನ್ನು ಶೋಧಿಸುತ್ತಿರುವವರು.**64

**'.....ಜ್ಞಾನಂ ಪ್ರಜ್ಞಾ.....'** ಎಂದು ಪೈಂಗಿಶ್ರುತಿ [ಬೃ.ಉ.ಭಾ. 3-5-3] ತಿಳಿಸುತ್ತಿರುವಂತೆ ವಾಯುದೇವ ತನ್ನ 'ಜ್ಞಾನ' ಎನಿಸುವ ಅಥವಾ 'ಪ್ರಜ್ಞಾ' ಎನಿಸುವ ರೂಪದಿಂದ ಭಕ್ತರ ಬುದ್ಧಿಯನ್ನು ಶೋಧಿಸುತ್ತಿರುವನೆಂದು ಭಾವಿಸಬಹುದಾಗಿದೆ.

೩೦. ಸರ್ವಕರ್ಮಗಳನ್ನೂ ಮಾಡುವವರು; ಸರ್ವಕರ್ಮಗಳನ್ನೂ ಮಾಡಿಸುವವರು, ಸರ್ವ ಕರ್ಮಗಳಿಗೂ ಸ್ವಾಮಿಯಾಗಿರುವವರು, ಸರ್ವಕರ್ಮಗಳನ್ನೂ ಕರ್ಮಾಧ್ಯಕ್ಷನಿಗೆ ಸಮರ್ಪಿಸುವವರು, ಸರ್ವಕರ್ಮಗಳ ಫಲವನ್ನು ಭೋಗಿಸುವವರು, ಸರ್ವ ಕರ್ಮಗಳ ಫಲಗಳನ್ನು ಭೋಗಿಸುವಂತೆ ಮಾಡುವವರು, ಸರ್ವಕರ್ಮಗಳನ್ನು ಪ್ರೇರಿಸುವವರು, ಸರ್ವಕರ್ಮಗಳ ಉದ್ಬೋಧಕರು, ಸರ್ವಕರ್ಮಗಳಿಗೆ ಶುದ್ಧಿಯನ್ನು ನೀಡುವವರು, ಸರ್ವಕರ್ಮಗಳು ಫಲಿಸುವಂತೆ ಮಾಡುವವರು, ಸರ್ವಕರ್ಮಗಳಲ್ಲಿ ಇರುವವರು, ಸರ್ವಕರ್ಮಗಳನ್ನೂ ಕಾಣುತ್ತಿರುವವರು, ಸರ್ವಕರ್ಮಗಳಲ್ಲಿರುವ ಭಗವದ್ರೂಪಗಳನ್ನು ಉಪಾಸಿಸುತ್ತಿರುವವರು.65

- ಕರ್ಮದ ವಿಷಯದಲ್ಲಿ ಪ್ರಾಣದೇವರ ಸರ್ವತೋಮುಖವಾದ ಪಾತ್ರವನ್ನು ಇಲ್ಲಿ ಪರಿಚಯಿಸಲಾಗಿದೆ. ಮನಸ್ಸೇ ಮುಂತಾದ ಇಂದ್ರಿಯಗಳ ಮೂಲಕ ನಡೆಯುವ ಪ್ರತಿಯೊಂದು ಕರ್ಮವನ್ನೂ ಇಂದ್ರಿಯಾಭಿಮಾನಿಗಳ ಮಾಧ್ಯಮದಲ್ಲಿ ಮಾಡಿಸುವುದು; ಅವು ಗಳಿಗೆ ಫಲ ನೀಡುವುದು; ಅವುಗಳನ್ನು ಕರ್ಮಾಧ್ಯಕ್ಷನಿಗೆ ಅರ್ಪಿಸುವುದು; ಹಾಗೆ ಅರ್ಪಿಸಲು ಬೇಕಾದ ಶುದ್ಧಿಯನ್ನು ಕರ್ಮಗಳಲ್ಲಿ ಉಂಟುಮಾಡುವುದು –ಹೀಗೆ ಹೆಜ್ಜೆ ಹೆಜ್ಜೆಗೂ ಮುಖ್ಯಪ್ರಾಣನ ಪಾತ್ರ ಇರುವುದು.

೩೧. ಎಲ್ಲ ಜೀವರ ಅಸಂಖ್ಯಾಕಗಳಾದ, ಅನಾದಿಕಾಲೀನಗಳಾದ ಧರ್ಮಾಧರ್ಮಗಳನ್ನು ಕಾಣುತ್ತಿರುವ, ತನ್ನ ಇಚ್ಛೆಯಿಂದ ಅವುಗಳು ಫಲೋನ್ಮುಖಗಳಾಗುವಂತೆ ಎಬ್ಬಿಸುವ; ಅವುಗಳನ್ನು ಫಲೋನ್ಮುಖಗಳನ್ನಾಗಿಸುವ ಕಪಿಲನಾಮಕ ಭಗವಂತನನ್ನು ಉಪಾಸಿಸುತ್ತಿರುವವರು.66

---

64. ಪ್ರತಿದಿನಂ ಪ್ರತಿಕ್ಷಣಂ ಬುದ್ಧಿಶೋಧಕೇನ....

65. ಸರ್ವಕರ್ಮಕರ್ತ್ರಾ-ಸರ್ವಕರ್ಮಕಾರಯಿತ್ರಾ-ಸರ್ವಕರ್ಮಸ್ವಾಮಿನಾ-ಸರ್ವಕರ್ಮಸಮರ್ಪಕೇಣ-ಸರ್ವಕರ್ಮಫಲಭೋಕ್ತ್ರಾ-ಸರ್ವಕರ್ಮಫಲಭೋಜಯಿತ್ರಾ-ಸರ್ವಕರ್ಮಪ್ರೇರಕೇಣ-ಸರ್ವಕರ್ಮೋದ್ಬೋಧಕೇನ-ಸರ್ವಕರ್ಮಶುದ್ಧಿಪ್ರದೇನ-ಸರ್ವಕರ್ಮಸಿದ್ಧಿಪ್ರದೇನ-ಸರ್ವಕರ್ಮನಿಷ್ಠೇನ-ಸರ್ವಕರ್ಮಸಾಕ್ಷಿಣಾ-ಸರ್ವಕರ್ಮನಿಷ್ಠಭಗವದ್ರೂಪೋಪಾಸಕೇನ...

66. ಅಶೇಷಜೀವನಿಃಸಂಖ್ಯಾನಾದಿಕಾಲೀನಧರ್ಮಾಧರ್ಮದ್ರಷ್ಟೃಸ್ವೇಚ್ಛಯಾ ಉದ್ಬೋಧಕೇನ ತತ್ಪಾಚಕಕಪಿಲೋಪಾಸಕೇನ.....

೩೨. ಭಗವಂತನ ಮನಸ್ಸನ್ನು ಅರಿತವರು; ಅವನ ಮನಸ್ಸಿಗೆ ತಕ್ಕ ತನ್ನ ಮನಸ್ಸನ್ನು ಹೊಂದಿಸಿಕೊಳ್ಳುವವರು.67

'ಪರಮಾತ್ಮನ ಮತಿಗೆ ಅನುಗುಣವಾಗಿ ನನ್ನ ಮತಿಯು ಮುಕ್ತಿಯಲ್ಲಿ ಹೊಂದಿಕೊಳ್ಳುವುದು; ಆದುದರಿಂದ ಸಂಸಾರಾವಸ್ಥೆಯಲ್ಲೂ ಹೆಚ್ಚಿನ ವಿಷಯಗಳಲ್ಲಿ ನನ್ನ ಬುದ್ಧಿ ಅವನ ಬುದ್ಧಿಗೆ ಅನುಕೂಲವಾಗಿಯೇ ಇರುವುದು' –ಎಂದು ಸಾಮಾನ್ಯ ಸಾಧಕನೊಬ್ಬನೇ ಹಾರೈಸುತ್ತಿರುವನೆಂದರೆ68 ಮುಖ್ಯ ಸಾಧಕರಾದ ವಾಯುದೇವರ ಮನಸ್ಸು ಭಗವಂತನ ಮನಸ್ಸಿಗೆ ಅನುಕೂಲವಾಗಿಯೇ ಇರುವುದೆಂದು ಸುತರಾಂ ಸಿದ್ಧಿಸುವುದು ತಾನೇ?

೩೩. ಪ್ರತಿಯೊಬ್ಬ ಜೀವನ ಯೋಗ್ಯತೆಯನ್ನು ಬಲ್ಲವರು69

ಜೀವರ ಯೋಗ್ಯತೆಗೆ ರಮಾದೇವಿ ಅಭಿಮಾನಿನಿಯಾಗಿದ್ದು70 ಅವಳ ಅನುಗ್ರಹದಿಂದಾಗಿ ವಾಯುದೇವರು ಆ ಯೋಗ್ಯತೆಯನ್ನು ಬಲ್ಲವರಾಗಿರುವರು.

೩೪. ಜೀವರ ಎಚ್ಚರ-ನಿದ್ರೆ-ಸ್ವಪ್ನ-ಕಾಮ-ಕ್ರೋಧ ಇತ್ಯಾದಿ ಇತ್ಯಾದಿ ಬೇರೆ ಬೇರೆ ಅವಸ್ಥೆಗಳಲ್ಲೂ ಚಿತ್ರವಿಚಿತ್ರವಾಗಿ ಭಗವಂತನ ಉಪಾಸನೆ ನಡೆಸುತ್ತಿರುವವರು.71

ಕರ್ತವ್ಯಗಳ ಜಾಗೃತಿ ಮುಂತಾದ ಸಾತ್ವಿಕ ಅವಸ್ಥೆಗಳಲ್ಲಿ ಆಯಾ ಅವಸ್ಥೆಗಳಿಗೆ ಪ್ರೇರಕರಾದ ತತ್ವಾಭಿಮಾನಿಗಳ ಸತ್‌ಪ್ರೇರಣೆಯನ್ನು ಸಮರ್ಪಿಸುವ ಉಪಾಸನೆ, ಕಾಮ–ಕ್ರೋಧಾದಿಗಳ ಚಟುವಟಿಕೆಗಳ ಕೆಟ್ಟ ಅವಸ್ಥೆಗಳಲ್ಲಿ ಆಯಾ ಅವಸ್ಥೆಗಳಿಗೆ ಪ್ರೇರಕರಾದ ಕಾಲನೇಮಿ ಮುಂತಾದ ಅಸುರರ ಪಾತ್ರವನ್ನು ವಿಶ್ಲೇಷಿಸಿ, ಅವರ ಆ ದುಃಸಾಧನೆಯಿಂದ ಅವರಿಗೆ ದುರ್ಗತಿ ದೊರಕುವಂತೆ ಮಾಡಲು ಪ್ರಾರ್ಥಿಸುವ ಉಪಾಸನೆ –ಹೀಗೆ ಬೇರೆ ಬೇರೆ ಬಗೆಯ ಅವಸ್ಥೆಗೆ ಅನುಗುಣವಾಗಿ ಬೇರೆ ಬೇರೆ ಬಗೆಯ ಉಪಾಸನೆ ಎಂಬ ಅಭಿಪ್ರಾಯದಲ್ಲಿಯೇ 'ಚಿತ್ರಧಾ ವಿಚಿತ್ರಧಾ' ಎನ್ನಲಾಗಿದೆ. 'ನಿಷುಸೀದ ಗಣಪತೇ....' ಎಂಬ ಋಗ್ವೇದದ ಮಂತ್ರದಲ್ಲಿ 'ಚಿತ್ರಮರ್ಚ' ಎಂದು ಭಗವಂತನಲ್ಲಿ ತನ್ನನ್ನು ವಿಚಿತ್ರವಾಗಿ ಪೂಜಿಸಿಕೊಳ್ಳಲು ಹೇಗೆ ಪ್ರಾರ್ಥಿಸಲಾಗುವುದೋ ಹಾಗೆ.

★

---

67. ತ್ವಚ್ಚಿತ್ತಾಭಿಜ್ಞೇನ ತ್ವಚಿತ್ತಾನುಸಾರಿಚಿತ್ತೇನ....

68. ಬ್ರಹ್ಮಮತ್ಯನುಕೂಲಾ ಮೇ ಮತಿರ್ಮುಕ್ತೌ ಭವಿಷ್ಯತಿ । ಅತಃ ಪ್ರಾಯೋಽನುಕೂಲತ್ವಮಿದಾನೀಮಪಿ ಮೇ ಸ್ಥಿತಮ್ –*[ವಿಷ್ಣುತತ್ವನಿರ್ಣಯ –ಉದ್ಧೃತ]*

69. ಮದ್ಯೋಗ್ಯತಾಭಿಜ್ಞೇನ....

70. ಪೂರ್ವಪ್ರಜ್ಞಾ ಯೋಗ್ಯತಾ ಸ್ಯಾತ್ ರಮಾ ತದಭಿಮಾನಿನೀ –*[ಬೃಹದ್ಭಾಷ್ಯ -6-4-2]*

71. ಮಮ ಸರ್ವಾಸ್ವವಸ್ಥಾಸು ಚಿತ್ರಧಾ ವಿಚಿತ್ರಧಾ ತ್ವದುಪಾಸಕೇನ ಮುಖ್ಯಪ್ರಾಣೇನ.....

# 'ಸತ್ತತ್ವರತ್ನಮಾಲಾ'ದ ಕಂಪಿನಡಿ

## • ಪ್ರಾಣತತ್ವ •

ಶ್ರೀ ವಿಟ್ಠಲಾಚಾರ್ಯರ ಪುತ್ರ ಆನಂದತೀರ್ಥಾಚಾರ್ಯರಿಂದ ರಚಿತವಾಗಿರುವ 'ಸತ್ತತ್ವರತ್ನಮಾಲಾ'ದಲ್ಲಿ ಕಂಗೊಳಿಸುತ್ತಿರುವ ಸತ್ತತ್ವರತ್ನಗಳಲ್ಲಿ ಮುಖ್ಯಪ್ರಾಣತತ್ವವೂ ಒಂದು. ಏಳನೇ ಪ್ರಕರಣ 'ಬ್ರಹ್ಮವಾಯುಪ್ರಕರಣ' ಎಂದೇ ಉಲ್ಲೇಖಗೊಂಡು, ಆ ಪ್ರಕರಣದ ಸುಮಾರು ೪೦ ಶ್ಲೋಕಗಳು (145ರಿಂದ 183ನೇ ಪದ್ಯದ ವರೆಗೆ) ಸುಮಾರು ಇಪ್ಪತ್ತೈದು ವಿಚಾರಗಳಿಗೆ ಸಂಬಂಧಿಸಿದಂತೆ ಪ್ರಾಣತತ್ವ ಎಂಬ ರತ್ನವನ್ನು ಬೆಳಗಿಸುತ್ತಿವೆ. ಶ್ಲೋಕಗಳಿಗೆ ರಚಿತವಾದ 'ತತ್ವರತ್ನಪ್ರಕಾಶ' ಆ ಬೆಳಕಿಗೆ ಮತ್ತಷ್ಟು ತೀವ್ರತೆಯನ್ನು ನೀಡಿದೆ. ಆದ್ದರಿಂದ 'ತತ್ವರತ್ನಪ್ರಕಾಶ'ದಡಿ ಸತ್ತತ್ವರತ್ನಮಾಲಾದ ಆ ನಲ್ವತ್ತು ಶ್ಲೋಕಗಳು ಬೀರುವ ಕಂಪನ್ನು ಆಘ್ರಾಣಿಸಲು ಯತ್ನಿಸೋಣ.

**ತತ್ಪತೀ ಬ್ರಹ್ಮವಾಯೂ ತು ಮಹಾನಂತಗುಣಾಕರೌ ।**
**ಬ್ರಹ್ಮತ್ವಯೋಗ್ಯಾ ಜೀವಾಸ್ತು ಋಜವೋ ನಾಮ ಕೀರ್ತಿತಾಃ ।**
**ಅನಾದಿಕಾಲತಃ ಸರ್ವದೋಷಹೀನಾ ಗುಣಾಧಿಕಾಃ** ॥ ೧೪೬ ॥

ಸರಸ್ವತಿಯ ಪತಿ ಚತುರ್ಮುಖಬ್ರಹ್ಮ; ಭಾರತಿಯ ಪತಿ ವಾಯುದೇವ ಇವರಿಬ್ಬರೂ ಮಹತ್ತತ್ವಕ್ಕೆ ಅಭಿಮಾನಿಗಳು ಹಾಗೂ ಅನಂತಗುಣಸಂಪನ್ನರು. ಸಾಮಾನ್ಯಜೀವರಲ್ಲಿ ಅನಂತಗುಣಸಂಪನ್ನತೆ ಅಸಂಭಾವಿತವೆನಿಸಬಹುದಾದರೂ ಚತುರ್ಮುಖನ ಪದವಿಯನ್ನು ಏರಲು ಯೋಗ್ಯರೆನಿಸಿರುವ ವಾಯ್ವಾದಿಗಳು ಅನಂತಗುಣಪೂರ್ಣರೆನಿಸಬಹುದಾಗಿದೆ. ಅಲ್ಲದೆ, 'ಋಜುಗಳು' ಎಂಬ ಅವರಿಗಿರುವ ಪ್ರಸಿದ್ಧಿಯೂ ಅವರ ಗುಣಪೂರ್ಣತ್ವವನ್ನು ಸಾಧಿಸಬಲ್ಲದು. ಶ್ರೀಮನ್ನ್ಯಾಯಸುಧಾದಲ್ಲಿ ಋಜುಗಳು ಅಂದರೆ ಒಳ್ಳೆಯವರು, ನಿರ್ದುಷ್ಟರು ಎಂದೇ ಅರ್ಥ ಎಂದು ಅಭಿಪ್ರಾಯಪಡಲಾಗಿದೆ– **'ಋಜವಃ ಸಮೀಚೀನಾಃ ನಿರ್ದೋಷಾ ಇತಿ ಹ್ಯನರ್ಥಾಂತರವ್'** ಇತಿ. ಆದುದರಿಂದ 'ಋಜು' ಎಂದು ಕರೆಸಿ ಕೊಳ್ಳುವ ಆ ಜೀವಸಮುದಾಯ ಆ ಹೆಸರಿಗೆ ಅನುಗುಣವಾಗಿ ಅನಾದಿಕಾಲದಿಂದಲೂ ಯಾವುದೇ ದೋಷಕ್ಕೆ ಒಳಗಾಗದವರು. ಹಾಗೂ ಅನಂತಗುಣಪೂರ್ಣರಾದವರು.

### ವಾಯುದೇವನ ನಿರ್ದೋಷತ್ವ:

'ವಾಯುಸ್ತು ಬ್ರಹ್ಮಣಃ ಪುತ್ರಃ.....ಪ್ರಾಯಃ ಸತ್ವಾತ್ಮಕಸ್ತಥಾ [11-24-7] ಎಂಬು ದಾಗಿ ಭಾಗವತದಲ್ಲಿ ಚತುರ್ಮುಖನ ಪುತ್ರನಾಗಿ ಹುಟ್ಟಿದ ವಾಯುದೇವನಿಗೆ ತ್ರಿಗುಣಾತ್ಮ ಕತ್ವವನ್ನು ಹೇಳಲಾಗಿದೆ. ತ್ರಿಗುಣಾತ್ಮಕತ್ವಕ್ಕೆ ಪ್ರಯೋಜಕವಾದ ಪ್ರಕೃತಿಸಂಬಂಧ ದೋಷ

ಎನಿಸದೇ? ಚತುರ್ಮುಖನಿಗೆ ಹೇಗೋ ಹಾಗೆ ವಾಯುದೇವನಿಗೆ ಪ್ರಕೃತಿಯ ಸಂಬಂಧ ಇದೆ ಎಂಬುದು ನಿಜವಾದರೂ, ಅದು ಬಂಧಕವಾಗಿಲ್ಲ. ಪ್ರಕೃತ್ಯಾದಿಗಳೆಲ್ಲ ವಾಯುದೇವನ ಅಧೀನವಾಗಿರುವುದರಿಂದ, ಪ್ರಕೃತ್ಯಾದಿಗಳ ಸತ್ತಾ, ಬಂಧಕಶಕ್ತಿ ಮುಂತಾದವೂ ವಾಯು ದೇವನಿಗೆ ಅಧೀನವಾಗಿರುವುದರಿಂದ ಇಂತಹ ಪ್ರಕೃತ್ಯಾದಿಗಳು ವಾಯುದೇವನಿಗೆ ಬಂಧಕ ವೆನಿಸುವುದಾದರೂ ಹೇಗೆ? ಆದುದರಿಂದ ಬರೇ ಭಗವಂತನ ಇಚ್ಛೆಯಿಂದ ಹಾಗೂ ಭಗವದಧೀನಳಾದ ಚಿತ್‌ಪ್ರಕೃತಿಯಿಂದಾಗಿ ಋಜುಗಳಿಗೆ ಪ್ರಕೃತಿಯ ಸಂಬಂಧವಷ್ಟೇ.

ದಗ್ಧಪಟಾಯಮಾನ –ಬೆಂಕಿಯಿಂದ ಸುಡಲ್ಪಟ್ಟ ಬಟ್ಟೆ ಮೇಲ್ನೋಟಕ್ಕೆ ಬಟ್ಟೆಯ ಆಕಾರದಲ್ಲೇ ಇದ್ದರೂ ಮುಟ್ಟಿದಾಕ್ಷಣ ಬೂದಿಯಾಗಬಲ್ಲ ಅದು ಬಟ್ಟೆಯ ಕಾರ್ಯ ವನ್ನೇನನ್ನೂ ಮಾಡಲಾರದು ತಾನೇ? ಅಂತೆಯೇ ವಾಯುದೇವನಿಗೆ ಸಂಬಂಧಿಸುವ ಪ್ರಕೃತಿ ತನ್ನ ಸತ್ವಾದಿಗುಣಗಳಿಂದ ಅವನ ಮೇಲೆ ಏನೂ ಪ್ರಭಾವ ಬೀರುವುದಿಲ್ಲ. ಪ್ರಕೃತಿ ಭಯಾದಿಗಳನ್ನು ಉಂಟುಮಾಡಿ, ಆ ಭಯಾದಿಗಳಿಂದ ದುಃಖಾದಿಗಳು ಉಂಟಾಗಿ, ದುಃಖಾದಿಗಳಿಂದಾಗಿ ನೀಚತ್ವಾದಿ ಭಾವನೆಗಳು ಉಂಟಾಯಿತೆಂದರೆ ಆಗಷ್ಟೇ ಪ್ರಕೃತಿ ಬಂಧಕವೆನಿಸುವುದು! ಈ ಬಗೆಯಲ್ಲಿ ಜಡಪ್ರಕೃತಿ ವಾಯುದೇವನಿಗೆ ಬಂಧಕವಾಗುವುದಿಲ್ಲ. ಆದರೆ ಭಗವದಿಚ್ಛಾನುಸಾರೇಣ ಚಿತ್‌ಪ್ರಕೃತಿಯಿಂದಾಗಿ ವಾಯುದೇವನಲ್ಲಿ ಕಿಂಚಿದ್ ಭಯಾದಿಗಳು ಉಂಟಾಗುವಷ್ಟೇ.

- ಭಾವರೂಪಾಜ್ಞಾನದ ಸಂಬಂಧವಿಲ್ಲದೆಯೇ ಬರೇ ಭಗವಂತನ ಇಚ್ಛೆಯಿಂದಲೇ, ಚಿತ್‌ಪ್ರಕೃತಿಯಿಂದ ವೃತ್ತಿಜ್ಞಾನದ ಉಪರಮರೂಪವಾದ ಸುಷುಪ್ತಿಯನ್ನು ವಾಯು ದೇವನಿಗೆ ಪ್ರಲಯಕಾಲದಲ್ಲಿ ಒಪ್ಪಲಾಗುವುದರಿಂದಾಗಿ ಆ ಪ್ರಯುಕ್ತವೂ ವಾಯು ದೇವನಿಗೆ ದೋಷಕ್ಕೆ ಅವಕಾಶವಿಲ್ಲ.

- ವಾಯುದೇವನಿಗೆ ಸಂಸಾರಾವಸ್ಥೆ ಇದೆ ಎಂದ ಮೇಲೆ ಅದಕ್ಕೆ ಪ್ರಯೋಜಕವಾಗಿ ಕರ್ಮಬಂಧವನ್ನು ಒಪ್ಪಲೇ ಬೇಕಾಗುವುದು ತಾನೇ? ಭಗವಂತನು ಕರ್ಮಬಂಧ ವಿಲ್ಲದೆಯೇ ಸಂಸಾರಾವಸ್ಥೆಯನ್ನು ನೀಡುವನೆಂದು ಒಪ್ಪಿಕೊಂಡಲ್ಲಿ ವೈಷಮ್ಯದೋಷ ಸಂಭವಿಸೀತು! ಸಂಸಾರಕ್ಕೆ ಪ್ರಯೋಜಕವಾಗಿ ಬಂಧಕ ದುಷ್ಕರ್ಮ ವಾಯುದೇವನ ಪಾಲಿಗೆ ಇಲ್ಲ. ಆದರೆ ಸಂಸಾರಬಂಧನಕ್ಕೆ ಕಾರಣವಾಗಿ ಗುಣಾಲ್ಪತಾರೂಪವಾದ ದೋಷ ವಾಯುದೇವನಲ್ಲಿ ಇರುವುದು. ತನಗೆ ಯೋಗ್ಯವಾದ ಸಂಪೂರ್ಣವಾದ ಭಗವದುಪಾಸನಾವಿಷಯಕವಾದ ಪರಮೋತ್ಸಾಹವನ್ನು ಕಳೆದುಕೊಂಡಿರುವಿಕೆಯೇ ವಾಯುದೇವನಲ್ಲಿರುವ ಗುಣಾಲ್ಪತಾರೂಪವಾದ ದೋಷ. ಈ ಬಗೆಯ ದೋಷದ ಆಧಾರದಲ್ಲಿ ಭಗವಂತನು ವಾಯುದೇವನಿಗೆ ಸಂಸಾರಬಂಧನವನ್ನು ತೊಡಿಸುವುದ ರಿಂದ ಭಗವಂತನಲ್ಲಿ ವೈಷಮ್ಯದೋಷ ಆರೋಪಕ್ಕೆ ಅವಕಾಶವಿಲ್ಲ. ಹೀಗೆ ವಾಯು ದೇವನಲ್ಲಿ ಅಲ್ಪಪ್ರಮಾಣದ ದೋಷವಷ್ಟೇ ಇರುವುದರಿಂದ ವಾಯುದೇವ ನಿರ್ದೋಷ ಎಂಬ ವ್ಯವಹಾರ ಬಂದಿದೆಯಷ್ಟೇ.

ಇದನ್ನೇ ಹೀಗೆ ತಿಳಿಸಲಾಗಿದೆ–

**ಋಜೂನಾಮೇಕ ಏವಾಸ್ತಿ ಪರಮೋತ್ಸಾಹವರ್ಜನಮ್ ।**
**ಸ ಗುಣಾಲ್ಪತ್ವಮಾತ್ರತ್ವಾನ್ನರ್ಜುತ್ವೇನ ವಿರುದ್ಧ್ಯತೇ ॥**

ಋಜುಗಳಲ್ಲಿ 'ಪರಮೋತ್ಸಾಹರಾಹಿತ್ಯ' ಎಂಬ ಒಂದು ದೋಷವಷ್ಟೇ ಇರುವುದು.

ಪರಮೋತ್ಸಾಹರಾಹಿತ್ಯ ಗುಣಾಲ್ಪತ್ವವೇ ಹೊರತು ದೋಷವೇ ಅಲ್ಲ. ಆದುದರಿಂದಲೂ 'ಪರಮೋತ್ಸಾಹವರ್ಜನ'ಕ್ಕೆ ಒಳಗಾದ ಋಜುಗಳು ದೋಷರಹಿತರೆಂಬ ಅರ್ಥದಲ್ಲಿ ಋಜುಗಳೆನಿಸಲು ವಿರೋಧಕ್ಕೆ ಅವಕಾಶವಿಲ್ಲ.

**ಅಘಶಬ್ದೋದಿತೋಽಪ್ಯೇಷ ಏವಾನ್ಯನ್ನೈವ ತತ್ರ ಹಿ॥ ೧೪೭ ॥**

'ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ' –ಎಂಬ ಬ್ರಹ್ಮಸೂತ್ರದಲ್ಲಿ ವಾಯುದೇವನಿಗೂ ಭಗವಂತನ ಸಾಕ್ಷಾತ್ಕಾರ ಆದಾಗ ಹಿಂದಿನ 'ಅಘ'ದ ಪಾಪದ ಲೇಪ ಆಗುವುದಿಲ್ಲ ಎಂದು ಸಿದ್ಧಾಂತಿಸಲಾಗಿದೆ. ವಾಯುದೇವನಲ್ಲಾಗಲೀ, ಚತುರ್ಮುಖನಲ್ಲಾಗಲೀ ಅಘದ, ಪಾಪದ ಪ್ರಸಕ್ತಿಯೇ ಇಲ್ಲದೆ ಇರುವುದರಿಂದ ಅದರ ಅಲೇಪ ಎಂದು ಹೇಳುವುದಾದರೂ ಹೇಗೆ? ಎಂದರೆ –ಚತುರ್ಮುಖ, ವಾಯುದೇವರ ಪಾಲಿನ 'ಅಘ' –ಎಂದರೆ ಪರಮೋತ್ಸಾಹವರ್ಜನವೇ ಹೊರತು ಬೇರೆ ಯಾವುದೇ ಬಗೆಯ ಪಾಪ ಅಲ್ಲ. ಭಗವಂತನ ಸಾಕ್ಷಾತ್ಕಾರ ಆದಾಗ ಅದುವರೆಗೆ ವಾಯುದೇವನಲ್ಲಿದ್ದ 'ಪರಮೋತ್ಸಾಹವರ್ಜನ' ಪರಿಹಾರವಾಗುವುದು; ಮುಂದೆ ಉಪಾಸನೆಯ ವಿಷಯದಲ್ಲಿ ಪರಮೋತ್ಸಾಹವನ್ನು ಕೈಗೊಳ್ಳುವರು –ಎಂಬ ಆಶಯ.

## ವಾಯುದೇವನ ಸರ್ವಗುಣಪೂರ್ಣತ್ವ:

**ಸಮಸ್ತಲಕ್ಷಣೈಃ ಪೂರ್ಣಾಃ ಸಮಸ್ತಜಗದೀಶ್ವರಾಃ ।**
**ಮುಕ್ತಪ್ರಾಯಾ ಸದಾ ಸರ್ವೇ ಸಮಾ ದೇಹಾದಿಭಿಸ್ತಥಾ ॥ ೧೪೮ ॥**

ಋಜುಗಳು ಮೂವತ್ತೆರಡು ಲಕ್ಷಣಗಳಿಂದಲೂ ಕೂಡಿರುವರು. ಸಮಸ್ತ ಜಗತ್ತಿಗೆ ಅಧಿಪತಿಗಳಾಗಿರುವರು. ಸಂಸಾರಾವಸ್ಥೆಯಲ್ಲಿದ್ದರೂ ನಿರ್ದೋಷತ್ವ ಹಾಗೂ ಗುಣಪೂರ್ಣತ್ವಗಳಿಂದಾಗಿ ಮುಕ್ತರಂತೆಯೇ ಇರುವರು. ಯಾವಾಗಲೂ ಎಲ್ಲರೂ ದೇಹಾದಿಗಳಿಂದ ಸಮಾನರಾಗುವರು.

## ಋಜುಗಳ ಜ್ಞಾನವೈಭವ:

**ಸವಿಶೇಷಂ ಜಗತ್ಸರ್ವಂ ಭೂತಂ ಭವ್ಯಂ ಭವಚ್ಚ ಯತ್ ।**
**ಆಲೋಚನಾಚ್ಚ ಯಜ್ಞಾನೇ ಭಾಸತೇ ಪರಮಾಣುವತ್ ॥ ೧೪೯ ॥**

**ಅಸಾರ್ವತ್ರಿಕಮೀಶೇ ತು ತಥೈವಾನಾದಿನಿತ್ಯಕಮ್ ।**
**ಕ್ರಮಾತ್ ಪ್ರವರ್ಧಮಾನಂ ಸ್ಯಾದಾಮುಕ್ತೇಸ್ತು ತತೋಽವ್ಯಯಮ್ ॥ ೧೫೦ ॥**

'ಈಶೇ ಜೀವೇಭ್ಯೋऽಧಿಕಮನ್ಯತ್ರಾಲೋಚನೇ ಸರ್ವವಿಷಯಮ್' –ಎಂಬ ಋಜು ಯೋಗಿಗಳ ಜ್ಞಾನದ ವೈಭವವನ್ನು ಹೀಗೆ ಬಣ್ಣಿಸಲಾಗಿದೆ– ಯಾವ ಜ್ಞಾನದಲ್ಲಿ ಆಲೋಚನೆಯಿಂದಾಗಿ ಸಕಲಧರ್ಮಗಳಿಂದ ಕೂಡಿದ, ಹಿಂದಿನ ಮುಂದಿನ ಹಾಗೂ ಈಗ ಇರುವ ಸರ್ವಜಗತ್ತು ಪರಮಾಣುವಿನಂತೆ ಕಾಣಿಸುವುದೋ, ಪರಮಾತ್ಮನ ವಿಷಯದಲ್ಲಿ ಮಾತ್ರ ಎಲ್ಲವನ್ನೂ ಗ್ರಹಿಸಲಾರದೋ, ಅನಾದಿನಿತ್ಯವಾಗಿದೆಯೋ, ಮುಕ್ತಿಯ ವರೆಗೂ ಕ್ರಮವಾಗಿ ಅಭಿವೃದ್ಧಿ ಹೊಂದುತ್ತ ಇದ್ದು, ಮುಕ್ತಿ ಹೊಂದಿದ ಬಳಿಕ ನಾಶಕ್ಕೆ ಹಾಗೆಯೇ ಯಾವುದೇ ವಿಕಾರಕ್ಕೆ ಒಳಗಾಗುವುದಿಲ್ಲವೋ ಅದು ಋಜುಯೋಗಿ ಜ್ಞಾನ ಎನಿಸಿದೆ.

- ಜ್ಞಾನಾನಂದಾದಿಗುಣಾಕಾರವಾದ ರಮಾದೇವಿಯ ಸ್ವರೂಪವೂ ಈಶಾಂತರಂಗ ವಾಗಿದ್ದು ಈಶಕೋಟಿಪ್ರವಿಷ್ಟವಾಗಿರುವುದರಿಂದ ಈಶ ವಿಷಯದಲ್ಲಿ ಹೇಗೋ ಹಾಗೆಯೇ ರಮಾಸ್ವರೂಪದ ವಿಷಯದಲ್ಲೂ ಋಜುಯೋಗಿಗಳ ಜ್ಞಾನ ಅಸಾರ್ವ ತ್ರಿಕ; ಅಂದರೆ ಸಂಪೂರ್ಣವಾಗಿ ಗ್ರಹಿಸಲಾರದು.
- 'ಅಯಂ ಘಟಃ' –ಇದು ಮಡಿಕೆ –ಎಂದು ಉಂಟಾಗುವ ಋಜುಯೋಗಿ ಜ್ಞಾನದಲ್ಲಿ 'ಈಶಾದನ್ಯತ್ರ ಸರ್ವವಿಷಯಕತ್ವ' ರೂಪವಾದ ಋಜುಯೋಗಿಜ್ಞಾನದ ಲಕ್ಷಣವನ್ನು ಹೀಗೆ ಸಮನ್ವಯಿಸಬೇಕು –ಋಜುಯೋಗಿಗಳು ಒಂದು ಮಡಿಕೆಯನ್ನು ತಿಳಿದು ಕೊಳ್ಳುವಾಗ ಆ ಮಡಿಕೆ ಈಶನಿಂದ ನಿಯಮ್ಯ, ಈಶನಿಂದ ಸೃಷ್ಟ, ಮಡಿಕೆಯ ಸತ್ತಾ ಪ್ರತೀತ್ಯಾದಿಗಳೂ ಈಶಾಧೀನವಾದವು –ಇವೆಲ್ಲವನ್ನೂ ತಿಳಿಯುವರು. ಆದುದರಿಂದ ಘಟಜ್ಞಾನ ಸರ್ವವಿಷಯಕವೆನಿಸುವುದು. ಆದರೆ ಭಗವಂತನು ಈ ಘಟವನ್ನು ಹೇಗೆ ಪ್ರೇರಿಸುವವನು? ಹೇಗೆ ಸೃಷ್ಟಿಸುವನು? ಇತ್ಯಾದಿ ಘಟಕ್ಕೆ ಸಂಬಂಧಿಸುವ ಭಗವಂತನ ಧರ್ಮವನ್ನು ಸಮಗ್ರವಾಗಿ ತಿಳಿಯುವುದಿಲ್ಲ. ತಲವಕಾರೋಪನಿಷತ್ತಿನಲ್ಲಿ ಚತು ರ್ಮುಖನ ಮಾತೇ ಹೀಗೆ ಉಲ್ಲೇಖಗೊಂಡಿದೆ– 'ನ ವಿದ್ಮ ನ ವಿಜಾನೀಮೋ ಯಥೈವದನುಶಿಷ್ಯಾತ್....' –ಭಗವಂತನು ಹೇಗೆ ಪ್ರೇರಿಸುವನೆಂಬುದನ್ನು ನಾವು ತಿಳಿದಿಲ್ಲ ಎಂದು. ಹಾಗೆಯೇ ಬೃಹದಾರಣ್ಯಕೋಪನಿಷತ್ತಿನ ಅಂತರ್ಯಾಮಿ ಬ್ರಾಹ್ಮಣದಲ್ಲಿ [5-7-2....23] ಪೃಥಿವಿ, ಅಪ್, ಅಗ್ನಿ –ಇತ್ಯಾದಿ ಶಬ್ದವಾಚ್ಯರಾದ ಗರುಡ ಮುಂತಾದ ದೇವತೆಗಳು ತಮ್ಮ ಅಂತರ್ಯಾಮಿರೂಪವನ್ನು ಚೆನ್ನಾಗಿ ತಿಳಿದಿಲ್ಲ– 'ಯಂ ಪೃಥಿವೀ ನ ವೇದ' 'ಯಮಾಪೋ ನ ವಿದುಃ...' ಎಂದೆಲ್ಲ ಹೇಗಿದೆಯೋ ಹಾಗೆ 'ವಿಜ್ಞಾನ' –ಎನಿಸಿರುವ ಚತುರ್ಮುಖನ ರೂಪ ಕೂಡ 'ಯಂ ವಿಜ್ಞಾನಂ ನ ವೇದ' [ಬೃ.ಉ. 5-8-22] ಎಂದಿರುವಂತೆ ವಿಜ್ಞಾನ ಎನಿಸುವ ಚತುರ್ಮುಖ ತನ್ನ ಅಂತರ್ಯಾಮಿ ತನ್ನನ್ನು ಹೇಗೆ ಪ್ರೇರಿಸುವನೆಂದು ಸಾಕಲ್ಯೇನ ತಿಳಿದಿಲ್ಲ –ಎಂದು ಹೇಳಲಾಗಿದೆ. ಇದನ್ನೇ 'ಈಶಾದನ್ಯತ್ರ....' ಎಂಬ ಮಾತಿನಿಂದ ತಿಳಿಸಲಾಗುವುದೆಂದು ಇಟ್ಟುಕೊಳ್ಳಬೇಕು.

**ಅಭಿವ್ಯಕ್ತ್ಯತಿಶಯಃ**

ಪಾರೋಕ್ಷ್ಯೇಣ ತು ಪೂರ್ಣಂ ಸ್ಯಾತ್ತೇಷಾಂ ಜ್ಞಾನಂ ಸದೈವ ಹಿ ।
ವಿಶೇಷೇಣಾಪರೋಕ್ಷಾಚ್ಚ ಕ್ರಮಾದ್ ವೃದ್ಧಿರುದೀರಿತಾ ॥ ೧೫೧ ॥

ಋಜುಗಳ ಜ್ಞಾನ ಮುಕ್ತಿಯವರೆಗೂ ಕ್ರಮವಾಗಿ ವೃದ್ಧಿ ಹೊಂದುತ್ತಿರುವುದೆಂಬ ಮಾತನ್ನು ಅವರ ಜ್ಞಾನದಲ್ಲಿ ಅಭಿವ್ಯಕ್ತ್ಯತಿಶಯ ಅಂದರೆ ಅಭಿವ್ಯಕ್ತಿರೂಪವಾದ ಹೆಚ್ಚುಗಾರಿಕೆ ಉಂಟಾಗುತ್ತ ಇರುವುದೆಂದು ಹೇಳಲಾಗುವುದು. ಆದರೆ ಷಾಡ್ಗುಣ್ಯ [ಭಾ.ತಾ.ನಿ. 4-23-29] 'ಅನಾದಿಕಾಲಭಕ್ತಾಶ್ಚ ಜ್ಞಾನಿನಸ್ತೇ ನ ಸಂಶಯಃ । ವಿಶಿಷ್ಟಾ ಜ್ಞಾನಭಕ್ತ್ಯಾದೌ ಸರ್ವಜೀವನಿಕಾಯತಃ' –ಎಂಬುದಾಗಿ ಅನಾದಿಕಾಲದಿಂದಲೂ ಋಜುಗಳು ಹೇಗೆ ಭಕ್ತರಾಗಿರುವರೋ ಹಾಗೆಯೇ ಜ್ಞಾನಿಗಳೂ ಆಗಿರುವರೆಂದು ನಿರೂಪಿಸಲಾಗಿದೆ. ಅನಾದಿ ಕಾಲದಿಂದ ಜ್ಞಾನಿಗಳೆನಿಸಿರುವ ಅವರ ಜ್ಞಾನದಲ್ಲಿ ಯಾವುದೇ ಧರ್ಮದ ಅಭಿವ್ಯಕ್ತಿಯಾಗುವುದಾದರೂ ಹೇಗೆ? ಪರೋಕ್ಷವಾಗಿ ಅವರು ಎಲ್ಲವನ್ನೂ ಬಲ್ಲವರಾಗಿದ್ದು ತಮಗೆ ಯೋಗ್ಯಗಳಾದ ಭಗವದ್ಗುಣ ರೂಪಕ್ರಿಯಾದಿಗಳನ್ನೂ ಯಾವಾಗಲೂ ತಿಳಿದಿರುವ ಅವರ ಜ್ಞಾನ ಪೂರ್ಣವೇ ಆಗಿದೆ. ಹಾಗೆಯೇ ಕೆಲವು ಭಗವದ್ರೂಪಗಳ, ಗುಣಾದಿಗಳ ಅಪರೋಕ್ಷಜ್ಞಾನವೂ ಇದೆ. ಆದರೂ ಇತರ ಗುಣ, ರೂಪಾದಿಗಳ ವಿಷಯದಲ್ಲಿ ಅಪರೋಕ್ಷಜ್ಞಾನವು ಕ್ರಮವಾಗಿ ಅಭಿವೃದ್ಧಿ ಹೊಂದುತ್ತಿರುವುದು. ಹೀಗೆ– 'ಶತಜನ್ಮಸು ಪೂರ್ವಂ ತು ಜ್ಞಾನೋದಯ ಉದೀರ್ಯತೇ । ಅಪರೋಕ್ಷ್ಯೇಣ ಪಾರೋಕ್ಷ್ಯಾತ್ ಪೂರ್ಣಂ ಜ್ಞಾನಂ ಸದೈವ ತು ।' –ಎಂದು 'ಶಕ್ತಿವಿವೇಕ' ಗ್ರಂಥ ತಿಳಿಸುವಂತೆ ಬ್ರಹ್ಮ ಪದವೀಯೋಗ್ಯರಿಗೆ ನೂರುಜನ್ಮಗಳಲ್ಲಿಯ ಮೊದಲಿನ ಜನ್ಮದಲ್ಲಿಯೇ ಅಪರೋಕ್ಷ್ಯದಿಂದ ಜ್ಞಾನೋದಯ ಇದೆ. ಹೀಗೆ ಅಪರೋಕ್ಷಜ್ಞಾನ ಆದ ಬಳಿಕ ನೂರನೆಯ ಜನ್ಮದಲ್ಲಿ ಅವರಿಗೆ ಬ್ರಹ್ಮಪದವಿಯ ಪ್ರಾಪ್ತಿ. ಪಾರೋಕ್ಷ್ಯದಿಂದ ಪೂರ್ಣಜ್ಞಾನ ಯಾವಾಗಲೂ ಇದ್ದೇ ಇರುವುದು. ನೂರು ಜನ್ಮಗಳ ಪೂರ್ವದಲ್ಲೇ ಜ್ಞಾನೋದಯ ಆಗಿರುವುದಾದರೂ ಕರ್ಮಕ್ಷಯ, ಪದಪ್ರಾಪ್ತ್ಯಾದಿ ಸಾಧನಯೋಗ್ಯವಾದ ಅಪರೋಕ್ಷಜ್ಞಾನ ಕೊನೆಯಲ್ಲಿಯೇ ಬರುವಂತಹದ್ದು. ಅನಾದಿಕಾಲದಿಂದ ಇರುವ ಅಪರೋಕ್ಷಜ್ಞಾನಜ್ಞಾನ ಸಾಮಾನ್ಯಜ್ಞಾನವಷ್ಟೇ. ಇದನ್ನೇ ಷಾಡ್ಗುಣ್ಯ[4-23-29] ಹೀಗೆ ಸ್ಪಷ್ಟಪಡಿಸಿದೆ– 'ವಿಶಿಷ್ಟಾ ಜ್ಞಾನಭಕ್ತ್ಯಾದೌ ಸರ್ವಜೀವನಿಕಾಯತಃ । ಸರ್ವದಾಽಪಿ....' ಯಾವಾಗಲೂ ಉಳಿದೆಲ್ಲ ಜೀವರಿಗಿಂತ ಋಜುಯೋಗಿಗಳು ಜ್ಞಾನಭಕ್ತ್ಯಾದಿಗಳಲ್ಲಿ ವಿಶಿಷ್ಟರೇ ಆಗಿರುವರಾದರೂ '....ವಿಶೇಷೇಣ ಶತಜನ್ಮಪ್ರಯತ್ನತಃ । ಸ್ವಪದಪ್ರಾಪ್ತಿರುದಿಷ್ಟಾ' ಪದಪ್ರಾಪ್ತಿ ಸಾಧನಯೋಗ್ಯವಾದ ಅಪರೋಕ್ಷಜ್ಞಾನವಿಶೇಷ ಶತಜನ್ಮದ ಬಳಿಕ ಉಂಟಾಗುವಂತಹದ್ದು. ಇದನ್ನೇ ಜ್ಞಾನಾಭಿವ್ಯಕ್ತಿ ಕ್ರಮವಾಗಿ ಆಗುವುದೆಂದು ತಿಳಿಸಲಾಗಿದೆ.

ಆದುದರಿಂದ ಅನಾದಿಕಾಲದಿಂದ ಕೆಲವು ರೂಪಗುಣಾದಿಗಳ ವಿಷಯದಲ್ಲಿ ಋಜುಗಳಿಗೆ ಅಪರೋಕ್ಷ ಇರುವುದಾದರೂ ವಿಶೇಷವಾದ ಅಪರೋಕ್ಷದಿಂದ ಋಜುವಾಗಿ ಜ್ಞಾನದ ಕ್ರಮವಾದ ಅಭಿವ್ಯಕ್ತಿರೂಪವಾದ ಕ್ರಮವಾದ ಅಭಿವೃದ್ಧಿಯು ಕೂಡಬಹುದಾಗಿದೆ.

## ವೇದಜ್ಞಾನ:

ಸರ್ವವೇದಾಧಿಕಜ್ಞಾನಾ ಮಹಾಪ್ರತಿಭಯಾ ಯುತಾಃ ।
ವೇದೈಃ ಸಂಪಾದಿತಾಮಾತ್ರಂ ತೇಷಾಂ ಜ್ಞಾನೇಽಭಿಧೀಯತೇ ॥ ೧೫೨ ॥

ಋಜುಗಳು ಸರ್ವವೇದಗಳಿಗಿಂತಲೂ ಅಧಿಕವಾಗಿ ಬಲ್ಲವರಾಗಿರುವರು. ಮಹಾ ಪ್ರತಿಭೆಯಿಂದ ಕೂಡಿರುವರು. ಅವರ ಜ್ಞಾನದಲ್ಲಿ ವೇದದ ಮಾತುಗಳ ಸಂವಾದವನ್ನಷ್ಟೇ ತೋರಿಸಲಾಗುವುದು. ಹೊರತು ಹೊಸ ವಿಚಾರಗಳನ್ನು ವೇದದಿಂದ ತಿಳಿದುಕೊಳ್ಳ ಬೇಕಾದದ್ದಿಲ್ಲ.

'ತತ್ವಂ ವೇದಾನುಸಾರೇಣ ಚಿಂತಯನ್ ವೈದಿಕೋ ಭವೇತ್ ।

ವೇದ ಊಹಾಮನುಸ್ಮರೇದ್ಯಸ್ಯ ಸ ತ್ಯಕ್ತವೈದಿಕಃ –ಎಂದು ಭಾಗವತತಾತ್ಪರ್ಯ ನಿರ್ಣಯದಲ್ಲಿ ತಿಳಿಸಿರುವಂತೆ (4-28-48) ಚತುರ್ಮುಖನು ವೈದಿಕನೂ ಹೌದು; ತ್ಯಕ್ತವೈದಿಕನೂ ಹೌದು. ಅಂದರೆ ವೇದಾನುಸಾರವಾಗಿ ತತ್ವದ ಚಿಂತನೆ ನಡೆಸುವುದರಿಂದ ವೈದಿಕವೆನಿಸಿದರೆ, ಚತುರ್ಮುಖನ ಊಹೆಯನ್ನು ಅಂದರೆ ಪ್ರತಿಭೆಯನ್ನು ಅನುಸರಿಸಿ ವೇದದ ವಿಚಾರಗಳಿಗಿರುವುದರಿಂದ ಅವನು ತ್ಯಕ್ತವೇದಿಕ.

ಶ್ರೀವಿಷ್ಣುವಿನ ಪ್ರೀತಿಗಾಗಿಯಷ್ಟೇ ಚತುರ್ಮುಖನು ಅವನಿಂದ ಶಾಸ್ತ್ರಶ್ರವಣ ನಡೆಸು ವನೇ ಹೊರತು ಅಧಿಕಜ್ಞಾನಕ್ಕಾಗಿ ಅಲ್ಲ.

**ವಾಯುದೇವನ ಅಭಿಮಾನಿತ್ವ:**

ವಾಯುರ್ಹಿ ಸರ್ವಜೀವಾನಾಮಭಿಮಾನೀ ನಿಯಾಮಕಃ ।
ಬಲಮೇಧಾಧೃತಿಸ್ಥೈರ್ಯಧ್ಯಾನವೈರಾಗ್ಯಮಾನವಾನ್ ॥ ೧೫೩ ॥

ಸಜ್ಞಾನಾನಂದಭಕ್ತ್ಯಾದಿಗುಣಮಾನೀ ಸ ಏಕಲಃ ।
ಆನಂದಾನುಭವಸ್ಯಾಪಿ ವಿಮುಕ್ತೇರಪಿ ಸ ಪ್ರಭುಃ ॥ ೧೫೪ ॥

ವಾಯುದೇವ ಸರ್ವಜೀವರಿಗೂ ಅಭಿಮಾನಿ, ನಿಯಾಮಕ. ಆದುದರಿಂದಲೂ ಸರ್ವಗುಣಪೂರ್ಣ ಬಲ, ಮೇಧಾ ಎನಿಸುವ ಧಾರಣಾಸಾಮರ್ಥ್ಯಯುಕ್ತವಾದ ಬುದ್ಧಿ, ಸಾತ್ವಿಕ ಧೈರ್ಯ, ಧರ್ಮಮಾರ್ಗದಲ್ಲಿ ಸ್ಥಿರತೆ, ಧ್ಯಾನ, ವೈರಾಗ್ಯ –ಈ ಗುಣಗಳಿಗೂ ವಾಯುದೇವ ಅಭಿಮಾನಿ. ಹಾಗೆಯೇ ನಿರ್ದುಷ್ಟವಾದ ಜ್ಞಾನ, ನಿರ್ದುಷ್ಟವಾದ ಆನಂದ, ಭಗವದ್‌ಭಕ್ತಿ, ಸಮಾಧಿ, ವೈರಾಗ್ಯ –ಈ ಗುಣಗಳಿಗೂ ಅವನೇ ಅಭಿಮಾನಿ. ಜೀವನಿಗೂ ಮೋಕ್ಷಕ್ಕೂ ಅದರ ಆನಂದಾನುಭವಕ್ಕೂ ಅವನೇ ಅಭಿಮಾನಿ.

- ವಾಯುದೇವ ಸಂಸಾರಿ ಜೀವರಿಗೆ ನಿಯಾಮಕನೇ ಹೊರತು ಮುಕ್ತಜೀವರಿಗಲ್ಲ. 'ಮುಕ್ತಾ ಏವ ಹಿ ಮುಕ್ತಾನಾಂ ವಿಶಿಷ್ಟಾ ವಿನಿಯಾಮಕಾಃ' –ಎಂಬುದಾಗಿ ಮುಕ್ತ ಜೀವರಿಗೆ ಮುಕ್ತರೇ ನಿಯಾಮಕರೆಂದು ಹೇಳಲಾಗಿದೆ.
- ಪ್ರತಿ ಕಲ್ಪದಲ್ಲಿ ಅನಂತಜೀವರು ಸಂಸಾರಬಂಧನವನ್ನು ಕಳಚಿ ಮುಕ್ತರಾಗುವರಾದರೂ ಪರಮಾತ್ಮನ ಅಚಿಂತ್ಯ ಶಕ್ತಿಯಿಂದಾಗಿ ಸಂಸಾರಜೀವರ ಸಂಖ್ಯೆ ಎಲ್ಲ ಕಲ್ಪಗಳಲ್ಲೂ ಸಮಾನವಾಗಿಯೇ ಇರುವುದು. ಆದುದರಿಂದ ಪ್ರತಿ ಕಲ್ಪದಲ್ಲಿ ಅನಂತಜೀವರು ಸಂಸಾರಬಂಧನದಿಂದ ಬಿಡುಗಡೆ ಹೊಂದುವ ಪ್ರಯುಕ್ತ ಹಿಂದಿನ ಬ್ರಹ್ಮಕಲ್ಪಕ್ಕಿಂತ

ಮುಂದಿನ ಕಲ್ಪಗಳಲ್ಲಿ ಸಂಸಾರಿಜೀವರು ಅಲ್ಪಸಂಖ್ಯಾತರಾಗುವುದರಿಂದಾಗಿ ಅಂತಹ ಸಂಸಾರ ಜೀವರನ್ನು ನಿಯಮಿಸುವ ವಾಯುದೇವತೆಗಳಲ್ಲಿ ಜೀವನಿಯಾಮಕತ್ವದಲ್ಲಿ ವೈಷಮ್ಯ ಬರುವುದರಿಂದ ಅಂತಹ ನಿಯಾಮಕತ್ವರೂಪಾದ ಭಗವತ್ಸೇವಾದಲ್ಲಿ ವೈಷಮ್ಯ ಬಂದಂತಾಗುವುದೆಂಬ ಆಕ್ಷೇಪಕ್ಕೆ ಅವಕಾಶ ಇಲ್ಲ.

- 'ಜೀವನ್ಮುಕ್ತೇಶ್ಚ ಮುಕ್ತೇಶ್ಚ ಹ್ಯಭಿಮಾನೀ ಸ ಏಕಲಃ' –ಎಂಬ ಪ್ರಮಾಣಕ್ಕನುಗುಣವಾಗಿ ಜೀವನ್ಮುಕ್ತಿಗೂ, ಮುಕ್ತಿಗೂ ಅಭಿಮಾನಿಯಾಗಿರುವವನು ವಾಯುದೇವ ಎಂಬುದು 'ವಿಮುಕ್ತೇರಪಿ ಸ ಪ್ರಭುಃ' –ಎಂಬ ಮಾತಿನ ಆಂತರ್ಯ.

## ಇಂದ್ರಿಯನಿಯಾಮಕತ್ವ

ಔತ್ಪತ್ತಿಕಗುಣಾಸ್ಯಾಪಿ ಹ್ಯಭಿಮಾನೀ ಜಗದ್ಗುರುಃ ।
ವೇದಾನಾಂ ಚೈವ ಲೋಕಾನಾಂ ವ್ಯೋಮಕಾಲಾದಿಕಸ್ಯ ಚ ।
ಸರ್ವತತ್ತ್ವಾಭಿಮಾನೀ ಚ ಸರ್ವಪ್ರಾಣಗಣಾಧಿಪಃ ॥ ೧೫೫ ॥

ಶುಭವನ್ನು ಹೊಂದಲು ಯೋಗ್ಯರೆನಿಸುವವರಲ್ಲಿ ಇರುವ ಶುಭಪ್ರಾಪ್ತಿ ಯೋಗ್ಯತೆಯು ಔತ್ಪತ್ತಿಕಗುಣ ಎನಿಸಿದ್ದು ಇದಕ್ಕೆ ಅಭಿಮಾನಿ ಜಗದ್ಗುರು ಆದ ವಾಯುದೇವ. ವೇದಗಳಿಗೆ, ಲೋಕಗಳಿಗೆ, ಆಕಾಶಕ್ಕೆ, ಕಾಲಕ್ಕೆ ವಾಯುದೇವ ಅಭಿಮಾನಿ. ಎಲ್ಲ ಇಂದ್ರಿಯಗಳ ಸಮೂಹಕ್ಕೂ, ಇಂದ್ರಿಯಾಭಿಮಾನಿ ದೇವತೆಗಳ ಸಮೂಹಕ್ಕೂ ಅವನೇ.

- ಜೀವಾತ್ಮರ ಜ್ಞಾನೇಚ್ಛಾಪ್ರಯತ್ನರೂಪವಾದ ಪ್ರವೃತ್ತಿಗೆ ಅನುಸಾರವಾಗಿ ಇಂದ್ರಿಯ ದೇವತೆಗಳು ಸ್ಪಂದಿಸುವುದರಿಂದ ಆ ದೇವತೆಗಳು ಭಗವಂತನ ಕರಣಗಳೆನಿಸಿದರೆ, ಮುಖ್ಯಪ್ರಾಣನಾದರೂ ಜೀವಪ್ರವೃತ್ತ್ಯನುಸಾರೇಣ ಭಗವಂತನ ಕರಣವಲ್ಲದುದರಿಂದ ಅವನು ಇಂದ್ರಿಯಗಣಕ್ಕೆ ಅಧಿಪತಿ.
- ಇಂದ್ರಿಯಗಳ ಪ್ರವೃತ್ತಿಯು ಪ್ರಸಕ್ತವಾಗಲು ಶ್ರೀಹರಿಯ ಸಮೀಪದಲ್ಲೇ ಇದ್ದುಕೊಂಡು ಎಲ್ಲವನ್ನೂ ತಾನು ಮಾಡುವನು ಹಾಗೂ ಮಾಡಿಸುವನು. ಇಂದ್ರಿಯಾಭಿಮಾನಿ ದೇವತೆಗಳಾದರೂ ಆಯಾ ಇಂದ್ರಿಯ ಕಾರ್ಯಗಳಲ್ಲಿ ವಾಯುದೇವನಿಂದ ಆಜ್ಞಪ್ತರಾಗಿ ತಮ್ಮ ತಮ್ಮ ಸ್ಥಾನದಿಂದ ಎದ್ದು ಆಯಾ ಇಂದ್ರಿಯಗಳಿಂದ ಕರ್ಮಗಳನ್ನು ತಾವು ಮಾಡುವರು ಹಾಗೂ ಉಳಿದವರಿಂದ ಮಾಡಿಸುವರು.

## ಪ್ರಾಣದೇವನ ಇಂದ್ರಿಯಪ್ರವರ್ತಕತ್ವವೈಭವ:

ಇಂದ್ರಿಯಾಣಾಂ ಪ್ರವೃತ್ತೌ ತು ಸ್ಥಿತ ಏವ ಕರೋತ್ಯಯಮ್ ।
ತದನ್ಯೇಂದ್ರಿಯದೇವಾಸ್ತು ಕಿಂಚಿಚ್ಚಲನಸಂಯುತಾಃ ॥ ೧೫೬ ॥

ಹೇಗೆ ಮಹಾರಾಜನ ಸಮೀಪದಲ್ಲಿರುವ ಯುವರಾಜನು ಬೇರೆ ಬೇರೆ ಕಾರ್ಯಗಳು ಪ್ರಸಕ್ತಗಳಾದಾಗ ತಾನು ಆಸನದಲ್ಲಿ ಕುಳಿತುಕೊಂಡೇ ಎಲ್ಲ ಕಾರ್ಯಗಳನ್ನೂ ಮಾಡಿಸುವನೋ ಹಾಗೆಯೇ ಸರ್ವೇಂದ್ರಿಯಾಧಿಪತಿಯಾದ ಮುಖ್ಯಪ್ರಾಣನೂ ಶ್ರೀಹರಿಯ

ಸಮೀಪದಲ್ಲಿದ್ದುಕೊಂಡೇ ಇಂದ್ರಿಯಗಳ ಪ್ರವೃತ್ತಿಯು ಪ್ರಸಕ್ತವಾದಾಗ ಎಲ್ಲವನ್ನೂ ಮಾಡುವನು ಹಾಗೂ ಮಾಡಿಸುವನು. ರಾಜಾದಿಗಳು ಬರೇ ಆದೇಶಿಸುವುದಾದರೆ ಪ್ರಾಣ ದೇವ ಅಷ್ಟು ಮಾತ್ರವಲ್ಲ; ಅವನು ತನ್ನ ಸ್ಥಾನದಲ್ಲಿದ್ದುಕೊಂಡೇ ಜೀವನ ದೂರದರ್ಶನಾದಿ ಇಂದ್ರಿಯಪ್ರವೃತ್ತಿಯನ್ನು ತಾನು ಮಾಡುವನು ಹಾಗೂ ಆಯಾ ಜೀವರಿಂದ ಮಾಡಿಸುವನು. ಇಂದ್ರಿಯಾಭಿಮಾನಿದೇವತೆಗಳಾದರೂ ಇಂದ್ರಿಯಕಾರ್ಯಗಳ ವಿಷಯದಲ್ಲಿ ಮುಖ್ಯಪ್ರಾಣನಿಂದ ಆಜ್ಞಪ್ತರಾಗಿ ತಮ್ಮ ಸ್ಥಾನದಿಂದ ಎದ್ದವರಾಗಿಯೇ ಶ್ರೋತ್ರಾದೀಂದ್ರಿಯಗಳಿಂದ ಮಾಡುವರು, ಮಾಡಿಸುವರು. ದೇವತೆಗಳು ಮುಖ್ಯಪ್ರಾಣಾಧೀನ ಸತ್ತಾ, ಪ್ರತೀತಿ, ಪ್ರವೃತ್ತಿಗಳುಳ್ಳವರಾಗಿ ಮರದ ಗೊಂಬೆಯಂತೆ ಮುಖ್ಯಪ್ರಾಣಾಧೀನ ಚಟುವಟಿಕೆ ಉಳ್ಳವರಾಗುವರು. ರಾಜನಿಂದ ಅನುಜ್ಞೆಯನ್ನಷ್ಟೇ ಪಡೆದು ಕಾರ್ಯವನ್ನು ನಡೆಸುವ ಅಮಾತ್ಯರಂತೆ ತಾವೇ ತಮ್ಮ ಕಾರ್ಯದಲ್ಲಿ ಸಮರ್ಥರಲ್ಲ.

ತಾನ್ಯೇತಾನ್ಯವಶಾನ್ಯೇವ ತಥಾಪಿ ಕೃಪಯೈವ ಸಃ ।
ಪೃಥಕ್ ಶಕ್ತೋऽಪಿ ತದ್ಗೈಸ್ತು ಸ್ವರೂಪೈಸ್ತದ್ಗಕಾರ್ಯಕೃತ್ ॥ ೧೫೭ ॥

ರಾಜನಾದರೂ ಆಯಾ ಸಾಮಂತರಾಜರಿಲ್ಲದೆ ಆಯಾ ರಾಷ್ಟ್ರದ ಪಾಲನೆ ನಡೆಸಲು ಅಶಕ್ತ. ಮುಖ್ಯಪ್ರಾಣನಾದರೂ ಹಾಗಲ್ಲ. ಬೇರೆ ಇಂದ್ರಿಯಾಭಿಮಾನಿಗಳ ಅಪೇಕ್ಷೆ ಇಲ್ಲದೆಯೇ ಒಂದೇ ರೂಪದಿಂದ ಒಂದೇ ಕಡೆ ಕುಳಿತಿದ್ದೇ ಎಲ್ಲ ಕಾರ್ಯಗಳನ್ನು ನೆರವೇರಿಸಲೂ ಸಮರ್ಥ. ಆದರೂ ದೇವತೆಗಳು ಸರ್ವ ಇಂದ್ರಿಯಪ್ರೇರಣೆಯಿಂದಾಗಿ ಶ್ರೀಪತಿಯ ಪ್ರೀತಿಗೆ ಪಾತ್ರರಾಗುವಂತಾಗಬೇಕೆಂದು ಅವರ ಕುರಿತಾದ ಅತಿ ಕೃಪೆಯಿಂದಲೇ ಇಂದ್ರಿಯಗಳು ಆಯಾ ದೇವತೆಗಳ ವಶದಲ್ಲಿ ಇರುವವಾದರೂ ಅನಂತರೂಪಗಳಿಂದ ಅವರಲ್ಲಿ ಇದ್ದುಕೊಂಡು ಸರ್ವಕಾರ್ಯಗಳನ್ನು ಅನಾಯಾಸವಾಗಿ ತಾನು ಮಾಡುವನು. ಉಳಿದವರಿಂದ ಮಾಡಿಸುವನು ಕೂಡಾ.

ನ್ಯಾಯವಿವರಣದಲ್ಲಿ [4-2-2] ಉದಾಹರಿಸಲಾದ ಶ್ರುತಿಯೊಂದರ ಸಂದೇಶವನ್ನು ಹೀಗೆ ಸಂಗ್ರಹಿಸಲಾಗಿದ್ದು ಆ ಶ್ರುತಿಯ ಪೂರ್ಣ ಪಾಠ ಹೀಗಿದೆ:

ಇಂದ್ರಿಯಸ್ಥೈಃ ಸ್ವರೂಪೈಸ್ತು ಜ್ಞಾನಾದಿ ಜನಯತ್ಯಸೌ ।
ಮನಸ್ಥೇನ ವಿಶೇಷೇಣ ಕಾರ್ಯೈಃ ಕರ್ಮಕೃದೇವ ಚ ।
ಪೃಥಕ್‌ಸ್ಥಿತೇನ ರೂಪೇಣ ಜೀವಂ ಧಾರಯತಿ ಪ್ರಭುಃ ।
ಜೀವಸ್ಥಿತೇನ ರೂಪೇಣ ವೇದಯತ್ಯಹಮಿತ್ಯಪಿ ।
ಪ್ರಾಣ ಏಕೋ ವಶೀ ನಿತ್ಯಂ ಬಾಹ್ಯಾಂತಃಕರಣೇಶ್ವರಃ ।
ತಾನ್ಯೇತಾನ್ಯವಶಾನ್ಯೇವ ತಥಾಪಿ ಕೃಪಯೈವ ಸಃ ।
ಪೃಥಕ್‌ಛಕ್ತೋऽಪಿ ತದ್ಗೈಸ್ತು ಸ್ವರೂಪೈಸ್ತದ್ಗಕಾರ್ಯಕೃತ್ ।

ಸರ್ವಾಧಾರತ್ವ:

ಮುಖ್ಯಪ್ರಾಣೋ ಮಹಾನೇಷ ಯೇನ ವ್ಯಾಪ್ತಂ ಚರಾಚರಮ್ ।

**ತಸ್ಮಿನ್ನೋತಮಿದಂ ಸರ್ವಂ ಚೇತನಾಚೇತನಾತ್ಮಕಮ್ ।**
**ಯಥಾ ಸೂತ್ರೇ ಮಣಿಗಣಾ ರಥನಾಭಾವರಾ ಯಥಾ ॥ ೧೫೮ ॥**

ಮುಖ್ಯಪ್ರಾಣನು ಮಹತ್ತತ್ತ್ವಕ್ಕೆ ಅಭಿಮಾನಿ. ಅವನು ಚರಾಚರಾತ್ಮಕ ಪ್ರಪಂಚವನ್ನು ವ್ಯಾಪಿಸಿರುವನು. ಚೇತನಾಚೇತನಾತ್ಮಕವಾದ ಎಲ್ಲವೂ ಅವನನ್ನು ಆಶ್ರಯಿಸಿಕೊಂಡಿದೆ. ಹಾರವನ್ನು ಪೋಣಿಸುವ ಹಗ್ಗದಲ್ಲಿ ಹೇಗೆ ಮಣಿಗಳೋ, ಅರೆಕೀಲುಗಳು ಹೇಗೆ ರಥಚಕ್ರದ ಮಧ್ಯದ ಭಾಗವನ್ನು ಅವಲಂಬಿಸಿರುವವೋ ಹಾಗೆ ಎಲ್ಲವೂ ಮುಖ್ಯಪ್ರಾಣನನ್ನು ಅವಲಂಬಿಸಿದೆ.

- ಮುಖ್ಯಪ್ರಾಣ ಮಹತ್ತತ್ತ್ವಕ್ಕೆ ಅಭಿಮಾನಿಯಾಗಿರುವುದರಿಂದ ಮಹತ್ತತ್ತ್ವನಿರ್ಮಿತನಾದ ಚರಾಚರ ಪ್ರಪಂಚವನ್ನು ವ್ಯಾಪಿಸಿರುವನು.
- ಮುಖ್ಯಪ್ರಾಣನಲ್ಲಿ ಚೇತನಾಚೇತನಾತ್ಮಕವಾದ ಸರ್ವವೂ ಆಶ್ರಯಿಸಿಕೊಂಡಿದೆ ಎಂಬುದನ್ನು ಮೂರು ದೃಷ್ಟಾಂತಗಳ ಮೂಲಕ ಸಮರ್ಥಿಸಲಾಗಿದೆ.

ಭಾಗವತದಲ್ಲಿ [11-12-21] ನೀಡಲಾದ ಬಟ್ಟೆಯ ದೃಷ್ಟಾಂತವನ್ನು ತಂತ್ರಭಾಗವತದ ಮೂಲಕ ಶ್ರೀ ಮಧ್ವರು ಹೀಗೆ ಸ್ಪಷ್ಟಪಡಿಸಿರುವರು–

**'.....ತಸ್ಮಿನ್ನೋತಮಿದಂ ಸರ್ವಂ ಪಟೇ ಲಕ್ಷಣತಂತುವತ್ ।**

- **ಸ ಏವ ವಾಯುರುದ್ದಿಷ್ಟೋ ವಾಯುರ್ಹಿ ಬ್ರಹ್ಮತಾಮಗಾತ್'** –ಬಟ್ಟೆಯ ಮೇಲೆ ಅಲಂಕಾರಕ್ಕಾಗಿ ಪದ್ಮಾದ್ಯಾಕಾರದಿಂದ ಬಿಡಿಸಲಾಗುವ ಕಸೂತಿಗೆ ಹೇಗೆ ಬಟ್ಟೆ ಆಧಾರವಾಗುವುದೋ ಹಾಗೆ ವಾಯುದೇವನಲ್ಲಿ ಎಲ್ಲವೂ ಆಶ್ರಿತವಾಗಿರುವುದು.
- **'ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ'** –ಎಂದು ಗೀತಾಚಾರ್ಯನು ತನ್ನಲ್ಲಿ ಎಲ್ಲವೂ ಓತಪ್ರೋತವಾಗಿ ಆಶ್ರಿತವಾಗಿದೆ ಎಂದು ತಿಳಿಸುವುದಕ್ಕೆ ಕೊಟ್ಟ ದೃಷ್ಟಾಂತ ಹಗ್ಗದಲ್ಲಿ ಪೋಣಿಸಲ್ಪಟ್ಟ ಮಣಿಗಳ ಸಮೂಹ ಹೇಗೆ ಆ ಹಗ್ಗವನ್ನು ಅವಲಂಬಿಸಿರುವುದೋ ಹಾಗೆ. ಈ ದೃಷ್ಟಾಂತದ ಛಾಯೆ ಬರುವಂತೆ 'ಯಥಾ ಸೂತ್ರೇ ಮಣಿಗಣಾಃ.....' ಎನ್ನಲಾಗಿದೆ.
- **'ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಮ್'** –ಎಂಬ ಷಟ್‌ಪ್ರಶ್ನೋಪನಿಷತ್ತಿನಲ್ಲಿ [2-17-10] ರಥ ಚಕ್ರದ ಅಡ್ಡ ಕೀಲುಗಳು ಹೇಗೆ ಅದರ ಮಧ್ಯದಲ್ಲಿರುವ ನಾಭಿಯನ್ನು ಅವಲಂಬಿಸಿರುವವೋ ಹಾಗೆ ವಾಯುದೇವನನ್ನು ಎಲ್ಲವೂ ಆಶ್ರಯಿಸಿದೆ.
- ಒಂದೇ ದೃಷ್ಟಾಂತದಿಂದಲೇ ಈ ಪ್ರಮೇಯವನ್ನು ತಿಳಿಸಲು ಬರುವಾಗ ಮೂರು ದೃಷ್ಟಾಂತಗಳನ್ನು ಕೊಟ್ಟದ್ದರಿಂದ ಈ ಪ್ರಮೇಯದಲ್ಲಿ ಶಾಸ್ತ್ರಕ್ಕೆ ತುಂಬ ತಾತ್ಪರ್ಯ ಇದೆ ಎಂದು ಸೂಚಿಸಿದಂತಾಗಿದೆ.

**ಯತಃ ಸರ್ವಂ ಜಗದ್ ವ್ಯಾಪ್ಯ ತಿಷ್ಠತಿ ಪ್ರಾಣ ಏವ ತು ।**
**ಛಂದಾಂಸಿ ವಾಯೋರ್ಲೋಮಾದಾವಾಶ್ರಿತಾನ್ಯಖಿಲಾನ್ಯಪಿ ॥ ೧೫೯ ॥**

ಸರ್ವಜಗತ್ತನ್ನೂ ಪ್ರಾಣನು ವ್ಯಾಪಿಸಿರುವುದರಿಂದ, ಅಂತಹ ಪ್ರಾಣನ ರೋಮಾದಿಗಳಲ್ಲಿ ಎಲ್ಲ ಛಂದಸ್ಸಿನ ಮಂತ್ರಗಳು ಆಶ್ರಯಿಸಿವೆ.

**ಮುಖ್ಯಪ್ರಾಣನ ವ್ಯಾಪ್ತಿ:**

ಮುಖ್ಯಪ್ರಾಣನ ವ್ಯಾಪ್ತಿಯ ವ್ಯವಸ್ಥೆ ಹೀಗೆ– 'ಅಣವಶ್ಚ' ಎಂಬ ಬ್ರಹ್ಮಸೂತ್ರದಲ್ಲಿ [2-4-8] ಜೀವರಿಗೆ ಅಣುಪರಿಮಾಣದ ಸ್ವಭಾವವನ್ನು ಸಿದ್ಧಾಂತಿಸಲಾಗಿದ್ದು, ಅಂತಹ ಜೀವರಲ್ಲಿ ಸೇರಿರುವ ಮುಖ್ಯಪ್ರಾಣನಿಗೂ ಅಣುತ್ವವು ಸಿದ್ಧಿಸುವುದು. ಆದರೂ 'ಅಣುಶ್ಚ' ಎಂಬ ಮತ್ತೊಂದು ಬ್ರಹ್ಮಸೂತ್ರದಿಂದ [2-4-14] ಮುಖ್ಯಪ್ರಾಣನ ಅಣುತ್ವವನ್ನು ಸಮರ್ಥಿಸಬೇಕೆಂದರೆ ಮುಖ್ಯಪ್ರಾಣನ ಅಣುತ್ವದ ಆ ವೈಲಕ್ಷಣ್ಯ ಹೀಗಿದೆ– ವಾಯುದೇವನು ಮುಖ್ಯಪ್ರಾಣ ಎಂಬ ಹೆಸರಿನ ತನ್ನ ರೂಪದಿಂದ ಅಣು ಆಗಿರುವನು. ದೇಹಕ್ಕಿಂತ ಹೊರಗೆ ಇರುವ ಮುಖ್ಯವಾಯು ಎಂಬ ಹೆಸರಿನ ತನ್ನ ರೂಪದಿಂದ ವ್ಯಾಪ್ತನಾಗಿರುವನು.

**ಛಂದಸ್ಸುಗಳ ಮಂತ್ರಗಳ ಆಶ್ರಯತ್ವ:**

ಐತರೇಯೋಪನಿಷತ್ತಿನಲ್ಲಿ [1-4-15, 16] ಶ್ರೀವಿಷ್ಣುವಿನ ರೋಮಾದಿಗಳಲ್ಲಿ ಹೇಗೋ ಹಾಗೆ ವಾಯುದೇವನ ರೋಮಾದಿಗಳಲ್ಲಿ ಬೇರೆ ಬೇರೆ ಛಂದಸ್ಸುಗಳು, ಅಂದರೆ ಛಂದಸ್ಸಿನ ಮಂತ್ರಗಳು ಆಶ್ರಿತವಾಗಿವೆ ಎಂದು ವರ್ಣಿಸಲಾಗಿದೆ. ವಾಯುವಿನ ರೋಮಗಳಲ್ಲಿ ಉಷ್ಣಿಕ್ ಛಂದಸ್ಸಿನ ಮಂತ್ರಗಳು, ಚರ್ಮದಲ್ಲಿ ಗಾಯತ್ರೀಛಂದಸ್ಸಿನ ಮಂತ್ರಗಳು, ಮಾಂಸದಲ್ಲಿ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳು, ಎಲುಬಿನಲ್ಲಿ ಜಗತೀಛಂದಸ್ಸಿನ ಮಂತ್ರಗಳು, ಮಜ್ಜೆಯಲ್ಲಿ ಪಂಕ್ತಿ ಛಂದಸ್ಸಿನ ಮಂತ್ರಗಳು, ಪ್ರಾಣದಲ್ಲಿ ಬೃಹತೀಛಂದಸ್ಸಿನ ಮಂತ್ರಗಳು –ಹೀಗೆ ವಿಷ್ಣುವಿನಂತೆ ವಾಯುದೇವನೂ ಛಂದಸ್ಸುಗಳಿಂದ ಮುಚ್ಚಿಹೋಗಿರುವನು.

ಮುಕ್ತನಾದ ವಾಯುದೇವನನ್ನು ಇಟ್ಟುಕೊಂಡಲ್ಲಿ ಅವನ ರೋಮ, ಪ್ರಾಣಾದಿಗಳು ಚಿದಾತ್ಮಕಗಳಾಗಿರುವುದರಿಂದ ಅವುಗಳಿಗೂ ಮುಖ್ಯಪ್ರಾಣನ ಆತ್ಮನಿಗೂ ಭೇದ ಇಲ್ಲ ಎಂದು ಮುಖ್ಯಪ್ರಾಣನೇ ವೇದಮಂತ್ರಗಳಿಂದ ಆಚ್ಛಾದಿತನಾಗಿರುವನೆಂದು ಯುಕ್ತ ಎಂದು ಶ್ರೀ ಮಧ್ವರು ಸಮರ್ಥಿಸಿರುವರು.

**ಸಪ್ತಸ್ಕಂಧಗತೋ ಲೋಕಾನ್ ಯೋ ಬಿಭರ್ತಿ ಮಹಾಬಲಃ ।**
**ಸ ಏವ ಕೂರ್ಮರೂಪೇಣ ಬಿಭರ್ತೀದಂ ಜಗತ್ ಸದಾ ॥ ೧೬೦ ॥**

ಮಹಾಬಲಶಾಲಿಯಾದ ವಾಯುದೇವನು ಆವಹ, ವಿವಹ, ಸಂವಹ, ಪರಾವಹ, ಪ್ರವಹ ಹಾಗೂ ಉದ್ವಹ..... ಹೀಗೆ ಏಳು ಗೆಲ್ಲುಗಳ ರೂಪಗಳಿಂದ ಲೋಕಗಳನ್ನು ಧರಿಸುವನು; ಅಥವಾ ಹೆಗಲಿನಿಂದ ಹೊಂದಿದವನಾಗಿ ಏಳು ಲೋಕಗಳನ್ನು ಹೊತ್ತಿರುವನು. [ಈ ಬಗ್ಗೆ ಸರಿಯಾದ ಮಾಹಿತಿ ನನಗೆ ದೊರಕಿಲ್ಲ] ವಾಯುದೇವ ಕೂರ್ಮರೂಪದಿಂದ ಜಗತ್ತನ್ನು ಯಾವಾಗಲೂ ಹೊತ್ತಿರುವನು.

**ಭೂತಾನಿ ಮಾತ್ರಾಶ್ಚೇಷ್ಟಾಶ್ಚ ಮುಖ್ಯಪ್ರಾಣಾದಿದಂ ಜಗತ್ ।**
**ಏಕೋ ಹಿ ಕರ್ತಾ ಸರ್ವಸ್ಯ ರಮಾನಾಥಪ್ರಸಾದತಃ ॥ ೧೬೧ ॥**

ಬೃಹದಾರಣ್ಯಕೋಪನಿಷತ್ತಿನಲ್ಲಿ [3-2-3] ಕೂರ್ಮರೂಪದ ಶೇಷನ ಮೂಲಕ ಜಗತ್ತಿಗೆ ಆಧಾರನಾಗಿರುವ ಕೂರ್ಮರೂಪಿ ವಾಯುದೇವನ ಪ್ರಸ್ತಾವ ಬಂದಿದ್ದು, ಶ್ರೀ ಮಧ್ವರು ಅದನ್ನು 'ಪ್ರಭಂಜನ'ದ ಮೂಲಕ ಸ್ಪಷ್ಟಪಡಿಸಿರುವರು. ಪೃಥಿವ್ಯಾದಿ ಪಂಚಭೂತಗಳನ್ನೂ ಗಂಧಾದಿ ಪಂಚತನ್ಮಾತ್ರೆಗಳನ್ನೂ, ಚಟುವಟಿಕೆಗಳನ್ನೂ ಕೂರ್ಮರೂಪದಿಂದ ಹೊತ್ತಿರುವನು. ಶ್ರೀ ರಮಾಪತಿಯ ಅನುಗ್ರಹದಿಂದ ಎಲ್ಲದಕ್ಕೂ ಶ್ರೀವಾಯುದೇವ ಕರ್ತೃ ಆಗಿರುವನು.

ಹಂಸಗೋವತ್ಸರೂಪಾದ್ಯೈಃ ಪ್ರಾಣಾಪಾನಾದಿಕೈಸ್ತಥಾ ।
ಸರ್ವಪ್ರಾಣಿಷು ಸಂಸ್ಥಃ ಸನ್ ಸರ್ವಚೇಷ್ಟಾಪ್ರವರ್ತಕಃ ॥ ೧೬೨ ॥

ಪದಪ್ರದಶ್ಚ ದೇವಾನಾಂ ತತ್ತಚ್ಛಕ್ತಿಪ್ರದಸ್ತಥಾ ।
ವಾಯುರ್ಹಿ ನಿತ್ಯಸಂಚಾರೀ ಸದಾ ಸರ್ವಪ್ರವೃತ್ತಿಮಾನ್ ॥ ೧೬೩ ॥

ವಾಯುದೇವನು ಹಂಸ, ಗೋವಿನ ಕರು ಮುಂತಾದ ರೂಪಗಳಿಂದ ಹಾಗೂ ಪ್ರಾಣಾಪಾನಾದಿ ರೂಪಗಳಿಂದ ಎಲ್ಲ ಜೀವಿಗಳಲ್ಲಿ ಇದ್ದವನಾಗಿ ಅವುಗಳ ಎಲ್ಲ ಚಟುವಟಿಕೆಗಳಿಗೂ ಪ್ರವರ್ತಕನಾಗಿರುವನು. ಇಂದ್ರಾದಿ ದೇವತೆಗಳಿಗೆ ಆಯಾ ಪದವಿಯನ್ನು ಅವನೇ ನೀಡುವನು. ಆಯಾ ದೇವತೆಗಳಿಗೆ ತಮ್ಮ ತಮ್ಮ ಚಟುವಟಿಕೆಯನ್ನು ನಿರ್ವಹಿಸಲು ಬೇಕಾದ ಸಾಮರ್ಥ್ಯವನ್ನು ನೀಡುವನು. ವಾಯುದೇವ ನಿತ್ಯ ಸಂಚರಿಸುತ್ತ ಇರುವವನು. ಯಾವಾಗಲೂ ಎಲ್ಲರ ಪ್ರವೃತ್ತಿಗಳನ್ನೂ ಮಾಡಿಸುವವನು.

- 'ಹಂಸರೂಪೌ ಹಿ ತೌ ದೇವೌ ಶ್ವಾಸೋಚ್ಛ್ವಾಸಪ್ರವರ್ತಕೌ....' –ಎಂಬ ಬೃಹದ್ಭಾಷ್ಯದಲ್ಲಿ [3-6-28] ಎಲ್ಲ ಜೀವಿಗಳ ಶ್ವಾಸೋಚ್ಛ್ವಾಸ ಪ್ರವರ್ತಕರಾಗಿ ವಿಷ್ಣುವಾಯುಗಳು ಹಂಸಪಕ್ಷಿಯ ರೂಪದಲ್ಲಿರುವರೆಂದು ತಿಳಿಸಲಾಗಿದೆ.
- 'ಯೋಃ ಹ ವೈ ಶಿಶುಂ....' ಇತ್ಯಾದಿಯಾಗಿ ಬೃಹದಾರಣ್ಯಕೋಪನಿಷತ್ತಿನ ಮಾತಿನಲ್ಲಿ [ಬೃ.ಉ. 2-9] ಮುಖ್ಯಪ್ರಾಣನು ಎಲ್ಲ ಪ್ರಾಣಗಳಲ್ಲಿ ಕುರುವಿನ ರೂಪದಲ್ಲಿರುವುದಾಗಿ ತಿಳಿಸಲಾಗಿದೆ.
- ಷಟ್‌ಪ್ರಶ್ನೋಪನಿಷತ್ತಿನಲ್ಲಿ ನಿರೂಪಿಸಿರುವಂತೆ ಪ್ರಾಣಾಪಾನಾದಿಪಂಚರೂಪಗಳಲ್ಲಿದ್ದುಕೊಂಡು ಎಲ್ಲರ ಉಸಿರಾಟವೇ ಮುಂತಾದ ಚಟುವಟಿಕೆಗಳನ್ನು ನಡೆಸುವನು.
- 'ವಾಯುರ್ಹಿ ನಿತ್ಯಸಂಚಾರೀ ಸದಾ ಸರ್ವಪ್ರವೃತ್ತಿಮಾನ್' –ಎಂಬ ಐತರೇಯ ಭಾಷ್ಯದ [1-4-8] ಮಾತಿನಲ್ಲಿ ವಾಯುದೇವನ ನಿತ್ಯಸಂಚಾರ ಹಾಗೂ ಸದಾ ಸರ್ವಪ್ರವೃತ್ತಿಗಳ ನಿರ್ವಹಣೆಯ ವಿಚಾರ ಬಂದಿದೆ.

ಸ ಏವ ಜೀವನಕರಃ ಪ್ರಾಣಾಪಾನಾದಿರೂಪಕಃ ।
ತಥಾ ಮೃತ್ಯುಪ್ರದಶ್ಚಾಯಂ ಮುಕ್ತಾನಾಮಪಿ ಜೀವನಮ್ ॥ ೧೬೪ ॥

ಮುಖ್ಯಪ್ರಾಣನು ತನ್ನ ಪ್ರಾಣ ಅಪಾನ ರೂಪಗಳಿಂದ ಜೀವನಪ್ರದನೂ ಮರಣ ಪ್ರದನೂ ಆಗುವನು. ಮುಕ್ತನಾದ ಮುಖ್ಯಪ್ರಾಣನು ಮುಕ್ತರಿಗೂ ಜೀವನಪ್ರದನೆನಿಸಿ ರುವನು.

ಸ ಏವ ಭಗವಾನ್ ವಿಷ್ಣುಃ ಮೃತ್ಯುದೋ ಮೋಕ್ಷದಸ್ತಥಾ ।
ಸ ಏವ ಜೀವನಕರೋ ಯದಾಪಾನೇನ ಸಂಯುತಃ ।
ಪ್ರಾಣಂ ನಿಯಮಯತ್ಯಸ್ಮಿನ್ ಶರೀರೇ ಪುರುಷೋತ್ತಮಃ ।
ಶರೀರಾದ್ ಬಹಿರೇತೌ ತು ಯದಾ ನಿಃಸಾರಯತ್ಯಜಃ ।
ತದಾ ಮೃತ್ಯುಪ್ರದಶ್ಚಾಯಂ ಮುಕ್ತಾನಾಮಪಿ ಜೀವನಮ್ ।
ಪ್ರಾಣಾದೇವ ಹಿ ತತ್ರಾಪಿ ಪ್ರಾಣಾಧಾರೋ ಜನಾರ್ದನಃ ।

–ಎಂಬುದಾಗಿ ಐತರೇಯಭಾಷ್ಯದಲ್ಲಿ [1-6-3] ತಿಳಿಸಿದಂತೆ ಶ್ರೀವಿಷ್ಣು ವಾಯುದೇವನ ಅಪಾನ ಮತ್ತು ಪ್ರಾಣರೂಪಗಳನ್ನು ಶರೀರದಲ್ಲಿ ನಿಯಂತ್ರಿಸುವ ಮೂಲಕ ಜೀವನ ಪ್ರದನೆನಿಸಿದರೆ, ಶರೀರದಿಂದ ಪ್ರಾಣಾಪಾನರನ್ನೂ ಹೊರಗೆ ಕಳುಹಿಸುವ ಮೂಲಕ ಮರಣಪ್ರದನಾಗುವನು. ಮುಕ್ತರಿಗೂ ಪ್ರಾಣದೇವ ಜೀವನಪ್ರದನಾಗುವನು. ಆಗಲೂ ಅಂತಹ ಪ್ರಾಣನಿಗೆ ಭಗವಂತನೇ ಆಧಾರನಾಗಿರುವನು.

ಹೀಗೆ ಪ್ರತಿಪಾದಿತವಾದ ವಿಷಯವನ್ನು ಶ್ರೀವಿಷ್ಣುವಿನ ಪಾತ್ರವನ್ನು ಉಲ್ಲೇಖಿಸದೆ ಇಲ್ಲಿ ಪ್ರಾಣದೇವನ ಪಾತ್ರವನ್ನಷ್ಟೇ ತಿಳಿಸಲಾಗಿದೆ.

ಸೂರ್ಯಚಂದ್ರಾಗ್ನಿಪರ್ಜನ್ಯಪೃಥಿವ್ಯನ್ನಾದಿಷು ಸ್ಥಿತಃ ।
ಆಶಾದಿಸ್ಥಸ್ತಥಾ ಸರ್ವದೇವರ್ಷ್ಯಾದಿಷು ಸಂಸ್ಥಿತಃ ॥ ೧೬೫ ॥

ಸೂರ್ಯ, ಚಂದ್ರ, ಅಗ್ನಿ, ಪರ್ಜನ್ಯ, ಪೃಥಿವೀ, ಅನ್ನ ಮುಂತಾದವುಗಳಲ್ಲಿ ನಿಯಾ ಮಕನಾಗಿ ಇರುವನು. ಭಾರತೀದೇವಿಯೇ ಮುಂತಾದವರಲ್ಲಿ ಎಲ್ಲ ದೇವತೆಗಳಲ್ಲೂ ಋಷಿ ಮುಂತಾದವರಲ್ಲೂ ನಿಯಾಮಕನಾಗಿ ಇರುವನು.

- ಷಟ್‌ಪ್ರಶ್ನೋಪನಿಷತ್ತಿನಲ್ಲಿ ಪ್ರಸ್ತುತವಾದಂತೆ ದೇವತೆಗಳು ಪ್ರಾಣದೇವನಲ್ಲಿ ಸಲ್ಲಿಸುವ ಪ್ರಾರ್ಥನೆಯಲ್ಲಿ 'ಏಷೋಽಗ್ನಿಸ್ತಪತಿ.....' ಇತ್ಯಾದಿಯಾಗಿ ವಾಯುದೇವನೇ ಅಗ್ನ್ಯಾದಿ ಗಳಲ್ಲಿದ್ದುಕೊಂಡು ಸುಡುವುದೇ ಮುಂತಾದ ಅವರ ಚಟುವಟಿಕೆಗಳನ್ನು ನಡೆಸುವ ನೆಂದು ತಿಳಿಸಲಾಗಿದ್ದು ಅದನ್ನೇ ಈ ಪದ್ಯದಲ್ಲಿ ಸಂಗ್ರಹಿಸಲಾಗಿದೆ.
- 'ಅನ್ನಾಭಿಮಾನೀ ಬ್ರಹ್ಮೈವ.....' [ಬೃ.ಉ.ಭಾ. 7-14-1] ಎಂಬ 'ಸಂಧಾನ' ಪ್ರಮಾಣ ತಿಳಿಸುತ್ತಿರುವಂತೆ ಅನ್ನದ ಅಭಿಮಾನಿ ಚತುರ್ಮುಖ. ಆದುದರಿಂದ ವಾಯುದೇವ ಚತುರ್ಮುಖಪದವಿಗೆ ಬಂದಮೇಲೆ ವಿಶೇಷವಾಗಿ ಅನ್ನದಲ್ಲಿ ನಿಯಾಮಕನಾಗಿ ಇರುವ ನೆಂದು ಅನುಸಂಧಾನ ಮಾಡಬೇಕು.
- ಪರಮಸಂಹಿತೆ [ಬೃ.ಉ.ಭಾ. 5-3-2] ವಾಯುದೇವನಲ್ಲಿ 'ವ್ಯಷ್ಟಿ' ಮತ್ತು 'ಸಮಷ್ಟಿ' ಹೆಸರುಗಳನ್ನು ಸಮನ್ವಯಿಸುತ್ತ ದೇವತೆಗಳು, ಋಷಿಗಳು ಮುಂತಾದ ಎಂಟು

ವರ್ಗದ ಜೀವರಾಶಿಯನ್ನೂ ಸಂಪೂರ್ಣರಾದ ಗರುಡಾದಿ ವಾಯುದೇವತೆಗಳನ್ನೂ ತನ್ನ ವಶದಲ್ಲಿಟ್ಟುಕೊಂಡು ಪ್ರೇರಿಸುವವನೆಂದು ಪ್ರತಿಪಾದಿಸಿದ್ದು, ಅದರ ಹಿನ್ನೆಲೆಯಲ್ಲಿ ಸರ್ವದೇವ ಋಷ್ಯಾದಿಗಳಲ್ಲಿ ಪ್ರೇರಕನಾಗಿ ಇರುವವನೆಂದು ತಿಳಿಸಲಾಗಿದೆ.

**ಬೃಹತ್ಯುಕ್ಥಾದಿಷು ತಥಾ ನಾನಾರೂಪೈರವಸ್ಥಿತಃ ।**
**ಪಂಚರೂಪೀ ಸ ಸರ್ವತ್ರ ಸಹ ಪಂಚಾತ್ಮವಿಷ್ಣುನಾ ॥ ೧೬೬ ॥**

ಬೃಹತೀಸಹಸ್ರ, ಉಕ್ಥ ಮುಂತಾದವುಗಳಲ್ಲಿ ವಾಯುದೇವನು ಬೇರೆ ಬೇರೆ ರೂಪ ಗಳಿಂದ ಇರುವನು. ಶ್ರೀವಿಷ್ಣು ವಾಸುದೇವಾದಿ ಪಂಚರೂಪಗಳಿಂದ ಎಲ್ಲಿರುವನೋ ಅಲ್ಲಿ ವಾಯುದೇವನೂ ಪ್ರಾಣಾಪಾನಾದಿ ಪಂಚರೂಪಗಳಿಂದ ಇರುವನು.

- ಬೃಹತೀಛಂದಸ್ಸಿಗೆ ವಾಯುದೇವ ಅಭಿಮಾನಿಯಾಗಿರುವುದರಿಂದ ಅಂತಹ ಛಂದಸ್ಸಿ ನಲ್ಲಿ ಇರುವ ಬೃಹತೀಸಹಸ್ರ ಮುಂತಾದ ಮಂತ್ರಗಳಲ್ಲಿ ಆಯಾ ಛಂದಸ್ಸನ್ನು ನಿಯಮಿ ಸುತ್ತ ವಾಯುದೇವನು ಇರುವನು.

**ಸಂಹಿತಾಯಾಃ ಪಂಚಾಧಿರಣಾಭಿಮಾನಿತ್ವಂ ಪ್ರಾಣಾದಿರೂಪಸ್ಯ ವಾಯೋರಪಿ ಭವತಿ । ಪೃಥಿವ್ಯಂತರಿಕ್ಷಮಿತ್ಯುಕ್ತಪಾಂಕ್ತತ್ವಂ ಚ । ಅತ ಉಪಕ್ರಮೋಪಸಂಹಾರಯೋಃ**

'ತ್ವಾಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ' 'ತ್ವಾಮೇವ ಪ್ರತ್ಯಕ್ಷಂ ಬ್ರಹ್ಮಾವಾದಿಷಮ್' ಇತಿ ಯುಜ್ಯತೇ –ಎಂಬುದಾಗಿ ತೈತ್ತಿರೀಯೋಪನಿಷದ್ಭಾಷ್ಯದಲ್ಲಿ [1-23] ಪ್ರತಿಪಾದಿಸಿರು ವಂತೆ ತೈತ್ತಿರೀಯೋಪನಿಷತ್ತಿನ ಶಿಕ್ಷಾವಲ್ಲಿಯು 'ಅಥಾತಃ ಸಂಹಿತಾಯಾಃ....' ಇತ್ಯಾದಿ ಯಾಗಿ ಪ್ರಸ್ತುತಪಡಿಸಿರುವ ಅಧಿಲೋಕಾದಿ ಪಂಚಾಧಿಕರಣಗಳಲ್ಲಿ ಹೇಗೆ ಭಗವಂತನು ಪಂಚರೂಪಗಳಿಂದ ಇರುವನೋ ಹಾಗೆ ವಾಯುದೇವ ತನ್ನ ಪ್ರಾಣಾದಿರೂಪಗಳಿಂದ ಅಭಿಮಾನಿಯಾಗಿ ಇರುವನು. ಹಾಗೆಯೇ 'ಪೃಥಿವ್ಯಂತರಿಕ್ಷಂ.....' ಇತ್ಯಾದಿಯಾಗಿ ನಿರೂಪಿಸ ಲಾದ ಪಾಂಕ್ತಷಟ್ಕದಲ್ಲಿ ಭಗವಂತನು ನಾರಾಯಣಾದಿರೂಪದಿಂದ ಹೇಗೆ ಇರುವನೋ ಹಾಗೆ ಪ್ರಾಣದೇವ ತನ್ನ ಪ್ರಾಣಾದಿ ರೂಪಗಳಿಂದ ಇರುವನು. ಇದನ್ನೇ 'ಪಂಚರೂಪೀ ಸ ಸರ್ವತ್ರ....' ಈ ಮಾತಿನಲ್ಲಿ ತಿಳಿಸಲಾಗಿದೆ.

**ತಥಾ ಹಂಸಾದಿರೂಪೇಣ ಮೇಘಾದಿಷು ಜಗದ್ಗುರುಃ ।**
**ಅನಂತಾನಂತರೂಪೇಣ ಜಗದ್ಯಮಯತೀಶ್ವರಃ ।**

**'ಮೇಘಸಂಸ್ಥಂ ಹಂಸರೂಪಂ ತಂ ವಿಷ್ಣುಂ ಪರಮೇಶ್ವರಮ್.....ಏವಂ ವಾಯುಂ ಚ ದದೃಶುಸ್ತತ್ರ ಹಂಸಸ್ವರೂಪಿಣಮ್ । ಶಿವಾದಿಭ್ಯೋ ವ್ಯಾಹರಂತಂ ತಾಮೇವಾನು ಷ್ಟುಭಂ ಪರಾಮ್ ॥**

ಎಂದು ಐತರೇಯಭಾಷ್ಯದಲ್ಲಿ [2-2-5-2] ತಿಳಿಸಿರುವಂತೆ ಹಂಸರೂಪಿ ವಿಷ್ಣು ಮೇಘ ದಲ್ಲಿದ್ದುಕೊಂಡು ನೃಸಿಂಹಾನುಷ್ಟುಬನ್ನು ಚತುರ್ಮುಖಾದಿಗಳಿಗೆ ಉಪದೇಶಿಸುತ್ತಿರುವಂತೆ ಅಲ್ಲಿಯೇ ಹಂಸರೂಪದ ವಾಯುದೇವ ನೃಸಿಂಹಾನುಷ್ಟುಪನ್ನು ಶಿವಾದಿಗಳಿಗೆ ಉಪದೇಶಿ ಸುವುದನ್ನು ಮುನಿಗಳು ಕಂಡರು –ಎಂಬ ಹೇಳಿಕೆಗೆ ಅನುಗುಣವಾಗಿ ಹಂಸರೂಪದಿಂದ

ಮೇಘಾದಿಗಳಲ್ಲಿದ್ದುಕೊಂಡು ರುದ್ರಾದಿ ಜಗತ್ತಿಗೆ ಗುರುಗಳಾದ ವಾಯುದೇವ ಉಪದೇಶಿಸಿರುವನು.

**ಜಾಗ್ರತ್ಸ್ವಪ್ನಸುಷುಪ್ತ್ಯಾದಿಸರ್ವಾವಸ್ಥಾನಿಯಾಮಕಃ ॥ ೧೬೭ ॥**

**ಯಾನಿ ಯಾನೀಹ ಕರ್ಮಾಣಿ ಜಗತಿ ಸ್ಯು ರಮಾಪತೇಃ ।**
**ಪ್ರಾಯಃ ಪ್ರಾಣಾಧಿಪೇ ತಾನಿ ಸಮಸ್ತಾನಿ ನ ಸಂಶಯಃ ॥ ೧೬೮ ॥**

ಜಗತ್ತಿನ ವಿಷಯದಲ್ಲಿ ಯಾವ ಯಾವ ಚಟುವಟಿಕೆಗಳು ರಮಾಪತಿಗೆ ಇರುವವೋ ಅವೆಲ್ಲ ಪ್ರಾಯಶಃ ಮುಖ್ಯಪ್ರಾಣನಲ್ಲಿ ಇವೆ.

## ವಾಯುದೇವನ ಸರ್ವಕರ್ತೃತ್ವ:

**'ವಾಯೋಃ ಸಕಾಶಾಜ್ಜಗತಃ ಪ್ರವೃತ್ತಿಂ ಕಾಮಯತ್ಯಜಃ ।**
**ಪ್ರಾಣಪ್ರಾಣ ಮಿತಿ ಪ್ರಾಹುರ್ವಿಷ್ಣುಂ ವಾಯೋರಪಿ ಪ್ರಭುಮ್ ।**

ಎಂಬ ಭಾಗವತತಾತ್ಪರ್ಯನಿರ್ಣಯದ [10-15-50] ಮಾತು ಸಾರುತ್ತಿರುವಂತೆ 'ಪ್ರಾಣ ಪ್ರಾಣ' ಎನಿಸಿರುವ ಭಗವಂತನು ಜಗತ್ತಿನ ಪ್ರತಿಯೊಂದು ಪ್ರವೃತ್ತಿಯನ್ನೂ ವಾಯು ದೇವನ ಮೂಲಕ ನಡೆಸಲು ಬಯಸುವನಾದುದರಿಂದ ಶ್ರೀಹರಿಯು ಜಗತ್ತಿನ ವಿಷಯದ ಪ್ರತಿಯೊಂದು ಕ್ರಿಯೆಯೂ ವಾಯುದೇವನಲ್ಲಿ ಇದ್ದೇ ಇರುವುದು.

**ಭೋಗಾಶ್ಚ ಯೇ ಯಾನಿ ಚ ಕರ್ಮಜಾತಾನ್ಯನಾದ್ಯನಂತಾನಿ ಮಮೇಹ ಸಂತಿ ।**
**ಮದಾಜ್ಞಯಾ ತಾನ್ಯಖಿಲಾನಿ ಸಂತಿ ಧಾತುಃ ಪದೇ ತತ್ಸಹಭೋಗನಾಮ ।**

ಎಂದು [ಮ.ಭಾ.ತಾ.ನಿ. 8-241] ಶ್ರೀರಾಮಚಂದ್ರ ಆಂಜನೇಯನಿಗೆ 'ಸಹಭೋಗ' ರೂಪವಾದ ಮೋಕ್ಷವನ್ನು ಅನುಗ್ರಹಿಸುತ್ತ ಅದರ ಸ್ವರೂಪವನ್ನು ಹೀಗೆ ಸ್ಪಷ್ಟಪಡಿಸಿ ರುವನು– ಅನಂತ ಜೀವಿಗಳಿಂದ ಅನಾದ್ಯನಂತಕಾಲದಲ್ಲಿ ಮಾಡಲ್ಪಡುವ ಪುಣ್ಯಕರ್ಮಗಳು ನನ್ನ ವಶದಲ್ಲಿ ಹೇಗೆ ಇವೆಯೋ ಹಾಗೆಯೇ ನನ್ನ ಆಜ್ಞೆಯಿಂದಾಗಿ ಅವು ಬ್ರಹ್ಮಪದವಿಗೆ ಬರತಕ್ಕವರ ವಶದಲ್ಲೂ ಇವೆ. ಯಾಕೆಂದರೆ ಆ ಶುಭ ಕರ್ಮಗಳಿಗೆ ನಾವಿಬ್ಬರೂ ಅಸಾ ಧಾರಣಕಾರಣರು. ಆದ್ದರಿಂದ ಆ ಕರ್ಮಗಳ ಫಲಗಳಾದ ಸುಖಾನುಭವಗಳನ್ನು ಬ್ರಹ್ಮಾಂತರ್ಯಾಮಿಯಾಗಿ ಅನುಭವಿಸುವೆನು. ಇದೇ 'ಸಹಭೋಗ'.

ಹೀಗೆ 'ಸಹಭೋಗ'ದ ಘಟಕವಾಗಿ ಎಲ್ಲ ಪ್ರಾಣಿಗಳ ಕರ್ಮಗಳು ಪರಮಾತ್ಮನಿಗೆ ಸೇರಿದಂತೆ ವಾಯುದೇವನಿಗೂ ಸೇರಿವೆ –ಎಂಬ ಅಂಶ ಇರುವುದರಿಂದ ರಮಾಪತಿಯ ಕರ್ಮಗಳೆಲ್ಲ ಪ್ರಾಣದೇವನಿಗೆ ಸೇರಿದ್ದೆಂದು ಒಪ್ಪಿಕೊಳ್ಳಬೇಕಾಗುವುದು. ಆದರೆ ಭಗವಂತ ನಿಂದ ಮಾತ್ರ ಅನುಭವಿಸಲು ಯೋಗ್ಯಗಳಾದ ಕರ್ಮಗಳಿಗಿಂತ ಅತಿರಿಕ್ತಗಳಾದ ಸಮಸ್ತ ಕರ್ಮಗಳಷ್ಟೇ ಪ್ರಾಣದೇವನಿಗೂ ಸೇರಿದ್ದೆಂದು ಅಭಿಪ್ರಾಯ. ಆದುದರಿಂದಲೇ '....ಪ್ರಾಯಃ ಪ್ರಾಣಾಧಿಪತೇ ತಾನಿ ಸಮಸ್ತಾನಿ....' ಎಂಬುದಾಗಿ ಹೆಚ್ಚಿನವು ಎಂಬ ಅರ್ಥದ ಪ್ರಾಯಃ ಶಬ್ದವನ್ನು ಪ್ರಯೋಗಿಸಲಾಗಿದೆ. ಸಹಭೋಗದ ಸ್ವರೂಪವನ್ನು ನಿರ್ದೇಶಿಸುವಾಗ ಎಲ್ಲ ಪ್ರಾಣಿಗಳ ಕರ್ಮಗಳನ್ನು ಉಲ್ಲೇಖಿಸಿರುವುದೇ ಹೊರತು ತನ್ನ ಮೂಲಕ ನಡೆಯುವ ಎಲ್ಲ

ಕರ್ಮಗಳನ್ನು ಅಲ್ಲ. ರಮಾದೇವಿಯ ಜೊತೆಗೆ ಕ್ರೀಡಿಸುವಿಕೆಯೇ ಮುಂತಾದ ಭಗವಂತನ ವೈಯಕ್ತಿಕಕರ್ಮಗಳು ಪ್ರಾಣದೇವನಿಗೆ ಸೇರಿಕೊಳ್ಳಲು ಸಾಧ್ಯವೇ ಇಲ್ಲ ತಾನೇ?

- 'ಪುರುಷಃ ಸರ್ವದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ' –ಎಂಬ ಗೀತೆಯ ಮಾತಿನ ಆಧಾರದಲ್ಲಿ ಜೀವರಿಗೆ ಸುಖದುಃಖಾನುಭವದಾನಪ್ರಕ್ರಿಯೆಯಲ್ಲಿ ಭಗವಂತ ನದ್ದೇ ಪಾತ್ರ ಎಂದು ತಿಳಿದುಬರುವುದಾದರೂ '....ತಸ್ಮಾದಾನಂದದಾನಂ ತು ಗುಣೇ ಷೂತ್ಕೃಷ್ಟಮುಚ್ಯತೇ । ತಸ್ಯಾಭಿಮಾನೀ ಬ್ರಹ್ಮೈಕಃ.... ಎಂಬುದಾಗಿ ಚತುರ್ಮುಖನಿಗೆ ಆನಂದಾನುಭವಕ್ಕೆ ಅಭಿಮಾನಿತ್ವವನ್ನು ಹೇಳಿರುವುದರಿಂದ ಜೀವರ ಸುಖದುಃಖಾನು ಭವದಾನವನ್ನು ಅಮುಖ್ಯವಾಗಿ ಒಪ್ಪಿಕೊಂಡಂತೆಯೇ ಎಂದಿಟ್ಟುಕೊಳ್ಳಬೇಕು. ಅಲ್ಲದೆ, 'ಭೋಕ್ತೃತ್ವೇ ಹೇತುರುಚ್ಯತೇ' –ಎಂಬುದಕ್ಕೆ ಸುಖದುಃಖಾನುಭವದಾನದಲ್ಲಿ ಭಗವಂತ ನದ್ದು ಹಿರಿಯ ಪಾತ್ರ ಎಂಬ ಅಭಿಪ್ರಾಯವೇ ಹೊರತು ಭಗವಂತನೊಬ್ಬನದ್ದೇ ಪಾತ್ರ ಎಂಬ ಆಶಯವಲ್ಲ. ಆದುದರಿಂದ ವಾಯುದೇವನಿಗೂ ಸುಖದುಃಖಾನುಭವ ದಾನದಲ್ಲಿ ಕಿರಿಯ ಪಾತ್ರವನ್ನು ಒಪ್ಪಿಕೊಳ್ಳಬಹುದಾಗಿದೆ.

**ಸರ್ವತ್ರ ವಿನಿವಿಷ್ಟಃ ಸನ್ ಸರ್ವಭೋಕ್ತಾ ಚತುರ್ಮುಖಃ ।**
**ಭೋಗ್ಯಭೋಕ್ತ್ರಾತ್ಮನಾ ಚಾಪಿ ಸ್ವಯಮೇವ ವ್ಯವಸ್ಥಿತಃ ॥ ೧೬೯ ॥**

ಚತುರ್ಮುಖನು ಎಲ್ಲೆಡೆ ಪ್ರವೇಶಿಸಿದವನಾಗಿ ಎಲ್ಲವನ್ನೂ ಭೋಗಿಸುವನು. ತಾನೇ ಭೋಕ್ತೃ ಆಗಿಯೂ, ಸರ್ವಭೋಕ್ತೃತ್ವಃ ಭೋಗ್ಯ ಆಗಿಯೂ ಇರುವನು.

**ಪ್ರಾಪ್ನೋತಿ ವಾಯುಃ ಸರ್ವಂ ತು ಸ್ವತ ಏವ ಹರೇಸ್ತಥಾ ।**
**ಅತಃ ಪ್ರಾಪ್ತಿರಿತಿ ಪ್ರಾಹುರ್ವಾಯುಂ ಭೂತಪತಿಂ ಪ್ರಭುಮ್ ।**
**ಪ್ರಧಾನವಾಯುರನ್ಯೇಷು ನಿತ್ಯಾವಿಷ್ಟೋ ಯತಸ್ತತಃ ।**
**ತದ್ಗುಣಾಂಸ್ತೇಷು ಚೋಚ್ಯಂತೇ ನೀಚತಾ ನಾಸ್ಯ ತತ್ಕೃತಾ ।**

–ಎಂಬ ಬ್ರಹ್ಮವೈವರ್ತ [3-27-39] ಸಾರುತ್ತಿರುವಂತೆ ವಾಯುದೇವ ತನ್ನ ಸಾಮರ್ಥ್ಯ ದಿಂದ ಹಾಗೂ ಶ್ರೀಹರಿಯ ಅನುಗ್ರಹದಿಂದ ಎಲ್ಲ ವಸ್ತುಗಳನ್ನೂ ಹೊಂದುವನು. ಆದುದರಿಂದಲೇ 'ಪ್ರಾಪ್ತಿ' ಎನಿಸುವ, ಅವುಗಳಲ್ಲಿ ನಿತ್ಯಾವಿಷ್ಟನಾದ ಅವನ ಗುಣಗಳು ಆ ವಸ್ತುಗಳಲ್ಲಿ ಹೇಳಲ್ಪಡುವವು.

- 'ಪುನರ್ರೈಚ್ಚತ್ ಕೇಶವೋऽಸಾವನ್ನಮೇಭ್ಯಃ..... ತತ್ಪ್ರಸಾದಾತ್ ಪರೇಽಶ್ನಂತಿ ಕಿಂಚಿತ್ ಕಿಂಚಿನ್ನ ಚಾಖಿಲಮ್' ಎಂಬ ಐತರೇಯಭಾಷ್ಯದಲ್ಲಿ [2-3-24] ತಿಳಿಸಿರುವಂತೆ ಭಗವಂತನು ಒಂದು ಅನ್ನಾತ್ಮಕಶರೀರವನ್ನು ಸೃಷ್ಟಿಸುವನು. ಅಪಾನ ಎನ್ನುವ ವಾಯು ಅದನ್ನು ಪ್ರವೇಶಿಸಿದರಿಂದ ಚತುರ್ಮುಖನು ಆ ಅನ್ನಮೂರ್ತಿಯನ್ನು ಭೋಗಿಸಲು ಸಮರ್ಥನಾದನು.

ಹೀಗೆ ಹೇಳಿ ಆ ಪ್ರಮಾಣ ತಿಳಿಸುವುದು–

**ತಸ್ಮಾದ್ ಭೋಕ್ತೈಕ ಏವಾಸೌ ಸರ್ವಸ್ಯಾನ್ನಸ್ಯ ಮಾರುತಃ ।**
**ತತ್ಪ್ರಸಾದಾತ್ ಪರೇಽಶ್ನಂತಿ ಕಿಂಚಿತ್ ಕಿಂಚಿನ್ನ ಚಾಖಿಲಮ್ ॥**

ಅಪಾನ ಹೆಸರಿನ ವಾಯುದೇವನ ಪ್ರವೇಶದಿಂದಾಗಿ ದೇವತೆಗಳು ಭೋಗಿಸಲು ಸಮರ್ಥರಾದುದರಿಂದ ಆ ವಾಯುದೇವನೇ ಎಲ್ಲರ ಅನ್ನದ ಮುಖ್ಯ ಭೋಕ್ತಾ. ಅವನ ಅನುಗ್ರಹದಿಂದ ಉಳಿದವರು ಸ್ವಲ್ಪ ಸ್ವಲ್ಪವನ್ನು ಅನುಭವಿಸುವರು.

ಭಗವಂತನಿಂದ ನಿರ್ಮಿತವಾದ 'ಅನ್ನಮೂರ್ತಿ' –ಸರ್ವೈರಧಿಷ್ಠಿತಂ ಚೈವ ವಿರಿಂಚೇನ ವಿಶೇಷತಃ –ಎಂದಿರುವಂತೆ ಚತುರ್ಮುಖನಿಂದ ವಿಶೇಷವಾಗಿ ಅಧಿಷ್ಠಿತವಾಗಿರುವುದರಿಂದ ವಿರಿಂಚನೇ ಅನ್ನಮೂರ್ತಿಯಾಗಿ ಭೋಗ್ಯನೂ, ವಾಯುದೇವನೇ ಅಪಾನ ಹೆಸರಿನಿಂದ ಭೋಕ್ತೃವೂ ಆಗಿರುವುದರಿಂದಾಗಿ 'ಭೋಗ್ಯಭೋಕ್ತ್ರಾತ್ಮನಾ ಚಾಪಿ ಸ್ವಯಮೇವ ವ್ಯವಸ್ಥಿತಃ' ತಾನೇ ಭೋಗ್ಯನೂ, ತಾನೇ ಭೋಕ್ತೃವೂ ಆಗಿರುವನೆಂದು ಹೇಳಲಾಗಿದೆ.

**ಸರ್ವತ್ರಗಃ ಸರ್ವನಾಮಾ ಸರ್ವವೇದಾಭಿಧಶ್ಚ ಸಃ ।**
**ಬೃಹತೀಸಹಸ್ರವಾಚ್ಯಶ್ಚ ತಾವದ್ರೂಪಃ ಪರೋ ವಿಭುಃ ॥ ೧೭೦ ॥**

ಎಲ್ಲ ವ್ಯಕ್ತಿಗಳಲ್ಲೂ ವಸ್ತುಗಳಲ್ಲೂ ಇರುವವನಾಗಿ ಆಯಾ ವಸ್ತುಗಳ, ವ್ಯಕ್ತಿಗಳ ಹೆಸರನ್ನು ಹೊಂದಿರುವನು. ಸರ್ವವೇದಗಳಿಂದ ಪ್ರತಿಪಾದ್ಯನಾಗಿರುವನು. ಬೃಹತೀಸಹಸ್ರದಿಂದ ವಾಚ್ಯನಾಗಿರುವವನು. ಬೃಹತೀಸಹಸ್ರದಲ್ಲಿ ೩೬ ಸಾವಿರ ಸ್ವರಾಕ್ಷರಗಳೂ, ೩೬ ಸಾವಿರ ವ್ಯಂಜನಾಕ್ಷರಗಳೂ ಇದ್ದು ಹೀಗೆ ಒಟ್ಟು ೭೨ ಸಾವಿರ ಅಕ್ಷರಗಳಿಂದ ಪ್ರತಿಪಾದ್ಯಗಳಾಗಿ ೭೨ ಸಾವಿರ ರೂಪಗಳನ್ನು ಹೊಂದಿರುವವನು.

**ಸರ್ವಶಬ್ದವಾಚ್ಯತ್ವ:**

- 'ಸರ್ವತ್ರಗಃ ಸರ್ವನಾಮಾ' –ಎಂಬ ಶಬ್ದಗಳು 'ಹೇತುಹೇತುಮದ್‌ಭಾವ'ದ ಸೂಚಕ ಗಳಾಗಿ ಪ್ರಯೋಗಿಸಲ್ಪಟ್ಟಿವೆ. ಎಲ್ಲ ವಸ್ತುಗಳಲ್ಲೂ ಎಲ್ಲ ವ್ಯಕ್ತಿಗಳಲ್ಲೂ ಇದ್ದುಕೊಂಡು ಆಯಾ ಹೆಸರಿನಿಂದ ವಾಚ್ಯವಾಗಲು ಬೇಕಾಗಿ ಅಲ್ಲಿರುವ ಪ್ರವೃತ್ತಿನಿಮಿತ್ತ ಧರ್ಮಗಳಿಗೆ ನಿಯಾಮಕನಾಗಿರುವುದರಿಂದ ವಾಯುದೇವನೇ ಆಯಾ ಪ್ರವೃತ್ತಿನಿಮಿತ್ತಪ್ರಯುಕ್ತ ಆಯಾ ವಸ್ತುಗಳ, ವ್ಯಕ್ತಿಗಳ ಹೆಸರುಗಳಿಂದ ವಾಚ್ಯನಾಗಿರುವವನು.
- ಭಗವಂತನಲ್ಲಷ್ಟೇ ಪ್ರಸಿದ್ಧಗಳಾದ ಅಕಾರ, ಓಂಕಾರಗಳ, ವಿಷ್ಣು, ನಾರಾಯಣ ಮುಂತಾದ ನಾಮಗಳ ಅಭಿಮಾನಿಯಾಗಿರುವುದರಿಂದಷ್ಟೇ ಆ ನಾಮಗಳುಳ್ಳವನೆನಿಸು ವನು.
- ಭಗವಂತನಲ್ಲಷ್ಟೇ ಪ್ರಸಿದ್ದಗಳಾದ ಪುರುಷಸೂಕ್ತಾದಿಗಳನ್ನೂ, ಲಕ್ಷ್ಮೀದೇವಿಯಲ್ಲಷ್ಟೇ ಪ್ರಸಿದ್ದಗಳಾದ ಅಂಭ್ರಿಣೀಸೂತ್ರಾದಿಗಳನ್ನೂ ಹೊರತುಪಡಿಸಿ ಉಳಿದ ಎಲ್ಲ ವೇದ ಗಳಿಂದ ವಾಚ್ಯನಾಗಿರುವನಷ್ಟೇ.

(ವಿ.ಸೂ. ಈ ಬಗ್ಗೆ ಅಧಿಕ ವಿಚಾರ 'ವಾಯುದೇವನಲ್ಲಿ ಸರ್ವಶಬ್ದವಾಚ್ಯತ್ವ' –ಎಂಬ ಪ್ರಬಂಧದಲ್ಲಿ ಪ್ರಸ್ತಾವಿಸಲಾಗಿದೆ.)

ಬೃಹತೀಸಹಸ್ರವಾಚ್ಯ:

ಮೂವತ್ತಾರು ಅಕ್ಷರಗಳ ಬೃಹತೀಛಂದಸ್ಸಿನಲ್ಲಿರುವ ಸಾವಿರ ಋಙ್ಮಂತ್ರಗಳ ಸಮುದಾಯ ಬೃಹತೀಸಹಸ್ರ ಎನಿಸಿದ್ದು, ಇದು ಮುಖ್ಯವಾಗಿ ಭಗವಂತನನ್ನು ಸ್ತುತಿಸುವ ಸ್ತೋತ್ರ.

ಇದರ ಬಗ್ಗೆ ಶ್ರೀ ಮಧ್ವರು ಐತರೇಯಭಾಷ್ಯದಲ್ಲಿ [2-1-2-13] ಹೀಗೆ ತಿಳಿಸಿರುವರು–

'ಅನ್ಯದೇವತಾವಿಷಯತ್ವೇನ ಪ್ರತೀಯಮಾನಾ ಅಪ್ಯೃಚೋ ಭಗವದ್ವಿಷಯಾ ಏವ ಮುಖ್ಯತಃ । ತದನಂತರಂ ವಾಯುವಿಷಯಾಶ್ಚ । ತಸ್ಮಾದ್ ಬೃಹತೀಸಹಸ್ರಂ ಸರ್ವಂ ಮುಖ್ಯತೋ ನಾರಾಯಣಸ್ಯಾನ್ನಮ್ । ತದಾಜ್ಞಯಾ ವಾಯೋಶ್ಚ ತಸ್ಮಾತ್ ತಚ್ಛಂಸನೇನ ಭಗವಾನ್ ವಾಯುಶ್ಚಾತಿಪ್ರೀತಃ....'

ಬೇರೆ ಬೇರೆ ಋಙ್ಮಂತ್ರಗಳ ಭಾಗಗಳನ್ನು ಜೋಡಿಸಿ ೩೬ ಅಕ್ಷರಗಳ ಬೃಹತೀ ಛಂದಸ್ಸಿನ ಮಂತ್ರವಾಗಿ ರೂಪಿಸುವುದರಿಂದ ಬೃಹತೀಸಹಸ್ರದಲ್ಲಿರುವ ಮಂತ್ರಗಳು ಮೇಲ್ನೋಟಕ್ಕೆ ಇತರ ದೇವತಾಪ್ರತಿಪಾದಕಗಳಂತೆ ಕಂಡರೂ ಅವು ಮುಖ್ಯವಾಗಿ ಭಗವದ್ವಿಷಯಕಗಳೇ. ಭಗವಂತನ ಬಳಿಕ ವಾಯುದೇವನನ್ನು ಪ್ರತಿಪಾದಿಸುವವು. ಆದುದರಿಂದ ಬೃಹತೀಸಹಸ್ರ ಭಗವಂತನಿಗೆ ಪ್ರಿಯವಾಗಿದ್ದು ಅನ್ನ ಎನಿಸಿರುವಂತೆ ವಾಯುದೇವನಿಗೂ ಪ್ರಿಯವಾಗಿದ್ದು ಅನ್ನ ಎನಿಸಿದೆ. ಆದುದರಿಂದಲೇ ದೇವೇಂದ್ರನ 'ಮಹಾವ್ರತ'ದಲ್ಲಿ ವಿಶ್ವಾಮಿತ್ರರು ಅದರ ಶಂಸನ ನಡೆಸಿದಾಗ ದೇವೇಂದ್ರನಲ್ಲಿ ಆವಿಷ್ಟನಾದ ಕೇಶವನಂತೆ, ಅವನ ಜೊತೆಗಿದ್ದ ವಾಯುದೇವನೂ ತುಂಬ ಸಂತುಷ್ಟನಾಗಿದ್ದನು.

ವಾಯುದೇವ ಬೃಹತೀಸಹಸ್ರವಾಚ್ಯ ಎಂದರೆ ಬೃಹತೀಸಹಸ್ರದಲ್ಲಿ ಘಟಕಗಳಾದ ೭೨ ಸಾವಿರ ವರ್ಣಗಳಿಂದ ವಾಚ್ಯ; ಒಂದೊಂದು ವರ್ಣದಿಂದಲೂ ವಾಚ್ಯವಾಗಿ ಒಂದೊಂದು ರೂಪವನ್ನು ಹೊಂದಿರುವನು ಎಂದೇ ಅರ್ಥ. ಆದುದರಿಂದಲೇ 'ತಾವದ್ರೂಪಃ' –೭೬ ಸಾವಿರ ರೂಪಗಳನ್ನು ಹೊಂದಿರುವನೆಂದು ಪ್ರತಿಪಾದಿಸಲಾಗಿದೆ.

ವೇದವರ್ಣಪುರಾಣಾದೌ ತತ್ತನ್ನಾಮಾ ಹ್ಯವಸ್ಥಿತಃ ।
ಅನಂತನಾಮ್ನಾ ಯ ವೇದ್ಯೋಽಸೌ ವಿನಾ ವಿಷ್ಣೌ ಪ್ರಸಿದ್ಧತಃ ॥ ೧೭೦ ॥

ವೇದ, ಪುರಾಣಾದಿಗಳ ವರ್ಣಸ್ವರಾದಿಗಳಿಂದಲೂ ಆಯಾ ಹೆಸರಿನಿಂದ ಇರುವವನು. ಹೀಗೆ ಅನಂತಹೆಸರುಗಳಿಂದ ವೇದ್ಯನಾಗಿರುವವನು. ವಿಷ್ಣುವಿನಲ್ಲಿ ಪ್ರಸಿದ್ಧಗಳಾದ ನಾರಾಯಣಾದಿ ನಾಮಗಳಿಂದ ಅವನು ವೇದ್ಯ ಎನಿಸುವುದಿಲ್ಲವಷ್ಟೇ.

ವರ್ಣಸ್ಥೋ ವರ್ಣನಾಮಾಽಸೌ ಸ್ವರಸ್ಥಃ ಸ್ವರನಾಮಕಃ ।
ಮನಸ್ಥಶ್ಚ ಮನೋನಾಮಾ ತನ್ನಾಮಾ ಚಕ್ಷುರಾದಿಗಃ ।
ತಸ್ಯ ಸರ್ವಾಣಿ ನಾಮಾನಿ ಮುಖ್ಯತಃ ಕವಯೋ ವಿದುಃ ॥

–ಎಂದು ‘ಶಬ್ದನಿರ್ಣಯ’ [ಭಾ.ತಾ.ನಿ. 11-12-24] ಸಾರುತ್ತಿರುವಂತೆ ಚತುರ್ಮುಖನು ವೇದ ಪುರಾಣಾದಿಗಳ ವರ್ಣಗಳಲ್ಲಿ, ಸ್ವರಗಳಲ್ಲಿ ಆಯಾ ವರ್ಣ–ಸ್ವರಾದಿಗಳ ನಾಮದಿಂದ ಇರುವನು. ವೇದಾದಿಗಳಲ್ಲಿ ಅನಂತವರ್ಣ, ಸ್ವರಾದಿಗಳಿರುವುದರಿಂದ ಅವನು ‘ಅನಂತ ನಾಮಾ’.

**ಋತೇ ನಾರಾಯಣಾದೀನಿ ನಾಮಾನಿ ಪುರುಷೋತ್ತಮಃ ।**
**ಪ್ರಾದಾದನ್ಯತ್ರ ಭಗವಾನ್ ರಾಜೇವರ್ತೇ ಸ್ವಕಂ ಪುರಮ್ ।**

–ಎಂದು ಸ್ಕಾಂದ [ಬ್ರ.ಸೂ.ಭಾ. 1-3-3] ಪ್ರತಿಪಾದಿಸುತ್ತಿರುವಂತೆ ಶ್ರೀವಿಷ್ಣು ತನ್ನ ನಾರಾಯಣಾದಿ ನಾಮಗಳನ್ನು ಬಿಟ್ಟು ಉಳಿದ ನಾಮಗಳನ್ನಷ್ಟೇ ಉಳಿದವರಿಗೆ ನೀಡಿರುವುದರಿಂದ ನಾರಾಯಣಾದಿ ನಾಮಗಳು ವಿಷ್ಣುವಾಚ್ಯಗಳೇ. ಇದನ್ನೇ ‘ವಿನಾ ವಿಷ್ಣೌ ಪ್ರಸಿದ್ಧತಃ’ ಎಂಬ ಮಾತಿನಲ್ಲಿ ತಿಳಿಸಲಾಗಿದೆ.

**ಓಂಕಾರವಾಚ್ಯಃ ಪ್ರಾಣೋಽಸೌ ವೇದಾನುಕ್ತಗುಣಸ್ತಥಾ ॥ ೧೭೨ ॥**

ಪ್ರಾಣ ಎನಿಸುವ ಚತುರ್ಮುಖನು ಓಂಕಾರವಾಚ್ಯನು. ವೇದದಲ್ಲಿ ಅನುಕ್ತಗಳಾದ ಗುಣಗಳೂ ಚತುರ್ಮುಖನಲ್ಲಿ, ವಾಯುದೇವನಲ್ಲಿ ಇವೆ.

**ಓಂಕಾರವಾಚ್ಯತ್ವ:**

**ಯತೋಽಕಾರಃ ಸದಾ ವಿಷ್ಣೋರ್ವಾಚಕತ್ವೇನ ಸಂಸ್ಥಿತಃ ।**
**ತಸ್ಮಾದ್ ವರ್ಣತ್ರಯಾತ್ಮಾಽಯಂ ಪ್ರಣವೋಽಪಿ ತ್ರಯಾತ್ಮಕಮ್ ।**
**ಹರಿಮೇವ ಸದಾ ವಕ್ತಿ ನೈವಾನ್ಯಂ ಕಂಚನ ಕ್ವಚಿತ್ ॥**

–ಎಂಬುದಾಗಿ ‘ತತ್ವಸಾರ’ [ಐ.ಉ.ಭಾ. 2-2-7-5] ಅಕಾರ ವಿಷ್ಣುವನ್ನೇ ಹೇಳುವುದರಿಂದ, ಅಂತಹ ಅಕಾರದಿಂದ ಅಭಿವ್ಯಕ್ತವಾದ ಓಂಕಾರವೂ ಶ್ರೀಹರಿಯನ್ನೇ ಯಾವಾಗಲೂ ಹೇಳುವುದು. ಎಂದೂ ಎಲ್ಲೂ ಬೇರೆ ಯಾರನ್ನೂ ಹೇಳುವುದಿಲ್ಲ ಎಂದು ದೃಢವಾಗಿ ನಿರಾಕರಿಸಿರುವುದರಿಂದ ಚತುರ್ಮುಖನಾಗಲೀ ಪ್ರಾಣದೇವನಿಗಾಗಲೀ ಓಂಕಾರವಾಚ್ಯತ್ವವನ್ನು ಹೇಳಲು ಬರುವುದಿಲ್ಲ.

ಆದರೆ ಷಟ್‌ಪ್ರಶ್ನೋಪನಿಷತ್ತಿನಲ್ಲಿ [5-1-2] ‘.....ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ’ –ಎಂಬುದಾಗಿ ಪರಬ್ರಹ್ಮನಂತೆಯೇ ಅಪರಬ್ರಹ್ಮ ಎನಿಸುವ ಚತುರ್ಮುಖನಿಗೂ ಓಂಕಾರವಾಚ್ಯತ್ವವನ್ನು ಹೇಳಲಾಗಿದೆ. ಇದನ್ನು ಶ್ರೀ ವಾದಿರಾಜತೀರ್ಥರು ತಮ್ಮ ಪ್ರಕಾಶಿಕಾದಲ್ಲಿ ಹೀಗೆ ಕೂಡಿಸಿರುವರು. ಪರಂ–ವೈಕುಂಠಾದಿ ಲೋಕಸ್ಥಿತಂ ಅನ್ಯಾನಧಿಷ್ಠಿತಂ ಬ್ರಹ್ಮ ಅಪರಂ ಚತುರ್ಮುಖಾಖ್ಯಪ್ರತಿಮಾಂತರ್ಗತಂ ಬ್ರಹ್ಮ– .....ಗಂಗಾವಾಚಕ ಗಂಗಾಶಬ್ದಸ್ಯ ತತ್ಸಂಬಂಧಿನಿ ಅಮುಖ್ಯಪ್ರಯೋಗವತ್ ಬ್ರಹ್ಮಾಂತರ್ಗತವಿಷ್ಣುವಾಚಕ ಪ್ರಣವೇನ ತತ್ಸನ್ನಿಧಾನಾತ್ ಲಕ್ಷಣಯಾ ವಿರಿಂಚೇಽಪಿ ಪ್ರಯೋಗಃ ಇತಿ ಭಾವಃ ।

ಇತರ ವ್ಯಕ್ತಿಗಳ ಅಧಿಷ್ಠಾನದಲ್ಲಿ ಇಲ್ಲದೆ, ವೈಕುಂಠಾದಿಗಳಲ್ಲಿ ಇರುವ ಬ್ರಹ್ಮ ಪರಂಬ್ರಹ್ಮ ಎನಿಸಿದರೆ, ಚತುರ್ಮುಖಾದಿ ಅಧಿಷ್ಠಾನದಲ್ಲಿ ಇರುವ ಬ್ರಹ್ಮ ಅಪರಬ್ರಹ್ಮ

ಎನಿಸುವನು. ಗಂಗಾನದಿಯ ಸಂಬಂಧ ಆದರ ತೀರಕ್ಕೆ ಇರುವುದರಿಂದ ಗಂಗಾ ಶಬ್ದದಿಂದ ಆದರ ತೀರವನ್ನು ಅಮುಖ್ಯವಾಗಿ ತಿಳಿಸುವಂತೆ, ಓಂಕಾರವಾಚ್ಯ ಭಗವಂತನೇ ಆದರೂ ಅವನಿಗೆ ಮುಖ್ಯ ಪ್ರತಿಮೆಯಾಗಿ, ಅವನ ಸನ್ನಿಧಾನಕ್ಕೆ ಪಾತ್ರನಾಗುವ ಚತುರ್ಮುಖ ಗೌಣವಾಗಿ ಓಂಕಾರವಾಚ್ಯನಾಗಬಹುದು.

**ಸೃಷ್ಟಿಕರ್ತಾ ಬ್ರಹ್ಮನಾಮಾ ಸೋಽಸೃಜಚ್ಚತುರಾನನಮ್ ।**
**ಅಂತರ್ಯಾಮೀ ವಿರಿಂಚಸ್ಯ ಸೋಽಕಾರಾರ್ಥೋ ಜನಾರ್ದನಃ ।**

ಎಂಬ ತತ್ವಸಾರ [ಐ.ಉ.ಭಾ. 2-2-7-2] ತಿಳಿಸುತ್ತಿರುವಂತೆ ಓಂಕಾರದ ಮೊದಲ ಅಕ್ಷರವಾದ ಅಕಾರವು ಬ್ರಹ್ಮಾಂತರ್ಯಾಮಿಯನ್ನು ತಿಳಿಸುವುದರಿಂದ ಬ್ರಹ್ಮನೂ ಗೌಣವಾಗಿ ಓಂಕಾರದ ಅಕಾರ ವಾಚ್ಯತ್ವವನ್ನು ಹೊಂದಿರುವಂತೆ ಅಂತಹ ಅಕಾರದಿಂದ ಘಟಿತವಾದ ಓಂಕಾರವಾಚ್ಯತ್ವವನ್ನು ಪಡೆದಿರುವನು.

- 'ತಾ ವಾ ಏತಾಃ..... ಸರ್ವೇ ವೇದಾಃ.....ಏಕೈವ ವ್ಯಾಹೃತಿಃ ಪ್ರಾಣ ಏವ....' –ಎಂಬ ಐತರೇಯೋಪನಿಷತ್ತಿನಲ್ಲಿ [2-1-2-12] ಪರಮಾತ್ಮನಿಗೆ ಸರ್ವವೇದಪ್ರತಿಪಾದ್ಯತ್ವವನ್ನು 'ಪ್ರಾಣ' ಎಂಬ ಹೆಸರನ್ನು ಉಲ್ಲೇಖಿಸಿ ಪ್ರತಿಪಾದಿಸಿರುವುದರಿಂದ ಪ್ರಾಣ ಶಬ್ದದಿಂದ ಗೌಣವಾಗಿ ವಾಚ್ಯನಾದ ಮುಖ್ಯಪ್ರಾಣನಲ್ಲೂ ಸರ್ವವೇದಪ್ರತಿಪಾದ್ಯತ್ವ ಬರುವುದೆಂದು ಸೂಚಿಸುವುದಕ್ಕಾಗಿ ಅಲ್ಲಿ ಉಲ್ಲೇಖಿಸಲ್ಪಟ್ಟ ಪ್ರಾಣ ಎಂಬ ನಾಮವನ್ನೇ ಇಲ್ಲೂ 'ಓಂಕಾರವಾಚ್ಯಃ ಪ್ರಾಣೋಽಸೌ.... 'ಎಂದು ಉಲ್ಲೇಖಿಸಲಾಗಿದೆ.

**ವೇದಾನುಕ್ತಗುಣವತ್ತ್ವ:**

ಅನಂತವೇದಗಳಿಂದ ಪ್ರತಿಪಾದ್ಯಗಳಾದ ಗುಣಗಳನ್ನಷ್ಟೇ ಅಲ್ಲದೆ, ಅಂತಹ ಅನಂತ ವೇದಗಳಿಂದಲೂ ಹೇಳಲ್ಪಡದ ಗುಣಗಳನ್ನೂ ಹೊಂದಿರುವುದು ಮುಖ್ಯವಾಗಿ ಭಗವಂತನ ಧರ್ಮ.

ಇದು ವಾಯುದೇವನಲ್ಲೂ ಅಮುಖ್ಯವಾಗಿ ಇದೆ. ತೈತ್ತಿರೀಯೋಪನಿಷತ್ತಿನಲ್ಲಿ [2-11] ಸರ್ವವನ್ನೂ ಸೃಷ್ಟಿಸಿದ ಭಗವಂತನು ಸೃಷ್ಟವಾದ ಆಯಾ ವಸ್ತುವನ್ನು ಪ್ರವೇಶಿಸಿ ಅಲ್ಲಿ ಆಯಾ ಧರ್ಮಪ್ರಯುಕ್ತ ಆಯಾ ಹೆಸರು ಬರುವಂತೆ ಮಾಡುವನೆಂದು ತಿಳಿಸುವಾಗ 'ನಿರುಕ್ತಂ' –ಎಂಬ ಹೆಸರಿನ ವಸ್ತುವಿನ ಪ್ರಸ್ತಾವ ಬರುವುದು. ಚೆನ್ನಾಗಿ ವಾಚ್ಯವಾಗುವುದು ಎಂದು ಅದಕ್ಕೆ ಅರ್ಥ. 'ಪ್ರಕೃತಿಪ್ರಾಣತೋಽನ್ಯತ್ರ ಕುರ್ವಂಸ್ತನ್ನಾಮಕೋ ಹರಿಃ' –ಎಂದು ಯಜುಃಸಂಹಿತೆಯಲ್ಲಿ ಸ್ಪಷ್ಟಪಡಿಸಿರುವಂತೆ ಪ್ರಾಣನಲ್ಲಿ ನಿರುಕ್ತನಾಮದ ಪ್ರವೃತ್ತಿನಿಮಿತ್ತವಾದ ಸುವಾಚ್ಯತ್ವವು ಇಲ್ಲದೆ ಇರುವುದರಿಂದ ಅವನಿಗಿಂತ ಬೇರೆ ವ್ಯಕ್ತಿ ವಸ್ತುಗಳಲ್ಲಷ್ಟೇ ಧರ್ಮವನ್ನು ನೀಡಿ 'ನಿರುಕ್ತ' ಎನಿಸುವಂತೆ ಮಾಡಿದನೆಂದು ನಿರೂಪಿಸಲಾಗುವುದು. ಹೀಗೆ ಸುವಾಚ್ಯತ್ವ ವಾಯುದೇವನಲ್ಲಿ ಇಲ್ಲ ಎಂದಾಗಬೇಕಾದರೆ ವೇದಾನುಕ್ತಗುಣಗಳೂ ಅವನಲ್ಲಿ ಇರುವವೆಂದು ಸಿದ್ಧಿಸುವುದು.

ಬ್ರಹ್ಮತರ್ಕ [ಭಾ.ತಾ.ನಿ 10-17-24) ವಿಷ್ಣುವನ್ನು ಹೇಗೋ ಹಾಗೆ ಚತುರ್ಮುಖನನ್ನೂ, ವಾಯುದೇವನನ್ನೂ 'ಅನಿರುಕ್ತ' –ಸಮಗ್ರವಾಗಿ ತಿಳಿಸಲು ಆಗದ ವ್ಯಕ್ತಿತ್ವ ಉಳ್ಳವರೆಂದು ಸ್ಪಷ್ಟಪಡಿಸಿದೆ– 'ವಿಷ್ಣುರ್ಬ್ರಹ್ಮಾ ತಥಾ ವಾಯುರನಿರುಕ್ತಾಃ ಪ್ರಕೀರ್ತಿತಾಃ'

–ಎಂದು 'ಶಬ್ದನಿರ್ಣಯ' [ಭಾ.ತಾ.ನಿ. 11-12-24] ಸಾರುತ್ತಿರುವಂತೆ ಚತುರ್ಮುಖನು ವೇದ ಪುರಾಣಾದಿಗಳ ವರ್ಣಗಳಲ್ಲಿ, ಸ್ವರಗಳಲ್ಲಿ ಆಯಾ ವರ್ಣ–ಸ್ವರಾದಿಗಳ ನಾಮದಿಂದ ಇರುವನು. ವೇದಾದಿಗಳಲ್ಲಿ ಅನಂತವರ್ಣ, ಸ್ವರಾದಿಗಳಿರುವುದರಿಂದ ಅವನು 'ಅನಂತ ನಾಮಾ'.

**ಋತೇ ನಾರಾಯಣಾದೀನಿ ನಾಮಾನಿ ಪುರುಷೋತ್ತಮಃ ।**
**ಪ್ರಾದಾದನ್ಯತ್ರ ಭಗವಾನ್ ರಾಜೇವರ್ತೇ ಸ್ವಕಂ ಪುರಮ್ ।**

–ಎಂದು ಸ್ಕಾಂದ [ಬ್ರ.ಸೂ.ಭಾ. 1-3-3] ಪ್ರತಿಪಾದಿಸುತ್ತಿರುವಂತೆ ಶ್ರೀವಿಷ್ಣು ತನ್ನ ನಾರಾಯಣಾದಿ ನಾಮಗಳನ್ನು ಬಿಟ್ಟು ಉಳಿದ ನಾಮಗಳನ್ನಷ್ಟೇ ಉಳಿದವರಿಗೆ ನೀಡಿರುವುದರಿಂದ ನಾರಾಯಣಾದಿ ನಾಮಗಳು ವಿಷ್ಣುವಾಚ್ಯಗಳೇ. ಇದನ್ನೇ 'ವಿನಾ ವಿಷ್ಣೌ ಪ್ರಸಿದ್ಧತಃ' ಎಂಬ ಮಾತಿನಲ್ಲಿ ತಿಳಿಸಲಾಗಿದೆ.

**ಓಂಕಾರವಾಚ್ಯಃ ಪ್ರಾಣೋಽಸೌ ವೇದಾನುಕ್ತಗುಣಸ್ತಥಾ ॥ ೧೭೨ ॥**

ಪ್ರಾಣ ಎನಿಸುವ ಚತುರ್ಮುಖನು ಓಂಕಾರವಾಚ್ಯನು. ವೇದದಲ್ಲಿ ಅನುಕ್ತಗಳಾದ ಗುಣಗಳೂ ಚತುರ್ಮುಖನಲ್ಲಿ, ವಾಯುದೇವನಲ್ಲಿ ಇವೆ.

**ಓಂಕಾರವಾಚ್ಯತ್ವ:**

**ಯತೋಽಕಾರಃ ಸದಾ ವಿಷ್ಣೋರ್ವಾಚಕತ್ವೇನ ಸಂಸ್ಥಿತಃ ।**
**ತಸ್ಮಾದ್ ವರ್ಣತ್ರಯಾತ್ಮಾಽಯಂ ಪ್ರಣವೋಽಪಿ ತ್ರಯಾತ್ಮಕಮ್ ।**
**ಹರಿಮೇವ ಸದಾ ವಕ್ತಿ ನೈವಾನ್ಯಂ ಕಂಚನ ಕ್ವಚಿತ್ ॥**

–ಎಂಬುದಾಗಿ 'ತತ್ವಸಾರ' [ಐ.ಉ.ಭಾ. 2-2-7-5] ಅಕಾರ ವಿಷ್ಣುವನ್ನೇ ಹೇಳುವುದರಿಂದ, ಅಂತಹ ಅಕಾರದಿಂದ ಅಭಿವ್ಯಕ್ತವಾದ ಓಂಕಾರವೂ ಶ್ರೀಹರಿಯನ್ನೇ ಯಾವಾಗಲೂ ಹೇಳುವುದು. ಎಂದೂ ಎಲ್ಲೂ ಬೇರೆ ಯಾರನ್ನೂ ಹೇಳುವುದಿಲ್ಲ ಎಂದು ದೃಢವಾಗಿ ನಿರಾಕರಿಸಿರುವುದರಿಂದ ಚತುರ್ಮುಖನಾಗಲೀ ಪ್ರಾಣದೇವನಿಗಾಗಲೀ ಓಂಕಾರವಾಚ್ಯತ್ವವನ್ನು ಹೇಳಲು ಬರುವುದಿಲ್ಲ.

ಆದರೆ ಷಟ್‌ಪ್ರಶ್ನೋಪನಿಷತ್ತಿನಲ್ಲಿ [5-1-2] '.....ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ' –ಎಂಬುದಾಗಿ ಪರಬ್ರಹ್ಮನಂತೆಯೇ ಅಪರಬ್ರಹ್ಮ ಎನಿಸುವ ಚತುರ್ಮುಖನಿಗೂ ಓಂಕಾರವಾಚ್ಯತ್ವವನ್ನು ಹೇಳಲಾಗಿದೆ. ಇದನ್ನು ಶ್ರೀ ವಾದಿರಾಜತೀರ್ಥರು ತಮ್ಮ ಪ್ರಕಾಶಿಕಾದಲ್ಲಿ ಹೀಗೆ ಕೂಡಿಸಿರುವರು. ಪರಂ–ವೈಕುಂಠಾದಿ ಲೋಕಸ್ಥಿತಂ ಅನ್ಯಾನಧಿಷ್ಠಿತಂ ಬ್ರಹ್ಮ ಅಪರಂ ಚತುರ್ಮುಖಾಖ್ಯಪ್ರತಿಮಾಂತರ್ಗತಂ ಬ್ರಹ್ಮ– .....ಗಂಗಾವಾಚಕಗಂಗಾಶಬ್ದಸ್ಯ ತತ್ಸಂಬಂಧಿನಿ ಅಮುಖ್ಯಪ್ರಯೋಗವತ್ ಬ್ರಹ್ಮಾಂತರ್ಗತವಿಷ್ಣುವಾಚಕಪ್ರಣವೇನ ತತ್ಸನ್ನಿಧಾನಾತ್ ಲಕ್ಷಣಯಾ ವಿರಿಂಚೇಽಪಿ ಪ್ರಯೋಗಃ ಇತಿ ಭಾವಃ ।

ಇತರ ವ್ಯಕ್ತಿಗಳ ಅಧಿಷ್ಠಾನದಲ್ಲಿ ಇಲ್ಲದೆ, ವೈಕುಂಠಾದಿಗಳಲ್ಲಿ ಇರುವ ಬ್ರಹ್ಮ ಪರಂಬ್ರಹ್ಮ ಎನಿಸಿದರೆ, ಚತುರ್ಮುಖಾದಿ ಅಧಿಷ್ಠಾನದಲ್ಲಿ ಇರುವ ಬ್ರಹ್ಮ ಅಪರಬ್ರಹ್ಮ

ಎನಿಸುವನು. ಗಂಗಾನದಿಯ ಸಂಬಂಧ ಅದರ ತೀರಕ್ಕೆ ಇರುವುದರಿಂದ ಗಂಗಾ ಶಬ್ದದಿಂದ ಅದರ ತೀರವನ್ನು ಅಮುಖ್ಯವಾಗಿ ತಿಳಿಸುವಂತೆ, ಓಂಕಾರವಾಚ್ಯ ಭಗವಂತನೇ ಆದರೂ ಅವನಿಗೆ ಮುಖ್ಯ ಪ್ರತಿಮೆಯಾಗಿ, ಅವನ ಸನ್ನಿಧಾನಕ್ಕೆ ಪಾತ್ರನಾಗುವ ಚತುರ್ಮುಖ ಗೌಣವಾಗಿ ಓಂಕಾರವಾಚ್ಯನಾಗಬಹುದು.

**ಸೃಷ್ಟಿಕರ್ತಾ ಬ್ರಹ್ಮನಾಮಾ ಸೋಽಸೃಜಚ್ಚತುರಾನನಮ್ ।**
**ಅಂತರ್ಯಾಮೀ ವಿರಿಂಚಸ್ಯ ಸೋಽಕಾರಾರ್ಥೋ ಜನಾರ್ದನಃ ।**

ಎಂಬ ತತ್ತ್ವಸಾರ [ಐ.ಉ.ಭಾ. 2-2-7-2] ತಿಳಿಸುತ್ತಿರುವಂತೆ ಓಂಕಾರದ ಮೊದಲ ಅಕ್ಷರವಾದ ಅಕಾರವು ಬ್ರಹ್ಮಾಂತರ್ಯಾಮಿಯನ್ನು ತಿಳಿಸುವುದರಿಂದ ಬ್ರಹ್ಮನೂ ಗೌಣವಾಗಿ ಓಂಕಾರದ ಅಕಾರ ವಾಚ್ಯತ್ವವನ್ನು ಹೊಂದಿರುವಂತೆ ಅಂತಹ ಅಕಾರದಿಂದ ಘಟಿತವಾದ ಓಂಕಾರವಾಚ್ಯತ್ವವನ್ನು ಪಡೆದಿರುವನು.

- 'ತಾ ವಾ ಏತಾಃ..... ಸರ್ವೇ ವೇದಾಃ.....ಏಕೈವ ವ್ಯಾಹೃತಿಃ ಪ್ರಾಣ ಏವ....' –ಎಂಬ ಐತರೇಯೋಪನಿಷತ್ತಿನಲ್ಲಿ [2-1-2-12] ಪರಮಾತ್ಮನಿಗೆ ಸರ್ವವೇದಪ್ರತಿಪಾದ್ಯತ್ವವನ್ನು 'ಪ್ರಾಣ' ಎಂಬ ಹೆಸರನ್ನು ಉಲ್ಲೇಖಿಸಿ ಪ್ರತಿಪಾದಿಸಿರುವುದರಿಂದ ಪ್ರಾಣ ಶಬ್ದದಿಂದ ಗೌಣವಾಗಿ ವಾಚ್ಯನಾದ ಮುಖ್ಯಪ್ರಾಣನಲ್ಲೂ ಸರ್ವವೇದಪ್ರತಿಪಾದ್ಯತ್ವ ಬರುವುದೆಂದು ಸೂಚಿಸುವುದಕ್ಕಾಗಿ ಅಲ್ಲಿ ಉಲ್ಲೇಖಿಸಲ್ಪಟ್ಟ ಪ್ರಾಣ ಎಂಬ ನಾಮವನ್ನೇ ಇಲ್ಲೂ 'ಓಂಕಾರವಾಚ್ಯಃ ಪ್ರಾಣೋಽಸೌ.... 'ಎಂದು ಉಲ್ಲೇಖಿಸಲಾಗಿದೆ.

**ವೇದಾನುಕ್ತಗುಣವತ್ತ್ವ:**

ಅನಂತವೇದಗಳಿಂದ ಪ್ರತಿಪಾದ್ಯಗಳಾದ ಗುಣಗಳನ್ನಷ್ಟೇ ಅಲ್ಲದೆ, ಅಂತಹ ಅನಂತ ವೇದಗಳಿಂದಲೂ ಹೇಳಲ್ಪಡದ ಗುಣಗಳನ್ನೂ ಹೊಂದಿರುವುದು ಮುಖ್ಯವಾಗಿ ಭಗವಂತನ ಧರ್ಮ.

ಇದು ವಾಯುದೇವನಲ್ಲೂ ಅಮುಖ್ಯವಾಗಿ ಇದೆ. ತೈತ್ತಿರೀಯೋಪನಿಷತ್ತಿನಲ್ಲಿ [2-11] ಸರ್ವವನ್ನೂ ಸೃಷ್ಟಿಸಿದ ಭಗವಂತನು ಸೃಷ್ಟವಾದ ಆಯಾ ವಸ್ತುವನ್ನು ಪ್ರವೇಶಿಸಿ ಅಲ್ಲಿ ಆಯಾ ಧರ್ಮಪ್ರಯುಕ್ತ ಆಯಾ ಹೆಸರು ಬರುವಂತೆ ಮಾಡುವನೆಂದು ತಿಳಿಸುವಾಗ 'ನಿರುಕ್ತಂ' –ಎಂಬ ಹೆಸರಿನ ವಸ್ತುವಿನ ಪ್ರಸ್ತಾವ ಬರುವುದು. ಚೆನ್ನಾಗಿ ವಾಚ್ಯವಾಗುವುದು ಎಂದು ಅದಕ್ಕೆ ಅರ್ಥ. 'ಪ್ರಕೃತಿಪ್ರಾಣತೋಽನ್ಯತ್ರ ಕುರ್ವಂಸ್ತನ್ನಾಮಕೋ ಹರಿಃ' –ಎಂದು ಯಜುಃಸಂಹಿತೆಯಲ್ಲಿ ಸ್ಪಷ್ಟಪಡಿಸಿರುವಂತೆ ಪ್ರಾಣನಲ್ಲಿ ನಿರುಕ್ತನಾಮದ ಪ್ರವೃತ್ತಿನಿಮಿತ್ತವಾದ ಸುವಾಚ್ಯತ್ವವು ಇಲ್ಲದೆ ಇರುವುದರಿಂದ ಅವನಿಗಿಂತ ಬೇರೆ ವ್ಯಕ್ತಿ ವಸ್ತುಗಳಲ್ಲಷ್ಟೇ ಧರ್ಮವನ್ನು ನೀಡಿ 'ನಿರುಕ್ತ' ಎನಿಸುವಂತೆ ಮಾಡಿದನೆಂದು ನಿರೂಪಿಸಲಾಗುವುದು. ಹೀಗೆ ಸುವಾಚ್ಯತ್ವ ವಾಯುದೇವನಲ್ಲಿ ಇಲ್ಲ ಎಂದಾಗಬೇಕಾದರೆ ವೇದಾನುಕ್ತಗುಣಗಳೂ ಅವನಲ್ಲಿ ಇರುವವೆಂದು ಸಿದ್ಧಿಸುವುದು.

ಬ್ರಹ್ಮತರ್ಕ [ಭಾ.ತಾ.ನಿ 10-17-24) ವಿಷ್ಣುವನ್ನು ಹೇಗೋ ಹಾಗೆ ಚತುರ್ಮುಖನನ್ನೂ, ವಾಯುದೇವನನ್ನೂ 'ಅನಿರುಕ್ತ' –ಸಮಗ್ರವಾಗಿ ತಿಳಿಸಲು ಆಗದ ವ್ಯಕ್ತಿತ್ವ ಉಳ್ಳವರೆಂದು ಸ್ಪಷ್ಟಪಡಿಸಿದೆ– 'ವಿಷ್ಣುರ್ಬ್ರಹ್ಮಾ ತಥಾ ವಾಯುರನಿರುಕ್ತಾಃ ಪ್ರಕೀರ್ತಿತಾಃ'

ಹೀಗೆ ಅನಂತವೇದಗಳಿಂದಲೂ ಅವನನ್ನು ಚೆನ್ನಾಗಿ ತಿಳಿಸಲು ಆಗುವುದಿಲ್ಲ ಎಂದರೆ ಅಂತಹ ವೇದಾನುಕ್ತ ಗುಣಗಳೂ ಅವನಲ್ಲಿ ಇವೆ ಎಂದು ಹೇಳಿದಂತೆಯೇ.

ಇದು ವಾಯುದೇವನಲ್ಲೂ ಅಮುಖ್ಯವಾಗಿ ಇದೆ.

ನಿತ್ಯಪೂರ್ಣಗುಣತ್ವಾಚ್ಚ ಹರೇಃ ಪ್ರಿಯತಮತ್ವತಃ ।
ಅಶಕ್ಯಾಪ್ರಾಪ್ಯರಾಹಿತ್ಯಾದಧ್ಯರ್ದ್ಧಃ ಸಮುದಾಹೃತಃ ।
ತಸ್ಮಾದಖಂಡಶಕ್ತಿಃ ಸ ನಿಸ್ಸೀಮಗುಣಬೃಂಹಿತಃ ॥ ೧೭೩ ॥

ಯಾವಾಗಲೂ ಗುಣಪೂರ್ಣನಾಗಿರುವುದರಿಂದ, ಶ್ರೀಹರಿಗೆ ಅತ್ಯಂತ ಪ್ರಿಯನಾಗಿರುವುದರಿಂದ ಹಾಗೂ ಅವನ ಪಾಲಿಗೆ ಯಾವುದೂ ಅಶಕ್ಯ ಮಾಡಲು ಸಾಧ್ಯವಿಲ್ಲ ಎಂದು ಇಲ್ಲ; ಯಾವುದೂ ಅಪ್ರಾಪ್ಯ-ಹೊಂದಲು ಸಾಧ್ಯವಿಲ್ಲ ಎಂದೂ ಇಲ್ಲ. ಆದುದರಿಂದ ಅವನು 'ಅಧ್ಯರ್ದ್ಧ' ಎಂದು ಉಪನಿಷತ್ತಿನಲ್ಲಿ ಘೋಷಿಸಲ್ಪಟ್ಟಿರುವನು. ಆದುದರಿಂದ ಅವನು ಯಾರಿಂದಲೂ ಭೇದಿಸಲು ಆಗದ ಸಾಮರ್ಥ್ಯವುಳ್ಳವನು ಹಾಗೂ ಅನಂತಗುಣ ಸಂಪನ್ನನು.

- ಬೃಹದಾರಣ್ಯಕೋಪನಿಷತ್ತು [5-9-9] ವಾಯುದೇವನನ್ನು 'ಅಧ್ಯರ್ದ್ಧ' ಎಂದು ಕರೆದಿದ್ದು, ಅದರ ಹಿನ್ನೆಲೆಯ ಮೂರು ಧರ್ಮಗಳನ್ನು 'ಮಹಾಮೀಮಾಂಸೆ'ಯ ಮೂಲಕ ಹೀಗೆ ವಿವರಿಸಲಾಗಿದೆ- '....ಅಧ್ಯರ್ದ್ಧೋ ವಾಯುರುಚ್ಯತೇ । ಅಧ್ಯರ್ದ್ಧಾ ಹಿ ಗುಣಾ ನಿತ್ಯಂ ವಾಯೋರಧ್ಯರ್ದ್ಧ ಏವ ತು । ನ ಚೈಕತ್ವಂ ಭವೇದ್ವಾಯೋಸ್ತದ್ವಿಶಿಷ್ಟೋ ಯತೋ ಹರಿಃ । ನ ದ್ವಿತೀಯೋ ಯತಸ್ತಸ್ಮಿನ್ ಪ್ರೀತಿರಭ್ಯಧಿಕಾ ಹರೇಃ । .....ನ ಚಾಶಕ್ಯಂ ನ ಚಾಪ್ರಾಪ್ಯಮತೋಽಧ್ಯರ್ದ್ಧ ಇತೀರಿತಃ'
- ಬೃಹದಾರಣ್ಯಕೋಪನಿಷತ್ತಿನಲ್ಲಿ [3-3-1....7] ಪ್ರಸ್ತುತವಾದ ಅಗ್ನ್ಯಾದಿದೇವತೆಗಳ ಮೇಲೆ ದೈತ್ಯರ ಆಕ್ರಮಣವನ್ನು ತಿಳಿಸಿ, ವಾಯುದೇವನ ಮೇಲೆ ಆಕ್ರಮಿಸಿದ ದೈತ್ಯರು ತಾವೇ ಪುಡಿಪುಡಿಯಾದ ವಿಷಯವನ್ನು ನಿರೂಪಿಸಿ, '....ತಸ್ಮಾದಖಂಡಶಕ್ತಿಃ ಸ ಮುಖ್ಯವಾಯುರುದಾಹೃತಃ । ಶಾಪೈರಥ ವರೈರ್ವಾಪಿ ನಾಸ್ಯ ಪ್ರತಿಹತಿರ್ಭವೇತ್' -ಆದುದರಿಂದ ಮುಖ್ಯವಾಯು ಅಖಂಡಶಕ್ತಿಸಂಪನ್ನನಾದವನು. ಯಾರ ಶಾಪದಿಂದಾಗಲೀ, ವರದಿಂದಾಗಲೀ ಅವನ ಶಕ್ತಿಗೆ ತಡೆಯೇ ಬರಲಾರದು ಎಂದು ಸಾರಿರುವ ಸಂದೇಶವನ್ನು ಇಲ್ಲಿ ಸೂಚಿಸಲಾಗಿದೆ.

ಅನಂತಾನ್ಯಸ್ಯ ರೂಪಾಣಿ ತ್ರಿಕೋಟೀನಿ ವಿಶೇಷತಃ ।
ಪ್ರಾಣಾದಿದಶರೂಪೋಽಸೌ ಸೋಽಧ್ಯಾತ್ಮಾದಿಗತಃ ಪ್ರಭುಃ ॥ ೭೪ ॥

ಹನೂಮಾನ್ ಭೀಮಸೇನಶ್ಚ ಪೂರ್ಣಪ್ರಜ್ಞಾರ್ಯ ಇತ್ಯಪಿ ।
ಶ್ರುತಾನಿ ತ್ರೀಣಿ ರೂಪಾಣಿ ಮೂಲರೂಪಸಮಾನಿ ಚ ॥ ೧೭೫ ॥

ವಾಯುದೇವನಿಗೆ ಅನಂತರೂಪಗಳಿವೆ. ಅವುಗಳಲ್ಲೂ ವಿಶೇಷವಾಗಿ ಮೂರುಕೋಟಿ ರೂಪಗಳು. ಪ್ರಾಣಾದಿ ಪತ್ತು ರೂಪಗಳು, ಅಧ್ಯಾತ್ಮ -ಶರೀರದಲ್ಲಿ ಇರುವವು,

ಅಧಿಭೂತ –ಭೂತಾಭಿಮಾನಿಗಳಾಗಿ ಇರುವವು, ಅಧಿದೈವ –ತಮ್ಮ ತಮ್ಮ ರೂಪದಲ್ಲಿ ಇರುವವು. ಹೀಗೆ ದಶರೂಪಿ ವಾಯುದೇವ ಮೂರು ಬಗೆಗಳಲ್ಲಿ ಇರುವನು. ಬಳಿತ್ಥಾ ಸೂಕ್ತವೇ ಮುಂತಾದ ಶ್ರುತಿಯಲ್ಲಿ ಸಾರಲ್ಪಟ್ಟ ಹನೂಮಾನ್, ಭೀಮಸೇನ ಹಾಗೂ ಮಧ್ವಾಚಾರ್ಯ ಎಂಬ ಮೂರು ರೂಪಗಳು ಇವೆ. ಇವು ವಾಯುದೇವನ ಮೂಲ ರೂಪಕ್ಕೆ ಸಮಾನವಾಗಿರುವವು.

## ವಾಯುದೇವನ ರೂಪಗಳು:

- ಅನಂತ ಜೀವರಲ್ಲಿ ಶ್ವಾಸೋಚ್ಛ್ವಾಸಪ್ರವರ್ತಕನಾಗಿ ಇರುವ ವಾಯುದೇವನ ಆಧ್ಯಾತ್ಮಿಕ ರೂಪಗಳು ಅನಂತಗಳು.
- '......ತ್ರಿಕೋಟಿರೂಪಃ ಪವನಶ್ಚ ಮೇ ಸುತಃ' [ಮ.ಭಾ.ತಾ.ನಿ. 8-237] ಎಂದು ರಾಮದೇವರು ತಿಳಿಸಿರುವಂತೆ ವಾಯುದೇವನ ಮೂರು ಕೋಟಿ ರೂಪಗಳು ಪ್ರಸಿದ್ಧವಾದವುಗಳು.

**ಪ್ರಾಣಾದಿ ಪಂಚಕಂ ಚೈವ ತಥಾ ನಾಗಾದಿಪಂಚಕಮ್ ।**
**ಏವಂ ತು ದಶಧಾ ಪ್ರಾಣ ಆಧ್ಯಾತ್ಮಾದಿ ತ್ರಿಧಾಽಖಿಲಾಃ ।**

–ಎಂಬ ವ್ಯೋಮಸಂಹಿತೆ [ಮ.ಭಾ.ಗ.ತಾ.ನಿ. 3-7-9] ಪ್ರಾಣಾಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯ –ಹೀಗೆ ಹತ್ತು ರೂಪಿಗಳುಳ್ಳ ವಾಯುದೇವನ ಈ ಹತ್ತು ರೂಪಗಳು ದೇಹಕ್ಕೆ ಸಂಬಂಧಿಸಿದಂತೆ, ಭೂತಗಳಿಗೆ ಸಂಬಂಧಿ ಸಿದಂತೆ ಹಾಗೂ ತಮ್ಮ ಲೋಕದಲ್ಲಿ ಇರುವ ಮೂಲರೂಪಗಳು –ಹೀಗೆ ಮೂರು ವಿಭಾಗದಲ್ಲಿ ಇವೆ ಎಂದು ತಿಳಿಸಿದೆ.

- ಬಳಿತ್ಥಾಸೂಕ್ತಾದಿ ಶ್ರುತಿಗಳಲ್ಲಿ ವಾಯುದೇವನ ಆಂಜನೇಯಾದಿ ಮೂರು ರೂಪಗಳು ಪ್ರಸಿದ್ಧವಾದವು.

## ಮೂಲರೂಪ ಸಮಾನತ್ವ:

ವಾಯುದೇವನ ಮೂಲರೂಪವನ್ನೂ, ಅವತಾರರೂಪಗಳನ್ನೂ ಪರಿಚಯಿಸ ಹೊರಟ ಬಳಿತ್ಥಾಸೂಕ್ತ **'ಬಳಿತ್ಥಾ ತದ್ವಪುಷೇ ಧಾಯಿ.....'** –ಎಂಬುದಾಗಿ ಮೂಲರೂಪ ದಂತೆಯೇ ಅವತಾರರೂಪ ಎಂದು ಸಾರುತ್ತಲೇ ಪ್ರಾರಂಭವಾಗುತ್ತಿದೆ. ಬಳಿತ್ಥಾಸೂಕ್ತದ ಛಾಯಾನುವಾದದಂತಿರುವ ಪ್ರಮಾಣದಲ್ಲೂ **'ಯಸ್ಯ ತ್ರೀಣ್ಯುದಿತಾನಿ.... ಇತ್ಥಮೇವ ನಿಹಿತಂ....'** ಎಂದು ಮೂಲರೂಪದಂತೆಯೇ ಅವತಾರರೂಪಗಳಿವೆ ಎಂದು ತಿಳಿಸಲಾಗಿದೆ. ಇದಕ್ಕೆ ಅನುಗುಣವಾಗಿ ತ್ರಿವಿಕ್ರಮಪಂಡಿತರು ತಮ್ಮ ತತ್ತ್ವಪ್ರದೀಪದಲ್ಲಿ 'ಗುಣಾದ್ವಾಽಽಲೋಕ ವತ್' –ಎಂಬ ಬ್ರಹ್ಮಸೂತ್ರದ [2-3-37] ಭಾಷ್ಯದಲ್ಲಿ ಉಲ್ಲೇಖಿಸಲಾದ 'ಸ್ಕಾಂದ'ವು ದೇವತೆಗಳಿಗೆ ಸ್ವರೂಪತಃ ಸಮ್ಯಗವಸ್ಥಾನದಿಂದ ವ್ಯಾಪ್ತ್ಯಭಾವವೂ, ಸ್ವರೂಪತಃ ಸಮ್ಯಗನ ವಸ್ಥಾನದಿಂದ ವ್ಯಾಪ್ತಿಯೂ ಇದೆ. –**'ಅಸಮ್ಯಕ್ ಸಮ್ಯಗಿತಿ ಚ ಹ್ಯವಸ್ಥಾಭೇದತಃ ಸುರಾಃ ।'**

–ಎಂಬ ಸಂದೇಶಕ್ಕೆ ಸಂಬಂಧಿಸಿದಂತೆ ಪ್ರಾಸಂಗಿಕವಾಗಿ ವಾಯುದೇವರ ಅವತಾರಗಳ, ಅವುಗಳಲ್ಲೂ ತಮ್ಮ ಗುರುಗಳಾದ ಶ್ರೀ ಮಧ್ವಾಚಾರ್ಯರ ವೈಶಿಷ್ಟ್ಯವನ್ನು ಹೀಗೆ ಪ್ರತಿ ಪಾದಿಸಿರುವರು– ತತ್ರಾಪಿ ಕೇಷಾಂಚಿತ್ ಅಧಿಕಶಕ್ತಿಯೋಗಾತ್ ಕದಾಚಿತ್ ಬಹುಷು ಸ್ಥಾನೇಷು ಪ್ರಾಯಃ ಸಮ್ಯಗವಸ್ಥಾನಮತ್ಯುತ್ತಮಾನಾಂ ಭಗವತ್‌ಪ್ರಸಾದಾದಿಚ್ಛಯಾ ಸಮ್ಯಗವಸ್ಥಾನಂ ಚ' –ವ್ಯಾಪ್ತಿಯನ್ನೂ ವ್ಯಾಪ್ಯಭಾವವನ್ನೂ ಒಳಗೊಂಡಿರುವ ದೇವತೆಗಳಲ್ಲೂ ಅತ್ಯುತ್ತಮರಾದ ಕೆಲವರಿಗೆ ಇನ್ನಷ್ಟು ಅಧಿಕಶಕ್ತಿ ಇರುವುದರಿಂದ ಕೆಲವೊಮ್ಮೆ ಬಹಳ ಸ್ಥಾನಗಳಲ್ಲೂ ಸಮ್ಯಗವಸ್ಥಾನವೂ ಇರುವುದುಂಟು. ಭಗವಂತನ ಅನುಗ್ರಹದಿಂದ ಹಾಗೂ ಭಗವದಿಚ್ಛೆಯಿಂದ ಇಂತಹ ಸಮ್ಯಗವಸ್ಥಾನವು ಸಂಭವಿಸಿದೆ.

ಹೀಗೆ ಪ್ರಸ್ತಾವನೆಯನ್ನು ನೀಡಿ ಶ್ರೀ ಮಧ್ವಾಚಾರ್ಯರಲ್ಲಿ ಈ ವಿಚಾರವನ್ನು ಹೀಗೆ ಸಮನ್ವಯಿಸಿರುವರು– 'ಅತೋ ಅವತಾರೇಷ್ವಪಿ ಕೇಷಾಂಚಿತ್ ಪರಮಪರಾಯಣಾನಾಂ ಮಹಾತ್ಮನಾಂ ತತ್ತ್ವವಿದ್ಯಾಚಾರ್ಯವರ್ಯಾಣಾಂ ಮೂಲರೂಪ ಇವ ಸೌಬಲ್ಯ–ಸಾರ್ವಜ್ಞ್ಯ–ಸೌಲಕ್ಷಣ್ಯಾದಿ ಗುಣಾಃ ಪರಿದೃಶ್ಯಮಾನಾಃ ಯುಜ್ಯಂತೇ'

ದೇವೋತ್ತಮರು ಏಕಕಾಲದಲ್ಲಿ ಸ್ವರೂಪತಃ ಸಮ್ಯಗವಸ್ಥಾನದಿಂದಲೂ ಬಹು ಸ್ಥಳಗಳಲ್ಲಿ ಇರುವರಾದುದರಿಂದ ತತ್ತ್ವವಿದ್ಯಾಚಾರ್ಯವರ್ಯರಾದ ಭಗವದ್‌ಭಕ್ತರಾದ ಮಹಾತ್ಮರಾದ ಶ್ರೀವಾಯುದೇವರ ಅವತಾರಗಳಲ್ಲೂ ಮೂಲರೂಪದಲ್ಲಿ ಇರುವಂತೆ ಒಳ್ಳೆಯ ಬಲ, ಸರ್ವಜ್ಞತ್ವ, ಸಲ್ಲಕ್ಷಣಸಂಪನ್ನತೆ ಮುಂತಾದ ಪ್ರತ್ಯಕ್ಷವಾಗಿ ಕಾಣುತ್ತಿರುವ ಗುಣಗಳು ಕೂಡುವವು.

ಹೀಗೆ ಇಲ್ಲಿ ವಾಯುದೇವರ ಮೂಲರೂಪದ ಗುಣಗಳೆಲ್ಲ ಅವತಾರರೂಪಗಳಲ್ಲಿ ಕಾಣಿಸುವವೆಂದು ಹೇಳಲಾಗಿದೆ.

## ನಿತ್ಯವ್ಯಕ್ತಗಳಲ್ಲ:

ತ್ರಿವಿಕ್ರಮಪಂಡಿತರ ಮೇಲಿನ ಉದ್ಗಾರ ನೋಡಿದರೆ ವಾಯುದೇವರ ಅವತಾರರಾದ ಮಧ್ವಗುರುಗಳಲ್ಲಿ ಮೂಲರೂಪದ ಗುಣಧರ್ಮಗಳೆಲ್ಲ ನಿತ್ಯಾಭಿವ್ಯಕ್ತಗಳೇನೋ ಎಂಬ ಭಾವನೆ ಮೂಡುವುದು. ಆದರೆ ಶ್ರೀ ಮಧ್ವರೇ ಭಗವದ್ರೂಪಗಳ, ಇತರ ದೇವತಾರೂಪ ಗಳ ಹಾಗೂ ವಾಯುದೇವನ ರೂಪಗಳ ಶಕ್ತಿಯಲ್ಲಿಯ ವ್ಯತ್ಯಾಸವನ್ನು ಹೀಗೆ ಸ್ಪಷ್ಟ ಪಡಿಸಿರುವರು–

'ನೈವಾವ್ಯಕ್ತಿಃ ಕಾಚಿದಸ್ತೀಹ ವಿಷ್ಣೋಃ ಪ್ರಾದುರ್ಭಾವೇಽಪ್ಯತಿಸುವ್ಯಕ್ತಶಕ್ತೇಃ'
[ಮ.ಭಾರ.ತಾ.ನಿ. 22-292]

ಭಗವಂತನ ಅವತಾರರೂಪಗಳಲ್ಲಿ ಮೂಲರೂಪದ ಪೂರ್ಣಶಕ್ತಿ ಯಾವಾಗಲೂ ವ್ಯಕ್ತವಾಗಿಯೇ ಇರುವುದು. ಎಂದೂ ಶಕ್ತಿಗೆ ಅನಭಿವ್ಯಕ್ತಿ ಎಂದೇ ಇಲ್ಲ.

'ಕ್ರಮಾತ್ ಸುರಾಣಾಂ ಭಾಗತೋ ವ್ಯಕ್ತರೂಪಾ ಆದಾನತೋ ವ್ಯಕ್ತಿಮಾಯಾಂತ್ಯ ರೂಣಾಮ್' ಇತರ ದೇವತೆಗಳ ತಾರತಮ್ಯಾನುಸಾರವಾಗಿ ಅವರವರ ಮೂಲ ರೂಪದ

ಶಕ್ತಿ ಯಾವುದಾದರೊಂದು ಚಟುವಟಿಕೆಯನ್ನು ನಿರ್ವಹಿಸಲು ಸ್ವೀಕೃತವಾಯಿತೆಂದರೆ ಆಗಷ್ಟೇ ಅಭಿವ್ಯಕ್ತವಾಗುವುದು. ಬೇರೆ ಸಮಯದಲ್ಲಿ ಅಷ್ಟು ಶಕ್ತಿ ಇರುವುದಿಲ್ಲ.

**ಇಚ್ಛಾವ್ಯಕ್ತಿಃ ಪ್ರಾಯಶೋ ಮಾರುತಸ್ಯ ತದನ್ಯೇಷಾಂ ವ್ಯಕ್ತತಾ ಕಾರಣೇನ ।**
[ಮ.ಭಾ.ತಾ.ನಿ. 22-293]

ಹೀಗೆ ಉಳಿದ ಶೇಷಾದಿಗಳಿಗೆ ತಮ್ಮ ಮೂಲರೂಪದ ಸ್ಮರಣೆ ಮುಂತಾದ ಕಾರಣ ದಿಂದಾಗಿ ಶಕ್ತಿಯ ಅಭಿವ್ಯಕ್ತಿಯಾದರೆ ವಾಯುದೇವನ ಅವತಾರಗಳಲ್ಲಿ ಶಕ್ತಿಯ ಅಭಿವ್ಯಕ್ತಿ ಬರೇ ಇಚ್ಛಿಸುವುದರಿಂದಲೇ.

ಹಾಗಾದರೆ ವಾಯುದೇವ ತನ್ನ ಅವತಾರಗಳಲ್ಲಿ ಶ್ರೀವಿಷ್ಣುವಿನಂತೆ ನಿತ್ಯಾಭಿವ್ಯಕ್ತ ಶಕ್ತಿಕನಲ್ಲ. ಮತ್ತೆ ಬಯಸಿದಾಗಷ್ಟೇ ತನ್ನ ಮೂಲರೂಪದ ಶಕ್ತಿಯನ್ನು ಪಡೆದುಕೊಳ್ಳ ಬಲ್ಲವನು.

ಶ್ರೀ ಮಧ್ವರು ನೀಡಿರುವ ಈ ನಿರ್ಣಯಕ್ಕೆ ಅನುಗುಣವಾಗಿ ತ್ರಿವಿಕ್ರಮಪಂಡಿತರ ಮಾತನ್ನು ಹೊಂದಿಸಿಕೊಳ್ಳಬೇಕು. 'ಮೂಲರೂಪ ಇವ.... ಪರಿದೃಶ್ಯಮಾನಾ ಯುಜ್ಯಂತೇ....' ಮಧ್ವರಲ್ಲಿ ಅವರ ಮೂಲರೂಪದಲ್ಲಿ ಹೇಗೋ ಹಾಗೆ ಬಲಾದಿಗಳು ಕಾಣಿಸುವವೆಂಬುದಕ್ಕೆ '......ಅತ್ಯುತ್ತಮಾನಾಂ ಭಗವತ್‌ಪ್ರಸಾದಾದಿಚ್ಛಯಾ ಸಮ್ಯಗವ ಸ್ಥಾನಂ' ಎಂದು ಪೀಠಿಕೆಯಲ್ಲಿ ಪ್ರಸ್ತಾಪಿಸಿರುವ ವಿಚಾರವನ್ನು ಹಚ್ಚಿಕೊಂಡು ಭಗವಂತನ ಅನುಗ್ರಹದಿಂದ ಹಾಗೂ ಅದರ ಪ್ರಯುಕ್ತವಾಗಿ ಮೂಡಿಬಂದ ತಮ್ಮ ಇಚ್ಛೆಯಿಂದಾಗಿ ಯಷ್ಟೇ ಆ ಗುಣಗಳು ಕಾಣಿಸಿಕೊಂಡಿವೆ ಹೊರತು ಭಗವಂತನ ಅವತಾರಗಳಲ್ಲಿ ಹೇಗೋ ಹಾಗೆ ನಿತ್ಯವ್ಯಕ್ತಗಳಾಗಿರುವುದರಿಂದ ಅಲ್ಲ ಎಂದು ಸಮನ್ವಯಿಸಿಕೊಳ್ಳಬೇಕು.

## 'ಜ್ಞಾನವರ್ಜನಮ್' ಅಂದರೇನು?

ಭಾಗವತತಾತ್ಪರ್ಯನಿರ್ಣಯದಲ್ಲಿ [11-7-17] ಉಲ್ಲೇಖಿಸಲಾದ 'ಶಕ್ತಿ ವಿವೇಕ' ಎಂಬ ಗ್ರಂಥದಲ್ಲಿ ಚತುರ್ಮುಖ, ವಾಯುದೇವ ಹಾಗೂ ಭಾರತೀದೇವಿ ಇವರಿಗೆ ತಮ್ಮ ಅಂಶರೂಪಗಳಲ್ಲಿ 'ಜ್ಞಾನವರ್ಜನ'ರೂಪವಾದ ಮೋಹ ಇರುವುದೆಂದು ಒಪ್ಪಿಕೊಳ್ಳ ಲಾಗಿದೆ–

**'ಬ್ರಹ್ಮಣಸ್ತ್ವಂಶರೂಪೇಷು ಭಾರತ್ಯಾ ಜ್ಞಾನವರ್ಜನಮ್'**

ಚತುರ್ಮುಖನಿಗೆ ತನ್ನ ಆವೇಶಾವತಾರಗಳಾದ ಚಂದ್ರಾದಿಗಳಲ್ಲಿ, ಭಾವಿಬ್ರಹ್ಮನಾದ ವಾಯುದೇವನಿಗೆ ಹಾಗೂ ಭಾರತೀದೇವಿಗೆ ತಮ್ಮ ಅವತಾರರೂಪಗಳಲ್ಲಿ ಮೂಲರೂಪ ದಲ್ಲಿ ಇರುವಷ್ಟು ಜ್ಞಾನ ಇರದೆ 'ಜ್ಞಾನವರ್ಜನ' ಇದೆ –ಎಂದು ತಿಳಿಸಲಾಗಿದೆ.

ಚಂದ್ರಾದಿಗಳಲ್ಲಿ ಜ್ಞಾನವರ್ಜನ ಎಂದರೆ ಜ್ಞಾನದ ನ್ಯೂನತೆ ಎಂದೇ ಅರ್ಥ. ಆದರೆ ವಾಯುದೇವ, ಭಾರತಿಯರ ಅವತಾರರೂಪಗಳಲ್ಲಿ ಇರುವ 'ಜ್ಞಾನವರ್ಜನ' ಎಂದರೆ ಏನು?

ಬನ್ನಂಜೆ ಗೋವಿಂದಾಚಾರ್ಯರು ತಮ್ಮ ಟಿಪ್ಪಣಿಯಲ್ಲಿ **'ಅಥ ಬ್ರಹ್ಮಾ ವಾಯುಃ, ತಸ್ಯ ಭಾರತ್ಯಾಶ್ಚ ಅಂಶರೂಪೇಷು ಅವತಾರೇಷು ಮೂಲರೂಪೇ ಯಾವತ್ ತಾವತೋ ಜ್ಞಾನಸ್ಯ ವರ್ಜನಂ ಜ್ಞಾನಹ್ರಾಸ ಇತಿ ಯಾವತ್ । ಸ ಏವ ಚ ತಸ್ಯ ತಸ್ಯಾಶ್ಚ ಮೋಹೋ ನಾಮ । .....ಹನುಮದಾದಿಷು ವಾಯ್ವವತಾರೇಷು.... ಮೂಲರೂಪಾಪೇಕ್ಷಯಾ ಕಿಂಚಿದಿವ ಜ್ಞಾನಹ್ರಾಸೋ ವಿದ್ಯತೇ ಇತ್ಯರ್ಥಃ'** –ಎಂಬುದಾಗಿ ವಾಯುದೇವರ ಅವತಾರರೂಪಗಳಲ್ಲಿ ಮೂಲರೂಪದಲ್ಲಿರುವ ಜ್ಞಾನದ ವರ್ಜನ ಎಂದರೆ ಹ್ರಾಸ. ಆದುದರಿಂದ ವಾಯುದೇವನ ಅವತಾರರೂಪಗಳಲ್ಲಿ ಮೂಲರೂಪಕ್ಕಿಂತ ಕಿಂಚಿತ್ ಜ್ಞಾನಹ್ರಾಸ ಉಂಟು ಎಂದು ಅಭಿಪ್ರಾಯ ಪಡುವರು.

ಆದರೆ ಜ್ಞಾನದ ಅಸ್ಫುಟತೆಯ ರೂಪದಲ್ಲಿರುವ ಅದು ಕಿಂಚಿತ್ ಪ್ರಮಾಣದಲ್ಲಷ್ಟೇ ಇರುವುದರಿಂದ ಉಪಾಸನೆಯಲ್ಲಿ ಈ ಕಿಂಚಿತ್ ಪ್ರಮಾಣದ ಅಸ್ಫುಟತೆಯನ್ನು ಪರಿಗಣಿಸ ಬೇಕಾಗಿಲ್ಲ –ಎಂಬ ಅಭಿಪ್ರಾಯದಿಂದಷ್ಟೇ ವಾಯುದೇವನ ಮೂಲರೂಪಕ್ಕೂ ಅವತಾರ ರೂಪಗಳಿಗೂ ಏನೂ ವಿಶೇಷವಿಲ್ಲ –ಎಂಬ ಮಾತುಗಳು ಹೊರಟದ್ದು ಎಂದು ಬನ್ನಂಜೆ ಯವರ ಆಂತರ್ಯ.

ಇನ್ನು ಕೆಲವು ಟಿಪ್ಪಣಿಕಾರರು 'ವಾಯುರೂಪೇಷು ಜ್ಞಾನವರ್ಜನಮಿಚ್ಛಾಭಾವೇ ಅಪರೋಕ್ಷಜ್ಞಾನಾನಭಿವ್ಯಕ್ತಿರ್ಮೋಹಃ ಇತ್ಯರ್ಥಃ' –ಎಂಬುದಾಗಿ ಬಯಸಿದಾಗಷ್ಟೇ ವಾಯುದೇವನ ಅವತಾರಗಳಲ್ಲಿ ಮೂಲರೂಪದ ಜ್ಞಾನವು ಅಭಿವ್ಯಕ್ತವಾಗುವುದರಿಂದ, ಅಂತಹ ಬಯಕೆ, ಇಚ್ಛೆ ಇಲ್ಲದಿದ್ದಾಗ ಅಪರೋಕ್ಷಜ್ಞಾನವು ಅಭಿವ್ಯಕ್ತವಾಗಲಾರದು. ಈ ಬಗೆಯ ಅಭಿವ್ಯಕ್ತ್ಯಭಾವವನ್ನೇ ಇಲ್ಲಿ 'ಜ್ಞಾನವರ್ಜನ' 'ಮೋಹ' ಎಂದು ಇಟ್ಟುಕೊಳ್ಳ ಬೇಕು –ಎಂದು ಅಭಿಪ್ರಾಯ ಪಡುವರು.

ಆದರೆ ಜ್ಞಾನದ ಅಭಿವ್ಯಕ್ತ್ಯಭಾವ 'ಮೋಹ' –ಎಂದು ಗುರುತಿಸಲ್ಪಡುವುದರಲ್ಲಿ ಅಸ್ವಾರಸ್ಯ ಇದೆ. ಅಲ್ಲದೆ, ವಾಯುದೇವನ ಅವತಾರಗಳಿಗೂ ಭಾರತೀದೇವಿಗೂ ಸಂಬಂಧಿ ಸಿದಂತೆ 'ಜ್ಞಾನವರ್ಜನ' ಎಂದು ಒಂದೇ ಪದದಿಂದ ಹೇಳಲಾದ 'ಮೋಹ' ವಾಯುವಿನ ಅವತಾರಗಳಿಗೆ ಒಂದು ಬಗೆಯಲ್ಲಿ, ಭಾರತೀದೇವಿಗೆ ಮತ್ತೊಂದು ಬಗೆಯಲ್ಲಿ ಹೇಳುವುದು ಉಚಿತವೆನಿಸದು.

**'ತತ್ತ್ವರತ್ನಪ್ರಕಾಶ'ದ ಸಂದೇಹ ಸಮಾಧಾನಗಳು:**

**'.....ತನ್ಮಾನುಷೇ ಬಲೇ ತಸ್ಯ ವರಾದ್ ವಾರಿತವತ್ ಸ್ಥಿತೇ ।**
**ದೈವಂ ಬಲಂ ಸುಶಕ್ತೋಽಪಿ ನಾವಿಶ್ಚಕ್ರೇ ಸ ಮಾರುತಃ ॥**
[ಮ.ಭಾರ.ತಾ.ನಿ. 22-361, 362]

ಎಂದು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ನಿರ್ಣಯಿಸಿರುವಂತೆ ಭೀಮಸೇನ ನಹು ಷನ ಪ್ರಸಂಗದಲ್ಲಿ ತನ್ನ ಬಲವನ್ನು ಪೂರ್ಣವಾಗಿ ಪ್ರಕಟಿಸಲಿಲ್ಲ. ಹಾಗಾದರೆ ವಾಯು ದೇವನ ಅವತಾರಗಳಲ್ಲಿ ಬಲಾದಿ ಗುಣಗಳಿಗೆ ಆವರಣ ಉಂಟು ಎಂದಂತಾಗುವುದು. ಮೂಲರೂಪದ ಸಾಮ್ಯ ಇದ್ದಲ್ಲಿ ಈ ಬಗೆಯ ಆವರಣ ಹೇಗೆ ಕೊಡುವುದು? ಎಂಬ

ಸಂಶಯಕ್ಕೆ ಹೀಗೆ ಸಮಾಧಾನ– 'ಇತ್ಥಮೇವ ನಿಹಿತಂ....' –ಎಂದು ನಿರೂಪಿಸಿರುವಂತೆ ವಾಯುದೇವನ ಮೂಲರೂಪದ ಗುಣಗಳೆಲ್ಲ ಭೀಮಸೇನಾದಿ ಅವತಾರರೂಪಗಳಲ್ಲಿ ಇದ್ದೇ ಇವೆ. ಆದರೆ ಇಷ್ಟೊಂದು ವಿಶೇಷವಿದೆ –ಅವತಾರರೂಪದಲ್ಲಿ ಇರುವ ದೈವ ಬಲಾದಿಗಳೆಲ್ಲ ಯಾವಾಗಲೂ ಅಭಿವ್ಯಕ್ತವಾಗುವುದಿಲ್ಲ.

ಆದರೆ ಇಚ್ಛಾನುಸಾರವಾಗಿ ಕೆಲವೊಮ್ಮೆ ಅಭಿವ್ಯಕ್ತವಾಗುವುದಷ್ಟೇ. ಭಗವಂತನ ಕ್ರಿಯೆಗಳು ಶಕ್ತಿ ಮತ್ತು ವ್ಯಕ್ತಿ ರೂಪದಿಂದ ಇರುವವೆಂದು ಪ್ರಮಾಣಸಿದ್ಧ. ವ್ಯಕ್ತಿರೂಪದಿಂದ ಕಾಣಿಸಿಕೊಳ್ಳದಿದ್ದರೂ ಶಕ್ತಿರೂಪದಿಂದ ಇದ್ದೇ ಇವೆ ಎಂದು ಅವನ ಅವತಾರರೂಪಗಳಲ್ಲಿ ಪರಸ್ಪರ ಸಾಮ್ಯವನ್ನು ಸಮರ್ಥಿಸಲಾಗುವುದು. ಅದರಂತೆ ಭೀಮಾದಿ ವಾಯು ಅವತಾರ ಗಳಲ್ಲಿ ದೈವಬಲಾದಿಗಳು ಇದ್ದೇ ಇವೆ ಎಂದು ಮೂಲರೂಪದ ಸಾಮ್ಯ. ಮಾನುಷ ಬಲವಷ್ಟೇ ನಹುಷನಿಂದ ತಡೆಯಲ್ಪಟ್ಟದ್ದು. ದೇವಾ ಅಪಿ ಮನುಷ್ಯೇಷು ಜಾತಾಃ ಸುಬಲಿನೋಽಪಿ ಹಿ । ಮಾನುಷೇಣೈವ ಭಾವೇನ ಯುಕ್ತಾಃ ಸ್ಯುಃ ಕೇಶವಾದೃತೇ' [ಮ.ಭಾರ.ತಾ.ನಿ. 22-446] ಎಂದು ನಿರ್ಣಯಿಸಿರುವಂತೆ ಭೀಮಸೇನನಲ್ಲಿ ಎರಡು ಬಗೆಯ ಬಲಗಳಿವೆ. ಒಂದು ಸ್ವರೂಪಕ್ಕೆ ಸಂಬಂಧಿಸಿದ ದೈವಬಲವಾದರೆ ಮತ್ತೊಂದು ಮಾನುಷಶರೀರದ ಸಂಬಂಧಪ್ರಯುಕ್ತವಾಗಿ ಉಂಟಾದ ಮಾನುಷತ್ವದಿಂದಾಗಿ ಕಾಣಿಸಿ ಕೊಳ್ಳುವ ಮಾನುಷಬಲ. ಇಂತಹ ಮಾನುಷಬಲವಷ್ಟೇ ಸ್ವಲ್ಪ ಪ್ರತಿಬದ್ಧವಾಗುವುದು. ಅದೂ ಸ್ವಲ್ಪ ಅವಧಿಯಲ್ಲಷ್ಟೇ.

ಹೀಗೆ ನರಸ್ವಭಾವದ ನಡತೆ, ದೈವಬಲವನ್ನು ಮುಚ್ಚಿಡುವಿಕೆ ಮುಂತಾದ ವಿಷಯಗಳಲ್ಲಿ ವಾಯುದೇವನ ಮೂಲರೂಪಕ್ಕೂ ಅವತಾರರೂಪಗಳಿಗೂ ವೈಷಮ್ಯವನ್ನು ಒಪ್ಪಿಕೊಳ್ಳಲಾಗುವುದು. ಆದರೂ ಆ ವೈಷಮ್ಯ ಅತ್ಯಲ್ಪ ಎಂದು ಪರಿಗಣಿಸಲ್ಪಡುವುದಿಲ್ಲ ವಷ್ಟೇ. ಇದೇ ರೀತಿಯಾಗಿ 'ಬ್ರಹ್ಮಣಃ ತ್ವಂಶರೂಪೇಷು ಭಾರತ್ಯಾ ಜ್ಞಾನವರ್ಜನಮ್ ಎಂದು ತಿಳಿಸಿರುವಂತೆ ಭೀಮಾದ್ಯವತಾರಗಳಲ್ಲಿ ಕೆಲವು ವಿಷಯಗಳಲ್ಲಿ ಭಗವದ್ಗುಣಾದಿಗತ ವಾದ ವಿಶೇಷಗಳ ಅಪರೋಕ್ಷ ಮೂಲರೂಪದಲ್ಲಿ ಇರುವಂತೆ ಇಲ್ಲ ಎಂದು ವೈಷಮ್ಯ ವನ್ನು ಒಪ್ಪಲಾಗುವುದು. ಈ ವೈಷಮ್ಯವೂ ಅತ್ಯಲ್ಪವಾದುದರಿಂದ ಅದನ್ನು ಪರಿಗಣನೆಗೆ ತೆಗೆದುಕೊಳ್ಳದೆ ಮೂಲರೂಪಕ್ಕೂ ಅವತಾರರೂಪಗಳಿಗೂ ಸಾಮ್ಯವನ್ನು ಹೇಳಲಾಗಿದೆ ಯಷ್ಟೇ.

'ಅನ್ಯತ್ರಾಲೋಚನೇ ಸರ್ವವಿಷಯಕಂ ಜ್ಞಾನಂ.....' ಎಂದು ವಾಯುದೇವನ ಜ್ಞಾನ ಅಪರತತ್ತ್ವದ ವಿಷಯದಲ್ಲಿ ಸರ್ವವನ್ನೂ ಗ್ರಹಿಸಬಲ್ಲದ್ದಾದುದರಿಂದ ಸಂದೇಹಕ್ಕೆ ಅವಕಾಶವಿಲ್ಲ ಎಂದು ಅವನ ಅವತಾರರೂಪಗಳಲ್ಲೂ ಯಾವುದೇ ಲೌಕಿಕ ವಿಷಯದಲ್ಲಿ ಸಂದೇಹ ಕೂಡುವುದಿಲ್ಲ. ಆದರೂ ಕೆಲವೊಂದು ಸಂದರ್ಭಗಳಲ್ಲಿ ಸಂದೇಹ ತೋರಿಸ ಲ್ಪಟ್ಟಿದೆ ಎಂದರೆ ಅದು 'ತೇಷಾಂ ವಿಡಂಬನಾಯೈವ ದೈತ್ಯಾನಾಂ ವಂಚನಾಯ ಚ । ಪಶ್ಯತಾಂ ಕಲಿಮುಖ್ಯಾನಾಂ ವಿಡಂಬೋಽಯಂ ಕೃತೋ ಭವೇತ್' ಎಂದು ನಿರ್ಣಯಿ ಸಿರುವಂತೆ ಕಲಿ ಮುಂತಾದ ದೈತ್ಯರ ಮೋಹಕ್ಕಾಗಿ, ಋಷಿ ಮುಂತಾದ ಸಜ್ಜನರ ವಿಡಂಬನೆ ಗಾಗಿಯಷ್ಟೇ ಎಂದು ಇಟ್ಟುಕೊಳ್ಳಬೇಕು.

ಕದಾಚಿದವತಾರೇಷು ಹ್ಯಾಪರೋಕ್ಷ್ಯೋಜ್ಝಿತಿಃ ಕ್ವಚಿತ್ ।
ಬ್ರಹ್ಮಣೋ ನಾವತಾರೋಽಸ್ತಿ ವಿಶೇಷಾದರ್ಶನಂ ಕ್ವಚಿತ್ ।
ಮುಕ್ತಸ್ತು ಸರ್ವದಾ ಪಶ್ಯೇತ್ ಸರ್ವಗತ್ವೇನ ಚಾಪಿ ತು ॥ ೧೭೬ ॥

'ಶಕ್ತಿವಿವೇಕ' ಗ್ರಂಥದಲ್ಲಿ ತಿಳಿಸಿದಂತೆ ವಾಯುದೇವನ ಅವತಾರಗಳಲ್ಲಿ ಕೆಲವೊಮ್ಮೆ ಕೆಲವು ಭಗವದ್ರೂಪಗಳ ವಿಷಯದಲ್ಲಿ ಅಪರೋಕ್ಷಜ್ಞಾನದ ಕೊರತೆ ಇರುವುದು. ಆ ಗ್ರಂಥದಲ್ಲಿ 'ಬ್ರಹ್ಮಣಃ ಅವತಾರೇಷು.....' ಎಂದು ಇರುವುದಾದರೂ ಅಲ್ಲಿ ಭಾವಿಬ್ರಹ್ಮನಾದ ವಾಯುದೇವನ ಅವತಾರಗಳನ್ನಷ್ಟೇ ತೆಗೆದುಕೊಳ್ಳಬೇಕು. ಚತುರ್ಮುಖಬ್ರಹ್ಮನಿಗೆ ಅವತಾರಗಳೇ ಇಲ್ಲ ತಾನೇ? ಆದರೆ ಚತುರ್ಮುಖನಿಗೂ ಅವಸ್ಥಾಭೇದದಿಂದ ಅಂದರೆ ಚತುರ್ಮುಖತ್ವಾದಿ ಸಂಸಾರಿತ್ವಾವಸ್ಥೆಯಲ್ಲಿ ಭಗವಂತನ ಸರ್ವವಿಶೇಷಗಳ ಅಪರೋಕ್ಷವಿಲ್ಲ. ಮುಕ್ತತ್ವಾವಸ್ಥೆಯಲ್ಲಿ ಯಾವಾಗಲೂ ಎಲ್ಲರಲ್ಲಿ ಇರುವವನಾಗಿ ಸರ್ವವಿಶೇಷಗಳನ್ನೂ ಕಾಣುವನು.

- ಭಾಗವತತಾತ್ಪರ್ಯನಿರ್ಣಯದಲ್ಲಿ ಉದಾಹೃತವಾದ 'ಶಕ್ತಿವಿವೇಕ'ದ 'ಬ್ರಹ್ಮಣಸ್ತ್ವಂಶರೂಪೇಷು ಭಾರತ್ಯಾ ಜ್ಞಾನವರ್ಜನಮ್' –ಎಂಬ ಮಾತಿನ ಆಧಾರದಲ್ಲಿ ವಾಯುದೇವನ ಅವತಾರಗಳಲ್ಲಿ ಕೆಲವೊಮ್ಮೆ ಕೆಲವು ವಿಷಯಗಳಲ್ಲಿ ಅಪರೋಕ್ಷಜ್ಞಾನದ ರಾಹಿತ್ಯ ಇದೆ. ಆದರೆ ಈ ಮಾತಿನ ಬ್ರಹ್ಮಶಬ್ದದಿಂದ ಚತುರ್ಮುಖನನ್ನು ತೆಗೆದುಕೊಳ್ಳಲಾಗುವುದಿಲ್ಲ. ಯಾಕೆಂದರೆ ಅವನಿಗೆ ಅವತಾರಗಳಿಲ್ಲ. ಆದರೂ 'ಬ್ರಹ್ಮಾ ತು ಸರ್ವಗಂ ಪಶ್ಯೇದ್ ಗುಣಾನಪ್ಯನ್ಯತೋಽಧಿಕಮ್ । ನತು ಸರ್ವೇಷು ಕಾಲೇಷು ತಥಾ ಪಶ್ಯತ್ಯಮುಕ್ತಿಗಃ' –ಎಂದು ಅನುವ್ಯಾಖ್ಯಾನದಲ್ಲಿ [3-4-72] ತಿಳಿಸಿದಂತೆ ಚತುರ್ಮುಖನು ಉಳಿದವರಿಗಿಂತೆಲ್ಲ ಅಧಿಕವಾಗಿ ಭಗವಂತನ ಗುಣಗಳನ್ನು ಕಾಣುವನಾದರೂ ಯಾವಾಗಲೂ ಹಾಗೆ ಕಾಣುತ್ತಿರುವನೆಂದು ಹೇಳುವಂತಿಲ್ಲ. 'ಶಕ್ತಿವಿವೇಕ'ದ 'ಬ್ರಹ್ಮಣಃ.... ಜ್ಞಾನವರ್ಜನಂ' ಚತುರ್ಮುಖನ ಜ್ಞಾನದ ನ್ಯೂನತೆ ಎಂದರೆ ಇದನ್ನೇ, ಅಂದರೆ ಯಾವಾಗಲೂ ಭಗವಂತನ ಗುಣಗಳನ್ನು ಕಾಣದೆ ಇರುವುದನ್ನು ಇಟ್ಟುಕೊಳ್ಳಬೇಕೆಂದು ಸೂಚಿತ.

ಆದರೆ ಅನುವ್ಯಾಖ್ಯಾನದ ಮುಂದಿನದ್ದಾದ [3-4-73] 'ಮುಕ್ತಸ್ತು..... ಚಾಪಿ ಚ' ಎಂಬ ಮಾತನ್ನು ಉಲ್ಲೇಖಿಸಿ ಮುಕ್ತಬ್ರಹ್ಮನಾದರೂ ಎಲ್ಲೆಡೆ ಇರುವವನಾಗಿ, ಎಲ್ಲರಲ್ಲಿ ಇರುವವನಾಗಿ ಭಗವಂತನ ಎಲ್ಲ ವಿಶೇಷಗಳನ್ನೂ ಯಾವಾಗಲೂ ಕಾಣುತ್ತಿರುವವನು ಎಂದು ತಿಳಿಸಲಾಗಿದೆ.

ಬ್ರಹ್ಮಾ ನಿರಭಿಮಾನತ್ವಾಚ್ಚರೀರ್ಯಪ್ಯಶರೀರವಾನ್ ।
ವೃದ್ಧಿಹ್ರಾಸೌ ನ ಯಸ್ಮಾತ್ತದ್ದೇಹಸ್ಯಾನ್ನಾದಿನಾ ಯತಃ ॥ ೧೭೭ ॥

ಅತಿರೋಹಿತವಿಜ್ಞಾನಾದ್ವಾಯುರಪ್ಯಮೃತಃ ಸ್ಮೃತಃ ।
ಏವಂ ಪ್ರಲಯಕಾಲೇಽಪಿ ಪ್ರತಿಭಾತಪರಾವರಃ ॥ ೧೭೮ ॥

ಶಕ್ತಿವಿವೇಕ[ಭಾ.ಗ.ತಾ.ನಿ. 11-7-17]ದಲ್ಲಿ ಚತುರ್ಮುಖನು ತನ್ನ ಶರೀರದ ಬಗ್ಗೆ ಅಭಿಮಾನವನ್ನು ಕಳೆದುಕೊಂಡದ್ದರಿಂದ ಶರೀರವನ್ನು ಹೊಂದಿದ್ದರೂ 'ಅಶರೀರಿ' ಯಂತೆಯೇ. ಆದುದರಿಂದಲೂ ಮೂಲರೂಪಕ್ಕೂ ಮಾನುಷರೂಪಕ್ಕೂ ವೈಷಮ್ಯ ಇಲ್ಲ –ಎಂಬ ಆಶಯ. ಅವನ ದೇಹಗಳಿಗೆ ಬೆಳವಣಿಗೆಯಾಗಲೀ, ಹ್ರಾಸವಾಗಲೀ ಇಲ್ಲದಿರುವುದರಿಂದ ಅವನಿಗೆ ಆ ದೇಹದಲ್ಲಿ ಅಭಿಮಾನವಿಲ್ಲ ಎಂದು ತಿಳಿಯುವುದು.

2. ತಿರೋಧಾನಕ್ಕೆ ಒಳಗಾಗದ ಜ್ಞಾನವನ್ನು ಹೊಂದಿರುವುದರಿಂದ ವಾಯುದೇವ ಅಮೃತ ಎನಿಸಿರುವನು. ಪ್ರಲಯಕಾಲದಲ್ಲೂ ಅವನ ಜ್ಞಾನ ತಿರೋಧಾನಕ್ಕೆ ಒಳಗಾಗದ ಪ್ರಯುಕ್ತ ಪರಾವರತತ್ತ್ವಗಳನ್ನು ತಿಳಿಯುತ್ತಿರುವನು.

- ಈಶಾವಾಸ್ಯ ಉಪನಿಷದ್ಭಾಷ್ಯದಲ್ಲಿ [1-2-3] ಉದಾಹೃತವಾದ ರಾಮಸಂಹಿತೆ 'ಅತಿರೋಹಿತವಿಜ್ಞಾನಾತ್ ವಾಯುರಪ್ಯಮೃತಃ ಸ್ಮೃತಃ' –ಎಂದು ತಿರೋಧಾನಕ್ಕೆ ಒಳಗಾಗದ ವಿಜ್ಞಾನವನ್ನು ಹೊಂದಿರುವುದರಿಂದ ವಾಯುದೇವನನ್ನು ಅಮೃತ ಎಂದು ಕರೆದಿದ್ದರೆ, ಅನುವ್ಯಾಖ್ಯಾನದಲ್ಲಿ [2-3-8] 'ಏವಂ ಪ್ರಳಯಕಾಲೇಽಪಿ ಪ್ರತಿಭಾತಪರಾವರಃ । ಮುಖ್ಯವಾಯುರ್ನಿತ್ಯಸಮಃ....' –ಎಂದು ಪ್ರಳಯಕಾಲದಲ್ಲೂ ಪರಾಪರತತ್ತ್ವಗಳನ್ನು ತಿಳಿದಿರುವುದರಿಂದ ವಾಯುದೇವ 'ನಿತ್ಯಸಮ' ನಿತ್ಯನಂತೆ ಇರುವವನೆಂದು ಹೇಳಲಾಗಿದೆ.

- '.....ಸುಷುಪ್ತಿಸಂಸ್ಥಾನ್ ಬ್ರಹ್ಮಾದಿಕಾನ್ ಕಲಿಪರಾನ್ ಮನುಜಾಂಸ್ತಥೈಕ್ಷತ್' ಎಂಬ ಮಹಾಭಾರತತಾತ್ಪರ್ಯನಿರ್ಣಯದಲ್ಲಿ [1-4] ಪ್ರಲಯಕಾಲದಲ್ಲಿ ಸುಷುಪ್ತಿಗೆ ಒಳಗಾದವರನ್ನು ಉಲ್ಲೇಖಿಸುವಾಗ ಬ್ರಹ್ಮನನ್ನೂ ಪರಿಗಣಿಸಲಾಗಿದೆ. 'ಬ್ರಹ್ಮಾದಿಕಾನ್' ಎಂಬ ಶಬ್ದ ಅತದ್ಗುಣ ಸಂವಿಜ್ಞಾನ ಬಹುವ್ರೀಹಿಸಮಾಸಕ್ಕೊಳಗಾದದ್ದೆಂದು ಇಟ್ಟುಕೊಂಡು ಬ್ರಹ್ಮನನ್ನು ಬಿಟ್ಟು ರುದ್ರಾದಿಗಳಷ್ಟೇ ಸುಷುಪ್ತಿಗೆ ಒಳಗಾದವರೆಂದು ಹೇಳಿದರೂ, 'ಸುಪ್ತಾಸತ್ರ ಯತೋ ಜೀವಾಃ ಸರ್ವೇ ಬ್ರಹ್ಮಶಿವಾದಿಕಾಃ' –ಎಂದು ಐತರೇಯಭಾಷ್ಯದಲ್ಲಿ [2-3-1-1] ಬ್ರಹ್ಮನಿಗೂ ಪ್ರಲಯಕಾಲದಲ್ಲಿ ಸುಪ್ತಿಯನ್ನು ಹೇಳಲಾಗಿದ್ದು, ಪ್ರಲಯಕಾಲದಲ್ಲಿ ಭಗವಂತನೊಬ್ಬನೇ ಇದ್ದನೆಂಬ ಹೇಳಿಕೆಗೆ ಉಪಪಾದಕವಾಗಿ ಹೇಳಲಾದ ಆ ಮಾತಿನಲ್ಲಿ ಅತದ್ಗುಣಸಂವಿಜ್ಞಾನ ಬಹುವ್ರೀಹಿ ಸಮಾಸವನ್ನು ಹೇಳಲು ಆಗಲಾರದು. ಅಲ್ಲದೆ, ಆ ಸಮಾಸವನ್ನಿಟ್ಟುಕೊಂಡು ಚತುರ್ಮುಖನಿಗೆ ಸುಪ್ತಿ ಇಲ್ಲ ಎಂದರೆ ಅವನ ಜೊತೆಗೇ ಪಠಿತನಾದ ರುದ್ರನಿಗೂ ಸುಷುಪ್ತಿ ಇಲ್ಲ ಎಂದಾಂತಾದೀತು!

ಇದಕ್ಕೆ ಸಾಂಪ್ರದಾಯಿಕ ಸಮಾಧಾನ ಹೀಗಿದೆ– ಪ್ರಲಯಕಾಲದಲ್ಲಿ ಹೆಚ್ಚಾಗಿ ಅಶೇಷ ಜಗದ್ವಿಷಯಕಜ್ಞಾನದ ತಿರೋಧಾನ ಆಗುವುದಿಲ್ಲ. ಮತ್ತೆ ಪ್ರಲಯಕಾಲದ ಕೊನೆಯಲ್ಲಿ ಶ್ರೀಹರಿ ಯಾವಾಗ ತನ್ನ ಉದರದಲ್ಲಿರುವವರನ್ನು ಕಾಣುವನೋ ಆ ಕ್ಷಣದಲ್ಲಿ ಅಲ್ಪತಮವಾದ ಆ ಅವಧಿಯಲ್ಲಷ್ಟೇ ಜ್ಞಾನದ ತಿರೋಧಾನವಾಗಿ ಸುಪ್ತಿ ಉಂಟಾಗುವುದು. ಹೀಗೆ ವಿರೋಧವನ್ನು ಪರಿಹರಿಸಿಕೊಳ್ಳಬೇಕು.

ಸ್ವಲ್ಪ ಸಮಯದಲ್ಲಾದರೂ ಜ್ಞಾನಕ್ಕೆ ತಿರೋಧಾನವನ್ನು ಒಪ್ಪಿದರೂ 'ಅತಿರೋಹಿತ ವಿಜ್ಞಾನತ್ವ' ಉಳಿದಿಲ್ಲ ತಾನೇ? ಎಂದರೆ ಜಗದ್ವಿಷಯಕವಾದ ಸ್ವರೂಪಜ್ಞಾನ ನಿತ್ಯ ವ್ಯಕ್ತವಾಗಿ, ತಿರೋಧಾನಕ್ಕೆ ಒಳಗಾಗದೆ ಇದ್ದೇ ಇರುವುದು. 'ವೃತ್ತಿಜ್ಞಾನ'ವಷ್ಟೇ ಸ್ವಲ್ಪ ತಿರೋಧಾನಕ್ಕೆ ಒಳಗಾಗುವುದು.

ಹೀಗೆ ಸ್ವರೂಪಜ್ಞಾನ ತಿರೋಧಾನಕ್ಕೆ ಒಳಗಾಗದಿರುವುದರಿಂದ ವಾಯುದೇವ 'ಅಮೃತ' ಎನಿಸುವನು.

**ಹರಿಭಕ್ತ್ಯೈವ ಸಂತೃಪ್ತೋ ಮೋಕ್ಷಾದೀಚ್ಛಾವಿವರ್ಜಿತಃ ।**
**ಅಚ್ಛಿನ್ನಭಗವದ್ಧರ್ಮಾ ಕಾಮ್ಯಕರ್ಮವಿವರ್ಜಿತಃ ॥ ೧೭೯ ॥**

ಮೋಕ್ಷವೇ ಮುಂತಾದ ಉಳಿದ ಯಾವುದೇ ಪುರುಷಾರ್ಥದ ಇಚ್ಛೆ ಇಲ್ಲದೆ, ಹರಿಯ ಭಕ್ತಿಯಿಂದಷ್ಟೇ ತೃಪ್ತಿ ಪಡುವವನು. ಭಾಗವತಧರ್ಮದ ಅನುಷ್ಠಾನದಲ್ಲಿ ಎಂದೂ ಸ್ಖಾಲಿತ್ಯಕ್ಕೆ ಒಳಗಾಗದವನು.

- ಪಟ್ಟಾಭಿಷೇಕದ ಬಳಿಕ ಶ್ರೀರಾಮಚಂದ್ರ ಆಂಜನೇಯನ ಸೇವೆಯನ್ನು ಗುರುತಿಸಿ ಅದಕ್ಕಾಗಿ ಏನನ್ನಾದರೂ ನೀಡಬೇಕೆಂದು ಬಯಸಿದಾಗ ಆಂಜನೇಯ **'ಕೋ ನ್ವೀಶ ತೇ ಪಾದಸರೋಜಭಾಜಾಂ ಸುದುರ್ಲಭೋಽರ್ಥೇಷು ಚತುರ್ಷ್ವಪೀಹ । ತಥಾಽಪಿ ನಾಹಂ ಪ್ರವೃಣೋಮಿ ಭೂಮನ್ ಭವತ್ಪದಾಂಭೋಜನಿಷೇವಣಾದೃತೇ'** [ಮ.ಭಾ.ತಾ.ನಿ. 8-243] ನಿನ್ನ ಪಾದಸೇವಕರಿಗೆ ಚತುರ್ವಿಧಪುರುಷಾರ್ಥಗಳಲ್ಲಿ ಯಾವುದನ್ನೂ ಪಡೆಯಬಹುದಾದರೂ ನನಗೆ ನಿನ್ನ ಪಾದದ ಸೇವೆ ಬಿಟ್ಟು ಇನ್ನೇನೂ ಬೇಕಿಲ್ಲ' ಎಂದು ಉದ್ಗರಿಸುವನು. 'ಪ್ರವರ್ಧತಾಂ ಭಕ್ತಿರಲಂ ಕ್ಷಣೇಕ್ಷಣೇ ತ್ವಯೀಶ....' [ಮ.ಭಾ.ತಾ.ನಿ. 8-247] ನಿನ್ನಲ್ಲಿ ಕ್ಷಣಕ್ಷಣಕ್ಕೆ ಭಕ್ತಿ ಹೆಚ್ಚುತ್ತಿರಲೆಂದು ಬೇಡಿಕೊಳ್ಳುವನು.

ವಾಯುದೇವನ ಆಂಜನೇಯರೂಪದ ಈ ಬೇಡಿಕೆಯ ಹಿನ್ನೆಲೆಯಲ್ಲಿ 'ಹರಿಭಕ್ತ್ಯೈವ ಸಂತೃಪ್ತೋ ಮೋಕ್ಷಾದೀಚ್ಛಾವಿವರ್ಜಿತಃ' –ಎಂದು ನಿರೂಪಿಸಲಾಗಿದೆ.

- *ಮಹಾಭಾರತತಾತ್ಪರ್ಯನಿರ್ಣಯದಲ್ಲಿ [18-2.....16] ಹದಿನೈದು ಶ್ಲೋಕಗಳಲ್ಲಿ ನಿರೂಪಿತವಾಗಿರುವಂತೆ ವಾಯುದೇವನ ಭೀಮರೂಪದಲ್ಲಿ ಅವನ ಭಾಗವತದ ಧರ್ಮದ ನಿಷ್ಠೆಯು ಅಭಿವ್ಯಕ್ತವಾಗಿದ್ದು, ಆ ಹಿನ್ನೆಲೆಯಲ್ಲಿ 'ಅಚ್ಛಿನ್ನಭಗವದ್ಧರ್ಮಾ ಕಾಮ್ಯಕರ್ಮವಿವರ್ಜಿತಃ' –ಎಂಬ ಮಾತು ಹೊರಟಿದೆ.

**ಸರ್ವಜ್ಞಾನೋಪದೇಷ್ಟಾ ಚ ಮೋಕ್ಷದಾತಾಽಖಿಲಸ್ಯ ಚ ।**
**ಸಮಸ್ತಗುಣಭೋಕ್ತೃತ್ವಾತ್ ಪೂರ್ಣಾನಂದಾಂತರಃ ಸ್ಮೃತಃ ॥ ೧೮೦ ॥**

ಎಲ್ಲರಿಗೆ ಜ್ಞಾನವನ್ನು ಉಪದೇಶಿಸುವವನು. ಭಗವಂತನ ಅನುಜ್ಞೆಗೆ ಅನುಗುಣವಾಗಿ ಎಲ್ಲರಿಗೂ ಮೋಕ್ಷವನ್ನು ನೀಡುವನು. ಎಲ್ಲ ಗುಣಗಳನ್ನೂ ಅನುಭವಿಸುವವನಾದುದರಿಂದ ಆಯಾ ಗುಣಾನುಭವಪ್ರಯುಕ್ತ ಆನಂದವನ್ನು ಹೊಂದುತ್ತ ಒಟ್ಟು ಪೂರ್ಣವಾದ ಆನಂದವನ್ನು ಹೊಂದಿರುವವನು.

**ಸುಪರ್ಣಶೇಷಶಕ್ರಾದಿದೇವೇಭ್ಯೋऽಪ್ಯಧಿಕಾ ಗುಣಾಃ ।**
**ಸುಪರ್ಣಾದಿಭಿರಜ್ಞಾನಾಸ್ತದಭೀಮಾನವರ್ಜಿತಾಃ ॥ ೧೮೧ ॥**

**ಬ್ರಹ್ಮಣಸ್ತು ಪುನಃ ಸಂತಿ ತೇಷಾಂ ಕರ್ತಾ ಜನಾರ್ದನಃ ।**
**ತಸ್ಮಾತ್ ಸರ್ವಾಧಿಕೋ ಬ್ರಹ್ಮಾ ಗುಣೈಸ್ಸರ್ವೈಃ ನ ಸಂಶಯಃ ॥ ೧೮೨ ॥**

ಗರುಡ, ಶೇಷ, ದೇವೇಂದ್ರ ಮುಂತಾದ ದೇವತೆಗಳಿಗಿಂತಲೂ ಅಧಿಕಗಳಾದ, ಗರುಡಾದಿಗಳಿಂದಲೂ ಪೂರ್ಣವಾಗಿ ತಿಳಿಯಲ್ಪಡದಿರುವ ಚತುರ್ಮುಖನ ಅಭಿಮಾನದಿಂದ ದೂರವಾದ ಗುಣಗಳು ಚತುರ್ಮುಖನಲ್ಲಿ ಇವೆ. ಜನಾರ್ದನ ಈ ಗುಣಗಳ ಕರ್ತೃ.

ಆದುದರಿಂದ ಸರ್ವಗುಣಗಳಿಂದಲೂ ಕೂಡಿದ ಚತುರ್ಮುಖ ರುದ್ರಾದಿದೇವತೆಗಳಿಗಿಂತೆಲ್ಲ ಅಧಿಕನಾಗಿರುವನು.

**ವಾಯುರ್ಹಿ ಬ್ರಹ್ಮತಾಮೇತಿ ತಸ್ಮಾದ್ ಬ್ರಹ್ಮೈವ ಸ ಸ್ಮೃತಃ ।**

- ಮಹಾಭಾರತತಾತ್ಪರ್ಯನಿರ್ಣಯದ [2-150] 'ವಾಯುರ್ಹಿ ಬ್ರಹ್ಮತಾಮೇತಿ ತಸ್ಮಾದ್ ಬ್ರಹ್ಮೈವ ಸ ಸ್ಮೃತಃ' –ಎಂಬ ಮಾತನ್ನು ಉಲ್ಲೇಖಿಸುವ ಮೂಲಕ ವಾಯುದೇವನ ಪ್ರಕರಣವನ್ನು ಉಪಸಂಹರಿಸಲಾಗಿದೆ.

ಈಗ ವಾಯುದೇವನಾಗಿರುವವನೇ ಮುಂದೆ ಚತುರ್ಮುಖಬ್ರಹ್ಮನ ಪದವಿಗೆ ಬರುವನು. ಆದ್ದರಿಂದ ಚತುರ್ಮುಖಬ್ರಹ್ಮನೇ ವಾಯುದೇವ ಎಂದು ಪರಿಗಣಿಸಲಾಗುವುದು.

★

# ಪ್ರಾಣಚಿಂತನ – ಉದಾನಪಾದ



ಹರಿದ್ವಾರದಲ್ಲಿ ಪಲಿಮಾರು ಮಠದ
ಶ್ರೀ ವಿದ್ಯಾಧೀಶ ತೀರ್ಥರ ನೇತೃತ್ವದಲ್ಲಿ
ಪ್ರತಿಷ್ಠಿತ ಭಕ್ತಾಂಜನೇಯ

## ಪ್ರಾಣಚಿಂತನ –ಉದಾನಪಾದ

'ಕ್ರೋಡೀಕರಣತರಂಗ'

ಕ್ರೋಡೀಕರಣತರಂಗ

# • ಉಪನಿಷತ್ತುಗಳಲ್ಲಿ ಪ್ರಾಣದೇವನ ಪ್ರಸ್ತಾವ •

ಭಗವಂತನ ಬಗ್ಗೆಯೇ ವಿಶೇಷವಾಗಿ ಪ್ರತಿಪಾದಿಸಹೊರಟಿರುವ ಉಪನಿಷದ್ ವಾಙ್ಮಯದಲ್ಲಿ ಭಗವಂತನನ್ನು ಹೊರತಾಗಿ ಬೇರೆ ಯಾವುದೂ ಪ್ರತಿಪಾದಿತವಾಗುವುದಿಲ್ಲ.[1]

ಪರಮಪುರುಷಾರ್ಥವಾದ ಮೋಕ್ಷವನ್ನೇ ಪರಮಲಕ್ಷ್ಯವನ್ನಾಗಿಟ್ಟುಕೊಂಡು ಹೊರಟಿರುವ ಉಪನಿಷತ್ತುಗಳಲ್ಲಿ ಅಂತಹ ಮೋಕ್ಷಕ್ಕೆ ಆಶ್ರಯನಾಗಿರುವ ಭಗವಂತನ ಪ್ರತಿಪಾದನೆಯೇ ಉಚಿತ.

'ಭಗವಂತನೊಬ್ಬನನ್ನೇ ತಿಳಿಯಿರಿ. ಇತರ ಅಪರತತ್ತ್ವವಿಷಯಕಗಳಾದ ಮಾತುಗಳನ್ನೆಲ್ಲ ದೂರ ಸರಿಸಿ. ಮುಮುಕ್ಷುಗಳಾದ ನಿಮಗೆ ಬೇಕಾದ ಮೋಕ್ಷಪುರುಷಾರ್ಥಕ್ಕೆ ಆಧಾರನಾಗಿರುವವನು ಭಗವಂತನೊಬ್ಬನೇ ತಾನೇ?[2] ಆಥರ್ವಣೋಪನಿಷತ್ತು ನೀಡಿರುವ ಈ ಕರೆ ಸಮಗ್ರ ಉಪನಿಷದ್‌ವಾಙ್ಮಯದ ನಿಲುವಿನ ಮೇಲೆಯೇ ಬೆಳಕು ಚೆಲ್ಲುತ್ತಿದೆ.

ಹೀಗೆ ಭಗವಂತನ ಪಾರಮ್ಯದ ಸಮರ್ಥನೆಯೇ ಉಪನಿಷದ್‌ವಾಙ್ಮಯದ ಪರಮಲಕ್ಷ್ಯವಾಗಿರುವುದರಿಂದ ಉಪನಿಷತ್ತುಗಳಲ್ಲಿ ಬರುವ ಉಳಿದ ದೇವತೆಗಳ, ಕರ್ಮಗಳ ಪ್ರಸ್ತಾವ ಹೇಗೆ ಭಗವಂತನ ಪಾರಮ್ಯಕ್ಕೆ ಪೂರಕವಾಗಿಯಷ್ಟೇ ನಡೆದಿದೆ ಎಂದು ಒಪ್ಪಲಾಗುವುದೋ ಹಾಗೆಯೇ ಉಪನಿಷತ್ತುಗಳಲ್ಲಿ ಅಲ್ಲಲ್ಲಿ ಬರುವ ಮುಖ್ಯಪ್ರಾಣನ

1. ವಿಷ್ಣುರುಕ್ತಃ ಸರ್ವವೇದೈರ್ಮಂತ್ರೇಷು ತು ವಿಶೇಷತಃ ।
ಆರಣ್ಯಕೇ ವಿಶೇಷೇಣ ನೈವಾನ್ಯತ್ ಕಿಂಚಿದುಚ್ಯತೇ ॥
ಕರ್ಮಾರ್ಥಂ ಚ ಬ್ರಾಹ್ಮಣಂ ಸ್ಯಾದಮುಖ್ಯಾರ್ಥವಿವಕ್ಷಯಾ ।
ಮುಖ್ಯತೋ ವಿಷ್ಣುರೇವೈಕೋ ಬ್ರಾಹ್ಮಣೇಷ್ವಪಿ ಕಥ್ಯತೇ ।
ಆರಣ್ಯಕೇಷ್ವತೇ ವಿಷ್ಣುಂ ನೈವಾನ್ಯತ್ ಕಿಂಚಿದುಚ್ಯತೇ ॥
*– ಬ್ರಹ್ಮಾಂಡ (ಬೃ.ಉ.ಭಾ. 3-1-1)*

* 'ಉಪನಿಷತ್ಸ್ವಾಚ್ಚ ವಿಶೇಷತೋ ನ ಕಿಂಚಿದುಚ್ಯತ ಇತಿ ವಕ್ತುಂ ಯುಕ್ತಮ್' -ಎಂದು ಪೀಠಿಕೆ ಹಾಕಿ, ಅದಕ್ಕೆ ಸಂವಾದವಾಗಿ ತೋರಿಸಲಾದ ಈ ಪ್ರಮಾಣದಲ್ಲಿ ಆರಣ್ಯಕಶಬ್ದವನ್ನು ಉಪನಿಷತ್ ಎಂಬ ಅರ್ಥದಲ್ಲಿ ಬಳಸಲಾಗಿದೆ ಎಂಬುದು ಸ್ಪಷ್ಟ.

2. ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ಮುಂಚಥಾಮೃತಸ್ಯೈಷ ಸೇತುಃ ।
*– ಅಥ.ಉ. 2-1-6.*

ಜೀವೋತ್ತಮತ್ವದ ವಿಚಾರಗಳೂ ಭಗವಂತನ ಪಾರಮ್ಯಕ್ಕೆ ಪೋಷಕವಾಗಿಯಷ್ಟೇ ಪ್ರಸ್ತಾವಿಸಲ್ಪಟ್ಟಿದೆ.3

'ವಾಯೌ ಮುಖ್ಯಧಿಯಾ......' –ಎಂದು ಭಾಗವತದಲ್ಲಿ (11-11-44) ತಿಳಿಸಿರುವಂತೆ ಶ್ರೀಕೃಷ್ಣ ವಾಯುದೇವನ ಪ್ರತೀಕದಲ್ಲಿ ತನ್ನನ್ನು ಹೇಗೆ ಆರಾಧಿಸಬೇಕೆಂದು ಪರಿಚಯಿಸಿಕೊಟ್ಟಿರುವ ವಿಧಾನ ಈ ಬಗೆಯದ್ದೇ.4 ಜೀವೋತ್ತಮ ಎಂಬ ಹೆಗ್ಗಳಿಕೆಗೆ ಪಾತ್ರನಾಗಲು ಬೇಕಾದ ವಾಯುದೇವನ ಮಹಿಮೆಗಳನ್ನು, ಗುಣಧರ್ಮಗಳನ್ನು ತಿಳಿದುಕೊಂಡು, ಅಂತಹ ವಾಯುದೇವನಿಗಿಂತಲೂ ಮುಖ್ಯನಾಗಿರುವವನು ಭಗವಂತನೆಂದು ದೃಢಪಡಿಸಿಕೊಳ್ಳುವುದು.

ಹೀಗೆ ವಾಯುದೇವಪ್ರತೀಕದಲ್ಲಿ ಭಗವಂತನ ಆರಾಧನೆ ನಡೆಸುವ ಉದ್ದೇಶದಿಂದ ಉಪನಿಷತ್ತುಗಳಲ್ಲಿ ಅಮುಖ್ಯವಾಗಿ ಪ್ರಸ್ತುತಗಳಾದ ವಾಯುದೇವನ ಮಹಿಮೆಗಳನ್ನು, ಗುಣಧರ್ಮಗಳನ್ನು, ಸ್ಥೂಲವಾಗಿ ಪರಿಚಯಿಸಿಕೊಳ್ಳೋಣ.

- *ದಶೋಪನಿಷತ್ತುಗಳಲ್ಲಿ ಮಾಂಡೂಕೋಪನಿಷತ್ತೊಂದನ್ನು ಬಿಟ್ಟರೆ ಉಳಿದ ಒಂಭತ್ತು ಉಪನಿಷತ್ತುಗಳಲ್ಲೂ ಮುಖ್ಯಪ್ರಾಣನ ಪ್ರಸ್ತಾವ ಬಂದಿದೆ.

- ಇಂದ್ರಿಯಾಭಿಮಾನಿ ದೇವತೆಗಳ ಜೊತೆಗೆ ಸ್ಪರ್ಧೆ, ಆಸುರೀಶಕ್ತಿಗಳು ವಾಯುದೇವನನ್ನು ಆಕ್ರಮಿಸಲು ಅಸಮರ್ಥರಾಗುವುದು –ಈ ಒಂದೆರಡು ವಿಷಯಗಳು ಎರಡು ಮೂರು ಉಪನಿಷತ್ತುಗಳಲ್ಲಿ ಮತ್ತೆಮತ್ತೆ ಬಂದಿವೆ. ಹೊರತು ಬೇರೆ ಯಾವ ವಿಚಾರಗಳೂ ಪುನರುಕ್ತಗಳಾದಂತೆ ಇಲ್ಲ. ಸ್ಪರ್ಧೆಯ, ಆಸುರೀಶಕ್ತಿಗಳ ಅಸಮರ್ಥತೆಯ ವಿಚಾರಗಳೂ ಬೇರೆಬೇರೆ ಉಪನಿಷತ್ತುಗಳಲ್ಲಿ ಬೇರೆಬೇರೆ ಶೈಲಿಯಲ್ಲೇ ನಿರೂಪಿತವಾಗಿರುವುದು ಗಮನಾರ್ಹ.

- ಉಪನಿಷತ್ತಿನ ಎಷ್ಟೋ ಮಾತುಗಳಲ್ಲಿ ವಾಯು, ಪ್ರಾಣ ಎಂದೆಲ್ಲ ಬಂದರೂ ಆ ಹೆಸರುಗಳನ್ನೆಲ್ಲ ಭಗವತ್ಪರವಾಗಿಯೂ, ನಾಸಿಕ್ಯವಾಯು ಇತ್ಯಾದಿಗಳ ಪರವಾಗಿಯೂ ವ್ಯಾಖ್ಯಾನಿಸಿರುವ ಶ್ರೀಮಧ್ವರು ಉಪನಿಷತ್ತಿನ ಹೆಚ್ಚಿನ ಮಾತುಗಳನ್ನು ಪ್ರಮಾಣಾಧಾರದೊಂದಿಗೆ ಮುಖ್ಯಪ್ರಾಣನ ಪರವಾಗಿ ವ್ಯಾಖ್ಯಾನಿಸಿರುವುದೇ ಹೊರತು ಬಲಾತ್ಕಾರವಾಗಿ ಮುಖ್ಯಪ್ರಾಣನನ್ನು ಎಳೆದುತಂದಿರುವುದಲ್ಲ –ಎಂಬುದು ಸ್ಪಷ್ಟ.

---

3. ಸೂತ್ರಾತ್ಮಾ ತೂಚ್ಯತೇ ವಿಷ್ಣೋಸ್ತದ್ವಿಶಿಷ್ಟತ್ವವಿತ್ತಯೇ ।
ಕುತ್ರಚಿತ್ ತದುಪಾಸ್ತಿಶ್ಚ ತಸ್ಯಾಧ್ಯರ್ಥತನುತ್ವತಃ ।
ತಸ್ಮಿನ್ ವಿಷ್ಣೋರುಪಾಸ್ತ್ಯರ್ಥಂ ನಾನ್ಯಥಾ ಕಿಂಚಿದುಚ್ಯತೇ ॥
*– ಬ್ರಹ್ಮಾಂಡ (ಬೃ.ಉ.ಭಾ. 3-1-1)*

4. ಯಸ್ಮಾದ್ ವಾಯೌ ಸ್ಮೃತೋ ವಿಷ್ಣುರ್ವಾಯೋರ್ಮುಖ್ಯತಯಾಽಖಿಲಾತ್ ।
ಸ್ವಸ್ಯ ಮುಖ್ಯತಯಾ ತಸ್ಮಾತ್ ಪರಾಂ ತುಷ್ಟಿಂ ಗಮಿಷ್ಯತಿ........... ॥
*– ಪ್ರಧ್ಯಾನೇ (ಛಾಂ.ಉ.ಭಾ. 1-2-1)*

- ಉಪನಿಷತ್ತುಗಳಲ್ಲಿ ಅನೇಕ ಕಡೆಗಳಲ್ಲಿ ಭಗವಂತನ ಪ್ರಸಿದ್ಧಗಳಾದ ಬ್ರಹ್ಮ ಆತ್ಮ ಇತ್ಯಾದಿನಾಮಗಳಿಂದ ಅವನ ಪ್ರಸ್ತಾವ ಮಾಡುವ ಬದಲು ಮುಖ್ಯಪ್ರಾಣನಲ್ಲಿ ಪ್ರಸಿದ್ಧಗಳಾದ ಪ್ರಾಣ, ವಾಯು ಮುಂತಾದ ನಾಮಗಳಿಂದ ಭಗವಂತನನ್ನು ಪ್ರಸ್ತಾವಿಸುವ ಉದ್ದೇಶ ಅವನ ಜೊತೆಗೆ ಅವನ ಪ್ರತಿಮೆಯಾಗಿ ಮುಖ್ಯಪ್ರಾಣನನ್ನೂ ಇಟ್ಟುಕೊಳ್ಳಬೇಕೆಂಬ ಉದ್ದೇಶದಿಂದ.

ಈ ನಾಲ್ಕು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಪರಿಶೀಲನೆಗೆ ತೊಡಗೋಣ.

* * *

# ಯಾಜ್ಞೀಯೋಪನಿಷತ್ತಿನಲ್ಲಿ ವಾಯುದೇವನ ಪ್ರಸ್ತಾವ

**೧. ಕರ್ಮಸಮರ್ಪಣೆ:**

– **'ತಸ್ಮಿನ್ನಪೋ ಮಾತರಿಶ್ವಾ ದಧಾತಿ'** [1-4] ಎಂಬ ಸೂತ್ರಪ್ರಾಯವಾದ ಮಾತಿನಲ್ಲಿ ಎಲ್ಲರ ಮೂಲಕ ನಡೆಯುವ ಎಲ್ಲ ಕರ್ಮಗಳನ್ನು ಭಗವಂತನಲ್ಲಿ ವಾಯುದೇವನು ಸಮರ್ಪಿಸುವನೆಂಬ ಮಹತ್ತ್ವದ ಸಂದೇಶವನ್ನು ನೀಡಲಾಗಿದೆ.

**೨. ಪುರುಷನಾಮಕ ಭಗವಂತನಿಗೆ ಅಧಿಷ್ಠಾನವಾಗಿ ವಾಯುವಿನ ಉಲ್ಲೇಖ:**

– **'ಯೋಽಸಾವಸೌ ಪುರುಷಃ ಸೋಽಹಮಸ್ಮಿ.....'** [2-3] ಎಂಬುದಾಗಿ ಅಸು ಎನಿಸುವ ಯಾವ ಮುಖ್ಯಪ್ರಾಣನಲ್ಲಿ ಪುರುಷನಾಮಕ ಭಗವಂತನಿರುವನೋ ಅಂತಹ ಮುಖ್ಯಪ್ರಾಣನೂ **'ಅಮೃತ'** ಎನಿಸಿರುವನೆಂದು ಪುರುಷನಿಗೆ ಅಧಿಷ್ಠಾನವಾಗಿ ವಾಯುದೇವನನ್ನು ಉಲ್ಲೇಖಿಸಲಾಗಿದೆ.

**೩. ಅನಿಲ ಮತ್ತು ಅಮೃತನಾಮಗಳಿಂದ ಉಲ್ಲೇಖ:**

– **'ವಾಯುರನಿಲಮಮೃತಂ......'** [2-3] ಎಂಬುದಾಗಿ ವಾಯುದೇವನನ್ನು ಪರಮಾತ್ಮನೇ ಮುಖ್ಯವಾದ ನಿಲಯವಾಗಿ ಉಳ್ಳವನೆಂಬ ಆಶಯದಲ್ಲಿ ಅನಿಲ ಎಂದೂ, ತಿರೋಧಾನಕ್ಕೆ ಒಳಗಾಗದ, ಜ್ಞಾನವುಳ್ಳವನಾಗಿರುವುದರಿಂದ ವಾಯುದೇವ 'ಅಮೃತ' ಎನಿಸಿರುವನೆಂದೂ ತಿಳಿಸಲಾಗಿದೆ.

**೪. ಶರೀರದ ನಾಶ:**

– **'ಅಥೇದಂ ಭಸ್ಮಾಂತಂ ಶರೀರಮ್'** [2-3] ಎಂಬ ಮಾತಿನಲ್ಲಿ ವಾಯುದೇವನು ತಿರೋಧಾನಕ್ಕೆ ಒಳಗಾಗದ ಜ್ಞಾನವುಳ್ಳವನೆಂಬ ಅಭಿಪ್ರಾಯದಲ್ಲಿ 'ಅಮೃತ' ಎನಿಸಿದ್ದರೂ, ಕಲ್ಪದ ಕೊನೆಯಲ್ಲಿ ಅವನ ಶರೀರವೂ ನೃಸಿಂಹಾಗ್ನಿಯಲ್ಲಿ ಭಸ್ಮವಾಗುವುದು– **'ವಾಯ್ವಧಿಷ್ಠಿತಮಚಿಚ್ಛರೀರಂ ಪರಮಾತ್ಮಾಗ್ನೌ ಭಾಸ್ಮೀಭಾವೇನ ವಿನಶ್ಯತಿ ।'**

* * *

# ತಲವಕಾರೋಪನಿಷತ್ತಿನಲ್ಲಿ ವಾಯುದೇವನ ಪ್ರಸ್ತಾವ

೧. **ಪ್ರಥಮಪ್ರಾಣನಾಗಿ ಉಲ್ಲೇಖ:**

– ರುದ್ರ ಚತುರ್ಮುಖನನ್ನು ಇಂದ್ರಿಯಪ್ರೇರಕತ್ವದ ವಿಷಯದಲ್ಲಿ ಪ್ರಶ್ನೆಯನ್ನು ಕೇಳುವಾಗ '**ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ.....**' [1-1] ಪ್ರಥಮಪ್ರಾಣ ಎನಿಸಿರುವ ಮುಖ್ಯಪ್ರಾಣ ಯಾರ ಪ್ರೇರಣೆಗೊಳಗಾಗಿ ಕ್ರಿಯಾಶೀಲನಾಗುವನೆಂದು ವಿಚಾರಿಸಲಾಗಿದೆ.

೨. **ಪ್ರಾಣಸ್ಯ ಪ್ರಾಣಃ:**

– ಚತುರ್ಮುಖನು ರುದ್ರದೇವನ ಪ್ರಶ್ನೆಗೆ ಉತ್ತರಿಸುತ್ತ '**ಸ ಉ ಪ್ರಾಣಸ್ಯ ಪ್ರಾಣಃ**' [1-2] ಪರಮಾತ್ಮನೇ ಮುಖ್ಯಪ್ರಾಣನಿಗೂ ಪ್ರೇರಕ ಎಂದು ತಿಳಿಸಿರುವನು. ಹಾಗೆಯೇ, '**ಯೇನ ಪ್ರಾಣಃ ಪ್ರಣೀಯತೇ.......**' [2-5] ಎಂಬ ಮಾತಿನಲ್ಲಿ ಪ್ರಾಣನನ್ನೂ ಪ್ರೇರಿಸು ವವನು ಪರಮಾತ್ಮನೆಂದು ತಿಳಿಸಲಾಗಿದೆ.

೩. **ಅಹಂಕಾರಪಟ್ಟದ್ದು ನಾಸಿಕ್ಯವಾಯು:**

– ಯಕ್ಷರೂಪದಲ್ಲಿ ಬಂದ ಪರಮಾತ್ಮನನ್ನು ಪರೀಕ್ಷಿಸಲು ಹೋದವರಲ್ಲಿ ಒಬ್ಬನಾದ ವಾಯು ಎಂದರೆ ನಾಸಿಕ್ಯವಾಯುವೇ ಹೊರತು ಮುಖ್ಯ ವಾಯು ಅಲ್ಲ. ಯಾಕೆಂದರೆ ಪರಶುಕ್ಲತ್ರಯದಲ್ಲಿ ಸೇರಿರುವ ಮುಖ್ಯವಾಯುವಿಗೆ ದೇವರ ವಿಷಯದಲ್ಲಿ ವಿಪರೀತಜ್ಞಾನ ಅಹಂಕಾರಾದಿಗಳು ಉಂಟಾಗುವ ಸಾಧ್ಯವೇ ಇಲ್ಲ. ಆದ್ದರಿಂದ '**ಅಥ ವಾಯುಮಬ್ರುವನ್.....**' [4-7]ಇತ್ಯಾದಿಯಾಗಿ ಉಪನಿಷತ್ತಿನಲ್ಲಿ ಪ್ರಸ್ತುತನಾದ ವಾಯು ನಾಸಿಕ್ಯ ವಾಯುವೇ ಎಂದು ಶ್ರೀಮಧ್ವರು ಬ್ರಹ್ಮಸೂತ್ರಭಾಷ್ಯದ ಮೂಲಕ '**ನಾಸಿಕ್ಯವಾಯುರಗ್ನಿಶ್ಚ ಪ್ರಥಮಂ ತದಪಶ್ಯತಾಮ್**' ಎಂದು ಸ್ಪಷ್ಟಪಡಿಸಿರುವರು.

೪. **ಅಧಿಕದೇವತೆಗಳಲ್ಲೊಬ್ಬ ವಾಯು:**

– ತಲವಕಾರೋಪನಿಷತ್ತಿನಲ್ಲಿ ಪ್ರಸ್ತುತವಾದ 'ಯಕ್ಷಪರೀಕ್ಷೆ'ಯನ್ನು ಕೇಂದ್ರ ಬಿಂದುವನ್ನಾಗಿಟ್ಟುಕೊಂಡು ಪಾರ್ವತಿ ಇಂದ್ರನಿಗೆ ದೇವತಾತಾರತಮ್ಯವನ್ನು ಉಪದೇಶಿಸುತ್ತ '**ತಸ್ಮಾದ್ ವಾ ಏತೇ ದೇವಾ ಅತಿತರಾಮಿವಾನ್ಯಾನ್ ಯದಗ್ನಿರ್ವಾಯುರಿಂದ್ರಸ್ತೇ ಹ್ಯೇನನ್ನೇದಿಷ್ಠಂ ಪಸ್ಪರ್ಶು.......**' [5-2] ಎಂದು ಹೇಳಿರುವ ಮಾತಿನಿಂದ ಪತ್ನಿಯಿಂದ ಕೂಡಿದ ಚತುರ್ಮುಖ, ವಾಯು, ಶೇಷ, ಗರುಡ ಹಾಗೂ ರುದ್ರ –ಇವರು ಅಹಂಕಾರಪಡದ ಪ್ರಯುಕ್ತ ಇತರ ದೇವತೆಗಳಿಗಿಂತ ಅಧಿಕರು –ಎಂದು ತಿಳಿಸುವಾಗ ವಾಯುದೇವ ಅಹಂಕಾರಕ್ಕೆ ಒಳಗಾಗುವವನಲ್ಲ ಎಂದು ಪ್ರತಿಪಾದಿಸಿದಂತಾಗಿದೆ.

* * *

# ಆಥರ್ವಣೋಪನಿಷತ್ತಿನಲ್ಲಿ ವಾಯುದೇವನ ಪ್ರಸ್ತಾವ

೧. ವಾಯುದೇವನಿಂದಲೇ ದೇವರ ದರ್ಶನ:

– ಚಕ್ಷುರಿಂದ್ರಿಯವೇ ಮುಂತಾದ ಇಂದ್ರಿಯಗಳಿಂದಾಗಲೀ ಇಂದ್ರಿಯಾಭಿಮಾನಿ ದೇವತೆಗಳಿಂದಾಗಲೀ ಭಗವಂತನನ್ನು ಕಾಣಲು ಸಾಧ್ಯವಿಲ್ಲ ಎನ್ನುವ ಆಥರ್ವಣೋಪನಿಷತ್ತು **'ಜ್ಞಾನಪ್ರಸಾದೇನ ವಿಶುದ್ಧಸತ್ತ್ವಸ್ತತಸ್ತು ತಂ ಪಶ್ಯತೇ.....'** [3-1-8] ಎಂಬ ಮಾತಿನಲ್ಲಿ ಜ್ಞಾನಸ್ವರೂಪಿಯಾದ ವಾಯುದೇವನನ್ನು ಜ್ಞಾನ ಶಬ್ದದಿಂದ ಉಲ್ಲೇಖಿಸಿ, ಅವನ ಪ್ರಸಾದದಿಂದ, ಅನುಗ್ರಹದಿಂದ ದೇವರ ದರ್ಶನವನ್ನು ಪಡೆಯಬಹುದೆಂದು ತಿಳಿಸಿದೆ. ಮುಂದೆ **'......ಚೇತಸಾ ವೇದಿತವ್ಯ.......'** [3-1-9] ಚೇತಸ್‌ಶಬ್ದದಿಂದ ಜ್ಞಾನರೂಪಿ ವಾಯುದೇವನನ್ನು ಪರಾಮರ್ಶಿಸಿದೆ.

೨. ವಿಷ್ಣುವಿನ ಪ್ರಧಾನ ನೆಲೆದಾಣ:

– ಮುಖ್ಯಪ್ರಾಣನನ್ನು ತಿಳಿದು, ಬಳಿಕ ಅವನಲ್ಲಿ ನೆಲೆನಿಂತಿರುವ ಪರಬ್ರಹ್ಮನನ್ನು ತಿಳಿಯಬೇಕೆಂದು ಪ್ರತಿಪಾದಿಸುವಾಗ ಉಪನಿಷತ್ತು **'ಸ ವೇದೈತತ್ ಪರಮಂ ಬ್ರಹ್ಮ ಧಾಮ.......'** [4-1-1] ಎಂಬುದಾಗಿ ವಾಯುದೇವನನ್ನು ಬ್ರಹ್ಮಧಾಮ –ಎಂದು ಕರೆಯುವ ಮೂಲಕ ಪರಬ್ರಹ್ಮನ ಮುಖ್ಯವಾದ ನಿವಾಸಸ್ಥಳ ಎಂದು ಪರಿಚಯಿಸಿಕೊಟ್ಟಿದೆ.

೩. ಕಲಾದೇವತಾತ್ವೇನ ಪ್ರಾಣನ ಪ್ರಸ್ತಾವ:

– ಜೀವರು ಮುಕ್ತರಾದಾಗ ಅವರ ಜೊತೆಗೆ ಅವರ ಕಲಾಭಿಮಾನಿ ದೇವತೆಗಳೂ ಪರಮಾತ್ಮನಲ್ಲಿ ಪ್ರವೇಶಿಸುವರೆಂದು **'ಗತಾಃ ಕಲಾಃ ಪಂಚದಶ ಪ್ರತಿಷ್ಠಾ ದೇವಾಶ್ಚ........'** ಎಂಬ ಮಾತಿನಲ್ಲಿ [4-1-7] ತಿಳಿಸುವಾಗ ಪ್ರಥಮ ಕಲಾ ದೇವತೆಯಾಗಿ ಮುಖ್ಯಪ್ರಾಣ ನನ್ನು ಕಲಾಶಬ್ದದಿಂದ ಪರಾಮರ್ಶಿಸಲಾಗಿದೆ.

*　　*　　*

# ಮಾಂಡೂಕೋಪನಿಷತ್ತಿನಲ್ಲಿ ವಾಯುದೇವನ ಪ್ರಸ್ತಾವ

ಭಗವಂತನ ವಿಶ್ವ, ತೈಜಸ, ಪ್ರಾಜ್ಞ ಹಾಗೂ ತುರೀಯ –ಈ ನಾಲ್ಕು ರೂಪಗಳನ್ನೂ, ಅವುಗಳ ಕಾರ್ಯವೈಖರಿಯನ್ನೂ ಮುಖ್ಯವಾಗಿ ಪ್ರತಿಪಾದಿಸಹೊರಟ ಮಾಂಡೂಕೋಪನಿಷತ್ತಿನಲ್ಲಿ ನಿರ್ದಿಷ್ಟವಾಗಿ ವಾಯುದೇವನ ಪ್ರಸ್ತಾವ ಬರುವುದಿಲ್ಲ.

'ತ್ರಿಷು ಧಾಮಸು ಯತ್ ತುಲ್ಯಂ........' ಇತ್ಯಾದಿ ಮಂತ್ರದಲ್ಲಿ ತಿಳಿಸಿದಂತೆ ವಿಶ್ವಾದಿ ಮೂರು ರೂಪಗಳಲ್ಲಿ ಸಾಮ್ಯಚಿಂತನೆ ನಡೆಸುವ ಮಹಾತ್ಮ 'ಸ ಪೂಜ್ಯಸ್ಸರ್ವಭೂತಾನಾಂ ವಂದ್ಯಶ್ಚೈವ ಮಹಾಮುನಿಃ' ಇತ್ಯಾದಿ ರೀತಿಯಿಂದ ಸ್ತುತನಾಗಿದ್ದು, ಇದು ಮುಖ್ಯವಾಗಿ ವಾಯುದೇವನಲ್ಲಿ ಕೂಡುವುದು; ಹಾಗೆಯೇ 'ಓಂಕಾರೋ ವಿದಿತೋ ಯೇನ ಸ ಮುನಿರ್ನೇತರೋ ಜನಃ' –ಎಂದು ಓಂಕಾರಜ್ಞಾನಿಯ ಪ್ರಶಂಸೆಗೆ ಪಾತ್ರನಾಗಿರುವವನೂ ವಾಯುದೇವನೇ –ಎಂಬುದಾಗಿ ಸ್ಥೂಲವಾಗಿ ಹೇಳಬಹುದಾದರೂ ಅಸಾಧಾರಣವಾಗಿ ನಿರ್ದಿಷ್ಟವಾಗಿ ವಾಯುದೇವನ ಪ್ರಸ್ತಾವ ಬಂದೇ ಇಲ್ಲ –ಎಂದು ಹೇಳಬಹುದಾಗಿದೆ.

*    *    *

# ಕಾಠಕೋಪನಿಷತ್ತಿನಲ್ಲಿ ವಾಯುದೇವನ ಪ್ರಸ್ತಾವ

೧. **ವಾಯುವಿನಲ್ಲಿ ಆತ್ಮಾ–ಅಂತರಾತ್ಮಾರೂಪಗಳು:**

– '**ಋತಂ ಪಿಬಂತೌ ಸುಕೃತಸ್ಯ ಲೋಕೇ.......** ' –ಎಂಬ ಮಂತ್ರದಲ್ಲಿ[1-7-1]ಪುಣ್ಯ ಶಾಲಿಗಳ ದೇಹದಲ್ಲಿ ಭಗವಂತನು ಆತ್ಮಾ ಹಾಗೂ ಅಂತರಾತ್ಮಾ ಎಂಬ ರೂಪಗಳಿಂದ ಇರುವನೆಂಬುದನ್ನು ತಿಳಿಸುವಾಗ '**ಪರಮೇ ಪರಾರ್ಧೇ......**' ರುದ್ರಾದಿಗಳಿಗಿಂತೆಲ್ಲ ಸಮೃದ್ಧರಾದ ವಾಯುದೇವನಲ್ಲಿ ಆ ರೂಪಗಳಿರುವ ವೆಂಬುದಾಗಿ ಹೇಳುವ ವಾಯುದೇವನನ್ನು 'ಪರಾರ್ಧ'ನನ್ನಾಗಿ ಪರಿಚಯಿಸಿ ಕೊಡಲಾಗಿದೆ.

೨. **ಸರಸ್ವತೀ ಭಾರತಿಯರ ನಿಯಾಮಕ ಭಗವಂತನಿಂದ ನಿಯಮ್ಯ:**

– '**ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ....**' ಇತ್ಯಾದಿಯಾಗಿ ಇಂದ್ರಿಯಾಭಿಮಾನಿದೇವತೆ ಗಳಿಗಿಂತ ಅರ್ಥಾಭಿಮಾನಿ ದೇವತೆಗಳು ಶ್ರೇಷ್ಠರು –ಹೀಗೆ ದೇವತೆಗಳಲ್ಲಿಯ ತಾರತಮ್ಯವನ್ನು ಹೇಳಿ, '**ಯಚ್ಛೇದ್ ವಾಙ್ಮನಸೀ ಪ್ರಾಜ್ಞಃ ತದ್ ಯಚ್ಛೇತ್ ಜ್ಞಾನ ಆತ್ಮನೀ ಜ್ಞಾನ ಮಾತ್ಮನಿ ಮಹತಿ......**' [1-7-13] ಎಂಬುದಾಗಿ ದೇವತೆಗಳಲ್ಲಿ ಅನ್ಯೋನ್ಯವಾಗಿ ಇರುವ ನಿಯಮ್ಯ–ನಿಯಾಮಕಭಾವವನ್ನು ಇಟ್ಟುಕೊಂಡು ತಾರತಮ್ಯ ಹೇಳಿದ್ದೆಂದು ಸ್ಪಷ್ಟವಾಗುವಂತೆ ದೇವತೆಗಳಲ್ಲಿಯ ನಿಯಮ್ಯ–ನಿಯಾಮಕಭಾವವನ್ನು ತಿಳಿಸುತ್ತ '**ಜ್ಞಾನಮಾತ್ಮನಿ ಮಹತಿ ನಿಯಚ್ಛೇಚ್ಛಾಂತ ಆತ್ಮನಿ**' ಎಂಬುದಾಗಿ ಜ್ಞಾನಾಭಿಮಾನಿನಿಯರಾದ ಸರಸ್ವತೀ–ಭಾರತಿಯರನ್ನು ಮಹತ್ತತ್ತ್ವಾಭಿಮಾನಿಗಳಾದ ಚತುರ್ಮುಖವಾಯು ದೇವತೆ ಗಳ ಅಧೀನರನ್ನಾಗಿ ತಿಳಿಯಬೇಕು; ಹಾಗೆಯೇ ಮಹತ್ತತ್ತ್ವಾಭಿಮಾನಿಗಳಾದ ಬ್ರಹ್ಮವಾಯುಗಳನ್ನು ಸುಖಸ್ವರೂಪಿ ಭಗವದಧೀನರನ್ನಾಗಿ ತಿಳಿಯಬೇಕು –ಎಂದು ಹೇಳುವ ಮೂಲಕ ವಾಯುದೇವ ಭಾರತಿಗೆ ನಿಯಮಾಕ, ಭಗವಂತ ನಿಂದ ನಿಯಮ್ಯ ಎಂದು ಸ್ಪಷ್ಟಪಡಿಸಿದುದಾಗಿದೆ.

**೩. ಪ್ರಾಣನಿಂದ ಕೂಡಿಕೊಂಡು ಪ್ರವೇಶ ಹಾಗೂ ಸ್ಥಿತಿ:**

– **'ಯಾ ಪ್ರಾಣೇನ ಸಂವಿಶತ್ಯದಿತಿಃ......'** ಎಂಬ ಮಂತ್ರದಲ್ಲಿ [2-2-7] ಅದಿತಿನಾಮಕ ಭಗವಂತನು ಮುಖ್ಯಪ್ರಾಣನಿಂದ ಕೂಡಿಕೊಂಡು ಪ್ರಾಣಿಗಳ ದೇಹವನ್ನು ಪ್ರವೇಶಿಸುವರು ಹಾಗೂ ಹೃದಯ ಗುಹೆಯಲ್ಲಿ ನೆಲೆಸಿರುವನೆಂದು ತಿಳಿಸಲಾಗಿದೆ.

**೪. 'ಶುಚಿ' ಎನಿಸುವ ವಾಯುವಿನಲ್ಲಿ ಇರುವವನು:**

– **'ಹಂಸಃ ಶುಚಿಷದ್........'** –ಎಂಬ ಮಂತ್ರದಲ್ಲಿ [2-2-3]ಶುದ್ಧನಾಗಿರುವವನು ಹಾಗೂ ಪ್ರಕಾಶಮಾನನಾಗಿರುವವನೆಂಬ ಅಭಿಪ್ರಾಯದಲ್ಲಿ ವಾಯುದೇವನನ್ನು **'ಶುಚಿ'** –ಎಂದು ಕರೆದು, ಅವನಲ್ಲಿ ಭಗವಂತನು ಅವನ **'ಶುಚಿತ್ವ'** ಧರ್ಮವನ್ನು ಪ್ರೇರಿಸುತ್ತ ವಿಶೇಷವಾಗಿ ನೆಲೆಸಿರುವವನೆಂಬ ಅಭಿಪ್ರಾಯದಲ್ಲಿ ಭಗವಂತನನ್ನು **'ಶುಚಿಷತ್'** –ಎಂದು ಉಲ್ಲೇಖಿಸಲಾಗಿದೆ.

**೫. ಪ್ರಾಣಾಪಾನರ ಪ್ರೇರಕ:**

– **'ಊರ್ಧ್ವಂ ಪ್ರಾಣಮುನ್ನಯತಿ.....'** ಎಂಬ ಮಂತ್ರದಲ್ಲಿ [2-2-3]ವಾಮನರೂಪಿ ಭಗವಂತ ದೇಹದಲ್ಲಿ ಬರೀ ಪ್ರಾಣವಾಯುವನ್ನು ಉಸಿರಾಟಕ್ಕೆ ಉಪಯುಕ್ತ ವಾಗುವಂತೆ ಮೇಲೆ ಎತ್ತುವುದು, ಅಪಾನವಾಯುವನ್ನು ಮಲಮೂತ್ರ ವಿಸರ್ಜನೆಗೆ ಅನುಕೂಲವಾಗುವಂತೆ ಕೆಳಮುಖವಾಗಿ ದೂಡುವುದಲ್ಲದೆ, ಆ ಜಡವಾಯುಗಳನ್ನು ಹಾಗೆ ತೊಡಗಿಸುವಲ್ಲಿ ಮುಖ್ಯಪ್ರಾಣನ ಪ್ರಾಣಾಪಾನ ರೂಪಗಳನ್ನೂ ವಾಮನನು ಹಾಗೆ ಪ್ರೇರಿಸುವನು.[5]

**೬. ವಿಷ್ಣುವನ್ನು ಆಶ್ರಯಿಸಿಕೊಂಡು ಜೀವಧಾರಕರಷ್ಟೇ:**

– **'ನ ಪ್ರಾಣೇನ ನಾಪಾನೇನ......'** –ಎಂಬ ಶ್ಲೋಕದಲ್ಲಿ ತಿಳಿಸಿದಂತೆ [2-2-5] ವಾಯುದೇವನ ಪ್ರಾಣಾಪಾನರೂಪಗಳು ಸ್ವತಂತ್ರವಾಗಿ ಜೀವಧಾರಕರಾಗಿರದೆ ಶ್ರೀವಿಷ್ಣು ವನ್ನು ಆಶ್ರಯಿಸಿಕೊಂಡೇ ಜೀವಧಾರಕರಾಗಿರುವರು.

---

5. 'ಶಬ್ದಾದೇವ ಪ್ರಮಿತಃ' –ಎಂಬ ಬ್ರಹ್ಮಸೂತ್ರದಲ್ಲಿ (1-3-24) ಪ್ರಾಣ ಮತ್ತು ಅಪಾನ ವಾಯುಗಳ ನಿಯಂತ್ರಣ ಮುಖ್ಯಪ್ರಾಣನಿಗೋ ವಾಮನನಿಗೋ ಎಂದು ಚರ್ಚೆ ನಡೆಸಿರುವಂತೆ ಕಂಡರೂ, ಕಾಠಕೋಪನಿಷತ್ತಿನ 'ಊರ್ಧ್ವಂ ಪ್ರಾಣಮುನ್ನಯತಿ......' ಎಂಬ ಒಂದು ಶ್ಲೋಕಕ್ಕಿಂತ ಮುಂದಿನ ಶ್ಲೋಕದಲ್ಲಿ 'ನ ಪ್ರಾಣೇನ ನಾಪಾನೇನ.......' (2-2-5) 'ನ ಕೇವಲಂ ಪ್ರಾಣ ಏವ ಚೇತನಾನಾಂ ವಿಧಾರಕಃ । ಕಿಂತು ವಿಷ್ಣುಂ ಸಮಾಶ್ರಿತ್ಯ ಪ್ರಾಣೋ ಜೀವಾನ್ ಬಿಭರ್ತ್ಯಯಮ್' ಎಂದು ಮಹಾಕೌರ್ಮದ ಸಂವಾದ ದಂತೆ ಮುಖ್ಯಪ್ರಾಣನ ಪ್ರಾಣಾಪಾನರೂಪಗಳ ಪ್ರಸ್ತಾವವೇ ಬಂದಿರುವುದರಿಂದ ಹಿಂದಿನ ಈ ಶ್ಲೋಕದಲ್ಲೂ ಆ ರೂಪಗಳ ಪ್ರಸ್ತಾವವನ್ನು ಇಟ್ಟುಕೊಳ್ಳುವುದು ಉಚಿತ.

೭. **ವಾಯುವಿನ ದೃಷ್ಟಾಂತ:**

– ಒಬ್ಬನೇ ಭಗವಂತ ಬೇರೆಬೇರೆ ವ್ಯಕ್ತಿಗಳ, ವಸ್ತುಗಳ ರೂಪಗಳಲ್ಲಿ ತನ್ನ ಬೇರೆ ಬೇರೆ ರೂಪಗಳಿಂದ ನಿಯಂತ್ರಿಸುತ್ತಿರುವುದಕ್ಕೆ **'ವಾಯುರ್ಯಥೈಕೋ ಭುವನಂ ಪ್ರವಿಷ್ಟೋ......'** ಎಂಬ ಶ್ಲೋಕದಲ್ಲಿ [2-2-11] ವಾಯುದೇವನ ದೃಷ್ಟಾಂತ ವನ್ನು ನೀಡಲಾಗಿದೆ.

೮. **ಭಗವಂತನಿಗೆ ಭಯಪಟ್ಟು ತನ್ನ ಕರ್ತವ್ಯವನ್ನು ನಿರ್ವಹಿಸುವಿಕೆ:**

– **'ಭಯಾದಸ್ಯಾಗ್ನಿಸ್ತಪತಿ.......'** –ಎಂಬ ಶ್ಲೋಕದಲ್ಲಿ [2-2-4] ಭಗವಂತನ ನಿಯತಿಗೆ ಭಯಪಟ್ಟು ಅಗ್ನ್ಯಾದಿದೇವತೆಗಳು ಹೇಗೋ ಹಾಗೆ **'ಭಯಾ ದಿಂದ್ರಶ್ಚವಾಯುಶ್ಚ.......'** ವಾಯುದೇವನೂ ಭಗವಂತನ ನಿಯತಿಗೆ ಭಯಪಟ್ಟೇ ಶುದ್ಧೀಕರಿಸುವನು ಹಾಗೂ ಸರ್ವದಾ ಚಲಿಸುತ್ತಿರುವನು.6

* * *

# ಷಟ್‌ಪ್ರಶ್ನೋಪನಿಷತ್ತಿನಲ್ಲಿ ವಾಯುದೇವನ ಪ್ರಸ್ತಾವ

ವಾಯುದೇವನ ಬಗ್ಗೆ ಅಧಿಕ ಮಾಹಿತಿಯನ್ನು ನೀಡುತ್ತಿರುವ ಷಟ್‌ಪ್ರಶ್ನೋಪನಿಷತ್ತಿ ನಲ್ಲಿ ಮೊದಲ ನಾಲ್ಕು ಅಧ್ಯಾಯಗಳಲ್ಲಿ ಹಾಗೂ ಆರನೆಯ ಅಧ್ಯಾಯದ ಒಂದು ಮಂತ್ರ ದಲ್ಲಿ ಪ್ರಾಣದೇವನ ಪ್ರಸ್ತಾವ ಬಂದಿದೆ.

೧. **ರಯಿಪ್ರಾಣರ ಮೂಲಕ ಸೃಷ್ಟಿ:**

– ಸೂರ್ಯ ಹೆಸರಿನ ಪ್ರಾಣನನ್ನೂ, ಚಂದ್ರ ಹೆಸರಿನ ಸರಸ್ವತಿಯನ್ನೂ ಸೃಷ್ಟಿಸಿದ, ಪ್ರಜಾಪತಿನಾಮಕ ವಿಷ್ಣು ಅವರಲ್ಲಿ ಆವೇಶಗೊಂಡು, ಆಕಾಶವಾಯುಗಳಲ್ಲಿ, ಆದಿತ್ಯನಲ್ಲಿ, ಕಾಲಘಟಕಗಳಾದ ಉತ್ತರಾಯಣದಲ್ಲಿ, ಶುಕ್ಲಪಕ್ಷದಲ್ಲಿ, ಹಗಲಿ ನಲ್ಲಿ, ಗಂಡಹೆಂಡತಿಯರ ಜೋಡಿಯಲ್ಲಿ, ಗಂಡನಲ್ಲಿ ವಾಯುದೇವ ಇರುವಂತೆ ಮಾಡಿ ಅವನ ಮೂಲಕ ಸೃಷ್ಟಿ ನಡೆಸುವ ವಿಚಾರ ಪ್ರಥಮಾಧ್ಯಾಯದಲ್ಲಿ ಬಂದಿದೆ.

---

6. ಕಾಠಕದ ಈ ಮಾತನ್ನು ಶ್ರೀಮಧ್ವರು ವ್ಯಾಖ್ಯಾನಿಸದಿದ್ದರೂ ತೈತ್ತಿರೀಯೋಪನಿಷತ್ತಿನ ಇದೇ ಪ್ರಮೇಯದ 'ಭೀಷಾಸ್ಮಾದ್ವಾತಃ ಪವತೇ......' (2-13) ಎಂಬ ಮಾತನ್ನು ಯಜುಃಸಂಹಿತೆಯ ಮೂಲಕ- 'ತದೇವ ಬ್ರಹ್ಮ ಭಯಕೃದ್ ವಿದುಷೋಽವಿದುಷಸ್ತತಃ । ವಿದುಷೋಽಲ್ಪಭಯಂ ಕುರ್ಯಾದ್ ಯಾವನ್ಮುಕ್ತಿಂ ಕಿಂಚಿತ್ ಭಯಕೃತ್' ಆಗಿಯೇ ಇರುವನೆಂದು ತಿಳಿಸಿ, 'ತಸ್ಮಾದ್ ವಾಯ್ವಾದಯೋ ದೇವಾ ವಿದ್ವಾಂಸೋಽಪಿ ವಿಶೇಷತಃ । ಭೀತಾಃ ಸ್ವಕರ್ಮ ಕುರ್ವಂತಿ.....'. ಆದುದರಿಂದ ವಾಯ್ವಾದಿಜ್ಞಾನಿಗಳೂ ಭೀತರಾಗಿಯೇ ತಮ್ಮತಮ್ಮ ಕರ್ತವ್ಯವನ್ನು ನಡೆಸುವರೆಂದು ವ್ಯಾಖ್ಯಾನಿಸಿರುವುದರಿಂದ ಕಾಠಕದ ಈ ಮಾತನ್ನೂ ಹಾಗೆಯೇ ವ್ಯಾಖ್ಯಾನಿಸಬೇಕು.

**೨. ದೇಹಧಾರಣೆಯ ವಿಷಯದಲ್ಲಿ ಸ್ಪರ್ಧೆ ಹಾಗೂ ಸ್ಪರ್ಧೆಯಲ್ಲಿ ಗೆದ್ದ ವಾಯು ದೇವನ ಸ್ತುತಿ:**

– ಎರಡನೇ ಅಧ್ಯಾಯದಲ್ಲಿ ಇಂದ್ರಿಯಾಭಿಮಾನಿ ದೇವತೆಗಳು ದೇಹಧಾರಣೆಯ ವಿಷಯದಲ್ಲಿ ಸ್ಪರ್ಧೆ ನಡೆಸಿ, ಅದರಲ್ಲಿ ಗೆದ್ದ ವಾಯುದೇವನನ್ನು ಸ್ತುತಿಸುವ ವಿಚಾರ ಬಂದಿದೆ.

**೩. ಪರಮಾತ್ಮನಿಂದ ವಾಯುದೇವನ ಉತ್ಪತ್ತಿ ಹಾಗೂ ವಾಯುದೇವನಿಂದ ದೇಹದ ಬೇರೆಬೇರೆ ಕಾರ್ಯನಿರ್ವಹಣೆಗೆ ತನ್ನ ಪ್ರಾಣಾದಿರೂಪಗಳ ನಿಯೋಜನೆ:**

– ಮೂರನೇ ಅಧ್ಯಾಯದಲ್ಲಿ ಪರಮಾತ್ಮನಿಂದ ಹುಟ್ಟಿದ ವಾಯುದೇವ ಪರ ಮಾತ್ಮನನ್ನು ನೆರಳಿನಂತೆ ಅವಲಂಬಿಸಿರುವುದೂ, ಚಕ್ರವರ್ತಿ ಸಾಮಂತರಾಜ ರನ್ನು ಹೇಗೋ ಹಾಗೆ ವಾಯುದೇವ ತನ್ನ ಪ್ರಾಣಾದಿರೂಪಗಳನ್ನು ದೇಹದ ಬೇರೆಬೇರೆ ಚಟುವಟಿಕೆಯ ನಿರ್ವಹಣೆಯಲ್ಲಿ ತೊಡಗಿಸುವುದೂ ಬಂದಿದೆ.

**೪. ಸ್ವಪ್ನ ಹಾಗೂ ನಿದ್ರಾಕಾಲದಲ್ಲಿ ಪ್ರಾಣಾಗ್ನಿಯಿಂದ ಧಾರಣೆ:**

– ನಾಲ್ಕನೆಯ ಅಧ್ಯಾಯದಲ್ಲಿ ಪುರುಷನು . ನಿದ್ರಿಸುವಾಗ ಪ್ರಾಣಾಗ್ನಿ ಜಾಗ್ರತನಾಗಿದ್ದು ಯಜ್ಞಪ್ರಕ್ರಿಯೆಯಂತೆ ಹೇಗೆ ಪ್ರಾಣಾಪಾನಾದಿಗಳಿಂದ ಸ್ವಪ್ನ ಮತ್ತು ನಿದ್ರೆಗೆ ಸಂಬಂಧಿಸುವ ಚಟುವಟಿಕೆಗಳು ನಡೆಯುವವೆಂಬುದರ ವಿವರಣೆ ಬಂದಿದೆ.

**೫. ಪ್ರಾಣಕಲೆಯ ಸೃಷ್ಟಿ:**

– '**ಸ ಈಕ್ಷಾಂಚಕ್ರೇ........**' ಇತ್ಯಾದಿ ಮಂತ್ರದಲ್ಲಿ[6-1-5] ಭಗವಂತ ಜೀವಾತ್ಮರ ದೇಹವನ್ನು ತನಗೆ ಪ್ರವೇಶಿಸಲು ಹಾಗೂ ನಿರ್ಗಮಿಸಲು ದ್ವಾರವನ್ನಾಗಿ ಪ್ರಾಣ ಕಲೆಯನ್ನು ಸೃಷ್ಟಿಸಿದನೆಂದೂ, ಆ ಪ್ರಾಣಕಲೆಯಿಂದ ಶ್ರದ್ಧಾಕಲೆಯ ಸೃಷ್ಟಿ ನಡೆಯಿತೆಂದೂ ತಿಳಿಸಲಾಗಿದೆ.

* * *

# ತೈತ್ತಿರೀಯೋಪನಿಷತ್ತಿನಲ್ಲಿ ವಾಯುದೇವನ ಪ್ರಸ್ತಾವ

**೧. ಶಾಂತಿಪಾಠದಲ್ಲಿ ವಾಯುವನ್ನು ಸಂಬೋಧಿಸಿ ಪ್ರಾರ್ಥನೆ:**

– ತೈತ್ತಿರೀಯೋಪನಿಷತ್ತಿನ ಶಿಕ್ಷಾವಲ್ಲಿಯ ಶಾಂತಿಪಾಠದಲ್ಲಿ 'ನಮಸ್ತೇ ವಾಯೋ....... ತ್ವಾಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ......' –ಎಂದು ವಾಯುದೇವನನ್ನು ಪರಬ್ರಹ್ಮನ ಮುಖ್ಯ ಪ್ರತಿಮೆಯನ್ನಾಗಿ ತಿಳಿಸಲಾಗಿದೆ. ಶಿಕ್ಷಾವಲ್ಲಿಯ ಉಪ ಸಂಹಾರದಲ್ಲೂ ಹೀಗೆಯೇ ಪ್ರಾರ್ಥಿಸಲಾಗಿದೆ.

೨. **ಸಂಹಿತೆಯ ಪಂಚಾಧಿಕರಣಗಳಿಗೆ ಅಭಿಮಾನಿತ್ವ ಹಾಗೂ ಭೂತಗಳಿಗೆ ಸಂಬಂಧಿಸಿದ ಮೂರು ಐದರ ಗುಂಪುಗಳಿಗೂ, ದೇಹಕ್ಕೆ ಸಂಬಂಧಿಸಿದ ಮೂರು ಐದರ ಗುಂಪುಗಳಿಗೂ ಅಭಿಮಾನಿತ್ವ:**

– ತೈತ್ತಿರೀಯೋಪನಿಷತ್ತಿನ ಶಿಕ್ಷಾವಲ್ಲಿಯಲ್ಲಿ [1-3....6] ಸಂಹಿತೆಗೆ ಸಂಬಂಧಿಸಿ ಹೇಳಲ್ಪಟ್ಟ ಅಧಿಲೋಕ ಮುಂತಾದ ಐದು ಪ್ರಕರಣಗಳಿಗೆ ಮುಖ್ಯಪ್ರಾಣನು ತನ್ನ ಪ್ರಾಣಾದಿ ಐದು ರೂಪಗಳಿಂದ ಅಭಿಮಾನಿಯಾಗಿರುವನು. ಹಾಗೆಯೇ, ಶಿಕ್ಷಾವಲ್ಲಿಯಲ್ಲಿ [1-15] '**ಪೃಥಿವ್ಯಂತರಿಕ್ಷಂ.......... ಪಾಂಕ್ತಂ ವಾ ಇದꣳ ಸರ್ವಂ.......**' –ಎಂದು ಭೂತ ಗಳಿಗೆ ಸಂಬಂಧಿಸಿದ ಐದರ ಮೂರು ಗುಂಪು ಗಳನ್ನೂ, ದೇಹಕ್ಕೆ ಸಂಬಂಧಿಸಿ ಐದರ ಮೂರು ಗಂಪುಗಳನ್ನೂ ಹೇಳಲಾಗಿದ್ದು ಈ ಪ್ರತಿಯೊಂದು ಐದರಲ್ಲೂ ವಾಯುದೇವನು ತನ್ನ ಪ್ರಾಣಾದಿ ಐದು ರೂಪ ಗಳಿಂದ ಅಭಿಮಾನಿಯಾಗಿ ಇರುವನು.

೩. **ಭುವಃ ಎನಿಸುವ ಪ್ರದ್ಯುಮ್ನ ವಾಯುವಿನಲ್ಲಿ:**

– ತೈತ್ತಿರೀಯದ ಶಿಕ್ಷಾವಲ್ಲಿಯಲ್ಲಿ ವ್ಯಾಹೃತಿಪ್ರತಿಪಾದ್ಯನ ಸ್ಥಾನಗಳನ್ನು ದೇವತೆ ಗಳಲ್ಲಿ '**ಭೂರಿತ್ಯಗ್ನೌ ಪ್ರತಿತಿಷ್ಠತಿ......**' ಇತ್ಯಾದಿಯಾಗಿ ತಿಳಿಸುತ್ತ '**ಭುವ ಇತಿ ವಾಯೌ**' [1-13] ಭುವಃ ಎನಿಸುವ ಪ್ರದ್ಯುಮ್ನನು ವಾಯುವಿನಲ್ಲಿ ಪ್ರತಿಷ್ಠಿತ ನಾಗಿರುವನೆಂದು ತಿಳಿಸಲಾಗಿದೆ.[7]

೪. **ವ್ಯಾಹೃತಿಯ 'ಮಹಃ' ಪ್ರತಿಪಾದ್ಯ ವಾಸುದೇವ ಪ್ರಾಣನಿಗೆ ವಿಶೇಷ ಸುಖಪ್ರದ:**

– ಶಿಕ್ಷಾವಲ್ಲಿಯಲ್ಲಿ 'ಮಹಃ' –ಎಂಬ ವ್ಯಾಹೃತಿ ಪ್ರತಿಪಾದ್ಯ ವಾಸುದೇವನನ್ನು ವರ್ಣಿಸುತ್ತ [1-14] '**ಪ್ರಾಣಾರಾಮಂ**' –ಮುಖ್ಯಪ್ರಾಣನಿಗೆ ವಿಶೇಷವಾಗಿ ಆನಂದ ನೀಡುವವನೆಂದು ವಿಶೇಷಿಸಲಾಗಿದೆ.

೫. **ಆನಂದಮಯನ ಪಾದ ಮುಖ್ಯಪ್ರಾಣನಲ್ಲಿ:**

– ತೈತ್ತಿರೀಯೋಪನಿಷತ್ತಿನ ಬ್ರಹ್ಮವಲ್ಲಿಯಲ್ಲಿ ಆನಂದಮಯನ ಬೇರೆಬೇರೆ ಅಂಗ ಗಳನ್ನು ತಿಳಿಸುತ್ತ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' –ಎಂದು [2-9] ಅವನ ಪಾದವು ಬ್ರಹ್ಮ ಎನಿಸುವ ಪ್ರಧಾನ ವಾಯುವಿನಲ್ಲಿ ಯಾವಾಗಲೂ ನೆಲೆಗೊಂಡಿದೆ ಎಂದು ತಿಳಿಸಲಾಗಿದೆ.

೬. **ಜಗತ್ತನ್ನು ಸೃಷ್ಟಿಸಿದ ಭಗವಂತ ಕೆಲವು ರೂಪಗಳಿಂದ ಮುಖ್ಯಪ್ರಾಣನಲ್ಲಿ ಇಲ್ಲ; ಕೆಲವು ರೂಪಗಳಿಂದ ಮುಖ್ಯಪ್ರಾಣನಲ್ಲಿ ಇರುವನು:**

– ತೈತ್ತಿರೀಯೋಪನಿಷತ್ತಿನ ಬ್ರಹ್ಮವಲ್ಲಿಯಲ್ಲಿ ಸರ್ವವನ್ನೂ ಸೃಷ್ಟಿ ಮಾಡಿದ ಭಗ ವಂತ ಜಗತ್ತನ್ನು ತನ್ನ ಯಾವಯಾವ ರೂಪದಿಂದ ಪ್ರವೇಶಿಸದನೆನ್ನುವಾಗ,

---

7. ವಾಯುಶ್ಚತುರ್ಮುಖಪಂಕ್ತೌ ಪಠಿತತ್ವಾನ್ಮುಖ್ಯವಾಯುಃ । ಪ್ರಾಗುಕ್ತಸ್ತು ಮುಖ್ಯಃ । ಅತೋ ನ ಪೌನರುಕ್ತ್ಯಮ್ । – ಪ್ರಕಾಶಿಕಾ.

ಲಕ್ಷ್ಮೀದೇವಿ ಮತ್ತು ವಾಯುದೇವ –ಇವರಿಂದ ಬೇರೆಯಾದ ಜಗತ್ತಿಗೆ ಖೇದ, ಸುವಾಚ್ಯತ್ವಾದಿ ದೋಷ ದೌರ್ಬಲ್ಯಗಳಿಗೆ ಕಾರಣನಾಗಿ ಸತ್, ನಿರುಕ್ತ ಇತ್ಯಾದಿ ನಾಮವಾಚ್ಯನಾಗಿ ಪ್ರವೇಶಿಸಿದನೆಂದೂ, ಗುಣವಾಚಕಗಳಾದ ಸತ್ಯಾದಿ ನಾಮಕ ನಾಗಿ ಮುಖ್ಯಪ್ರಾಣ, ಶ್ರೀದೇವಿಯರನ್ನು ಪ್ರವೇಶಿಸಿದನೆಂದೂ ತಿಳಿಸಲಾಗಿದೆ. [2-11]

೭. **ಭಗವಂತನ ನಿಯತಿಯ ಭಯಕ್ಕೊಳಪಟ್ಟು ಜ್ಞಾನಿಯಾಗಿರುವ ವಾಯು ದೇವನೂ ಸಂಚರಿಸುವನು; ಪವಿತ್ರಗೊಳಿಸುವನು:**

– ಜ್ಞಾನಿಗಳಾದ ದೇವತೆಗಳೂ, ಭಗವಂತನ ನಿಯತಿಗೆ ಭಯಪಟ್ಟೇ ತಮ್ಮತಮ್ಮ ಕರ್ತವ್ಯವನ್ನು ಪಾಲಿಸುವರೆಂದು ತಿಳಿಸುತ್ತ, ತೈತ್ತಿರೀಯೋಪನಿಷತ್ತಿನ ಬ್ರಹ್ಮವಲ್ಲಿ 'ಭೀಷಾಽಸ್ಮಾದ್ವಾತಃ ಪವತೇ....' [2-13] ಎಂಬ ಮಾತಿನಲ್ಲಿ ಜ್ಞಾನಿಯಾದ ಮುಖ್ಯಪ್ರಾಣನೂ ಭಗವಂತನ ನಿಯತಿಗೆ ಭಯಪಟ್ಟೇ ಸಂಚರಿಸುತ್ತಿರುತ್ತಾನೆ; ಪವಿತ್ರೀಕರಿಸುತ್ತಿರುತ್ತಾನೆ –ಎಂದು ಹೇಳಲಾಗಿದೆ.8

೮. **ವಾಯುದೇವನಲ್ಲಿ ಬಲನಾಮಕ ಭಗವಂತ:**

– ತೈತ್ತಿರೀಯದ ಭೃಗುವಲ್ಲಿಯಲ್ಲಿ ದೇವತೆಗಳಲ್ಲಿರುವ ಭಗವಂತನಿಗೆ ಸಂಬಂಧಿಸಿದ ಉಪಾಸನೆಗಳನ್ನು ತಿಳಿಸುತ್ತ 'ಬಲಮಿತಿ ವಿದ್ಯುತಿ' [3-11]ಎಂದು ವಿದ್ಯುತ್ ಎನಿಸುವ ವಾಯುದೇವನಲ್ಲಿ ಭಗವಂತನು ಬಲಪ್ರದನಾಗಿ ಬಲನಾಮಕನಾಗಿ ಇರುವನೆಂದು ತಿಳಿಸಲಾಗಿದೆ.

* * *

8. ಮುಖ್ಯವಾಯುವಿಗೆ ಭಗವಂತನ ವಿಷಯದಲ್ಲಿ ಭಯ ಕೂಡುವುದಿಲ್ಲ ಎಂದು ಇಲ್ಲಿಯ ವಾಯುಶಬ್ದದಿಂದ ಪ್ರವಹವಾಯುವನ್ನೂ ತೆಗೆದುಕೊಳ್ಳುವುದಿದೆ. ಆದರೆ 'ತಸ್ಮಾದ್ ವಾಯ್ವಾದಯೋ ದೇವಾ ವಿದ್ವಾಂಸೋಽಪಿ ವಿಶೇಷತಃ । ಭೀತಾಃ ಸ್ವಕರ್ಮ ಕುರ್ವಂತಿ....' ಎಂಬುದಾಗಿ ಯಜುಃಸಂಹಿತೆಯ (ತೈ.ಉ.ಭಾ.2-13) ಮೂಲಕ ವಿಶೇಷ ಜ್ಞಾನಿ ಗಳಾದರೂ ಭೀತರಾಗಿ ಸ್ವಕರ್ತವ್ಯವನ್ನು ಮಾಡುವರೆಂದು ಶ್ರೀ ಮಧ್ವರು ಸ್ಪಷ್ಟಪಡಿಸಿರು ವುದರಿಂದ ವಾಯುಶಬ್ದದಿಂದ ಪ್ರಧಾನವಾಯುವನ್ನೇ ಇಟ್ಟುಕೊಳ್ಳಬೇಕು.

# ಛಾಂದೋಗ್ಯೋಪನಿಷತ್ತಿನಲ್ಲಿ ವಾಯುದೇವನ ಪ್ರಸ್ತಾವ

೧. ಸರಸ್ವತಿಗಿಂತ ವಾಯುದೇವ ಶ್ರೇಷ್ಠ, ಅವನಿಗಿಂತ ವಿಷ್ಣುಶ್ರೇಷ್ಠ:

– '.....ಭೂತಾನಾಂ ಪೃಥಿವೀ ರಸಃ........' ಇತ್ಯಾದಿಯಾಗಿ ದೇವತೆಗಳ ತಾರತಮ್ಯ ವನ್ನು ತಿಳಿಸುತ್ತ 'ಋಚಃ ಸಾಮ ರಸಃ ಸಾಮ್ನ ಉದ್ಗೀಥೋ ರಸಃ.....' [1-1-1] ಎಂಬುದಾಗಿ ಸರಸ್ವತಿಗಿಂತ ಸಾಮ ಎನಿಸುವ ವಾಯುದೇವ ಶ್ರೇಷ್ಠನಾದರೆ ಅವನಿಗಿಂತಲೂ ಉದ್ಗೀಥ ಎನಿಸುವ ಶ್ರೀವಿಷ್ಣು ಶ್ರೇಷ್ಠ ಎನ್ನಲಾಗಿದೆ.

೨. ಪ್ರಾಣದೇವನು ಪರಮಪರರ್ಧರಸತಮನು:

– 'ಸ ಏಷ ರಸಾನಾಂ ರಸತಮಃ ಪರಮಃ ಪರಾರ್ಧ್ಯಃ'[1-1-1] ಎಂದು ಶ್ರೀಹರಿ ಯನ್ನು ಪರಮಪರಾರ್ಧರಸತಮನನ್ನಾಗಿ ಗುರುತಿಸುವ ಮೂಲಕ ಪ್ರಾಣದೇವ ನನ್ನು 'ಋಚಃ ಸಾಮ ರಸಃ' ಎಂಬುದಾಗಿ 'ಪರಮಪರರ್ಧರಸತಮ' –ಎಂದು ಪರಿಚಯಿಸಲಾಗಿದೆ.

೩. ಪ್ರಾಣನೇ ಸಾಮ:

– 'ಪ್ರಾಣಃ ಸಾಮ' [1-1-3] ಪ್ರಾಣನನ್ನು ಸಾಮ ಎಂದು ಕರೆಯಲಾಗಿದೆ.

೪. ಪ್ರಾಣ ಸರಸ್ವತಿಯರು ನಿತ್ಯದಂಪತಿಗಳು:

– 'ತದ್ವಾ ಏತನ್ಮಿಥುನಂ.......' [1-1-3] ಎಂಬ ಮಾತಿನಲ್ಲಿ ವಾಕ್–ಪ್ರಾಣ, ಋಕ್– ಸಾಮ ಇವರು ನಿತ್ಯದಂಪತಿಗಳು. ಮುಕ್ತಿಯಲ್ಲಿ ಓಂಕಾರವಾಚ್ಯನಾದ ಪರಮಾತ್ಮನಲ್ಲಿ ಇವರು ಸಾಯುಜ್ಯವನ್ನು ಹೊಂದುವರೆಂದು ತಿಳಿಸಲಾಗಿದೆ.

೫. ದೇಹದಲ್ಲಿಯ ಮುಖ್ಯಪ್ರಾಣನಲ್ಲಿ ಉದ್ಗೀಥನ ಉಪಾಸನೆ:

– 'ಅಥ ಹ ಯ ಏವಾಯಂ ಮುಖ್ಯಪ್ರಾಣಃ.......' ಇಲ್ಲಿಂದ '.......ಇತ್ಯಧ್ಯಾತ್ಮಮ್' [1-2-1] ಇಲ್ಲಿಯವರೆಗೆ ದೇಹದಲ್ಲಿ ಮುಖ್ಯಪ್ರಾಣನ ಹಾಗೂ ಅವನಲ್ಲಿರುವ ಉದ್ಗೀಥನ ಉಪಾಸನೆಯ ನಿರೂಪಣೆ ನಡೆದಿದೆ.

೬. ದೇವತೆಗಳಲ್ಲಿಯ ಮುಖ್ಯಪ್ರಾಣನಲ್ಲಿ ಭಗವಂತನ ಉಪಾಸನೆ:

– 'ಅಥ ಅಧಿದೈವತಂ......' ಇಲ್ಲಿಂದ ಪ್ರಾರಂಭಿಸಿ, 'ಅಪಹಂತಾ ಹ ವೈ ಉಭಯಸ್ಯ ತಮಸೋ ಭವತಿ......' [1-3-1] ಇಲ್ಲಿಯವರೆಗೆ ಆದಿತ್ಯನಲ್ಲಿರುವ ಪ್ರಾಣನಲ್ಲಿ ಭಗವಂತನ ಉಪಾಸನೆಯನ್ನು ಹೇಳಲಾಗಿದೆ.

೭. ಶರೀರಸ್ಥ ಸೂರ್ಯಮಂಡಲಸ್ಥ ಪ್ರಾಣದೇವರಲ್ಲಿ ಸಮಾನತೆ:

– '–ಸಮಾನ ಉ ಏವಾಯಂ ಚಾಸೌ ಚ........' 'ಉದ್ಗೀಥಮುಪಾಸೀತ' [1-3-2] ಎಂಬ ಮಂತ್ರದಲ್ಲಿ ದೇಹದಲ್ಲಿರುವ ಹಾಗೂ ಸೂರ್ಯಮಂಡಲದಲ್ಲಿರುವ

ಮುಖ್ಯಪ್ರಾಣನ ಸಾಮ್ಯವನ್ನು ತಿಳಿಸಿ, ಆದ್ದರಿಂದ ಎರಡು ಕಡೆಗಳಲ್ಲಿ ಇರುವ ಪ್ರಾಣದೇವರಲ್ಲೂ ಉದ್ಗೀಥನ ಉಪಾಸನೆ ಮಾಡಲು ತಿಳಿಸಲಾಗಿದೆ.

**೮. ವ್ಯಾನನಾಮಕ ಮುಖ್ಯವಾಯುವಿನಲ್ಲಿ ಉದ್ಗೀಥನ ಉಪಾಸನೆ:**

– **'ಅಥ ಖಲು ವ್ಯಾನವೇವ........'** ಎಂಬಲ್ಲಿಂದ **'........ ವ್ಯಾನವೇವ ಉದ್ಗೀಥ ಮುಪಾಸೀತ'** [1-3-2] ಎಂಬಲ್ಲಿಯ ವರೆಗೆ ವ್ಯಾನನಾಮಕ ಮುಖ್ಯವಾಯು ವಿನಲ್ಲಿ ಉದ್ಗೀಥನ ಉಪಾಸನೆಯನ್ನು ಹೇಳಲಾಗಿದೆ.

**೯. ಉದ್ಗೀಥಾಕ್ಷರೋಪಾಸನೆ:**

– **'ಅಥ ಖಲು ಉದ್ಗೀಥಾಕ್ಷರಾಣಿ.......... ಉದ್ಗೀಥ ಇತಿ'** [1-3-2] ಎಂಬ ಭಾಗ ದಲ್ಲಿ ಉದ್ಗೀಥದ ಅಕ್ಷರಗಳಿಂದ ಸ್ತುತ್ಯರಾದ ಪ್ರಾಣಾದಿಗಳಲ್ಲಿರುವ ಹರಿಯ ಉಪಾಸನೆಯನ್ನು ತಿಳಿಸಲಾಗಿದೆ. **'ಪ್ರಾಣ ಏವ ಉತ್ । ಪ್ರಾಣೇನ ಹಿ ಉತ್ತಿಷ್ಠತಿ'** –ಎಂಬ ಮಾತಿನಿಂದ ಪ್ರಾಣನಿಂದಲೇ ಎಲ್ಲವೂ ಉತ್ಪನ್ನವಾಗುವುದರಿಂದ ಪ್ರಾಣ 'ಉತ್' ಎನಿಸುವನೆಂದು ಹೇಳ ಲಾಗಿದೆ.

**೧೦. ಸ್ವರ ಎನಿಸುವ ವಾಯುವಿನಲ್ಲಿ ಸ್ವರ ಹಾಗೂ ಓಂ ಎನಿಸುವ ವಿಷ್ಣುವಿನ ಉಪಾಸನೆ:**

– **'ಯದಾ ವಾ ಋಚಮಾಪ್ನೋತಿ......'** ಇತ್ಯಾದಿ ಭಾಗದಲ್ಲಿ [1-3-4] ಸ್ವರ ಎನಿಸುವ ವಾಯುದೇವನಲ್ಲಿ ಸ್ವರ ಹಾಗೂ ಓಂ ಎನಿಸುವ ವಿಷ್ಣುವಿನ ಉಪಾ ಸನೆಯನ್ನು ಹೇಳಲಾಗಿದೆ.

**೧೧. ಸೂರ್ಯಕಿರಣಗತ ವಾಯುವಿನಲ್ಲಿ ಭಗವದುಪಾಸನೆ:**

– **'......ಇತಿ ಹ ಕೌಷೀತಕಿಃ ಪುತ್ರಮುವಾಚ......'** ಇತ್ಯಾದಿ ಭಾಗದಲ್ಲಿ [1-3-5] ಕೌಷೀತಕಿ ತನ್ನ ಮಗನಿಗೆ ಸೂರ್ಯಕಿರಣದಲ್ಲಿರುವ ವಾಯುವಿನಲ್ಲಿರುವ ಹರಿಯ ಉಪಾಸನೆಯನ್ನು ತಿಳಿಸುವನು.

**೧೨. ಇಂದ್ರಿಯಗತ ವಾಯುವಿನಲ್ಲಿ ಭಗವದುಪಾಸನೆ:**

– **'ಅಥ ಅಧ್ಯಾತ್ಮಂ ಯ ಏವಾಯಂ........'** ಇತ್ಯಾದಿಯಾಗಿ **'......ತೇ ಭವಿಷ್ಯಂತೀತಿ'** ಈ ಭಾಗದಲ್ಲಿ [1-3-5] ಇಂದ್ರಿಯಗಳಲ್ಲಿರುವ ಮುಖ್ಯಪ್ರಾಣನಲ್ಲಿ ಭಗವಂತ ನನ್ನು ಸ್ತೋತ್ರ ಮಾಡಲು ತಿಳಿಸಲಾಗಿದೆ.

**೧೩. ಸಾಮಗಾನ ದೋಷದ ಪರಿಹಾರ:**

– **'ಅಥ ಖಲು ಯ ಉದ್ಗೀಥ........ ಸಮಾಹರತೀತಿ** [1-3-5] ಎಂಬ ಭಾಗದಲ್ಲಿ ತಿಳಿಸಿರುವಂತೆ ಅಗ್ನಿಯಲ್ಲಿರುವ ಮುಖ್ಯಪ್ರಾಣನಲ್ಲಿ ಹರಿಯನ್ನು ಧ್ಯಾನಿಸಿ ಪ್ರಮಾದದಿಂದ ಸಾಮಗಾನದಲ್ಲಿ ಕಾಣಿಸಿಕೊಳ್ಳುವ ದೋಷಗಳನ್ನು ಪರಿಹರಿಸಿ ಕೊಳ್ಳಬಹುದು.

**೧೪. ಸಾಮವೇದಾಭಿಮಾನಿ ವಾಯುದೇವ ಅಗ್ನಿ, ಭೂತವಾಯು, ಸೂರ್ಯ, ಚಂದ್ರ ರಲ್ಲಿ ಇರುವನು:**

– **'ಇಯಮೇವ ಋಕ್........ ತತ್ ಸಾಮ'** ಎಂಬ ಭಾಗದಲ್ಲಿ [1-3-6] ಸಾಮ ವೇದಾಭಿಮಾನಿಯಾದ ವಾಯುದೇವ ಅಗ್ನ್ಯಾದಿಗಳಲ್ಲೂ, ಋಗಭಿಮಾನಿನಿ ಸರಸ್ವತಿ ಭೂಲೋಕಾದಿಗಳಲ್ಲೂ ಇರುವರೆಂದು ತಿಳಿಸಿ, ಇವರಿಬ್ಬರೂ ಅರ್ಧ ನಾರಿನರಾಕಾರದಿಂದ ಮಿಳಿತರಾಗಿ ಸಾಮ ಎಂದು ಹೇಳಲ್ಪಡುವರೆಂದು ತಿಳಿಸ ಲಾಗಿದೆ.

**೧೫. ಸೂರ್ಯನಲ್ಲಿರುವ ಋಕ್‌ಸಾಮಗಳು ಹಾಗೂ ಅವುಗಳಲ್ಲಿರುವ ಉದ್ಗೀಥ:**

– **'ಅಥ ಯ ಏಷೋಽಂತರಾದಿತ್ಯೇ....... ಇತ್ಯಧಿದೈವತಮ್'** –ಈ ಭಾಗದಲ್ಲಿ [1-3-7] ಸೂರ್ಯನಲ್ಲಿರತಕ್ಕ ಸರಸ್ವತೀಪ್ರಾಣರಲ್ಲಿ ಇರುವ ವಿಷ್ಣುವಿನ ವರ್ಣನೆ, ಅವನ **'ಉತ್'** ಎಂಬ ರಹಸ್ಯನಾಮ, ಅವನಿಗೆ ಋಗಭಿಮಾನಿನಿ ಸರಸ್ವತಿ ಋಗ್ವೇದದ, ಸಾಮಾಭಿಮಾನಿ ವಾಯು ಸಾಮವೇದದ ಗಾಯಕರು ಆಗಿರುವರು –ಎಂಬ ವಿಚಾರ ಬಂದಿದೆ.

**೧೬. ದೇಹದಲ್ಲಿ ಋಕ್ ಸಾಮಗಳ ಉಪಾಸನೆ:**

– **'ಅಥ ಅಧ್ಯಾತ್ಮಂ.....ಯನ್ನಾಮ ತನ್ನಾಮ'** [1-3-8]ಎಂಬ ಭಾಗದಲ್ಲಿ ದೇಹದ ಶ್ವಾಸದಲ್ಲಿರುವ ವಾಯು, ಜೀವನಲ್ಲಿರುವ ವಾಯು, ಮನಸ್ಸಿನಲ್ಲಿರುವ ವಾಯು, ಕಣ್ಣಿನ ನೀಲಿವರ್ಣದಲ್ಲಿರುವ ವಾಯು–ವಾಗಾದಿ ಇಂದ್ರಿಯಗಳಲ್ಲಿ ರುವ ಋಗಭಿಮಾನಿನಿಯಾದ ಸರಸ್ವತಿಯಲ್ಲಿ ಇರುವುದನ್ನು ತಿಳಿಸಿ, ಒಟ್ಟು 'ಸಾಮ' ಎನಿಸುವುದನ್ನು ಉಲ್ಲೇಖಿಸಲಾಗುವುದು.

**೧೭. ಉದ್ಗಾತೃ ಮುಖ್ಯವಾಯುವಿನಿಂದ ಯಜಮಾನನಿಗೆ ಲೋಕಗಳ ಪ್ರಾಪ್ತಿ:**

– **'ಅಥಾನೇನೈವ......'** ಎಂಬ ಭಾಗದಲ್ಲಿ [1-3-9] ಕಣ್ಣಿನಲ್ಲಿರುವ ಭಗವಂತನ ಪ್ರಸಾದದಿಂದ ಉದ್ಗಾತೃ ಆದ ಮುಖ್ಯವಾಯು ಲೋಕಗಳನ್ನು ಯಜಮಾನ ನಿಗೆ ಉಂಟುಮಾಡುವನು ಎನ್ನಲಾಗಿದೆ.

**೧೮. ಶೌವೋದ್ಗೀಥೋಪಾಸನೆ:**

– **'ಅಥಾತಃ ಶೌವ ಉದ್ಗೀಥಃ........ ಆಹರೋಮಿತಿ'** –ಎಂಬ ಭಾಗದಲ್ಲಿ [1-3-10] ದಲ್ಭಪುತ್ರ ಬಕನಿಗಾಗಿ ನಾಯಿಯ ರೂಪವನ್ನು ಧರಿಸಿದ ವಾಯು ದೇವ ನಾಯಿಯ ರೂಪದ ರುದ್ರಾದಿಗಳಿಂದ ಕೂಡಿಕೊಂಡು ಬಕನ ಎದುರು ಪ್ರಾದುರ್ಭವಿಸಿ, ಅವನ ನಿರ್ದೇಶನದಂತೆ ಮರುದಿನ ಬಂದ ಅವರ ಜೊತೆ ನಾಯಿಯ ರೂಪದ ವಾಯುದೇವ ನಡೆಸಿದ ವ್ಯವಹಾರದ ವಿವರಣೆ ಬಂದಿದೆ.

**೧೯. ಸ್ತೋಭಾಕ್ಷರಗಳಲ್ಲಿ ಹಾಯಿ, ಸ್ವರಗಳಿಂದ ಮುಖ್ಯಪ್ರಾಣನ ಉಪಾಸನೆ:**

– **'ಅಯಂ ವಾವ ಲೋಕ'** [1-3-17] ಎಂದು ಪ್ರಾರಂಭವಾಗುವ ಭಾಗದಲ್ಲಿ **'ವಾಯುರ್ಹಾಯಿಕಾರಃ' '....ಪ್ರಾಣಃ ಸ್ವರಃ'** –ಎಂಬುದಾಗಿ ಹಾಯಿ ಮತ್ತು ಸ್ವರ ಅಕ್ಷರಗಳಿಂದ ವಾಯುವನ್ನು ಉಪಾಸನೆ ನಡೆಸಲು ತಿಳಿಸಲಾಗಿದೆ.

**೨೦. ವಾಯುವಿನ ಸಾಮಗಾನದ ಪ್ರಕಾರ:**

– **'ಮೃದು ಶ್ಲಕ್ಷ್ಣಂ ಚ ವಾಯೋಃ'** [2-2-14] ವಾಯುದೇವನ ಸಾಮಗಾನದ ಸ್ವರ ಮೃದು ಹಾಗೂ ಗುಡುಗಿನಂತೆ ಗಂಭೀರ ಎನ್ನಲಾಗಿದೆ.

**೨೧. ವಾಯುದೇವ ಉದ್ಗಾತೃ ಆಗಿ ಗಾನದಿಂದ ಸಾಧಿಸಬೇಕಾದ ಸಂಕಲ್ಪ:**

– **'ಅಮೃತತ್ವಂ ದೇವೇಭ್ಯಃ........ಸ್ತುವೀತ'** [2-2-14,15] ಎಂಬ ಭಾಗದಲ್ಲಿ ವಾಯುದೇವ ಸಾಮಗಾನದ ಉದ್ಗಾತೃ ಆಗಿ ನಡೆಸಬೇಕಾದ ಸಂಕಲ್ಪದಲ್ಲಿಯ ಉದ್ದೇಶದ ವಿಸ್ತಾರ ಬಂದಿದೆ.

**೨೨. ಗಾನ ಮಾಡುವ ಉದ್ಗಾತೃವಿನಲ್ಲಿ ಇರಬೇಕಾದ ಅನುಸಂಧಾನ:**

– **'ಸರ್ವೇ ಸ್ವರಾಃ ಇಂದ್ರಸ್ಯಾತ್ಮಾನಃ........ ಮೃತ್ಯೋರಾತ್ಮಾನಂ ಪರಿಹರಾಣೀತಿ'** [2-2-15] –ಈ ವಿಭಾಗದಲ್ಲಿ ಉದ್ಗಾತೃ ಮುಖ್ಯಪ್ರಾಣನಾಗಿದ್ದರೆ ಅವನ ಅನುಸಂಧಾನ ಯಾವ ಬಗೆಯದ್ದಾಗಿರುವುದು? ಅವನಿಗಿಂತ ಬೇರೆ ಮನುಷ್ಯರು ಉದ್ಗಾತೃಗಳಾದರೆ ಅವರ ಅನುಸಂಧಾನ ಹೇಗಿರಬೇಕು? ಈ ಎಲ್ಲ ಮಾಹಿತಿ ಇದೆ.

**೨೩. ಮಧುವಿದ್ಯೆಯಲ್ಲಿ ವಾಯುದೇವ:**

– **'ಅಸೌ ವಾ ಆದಿತ್ಯೋ ದೇವಮಧು.....'** ಎಂದು ಪ್ರಾರಂಭವಾಗುವ [3-1-1] ಮಧುವಿದ್ಯೆಯಲ್ಲಿ 'ಅಂತರಿಕ್ಷಮಪೂಪೋ....' –ಎಂದು ವಾಯುದೇವನನ್ನು ಅಂತರಿಕ್ಷನನ್ನಾಗಿ ಕರೆದು ಅಪೂಪ –ಜೇನುಗೂಡೆಂದು ಪರಿಗಣಿಸಲಾಗಿದೆ.

**೨೪. ರುದ್ರರಿಗೆ ಆಸರೆ:**

– **'ರುದ್ರಾಣಾಮೇವೈಕೋ.......'** ಇತ್ಯಾದಿಯಾಗಿ [3-1-9] ರುದ್ರರು ಸಂಕರ್ಷಣನ ಉಪಾಸನೆ ನಡೆಸುವಲ್ಲಿ ವಾಯುದೇವ ಆಶ್ರಯನೆಂದು ನಿರೂಪಿಸಲಾಗಿದೆ.

**೨೫. ಹೃದಯಗತಹೃದಯನಾಮಕ ಭಗವಂತನಿಗೆ ಊರ್ಧ್ವದ್ವಾರಪಾಲಕನಾಗಿ ಉದಾನನಾಮಕ ಮುಖ್ಯವಾಯು:**

– **'ಅಥ ಯೋಽಸ್ಯ ಊರ್ಧ್ವಸುಷಿಃ ಸ ಉದಾನಃ.....ಯ ಏವಂ ವೇದ'** [3-2-7] ಈ ಭಾಗದಲ್ಲಿ ಉದಾನನಾಮಕನಾದ ಪ್ರಧಾನ ವಾಯುವನ್ನು ಹೇಗೆ ಉಪಾಸನೆ ಮಾಡಬೇಕು? ಅದರ ಫಲ ಏನು ಎಂದು ತಿಳಿಸಲಾಗಿದೆ.

೨೬. **ಮುಖ್ಯಪ್ರಾಣನಿಂದ ದೇಹದಲ್ಲಿರುವ ಭಗವಂತನ ಸ್ತೋತ್ರ:**

– **'ಅಥ ಯದತಃ ಪರೋ......ಯ ಏವಂ ವೇದ'** –ಎಂಬ ಭಾಗದಲ್ಲಿ [3-2-8] ಸಪ್ತಲೋಕಗಳ ಮೇಲಿನ ವೈಕುಂಠದಲ್ಲೂ ಬ್ರಹ್ಮನ ಲೋಕಕ್ಕಿಂತ ಮೇಲಿನ ಉತ್ತಮ ಲೋಕಗಳಲ್ಲೂ, ಕೆಳಗಿನ ಲೋಕಗಳಲ್ಲೂ, ಎಲ್ಲರ ಹೃದಯದಲ್ಲೂ ಇರುವ ವಿಷ್ಣುವನ್ನು ಮುಖ್ಯಪ್ರಾಣನು ಸ್ತುತಿಸುವ ವಿಷಯ ನಿರೂಪಿತವಾಗಿದೆ.

೨೭. **ಭಗವಂತನ ಬಾಹುಗಳ ಪುತ್ರ ಮುಖ್ಯಪ್ರಾಣ:**

– **'ತಸ್ಯ ಪ್ರಾಚೀ ದಿಕ್ ಜುಹೂರ್ನಾಮ.......'** ಇತ್ಯಾದಿಯಾಗಿ ಭಗವಂತನ ಬಾಹುಗಳನ್ನು ಪರಿಚಯಿಸಿ, **'ತಾಸಾಂ ವಾಯುರ್ವತ್ಸಃ'** [3-3-2] ಬಾಹುಗಳ ಪುತ್ರ ವಾಯುದೇವನೆಂದು ತಿಳಿಸಿ, ಅದರ ತಿಳಿವಳಿಕೆಯ ಫಲವನ್ನೂ ಹೇಳಲಾಗುವುದು. ರಮಾದೇವಿಯೂ ಅದರ ಫಲ ಪಡೆದಿದ್ದನ್ನು ತಿಳಿಸಲಾಗುವುದು.

೨೮. **ಪುರುಷಯಜ್ಞದ ಅವಭೃಥರೂಪವಾದ ದೇಹತ್ಯಾಗದ ಸಂದರ್ಭದಲ್ಲಿ ನಡೆಸಬೇಕಾದ ಧ್ಯಾನಗಳಲ್ಲೊಂದು:**

– **'ಸೋऽಂತವೇಲಾಯಾಮೇತತ್ ತ್ರಯಂ ಪ್ರತಿಪದ್ಯೇತ.......'** ಎಂದು ಮರಣ ಕಾಲದಲ್ಲಿ ನಡೆಸಬೇಕೆಂದು ತಿಳಿಸಿದ ಧ್ಯಾನಗಳಲ್ಲೊಂದು **'ಪ್ರಾಣಸಂಶಿತಮಸಿ'** [3-4-2] ಮುಖ್ಯಪ್ರಾಣನಿಗಿಂತಲೂ ಸದಾ ಅಧಿಕ, ಸುಖವುಳ್ಳವನು ಭಗವಂತ.

೨೯. **ವಾಯುದೇವನೇ ಎಲ್ಲ ದೇವತೆಗಳನ್ನೂ ಸಂಹರಿಸುವವನೆಂಬ ವಿಚಾರವನ್ನೊಳಗೊಂಡ 'ಸಂವರ್ಗವಿದ್ಯೆ' ಅದಕ್ಕೆ ಪೋಷಕವಾದ ಒಂದು ಆಖ್ಯಾಯಿಕೆ:**

– **'ವಾಯುರ್ವಾವ ಸಂವರ್ಗಃ........... ಅನ್ನಾದೋ ಭವತಿ ಯ ಏವಂ ವೇದ'** [4-1-4....6] –ಈ ಭಾಗದಲ್ಲಿ ಸಂವರ್ಗವಿದ್ಯೆ ತಿಳಿಸುವಂತೆ ವಾಯುದೇವ ಅಧಿದೈವ ದಲ್ಲೂ, ಅಧ್ಯಾತ್ಮದಲ್ಲೂ ಹೇಗೆ ಸಂಹಾರಕ ಎಂದು ತಿಳಿಸಿ, ಅದಕ್ಕೆ ಅಭಿಪ್ರೇತಾರಿ ಕಾಕ್ಷಸೇನಿ ಇವರಿಗೆ ಸಂಬಂಧಿಸುವ ಆಖ್ಯಾಯಿಕೆಯ ಸಂವಾದವನ್ನು ನೀಡಲಾಗಿದೆ.

೩೦. **ಸತ್ಯಕಾಮನಿಗೆ ಎತ್ತಿನ ರೂಪದಿಂದ ಬಂದ ವಾಯುದೇವನಿಂದ ವಾಸುದೇವ ರೂಪದ ಉಪದೇಶ:**

– **'ಅಥ ಹ ಏನಂ ಋಷಭಃ ಅಭ್ಯುವಾದ......ಇತ್ಯುಪಾಸ್ತೇ'** [4-2-4] –ಎಂಬ ಭಾಗದಲ್ಲಿ ಸತ್ಯಕಾಮನಿಗೆ ಎತ್ತಿನ ರೂಪದಿಂದ ಬಂದ ವಾಯುದೇವ ವಾಸುದೇವರೂಪದ ಬಗ್ಗೆ ನೀಡಿದ ಉಪದೇಶ ಪ್ರಸ್ತುತವಾಗಿದೆ.

೩೧. **ಉಪಕೋಸಲನಿಗೆ ಅಗ್ನಿಗಳಿಂದ ಮುಖ್ಯಪ್ರಾಣನ ಉಪದೇಶ:**

– **'ತಸ್ಮೈ ಹ ಊಚುಃ - ಪ್ರಾಣೋ ಬ್ರಹ್ಮ..... ಪ್ರಾಣಂ ಚ ಹ ಅಸ್ಮೈ..... ಊಚುಃ'** [4-3-1] –ಈ ಭಾಗದಲ್ಲಿ ಬಲರೂಪಿಯಾದ ಮುಖ್ಯಪ್ರಾಣನನ್ನು ಅಪರ ಬ್ರಹ್ಮನನ್ನಾಗಿ ಉಪದೇಶಿಸುವರು.

**೩೨. ಆಹವನೀಯಾಗ್ನಿಯಿಂದ ಉಪಕೋಸಲನಿಗೆ ಉಪದೇಶ:**

– ಆಹವನೀಯಾಗ್ನಿ ಉಪಕೋಸಲನಿಗೆ ಆಕಾಶಾದಿಗಳಲ್ಲಿರುವ ಭಗವದ್ರೂಪಗಳನ್ನು ತಿಳಿಸುತ್ತ ಮೊತ್ತಮೊದಲು 'ಪ್ರಾಣಃ' [4-3-4] ವಿಷ್ಣುವು ಬಲರೂಪನಾದ್ದರಿಂದ ಪ್ರಾಣ ನಾಮಕನಾಗಿ ಪ್ರಾಣನಲ್ಲಿ ಇರುವನೆಂದು ಉಪದೇಶಿಸಿರುವನು.

**೩೩. ಅರ್ಚಿರ್ ಲೋಕವನ್ನು ಹೊಂದಿದವರನ್ನು ವಾಯುದೇವನು ಭಾರತಿಯಲ್ಲಿಂದ ಕೆಲವರನ್ನು ಚತುರ್ಮುಖನಲ್ಲಿಗೂ, ಇನ್ನು ಕೆಲವರನ್ನು ಪರಮಾತ್ಮನಲ್ಲಿಗೂ ಕೊಂಡೊಯ್ಯುವನು.**

– 'ತತ್ಪುರುಷೋ ಮಾನವಃ ಸ ಏನಾನ್ ಬ್ರಹ್ಮ ಗಮಯತಿ' [4-3-9] –ಎಂಬ ಮಾತಿನಲ್ಲಿ ಅರ್ಚಿರಾದಿಮಾರ್ಗದಲ್ಲಿ ಬಂದ, ತಮ್ಮ ದೇಹದಲ್ಲಷ್ಟೇ ಉಪಾಸನೆ ನಡೆಸುವವರನ್ನು ಚತುರ್ಮುಖನಲ್ಲಿಗೂ, ವ್ಯಾಪ್ತೋಪಾಸಕರನ್ನು ಪರಬ್ರಹ್ಮನಲ್ಲಿಗೂ ವಾಯುದೇವ ಕೊಂಡೊಯ್ಯುವ ಪ್ರಮೇಯ ಪ್ರಸ್ತುತವಾಗಿದೆ.

**೩೪. ಯಜ್ಞನಾಮಕ ವಾಯುದೇವನ ಎರಡು ಪಾದಗಳ ಪೂಜೆ:**

– 'ಏಷ ಹ ವೈ ಯಜ್ಞಃ.....ಶ್ರೇಯಾನ್ ಭವತಿ' [4-4-1] ಎಂಬ ಭಾಗದಲ್ಲಿ ಯಜ್ಞವನ್ನು ವಾಯುದೇವನ ಪ್ರತಿಮೆಯನ್ನಾಗಿ ತಿಳಿಸಿ, ಅದರ ಪಾದದ ಲೋಪ ಆಗದಂತೆ ಬ್ರಹ್ಮಾ ಋತ್ವಿಜ ಮೌನದಿಂದಿರಬೇಕೆಂದು ಹೇಳಲಾಗಿದೆ.

**೩೫. ಸೂರ್ಯನಿಗಿಂಥ ಸಾಮಾಭಿಮಾನಿ ಮುಖ್ಯವಾಯು ಶ್ರೇಷ್ಠ:**

– 'ಅಗ್ನೇಃ ಋಚಃ' –ಇತ್ಯಾದಿ ಮಾತುಗಳಲ್ಲಿ ಅಗ್ನ್ಯಾದಿಗಳಿಂದ ಋಗಾದ್ಯಭಿಮಾನಿಗಳು ಶ್ರೇಷ್ಠರೆಂದು ತಿಳಿಸುತ್ತ 'ಸಾಮಾನಿ ಆದಿತ್ಯಾತ್' [4-3-2] ಸಾಮಾಭಿಮಾನಿ ವಾಯುದೇವ ಆದಿತ್ಯನಿಗಿಂತ ಶ್ರೇಷ್ಠ ಎಂದು ಹೇಳಲಾಗಿದೆ.

**೩೬. ವಾಯುದೇವನಿಗೆ ಜ್ಯೇಷ್ಠತ್ವ ಶ್ರೇಷ್ಠತ್ವ:**

– 'ಯೋ ಹ ವೈ..... ಪ್ರಾಣೋ ವಾವ ಜ್ಯೇಷ್ಠಶ್ಚ ಶ್ರೇಷ್ಠಶ್ಚ [5-1-1] ಎಂಬ ಮಾತಿನಲ್ಲಿ ವಾಯುದೇವನ ಜ್ಯೇಷ್ಠತ್ವದ ಹಾಗೂ ಶ್ರೇಷ್ಠತ್ವದ ಸಮರ್ಥನೆಯನ್ನು ನಡೆಸಲಾಗುವುದು.

**೩೭. ಇಂದ್ರಿಯಾಭಿಮಾನಿಗಳಲ್ಲಿ ಶ್ರೇಷ್ಠತ್ವದ ಬಗ್ಗೆ ಸ್ಪರ್ಧೆ:**

– 'ಅಥ ಹ ಪ್ರಾಣಾಃ...... ಪ್ರಾಣೋ ಹ್ಯೇವೈತಾನಿ ಸರ್ವಾಣಿ ಭವತಿ' [5-1-3...11] ಈ ಭಾಗದಲ್ಲಿ ಶ್ರೇಷ್ಠತ್ವದ ಬಗ್ಗೆ ಇಂದ್ರಿಯಾಭಿಮಾನಿಗಳಲ್ಲಿ ನಡೆದ ಸ್ಪರ್ಧೆಯನ್ನೂ, ಅವರಲ್ಲಿ ಮುಖ್ಯಪ್ರಾಣನ ಗೆಲುವನ್ನೂ ತಿಳಿಸಲಾಗಿದೆ.

**೩೮. ಪ್ರಾಣದೇವನಿಗೆ ಅನ್ನ ಮತ್ತು ವಸ್ತ್ರ:**

– 'ಸ ಹೋವಾಚ.......... ಅನಗ್ನೋ ಹ ಭವತಿ' [5-1-11, 12] ಈ ಭಾಗದಲ್ಲಿ ಇಂದ್ರಿಯಾಭಿಮಾನಿಗಳಿಂದ ಶ್ರೇಷ್ಠನೆಂದು ಸ್ತುತನಾದ ಪ್ರಾಣದೇವನಿಗೆ ಎಲ್ಲ

ಪ್ರಾಣಗಳು ಉಣ್ಣುವ ಅನ್ನವನ್ನು ಅನ್ನವನ್ನಾಗಿಯೂ, ಭೋಜನದ ಮೊದಲು ಸ್ವೀಕರಿಸುವ ಪೂರ್ವಾಪೋಶನದ ಜಲವನ್ನೂ ಕೊನೆಯಲ್ಲಿ ಸ್ವೀಕರಿಸುವ ಉತ್ತರಾಪೋಶನದ ಜಲವನ್ನೂ ಬಟ್ಟೆಯನ್ನಾಗಿಯೂ ದೇವತೆಗಳಿಂದ ಸಮರ್ಪಿಸಲ್ಪಟ್ಟ ವಿಚಾರ ಬಂದಿದೆ.

೩೯. **ಪ್ರಾಣತತ್ವಜ್ಞಾನದಿಂದ ಮುಕ್ತಿಯ ಲಾಭ:**

– **'ಯದ್ಯಪ್ಯೇತತ್ ಶುಷ್ಕಾಯ.......'** [5-1-13] –ಎಂಬ ಮಾತಿನಲ್ಲಿ ಸತ್ಯಕಾಮನು ಗೋಶ್ರುತಿಗೆ ಪ್ರಾಣವಿದ್ಯೆಯ ಫಲವನ್ನು ಒಗಟಿನ ರೀತಿಯಲ್ಲಿ ತಿಳಿಸುವನು.

೪೦. **ಮಂಥಹೋಮದಲ್ಲಿ ವಾಯುದೇವನ ಪ್ರಸ್ತಾವ:**

– **'ಅಥ ಯದಿ ಮಹತ್ಜಿಗಮಿಷೇತ್..... ತಸ್ಮಿನ್ ಸ್ವಪ್ನನಿದರ್ಶನೇ'** [5-1-13.....15] –ಎಂಬ ಭಾಗದಲ್ಲಿ ಮಂಥಹೋಮದ ವಿವರ ನೀಡಿದ್ದು, ಹೋಮದಲ್ಲಿ **'ಜ್ಯೇಷ್ಠಾಯ ಶ್ರೇಷ್ಠಾಯ ಸ್ವಾಹಾ'** ಇತ್ಯಾದಿ ಮಂತ್ರಗಳಿಂದ ಹೋಮಿಸುವಾಗ ಪ್ರಾಣದೇವರನ್ನೂ ಸ್ಮರಿಸಿಕೊಳ್ಳ ಬೇಕೆಂದಿದೆ. ಹಾಗೆಯೇ ಹೋಮ ಮಾಡಿ ವಾಯುದೇವನನ್ನು ಜಪಿಸಬೇಕೆಂದಿದೆ.

೪೧. **ಪಂಚಾಗ್ನಿಯ ಮೊದಲ ಅಗ್ನಿ ದ್ಯುಲೋಕದಲ್ಲಿರುವ ನಾರಾಯಣರೂಪಿ ಪರಮಾತ್ಮ ಪ್ರಾಣದೇವನಲ್ಲಿರುವನೆಂದು ಉಲ್ಲೇಖಿಸಲಾಗಿದೆ:**

– **'ಅಸೌ ವಾವ ಲೋಕೋ.....'** [5-2-6] – ಈ ಮಾತಿನಲ್ಲಿ **'ಅಸೌ'** ಎಂಬ ಶಬ್ದದಿಂದ ನಾರಾಯಣಾಗ್ನಿ ವಾಯುದೇವನಲ್ಲಿದೆ ಎಂದು ಹೇಳಲಾಗಿದೆ.

೪೨. **ವೈಶ್ವಾನರನ ಪ್ರಾಣ:**

– 'ಏಷ ವೈ ಪೃಥಗ್‌ವರ್ತ್ಮಾ ಆತ್ಮಾ.....' [5-4-8] ಇತ್ಯಾದಿಯಾಗಿ ವೈಶ್ವಾನರನ ಪ್ರಾಣವನ್ನು ಮುಖ್ಯಪ್ರಾಣನಿಗಿಂತಲೂ ವೈಶಿಷ್ಟ್ಯಪೂರ್ಣವಾಗಿ ನಿರೂಪಿಸಲಾಗಿದೆ.

೪೩. **ವೈಶ್ವಾನರವಿದ್ಯೆಯಲ್ಲಿ ವಾಯುದೇವನ ಪ್ರಸ್ತಾವ:**

– **'ವಾಯುರೇವ ಭಗವೋ ರಾಜನ್'** [5-4-7] –ಎಂದು ಇಂದ್ರದ್ಯುಮ್ನ ತಾನು ವಾಯುವಿಗೆ ಆಶ್ರಯನಾಗಿದ್ದು ವಾಯು ಎಂಬ ಹೆಸರುಳ್ಳವನೆಂದು ವೈಶ್ವಾನರನನ್ನು ಉಪಾಸಿಸು ವುದಾಗಿ ತಿಳಿಸುವನು.

ಊಟ ಮಾಡುವಾಗ **'ಪ್ರಾಣಾಯ ಸ್ವಾಹಾ'** ಇತ್ಯಾದಿಯಾಗಿ ಆಹುತಿ ನೀಡಬೇಕೆಂದು ತಿಳಿಸುತ್ತ **'ಉದಾನಾಯ ಸ್ವಾಹಾ'** –ಎಂಬ ಆಹುತಿಯಿಂದ ಪ್ರಾಣದೇವನು ತೃಪ್ತನಾಗುವನೆಂದು **'ಅಥ ಯಾಂ ಪಂಚಮೀಂ...... ಉದಾನಃ ತೃಪ್ಯತಿ'** [5-5-6] –ಎಂಬ ಭಾಗದಲ್ಲಿ ತಿಳಿಸಲಾಗಿದೆ.

**೪೪. ನೀರಿಗೆ ಅಭಿಮಾನಿಯಾಗಿ ಪ್ರಾಣದೇವನ ಸೃಷ್ಟಿ:**

– **'ತದೈಕ್ಷತ.... ಅನ್ನಾದ್ಯಂ ಜಾಯತೇ'** [6-2-1] ಎಂಬ ಭಾಗದಲ್ಲಿ ತೇಜಃ ಎನಿಸುವ ಲಕ್ಷ್ಮೀದೇವಿಯಿಂದ ಜಲಾಭಿಮಾನಿಯಾಗಿ ಪ್ರಾಣದೇವನ ಸೃಷ್ಟಿಯನ್ನೂ, ಪ್ರಾಣ ದೇವನಿಂದ ಅನ್ನಾಭಿಮಾನಿಯಾಗಿ ರುದ್ರದೇವನ ಸೃಷ್ಟಿಯನ್ನೂ ಹೇಳ ಲಾಗಿದೆ.

**೪೫. ತ್ರಿವೃತ್ಕರಣದಲ್ಲಿ ವಾಯುದೇವನ ಪಾತ್ರ:**

– **'ತೇಷಾಂ ಖಲ್ವೇಷಾಂ........ ತನ್ಮೇ ವಿಜಾನೀಹೀತಿ'** [6-2-2] –ಎಂಬ ಭಾಗದಲ್ಲಿ ಭಗವಂತನಿಂದ ಸೃಷ್ಟಿಗೆ ಸಂಬಂಧಿಸಿ ನಡೆದ 'ತ್ರಿವೃತ್ಕರಣ'ಕ್ಕೆ ಸಂಬಂಧಿಸಿದ ಮೂರು ದೇವತೆಗಳಲ್ಲಿ ಒಬ್ಬ ಪ್ರಾಣದೇವ. ನೀರಿಗೆ ಅಭಿಮಾನಿಯಾದ ಅವನೂ ಮೂರುಮೂರು ದೇವತೆಗಳನ್ನು ಸೇರಿಸಿ ಭಗವಂತ ನಡೆಸಿದ ತ್ರಿವೃತ್ಕರಣದಲ್ಲಿ ಒಬ್ಬನಾಗಿದ್ದು ಅಗ್ನ್ಯಾದಿಗಳ ನಾಮಗಳಿಗೂ ರೂಪಗಳಿಗೂ ಅವನೂ ಕಾರಣ ನೆಂದು ಪ್ರತಿಪಾದಿಸಲಾಗಿದೆ.

**೪೬. ನೀರಿನಲ್ಲಿ ಅಭಿಮಾನಿಯಾಗಿ ವಾಯುದೇವನ ಪಾತ್ರ:**

– **'ಆಪಃ ಪೀತಾಃ ತ್ರೇಧಾ ವಿಧೀಯತೇ...... ಯೋಽಣಿಷ್ಠಃ ಸ ಪ್ರಾಣಃ'** [6-2-8] **'ಆಪೋಮಯಃ ಪ್ರಾಣಃ'** [6-2-10] –ಎಂಬಲ್ಲಿಯ ಭಾಗದಲ್ಲಿ ನೀರು ಕುಡಿ ದಾಗ ಪ್ರಾಣದೇವನಿಂದ ಸಹಿತವಾಗಿ ನೀರಿನ ಸೂಕ್ಷ್ಮಭಾಗ ಪ್ರಾಣಕ್ಕೆ ಪೋಷಕ ವಾಗುವುದೆಂದು ಹೇಳಲಾಗಿದೆ.

**೪೭. ಪ್ರಾಣಶಕ್ತಿ ಪ್ರಾಣದೇವನ ಅಧೀನ:**

– **'ಅಪಾಂ ಸೋಮ್ಯ........ಸ ಪ್ರಾಣೋ ಭವತಿ'** [6-2-10], **'ಆಪೋಮಯಃ ಪ್ರಾಣಃ'** –ಎಂಬ ಮಾತುಗಳಲ್ಲಿ ಪ್ರಾಣಶಕ್ತಿ ಪ್ರಾಣದೇವನ ಅಧೀನ ಎಂದು ಪ್ರತಿಪಾದಿಸಲಾಗಿದೆ.

**೪೮. 'ಅಶನಾಯ' ಎನ್ನುವ ಮುಖ್ಯಪ್ರಾಣನಿಂದ ಅನ್ನದ ಪಚನಕಾರ್ಯ ಹಾಗೂ ಲಯ:**

– **'ಅಶನಾಯಾಪಿಪಾಸೇ ಮೇ...... ತೇಜಃ ಪರಸ್ಯಾಂ ದೇವತಾಯಾಮ್'** [6-3-3... 5] –ಎಂಬ ಭಾಗದಲ್ಲಿ 'ಅಶನಾಯಾ' ಎನಿಸುವ ಮುಖ್ಯಪ್ರಾಣನಿಂದ ಆಹಾರದ ಪಚನಕಾರ್ಯ ನಡೆಯುವುದೆಂದು ತಿಳಿಸಿ, ಜೀವರು ಮರಣ ಹೊಂದುವಾಗ ಹಾಗೆಯೇ ಚತುರ್ಮುಖ ಮುಕ್ತಿ ಹೊಂದುವಾಗ ದೇವತೆಗಳು ಸ್ವೋತ್ತಮರಲ್ಲಿ ತಮ್ಮ ವ್ಯಾಪಾರವನ್ನು ಸ್ಥಗಿತಗೊಳಿಸುತ್ತಾರೆಂದೂ ತಾವು ಲಯ ಹೊಂದು ತ್ತಾರೆಂದೂ ತಿಳಿಸುತ್ತಾ ರುದ್ರ, ಪ್ರಾಣನಲ್ಲಿ, ಪ್ರಾಣ ಲಕ್ಷ್ಮಿಯಲ್ಲಿ ತಮ್ಮ ವ್ಯಾಪಾರ ವನ್ನು ನಿಲ್ಲಿಸುವರು. ಲಯ ಹೊಂದುವರು –ಎಂದು ಹೇಳಲಾಗಿದೆ.

**೪೯. ಮರಣಾವಸ್ಥೆಯಲ್ಲಿ ಲಯ:**

- ಮಾನವನ ಮರಣಾವಸ್ಥೆಯಲ್ಲಿ ಯಾವ ಯಾವ ದೇವತೆಯ ಲಯ ಯಾರ್‍ಯಾರಲ್ಲಿ ಎಂದು ತಿಳಿಸುತ್ತ '**ಮನಃ ಪ್ರಾಣೇ ಪ್ರಾಣಃ ತೇಜಸಿ....**' [6-3-5] ಎಂದು ಮನೋಭಿಮಾನಿ ರುದ್ರ ಪ್ರಾಣಾಭಿಮಾನಿ ಮುಖ್ಯಪ್ರಾಣನಲ್ಲೂ, ಮುಖ್ಯಪ್ರಾಣ ತೇಜೋಽಭಿಮಾನಿ ಲಕ್ಷ್ಮಿಯಲ್ಲೂ ಲಯ ಹೊಂದುವರೆಂದು ತಿಳಿಸಲಾಗಿದೆ.

**೫೦. ಬ್ರಹ್ಮನ ಉಪಾಸನೆಗೆ ನಾಮಾಭಿಮಾನಿ ಉಷೆಯಿಂದ ಪ್ರಾರಂಭಿಸಿ ಕ್ರಮೇಣ ಉತ್ತಮೋತ್ತಮ ದೇವತೆಗಳನ್ನೆಲ್ಲ ಹೆಸರಿಸುತ್ತ ಭಾರತಿದೇವಿಗಿಂತ ಸ್ವರೂಪಾನಂದದ ಅಭಿಮಾನಿ ಪ್ರಾಣದೇವರು ಉತ್ತಮರೆಂದು ತಿಳಿಸಿರುವುದಲ್ಲದೆ, ಅವರಲ್ಲಿ ಎಲ್ಲವೂ ಸಮರ್ಪಿತ ಎನ್ನಲಾಗಿದೆ.**

- '**ಪ್ರಾಣೋ ವಾ ಆಶಾಯಾ ಭೂಯಾನ್ ..... ಪ್ರಾಣೋ ಬ್ರಾಹ್ಮಣಃ**' [7-1-16] –ಈ ಭಾಗದಲ್ಲಿ ಭಾರತೀದೇವಿಗಿಂತ ಪ್ರಾಣದೇವನಿಗೆ ಉತ್ತಮತ್ವವನ್ನು ಸಾಧಿಸಿ, ಅವರಲ್ಲಿ ಎಲ್ಲವೂ ಅರ್ಪಿತ ಅವರು ಎಲ್ಲರಿಗೂ ತಂದೆ, ತಾಯಿ ಇತ್ಯಾದಿ ಎಂದು ನಿರೂಪಿಸಲಾಗಿದೆ.

**೫೧. ತಂದೆ ಮುಂತಾದವರಲ್ಲಿ ಪ್ರಾಣನ ಉಪಾಸನೆ:**

- '**ಸ ಯದಿ ಪಿತರಂ......ವಿಜಜ್ಞಾಸ ಇತಿ**' [7-1-16, 7-2-1] ಎಂಬ ಭಾಗದಲ್ಲಿ ತಂದೆ, ತಾಯಿ ಮುಂತಾದವರಲ್ಲಿ ಪ್ರಾಣದೇವನ ಸನ್ನಿಧಾನವಿರುವುದರಿಂದಲೇ ಅವರನ್ನು ಕಠಿನವಾಗಿ ಅವಮಾನಿಸಿದವನನ್ನು ತಂದೆತಾಯಿಯರನ್ನು ಕೊಂದವನೆಂದು ತೆಗಳುವರು. ಆದರೆ ತಂದೆ ಮುಂತಾದವರ ಪ್ರಾಣೋತ್ಕ್ರಮಣ ಆದ ಮೇಲೆ ಆ ಹೆಣವನ್ನು ಏನು ಮಾಡಿದರೂ ಯಾರೂ ಆಕ್ಷೇಪಿಸುವುದಿಲ್ಲ, ಯಾಕೆಂದರೆ, ಅಲ್ಲಿ ಪ್ರಾಣಸನ್ನಿಧಾನ ಇಲ್ಲ. –ಈ ರೀತಿ ಮುಖ್ಯಪ್ರಾಣನ ಮಹತ್ತ್ವವನ್ನು ಸಮರ್ಥಿಸಲಾಗಿದೆ. ಅಂತಹ ಮುಖ್ಯಪ್ರಾಣನಿಗಿಂತಲೂ ಸತ್ಯ ಎನಿಸುವ ಭಗವಂತ ಉತ್ತಮನೆಂದೂ ಹೇಳಲಾಗಿದೆ.

**೫೨. ಪ್ರಾಣಾದಿಗಳ ಸೃಷ್ಟ್ಯಾದಿಗಳ ದರ್ಶನ:**

- '**ಆತ್ಮತಃ ಪ್ರಾಣಃ**' [7-3-3] ಎಂಬ ಮಾತಿನಲ್ಲಿ ಅಪರೋಕ್ಷಜ್ಞಾನಿಯಿಂದ ಪ್ರಾಣನ ಸೃಷ್ಟಿಯ ದರ್ಶನ ನಿರೂಪಿತವಾಗಿದೆ.

**೫೩. ಮುಕ್ತಿಯ ಪ್ರಕ್ರಿಯೆಯಲ್ಲಿ ಮುಖ್ಯಪ್ರಾಣನ ಪಾತ್ರ:**

- '**ಸ ಓಮಿತಿವಾಹೋ.....**' [8-1-10] ಎಂಬ ಮಾತಿನಲ್ಲಿ ಜ್ಞಾನಿಯ ಮುಕ್ತಿಯ ಪ್ರಕ್ರಿಯೆಯಲ್ಲಿ ಪ್ರಾಣೋತ್ಕ್ರಮಣದ ಅವಧಿಯಲ್ಲಿ ಮುಖ್ಯಪ್ರಾಣನ ಪಾತ್ರದ ಎರಡು ಅಂಶಗಳನ್ನು ತಿಳಿಸಲಾಗುವುದು.

೫೪. ಮುಖ್ಯಪ್ರಾಣನಿಗೆ ಶರೀರಾಭಿಮಾನ ಅತ್ಯಲ್ಪ:

– 'ಅಶರೀರೋ ವಾಯುರಭ್ರಂ ವಿದ್ಯುತ್ ಸ್ತನಯತ್ನುಃ' ಈ ವಿಭಾಗದಲ್ಲಿ [8-4-1] ಎಂದು ವಾಯು, ಬ್ರಹ್ಮ, ಭಾರತಿ, ಸರಸ್ವತಿಯರಿಗೆ ಶರೀರಾಭಿಮಾನ ಅತ್ಯಲ್ಪ ಎಂದು ಹೇಳಿ, ಅವರು ಕ್ರಮೇಣ ಪರಮಾತ್ಮನ ಅನುಗ್ರಹದಿಂದ ತಮ್ಮ ಶರೀರ ಬಿಟ್ಟು ಪರಂಜ್ಯೋತಿ ಎನಿಸಿದ ಪರಮಾತ್ಮನನ್ನೂ ಹೊಂದಿರುವುದನ್ನು ತಿಳಿಸಲಾಗಿದೆ.

೫೫. ವಾಯು ಮುಂತಾದ ದೇವತೆಗಳು ಬೇರೆಬೇರೆ ಇಂದ್ರಿಯವಿಷಯಗಳ ಭೋಕ್ತಾರನನ್ನಾಗಿ ದೇವರನ್ನು ಉಪಾಸಿಸುವರು. ಅದರಿಂದಾಗಿ ಅವರಿಗೆ ಆಯಾ ಲೋಕದ ಪ್ರಾಪ್ತಿ:

– 'ತಂ ವಾ ಏತಂ ದೇವಾ ಆತ್ಮಾನಮುಪಾಸತೇ...... ಪ್ರಜಾಪತಿರುವಾಚ [8-4-4] –ಎಂಬ ಭಾಗದಲ್ಲಿ ಇತರ ದೇವತೆಗಳಂತೆ ವಾಯುದೇವನೂ ಇಂದ್ರಿಯಗಳಲ್ಲಿ ಭಗವಂತನನ್ನು ಹೇಗೆ ಉಪಾಸನೆ ಮಾಡುವನೆಂಬುದನ್ನು ತಿಳಿಸಲಾಗಿದೆ.

೫೬. ಸಾಧಕನಿಂದ 'ಯಶ'ಸ್ಸಿನ ಪ್ರಾರ್ಥನೆಯಲ್ಲಿ ವಾಯುದೇವನ ಪ್ರಸ್ತಾವ:

– 'ಆಕಾಶೋ ವೈ ನಾಮ.......' ಎಂದು ಉಪನಿಷತ್ತಿನ ಉಪಸಂಹಾರದಲ್ಲಿ ಸಾಧಕನು ಸಲ್ಲಿಸುವ ಪ್ರಾರ್ಥನೆಯಲ್ಲಿಯ 'ಶ್ವೇತ' [8-5-2] ಎಂಬ ನಾಮದಲ್ಲಿ ವಾಯುದೇವನ ಪ್ರಸ್ತಾವ ಬಂದಿದೆ.

೫೭. ದೇಹದಲ್ಲಿ ಸಾರಥಿ:

– 'ಸ ಯಥಾ ಪ್ರಾಯೋಗ್ಯ......' [8-4-3] ಎಂಬ ಮಾತಿನಲ್ಲಿ ವಾಯುದೇವ ಶರೀರದಲ್ಲಿ ಸಾರಥಿಯಾಗಿರುವನೆಂದು ತಿಳಿಸಲಾಗಿದೆ.

* * *

# ಬೃಹದಾರಣ್ಯಕೋಪನಿಷತ್ತಿನಲ್ಲಿ ಪ್ರಾಣದೇವನ ಪ್ರಸ್ತಾವ

೧. ಶ್ವೇತದ್ವೀಪದಲ್ಲಿ ಪವಡಿಸಿದ ಮೃತ್ಯುನಾಮಕ ಹರಿಯಿಂದ 'ತೇಜೋರಸ'ವಾಗಿ ವಾಯುದೇವನ ಸೃಷ್ಟಿ:

– 'ತಸ್ಯ ಶ್ರಾಂತಸ್ಯ ತಪ್ತಸ್ಯ ತೇಜೋರಸೋ ನಿವರ್ತತಾಗ್ನಿಃ' ಎಂಬ ಮಾತಿನಲ್ಲಿ [3-2-2] ಮೃತ್ಯುನಾಮಕ ಭಗವಂತನಿಂದ ಅಗ್ನಿನಾಮಕವಾಯುವಿನ ಸೃಷ್ಟಿಯಾಗಿ, ಅವನಿಂದ ಆದಿತ್ಯ, ವಾಯು, ಅಗ್ನಿ ಮೂರು ರೂಪಗಳ ಸೃಷ್ಟಿಯಾಯಿತೆಂದು ತಿಳಿಸಲಾಗಿದೆ.

೨. **ವಾಯುಕೂರ್ಮದ ವಿವರಣೆ:**

– '**ತಸ್ಯ ಪ್ರಾಚೀ ದಿಕ್ ಶಿರಃ...... ಪ್ರತಿ ತಿಷ್ಠತ್ಯೇವಂ ವಿದ್ವಾನ್**' –ಎಂಬ [3-2-3] ಭಾಗದಲ್ಲಿ ಕೂರ್ಮರೂಪಿ ಪರಮಾತ್ಮನಿಂದ ಆಧರಿಸಲ್ಪಟ್ಟಿರುವ, ಕೂರ್ಮ ರೂಪಿ ಶೇಷನಿಗೆ ಆಧಾರನಾಗಿರುವ ವಾಯುವಿನ ಕೂರ್ಮರೂಪದ ವಿವರಣೆ ಬಂದಿದೆ.

೩. **ಅಗ್ನಿಯೇ ಮುಂತಾದ ದೇವತೆಗಳು ಸಾಮಗಾನ ನಡೆಸಲು ಅವರ ಮೇಲೆ ದಾಳಿ ಮಾಡಿದ ಅಸುರರು ಸಾಮಗಾನ ಮಾಡಿದ ಮುಖ್ಯಪ್ರಾಣನ ಮೇಲೆ ದಾಳಿ ನಡೆಸಲು ಬಂಡೆಗೆ ಎಸೆವ ಮಣ್ಣಿನ ಹೆಂಟೆಯಂತೆ ತಾವೇ ಗಾಯಗೊಂಡರು:**

– '**ತೇ ಹ ದೇವಾ ಊಚುಃ........ ಯ ಏವಂ ವೇದ**' –ಎಂಬ ಭಾಗದಲ್ಲಿ [3-1....7] ಅಗ್ನ್ಯಾದಿ ದೇವತೆಗಳು ಸಾಮಗಾನ ಮಾಡಿದಾಗ ಅಸುರರು ದಾಳಿ ನಡೆಸಿದ್ದೂ, ಕೊನೆಗೆ ಮುಖ್ಯಪ್ರಾಣ ಸಾಮಗಾನ ಮಾಡಿದಾಗ ಅಸುರರಿಗೆ ಅವನನ್ನು ರೂಪಿಸಲು ಆಗದಿದ್ದದ್ದೂ ನಿರೂಪಿಸಲಾಗಿದೆ.

೪. **ಮುಖ್ಯಪ್ರಾಣನಿಗೆ ಅಯಾಸ್ಯ ಹಾಗೂ ಆಂಗಿರಸ ಹೆಸರುಗಳು:**

– '**ಕ್ವ ನು ಸೋಽಭೂದ್...... ಹಿ ರಸಃ**' ಎಂಬ ಮಾತಿನಲ್ಲಿ [3-3-8] ವಾಯು ದೇವನನ್ನೂ ರುದ್ರಾದಿದೇವತೆಗಳು ಅಯಾಸ್ಯ ಮತ್ತು ಆಂಗಿರಸ ಹೆಸರುಗಳಿಂದ ಕರೆದ ಪ್ರಮೇಯ ಬಂದಿದೆ.

೫. **ಪ್ರಾಣದೇವನಿಂದ ಅಗ್ನಿ ಮುಂತಾದ ದೇವತೆಗಳಿಗೆ ಪಾಪರೂಪವಾದ ಮೃತ್ಯುವಿನಿಂದ ಬಿಡುಗಡೆ ಹಾಗೂ ಆಯಾ ಲೋಕಗಳ ಒಡೆತನದ ಪ್ರಾಪ್ತಿ:**

– '**ಸಾ ವಾ ಏಷಾ........ ಅತಿವಹತಿ ಯ ಏವಂ ವೇದ**' –ಈ ಭಾಗದಲ್ಲಿ [3-3-9.....16] ಮುಖ್ಯಪ್ರಾಣ ಅಗ್ನ್ಯಾದಿದೇವತೆಗಳಿಗೆ ಪಾಪರೂಪದ ಮೃತ್ಯುವನ್ನು ಬಿಡುಗಡೆಗೊಳಿಸಿ, ಆಯಾ ಲೋಕದ ಒಡೆತನವನ್ನು ಕೊಟ್ಟ ಸಂಗತಿ ಬಂದಿದೆ.

೬. **ಮುಖ್ಯಪ್ರಾಣನಿಗೂ, ದೇವತೆಗಳಿಗೂ ಅನ್ನ:**

– '**ಅಥಾತ್ಮನೇಽನ್ನಾದ್ಯಂ........ಭಾರ್ಯೋರ್ಭ್ಯೋ ಭವತಿ**' –ಈ ಭಾಗದಲ್ಲಿ [3-3-17, 18] ಪ್ರಾಣಗಳು ಸ್ವೀಕರಿಸುವ ಅನ್ನದ ಒಂದಂಶ ಮುಖ್ಯಪ್ರಾಣನಿಗೂ, ಮುಖ್ಯ ಪ್ರಾಣನಿಂದ ಪ್ರೇರಿತರಾಗಿ ಪ್ರಾಣಗಳು ಉಣ್ಣುವ ಅನ್ನದಿಂದ ದೇವತೆಗಳಿಗೂ ತೃಪ್ತಿ ಆಗುವುದೆಂಬ ಪ್ರಮೇಯ ಬಂದಿದೆ.

೭. **ಮುಖ್ಯಪ್ರಾಣನ ಅಯಾಸ್ಯ, ಆಂಗಿರಸ, ಬೃಹಸ್ಪತಿ, ಸಾಮ, ಉದ್ಗೀಥ –ಈ ನಾಮಗಳ ಪ್ರಸ್ತಾವ:**

– '**ಸೋಽಯಾಸ್ಯಃ........ ಸ ಉದ್ಗೀಥಃ**' ಈ ಭಾಗದಲ್ಲಿ [3-3-19....23] ಮುಖ್ಯ ಪ್ರಾಣನ ಅಯಾಸ್ಯಾದಿ ನಾಮಗಳ ಪ್ರಸ್ತಾವ ಬಂದಿದೆ.

**೮. ಅಯಾಸ್ಯ ಅಂಗೀರಸಋಷಿಗಳು ಸಾಮಗಾನ ಮಾಡಲು ಅರ್ಧನಾರೀನರರೂಪಿ ಪ್ರಾಣದೇವನ ಪ್ರೇರಣೆ:**

- **'ತದ್ಧಾಪಿ.....ಚೋದಗಾಯದಿತಿ'** –ಎಂಬ ಭಾಗದಲ್ಲಿ [3-3-24] ಅಯಾಸ್ಯ ಮುನಿ ಬ್ರಹ್ಮದೇವರ ಯಜ್ಞದಲ್ಲಿ ಅರ್ಧನಾರೀನರರೂಪನಾದ ಪ್ರಾಣನಿಂದ ಆವಿಷ್ಟನಾಗಿ ಸಾಮಗಾನ ನಡೆಸಿದ್ದನ್ನು ತಿಳಿಸಲಾಗಿದೆ.

**೯. ಅರ್ಧನಾರೀನರರೂಪಿ ಪ್ರಾಣದೇವ ಗೃಹಕೋಶಾದಿಗಳಿಗೆ ಅಭಿಮಾನಿಯಾಗಿರುವಂತೆ, ಭೂಷಣಸ್ವರ್ಣಾದಿಗಳಿಗೆ ಅಭಿಮಾನಿಯಾಗಿರುವಂತೆ ಉದ್ಗಾತೃವಿನ ಸ್ವರಕ್ಕೂ ಅಭಿಮಾನಿ:**

- **'ತಸ್ಯ ಹೈತಸ್ಯ ಸಾಮ್ನೋ......ಸುವರ್ಣಂ ವೇದ'** –ಎಂಬ ಭಾಗದಲ್ಲಿ [3-3-25, 26] ಮುಖ್ಯಪ್ರಾಣನ ಅರ್ಧನಾರೀನರರೂಪ ಗೃಹಕೋಶಾದಿಗಳಿಗೆ, ಸ್ವರ್ಣಕ್ಕೆ ಹಾಗೂ ಉದ್ಗಾತೃವಿನ ಸ್ವರಕ್ಕೆ ಅಭಿಮಾನಿಯಾಗಿರುವ ಸಂಗತಿ ಬಂದಿದೆ.

**೧೦. ಗಾನಕಾಲದಲ್ಲಿ ಮುಖ್ಯಪ್ರಾಣ ವಾಗಿಂದ್ರಿಯದಲ್ಲಿ ಪ್ರತಿಷ್ಠಿತ; ಬೇರೆ ಕಾಲದಲ್ಲಿ ಅನ್ನದಲ್ಲಿ ಪ್ರತಿಷ್ಠಿತ:**

- **'ತಸ್ಯ ಹೈತಸ್ಯ ಸಾಮ್ನೋ...... ಆಹುಃ'** –ಎಂಬ ಭಾಗದಲ್ಲಿ [3-3-27] ಗಾನ ಕಾಲದಲ್ಲಿ ಪ್ರಾಣನ ಪೀಠ ವಾಗಿಂದ್ರಿಯವಾದರೆ, ಬೇರೆ ಕಾಲದಲ್ಲಿ ಅನ್ನವು ಅವನ ಪೀಠ ಎಂದು ತಿಳಿಸಲಾಗಿದೆ.

**೧೧. ಮುಖ್ಯಪ್ರಾಣಪದವಿಗೆ ಯೋಗ್ಯರಾದವರಿಗೆ ಮೋಕ್ಷದಲ್ಲಿ ಉನ್ನತಸ್ಥಾನ. ಮುಖ್ಯಪ್ರಾಣಪದಯೋಗ್ಯನಿಂದಲೇ ಸಾಮಗಾನ. ಸಾಮಗಾನದ ಉಪಕ್ರಮದಲ್ಲಿ ಅವನು ಮಾಡುವ ಪ್ರಾರ್ಥನೆ ಮತ್ತು ಅದರ ಅರ್ಥ. ಸಾಮಗಾನದಿಂದ ಉದ್ಗಾತೃವಿನ ಹಾಗೂ ಯಜಮಾನನ ಅಭೀಷ್ಟಗಳ ಸಿದ್ಧಿ:**

- **'ಅಥಾತಃ ಪವಮಾನಾನಾಂ...... ಸಾಮವೇದ'** –ಎಂಬ ಭಾಗದಲ್ಲಿ [3-3-28....29] ಮುಖ್ಯಪ್ರಾಣಪದವಿಯೋಗ್ಯರಾದವರಿಗೆ ಮೋಕ್ಷದಲ್ಲಿ ಉನ್ನತಸ್ಥಾನವನ್ನು ತಿಳಿಸಲಾಗಿದೆ ಯಲ್ಲದೆ, ಅಯಾಸ್ಯಾದಿ ಋಷಿಗಳು ಪ್ರಾಣನ ಪ್ರೇರಣೆಯಿಂದಲೇ ಸಾಮಗಾನ ಮಾಡು ವುದರಿಂದ ವಾಯುಪದಯೋಗ್ಯ ನಿಂದಲೇ ಸಾಮಗಾನ ಎಂದು ನಿರ್ಧರಿಸಲಾಗಿದೆ. ಸಾಮಗಾನ ಮಾಡಲು ಉಪ ಕ್ರಮಿಸುವಾಗ ಉಚ್ಚರಿಸಬೇಕಾದ **'ಅಸತೋ ಮಾ ಸದ್‌ಗಮಯ'** –ಇತ್ಯಾದಿ ಮೂರು ಪ್ರಸಿದ್ಧ ಮಂತ್ರಗಳನ್ನು ಉಲ್ಲೇಖಿಸಿ, ಅವುಗಳ ಅರ್ಥವನ್ನೂ ವಿವರಿಸ ಲಾಗಿದೆ. ಇತರ ಋಕ್ಕುಗಳಲ್ಲಿ ಸಾಮಗಾನ ಮಾಡುವಾಗ ಯಜಮಾನ ತನ್ನ ಅಭೀಷ್ಟಗಳನ್ನು ತಿಳಿಸಬೇಕೆಂದೂ ಸಾಮಗಾನ ಮಾಡುವ ವ್ಯಕ್ತಿ ತನ್ನ ಹಾಗೂ ಯಜಮಾನನ ಅಭೀಷ್ಟಗಳನ್ನು ಪೂರೈಸುವನೆಂದೂ ತಿಳಿಸಲಾಗಿದೆ.

೨. **ವಾಯುಕೂರ್ಮದ ವಿವರಣೆ:**

– **'ತಸ್ಯ ಪ್ರಾಚೀ ದಿಕ್ ಶಿರಃ...... ಪ್ರತಿ ತಿಷ್ಠತ್ಯೇವಂ ವಿದ್ವಾನ್'** –ಎಂಬ [3-2-3] ಭಾಗದಲ್ಲಿ ಕೂರ್ಮರೂಪಿ ಪರಮಾತ್ಮನಿಂದ ಆಧರಿಸಲ್ಪಟ್ಟಿರುವ, ಕೂರ್ಮ ರೂಪಿ ಶೇಷನಿಗೆ ಆಧಾರನಾಗಿರುವ ವಾಯುವಿನ ಕೂರ್ಮರೂಪದ ವಿವರಣೆ ಬಂದಿದೆ.

೩. **ಅಗ್ನಿಯೇ ಮುಂತಾದ ದೇವತೆಗಳು ಸಾಮಗಾನ ನಡೆಸಲು ಅವರ ಮೇಲೆ ದಾಳಿ ಮಾಡಿದ ಅಸುರರು ಸಾಮಗಾನ ಮಾಡಿದ ಮುಖ್ಯಪ್ರಾಣನ ಮೇಲೆ ದಾಳಿ ನಡೆಸಲು ಬಂಡೆಗೆ ಎಸೆವ ಮಣ್ಣಿನ ಹೆಂಟೆಯಂತೆ ತಾವೇ ಗಾಯಗೊಂಡರು:**

– **'ತೇ ಹ ದೇವಾ ಊಚುಃ........ ಯ ಏವಂ ವೇದ'** –ಎಂಬ ಭಾಗದಲ್ಲಿ [3-1....7] ಅಗ್ನ್ಯಾದಿ ದೇವತೆಗಳು ಸಾಮಗಾನ ಮಾಡಿದಾಗ ಅಸುರರು ದಾಳಿ ನಡೆಸಿದ್ದೂ, ಕೊನೆಗೆ ಮುಖ್ಯಪ್ರಾಣ ಸಾಮಗಾನ ಮಾಡಿದಾಗ ಅಸುರರಿಗೆ ಅವನನ್ನು ರೂಪಿಸಲು ಆಗದಿದ್ದದ್ದೂ ನಿರೂಪಿಸಲಾಗಿದೆ.

೪. **ಮುಖ್ಯಪ್ರಾಣನಿಗೆ ಅಯಾಸ್ಯ ಹಾಗೂ ಆಂಗಿರಸ ಹೆಸರುಗಳು:**

– **'ಕ್ವ ನು ಸೋಽಭೂದ್...... ಹಿ ರಸಃ'** ಎಂಬ ಮಾತಿನಲ್ಲಿ [3-3-8] ವಾಯು ದೇವನನ್ನೂ ರುದ್ರಾದಿದೇವತೆಗಳು ಅಯಾಸ್ಯ ಮತ್ತು ಆಂಗಿರಸ ಹೆಸರುಗಳಿಂದ ಕರೆದ ಪ್ರಮೇಯ ಬಂದಿದೆ.

೫. **ಪ್ರಾಣದೇವನಿಂದ ಅಗ್ನಿ ಮುಂತಾದ ದೇವತೆಗಳಿಗೆ ಪಾಪರೂಪವಾದ ಮೃತ್ಯುವಿನಿಂದ ಬಿಡುಗಡೆ ಹಾಗೂ ಆಯಾ ಲೋಕಗಳ ಒಡೆತನದ ಪ್ರಾಪ್ತಿ:**

– **'ಸಾ ವಾ ಏಷಾ........ ಅತಿವಹತಿ ಯ ಏವಂ ವೇದ'** –ಈ ಭಾಗದಲ್ಲಿ [3-3-9.....16] ಮುಖ್ಯಪ್ರಾಣ ಅಗ್ನ್ಯಾದಿದೇವತೆಗಳಿಗೆ ಪಾಪರೂಪದ ಮೃತ್ಯುವನ್ನು ಬಿಡುಗಡೆಗೊಳಿಸಿ, ಆಯಾ ಲೋಕದ ಒಡೆತನವನ್ನು ಕೊಟ್ಟ ಸಂಗತಿ ಬಂದಿದೆ.

೬. **ಮುಖ್ಯಪ್ರಾಣನಿಗೂ, ದೇವತೆಗಳಿಗೂ ಅನ್ನ:**

– **'ಅಥಾತ್ಮನೇಽನ್ನಾದ್ಯಂ........ಭಾರ್ಯೋಭ್ಯೋ ಭವತಿ'** –ಈ ಭಾಗದಲ್ಲಿ [3-3-17, 18] ಪ್ರಾಣಗಳು ಸ್ವೀಕರಿಸುವ ಅನ್ನದ ಒಂದಂಶ ಮುಖ್ಯಪ್ರಾಣನಿಗೂ, ಮುಖ್ಯ ಪ್ರಾಣನಿಂದ ಪ್ರೇರಿತರಾಗಿ ಪ್ರಾಣಗಳು ಉಣ್ಣುವ ಅನ್ನದಿಂದ ದೇವತೆಗಳಿಗೂ ತೃಪ್ತಿ ಆಗುವುದೆಂಬ ಪ್ರಮೇಯ ಬಂದಿದೆ.

೭. **ಮುಖ್ಯಪ್ರಾಣನ ಅಯಾಸ್ಯ, ಆಂಗಿರಸ, ಬೃಹಸ್ಪತಿ, ಸಾಮ, ಉದ್ಗೀಥ –ಈ ನಾಮಗಳ ಪ್ರಸ್ತಾವ:**

– **'ಸೋಽಯಾಸ್ಯಃ........ ಸ ಉದ್ಗೀಥಃ'** ಈ ಭಾಗದಲ್ಲಿ [3-3-19....23] ಮುಖ್ಯ ಪ್ರಾಣನ ಅಯಾಸ್ಯಾದಿ ನಾಮಗಳ ಪ್ರಸ್ತಾವ ಬಂದಿದೆ.

**೮. ಅಯಾಸ್ಯ ಅಂಗೀರಸಋಷಿಗಳು ಸಾಮಗಾನ ಮಾಡಲು ಅರ್ಧನಾರೀನರರೂಪಿ ಪ್ರಾಣದೇವನ ಪ್ರೇರಣೆ:**

– **'ತದ್ಧಾಪಿ.....ಚೋದಗಾಯದಿತಿ'** –ಎಂಬ ಭಾಗದಲ್ಲಿ [3-3-24] ಅಯಾಸ್ಯ ಮುನಿ ಬ್ರಹ್ಮದೇವರ ಯಜ್ಞದಲ್ಲಿ ಅರ್ಧನಾರೀನರರೂಪನಾದ ಪ್ರಾಣನಿಂದ ಆವಿಷ್ಟನಾಗಿ ಸಾಮಗಾನ ನಡೆಸಿದ್ದನ್ನು ತಿಳಿಸಲಾಗಿದೆ.

**೯. ಅರ್ಧನಾರೀನರರೂಪಿ ಪ್ರಾಣದೇವ ಗೃಹಕೋಶಾದಿಗಳಿಗೆ ಅಭಿಮಾನಿಯಾಗಿರುವಂತೆ, ಭೂಷಣಸ್ವರ್ಣಾದಿಗಳಿಗೆ ಅಭಿಮಾನಿಯಾಗಿರುವಂತೆ ಉದ್ಗಾತೃವಿನ ಸ್ವರಕ್ಕೂ ಅಭಿಮಾನಿ:**

– **'ತಸ್ಯ ಹೈತಸ್ಯ ಸಾಮ್ನೋ......ಸುವರ್ಣಂ ವೇದ'** –ಎಂಬ ಭಾಗದಲ್ಲಿ [3-3-25, 26] ಮುಖ್ಯಪ್ರಾಣನ ಅರ್ಧನಾರೀನರರೂಪ ಗೃಹಕೋಶಾದಿಗಳಿಗೆ, ಸ್ವರ್ಣಕ್ಕೆ ಹಾಗೂ ಉದ್ಗಾತೃವಿನ ಸ್ವರಕ್ಕೆ ಅಭಿಮಾನಿಯಾಗಿರುವ ಸಂಗತಿ ಬಂದಿದೆ.

**೧೦. ಗಾನಕಾಲದಲ್ಲಿ ಮುಖ್ಯಪ್ರಾಣ ವಾಗಿಂದ್ರಿಯದಲ್ಲಿ ಪ್ರತಿಷ್ಠಿತ; ಬೇರೆ ಕಾಲದಲ್ಲಿ ಅನ್ನದಲ್ಲಿ ಪ್ರತಿಷ್ಠಿತ:**

– **'ತಸ್ಯ ಹೈತಸ್ಯ ಸಾಮ್ನೋ...... ಆಹುಃ'** –ಎಂಬ ಭಾಗದಲ್ಲಿ [3-3-27] ಗಾನ ಕಾಲದಲ್ಲಿ ಪ್ರಾಣನ ಪೀಠ ವಾಗಿಂದ್ರಿಯವಾದರೆ, ಬೇರೆ ಕಾಲದಲ್ಲಿ ಅನ್ನವು ಅವನ ಪೀಠ ಎಂದು ತಿಳಿಸಲಾಗಿದೆ.

**೧೧. ಮುಖ್ಯಪ್ರಾಣಪದವಿಗೆ ಯೋಗ್ಯರಾದವರಿಗೆ ಮೋಕ್ಷದಲ್ಲಿ ಉನ್ನತಸ್ಥಾನ. ಮುಖ್ಯಪ್ರಾಣಪದಯೋಗ್ಯನಿಂದಲೇ ಸಾಮಗಾನ. ಸಾಮಗಾನದ ಉಪಕ್ರಮದಲ್ಲಿ ಅವನು ಮಾಡುವ ಪ್ರಾರ್ಥನೆ ಮತ್ತು ಅದರ ಅರ್ಥ. ಸಾಮಗಾನದಿಂದ ಉದ್ಗಾತೃವಿನ ಹಾಗೂ ಯಜಮಾನನ ಅಭೀಷ್ಟಗಳ ಸಿದ್ಧಿ:**

– **'ಅಥಾತಃ ಪವಮಾನಾನಾಂ...... ಸಾಮವೇದ'** –ಎಂಬ ಭಾಗದಲ್ಲಿ [3-3-28....29] ಮುಖ್ಯಪ್ರಾಣಪದವಿಯೋಗ್ಯರಾದವರಿಗೆ ಮೋಕ್ಷದಲ್ಲಿ ಉನ್ನತಸ್ಥಾನವನ್ನು ತಿಳಿಸಲಾಗಿದೆ ಯಲ್ಲದೆ, ಅಯಾಸ್ಯಾದಿ ಋಷಿಗಳು ಪ್ರಾಣನ ಪ್ರೇರಣೆಯಿಂದಲೇ ಸಾಮಗಾನ ಮಾಡು ವುದರಿಂದ ವಾಯುಪದಯೋಗ್ಯ ನಿಂದಲೇ ಸಾಮಗಾನ ಎಂದು ನಿರ್ಧರಿಸಲಾಗಿದೆ. ಸಾಮಗಾನ ಮಾಡಲು ಉಪ ಕ್ರಮಿಸುವಾಗ ಉಚ್ಚರಿಸಬೇಕಾದ **'ಅಸತೋ ಮಾ ಸದ್‌ಗಮಯ'** –ಇತ್ಯಾದಿ ಮೂರು ಪ್ರಸಿದ್ಧ ಮಂತ್ರಗಳನ್ನು ಉಲ್ಲೇಖಿಸಿ, ಅವುಗಳ ಅರ್ಥವನ್ನೂ ವಿವರಿಸ ಲಾಗಿದೆ. ಇತರ ಋಕ್ಕುಗಳಲ್ಲಿ ಸಾಮಗಾನ ಮಾಡುವಾಗ ಯಜಮಾನ ತನ್ನ ಅಭೀಷ್ಟಗಳನ್ನು ತಿಳಿಸಬೇಕೆಂದೂ ಸಾಮಗಾನ ಮಾಡುವ ವ್ಯಕ್ತಿ ತನ್ನ ಹಾಗೂ ಯಜಮಾನನ ಅಭೀಷ್ಟಗಳನ್ನು ಪೂರೈಸುವನೆಂದೂ ತಿಳಿಸಲಾಗಿದೆ.

೧೨. 'ವಿಶ್ವಂಭರ' ಮುಖ್ಯಪ್ರಾಣ ಅಲ್ಲ:

– 'ವಿಶ್ವಂಭರೋ ವಾ ವಿಶ್ವಂಭರಕುಲಾಯೇ' [3-5-1] ಎಂಬ ಮಾತಿನಲ್ಲಿ ಬಂದ ವಿಶ್ವಂಭರಶಬ್ದಕ್ಕೆ ಆಚಾರ್ಯರು 'ವಿಶ್ವಂಭರೋ ವಾಯುಃ' –ಶರೀರದಲ್ಲಿ ತುಂಬಿರುವ ಗಾಳಿಯನ್ನು ವಿಶ್ವಂಭರ ಹೆಸರಿನಿಂದ ಗುರುತಿಸಿರುವರಷ್ಟೇ.

೧೩. ಚತುರ್ಮುಖನಿಂದ ವಾಯುವಿನ ಜನನ:

– ಚತುರ್ಮುಖನಿಂದ ಕ್ಷತ್ರಿಯ ಜಾತೀಯ ದೇವತೆಗಳ ಸೃಷ್ಟಿಯನ್ನು ಹೇಳುತ್ತ [3-5-5] ಈಶಾನ ಶಬ್ದದಿಂದ ವಾಯುದೇವನ ಸೃಷ್ಟಿಯನ್ನು ಹೇಳಲಾಗಿದೆ.

೧೪. ಮುಖ್ಯಪ್ರಾಣನ ಧರ್ಮನಾಮಕ ರೂಪದ ಸೃಷ್ಟಿ:

– 'ಸ ನೈವ ವ್ಯಭವತ್....... ಉಭಯಂ ಭವತಿ'[3-5-6,7,8] –ಎಂಬ ಭಾಗದಲ್ಲಿ ಚತುರ್ಮುಖನಿಂದ ವಾಯುದೇವನ ಧರ್ಮಾಭಿಮಾನಿರೂಪದ ಸೃಷ್ಟಿ ಹಾಗೂ ಅದರ ಕಾರ್ಯಾಚರಣೆಯ ಮಾಹಿತಿ ನಿರೂಪಿತವಾಗಿದೆ.

೧೫. ಕ್ಷತ್ರಿಯಜಾತಿಗೆ ಅಭಿಮಾನಿ ವಾಯುವಿನಿಂದ ಕ್ಷತ್ರಿಯರಲ್ಲಿ ಆವೇಶ:

– 'ಕ್ಷತ್ರಿಯೇಣ ಕ್ಷತ್ರಿಯಃ' –ಎಂಬ ಮಾತಿನಲ್ಲಿ [3-5-9] ಕ್ಷತ್ರಿಯಜ್ಞಾತ್ಯಭಿಮಾನಿ ವಾಯುದೇವ ದೇವತೆಗಳಲ್ಲಿ ಕ್ಷತ್ರಿಯರಾದ ಗರುಡಾದಿಗಳಲ್ಲೂ, ಮನುಷ್ಯರಲ್ಲಿ ಕ್ಷತ್ರಿಯರಾದ ರಾಜಾದಿಗಳಲ್ಲೂ ಆವೇಶಗೊಂಡಿದ್ದು ನಿರೂಪಿತವಾಗಿದೆ.

೧೬. ಚತುರ್ಮುಖ ತನ್ನ ಪ್ರಾಣದಿಂದ ಪುತ್ರನನ್ನಾಗಿ ವಾಯುವನ್ನು ಪಡೆದ:

– 'ಆತ್ಮೇವೇದಮಗ್ರ ಆಸೀತ್' –ಎಂಬ ಭಾಗವನ್ನು [3-5-11] ಚತುರ್ಮುಖನ ಪರವಾಗಿ ವ್ಯಾಖ್ಯಾನಿಸಿದಾಗ, 'ಪ್ರಾಣಃ ಪ್ರಜಾ' ಎಂಬ ಮಾತಿನಲ್ಲಿ [3-5-11] ಚತುರ್ಮುಖನು ತನ್ನ ಮಾನಸಯಜ್ಞದ ಫಲವಾಗಿ ತನ್ನ ಪ್ರಾಣದಿಂದ ವಾಯುವನ್ನು ಪಡೆದನೆಂದು ಬಂದಿದೆ.

೧೭. ಸಪ್ತಾನ್ನಗಳ ಸೃಷ್ಟಿಯನ್ನು ತಿಳಿಸುತ್ತ ಭಗವಂತನ ಪ್ರಾಣರೂಪದಿಂದ ಪ್ರಾಣನ ಜನನ, ಆದುದರಿಂದಲೇ ಅವನಿಗೆ ಪ್ರಾಣಾಭಿಮಾನಿತ್ವ:

– 'ಏತನ್ಮಯೋ ವಾ ಅಯಮಾತ್ಮಾ' [3-6-9] ಈ ಮಾತಿನಲ್ಲಿ ಪರಮಾತ್ಮನು ಮನೋ ವಾಕ್‌ಪ್ರಾಣರೂಪನು. ಆದ್ದರಿಂದ ಬ್ರಹ್ಮಸರಸ್ವತಿಮುಖ್ಯಪ್ರಾಣರು ಅವನ ಮನೋವಾಕ್‌ಪ್ರಾಣದಿಂದ ಹುಟ್ಟಿದರು. ಆದ್ದರಿಂದಲೇ ಅವರಿಗೆ ಕ್ರಮೇಣ ಮನೋವಾಕ್ ಪ್ರಾಣಾಭಿಮಾನಿತ್ವ ಎಂದು ಪ್ರತಿಪಾದಿಸಲಾಗಿದೆ.

೧೮. ಲೋಕಗಳಲ್ಲಿ ಸ್ವರ್ಗಲೋಕಕ್ಕೆ ವೇದಗಳಲ್ಲಿ ಸಾಮವೇದಕ್ಕೆ ಜೀವರಲ್ಲಿ ಮನುಷ್ಯರಿಗೆ, ಪಿತೃಮಾತೃಪ್ರಜೆಗಳಲ್ಲಿ ಮುಖ್ಯಪ್ರಾಣ ಪ್ರಜೆಗಳಿಗೆ ಅಭಿಮಾನಿ ವಿಜ್ಞಾನಕ್ಕೆ ವಿಷಯವಾಗದಿರುವುದು ಅವನ ಪ್ರತಿಮೆ:

– **'ತ್ರಯೋ ಲೋಕಾ ಏತ ಏವ....... ಪ್ರಾಣ ಏನಂ ತದ್ ಭೂತ್ವಾವತಿ'** –ಎಂಬ ಭಾಗದಲ್ಲಿ [3-6-10.....14] ಬ್ರಹ್ಮ, ಸರಸ್ವತಿ ಹಾಗೂ ಪ್ರಾಣದೇವ ಯಾವ್ಯಾವುದಕ್ಕೆ ಅಭಿಮಾನಿಯಾಗಿರುವರೆಂಬುದನ್ನು ತಿಳಿಸುತ್ತ ಲೋಕಗಳಲ್ಲಿ ಸ್ವರ್ಗಲೋಕಕ್ಕೂ, ವೇದಗಳಲ್ಲಿ ಸಾಮವೇದಕ್ಕೂ, ದೇವಪಿತೃಮನುಷ್ಯರಲ್ಲಿ ಮನುಷ್ಯರಿಗೂ, ಪಿತೃ, ಮಾತೃಪ್ರಜೆಗಳಲ್ಲಿ ಪ್ರಜೆಗಳಿಗೂ, ಮುಖ್ಯಪ್ರಾಣ ಅಭಿಮಾನಿ ಎಂದು ಪ್ರತಿಪಾದಿಸಲಾಗಿದೆ. ವಿಜ್ಞಾನಕ್ಕೆ ವಿಷಯ ವಾಗದಿರುವುದು ಪ್ರಾಣನ ಪ್ರತಿಮೆ; ಯಾಕೆಂದರೆ ಅವನು ಅದಕ್ಕೆ ಅಭಿಮಾನಿ ಎಂದು ಪ್ರತಿ ಪಾದಿಸಲಾಗಿದೆ.

**೧೯. ವಾಣೀಬ್ರಹ್ಮರಿಂದ ಪ್ರಾಣನ ಜನನ ಹಾಗೂ ಪ್ರಾಣನ ಶತ್ರುರಾಹಿತ್ಯದ ಸಮರ್ಥನೆ:**

– **'ತೌ ಮಿಥುನಂ ಸಮೇತಾಂ...... ಯ ಏವಂ ವೇದ'** ಈ ಭಾಗದಲ್ಲಿ [3-6-18] ವಾಣೀಬ್ರಹ್ಮರಿಂದ ಪ್ರಾಣನ ಜನನವನ್ನು ತಿಳಿಸಿ, ಆ ಪ್ರಾಣನ ಶತ್ರು ರಾಹಿತ್ಯವನ್ನು ಸಮರ್ಥಿಸಲಾಗಿದೆ.

**೨೦. ವಾಣೀಬ್ರಹ್ಮಪ್ರಾಣರ ಉಪಾಸನೆಯ ವೈಶಿಷ್ಟ್ಯ ಮತ್ತು ಫಲ:**

– **'ಅಥೈತಸ್ಯ ಪ್ರಾಣಸ್ಯ..... ಲೋಕಂ ಜಯತಿ'** –ಈ ಭಾಗದಲ್ಲಿ [3-6-19] ವಾಣೀ ಬ್ರಹ್ಮಪ್ರಾಣರು ಗುಣದ ವಿಷಯದಲ್ಲಿ ತಾರತಮ್ಯವುಳ್ಳವರಾಗಿದ್ದರೂ, ವ್ಯಾಪ್ತಿ ಯಲ್ಲಿ ಸಮರೆಂದು ತಿಳಿಸಿ ಈ ಮೂವರನ್ನೂ ಉಳಿದವರಿಗಿಂತ ಬಹುಗುಣ ವುಳ್ಳವರನ್ನಾಗಿ ಉಪಾಸಿಸಿದರೆ ಮೋಕ್ಷ ದೊರಕುವುದೆಂದು ತಿಳಿಸಲಾಗುವುದು.

**೨೧. ಚಂದ್ರನಲ್ಲಿರುವ ಪ್ರಾಣನ ಉಪಾಸನೆ:**

– **'ಸ ಏಷ ಸಂವತ್ಸರಃ....... ಅಪಚಿತ್ಯೈ'** –ಈ ಭಾಗದಲ್ಲಿ [3-6-20, 21] ಚಂದ್ರನಲ್ಲಿ ಸಂವತ್ಸರ, ಪ್ರಜಾಪತಿ ಎಂಬ ಹೆಸರುಗಳಿಂದ ಇರುವ ಭಗವಂತನ ಉಪಾಸನೆ ಹಾಗೂ ಕಲೆಗಳಿಗೆ ಪ್ರಾಣದೇವನ ಸಂಪರ್ಕದಿಂದಾಗಿ ರಾತ್ರಿ ಎಂಬ ಹೆಸರು ಬಂದ ಹಿನ್ನೆಲೆ –ಇವುಗಳ ಮಾಹಿತಿ ಬಂದಿದೆ.

**೨೨. ಸಪ್ತಾನ್ನ ಸೃಷ್ಟಿಜ್ಞಾನಿಯಲ್ಲಿರುವ ಪ್ರಾಣ:**

– **'ಯೋ ವೈ ಸಂವತ್ಸರಃ........ ತದಾಹುಃ'** –ಎಂಬ ಭಾಗದಲ್ಲಿ [3-6-22] ಸಪ್ತಾನ್ನ ಸೃಷ್ಟಿಯ ಜ್ಞಾನಿಯಲ್ಲಿರುವ ಮುಖ್ಯಪ್ರಾಣನ ಹದಿನೈದು ಕಲೆಗಳು, ಪದಿನಾರನೇ ಕಲೆ, ಧ್ರುವಕಲೆ ಇತ್ಯಾದಿ ಮಾಹಿತಿ ಬಂದಿದೆ.

**೨೩. ದೈವಪ್ರಾಣನ ಆವೇಶದ ಪ್ರಭಾವ:**

– **'ಅಥೋ ನ ಶೋಚತಿ..... ಅಥೋ ನ ರಿಷ್ಯತಿ'** –ಎಂಬ ಭಾಗದಲ್ಲಿ [3-6-26, 27] ಪ್ರಾಣಾಭಿಮಾನಿಯಾದ ಮುಕ್ತ ದೈವಪ್ರಾಣನು ಮುಕ್ತರ ಪ್ರಾಣವನ್ನು ಪ್ರವೇಶಿಸುವುದರಿಂದಾಗಿ ಮುಕ್ತರಿಗಾಗುವ ಪ್ರಯೋಜನ.

೨೪. ವ್ಯಾಪ್ತಿಯ ವಿಷಯದಲ್ಲಿ ಹಾಗೂ ಗೋಪ್ಯತ್ವದ ವಿಷಯದಲ್ಲಿ ಮುಖ್ಯಪ್ರಾಣನ ದೃಷ್ಟಾಂತ:

– 'ಸ ಯ ಏವಂವಿತ್..... ಭೂತಾನಿ ಅವಂತಿ' –ಎಂಬ ಭಾಗದಲ್ಲಿ [3-6-27] ಸಪ್ತಾನ್ನವಿದ್ಯೆಯನ್ನು ತಿಳಿದವನು ಎಲ್ಲ ಪ್ರಾಣಿಗಳಲ್ಲಿ ವ್ಯಾಪ್ತನಾಗಿರುವುದಕ್ಕೆ ದೃಷ್ಟಾಂತ ಮುಖ್ಯಪ್ರಾಣ ಎಲ್ಲ ಪ್ರಾಣಿಗಳಲ್ಲಿ ಹೇಗೆ ವ್ಯಾಪ್ತನಾಗಿದ್ದಾನೋ ಹಾಗೆ. ಸಪ್ತಾನ್ನವಿದ್ಯಾ ಭಿಜ್ಞನಾದ ಮುಕ್ತನನ್ನು ಎಲ್ಲ ಜೀವರು ರಕ್ಷಿಸುವರೆಂಬು ದಕ್ಕೆ ದೃಷ್ಟಾಂತ– ಮುಖ್ಯಪ್ರಾಣನ ಸ್ವರೂಪಜ್ಞಾನವು ಅತ್ಯಂತ ಗೋಪ್ಯವಾದು ದರಿಂದ ಅಯೋಗ್ಯರಿಗೆ ಮುಖ್ಯಪ್ರಾಣನನ್ನು ಉಪದೇಶಿಸದೆ ಜೀವರು ರಕ್ಷಿಸುವಂತೆ.

೨೫. ದೇವತೆಗಳ ಸ್ಪರ್ಧೆಯಲ್ಲಿ ಪ್ರಾಣನಿಗೆ ಜಯ:

– 'ಪ್ರಜಾಪತಿರ್ಹ ಕರ್ಮಾಣಿ ಸಸೃಜೇ........ದೇವತಾ ಯದ್ ವಾಯುಃ' –ಎಂಬ ಭಾಗದಲ್ಲಿ [3-6-28, 29] ಅಧ್ಯಾತ್ಮದಲ್ಲಿ ಹಾಗೂ ಅಧಿದೈವದಲ್ಲಿ ದೇವತೆಗಳಲ್ಲಿ ನಡೆದ ಸ್ಪರ್ಧೆಯಲ್ಲಿ ಮುಖ್ಯಪ್ರಾಣನ ಜಯವನ್ನು ತಿಳಿಸಲಾಗಿದೆ.

೨೬. ಮುಖ್ಯಪ್ರಾಣನ ಶ್ರೇಷ್ಠತ್ವಕ್ಕೆ ಮಂತ್ರಗಳ ಸಂವಾದ ಹಾಗೂ ಮುಖ್ಯಪ್ರಾಣನ ಬಗ್ಗೆ ವ್ರತಗಳು:

– 'ಅಥೈಷ ಶ್ಲೋಕೋ ಭವತಿ...... ಸಲೋಕತಾಂ ಜಯತಿ' –ಎಂಬ ಭಾಗದಲ್ಲಿ [3-6-30] ಸೂರ್ಯನ ಉದಯಾದಿಗಳಲ್ಲಿ ಮುಖ್ಯಪ್ರಾಣನ ಪಾತ್ರವನ್ನು ತಿಳಿಸುವ ಮಂತ್ರದ ಉಲ್ಲೇಖ ನಡೆದಿದೆಯಲ್ಲದೆ, ಮುಖ್ಯಪ್ರಾಣನ ಪ್ರೀತಿಗಾಗಿ ದೇವಾದಿಗಳು ನಡೆಸುವ ವ್ರತಗಳ ವಿಚಾರವೂ ಪ್ರಸ್ತುತವಾಗಿದೆ.

೨೭. ಕರ್ಮಗಳ ಬಗ್ಗೆ ಮುಖ್ಯಪ್ರಾಣನ ಪ್ರಭುತ್ವ:

– 'ಅಥ ಕರ್ಮಣಾಮಾತ್ಮೇತಿ....... ಬಿಭರ್ತಿ' –ಎಂಬ ಭಾಗದಲ್ಲಿ [3-7-3] ಮುಖ್ಯಪ್ರಾಣನಿಗೆ ಕರ್ಮದ ಕುರಿತಾದ ಪ್ರಭುತ್ವವನ್ನು ವಿವರಿಸಲಾಗಿದೆ.

೨೮. ರುದ್ರಭಾರತಿಯ ಧಾರಣೆ ಮುಖ್ಯಪ್ರಾಣನಿಂದ:

– 'ತದೇತತ್ ತ್ರಯಂ ಸದೇತಂ........ ಪ್ರಾಣಶ್ಛನ್ನಃ' –ಎಂಬ ಭಾಗದಲ್ಲಿ [3-7-3] ನಾಮಗಳಿಗೆ ದೇವತೆಯಾದ ಭಾರತಿಯೂ ರೂಪಗಳಿಗೆ ದೇವತೆಯಾದ ರುದ್ರನೂ ಪ್ರಾಣ ದೇವನಿಂದಲೇ ಧರಿಸಲ್ಪಟ್ಟಿರುವ ವಿಚಾರ ಬಂದಿದೆ.

೨೯. ವಾಯ್ವಂತರ್ಗತ ವಿಷ್ಣುವಿನ ಉಪಾಸನೆ:

– 'ಯ ಏವಾಯಂ ವಾಯೌ........ ಅನ್ಯತಸ್ತ್ಯಜಾಯೀ' –ಎಂಬ ಭಾಗದಲ್ಲಿ [4-1-6] ವಾಯುಪ್ರತೀಕದಲ್ಲಿ ವಿಷ್ಣುವಿನ ಉಪಾಸನೆಯನ್ನು ತಿಳಿಸಲಾಗಿದೆ.

**೩೦. ಕರುವಿನ ರೂಪದಲ್ಲಿ ಮುಖ್ಯಪ್ರಾಣನ ಉಪಾಸನೆ:**

– **'ಯೋ ಹ ವೈ ಶಿಶುಂ.......... ಅನ್ನಂ ದಾಮ'** –ಎಂಬ ಭಾಗದಲ್ಲಿ [4-2-1] ಮುಖ್ಯ ಪ್ರಾಣನನ್ನು ಕರು ಎಂದು ನಡೆಸುವ ಉಪಾಸನೆಯ ವಿವರಣೆಯನ್ನೂ, ಅದರ ಫಲವನ್ನೂ ನೀಡಲಾಗಿದೆ.

**೩೧. ಮುಖ್ಯಪ್ರಾಣನನ್ನು ಬಲಗಣ್ಣಿನ ಬೇರೆಬೇರೆ ಭಾಗಗಳಲ್ಲಿ ಬೇರೆಬೇರೆ ದೇವತೆಗಳಿಂದ ಉಪಾಸನೆ:**

– **'ತಮೇತಾಃ ಸಪ್ತಾಕ್ಷಿತಯಃ........ ಯ ಏವಂ ವೇದ'** –ಎಂಬ ಭಾಗದಲ್ಲಿ [4-2-2] ರುದ್ರ, ಪರ್ಜನ್ಯ, ಅಗ್ನಿ, ಇಂದ್ರ ಮುಂತಾದವರು ಮುಖ್ಯಪ್ರಾಣನನ್ನು ಬಲಗಣ್ಣಿನ ಯಾವ ಯಾವ ಭಾಗದಲ್ಲಿ ಉಪಾಸನೆ ಮಾಡುವರು? ಅದರ ಫಲ ಏನು? –ಎಂಬ ವಿವರಣೆ ಬಂದಿದೆ.

**೩೨. ಕಣ್ಣಿನಲ್ಲಿ ಮುಖ್ಯಪ್ರಾಣನ ಉಪಾಸನೆಗೆ ಮಂತ್ರದ ಸಮ್ಮತಿ:**

– **'ತದೇಷ ಶ್ಲೋಕೋ ಭವತಿ........ ಸಂವಿತ್ತಾ'** –ಎಂಬ ಭಾಗದಲ್ಲಿ [4-2-3] ಕಣ್ಣಿನಲ್ಲಿರುವ ವಾಯುದೇವನ ಉಪಾಸನೆಯ ಬಗ್ಗೆ ಮಂತ್ರವೊಂದನ್ನು ಸಂವಾದವಾಗಿ ನೀಡಲಾಗಿದೆಯಲ್ಲದೆ, ಅದರ ಅರ್ಥವಿವರಣೆಯನ್ನೂ ಮಾಡಲಾಗಿದೆ.

**೩೩. ಭಗವಂತನ ಮೂರ್ತಾಮೂರ್ತರೂಪಗಳ ನಿರೂಪಣೆಯಲ್ಲಿ ವಾಯುದೇವನ ಪ್ರಸ್ತಾವ:**

– **'ದ್ವೇ ವಾವ ಬ್ರಹ್ಮಣೋ ರೂಪೇ...... ಸತೋ ಹ್ಯೇಷ ರಸಃ'** –ಎಂಬ ಭಾಗದಲ್ಲಿ [4-3-1,2]ಭಗವಂತನ ಮೂರ್ತರೂಪವು ಲಕ್ಷ್ಮೀ ಮತ್ತು ಪ್ರಾಣದೇವರಿಗಿಂತ ಬೇರೆ ಎಂದೂ, ಅಮೂರ್ತರೂಪವು ವಾಯು ಮತ್ತು ಲಕ್ಷ್ಮೀದೇವಿ ಎಂದೂ ಅದೇ ಅಮೃತ, ಯತ್ ಇತ್ಯಾದಿಯಾಗಿ ಹೇಳಲ್ಪಡುವುದೆಂದೂ ತಿಳಿಸಲಾಗಿದೆ.

**೩೪. ವಾಯುದೇವ ಭಗವದಧೀನನೆಂದು ತಿಳಿಯದವರಿಗೆ ದಂಡನೆ:**

– **'ಕ್ಷತ್ರಂ ತಂ ಪರಾದಾದ್.......'** –ಎಂಬ ಭಾಗದಲ್ಲಿ [ಬೃ.ಉ. 4-4-6] ತಿಳಿಸಿರುವಂತೆ ಕ್ಷತ್ರಿಯಾಭಿಮಾನಿ ವಾಯುದೇವನನ್ನು ಭಗವದಧೀನ ಎಂದು ತಿಳಿಯದೆ ಇದ್ದಲ್ಲಿ ಅಂತಹವರನ್ನು ಅಂಧಂತಮಸ್ಸಿನಲ್ಲಿ ಬೀಳಿಸಲಾಗುವುದು –ಎಂದು ತಿಳಿಸಲಾಗುವುದು.

**೩೫. ಗುಡುಗಿನಲ್ಲಿರುವ ಮುಖ್ಯವಾಯು:**

– **'ಅಯಂ ಸ್ತನಯಿತ್ನುಃ.......... ಇದಂ ಸರ್ವಮ್'** –ಎಂಬ ಭಾಗದಲ್ಲಿ [4-5-9] ಗುಡುಗಿನಲ್ಲಿರುವ ಮುಖ್ಯಪ್ರಾಣ ಎಲ್ಲ ಪ್ರಾಣಗಳ ಪಾಲಿಗೆ ಜೇನಿನಂತೆ; ಎಲ್ಲ ಪ್ರಾಣಗಳು ಮುಖ್ಯಪ್ರಾಣನ ಪಾಲಿಗೆ ಜೇನಿನಂತೆ. ಮುಖ್ಯಪ್ರಾಣನಲ್ಲಿರುವ ಭಗವದ್ರೂಪವೂ ಶರೀರದಲ್ಲಿ ಅಂತರ್ಯಾಮಿಯಾಗಿರುವ ಭಗವದ್ರೂಪವೂ ಒಂದೇ....... ಇತ್ಯಾದಿ ಇದೆ.

**೩೬. ಸತ್ಯಾಭಿಮಾನಿ ವಾಯು:**

– **'ಇದಂ ಸತ್ಯಂ ಸರ್ವೇಷಾಂ....... ಇದಂ ಸರ್ವಮ್'** –ಎಂಬ ಭಾಗದಲ್ಲಿ [4-5-12] ಸತ್ಯಾಭಿಮಾನಿ ವಾಯುದೇವ ಯಾಕೆ ಮಧು ಎನಿಸುವನೆಂಬುದೇ ಮುಂತಾದ ವಿಷಯಗಳ ಪ್ರಸ್ತಾವವಿದೆ.

**೩೭. ವಾಯುನಲ್ಲಿರುವ ಪ್ರದ್ಯುಮ್ನನೇ ಮುಕ್ತಿಪ್ರದ:**

– ಯಜಮಾನನು ಶುಕ್ಲಪಕ್ಷಾದಿಗಳ ವಿಕಾರವನ್ನು ತಪ್ಪಿಸಿ ಯಾವ ಉಪಾಯದಿಂದ ಮುಕ್ತಿಯನ್ನು ಪಡೆಯುವನೆಂಬ ಯಾಜ್ಞವಲ್ಕ್ಯರ ಪ್ರಶ್ನೆಗೆ ಆಶ್ವಲರು **'ಉದ್ಗಾತ್ರಾ ಋತ್ವಿಜಾ ವಾಯುನಾ ಪ್ರಾಣೇನ........ ಸ ಮುಕ್ತಿಃ ಸಾಽತಿಮುಕ್ತಿಃ'** –ಎಂಬ ಭಾಗದಲ್ಲಿ [5-1-6] ವಾಯ್ವಂತರ್ಯಾಮಿ ಪ್ರದ್ಯುಮ್ನನನ್ನು ಮುಕ್ತಿಪ್ರದನನ್ನಾಗಿ ತಿಳಿಸಲಾಗಿದೆ.

**೩೮. ಮುಕ್ತಮನ್ಮಥರನ್ನು ಮುಕ್ತಇಂದ್ರರಲ್ಲಿಗೆ ಕೊಂಡೊಯ್ಯುವವನು:**

– ಮುಕ್ತಮನ್ಮಥರು ಎಲ್ಲಿರುವರೆಂಬ ಭುಜ್ಯುವಿನ ಪ್ರಶ್ನೆಗೆ ಯಾಜ್ಞವಲ್ಕ್ಯರು ಉತ್ತರಿಸುತ್ತ **'ತಾನಿಂದ್ರಃ ಸುಪರ್ಣೋ ಭೂತ್ವಾ....... ಇತ್ಯೇವಮಿವ ವೈ'** –ಎಂಬ ಮಾತಿನಲ್ಲಿ [5-3-2] ಗರುಡನು ಮುಕ್ತ ಮನ್ಮಥರನ್ನು ವಾಯುವಿನಲ್ಲಿ ನೀಡುವನು. ವಾಯುದೇವ ಅವರನ್ನು ಮುಕ್ತ ಇಂದ್ರರಿರುವಲ್ಲಿಗೆ ಕಳುಹಿಸು ವನೆಂದು ವಾಯುದೇವನಿಗೆ ಮನ್ಮಥರ ಮುಕ್ತಿಪ್ರದಾನದಲ್ಲಿಯ ಪಾತ್ರವನ್ನು ತಿಳಿಸಲಾಗುವುದು.

**೩೯. ವಾಯುರೇವ ವ್ಯಷ್ಟಿಃ ವಾಯುರೇವ ಸಮಷ್ಟಿ:**

– ಮನ್ಮಥರಿಗೆ ಮುಕ್ತಿಯನ್ನು ನೀಡುವಲ್ಲಿ ವಾಯುದೇವನ ಪಾತ್ರವನ್ನು ತಿಳಿಸಿ, ಆದುದರಿಂದಲೇ ವಾಯುದೇವ ದೇವತೆಗಳೇ ಮುಂತಾದ ವಿವಿಧವಾದ ಅಷ್ಟಕ ವನ್ನು ಪ್ರೇರಿಸುವನೆಂದು ವ್ಯಷ್ಟಿ ಎಂದೂ, ಸಂಪೂರ್ಣರಾದ ಗರುಡಾದಿಗಳನ್ನೂ ಎತ್ತರಕ್ಕೆ ಏರಿಸುವನೆಂದು ಸಮಷ್ಟಿ ಎಂದೂ **'ತಸ್ಮಾದ್ವಾಯುರೇವ ವ್ಯಷ್ಟಿಃ......... ಯ ಏವಂ ವೇದ'** –ಎಂಬ ಭಾಗದಲ್ಲಿ [5-3-2] ತಿಳಿಸಲಾಗಿದೆ.

**೪೦. ಮುಖ್ಯಪ್ರಾಣನ ಪಂಚರೂಪಗಳ ನಿಯಂತ್ರಣ:**

– ಯಾಜ್ಞವಲ್ಕ್ಯರು ಉಷಸ್ತನಿಗೆ ಸರ್ವನಿಯಾಮಕ ಭಗವಂತನನ್ನು ಪರಿಚಯಿಸುತ್ತ ಮುಖ್ಯಪ್ರಾಣನ ಪ್ರಾಣಾಪಾನಾದಿ ಐದು ರೂಪಗಳು ಆಯಾ ಚಟುವಟಿಕೆ ಯನ್ನು ನಡೆಸು ವಂತೆ ನಿಯಮಿಸುವವನೆಂದು **'ಯಃ ಪ್ರಾಣೇನ ಪ್ರಾಣಿತಿ ........ ಆತ್ಮಾ ಸರ್ವಾಂತರಃ'** –ಎಂಬ ಭಾಗದಲ್ಲಿ [5-4-1] ತಿಳಿಸಲಾಗಿದೆ.

**೪೧. ವಾಯುದೇವನೇ ಸೂತ್ರ:**

– ಲೋಕಾಧಾರಕನ ಬಗ್ಗೆ ಯಾಜ್ಞವಲ್ಕ್ಯರು ತಿಳಿಸುತ್ತ **'ವಾಯುರ್ವೈ ಗೌತಮ ತತ್ ಸೂತ್ರಮ್.......... ಏವಮ್ಯೈತದ್'** –ಎಂಬ ಭಾಗದಲ್ಲಿ [5-7-2] ವಾಯುದೇವನ 'ಸೂತ್ರ ವ್ಯಕ್ತಿತ್ವ'ವನ್ನು ಸಮರ್ಥಿಸಿರುವರು.

**೪೨. ಮುಖ್ಯಪ್ರಾಣನ ಅಂತರ್ಯಾಮಿ:**

– ಅಂತರ್ಯಾಮಿ ಬ್ರಾಹ್ಮಣದ **'ಯೋ ವಾಯೌ ತಿಷ್ಠನ್...... ಅಂತರ್ಯಾಮ್ಯಮೃತಃ'** –ಎಂಬ ಭಾಗದಲ್ಲಿ [5-7-7] ಭಗವಂತನು ಹೇಗೆ ಮುಖ್ಯಪ್ರಾಣನಲ್ಲಿ ಅಂತರ್ಯಾಮಿಯಾಗಿ ಅನುಗ್ರಹಿಸುವನೆಂದು ಸ್ಪಷ್ಟಪಡಿಸಲಾಗಿದೆ.

**೪೩. ಉಪನಿಷತ್ತು ಉಲ್ಲೇಖಿಸುವ ಅಷ್ಟವಸುಗಳಲ್ಲಿ ಮುಖ್ಯಪ್ರಾಣನೂ ಒಬ್ಬನು:**

– **'ಕತಮೇ ವಸವ ಇತಿ'** –ಎಂಬ ಶಾಕಲ್ಯರ ಪ್ರಶ್ನೆಗೆ **'ಅಗ್ನಿಶ್ಚ ಪೃಥಿವೀ ಚ ವಾಯುಶ್ಚಾಂತರಿಕ್ಷಂ ಚ........'** –ಎಂಬ ಮಾತಿನಲ್ಲಿ [5-9-3] ಮುಖ್ಯಪ್ರಾಣನನ್ನು ವಸುಗಳಲ್ಲಿ ಒಬ್ಬನನ್ನಾಗಿ ಪರಿಚಯಿಸಿಕೊಟ್ಟು ಯಾಜ್ಞವಲ್ಕ್ಯರು, ಅಂತಹ ವಾಯುವಿನಲ್ಲಿ ಜಗತ್ತು ಸುರಕ್ಷಿತವಾಗಿದೆ ಎಂದು 'ವಸು'ನಾಮದ ಅನ್ವರ್ಥಕತೆಯನ್ನು ಸೂಚಿಸಿರುವರು.

**೪೪. ಆರು ಶ್ರೇಷ್ಠದೇವತೆಗಳಲ್ಲಿ ಮುಖ್ಯವಾಯು ಒಬ್ಬ:**

– **'ಕತಮೇ ಷಳಿತಿ........ ಸರ್ವಂ ಷಳಿತಿ'** –ಎಂಬ ಮಾತಿನಲ್ಲಿ [5-9-7] ಉಲ್ಲೇಖಿಸಲಾದ ಆರು ಶ್ರೇಷ್ಠ ದೇವತೆಗಳಲ್ಲಿ ಮುಖ್ಯವಾಯುವೂ ಒಬ್ಬನಾಗಿ ಪರಿಗಣಿತವಾಗಿರುವನು. ಐಶ್ವರ್ಯಾದಿ ಆರು ಗುಣಗಳು ಅವನಲ್ಲಿ ಇತರ ದೇವತೆಗಳಿಗಿಂತ ಅಧಿಕ ಇರುವುದಾಗಿ ತಿಳಿಸಲಾಗಿದೆ.

**೪೫. ಶ್ರೇಷ್ಠ ಮೂರು ದೇವತೆಗಳಲ್ಲಿ ಒಬ್ಬ ವಾಯುದೇವ:**

– **'ಕತಮೇ ತೇ....... ಸರ್ವೇ ದೇವಾ ಇತಿ'** –ಎಂಬ ಮಾತಿನಲ್ಲಿ [5-9-8] ಆರು ದೇವತೆಗಳಲ್ಲೂ ಶ್ರೇಷ್ಠರೆಂದು ಪರಿಗಣಿತರಾದ ಮೂರು ದೇವತೆಗಳಲ್ಲಿ ವಾಯುದೇವನೂ ಒಬ್ಬ.

**೪೬. ಇಬ್ಬರು ದೇವತೆಗಳಲ್ಲಿ ಒಬ್ಬ ವಾಯು:**

– **'ಕತಮೌ........ ಪ್ರಾಣಶ್ಚೇತಿ'** –ಎಂಬ ಮಾತಿನಲ್ಲಿ [5-9-8] ಮೂವರಲ್ಲೂ ಶ್ರದ್ಧಾ ದೇವಿಯ ಜೊತೆಗೆ ಮುಖ್ಯಪ್ರಾಣ ಶ್ರೇಷ್ಠನಾಗಿ ಪರಿಗಣಿತವಾಗಿರುವನು.

**೪೭. ವಾಯುದೇವ ಅಧ್ಯರ್ಧ:**

– **'ಕತಮೋಽಧ್ಯರ್ಧ ಇತಿ.......... ತೇನಾಧ್ಯರ್ಧ ಇತಿ'** –ಎಂಬ ಭಾಗದಲ್ಲಿ [5-9-9] ಗುಣಸಮೃದ್ಧಿಯಿಂದಲೂ, ಭಗವಂತನ ಅತ್ಯಂತ ಪ್ರೀತಿಗೆ

ಪಾತ್ರನಾದುದರಿಂದಲೂ ವಾಯುದೇವ ಅಧ್ಯರ್ಧ ಎನಿಸಿರುವನೆಂದು ಪ್ರತಿ ಪಾದಿಸಲಾಗಿದೆ.

೪೮. **ಸರ್ವಜೀವಾಭಿಮಾನಿ ಸ್ವಾಯಂಭುವಮನುವಿಗೆ ನಿಯಾಮಕ ದೇವತೆ ವಾಯು:**

– 'ಸರ್ವಜೀವಾಭಿಮಾನಿಯಾಗಿ ಸ್ವಾಯಂಭುವಮನುವನ್ನು ಪ್ರಸ್ತಾವಿಸಿ, '**ತಸ್ಯ ಕಾ ದೇವತಾ ಅಮೃತಮಿತಿ ಹೋವಾಚ**' –ಎಂಬ ಭಾಗದಲ್ಲಿ [5-9-10] ಸ್ವಾಯಂಭುವಮನುವಿಗೆ ನಿಯಾಮಕ ದೇವತೆಯನ್ನಾಗಿ ವಾಯುದೇವನನ್ನು ತಿಳಿಸಲಾಗಿದೆ.

೪೯. **ಸೂರ್ಯನಿಯಾಮಕನಾಗಿ 'ಅಸು'ನಾಮಕ ವಾಯು:**

– ಸಮಸ್ತ ಜೀವಸಮುದಾಯಕ್ಕೆ ಉತ್ತಮ ಆಶ್ರಯನಾದ, ಕನ್ನಡಿಯಲ್ಲಿರುವ ಕನ್ನಡಿಯ ಅಭಿಮಾನಿಯಾದ ಸೂರ್ಯನನ್ನು ಪ್ರಸ್ತಾವಿಸಿ '**ತಸ್ಯ ಕಾ ದೇವತಾ । ಅಸುರಿತಿ ಹೋವಾಚ**' –ಎಂಬ ಭಾಗದಲ್ಲಿ [5-9-15] ಸೂರ್ಯನಿಗೆ ವಾಯುದೇವ ಜೀವಾಂತರ್ಗತ ಅಸುರೂಪದಿಂದ ನಿಯಾಮಕನಾಗಿರುವನೆಂದು ತಿಳಿಸಲಾಗಿದೆ.

೫೦. **ಅಪಾನನಾಮಕ ಭಾರತಿಗೆ ವ್ಯಾನನಾಮಕ ವಾಯು ಆಶ್ರಯ, ವಾಯುವಿಗೆ ಉದಾನನಾಮಕ ಶ್ರೀದೇವಿ ಆಶ್ರಯ:**

– ಬೇರೆಬೇರೆ ದೇವತೆಗಳಿಗೆ ತಮಗಿಂತ ಉತ್ತಮರ ಆಶ್ರಯವನ್ನು ತಿಳಿಸುತ್ತ '**ಕಸ್ಮಿನ್ ಅಪಾನ......... ಉದಾನ ಇತಿ**' –ಎಂಬ ಭಾಗದಲ್ಲಿ [5-9-26] ಭಾರತಿಗೆ ವಾಯುದೇವನೂ ವಾಯುದೇವನಿಗೆ ಶ್ರೀದೇವಿಯೂ ಆಶ್ರಯರೆಂದು ಪ್ರತಿ ಪಾದಿಸಲಾಗಿದೆ.

೫೧. **ಪ್ರಾಣನಾಮಕ ಭಗವಂತನ ಸ್ಥಾನ ಪ್ರಾಣಾಪಾನಾದಿ ಪಂಚರೂಪಗಳುಳ್ಳ ವಾಯುದೇವ:**

– ಯಾಜ್ಞವಲ್ಕ್ಯರು ಪ್ರಾಣನಾಮಕ ಭಗವಂತನ ಪರಿಚಯವನ್ನು ನೀಡುತ್ತ '**ಪ್ರಾಣ ಏವಾಯತನಮ್**' –ಎಂಬ ಭಾಗದಲ್ಲಿ [6-1-4] ಪ್ರಾಣಾಪಾನಾದಿ ಪಂಚ ರೂಪಗಳುಳ್ಳ ವಾಯುವೇ ಪ್ರಾಣನಾಮಕ ಬ್ರಹ್ಮನ ಸ್ಥಾನ ಎಂದಿರುವರು.

೫೨. **ಪ್ರಾಣಸ್ಥವಿಷ್ಣುವಿನ ಪ್ರೀತಿಗಾಗಿಯೇ ಭೋಜನಾದಿಗಳ ಸಾಧನಾದಿಗಳ ಸಂಪಾದನೆಯ ಪ್ರವೃತ್ತಿ:**

– 'ಪ್ರಾಣನಾಮಕ ಬ್ರಹ್ಮನನ್ನು ಉಪದೇಶಿಸಿದ ಯಾಜ್ಞವಲ್ಕ್ಯರು, ಬ್ರಹ್ಮನನ್ನು 'ಪ್ರಿಯ' ಎಂದು ಉಪಾಸನೆ ನಡೆಸಲು ತಿಳಿಸಿ '**ಪ್ರಾಣಸ್ಯ ವೈ ಸಮ್ರಾಟ್ ಕಾಮಾಯಾಯಾಜ್ಯಂ ಯಾಜಯತಿ......**' ಮುಂತಾದ ಮಾತುಗಳಿಂದ [6-1-4] ಪ್ರಾಣಸ್ಥ ವಿಷ್ಣುವಿನ ಪ್ರೀತಿ ಗಾಗಿಯೇ ವಿವೇಕಿಗಳು ಶಾಸ್ತ್ರೀಯ ಚಟುವಟಿಕೆಗಳನ್ನೂ ಅವಿವೇಕಿಗಳು ಅಶಾಸ್ತ್ರೀಯ ಚಟುವಟಿಕೆಗಳನ್ನೂ ನಡೆಸುವರೆಂದು ಹೇಳಲಾಗಿದೆ.

**೫೩. ಇಂಧ ಎಂಬ ಭಗವದ್ರೂಪದ, ವಿರಾಟ್ ಎಂಬ ಲಕ್ಷ್ಮೀರೂಪದ ಸ್ತುತಿ ಮುಖ್ಯಪ್ರಾಣನಿಂದ:**

– **'ತಯೋರೇಷ ಸಂಸ್ತಾವೋ ಯ ಏಷೋಽಂತರ್ಹೃದಯ ಆಕಾಶಃ'** –ಎಂಬ ಮಾತಿನಲ್ಲಿ [6-2-3] ಇಂಧ ಎನಿಸುವ ಭಗವದ್ರೂಪದ ವಿರಾಟ್ ಎನಿಸುವ ಲಕ್ಷ್ಮೀರೂಪದ ಸ್ತುತಿಯನ್ನು ವಾಯುದೇವ ಮಾಡುತ್ತಿರುತ್ತಾನೆ ಎನ್ನಲಾಗಿದೆ.

**೫೪. ಇಂಧನಾಮಕ ಭಗವಂತನಿಗೆ ಊರ್ಧ್ವ ದಿಕ್ಕಿನ ಸೇವಕರಲ್ಲಿ ಪ್ರಾಣನೂ ಒಬ್ಬ:**

– ಇಂಧನಾಮಕ ಭಗವಂತನಿಗೆ ಯಾವ ಯಾವ ದಿಕ್ಕಿನಲ್ಲಿ ಯಾರ್ಯಾರು ಸೇವಕರಿರು ವರೆಂದು ತಿಳಿಸುತ್ತ **'ಊರ್ಧ್ವಾ ದಿಕ್ ಊರ್ಧ್ವಾಃ ಪ್ರಾಣಾಃ'** –ಎಂಬ ಮಾತಿನಲ್ಲಿ [6-2-4] ಎಂಬ ಮಾತಿನಲ್ಲಿ ಊರ್ಧ್ವದಿಕ್ಕಿನ ಸೇವಕರಲ್ಲಿ ವಾಯುದೇವನನ್ನೂ ಉಲ್ಲೇಖಿಸಲಾಗಿದೆ.

**೫೫. ಜೀವರ ಒಂದಂಶದಿಂದ ಸ್ವಪ್ನದರ್ಶನ ಮಾಡಿಸುವಾಗ ಮತ್ತೊಂದು ಅಂಶದಿಂದ ಮುಖ್ಯಪ್ರಾಣನ ಮೂಲಕ ಶರೀರದ ರಕ್ಷಣೆ:**

– **'ಪ್ರಾಣೇನ ರಕ್ಷನ್ನವರಂ.......'** –ಎಂಬ ಮಂತ್ರದಲ್ಲಿ [6-3-12] ಪರಮಾತ್ಮನು ಜೀವನ ಒಂದು ಅಂಶದಿಂದ ಸ್ವಪ್ನದರ್ಶನಕ್ಕೆ ಹೊರಗೆ ಕೊಂಡೊಯ್ದರೆ ಮತ್ತೊಂದು ಅಂಶದಿಂದ ಮುಖ್ಯಪ್ರಾಣನಿಂದ ರಕ್ಷಣೆ ಮಾಡಿಸುವನೆಂದು ತಿಳಿಸಲಾಗಿದೆ.

**೫೬. ಅರ್ಚಿರಾದಿ ಮಾರ್ಗದಲ್ಲಿ ವಾಯುದೇವನ ಮೂಲಕ ಭಗವಂತನ ಪ್ರಾಪ್ತಿ:**

– **'.......ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾ ದ್ರವತಿ ಪ್ರಾಣಾಯೈವ'** –ಎಂಬ ಮಾತಿನಲ್ಲಿ [6-3-36] ತತ್ತ್ವಜ್ಞಾನಿ ಮೋಕ್ಷವನ್ನು ಹೊಂದುವುದಕ್ಕಾಗಿ ಅರ್ಚಿ ರಾದಿಮಾರ್ಗದಲ್ಲಿ ವಾಯುದೇವನ ಸಮೀಪಕ್ಕೆ ಹೋಗುವನೆಂದು ಹೇಳಲಾಗಿದೆ.

**೫೭. ಮರಣಕಾಲದಲ್ಲಿ ಪರಮಾತ್ಮನ ಜೊತೆಗೆ ಮುಖ್ಯಪ್ರಾಣನೂ ಹೊರಗೆ ಸಾಗುವನು:**

– **'ತಮುತ್ಕ್ರಾಂತಂ ಪ್ರಾಣೋಽನೂತ್ಕ್ರಾಮತಿ........'** –ಎಂಬ ಮಾತಿನಲ್ಲಿ [6-4-2] ದೇಹದಿಂದ ಭಗವಂತ ಹೊರಟಾಗ ಮುಖ್ಯಪ್ರಾಣನೂ ಹೊರಡುವನು. ಪ್ರಾಣ ನನ್ನು ಉಳಿದ ದೇವತೆಗಳು ಅನುಸರಿಸುವರು. ಜ್ಞಾನರೂಪದ, ಬಲರೂಪದ ವಾಯುದೇವರು ಹೊರಡುವರು –ಎಂದಿದೆ.

**೫೮. ಪ್ರಾಣನ ಸೃಷ್ಟಿ:**

– 'ಸ ವಿಶ್ವಕೃತ್.....' [6-4-13] ಎಂಬ ಮಾತಿನಲ್ಲಿ ಭಗವಂತ ವಾಯುದೇವನನ್ನು ಸೃಷ್ಟಿಸುವವನೆಂದು ಹೇಳಲಾಗಿದೆ.

೫೯. **ಭಗವಂತನ ಮೂಲರೂಪ 'ವಾಯುರಂ':**

– '**ಓಂ ಖಂ ಬ್ರಹ್ಮ........**' ಇತ್ಯಾದಿಯಾಗಿ ಭಗವಂತನ ಮೂಲರೂಪವನ್ನು ಪರಿಚಯಿಸಿಕೊಡುತ್ತ '**ವಾಯುರಂ**' [7-1-2] ಎಂಬ ವಿಶೇಷಣದಿಂದ ವಾಯು ದೇವರಿಗೆ ವಿಶೇಷವಾಗಿ ಸುಖಕರವಾದ ರೂಪ ಎನ್ನಲಾಗಿದೆ.

೬೦. **ಗೋರೂಪದ ವಾಗ್ದೇವಿಯ ಪತಿ ವಾಯುದೇವರು:**

– '**ವಾಚಂ ಧೇನುಮುಪಾಸೀತ**' –ಎಂದು ಗೋರೂಪದ ವಾಗ್ದೇವಿಯ ಉಪಾಸನೆ ಯನ್ನು ವಿಧಿಸಿ, ಆಕೆಯ ರೂಪವನ್ನು ವರ್ಣಿಸುತ್ತ '**ತಸ್ಯಾಃ ಪ್ರಾಣ ಋಷಭೋ.....**' [7-10-1] ಎಂಬ ಮಾತಿನಿಂದ ಗೋರೂಪದ ವಾಗ್ದೇವಿಗೆ ಗೂಳಿಯಂತೆ ವಾಯುದೇವರಿರುವರೆಂದು ತಿಳಿಸಲಾಗಿದೆ.

೬೧. **ವೈಶ್ವಾನರನ ಸ್ತುತಿ ವಾಯುದೇವನಿಂದ:**

– ಜಠರಾಗ್ನಿಯಲ್ಲಿರುವ ವೈಶ್ವಾನರನನ್ನು ಪ್ರಸ್ತಾವಿಸಿ '**ತಸ್ಯೈಷ ಘೋಷೋ ಭವತಿ....... ಶೃಣೋತಿ**' –ಈ ಭಾಗದಲ್ಲಿ [7-11-1] ವೈಶ್ವಾನರನ ಸ್ತುತಿಯನ್ನು ವಾಯುದೇವನು ನಡೆಸುವನೆಂದು ಹೇಳಲಾಗಿದೆ.

೬೨. **ಅರ್ಚಿರಾದಿ ಮಾರ್ಗದಲ್ಲಿ ವಾಯುದೇವನ ಪ್ರಾಪ್ತಿ:**

– ಅರ್ಚಿರಾದಿ ಮಾರ್ಗವನ್ನು ವಿವರಿಸುತ್ತ '**ತೇನ ಸ ಊರ್ಧ್ವ ಆಕ್ರಮತೇ । ಸ ಲೋಕಮಾಗಚ್ಛತ್ಯಶೋಕಮಹಿಮಮ್**' –ಎಂಬ ಮಾತಿನಲ್ಲಿ [7-12-1] ವೈಶ್ವಾನ ರಾದಿ ಲೋಕಗಳ ಮಾರ್ಗವಾಗಿ ಪ್ರಧಾನ ವಾಯುಲೋಕದಲ್ಲಿ ಪ್ರಧಾನ ವಾಯುವನ್ನು ಹೊಂದುವನು. ಅವನ ಮೂಲಕ ಸತ್ಯಲೋಕಕ್ಕೆ ಅಥವಾ ವಿಷ್ಣು ಲೋಕಕ್ಕೆ ಗಮನ ಎಂದು ತಿಳಿಸಲಾಗಿದೆ.

೬೩. **ವಾಯುಚತುರ್ಮುಖರ ಅನ್ಯೋನ್ಯತೆ:**

– '**ಅನ್ನಂ ಬ್ರಹ್ಮ ಇತ್ಯೇಕ ಆಹುಃ...... ರಮಂತೇ ಯ ಏವಂ ವೇದ**' –ಎಂಬ ಭಾಗದಲ್ಲಿ [7-14-1] ಅನ್ನಾಭಿಮಾನಿ ಚತುರ್ಮುಖನ ದೇಹ ಮುಖ್ಯಪ್ರಾಣ ನಿಲ್ಲದಿದ್ದರೆ ಕೊಳೆತು ನಾರುವುದು, ಮುಖ್ಯಪ್ರಾಣನ ದೇಹ ಚತುರ್ಮುಖ ನಿಲ್ಲದಿದ್ದರೆ ಒಣಗುವುದೆಂದು ತಿಳಿಸಿ, ಇವರಿಬ್ಬರೂ ಒಬ್ಬರಲ್ಲೊಬ್ಬರು ಪ್ರವೇಶಿ ಸಿಯೇ ಸುಸ್ಥಿತಿಯಲ್ಲಿರವರೆಂದು ಮುಖ್ಯಪ್ರಾಣ ಚತುರ್ಮುಖರ ಅನ್ಯೋನ್ಯತೆ ಯನ್ನು ಪ್ರತಿಪಾದಿಸಲಾಗಿದೆ.

೬೪. **ಮುಖ್ಯಪ್ರಾಣ ಉಕ್ಥ:**

– '**ಪ್ರಾಣೋ ವಾ ಉಕ್ಥಮ್..... ಯ ಏವಂ ವೇದ**' –ಈ ಭಾಗದಲ್ಲಿ [7-15-1] ವಿಶ್ವವನ್ನು ಸೃಷ್ಟಿ ಮಾಡುವವನೆಂಬ ಅರ್ಥದಲ್ಲಿ ಮುಖ್ಯಪ್ರಾಣನ ಉಕ್ಥ ಎಂಬ ಉಪಾಸನೆಯನ್ನು ತಿಳಿಸಲಾಗಿದೆ.

**೬೫. ಮುಖ್ಯಪ್ರಾಣ ಯಜುಃ**

– **'ಪ್ರಾಣೋ ವೈ ಯಜುಃ........ ಯ ಏವಂ ವೇದ'** –ಎಂಬ ಭಾಗದಲ್ಲಿ............ [7-15-1] ಮುಕ್ತಿಯಲ್ಲಿ ಎಲ್ಲ ಚೇತನರು ಮುಖ್ಯಪ್ರಾಣನನ್ನು ಸೇರುವರೆಂಬ ಅಭಿಪ್ರಾಯದಲ್ಲಿ ಮುಖ್ಯಪ್ರಾಣನನ್ನು 'ಯಜುಃ' –ಎಂದು ಉಪಾಸನೆ ನಡೆಸಲು ತಿಳಿಸಲಾಗಿದೆ.

**೬೬. ಮುಖ್ಯಪ್ರಾಣ ಸಾಮ:**

– **'ಪ್ರಾಣೋ ವೈ ಸಾಮ..... ಯ ಏವಂ ವೇದ'** ಎಂಬ ಭಾಗದಲ್ಲಿ [7-17-1] ಎಲ್ಲ ಚೇತನರು ಪರಸ್ಪರ ಸೌಹಾರ್ದದಿಂದ ಇರುವಂತೆ ಮಾಡುವುದರಿಂದ ಪ್ರಾಣನನ್ನು 'ಸಾಮ' –ಎಂದು ಉಪಾಸನೆ ನಡೆಸಲು ತಿಳಿಸಲಾಗಿದೆ.

**೬೭. ಮುಖ್ಯಪ್ರಾಣ ಕ್ಷತ್ರ:**

– **'ಪ್ರಾಣೋ ವೈ ಕ್ಷತ್ರಮ್......... ಯ ಏವಂ ವೇದ'** –ಎಂಬ ಭಾಗದಲ್ಲಿ [7-18-1] ಜೀವನನ್ನು ಅಪಾಯದಿಂದ ರಕ್ಷಿಸುವ ಪ್ರಯುಕ್ತ ಪ್ರಾಣನನ್ನು 'ಕ್ಷತ್ರ' –ಎಂದು ಉಪಾಸನೆ ಮಾಡಲು ತಿಳಿಸಲಾಗಿದೆ.

**೬೮. ಗಾಯತ್ರಿಯ ತೃತೀಯಪಾದಪ್ರತಿಪಾದ್ಯ ವಾಯುದೇವರಲ್ಲಿರುವ ಸಂಕರ್ಷಣ:**

– **'ಪ್ರಾಣೋಽಪಾನೋ...... ಪದಂ ವೇದ'** –ಎಂಬ ಭಾಗದಲ್ಲಿ [7-19-3] ಗಾಯತ್ರಿಯ ಮೂರನೆಯ ಪಾದಪ್ರತಿಪಾದ್ಯ ಸಂಕರ್ಷಣ ಪ್ರಾಣ, ಅಪಾನ, ವ್ಯಾನ –ಎನಿಸುವ ಮುಖ್ಯ ಪ್ರಾಣನಲ್ಲಿ ಇರುವವನೆಂದು ತಿಳಿಸಲಾಗಿದೆ.

**೬೯. ಸತ್ಯನಾಮಕಶೇಷ ಬಲನಾಮಕವಾಯುವನ್ನೂ, ಬಲನಾಮಕವಾಯು ಗಾಯತ್ರ್ಯಭಿಮಾನಿನಿ ಲಕ್ಷ್ಮೀದೇವಿಯನ್ನೂ ಆಶ್ರಯಿಸಿರುವನು:**

– ಗಾಯತ್ರೀಮಂತ್ರದ ಅಭಿಮಾನಿ ದೇವತೆಗಳಲ್ಲಿಯ ತಾರತಮ್ಯವನ್ನು ಸೂಚಿಸುತ್ತ **'ತದ್ವಾ ಏತತ್ ಸತ್ಯಂ ಬಲೇ ಪ್ರತಿಷ್ಠಿತಮ್......ಪ್ರತಿಷ್ಠಿತಾ'** –ಎಂಬ ಭಾಗದಲ್ಲಿ [7-19-5] ಶೇಷ ವಾಯುವನ್ನೂ, ವಾಯು ಲಕ್ಷ್ಮಿಯನ್ನೂ ಆಶ್ರಯಿಸಿಕೊಂಡಿರುವುದನ್ನು ತಿಳಿಸಲಾಗಿದೆ.

**೭೦. ವಾಯ್ವಂತರ್ಗತ ಸಂಕರ್ಷಣನ ಉಪಾಸನೆಯಿಂದ ಚತುರ್ಮುಖನಿಗೆ ಸಕಲ ಪ್ರಾಣಗಳ ಆಧಿಪತ್ಯ:**

– ಗಾಯತ್ರಿಯ ಉಪಾಸನೆಯಿಂದ ಚತುರ್ಮುಖನಿಗೆ ದೊರಕುವ ಫಲವನ್ನು ತಿಳಿಸುತ್ತ **'ಅಥ ಯಾವದಿದಂ.......... ತೃತೀಯಂ ಪದಮಾಪ್ನುಯಾತ್'** –ಎಂಬ ಭಾಗದಲ್ಲಿ [7-19-7] ಗಾಯತ್ರಿಯ ಮೂರನೆಯ ಪಾದದ ಪ್ರತಿಪಾದ್ಯ ಪ್ರಾಣಾಪಾನಾದ್ಯಂತರ್ಗತ ಸಂಕರ್ಷಣನ ಉಪಾಸನೆಯಿಂದ ಸಕಲ ಪ್ರಾಣಗಳ ಆಧಿಪತ್ಯವನ್ನು ಪಡೆಯುವನೆಂದು ತಿಳಿಸಲಾಗಿದೆ.

ಮುಕ್ತಿಯಲ್ಲಿ ವಾಯ್ವಂತರ್ಗತ ಸಂಕರ್ಷಣನನ್ನು ಪ್ರವೇಶಿಸಿ ವ್ಯಾಪಿಸಿರುವನೆಂದೂ ತಿಳಿಸಲಾಗಿದೆ.

೭೧. **ಪ್ರಾಣನಲ್ಲಿರುವ ದೇವ 'ಅಹಮ್':**

– **'ಯೋಽಸಾವಸೌ ಪುರುಷಃ ಸೋಽಹಮಸ್ಮಿ'** –ಎಂಬ ಮಾತಿನಲ್ಲಿ [7-20-3] ಮೊದಲ ಅಸು ಶಬ್ದದಿಂದ ಮುಖ್ಯಪ್ರಾಣನ ಪ್ರಸ್ತಾವ.

೭೨. **ವಾಯುದೇವ ಅನಿಲ ಹಾಗೂ ಅಮೃತ:**

– **'ವಾಯುರನಿಲಂ........'** ಈ ಮಾತಿನಲ್ಲಿ [7-20-3] ವಾಯುದೇವ ಅ ಎನಿಸುವ ಭಗವಂತನನ್ನು ಆಶ್ರಯಿಸುವುದರಿಂದ 'ಅನಿಲ' ಎಂದೂ ತಿರೋಧಾನಕ್ಕೊಳಗಾಗದ ಜ್ಞಾನವಿರುವುದರಿಂದ 'ಅಮೃತ' ಎಂದೂ ಉಲ್ಲೇಖಿಸಲ್ಪಟ್ಟಿರುವನು.

೭೩. **ನರಸಿಂಹಾಗ್ನಿಯಲ್ಲಿ ವಾಯುದೇವನ ಶರೀರವೂ ಬೂದಿ:**

– **'......ಅಥೇದಂ ಭಸ್ಮಾಂತಂ ಶರೀರಮ್'** –ಎಂಬ ಮಾತಿನಲ್ಲಿ [7-20-3] ವಾಯುದೇವ 'ಅನಿಲ', 'ಅಮೃತ' ಆದರೂ ಪ್ರಳಯಕಾಲದಲ್ಲಿ ಅವನ ಪಾಂಚಭೌತಿಕಶರೀರ ನೃಸಿಂಹಾಗ್ನಿಯಲ್ಲಿ ಭಸ್ಮ ಆಗಿಯೇ ತೀರುವುದೆಂದು ತಿಳಿಸಲಾಗಿದೆ.9

೭೪. **ಪ್ರಾಣನೇ ಜ್ಯೇಷ್ಠ; ಪ್ರಾಣನೇ ಶ್ರೇಷ್ಠ:**

– **'ಯೋ ಹ ವೈ ಜ್ಯೇಷ್ಠಂ ಚ ಶ್ರೇಷ್ಠಂ ಚ.........ಯ ಏವಂ ವೇದ'** –ಎಂಬ ಭಾಗದಲ್ಲಿ [8-1-1-6] ಮುಖ್ಯಪ್ರಾಣನ ಜ್ಯೇಷ್ಠತ್ವವನ್ನೂ, ಶ್ರೇಷ್ಠತ್ವವನ್ನೂ ಪ್ರತಿಪಾದಿಸಲಾಗಿದೆ.

೭೫. **ಇಂದ್ರಿಯಾಭಿಮಾನಿಗಳ ಸ್ಪರ್ಧೆಯಲ್ಲಿ ಮುಖ್ಯಪ್ರಾಣನಿಗೆ ವಿಜಯ:**

– **'ತೇ ಹೇಮೇ ಪ್ರಾಣಾಃ.......ಪ್ರಜಾಪತಿರಸೀತಿ ರೇತಃ'** –ಎಂಬ ಭಾಗದಲ್ಲಿ [8-1-7...12] ಇಂದ್ರಿಯಾಭಿಮಾನಿಗಳಿಗೆ ಶ್ರೇಷ್ಠತ್ವ ವಿಷಯದಲ್ಲಿ ಸ್ಪರ್ಧೆ ನಡೆದು ಅದರಲ್ಲಿ ಜಯಿಸಿದ ವಾಯುದೇವನನ್ನು ಇಂದ್ರಿಯಾಭಿಮಾನಿಗಳು ನಡೆಸಿದ ಸ್ತುತಿಯ ಉಲ್ಲೇಖವೂ ಇದೆ.

೭೬. **ಮುಖ್ಯಪ್ರಾಣನಿಗೆ ಅನ್ನ ಮತ್ತು ಬಟ್ಟೆ:**

– **'ತಸ್ಮೋ ವೋ ಕಿಮನ್ನಂ...... ಆಚಾಮೇತ್'** –ಎಂಬ ಭಾಗದಲ್ಲಿ [8-1-14] ಪ್ರಾಣಿಗಳು ತಿನ್ನುವುದೆಲ್ಲ ಮುಖ್ಯಪ್ರಾಣನಿಗೆ ಅನ್ನವಾಗಿಯೂ ಕುಡಿಯುವ ನೀರೆಲ್ಲ ಮುಖ್ಯಪ್ರಾಣನಿಗೆ ಬಟ್ಟೆಯಾಗಿಯೂ, ಊಟದ ಮೊದಲಿನ ಪೂರ್ವಾ

9. ಇದು ವಾಯ್ವಧಿಷ್ಠಿತಮಚಿಚ್ಛರೀರಂ ಪರಮಾತ್ಮಾಗ್ನೌ ಭಸ್ಮೀಭಾವೇನ ವಿನಶ್ಯತಿ ।
*– ವಾಮನ ಪಂಡಿತಾಚಾರ್ಯಕೃತಾ ಟೀಕಾ.*

ಪೋಶನ, ಕೊನೆಯ ಉತ್ತರಾಪೋಶನ ವಾಯುದೇವನಿಗೆ ಉಡಿಸಿದ ಬಟ್ಟೆಯಂತೆ ಭಾವಿಸಲಾಗುವುದೆಂದು ತಿಳಿಸಲಾಗಿದೆ.

**೭೭. ಶುಕ್ಲಪಕ್ಷದ ಪುಣ್ಯದಿವಸದಲ್ಲಿ ನಡೆಸಬೇಕಾದ ಯಜ್ಞದಲ್ಲಿ ವಾಯುದೇವನಿಗೂ ಆಹುತಿ:**

– '**ಜ್ಯೇಷ್ಠಾಯ ಸ್ವಾಹಾ......... ಮಂಥೇ ಸಂಸ್ರವಮವನಯತಿ**' –ಎಂಬ ಭಾಗದಲ್ಲಿ [8-3-2,3] ಶುಕ್ಲಪಕ್ಷದ ಪುಣ್ಯದಿವಸದಲ್ಲಿ ನಡೆಸಬೇಕಾದ ಹೋಮದಲ್ಲಿ ಜ್ಯೇಷ್ಠ, ಶ್ರೇಷ್ಠ ವಸಿಷ್ಠನಾಮಕಪ್ರಾಣ, ಪ್ರತಿಷ್ಠಾನಾಮಕ ಪ್ರಾಣ, ಸಂಪನ್ನಾಮಕ ಪ್ರಾಣ, ಆಯತನನಾಮಕ ಪ್ರಾಣ ಹಾಗೂ ಪ್ರಜಾಪತಿನಾಮಕ ಪ್ರಾಣ –ಇವರಿಗೆ ಆಹುತಿ ನೀಡಬೇಕು.

* * *

# ಐತರೇಯೋಪನಿಷತ್ತಿನಲ್ಲಿ ಮುಖ್ಯಪ್ರಾಣನ ಪ್ರಸ್ತಾವ

**೧. ಅಸುರರನ್ನು 'ಈರಪಾದ' ಎಂದು ಹೆಸರಿಸುವ ಮೂಲಕ ವಾಯುದೇವನ ಸ್ವರೂಪದ ಸೂಚನೆ:**

– ದೇವರನ್ನು ತೊರೆದು ನಿತ್ಯನರಕದಲ್ಲಿ ಬಿದ್ದವರನ್ನು ಹೆಸರಿಸುತ್ತ '**........ಈರ ಪಾದಾಃ**' –ಎಂದು (1-1-3) ಅಸುರರನ್ನು 'ಈರಪಾದ' ಹೆಸರಿನಿಂದ ನಿರ್ದೇಶಿಸುವ ಮೂಲಕ ಈರ ಎನಿಸುವ ವಾಯುದೇವ ಧರ್ಮ, ಜ್ಞಾನ, ವೈರಾಗ್ಯ ಹಾಗೂ ಐಶ್ವರ್ಯ ಎಂಬ ನಾಲ್ಕು ಧರ್ಮಗಳ ಸ್ವರೂಪಿಯಾಗಿದ್ದು, ಅವುಗಳಲ್ಲಿ ಐಶ್ವರ್ಯವೊಂದನ್ನೇ ಹೊಂದಿರುವುದರಿಂದ ಅಸುರರು 'ಈರ ಪಾದ'ರು– ವಾಯುದೇವನ ನಾಲ್ಕನೆಯ ಒಂದಂಶವನ್ನಷ್ಟೇ ಹೊಂದಿರುವವರೆಂದು ಹೇಳುವ ಮೂಲಕ ವಾಯುದೇವನ ಸ್ವರೂಪಭೂತಗಳಾದ ನಾಲ್ಕು ಧರ್ಮಗಳನ್ನು ಸೂಚಿಸಿದಂತಾಗಿದೆ.

**೨. ಚತುರ್ಮುಖನ ಶರೀರವನ್ನು ವಾಸುದೇವನ ಜೊತೆಗೆ ವಾಯುದೇವ ಪ್ರವೇಶಿಸಿರುವನು:**

– ಮಾನವದೇಹದ ಪ್ರಪದ, ಊರು, ಉದರ ಇತ್ಯಾದಿ ಅಂಗಗಳ ಹೆಸರಿನ ಔಚಿತ್ಯವನ್ನು ತಿಳಿಸುತ್ತ ಚತುರ್ಮುಖನ ಶರೀರವನ್ನು ವಾಸುದೇವನ ಜೊತೆಗೆ ಪ್ರವೇಶಿಸಿದ ವಾಯುದೇವನು '**ಉರು ಗೃಣೇಹೀತ್ಯಬ್ರವೀತ್........ ತದುರೋಽಭವತ್**' –ಎಂಬ ಭಾಗದಲ್ಲಿ (1-3-8) ತಿಳಿಸಿರುವಂತೆ ವಾಸುದೇವನ ಆದೇಶಾ

ನುಸಾರವಾಗಿ ಆಯಾ ಅಂಗ ದಲ್ಲಿ ಉಣ್ಣುವುದೇ ಮುಂತಾದ ಚಟುವಟಿಕೆ ಗಳನ್ನು ನಡೆಸಿದ್ದರಿಂದ 'ಉದರ' 'ಉರಸ್' ಹೆಸರಿಗೆ ಕಾರಣನಾಗಿರುವನು.

೬. **ದೇವತೆಗಳ ಸ್ಪರ್ಧೆಯಲ್ಲಿ ವಾಯುದೇವನಿಗೆ ಜಯ:**

– '**ತಾ ಅಹಿಂಸಂತ........ತವಸ್ಮೇಸೀತಿ**' –ಎಂಬ ಭಾಗದಲ್ಲಿ (1-4-8....10) ದೇವತೆ ಗಳಲ್ಲಿ ಶ್ರೇಷ್ಠತ್ವದ ಬಗ್ಗೆ ನಡೆದ ಸ್ಪರ್ಧೆಯ ವಿವರವೂ ಅದರಲ್ಲಿ ವಾಯುದೇವನ ಜಯದ ಮಾಹಿತಿಯೂ ಇವೆ.

೭. **ಹರಿವಾಯುಗಳು ಪ್ರಾತಃ ಹಾಗೂ ಸಾಯಂ:**

– '**ತಂ ದೇವಾ ಪ್ರಾಣಯಂತ........ ರಾತ್ರಿರಪಾನಃ**' –ಎಂಬ ಭಾಗದಲ್ಲಿ (1-4-11) ಶ್ರೀಹರಿಯ ಜೊತೆಗೆ ವಾಯುದೇವನೂ 'ಪ್ರಾತಃ', 'ಸಾಯಂ' ಶಬ್ದಗಳಿಂದ ವಾಚ್ಯನಾಗು ವುದರ ಔಚಿತ್ಯವನ್ನು ತೋರಿಸಲಾಗಿದೆ.

೮. **ಸತ್ಯಶಬ್ದದಲ್ಲಿ ಸತ್ ಎಂದರೆ ಪ್ರಾಣ. ಕಣ್ಣಿನ ಶುಕ್ಲಭಾಗದಲ್ಲಿ ಅವನ ಇರವು:**

– '**ತತ್ ಸತ್ಯಂ.......**' ಎಂದು ಸತ್ಯಶಬ್ದಾರ್ಥವನ್ನು ಹೇಳಹೊರಟ ಮಾತು 'ಸದಿತಿ ಪ್ರಾಣಃ' (1-4-13) ಎಂಬುದಾಗಿ ಸತ್ಯಶಬ್ದದ, 'ಸತ್' –ಎಂಬ ಭಾಗದಿಂದ ಮುಖ್ಯ ಪ್ರಾಣನು ಪ್ರತಿಪಾದ್ಯ. ಮೂರು ಅಂಗಗಳನ್ನೊಳಗೊಂಡ ಕಣ್ಣಿನ ಬಿಳಿಯ ಗುಡ್ಡೆಯಲ್ಲಿ ಮುಖ್ಯಪ್ರಾಣನು ಇರುವನೆಂದು ತಿಳಿಸಲಾಗಿದೆ.

೯. **ಶ್ರೀಹರಿ ಶ್ರುತಿಸ್ಮೃತಿಗಳಿಂದ ಬಂಧಿಸಿರುವಂತೆ ವಾಯುದೇವನೂ ಬಂಧಿಸಿರು ವನು:**

– '**ತಸ್ಯ ವಾಕ್ ತಂತಿಃ....... ಸಂಬದ್ಧಾ ಏವಂ ವೇದ**' –ಎಂಬ ಭಾಗದಲ್ಲಿ (1-4-14, 15) ಶ್ರುತಿಸ್ಮೃತಿಗಳ ವಿಧಿನಿಷೇಧಗಳಿಂದ ಶ್ರೀಹರಿ ಜೀವರನ್ನು ಹೇಗೆ ಬಂಧಿಸಿರು ವನೋ ಹಾಗೆಯೇ ವಾಯುದೇವನೂ ಬಂಧಿಸಿರುವನೆಂದು ಶ್ರೀ ಮಧ್ವರು ಸ್ಪಷ್ಟಪಡಿಸಿರುವರು.

೧೦. **ಶ್ರೀವಿಷ್ಣುವಿನ ರೋಮಾದಿಗಳಲ್ಲಿ ಹೇಗೋ ಹಾಗೆ ವಾಯುದೇವನ ರೋಮಾದಿ ಗಳಲ್ಲೂ ಬೇರೆಬೇರೆ ಛಂದಸ್ಸಿನ ಮಂತ್ರಗಳಿಂದ ಮುಚ್ಚುವಿಕೆ:**

– '**ತಸ್ಯೋಷ್ಣಿಗ್ ಲೋಮಾನಿ......... ಛಂದಸ್ಕಂ ವೇದ**' –ಎಂಬ ಭಾಗದಲ್ಲಿ (1-4-15, 16) ಶ್ರೀವಿಷ್ಣುವಿನ ರೋಮ, ಚರ್ಮ ಮುಂತಾದೆಡೆ ಹೇಗೋ ಹಾಗೆಯೇ ವಾಯುದೇವನ ರೋಮ ಮುಂತಾದವುಗಳಲ್ಲಿ ಬೇರೆಬೇರೆ ಛಂದಸ್ಸಿನ ಮಂತ್ರಗಳು ನೆಲೆಸಿರುವುದನ್ನು ತಿಳಿಸಲಾಗಿದೆ.

ವಿಷ್ಣುವನ್ನು ಹೇಗೋ ಹಾಗೆ ವಾಯುದೇವನನ್ನೂ ಮುಚ್ಚುವುದರಿಂದಲೇ ವೇದಗಳು ಛಂದಸ್ಸುಗಳಾಗಿವೆ.

**೮. ವೇದಾಭಿಮಾನಿಗಳಲ್ಲಿರುವ ವಿಷ್ಣುವಾಯುಗಳೇ ಉಪಾಸಕರ ರಕ್ಷಕರೆಂಬುದಕ್ಕೆ 'ಅಪಶ್ಯಂ ಗೋಪಾಂ......'ಮಂತ್ರದ ಸಂವಾದ:**

– **'ಅಪಶ್ಯಂ ಗೋಪಾಂ........ ಆವರೀವರ್ತಿ'** –ಎಂಬ ಭಾಗದಲ್ಲಿ (1-4-17) ವಿಷ್ಣುವಿನಂತೆ ವಾಯುದೇವನೂ ವೇದಾಭಿಮಾನಿಗಳಲ್ಲಿದ್ದುಕೊಂಡು ರಕ್ಷಕನಾಗಿರುವನೆಂದು **'ಅಪಶ್ಯಂ ಗೋಪಾಂ.....'** ಎಂಬ ಮಂತ್ರದ ಸಂವಾದದೊಂದಿಗೆ ಸಮರ್ಥಿಸಲಾಗಿದೆ.

**೯. ಚಿತ್ ಪ್ರಕೃತಿಯಿಂದ, ನಾರಾಯಣನಿಂದ ಹೇಗೋ ಹಾಗೆ ವಾಯುದೇವನಿಂದ ಸಮಸ್ತ ಚೇತನರೂ ಕಾಪಾಡಲ್ಪಡುತ್ತಿದ್ದಾರೆಂದು 'ಆವೃತಾಸೋ.......' ಎಂಬ ಮಂತ್ರದ ಸಂವಾದದೊಂದಿಗೆ ಸಮರ್ಥನೆ:**

– **'ಅಥೋ ಆವೃತಾಸೋಽವತಾಸೋ..........ವಿದ್ಯಾತ್'** –ಎಂಬ ಭಾಗದಲ್ಲಿ (1-4-18, 19) **'ಅಪ್ರಕ್ಷಿತಂ ವಸು'** ಎಂಬ ಮಂತ್ರದ ಸಂವಾದದೊಂದಿಗೆ ನಾರಾಯಣಚಿತ್‌ಪ್ರಕೃತಿ ಇವರಂತೆ ವಾಯುದೇವನೂ ಸಮಸ್ತಚೇತನರನ್ನು ರಕ್ಷಿಸುವನೆಂದು ಪ್ರತಿಪಾದಿಸಲಾಗಿದೆ.

**೧೦. ಮುಖ್ಯಪ್ರಾಣ ವಿಷ್ಣುಭಕ್ತಿಯನ್ನು ತಂದುಕೊಡುವನು:**

– ಭಗವಂತನ ಅವಯವಗಳಿಂದ ಸೃಷ್ಟರಾದ ದೇವತೆಗಳು ತಮ್ಮ ಸೃಷ್ಟಿಗೆ ಕಾರಣವಾದ ಅವಯವಕ್ಕೆ ಅನುಗುಣವಾದ ಸೇವೆ ಸಲ್ಲಿಸುವರೆಂದು ತಿಳಿಸುತ್ತಾ **'ಪ್ರಾಣೇನ ಸೃಷ್ಟಾವಂತರಿಕ್ಷಂ ಚ ವಾಯುಶ್ಚ........ ವಿಭೂತಿಂ ವೇದ'** –ಎಂಬ ಭಾಗದಲ್ಲಿ (1-5-1) ಭಗವಂತನ ಪ್ರಾಣದಿಂದ ಹುಟ್ಟಿದ ಮುಖ್ಯಪ್ರಾಣ ಭಗವಂತನ ಬಗ್ಗೆ ಭಕ್ತಿಜ್ಞಾನಗಳನ್ನು ತಂದು ಕೊಡುವನೆಂದು ತಿಳಿಸಲಾಗಿದೆ.

**೧೧. ಸುಪ್ತರಲ್ಲಿದ್ದು 'ಭೂಃ' ಎಂದು ಉಪಾಸನೆ ನಡೆಸುವನು:**

– ದೇವತೆಗಳು ಭಗವಂತನನ್ನು ಭೂತಿಸ್ವರೂಪನನ್ನಾಗಿ ಉಪಾಸಿಸುವರೆಂದು ತಿಳಿಸಿದ ಉಪನಿಷತ್ತು **'ತಸ್ಮಾದ್ದಾಪ್ಯೇತರ್ಹಿ........ ಪ್ರಶ್ವಸಿತಿ'** –ಎಂಬ ಭಾಗದಲ್ಲಿ (1-6-2) ವಾಯುದೇವನು ನಿದ್ರಿಸುವವರಲ್ಲಿದ್ದುಕೊಂಡು **'ಭೂಃ ಭೂಃ'** ಎಂದು ಭಗವಂತನ ಉಪಾಸನೆ ನಡೆಸುವನೆಂದು ಹೇಳಲಾಗಿದೆ.

**೧೨. ಮರಣದಲ್ಲಿ ಚೇತನಾದೇವತೆ ವಾಯುದೇವ ಚೇತನೇಶ ಶ್ರೀಹರಿಯನ್ನು ಹೊಂದುವನು:**

– **'ಸ ಏಷ ಮೃತ್ಯುಶ್ಚ....... ಯ ಏವಂ ವೇದ'** –ಎಂಬ ಭಾಗದಲ್ಲಿ (1-6-3,4,5) ಮರಣಾದಿಗಳು ಭಗವದಧೀನಗಳೆಂದು ತಿಳಿಸುತ್ತ, ಶರೀರ ನಾಶವಾದಾಗ ಚೇತನಾದೇವತೆಯಾಗಿ ವಾಯುದೇವ ಚೇತನೇಶಶ್ರೀಹರಿಯನ್ನು ಹೊಂದುವನೆಂದು ತಿಳಿಸಲಾಗಿದೆ.

೧೩. **ಪ್ರಾಣನಲ್ಲಿ ಪ್ರಾಣನಾಮಕನಾಗಿ ಅಪಾನನಲ್ಲಿ ಅಪನನಾಮಕನಾಗಿ ಗೃತ್ಸಮದ ನಾಮಕ ಭಗವಂತನಿರುವನು:**

– **'ಪ್ರಾಣೋ ವೈ ಗೃತ್ಸೋಽಪಾನೋ ಮದಃ.......'** ಇತ್ಯಾದಿ ಮಾತುಗಳಲ್ಲಿ (2-1-3) ಪ್ರಾಣನಲ್ಲಿರುವ ಪ್ರಾಣನಾಮಕ ಭಗವಂತನು ಅಪಾನನಲ್ಲಿರುವ ಅಪಾನ ನಾಮಕ ಭಗವಂತ ಗೃತ್ಸಮದನಾಮಕನಾಗಿ ಇರುವನು ಎಂದು ಹೇಳಲಾಗಿದೆ.

೧೪. **ಸೂರ್ಯಮಂಡಲದಲ್ಲಿರುವ ಭಗವಂತ ಲಕ್ಷ್ಮೀಮುಖ್ಯಪ್ರಾಣಸಹಿತನಾಗಿ ಬ್ರಹ್ಮಾದಿ ಜೀವರ ಶರೀರವನ್ನು ಪ್ರವೇಶಿಸಿರುವನು:**

– 'ಏಷ ಇಮಂ ಲೋಕಂ....... ಏಷ ತೃಪ್ಯತಿ' –ಎಂಬ ಭಾಗದಲ್ಲಿ (2-1-1) ಸೂರ್ಯ ಮಂಡಲದಲ್ಲಿರುವ ಭಗವಂತ ಲಕ್ಷ್ಮೀಮುಖ್ಯಪ್ರಾಣರಿಂದ ಕೂಡಿ ಕೊಂಡು ಬ್ರಹ್ಮಾದಿ ಜೀವರ ಶರೀರವನ್ನು ಪ್ರವೇಶಿಸಿರುವನು ಎನ್ನಲಾಗಿದೆ.

೧೫. **ಮುಖ್ಯಪ್ರಾಣನೂ ಸರ್ವಶಬ್ದವಾಚ್ಯ:**

– **'ತಾ ವಾ ಏತಾಃ ಸರ್ವಾ ಋಚಃ....... ಏಕೈವ ವ್ಯಾಹೃತಿಃ ಪ್ರಾಣ ಏವ'** –ಎಂಬ ಮಾತಿನಲ್ಲಿ (2-1-2-12) ಮುಖ್ಯವಾಗಿ ಪ್ರಾಣ ಎನಿಸುವ ಭಗವಂತನಿಗೆ ಸರ್ವ ಶಬ್ದವಾಚ್ಯತ್ವವನ್ನು ಪ್ರತಿಪಾದಿಸಲ್ಪಡುತ್ತಿರುವಂತೆ, ಅಮುಖ್ಯವಾಗಿ ಪ್ರಾಣ ಎನಿಸುವ ಮಧ್ಯಮ ಪ್ರಾಣನಿಗೂ ಸರ್ವಶಬ್ದವಾಚ್ಯತ್ವವನ್ನು ಹೇಳಲಾಗಿದೆ.

೧೬. **ಬೃಹತೀಸಹಸ್ರ ಭಗವಂತನ ಆಜ್ಞೆಯಿಂದ ವಾಯುದೇವನಿಗೂ 'ಅನ್ನ':**

– 'ಸಹ ಅನ್ನಂ ಇತ್ಯಭಿವ್ಯಾಹೃತ್ಯ ಬೃಹತೀಸಹಸ್ರಂ ಶಶಂಸ' –ಎಂಬ ಮಾತಿನಲ್ಲಿ (2-1-2-13) ಬೃಹತೀಸಹಸ್ರ ಭಗವಂತನಿಗೆ ಮುಖ್ಯವಾದ ಅನ್ನ ಎಂದು ತಿಳಿಸಿರುವಂತೆ ಭಗವಂತನ ಆಜ್ಞಾನುಸಾರವಾಗಿ ಅದು ವಾಯುದೇವನಿಗೂ ಅನ್ನ ಎನಿಸುವುದೆಂದು ತಿಳಿಸಲಾಗಿದೆ.10

೧೭. **ಬೃಹತೀಸಹಸ್ರದ ಊಷ್ಮವರ್ಣಗಳಿಗೆ ಅಭಿಮಾನಿ ವಾಯು:**

– 'ತದ್ ವಾ ಇದಂ ಬೃಹತೀಸಹಸ್ರಂ ಸಂಪನ್ನಂ' –ಎಂದು ಬೃಹತೀಸಹಸ್ರ ಸಿದ್ಧ ವಾಯಿತೆಂದು ತಿಳಿಸಿ, ಅದರ ಬೇರೆಬೇರೆ ವರ್ಣಗಳಿಗೆ ಅಭಿಮಾನಿಗಳನ್ನು ತಿಳಿಸುತ್ತ 'ಯ ಊಷ್ಮಾಣಃ ಸ ಪ್ರಾಣಃ' (2-1-3-1) –ಎಂದು ಬೃಹತೀಸಹಸ್ರದ ಶಷಸಹ ಎಂಬ ಊಷ್ಮವರ್ಣಗಳಿಗೆ ಮುಖ್ಯಪ್ರಾಣನು ಅಭಿಮಾನಿ ಎನ್ನಲಾಗಿದೆ.

೧೮. **ಜೀವರ ಶರೀರದಲ್ಲಿ ಮುಖ್ಯಪ್ರಾಣನಿಗೆ ಪ್ರಾಶಸ್ತ್ಯ:**

– 'ಸ ಏಷ ಪುರುಷಃ ಪಂಚವಿಧಃ' –ಎಂಬ ಮಾತಿನಲ್ಲಿ ಶ್ರೀಹರಿ ಜೀವರ ದೇಹದ ಪಂಚಭೂತಗಳಲ್ಲಿ ತನ್ನ ಪ್ರದ್ಯುಮ್ನಾದಿ ಪಂಚರೂಪಗಳಿಂದ ಇರುವನೆಂದು

---

10. '........ತಸ್ಮಾದ್ ಬೃಹತೀಸಹಸ್ರಂ ಸರ್ವಂ ಮುಖ್ಯತೋ ನಾರಾಯಣಸ್ಯಾನ್ನಂ ತದಾಜ್ಞಯಾ ವಾಯೋಶ್ಚ.....' – ಐ.ಉ.ಭಾ.

ತಿಳಿಸಿ, 'ಯಃ ಪ್ರಾಣಃ ಸ ವಾಯುಃ..... ಅಪಿ ಯಂತಿ' –ಎಂಬ ಭಾಗದಲ್ಲಿ (2-2-3) ಶರೀರದ ಪ್ರಾಣದಲ್ಲಿರುವ ಮುಖ್ಯಪ್ರಾಣನ ಪ್ರಾಣಾದಿ ಐದು ರೂಪಗಳಲ್ಲಿ ಅನಿರುದ್ಧಾದಿ ಐದು ಭಗವದ್ರೂಪಗಳಿಂದ ಸಂಕರ್ಷಣನಿದ್ದು ವಾಯುವಿಗೆ ಇತರ ಭೂತಾಭಿಮಾನಿಗಳಿಗಿಂತ ಅಧಿಕ ಪ್ರಾಶಸ್ತ್ಯ ದೊರಕುವಂತೆ ಅನುಗ್ರಹಿಸಿರುವ ಪ್ರಮೇಯ ಪ್ರಸ್ತುತವಾಗಿದೆ.

೧೯. **ಶಿವಾದಿಗಳಿಗೆ ನೃಸಿಂಹಾನುಷ್ಟುಪ್‌ಮಂತ್ರದ ಉಪದೇಶ:**

– **'ಅನುಷ್ಟುಭಂ ಚರ್ಚೂರ್ಯಮಾಣಂ ಪುನಃ ಪುನರ್ವದಂತಂ ಪರಮೇಶ್ವರಂ ದದೃಶುಃ'** (2-2-5-2) –ಎಂಬ ಮಾತಿಗೆ ಹಂಸರೂಪಿಪರಮಾತ್ಮಪರವಾಗಿ ಹೇಗೋ ಹಾಗೆ ಶಿವಾದಿಗಳಿಗೆ ನೃಸಿಂಹಾನುಷ್ಟುಪ್ ಮಂತ್ರವನ್ನು ಉಪದೇಶಿಸುತ್ತ ಇದ್ದ ಹಂಸರೂಪಿ ವಾಯುದೇವನನ್ನು ಮುನಿಗಳು ಕಂಡರು ಎಂಬ ಅರ್ಥವೂ ಇದೆ.

೨೦. **ವಾಯುದೇವನ ಅಭಿಮಾನಕ್ಕೆ ಒಳಗಾಗಿರುವುದರಿಂದ ಬೃಹತೀಛಂದಸ್ಸು ಶ್ರೇಷ್ಠ:**

– **'ಅಕೃತ್ಸ್ನೋ ಹ್ಯೇಷ ಆತ್ಮಾ...... ಏಷ ವೈ ಕೃತ್ಸ್ನ ಆತ್ಮಾ ಯದ್ ಬೃಹತೀ'** –ಎಂಬ ಮಾತಿನಲ್ಲಿ (2-2-54) ಭಗವಂತನಿಗೆ ಪೂರ್ಣಪ್ರತಿಮೆ ಎನಿಸಿರುವ ವಾಯುದೇವನೇ ಅಭಿಮಾನಿಯಾಗಿರುವುದರಿಂದ ಬೃಹತೀಛಂದಸ್ಸು ಉಳಿದೆಲ್ಲ ಛಂದಸ್ಸುಗಳಿಗಿಂತ ಶ್ರೇಷ್ಠ ಎಂದು ಘೋಷಿಸಲಾಗಿದೆ.

೨೧. **ಬೃಹತೀಸಹಸ್ರ ಮುಖ್ಯವಾಗಿ ವಿಷ್ಣುವಿನ ಪ್ರತಿಮೆಯಂತೆ ಅಮುಖ್ಯವಾಗಿ ವಾಯುದೇವನ ಪ್ರತಿಮೆ:**

– ಬೃಹತೀಸಹಸ್ರದ ಸಂಗ್ರಹದ ಬಗ್ಗೆ ತಿಳಿಸುತ್ತ **'ವಾಚಮಷ್ಟಾಪದೀಮಹಂ.........'** –ಎಂಬ ಶ್ರುತಿಯ (2-2-6-3) ಸಂವಾದದಿಂದ ಅನುಷ್ಟುಪ್‌ಛಂದಸ್ಸಿನ ಮಂತ್ರಗಳನ್ನು ಬೃಹತೀಛಂದಸ್ಸಿನ ಮಂತ್ರಗಳನ್ನಾಗಿ ಸಿದ್ಧಪಡಿಸುವ ಮೂಲಕ ಬೃಹತೀಸಹಸ್ರವನ್ನು ವಿಷ್ಣುವಿಗೂ, ವಾಯುವಿಗೂ ಪ್ರತಿಮೆಯನ್ನಾಗಿ ಅನುಸಂಧಾನ ಮಾಡಿಕೊಳ್ಳಲಾಯಿತೆಂದು ಪ್ರತಿಪಾದಿಸಲಾಗಿದೆ.

೨೨. **ಅಕಾರಕ್ಕೆ ವಾಯುದೇವ ಅಭಿಮಾನಿ:**

– **'ಅಕಾರೋ ವೈ ಸರ್ವಾ ವಾಕ್........'** –ಎಂಬ ಮಾತಿನಲ್ಲಿ (2-2-6-10) ಚತುರ್ಮುಖನಂತೆ ವಾಯುದೇವನೂ ಅಕಾರಕ್ಕೆ ಅಭಿಮಾನಿ ಎಂದು ತಿಳಿಸಲಾಗಿದೆ.

೨೩. **ಮಂತ್ರಗಳನ್ನು ಮೆಲ್ಲಗೆ ಉಚ್ಚರಿಸುವುದಕ್ಕೆ ವಾಯುದೇವ ಅಭಿಮಾನಿ:**

– **'ತಸ್ಯೈ ಯದ್ ಉಪಾಂಶು ಸ ಪ್ರಾಣಃ....... ಅಶರೀರೋ ಹಿ ಪ್ರಾಣಃ'** –ಎಂಬ ಭಾಗದಲ್ಲಿ (2-2-6-11) ಅಕಾರವನ್ನು ಮೆಲ್ಲಗೆ ಉಚ್ಚರಿಸುವುದಕ್ಕೆ ಪ್ರಾಣದೇವ ಅಭಿಮಾನಿ ಎಂದೂ, ಅವನು ಶರೀರರಹಿತನಾಗಿರುವುದರಿಂದಲೇ ಅವನಿಂದ

ಅಭಿಮನ್ಯಮಾನವಾದ ಆ ಉಚ್ಚಾರಣೆ ಗೋಚರಿಸುವುದಿಲ್ಲ ಎಂದೂ ಪ್ರತಿ ಪಾದಿಸಲಾಗಿದೆ.

೨೪. **ನಿರ್ದುಷ್ಟವಾದ ವಾಯುದೇವನಿಗೆ ನಿರ್ದುಷ್ಟತ್ವವನ್ನು ನೀಡಿರುವವನು:**

– 'ಸತ್ಯಸ್ಯ ಸತ್ಯಂ....' –ಎಂಬ ಮಾತಿನಲ್ಲಿ (2-2-7-1) ನಿರ್ದುಷ್ಟನಾಗಿ ಸತ್ಯ ಎನಿಸಿರುವ ವಾಯುದೇವನಿಗೆ ನಿರ್ದುಷ್ಟತ್ವವನ್ನು ನೀಡಿರುವವನು ಭಗವಂತ ನೆಂದು ಸಾರಲಾಗಿದೆ.

೨೫. **ವಿಷ್ಣುನಾಮಾರ್ಥವನ್ನು ಚೆನ್ನಾಗಿ ತಿಳಿಯುವವನು ವಾಯುದೇವನೇ:**

– **'ಯದ್ ವಾಚ ಓಮಿತಿ...... ಸರ್ವಯುಜೋ ಭವಂತಿ'** –ಎಂಬ ಮಾತಿನಲ್ಲಿ (2-2-2-3) ದೇವತೆಗಳು ಶ್ರೀವಿಷ್ಣುವಿನ **'ಅ'**ನಾಮಾರ್ಥವನ್ನು ಚೆನ್ನಾಗಿ ಚಿಂತಿಸು ವರೆಂದು ಪ್ರಸ್ತುತವಾಗಿದ್ದು, ದೇವತೆಗಳಲ್ಲೂ ವಾಯುದೇವ ಎಲ್ಲರಿಗಿಂತ ಅತ್ಯಂತ ಚೆನ್ನಾಗಿ ವಿಷ್ಣು ನಾಮಾರ್ಥವನ್ನು ಬಲ್ಲವನಾಗಿರುವನು –ಎಂದು ಸೂಚಿಸಲಾಗಿದೆ.

೨೬. **ಭಗವಂತನು ಮುಖ್ಯಪ್ರಾಣನನ್ನು ಹುಟ್ಟಿಸುವುದಕ್ಕಾಗಿ ರಮೆಯಲ್ಲಿರುವ ತನ್ನ ಸ್ತ್ರೀರೂಪದ ಜೊತೆಗೆ ಕ್ರೀಡಿಸುವನು:**

– **'ಜೀವಾಕ್ಷರೇಣೈವ..........ಇತ್ಯನಕಾಮಮಮಾರಃ'** –ಎಂಬ ಮಾತಿನಲ್ಲಿ (2-2-7-6) ಭಗವಂತನು ಬ್ರಹತೀಸಹಸ್ರಪ್ರತಿಪಾದ್ಯಗಳಾದ ತನ್ನದೇ ಆದ ಸ್ತ್ರೀರೂಪಗಳಲ್ಲಿ ಕ್ರೀಡಿಸುವನೆಂಬ ಪ್ರಸ್ತಾವದಲ್ಲಿ ರಮೆಯಲ್ಲಿರುವ ತನ್ನ ಸ್ತ್ರೀರೂಪದಿಂದ ಪ್ರಾಣನ ಉತ್ಪತ್ತಿಯ ಇಚ್ಛೆಯಿಂದ ಕ್ರೀಡಿಸುವನೆಂದು ತಿಳಿಸಲಾಗಿದೆ.

೨೭. **ದೇಹವೆಂಬ ವಿಷ್ಣುರಥದಲ್ಲಿ ಪ್ರಾಣದೇವನೂ ಏರಿರುವನು:**

– **'ಅಥ ದೇವರಥಃ......... ಅಧಿತಿಷ್ಠತಿ'** –ಎಂಬ ಮಾತಿನಲ್ಲಿ (2-2-7-6) ದೇಹವನ್ನು ಶ್ರೀವಿಷ್ಣುವಿನ ರಥವನ್ನಾಗಿ ಬಣ್ಣಿಸಿ ಅದರಲ್ಲಿ ವಿಷ್ಣುವಿನ ಜೊತೆಗೆ ವಿಷ್ಣುವಿನಂತೆ ಹಯ ಗ್ರೀವರೂಪದ ಮುಖ್ಯಪ್ರಾಣನೂ ಏರಿರುವುದಾಗಿ ತಿಳಿಸಲಾಗಿದೆ.

೨೮. **'ಆ ತೇನ ಯಾತಂ' 'ನಿಮಿಷಶ್ಚಿಜ್ಜವೀಯಸಾ' –ಮಂತ್ರಗಳಲ್ಲಿ ವಾಯುದೇವನ ಪ್ರಸ್ತಾವ:**

– **'ತದುಕ್ತಂ ಋಷಿಣಾ..........ಜವೀಯಸೇತಿ'** –ಎಂಬ ಭಾಗದಲ್ಲಿ (2-2-7-7) **'ಆ ತೇನ ಯಾತಂ.....' 'ನಿಮಿಷಶ್ಚಿಜ್ಜವೀಯಸಾ'** –ಎಂಬ ಎರಡು ಮಂತ್ರಗಳ ಉದ್ಧಾರ ನಡೆದಿದ್ದು, ಅದರಲ್ಲಿ ವಿಷ್ಣುವಿನ ರಥದಲ್ಲಿ ಏರಿರುವವನಾಗಿ ಪ್ರಾಣ ದೇವನ ಪ್ರಸ್ತಾವ ಬಂದಿದೆ.

**೨೯. ನಾರಾಯಣನಿಂದ ಬ್ರಹ್ಮಶರೀರದ ಬೇರೆಬೇರೆ ಅಂಗದಿಂದ ಬೇರೆಬೇರೆ ದೇವತೆಗಳ ಸೃಷ್ಟಿಯಾದಂತೆ, ನಾಭಿಯಿಂದ ಅಪಾನ ಮತ್ತು ಮೃತ್ಯು ಎಂಬ ಎರಡು ರೂಪಗಳ ಮುಖ್ಯವಾಯುವಿನ ಸೃಷ್ಟಿ ಆಗಿದೆ:**

– **'ನಾಭ್ಯಾ ಅಪಾನೋಽಪಾನಾನ್ಮೃತ್ಯುಃ'** –ಎಂಬ ವಾಕ್ಯದಲ್ಲಿ (2-3-1-3) ಚತುರ್ಮುಖನ ನಾಭಿಯಿಂದ ಅಪಾನ ಮತ್ತು ಮೃತ್ಯುರೂಪಗಳಿಂದ ವಾಯುದೇವನ ಸೃಷ್ಟಿಯನ್ನು ಹೇಳಲಾಗಿದೆ.

**೩೦. ವಾಯುದೇವನಿಂದ ಬ್ರಹ್ಮದೇಹದ ನಾಭಿಗೆ ಪ್ರವೇಶ:**

– ಭಗವಂತನು ದೇವತೆಗಳಿಗೆ ನಿಮ್ಮನಿಮ್ಮ ಉತ್ಪತ್ತಿಸ್ಥಾನಕ್ಕನುಗುಣವಾಗಿ ಚತುರ್ಮುಖನ ಶರೀರವನ್ನು ಪ್ರವೇಶಿಸಿರಿ ಎಂದಾಗ ಬೇರೆಬೇರೆ ದೇವತೆಗಳು ಪ್ರವೇಶಿಸಿದಂತೆ **'ಮೃತ್ಯುರಪಾನೋ ಭೂತ್ವಾ ನಾಭಿಂ ಪ್ರಾವಿಶತ್'** –ಎಂಬ ಮಾತಿನಲ್ಲಿ (2-3-1-3) ತಿಳಿಸಿರುವಂತೆ ಮೃತ್ಯುನಾಮಕ ಪ್ರಧಾನವಾಯುದೇವ ಅಪಾನನಾಮಕ ತನ್ನ ರೂಪದೊಡನೆ ನಾಭಿಯಲ್ಲಿ ನೆಲೆಸಿದನು.

**೩೧. ದೇವತೆಗಳು ಹವಿಸ್ಸಿಗೆ ಭಾಗಿಗಳಾಗುವಂತೆ ವಾಯುದೇವನ ಅಶನಾ, ಪಿಪಾಸಾ ಎಂಬ ಎರಡು ರೂಪಗಳು ದೇವತೆಗಳಲ್ಲಿ ಪ್ರವೇಶಿಸಿದವು:**

– **'ತಮಶನಾ ಪಿಪಾಸೇ....... ಅಶನಾಪಿಪಾಸೇ ಭವತಃ'** –ಎಂಬ ಭಾಗದಲ್ಲಿ (2-3-2-3,4) ವಾಯುದೇವನ ಅಶನಾಪಿಪಾಸಾ ಎಂಬ ಎರಡು ರೂಪಗಳು ಭಗವದಾಜ್ಞಾನುಸಾರವಾಗಿ ದೇವತೆಗಳೊಳಗಿದ್ದು ಅವರ ಭಾಗದ ಹವಿಸ್ಸಿಗೆ ಭಾಗಿಗಳಾಗಿರುವರು.

**೩೨. ಚತುರ್ಮುಖ ಅಪಾನನಿಂದ ಅನ್ನವನ್ನು ಭೋಗಿಸಲು ಶಕ್ತನಾದನು:**

– ಚತುರ್ಮುಖ ವಾಗಿಂದ್ರಿಯವೇ ಮುಂತಾದ ಬೇರೆಬೇರೆ ಇಂದ್ರಿಯಾಭಿಮಾನಿಗಳಿಂದ ಅನ್ನವನ್ನು ಭೋಗಿಸಲು ಬಯಸಿದರೂ ಶಕ್ತನಾಗದಿದ್ದಾಗ, **'ತದ್ ಅಪಾನೇನಾಜಿಘೃಕ್ಷತ್....... ಯದ್ ವಾಯುಃ'** –ಎಂಬ ಭಾಗದಲ್ಲಿ (2-3-3-6) ತಿಳಿಸಿರುವಂತೆ ವಾಯುವಿನ ಅಪಾನರೂಪದಿಂದ ಚತುರ್ಮುಖ ಅನ್ನವನ್ನು ಭೋಗಿಸಲು ಸಮರ್ಥನಾದನು. ಆದ್ದರಿಂದ ವಾಯುವೇ ಎಲ್ಲರಿಗೂ ಉಣಿಸುವವನೂ ಉಣ್ಣುವವನೂ, ಆಯುಷ್ಯಪ್ರದನೂ, ಜ್ಞಾನ, ಭಕ್ತಿ, ಮೋಕ್ಷಗಳನ್ನು ನೀಡುವವನೂ ಆಗಿರುವನೆಂದು ತಿಳಿಸಲಾಗಿದೆ.

**೩೩. ಭಗವಂತ ಪ್ರೇರಕನಾಗಿ ಚತುರ್ಮುಖನ ಶರೀರವನ್ನು ನೆತ್ತಿಯನ್ನು ವಿಭಜಿಸಿ ಸುಷುಮ್ನಾನಾಡಿಯ ಮೂಲಕ ಪ್ರವೇಶಿಸುವಾಗ ಅವನ ಜೊತೆಗೆ ವಾಯುದೇವನೂ ಇರುವನು:**

– 'ಸ ಏತಮೇವ...... ಪ್ರಾಪದ್ಯತ' –ಎಂಬ ಮಾತಿನಲ್ಲಿ (2-3-3-9) ತಿಳಿಸಿರುವಂತೆ ಚತುರ್ಮುಖನ ದೇಹವನ್ನು ವಾಯುದೇವನ ಜೊತೆಗೆ ಪ್ರವೇಶಿಸುವನು.

**೩೪. ವಿಷ್ಣುವಿನಲ್ಲಿ ಸಲ್ಲಿಸುವ ಪ್ರಾರ್ಥನೆಯಲ್ಲಿ ವಾಯುದೇವನ ಉಲ್ಲೇಖ:**

– **'ವೇದಸ್ಯ ಮ ಆಣೀಸ್ಥ ಶ್ರುತಂ ಮೇ ಮಾ ಪ್ರಹಾಸೀಃ'** –ಎಂದು (2-6-1-1) ವಿಷ್ಣುವಿನಲ್ಲಿ ತನ್ನ ಶ್ರವಣಕ್ಕೆ ಗೋಚರಿಸದಿರಬಾರದೆಂದು ಕೇಳಿಕೊಳ್ಳುವಾಗ ಶ್ರೀವಿಷ್ಣುವನ್ನು **'ಆಣೀಸ್ಥ'** ಎಂದು ಸಂಬೋಧಿಸುವ ಮೂಲಕ ವಾಯುದೇವ 'ವೇದಸ್ಥಾಪಕ' –ಎಂದು ಸೂಚಿಸಿಕೊಡಲಾಗಿದೆ.

**೩೫. ಪ್ರಾಣನನ್ನು ಸರ್ವಾಧಾರನೆಂದು ಉಪಾಸನೆ:**

– **'ಪ್ರಾಣೋ ವಂಶ ಇತಿ ವಿದ್ಯಾತ್....... ಇತ್ಯೇನಂ ಬ್ರೂಯಾತ್'** –ಈ ಭಾಗದಲ್ಲಿ (2-7-4-1,2) ಭಗವಂತನ ಜೊತೆಗೆ ಮುಖ್ಯಪ್ರಾಣನನ್ನು ಸರ್ವಾಧಾರನನ್ನಾಗಿ ನಡೆಸ ಬೇಕಾದ ಉಪಾಸನೆಯ ಬಗ್ಗೆ ತಿಳಿಸಲಾಗಿದೆ.

**೩೬. ವೇದವಿದ್ಯೆಗೆ ಅಪಾತ್ರರಿಗೆ ಅದನ್ನು ಉಪದೇಶ ನೀಡದಂತೆ ವಾಯುದೇವನಲ್ಲಿ ವೇದವಿದ್ಯೆಗಳ ಪ್ರಾರ್ಥನೆ:**

– 'ಬೃಹಸ್ಪತೇ ನ ಪರಃ ಸಾಮ್ನೋ....' –ಎಂಬ ಮಾತಿನಲ್ಲಿ (2-7-5-6) ಉಲ್ಲೇಖ ಗೊಂಡ ವೇದಮಂತ್ರದಲ್ಲಿ ವೇದವಿದ್ಯೆಗೆ ಅಯೋಗ್ಯರು ಯಾರೆಂಬುದನ್ನು ತಿಳಿಸಿ ಅವರಿಗೆ ತಮ್ಮನ್ನು ಉಪದೇಶಿಸಬಾರದೆಂದೂ, ವೇದವಿದ್ಯೆಗೆ ಯೋಗ್ಯರಾದವ ರಿಗೆ ತಮ್ಮನ್ನು ಉಪದೇಶಿಸುವಂತೆಯೂ ಮುಖ್ಯಪ್ರಾಣನಲ್ಲಿ ವೇದಾಭಿಮಾನಿ ಗಳು ನಡೆಸಿರುವ ಪ್ರಾರ್ಥನೆ ಪ್ರಸ್ತಾವಿಸಲ್ಪಟ್ಟಿದೆ.

**೩೭. ಎರಡನೆಯ ಸಂಹಿತಾದೇವತೆಯೊಡನೆ ಜೊತೆಗಾರಿಕೆ ಮತ್ತು ಮೂರನೆಯ ಸಂಹಿತಾದೇವತೆ ಮುಖ್ಯಪ್ರಾಣ:**

– ಬೇರೆಬೇರೆ ಸಂಹಿತಾದೇವತೆಗಳನ್ನು ತಿಳಿಸುತ್ತ **'ಪ್ರಾಣಃ.......ಪವಮಾನೇನ, ಪವಮಾನೋ ವಿಶ್ವೈರ್ದೇವೈಃ.......'** –ಎಂಬ ಭಾಗದಲ್ಲಿ (2-7-6-3) ನಾರಾ ಯಣನು ವಾಯುದೇವನೊಡನೆ ಸೇರಿ ಎರಡನೇ ಸಂಹಿತಾದೇವತೆ, ವಾಯು ದೇವ ಭಾರತ್ಯಾದಿ ಸಕಲ ದೇವತೆಗಳೊಡನೆ ಸೇರಿ ಮೂರನೆಯ ಸಂಹಿತಾ ದೇವತೆ ಎಂದು ತಿಳಿಸಲಾಗಿದೆ.

**೩೮. ಅಸ್ಥ್ಯಾದ್ಯಭಿಮಾನಿ ದೇವತೆಗಳಿಗೆಲ್ಲ ಆಧಾರ:**

– **'ಪ್ರಾಣೋ ವಂಶ ಇತಿ........ ಅಂತಸ್ಥರೂಪಂ'** –ಎಂಬ ಭಾಗದಲ್ಲಿ (2-8-1-1) ಮುಖ್ಯಪ್ರಾಣ ಮನೆಯ ಮೇಲುಭಾವಣಿಯ ನಡುವಿನ ತೊಲೆಯನ್ನು ಎಲ್ಲ ಸಣ್ಣ ತೊಲೆಗಳು ಆಧರಿಸಿಕೊಂಡಿರುವಂತೆ ಮುಖ್ಯಪ್ರಾಣನನ್ನು ಇತರೇಂದ್ರಿ ಯಾಭಿಮಾನಿಗಳೆಲ್ಲ ಆಶ್ರಯಿಸಿಕೊಂಡಿರುವರೆಂದು ಪ್ರತಿಪಾದಿಸಲಾಗಿದೆ.

**೩೯. ಮಜ್ಜೆಯಲ್ಲಿ, ರೇತಸ್ಸಿನಲ್ಲಿ ಪ್ರಾಣನ ವಿಶೇಷ ಸನ್ನಿಧಾನ:**

– 'ಏಷ ಹ ವೈ....... ನ ಸಂಭವೇತ್' –ಎಂಬ ಭಾಗದಲ್ಲಿ (2-8-2-4) ಮಜ್ಜೆಯಲ್ಲಿ ಪ್ರಾಣದೇವನ ಸನ್ನಿಧಾನವಿದೆ. ಅಂತಹ ಮಜ್ಜೆಯೇ ರೇತಸ್ಸಾಗುವಾಗ ರೇತಸ್ಸಿ

ನಲ್ಲೂ ಮುಖ್ಯಪ್ರಾಣನ ಸನ್ನಿಧಾನವಿದೆ. ಆದುದರಿಂದಲೇ ರೇತಸ್ಸು ಗರ್ಭಕ್ಕೆ ಕಾರಣವಾಗುವುದು ಎನ್ನಲಾಗಿದೆ.

೪೦. **ಬಾಧ್ವ ಎನಿಸುವ ವಾಯುದೇವ:**

– **'ಚತ್ವಾರ ಪುರುಷಾ ಇತಿ ಬಾಧ್ವಃ'** –ಎಂಬುದಾಗಿ (2-8-3-1) ಪುರುಷೋಪಾಸನೆಯನ್ನು ನಡೆಸುವ ವಾಯುದೇವನು ಸಂಸಾರಬಾಧಿತರಿಂದ ಮೋಕ್ಷಕ್ಕಾಗಿ ಶರಣು ಹೊಂದಲ್ಪಡುವನೆಂದು 'ಬಾಧ್ವ' –ಎಂಬ ಹೆಸರಿನಿಂದ ಉಲ್ಲೇಖಿಸಲ್ಪಟ್ಟಿರುವನು.

೪೧. **ಮರಣಸೂಚಕ ಶಕುನಗಳನ್ನು ಕಂಡವನು ಜಪಿಸಬೇಕಾದ 'ಯದಂತಿ ಯಚ್ಚ ......... ' ಮುಂತಾದ ಏಳು ಋಚೆಗಳಲ್ಲಿ ವಾಯುದೇವನ ಪ್ರಸ್ತಾವ ಹಾಗೆಯೇ 'ಯತ್ರ ಬ್ರಹ್ಮಾ ಪವಮಾನ' ಮೊದಲಾದ ಆರು ಋಙ್ಮಂತ್ರಗಳಲ್ಲಿ ವಾಯುದೇವನ ಪ್ರಾರ್ಥನೆ:**

ಮರಣಸೂಚಕ ಶಕುನಗಳನ್ನು ತಿಳಿಸಿ, ಅಂತಹ ಶಕುನಗಳನ್ನು ಕಂಡವನು **'ಯದಂತಿ ಯಚ್ಚ ದೂರಕ ಇತಿ ಸಪ್ತ ಜಪೇತ್'** (2-8-4-7, 8) ಎಂಬುದಾಗಿ ಜಪಿಸಲು ತಿಳಿಸಲ್ಪಟ್ಟ ಏಳು ಋಕ್ ಮಂತ್ರಗಳಲ್ಲಿ ವಾಯುವಿನ ಸ್ತುತಿ ಇದೆ. **'ಯತ್ರ ಬ್ರಹ್ಮಾ ಪವಮಾನೇತಿ ಷಟ್'** ಎಂದು ಉಲ್ಲೇಖಿಸಲ್ಪಟ್ಟ ಆರು ಋಙ್ಮಂತ್ರಗಳು ವಾಯುದೇವನ ಪ್ರಾರ್ಥನಾರೂಪದಲ್ಲಿವೆ.

★

# • ಋಗ್ವೇದದಲ್ಲಿ ವಾಯುದೇವನ ಪ್ರಸ್ತಾವ •

ಋಗ್ವೇದದ ನಲ್ವತ್ತು ಸೂಕ್ತಗಳಿಗೆ ಶ್ರೀ ಮಧ್ವರು ಭಾಷ್ಯವನ್ನು ರಚಿಸಿದ್ದು, ಅದರ ಪ್ರಕಾರ ಆ ನಲ್ವತ್ತು ಸೂಕ್ತಗಳ ೪೮೯ ಮಂತ್ರಗಳಲ್ಲಿ ವಾಯುದೇವನ ಪ್ರಸ್ತಾವ ಯಾವ ಯಾವ ಮಂತ್ರದಲ್ಲಿ ಹೇಗೆಹೇಗೆ ಬಂದಿದೆ ಎಂದು ಪರಿಶೀಲಿಸೋಣ.

೧. **ವಾಯುವನ್ನು ಅನುಸರಿಸುವಿಕೆ:**

– ಮೂರನೆಯ ಸೂಕ್ತದ ಮೂರನೆಯ ಮಂತ್ರದಲ್ಲಿ ಅಶ್ವಿನಿ ಎನಿಸುವ ಭಗವಂತ ನನ್ನೂ, ಗೌಣವಾಗಿ ಅಶ್ವಿನಿ ಶಬ್ದವಾಚ್ಯರಾದ ಅಶ್ವಿನೀದೇವತೆಗಳನ್ನೂ **'ಆಯಾತಂ ರುದ್ರ ವರ್ತನೀ'** –ಎಂಬುದಾಗಿ 'ರುದ್ರವರ್ತನೀ' –ಎಂಬ ವಿಶೇಷಣದಿಂದ ಆಹ್ವಾನಿಸಲಾಗಿದೆ.

ಶ್ರೀ ಮಧ್ವರು ರೋಗಗಳನ್ನು ದೂರ ಮಾಡುವ ಪ್ರಯುಕ್ತ ವಾಯುದೇವನೇ 'ರುದ್ರ' ಎನಿಸುವನೆಂದು ವ್ಯಾಖ್ಯಾನಿಸಿ, ಅಶ್ವಿನಿ ಎನಿಸುವ ಭಗವಂತನು ಸ್ನೇಹ ದಿಂದಾಗಿ ವಾಯು ದೇವನನ್ನು ಅನುಸರಿಸಿದರೆ, ಅಶ್ವಿನೀದೇವತೆಗಳು ವಾಯು ದೇವರ ಭೃತ್ಯರಾಗಿರುವುದರಿಂದ ವಾಯುದೇವನನ್ನು ಅನುಸರಿಸುವರು. ಹಾಗೆಯೇ ಪರಮಾತ್ಮನಾದರೂ **'ಕಸ್ಮಿನ್ನ್ವಹಂ.......'** ಎಂಬ ಉಪನಿಷತ್ತು ಸಾರುತ್ತಿರುವಂತೆ ಜೀವರ ದೇಹವನ್ನು ಪ್ರವೇಶಿಸಲು ದ್ವಾರದಂತೆ ವಾಯುದೇವನನ್ನು ಸೃಷ್ಟಿಸಿದ್ದು, ಅವನ ಮಾರ್ಗದಲ್ಲಿಯೇ ಜೀವಾತ್ಮರ ದೇಹವನ್ನು ಪ್ರವೇಶಿಸುವುದರಿಂದ 'ರುದ್ರ ವರ್ತಿನೀ' ಎನಿಸಿರುವರೆಂದು ಅರ್ಥೈಸಿರುವರು.11

೨. **ಭಗವಂತನಿಗೆ ಪ್ರಿಯನಾಗಿರುವವನು:**

– ಮೂರನೆಯ ಸೂಕ್ತದ ಹತ್ತನೆಯ ಮಂತ್ರದಲ್ಲಿ **'ಪಾವಕಾ ನಃ ಸರಸ್ವತೀ........'** ಎಂದು ಭಾರತೀದೇವಿಯನ್ನು ಸರಸ್ವತೀ ಎಂದು ಕರೆದಿದ್ದು, ಅದಕ್ಕೆ ತೋರಿಸ ಲಾಗುವ ಒಂದು ಕಾರಣ ವ್ಯಾಪ್ತನಾಗಿರುವುದರಿಂದ, ಸಮಜ್ಞನಾಗಿರುವುದರಿಂದ ಭಗವಂತನು 'ಸರಃ' ಎನಿಸಿದರೆ, ಅಂತಹ ಭಗವಂತನಿಗೆ ಪ್ರಿಯನಾಗಿರುವುದ ರಿಂದ ಸರಃ ಎನಿಸಿರುವ ಭಗವಂತ ನನ್ನು ಹೊಂದಿರುವವನು ವಾಯುದೇವ

---

11. ರುಜಾಂ ದ್ರವಣತೋ ರುದ್ರೋ ವಾಯುಸ್ತದನುವರ್ತನಾತ್ ।
ಸ್ನೇಹತೋಽನುವಶತ್ವಾದ್ ವಾ ತನ್ಮಾರ್ಗಗತಿತೋಽಥ ವಾ ॥
ಕಸ್ಮಿನ್ನ್ವಿಹಮಿತಿ ಶ್ರುತ್ವಾ ವಾಸುದೇವೋಽಶ್ವಿನಾವಪಿ ।
ರುದ್ರವರ್ತಿನಿಶಬ್ದೋಕ್ತಾ....... ॥ – *ಋ. ಭಾ. 3-136.*

–ಸರಸ್ವಾನ್ ಎನಿಸಿದರೆ, ಅವನ ಪತ್ನಿ ಎಂಬ ಅರ್ಥದಲ್ಲಿ ಭಾರತೀದೇವಿ 'ಸರಸ್ವತೀ' ಎನಿಸುವಳೆಂದು ವ್ಯಾಖ್ಯಾನಿಸಲಾಗಿದೆ.[12]

**೩. ವಾಯುವಿನಿಂದ ಕೂಡಿಕೊಂಡು ಪೂಜಿಸುವರು:**

– ಆರನೆಯ ಸೂಕ್ತದ ಎಂಟನೆಯ ಮಂತ್ರದಲ್ಲಿ ಯಜ್ಞಾಭಿಮಾನಿಯಾದ ದೇವೇಂದ್ರನು ಇತರ ದೇವತೆಗಳ ಜೊತೆಗೆ ಹೇಗೋ ಹಾಗೆ ಬಲದೇವತೆಯಾದ ವಾಯುದೇವನಿಂದಲೂ ಕೂಡಿಕೊಂಡು ಹೇಗಾದೀತೋ ಹಾಗೆ ಪರಮೇಶ್ವರ ನಾದ ಪರಮಾತ್ಮನನ್ನು ಪೂಜಿಸು ವನೆಂದು ತಿಳಿಸಲಾಗಿದೆ.

ಈ ಮಂತ್ರದಲ್ಲಿ ಬಂದಿರುವ **'ಸಹಸ್ವತ್'** ಶಬ್ದವನ್ನು ಶ್ರೀ ಮಧ್ವರು ವಾಯು ವಿನಿಂದ ಕೂಡಿದ್ದು ಹೇಗಾದೀತೋ ಹಾಗೆ ಎಂದು ವ್ಯಾಖ್ಯಾನಿಸಿರುವರು.[13]

**೪. ಜ್ಞಾನಯುಕ್ತನನ್ನಾಗಿ ಪ್ರೇರಣೆ:**

– ಏಳನೇ ಸೂಕ್ತದ ಎರಡನೇ ಮಂತ್ರದಲ್ಲಿ ಇಂದ್ರನಾಮಕ ಭಗವಂತನು ತನ್ನ ಆದರಕ್ಕೆ ಯೋಗ್ಯನಾಗಿರುವುದರಿಂದ **'ಅದ್ರಿ'** ಎನಿಸಿರುವ ವಾಯುದೇವನನ್ನು ಜ್ಞಾನಗಳಿಂದ ಪ್ರೇರಿಸಿದನು; ಜ್ಞಾನಯುಕ್ತನನ್ನಾಗಿ ಪ್ರೇರಿಸಿದನು –ಎಂದು ತಿಳಿಸಲಾಗಿದೆ.[14]

**೫. ಪ್ರಾಣಪ್ರವರ್ತಕ:**

– ಹತ್ತನೇ ಸೂಕ್ತದ ಏಳನೇ ಮಂತ್ರದಲ್ಲಿ ಆದರಯೋಗ್ಯನಾಗಿರುವುದರಿಂದ ಮುಖ್ಯಪ್ರಾಣನನ್ನು **'ಅದ್ರಿ'** –ಎಂದು ಕರೆದು, ಅಂತಹ ಮುಖ್ಯಪ್ರಾಣನ ಪ್ರವರ್ತಕ ಇಂದ್ರನಾಮಕ ಭಗವಂತ ಎಂಬ ಅಭಿಪ್ರಾಯದಲ್ಲಿ[15] ಇಂದ್ರನಾಮಕ ಭಗವಂತನನ್ನು **'ಅದ್ರಿವಃ'** –ಎಂದು ಸಂಬೋಧಿಸಲಾಗಿದೆ.

**೬. ಒಳ್ಳೆಯ ಮಾತುಗಳಿಗೆ ಒಡೆಯ:**

– ಹದಿನೆಂಟನೇ ಸೂಕ್ತದ ಒಂದನೇ ಮಂತ್ರದಲ್ಲಿ ವೇದಗಳೆಂಬ ಒಳ್ಳೆಯ ಮಾತು ಗಳಿಂದ ಒಡೆಯನಾಗಿರುವವನೆಂಬ ಅಭಿಪ್ರಾಯದಲ್ಲಿ ವಾಯುದೇವನನ್ನು

---

12. ಸರಣಾತ್ ಸರ್ವಗತ್ವೇನ ಸರ್ವಜ್ಞೋ ವಾ ಸರೋ ಹರಿಃ ।
...... ಹರಿಪ್ರಿಯತ್ವತೋ ವಾಯುಃ ಸರಸ್ವಾಂಸ್ತತ್ಸ್ತ್ರಿಯಾಥವಾ ॥ – ಋ.ಭಾ. *3-151.*

13. ವಾಯುನಾ ಚ ಸಹಾರ್ಚಂತಿ...... । – ಋ.ಭಾ. *6-203.*

14. ಜ್ಞಾನೈರಾದರಯೋಗ್ಯಂ ಚ ಪ್ರಾಣಾತ್ಮಾನಂ ಸಮೈರಯತ್ । – ಋ.ಭಾ. *7-209.*

15. ಅದ್ರಿರಾದರಣೀಯತ್ವಾತ್ ಪ್ರಾಣಸ್ತದ್ವರ್ತಕೋಽದ್ರಿವಾ । – ಋ.ಭಾ. *10-243.*

* ಸೌಮ್ಯಂ ಶಬ್ದಂ ಕೃಣುತ್ವಂ ನೋ ವಿಷ್ಣೋ ವಾಯೋ ಸುವಾಕ್‌ಪತೇ ।
– ಋ.ಭಾ. *18-1.*

'ಬ್ರಹ್ಮಣಸ್ಪತೇ' ಎಂದು ಸಂಬೋಧಿಸಿ ಸೌಮ್ಯಶಬ್ದವನ್ನು ಮಾಡಲು ಪ್ರಾರ್ಥಿಸಿ ಕೊಳ್ಳಲಾಗುವುದು.

೭. **ವೇಗವುಳ್ಳವನು:**

– ಹದಿನೆಂಟನೆಯ ಸೂಕ್ತದ ಎರಡನೆಯ ಮಂತ್ರದಲ್ಲಿ ವೇಗವುಳ್ಳವನೆಂಬ ಅಭಿಪ್ರಾಯದಲ್ಲಿ ವಾಯುದೇವನನ್ನು **'ತುರಃ'** –ಎಂದು ಉಲ್ಲೇಖಿಸಿ, ಅಂತಹ ವಾಯುದೇವನು ನಮ್ಮ ಜೊತೆಗೆ ಸೇರಿಕೊಳ್ಳಲಿ ಎಂದು ಪ್ರಾರ್ಥಿಸಲಾಗಿದೆ.16

೮. **ಯಜ್ಞದ ಸಭೆಯ ಒಡೆಯ:**

– ಹದಿನೆಂಟನೆಯ ಸೂಕ್ತದ ಆರನೆಯ ಮಂತ್ರದಲ್ಲಿ **'ಸದಸಸ್ಪತಿ'** ಶಬ್ದದಿಂದ ಸದಸ್ ಎನಿಸುವ ಯಜ್ಞದ ಸಭೆಗೆ ಒಡೆಯನಾದವನೆಂಬ ಅಭಿಪ್ರಾಯದಲ್ಲಿ ವಾಯುವನ್ನು ಉಲ್ಲೇಖಿಸಲಾಗಿದೆ.17

೯. **ಮರುದ್ದೇವತೆಯಲ್ಲಿರುವ ಭಗವದ್ರೂಪಗಳು:**

– ಹತ್ತೊಂಭತ್ತನೇ ಸೂಕ್ತದ ಐದನೇ ಮಂತ್ರದಲ್ಲಿ ಭಗವಂತನ ದೈತ್ಯರ ವಿರುದ್ಧ ಕಾದಾಡಲು ಬಲವುಳ್ಳ ಶುದ್ಧಗಳಾದ, ಕ್ಷೇತ್ರವೆನಿಸುವ ದೇಹವನ್ನು ರಕ್ಷಿಸುವ, ಒಳ್ಳೆಯ ಸುಖವನ್ನು ಅನುಭವಿಸುವ –ಹೀಗೆ ಅನೇಕ ಗುಣವುಳ್ಳ ಮರುತ್ ಶಬ್ದವಾಚ್ಯರಾದ ಭಗವದ್ರೂಪಗಳ ಪ್ರಸ್ತಾವ ಬಂದಿದ್ದು, ಅವು ಮರುತ್ ಎನಿಸುವ ವಾಯುದೇವನಲ್ಲಿ ಇರುವ ರೂಪಗಳೆಂದು ಸೂಚಿಸಲಾಗಿದೆ.18

೧೦. **ಭರತ ಎನಿಸುವ ವಾಯುವಿಗೆ ಒಡೆಯನಾದುದರಿಂದ ವಿಷ್ಣು 'ಭಾರತೀ':**

– ಇಪ್ಪತ್ತೆರಡನೆಯ ಸೂಕ್ತದ ಹತ್ತನೆಯ ಮಂತ್ರದಲ್ಲಿ **'ಅಗ್ನ...... ಭಾರತೀಂ....... ಆವಹ'** –ಎಂದು ಅಗ್ನಿನಾಮಕ ಭಗವಂತನಲ್ಲಿ ಭಾರತೀ ಎನಿಸುವ ವಿಷ್ಣುವಿನ ರೂಪವನ್ನು ತನ್ನೆಡೆಗೆ ತರಲು ಬೇಡಿಕೊಳ್ಳಲಾಗುವುದು. ಭರತ ಎನಿಸುವ ವಾಯುದೇವನಿಗೆ ಸಂಬಂಧಿಸಿದ ಒಡತಿ ಎಂಬ ಅರ್ಥದಲ್ಲಿ ಶ್ರೀವಿಷ್ಣು ಭಾರತೀ

---

16. ಸ ನಸ್ಸಿಷಕ್ತು ಯಸ್ತುರಃ । – *18-2.*

* '.........ಅಸ್ಮಾಭಿಃ ಸ ಯುಗ್ ಭವೇತ್ । ತುರೋ ವೇಗಾದ್ ಹರಿರ್ವಾಯುಃ ।
– *ಋ.ಭಾ. 18-2.*

17. ಸದಸಸ್ಪತಿಮದ್ಭುತಂ....... ಅಯಾಸಿಷಮ್ । – *ಋ.ವೇ. 18-6.*

* ಸದಸಸ್ಪತಿರ್ಹರಿಃ ಸಾಕ್ಷಾದ್ ವಾಯುರಗ್ನಿರಥಾಪಿ ವಾ । – *ಋ.ಭಾ. 18-323.*

* ಸಾಕ್ಷಾದ್ವಾಯುಃ ಮುಖ್ಯವಾಯುರಪಿ । – *ಋಗ್ಭಾಷ್ಯಟೀಕಾ.*

18.

'.........ಏತಾದೃಶಾನಿ ರೂಪಾಣಿ..... ತಾದೃಶಾನ್ಯೇವ ದೇವಗಾನ್ಯಪಿ ಸರ್ವಶಃ ।
– *ಋ.ಭಾ. 19-3-29.*

* ದೇವಗಾನೀತಿ ಮರುದಗ್ನಿಗತಾನಿ । – *ಋಗ್ಭಾಷ್ಯಟೀಕಾ.*

ಎನಿಸುವನು. ವಾಯುದೇವನಾದರೂ ಬ್ರಹ್ಮಾಂಡದ ಭಾರದಿಂದ ವ್ಯಾಪ್ತನಾಗಿರುವುದರಿಂದ ಹಾಗೂ ಜಗತ್ತಿಗೆ ಒಡೆಯನಾಗಿರುವುದರಿಂದ ಭರತ ಎನಿಸುವನೆಂದು ಶ್ರೀ ಮಧ್ವರು ವ್ಯಾಖ್ಯಾನಿಸಿರುವರು.19

೧೧. **ದೇವಿಯರಿಗೆ ರಕ್ಷಣೆ ವಾಯುದೇವನಿಂದ:**

– ಇಪ್ಪತ್ತೆರಡನೆಯ ಸೂಕ್ತದ ಹನ್ನೊಂದನೆಯ ಮಂತ್ರದಲ್ಲಿ ದೇವಿಯರು ತಾವು ವೈಧವ್ಯಕ್ಕೆ ಒಳಗಾಗದೆ ಓಲೆಭಾಗ್ಯಸಂಪನ್ನರಾಗಿ ಯಾವಾಗಲೂ ಮೆರೆಯುತ್ತಿರಲು ತಮ್ಮ ಜೊತೆಗೆ ರಕ್ಷಕನಾಗಿ ಪ್ರಾಣದೇವನಿರುವನೆಂದು ತಿಳಿಸಿರುವರು.20

೧೨. **ಜಗದ್ಧಾರಕವಾಯುವಿಗೆ ಧಾರಕ ವಿಷ್ಣು:**

– ಇಪ್ಪತ್ತೆರಡನೆಯ ಸೂಕ್ತದ ಹದಿನೆಂಟನೆಯ ಮಂತ್ರದಲ್ಲಿ **'ಅತೋ ಧರ್ಮಾಣಿ ಧಾರಯನ್'** –ಎಂಬ ಮಾತಿನಲ್ಲಿ ಜಗದ್ಧಾರಕರಾದ ವಾಯ್ವಾದಿಗಳನ್ನೂ ಧರಿಸಿರುವವನು ಶ್ರೀ ವಿಷ್ಣು ಎಂದು ತಿಳಿಸಲಾಗಿದೆ.21

೧೩. **ಪ್ರಾಣನ ಜೊತೆಗೇ ಇರುವ ಗೆಳೆಯ**

– ಇಪ್ಪತ್ತೆರಡನೆಯ ಸೂಕ್ತದ ೧೯ನೆಯ ಮಂತ್ರದಲ್ಲಿ **'ಇಂದ್ರಸ್ಯ ಯುಜ್ಯಃ ಸಖಾ'** ಎಂಬುದಾಗಿ ಶ್ರೀ ವಿಷ್ಣು ಇಂದ್ರ ಎನಿಸುವ ವಾಯುದೇವನ ಜೊತೆಗೇ ಇರುವ ಗೆಳೆಯನೆಂದು ಸಾರಲಾಗಿದೆ ಎಂದು ಶ್ರೀ ಮಧ್ವರು ವ್ಯಾಖ್ಯಾನಿಸಿರುವರು. **'ಕಸ್ಮಿನ್ನ್ವಹಮುತ್ಕ್ರಾಂತೇ'** ಇತ್ಯಾದಿ ಷಟ್‌ಪ್ರಶ್ನದ ಮಾತಿನಿಂದ ಭಗವಂತನು ಜೀವರ ದೇಹಕ್ಕೆ ಪ್ರವೇಶಿಸಲು ದ್ವಾರವನ್ನಾಗಿ ವಾಯುದೇವನನ್ನು ಸೃಷ್ಟಿಸಿರುವುದರಿಂದ ಅಂತಹ ವಾಯುದೇವನಿಗೆ ಭಗವಂತ ಗೆಳೆಯನಾಗುವನೆಂದು ಸಮರ್ಥಿಸಿದ್ದರೆ, **'ತ್ವಯೇದಿಂದ್ರ ಯುಜಾ ವಯಂ......'** ಎಂಬ ಋಗ್ವೇದದ ಮಾತಿನ (8-92-32) ಸಂವಾದದಿಂದ ವಾಯುದೇವನ ಇಂದ್ರಶಬ್ದವಾಚ್ಯತ್ವವನ್ನು ಉಪಪಾದಿಸಿರುವರು.22

---

19. ವಿಷ್ಣುಶ್ಚ ಪ್ರಾಣಸಂಬಂಧಾದ್ ಭಾರತೀತ್ಯೇವ ಚೋದಿತಃ ।
ಪ್ರಾಣಸ್ತು ಭರತೋ ಭಾರತತತ್ವಾತ್ ಭರ್ತೃರೂಪತಃ ॥ – *ಋ.ಭಾ. 22-25.*
* ಭರತಸ್ಯೇಯಂ ಸ್ವಾಮಿನೀ ಭಾರತೀ । – *ಋಗ್ಭಾಷ್ಯಟೀಕಾ.*

20. ಅಭಿ ನಃ ದೇವೀಃ ಅವಸಾ......... ಅಚ್ಛಿನ್ನಪತ್ರಾಃ ಸಚಂತಾಮ್ । – *ಋ.ವೇ. 22-11.*
* ಪ್ರಾಣೇನೈವಾವಸಾ ಸಾಕಂ ಯಸ್ಮಾದವಿಧವಾಃ ಸದಾ ।
ಅತೋ ಹ್ಯಚ್ಛಿನ್ನಪತ್ರಾಸ್ತಾಃ ಸದಾಯುಕ್ಕರ್ಣಭೂಷಣಾಃ । – *ಋಗ್ಭಾಷ್ಯ 22-27.*

21. ಅತೋ ಧರ್ಮಾಣಿ ಧಾರಯನ್ । – *ಋ.ವೇ. 22-18.*
* *.......ಧಾರಕಾಂಶ್ಚೈವ ವಾಯ್ವಾದೀನ್ ಧಾರಯನ್ ವರ್ತತೇ ತತಃ ।
– *ಋಗ್ಭಾಷ್ಯ 22-36.*

22. ........ಇಂದ್ರಸ್ಯ ಸಹಿತಃ ಸಖಾ ।

೧೪. **ಧೈರ್ಯದಿಂದ ಧ್ವನಿ ಹೊರಡುವುದು:**

– ಇಪ್ಪತ್ತಮೂರನೆಯ ಸೂಕ್ತದ ೧೧ನೆಯ ಮಂತ್ರದಲ್ಲಿ ವಿಶ್ವೇದೇವತೆಗಳನ್ನು ಸಂಬೋಧಿಸಿ 'ಶುಭ'ನಾದ ಅಂದರೆ ಉತ್ತಮನಾದ ವಿಷ್ಣುವನ್ನು ಹೇಗೋ ಹಾಗೆ ವಾಯುವನ್ನು ಶರಣಾಗತರಾದಿರೆಂದರೆ ನಿಮ್ಮ ಧ್ವನಿಯು ಜಯಶಾಲಿಗಳ ಧ್ವನಿಯಂತೆ ಧೈರ್ಯದಿಂದ ಹೊರಹೊಮ್ಮುವುದೆಂದು ಸಂದೇಶಿಸಲಾಗಿದೆ.23

೧೫. **'ಹಸ್ಕಾರ' ಎನಿಸುವ ವಾಯುವಿನ ಪುತ್ರ:**

– ೨೩ನೆಯ ಸೂಕ್ತದ ೧೨ನೆಯ ಮಂತ್ರದಲ್ಲಿ ದೋಷಗಳನ್ನೆಲ್ಲ ತ್ಯಜಿಸಿರುವುದರಿಂದಲೂ, ಗುಣಗಳನ್ನೆಲ್ಲ ಹೊಂದಿರುವುದರಿಂದಲೂ ವಾಯುದೇವನು 'ಹಸ್ಕಾರ' ಎಂದೆನಿಸುವನೆಂದು, ಆ ಹೆಸರಿನಿಂದ ಅವನನ್ನು ಉಲ್ಲೇಖಿಸಿ ಅಂತಹ ವಾಯು ದೇವನಿಂದ ಹಾಗೂ ಭಾರತಿಯಿಂದ ಎಲ್ಲ ದೇವತೆಗಳು ಹುಟ್ಟಿದವರೆಂದು ತಿಳಿಸಲಾಗಿದೆ.24

---

ಪ್ರಾಣಸ್ಯೈವೇಂದ್ರನಾಮ್ನಶ್ಚ ಕಸ್ಮಿನ್ನಹಮಿತಿ ಶ್ರುತೇಃ ॥
ತ್ವಯೇದಿಂದ್ರೇತಿ ವಚನಾತ್ ಪ್ರಾಣ ಇಂದ್ರಾಭಿಧೋ ಮತಃ ॥

– *ಋಗ್ಭಾಷ್ಯ 22-38.*

23. ಜಯತಾಮಿವ ತನ್ಯತುರ್ಮರುತಾಮೇತಿ ಧೃಷ್ಣುಯಾ ।
ಯಚ್ಛುಭಂ ಯಾಥನಾ ನರಃ । – *ಋ.ವೇ. 23-11.*

* ಜಯತಾಮಿವ ತದ್‌ಧ್ವನಿಃ । ಧೈರ್ಯಾದ್ ಯಾತಿ ಯದಾ ವಿಷ್ಣುಂ ವಾಯುಂ ವಾ ಯಾಥನೋತ್ತಮಮ್ । – *ಋ.ಭಾ. 23-47.*

* ಯಾಥನ ಯೂಯಂ ಯಾಥ । – *ಋಗ್ಭಾಷ್ಯಟೀಕಾ.*

24. ಹಸ್ಕಾರಾದ್ವಿದ್ಯುತಸ್ಪರ್ಯತೋ ಜಾತಾ ಅವಂತು ನಃ । ಮರುತೋ ಮೃಳಯಂತು ನಃ ।
– *ಋ.ವೇ. 23-12.*

* ದೋಷತ್ಯಾಗಾದ್ ಗುಣಪ್ರಾಪ್ತೇರ್ಹಸ್ಕಾರೋ ವಾಯುರುಚ್ಯತೇ । ವಿದ್ಯುತ್ ವಿಶಿಷ್ಟ ಜ್ಞಾನತ್ವಾದ್ ಭಾರತೀ ತತ್ಸುತಾ ಹಿ ಯೇ । ಸರ್ವೇ ದೇವಾಶ್ಚ ಮರುತೋ ರಕ್ಷಂತ್ವೇತಾದೃಶೋ ಹರಿಃ । ತತ್ತದಂತರ್ಗತತ್ವೇನ ।

– *ಋ.ಭಾ. 28-48, 49.*

* ಜಹಾತಿ ದೋಷಾನಿತಿ ಹಃ । ಸ್ವೇನ ಸಹ ಕರೋತಿ ಗುಣಾನಿತಿ ಸ್ಕಾರಃ । ಹಶ್ಚಾಸೌ ಸ್ಕಾರಶ್ಚ ಹಸ್ಕಾರಃ । ಯೇ ಸರ್ವೇ ದೇವಾ ಮರುತಶ್ಚ ಹಸ್ಕಾರಾದ್ ವಾಯೋರ್ವಿದ್ಯುತೋ ಭಾರತ್ಯಾಶ್ಚ ಪರಿಸಮ್ಯಗ್ ಜಾತಾಸ್ತತ್ಸುತಾ ಹಿ ತೇ । ಅತಃ ಸಮ್ಯಗ್‌ಜಾತತ್ವಾದೇವ ನೋಽವಂತು ರಕ್ಷಯ । ನೋಽಸ್ಮಾನ್ ಮೃಳಯಂತು ಸುಖಯಂತು ಚ । ........ ಹರಿರಪಿ ತತ್ತನ್ಮರುದಾದ್ಯಂತರ್ಗತತ್ವೇನ ಕಾರಣೇನ ಏತಾದೃಶೋ ಭಾರತೀ ವಾಯು ಪುತ್ರ ಉಚ್ಯತೇ ।

– *ಋಗ್ಭಾಷ್ಯಟೀಕಾ.*

**೧೬. ವಾಯುವನ್ನು ಹೊಂದಿಸಲು ಪ್ರಾರ್ಥನೆ:**

– ೨೩ನೆಯ ಸೂಕ್ತದ ೧೩ನೆಯ ಮಂತ್ರದಲ್ಲಿ ಸೂರ್ಯನಲ್ಲಿ ಭಾರತೀದೇವಿಗೆ ಭರ್ತೃ ಆದ ವಾಯುದೇವನನ್ನು ಕಳೆದುಹೋದ ಹಸುವನ್ನು ಹೇಗೋ ಹಾಗೆ ಹೊಂದುವಂತೆ ಮಾಡಲು ಬೇಡಿಕೊಳ್ಳಲಾಗುವುದು.25

**೧೭. ಭಗವದನುಗ್ರಹದಿಂದ ಬ್ರಹ್ಮವಾಯುಗಳಿಗೆ ಸಮಾನಜ್ಞಾನ:**

– ೨೫ನೆಯ ಸೂಕ್ತದ ೬ನೆಯ ಮಂತ್ರದಲ್ಲಿ ವರುಣನಾಮಕ ಭಗವಂತನ ಅನುಗ್ರಹದಿಂದಲೇ ಬ್ರಹ್ಮವಾಯುಗಳು ಸಮಾನವಾಗಿ ತಿಳಿದಿರುವರು; ಇಬ್ಬರೂ ಜ್ಞಾನಿಶ್ರೇಷ್ಠರು. ಯಜಮಾನನಿಗೆ ಅವನ ಯೋಗ್ಯತೆಗೆ ಮೀರಿ ಯಥಾರ್ಥ ಜ್ಞಾನವನ್ನಾಗಲೀ ಕರ್ಮಾಚರಣೆಯನ್ನಾಗಲೀ ನೀಡುವುದಿಲ್ಲ –ಎಂದು ನಿರೂಪಿಸಲಾಗಿದೆ.26

**೧೮. ವಾಯುದೇವನ ಪ್ರವೃತ್ತಿಯನ್ನು ತಿಳಿದವನು:**

– ೨೫ನೆಯ ಸೂಕ್ತದ ೯ನೆಯ ಮಂತ್ರದಲ್ಲಿ ಅತಿಪ್ರಕಾಶವುಳ್ಳ ದೊಡ್ಡ ಜ್ಞಾನಿಯಾದ ವಾಯುದೇವನ ಪ್ರವೃತ್ತಿಯನ್ನೂ ವರುಣನಾಮಕ ಭಗವಂತನು ತಿಳಿಯುವನೆಂದು ನಿರೂಪಿಸಲಾಗಿದೆ.27

ಅಂತಹ ವಾಯುದೇವನಿಂದಲೂ ಭಾರತೀದೇವಿಯಿಂದಲೂ ಎಲ್ಲ ದೇವತೆಗಳೂ ಮರುತ್‌ಗಳೂ ಹುಟ್ಟಿರುವರು; ಭಗವಂತನೂ ಅಂತಹ ದೇವತೆಗಳ ಅಂತರ್ಗತನಾಗಿ ವಾಯುದೇವನಿಂದ ಜನನ ಪಡೆದು ವಾಯುಪುತ್ರ ಎನಿಸುವನೆಂದು –ಹೀಗೆ ವಾಯುದೇವನ ಮಕ್ಕಳಾದುದರಿಂದಲೇ ಆ ದೇವತೆಗಳು ನಮ್ಮನ್ನು ರಕ್ಷಿಸಲಿ; ಸುಖಿಗಳನ್ನಾಗಿ ಮಾಡಲಿ ಎಂದು ಪ್ರಾರ್ಥಿಸಲಾಗುವುದು.28

---

25. ಆಪೂಷನ್ ........ ಆ ಘೃಣೇ । ಧರುಣಂ ದಿವಃ । ಆಜಾನಷ್ಟಂ ಯಥಾ ಪಶುಮ್ । – *ಋ.ವೇ. 23-13.*

* ಆಘೃಣೇಃ ಪೂರ್ಣರಶ್ಮಿತ್ವಾದಾಜ ನಃ...... ದಿವೋ ದೇವ್ಯಾ ಭರ್ತಾರಂ ವಾಯುಮಾಜಗಾಮ । ಯಥಾ ಗತಮ್ । – *ಋ.ಭಾ. 23-50.*

26. ತದಿತ್‌ಸಮಾನಮಾಶಾತೇ ವೇನಂತಾ ನ ಪ್ರಯುಚ್ಛತಃ । ಧೃತವ್ರತಾಯ ದಾಶುಷೇ । – *ಋ.ವೇ. 25-6.*

* ತತ್‌ಪ್ರಸಾದಾತ್ ಬ್ರಹ್ಮವಾಯೂ ಸಮಮೇವಾವಗಚ್ಛತಃ । ವೇನಂತೌ ಹಿ ವಿಜಾನಂತೌ ತೌ ಹಿ ಜ್ಞಾನಿಮತ್ । ಯಥಾಜ್ಞಾನಂ ಪ್ರಯೋಗಂ ಚ ದಾಶುಷೇ ಕುರುತೋ ನ ತೌ । – *ಋಗ್ಭಾಷ್ಯ. 25-100, 101.*

27. ವೇದ ವಾತಸ್ಯ ವರ್ತನಿಮುರೋರ್‌ಋಷ್ವಸ್ಯ ಬೃಹತಃ । – *ಋ.ವೇ. 25-9.*

* ವರ್ತನಾಂ ವಾಯೋರ್ಮಹತೋಽತಿ ಪ್ರಕಾಶಿನಃ । ಬೃಹತೋ ಜ್ಞಾನಿನಶ್ಚೈವ ಬೃಹತೋ ಮಹತೋಽಪಿ ವಾ ...... । – *ಋಗ್ಭಾಷ್ಯ.*

28. ....... ಚ ನೋಧಾಸ್ವಪಸೋ ಯಹೋ । – *ಋ.ವೇ. 26-10.*

೧೯. **ಅಗ್ನಿಯ ತಂದೆ, ಭಗವಂತನ ವ್ಯಂಜಕ:**

– ೨೬ನೆಯ ಸೂಕ್ತದ **'ವಿಶ್ವೇಭಿರಗ್ನೇ......'** ಇತ್ಯಾದಿಯಾಗಿ ಪ್ರಾರಂಭವಾಗುವ ೧೦ನೆಯ ಮಂತ್ರದಲ್ಲಿ ಅಗ್ನಿಯನ್ನೂ ಭಗವಂತನನ್ನೂ **'ಸಹಸೋ ಯಹೋ'** ಎಂದು ಸಂಬೋಧಿಸಲಾಗಿದೆ.29 **'ಸಹಃ'** –ಎಂದರೆ ವಾಯು. ಅವನ ಪುತ್ರ **'ಯಹಃ'** ಅಗ್ನಿ ವಾಯುವಿನ ಪುತ್ರ ಎನಿಸಿದರೆ, ಭಗವಂತನು ವಾಯುವಿನಿಂದ ವ್ಯಂಗ್ಯನಾಗುವುದರಿಂದ ವಾಯುವಿನ ಪುತ್ರ ಎನಿಸುವನು.30

೨೦. **ಅಗ್ನಿ ವಾಯುವಿನ ಸೂನು:**

– ೨೭ನೆಯ ಸೂಕ್ತದ **'ಸ ಘಾನಸ್ಸೂನುಶ್ಶವಸಾ........'** ಎಂಬ ಮಂತ್ರದಲ್ಲಿ (27-2) ಅಗ್ನಿಯನ್ನು ವಾಯುವಿನ ಸೂನು ಎಂದೂ, ಭಗವಂತನು ವಾಯು ವ್ಯಂಗ್ಯನಾಗಿರುವುದರಿಂದ ವಾಯುಸೂನು ಎಂದೂ ಸಂಬೋಧಿಸಲಾಗಿದೆ.31

ಹಾಗೆಯೇ ವಾಯುವಿನಿಂದ ಕೂಡಿಕೊಂಡು ಅಗ್ನಿಯು ಸುಖಪ್ರದ ಎಂದೂ ನಿರೂಪಿಸಲಾಗಿದೆ.32

೨೧. **ವಾಯುಪುತ್ರ ಅಗ್ನಿ:**

– ೨೭ನೆಯ ಸೂಕ್ತದ **'ನಕಿರಸ್ಯ ಸಹಂತ್ಯ.........'** ಎಂಬ ೮ನೆಯ ಮಂತ್ರದಲ್ಲಿ ಅಗ್ನಿ ವಾಯುದೇವನ ಪುತ್ರ ಎಂಬ ಆಶಯದಲ್ಲಿ ಅವನನ್ನು 'ಸಹಂತ್ಯಃ' –ಎಂದು ಉಲ್ಲೇಖಿಸಲಾಗಿದೆ.33

---

29. ವಾಯೋಃ ಪುತ್ರೋಽಗ್ನಿರೇವ ಚೇತ್ । ಭಗವಾನ್ ವಾಯುನಾ ವ್ಯಂಗ್ಯಃ...... । – *ಋ.ಭಾ. 26-121.*

30. ಸ ಘಾನಸ್ಸೂನುಶ್ಶವಸಾ....... । – *ಋ.ವೇ. 27-2.*

* ಸೂನುಃ ಸ ಶವಸೋ ವಾಯೋಃ । ...... ಸ್ವಾಮೀ ನಃ ಸೂನುರೇವ ವಾ । ವ್ಯಂಗ್ಯತ್ವಾದ್.... । – *27-123.*

31. ವಾಯುನಾ ಸಾರ್ಧಂ...... ಮೀಢ್ವಾನ್ ಬಭೂಯಾತ್ ....... । – *ಋಗ್ಭಾಷ್ಯಟೀಕಾ.*

32. ನಕಿರಸ್ಯ ಸಹಂತ್ಯ..... । – *ಋ.ವೇ. 27-8.*

* ಸಹಂತ್ಯಃ...... ಸಹಸಃ ಪುತ್ರ ಏವ ವಾ । – *ಋಗ್ಭಾಷ್ಯ.*

33. ಉತ ಸ್ಮ ತೇ ವನಸ್ಪತೇ ವಾತೋ ವಿವಾತ್ಯಗ್ರಮಿತ್ । ಅಥೋ ಇಂದ್ರಾಯ ಪಾತವೇ ... । – *ಋ.ವೇ. 28-6.*

* ........ತಸ್ಯಾಗ್ರೇ ವಾಯುರ್ದೇವೋ ಹಿ ಗಚ್ಛತಿ । ಪಾತವೇ ಸ್ವಸ್ಯ..... ಮನೋ ವಾ । – *ಋಗ್ಭಾಷ್ಯ. 28-145.*

೨೨. ದೇವರ ಎದುರು ಸಂಚರಿಸುವನು:

– ೨೮ನೆಯ ಸೂಕ್ತದ 'ಉತ ಸ್ಮ ತೇ ವನಸ್ಪತೇ........' –ಎಂಬ ೬ನೆಯ ಮಂತ್ರದಲ್ಲಿ ವಾಯುದೇವನು ವನಸ್ಪತಿ ಎನಿಸುವ ಭಗವಂತನಿಗೆ ತನ್ನ ಮನಸ್ಸನ್ನು ಅರ್ಪಿಸುವುದಕ್ಕಾಗಿ ಅವನ ಎದುರು ಸಂಚರಿಸುವನೆಂದು ತಿಳಿಸಲಾಗಿದೆ.34

೨೩. ಭಗವನ್ನಿಂದಕರಲ್ಲಿ ಅಂಧಂತಮಸ್ಸಿನಲ್ಲಿ ಬೀಳಿಸುವವನು:

– ೨೯ನೆಯ ಸೂಕ್ತದ 'ಪತಾತಿ ಕುಂಡೃಣಾಚ್ಯಾ........' –ಎಂಬ ೬ನೆಯ ಮಂತ್ರದಲ್ಲಿ ವಾಯುದೇವನು ಭಗವನ್ನಿಂದಕರನ್ನು ಕುಂಡೃಣಾಚೀ ಎಂಬ ಅಂಧಂತಮಸ್ಸಿನಲ್ಲಿ ದೂರದಿಂದ ಬೀಳಿಸಲಿ –ಎಂದು ಹಾರೈಸಲಾಗಿದೆ.35

೨೪. ಉಷಾದೇವಿ ವಾಯು–ಭಾರತಿಯರ ಮಗಳು:

– ೩೦ನೆಯ ಸೂಕ್ತದ 'ತ್ವಂತ್ಯೇಭಿರಾಗಹಿ..........' ಎಂಬ ೨೨ನೆಯ ಮಂತ್ರದಲ್ಲಿ ಉಷಾದೇವಿಯನ್ನು 'ದಿವಃ ದುಹಿತಃ' –ವಾಗ್ದೇವಿಯ ಮಗಳೇ ಎಂದು ಸಂಬೋಧಿಸಿರುವುದಾದರೂ ಬರೇ ವಾಗ್ದೇವಿಗೆ ಮಗಳು ಹುಟ್ಟದ ಪ್ರಯುಕ್ತ ವಾಗ್ದೇವಿಯ ಪತಿಯಾದ ಪ್ರಾಣನನ್ನೂ ಪ್ರಸ್ತಾವಿಸಲಾಗಿದೆ.36

೨೫. ಭಗವಂತನ ವ್ರತದಿಂದಲೇ ಜ್ಞಾನಾದಿಗಳನ್ನು ಪಡೆದವರು:

– ೩೧ನೆಯ ಸೂಕ್ತದ 'ತ್ವಮಗ್ನೇ ಪ್ರಥಮೋ.........' –ಎಂಬ ಮೊದಲ ಮಂತ್ರದಲ್ಲಿ ಅಗ್ನಿನಾಮಕ ಭಗವಂತನ ಕುರಿತಾದ ವ್ರತದ ಆಚರಣೆಯಿಂದಲೇ ಹೊಳೆಯುವ ಆಯುಧವಿಶೇಷವುಳ್ಳ, ಹಿಂದಿನ ಹಾಗೂ ಈಗಿನ ವಾಯುದೇವರು ವಿದ್ಯಾ

---

34. ಪತಾತಿ ಕುಂಡೃಣಾಚ್ಯಾ ದೂರಂ ವಾತೋ ವನಾದಧಿ । – *ಋ.ವೇ. 29-6.*

* ದೂರಂ ಚ ಪಾತಯತ್ವೇತಾನ್ ವಾಯುಸ್ತಸ್ಮಿಂಸ್ತಮಸ್ಯಧಃ । – *ಋಗ್ಭಾಷ್ಯ 29-156.*

35. ತ್ವಂ ತ್ಯೇಭಿರಾಗಹಿ ವಾಜೇಭಿರ್ದುಹಿತರ್ದಿವಃ । – *ಋ.ವೇ. 30-22.*

* ಪ್ರಾಣವಾಕ್‌ಸುತೇ । ದಿವಃ ಪುತ್ರ ಉದಾಹೃತಃ । – *ಋಗ್ಭಾಷ್ಯ 30-182.*

* ಯದ್ಯಪಿ ವಾಗೇವ ದ್ಯೌಸ್ತಥಾಪಿ ಕೇವಲಾಯಾಃ ಸ್ತ್ರಿಯೋಽಪತ್ಯಸಂಬಂಧಾಭಾವಾತ್ ಪ್ರಾಣಗ್ರಹಣಮ್ । – *ಋಗ್ಭಾಷ್ಯಟೀಕಾ.*

36. ತವ ವ್ರತೇ ಕವಯೋ ವಿದ್ಮನಾಪಸೋ ಜಾಯಂತ ಮರುತೋ ಭ್ರಾಜದೃಷ್ಟಯಃ । – *ಋ.ವೇ. 31-1.*

* ತವ ವ್ರತೇನೈವ ಸ ವಿದ್ಯಕರ್ಮಣೋ ಮಹಾವಿಜ್ಞಾನಾ ಮರುತೋ ಬಭೂವಿರೇ । – *ಋಗ್ಭಾಷ್ಯ 31-184.*

* ಭ್ರಾಜಂತ್ಯಃ ಋಷ್ಟಯಃ ಆಯುಧವಿಶೇಷಾ ಯೇಷಾಂ ತೇ ಭ್ರಾಜದೃಷ್ಟಯೋ ಮರುತೋಽರತೀತವರ್ತಮಾನಾ ವಾಯವಃ ವಿದ್ಮನಾಽಪಸಃ ವಿದ್ಯಯಾ ಸಹಿತಮಪಃ ಕರ್ಮ ಯೇಷಾಂ ಸವಿದ್ಯಕರ್ಮಾಣಃ ಸಂತಃ ಕವಯೋ ಮಹಾವಿಜ್ಞಾನಾ ಅಜಾಯಂತ । – *ಋಗ್ಭಾಷ್ಯಟೀಕಾ.*

ಪೂರ್ವಕ ಕರ್ಮಿಗಳೂ .ಮಹಾವಿಜ್ಞಾನಸಂಪನ್ನರೂ ಆಗಿರುವರೆಂದು ತಿಳಿಸಲಾಗಿದೆ.37

**೨೬. ವಾಯುದೇವನಿಗಾಗಿ ಮೊದಲ ಆವಿರ್ಭಾವ:**

– ೩೧ನೆಯ ಸೂಕ್ತದ '**ತ್ವಮಗ್ನೇ ಪ್ರಥಮೋ ಮಾತರಿಶ್ವನೇ........**' ಇತ್ಯಾದಿ ಮೂರನೆಯ ಮಂತ್ರದಲ್ಲಿ ಅಗ್ನಿನಾಮಕ ಭಗವಂತನನ್ನು ಸಂಬೋಧಿಸಿ, ಒಳ್ಳೆಯ ಜ್ಞಾನವುಳ್ಳ ವಾಯುದೇವನಿಗಾಗಿ ನೀನು ಮೊದಲು ಪ್ರಾದುರ್ಭವಿಸಿರುವಿ –ಎಂದು ಬಿನ್ನವಿಸಲಾಗಿದೆ. ವಿವಿಧ ವಸ್ತುಗಳಲ್ಲಿ ವಾಸಿಸುವನೆಂಬ ದೃಷ್ಟಿಯಿಂದ ವಾಯುದೇವನನ್ನು 'ವಿವಸ್ವಾನ್' –ಎಂದು ಉಲ್ಲೇಖಿಸಲಾಗಿದೆ.

ಹಾಗೆಯೇ, ವಾಯು ಹಾಗೂ ವಿರಿಂಚ ಯಾರಿಂದಲೂ ಎದುರಿಸಲಾಗದವರು. ಆದುದರಿಂದಲೇ 'ನೀನು ವಿಶ್ವದ ಭಾರವನ್ನು ವಾಯುದೇವನಿಗೂ ಚತುರ್ಮುಖನಿಗೂ ಪ್ರತ್ಯೇಕವಾಗಿ ನೀಡುವಿ' –ಎಂದು ಅಗ್ನಿನಾಮಕ ಭಗವಂತನಲ್ಲಿ ನಿವೇದಿಸಿಕೊಳ್ಳಲಾಗಿದೆ.38

**೨೭. ವಾಯುದೇವನಿಗೆ ಭಾರತ್ಯಾದಿಗಳನ್ನು ದಾನ:**

– ೩೧ನೇ ಸೂಕ್ತದ '**ತ್ವಮಗ್ನೇ ಮನವೇ ದ್ಯಾಮವಾಶಯಃ........**' ಇತ್ಯಾದಿ ೪ನೆಯ ಮಂತ್ರದಲ್ಲಿ ಅಗ್ನಿನಾಮಕ ಭಗವಂತನು ವಿಶಿಷ್ಟಬೋಧವುಳ್ಳಪ್ರಯುಕ್ತ 'ಮನು' ಎನಿಸಿರುವ ವಾಯುದೇವನಿಗೆ ದ್ಯುಲೋಕವನ್ನು, ಜ್ಞಾನವನ್ನು ಹಾಗೂ ಭಾರತೀದೇವಿಯನ್ನು ಕೊಟ್ಟಿರುವನೆಂದು ತಿಳಿಸಲಾಗಿದೆ. ಚೆನ್ನಾಗಿ ಶಬ್ದ ಮಾಡುವ ಪ್ರಯುಕ್ತ 'ಪುರೂರವಸ್' ಎಂದೂ, ಒಳ್ಳೆಯ ಕರ್ಮಗಳನ್ನು ನಡೆಸುವ ಪ್ರಯುಕ್ತ 'ಸುಕೃತ' –ಎಂದೂ ವಾಯುದೇವನನ್ನು ಉಲ್ಲೇಖಿಸಲಾಗಿದೆ. ನಾಯಿಯ

---

37. ತ್ವಮಗ್ನೇ ಪ್ರಥಮೋ ಮಾತರಿಶ್ವನೇ ಆವಿರ್ಬಭೂವ ಸುಕ್ರತುಯಾ ವಿವಸ್ವತೇ । ........ ಅಸಪ್ಪುಸೋಃ ಭಾರಂ ಅಯಜಃ ಮಹಃ .... । – *ಋಗ್ಭಾಷ್ಯ 31-3.*

* ತ್ವಂ ವಿಷ್ಣೋ ಪ್ರಥಮೋ ಮಾತರಿಶ್ವನ ಆವಿರ್ಬಭೂವಾಸ್ಯ ಸುಬೋಧವತ್ವಾತ್ । ವಾಯುರ್ವಿವಸ್ವಾನ್ ವಿವಿಧೇಷು ವಾಸಾತ್ ....... ಸಹತೇಽಮುಂ ನೈವ ಕೇಚಿದ್ದಸ್ಯಘ್ನು ರ್ವಾಯುರ್ವಿರಿಂಚೋಽಪಿ ಮಹಾಂಶ್ಚ ತಸ್ಮೈ । ವಿಶ್ವಾಖ್ಯಂ ಭಾರಂ ಪ್ರತಿದಿಷ್ಟವಾಂಸ್ತ್ವಂ....। *– 31-187.*

38. ತ್ವಮಗ್ನೇ ಮನವೇ ದ್ಯಾಮವಾಶಯಃ ಪುರೂರವಸೇ ಸುಕೃತೇ ಸುಕೃತ್ತರಃ । ಶ್ವಾತ್ರೇಣ ಯತ್ಪಿತ್ರೋರ್ಮುಚ್ಯಸೇ ಪರ್ಯಾತ್ವಾ ಪೂರ್ವಮನಯನ್ನಾಪರಂ ಪುನಃ । *– ಋ.ವೇ. 31-4.*

* ವಿಶಿಷ್ಟಬೋಧಾನ್ಮನವೇ ವಾಯುವೇ ತ್ವಂ ಪ್ರಾದಾ ದಿವಂ ಜ್ಞಾನರೂಪಾಂ ಪ್ರಿಯಾಂ ಚ । ಯಥಾ ತದೀಯೇತಿ ತು ವಾಶನಂ ಸ್ಯಾಲ್ಲೋಕಸ್ಯ ಸರ್ವಸ್ಯ ತಥೈವ ದೇವ । ಪುರೂರವಾ ವಾಯುರೇವೋರುಶಬ್ದಾತ್ ...... ಶ್ವಾ ವೈ ವಾಯುಃ ಶ್ವಸನಾತ್ ತ್ರಾಣತೋಽಸ್ಯ ನಿತ್ಯಂ ಮುಕ್ತಃ ಪ್ರಕೃತೇಃ ಪೂರುಷಾಚ್ಚ । ತೇನೈವ ತ್ವಾಮನಯನ್ ಪೂರ್ವಸಂತೋ ನೀತಂ ಪುನಶ್ಚಾಪ್ಯಪರೇ ಸುಭಕ್ತ್ಯಾ । *– ಋ.ಭಾ. 31-189.*

ರೂಪವನ್ನು ಧರಿಸಿದ್ದರಿಂದ ವಾಯುದೇವ 'ಶ್ವಾ' ಎನಿಸುವನು. ಹಾಗೆಯೇ ಜಗತ್ತನ್ನು ಬದುಕಿಸುವ ಪ್ರಯುಕ್ತ 'ಶ್ವಾ' ಎನಿಸುವನು. ಅಂತಹ ವಾಯುದೇವನನ್ನು ರಕ್ಷಿಸುವುದರಿಂದಲೇ ಅಗ್ನಿನಾಮಕ ಭಗವಂತನು ಪ್ರಕೃತಿಪುರುಷರಿಂದ ನಿತ್ಯಮುಕ್ತನಾಗಿರುವನು. ಆದುದರಿಂದಲೇ ಹಿಂದಿನ ಸಜ್ಜನರು ಅಗ್ನಿಯನ್ನು ಭಕ್ತಿಯಿಂದ ತಮ್ಮ ಶಿಷ್ಯರಿಗೆ ಉಪದೇಶಿಸುವರು. ಮುಂದಿನ ಸಜ್ಜನರೂ ಕೂಡಾ ತಮ್ಮ ಶಿಷ್ಯರಿಗೆ ಅಗ್ನಿಯ ಉಪದೇಶವನ್ನು ನೀಡಿರುವರು.39

ಹೀಗೆ ಈ ಮಂತ್ರದಲ್ಲಿ ವಾಯುದೇವನನ್ನು 'ಮನು', 'ಪುರೂರವಸ್' 'ಸುಕೃತ' ಹಾಗೂ 'ಶ್ವಾ' –ಎಂಬ ನಾಲ್ಕು ಹೆಸರುಗಳಿಂದ ಉಲ್ಲೇಖಿಸುವ ಮೂಲಕ ವಾಯುದೇವನ ಗುಣಗಳನ್ನು ತಿಳಿಸಿದಂತಾಗಿದೆ ಅಲ್ಲದೆ, ಭಗವಂತನು ವಾಯುದೇವನಿಗೆ ದ್ಯುಲೋಕಾಧಿಪತ್ಯವನ್ನು, ಜ್ಞಾನವನ್ನು ಭಾರತೀದೇವಿಯನ್ನು ನೀಡಿರುವನೆಂಬುದಾಗಿಯೂ, ವಾಯುದೇವನನ್ನು ರಕ್ಷಿಸುವುದರಿಂದಲೇ ಭಗವಂತ ನಿತ್ಯಮುಕ್ತನಾಗಿರುವನೆಂದೂ, ಆದುದರಿಂದಲೇ ಗುರುಗಳಿಂದ ಶಿಷ್ಯರಲ್ಲಿ ಅವನ ಉಪದೇಶ ನಡೆದಿದೆ ಎಂದೂ ವಾಯುದೇವನ ವಿಶಿಷ್ಟ ಮಹಿಮೆಯ ಪ್ರತಿಪಾದನೆ ನಡೆದಂತಾಗಿದೆ.

**೨೮. ವಾಯುದೇವನ ತಂದೆ:**

– ೩೧ನೇ ಸೂಕ್ತದ **'ತ್ವಮಗ್ನೇ ಉರುಶಂಸಾಯ....'** ಇತ್ಯಾದಿ ೧೪ನೆಯ ಮಂತ್ರದಲ್ಲಿ ಚೆನ್ನಾಗಿ ಧಾರಕನಾಗಿರುವ ವಾಯುದೇವನಿಗೂ ಒಳ್ಳೆಯ ಜ್ಞಾನವನ್ನು ನೀಡುವವನಾಗಿ, ತಂದೆಯಾಗಿ ಅಗ್ನಿನಾರಾಯಣ ಹೇಳಲ್ಪಟ್ಟಿರುವನೆಂದು ತಿಳಿಸಲಾಗಿದೆ.40

**೨೯. ಪ್ರಾಣನ ಮೂಲಕ ಸಂಸಾರಪಟ್ಟಣದ ಭೇದನ:**

– ೩೩ನೇ ಸೂಕ್ತದ **'ಅಭಿಸಿಧ್ಮೋ....'** ಎಂಬ ೧೩ನೆಯ ಮಂತ್ರದಲ್ಲಿ ಜೀವಶ್ರೇಷ್ಠನಾದ ವಿರೋಧಿಗಳನ್ನು ಕುರಿತು ಕ್ರೂರನಾದ ಮುಖ್ಯಪ್ರಾಣನ ಉಪದೇಶಾದಿ

---

39. ಆಧ್ರಸ್ಯ ಚಿತ್ ಪ್ರಮತಿರುಚ್ಯಸೇ ಪಿತಾ...... । – ಋ.ವೆ. *31-14.*

* ಆಸಮಂತಾದ್ ಧಾರಕಸ್ಯಾಪಿ ವಾಯೋಃ ಪ್ರಜ್ಞಾನದಃ ಪ್ರೋಚ್ಯಸೇ ತ್ವಂ ಪಿತಾ ಚ । – *ಋಗ್ಭಾಷ್ಯ 33-204.*

40. ಶತ್ರೂನ್ ವಿ ತಿಗ್ಮೇನ ವೃಷಭೇಣ ಪುರಃ ಅಭೇತ್..... । – ಋ.ವೇ. *33-13.*

* ........ಪುರಶ್ಚ । ಸಂಸಾರರೂಪಾ ಅಭಿನದ್ ವೃಷೇಣ ಪ್ರಾಣೇನ ತಿಗ್ಮೇನ ವಿರೋಧಿನಃ ಪ್ರತಿ । – *ಋಗ್ಭಾಷ್ಯ 33-23.*

* ವೃಷಭೇಣ ವೃಷೇಣ ಜೀವಶ್ರೇಷ್ಠೇನ ಪ್ರಾಣೇನ ಪ್ರಾಣಿನಾಂ ಸಂಸಾರರೂಪಾಃ ಪುರೋವ್ಯಭೇತ್ ಅಭಿನತ್ । ಸಂಸಾರರೂಪಂ ಲಿಂಗಂ ಪ್ರಾಣಿನಾಂ ಪುರಮಿವ । ತಚ್ಚ ಪ್ರಾಣೋಪದೇಶಾದಿದ್ವಾರೇಶ್ವರೋ ಭಿನತ್ತಿ । – *ಭಾ.ಟೀ.ಕಾ.*

ಗಳಿಂದ ಸಂಸಾರಬಂಧನರೂಪವಾದ ಪಟ್ಟಣಗಳನ್ನು ಇಂದ್ರನಾಮಕ ಭಗವಂತನು ಭೇದಿಸುವನೆಂದು ತಿಳಿಸಲಾಗಿದೆ.41

೩೦. **ವೇದಪ್ರತಿಪಾದ್ಯ ಧರ್ಮ ವಾಣೀಪುತ್ರ:**

– ೩೩ನೇ ಸೂಕ್ತದ **'ಆ ವಃ ಕುತ್ಸಂ....'** ಎಂಬ ೧೪ನೆಯ ಮಂತ್ರದಲ್ಲಿ 'ಶ್ವಾ' ಎನಿಸುವ ವಾಯುದೇವನ ಪತ್ನಿ ವಾಣಿಯನ್ನು ಶ್ವೇತಾ ಎಂದು ಇಟ್ಟುಕೊಂಡು ಅಂತಹ ವಾಣಿಯ ಪುತ್ರ ಅಂದರೆ ವೇದಪ್ರತಿಪಾದ್ಯವಾದ ಧರ್ಮವನ್ನು 'ಶ್ವೈತ್ರೇಯ' –ವಾಣೀಪುತ್ರ ಎಂದು ಕರೆಯಲಾಗಿದೆ.42

೩೧. **ವಾಯುಭಾರ್ಯಾ ಸುತ ಧರ್ಮ:**

– ೩೩ನೆಯ ಸೂಕ್ತದ ೩ನೆಯ **'ಆ ವಶ್ನಮಂ....'** ಎಂಬ ಮಂತ್ರದಲ್ಲಿ **'ಶ್ವಿತ್ರ್ಯಂ ಗಾಂ ಕ್ಷೇತ್ರಜೇಷೇ....'** ಎಂಬುದಾಗಿ ವಾಗಭಿಮಾನಿನಿ ವಾಣಿಯ ಪುತ್ರನಾದ ಧರ್ಮವು ಮೋಕ್ಷಪ್ರಾಪ್ತಿಗಾಗಿ ಹೊರತು ಕ್ಷುಲ್ಲಕ ಆಸೆಗಳ ಪೂರಣೆಗಾಗಿ ಅಲ್ಲ ಎಂದು ಹೇಳುವಾಗ, ವಾಗಭಿಮಾನಿನಿ ವಾಣಿಯನ್ನು 'ಶ್ವಿತಾ' ಎಂದು ಉಲ್ಲೇಖಿಸುವ ಮೂಲಕ ವಾಯುದೇವ 'ಶ್ವಾ' ಎನಿಸುವನೆಂದು ಸೂಚಿಸಲಾಗಿದೆ.43

೩೨. **ವಾಯುವಿನಿಂದ ವೃದ್ಧಿ, ವಾಯುಗೆ ಸಮೃದ್ಧಿ:**

– ೩೬ನೆಯ ಸೂಕ್ತದ 'ಜನಾಸಃ ಅಗ್ನಿಂ ದಧಿರೇ....' ಎಂಬ ೨ನೆಯ ಮಂತ್ರದಲ್ಲಿ ಅಗ್ನಿಗೆ 'ಸಹೋವೃಧ' ಎಂಬ ವಿಶೇಷಣದಿಂದ ಅಗ್ನಿಯನ್ನು ವಾಯುದೇವ ವೃದ್ಧಿಗೊಳಿಸುವನೆಂದಿದ್ದರೆ, ವಿಷ್ಣುವನ್ನು 'ಸಹೋವೃತ್' –ಎಂದು ಕರೆಯುವ ಮೂಲಕ ವಾಯುದೇವನನ್ನು ಭಗವಂತನು ಸಮೃದ್ಧನನ್ನಾಗಿಸುವನೆಂದು ಹೇಳಲಾಗಿದೆ.44

---

41. '....... ಶ್ವೈತ್ರೇಯೋ ನೃಷಾ ಹ್ಯಾಯತಸ್ದ್ಧೌ । *– ಋ.ವೇ. 33-14.*

* ಶ್ವೇತಾ ವಾಣೀ ವಾಯುಭಾರ್ಯಾ ಸುತೋಽಸ್ಯಾಃ ಶ್ವೈತ್ರೇಯೋ.....ವೃಷಃ ಶ್ವೇತ್ರೇಯೋ ಧರ್ಮ ಏವ । *– ಋಗ್ಭಾಷ್ಯ 33-26.*

* ವಾಯುರ್ಹಿ ತ್ವಾ ತೇನೇತಾ ಶ್ವೇತೇತಿ ಅಸ್ಯಾಃ ಶ್ವೇತಾಯಾಃ ಸುತಃ ಶ್ವೈತ್ರೇಯಃ । *– ಋಗ್ಭಾಷ್ಯಟೀಕಾ.*

42. ......ಕ್ಷೇತ್ರಜೇಷೇ ಮಘವನ್ ಶ್ವಿತ್ರ್ಯಂ ಗಾಮ್ । *– ಋ.ವೇ. 33-15.*

* ಮುಕ್ತಿಕ್ಷೇತ್ರವಿಜಯಾಯ್ಯೆವ ಧರ್ಮಮ್ । ಶ್ವೇತಾಸುತಂ ರಮಣಾದ್ ರೇಫಃ ಉಕ್ತಸ್ತಮರಕ್ಷಸ್ಸ್ತಂ..... । *– ಋ.ಭಾ. 3-28.*

43. ......ಸಹಸಾ ವಾಯುನೇಧಿತಮ್ । .....ವಿಷ್ಣುರ್ವಾಯೋರಪಿ ವಿವೃದ್ಧಿಕೃತ್ । *– ಋಗ್ಭಾಷ್ಯ 36-58.*

44. ಕ್ರೀಳಂವಶ್ಯರ್ಧೋ ಮಾರುತಮನರ್ವಾಣಂ ರಥೇ ಶುಭಮ್ । ಕಣ್ವಾ ಅಭಿಪ್ರಗಾಯತ । *– ಋ.ವೇ. 37-1.*

೩೩. **ಇಂದ್ರಿಯಾಭಿಮಾನಿರಹಿತನಾದವನು:**

– ೩೩ನೆಯ ಸೂಕ್ತದ 'ಕ್ರೀಳಂ ವಶ್ಶರ್ಧೋ.....' ಎಂಬ ೧ನೆಯ ಮಂತ್ರದಲ್ಲಿ ಕ್ರೀಡಾಶೀಲನಾದ, ಸುಖಬಲಸಂಪನ್ನನಾದ, ಪ್ರೇರಕರಾಗಿ ಇಂದ್ರಿಯಾಭಿಮಾನಿಗಳನ್ನು ಹೊಂದದ, ದೇಹದಲ್ಲಿ ಶೋಭಾಯುಕ್ತನಾಗಿ ಇರುವ ಮಾರುತನನ್ನು ಗಾನಮಾಡಲು ಕಣ್ವನಿಗೆ ಕರೆ ನೀಡಲಾಗಿದೆ.45

೩೪. **ವಿಷ್ಣುವಿನ ಗಾನದಿಂದ ವಾಯುವಿಗೆ ಪ್ರೀತಿ:**

– ೩೭ನೆಯ ಸೂಕ್ತದ 'ಪ್ರವಶ್ಶರ್ಧಾಯ.....' ಎಂಬ ೪ನೆಯ ಮಂತ್ರದಲ್ಲಿ ಶುದ್ಧನಾದ, ಶೋಧಿಸುವವನಾದ, ಶ್ರೇಷ್ಠಜ್ಞಾನವುಳ್ಳ, ಉತ್ತಮ ಬಲವುಳ್ಳ, ಅತಿವೀರ್ಯಶಾಲಿಯಾದ ವಾಯುವಿಗಾಗಿ ದೇವತೆಗಳಲ್ಲಿ ವ್ಯಾಪ್ತನಾದ ಪರಮಾತ್ಮನನ್ನು ಗಾನಮಾಡಲು ಕಣ್ವರಿಗೆ ಕರೆ ನೀಡಲಾಗಿದೆ.46

ವಿಷ್ಣುವಿನ ಗಾನದಿಂದ ವಾಯುದೇವನಿಗೆ ಪ್ರೀತಿ ಆಗುವುದರಿಂದ, ವಾಯುವಿನ ಪ್ರೀತಿಗಾಗಿ ವಿಷ್ಣುಗಾನ ಸಮುಚಿತವೆಂದು ಶ್ರೀ ಮಧ್ವರು ಸಮರ್ಥಿಸಿರುವರು.47

೩೫. **ಪ್ರಧಾನ ವಾಯುವಿನಿಂದಾಗಿ ಇತರ ವಾಯುಗಳಿಗೆ ಮಹತ್ತ್ವ:**

– ೩೭ನೆಯ ಸೂಕ್ತದ ೬ನೆಯ '**ಕೋ ವಾ ವರ್ಷಿಷ್ಠ ಆ ನರೋ...**' ಎಂಬ ಮಂತ್ರದಲ್ಲಿ ಮರುದ್ದೇವತೆಗಳನ್ನು ಸಂಬೋಧಿಸಿ, ಅವರ ಮಧ್ಯದಲ್ಲಿ ಪ್ರಧಾನ

---

* ಕ್ರೀಡಾಶೀಲಂ ಚ ಮಾರುತಮ್ । ಶರ್ಧಃ ಸುಖಬಲಾಢ್ಯಂ ಚಾಪ್ಯನರ್ವಾಣಮನೀಂದ್ರಿಯಮ್ । ನ ವಾಯೋರಿಂದ್ರಿಯಾಣಾಂ ಹಿ ದೇವಾಃ ಸಂತ್ಯಭಿಮಾನಿನಃ । ಅತೋಽನಿಂದ್ರಿಯತಾ ತಸ್ಯ ರಥೇ ದೇಶೇ ಶುಭಶ್ಚ ಸಃ । ಕಣ್ವಾಸ್ತಂ ಗಾಯತಾಭೀಕ್ಷ್ಣಂ........ ।
– *ಋಗ್ಭಾಷ್ಯ 37-82, 83.*

45. ಪ್ರವಶ್ಶರ್ಧಾಯ ಘೃಷ್ವಯೇ ತ್ವೇಷದ್ಯುಮ್ನಾಯ ಶುಷ್ಮಿಣೇ । ದೇವತ್ತಂ ಬ್ರಹ್ಮಗಾಯತ ।
– *ಋ.ವೇ. 37-4.*

* ಶೋಧಕಾಯ ಪ್ರಧಾನಾಯ ವೋ ಬಲಾಯ ಚ ವಾಯವೇ ।
ಶುದ್ಧಾಯ ವಾ ಸುಪ್ರಕಾಶಜ್ಞಾನಾಯಾತಿಬಲಾಯ ಚ ।
ಗಾಯತ ಬ್ರಹ್ಮ ದೇವತ್ತಂ ದೇವೇಷು ತತಮೀಶ್ವರಮ್ ॥ – *ಋ.ಭಾ. 37-87.*

46. ಪ್ರೀತಿರ್ವಾಯೋರ್ವಿಷ್ಣುಗಾನಾದ್ ...... । – *ಋಗ್ಭಾಷ್ಯ 37-88*

47. ಕೋ ವೋ ವರ್ಷಿಷ್ಠ ಆ ನರೋ ದಿವಶ್ಚರ್ಮಗ್ಮಶ್ಚ ಧೂತಯಃ ...... । – *ಋ.ವೇ. 37-6.*

* ಆಸಮಂತಾದುತ್ತಮಃ ಕಃ ಪ್ರಧಾನೋ ವಾಯುರೇವ ಚ । – *ಋಗ್ಭಾಷ್ಯ 37-91.*

* ಕಃ ಪ್ರಧಾನೋ ವಾಯುರಾವರ್ಷಿಷ್ಠಃ ಉತ್ತಮ ಇತಿ ಯಾವತ್ । ಕಾಲಜ್ಯೇಷ್ಠಸ್ಯ ಸರ್ವಜ್ಯೇಷ್ಠೋಪಲಕ್ಷಣತ್ವಾತ್ । ಏವಂ ಭೂತಸ್ವಾಮಿಸಂಪತ್ತ್ಯಾ ಯೂಯಮಪಿ ಮಹಾಂತ ಇತಿ ಭಾವಃ ।
– *ಋಗ್ಭಾಷ್ಯಟೀಕಾ.*

ಗಳಿಂದ ಸಂಸಾರಬಂಧನರೂಪವಾದ ಪಟ್ಟಣಗಳನ್ನು ಇಂದ್ರನಾಮಕ ಭಗವಂತನು ಭೇದಿಸುವನೆಂದು ತಿಳಿಸಲಾಗಿದೆ.41

೩೦. **ವೇದಪ್ರತಿಪಾದ್ಯ ಧರ್ಮ ವಾಣೀಪುತ್ರ:**

– ೩೩ನೇ ಸೂಕ್ತದ 'ಆ ವಃ ಕುತ್ಸಂ....' ಎಂಬ ೧೪ನೆಯ ಮಂತ್ರದಲ್ಲಿ 'ಶ್ವಾ' ಎನಿಸುವ ವಾಯುದೇವನ ಪತ್ನಿ ವಾಣಿಯನ್ನು ಶ್ವೇತಾ ಎಂದು ಇಟ್ಟುಕೊಂಡು ಅಂತಹ ವಾಣಿಯ ಪುತ್ರ ಅಂದರೆ ವೇದಪ್ರತಿಪಾದ್ಯವಾದ ಧರ್ಮವನ್ನು 'ಶ್ವೈತ್ರೇಯ' –ವಾಣೀಪುತ್ರ ಎಂದು ಕರೆಯಲಾಗಿದೆ.42

೩೧. **ವಾಯುಭಾರ್ಯಾ ಸುತ ಧರ್ಮ:**

– ೩೩ನೆಯ ಸೂಕ್ತದ ೩ನೆಯ 'ಆ ವಜ್ರಮಂ....' ಎಂಬ ಮಂತ್ರದಲ್ಲಿ 'ಶ್ವಿತ್ರ್ಯಂ ಗಾಂ ಕ್ಷೇತ್ರಜೇಷೇ....' ಎಂಬುದಾಗಿ ವಾಗಭಿಮಾನಿನಿ ವಾಣಿಯ ಪುತ್ರನಾದ ಧರ್ಮವು ಮೋಕ್ಷಪ್ರಾಪ್ತಿಗಾಗಿ ಹೊರತು ಕ್ಷುಲ್ಲಕ ಆಸೆಗಳ ಪೂರಣೆಗಾಗಿ ಅಲ್ಲ ಎಂದು ಹೇಳುವಾಗ, ವಾಗಭಿಮಾನಿನಿ ವಾಣಿಯನ್ನು 'ಶ್ವಿತಾ' ಎಂದು ಉಲ್ಲೇಖಿಸುವ ಮೂಲಕ ವಾಯುದೇವ 'ಶ್ವಾ' ಎನಿಸುವನೆಂದು ಸೂಚಿಸಲಾಗಿದೆ.43

೩೨. **ವಾಯುವಿನಿಂದ ವೃದ್ಧಿ, ವಾಯುಗೆ ಸಮೃದ್ಧಿ:**

– ೩೬ನೆಯ ಸೂಕ್ತದ 'ಜನಾಸಃ ಅಗ್ನಿಂ ದಧಿರೇ....' ಎಂಬ ೨ನೆಯ ಮಂತ್ರದಲ್ಲಿ ಅಗ್ನಿಗೆ 'ಸಹೋವೃಧ' ಎಂಬ ವಿಶೇಷಣದಿಂದ ಅಗ್ನಿಯನ್ನು ವಾಯುದೇವ ವೃದ್ಧಿಗೊಳಿಸುವನೆಂದಿದ್ದರೆ, ವಿಷ್ಣುವನ್ನು 'ಸಹೋವೃತ್' –ಎಂದು ಕರೆಯುವ ಮೂಲಕ ವಾಯುದೇವನನ್ನು ಭಗವಂತನು ಸಮೃದ್ಧನನ್ನಾಗಿಸುವನೆಂದು ಹೇಳಲಾಗಿದೆ.44

---

41. '....... ಶ್ವೈತ್ರೇಯೋ ನೃಷಾ ಹ್ಯಾಯತಸ್ಥಾ । – *ಋ.ವೇ. 33-14.*

* ಶ್ವೇತಾ ವಾಣೀ ವಾಯುಭಾರ್ಯಾ ಸುತೋಽಸ್ಯಾಃ ಶ್ವೈತ್ರೇಯೋ.....ವೃಷಃ ಶ್ವೈತ್ರೇಯೋ ಧರ್ಮ ಏವ । – *ಋಗ್ಭಾಷ್ಯ 33-26.*

* ವಾಯುರ್ಹಿ ಶ್ವಾ ತೇನೇತಾ ಶ್ವೇತೇತಿ ಅಸ್ಯಾಃ ಶ್ವೇತಾಯಾಃ ಸುತಃ ಶ್ವೈತ್ರೇಯಃ । – *ಋಗ್ಭಾಷ್ಯಟೀಕಾ.*

42. ......ಕ್ಷೇತ್ರಜೇಷೇ ಮಘವನ್ ಶ್ವಿತ್ರ್ಯಂ ಗಾಮ್ । – *ಋ.ವೇ. 33-15.*

* ಮುಕ್ತಿಕ್ಷೇತ್ರವಿಜಯಾಯೈವ ಧರ್ಮಮ್ । ಶ್ವೇತಾಸುತಂ ರಮಣಾದ್ ರೇಫಃ ಉಕ್ತಸ್ತಮರಕ್ಷಸ್ತ್ವಂ..... । – *ಋ.ಭಾ. 3-28.*

43. ......ಸಹಸಾ ವಾಯುನೇಧಿತಮ್ । .....ವಿಷ್ಣುರ್ವಾಯೋರಪಿ ವಿವೃದ್ಧಿಕೃತ್ । – *ಋಗ್ಭಾಷ್ಯ 36-58.*

44. ಕ್ರೀಳಂವಶ್ಯರ್ಧೋ ಮಾರುತಮನರ್ವಾಣಂ ರಥೇ ಶುಭಮ್ । ಕಣ್ವಾ ಅಭಿಪ್ರಗಾಯತ । – *ಋ.ವೇ. 37-1.*

೩೩. **ಇಂದ್ರಿಯಾಭಿಮಾನಿರಹಿತನಾದವನು:**

– ೩೩ನೆಯ ಸೂಕ್ತದ 'ಕ್ರೀಳಂ ವಶ್ಶರ್ಧೋ.....' ಎಂಬ ೧ನೆಯ ಮಂತ್ರದಲ್ಲಿ ಕ್ರೀಡಾಶೀಲನಾದ, ಸುಖಬಲಸಂಪನ್ನನಾದ, ಪ್ರೇರಕರಾಗಿ ಇಂದ್ರಿಯಾಭಿಮಾನಿಗಳನ್ನು ಹೊಂದದ, ದೇಹದಲ್ಲಿ ಶೋಭಾಯುಕ್ತನಾಗಿ ಇರುವ ಮಾರುತನನ್ನು ಗಾನಮಾಡಲು ಕಣ್ವನಿಗೆ ಕರೆ ನೀಡಲಾಗಿದೆ.45

೩೪. **ವಿಷ್ಣುವಿನ ಗಾನದಿಂದ ವಾಯುವಿಗೆ ಪ್ರೀತಿ:**

– ೩೭ನೆಯ ಸೂಕ್ತದ 'ಪ್ರವಶ್ಶರ್ಧಾಯ.....' ಎಂಬ ೪ನೆಯ ಮಂತ್ರದಲ್ಲಿ ಶುದ್ಧನಾದ, ಶೋಧಿಸುವವನಾದ, ಶ್ರೇಷ್ಠಜ್ಞಾನವುಳ್ಳ, ಉತ್ತಮ ಬಲವುಳ್ಳ, ಅತಿ ವೀರ್ಯಶಾಲಿಯಾದ ವಾಯುವಿಗಾಗಿ ದೇವತೆಗಳಲ್ಲಿ ವ್ಯಾಪ್ತನಾದ ಪರಮಾತ್ಮನನ್ನು ಗಾನಮಾಡಲು ಕಣ್ವರಿಗೆ ಕರೆ ನೀಡಲಾಗಿದೆ.46

ವಿಷ್ಣುವಿನ ಗಾನದಿಂದ ವಾಯುದೇವನಿಗೆ ಪ್ರೀತಿ ಆಗುವುದರಿಂದ, ವಾಯುವಿನ ಪ್ರೀತಿಗಾಗಿ ವಿಷ್ಣುಗಾನ ಸಮುಚಿತವೆಂದು ಶ್ರೀ ಮಧ್ವರು ಸಮರ್ಥಿಸಿರುವರು.47

೩೫. **ಪ್ರಧಾನ ವಾಯುವಿನಿಂದಾಗಿ ಇತರ ವಾಯುಗಳಿಗೆ ಮಹತ್ತ್ವ:**

– ೩೭ನೆಯ ಸೂಕ್ತದ ೬ನೆಯ '**ಕೋ ವಾ ವರ್ಷಿಷ್ಠ ಆ ನರೋ...**' ಎಂಬ ಮಂತ್ರದಲ್ಲಿ ಮರುದ್ದೇವತೆಗಳನ್ನು ಸಂಬೋಧಿಸಿ, ಅವರ ಮಧ್ಯದಲ್ಲಿ ಪ್ರಧಾನ

---

* ಕ್ರೀಡಾಶೀಲಂ ಚ ಮಾರುತಮ್ । ಶರ್ಧಃ ಸುಖಬಲಾಢ್ಯಂ ಚಾಪ್ಯನರ್ವಾಣಮನೀಂದ್ರಿಯಮ್ । ನ ವಾಯೋರಿಂದ್ರಿಯಾಣಾಂ ಹಿ ದೇವಾಃ ಸಂತ್ಯಭಿಮಾನಿನಃ । ಅತೋಽನಿಂದ್ರಿಯತಾ ತಸ್ಯ ರಥೇ ದೇಶೇ ಶುಭಶ್ಚ ಸಃ । ಕಣ್ವಾಸ್ತಂ ಗಾಯತಾಭೀಕ್ಷ್ಣಂ........ ।
– *ಋಗ್ಭಾಷ್ಯ 37-82, 83.*

45. ಪ್ರವಶ್ಶರ್ಧಾಯ ಘೃಷ್ವಯೇ ತ್ವೇಷದ್ಯುಮ್ನಾಯ ಶುಷ್ಮಿಣೇ । ದೇವತ್ತಂ ಬ್ರಹ್ಮಗಾಯತ ।
– *ಋ.ವೇ. 37-4.*

* ಶೋಧಕಾಯ ಪ್ರಧಾನಾಯ ವೋ ಬಲಾಯ ಚ ವಾಯವೇ ।
ಶುದ್ಧಾಯ ವಾ ಸುಪ್ರಕಾಶಜ್ಞಾನಾಯಾತಿಬಲಾಯ ಚ ।
ಗಾಯತ ಬ್ರಹ್ಮ ದೇವತ್ತಂ ದೇವೇಷು ತತಮೀಶ್ವರಮ್ ॥ – *ಋ.ಭಾ. 37-87.*

46. ಪ್ರೀತಿರ್ವಾಯೋರ್ವಿಷ್ಣುಗಾನಾದ್ ...... । – *ಋಗ್ಭಾಷ್ಯ 37-88*

47. ಕೋ ವೋ ವರ್ಷಿಷ್ಠ ಆ ನರೋ ದಿವಶ್ಚಗ್ಮಶ್ಚ ಧೂತಯಃ ...... । – *ಋ.ವೇ. 37-6.*

* ಆಸಮಂತಾದುತ್ತಮಃ ಕಃ ಪ್ರಧಾನೋ ವಾಯುರೇವ ಚ । – *ಋಗ್ಭಾಷ್ಯ 37-91.*

* ಕಃ ಪ್ರಧಾನೋ ವಾಯುರಾವರ್ಷಿಷ್ಠಃ ಉತ್ತಮ ಇತಿ ಯಾವತ್ । ಕಾಲಜ್ಯೇಷ್ಠಸ್ಯ ಸರ್ವಜ್ಯೇಷ್ಠೋಪಲಕ್ಷಣತ್ವಾತ್ । ಏವಂ ಭೂತಸ್ವಾಮಿಸಂಪತ್ತ್ಯಾ ಯೂಯಮಪಿ ಮಹಾಂತ ಇತಿ ಭಾವಃ ।
– *ಋಗ್ಭಾಷ್ಯಟೀಕಾ.*

ವಾಯುದೇವತೆ ಶ್ರೇಷ್ಠನೆಂದು ಉದ್ಘೋಷಿಸಿ, ಅಂತಹವನನ್ನು ಒಡೆಯನನ್ನಾಗಿ ಹೊಂದಿರುವುದರಿಂದ ಉಳಿದ ಮರುದ್ದೇವತೆಗಳ ಸಾಮರ್ಥ್ಯವನ್ನು ಕೊಂಡಾಡ ಲಾಗಿದೆ.48

೩೬. **ಮರುದ್ದೇವತೆಗಳ ತಂದೆ ವಾಯು:**

– ೩೭ನೆಯ ಸೂಕ್ತದ 'ಸ್ಥಿರಂ ಹಿ ಜಾನಮೇಷಾಂ....' –ಎಂಬ ೯ನೆಯ ಮಂತ್ರದಲ್ಲಿ ಮರುದ್ದೇವತೆಗಳಿಗೆ ಪ್ರಧಾನ ವಾಯುದೇವನಿಂದ ಹಾಗೂ ಭಾರತೀದೇವಿ ಯಿಂದ ಉತ್ತಮವಾದ ಜನ್ಮ ದೊರಕಿದೆ ಎಂದು ಉದ್ಘೋಷಿಸಲಾಗಿದೆ.49

೩೭. **ರೋಗಗಳ ದ್ರಾವಕ ವಾಯುದೇವ:**

– ೩೮ನೆಯ ಸೂಕ್ತದ 'ಸತ್ಯಂ ತ್ವೇಷಾಃ.....' ಎಂಬ ೭ನೆಯ ಮಂತ್ರದಲ್ಲಿ ಮರುದ್ದೇವತೆಗಳನ್ನು ರುದ್ರ ಎನಿಸುವ ವಾಯುದೇವನ ಮಕ್ಕಳು ಎಂಬ ಅರ್ಥದಲ್ಲಿ 'ರುದ್ರಿಯ' –ಎಂಬ ಶಬ್ದದಿಂದ ಕರೆಯುವ ಮೂಲಕ ವಾಯು ದೇವ ರೋಗಗಳನ್ನು ದೂರಮಾಡುವವನಾಗಿರುವುದರಿಂದ 'ರುದ್ರ' ಎನಿಸು ವನೆಂದು ಸೂಚಿಸಲಾಗಿದೆ.50

೩೮. **ಭಗವಂತ ವಾಯುಪುತ್ರ:**

– ೪೦ನೆಯ ಸೂಕ್ತದ 'ತ್ವಾಮಿದ್ಧಿ ಸಹಸಸ್ಪುತ್ರ.....' ಎಂಬ ೨ನೆಯ ಮಂತ್ರದಲ್ಲಿ ಪರಮಾತ್ಮನನ್ನು ವಾಯುದೇವನಿಂದ ವ್ಯಂಗ್ಯನಾಗುವವನೆಂಬ ಅಭಿಪ್ರಾಯ ದಲ್ಲೂ, ಶಕ್ರನು ವಾಯುದೇವನ ಪುತ್ರ ಎಂಬ ಅಭಿಪ್ರಾಯದಲ್ಲೂ 'ಸಹಸ ಸ್ಪುತ್ರ' –ಎಂದು ಪರಮಾತ್ಮನನ್ನೂ ಇಂದ್ರನನ್ನೂ ಉಲ್ಲೇಖಿಸಲಾಗಿದೆ.51

೩೯. **ವಾಗೀಶನಾದ ಸಮೀರಣ ಬ್ರಹ್ಮಣಸ್ಪತಿ:**

– ೪೦ನೇ ಸೂಕ್ತದ 'ಪ್ರೈತು ಬ್ರಹ್ಮಣಸ್ಪತಿಃ....' –ಎಂಬ ಮೂರನೆಯ ಮಂತ್ರದಲ್ಲಿ ಶ್ರೀವಿಷ್ಣು ಹೇಗೋ ಹಾಗೆ ಮುಖ್ಯಪ್ರಾಣನೂ 'ಬ್ರಹ್ಮಣಸ್ಪತಿ' ಎನಿಸಿರುವನು. ವಾಗಭಿಮಾನಿ ವಾಣೀ 'ಬ್ರಹ್ಮ' ಎನಿಸಿದ್ದು, ಆಕೆಗೆ ಪತಿಯಾಗಿರುವ ವಾಯು ದೇವ 'ಬ್ರಹ್ಮಣಸ್ಪತಿ' ಎನಿಸಿರುವನು ಎನ್ನಲಾಗಿದೆ.52 *

---

48. ಸ್ಥಿರಂ ಹಿ ಜಾನಮೇಷಾಂ..... । – *ಋ.ವೇ. 37-9.*

* ಸ್ಥಿರಂ ವೋ ಜನನಂ ಯತಃ । ಜಾತಾ ವಾಯೋರ್ದಿವಿ..... । – *ಋಗ್ಭಾಷ್ಯ 37-95.*

* ಸ್ಥಿರಂ ವೋ ಜನನಂ ಯತಃ । ಜಾತಾ ವಾಯೋರ್ದಿವಿ..... । – *ಋಗ್ಭಾಷ್ಯ 37-95.*

49. ರುಜಾಂ ವಿದ್ರಾವಕಸ್ಯೈವ ವಾಯೋಃ ಪುತ್ರಾ ಹಿ ರುದ್ರಿಯಾಃ । – *ಋ.ಭಾ. 38-109.*

50. ವಾಯೋಃ ಸುತೇತ್ಯೇವ ಸಹಸಃ ಪುತ್ರ ಇತ್ಯಪಿ । ತದ್ವ್ಯಂಗ್ಯತ್ವಾದ್ಧರಿಃ ಪ್ರೋಕ್ತಃ ಶಕ್ರಸ್ತತ್ಸುತ ಏವ ಚ । – *ಋಗ್ಭಾಷ್ಯ 40-2.*

51. ಪತಿಸ್ತು ಬ್ರಹ್ಮಣೋ ವಿಷ್ಣುರ್ವಾಗೀಶತ್ವಾತ್ ಸಮೀರಣಃ । – *ಋಗ್ಭಾಷ್ಯ 40-136.*

# ಖಂಡಾರ್ಥನಿರ್ಣಯದಲ್ಲಿ

## • ವಾಯುದೇವನ ಪ್ರಸ್ತಾವ •

ಶ್ರೀ ಮಧ್ವರು ರಚಿಸಿರುವ 'ಖಂಡಾರ್ಥನಿರ್ಣಯ'ದ ಎರಡು ವೇದಮಂತ್ರಗಳಲ್ಲಿ ವಾಯುದೇವನ ಪ್ರಸ್ತಾವ ಬರುವುದು. 'ನದಂ ವ ಓದತೀನಾಂ....' ಎಂಬುದು [ಋ.ವೇ. 8-69-2] ಹಾಗೂ 'ತಾ ಅಸ್ಯ ಸೂದದೋಹಸಃ....' ಎಂಬುದು [ಋ.ವೇ. 8-69-3] –ಈ ಎರಡು ಮಂತ್ರಗಳಲ್ಲಿ ನೀರು, ಗೋವು ಹಾಗೂ ಮಾತು –ಇವುಗಳಿಗೆ ವಾಯು ದೇವನನ್ನು ಒಡೆಯನನ್ನಾಗಿಯೂ, ಅಂತಹ ವಾಯುದೇವನಲ್ಲಿರುವ ಪರಮಾತ್ಮನ ಪಾನ ಕ್ಕಾಗಿ ನೀರು ಇತ್ಯಾದಿಗಳಿರುವುವು ಎಂಬುದಾಗಿಯೂ ಹೇಳಲಾಗಿದೆ.

**ಜಲಾದಿಗಳಿಗೆ ಒಡೆಯ:**

**ನದಂ ವ ಓದತೀನಾಂ ನದಂ ಯೋ ಯುವತೀನಾಮ್ ।**
**ಪತಿಂ ವೋ ಅಘ್ನ್ಯಾನಾಂ ಧೇನೂನಾಮಿಷುಧ್ಯಸಿ ॥**

• **ಜಲಪರ ಅರ್ಥ:**

ಹೇ ಇಂದ್ರ– ಪರಮೇಶ್ವರನಾದ ಪರಮಾತ್ಮನೇ **ವಃ** –ನಿನ್ನ **ಓದತೀನಾಂ** ಒದ್ದೆ ಮಾಡುವ ಭಾವದ, ಆಕಾಶದಲ್ಲಿ ಹಾರಾಡುವ, **ಅಘ್ನ್ಯಾನಾಂ**– ಒದ್ದೆಕಟ್ಟಿಗೆ ಯಲ್ಲಿರುವ ನೀರು ಹೊಗೆರೂಪದಿಂದ ಹೊರಬರುತ್ತ, ಸುಡಲ್ಪಡದಿರುವ ಹಾಗೆಯೇ '**ಆಪೋ ವಾವ ಅಘ್ನ್ಯಾಃ ಶಿಶ್ನಃ ಶಿಶ್ನಾದುಪಸೃಜ್ಯಂತೇ**' ಎಂಬ ಮಾತಿಗನುಗುಣವಾಗಿ ರೇತೋರೂಪದಿಂದ ಅಜರಗಳಾಗಿರುವ **ಧೇನೂನಾಂ**– ಜಗತ್ಪೋಷಕಗಳಾದ **ಪತಿಂ**– ಒಡೆಯನಾದ, **ವಃ**– ನಿಮ್ಮ ಭೃತ್ಯನಾದ, **ಅವ್ಯಕ್ತ** ಶಬ್ದವನ್ನು ಮಾಡುವ, ಮುಖ್ಯಪ್ರಾಣನನ್ನು ಕುರಿತು **ಇಷುಧ್ಯಸಿ**– ಒಡೆಯನಾಗಿರುವಿ.

• **ಗೋಪರವಾದ ಅರ್ಥ:**

ಹೇ ಇಂದ್ರ– ಪರಮೇಶ್ವರನಾದ ಪರಮಾತ್ಮನೇ, **ವಃ**– ನಿಮ್ಮ **ಓದತೀನಾಂ**– ಹಾಲಿನಿಂದ ಸುರಿಸುವ, **ಯೋಯುವತೀನಾಂ**– ಬೇರೆಬೇರೆ ದೇಶಕ್ಕೆ ಸಂಚರಿಸು ತ್ತಿರುವ, **ಅಘ್ನ್ಯಾನಾಂ**– ಕೊಲ್ಲಲು ಅಯೋಗ್ಯಗಳಾದ, **ವಃ**– ನಿಮ್ಮ, **ಧೇನೂನಾಂ**– ಹಸುಗಳಿಗೆ, **ಪತಿಂ**– ಒಡೆಯನಾದ, **ವಃ**- ನಿಮ್ಮ ಪುರುಷನಾದ, **ನದಂ**– ಅವ್ಯಕ್ತ ಶಬ್ದಮಾಡುವ, ಪ್ರಾಣನನ್ನು ಕುರಿತು, **ಇಷುಧ್ಯಸಿ**- ಒಡೆಯನಾಗಿರುವಿ.

- **ವಾಕ್ಯರಾರ್ಥ:**

ಹೇ ಇಂದ್ರ– ಪರಮೇಶ್ವರನೇ **ಓದತೀನಾನಾಂ**– ಭಕ್ತಿಯನ್ನು ಸುರಿಸುವ, **ಯೋಯುವತೀನಾಂ**– ಚೆನ್ನಾಗಿ ಆತ್ಮತತ್ವವನ್ನು ಪ್ರತಿಪಾದಿಸುವ, **ಅಘ್ನ್ಯಾನಾಂ**– ನಿತ್ಯಗಳಾದ **ಧೇನೂನಾಂ**–ಧರ್ಮಾರ್ಥಕಾಮಮೋಕ್ಷಗಳಿಗೆ ಪೋಷಕಗಳಾದ, **ವಃ**– ನಿಮ್ಮ ಮಾತುಗಳಿಗೆ, **ಪತಿಂ**– ಒಡೆಯನಾದ, **ವಃ**– ನಿಮ್ಮ ಪುರುಷನಾದ, **ನದಂ**– ಅವ್ಯಕ್ತಶಬ್ದ ಮಾಡುವ ಪ್ರಾಣನನ್ನು ಕುರಿತು, **ಇಷುಧ್ಯಸಿ**– ಒಡೆಯನಾಗಿರುವಿ.

- ಪ್ರತಿಯೊಂದು ಸೃಷ್ಟಿಯಲ್ಲೂ ಬೇರೆ ಬೇರೆ ಪ್ರಾಣನಿದ್ದು, ಅವರೆಲ್ಲರಿಗೂ ಶ್ರೀಹರಿ ಪತಿ ಎಂದು ಸೂಚಿಸುವುದಕ್ಕಾಗಿಯೇ 'ನದಂ' –ಎಂಬುದು ಪುನರುಕ್ತವಾಗಿದೆ.

- **'ವಾಚಂ ಧೇನುಮುಪಾಸೀತ....'** –ಎಂಬ ಉಪನಿಷತ್ತಿನ ಮಾತಿನಲ್ಲಿ ವಾಗ್ದೇವಿಯನ್ನು 'ಧೇನು'ವನ್ನಾಗಿ ವರ್ಣಿಸಿ **'ತಸ್ಯಾಃ ಪ್ರಾಣ ಋಷಭಃ'** –ವಾಗ್ದೇವಿಗೆ ಪ್ರಾಣದೇವನೇ ಗೂಳಿ –ಎಂದು ತಿಳಿಸಲಾಗಿದೆ. ಈ ಶ್ರುತಿಯ ಆಧಾರದಲ್ಲಿ ಮೂರನೆಯ ವಾಕ್ಯರವಾದ ಅರ್ಥವನ್ನು ಹೇಳಲಾಗಿದೆ.

- ಇಲ್ಲಿ ವಾಯುದೇವನನ್ನು ನೀರಿಗೆ, ಹಸುಗಳಿಗೆ, ಮಾತುಗಳಿಗೆ ಒಡೆಯನನ್ನಾಗಿ ಹೇಳಿ, ಅಂತಹ ವಾಯುದೇವನಿಗೂ ಪರಮಾತ್ಮನನ್ನು ಒಡೆಯನನ್ನಾಗಿ ಹೇಳಿರುವುದರಿಂದ ವಾಯುದೇವನ ಜಲಪತಿತ್ವಾದಿ ಧರ್ಮಗಳು ಭಗವಂತನಿಂದ ನೀಡಲ್ಪಟ್ಟವೆಂದು ಸೂಚಿತವಾಗುವುದು.

- 'ವಃ' –ಎಂದು ನೀರು, ಹಸು ಮತ್ತು ಮಾತುಗಳಿಗೂ ಅನ್ವಯಿಸಿ, ಪ್ರಯೋಗಿಸಿರುವುದರಿಂದ ನೀರು ಮುಂತಾದವು ಮುಖ್ಯವಾಗಿ ಪರಮಾತ್ಮನ ಸ್ವಾಮ್ಯಕ್ಕೊಳಗಾದವು; ಪರಮಾತ್ಮನ ಅನುಗ್ರಹದಿಂದಷ್ಟೇ ವಾಯುದೇವನೂ ಅವುಗಳಿಗೆ ಪತಿಯಾಗಿರುವನು ಎಂದು ಸೂಚಿತವಾಗುವುದು.

- *ವಾಯುದೇವನನ್ನು ಜಲಾದಿಗಳಿಗೆ ಪತಿಯನ್ನಾಗಿ ತಿಳಿಸುವಾಗ ಜಲಾದಿಗಳಲ್ಲಿಯ ಒದ್ದೆ ಮಾಡುವಿಕೆ, ಸಂಚರಣ, ಹೊಗೆಯಾಗಿ ಆಕಾರದಲ್ಲಿ ಹಾರುವಿಕೆ, ರೇತಸ್ಸಿನ ರೂಪದಲ್ಲಿ ನಿತ್ಯವಾಗಿರುವಿಕೆ, ಜಗತ್ಪೋಷಕತ್ವ (ಜಲದ ಧರ್ಮಗಳು), ಹಾಲುಸುರಿಸುವಿಕೆ, ದೇಶದೇಶಕ್ಕೆ ಅಡ್ಡಾಡುವಿಕೆ, ಹನನಾನರ್ಹತೆ (ಹಸುವಿನ ಧರ್ಮಗಳು), ಭಕ್ತಿಯಿಂದ ಒದ್ದೆಮಾಡುವಿಕೆ, ಚೆನ್ನಾಗಿ ಆತ್ಮತತ್ವವನ್ನು ತಿಳಿಸುವಿಕೆ, ನಿತ್ಯತ್ವ, ಧರ್ಮಾರ್ಥಕಾಮಪುರುಷಾರ್ಥಗಳನ್ನು ಪೋಷಿಸುವಿಕೆ (ಮಾತಿನ ಧರ್ಮಗಳು) –ಧರ್ಮಗಳನ್ನು ಉಲ್ಲೇಖಿಸಿರುವುದರಿಂದ ಜಲಾದಿಗಳಲ್ಲಿ ಆ ಧರ್ಮಗಳು ಕಾಣಿಸಿಕೊಳ್ಳಲು ಕಾರಣನಾಗಿರುವವನು ವಾಯುದೇವ ಎಂದು ಸೂಚಿತವಾಗುವುದು.

- **'ಪುರುಷೋ ವೈ ನದಃ' 'ಪ್ರಾಣೋ ವೈ ನದಃ'** –ಎಂಬ ಮಾತಿಗನುಗುಣವಾಗಿ 'ನದ' ಎಂಬುದಕ್ಕೆ ವಾಯುದೇವ ಎಂಬ ಅರ್ಥ. **'ಣದ ಅವ್ಯಕ್ತೇ ಶಬ್ದೇ'** ಎಂಬ ಕ್ರಿಯಾಪದದಿಂದ ರೂಪುಗೊಂಡ 'ನದ' ಶಬ್ದವು, ನೀರು ತೊರೆ, ನದಿ, ಸಮುದ್ರರೂಪದಿಂದ

ಹರಿಯುವಾಗ, ಹಾಗೆಯೇ ಮೋಡರೂಪದಲ್ಲಿರುವಾಗ ನಡೆಸುವ ಶಬ್ದ ನದ ಎನಿಸುವ ವಾಯುದೇವನ ಮೂಲಕ ಹೊರಡುವುದೆಂದು ಸೂಚಿಸುವುದು.

ಹಸುಗಳು 'ಅಂಬಾ' –ಎಂದು ಕರೆಯುವುದರಲ್ಲೂ, ಪುರುಷರ ಮೂಲಕ ವೇದದ ಧರ್ಮಗಳು ಹೊರಹೊಮ್ಮುವಲ್ಲೂ **'ಮನಃ ಕಾಯಾಗ್ನಿಮಾಹಂತಿ ಸ ಪ್ರೇರಯತಿ ಮಾರುತಮ್'** –ಎಂದಿರುವಂತೆ ಮನಸ್ಸು ದೇಹಾಗ್ನಿಯನ್ನು ಹೊಡೆದಾಗ ಉಂಟಾಗುವ ಮಾರುತನಲ್ಲಿಯ ಪ್ರೇರಣೆಯೇ 'ಅತಿಶಾಂತ', 'ಶಾಂತ', 'ಕಲಾ' ರೂಪಗಳಿಂದ ಮಾತು ರೂಪುಗೊಳ್ಳುವ ಪ್ರಯುಕ್ತ, ಅಂತಹ ಮಾರುತನಲ್ಲಿರುವ ವಾಯುದೇವನೇ ಆ ಗಾಳಿಯನ್ನು ಪ್ರೇರಿಸಿ ಆ ಬಗೆಯ ಮಾತಿನ ಮೂಲಸ್ಥಿತಿಯ ಉತ್ಪತ್ತಿಗೆ ಕಾರಣನಾಗಿದ್ದು, ಅವ್ಯಕ್ತ ಶಬ್ದಗಳ ಉತ್ಪಾದಕನಾಗಿ 'ನದ' ಎನಿಸುವನು.

**ಪ್ರಾಣಸ್ಥಪರಮೇಶ್ವರನ ಸ್ವೀಕಾರಕ್ಕಾಗಿ:**

**ತಾ ಅಸ್ಯ ಸೂದದೋಹಸಸ್ಸೋಮಂ ಶ್ರೀಣಂತಿ ಪೃಶ್ನಯಃ ।**
**ಜನ್ಮನ್ ದೇವಾನಾಂ ವಿಶಸ್ತ್ರಿಷ್ವಾರೋಚನೇ ದಿವಃ ॥**

**ತಾಃ** –ಹಿಂದಿನ ಮಂತ್ರದಲ್ಲಿ ಪ್ರಸ್ತುತಗಳಾದ ಪೃಶ್ನ[illegible] ಪ್ರಶ್ನೆಮಾಡಲು ಯೋಗ್ಯಗಳಾಗಿರುವ, ಹೊಗಳಿಕೆ ರೂಪದಲ್ಲಿರುವ, ಹೊಗಳಲ್ಪ[illegible]ಗಗಳಾದ ವೇದಮಾತುಗಳು, ಹೊಗಳಲ್ಪಡುವವುಗಳಾದ ನೀರು ಮತ್ತು ಗೋವುಗ[illegible], ವಿಶ[illegible]ಋತ್ವಿಜರು ಕೂಡಾ **ಸೂದದೋಹಸಃ** –ಒಳ್ಳೆಯ ಕರ್ಮವನ್ನು, ನೀರನ್ನು, ಜ್ಞಾನವನ್ನು ಹೊರಹೊಮ್ಮಿಸುವ ಪ್ರಾಣನ ಅಂತರ್ಯಾಮಿ ಪರಮೇಶ್ವರನ **ಸೋಮಂ** –ಸೋಮರಸವನ್ನು, ಮನಸ್ಸನ್ನು **ಶ್ರೀಣಂತಿ** –ಸಂಬಂಧಿಸುವವು. ಸೋಮರಸವು ನೀರಿನಿಂದ ಕಲಸಲ್ಪಡುವುದು; ಹಾಲಿನಿಂದ ಕುದಿಸಲ್ಪಡುವುದು. ಮಂತ್ರಗಳಿಂದಲೂ ಸಂಸ್ಕರಿಸಲ್ಪಡುವುದು. ಹೀಗೆ ಸೋಮರಸಕ್ಕೆ ನೀರು, ಗೋವು, ವೇದಮಂತ್ರಗಳ ಸಂಬಂಧವಾದರೆ ಮನಸ್ಸು ರೂಪವಾದ ಸೋಮಕ್ಕೆ ಅರ್ಥಗಳಿಂದ ಮಾತುಗಳ ಸಂಬಂಧ.

**ದಿವಃ** –ಭಾರತೀದೇವಿಯ **ತ್ರಿಷು ಆರೋಚನೇ** –ಬೆಳಗುತ್ತಿರುವ ಆದಿತ್ಯ ಚಂದ್ರ ವಿದ್ಯುತ್ ಲೋಕಗಳಲ್ಲಿ ಇರುವ **ದೇವಾನಾಂ** –ದೇವತೆಗಳ **ಜನ್ಮನ್** –ಅಭಿವ್ಯಕ್ತಿಗೆ ಪ್ರಯೋಜಕವಾದ ಯಜ್ಞದಲ್ಲಿ **ಅಸ್ಯ** –ಈ **ಸೂದದೋಹಸಃ** –ಜ್ಞಾನಾದಿಗಳನ್ನು ಹೊರ ಹೊಮ್ಮಿಸುವ ವಾಯುದೇವನ ಅಂತರ್ಗತನಾದ ಪರಮೇಶ್ವರನಿಗಾಗಿ, ಅವನ ಪಾನಕ್ಕಾಗಿ, ಸ್ವೀಕಾರಕ್ಕಾಗಿ ಇರುವ ಸೋಮರಸ ಹಾಗೂ ಮನಸ್ಸು.

- ಈ ಮಂತ್ರದಲ್ಲಿ **'ಸೂದದೋಹಸ್'** –ಎಂದು ವಾಯುದೇವನನ್ನು ಕರೆಯುವ ಮೂಲಕ ಅವನಿಂದ ನೀರಿನ, ಕರ್ಮದ ಹಾಗೂ ಜ್ಞಾನಾದಿಗಳ ಹೊರಹೊಮ್ಮಿಸುವಿಕೆ ನಡೆಯುವುದೆಂದು ತಿಳಿಸಲ್ಪಟ್ಟಂತಾಗುವುದಲ್ಲದೆ, ಸೋಮರಸ ಹಾಗೂ ಮನಸ್ಸು ವಾಯುದೇವನ ಅಧೀನದಲ್ಲಿರುವ ಜಲಾದಿಗಳನ್ನು ಅವಲಂಬಿಸಿರುವ ಮೂಲಕ ವಾಯುದೇವನಿಗೆ ವಿಶೇಷವಾಗಿ ಸಂಬಂಧಿಸಿದೆ ಎಂದು ತಿಳಿಸಲ್ಪಟ್ಟಂತಾಗುವುದು.
- ಸೋಮರಸ ಹಾಗೂ ಮನಸ್ಸು ವಾಯುದೇವನ ಅಂತರ್ಗತ ಪರಮಾತ್ಮನ ಪಾನಕ್ಕಾಗಿಯೇ ಸ್ವೀಕಾರಕ್ಕಾಗಿಯೇ, ಇರುವಂತಹದ್ದೆಂದು ಸೂಚಿತವಾಗುವುದು. *

# • ಭಗವದ್ಗೀತೆಯಲ್ಲಿ ವಾಯುದೇವನ ಪ್ರಸ್ತಾವ •

ವಾಯುದೇವನ ಪ್ರಸ್ತಾವ ಉಪನಿಷತ್ತುಗಳಲ್ಲಿ ವ್ಯಾಪಕವಾಗಿ ಬಂದಿರುವುದಾದರೂ, ಅಂತಹ ಉಪನಿಷದ್-ಗೋವುಗಳ ಕ್ಷೀರವೆಂದು ಪರಿಗಣಿತವಾಗಿರುವ ಭಗವದ್ಗೀತೆಯಲ್ಲಿ ಮಾತ್ರ ಮೂರು ನಾಲ್ಕು ಕಡೆಗಳಲ್ಲಷ್ಟೇ, ಅದೂ ಅಸ್ಪಷ್ಟವಾಗಿ ವಾಯುದೇವನ ಪ್ರಸ್ತಾವ ಬಂದಿದೆ ಎಂದರೆ ಕೆಲವು ಜಿಜ್ಞಾಸುಗಳಿಗೆ ಹಾಗಾದರೆ ವಾಯುಜೀವೋತ್ತಮತತ್ತ್ವವು ಶಾಸ್ತ್ರಕ್ಕೆ ಸಮ್ಮತ ಅಲ್ಲವೇನೋ ಅಥವಾ ಅದಕ್ಕೆ ಶಾಸ್ತ್ರದಲ್ಲಿ ಅಷ್ಟು ಪ್ರಾಶಸ್ತ್ಯ ಇಲ್ಲವೇನೋ ಎಂದು ಸಂದೇಹ ಉಂಟಾದರೂ ಆಶ್ಚರ್ಯವಿಲ್ಲ.

ಆದರೆ ಶಾಸ್ತ್ರಕಾರರ ಪ್ರವೃತ್ತಿಯನ್ನು ಚೆನ್ನಾಗಿ ಬಲ್ಲವರಿಗೆ ಈ ಬಗೆಯ ಸಂದೇಹ ಉಂಟಾಗದು.

ಜೀವತ್ರೈವಿಧ್ಯವನ್ನು ಕಂಡ ಶಾಸ್ತ್ರಕಾರರು ಸದ್ಗತಿಗೆ ಯೋಗ್ಯರಾದ ಸಜ್ಜೀವರಿಗೆ ಯಥಾರ್ಥಜ್ಞಾನವನ್ನು ವಿತರಿಸುವಾಗಲೇ ಸದ್ಗತಿಗೆ ಅನರ್ಹರಾದವರಿಗೆ ಆ ಜ್ಞಾನ ದೊರಕದಂತಾಗಲು ಬೇಕಾದ ತಂತ್ರಗಳನ್ನೂ ಬಳಸಿಕೊಳ್ಳುವರು. **'ಪರೋಕ್ಷಪ್ರಿಯಾ ಇವ ಹಿ ದೇವಾಃ ಪ್ರತ್ಯಕ್ಷದ್ವಿಷಃ'** -ವಾಙ್ಮಯಾಭಿಮಾನಿದೇವತೆಗಳು ಪರೋಕ್ಷವನ್ನು ಅಂದರೆ ಅರ್ಥದಲ್ಲಿಯ ಅಸ್ಪಷ್ಟತೆಯನ್ನು ಬಯಸುವರು; ಸ್ಪಷ್ಟತೆಯನ್ನು ಆದಷ್ಟು ದೂರೀಕರಿಸುವರು. ಐತರೇಯೋಪನಿಷತ್ತು [2-3-3-11] **'ಇಂದ್ರ'** ಎನಿಸುವ ಭಗವಂತನನ್ನು 'ಇಂದ್ರ' ಎಂದು ಕರೆಯುವುದಾದರೆ ದೇವತೆಗಳ ಈ ಸ್ವಭಾವಕ್ಕನುಗುಣವಾಗಿ ಎಂದು ವಾಙ್ಮಯಾಭಿಮಾನಿದೇವತೆಗಳ ಈ ಸ್ವಭಾವವನ್ನು ಉದ್ಘೋಷಿಸಿದೆ.

ಅಂತೂ ಶಾಸ್ತ್ರಾರ್ಥ ಎಲ್ಲರಿಗೂ ತಿಳಿಯದಂತೆ ಮುಚ್ಚಿಡುವ ಸ್ವಭಾವ ಶಾಸ್ತ್ರಪ್ರಪಂಚದಲ್ಲಿ ಪ್ರಸಿದ್ಧವಾಗಿದ್ದು, ಅಂತಹ ಸ್ವಭಾವಕ್ಕನುಗುಣವಾಗಿ ಅಳವಡಿಸಿಕೊಳ್ಳಲಾಗುವ ಒಂದು ತಂತ್ರ-ಶಾಸ್ತ್ರದ ಪ್ರಸಿದ್ಧ ಗ್ರಂಥಗಳಲ್ಲೂ ಪ್ರಸಿದ್ಧ ತತ್ತ್ವಗಳನ್ನೂ ಉಲ್ಲೇಖಿಸದೆ ಇರುವಂತಹದ್ದು. ಭಗವದ್ಗೀತೆ ಅಧ್ಯಾತ್ಮಶಾಸ್ತ್ರದ ಪ್ರಸಿದ್ಧವಾದ ಹಾಗೂ ಸರಳವಾದ ಗ್ರಂಥವಾಗಿದ್ದು, ಅದರಲ್ಲೂ ವಾಯುಜೀವೋತ್ತಮತ್ವದ ಪ್ರತಿಪಾದನೆ ಉಪನಿಷತ್ತು ಗ್ರಂಥಗಳಲ್ಲಿ ಹೇಗೋ ಹಾಗೆ ಸ್ಪಷ್ಟವಾಗಿ ನಡೆದಿದ್ದರೆ ತತ್ತ್ವಜ್ಞಾನಕ್ಕೆ ಅಯೋಗ್ಯರಾಗಿರುವವರೂ ಆ ಪ್ರಮೇಯವನ್ನು ಒಪ್ಪಿಕೊಳ್ಳುವ ಅಪಾಯ ಇತ್ತು. ಈ ಅಪಾಯ ವಾಯುಜೀವೋತ್ತಮತ್ವವನ್ನು ಒಪ್ಪಿಕೊಳ್ಳುವಲ್ಲಿಗೇ ಪರ್ಯವಸಾನಗೊಳ್ಳದೆ, ವಾಯುಜೀವೋತ್ತಮತ್ವವನ್ನು ಒಪ್ಪಿ, ಅಂತಹ ವಾಯುದೇವರ ಅವತಾರ ಮಧ್ವಾಚಾರ್ಯರು ಎಂಬುದನ್ನು ಅಂಗೀಕರಿಸಿ, ಅವರು ಪ್ರಸ್ತುತಪಡಿಸಿರುವ ಸತ್ಸಿದ್ಧಾಂತವನ್ನು ಸ್ವೀಕರಿಸುವಷ್ಟೂ ಗಂಭೀರ ಸ್ಥಿತಿಗೆ ತಲುಪುವ ಅನಿಷ್ಟ ಇದೆ. ಇದಾಗಬಾರದಂತೆ ಭಗವದ್ಗೀತೆಯಲ್ಲಿ ಇದರ ವ್ಯಾಪಕ ನಿರೂಪಣೆ ನಡೆದಿಲ್ಲ. ಕೇವಲ ಮೂರುನಾಲ್ಕು ಕಡೆಗಳಲ್ಲಷ್ಟೇ, ಅದೂ ಅಸ್ಪಷ್ಟವಾಗಿ ಬಂದಿದೆ. ಭಂಡಾರಕೇರಿ

ಮಠಾಧೀಶರಾಗಿರುವ ಶ್ರೀ ವಿದ್ಯೇಶತೀರ್ಥರು ಸರ್ವಮೂಲಗ್ರಂಥಗಳ ಸಂದೇಶಗಳ ಆಧಾರದಲ್ಲಿ 'ಗೀತೆಯಲ್ಲಿ ಪ್ರಾಣತತ್ವದ ಹಿರಿಮೆ' ಎಂಬುದಾಗಿ ಆಚಾರವಿಚಾರ ಪತ್ರಿಕೆಯ [2004, ಫೆಬ್ರವರಿಯಿಂದ....2004 ಆಗಸ್ಟ್) ಏಳು ಸಂಚಿಕೆಗಳಲ್ಲಿ ವಿಸ್ತೃತ ಪ್ರಬಂಧವನ್ನು ರಚಿಸಿರುವರಾದರೂ ಶ್ರೀಮದಾಚಾರ್ಯರು ರಚಿಸಿರುವ ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯ –ಇವುಗಳ ಆಧಾರದಲ್ಲಿ ಕಾಣುವಾಗ ವಾಯುದೇವನ ಪ್ರಸ್ತಾವ ಎಷ್ಟು ಕಡೆಗಳಲ್ಲಿ, ಹೇಗೆ ಬಂದಿದೆ ಎಂಬುದನ್ನು ಪರಿಶೀಲಿಸೋಣ.

**೧) ಪರನೂ ಅಲ್ಲದ; ಅಪರನೂ ಅಲ್ಲದ ವಾಯುದೇವ ಮಧ್ಯಮ**

– **'ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ'** –ಎಂದು ಗೀತಾಚಾರ್ಯನು [7-7] ತಾನೇ ಪರತರ ಹೊರತು ತನಗಿಂತ ಬೇರೆ 'ಪರತರ' ಎನಿಸುವವನಿಲ್ಲ ಎಂದು ಉದ್ಘೋಷಿಸುವ ಮೂಲಕ ಜೀವರು ದುಃಖಸಂಬಂಧವುಳ್ಳ ಪ್ರಯುಕ್ತ ಅವರರೆಂದೂ, ನಿತ್ಯದುಃಖದ ಸಂಪರ್ಕವೇ ಇಲ್ಲದ ಲಕ್ಷ್ಮೀದೇವಿ ಪರಳೆಂದೂ, ಕಿಂಚಿದ್ ದುಃಖದ ಸಂಪರ್ಕವಿದ್ದರೂ ಆ ದುಃಖದ ಪೀಡೆಗೆ ಒಳಗಾಗದ ಪ್ರಯುಕ್ತ ವಾಯುದೇವ, ಪರನೂ ಅಲ್ಲದೆ, ಅವರನೂ ಅಲ್ಲದೆ 'ಮಧ್ಯಮ' ಎನಿಸುವನೆಂದೂ ಸೂಚಿಸಿರುವನು.52

**೨. ಮುಖ್ಯಪ್ರಾಣನಿಗೂ ಆದಿ ಭಗವಂತ:**

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।**
**ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥**

– ಎಂದು ಗೀತಾಚಾರ್ಯನು (10-3) ಸರ್ವಪಾಪಗಳ ಬಿಡುಗಡೆಗೆ ಕಾರಣವಾಗಿ ಹೇಳಿದ ತನ್ನ ತಿಳಿವಳಿಕೆಯಲ್ಲಿ ಒಂದು ಅಂಶ –'ತಾನು ಅನಾದಿ' ಎಂದು ತಿಳಿಯಬೇಕು. ಅನಾದಿ ಎಂಬ ಶಬ್ದಕ್ಕೆ ಆದಿ ಇಲ್ಲದವನೆಂಬುದು ಪ್ರಸಿದ್ಧ ಅರ್ಥ ವಾಗಿರುವುದಾದರೂ, ಅನಾದಿ ಶಬ್ದದ ಪಕ್ಕದಲ್ಲಿಯೇ 'ಅಜ' ಎಂಬ ಶಬ್ದ ಇದ್ದು, ಈ ಶಬ್ದದಿಂದಲೇ ಹುಟ್ಟು ಇಲ್ಲದವನೆಂಬ ಅರ್ಥ ಸಿದ್ಧಿಸುವಾಗ, ಅನಾದಿ ಎಂಬುದಕ್ಕೆ ಆದಿರಹಿತ ಎಂಬ ಅರ್ಥಕ್ಕಿಂತ ಬೇರೆ ಅರ್ಥ ಹೇಳಬೇಕು. ಅದಕ್ಕಾಗಿ ಶ್ರೀ ಮಧ್ವರು ತಮ್ಮ ಗೀತಾಭಾಷ್ಯದಲ್ಲಿ ಒಂದು ಅರ್ಥ ಹೇಳಿದ್ದರೆ, ಗೀತಾ ತಾತ್ಪಯದಲ್ಲಿ ಸರ್ವಚೇಷ್ಟಕನಾಗಿದ್ದು 'ಅನ' ಎನಿಸಿರುವ ಮುಖ್ಯ ಪ್ರಾಣ ನಿಗೂ ಆದಿಕಾರಣನಾಗಿರುವವನು [ಅನಸ್ಯಾಪಿ ಆದಿಃ ಅನಾದಿಃ] ಎಂದು ಅರ್ಥೈಸಿ ರುವರು.

---

52. ಅವರಾ ದುಃಖಸಂಬಂಧಾತ್ ಜೀವಾ ಏವ ಪ್ರಕೀರ್ತಿತಾಃ ।
ನಿತ್ಯನಿರ್ದುಃಖರೂಪತ್ವಾತ್ ಪರಾ ಶ್ರೀರೇಕಲೈವ ತು ।
ದುಃಖಾಸಂಪೀಡಿತತ್ವಾತ್ತು ಮಧ್ಯಮೋ ವಾಯುರುಚ್ಯತೇ ॥
ಅನನ್ಯಾಧೀನರೂಪತ್ವಾದಸಮ್ಯಾಧಿಕಸೌಖ್ಯತಃ ।
ತತ್ತಂತ್ರತ್ವಾಚ್ಚ ಸರ್ವಸ್ಯ ವಿಷ್ಣುಃ ಪರತರೋ ಮತಃ ॥ *– ಗೀ.ತಾ. 7.7.*

ಹೀಗೆ ಶ್ರೀಕೃಷ್ಣ ಮುಖ್ಯಪ್ರಾಣನನ್ನು ಪ್ರತ್ಯೇಕವಾಗಿ ಉಲ್ಲೇಖಿಸಿ, ಅಂತಹವನಿಗೂ ತಾನು ಕಾರಣ ಎಂದು ಹೇಳಿಕೊಂಡಿರುವುದರಿಂದಲೂ, ಅನ ಶಬ್ದದಿಂದ ಮುಖ್ಯಪ್ರಾಣನನ್ನು ಉಲ್ಲೇಖಿಸಿ ಅವನ ಚೇಷ್ಟಕತ್ವಧರ್ಮವನ್ನು ಒಪ್ಪಿಕೊಂಡಿರುವುದರಿಂದಲೂ ಅವನ ಆ ಬಗೆಯ ಮಹಿಮೆ ಶ್ರೀಕೃಷ್ಣನಿಂದ ಉದ್ಘೋಷಿಸಲ್ಪಟ್ಟಂತಾಗಿದೆ.

೩. **ಪವನ ಎಂಬ ವಿಭೂತಿರೂಪ:**

– '**ಪವನಃ ಪವತಾಮಸ್ಮಿ....**' ಎಂದು ಗೀತಾಚಾರ್ಯ [10-31]ತನ್ನ ವಿಭೂತಿ ರೂಪಗಳಲ್ಲಿ ಒಂದಾಗಿ ವಾಯುದೇವನಲ್ಲಿ '**ಪವನ**' –ಎಂಬ ಹೆಸರಿನಿಂದ ಇರುವುದಾಗಿ ತಿಳಿಸಿರುವನು. '**ಪವತಾಂ**' –ಎಂದರೆ ವೇಗವುಳ್ಳವುಗಳ ಮಧ್ಯೇ ಎಂಬ ಅರ್ಥ ಹೇಗೋ ಹಾಗೆ ಪವಿತ್ರಗೊಳಿಸುವವುಗಳ ಮಧ್ಯೇ ಎಂಬ ಅರ್ಥವೂ ಇದೆ. ಆದುದರಿಂದ ವೇಗವುಳ್ಳ ವಸ್ತುಗಳಲ್ಲಿ ಗಾಳಿ ಶ್ರೇಷ್ಠವಾಗಿರುವಂತೆ, ಪವಿತ್ರಗೊಳಿಸುವವರಲ್ಲಿ ವಾಯುದೇವನು ಶ್ರೇಷ್ಠನು. ಹೀಗೆ ಶ್ರೇಷ್ಠ ಎನಿಸುವಂತೆ ಜಡಗಾಳಿಯಲ್ಲಿ ಹೇಗೋ ಹಾಗೆ ವಾಯುದೇವನಲ್ಲೂ ಭಗವಂತನು 'ಪವನ' ಎಂಬ ವಿಭೂತಿರೂಪದಿಂದ ಇರುವನು. ದೇಹದೊಳಗೆ ವ್ಯಾಪ್ತವಾಗಿರುವ ವಾಯುದೇವನ ತೇಜಸ್ಸಿನಲ್ಲಿ ವ್ಯಾಪ್ತವಾಗಿರುವ ಪವಿತ್ರನಾದ ಬ್ರಹ್ಮನ ಸನ್ನಿಧಾನ ಬರುವಂತೆ ಮಾಡಿ ಹಾಗೂ ಬ್ರಹ್ಮನ ಉಪದೇಶ ನೀಡಿ ನಮ್ಮನ್ನು ಪವಿತ್ರೀಕರಿಸಲು ಪ್ರಾರ್ಥಿಸಿಕೊಳ್ಳಲಾಗುವ[53] ಪವಮಾನದ ಮಂತ್ರ ಈ ಗೀತಾಸಂದೇಶಕ್ಕೆ ಸಂವಾದವಾಗಬಲ್ಲದು.

೪. **ಸಾಮವೇದಾಭಿಮಾನಿ:**

– '**ವೇದಾನಾಂ ಸಾಮವೇದೋಽಸ್ಮಿ**' –ಎಂಬುದಾಗಿ ಗೀತಾಚಾರ್ಯ [10-22] ವೇದಗಳಲ್ಲಿ ಸಾಮವೇದ ಶ್ರೇಷ್ಠವೆನಿಸುವಂತೆ ಅದರಲ್ಲಿ ತನ್ನ ವಿಭೂತಿರೂಪ ಇದೆ ಎಂದು ಸಂದೇಶಿಸಿರುವನು.[54]

ವೇದಗಳಲ್ಲಿ ಋಗ್ವೇದ ಶ್ರೇಷ್ಠವೆನಿಸುವಂತಹದ್ದು. ಹೀಗಿದ್ದರೂ ಸಾಮವೇದಕ್ಕೆ ವಾಯುದೇವರು ಅಭಿಮಾನಿಯಾಗಿರುವುದರಿಂದ ಅದು ಋಗ್ವೇದಕ್ಕಿಂತಲೂ ಶ್ರೇಷ್ಠವೆನಿಸಬಲ್ಲದೆಂದು ಶ್ರೀ ಮಧ್ವರು ಸ್ಪಷ್ಟಪಡಿಸಿರುವರು.[55]

---

53. ಯತ್ತೇ ಪವಿತ್ರಮರ್ಚಿಷ್ಯಗ್ನೇ ವಿತತಮಂತರಾ । ಬ್ರಹ್ಮ ತೇನ ಪುನೀಹಿ ನಃ ॥
*– ಋ.ವೇ. 9-67-23.*

54. ವೇದಾನಾಂ ಸಾಮವೇದೋಽಸ್ಮಿ....... ॥ *– ಭ.ಗೀ. 10-22.*

55. '.......ವೇದೇಷು ಋಗ್ವೇದ ಉಚ್ಯತೇ ।' *– ವಿಭೂತಿತತ್ವ (ಗೀ.ತಾ.)*
ಕ್ವಚಿತ್ಸಾಮ್ನ ಆಧಿಕ್ಯಂ ಅಭಿಮಾನ್ಯಪೇಕ್ಷಯಾ ।
ಋಚಃ ಶ್ರೀಃ ಗೀಃ ಉಮಾದ್ಯಾಶ್ಚ ಸಾಮ್ನಃ ಪ್ರಾಣಶಿವಾದಯಃ ಇತ್ಯಾದ್ಯಭಿಮಾನಿ ಭೇದಾತ್ ॥ *– ಗೀ.ತಾ.*

೫. ಪಚನಕಾರ್ಯದಲ್ಲಿ ಸಹಕಾರ:

ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥

–ಎಂಬುದಾಗಿ ಗೀತಾಚಾರ್ಯನು [15-14] ತಾನು ವೈಶ್ವಾನರನೆನಿಸಿ ಜಾಠರಾಗ್ನಿಯಲ್ಲಿದ್ದು ಭಕ್ಷ್ಯ, ಭೋಜ್ಯ, ಲೇಹ್ಯ ಹಾಗೂ ಪೇಯ –ಎಂಬ ನಾಲ್ಕು ಬಗೆಯ ಆಹಾರವನ್ನು ಪಚನಗೊಳಿಸುವೆನೆಂದೂ ಹಾಗೂ ಪಚನಮಾಡುವಲ್ಲಿ ಪ್ರಾಣ ಹಾಗೂ ಅಪಾನ –ಇವರನ್ನು ಬಳಸಿಕೊಳ್ಳುವುದಾಗಿಯೂ ತಿಳಿಸುವನು.

ಇಲ್ಲಿ ಪ್ರಾಣ, ಅಪಾನ ಪದಗಳಿಂದ ಜಾಠರಾಗ್ನಿಯನ್ನು ಉದ್ದೀಪನಗೊಳಿಸಲು ಬೇಕಾದ ಗಾಳಿ –ಎಂಬ ಅರ್ಥವನ್ನು ಇಟ್ಟುಕೊಳ್ಳಬೇಕಾದಂತೆ, ಅಂತಹ ಗಾಳಿಗಳನ್ನು ನಿಯಂತ್ರಿಸುವ ಮುಖ್ಯಪ್ರಾಣನ ಪ್ರಾಣ ಮತ್ತು ಅಪಾನ ಎಂಬ ಎರಡು ರೂಪಗಳನ್ನೂ ಇಟ್ಟುಕೊಳ್ಳಬೇಕಾದದ್ದು.

ಹೊಟ್ಟೆಗೆ ಸಂಬಂಧಿಸಿರುವ ಅಗ್ನಿಯಲ್ಲಿ ವೈಶ್ವಾನರ ಎನಿಸಿ ಇರುವ ಭಗವಂತನನ್ನು ವಾಯುದೇವ ಸ್ತುತಿ ನಡೆಸುತ್ತಿರುವನೆಂದೂ ಕಿವಿಗಳನ್ನೂ ಮುಚ್ಚಿಕೊಂಡರೆ ಆ ಸ್ತುತಿಯನ್ನು ಎಲ್ಲರೂ ಕೇಳಬಹುದೆಂದೂ ತಿಳಿಸುವ ತಂತ್ರಮಾಲಾ[ಬೃಹದ್ಭಾಷ್ಯ7-10-1]ದ[56] ಸಂದೇಶದಿಂದಾಗಿ ವೈಶ್ವಾನರನ ಸಂಪರ್ಕ ಇರುವ ವಾಯು ಬರೇ ಜಡ ಆಗಿರದೆ, ಮುಖ್ಯ ವಾಯು ದೇವನೂ ಆಗಿರುವನೆಂದು ನಿರ್ಧರಿಸಿಕೊಳ್ಳಬಹುದಾಗಿದೆ.

## ಗೀತೆಯಲ್ಲಿ ಬಚ್ಚಿಟ್ಟ ಪ್ರಮೇಯ:

ಹೀಗೆ ೫ ಕಡೆಗಳಲ್ಲಷ್ಟೇ ಭಗವದ್ಗೀತೆ ವಾಯುದೇವನ ಪ್ರಸ್ತಾವ ಮಾಡಿರುವ ಮೂಲಕ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಪ್ರಮುಖ ತತ್ವಗಳಲ್ಲೊಂದಾದ ವಾಯುಜೀವೋತ್ತಮತ್ವವನ್ನು ಬಚ್ಚಿಟ್ಟಿದೆ. ಆ ಮೂಲಕ ಯೋಗ್ಯರಷ್ಟೇ ಆ ತತ್ವದ ಚಿಂತನೆ ನಡೆಸುವಂತೆ ಅಯೋಗ್ಯರು ಅದನ್ನು ಒಪ್ಪಿಕೊಳ್ಳದಂತೆ ಮಾಡಲಾಗಿದೆ.

★

---

56. ಅಗ್ನಿನಾಮಾ ತು ಭಗವಾನೌದರ್ಯಾಗ್ನೌ ಪ್ರತಿಷ್ಠಿತಃ ।
ವಿಶ್ವೈರ್ಗುಣೈಃ ಸಮೇತತ್ವಾದನಂತತ್ವಾಚ್ಚ ಸ ಪ್ರಭುಃ ।
ವೈಶ್ವಾನರ ಇತಿ ಪ್ರೋಕ್ತಃ ಸೋಽಗ್ನಿರಂಗಪ್ರಣೇತೃತಃ ।
ತಸ್ಯ ವಿಷ್ಣೋಃ ಸ್ತುತಿರಿಯಂ ಕ್ರಿಯತೇ ವಾಯುನಾ ಸದಾ ।
ಕರ್ಣೌ ಪಿಧಾಯ ಯಾ ನಿತ್ಯಂ ಶ್ರೋತುಂ ಶಕ್ಯಾಖಿಲೈಸ್ಸದಾ ॥
*– ತಂತ್ರಮಾಲಾ (ಬೃ.ಉ.ಭಾ. 7-10-1.}*

# • ಬ್ರಹ್ಮಸೂತ್ರಗಳಲ್ಲಿ ವಾಯುದೇವರ ಮಹಿಮೆ •

ಶ್ರೀಮದಾನಂದತೀರ್ಥರ ವೈಶಿಷ್ಟ್ಯವೇ ವೇದಪತ್ರಿಪಾದ್ಯತ್ವ. 'ಮಧ್ವ' ಎಂಬ ಹೆಸರು ಅವರಿಗೆ ವೇದಗಳಿಂದಲೇ ಬಂದಿದೆ. ಆದ್ದರಿಂದ ವೇದಾರ್ಥನಿರ್ಣಾಯಕಗಳಾದ ಬ್ರಹ್ಮ ಸೂತ್ರಗಳಲ್ಲೂ ವಾಯುದೇವರ ವಿಷಯಗಳು ಬರಲೇಬೇಕು.

ಬ್ರಹ್ಮಸೂತ್ರಗಳಲ್ಲಿ ವಾಯುತತ್ತ್ವದ ವಿವರಣೆಯನ್ನು ನೀಡುವ ಸುಮಾರು 12 ಅಧಿಕರಣಗಳಿವೆ. ಇವುಗಳಲ್ಲಿ ಕೆಲವು ನೇರವಾಗಿ ವಾಯುದೇವರ ವಿವರಗಳನ್ನು ನೀಡಿದ್ದರೆ ಮತ್ತೆ ಕೆಲವು ಪರೋಕ್ಷವಾಗಿ ವಾಯುತತ್ತ್ವದ ಮಹತ್ವವನ್ನು ತಿಳಿಸುತ್ತವೆ. ಎರಡನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ಮೊದಲನೆಯ ಬಾರಿಗೆ ವಾಯುದೇವರನ್ನೇ ಕುರಿತು ಸೂತ್ರ ಬಂದಿದೆ. ಇದೇ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಐದು ಅಧಿಕರಣ ಗಳು ವಾಯುತತ್ತ್ವದ ಹಿರಿಮೆಯನ್ನು ತಿಳಿಸುತ್ತವೆ. ಮುಂದೆ ಮೂರನೆಯ ಅಧ್ಯಾಯದ ಎರಡನೆಯ ಪಾದದ 35ನೆಯ ಸೂತ್ರ ಬ್ರಹ್ಮಾಂತಜೀವರ ಆನಂದವೂ ಪರಮಾತ್ಮನ ಪ್ರತಿಬಿಂಬ ಎಂದಿಷ್ಟೇ ಉಲ್ಲೇಖಿಸಿ ಮುಂದೆ ಮೂರನೆಯ ಪಾದದ 35, 36, 37 –ಈ ಮೂರು ಸೂತ್ರಗಳಲ್ಲಿ ವಾಯುದೇವರ ಜೀವೋತ್ತಮತ್ವವನ್ನು ತಿಳಿಸಲಾಗಿದೆ. ನಾಲ್ಕನೆಯ ಪಾದದಲ್ಲಿ ಚತುರ್ಮುಖನ ಸ್ವೇಚ್ಛಾವೃತ್ತಿಯ ಪ್ರಸ್ತಾವ ಬಂದಿದೆ. ನಾಲ್ಕನೆಯ ಅಧ್ಯಾಯದ ಮೂರನೆಯ ಪಾದದ 6ನೆಯ ಸೂತ್ರದಲ್ಲಿ ಮುಖ್ಯಪ್ರಾಣನ ಬ್ರಹ್ಮಪ್ರಾಪಕತ್ವಗುಣವನ್ನು ತಿಳಿಸಲಾಗಿದೆ. ಹೀಗೆ ಬ್ರಹ್ಮಸೂತ್ರಗಳಲ್ಲಿ ಅನೇಕ ಕಡೆ ವಾಯುದೇವರ ಪ್ರಸ್ತಾವ ಬಂದಿದೆ. ಶಾಂಕರಭಾಷ್ಯದಲ್ಲಿ ಕೆಲವೆಡೆ 'ಮುಖ್ಯಪ್ರಾಣ' ಎಂಬ ಶಬ್ದದ ಉಲ್ಲೇಖವಿದ್ದರೂ ಪಂಚಪ್ರಾಣಗಳಲ್ಲಿ ಒಂದಾದ ಪ್ರಾಣವಾಯುವನ್ನು ಆ ಶಬ್ದದಿಂದ ಹೇಳಲಾಗಿದೆಯೇ ಹೊರತು ಆಚಾರ್ಯರು ಹೇಳಿದಂತೆ ಜೀವೋತ್ತಮ ವಾಯುದೇವನನ್ನು ಆ ಶಬ್ದ ಹೇಳುತ್ತಿಲ್ಲ.

ಮುಖ್ಯವಾಯುವಿಗೂ ಉತ್ಪತ್ತಿ ಇದೆ (2.3.8)

**ಅಥ ಹ ನಿತ್ಯಾಶ್ಚಾನಿತ್ಯಾಶ್ಚ ತೇಜೋಬನ್ನಾನಿ ಆಕಾಶ ಇತಿ ತಾನ್ಯನಿತ್ಯಾನಿ ।**
**ವಾಯುರ್ವಾವನಿತ್ಯಃ ವಾಯುನಾ ಹಿ ಸರ್ವಾಣಿ ಭೂತಾನಿ ನೇನೀಯಂತೇ ॥**

ಈ ಶ್ರುತಿಯಲ್ಲಿ ತೇಜಸ್ಸೇ ಮೊದಲಾದ ಭೂತವಸ್ತುಗಳನ್ನು 'ನಿತ್ಯಾನಿತ್ಯ' ಎಂದು ಹೇಳಿ ವಾಯುದೇವ ನಿತ್ಯ ಎನ್ನಲಾಗಿದೆ. ಇದರಿಂದ ವಾಯುದೇವರಿಗೆ ಯಾವುದೇ ರೀತಿಯಿಂದ ಉತ್ಪತ್ತಿ ಇಲ್ಲ. ಅವನು ಪರಮಾತ್ಮನಂತೆ ಅನಾದಿ ಎಂದು ತಿಳಿಯುತ್ತದೆ. ಈ ಅನ್ಯಥಾಗ್ರಹಿಕೆಯನ್ನು ನಿವಾರಿಸಲು–

**ಓಂ ಏತೇನ ಮಾತರಿಶ್ವಾ ವ್ಯಾಖ್ಯಾತಃ ಓಮ್ ।** (2.3.8)

ಎಂಬ ಈ ಸೂತ್ರ ಬಂದಿದೆ. ವಾಯುದೇವರಿಗೂ ಶರೀರಪ್ರಾಪ್ತಿ ಪರಾಧೀನತಾಪ್ರಾಪ್ತಿರೂಪವಾದ ಉತ್ಪತ್ತಿ ಇದೆ ಎಂದು ಅದರ ಅರ್ಥ.

**ಅಥೈತಾನಿ ಉತ್ಪತ್ತಿಮಂತಿ ಅನುತ್ಪತ್ತಿಮಂತಿ ಚ**
**ಪ್ರಾಣಃ ಶ್ರದ್ಧಾ ಆಕಾಶಃ ಇತಿ ಭಾಗಶೋ ಹಿ ಉತ್ಪದ್ಯಂತೇ ॥**

ಈ ಶ್ರುತಿ ಅಗ್ನ್ಯಾದಿಗಳಂತೆ ವಾಯುದೇವನಿಗೂ ಉತ್ಪತ್ತಿ-ಅನುತ್ಪತ್ತಿಗಳನ್ನು ಹೇಳುತ್ತದೆ. ಆದ್ದರಿಂದ ವಾಯುದೇವರಿಗೆ ಸ್ವರೂಪತಃ ಅನುತ್ಪತ್ತಿ ಇದ್ದರೂ, ಶರೀರತಃ ಉತ್ಪತ್ತಿ ಇದ್ದೇ ಇದೆ. ಕೂರ್ಮಪುರಾಣ ನಿತ್ಯಾನಿತ್ಯತೆಯಲ್ಲಿ ವಿಭಾಗಗಳನ್ನು ಹೀಗೆ ತೋರಿಸಿಕೊಟ್ಟಿದೆ– ನಿತ್ಯ, ಪರಮನಿತ್ಯ, ಅನಿತ್ಯ, ಪರಾನಿತ್ಯ ಎಂದು ನಾಲ್ಕು ರೀತಿಯ ತತ್ತ್ವಗಳು. ಪಾರ್ಥಿವವಸ್ತುಗಳು ಪರಾನಿತ್ಯಗಳು (ಸಂಸೃಷ್ಟಗಳು). ಪಂಚಭೂತಗಳು ಅನಿತ್ಯಗಳು. ಏಕೆಂದರೆ, ಸೃಷ್ಟಿಕಾಲದಲ್ಲಿ ಭೂತಸೂಕ್ಷ್ಮಗಳಿಗೆ ಪ್ರಕೃತಿಯ ಅಂಶಗಳಿಂದ ಉಪಚಯ ಮಾತ್ರ. ವಾಯುದೇವ ನಿತ್ಯ. ಅವನ ಸ್ವರೂಪ ಮತ್ತು ಪ್ರತಿಭಾತ್ಮಕವಾದ ಜ್ಞಾನ ಎರಡೂ ನಿತ್ಯವಾದುದರಿಂದ, ಅವನ ದೇಹ ಅನಿತ್ಯವಾದರೂ, ಅವನು ಇತರ ಜೀವಿಗಳಿಗಿಂತ ನಿತ್ಯ. ಶ್ರೀ, ಭೂ, ದುರ್ಗಾತ್ಮಕಳಾದ ಲಕ್ಷ್ಮೀದೇವಿ, ಶರೀರನಾಶವಿಲ್ಲದುದರಿಂದ, ಪರಮನಿತ್ಯಳು.

ಹೀಗೆ ವಾಯುದೇವರ ಸ್ವರೂಪ ಮತ್ತು ಪ್ರಾತಿಭಜ್ಞಾನ ಎರಡೂ ನಿತ್ಯವಾದುದರಿಂದ ಅವರು ಇತರ ದೇವತೆಗಳಿಗಿಂಗ ವಿಶಿಷ್ಟರಾದರೂ ಶರೀರಕ್ಕೆ ಉತ್ಪತ್ತಿ ಇರುವುದರಿಂದ ಲಕ್ಷ್ಮೀ–ನಾರಾಯಣರಿಗಿಂತ ಅವರರು.

ಇದೇ ವಿಷಯವನ್ನು ಬ್ರಹ್ಮಸೂತ್ರದ ಎರಡನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲೂ ಚರ್ಚಿಸಲಾಗಿದೆ. ಹಿಂದೆ ಪಂಚಭೂತಗಳಿಗೆ ಉತ್ಪತ್ತಿಯನ್ನು ಹೇಳುವಾಗ ವಾಯುದೇವನ ಉತ್ಪತ್ತಿ ಪ್ರಸ್ತುತವಾದರೆ ಇಲ್ಲಿ ಇಂದ್ರಿಯಗಳಿಗೆ ಉತ್ಪತ್ತಿಪ್ರಕರಣದಲ್ಲಿ ಈ ವಿಷಯ ಪ್ರಸ್ತುತವಾಗಿದೆ–

**ನೈಷ ಪ್ರಾಣ ಉದೇತಿ ನಾಸ್ತಮೇತಿ ಏಕಲ ಏವ**
**ಮಧ್ಯೇ ಸ್ಥಾತಾ, ಅಥೈನಮಾಹುಃ ಮಧ್ಯಮಃ ॥** (ವಾಯುಪ್ರೋಕ್ತ)

ವಾಯುದೇವನಿಗೆ ಉತ್ಪತ್ತಿ–ನಾಶ ಎರಡೂ ಇಲ್ಲ. ಅವನು ದೇಹದ ಮಧ್ಯದಲ್ಲಿರುವುದರಿಂದ 'ಮಧ್ಯಮಪ್ರಾಣ'. ಇದಲ್ಲದೆ, ವಾಯುಪ್ರೋಕ್ತ ಪ್ರಾಣದೇವ ನಿತ್ಯ ಎನ್ನಲು ಒಂದು ಯುಕ್ತಿಯನ್ನು ಹೇಳಿದೆ– 'ಪ್ರಾಣನಿದ್ದರೆ ನಮಗೆ ಉಳಿವು; ಅವನು ಅಳಿದರೆ ನಮಗೆ ನಾಶ. ಹೀಗೆ ನಮ್ಮ ಜನನ–ಮರಣಗಳನ್ನು ನಿಯಂತ್ರಿಸುವ ವಾಯುದೇವನಿಗೇ ಜನನಮರಣಗಳಿದ್ದರೆ ಹೇಗೆ?' ಹೀಗೆ ವಾಯುದೇವನಿಗೆ ಉತ್ಪತ್ತಿಯೇ ಇಲ್ಲ ಎಂಬ ಆಕ್ಷೇಪ ಬಂದಾಗ ಸೂತ್ರ ಉತ್ತರಿಸಿದೆ–

**ಓಂ ಶ್ರೇಷ್ಠಶ್ಚ ಓಮ್ ॥** (2.4.9)

ಮುಖ್ಯಪ್ರಾಣನಿಗೂ ಪರಮಾತ್ಮನಿಂದ ಉತ್ಪತ್ತಿ ಇದೆ. ಗೌಪವನ ಶ್ರುತಿ ಹೇಳುತ್ತದೆ–

'ಪ್ರಕೃತಿತಃ ಸೂಕ್ಷ್ಮಂ ಅನ್ಯತಃ ಸ್ಥೂಲಃ ಅಥೈನಮಾಹುಃ ಸಾದಿರನಾದಿರಿತಿ ।'

ವಾಯುದೇವ ಸ್ವರೂಪತಃ ಸೂಕ್ಷ್ಮನಾಗಿದ್ದು ನಮ್ಮ ಶರೀರದೊಳಗೆ ಬಂದಾಗ ಸ್ಥೂಲವಾಗುತ್ತಾನೆ. ಆದ್ದರಿಂದ ಅವನು ಸಾದಿ ಹಾಗೂ ಅನಾದಿ. ಇದರ ಮುಂದಿನ ಸೂತ್ರ ಪ್ರಾಣ ಎಂಬ ಶಬ್ದ ಕ್ರಿಯೆ, ಗಾಳಿ ಹಾಗೂ ವಾಯುದೇವ ಈ ಮೂರರಲ್ಲೂ ಪ್ರಯೋಗಿಸಲ್ಪಟ್ಟರೂ ವಾಯುದೇವ ಎಂಬ ಅರ್ಥವೇ ಆ ಶಬ್ದಕ್ಕೆ ಮುಖ್ಯವಾದುದು ಎಂದು ತಿಳಿಸುತ್ತದೆ. (ಮುಖೇ ಮುಖ್ಯಃ ಪ್ರಕೀರ್ತಿತಃ).

**ವಾಯುದೇವರು ಅಸ್ವತಂತ್ರರು:**

ಇದರ ಮುಂದಿನ ಅಧಿಕರಣ (2.4.7) ಮುಖ್ಯಪ್ರಾಣನಿಗೆ ಅಸ್ವಾತಂತ್ರ್ಯವನ್ನು ಸಾಧಿಸುತ್ತದೆ. ಮಹಾಭಾರತ ಹೀಗೆ ಹೇಳುತ್ತದೆ–

**ಯದಾಶ್ರಯಸ್ಯ ಚೇಷ್ಟಾಸಃ ಅನ್ಯಂ ಕಥಮುಪಾಶ್ರಯೇತ್ ।**
**ಯಥಾ ಪ್ರಾಣಃ ತಥಾ ರಾಜಾ ಸರ್ವಸ್ಯೈಕಾಶ್ರಯೋ ಭವೇತ್ ॥**

'ಯಾವ ವಾಯುದೇವನಿಂದಾಗಿಯೇ ಎಲ್ಲರ ಕ್ರಿಯೆಗಳೂ ನಡೆಯುವವೋ ಅಂತಹ ವಾಯುದೇವ ಇನ್ನೊಬ್ಬನ ಅಧೀನನಾಗುವುದು ಹೇಗೆ?' ಇದರಿಂದ ವಾಯುದೇವನಿಗೆ ಸ್ವಾತಂತ್ರ್ಯ ತಿಳಿಯುತ್ತದೆ. ಅದನ್ನು ಈ ಸೂತ್ರ ನಿರಾಕರಿಸುತ್ತದೆ–

**ಓಂ ಚಕ್ಷುರಾದಿವತ್ತು ತತ್ಸಹಶಿಷ್ಟಾದಿಭ್ಯಃ ಓಮ್ ॥** (2.4.11)

**ಸರ್ವಕರ್ತಾಪಿ ಸನ್ ಪ್ರಾಣಃ ಪರಮಾಧಾರತಃ ಸ್ಥಿತಃ ।**
**ಕಥಮೇವಾನ್ಯಥಾ ಸ ಸ್ಯಾತ್ ಯತೋ ನೈವೇಶ್ವರದ್ವಯಮ್ ॥**
**ಅವಾಂತರೇಶ್ವರತ್ವೇನ ತಸ್ಯೇಶ್ವರವಚೋ ಭವೇತ್ ।**
**ಅತೋ ಮಧ್ಯಮತಾಮಾಹುಃ ತಸ್ಯ ವೇದೇಷು ವೇದಿನಃ ॥**

'ಇಬ್ಬರು ಸ್ವತಂತ್ರರು ಇರಲಾಗದು. ಆದ್ದರಿಂದ ಪ್ರಾಣನೂ ಪರಮಾತ್ಮನ ಅಧೀನ. ಇತರರು ಪ್ರಾಣನ ಅಧೀನರು. ಹೀಗಾಗಿ ಪ್ರಾಣ ಜೀವರಿಗೂ ದೇವರಿಗೂ ಮಧ್ಯದ ಈಶ್ವರ. ಆದ್ದರಿಂದ ಮಧ್ಯಮ.

ಇತರ ಇಂದ್ರಿಯಗಳಿಗೂ ಪ್ರಾಣನಿಗೂ ಹೀಗೆ ವ್ಯತ್ಯಾಸ– ಕಣ್ಣು ಮೊದಲಾದವು ನಮಗೆ ಅಧೀನವಾಗಿ ಕಾರ್ಯ ಮಾಡುತ್ತವೆ; ಮುಖ್ಯಪ್ರಾಣ ಹೀಗಲ್ಲ. ಅವನಿಗೆ ಅಧೀನರಾಗಿ ನಾವಿರಬೇಕು. ಹೀಗೆ ಈ ಅಧಿಕರಣ ಮುಖ್ಯಪ್ರಾಣನೂ ಸ್ವತಂತ್ರನಲ್ಲ; ಪರಮಾತ್ಮನ ಅಧೀನನೆಂದು ಸಮರ್ಥಿಸಿದೆ.

**ವಾಯುದೇವರ ದಾಸರು:**

ಇದೇ ಅಧ್ಯಾಯದ ಎಂಟನೆಯ ಅಧಿಕರಣದಲ್ಲಿ, ಪ್ರಾಣಾಪಾನಾದಿ ಪಂಚವಾಯುಗಳು ಮುಖ್ಯಪ್ರಾಣನ ದಾಸರು. ಅಲ್ಲದೆ, ಪ್ರಾಣ, ಅಪಾನ, ವ್ಯಾನ, ದಾನ, ಸಮಾನ ಎಂದು ಮುಖ್ಯಪ್ರಾಣನಿಗೆ ಐದು ರೂಪಗಳಿವೆ. ಈ ಐದು ರೂಪಗಳಿಂದಲೇ ನಮ್ಮ

ದೇಹದಲ್ಲಿರುವ ಪ್ರಾಣಾಪನಾದಿ ಐದು ವಾಯುಗಳು ಹುಟ್ಟಿವೆ ಎಂದು ಸಮರ್ಥಿಸಲಾಗಿದೆ. ಗೌಪವನ ಶ್ರುತಿ ಇದನ್ನು ಸ್ಪಷ್ಟಪಡಿಸಿದೆ–

**ಅಥ ಪಂಚವೃತ್ತ್ಯಾ ಏತತ್ ಪ್ರವರ್ತತೇ ಪ್ರಾಣೋ ವಾವ ಪಂಚವೃತ್ತಿಃ ।**
**ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನ ಇತಿ ।**
**ತೇಭ್ಯೋ ವಾ ಏತೇಭ್ಯಃ ಪಂಚದಾಸಾಃ ಪ್ರಜಾಯಂತೇ ॥**

ಮನಸ್ತತ್ತ್ವ ಒಂದೇ ಆದರೂ, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನಾ ಎಂದು ಐದು ಪ್ರಭೇದಗಳು ಅದಕ್ಕಿದೆ. ಅದರಂತೆ ಪ್ರಾಣನಿಗೂ ಐದು ಪ್ರಭೇದಗಳಿವೆ. ಸಂಶಯಾತ್ಮಕವಾದ ಚಿತ್ತವೃತ್ತಿ ಮನಸ್ಸು, ನಿಶ್ಚಯಾತ್ಮಕವಾದುದು ಬುದ್ಧಿ. ತಾನಲ್ಲದುದನ್ನು ತಾನು ಎಂದು ತಿಳಿಯುವುದು ಅಹಂಕಾರ, ಸ್ಮರಣರೂಪವಾದ ಜ್ಞಾನಕ್ಕೆ ಕಾರಣವಾದುದು ಚಿತ್ತ. ದೇಹದೆಲ್ಲೆಡೆ ವ್ಯಾಪ್ತಿರೂಪವಾದುದು ಚೇತನಾ (ಅಭಿಮಾನ). ಇದರಂತೆ ದೇಹದ ಒಂದೊಂದು ಭಾಗದಲ್ಲಿದ್ದು ಒಂದೊಂದು ಕ್ರಿಯೆಗಳನ್ನು ನಡೆಸುವುದರಿಂದ ಒಬ್ಬನೇ ಪ್ರಾಣನಿಗೆ ಪ್ರಾಣಾಪಾನಾದಿ ಪಂಚಪ್ರಭೇದಗಳಿವೆ. ಈ ವಿಷಯವನ್ನು ಕೆಳಗಿನ ಸೂತ್ರ ನಿರೂಪಿಸುತ್ತದೆ–

**ಓಂ ಪಂಚವೃತ್ತಿಃ ಮನೋವದ್ ವ್ಯಪದಿಶ್ಯತೇ ಓಂ ॥** (2.4.13)

**ವಾಯುದೇವರು ಅಣು ಹಾಗೂ ವ್ಯಾಪ್ತರು:**

ಎಲ್ಲ ದೇವರ ಪರಿಮಾಣ ಅಣು. ಅದರಂತೆ ವಾಯುದೇವರ ಪರಿಮಾಣವೂ ಅಣುವಾಗಿರಬೇಕು. ಆದರೆ, ಕೆಲವು ಶ್ರುತಿಗಳು ವಾಯುದೇವರನ್ನು ವ್ಯಾಪ್ತರೆಂದೂ ಇನ್ನೂ ಕೆಲವು ಅವರನ್ನು ಅಣುಸ್ವರೂಪರೆಂದೂ ಹೇಳುತ್ತಿವೆ–

**ಪ್ರಾಣ ಏವ ಅಧಸ್ತಾತ್ ಪ್ರಾಣ ಏವ ಉಪರಿಷ್ಟಾತ್ ।**
**ಪ್ರಾಣೋ ಮಧ್ಯತಃ ಪ್ರಾಣಃ ಸರ್ವತಃ ಪ್ರಾಣ ಏವೇದಂ ಸರ್ವಮ್ ॥**

ಈ ಶ್ರುತಿ ವಾಯುದೇವರ ವ್ಯಾಪ್ತಿಯನ್ನು ಹೇಳುತ್ತದೆ.

**'ಅಣುನಾ ಏತದ್ ಸೃಜ್ಯತೇ ಅಣುನಾ ಏತದ್ ಧಾರ್ಯತೇ'**
**'..........ಪ್ರಾಣೋ ವಾ ಅಣುಃ'** (ಸೌತ್ರಾಯಣಶ್ರುತಿ)

ಮೇಲಿನ ಶ್ರುತಿವಾಕ್ಯ ವಾಯುದೇವ ಅಣು ಎಂದು ಹೇಳುತ್ತದೆ. ಹೀಗೆ ವೈರುಧ್ಯಗಳು ಬಂದಾಗ ಅದರ ನಿರ್ಣಯಕ್ಕಾಗಿ ಈ ಸೂತ್ರವಿದೆ–

**ಓಂ ಅಣುಶ್ಚ ಓಮ್ ॥** (2.4.14)

ಮುಖ್ಯಪ್ರಾಣ ಅಣುವೂ ಹೌದು; ವ್ಯಾಪ್ತನೂ ಹೌದು. ನಮ್ಮ ದೇಹದೊಳಗಿರುವ ಅವನ ರೂಪ ಅಣುವಾದುದು. ದೇಹದ ಹೊರಗೆ ಅವನಿಗೆ ವ್ಯಾಪ್ತವಾದ ರೂಪವೂ ಇದೆ. ಕೌಂಡಿನ್ಯ ಶ್ರುತಿ ಈ ವ್ಯವಸ್ಥೆಯನ್ನು ಹೇಳುತ್ತದೆ–

ಸ ವಾ ಏಷ ಪ್ರಾಣೋ ಅಣುಃ ಮಹಾನ್

**ನಾಮಾ ಅಂತರ್ವಾ ಅಣುಃ ಬಹಿಃ ಮಹಾನ್ ॥**

ಹೀಗೆ ವಾಯುದೇವರ ಪರಿಮಾಣವನ್ನು ಈ ಅಧಿಕರಣ ನಿರ್ಣಯಿಸಿದೆ.

## ಇಂದ್ರಿಯಗಳಿಗೂ ಪ್ರಾಣನಿಗೂ ವ್ಯತ್ಯಾಸ:

ಬ್ರಹ್ಮಸೂತ್ರದ ಇದೇ ಪಾದದ ಹನ್ನೊಂದನೆಯ ಅಧಿಕರಣ ಚಕ್ಷುರಾದಿ ಇಂದ್ರಿಯಗಳಿಗೂ ಪ್ರಾಣನಿಗೂ ವ್ಯತ್ಯಾಸವನ್ನು ಸ್ಪಷ್ಟಪಡಿಸುತ್ತದೆ. ಇಂದ್ರಿಯಗಳಿಗೂ 'ಪ್ರಾಣ' ಎಂಬ ಹೆಸರಿದೆ. ಅಂದಮಾತ್ರಕ್ಕೆ ಪ್ರಾಣಾದಿ ಪಂಚವಾಯುಗಳಂತೆ ಇಂದ್ರಿಯಗಳು ಪ್ರಾಣನ ವೃತ್ತಿವಿಶೇಷಗಳು ಎಂದು ತಿಳಿಯಬಾರದು. 'ಅನ್ಯತ್ರ ಶ್ರೇಷ್ಠಾತ್' ಎಂಬ ಸೂತ್ರಖಂಡ ಮುಖ್ಯಪ್ರಾಣನನ್ನು ಇಂದ್ರಿಯಗಳ ಗುಂಪಿನಲ್ಲಿ ಸೇರಿಸಬಾರದು ಎನ್ನುತ್ತದೆ. ಪೌತ್ರಾಯಣ ಶ್ರುತಿ ಇಂದ್ರಿಯಗಳಿಗೆ ಪ್ರಾಣನು ನಿಯಾಮಕ ಎನ್ನುತ್ತದೆ–

**ದ್ವಾದಶೈವೇಂದ್ರಿಯಾಣ್ಯಾಹುಃ ಪ್ರಾಣೋ ಮುಖ್ಯಸ್ತ್ವನಿಂದ್ರಿಯಮ್ ।**
**ದ್ರವತಾಂ ಹೀಂದ್ರಿಯಾಣಾಂ ತು ನಿಯಂತಾ ಪ್ರಾಣ ಏಕರಾಟ್ ॥**

**ಓಂ ವೈಲಕ್ಷಣ್ಯಾಚ್ಚ ಓಮ್ ॥** (2.4.20)

ಎಂಬ ಸೂತ್ರ ಇಂದ್ರಿಯಗಳಿಗೂ ಪ್ರಾಣನಿಗೂ ಒಂದು ಮುಖ್ಯವಾದ ವ್ಯತ್ಯಾಸವನ್ನು ತಿಳಿಸುತ್ತದೆ– ಇಂದ್ರಿಯಗಳು ಈಶ್ವರಾಧೀನಗಳು. ಆದರೂ ನಮ್ಮ ಪ್ರಯತ್ನದಿಂದ ಅವುಗಳು ಕ್ರಿಯಾಶೀಲವಾಗುತ್ತವೆ. ಆದರೆ ಪ್ರಾಣ ಹಾಗಲ್ಲ. ಅವನು ಈಶಾಧೀನ ಮಾತ್ರ. ನಮ್ಮ ದೇಹದಲ್ಲಿ ಅವನ ಕ್ರಿಯೆಗೆ ನಮ್ಮ ಪ್ರಯತ್ನದ ಅಗತ್ಯವಿಲ್ಲ. ಅದು ನಮ್ಮೆಲ್ಲರ ಅನುಭವಸಿದ್ಧವಾಗಿದೆ. ನಾವು ಮಲಗಿರುವಾಗ ನಿಷ್ಕ್ರಿಯರಾಗಿರುತ್ತೇವೆ. ಆಗಲೂ ಪ್ರಾಣ ತನ್ನ ಕಾರ್ಯವನ್ನು ಮಾಡುತ್ತಲೇ ಇರುತ್ತಾನೆ. ಪ್ರಶ್ನೋಪನಿಷತ್ತು ಹೀಗೆ ಹೇಳುತ್ತದೆ–

**ಪ್ರಾಣಾಗ್ನಯ ಏವ ಏತಸ್ಮಿನ್ ಪುರೇ ಜಾಗ್ರತಿ ।**

ಹೀಗೆ ಮುಖ್ಯಪ್ರಾಣ ಸರ್ವಕರ್ತಾ, ಕಾರಯಿತಾ ಎಂದು ಈ ಅಧಿಕರಣಸಾರವನ್ನು ಟೀಕಾಕೃತ್ಪಾದರು ಸೆರೆ ಹಿಡಿದಿದ್ದಾರೆ–

**'ಮುಖ್ಯಸ್ಯ ಪ್ರಾಣಸ್ಯ ಸರ್ವಕರ್ತೃ–ಕಾರಯಿತೃತ್ವೇನ ಈಶ್ವರಸಾಮ್ಯಾತ್'**

ಹೀಗೆ ದ್ವಿತೀಯಾಧ್ಯಾಯದ ಈ ಪಾದದಲ್ಲಿ ಐದು ಅಧಿಕರಣಗಳಲ್ಲಿ ಪ್ರಾಣನ ಕುರಿತ ನಿರ್ಣಯಗಳಿವೆ.

ಮುಂದೆ ಮೂರನೆಯ ಅಧ್ಯಾಯದ ಎರಡನೆಯ ಪಾದವಾದ ಭಕ್ತಿಪಾದದಲ್ಲಿ,

**ಓಂ ಸ್ಥಾನವಿಶೇಷಾತ್ ಪ್ರಕಾಶಾದಿವತ್ ಓಮ್ ॥** (3.2.35)

ಎಂಬ ಅಧಿಕರಣದ ಎರಡನೆಯ ಸೂತ್ರದ ಭಾಷ್ಯದಲ್ಲಿ ಬ್ರಹ್ಮದೇವರ ಪ್ರಸ್ತಾವವಿದೆ. ಪರಮಾತ್ಮ ಎಲ್ಲರಿಗೂ ಬಿಂಬಸ್ಥಾನೀಯನಾದರೆ ಅವನ ಪ್ರತಿಬಿಂಬರಾದ ಜೀವರು ಎಲ್ಲರೂ ಒಂದೇ ವಿಧರಾಗಿರಬೇಕು. ಬ್ರಹ್ಮದೇವ ಅಧಿಕಾನಂದರೂಪ, ಇತರರು ಅಲ್ಪಾನಂದರು ಎಂಬ ವ್ಯತ್ಯಾಸ ಏಕೆ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ನೀಡಲಾಗಿದೆ. ವೈಚಿತ್ರ್ಯವಿದ್ದಾಗಲೂ

ಪ್ರತಿಬಿಂಬ ವಿಲಕ್ಷಣವಾಗುತ್ತದೆ. ಉದಾಹರಣೆಗೆ– ಉಪಾಧಿಯ ಒಂದೇ ರೀತಿಯಾದರೂ ನೀರಿನಲ್ಲಿ, ಕನ್ನಡಿಯಲ್ಲಿ, ಸೂರ್ಯಕಾಂತಮಣಿಯಲ್ಲಿ ಅವನ ಪ್ರತಿಬಿಂಬಗಳು ಒಂದೇ ತೆರನಾಗಿರುವುದಿಲ್ಲ. ಅದರಂತೆ ಜೀವಸ್ವರೂಪದ ವೈಚಿತ್ರ್ಯದಿಂದ ಈಶ್ವರನ ಪ್ರತಿಬಿಂಬವೂ ವಿಚಿತ್ರವಾಗಿರುತ್ತದೆ. ಬ್ರಹ್ಮಾದಿ ಋಜುಗುಣಸ್ಥರ ಭಕ್ತ್ಯಾದಿಗುಣಗಳು ಅನಾದಿಕಾಲ ದಿಂದಲೂ ಇವೆ. ಹೀಗಾಗಿ ಅವರಲ್ಲಿ ಈಶ್ವರ ಪ್ರತಿಬಿಂದ ಹೆಚ್ಚು ಸ್ಫುಟವಾಗಿರುತ್ತದೆ–

ಐಶ್ವರ್ಯಾತ್ ಪರಮಾದ್ವಿಷ್ಣೋಃ ಭಕ್ತ್ಯಾದೀನಾಂ ಅನಾದಿತಃ ।
ಬ್ರಹ್ಮಾದೀನಾಂ ಸೂಪಪನ್ನಾ ಆನಂದಾದೇರ್ವಿಚಿತ್ರತಾ ॥ (ಪಾದ್ಮ)

**ವಾಯುಜೀವೋತ್ತಮತ್ವ:**

ಬ್ರಹ್ಮಸೂತ್ರಭಾಷ್ಯದ ಕೊನೆಯಲ್ಲಿ ತಾನು ವಾಯುದೇವರ ಅವತಾರನೆಂದು ಮುಕ್ತವಾಗಿ ಹೇಳಿಕೊಂಡಿರುವ ಆಚಾರ್ಯರು ಉಪಾಸನಾ ಪಾದದಲ್ಲಿ (3.3) ವಾಯುಜೀವೋತ್ತಮತ್ವವನ್ನು ಮೂರು ಸೂತ್ರಗಳ ಒಂದು ಅಧಿಕರಣದಲ್ಲಿ ಸಾಧಿಸಿದ್ದಾರೆ. ಬ್ರಹ್ಮಜ್ಞಾನಸಾಧನೆಯಲ್ಲಿ ತೊಡಗಿರುವ ಸಾಧಕರಲ್ಲಿ ಯಾರು ಉತ್ತಮರು ಎಂಬ ಜಿಜ್ಞಾಸೆಗೆ ಉತ್ತರವಾಗಿ ಸೂತ್ರಕಾರರು–

ಓಂ ಇಯದಾಮನನಾತ್ ಓಮ್ ॥

ಎಂದು ನಿರ್ಧಾರವನ್ನು ನೀಡಿದ್ದಾರೆ. ಕೌಂಠರವ್ಯಶ್ರುತಿ, ಸಾಧಕರಲ್ಲಿ ವಾಯುದೇವರೇ ಕೊನೆಯ ಗಡು ಎಂದು ಹೇಳಿದೆ–

'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್ ।'
ನ ಹಿ ಪ್ರಾಣಾದ್ ಭೂಯಾನ್ ।
ಪ್ರಾಣೋ ಹ್ಯೇವ ಭೂಯಾನ್, ತಸ್ಮಾದ್ ಭೂಯಾನ್ನಾಮಾ ॥'

ಅವನು ಸಾಧಕರಲ್ಲಷ್ಟೇ ಉತ್ತಮ. ಇದರಿಂದ ಅವನು ಸರ್ವೋತ್ತಮ ಎಂದು ತಿಳಿಯಬಾರದು.

ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಮ್ ॥ (3.3.38)

ಛಾಂದೋಗ್ಯದಲ್ಲಿ–

'ಸ ವಾ ಏಷ ಏವಂ ಪಶ್ಯನ್ ಏವಂ ಮನ್ವಾನಃ
ಏವಂ ವಿಜಾನನ್ ಅತಿವಾದೀ ಭವತಿ ॥'

ಎಂದು, ಪ್ರಾಣನನ್ನು ತಿಳಿದವರನ್ನು, ಅವನ ಕುರಿತು ಹೇಳುವವನನ್ನು 'ಅತಿವಾದೀ' ಎಂದು ಪ್ರಶಂಸೆ ಮಾಡಿ ಅಲ್ಲಿಗೇ ನಿಲ್ಲಿಸದೆ,

ಏಷ ತು ವಾವ ಅತಿವದತಿ ಯಃ ಸತ್ಯೇನ ಅತಿವದತಿ'

ಎಂದು, ಸತ್ಯನಾಮಕ ಪರಮಾತ್ಮನನ್ನು ಕುರಿತು ಹೇಳುವವನು ಅವನಿಗಿಂತಲೂ ಮಿಗಿಲು ('ತು') ಎನ್ನಲಾಗಿದೆ. ಇದರಿಂದ ಪ್ರಾಣ ಸರ್ವೋತ್ತಮನಲ್ಲ, ಜೀವೋತ್ತಮ ಎಂದು ತಿಳಿಯುತ್ತದೆ. ಬೃಹತ್ತಂತ್ರ ಇನ್ನೂ ಸ್ಪುಟವಾಗಿ ಹೇಳುತ್ತದೆ–

**ಉತ್ತಮಂ ಹಿ ದೇವಾನಾಂ ಮುಕ್ತಾವಪಿ ಹಿ ಮಾನವಾತ್ ।**
**ತೇಭ್ಯಃ ಪ್ರಾಣಸ್ಯ ತಸ್ಮಾಚ್ಚ ನಿತ್ಯಮುಕ್ತಶ್ಚ ವೈ ಹರಿಃ ॥**

ಹೀಗೆ ವಾಯುದೇವರು ಮೋಕ್ಷದಲ್ಲೂ ಜೀವೋತ್ತಮರಾಗಿಯೇ ಉಳಿಯುತ್ತಾರೆ.

**ವಾಯುದೇವ ಬ್ರಹ್ಮಪ್ರಾಪಕ:**

ನಾಲ್ಕನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ವಾಯುದೇವರನೇ ಮುಕ್ತಿ ಯೋಗ್ಯರನ್ನು ವಿಷ್ಣುವಿನ ಬಳಿ ಕರೆದೊಯ್ಯುತ್ತಾನೆ ಎಂದು ಸಾಧಿಸಲಾಗಿದೆ. ಛಾಂದೋಗ್ಯೋಪನಿಷತ್ತಿನಲ್ಲಿ 'ಸ ಏನಾನ್ ಬ್ರಹ್ಮ ಗಮಯತಿ' ಎಂದು ವಾಯುದೇವ ಬ್ರಹ್ಮನ ಬಳಿಗೆ ಸಾಧಕರನ್ನು ಒಯ್ಯುತ್ತಾನೆ ಎನ್ನಲಾಗಿದೆ. ಇಲ್ಲಿ ಬ್ರಹ್ಮನೆಂದರೆ ಯಾರು?

**ಓಂ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇ ಓಮ್ ॥**

ಬಾದರಿ ಆಚಾರ್ಯರು ಈ ಬ್ರಹ್ಮ ಚತುರ್ಮುಖ ಬ್ರಹ್ಮ ಎನ್ನುತ್ತಾರೆ.

**ತಥಾಪಿ ಪ್ರಕೃತೇರ್ಬಂಧಃ ಬ್ರಹ್ಮಣಾ ಸಹ ಭಿದ್ಯತೇ ॥**

ಎಂದು ಲಿಂಗದೇಹಭಂಗ ಚತುರ್ಮುಖನೊಂದಿಗೇ ಆಗಬೇಕಾದುದರಿಂದ ವಾಯುದೇವರು ಚತುರ್ಮುಖನ ಬಳಿಗೆ ಸಾಧಕರನ್ನು ಒಯ್ಯುತ್ತಾರೆ. ಚತುರ್ಮುಖ ಬ್ರಹ್ಮ ಪ್ರಳಯ ಮುಗಿದು ಸೃಷ್ಟಿಯ ಆರಂಭದಲ್ಲಿ ವಿಷ್ಣುವಿನ ಬಳಿ ಒಯ್ಯುತ್ತಾನೆ.

ಜೈಮಿನಿ ಮುನಿಗಳು 'ವಾಯುದೇವರು ಚತುರ್ಮುಖನೆಡೆಗಲ್ಲ, ನೇರವಾಗಿ ಪರಬ್ರಹ್ಮನ ಬಳಿಗೇ ಸಾಧಕರನ್ನು ಕರೆದೊಯ್ಯುತ್ತಾರೆ' ಎನ್ನುತ್ತಾರೆ. ದೇಹದಲ್ಲಿ ಬ್ರಹ್ಮದರ್ಶನ ಪಡೆದ (ಪ್ರತೀಕಾಲಂಬನರು) ಜ್ಞಾನಿಗಳನ್ನು ನೇರವಾಗಿ ಪರಮಾತ್ಮನ ಬಳಿಗೂ ವ್ಯಾಪ್ತ್ಯೋಪಾಸಕರನ್ನು (ಅಪ್ರತೀಕಾಲಂಬನರು) ಚತುರ್ಮುಖನ ಬಳಿಗೂ ವಾಯುದೇವರು ಒಯ್ಯುತ್ತಾರೆ ಎಂದು ಬಾದರಾಯಣರು ಎರಡೂ ಮತಗಳನ್ನೂ ಸಮನ್ವಯಗೊಳಿಸಿದ್ದಾರೆ.

ಹೀಗೆ ಬ್ರಹ್ಮಸೂತ್ರಗಳಲ್ಲಿ ವಾಯುದೇವರ ಕುರಿತು ಅನೇಕ ಸೂತ್ರಗಳು ಬಂದಿವೆ. ಅವುಗಳಲ್ಲಿ ವಾಯುದೇವರ ಜೀವೋತ್ತಮತ್ವದ ಬಗ್ಗೆ ಹಾಗೂ ಪರಮಾತ್ಮಾಧೀನತ್ವದ ಬಗ್ಗೆ ಪ್ರಮಾಣಗಳ ಆಧಾರಗಳನ್ನು ನೀಡಿ ಅವರ ವ್ಯಕ್ತಿತ್ವವನ್ನು ಸಮರ್ಥಿಸಲಾಗಿದೆ.

---

* ವಿದ್ವಾನ್ ಹರಿದಾಸ ಭಟ್ಟರ ಈ ಲೇಖನ 'ತತ್ತ್ವವಾದ' ಮಾಸಪತ್ರಿಕೆಯ ಮೂರು ನಾಲ್ಕು ಸಂಚಿಕೆಗಳಲ್ಲಿ ಪ್ರಕಟಗೊಂಡಿದ್ದು ಅದನ್ನು ಇಲ್ಲಿ ಕೃತಜ್ಞತಾಪೂರ್ವಕವಾಗಿ ಬಳಸಿಕೊಳ್ಳಲಾಗಿದೆ.

# ಬ್ರಹ್ಮಸೂತ್ರದಲ್ಲಿ ವಾಯುದೇವನ ಇನ್ನಷ್ಟು ಪ್ರಸ್ತಾವ

ಶ್ರೀ ಹರಿದಾಸ ಭಟ್ಟರು ಬ್ರಹ್ಮಸೂತ್ರದ ೧೨ ಅಧಿಕರಣಗಳು ವಾಯುತತ್ತ್ವದ ಬಗ್ಗೆ ಹೊರಟಿವೆ ಎಂದಿರುವರು. ಇವುಗಳಲ್ಲೂ ವಾಯುದೇವನಿಗೆ ನೇರವಾಗಿ ಸಂಬಂಧಿಸದೆ, ಚತುರ್ಮುಖಾದಿಗಳ ಆನಂದಾದಿ ವೈಚಿತ್ರ್ಯವನ್ನು ಸಮರ್ಥಿಸುವ ಒಂದು ಅಧಿಕರಣವನ್ನೂ [೩-೨-೩೫] ಸೇರಿಸಿಕೊಳ್ಳಲಾಗಿದೆ.

ಈ ಹನ್ನೊಂದು ಅಧಿಕರಣಗಳಲ್ಲದೆ, ಇನ್ನೂ ಆರು ಬ್ರಹ್ಮಸೂತ್ರಗಳಲ್ಲಿ ಪೂರ್ವಪಕ್ಷವಾಗಿ, ಮತ್ತೆ ಐದು ಸೂತ್ರಗಳಲ್ಲಿ ಸಿದ್ಧಾಂತವಾಗಿ ಮುಖ್ಯಪ್ರಾಣನ ಪ್ರಸ್ತಾವ ಬಂದಿದೆ.

**ಪೂರ್ವಪಕ್ಷವಾಗಿ ಪ್ರಸ್ತಾವ:**

- **'ಅತ ಏವ ಪ್ರಾಣಃ'** [೧-೧-೨೩] ಎಂಬ ಬ್ರಹ್ಮಸೂತ್ರದಲ್ಲಿ **'ತದ್ವೈ ತ್ವಂ ಪ್ರಾಣ....'** ಎಂಬ ತೈತ್ತಿರೀಯ ಆರಣ್ಯಕದ ಮಾತಿನಲ್ಲಿ ಪ್ರಾಣಶಬ್ದದಿಂದ ಮುಖ್ಯಪ್ರಾಣನನ್ನೇ ಇಟ್ಟುಕೊಳ್ಳಲಾಗಿದೆ ಎಂದು ಪೂರ್ವಪಕ್ಷ ಮಾಡಿ ಮತ್ತೆ ಅಲ್ಲಿಯ ಪ್ರಾಣ ವಿಷ್ಣುವೇ ಎಂದು ಸಿದ್ಧಾಂತಿಸಿರುವುದು.
- **'ತಾ ವಾ ಏತಾಃ.... ವಾಕ್ ಪ್ರಾಣಃ'** -ಎಂಬ ಐತರೇಯೋಪನಿಷತ್ತಿನಲ್ಲಿ ಬಂದ 'ಪ್ರಾಣ' -ಮುಖ್ಯಪ್ರಾಣನೇ ಎಂದು **'ಜೀವಮುಖ್ಯಪ್ರಾಣಲಿಂಗಾನ್ನೇತಿಚೇನ್ನ....'** [೧-೧-೩೧] ಎಂಬ ಬ್ರಹ್ಮಸೂತ್ರದಲ್ಲಿ ಪೂರ್ವಪಕ್ಷ ಮಾಡಿ ಬಳಿಕ ಶ್ರೀವಿಷ್ಣುವೇ ಪ್ರಾಣನೆಂದು ಸಿದ್ಧಾಂತಿಸಲಾಗಿದೆ.
- **'ಯಸ್ಮಿನ್ ದ್ಯೌಃ ಪೃಥಿವೀ....'** ಇತ್ಯಾದಿ ಮುಂಡಕೋಪನಿಷತ್ತಿನ ಮಾತಿನಲ್ಲಿ ದ್ಯುಲೋಕಾದಿಗಳಿಗೆ ಆಶ್ರಯನಾಗಿ ಹೇಳಲ್ಪಟ್ಟವನು ಮುಖ್ಯವಾಯು ಎಂದು ಪ್ರಸ್ತಾವಿಸಿ 'ಪ್ರಾಣಭೃಚ್ಚ' ಎಂಬ ಬ್ರಹ್ಮಸೂತ್ರದಲ್ಲಿ [೧-೩-೪] ನಿರಾಕರಿಸಲಾಗಿದೆ.
- **'ಯೋ ವೈ ಭೂಮಾ ತತ್ಸುಖಮ್....'** -ಎಂಬ ಛಾಂದೋಗ್ಯೋಪನಿಷತ್ತಿನ ಮಾತಿನಲ್ಲಿ ಹೇಳಲ್ಪಟ್ಟ 'ಭೂಮಾ' ಮುಖ್ಯವಾಯು ಎಂದು ಪೂರ್ವಪಕ್ಷ ಮಾಡಿ 'ಭೂಮಾ ಸಂಪ್ರಸಾದಾದಧ್ಯುಪದೇಶಾತ್' [೧-೩-೮] ಎಂಬ ಬ್ರಹ್ಮಸೂತ್ರದಲ್ಲಿ ಶ್ರೀಹರಿಯೇ 'ಭೂಮಾ' ಎಂದು ಸಿದ್ಧಾಂತಿಸಲಾಗಿದೆ.
- **'ಊರ್ಧ್ವಂ ಪ್ರಾಣಮುನ್ನಯತಿ....'** ಇತ್ಯಾದಿ ಕಾಠಕೋಪನಿಷತ್ತಿನಲ್ಲಿ ಸರ್ವದೇವೋಪಾಸ್ಯನಾಗಿ ಪ್ರತಿಪಾದ್ಯನಾದವನು ಮುಖ್ಯಪ್ರಾಣ ಎಂದು ಪೂರ್ವಪಕ್ಷ ಮಾಡಿ **'ಶಬ್ದಾದೇವ ಪ್ರಮಿತಃ'** [೧-೩-೨೪] ಎಂಬ ಬ್ರಹ್ಮಸೂತ್ರದಿಂದ ಅಲ್ಲಿಯ ವಾಮನ ಶಬ್ದದಿಂದಾಗಿ ಸರ್ವದೇವೋಪಾಸ್ಯ ವಿಷ್ಣುವೇ ಎಂದು ಸಿದ್ಧಾಂತಿಸಲಾಗಿದೆ.
- 'ಸರ್ವರೂ ತದಧೀನ'ವಾಗಿವೆ ಎಂಬ ಲಿಂಗವು ಮುಖ್ಯಪ್ರಾಣನಲ್ಲೂ ಇದೆ ಎಂಬ ಪೂರ್ವಪಕ್ಷವನ್ನು ಮಾಡಿ, ಆ ಲಿಂಗ ಮುಖ್ಯಪ್ರಾಣಾಂತರ್ಯಾಮಿ ಭಗವಂತನಿಗೆ

ಸಂಬಂಧಿಸಿದ್ದೆಂದು ಸಿದ್ಧಾಂತಿಸಲಾಗಿದೆ– 'ಜೀವಮುಖ್ಯಪ್ರಾಣಲಿಂಗಾದಿತಿ ಚೇನ್ನ ವ್ಯಾಖ್ಯಾತಮ್' [೧–೪–೧೮]

ಹೀಗೆ ಆರು ಬ್ರಹ್ಮಸೂತ್ರಗಳಲ್ಲಿ ಪೂರ್ವಪಕ್ಷವಾಗಿ ವಾಯುದೇವನ ಪ್ರಸ್ತಾವ ಬಂದಿದೆ. ಪೂರ್ವಪಕ್ಷವಾಗಿ ಪ್ರಸ್ತಾವ ಬಂದಿದೆ ಎಂದರೂ ವೈದಿಕ ವಾಙ್ಮಯದಲ್ಲಿ ಅವನ ವ್ಯಾಪಕತೆ ತಿಳಿಯುವುದು. ಅಲ್ಲದೆ, ಆ ಆರು ಬ್ರಹ್ಮಸೂತ್ರಗಳ ಪೂರ್ವಪಕ್ಷ ವಾಯುದೇವನನ್ನು ವಿಷಯೀಕರಿಸಿದೆ ಎಂದರೆ ಅದಕ್ಕೆ ಬೇಕಾಗುವ ಗುಣಧರ್ಮಗಳನ್ನು ಆ ಬ್ರಹ್ಮಸೂತ್ರಗಳು ವಾಯುದೇವನಲ್ಲಿ ಒಪ್ಪಿಕೊಂಡಿವೆ ಎಂದರ್ಥ. ಉದಾಹರಣೆಗೆ 'ಶಬ್ದಾದೇವ ಪ್ರಮಿತಃ' –ಎಂಬ ಬ್ರಹ್ಮಸೂತ್ರದಲ್ಲಿ ಮುಖ್ಯವಾಗಿ ಸರ್ವದೇವೋಪಾಸ್ಯತ್ವ ವನ್ನು ವಿಷ್ಣುವಿನಲ್ಲಿ ಸಿದ್ಧಾಂತಿಸಲಾಗುವುದಾದರೂ, ಆ ಸೂತ್ರದ ಪೂರ್ವಪಕ್ಷದಲ್ಲಿ ಪ್ರಸ್ತುತನಾದ ವಾಯುದೇವನಲ್ಲೂ ಅಮುಖ್ಯವಾಗಿಯಾದರೂ ಸರ್ವ ದೇವೋಪಾಸ್ಯತ್ವವನ್ನು ಸೂಚಿಸಲಾಗುವುದು.

## ರುದ್ರನಿಗೆ ಪ್ರಾಣನಲ್ಲಿ ಲಯ:

ಹೀಗೆ ಸೂತ್ರಗಳ ಪೂರ್ವಪಕ್ಷಗಳಲ್ಲಷ್ಟೇ ಅಲ್ಲದೆ, ಮತ್ತೆ ಕೆಲವು ಸೂತ್ರಗಳ ಸಿದ್ಧಾಂತದಲ್ಲೂ ವಾಯುದೇವನ ಪ್ರಸ್ತಾವ ಬಂದಿದೆ.

- ದೇವತೆಗಳು ತಮಗಿಂತ ಉತ್ತಮರಾದವರಲ್ಲಿ ಲಯ ಹೊಂದುವರೆಂದು ತಿಳಿಸುತ್ತ 'ವಾಙ್ ಮನಸಿ ಸಂಪದ್ಯತೇ'– ವಾಗಭಿಮಾನಿನಿ ಪಾರ್ವತಿ ಮನೋಭಿಮಾನಿ ರುದ್ರನಲ್ಲಿ ಲಯ ಹೊಂದುವಳೆಂದು ತಿಳಿಸಿದ ಛಾಂದೋಗ್ಯೋಪನಿಷತ್ತಿನ 'ಮನಃ ಪ್ರಾಣೇ'– ಎಂಬ ಮುಂದಿನ ಮಾತಿನಲ್ಲಿ ಮನೋಭಿಮಾನಿ ರುದ್ರ ಮುಖ್ಯಪ್ರಾಣನಲ್ಲಿ ಲಯ ಹೊಂದುವ ನೆಂದು ನಿರೂಪಿಸಲಾಗಿದೆ ಎಂದು 'ತನ್ಮನಃ ಪ್ರಾಣ ಉತ್ತರಾತ್' [೪–೨–೩] ಎಂಬ ಬ್ರಹ್ಮಸೂತ್ರ ಸಿದ್ಧಾಂತಿಸಿದೆ.

## ಮುಖ್ಯಪ್ರಾಣನಿಗೆ ಪರಮಾತ್ಮನಲ್ಲಿ ಲಯ

'ಸರ್ವೇ ಪ್ರಾಣಮುಪಗಚ್ಛಂತಿ ಪ್ರಾಣಃ ಪರಮುಪಗಚ್ಛತಿ.....' ಮುಂತಾದ ಶ್ರುತಿಯಲ್ಲಿ ರುದ್ರಾದಿಗಳು ಪ್ರಾಣನಲ್ಲಿ ಲಯ ಹೊಂದಿದರೆ, ಮುಖ್ಯಪ್ರಾಣ ಹಿರಣ್ಯಗರ್ಭನಾಗಿ ಪರಮಾತ್ಮನಲ್ಲಿ ಲಯ ಹೊಂದುವನೆಂದು ಹೇಳಿರುವುದರಿಂದ ಮುಖ್ಯಪ್ರಾಣ ಪರಮಾತ್ಮನಲ್ಲಿ ಲಯ ಹೊಂದುವನೆಂದು ಸಿದ್ಧಾಂತಿಸಲಾಗುವುದು– 'ಸೋಽಧ್ಯಕ್ಷೇ ತದುಪಗಮಾದಿಭ್ಯಃ'. [೪–೨–೪]

## ಪ್ರಾಣದ್ವಾರಾ ಇತರ ದೇವತೆಗಳಿಗೆ ಪರಮಾತ್ಮನಲ್ಲಿ ಲಯ

'ಪ್ರತಿಬಿಂಬೋ ಹರೇಃ ಪ್ರಾಣಃ ಪ್ರಾಣಸ್ಯಾನ್ಯಾಃ ಕಲಾಃ ಕ್ರಮಾತ್'– ಎಂಬ ಪ್ರಮಾಣ ಸಾರುವಂತೆ ಶ್ರೀಹರಿಯ ಪ್ರತಿಬಿಂಬ ಮುಖ್ಯಪ್ರಾಣನಾದುದರಿಂದ ಬಿಂಬದಲ್ಲಿ ಪ್ರತಿಬಿಂಬದ ಲಯದ ನಿಯಮವಿರುವುದರಿಂದ ಮುಖ್ಯಪ್ರಾಣ ಮಾತ್ರ ಶ್ರೀಹರಿಯಲ್ಲಿ ಲಯ ಹೊಂದುವನು; ಇತರ ದೇವತೆಗಳಿಗೆ ಇಲ್ಲ –ಎಂಬ ಸಂದೇಹ ಬಂದಾಗ 'ಸರ್ವೇ ದೇವಾಃ

**ಪ್ರಾಣಮಾವಿಶ್ಯ ದೇವೇ ಮುಕ್ತಾ ಲಯಂ ಪರಮೇ ಯಾಂತ್ಯಚಿಂತ್ಯೇ'**– ಎಂಬ ಕೌಷಾರವ ಶ್ರುತಿ ಸಾರುತ್ತಿರುವಂತೆ ಪ್ರಾಣದೇವನ ಮುಖಾಂತರ ಇತರ ದೇವತೆಗಳೂ ಪರಮಾತ್ಮನಲ್ಲಿ ಲಯ ಹೊಂದುವರೆಂದು ಸಿದ್ಧಾಂತಿಸಲಾಗಿದೆ– **'ತಾನಿ ಪರೇ ತಥಾ ಹ್ಯಾಹ'** [೪–೨–೧೫] ಎಲ್ಲ ಜೀವರೂ ಸಾಮಾನ್ಯವಾಗಿ ಪರಮಾತ್ಮನ ಪ್ರತಿಬಿಂಬರೇ ಆಗಿರುವುದರಿಂದ ತಮ್ಮ ಬಿಂಬನಾದ ಪರಮಾತ್ಮನಲ್ಲಿ ದೇವತೆಗಳ ಲಯ ಕೂಡದಿರದು.

## ಬ್ರಹ್ಮಪ್ರಾಪ್ತಿ ಮಾರ್ಗದಲ್ಲಿ ಅಂತಿಮ ಪ್ರಾಪ್ಯ ಮುಖ್ಯಪ್ರಾಣ

ಬ್ರಹ್ಮಪ್ರಾಪ್ತಿಗೆ ಪ್ರಯೋಜಕನಾದ ಅರ್ಚಿರಾದಿ ಮಾರ್ಗದಲ್ಲಿ ಎರಡನೆಯ ಪ್ರಾಪ್ಯನಾದ 'ವಾಯು' ಎಂದರೆ ಆತಿವಾಹಿಕವಾಯುವೇ ಹೊರತು ಮುಖ್ಯವಾಯು ಅಲ್ಲ. ಆ ಮಾರ್ಗದಲ್ಲಿ ಅಮುಖ್ಯರಾದವರಿಗಷ್ಟೇ ಮೊದಮೊದಲು ಪ್ರಾಪ್ಯತ್ವ ಇರುವುದರಿಂದ ಮೊದಲು ಅಂದರೆ ಎರಡನೆಯ ಪ್ರಾಪ್ಯನಾಗಿ **'ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ.....'**– ಎಂದು ನಿರೂಪಿತನಾಗಿರುವುದರಿಂದ ಆತಿವಾಹಿಕನೇ ಆ ವಾಯು ಎಂದು ಸಿದ್ಧಾಂತಿಸಲಾಗಿದೆ– **'ಆತಿವಾಹಿಕಸ್ತಲ್ಲಿಂಗಾತ್'** [೪–೩–೪]

ಬೃಹದಾರಣ್ಯಕೋಪನಿಷತ್ತಿನಲ್ಲಿ **'ಸ ವಾಯುಮಾಗಚ್ಛತಿ'**– ಎಂದು ಅರ್ಚಿರಾದಿ ಮಾರ್ಗದಲ್ಲಿ ಎರಡನೆಯ ಪ್ರಾಪ್ಯನಾಗಿಯೂ ವಾಯುವನ್ನು ಹೆಸರಿಸಲಾಗುವುದು; **'ದ್ಯೌರ್ವಾವ ವಿದ್ಯುತ್ ತತ್ಪತಿಂ ವಾಯುಮುಪಗಮ್ಯ ತೇನೈವ ಬ್ರಹ್ಮ ಗಚ್ಛತಿ'**– ಎಂದು ಆ ಮಾರ್ಗದಲ್ಲಿ ಕೊನೆಗೆ ಪ್ರಾಪ್ಯನಾಗಿಯೂ ವಾಯುದೇವ ಹೆಸರಿಸಲ್ಪಡುವನು. ಹೀಗಿರುವಾಗ ಮುಖ್ಯವಾಯುವನ್ನು ಎರಡನೇ ಪ್ರಾಪ್ಯನನ್ನಾಗಿ ಇಟ್ಟುಕೊಳ್ಳಬೇಕೋ ಕೊನೆಯ ಪ್ರಾಪ್ಯನನ್ನಾಗಿ ಇಟ್ಟುಕೊಳ್ಳಬೇಕೋ– ಎಂಬ ವ್ಯಾಮೋಹ–ಗೊಂದಲ ಉಂಟಾದರೆ ಕೊನೆಗೆ ಪ್ರಾಪ್ಯನಾಗಿ ಹೇಳಲ್ಪಟ್ಟಿರುವ ವಾಯುವಿಗೆ ವಿದ್ಯುತ್ಪತಿ ಎಂಬ ವಿಶೇಷಣ ಕೊಟ್ಟಿರುವುದರಿಂದ ಎರಡನೇ ಪ್ರಾಪ್ಯನಾಗಿ ಹೇಳಲ್ಪಟ್ಟವ ಆತಿವಾಹಿಕನೇ ಎಂದು ಸಿದ್ಧಿಸಿ, ಕೊನೆಗೆ ಪ್ರಾಪ್ಯನಾಗಿ ಹೇಳಲ್ಪಟ್ಟವ ಮುಖ್ಯವಾಯುವೇ ಎಂದು ಸಿದ್ಧವಾಗುವುದೆಂದು ಬ್ರಹ್ಮಸೂತ್ರದಲ್ಲಿ ಸಮರ್ಥಿಸಲಾಗಿದೆ–

**'ಉಭಯವ್ಯಾಮೋಹಾತ್ ತತ್ಸಿದ್ಧೇಃ'** [೪-೩-೫]

ವಿದ್ಯುತ್ಪತಿ ವಾಯುದೇವನೇ ಪರಬ್ರಹ್ಮನೆಡೆಗೆ ಒಯ್ಯುವವನೆಂದು **'ಸ ಏನಾನ್ ಬ್ರಹ್ಮ ಗಮಯತಿ'**– ಎಂದು ಛಾಂದೋಗ್ಯೋಪನಿಷತ್ತು ಸಾರುತ್ತಿರುವುದರಿಂದ ವಾಯುದೇವನೇ ಅರ್ಚಿರಾದಿ ಮಾರ್ಗದಲ್ಲಿ ಕಟ್ಟಕಡೆಗೆ ಪ್ರಾಪ್ಯನಾಗಿರುವವನೆಂದು **'ವೈದ್ಯುತೇನೈವ ತತಸ್ತಚ್ಛ್ರುತೇಃ'** [೪–೩–೬] ಎಂಬ ಬ್ರಹ್ಮಸೂತ್ರದಲ್ಲಿ ಸಿದ್ಧಾಂತಿಸಲಾಗಿದೆ.

ಹೀಗೆ ಬ್ರಹ್ಮಪ್ರಾಪ್ತಿಮಾರ್ಗವಾದ ಅರ್ಚಿರಾದಿ ಮಾರ್ಗದಲ್ಲಿ ಅಂತಿಮವಾಗಿ ಪ್ರಾಪ್ಯನಾಗಿರುವವನು ವಾಯುದೇವ –ಆದುದರಿಂದಲೇ ಅವನು ಉಳಿದೆಲ್ಲ ದೇವತೆಗಳಿಗಿಂತ ಉತ್ತಮ ಎಂಬುದನ್ನು ಸಮರ್ಥಿಸಲು ಆತಿವಾಹಿಕಾಧಿಕರಣ ಹಾಗೂ ವೈದ್ಯುತಾಧಿಕರಣ –ಎಂಬುದಾಗಿ ಎರಡು ಅಧಿಕರಣಗಳನ್ನೇ, ಮೂರು ಸೂತ್ರಗಳನ್ನೇ ಮೀಸಲಿಡುವಷ್ಟು ಅದಕ್ಕೆ ಪ್ರಾಶಸ್ತ್ಯವನ್ನು ನೀಡಲಾಗಿದೆ.

## ಮುಕ್ತರಿಗೂ ವಾಯುದೇವ ಪತಿ

**'ಅತ ಏವ ಚಾನನ್ಯಾಧಿಪತಿಃ'** [೪-೪-೯] ಎಂಬ ಬ್ರಹ್ಮಸೂತ್ರದಲ್ಲಿ ಮುಕ್ತರಿಗೆ ತಮಗಿಂತ ನಿಕೃಷ್ಟರಾದವರು ಅಧಿಪತಿಗಳಾಗಿರುವುದಿಲ್ಲ ಎಂದು ಸಿದ್ಧಾಂತಿಸುವ ಮೂಲಕ ತಮಗಿಂತ ಉತ್ತಮರಾದವರು ಅಧಿಪತಿಗಳಾಗಿ ಇದ್ದೇ ಇರುವರೆಂದು ಸೂಚಿಸಲ್ಪಟ್ಟಿದ್ದು, ಅಂತಹ ಉತ್ತಮರಲ್ಲಿ ಪರಮಾತ್ಮನ ಬಳಿಕ ವಾಯುದೇವನನ್ನೂ ಇಟ್ಟುಕೊಳ್ಳಲಾಗಿದೆ- **'ತತಃ ಪ್ರಾಣಾದಿನಾಮಂತಾಃ ಸರ್ವೇಽಪಿ ಪತಯಃ ಕ್ರಮಾತ್'** [ವಾರಾಹ -ಬ್ರ.ಸೂ.ಭಾ.]

ಆದ್ದರಿಂದ ಮುಖ್ಯಪ್ರಾಣ ಮುಕ್ತಾತ್ಮರಿಗೂ ಅಧಿಪತಿಯಾಗಿ ಇರುವನೆಂದು ಸಿದ್ಧಿಸುವುದು.

## ಜೀವನ ಅಸ್ವಾತಂತ್ರ್ಯಕ್ಕೆ ದೃಷ್ಟಾಂತ

ಜೀವಾತ್ಮರಿಂದ ಕಾರ್ಯಗಳ ಕೊನೆಗಾಣಿಸುವಿಕೆ ಮಾಡಲ್ಪಟ್ಟದ್ದು ಅನುಭವಸಿದ್ಧ ವಾಗಿರುವುದರಿಂದ ಅವರಿಗೆ ಸ್ವತಂತ್ರ ಕರ್ತೃತ್ವ ಸಿದ್ಧಿಸುವುದೆಂಬ ಆಶಂಕೆಯ ಹಿನ್ನೆಲೆಯಲ್ಲಿ ಹಸುಗಳ ಮೂಲಕ ಕ್ಷೀರ ಕಂಡರೂ ಅದು ಹೇಗೆ ಮುಖ್ಯಪ್ರಾಣನಿಂದಲೇ ಉಂಟಾಗು ವುದೋ ಹಾಗೆ ಕಾರ್ಯಗಳ ಉಪಸಂಹಾರ ಜೀವರಲ್ಲಿ ಕಂಡರೂ ಅಂತಹ ಉಪ ಸಂಹಾರದ ಬಗ್ಗೆ ಅವರಿಗೆ ಸ್ವಾತಂತ್ರ್ಯ ಇಲ್ಲದಿರುವುದರಿಂದ ಅವರಿಗೆ ಸ್ವತಂತ್ರ ಕರ್ತೃತ್ವ ಸಿದ್ಧಿಸದು- **'ಉಪಸಂಹಾರದರ್ಶನಾನ್ನೇತಿ ಚೇತಿ ಕ್ಷೀರವದ್ಧಿ'** [೨-೧-೨೫] ಎಂದು ಬ್ರಹ್ಮ ಸೂತ್ರದಲ್ಲಿ ಸಿದ್ಧಾಂತಿಸುವಾಗ ಹಸು ತಿಂದ ಹುಲ್ಲನ್ನು ಕ್ಷೀರವನ್ನಾಗಿ ಪರಿಣಮಿಸುವಂತೆ ಮಾಡುವ ಮುಖ್ಯಪ್ರಾಣನಿಂದ ಪರಿಣಾಮಗೊಳ್ಳುವ ಕ್ಷೀರವನ್ನು ದೃಷ್ಟಾಂತವಾಗಿ ನೀಡುತ್ತ ದೃಷ್ಟಾಂತ ಘಟಕವಾಗಿ ಮುಖ್ಯಪ್ರಾಣನನ್ನು ಪ್ರಸ್ತಾವಿಸಲಾಗಿದೆ.

ಹೀಗೆ ಆರು ಸೂತ್ರಗಳಲ್ಲಿ ಪೂರ್ವಪಕ್ಷವಾಗಿ ವಾಯುದೇವನ ಪ್ರಸ್ತಾವ ಬಂದಿದ್ದರೆ, ಐದು ಸೂತ್ರಗಳ ಸಿದ್ಧಾಂತಗಳಲ್ಲಿ ವಾಯುದೇವನ ಪ್ರಸ್ತಾವ ಬಂದಿದೆ. ಒಂದು ಸೂತ್ರದಲ್ಲಿ ದೃಷ್ಟಾಂತಘಟಕವಾಗಿ ಪ್ರಸ್ತಾವ ಬಂದಿದೆ.

## ಉಪಕ್ರಮ-ಉಪಸಂಹಾರಗಳಲ್ಲಿ

ಇಷ್ಟು ವ್ಯಾಪಕವಾಗಿ ಬ್ರಹ್ಮಸೂತ್ರಗಳಲ್ಲಿ ವಾಯುದೇವ ಪ್ರತಿಪಾದ್ಯನಾಗಿರುವುದ ರಿಂದಲೇ **'ಅಥಾತೋ ಬ್ರಹ್ಮಜಿಜ್ಞಾಸಾ'**- ಎಂಬ ಮೊತ್ತಮೊದಲ ಬ್ರಹ್ಮಸೂತ್ರದಲ್ಲಿ ಪರಬ್ರಹ್ಮನ ಜಿಜ್ಞಾಸೆಯ ಜೊತೆಗೆ ಆ ಜಿಜ್ಞಾಸೆಗೆ ಪೂರಕವಾಗುವಂತೆ ಅಮುಖ್ಯವಾಗಿ ಬ್ರಹ್ಮ ಎನಿಸುವ ಲಕ್ಷ್ಮಿಯ ಜಿಜ್ಞಾಸೆಯನ್ನು ಹೇಗೋ ಹಾಗೆ ಬ್ರಹ್ಮ ಎನಿಸುವ ವಾಯು ದೇವನ ಜಿಜ್ಞಾಸೆಯನ್ನೂ ನಡೆಸಬೇಕೆಂಬುದೂ ಅರ್ಥ ಎಂದು ಶ್ರೀಶ್ರೀ ವಿದ್ಯಾಧೀಶ ತೀರ್ಥರು ಅಭಿಪ್ರಾಯಪಡುವರು. ಆದುದರಿಂದ ಆರಂಭದ ಸೂತ್ರದಲ್ಲೂ ವಾಯು ದೇವನ ಪ್ರಸ್ತಾವ ಬಂದಂತಾಗಿದೆ.

ಹಾಗೆಯೇ '**ಅನಾವೃತ್ತಿಃ ಶಬ್ದಾತ್**'– ಎಂಬ ಕೊನೆಯ ಬ್ರಹ್ಮಸೂತ್ರದಲ್ಲಿ ವಾಯುದೇವನ ಪ್ರಸ್ತಾವ ಬಂದಿದೆ ಎಂದು ಶ್ರೀಶ್ರೀ ವಿದ್ಯಾಮಾನ್ಯತೀರ್ಥರೂ ಅವರ ಶಿಷ್ಯರಾದ ಶ್ರೀಶ್ರೀ ವಿದ್ಯೇಶತೀರ್ಥರೂ ಅಭಿಪ್ರಾಯಪಡುವರು. ಆ ಪ್ರಸ್ತಾವ ಹೀಗಿದೆ–

'**ಅನಸ್ಯ ಮುಖ್ಯಪ್ರಾಣಸ್ಯ ಆವೃತ್ತಿಃ- ಮಧ್ವರೂಪೇಣ ಅವತಾರಃ ಶಬ್ದಾತ್- ಪ್ರಾಣಾಗ್ನಿಸೂಕ್ತರೂಪಶ್ರುತೇಃ**'– ಬಳಿತ್ಥಾಸೂಕ್ತ ಎನಿಸುವ ಪ್ರಾಣಾಗ್ನಿಸೂಕ್ತದ 'ತೃತೀಯಮಸ್ಯ ವೃಷಭಸ್ಯ....' ಇತ್ಯಾದಿ ಮಾತಿನಲ್ಲಿ ಮಧ್ವಾವತಾರದ ಪ್ರಸ್ತಾವ ಇರುವುದರಿಂದ ಮಧ್ವರೂಪ ಮುಖ್ಯಪ್ರಾಣನ ಅವತಾರ ಎಂದು ಸಿದ್ಧವಾಗುವುದು.

ಹೀಗೆ ಮಧ್ವರೂಪ ಮುಖ್ಯಪ್ರಾಣನ ಅವತಾರ ಎಂದು ಸೂಚಿಸಿಕೊಡಲಾಗಿದೆ.

ಬ್ರಹ್ಮಸೂತ್ರದ ಬಗ್ಗೆ ಹೊರಟ ಇಪ್ಪತ್ತೊಂದು ಭಾಷ್ಯಗಳಿರುವಾಗ ಮಧ್ವರ ಅನುವ್ಯಾಖ್ಯಾನ, ಸೂತ್ರಭಾಷ್ಯ, ಅಣುಭಾಷ್ಯ ಹಾಗೂ ನ್ಯಾಯವಿವರಣ –ಈ ವ್ಯಾಖ್ಯಾನಗಳನ್ನೇ ಯಾಕೆ ಇಟ್ಟುಕೊಳ್ಳಬೇಕೆಂಬುದಕ್ಕೆ ಈ ಉಪಸಂಹಾರದ ಸೂತ್ರದಲ್ಲಿ ಸೂಚ್ಯನಾದ ಸಮರ್ಥನೆಯನ್ನೂ ನೀಡಲಾಗಿದೆ ಎಂದು ಶ್ರೀಶ್ರೀ ವಿದ್ಯೇಶತೀರ್ಥರು ಹೀಗೆ ಅಭಿಪ್ರಾಯಪಡುವರು– ಅನ– ಎಂದರೆ ಮುಖ್ಯಪ್ರಾಣ; ಅವರ ಅವತಾರರಾದ ಮಧ್ವಾಚಾರ್ಯರು. ಅವರ ಆವೃತ್ತಿ ಎಂದರೆ ಬ್ರಹ್ಮಸೂತ್ರದ ಕುರಿತು ಹೊರಟ ವ್ಯಾಪಕವಾದ ಶ್ಲೋಕಾತ್ಮಕ ವಿವರಣೆ. '**ವಿವರಣಾರ್ಥಃ ಶ್ಲೋಕಃ ವೃತ್ತಿಃ**'– ಎಂಬುದಾಗಿ ವೃತ್ತಿ ಎಂದರೆ ವಿವರಣೆಗಾಗಿ ಹೊರಟ ಶ್ಲೋಕ. ಆ ಸಮಂತಾತ್– ವ್ಯಾಪಕವಾದ ವೃತ್ತಿ–ಆವೃತ್ತಿ. ಹೀಗೆ ಸೂತ್ರದ ಅನಾವೃತ್ತಿ ಶಬ್ದ ಮುಖ್ಯಪ್ರಾಣಾವತಾರರಾದ ಮಧ್ವರಿಂದ ಹೊರಟ ಶ್ಲೋಕಾತ್ಮಕವಾದ ಅನುವ್ಯಾಖ್ಯಾನಾದಿಗಳನ್ನು ತಿಳಿಸಬಲ್ಲದು. **ಶಬ್ದಾತ್**– ಎಂಬಲ್ಲಿ ಲ್ಯಪ್ ಲೋಪ ಪಂಚಮೀ ಎಂದಿಟ್ಟುಕೊಂಡಲ್ಲಿ '**ಶಬ್ದಂ ವೇದಶಾಸ್ತ್ರಾತ್ಮಕಂ ಅನುಸೃತ್ಯ ವರ್ತಮಾನಾ**' ಶಬ್ದಶಾಸ್ತ್ರಕ್ಕೆ ಅನುಗುಣವಾಗಿ ಇರುವಂತಹದ್ದು; ಹಾಗೆಯೇ 'ಶಬ್ದಂ' ಸೂತ್ರಕಾರರಾದ ಶ್ರೀ ವೇದವ್ಯಾಸರ ಉಪದೇಶಾತ್ಮಕವಾದ ಶಬ್ದವನ್ನು ಅನುಸರಿಸಿ ಇರುವಂತಹದ್ದು. ಆದ್ದರಿಂದ ಅಂತಹ 'ಅನಾವೃತ್ತಿ' ಮಧ್ವರಿಂದ ಹೊರಟ ಅನುವ್ಯಾಖ್ಯಾನಾದಿಗಳೇ ಗ್ರಾಹ್ಯವಾದವು– ಎಂದು '**ಅನಾವೃತ್ತಿಃ ಶಬ್ದಾತ್....**' ಎಂಬ ಉಪಸಂಹಾರದ ಬ್ರಹ್ಮಸೂತ್ರದಲ್ಲಿ ಸೂಚಿತವಾಗಿದೆ.

ಈ ರೀತಿಯಾಗಿ '**ಅನಾವೃತ್ತಿಃ ಶಬ್ದಾತ್ ಅನಾವೃತ್ತಿಃ ಶಬ್ದಾತ್**'– ಎಂಬ ಕೊನೆಯ ಬ್ರಹ್ಮಸೂತ್ರದಲ್ಲಿ ಮಧ್ವರು ಪ್ರಾಣದೇವನ ಅವತಾರ; ಆದುದರಿಂದ ಅವರ ಉಪದೇಶ ಪ್ರಾಮಾಣಿಕ ಎಂದೂ, ಮಧ್ವರ ಅನುವ್ಯಾಖ್ಯಾನಾದಿ ಸೂತ್ರವ್ಯಾಖ್ಯಾನಗಳು ವೇದಶಾಸ್ತ್ರಕ್ಕೂ ಶ್ರೀ ವೇದವ್ಯಾಸರ ಉಪದೇಶಕ್ಕೂ ಅನುಗುಣವಾಗಿ ಇರುವವುಗಳಾಗಿರುವುದರಿಂದ ಪರಮ ಪ್ರಮಾಣಗಳಾಗಿವೆ ಎಂದೂ ಸೂಚಿತವಾಗಿರುವುದನ್ನು ಅನುಸಂಧಾನಕ್ಕೆ ತಂದುಕೊಳ್ಳಬಹುದು.

*

# ಮಹಾಭಾರತತಾತ್ಪರ್ಯನಿರ್ಣಯದಲ್ಲಿ

## • ವಾಯುದೇವನ ಮೂಲರೂಪದ ಪ್ರಸ್ತಾವ •

ಶ್ರೀ ಮಧ್ವರ ಮೇರುಕೃತಿ ಎಂದು ಪ್ರಸಿದ್ಧವಾಗಿರುವ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಮಹಾಭಾರತದ ಪ್ರಮುಖ ಪ್ರಮೇಯಗಳಷ್ಟೇ ಅಲ್ಲದೆ, ವೇದ-ಪಂಚರಾತ್ರಾಗಮ-ಮೂಲರಾಮಾಯಣ ಹಾಗೂ ಪುರಾಣಗಳು -ಇವುಗಳನ್ನೊಳಗೊಂಡ ಸಮಸ್ತ ಶಾಸ್ತ್ರದ ಪ್ರಮುಖ ಪ್ರಮೇಯಗಳು ಪ್ರತಿಪಾದಿತಗಳಾಗಿದ್ದು, ಇವುಗಳಲ್ಲಿ ಮಹಾಭಾರತದ ಭೀಮನ ಪ್ರಸ್ತಾವ ಹಾಗೂ ರಾಮಾಯಣದ ಆಂಜನೇಯನ ಪ್ರಸ್ತಾವವನ್ನು ಬಿಟ್ಟು ವಾಯುದೇವನ ಮೂಲರೂಪದ ಬಗ್ಗೆ ಎಲ್ಲೆಲ್ಲಿ, ಹೇಗೆ ಹೇಗೆ ಪ್ರಸ್ತಾವ ಬಂದಿದೆ ಎಂಬುದನ್ನು ನೋಡೋಣ-

**೧. ಭಗವಂತನ ಪ್ರತಿಬಿಂಬ ವಾಯುದೇವ:**

'**ಆಭಾಸಕೋಽಸ್ಯ ಪವನಃ ಪವಸ್ಯ ರುದ್ರಃ....**' ಎಂಬ ಮಾತಿನಲ್ಲಿ [1-114] ವಾಯುದೇವ ಭಗವಂತನ ಪ್ರತಿಬಿಂಬವಾದರೆ, ಅಂತಹ ವಾಯುದೇವನ ಪ್ರತಿಬಿಂಬ ರುದ್ರದೇವ ಎನ್ನಲಾಗಿದೆ.

**೨. ತಾರತಮ್ಯಕಕ್ಷೆಯಲ್ಲಿ ವಾಯುದೇವನ ಸ್ಥಾನ:**

'**ರುದ್ರಃ ಸರಸ್ವತೀ ವಾಯುರ್ಮುಕ್ತಾಃ ಶತಗುಣೋತ್ತರಾಃ....**' [1-73] ಸರಸ್ವತಿಗಿಂತ ನೂರು ಪಟ್ಟು ಅಧಿಕಗುಣಸಂಪನ್ನ ವಾಯುದೇವ. '**ಮುಕ್ತೇಷು ಶ್ರೀಸ್ತಥಾ ವಾಯೋಃ ಸಹಸ್ರಗುಣಿತಾ ಗುಣೈಃ**' [1-74] ಮುಕ್ತರಲ್ಲಿ ಶ್ರೀದೇವಿ ವಾಯುದೇವನಿಗಿಂತ ಸಹಸ್ರಾರು ಪಟ್ಟು ಅಧಿಕಗುಣಸಂಪನ್ನಳು.

**೩. ವಾಯುದೇವ ಹಾಗೂ ಬ್ರಹ್ಮದೇವ ಸಮಾನರು:**

'**ಏಕೋ ಬ್ರಹ್ಮಾ ಚ ವಾಯುಶ್ಚ.....ನ ಕಶ್ಚಿದ್ವಾಯುನಾ ಸಮಃ**' [1-73, 74] ಚತುರ್ಮುಖಬ್ರಹ್ಮ ಮತ್ತು ವಾಯುದೇವಸಮಾನರು. ರುದ್ರಾದಿದೇವತೆಗಳಲ್ಲಿ ವಾಯುದೇವನಿಗೆ ಸಮಾನರಾದವರು ಮತ್ತೊಬ್ಬರಿಲ್ಲ.

**ಬ್ರಹ್ಮಾತ್ಮಕೋ ಯತೋ ವಾಯುಃ ಪದಂ ಬ್ರಾಹ್ಮಮಗಾತ್ ಪುರಾ ।**
**ವಾಯೋರನ್ಯಸ್ಯ ನ ಬ್ರಾಹ್ಮಂ ಪದಂ ತಸ್ಮಾತ್ ಸ ಏವ ಸಃ ॥** [2-35]

ಹಿಂದಿನ ಕಲ್ಪದಲ್ಲಿ ವಾಯುದೇವನಾಗಿದ್ದವನೇ ಈ ಕಲ್ಪದಲ್ಲಿ ಚತುರ್ಮುಖನ ಪದವಿಯನ್ನು ಅಲಂಕರಿಸುವನು. ವಾಯುದೇವನಲ್ಲದೆ ಬೇರೆ ಯಾರೂ ಚತುರ್ಮುಖನ ಪದವಿಯನ್ನು ಏರುವಂತಿಲ್ಲ. ಆದುದರಿಂದ ವಾಯುದೇವನೇ ಚತುರ್ಮುಖ. '**ವಾಯುರ್ಹಿ**

ಬ್ರಹ್ಮತಾವೇತಿ ತಸ್ಮಾದ್ ಬ್ರಹ್ಮೈವ ಸ ಸ್ಮೃತಃ' [2-148] ವಾಯುದೇವನೇ ಬ್ರಹ್ಮಪದವಿಗೆ ಬರುವುದರಿಂದ ಅವನೇ ಚತುರ್ಮುಖಬ್ರಹ್ಮನೆನಿಸುವನು.

೪. ಭಗವದನುಜ್ಞೆ ಪಡೆದು ವಾಯು ಮೋಕ್ಷವನ್ನು ನೀಡುವನು:

'ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ....' [1-78] ಮೋಕ್ಷವನ್ನು ನೀಡುವನು.

೫. ಮೂರು ಅವತಾರಗಳುಳ್ಳ ವಾಯುದೇವ ಪ್ರಥಮಾಂಗ:

ತಸ್ಯಾಂಗಂ ಪ್ರಥಮಂ ವಾಯುಃ ಪ್ರಾದುರ್ಭಾವತ್ರಯಾನ್ವಿತಃ ।
ಪ್ರಥಮೋ ಹನೂಮಾನ್ನಾಮ ದ್ವಿತೀಯೋ ಭೀಮ ಏವ ಚ ॥
ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ।
ತ್ರೇತಾದ್ಯೇಷು ಯುಗೇಷ್ವೇಷ ಸಂಭೂತಃ ಕೇಶವಾಜ್ಞಯಾ ।
ಏಕೈಕಶಸ್ತ್ರಿಷು ಪೃಥಗ್.....' [2-124, 125]

ಶ್ರೀವಿಷ್ಣುವಿನ ಮೊದಲ ಸೇವಕ ವಾಯುದೇವ. ಅವನು ಹನೂಮಾನ್ ಎಂಬ, ಭೀಮ ಎಂಬ ಹಾಗೂ ಪೂರ್ಣಪ್ರಜ್ಞ ಎಂಬ ಮೂರು ಅವತಾರಗಳನ್ನು ತಾಳಿರುವನು. ಹೀಗೆ ಕೇಶವನ ಆಜ್ಞೆಯಿಂದಲೇ ತ್ರೇತಾ, ದ್ವಾಪರ ಹಾಗೂ ಕಲಿಯುಗಗಳಲ್ಲಿ ಪ್ರತಿಯೊಂದರಲ್ಲೂ ಒಂದೊಂದು ಅವತಾರ ತಾಳಿರುವನು.

೬. ಭಾರತಿಯು ಶ್ರೀ ಎನಿಸುವಳು:

'ಶಂರೂಪೇ ತು ರತೇರ್ವಾಯೌ ಶ್ರೀರಿತ್ಯೇವ ಚ ಕೀರ್ತ್ಯತೇ' [2-126] 'ಶಂ ರೂಪಮಾಶ್ರಿತಾ ವಾಯುಂ ಶ್ರೀರಿತ್ಯೇವ ಚ ಕೀರ್ತಿತಾ' [18-104]ಸುಖರೂಪಿಯಾಗಿದ್ದು 'ಶಂ' ಎನಿಸುವ ವಾಯುದೇವನಲ್ಲೇ ಆಸಕ್ತಳಾಗಿರುವುದರಿಂದ ಭಾರತೀದೇವಿ 'ಶ್ರೀ' ಎನಿಸುವಳು. ದ್ರೌಪದಿಯೂ ಶ್ರೀ ಎನಿಸುವಳು.

೭. ವೃಕೋದರ ಸಂಕೇತಿಸುವ ಹತ್ತು ಗುಣಗಳ ಸ್ವರೂಪಿ:

ಭಕ್ತಿರ್ಜ್ಞಾನಂ ಸವೈರಾಗ್ಯಂ ಪ್ರಜ್ಞಾ ಮೇಧಾ ಧೃತಿಃ ಸ್ಥಿತಿಃ ।
ಯೋಗಃ ಪ್ರಾಣೋ ಬಲಂ ಚೈವ ವೃಕೋದರ ಇತಿ ಸ್ಮೃತಃ ।
ಏತಾದೃಶಾತ್ಮಕೋ ವಾಯುಸ್ತಸ್ಮಾದ್ಭೀಮಸ್ತದಾತ್ಮಕಃ ॥ [2-140, 141]

ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞೆ, ಮೇಧಾ, ಧೈರ್ಯ, ನ್ಯಾಯಮಾರ್ಗದ ಸ್ಥಿತಿ, ಉಪಾಯ, ಪ್ರೇರಕತ್ವ, ಬಲ –ಈ ಹತ್ತು ಗುಣಗಳು ಭೀಮಸೇನನನ್ನು ಸಂಕೇತಿಸುವವು. ವಾಯುದೇವ ಈ ಹತ್ತು ಗುಣಗಳ ಸ್ವರೂಪಿಯಾಗಿರುವುದರಿಂದಲೇ ವಾಯುದೇವನ ಅವತಾರ ಭೀಮ ಇವುಗಳನ್ನು ಸಂಕೇತಿಸುವನು.

೮. **ಬಳಿತ್ಥಾಸೂಕ್ತದ ಉಲ್ಲೇಖ:**

ಎರಡನೇ ಅಧ್ಯಾಯದ ೧೫೦ನೇ ಶ್ಲೋಕದಿಂದ ೧೫೪ನೆಯ ಶ್ಲೋಕದ ವರೆಗಿನ ಐದು ಶ್ಲೋಕಗಳಲ್ಲಿ ವಾಯುದೇವನ ಪ್ರಸ್ತಾವವುಳ್ಳ ಬಳಿತ್ಥಾಸೂಕ್ತದ ಉಲ್ಲೇಖ ನಡೆದಿದೆ.

೯. **ದೇವಶ್ರೇಷ್ಠಸ್ತು ಮಾರುತಃ**

**ಅಶ್ವಮೇಧಃ ಕ್ರತುಶ್ರೇಷ್ಠೋ ಜ್ಯೋತಿಃಶ್ರೇಷ್ಠೋ ದಿವಾಕರಃ ।**
**ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ.....'**

ಎಂಬುದಾಗಿ ಯಾಗ, ಪ್ರಕಾಶಕ ವಸ್ತು ಹಾಗೂ ಎರಡು ಕಾಲುಗಳುಳ್ಳ ಮನುಷ್ಯರು –ಇವರ ಸಮುದಾಯದಲ್ಲಿ ಶ್ರೇಷ್ಠಗಳೆಂದು ಪ್ರಸಿದ್ಧಗಳಾದ ಅಶ್ವಮೇಧ, ಆದಿತ್ಯ ಹಾಗೂ ಬ್ರಾಹ್ಮಣ –ಇವರ ದೃಷ್ಟಾಂತ ನೀಡಿ ಅದರಂತೆಯೇ **'ದೇವಶ್ರೇಷ್ಠಸ್ತು ಮಾರುತಃ'** [2-155] ದೇವತೆಗಳಲ್ಲೆಲ್ಲ ಶ್ರೇಷ್ಠನಾದವನು ವಾಯುದೇವನೆಂದು ಉದ್ಘೋಷಿಸಲಾಗಿದೆ.

ಇದರ ಸ್ಪಷ್ಟೀಕರಣ ರೂಪದಲ್ಲಿ ಮುಂದೆ (೧೨–೫೧) ಹೀಗೆ ನಿರೂಪಿಸಲಾಗಿದೆ –

**ಯಜ್ಞಾಧಿಕೋ ಹ್ಯಶ್ವಮೇಧೋ**
**ಮನುಷ್ಯದೃಶ್ಯೇಷು ತೇಜಸ್ಸ್ವಧಿಕೋ ಹಿ ಭಾಸ್ಕರಃ ।**
**ವರ್ಣೇಷು ವಿಪ್ರಃ ಸಕಲೈರ್ಗುಣೈರ್ವರೋ**
**ದೇವೇಷು ವಾಯುಃ ಪುರುಷೋತ್ತಮಾದೃತೇ ॥**

ಅಂದರೆ ಮನುಷ್ಯರಿಂದ ಕಾಣಲಿಕ್ಕೆ ಶಕ್ಯಗಳಾದ ಪ್ರಕಾಶಕ ವಸ್ತುಗಳಲ್ಲಿ ಅಧಿಕ ಸೂರ್ಯ ಎಂಬ ಅಭಿಪ್ರಾಯ **'ಜ್ಯೋತಿಃ ಶ್ರೇಷ್ಠೋ ದಿವಾಕರಃ'** –ಎಂಬ ಮಾತಿಗೆ. ಹಾಗೆಯೇ ಪುರುಷೋತ್ತಮನಾದ ಭಗವಂತನನ್ನು ಹೊರತುಪಡಿಸಿ ಉಳಿದ ದೇವತೆಗಳಲ್ಲಿ ವಾಯುದೇವ ಶ್ರೇಷ್ಠ ಎಂಬ ಅಭಿಪ್ರಾಯ **'ದೇವಶ್ರೇಷ್ಠಸ್ತು ಮಾರುತಃ'** –ಎಂಬ ಮಾತಿಗೆ.

೧೦. **ಗಿರೀಶನಿಗೆ ಬಲಪ್ರದ ಮರುತ್:**

**'.....ಗಿರಿಶಸ್ಯ ಬಲಂ ಮರುತ್ । ಬಲಂ ತಸ್ಯ ಹರಿಃ ಸಾಕ್ಷಾತ್...'** [2-156]

ರುದ್ರನಿಗೆ ಬಲಪ್ರದನಾದವನು ವಾಯುದೇವನಾದರೆ, ವಾಯುದೇವನಿಗೆ ಶ್ರೀಹರಿ ಬಲಪ್ರದನು.

೧೧. **ತಸ್ಮಾದ್ವಾಯುರ್ದೇವದೇವೋ ವಿಶಿಷ್ಟಃ**

**'ವಾಯುರ್ಭೀವೋ.... ದೇವದೇವೋ ವಿಶಿಷ್ಟಃ'** [2-157] ವಾಯುದೇವನ ಅಸಾಧಾರಣಗಳಾದ ಐದಾರು ಧರ್ಮಗಳನ್ನು ಉದಾಹರಿಸಿ, ಆದ್ದರಿಂದ ವಾಯುದೇವ **'ದೇವದೇವ'** ಹಾಗೂ ರುದ್ರಾದಿಗಳಿಗಿಂತ ವಿಶಿಷ್ಟನಾದವನೆಂದು ಸಾರಲಾಗಿದೆ.

೧೨. **ಶೇಷಾದಿಗಳ ತಂದೆ:**

**ಯಾ ಮರುತಾದ್ ಗರ್ಭಮಧತ್ತ ಪೂರ್ವಂ**

**ಶೇಷಂ ಸುಪರ್ಣಂ ಗಿರಿಶಂ ಸುರೇಂದ್ರಮ್ ।**

**ಚತುರ್ಮುಖಾಭಾಂಶ್ಚತುರಃ ಕುಮಾರಾನ್ ಸಾ ದ್ರೌಪದೀ....'** [2-170]

ಯಾವ ಭಾರತೀದೇವಿ ವಾಯುದೇವನಿಂದ ಗರ್ಭವನ್ನು ಧರಿಸಿ ಚತುರ್ಮುಖನಿಗೆ ಸದೃಶರಾದ ಶೇಷ, ಗರುಡ, ರುದ್ರ ಹಾಗೂ ಇಂದ್ರ –ಎಂಬ ನಾಲ್ವರು ಪುತ್ರರನ್ನು ಪಡೆದಿರುವಳೋ ಅಂತಹ ಭಾರತಿಯೇ ದ್ರೌಪದಿಯಾಗಿರುವಳು.

**೧೩. ಸಂಕರ್ಷಣಜಯಾದಂಪತಿಗಳ ಪುತ್ರ:**

**ಸಂಕರ್ಷಣಾಚ್ಚಾಪಿ ಜಯಾತನೂಜೋ ಬಭೂವ ಸಾಕ್ಷಾದ್ ಬಲಸಂವಿದಾತ್ಮಾ ।**
**ವಾಯುರ್ಯ ಏವಾಥ ವಿರಿಂಚನಾಮಾ ಭವಿಷ್ಯ ಆದ್ಯೋ ನ ಪರಸ್ತತೋ ಹಿ ॥**
[3-10]

ಸಂಕರ್ಷಣರೂಪಿ ಪರಮಾತ್ಮನಿಂದಲೂ ಜಯಾರೂಪಿ ಲಕ್ಷ್ಮಿಯಿಂದಲೂ ಬಲ ಜ್ಞಾನಾತ್ಮಕನಾದ ವಾಯುದೇವನು ಜನಿಸಿದನು. ಮುಂದಿನ ಕಲ್ಪದಲ್ಲಿ ಅವನೇ ವಿರಿಂಚ ನಾಗುವನು. ಆದ್ದರಿಂದ ಅವನಿಗಿಂತ ಜೀವರಲ್ಲಿ ಉತ್ತಮರಾದವರು ಮತ್ತೊಬ್ಬರಿಲ್ಲ.

**೧೪. ಸಾಧಕೋತ್ತಮನಾದ ವಾಯು ನರೋತ್ತಮ:**

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್'**

–ಎಂಬ ಶ್ಲೋಕದಲ್ಲಿ ನರೋತ್ತಮನೆಂದರೆ ವಾಯುದೇವ– **'ವಾಯುರ್ನರೋತ್ತಮೋ ನಾಮ....'** [3-5] ಅವನು ಸಾಧಕೋತ್ತಮನಾಗಿರುವುದರಿಂದ ನಮ್ಮ ಎನಿಸಿರುವನು.... ಸಾಧಕೇಶೋ ನರೋತ್ತಮಃ । .....ತಸ್ಮಾನ್ನಮ್ಯಾ ಹಿ ತೇಽಖಿಲಾಃ' [3-6,7]

**೧೫. ಸೂತ್ರ ಎನಿಸುವ ವಾಯುವಿನಿಂದ ಸುಪರ್ಣನ ಜನನ:**

**'ಸೂತ್ರಂ ಸ ವಾಯುಃ....ಶ್ರದ್ಧಾ ದ್ವಿತೀಯಾಥ.....ತಯೋಸ್ತು ಯೋಗೋ ಬಭೂವ.... ಸೂತ್ರನಾಮ್ನಾ ಹರೇರ್ನಿಯೋಗಾಥ ಸಂಪ್ರಸೂತೌ ಶೇಷಃ ಸುಪರ್ಣಶ್ಚ.....'** [3-11,12]

ವಾಯುದೇವನು ಸೂತ್ರ ಎನಿಸುವನು. ಶ್ರೀಹರಿಯ ಆದೇಶಾನುಸಾರವಾಗಿ ಸೂತ್ರನಿಂದ ಶ್ರದ್ಧೆಯ ಮೂಲಕ ಶೇಷನೂ ಸುಪರ್ಣನೂ ಹುಟ್ಟಿದನು. **'....ಪುನರೇವ ಸೂತ್ರಾತ್ ಶ್ರದ್ಧಾ ಸುತಾನಾಪ ಸುರಪ್ರವೀರಾನ್ ಶೇಷಂ ಶಿವಂ ಚೇಂದ್ರಂ....'** [3-18] ಶ್ರದ್ಧಾನಾಮಕ ಭಾರತಿ ಪುನಃ ಸೂತ್ರನಾಮಕ ವಾಯುವಿನಿಂದ ಸುರಶ್ರೇಷ್ಠರಾದ ಶೇಷ, ರುದ್ರ, ಇಂದ್ರನನ್ನು ಹುಟ್ಟಿಸಿದಳು.

**೧೬. ವಿಷ್ವಕ್ಸೇನ ವಾಯುಪುತ್ರಃ**

**'......ವಿಷ್ವಕ್ಸೇನೋ ವಾಯುಜಃ ಖೇನ ತುಲ್ಯಃ.........**[3-14] ವಿಷ್ವಕ್ಸೇನನು ವಾಯುದೇವನ ಪುತ್ರ. ಅವನು ಯೋಗ್ಯತೆಯಲ್ಲಿ ಭೂತಾಕಾಶಾಭಿಮಾನಿಯಾದ ಗಣಪತಿಗೆ ಸದೃಶ; ಅಂದರೆ ತಾರತಮ್ಯದ ಹದಿನೆಂಟನೆಯ ಕಕ್ಷೆಯಲ್ಲಿ ಪರಿಗಣಿತನಾಗಿರುವನು.

೧೭. **ಜೀವೋತ್ತಮನ ಉತ್ತಮತ್ವದ ಪರೀಕ್ಷೆ:**

**'.....ತೇ ಜಾನಮಾನಾ ಅಪಿ ನಿರ್ಣಯಾಯ..... ತದನ್ಯದೇವಾಧಿಪತಿಃ ಸ ಮಾರುತಃ'** [3-23,24] ವಿರಿಂಚನಿಂದ ಹುಟ್ಟಿದ ದೇವತೆಗಳಿಗೆ ತಮ್ಮೆಲ್ಲರಿಗಿಂತ ವಾಯುದೇವನೇ ಉತ್ತಮನೆಂದು ತಿಳಿದಿದ್ದರೂ ಲೋಕಕ್ಕೆ ನಿರ್ಣಯವಾಗಲೆಂದು ಅವರು ಚತುರ್ಮುಖನ ಶರೀರದ ಮಾಧ್ಯಮದಲ್ಲಿ ಕ್ರಮವಾಗಿ ನಿರ್ಗಮನ ಹಾಗೂ ಪ್ರವೇಶಗಳನ್ನು ನಡೆಸಿ ವಾಯುದೇವನೇ ಉತ್ತಮನೆಂದು ನಿರ್ಧರಿಸಿ ಅವನನ್ನು ಎಲ್ಲರೂ ಆಶ್ರಯಿಸಿದರು. ಶ್ರೀಹರಿ ಹಾಗೂ ಚತುರ್ಮುಖ ತಟಸ್ಥರಾಗಿದ್ದುದರಿಂದ ಅವರಿಬ್ಬರನ್ನು ಹೊರತು ಪಡಿಸಿ, ಉಳಿದ ದೇವತೆಗಳಲ್ಲೆಲ್ಲ ಉತ್ತಮನಾಗಿರುವವನು ವಾಯುದೇವನು.

೧೮. **ಮಧುಕೈಟಭರಲ್ಲಿ ಪ್ರಭಂಜನಾವೇಶ:**

**'.....ಮಧುಕೈಟಭಾಖ್ಯೌ ಪ್ರಭಂಜನಾವೇಶವತಾತ್ ತ್ವದಾಜ್ಞಯಾ ಬಲೋದ್ಧತೌ.....'** [3-58] ಭಗವಂತನ ಆದೇಶಾನುಸಾರವಾಗಿ ಮಧುಕೈಟಭರಲ್ಲಿ ವಾಯುದೇವನ ಆವೇಶ ನಡೆದಿದ್ದು, ಆ ಪ್ರಯುಕ್ತ ಅವರು ಬಲಿಷ್ಠರಾಗಿ ಉನ್ಮತ್ತರಾಗಿದ್ದರು.

೧೯. **ವಾಯುದೇವನೇ ಹನೂಮಾನ್:**

**ಸ ದೇವತಾನಾಂ ಪ್ರಥಮೋ ಗುಣಾಧಿಕೋ**
**ಬಭೂವ ನಾಮ್ನಾ ಹನೂಮಾನ್ ಪ್ರಭಂಜನಃ ।**
**ಸ್ವಸಂಭವಃ ಕೇಸರಿಣೋ ಗೃಹೇ ಪ್ರಭುಃ...... ॥** [3-65]

ದೇವತೆಗಳಲ್ಲಿ ಮೊದಲಿಗನಾದ, ಗುಣಾಧಿಕನಾದ ವಾಯುದೇವ ಭಗವದಿಚ್ಛಾನುಸಾರವಾಗಿ ಕೇಸರಿಯ ಪತ್ನಿಯಲ್ಲಿ **'ಹನೂಮಾನ್'** ನಾಮಕನಾಗಿ ಅವತರಿಸಿದನು.

೨೦. **ಭಗವಂತನ ಗದೆ ಮತ್ತು ಬಾಣಗಳು ವಾಯುದೇವ:**

**'ಗದಾ ತು ವಾಯುರ್ಬಲಸಂವಿದಾತ್ಮಾ..... ಪಂಚಾತ್ಮಕೋ ಮಾರುತ ಏವ ಬಾಣಃ.....'** [3-74] ಭಗವಂತನ ಗದೆ ಹಾಗೂ ಬಾಣ ವಾಯುದೇವ.

೨೧. **ಶ್ರೀರಾಮಹನೂಮಂತರ ಪ್ರಥಮ ಸಮಾಗಮ:**

ಋಶ್ಯಮೂಕದಲ್ಲಿ ರಾಮಲಕ್ಷ್ಮಣರು ಹನೂಮಂತನನ್ನು ಕಂಡಾಗ ಹನೂಮಂತ ರಾಮಲಕ್ಷ್ಮಣರನ್ನು ಗುರುತಿಸಿದ ಹಾಗೂ ಹನೂಮಂತನ ಶಿಫಾರಸಿನ ಮೇರೆಗೆ ಸುಗ್ರೀವನನ್ನು ಶ್ರೀರಾಮ ರಕ್ಷಿಸಿದ ಹಿನ್ನೆಲೆಯಲ್ಲಿ– **'.... ಸ ಹ್ಯೇಕ ಏನಮವಗಚ್ಛತಿ ಸಮ್ಯಗೀಶಮ್ । ದೇಹೇಽಪಿ ಯತ್ರ ಪವನೋಽತ್ರ ಹರಿರ್ಯತೋಽಸೌ ತತ್ರೈವ ವಾಯುರಿತಿ ವೇದವಚಃ ಪ್ರಸಿದ್ಧಮ್ । ಕಸ್ಮಿನ್ನಹಂತ್ವಿತಿ ತಥೈವ ಹಿ ಸೋಽವತಾರೇ ತಸ್ಮಾತ್ ಸ ಮಾರುತಿಕೃತೇ ರವಿಜಂ ರರಕ್ಷ ॥ ಏವಂ ಸ ಕೃಷ್ಣತನುರರ್ಜುನಮಪ್ಯರಕ್ಷದ್ ಭೀಮಾರ್ಥಮೇವ ರವಿಜಂ ನಿಹತ್ಯ.....'** [5-45, 46, 47] ವಾಯುದೇವನೊಬ್ಬನೇ ದೇವರನ್ನು ಚೆನ್ನಾಗಿ ತಿಳಿಯುವವನು. **'ಕಸ್ಮಿನ್ ನ್ವಹಂ....'** ಇತ್ಯಾದಿಯಾಗಿ ಷಟ್‌ಪ್ರಶ್ನೋಪನಿಷತ್ತಿನ ಮಾತಿನಂತೆ ಯಾವ ದೇಹದಲ್ಲಿ ಪವನ ಇರುವನೋ ಅಲ್ಲಿ ಶ್ರೀಹರಿ ಇರುವಂತೆ ಅವತಾರದ

ಪ್ರಸಂಗದಲ್ಲೂ ರಾಮಾವತಾರದಲ್ಲಿ ಆಂಜನೇಯ ಸುಗ್ರೀವನಿಗೆ ರಕ್ಷಣೆ ನೀಡಿದ್ದನೆಂದು ಸುಗ್ರೀವನನ್ನು ರಕ್ಷಿಸಲಾಯಿತು. ಕೃಷ್ಣಾವತಾರದಲ್ಲಿ ಭೀಮಸೇನ ಅರ್ಜುನನ ಪಕ್ಷದಲ್ಲಿದ್ದ ನೆಂದು ಕರ್ಣನನ್ನು ಕೊಂದು ಅರ್ಜುನನಿಗೆ ರಕ್ಷಣೆ ನೀಡಲಾಯಿತು.

**೨೨. ದೇವತೆಗಳೂ ಪವನನ ಪಕ್ಷ:**

'ಏವಂ ಸುರಾಶ್ಚ ಪವನಸ್ಯ ವಶೇ ಯತೋಽತಃ ಸುಗ್ರೀವಮತ್ರತು ಪರತ್ರ ಚ ಶಕ್ರಸೂನುಮ್ । ಸರ್ವೇ ಶ್ರಿತಾಃ....' [5-48] ದೇವತೆಗಳೂ ವಾಯುದೇವನ ಅಧೀನದಲ್ಲಿ ರುವುದರಿಂದ ರಾಮಾವತಾರದ ಸಂದರ್ಭದಲ್ಲಿ ಸುಗ್ರೀವನ ಪಕ್ಷವನ್ನೂ, ಕೃಷ್ಣಾವತಾರದ ಸಂದರ್ಭದಲ್ಲಿ ಅರ್ಜುನನ ಪಕ್ಷವನ್ನೂ ಆಶ್ರಯಿಸಿದ್ದರು.

**೨೩. ಮೂರುಕೋಟಿ ರೂಪಗಳುಳ್ಳ ಪವನ:**

**ಪುನಶ್ಚ ಯುದ್ಧಾಯ ಸಮಾಹ್ವಯಂತಂ ನ್ಯಪಾತಯಂ ರಾವಣಮೇಕಮುಷ್ಟಿನಾ ।**
**ಮಹಾಬಲೋಽಹಂ ಕಪಿಲಾಖ್ಯರೂಪಸ್ತ್ರಿಕೋಟಿರೂಪಃ ಪವನಶ್ಚ ಮೇ ಸುತಃ ॥**
[8-237]

ಮಹಾಬಲಿಷ್ಠ ಕಪಿಲನಾಮಕ ಭಗವಂತನು ಮತ್ತೊಂದು ಸಂದರ್ಭದಲ್ಲಿ ರಾವಣ ನನ್ನು ಒಂದೇ ಮುಷ್ಟಿಯಿಂದ ನೆಲದ ಮೇಲೆ ಉರುಳಿಸಿದಂತೆ ತ್ರಿಕೋಟಿರೂಪಗಳುಳ್ಳ ಆಂಜನೇಯನೂ ಒಂದೇ ಮುಷ್ಟಿಯಿಂದ ರಾವಣನನ್ನು ಬೀಳಿಸಿದನು.

**೨೪. ರಾಮನಂತೆ ಸ್ವಾಭಾವಿಕವಾಗಿ ಜಯಶಾಲಿ:**

ರುದ್ರ ಭಗವಂತನ ವರಬಲದಿಂದ ರಾವಣನನ್ನು ಗೆದ್ದಿದ್ದರೆ ವಾಯುದೇವ ಪರಮಾತ್ಮನಂತೆ ಸ್ವಾಭಾವಿಕವಾಗಿ ಜಯಶಾಲಿ. ಅಂತಹ ವಾಯುದೇವನೇ ಹನೂಮಂತ– **'ಅತಃ ಸ್ವಭಾವಾಜ್ಜಯಿನಾವಹಂ ಚ ವಾಯುಶ್ಚ ವಾಯುರ್ಹನೂಮಾನ್ ಸ ಏಷಃ' [8-239]**

**೨೫. ವಾಯುದೇವನಿಂದ ಕಾಷ್ಠದಂತೆ ಮಾಡಲ್ಪಟ್ಟರು:**

**ಅಮುಷ್ಯ ಹೇತೋಸ್ತು ಪುರಾ ಹಿ ವಾಯುನಾ**
**ಶಿವೇಂದ್ರಪೂರ್ವಾ ಅಪಿ ಕಾಷ್ಠವತ್ ಕೃತಾಃ** [8-239]

ಹಿಂದೆ ಹನೂಮಂತನಿಗೆ ಸೂರ್ಯ ವಜ್ರಾಯುಧದಿಂದ ಹೊಡೆಯಲು ವಾಯು ದೇವ ರುದ್ರಾದಿದೇವತೆಗಳನ್ನು ಕಟ್ಟಿಗೆಯಂತೆ ನಿಶ್ಚೇಷ್ಟರನ್ನಾಗಿ ಮಾಡಿದ್ದನು.

**೨೬. ಕಾಲಕೂಟವಿಷದ ನಿಗ್ರಹ:**

**'....ತ್ವದಾಜ್ಞಯಾ ವಾಯುರಧಾತ್ ಕರೇ ನಿಜೇ । ....ಕರೇ ವಿಮಥ್ಯಾಸ್ತಬಲಂ ವಿಧಾಯ ದದೌ ಸ ಕಿಂಚಿದ್ಗಿರಿಶಾಯ ವಾಯುಃ.... ತೇನ ನಿಪಾತಿತೋ ಮೂರ್ಛಿತ ಆಶು ರುದ್ರಃ । ಹರೇಃ ಕರಸ್ಪರ್ಶಬಲಾತ್ಸ ಸಂಜ್ಞಾಮವಾಪ..... ಅಥ ತ್ವದಾಜ್ಞಾಂ ಪುರತೋ ನಿಧಾಯ ನಿಧಾಯ ಪಾತ್ರೇ ತಪನೀಯರೂಪೇ । ಸ್ವಯಂ ತ್ವನಿರ್ಮಥ್ಯ ಬಲೋಪಪನ್ನಂ ಪಪೌ ಸ ವಾಯುಸ್ತದುತಾಸ್ಯ ಜೀರ್ಣಮ್ ॥ .....ವಿಕಾರೋ ನ ಬಭೂವ ವಾಯೋಃ'** [10-13, 14,

15, 16, 17] ಸಮುದ್ರಮಥನದ ಸಂದರ್ಭದಲ್ಲಿ ಕಾಲಕೂಟವಿಷ ಕಾಣಿಸಿಕೊಳ್ಳಲು ವಾಯುದೇವ ಭಗವದಾಜ್ಞಾನುಸಾರವಾಗಿ ತನ್ನ ಅಂಗೈಯಲ್ಲಿಟ್ಟು ಅದನ್ನು ತಿಕ್ಕಿ ತಿಕ್ಕಿ ಅದರ ಸಾಮರ್ಥ್ಯವನ್ನು ಕಡಿಮೆ ಮಾಡಿ ಸ್ವಲ್ಪ ಗಿರೀಶನಿಗೆ ನೀಡುವನು. ಅದರ ಪಾನದಿಂದ ಮೂರ್ಛಿತನಾದ ರುದ್ರ ವಾಯುದೇವನ ಕರಸ್ಪರ್ಶದಿಂದ ಚೇತರಿಕೆ ಪಡೆದುಕೊಳ್ಳುವನು. ಭಗವದಾಜ್ಞಾನುಸಾರವಾಗಿ ವಾಯುದೇವ ಕಾಲಕೂಟ ವಿಷವನ್ನು ಚಿನ್ನದ ಬಟ್ಟಲಲ್ಲಿ ಹಾಕಿ ಅದರ ಸಾಮರ್ಥ್ಯವನ್ನು ಕುಗ್ಗಿಸದೆಯೇ ಅದನ್ನು ಕುಡಿಯುವನು. ಅದನ್ನು ಜೀರ್ಣಿಸಿ ಕೊಳ್ಳುವನು. ಕಾಲಕೂಟವಿಷದ ಪಾನಪ್ರಯುಕ್ತ ವಾಯುದೇವನಲ್ಲಿ ಯಾವುದೇ ವಿಕಾರ ಆಗಿಲ್ಲ.

೨೭. ಶುಕಾಚಾರ್ಯರಲ್ಲಿ ಪ್ರವೇಶ:

'ಶುಕಂ ತಮಾಶು ಪ್ರವಿವೇಶ ವಾಯುರ್ವ್ಯಾಸಸ್ಯ ಸೇವಾರ್ಥಮ್...' [10-73] ಶುಕಾಚಾರ್ಯರ ಅವತಾರವಾದಾಕ್ಷಣ ಅವರಲ್ಲಿ ವಾಯುದೇವ ಶ್ರೀ ವೇದವ್ಯಾಸರ ಸೇವೆಗಾಗಿ ಪ್ರವೇಶ ಮಾಡಿದನು.

೨೮. ಪ್ರಹ್ಲಾದನಲ್ಲಿ ಸಮಾವೇಶ:

'..ಪ್ರಹ್ಲಾದೋ ಭಗವತ್ಪ್ರಿಯಃ । ವಾಯುನಾ ಚ ಸಮಾವಿಷ್ಟೋ ಮಹಾಬಲಸಮನ್ವಿತಃ ॥ [11-8] ಹಿರಣ್ಯಕಶಿಪುವಿನ ಪುತ್ರ ವಾಯುದೇವನ ಆವೇಶಕ್ಕೆ ಒಳಗಾಗಿದ್ದನು. ಆದುದರಿಂದಲೇ ಭಗವತ್ಪ್ರಿಯನೂ ಮಹಾಬಲಯುಕ್ತನೂ ಆಗಿದ್ದನು.

೨೯. ಧೃತರಾಷ್ಟ್ರನಲ್ಲಿ ಆವೇಶ:

'.....ಅಭೂಚ್ಚ ತಸ್ಯಾಂ ಧೃತರಾಷ್ಟ್ರನಾಮಕೋ ಗಂಧರ್ವರಾಟ್ ಪವನಾವೇಶಯುಕ್ತಃ । ಮಾರುತಾವೇಶವಶಾದ್ ಬಲಾಧಿಕೋ ಬಭೂವ....' [11-130, 131] ಧೃತರಾಷ್ಟ್ರ ಎಂಬ ಗಂಧರ್ವ ವಾಯುದೇವನ ಆವೇಶಯುಕ್ತನಾಗಿ ಧೃತರಾಷ್ಟ್ರನಾಮಕನಾಗಿ ಹುಟ್ಟಿದನು. ವಾಯುದೇವನ ಆವೇಶದಿಂದಾಗಿ ಅವನು ತುಂಬ ಬಲಿಷ್ಠನಾಗಿ.

೩೦. ಪಾಂಡುವಿನಲ್ಲಿ ಆವೇಶ:

'ಸ ಚಾಪ ವೀರ್ಯಾಧಿಕ ಏವ ವಾಯೋರಾವೇಶತಃ ಸರ್ವಶಸ್ತ್ರಾಸ್ತ್ರವೇತ್ತಾ' [11-134] ಪಾಂಡು ವಾಯುದೇವನ ಆವೇಶದಿಂದಾಗಿ ಅಧಿಕಬಲಸಂಪನ್ನನಾಗಿದ್ದ. ಸಕಲ ಶಸ್ತ್ರಾಸ್ತ್ರಬಲದವನಾಗಿದ್ದ.

೩೧. ಶಲ್ಯನಲ್ಲಿ ಆವೇಶ:

'ಸ ಮಾರುತಾವೇಶವಶಾತ್ ಪೃಥಿವ್ಯಾಂ ಬಲಾಧಿಕೋಽಭೂತ್.... [11-164, 1] ಪ್ರಹ್ಲಾದನು ಋತಾಯನನ ಮಗ ಶಲ್ಯನಾಗಿ ವಾಯುದೇವನ ಆವೇಶದಿಂದ ಕೂಡಿಕೊಂಡು ಹುಟ್ಟಿದನು. ವಾಯುದೇವನ ಆವೇಶದಿಂದಾಗಿ ಅವನು ಭೂಮಿಯಲ್ಲಿ ಬಲಾಧಿಕನಾಗಿದ್ದನು.

೩೨. **ವಿಪ್ರಚಿತ್ತಿಯ ಸಂಹಾರ:**

ದೇವತೆಗಳು ಕೃಷ್ಣಾವತಾರಕ್ಕಾಗಿ ಭಗವಂತನನ್ನು ಪ್ರಾರ್ಥಿಸುವಾಗ ಹಿಂದೆ ನಡೆದ ದೇವಾಸುರ ಯುದ್ಧವನ್ನು ಪ್ರಸ್ತಾವಿಸಿ, ಅದರಲ್ಲಿ ಬ್ರಹ್ಮನ ವರದಿಂದ ಅಜೇಯನಾಗಿದ್ದ ವಿಪ್ರಚಿತ್ತಿಯ ಅಸ್ತ್ರಗಳನ್ನು ಉತ್ತಮ ಅಸ್ತ್ರಗಳಿಂದ ತಡೆದ ವಾಯುದೇವ ಅವನ ಎದೆಗೆ ಚಿನ್ನದ ಗದೆಯನ್ನು ಎಸೆದು ಮೇರುಪರ್ವತದಿಂದ ಕೆಳಗೆ ಬಿದ್ದು ಅವನು ಪುಡಿ ಪುಡಿ ಯಾಗುವಂತೆ ಮಾಡಿರುವನು. '**.....ನ್ಯವಾರಯತ್ತಂ ಪವನಃ ಶರೌಘೈಃ । ಅಸ್ತ್ರಾಣಿ ತಸ್ಯಾಸ್ತ್ರವರೈರ್ನಿವಾರ್ಯ ಚಿಕ್ಷೇಪ ತಸ್ಯೋರಸಿ ಕಾಂಚನೀಂ ಗದಾಮ್ । ವಿಚೂರ್ಣಿತೋಽಸೌ ನಿಪಪಾತ ಮೇರೌ ಮಹಾಬಲೋ ವಾಯುಬಲಾಭಿನುನ್ನಃ ॥** [11-190, 191] ಎಂದು ಉಲ್ಲೇಖಿಸಲಾಗಿದೆ.

೩೩. **ಕಾಲನೇಮಿಯ ಸಂಹಾರದಲ್ಲಿ ವಾಯುವಿನ ಪಾತ್ರ:**

ಕೃಷ್ಣಾವತಾರಕ್ಕಾಗಿ ಭಗವಂತನನ್ನು ಪ್ರಾರ್ಥಿಸುತ್ತ, ದೇವತೆಗಳು ಪ್ರಸ್ತುತಪಡಿಸಿದ ಹಿಂದಿನ ದೇವಾಸುರಯುದ್ಧದಲ್ಲಿ ಆಗಮಿಸಿದ ಕಾಲನೇಮಿಯನ್ನು ಭಗವಂತನಿಂದಲೇ ಕೊಲ್ಲಲ್ಪಡುವ ವರವನ್ನು ಪಡೆದುಕೊಂಡವನನ್ನಾಗಿ ವಿವೇಚಿಸಿಕೊಂಡ ವಾಯುದೇವ ಭಗವಂತನನ್ನು ಸ್ಮರಿಸಿಕೊಳ್ಳಲು ಆವಿರ್ಭವಿಸಿದ ಭಗವಂತನು ಕಾಲನೇಮಿಯನ್ನು ಸಂಹರಿಸುವನು. '**....ತಮಾಪತಂತಂ ಪ್ರಸಮೀಕ್ಷ್ಯ ಮಾರುತಸ್ತ್ವದಾಜ್ಞಯಾ ದತ್ತವರಸ್ತ್ವಯೈವ । ಹಂತವ್ಯ ಇತ್ಯಸ್ಮರದಾಶು ಹಿತ್ವಾಂ ತದಾವಿರಾಸೀಸ್ತ್ವಮನಂತಪೌರುಷಃ..... ನ್ಯವೇದಯಶ್ಚಾಶು ಯಮಾಯ ಪಾಪಮ್**' [11-193, 1945]

೩೪. **ನಾಲ್ಕನೆಯ ಭಾಗ ಮುಖ್ಯಪ್ರಾಣನಿಂದ ಸಂಹೃತ:**

'**.....ಚತುರ್ಥಂ ಜಘಾನ ವಾಯುಃ...**' [11-195] ಹಿಂದಿನ ದೇವಾಸುರ ಯುದ್ಧದಲ್ಲಿ ಅಸುರರ ಸೇನೆಯ ನಾಲ್ಕನೆಯ ಭಾಗವನ್ನು ವಾಯುದೇವನು ಸಂಪರಿಸಿರುವನು.

೩೫. **ಅಂಧಂತಮಸ್ಸಿನಲ್ಲಿ ಬೀಳಲು ಆಗಬೇಕಾದ ಸಾಧನೆ:**

ಕೃಷ್ಣಾವತಾರದ ಹಿನ್ನೆಲೆಯಲ್ಲಿ ದೇವತೆಗಳು ಭಗವಂತನನ್ನು ಪ್ರಾರ್ಥಿಸುತ್ತ, ಅಯೋಗ್ಯರು ಅಂಧಂತಮಸ್ಸಿನಲ್ಲಿ ಬೀಳಬೇಕಾದರೆ ಭಗವಂತನಲ್ಲಿ ಹೇಗೋ ಹಾಗೆ ವಾಯುದೇವನಲ್ಲಿ ಮಹತ್ತ್ವಬುದ್ಧಿವುಳ್ಳವರಾಗಬಾರದು: '**ಯೇ ಕೇಶವೇ ತ್ವಯ್ಯಬಹುಮಾನ ಯುಕ್ತಾಸ್ತಥೈವ ವಾಯೌ ನ ಹಿ ತೇ ತಮೋಽಂಧಮ್ । ಯೋಗ್ಯಾಃ ಪ್ರವೇಷ್ಟುಂ.....**' [11-209]

ಆದುದರಿಂದ ಕಲಿ ಮುಂತಾದ ದೈತ್ಯರು ಭಗವಂತನಲ್ಲೂ, ವಾಯುದೇವನಲ್ಲೂ ಬಹುಪ್ರಕಾರಗಳಿಂದ ವಿರೋಧವನ್ನೆಸಗುವಂತೆ ಮಾಡಬೇಕು:

**ನಿತಾಂತಮುತ್ಪಾದ್ಯ ಭವದ್ವಿರೋಧಂ ತಥೈವ ವಾಯೌ ಬಹುಭಿಃ ಪ್ರಕಾರೈಃ ।**
**ಸರ್ವೇಷು ದೇವೇಷು ಚ ಪಾತನೀಯಾಸ್ತಮಸ್ಯಥಾಂಧೇ ಕಲಿಪೂರ್ವಕಾಸುರಾಃ ॥**
[11-210]

**೩೬. ಕಂಸ ವಧಾರ್ಹನೆನಿಸುವಂತೆ ಮಾಡಲು ವಾಯುದೇವನ ಘೋಷಣೆ:**

ಕಂಸ ದೇವಕಿಯ ಗೃಹಪ್ರವೇಶೋತ್ಸವದ ರಥವನ್ನು ತಾನೇ ನಡೆಸಿಕೊಂಡು ಹೋಗುತ್ತಿರಲು ಆಕಾಶದಲ್ಲಿ ಇದ್ದುಕೊಂಡು ವಾಯುದೇವ 'ಇವಳ ಎಂಟನೆಯ ಸುತ ನಿನಗೆ ಮಾರಕ' ಎಂದು ಘೋಷಿಸುವನು. ಯಾಕೆಂದರೆ ಕೃಷ್ಣ ಮುಂದೆ ತನ್ನ ಮಾವನಾದ ಕಂಸನನ್ನು ಕೊಲ್ಲಬೇಕೆಂದರೆ ಕಂಸ ತನ್ನ ತಂದೆತಾಯಿಯಂದಿರಾದ ವಸುದೇವದೇವಕಿಯರ ಬಗ್ಗೆ ಅಪರಾಧವನ್ನೆಸಗುವಂತಾಗಬೇಕು:

**....ತದಾ ಹಿ ವಾಯುರ್ಜಗಾದ ವಾಕ್ಯಂ ಗಗನಸ್ಥಿತೋಽಮುಮ್ ।**

**ವಿನಾಽಪರಾಧಾದ್ಧಿ ತತೋ ಗರೀಯಸೋ**
**ನ ಮಾತುಲೋ ವಧ್ಯತಾಮೇತಿ ವಿಷ್ಣೋಃ ।**
**...ಪಿತ್ರೋರ್ವಿರೋಧಾರ್ಥಮುವಾಚ ವಾಯುಃ ।**
**ಮೃತ್ಯುಸ್ತವಾಸ್ಯಾ ಭವಿತಾಽಷ್ಟಮಃ ಸುತೋ ಮೂಢೇತಿ....** ॥ [12-3, 4, 5]

**೩೭. ಸುಯೋಧನನಲ್ಲಿ ಆವೇಶ:**

**'....ಪ್ರಧಾನವಾಯುಸನ್ನಿಧೇರ್ಬಲಾಧಿಕತ್ವಮಸ್ಯ ತತ್'** [12-38] ಪ್ರಧಾನವಾಯುದೇವನ ಸನ್ನಿಧಾನದಿಂದಾಗಿ ಸುಯೋಧನ ಅಧಿಕಬಲಸಂಪನ್ನನಾಗಿದ್ದನು.

**೩೮. ವಾಯುದೇವನಿಂದ ಭೀಮನ ಪ್ರಾದುರ್ಭಾವ:**

ಯುಧಿಷ್ಠಿರನ ಜನನಾನಂತರ ಪಾಂಡು ಕುಂತಿಯಲ್ಲಿ ಬಾಹುಬಲ ಹಾಗೂ ಜ್ಞಾನಬಲ ಎರಡನ್ನೂ ಪಡೆದಿರುವ ಪುತ್ರನನ್ನು ಪಡೆಯುವಂತೆ ವಾಯುದೇವನನ್ನು ಆಶ್ರಯಿಸಲು ಆದೇಶಿಸುತ್ತ ವಾಯುದೇವನ ಹಿರಿಮೆಯನ್ನು ಹೀಗೆ ಸಾರುವನು: ಯಜ್ಞದಲ್ಲಿ ಅಶ್ವಮೇಧ ಹೇಗೋ ಮನುಷ್ಯದೃಶ್ಯತೇಜಸ್ಸುಗಳಲ್ಲಿ ಭಾಸ್ಕರನು ಹೇಗೋ, ವರ್ಣಗಳಲ್ಲಿ ವಿಪ್ರವರ್ಣ ಹೇಗೋ, ದೇವತೆಗಳಲ್ಲೆಲ್ಲ ಪುರುಷೋತ್ತಮನಾದ ಶ್ರೀಹರಿಯನ್ನು ಹೊರತು ಪಡಿಸಿ ವಾಯುದೇವನೇ ಶ್ರೇಷ್ಠ-

**ಯಜ್ಞಾಧಿಕೋ ಹ್ಯಶ್ವಮೇಧೋ**
**ಮನುಷ್ಯದೃಶ್ಯೇಷು ತೇಜಸ್ಸ್ವಧಿಕೋ ಹಿ ಭಾಸ್ಕರಃ ।**
**ವರ್ಣೇಷು ವಿಪ್ರಸ್ಸಕಲೈರ್ಗುಣೈರ್ವರೋ**
**ದೇವೇಷು ವಾಯುಃ ಪುರುಷೋತ್ತಮಾದೃತೇ ॥** [12-56]

**೩೯. ಸ್ಪರ್ಶಮಾತ್ರದಿಂದ ಭೀಮನ ಜನನ:**

**'.....ಪೃಥಯಾಽಽಹೂತವಾಯುಸಂಸ್ಪರ್ಶಮಾತ್ರಾದಭವತ್ ಬಲದ್ವಯೋ । ಸಮೋ ಜಗತ್ಸ್ವಸ್ತಿ ನ ಯಸ್ಯ ಕಶ್ಚಿತ್....'** [12-53] ಕುಂತಿ ಮಂತ್ರದಿಂದ ವಾಯುದೇವನನ್ನು ಆಹ್ವಾನಿಸಲು ಆಗಮಿಸಿದ ವಾಯುದೇವನ ಸ್ಪರ್ಶಮಾತ್ರದಿಂದ ಬಾಹುಬಲ ಹಾಗೂ ಜ್ಞಾನಬಲದಲ್ಲಿ ಜಗತ್ತಿನಲ್ಲಿ ಅಸಮನೆನಿಸಿದ ಭೀಮಸೇನ ಹುಟ್ಟಿರುವನು.

೪೦. **ವಾಯುದೇವನೇ ಭೀಮ:**

ಭೀಮಸೇನ ಬರೇ ವಾಯುದೇವನ ಆವೇಶದಿಂದ ಕೂಡಿದವನಲ್ಲ; ಬದಲಾಗಿ ವಾಯುದೇವನೇ ಭೀಮನಾಗಿ ಅವತರಿಸಿರುವನು– **'ಸ ವಾಯುರೇವಾಭವದತ್ರ ಭೀಮಃ....'** [12-54]

೪೧. **ಯುಧಿಷ್ಠಿರಾದಿಗಳಲ್ಲಿ ವಾಯುದೇವನ ಆವೇಶ:**

ವಾಯುದೇವನೇ ಭೀಮನಾಗಿ ಅವತರಿಸಿರುವುದಲ್ಲದೆ, ಯುಧಿಷ್ಠಿರ, ಅರ್ಜುನ, ನಕುಲ, ಸಹದೇವ –ಈ ನಾಲ್ವರಲ್ಲೂ ವಾಯುದೇವ ಆವೇಶಗೊಂಡಿದ್ದನು. ಅರ್ಜುನನಲ್ಲಿ ಉಳಿದೆಲ್ಲರಿಗಿಂತ ವಿಶೇಷವಾಗಿ ಆವೇಶಗೊಂಡಿದ್ದನು. ಯುಧಿಷ್ಠಿರನಲ್ಲಿ ಸೌಮ್ಯರೂಪ ದಿಂದಲೂ, ಧನಂಜಯನಲ್ಲಿ ವೀರರೂಪದಿಂದಲೂ, ನಕುಲನಲ್ಲಿ ಶೃಂಗಾರರೂಪದಿಂದಲೂ, ಸಹದೇವನಲ್ಲಿ ಸುನೀತಿರೂಪದಿಂದಲೂ ವಾಯುದೇವನು ಆವೇಶಗೊಂಡಿದ್ದನು–

**ಯುಧಿಷ್ಠಿರಾದ್ಯೇಷು ಚತುರ್ಷು ವಾಯುಃ**
**ಸಮಾವಿಷ್ಟಃ ಫಲ್ಗುನೇऽತೋ ವಿಶೇಷಾತ್ ।**
**ಯುಧಿಷ್ಠಿರೇ ಸೌಮ್ಯರೂಪೇಣ ವಿಷ್ಣೋ**
**ವೀರೇಣ ರೂಪೇಣ ಧನಂಜಯೇऽಸೌ ।**
**......ಶೃಂಗಾರರೂಪೋ ನಕುಲೇ ವಿಶೇಷಾತ್**
**ಸುನೀತಿರೂಪಃ ಸಹದೇವಂ ವಿವೇಶ ॥** [12-129, 131]

೪೨. **ಸಮಸ್ತಗುಣಸಂಪನ್ನನಾಗಿ ಭೀಮಾವತಾರ:**

**ಗುಣೈಃ ಸಮಸ್ತೈಃ ಸ್ವಯಮೇವ ವಾಯು-**
**ರ್ಬಭೂವ ಭೀಮೋ ಜಗದಂತರಾತ್ಮಾ ।** [12-131]

ಜಗದಂತರ್ಯಾಮಿಯಾದ ವಾಯುದೇವ ಸಮಸ್ತಗುಣಸಂಪನ್ನನಾಗಿಯೇ ಭೀಮ ನಾಗಿ ಅವತಾರ ತಾಳಿರುವನು.

೪೩. **ಕೋಮಲರೂಪದ ಅಭಿವ್ಯಕ್ತಿ:**

ಮೂವತ್ತೆರಡು ಲಕ್ಷಣಗಳಿಂದ ಕೂಡಿದ ಶ್ರೇಷ್ಠವಾದ ರೂಪವು ಜ್ಞಾನಿಗಳಿಗಷ್ಟೇ ಮನೋಹರ. ವಾಯುದೇವ ತನ್ನ ಅಂತಹ ರೂಪವನ್ನು ನಕುಲನಲ್ಲಿ ವ್ಯಕ್ತಮಾಡದೆ ಕೇವಲ ಕೋಮಲ ಕಾಂತಿಯನ್ನಷ್ಟೇ ಅಭಿವ್ಯಕ್ತ ಮಾಡಿದನು–

**ಅಪ್ರಾಕೃತಾನಾಂ ತು ಮನೋಹರಂ ಯದ್**
**ರೂಪಂ ದ್ವಾತ್ರಿಂಶಲ್ಲಕ್ಷಣೋಪೇತಮಗ್ರ್ಯಮ್ ।**
**ತನ್ಮಾರುತೋ ನಕುಲೇ ಕೋಮಲಾಭಃ......'** [12-133]

೪೪. **ಪಂಚರೂಪಗಳಲ್ಲಿ:**

ವಾಯುದೇವ ಕೃಷ್ಣಾವತಾರದ 'ಸಂದರ್ಭಗಳಲ್ಲಿ ಪಂಚರೂಪಗಳಲ್ಲಿದ್ದನು–

**ಏವಂ ವಾಯುಃ ಪಂಚರೂಪೋಽತ್ರ ಚಾಸೀತ್** [12-133]

**ಪಿತ್ರೋರ್ರೋಧಾರ್ಥವಾ ಚ ವಾಯುಃ**
**ಮೃತ್ಯುಸ್ತವಾಸ್ಯಾ ಭವಿತಾಷ್ಟಮಃ ಸುತೋ ಮೂಢೇತಿ...** [12-5]

೪೫. **ಸ್ವಾರೋಚಿಷದ ಇಂದ್ರ ವಾಯುಃ**

**ಅತೀತೇಂದ್ರಾ ಏವ ತೇ ವಿಷ್ಣುಪಕ್ಷಾ....**
**ವಾಯುರಥ ದ್ವಿತೀಯಃ ಸ ಭೀಮಸೇನೋ.....** [12-134]

ಆರು ಮನ್ವಂತರಗಳಲ್ಲಿಯ ಇಂದ್ರರು ಕೃಷ್ಣಾದಿಗಳಾಗಿದ್ದು, ಅವರಲ್ಲಿ ಸ್ವಾರೋಚಿಷ ಮನ್ವಂತರದ ರೋಚನ ಎಂಬ ಇಂದ್ರನು ವಾಯುದೇವನು. ಅವನೇ ಭೀಮಸೇನನಾಗಿರುವನು.

೪೬. **ಕಂಸನ ದೇಹದಿಂದ ಕೃಷ್ಣನ ದೇಹಕ್ಕೆ:**

**ದೇಹೇ ಚ ಯೋಽಭವದಮುಷ್ಯರಮೇಶ–**
**ಬಂಧುರ್ವಾಯುಃ ಸ ಕೃಷ್ಣತನುಮಾಶ್ರಯತ್....'** [13-131]

ಕಂಸನ ಸಂಹಾರ ಆಗುತ್ತಲೇ ಅವನ ಶರೀರದಲ್ಲಿದ್ದ ಶ್ರೀಹರಿಯ ಬಂಧು ವಾಯುದೇವ ಕೃಷ್ಣನ ಶರೀರವನ್ನು ಆಶ್ರಯಿಸಿದನು.

೪೭. **ಪಾಂಡವರ ಪರಿಗ್ರಹಣಕ್ಕೆ ವಾಯುದೇವನ ಆದೇಶ:**

ಬದರಿಕಾಶ್ರಮದಿಂದ ಮುನಿಶ್ರೇಷ್ಠರಿಂದ ಕೂಡಿಕೊಂಡು ಹಸ್ತಿನಾಪುರಕ್ಕೆ ಬಂದ ಪಾಂಡವರನ್ನು ಪರಿಗ್ರಹಿಸಲು ದುರ್ಯೋಧನಾದಿಗಳು ನಿರಾಕರಿಸುತ್ತಿದ್ದಾಗ ವಾಯುದೇವನು ಆಕಾಶದಲ್ಲಿದ್ದುಕೊಂಡು ಯಮ–ವಾಯು–ಇಂದ್ರ–ಅಶ್ವಿನೀದೇವತೆಗಳು ಇವರಿಂದ ಪಾಂಡು ಬದುಕಿರುವಾಗಲೇ ಹುಟ್ಟಿರುವ ಯುಧಿಷ್ಠಿರಾದಿಗಳನ್ನು ತ್ಯಜಿಸಬಾರದು. ಯಾಕೆಂದರೆ ವ್ಯಾಸರಿಂದ ಸದಾ ರಕ್ಷಿತರಾಗಿರುವವರು ಇವರು ಎಂದು ಹೇಳುವನು–

**....ಅನುಜಗಾದ ವಾಯುರಾಭಾಷ್ಯ ಕೌರವಗಣಾನ್ ಗಗನಸ್ಥ ಏವ ।**
**ಏತೇ ಹಿ ಧರ್ಮಮರುದಿಂದ್ರಭಿಷಗ್ವರೇಭ್ಯೋ**
**ಜಾತಾಃ ಪ್ರಜೀವತಿ ಪಿತರ್ಯುರುಧರ್ಮಸಾರಾಃ ।**
**ಶಕ್ಯಾಶ್ಚ ನೈವ ಭವತಾಂ ಕ್ವಚಿದಗ್ರಹಾಯ**
**ನಾರಾಯಣೇನ ಸತತಂ ಪರಿರಕ್ಷಿತಾ ಯತ್ ॥** [14-58]

**೪೮. ಬಲರಾಮನಿಗೆ ಎಚ್ಚರಿಕೆ:**

ಬಲರಾಮ ಜರಾಸಂಧನ ವಿರುದ್ಧ ಕಾದಾಡುತ್ತ ಅವನನ್ನು ಕೊಂದು ಹಾಕಬೇಕೆಂದು ಮುಸಲಾಯುಧವನ್ನು ಎತ್ತಿದಾಗ ವಾಯುದೇವ ಬಲರಾಮನನ್ನು ಎಚ್ಚರಿಸುವನು–

**ಅಥಾಬ್ರವೀದ್ ವಾಯುರೇನಂ ನ ರಾಮ**
**ತ್ವಯಾ ಶಕ್ಯತೇ ಮಾಗಧೋಽಯಮ್ ।**
**ವೃಥಾ ನ ತೇ ಬಾಹುಬಲಂ ಪ್ರಯೋಜ್ಯ-**
**ಮಮೋಘಂ ತೇ ಯದ್ ಬಲಂ ತದ್ವದಸ್ತ್ರಮ್ ॥**
**ಅನ್ಯೋ ಹಂತಾ ಬಲವಾನಸ್ಯ ಚೇತಿ....** [16-24, 25]

ಜರಾಸಂಧನನ್ನು ಕೊಲ್ಲಲು ನಿನಗೆ ಶಕ್ಯವಾಗದು. ಅಮೋಘವಾದ ನಿನ್ನ ಬಲಾಬಲವಾಗಲೀ ಅಸ್ತ್ರವಾಗಲೀ ವ್ಯರ್ಥವಾಗಬಾರದು. ಜರಾಸಂಧನನ್ನು ಕೊಲ್ಲುವವನು ಮತ್ತೊಬ್ಬನಿರುವನು.

**೪೯. ವಾಯುದೇವನೊಬ್ಬನೇ ಭಾಗವತಧರ್ಮದಲ್ಲಿರುವವನು:**

**.....ತಸ್ಮಾದೇಕೋ ವಾಯುರೇವ ಧರ್ಮೇ ಭಾಗವತೇ ಸ್ಥಿತಃ ।**
**ಲಕ್ಷ್ಮೀಃ ಸರಸ್ವತೀ ಚೇತಿ ಪರಶುಕ್ಲತ್ರಯಂ ಸ್ಮೃತಮ್ ।** [18-28]

ಲಕ್ಷ್ಮೀ, ವಾಯುದೇವ-ಚತುರ್ಮುಖ ಹಾಗೂ ಸರಸ್ವತಿ-ಭಾರತಿ –ಈ ಮೂರರ ಗಂಪು ಪರಮಾತ್ಮನ ವಿಷಯದಲ್ಲಿ ಅನ್ಯಥಾ ಜ್ಞಾನಕ್ಕೆ ಒಳಗಾಗದೆ ಪವಿತ್ರರಾಗಿದ್ದು 'ಪರಶುಕ್ಲತ್ರಯ' ಎನಿಸುತ್ತಿದ್ದು ಇದರಲ್ಲಿ ಸೇರಿರುವ ವಾಯುದೇವ ಯಾವಾಗಲೂ ಭಾಗವತ ಧರ್ಮದಲ್ಲಿಯೇ ಇರುವವನು.

**೫೦. ಪಾರ್ವತ್ಯಾದಿಗಳು ಭಾರತಿಯಲ್ಲಿ ಪ್ರಾರ್ಥನೆ:**

ಚತುರ್ಮುಖನಿಂದ ಮಾನುಷಜನ್ಮ ಹೊಂದುವಂತೆಯೂ, ಅಲ್ಲಿ ಪರಪುರುಷರ ಸಂಪರ್ಕಕ್ಕೊಳಗಾಗುವಂತೆಯೂ, ಒಂದೇ ದೇಹದಲ್ಲಿ ನಾಲ್ವರೂ ನೆಲೆಸುವಂತಾಗಲೆಂದೂ ಶಪ್ತರಾದ ಉಮಾದಿ ನಾಲ್ಕು ದೇವಿಯರು ಮಾನುಷಜನ್ಮ ಪಡೆದಾಗ ತಮಗೆ ಪರಪುರುಷ ಎನಿಸುವ ವಾಯುದೇವನ ಸಂಪರ್ಕ ಮಾತ್ರ ಆಗುವಂತಾಗಬೇಕೆಂದು ಭಾರತಿಯಲ್ಲಿ ಪ್ರಾರ್ಥಿಸಿಕೊಳ್ಳುವರು–

**ದೇವಿ ನೋ ಮಾನುಷಂ ಪ್ರಾಪ್ಯಮನ್ಯಗಾತ್ವಂ ಚ ಸರ್ವಥಾ ।**
**ತತ್ರಾಪಿ ಮಾರುತಾದನ್ಯಂ ನ ಸ್ಪಶೇಮ ಕಥಂಚನ ।**
**.....ಅತಸ್ತ್ವಯ್ಯೈಕದೇಹತ್ವಮಿಚ್ಛಾವೋ ದೇವಿ**
**ಜನ್ಮಸು....ತ್ವಾಂ ನಾನ್ಯೋ ಮಾರುತಾದ್ ವ್ರಜೇತ್ ।**
**ನಿಯಮೋಽಯಂ ಹರೇರ್ಯಸ್ಮಾದನಾದಿರ್ನಿತ್ಯ ಏವ ಚ ।**
**ಅತಸ್ತಯ್ಯೈಕದೇಹಾ ನೋ ನಾನ್ಯ ಆಪ್ನೋತಿ ಮಾರುತಾತ್....॥** [18-116, 117]

ಭಾರತಿಯನ್ನು ಮಾರುತನಲ್ಲದೆ ಇನ್ನಾರೂ ಸ್ಪರ್ಶಿಸುವಂತಿಲ್ಲ ಎಂಬುದು ಶ್ರೀಹರಿ ವಿಧಿಸಿರುವ ನಿಯಮ. ಅಂತಹ ಭಾರತಿಯ ಜೊತೆಗೆ ಏಕದೇಹದಲ್ಲಿದ್ದರೆ ವಾಯುದೇವ ನನ್ನು ಬಿಟ್ಟು ಇತರ ಪುರುಷರ ಸಂಪರ್ಕಕ್ಕೆ ಅವಕಾಶವಿಲ್ಲ ಎಂದು ಉಮಾದೇವಿ ಮುಂತಾದವರು ಭಾರತಿಯಲ್ಲಿ ತಾವೆಲ್ಲ ಒಂದು ದೇಹದಲ್ಲಿ ಆಕೆಯ ಜೊತೆಗಿರುವುದಕ್ಕೆ ಪ್ರಾರ್ಥಿಸಿಕೊಳ್ಳುವರು.

ಅಂತೂ ಭಾರತಿಯ ಜೊತೆಗೆ ಏಕದೇಹದಲ್ಲಿರುವ ಯೋಜನೆಯನ್ನು ಉಮಾದಿಗಳು ಹಮ್ಮಿಕೊಳ್ಳಲು ಮುಖ್ಯ ಕಾರಣ ತಮಗೆ ವಾಯುದೇವ ಬಿಟ್ಟು ಉಳಿದ ಪರಪುರುಷರ ಸಂಪರ್ಕ ಆಗಬಾರದೆಂಬುದು.

೫೧. ದ್ರೌಪದಿಯ ಜೊತೆ ವಾಯುದೇವನ ರಮಣ:

**ಧರ್ಮಾತ್ಮಜಾದಿಷು ಮರುತ್ ಪ್ರವಿಷ್ಟ ಏಷಾಂ**
**ಬುದ್ಧಿಂ ವಿಮೋಹ್ಯ ರಮತೇ ಸತತಂ ತಯಾ ಯತ್ ।**
**ಶುದ್ಧೈವ ಸಾ ಹಿ ತತ ಏವ........** [19-185]

ಧರ್ಮರಾಜಾದಿಗಳಲ್ಲಿ ಪ್ರವಿಷ್ಟನಾದ ವಾಯುದೇವನು ಯಾವಾಗಲೂ ಅವರ ಬುದ್ಧಿಯನ್ನು ಭಾರತೀದೇವಿಯ ವಿಷಯದಲ್ಲಿ ನಿಷ್ಕ್ರಿಯಗೊಳಿಸಿಯೇ ಅವಳೊಡನೆ ರಮಿಸುತ್ತಿದ್ದನು. ಆದ್ದರಿಂದ ದ್ರೌಪದಿಗೆ ಯಮಾದಿಗಳ ಸಂಪರ್ಕವಾಗದ ಪ್ರಯುಕ್ತ ಅವಳು ಆ ವಿಷಯದಲ್ಲಿ ಶುದ್ಧಳಾಗಿಯೇ ಇರುತ್ತಿದ್ದಳು.

**....ಏವಂ ಸ ವಾಯುರನುವಿಷ್ಟಯುಧಿಷ್ಠಿರಾದಿ**
**ಭೀಮಾತ್ಮನೈವ ರಮತೇ ಸತತಂ ತಯೈಕಃ ।** [19-187]

ಹೀಗೆ ಒಬ್ಬನೇ ವಾಯು ಧರ್ಮರಾಜಾದಿಗಳಲ್ಲಿ ಆವೇಶಗೊಂಡು ನಾಲ್ಕು ಅಂಶ ರೂಪಗಳಿಂದಲೂ ಭೀಮರೂಪದಿಂದಲೂ ಭಾರತೀದೇವಿಯೊಡನೆ ಯಾವಾಗಲೂ ರಮಿಸುತ್ತಿದ್ದನು.

೫೨. ಕೃಷ್ಣನ ವಿರುದ್ಧ ಕಾದಾಡಿದ್ದು ವಾಯವ್ಯ ದಿಕ್ಕಿನ ಅಭಿಮಾನಿ:

ಪಾರಿಜಾತಾಪಹಾರದ ಸಂದರ್ಭದಲ್ಲಿ ಶ್ರೀಕೃಷ್ಣನ ವಿರುದ್ಧ ಕಾದಾಡಿದ ದೇವತೆಗಳಲ್ಲಿ ಒಬ್ಬನಾದ 'ಸಮೀರಣ' ಎಂದರೆ ಪ್ರಧಾನವಾಯುವಿನ ಪುತ್ರ ವಾಯವ್ಯದಿಗಭಿಮಾನಿ ಹೊರತು ಪ್ರಧಾನವಾಯು ಅಲ್ಲ. ಅಸುರಾವಿಷ್ಟರಾಗಿದ್ದ ಇತರ ದೇವತೆಗಳಿಗೆ ಹೇಗೋ ಹಾಗೆ ಆ ವಾಯವ್ಯದಿಗಭಿಮಾನಿಗೂ ಶ್ರೀಕೃಷ್ಣ ತನ್ನ ಶಾರ್ಙ್ಗಧನುಸ್ಸಿನ ಧ್ವನಿಯಿಂದಲೇ ತನ್ನ ಸ್ವರೂಪ ತಿಳಿಯುವಂತೆ ಮಾಡಿದ್ದ–

**....ಪ್ರಧಾನವಾಯೋಸ್ತನಯಂ ತು ವಾಯುಂ**
**ಕೋಣಾಧಿಪಂ ನಿಬೋಧ್ಯ ಶಾಂರ್ಗೋತ್ಥರವೈಃ**
**ಸ್ವಕಾಂ ತನುಮಾವೇಶಿತಾನಾಮಸುರೈರಗಾದ್ಧರಿಃ ।** [20-129, 130]

೫೩. **ವಾಯುದೇವನ ಗದೆ ಭೀಮನಿಗೆ:**

ಮಯ ವೃಕೋದರನಿಗೆ ಒಂದು ಗದೆಯನ್ನು ತಂದುಕೊಟ್ಟಿದ್ದ. ಅದು ವಾಯುದೇವ ಧರಿಸಿದ ಗದೆಯೇ ಆಗಿತ್ತು. ವಾಯುದೇವನ ಅನುಗ್ರಹದಿಂದ ಅದು ಮುಚುಕುಂದನಿಗೆ ಲಭ್ಯವಾಗಿತ್ತು. ಅದನ್ನು ಮಯ ಭೀಮಸೇನನಿಗೆ ನೀಡಿದ್ದ–

**...ದದೌ ಗದಾಂ ವೃಕೋದರೇ ಸ ವಾಯು**
**ಧಾರಿತಾಂ ಗದಾಂ ಹಿ ಯೌವನಾಶ್ವಭೂಭೃತಾ ।**
**ಪ್ರಸಾದತೋಽಸ್ಯ ಲಂಭಿತಾಂ.....** [21-1, 2]

೫೪. **ಪ್ರದ್ಯುಮ್ನನಿಗೆ ವಾಯುದೇವನ ಸೂಚನೆ:**

ಪ್ರದ್ಯುಮ್ನ ಸಾಲ್ವನನ್ನು ಕೊಲ್ಲಲು ಹೊರಟಾಗ ಆಕಾಶದಲ್ಲಿದ್ದುಕೊಂಡು ವಾಯು ದೇವ ಹೀಗೆ ಸೂಚಿಸುವನು–

**'....ಅಶೃಣೋದ್ ವಚಃ ಖೇ । ನಾರಾಯಣೇನ ಹಿ ಪುರಾ ಮನಸಾಭಿಕ್ಲಪ್ತಂ ಕೃಷ್ಣಾವತಾರಮುಪಗಮ್ಯ ನಿಹನ್ಮಿ ಸಾಲ್ವಮ್ । ....ವಧ್ಯಸ್ತ್ವಯಾ ನ ಹಿ.....'** [22-44, 45, 46] ನಾರಾಯಣನು ತನ್ನ ಕೃಷ್ಣಾವತಾರದಲ್ಲಿ ಸಾಲ್ವನನ್ನು ಕೊಲ್ಲುವುದಾಗಿ ಸಂಕಲ್ಪಿಸಿರುವುದರಿಂದ ಸಾಲ್ವ ನಿನ್ನಿಂದ ಹತನಾಗುವವನಲ್ಲ.

**...ತಮಿಮಂ ವಿನಿವರ್ತಯೇಽಹಂ**
**ಸಾಲ್ವಂ ಹೃದಿ ಸ್ಥಿತ ಇತೀರಿತಮೀರಣೇನ ।** [22-46]

ಅವನ ಹೃದಯದಲ್ಲಿದ್ದುಕೊಂಡು ಪ್ರೇರಿಸಿ ಹಿಂತಿರುಗುವಂತೆ ನಾನು ಮಾಡುವೆನೆಂದು ವಾಯುದೇವನು ತಿಳಿಸುವನು.

೫೫. **ಆಂಜನೇಯಭೀಮರ ಸಮಾಗಮ:**

ಸೌಗಂಧಿಕಾಪುಷ್ಪಗಳ ಆಪರಣಕ್ಕಾಗಿ ತೆರಳುತ್ತಿದ್ದ ಭೀಮಸೇನನಿಗೆ ಆಂಜನೇಯನ ಸಮಾಗಮವಾದಾಗ ಅವರಿಬ್ಬರೂ ಪರಸ್ಪರವಾಗಿ ತಿಳಿಯದವರಂತೆ ನಡೆದುಕೊಳ್ಳುವರು. ಯಾಕೆಂದರೆ ದೇವತೆಗಳು ಮನುಷ್ಯರಾಗಿ ಅವತರಿಸಿದಾಗ ಎರಡು ನಡತೆಗಳನ್ನು ಅಳವಡಿಸಿಕೊಳ್ಳಬೇಕೆಂದು ತೋರಿಸಿಕೊಡುವ ಉದ್ದೇಶದಿಂದ. ಆ ಎರಡು ನಡತೆಗಳು ಹೀಗಿವೆ–

ಅ) ದೇವತೆಗಳು ಮನುಷ್ಯರಾಗಿ ಅವತರಿಸಿದಾಗ ತನ್ನ ರೂಪದ ವಿಷಯದಲ್ಲಿ ಪರಕೀಯ ರೂಪವೆಂಬಂತೆ ನಡೆದುಕೊಳ್ಳಬೇಕು.

ಆ) ದೇವತೆಗಳು ತಮ್ಮ ಮೂಲರೂಪದ ದಿವ್ಯಶಕ್ತಿಯನ್ನು ಅವತಾರರೂಪದಲ್ಲಿ ಸ್ವೀಕರಿಸಬಾರದು. ಬದಲಾಗಿ ಮನುಷ್ಯರ ಸ್ವಭಾವಾನುಸಾರವಾಗಿಯೇ ಇರಬೇಕು.

**ಜಾನನ್ನಪ್ಯೇನಂ ಸ್ವೀಯರೂಪಂ ಸ ಭೀಮಶ್ಚಿಕ್ರೀಡ ಏತೇನ ಯಥಾ ಪರೇಣ ।**

ಧರ್ಮೋ ದೇವಾನಾಂ ಪರಮೋ ಮಾನುಷತ್ವೇ
ಸ್ವೀಯೇ ರೂಪೇಽಪ್ಯಸ್ಯ ತದೇವ ವೃತ್ತಿಃ ।
ಅನಾದಾನಂ ದಿವ್ಯಶಕ್ತೇರ್ವಿಶೇಷಾನ್
ನರಸ್ವಭಾವೇ ಸರ್ವದಾ ಚೈವ ವೃತ್ತಿಃ ॥ [22-292, 293]

೫೬. **ಇಚ್ಛಾಶಕ್ತಿ: ಪ್ರಾಯಶೋ ಮಾರುತಸ್ಯ:**

ಭಗವಂತನ ಅವತಾರಗಳಲ್ಲಿ ಅವನ ಮೂಲರೂಪದ ಎಲ್ಲ ಗುಣಗಳೂ ಯಾವಾಗಲೂ ವ್ಯಕ್ತವಾಗುತ್ತಿರುತ್ತವೆ. ಇತರ ದೇವತೆಗಳಿಗೆ ಕಾರಣವಿಶೇಷವಿದ್ದಾಗ ಅವತಾರಗಳಲ್ಲಿ ಗುಣಗಳು ವ್ಯಕ್ತವಾಗುವವು. ಅಲ್ಲದೆ, ಮೂಲರೂಪದ ಎಲ್ಲ ಗುಣಗಳು ವ್ಯಕ್ತವಾಗಲಾರವು. ವಾಯುದೇವನಿಗೆ ಭಗವಂತನಂತೆ ಅವತಾರರೂಪಗಳಲ್ಲಿ ಮೂಲರೂಪದ ಗುಣಗಳೆಲ್ಲ ವ್ಯಕ್ತಗಳಾಗದಿದ್ದರೂ ಬಯಸಿದಾಗ ಎಲ್ಲ ಗುಣಗಳೂ ಪ್ರಾಯಃ ವ್ಯಕ್ತವಾಗುವವು. ಹೊರತು ಇತರ ದೇವತೆಗಳಿಗೆ ಹೇಗೆ ಕಾರಣವಿಶೇಷವಿದ್ದಾಗಷ್ಟೇ ಅಭಿವ್ಯಕ್ತವಾಗುವವೋ ಹಾಗೆಯೇ ಕೆಲವು ಗುಣಗಳಷ್ಟೇ ಅಭಿವ್ಯಕ್ತವಾಗುವವೋ ಹಾಗಲ್ಲ. ಕಾರಣವಿಶೇಷವಿಲ್ಲದಿದ್ದರೂ ಬಯಸಿದಲ್ಲಿ ಗುಣಗಳೆಲ್ಲ ವ್ಯಕ್ತವಾಗುವವು–

ನೈವಾವ್ಯಕ್ತಿಃ ಕಾಚಿದಸ್ತೀಹ ವಿಷ್ಣೋಃ ಪ್ರಾದುರ್ಭಾವೇಷ್ವತಿ ಸುವ್ಯಕ್ತಶಕ್ತೇಃ ।
ಇಚ್ಛಾವ್ಯಕ್ತಿಃ ಪ್ರಯಶೋ ಮಾರುತಸ್ಯ ತದನ್ಯೇಷಾಂ ವ್ಯಕ್ತತಾ ಕಾರಣೇನ ॥
[22-295]

ದೇವಾನಾಂ ಹಿ ನೃಜಾತಾನಾಮಲ್ಪಂ ವ್ಯಕ್ತಂ ಭವೇದ್ ಬಲಮ್ ।
ಇಚ್ಛಯಾ ವ್ಯಕ್ತತಾಂ ಯಾತಿ ವಾಯೋರನ್ಯೇಷು ತಚ್ಚ ನ ।
ನಿತ್ಯಂ ವ್ಯಕ್ತಾ ಗುಣಾ ವಿಷ್ಣೋರಿತಿ ಶಾಸ್ತ್ರಸ್ಯ ನಿರ್ಣಯಃ ॥
[22-362, 363]

೫೭. **ಹೇತಿರಾಕ್ಷಸನಲ್ಲಿ ವಾಯುವಿನ ಆವೇಶ:**

ದ್ರೌಪದಿಯನ್ನು ಅಟ್ಟಿಸಿಕೊಂಡು ಬಂದ ಕೀಚಕನನ್ನು ಬೀಳಿಸಲು ಸೂರ್ಯನಾರಾಯಣನು ನಿಯೋಜಿಸಿದ ಹೇತಿ ಎಂಬ ರಾಕ್ಷಸನಲ್ಲಿ ವಾಯುದೇವ ಆವೇಶಗೊಂಡು ಕೀಚಕನನ್ನು ಬೀಳಿಸಿದನು–

.....ವಾಯುಸ್ತಾದವಿಶ್ಯ ತು ಕೀಚಕಂ ತಂ ನ್ಯಪಾತಯತ್....' [23-24]

೫೮. **ನಾರಾಯಣಾಸ್ತ್ರಕ್ಕೆ ವಾಯುದೇವ ಅಭಿಮಾನಿ:**

ಅಶ್ವತ್ಥಾಮಾಚಾರ್ಯರು ಪ್ರಯೋಗಿಸಿದ ನಾರಾಯಣಾಸ್ತ್ರಕ್ಕೆ ಅಭಿಮಾನಿ ವಾಯುದೇವ–

....ಅಸ್ತ್ರಾಭಿಮಾನೀ ವಾಯುರ್ಹಿ..... [26-310]

೫೯. **ವಾಯುಶಿವರನ್ನಲ್ಲದೆ ಇತರರಲ್ಲಿಲ್ಲ:**

ಮಹಾಭಾರತಯುದ್ಧದ ಹದಿನಾರನೆಯ ದಿನದ ಯುದ್ಧದಲ್ಲಿ ಭೀಮ ಅಶ್ವತ್ಥಾಮಾಚಾರ್ಯರ ಕಾದಾಟವನ್ನು ಕಂಡು ದೇವಗಂಧರ್ವಾದಿಗಳು–

**ನೈತಾದೃಶೀ ಜ್ಞಾನಸಂಪದ್ ಬಲಂ ವಾ**
**ದ್ವಯಂ ಕುತೋ ವಾಯುಮೃತೇ ಶಿವಂ ತಥಾ....'** [27-7]

ವಾಯುದೇವನ ಹೊರತಾಗಿ ಹಾಗೂ ರುದ್ರನ ಹೊರತಾಗಿ ಇಂತಹ ಜ್ಞಾನಸಂಪತ್ತಾಗಲೀ ಬಲವಾಗಲೀ ಇನ್ನೆಲ್ಲೂ ಇಲ್ಲ ಎಂದು ಉದ್ಗರಿಸಿದರು.

೬೦. **ಅನುಗೀತಾಪರ್ವದಲ್ಲಿ ವಾಯುದೇವನ ಪ್ರಸ್ತಾವ:**

ಮಹಾಭಾರತದ ಅನುಗೀತಾಪರ್ವದ ಪ್ರಮೇಯಗಳನ್ನು ಐದಾರು ಶ್ಲೋಕಗಳಲ್ಲಿ ಸಂಗ್ರಹಿಸುತ್ತ, ಸರ್ವೋತ್ತಮ ಭಗವಂತನಾದರೆ ಅವನ ಬಳಿಕ ರಮಾದೇವಿ ಎಂದು ನಿರೂಪಿಸುವಾಗ ಮುಖ್ಯಪ್ರಾಣನಿಗಿಂತ ಶ್ರೇಷ್ಠಳಾದ ರಮಾ– **'ಪ್ರಾಣೋಚ್ಚಾ ತದಧೋ ರಮಾ'** [30-51] ಎಂದು ಉಲ್ಲೇಖಿಸುವ ಮೂಲಕ ರಮಾದೇವಿಯ ಬಳಿಕ ಮುಖ್ಯಪ್ರಾಣ ಬರುವನೆಂದು ತಾರತಮ್ಯವನ್ನು ಸೂಚಿಸಲಾಗಿದೆ.

ಹಾಗೆಯೇ **'ಹುತಾಶ'**ನಾಮಕನಾದ ಭಗವಂತನೇ ಜಗದ್ಧಾರಕನೆಂದು ನಿರೂಪಿಸುವಾಗ **'ವಾಕ್‌ಪ್ರಾಣಮಧ್ಯಗೋ ನಿತ್ಯಂ ಧಾರಯತ್ಯಖಿಲಂ ಜಗತ್'** [30-52] ಭಾರತಿ ಹಾಗೂ ಮುಖ್ಯಪ್ರಾಣರ ಹೃದಯದಲ್ಲಿ ನೆಲೆಸಿದ್ದುಕೊಂಡು ಅವರ ಮಾಧ್ಯಮದಲ್ಲಿ ಭಗವಂತನು ಜಗತ್ತನ್ನು ಧರಿಸುತ್ತಿರುವನೆಂದು ಸೂಚಿಸಲಾಗಿದೆ.

೬೧. **ಋಜುವಿನಲ್ಲಿ ದೋಷ ಇರದು:**

ಭೀಮಸೇನನ ದೇಹದ ಪತನಕ್ಕೆ ಪ್ರಾರಬ್ಧಕರ್ಮದ ನಾಶವೇ ಕಾರಣ ಹೊರತು ಭಾರೀ ಅಹಂಕಾರ ಮುಂತಾದ ಯಾವುದೇ ದೋಷ ಕಾರಣವಲ್ಲ ಎಂದು ಸಮರ್ಥಿಸುತ್ತ ಭೀಮಸೇನನ ಮೂಲರೂಪದ ಸ್ವರೂಪವನ್ನು ಹೀಗೆ ಪ್ರಶಂಸಿಸಲಾಗುವುದು–

**ಅನಾದಿಕಾಲತಃ ಸರ್ವದೋಷಹೀನಾ ಗುಣಾಧಿಕಾಃ ।**
**ಸರ್ವಜೀವಗಣೇಭ್ಯೋ ಯೇ ತೇ ಹಿ ವಾಯುತ್ವಮಾಪ್ನುಯುಃ ।**
**ಋಜವೋ ನಾಮ ಯೇ ದೇವಾಃ ದೇವಾನಾಮಪಿ ದೇವತಾಃ ॥**
[32-77,78]

ಅನಾದಿಕಾಲದಿಂದ ಯಾವುದೇ ದೋಷವಿಲ್ಲದ, ಅಧಿಕಗುಣಸಂಪನ್ನರಾದ ಸರ್ವಜೀವಸಮೂಹಕ್ಕಿಂತಲೂ ವಿಶಿಷ್ಟರಾದ, ದೇವತೆಗಳಿಗೂ ದೇವತೆಗಳೆನಿಸಿದ ಋಜುಗಳೆಂದು ಪ್ರಸಿದ್ಧರಾದವರು ವಾಯುಪದವಿಯನ್ನು ಏರುವರು.

## ಪಾತ್ರ, ಸ್ಥಾನಮಾನಗಳ ಪರಿಚಯ:

ಹೀಗೆ ಮಹಾಭಾರತಾದಿಗಳ ಸುಮಾರು ಅರುವತ್ತು ಪ್ರಸಂಗಗಳಲ್ಲಿ ಕೆಲವೆಡೆ ಅಸ್ಪಷ್ಟ ವಾಗಿರುವ, ಇನ್ನು ಕೆಲವೆಡೆ ಗುಪ್ತವಾಗಿರುವ, ಮತ್ತೆ ಕೆಲವೆಡೆ ಸಂಕ್ಷಿಪ್ತವಾಗಿರುವ ವಾಯು ದೇವನ ಪ್ರಸ್ತಾವಗಳಿಗೆ ಬೆಳಕುಚೆಲ್ಲಿ ಸ್ಪಷ್ಟಪಡಿಸಿ, ವಿಸ್ತಾರಗೊಳಿಸಿ ಅವನ ಪಾತ್ರವನ್ನು, ಸ್ಥಾನಮಾನಗಳನ್ನು ಚೆನ್ನಾಗಿ ಗುರುತಿಸಿಕೊಡಲಾಗಿದೆ.

*

# • ಭಾಗವತದಲ್ಲಿ ವಾಯುದೇವನ ಪ್ರಸ್ತಾವ •

ಬ್ರಹ್ಮಸೂತ್ರಗಳ ಅರ್ಥವಾಗಿ, ಮಹಾಭಾರತದ ವಿನಿರ್ಣಾಯಕವಾಗಿ, ಗಾಯತ್ರಿಯ ಭಾಷ್ಯರೂಪವಾಗಿ, ವೇದಾರ್ಥಗಳಿಂದ ತುಂಬಿ ತುಳುಕುತ್ತಿರುವಂತಹದ್ದಾಗಿ, ಪುರಾಣಗಳ ಸಾರರೂಪವಾಗಿ ಮೆರೆಯುತ್ತಿರುವ[57] ಭಾಗವತ ವಾಯುದೇವನ ವ್ಯಕ್ತಿತ್ವವನ್ನು ಹೇಗೆ ಪರಿಚಯಿಸಿಕೊಡುತ್ತಿದೆ ಎಂಬುದು ಕುತೂಹಲಕಾರಿ ಸಂಗತಿ.

**೧. ಉಕ್ಥನಿಂದ ರಹಿತ ಮೃತಕ:**

ಶ್ರೀಕೃಷ್ಣ ಅದೃಶ್ಯನಾದಮೇಲೆ ತುಂಬ ದುಃಖಕ್ಕೊಳಗಾದ ಅರ್ಜುನ ಆ ದುಃಖ ವನ್ನು ಯುಧಿಷ್ಠಿರನೆದುರು ತೋಡಿಕೊಳ್ಳುತ್ತ, ಶ್ರೀಕೃಷ್ಣನ ವಿಯೋಗದಿಂದಾಗಿ ಇಡೀ ಲೋಕ 'ಅಪ್ರಿಯದರ್ಶನ'ವಾಗಿದೆ ಎಂದು ತಿಳಿಸಿ, ಅದಕ್ಕೆ ಕೊಡುವ ದೃಷ್ಟಾಂತ –ಉಕ್ಥನಿಂದ ರಹಿತನಾದವನು ಹೇಗೆ ಸತ್ತವನೆಂದು ಪರಿಗಣಿಸಲ್ಪಡುವನೋ ಹಾಗೆ. ಉಪನಿಷತ್ತುಗಳಲ್ಲಿ ದೇವರನ್ನು ಹೇಗೋ ಹಾಗೆ ಪ್ರಾಣದೇವ ನನ್ನೂ 'ಉಕ್ಥ' ಎಂದು ಕರೆಯಲಾಗಿದೆ. ಚತುರ್ಮುಖನ ಶರೀರದಿಂದ ಪ್ರಾಣನು ಹೊರಟುಹೋಗಲು ಆ ಶರೀರ ಬೀಳುವುದು. ಮುಖ್ಯಪ್ರಾಣನು ಪ್ರವೇಶಿಸಲು ಆ ಶರೀರ ಎದ್ದುನಿಲ್ಲುವುದು. ಹೀಗೆ ಶರೀರ ಎದ್ದುನಿಲ್ಲು ವುದಕ್ಕೆ ಕಾರಣನಾಗಿರುವುದರಿಂದಲೇ ಮುಖ್ಯಪ್ರಾಣನನ್ನು ಉಳಿದ ತತ್ತ್ವಾಭಿಮಾನಿ ದೇವತೆಗಳು 'ಉಕ್ಥ' –ಎಂದು ಸ್ತುತಿಸುವರು.[58]

ಆದ್ದರಿಂದ ಉಪನಿಷತ್ತಿನಲ್ಲಿ ಉಕ್ಥನೆಂದು ಪ್ರಸಿದ್ಧನಾಗಿರುವ ಮುಖ್ಯಪ್ರಾಣನು ಹೊರಟುಹೋಗಲು ಆ ದೇಹ ಹೇಗೆ ಹೆಣ ಎನಿಸುವುದೋ ಹಾಗೆ ಎಂದು ಮುಖ್ಯ ಪ್ರಾಣನಿಂದ ರಹಿತವಾದ ದೇಹದ ದೃಷ್ಟಾಂತವನ್ನೇ ಅಲ್ಲಿ ಕೊಡಲಾಗಿದೆ ಎಂದು ನಿರ್ಧರಿಸಿ ಕೊಳ್ಳಬಹುದಾಗಿದೆ.

---

57. ಅರ್ಥೋಽಯಂ ಬ್ರಹ್ಮಸೂತ್ರಾಣಾಂ ಭಾರತಾರ್ಥನಿರ್ಣಯಃ ।
ಗಾಯತ್ರೀಭಾಷ್ಯರೂಪೋಽಸೌ ವೇದಾರ್ಥಪರಿಬೃಂಹಿತಃ ।
ಪುರಾಣಾನಾಂ ಸಾರರೂಪಃ ಸಾಕ್ಷಾದ್ ಭಗವತೋದಿತಃ ॥
.........ಶ್ರೀಮದ್ಭಾಗವತಾಭಿಧಃ ॥

*– ಗಾರುಡೇ (ಭಾಗ.ತಾ.ನಿ. 1-1-1.)*

* ಉಕ್ಥೇನ ರಹಿತೋ ಹ್ಯೇಷ ಮೃತಕಃ ಪ್ರೋಚ್ಯತೇ ಯಥಾ ।

*– ಭಾಗ. 1-14-6.*

58. .......ತತ್ ಪ್ರಾಣೇ ಪ್ರಪನ್ನೇ ಉದತಿಷ್ಠತ್ ತದುಕ್ಥಮಭವತ್...... ।

*– ಐ.ಉ.ಭಾ. 1-4-3-9.*

೨. ಬ್ರಹ್ಮಯಜ್ಞದಲ್ಲಿ ವಾಯುದೇವನ ಪ್ರಸ್ತಾವ:

ಯುಧಿಷ್ಠಿರನ ದೇಹೋತ್ಕ್ರಮಣದ ಪ್ರಸಂಗದಲ್ಲಿ ಅಳವಡಿಸಿಕೊಳ್ಳಲಾದ 'ಬ್ರಹ್ಮ ಯಜ್ಞ'ವನ್ನು 'ವಾಚಂ ಜುಹಾವ.... ಆತ್ಮಾನಮವ್ಯಯೇ' –ಎಂಬ ಎರಡು ಶ್ಲೋಕಗಳಲ್ಲಿ [1-15-10, 11] ನಿರೂಪಿಸಲಾಗಿದ್ದು ಅದರ ಸ್ಪಷ್ಟೀಕರಣವನ್ನು ಶ್ರೀ ಮಧ್ವರು 'ನಾರಾಯಣಾಧ್ಯಾತ್ಮ' ಹಾಗೂ 'ಬ್ರಹ್ಮತರ್ಕ'ದ ಮೂಲಕ ನಡೆಸಿರುವರು. ಇವುಗಳಲ್ಲಿ ಮುಖ್ಯಪ್ರಾಣನ ಹಾಗೂ ಅವನ ಪ್ರಾಣಾದಿರೂಪಗಳ ಪರಸ್ಪರ ಜನನವನ್ನು ತಿಳಿಸಿ, ಯಾರ ಜನನ ಯಾರ ಮೂಲಕ ಆಗಿದೆಯೋ ಅವರಲ್ಲಿ ಅವರು ಮುಂದೆ ಲಯ ಹೊಂದುವರೆಂಬ ತಿಳುವಳಿಕೆಯೇ 'ಬ್ರಹ್ಮಯಜ್ಞ' –ಎಂದು ಸ್ಪಷ್ಟಪಡಿಸಲಾಗಿದೆ.

೩. ಪ್ರಾಣಜಯ:

ಶುಕಾಚಾರ್ಯರು ಪರೀಕ್ಷಿತನಿಗೆ ಧಾರಣಾದ ಪದ್ಧತಿಯನ್ನು ತಿಳಿಸುತ್ತ, '.....ಪ್ರಾಣಾನ್ನಿ ಯಚ್ಛೇನ್ಮನಸಾ ಜಿತಾಸುಃ' [2-2-16] ಎಂಬುದಾಗಿ ಮನಸ್ಸಿನ ಮೂಲಕ ಇಂದ್ರಿಯ ಗಳನ್ನು ನಿಯಮಿಸಿ, ಬಳಿಕ 'ಪ್ರಾಣನನ್ನು ಜಯಿಸಬೇಕು' –ಎಂದಿರುವರು. ಷಾಡ್ಗುಣ್ಯದ ಮೂಲಕ ಶ್ರೀ ಮಧ್ವರು ತಿಳಿಸುವರು –ಭಕ್ತಿಯಿಂದ ಪ್ರಾಣನನ್ನು ಒಲಿಸಿಕೊಂಡವನೇ ಜಿತಪ್ರಾಣನೆನಿಸುವನೆಂದು.59

೪. ಯಾವ ಯಾವ ನಾಡಿಯಲ್ಲಿ ಯಾವ ಯಾವ ವಾಯು?

ಶುಕಾಚಾರ್ಯರು ಗಾಳಿಯನ್ನು ಬ್ರಹ್ಮನಾಡಿಯಿಂದ ಎದೆಗೆ ಒಯ್ಯಬೇಕೆಂದು ತಿಳಿಸುವಾಗ ಬ್ರಹ್ಮನಾಡಿಯನ್ನು 'ಉದಾನಗತಿ' ಉದಾನವಾಯು ಸಂಚರಿಸುವ ದಾರಿ ಎಂದು ಉಲ್ಲೇಖಿಸಿರುವರು. ಆ ಸಂದರ್ಭದಲ್ಲಿ ಶ್ರೀ ಮಧ್ವರು ಮಹಾಭಾರತದ ಮೂಲಕ ಯಾವ ಯಾವ ನಾಡಿಯಲ್ಲಿ ಯಾವ ಯಾವ ವಾಯು ಇರುವುದೆಂಬುದನ್ನು ಹೀಗೆ ತಿಳಿಸಿರುವರು –ಇಡಾನಾಡಿಯಲ್ಲಿ ಪ್ರಾಣ, ಪಿಂಗಲಾದಲ್ಲಿ ಅಪಾನ, ಎಲ್ಲ ಸಂಧಿಗಳಲ್ಲಿ ವ್ಯಾನ, ಬ್ರಹ್ಮನಾಡಿಯಲ್ಲಿ ಉದಾನ, ಎಲ್ಲೆಡೆ ಸಮಾನ ಸಂಚರಿಸುವುದು.60

೫. ಯೋಗೇಶ್ವರರ ಪ್ರಾಪ್ಯ ಲೋಕ:

ಶುಕಾಚಾರ್ಯರು ಯೋಗೇಶ್ವರರಿಂದ ಹೊಂದಲು ಯೋಗ್ಯವಾದ ಲೋಕವನ್ನು ತಿಳಿಸುತ್ತ ಭೂಮಿ, ಅಂತರಿಕ್ಷ ಹಾಗೂ ಸ್ವರ್ಗ ಈ ಮೂರು ಲೋಕಗಳಿಗಿಂತ ಮೇಲಿನ ಲೋಕಗಳನ್ನು ಹೊಂದುವರೆಂದು ತಿಳಿಸಿ 'ಅಪ್ರತೀಕಾಲಂಬನ'ರೆನಿಸಿರುವ ಮುಖ್ಯ ಅಧಿಕಾರಿ ಗಳು ಪವನಾಂತರ್ಯಾಮಿ ಶ್ರೀಹರಿ ಉಳ್ಳ ವೈಕುಂಠದಲ್ಲಿ ಅಮುಕ್ತಸ್ಥಾನದಲ್ಲಿ ಅಮುಕ್ತ

---

59. ಭಕ್ತ್ಯಾ ಪ್ರಾಣಂ ವಶಂ ನೀತ್ವಾ ಜಿತಪ್ರಾಣೋ ಭವತ್ಯತ ।
*– ಷಾಡ್ಗುಣ್ಯೇ (ಭಾಗ.ತಾ.ನಿ. 2-2-16.)*

60. ಪ್ರಾಣಾಪಾನಾವಿಡಾಯಾಂ ಚ ಪಿಂಗಲಾಯಾಂ ಚ ವರ್ತತಃ ।
ವ್ಯಾನಃ ಸಂಧಿಷು ಸರ್ವತ್ರ ಉದಾನೋ ಬ್ರಹ್ಮನಾಡಿಗಃ ।
ಸರ್ವತ್ರೈವ ಸಮಾನಸ್ತು ಸಮಂ ಚರತಿ ಸರ್ವಗಃ ॥
*– ಭಾರತೇ (ಭಾಗ.ತಾ.ನಿ. 2-2-21.)*

ದೇವತೆಗಳಿಂದ ಉಪಾಸ್ಯನಾದ ಶ್ರೀಹರಿಯನ್ನು ಹೊಂದುವರು; ಪ್ರತೀಕಾಲಂಬನರಾಗಿದ್ದು ಅಮುಖ್ಯ ಅಧಿಕಾರಿಗಳಾಗಿದ್ದರೆ ಸರ್ವನಿಯಾಮಕ ವಾಯು ಹಾಗೂ ಚತುರ್ಮುಖ ಉಳ್ಳ ಸತ್ಯಲೋಕವನ್ನು ಹೊಂದುವರು ಎಂದು ಹೇಳಲಾಗಿದೆ.

ಮುಖ್ಯಾಧಿಕಾರಿಗಳೂ, ಅಮುಖ್ಯಾಧಿಕಾರಿಗಳೂ 'ಪವನಾಂತರಾತ್ಮಾ' ಇರುವಲ್ಲಿಗೆ ಹೋಗುವರೆಂದು ನಿರೂಪಿಸುವ ಮೂಲಕ ವಾಯುದೇವನ ಅಂತರ್ಯಾಮಿಯಾದ ಶ್ರೀಹರಿ ಇರುವಲ್ಲಿಗೆ; ಅಂತರ್ಯಾಮಿ ವಾಯುದೇವ ಇರುವಲ್ಲಿಗೆ –ಎಂದು ಅರ್ಥ ಹೊರಡುವಂತೆ ಪ್ರಯೋಗಿಸಲಾಗಿದೆ.61

'ಬ್ರಹ್ಮತರ್ಕ'ದ ಮೂಲಕ ಶ್ರೀ ಮಧ್ವರು ಇದರ ಆಶಯವನ್ನು ಸ್ಪಷ್ಟಪಡಿಸಿ ರುವರು.62

೬. **ಅನಿಲನ ಗುಣಗಳು:**

ಸೃಷ್ಟಿಯನ್ನು ತಿಳಿಸುತ್ತ ಕ್ಷೋಭೆಗೊಳಗಾದ ಆಕಾಶದಿಂದ ಅನಿಲನ ಉತ್ಪತ್ತಿಯನ್ನು ಹೇಳಿ ಅವನ ಪ್ರಾಣ, ಓಜಸ್ಸು, ಸಹಸ್ ಹಾಗೂ ಬಲ –ಎಂಬ ನಾಲ್ಕು ಗುಣಗಳನ್ನು ಉಲ್ಲೇಖಿಸಲಾಗಿದೆ.63

ಶ್ರೀ ಮಧ್ವರು ಮಹಾಭಾರತವನ್ನು ಉಲ್ಲೇಖಿಸಿ ವಾಯುದೇವ ಯಾಕೆ ಪ್ರಾಣಾದಿ ಹೆಸರುಗಳನ್ನು ಹೊಂದಿರುವನೆಂದು ತೋರಿಸಿಕೊಟ್ಟಿರುವರು –ಎಲ್ಲರಿಂದ ಚಟುವಟಿಕೆ ಗಳನ್ನು ಮಾಡಿಸುವುದರಿಂದ ಪ್ರಾಣ ಎನಿಸುವನು. ಮತ್ತೊಬ್ಬನನ್ನು ಎದುರಿಸುವ ಶಕ್ತಿ ಇರುವುದರಿಂದ 'ಓಜಸ್' ಎನಿಸುವನು. ಮತ್ತೊಬ್ಬರ ಆಕ್ರಮಣಕ್ಕೆ ಒಳಗಾಗದಿರುವುದ ರಿಂದ 'ಸಹಃ' ಎನಿಸುವನು. ಸ್ವೇಚ್ಛಾನುಸಾರವಾಗಿ ಯಾವುದನ್ನಾದರೂ ಮಾಡಬಲ್ಲನಾದುದ ರಿಂದ ಬಲ ಎನಿಸುವನು. ಎಲ್ಲರನ್ನೂ ಧರಿಸುವುದರಿಂದ 'ವಿಧೃತಿ' ಎನಿಸುವನು.64

---

61. '......ಬಹಿಸ್ತ್ರಿಲೋಕ್ಯಾಃ ಪವನಾಂತರಾತ್ಮಾ । – *ಭಾಗ.ತಾ.ನಿ. 2-3-24.*

* ಪವನಸ್ಯಾಪ್ಯಂತರಾತ್ಮಾ ಯಸ್ತಮ್ । ಪವನಶ್ಚಾಂತರಾತ್ಮಾ ಚೇತಿ ವಾ ।
– *ಭಾಗ.ತಾ.ನಿ.*

62. ಈಯುಸ್ತ್ರೀನ್ ಕರ್ಮಣಾ ಲೋಕಾನ್ ಜ್ಞಾನೇನೈವ ತದುತ್ತರಾನ್ ।
ತತ್ರ ಮುಖ್ಯಾ ಹರಿಂ ಯಾಂತಿ ತದನ್ಯೇ ವಾಯುಮೇವ ತು ।
ಅಪಕ್ವಾ ಯೇ ನ ತೇ ಯಾಂತಿ ವಾಯುಂ ವಾ ಹರಿಮೇವ ವಾ ॥
– *ಬ್ರಹ್ಮತರ್ಕ (ಭಾಗ.ತಾ.ನಿ. 2-3-24.)*

63. ನಭಸೋಽಥ ವಿಕುರ್ವಾಣಾದಭೂತ್ ಸ್ಪರ್ಶಗುಣೋಽನಿಲಃ ।
ಪರಾನ್ವಯಾಚ್ಛಬ್ದವಾಂಶ್ಚ ಪ್ರಾಣ ಓಜಃ ಸಹೋ ಬಲಮ್ ॥ – *ಭಾಗ. 2-5-25.*

64. ಸರ್ವಚೇಷ್ಟಯಿತೃತ್ವಾತ್ತು ಪ್ರಾಣೋಽಭಿಭವಶಕ್ತಿತಃ ।
ಓಜಸ್ತನಭಿಭಾವ್ಯತ್ವಾತ್ ಸಹಶ್ಚ ಸ್ವೇಚ್ಛಯಾ ಕೃತೇಃ ॥
ಬಲಂ ವಿಧಾರಕತ್ವಾಚ್ಚ ವಿಧೃತಿರ್ವಾಯುರುಚ್ಯತೇ ॥
– *ಭಾರತೇ (ಭಾಗ.ತಾ.ನಿ. 2-5-25.*

೭. **ಶ್ರೀಹರಿಯ ಜ್ಞಾನಿ:**

ಚತುರ್ಮುಖ ನಾರದರಿಗೆ ಉಪದೇಶಿಸುತ್ತ, ಪರಮಾತ್ಮನ ಶಕ್ತಿಗಳಿಂದ ಬೇರೆ ಬೇರೆ ಮೂರ್ತಿಗಳಿಂದ ಇರುವಿಕೆಯನ್ನು ತಾನಾಗಲೀ, ವಾಯುದೇವನಾಗಲೀ ತಿಳಿದಿಲ್ಲ; ಪರಮಾತ್ಮ ಮಾತ್ರ ತಿಳಿದಿರುವಂತದ್ದೆಂದು ಹೇಳಿರುವ[65] ಸಂದೇಶದ ಆಂತರ್ಯವನ್ನು ಶ್ರೀ ಮಧ್ವರು ಬ್ರಹ್ಮಾಂಡದ ಮೂಲಕ ಹೀಗೆ ಸ್ಪಷ್ಟಪಡಿಸಿರುವರು –ಸರ್ವಜೀವರಲ್ಲಿ ಶ್ರೀಹರಿಯನ್ನು ತಿಳಿದವರೆಂದರೆ ಚತುರ್ಮುಖ ಮತ್ತು ವಾಯುದೇವ ಮಾತ್ರ. ಇವರಿಬ್ಬರು ತಿಳಿದಷ್ಟು ಉಳಿದ ಯಾರೂ ತಿಳಿದಿಲ್ಲ. ಆದರೆ ಪರಮಾತ್ಮ ತಾನು ತನ್ನನ್ನು ಎಷ್ಟು ತಿಳಿದಿರುವನೋ ಅಷ್ಟು ಈ ಇಬ್ಬರೂ ತಿಳಿದಿಲ್ಲ.[66] ಈ ಅಭಿಪ್ರಾಯದಲ್ಲಷ್ಟೇ ಚತುರ್ಮುಖ ತಾನಾಗಲೀ, ವಾಯುದೇವನಾಗಲೀ ಪರಮಾತ್ಮನನ್ನು ತಿಳಿದಿಲ್ಲ ಎಂದು ಹೇಳಿರುವುದು.

೮. **ದಶವಿಧ ಪ್ರಾಣನ ಜನನ:**

ಪರಮಪುರುಷನಿಂದ ಹತ್ತು ಪ್ರಭೇದಗಳನ್ನೊಳಗೊಂಡ 'ವಿರಾಟ್‌ಪ್ರಾಣ' –ಮುಖ್ಯಪ್ರಾಣನು ಪುಟ್ಟಿದನೆಂದು ನಿರೂಪಿಸಿರುವ ಮಾತಿನಲ್ಲಿ[67] ಪ್ರಸ್ತುತವಾದ ದಶವಿಧ ಪ್ರಾಣದ ವಿವರಣೆಯನ್ನು ಶ್ರೀ ಮಧ್ವರು ವ್ಯೋಮಸಂಹಿತೆಯ ಮೂಲಕ ಹೀಗೆ ನೀಡುವರು –ಪ್ರಾಣ, ಅಪಾನ, ವ್ಯಾನ, ಉದಾನ ಹಾಗೂ ಸಮಾನ ಎಂಬ ಐದೂ; ನಾಗ, ಕೂರ್ಮ, ಕೃಕಲ, ದೇವದತ್ತ ಹಾಗೂ ಧನಂಜಯ –ಎಂಬ ಐದೂ ಒಟ್ಟು ದಶವಿಧ ಪ್ರಾಣರು. ಹೀಗೆ ಮೊದಲು ಪುಟ್ಟಿದ ದಶವಿಧಪ್ರಾಣ ಪ್ರಧಾನವಾಯು –ಎಂದು 'ತತ್ವನಿರ್ಣಯ'ದ ಮೂಲಕ ನಿರ್ಣಯಿಸಲಾಗಿದೆ.[68]

---

65. ಯಃ ಸ್ವಾತ್ಮಮಾಯಾ ವಿಭವಂ ಸ್ವಯಂ ಗತೋ ನಾಹಂ ನಭಸ್ವಾಂಸ್ತಮಥಾಪರೇ ಕುತಃ ।
*– ಭಾಗ. 2-6-35.*

66. ಸರ್ವಜೀವನಿಕಾಯೇಷು ಬ್ರಹ್ಮವಾಯೂ ಹರೇರ್ವಿದೌ ।
ನ ಚಾನ್ಯಸ್ತಾದೃಶೋ ವೇತ್ತಾ ಯಾವದ್ ವೇತ್ತಿ ಹರಿಃ ಸ್ವಯಮ್ ।
ತಾವತ್ ತಾವಪಿ ನೋ ವಿಷ್ಣುಂ ಜಾನೀತೋ ಲೋಕವಂದಿತೌ ॥
*– ಬ್ರಹ್ಮಾಂಡೇ (ಭಾಗ.ತಾ.ನಿ. 2-6-35.)*

67. ......ವಿರಾಟ್‌ಪ್ರಾಣೋ ದಶವಿಧ ಏಕಧಾ ಹೃದಯೇನ ಚ । *– ಭಾಗ. 3-7-9.*
* ಪ್ರಾಣಾದಿಪಂಚಕಂ ಚೈವ ತಥಾ ನಾಗಾದಿಪಂಚಕಮ್ ।
ಏವಂ ತು ದಶಧಾ ಪ್ರಾಣ ಅಧ್ಯಾತ್ಮಾದಿ ತ್ರಿಧಾಽಖಿಲಾಃ ।
*– ವ್ಯೋಮಸಂಹಿತಾ (ಭಾಗ.ತಾ.ನಿ. 3-7-9.)*

68. ......ಯಸ್ಮಿನ್ ದಶವಿಧಃ ಪ್ರಾಣಃ ಸೇಂದ್ರಿಯಾರ್ಥೇಂದ್ರಿಯಸ್ತ್ರಿವೃತ್ ।
*– ಭಾಗ. 3-8-22.*
* ಅನುಪ್ರವಿಶ್ಯ ಬ್ರಹ್ಮಾಣಂ ಪ್ರಾಣಂ ದಶವಿಧಂ ತಥಾ ....... ಅಸೃಜದ್ಧರಿಃ ।
*– ಗಾರುಡೇ (ಭಾಗ.ತಾ.ನಿ.)}*

೯. **ತ್ರಿರೂಪದ ಪ್ರಾಣ:**

ಮೈತ್ರೇಯರ ಎದುರು ವಿದುರ ಅವನ ಉಪದೇಶವನ್ನು ಅನುವಾದಿಸುತ್ತ ಚತುರ್ಮುಖಾಂತರ್ಯಾಮಿ ವಿಷ್ಣುವಿನಲ್ಲಿ ದಶವಿಧದ ಪ್ರಾಣನೂ ಓಜಃ, ಸಹಃ, ಬಲಂ ಎಂಬ ಮೂರು ರೂಪದ ಪ್ರಾಣನೂ ಇರುವನೆಂದು ತಿಳಿಸಿರುವನು.[69]

೧೦. **ಪ್ರಲಯಕಾಲದಲ್ಲಿ ಮುಕ್ತವಾಯು:**

ಚತುರ್ಮುಖ ಪ್ರಲಯಕಾಲದಲ್ಲಿ ಭಗವಂತನನ್ನು ಕಂಡ ಎನ್ನುವಾಗ, ಸೂರ್ಯ ಇಂದು ಅಗ್ನಿ ಮುಂತಾದ ದೇವತೆಗಳಂತೆ ವಾಯುದೇವನೂ ಅವನನ್ನು ಸುತ್ತುವರಿದಿದ್ದರು ಎಂದು ಭಾಗವತದಲ್ಲಿರುವ ಈ ವಿಚಾರವನ್ನು[70] ಬ್ರಹ್ಮಾಂಡದ ಮೂಲಕ ಆ ಕಾಲದಲ್ಲಿ ಭಗವಂತನ ಸುತ್ತ ಇದ್ದ ವಾಯ್ವಾದಿ ದೇವತೆಗಳು –ಮುಕ್ತರಾಗಿದ್ದವರು ಎಂದು ಸ್ಪಷ್ಟಪಡಿಸಲಾಗಿದೆ.[71]

೧೧. **ಮುಕ್ತಿಗೆ ವಾಯುವಿನ ಜ್ಞಾನ:**

ದೇವಹೂತಿ ಕಪಿಲವಾಸುದೇವನಿಗೆ ತತ್ತ್ವೋಪದೇಶಕ್ಕಾಗಿ ಶರಣಾಗತಳಾಗಿ ತನಗೆ ಪ್ರಕೃತಿ ಮತ್ತು ಪುರುಷರ ಬಗ್ಗೆ ಜಿಜ್ಞಾಸೆ ಇದೆ ಎಂದು ಕೇಳಿಕೊಳ್ಳುವಳು.[72] ಮುಕ್ತಿಗೆ ಪ್ರಯೋಜಕವಾಗಿ ವಿಹಿತವಾದ ಪುರುಷಜಿಜ್ಞಾಸೆಯಲ್ಲಿ ನಾರಾಯಣನ ಜಿಜ್ಞಾಸೆಯಂತೆ ಬೇರೆ ಬೇರೆ ದೇವತೆಗಳ, ಸರ್ವಜೀವರ ಜಿಜ್ಞಾಸೆಯಂತೆ ವಾಯುದೇವನ ಜಿಜ್ಞಾಸೆಯೂ ಸೇರಿಕೊಂಡಿದೆ ಎಂದು ಶ್ರೀ ಮಧ್ವರು 'ದತ್ತಾತ್ರೇಯಯೋಗ'ದಿಂದ ಸ್ಪಷ್ಟಪಡಿಸಿರುವರು.[73]

೧೨. **ಪ್ರಾಣಾಭಿಮಾನಿಯಾಗಿ ಮುಖ್ಯಪ್ರಾಣನ ಪ್ರವೇಶ:**

ರುದ್ರನವರೆಗಿನ ತತ್ತ್ವಾಭಿಮಾನಿಗಳು ಹೊರಟರೂ, ಪ್ರವೇಶಿಸಿದರೂ ಚತುರ್ಮುಖನ ದೇಹ ಬಿದ್ದಿಲ್ಲ; ಎದ್ದಿಲ್ಲ. ಕೊನೆಗೆ ಚಿತ್ತಾಭಿಮಾನಿಯಾಗಿ ಚತುರ್ಮುಖ ವಾಯುದೇವನ ಹಾಗೂ ಭಗವಂತನ ಜೊತೆಗೆ ಪ್ರವೇಶಿಸಿದಾಗ ಅಂಡೋದಕದಿಂದ ಚತುರ್ಮುಖನ ದೇಹ ಎದ್ದು ನಿಲ್ಲುವುದು.[74]

---

69. ಪ್ರಾಣಃ ಪ್ರಥಮಜೋ ಯಸ್ತು ಪ್ರಧಾನೋ ವಾಯುರೀರಿತಃ ।
– *ತತ್ತ್ವನಿರ್ಣಯ (ಭಾಗ.ತಾ.ನಿ. 3-7-9.)*

70. ಸೂರ್ಯೇಂದು ವಾಯ್ವಗ್ನ್ಯವತ್ ತ್ರಿಧಾಮಭಿಃ ಪರಿಕ್ರಮತ್ ಪ್ರಾಧಾನಿಕೈರ್ದುರಾಸದವಮ್ । – *ಭಾಗ.ತಾ.ನಿ. 3-9-31.*

71. ಮುಕ್ತವಾಯ್ವಾದಿಭಿರ್ವಿಷ್ಣುಂ ವೃತಂ ಬ್ರಹ್ಮಾ ದದರ್ಶ ಹ ।
– *ಬ್ರಹ್ಮಾಂಡ (ಭಾಗ.ತಾ.ನಿ. 3-9-31.)*

72. ಜಿಜ್ಞಾಸಯಾ ಪ್ರಕೃತೇಃ ಪೂರುಷಸ್ಯ ನಮಾಮಿ ..... । – *ಭಾಗ. 3-26-11.*

73. ನಾರಾಯಣೋ ಬ್ರಹ್ಮವಾಯೂ...... ಪುರುಷಾಖ್ಯಾಭಿಶಬ್ದಿತಾಃ ..... ತಜ್ಞಾನಾದ್ ವಿಪ್ರಮುಚ್ಯತೇ । – *ದತ್ತಾತ್ರೇಯಯೋಗ (ಭಾಗ. 3-26-11)*

74. ಚಿತ್ತೇನ ಹೃದಯಂ ಚೈತ್ಯಃ ಕ್ಷೇತ್ರಜ್ಞಃ ಪ್ರಾವಿಶದ್ ಯದಾ ।
ವಿರಾಟ್ ತದೈವ ಪುರುಷಃ ಸಲಿಲಾದುದತಿಷ್ಠತ ॥ – *ಭಾಗ. 3-27-7.*

ವಿಶೇಷವಾಗಿ ಶ್ರೀಹರಿಯ ಪ್ರವೇಶದಿಂದಾಗಿ ಎದ್ದ ಆ ಶರೀರದೊಳಗೆ ಚಿತ್ತಾಭಿಮಾನಿಯಾಗಿ ಚತುರ್ಮುಖ ಪ್ರವೇಶಿಸಿದರೆ ವಾಯುದೇವ ಪ್ರಾಣಾಭಿಮಾನಿಯಾಗಿ ಪ್ರವೇಶಿಸಿದನೆಂದು ಶ್ರೀ ಮಧ್ವರು ಸ್ಪಷ್ಟಪಡಿಸಿರುವರು.[75]

೧೩. **ಮುಖ್ಯಪ್ರಾಣ ಗಿರಿ; ವೇದವಾಕ್ ಅವನ ಮಗಳು:**

ದಕ್ಷ ರುದ್ರನನ್ನು ಅವಮಾನಿಸಲು ಅದರಿಂದ ಸಿಟ್ಟುಗೊಂಡ ನಂದಿ ದಕ್ಷನಿಗೆ ಕೊಟ್ಟ ಶಾಪದಲ್ಲಿ ಒಗಟುರೂಪದ ಒಂದು ಮಾತಿನಲ್ಲಿ ವಾಯುದೇವನನ್ನು ಗಿರಿ ಶಬ್ದದಿಂದಲೂ, ವೇದದ ಮಾತನ್ನು ಅವನ ಮಗಳನ್ನಾಗಿಯೂ ಉಲ್ಲೇಖಿಸಲಾಗಿದೆ.[76]

೧೪. **ಸತೀದೇವಿಯಿಂದ ವಾಯುವಿನ ಚಿಂತನೆ:**

ಸತೀದೇವಿ ದೇಹತ್ಯಾಗ ನಡೆಸುವಾಗ, ರುದ್ರನಿಗಿಂತ ಕೆಳ ಮಟ್ಟದ ದೇವತೆಗಳನ್ನು ಯೋಚಿಸದೆ, ರುದ್ರನನ್ನೂ ಅವನಿಗಿಂತ ಉತ್ತಮರಾದ ಬ್ರಹ್ಮಾದಿಗಳನ್ನೂ ಚಿಂತಿಸುತ್ತಿದ್ದಳೆಂದು ತಿಳಿಸುವ ತತ್ತ್ವನಿರ್ಣಯ ಅವಳು ಚಿಂತಿಸಿದ ದೇವತೆಗಳಲ್ಲಿ ವಾಯುವನ್ನೂ ಒಬ್ಬನನ್ನಾಗಿ ಉಲ್ಲೇಖಿಸಿದೆ.[77]

೧೫. **ಋಜುಗಳಿಂದ ಬ್ರಹ್ಮಪದವಿ ಪ್ರಾಪ್ತಿಗಾಗಿ ಸಾಧನೆ:**

ರುದ್ರ ಬರ್ಹಿಷದನ ಮಕ್ಕಳಿಗೆ ಉಪದೇಶಿಸುತ್ತ ಋಜುಗಳು ನೂರು ಜನ್ಮಗಳಲ್ಲಿ ಸಾಧನೆ ಮಾಡಿ ಚತುರ್ಮುಖನ ಪದವಿಯನ್ನು ಹೊಂದುವರೆಂದು ತಿಳಿಸಲಾಗಿದ್ದು,[78]

---

75. ಅಂಶೇನ ಸುಪ್ತೋ ಬ್ರಹ್ಮಾ ತು ಅಂಶೇನ ನಿರಗಾತ್ ತಥಾ ।
ಸ್ವದೇಹಾದ್ ವಾಯುಸಹಿತೋ ವಿಷ್ಣುನಾ ಚ ಜಗತ್ಪ್ರಭುಃ ॥
ತಮುತ್ಥಾಪಯಿತುಂ ದೇವಾಸ್ತಾನ್ಯತೇ ತ್ರೀನ್ ಮಹಾಬಲಾನ್ ।
ನಾಶಕ್ನುವನ್ನೇಕಸಂಸ್ಥಾಸ್ತಸ್ಮಿನ್ಸ್ತೇ ತ್ವವಿಶಂಸ್ತ್ರಯಃ ॥
ಉದತಿಷ್ಠದ್ ಬ್ರಹ್ಮದೇಹಸ್ತದಾ ತೇಷಾಂ ಪ್ರಭಾವತಃ ॥
ವಿಶೇಷೇಣ ಹರೇರೇವ ಪ್ರಭಾವೇನ ಶ್ರಿಯಃ ಪತೇಃ ।
ಚಿತ್ತಾಭಿಮಾನೀ ಬ್ರಹ್ಮೈವ ಕ್ಷೇತ್ರಜ್ಞಸ್ತದ್ಗತೋ ಹರಿಃ ॥
ಪ್ರಾಣೋ ವಾಯುರಿತಿ ಪ್ರೋಕ್ತಸ್ತಯೋರೀಶೋ ಹರಿಃ ಸ್ವಯಮ್ ॥
– *ಭಾಗ.ತಾ.ನಿ. 3-27-71.*

76. ಗಿರೇಃ ಸುತಾಯಾಃ...... । – *ಭಾಗ. 4-2-24.*

77. ......ಚಿಂತಯತೀ ನ ಚಾಪರಮ್ । – *ಭಾಗ. 4-4-27.*

* ನ ಚಾಪರಂ ತಸ್ಮಾದಪರಂ ನ ಚಿಂತಯತೀ ।
ಪರಂ ತು ವಿಷ್ಣ್ವಾದಿಕಂ ಚಿಂತಯತೀ, ಚ ಶಬ್ದಾತ್ ॥ – *ಭಾಗ.ತಾ.ನಿ.*

* ರುದ್ರಂ ಬ್ರಹ್ಮವಾಯೂ ಚ ವಿಷ್ಣುಂ ಚೈವ ಶ್ರಿಯಂ ಗಿರಮ್ ।
ಉಮಾ ಚಿಂತಯತೀ ದೇಹಂ ತತ್ಯಾಜಾನ್ಯಂ ನ ಚಾಸ್ಮರತ್ ॥
– *ತತ್ತ್ವನಿರ್ಣಯೇ (ಭಾಗ.ತಾ.ನಿ. 4-4-27.*

78. ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ ತತಃ ಪರಂ ಹಿ ಮಾಮ್ ।
ಅವ್ಯಾಕೃತಂ ಭಾಗವತೋಽಥ ವೈಷ್ಣವಂ ಪದಂ.......। – *ಭಾಗ. 4-23-29.*

ಅದರ ವಿವರಣೆಯನ್ನು ಶ್ರೀ ಮಧ್ವರು 'ಷಾಡ್ಗುಣ್ಯ'ದ ಮೂಲಕ ನೀಡಿರುವರು- ಬ್ರಹ್ಮಪದವಿಗೆ ಯೋಗ್ಯರಾದ ಜೀವರು ಋಜುಗಳೆನಿಸುವರು. ಅವರು ನೂರು ಜನ್ಮಗಳಲ್ಲಿ ವಿಶೇಷವಾಗಿ ಶ್ರೀಹರಿಯ ಉಪಾಸನೆ ನಡೆಸಿ ಬಳಿಕ ಚತುರ್ಮುಖನ ಪದವಿಯನ್ನು ಹೊಂದುವರು. ಮತ್ತೆ ಶ್ರೀದೇವಿಯನ್ನು ಹೊಂದಿ, ಅವಳ ಅನುಮೋದನೆಯೊಂದಿಗೆ ಶ್ರೀಹರಿಯನ್ನು ಹೊಂದಿ ಅವನ ಸನ್ನಿಧಿಯಲ್ಲಿ ವಾಸಿಸುವರು. ಅನಾದಿಕಾಲದಿಂದಲೂ ಭಕ್ತರಾಗಿ, ಜ್ಞಾನಿಗಳಾಗಿ ಇರುವ ಅವರು ಉಳಿದೆಲ್ಲ ಜೀವರಿಗಿಂತ ಜ್ಞಾನ ಭಕ್ತ್ಯಾದಿಗಳಲ್ಲಿ ವಿಶಿಷ್ಟರಾಗಿರುವರು. ಯಾವಾಗಲೂ ಭಕ್ತರಾಗಿಯೇ ಇರುವವರಾದರೂ ನೂರುಜನ್ಮಗಳ ವಿಶೇಷ ಪ್ರಯತ್ನದಿಂದಾಗಿ ಅವರು ತಮ್ಮ ಬ್ರಹ್ಮಪದವಿಯನ್ನು ಪಡೆದು, ಬಳಿಕ ಮುಕ್ತಿಯನ್ನು ಹೊಂದುವರು.79

**೧೬. ಆಧಾರಾಧಿಪತಿ ವಾಯುದೇವ:**

ಉತ್ತರ ಕುರುದೇಶದಲ್ಲಿ ಆರಾಧ್ಯನಾದ ಯಜ್ಞಪುರುಷನನ್ನು ಭೂದೇವಿ ಸ್ತುತಿಸುವ ಮಾತುಗಳಲ್ಲಿ ಒಂದು- ದ್ರವ್ಯಗಳಿಗೆ ಒಡೆಯನಾದ ರುದ್ರನಿಂದ, ಕ್ರಿಯೆಗಳಿಗೆ ಒಡೆಯನಾದ ಗರುಡನಿಂದ, ಕಾರಣಗಳಿಗೆ ಒಡೆಯನಾದ ಬ್ರಹ್ಮನಿಂದ ಹೇಗೋ ಹಾಗೆ ಆಧಾರಗಳಿಗೆ ಒಡೆಯನಾದ ವಾಯುದೇವನಿಂದ ಯಥಾರ್ಥವಾಗಿ ನಿರ್ಧಾರಿತವಾದ ಸ್ವರೂಪವುಳ್ಳವನು.80

**೧೭. ದೇವರನ್ನು ಒಪ್ಪುವಿಕೆಯಲ್ಲಿ ವಾಯುವಿನ ದೃಷ್ಟಾಂತ:**

ದಕ್ಷಪ್ರಜಾಪತಿ ಹಂಸಗುಹ್ಯಸ್ತೋತ್ರದಿಂದ ಭಗವಂತನನ್ನು ಸ್ತುತಿಸುತ್ತ- ವಾಯುವಿನ ದೃಷ್ಟಾಂತದಿಂದ ದೇವರ ಒಪ್ಪುವಿಕೆಯನ್ನು ಪ್ರತಿಪಾದಿಸಿದ್ದು.81

---

79. ಋಜವೊ ನಾಮ ಯೇ ದೇವಾ ಯೋಗ್ಯಾ ಬ್ರಹ್ಮಪದಸ್ಯ ತು ।
ತ ಏವ ಶತಜನ್ಮಾನಿ ವಿಶೇಷೋಪಾಸಕಾ ಹರೇಃ ।
ಪ್ರಾಪ್ಯ ಬ್ರಹ್ಮಪದಂ ಪಶ್ಚಾಚ್ಛ್ರಿಯಂ ಪ್ರಾಪ್ಯಾನುಮೋದಿತಾಃ ।
ತಯಾ ತತೋ ಹರಿಂ ಯಾಂತಿ ವಸಂತಿ ಹರಿಸನ್ನಿಧೌ ।
ಅನಾದಿಕಾಲಭಕ್ತಾಶ್ಚ ಜ್ಞಾನಿನಸ್ತೇ ನ ಸಂಶಯಃ ॥
ವಿಶಿಷ್ಟಾ ಜ್ಞಾನಭಕ್ತ್ಯಾದೌ ಸರ್ವಜೀವನಿಕಾಯತಃ ।
ಸರ್ವದಾऽಪಿ ವಿಶೇಷೇಣ ಶತಜನ್ಮಪ್ರಯತ್ನತಃ ॥
ಸ್ವಪದಪ್ರಾಪ್ತಿರುದ್ದಿಷ್ಟಾ ತತೋ ಮುಕ್ತಿರವಾಪ್ಯತೇ ॥
– ಷಾಡ್ಗುಣ್ಯೇ *(ಭಾಗ.ತಾ.ನಿ. 4-23-29.)*

80. ದ್ರವ್ಯಕ್ರಿಯಾಹೇತ್ವಯನೇಶಕರ್ತೃಭಿಃ....... ವಸ್ತುನಿರೀಕ್ಷಿತಾತ್ಮನೇ । – *ಭಾಗ. 5-18-37.*
* ದ್ರವ್ಯೇಶಃ ಶಂಕರಃ ಪ್ರೋಕ್ತಃ ಕ್ರಿಯೇಶೋ ಗರುಡಃ ಸ್ಮೃತಃ । ಕಾರಣೇಶಸ್ತಥಾ ಬ್ರಹ್ಮಾ ವಾಯುರಾಧಾರಪಃ ಸ್ಮೃತಃ । – *ಬ್ರಹ್ಮತರ್ಕ (ಭಾಗ.ತಾ.ನಿ.)*

81. ಯಃ ಪ್ರಾಕೃತೈರ್ಜ್ಞಾನ ಪಥೈರ್ಜನಾನಾಂ ಯಥಾಶಯಂ ದೇಹಗತೋ ವಿಭಾತಿ । ಯಥಾऽನಿಲಃ ಪಾರ್ಥಿವಮಾಶ್ರಿತೋ ಗುಣಂ ಸ ಈಶ್ವರಃ..... । – *ಭಾಗ. 6-4-34.*

ಅದರ ವಿವರಣೆಯನ್ನು ಶ್ರೀ ಮಧ್ವರು ಹೀಗೆ ಮಾಡಿರುವರು– ಶರೀರದಲ್ಲಿರುವ ಪ್ರಾಣನನ್ನು ಬರೇ ಶ್ವಾಸದ ಗಾಳಿ ಎಂದು ಏನೂ ತಿಳಿಯದ ಕೆಳಮಟ್ಟದ ಜನರು ಹೇಳುವರು. ಮಧ್ಯಮಮಟ್ಟದ ಜನರು ಆ ವಿಷಯದಲ್ಲಿ ಸರಿಯಾದ ನಿರ್ಧಾರ ಹೊಂದಿರುವುದಿಲ್ಲ. ಆದರೆ ಪ್ರಾಣಜ್ಞಾನಿಗಳಾದ ಉತ್ತಮಾಧಿಕಾರಿಗಳು ರುದ್ರಾದಿದೇವೋತ್ತಮನಾದ ಸೂತ್ರನಾಮಕನಾದ ಪ್ರಾಣದೇವನನ್ನು ಒಪ್ಪಿಕೊಳ್ಳುವರು. ಇದರಂತೆ ಕೆಳಮಟ್ಟದ ಜನರು ತಮ್ಮ ದೇಹದಲ್ಲಿರುವ ಶ್ರೀಹರಿಯನ್ನು ಜೀವನನ್ನಾಗಿ ಹೇಳುವರು. ಮಧ್ಯಮಮಟ್ಟದ ಜನರು ಆ ವಿಷಯದಲ್ಲಿ ಸಂದೇಹಕ್ಕೊಳಗಾಗಿರುವರು. ಉತ್ತಮಾಧಿಕಾರಿಗಳು ಮಾತ್ರ ಸರ್ವಜೀವವಿಲಕ್ಷಣನಾದ ಗುಣಪೂರ್ಣನಾದ ಶ್ರೀಹರಿಯನ್ನು ಒಪ್ಪಿಕೊಳ್ಳುವರು.[82]

**೧೮. ದೇವರ ಪ್ರಾಣವನ್ನು ಆಶ್ರಯಿಸಿರುವವನು:**

ದಕ್ಷಪ್ರಜಾಪತಿಯಿಂದ ಸ್ತುತನಾದ ಭಗವಂತನು, ಅವನ ಸ್ತುತಿಗೆ ಒಲಿದು ಉಪದೇಶಿಸುತ್ತ, ತನ್ನ ಯಾವ ಯಾವ ಅಂಗವನ್ನು ಯಾವ ಯಾವ ದೇವತೆ ಆಶ್ರಯಿಸಿರುವನೆಂದು ತಿಳಿಸುತ್ತ 'ಆತ್ಮಾ' ಎನಿಸುವ ಪ್ರಾಣವನ್ನು ವಾಯುದೇವನು ಆಶ್ರಯಿಸಿರುವನೆಂಬ ಅಭಿಪ್ರಾಯದಲ್ಲಿ ವಾಯುದೇವನನ್ನು ಪ್ರಾಣವಾಚಕವಾದ ಆತ್ಮ ಶಬ್ದದಿಂದಲೇ ಉಲ್ಲೇಖಿಸಿರುವನು.[83]

**೧೯. ವಾಯುದೇವನೂ ಅಸಮರ್ಥ:**

ವೃತ್ರಾಸುರ ದೇವೇಂದ್ರನ ಎದುರು ಭಗವಂತನ ಮಹಿಮೆಯನ್ನು ತಿಳಿಸುತ್ತ, ಅಂತಹ ಭಗವಂತನ ಅನುಗ್ರಹವಿಲ್ಲದೆ ಹಿರಣ್ಯಗರ್ಭನೇ ಮುಂತಾದವರು ಹೇಗೋ ಹಾಗೆ ವಾಯುದೇವನೂ ಈ ಜಗತ್ತಿನ ಸೃಷ್ಟ್ಯಾದಿಗಳನ್ನು ನಡೆಸಲು ಅಸಮರ್ಥನಾಗುವನೆಂದು 'ಆತ್ಮ'ಶಬ್ದದಿಂದ ವಾಯುದೇವನನ್ನು ಉಲ್ಲೇಖಿಸಿ ಸಾರಿರುವನು.[84]

---

82. ಸ್ವದೇಹಸ್ಥಂ ಹರಿಂ ಪ್ರಾಹುರಧಮಾ ಜೀವಮೇವ ತು ।
ಮಧ್ಯಮಾಶ್ಚಾಪ್ಯನಿರ್ಣೀತಂ ಜೀವಾದ್ ಭಿನ್ನಂ ಜನಾರ್ದನಮ್ ।
ಪೂರ್ಣಾನಂದಾದಿಗುಣಕಂ ಸರ್ವಜೀವವಿಲಕ್ಷಣಮ್ ।
ಉತ್ತಮಾಸ್ತು ಹರಿಂ ಪ್ರಾಹುಸ್ತಾರತಮ್ಯೇನ ತೇಷು ಚ ।
ಬುದ್ಧಿಶುದ್ಧ್ಯನುಸಾರೇಣ ಯಥಾ ಪ್ರಾಣಂ ಶರೀರಗಮ್ ।
ಶ್ವಾಸಮಾತ್ರಂ ಜನಾಃ ಪ್ರಾಹುರನಿರ್ಣೀತಂ ಚ ಮಧ್ಯಮಾಃ ।
ದೇವದೇವೇಶ್ವರಂ ಸೂತ್ರಮಾನಂದಂ ಪ್ರಾಣವೇದಿನಃ ॥ *– ಭಾಗ.ತಾ.ನಿ. 6-4-34.*

83. ತಪೋ ಮೇ ಹೃದಯಂ....... ಆತ್ಮಾಸವಃ ಸುರಾಃ । *– ಭಾಗ. 6-4-46.*

* ತಪೋಽಭಿಮಾನೀ ರುದ್ರಸ್ತು ವಿಷ್ಣೋರ್ಹೃದಯಮಾಶ್ರಿತಃ..... ಪ್ರಾಣೇ ವಾಯುಃ...... । *– ಭಾಗ.ತಾ.ನಿ. 6-4-46.*

84. ಪುರುಷಃ ಪ್ರಕೃತಿರ್ವ್ಯಕ್ತಮಾತ್ಮಭೂತೇಂದ್ರಿಯಾಶಯಾಃ ।
ಶಕ್ನುವಂತ್ಯಸ್ಯ ಸರ್ಗಾದೌ ನ ವಿನಾ ಯದನುಗ್ರಹಮ್ ॥ *– ಭಾಗ. 6-12.*

* ಹಿರಣ್ಯಗರ್ಭಃ ಪುರುಷಃ ಆತ್ಮಾ ವಾಯುರುದಾಹೃತಃ ..........। *– ಭಾಗ.ತಾ.ನಿ. 6-12-11.*

೨೦. **ವಾಯುವನ್ನೂ ಬಿಟ್ಟು ಧ್ಯೇಯ ಹರ:**

ಪಾರ್ವತಿ ಚಿತ್ರಕೇತುವನ್ನು ಶಪಿಸುತ್ತ, ಚತುರ್ಮುಖಾದಿಗಳ ದೃಷ್ಟಿಯಲ್ಲೂ ವಿಷ್ಣು ಮುಂತಾದ ಹತ್ತು ದೇವತೆಗಳನ್ನು ಬಿಟ್ಟು ಹನ್ನೊಂದನೆಯ ದೇವತೆಯಾಗಿ ಇಂದ್ರಾದಿಗಳಿಗೆ ಧ್ಯೇಯನಾಗಿರುವವನು ರುದ್ರ ಎಂದು ತಿಳಿಸುವಾಗ, ಆ ಹತ್ತು ದೇವತೆಗಳಲ್ಲಿ ವಿಷ್ಣು ಹಾಗೂ ಚತುರ್ಮುಖನ ಬಳಿಕ ವಾಯುದೇವನನ್ನೂ ಸೇರಿಸಲಾಗಿದೆ. ರುದ್ರನು ವಿಷ್ಣುವೇ ಮುಂತಾದ ಆ ಹತ್ತು ದೇವತೆಗಳನ್ನು ಧ್ಯಾನಿಸುತ್ತಿರುವವನಾಗಿ, ಶ್ರೀಹರಿಯ ಪಾರ್ಷದನಾಗಿ ಧ್ಯೇಯ ಎಂದು ನಿರೂಪಿಸುವಾಗ ರುದ್ರನಿಂದ ಧ್ಯಾನಿಸಲ್ಪಡುವ ದೇವತೆಗಳಲ್ಲಿ ಪ್ರಾಣ ದೇವನನ್ನೂ ಸೇರಿಸಲಾಗಿದೆ.85

೨೧. **ಮುಖ್ಯಪ್ರಾಣನೂ ಸ್ವತಂತ್ರವಾಗಿ ಶ್ರೋತ್ರಾದಿ ಅಲ್ಲ:**

ಬಾಲಕರೂಪದಲ್ಲಿ ಬಂದ ಯಮ ಸುಯಜ್ಞನ ಪತ್ನಿಯರಲ್ಲಿ ಜೀವನು ಯಾವ ಮುಖ್ಯಪ್ರಾಣನಿಂದಾಗಿ ಶ್ರೋತ್ರಾದಿ ಆಗಿರುವನೋ ಅಂತಹ ಮುಖ್ಯಪ್ರಾಣನೂ ಸ್ವತಂತ್ರವಾಗಿ ಶ್ರೋತ್ರಾದಿ ಅಲ್ಲ. ಭಗವಂತ ಅವನಿಗೆ ಶ್ರೋತೃತ್ವಾದಿಗಳನ್ನು ನೀಡಿರುವನು ಎಂದು ಪ್ರತಿಪಾದಿಸಿರುವನು.86

೨೨. **ನಾದರೂಪ ಸರಸ್ವತಿಯ ಹೋಮ ಪ್ರಾಣನಲ್ಲಿ:**

ಜ್ಯೇಷ್ಠರಲ್ಲಿ ಕನಿಷ್ಠರ ಅಧೀನತ್ವೇನ ಸಮರ್ಪಣೆಯ ಹೋಮಪ್ರಕ್ರಿಯೆಯನ್ನು ಯಜ್ಞಾಭಿಮಾನಿದೇವತೆಗಳಿಂದ ಪ್ರಾರಂಭಿಸಿ, ಮೂಲಾಧಾರಸ್ಥ ನಾದರೂಪಳಾದ ಸರಸ್ವತಿ ಯನ್ನು ಮುಖ್ಯಪ್ರಾಣನಲ್ಲಿ, ಮುಖ್ಯಪ್ರಾಣನನ್ನು ಜನಾರ್ದನನಲ್ಲಿ; ಅಥವಾ ಮುಖ್ಯ ಪ್ರಾಣನನ್ನು ಚಿತ್ಪ್ರಕೃತಿಯಲ್ಲಿ ಚಿತ್ಪ್ರಕೃತಿಯನ್ನು ಪುರುಷೋತ್ತಮನಲ್ಲಿ ಹೋಮಿಸ ಬೇಕೆಂದು ತಿಳಿಸಲಾಗಿದೆ.87

---

85. ಏಷಾಮನುಧ್ಯೇಯಪದಾಬ್ಜಯುಗ್ಮಂ...... । – *ಭಾಗ. 6-17-13.*

* ಏಷಾಂ ಪಕ್ಷೇ ತದವರಾಣಾಮನುಧ್ಯೇಯಪದಾಬ್ಜಯುಗ್ಮಮ್ । – *ಭಾಗ.ತಾ.ನಿ.*

* ವಿಷ್ಣುಬ್ರಹ್ಮಪ್ರಾಣವೀಂದಾಸ್ತದ್ದಾರಾನ ಪ್ಯ್ಕತೇ ಹರಃ ।
ಧ್ಯೇಯೋ ಹರೇಃ ಪಾರ್ಷದೋ ಧ್ಯಾಯನ್ ಹರಿಚತುರ್ಮುಖೌ ।
ಪ್ರಾಣಮೇಷಾಂ ತಥಾ ದಾರಾನ್..... । – *ತಂತ್ರಮಾಲಾ (ಭಾಗ.ತಾ.ನಿ. 6-17-13.)*

86. ನ ಶ್ರೋತಾ ನಾನುವಕ್ತಾ ವಾ ಮುಖ್ಯೋಽಪ್ಯತ್ರ ಮಹಾನಸುಃ । – *ಭಾಗ. 7-2-45.*

* ಚಕ್ಷುರಾದ್ಯಾ ಮನೋ ಜೀವೋ ದೃಷ್ಟ್ಯಾದಿಶ್ಚಾಪಿ ಯದ್ವಶೇ ।
ಸ ಪ್ರಾಣ ಇತಿ ವಿಜ್ಞೇಯೋ ಜ್ಞಾತಾ ಮಂತಾ ಚ ಸ ಪ್ರಭುಃ ॥
ತಸ್ಯಾಪಿ ಜ್ಞಾತೃಮಂತೃತ್ವಂ ನ ಸ್ವತಃ ಶಕ್ಯತೇ ಕ್ವಚಿತ್ ।
ಯಸ್ತಸ್ಯ ಜ್ಞಾತೃಮಂತೃತ್ವದಾತಾ ಸ ಭಗವಾನ್ ಹರಿಃ ॥
– *ಗಾರುಡೇ (ಭಾಗ.ತಾ.ನಿ. 7-2-45.}*

87. ಇಂದ್ರಿಯೇಷು ಕ್ರಿಯಾಯಜ್ಞಾನ್ ........ ತಂ ತು ಪ್ರಾಣೇ ಮಹತ್ಯಮುಮ್ ।
– *ಭಾಗ. 7-15-50, 51.*

### ೨೩. ದೇವಯಾನದಲ್ಲಿ ವಾಯುದೇವ:

ನಾರದರು ದೇವಯಾನದಲ್ಲಿ ಪ್ರಾಪ್ಯರಾದ ದೇವತೆಗಳನ್ನು ತಿಳಿಸುತ್ತ, 'ದಿವಸ್ಪುತ್ರ' ಎನಿಸುವ ಒಂದು ಬಗೆಯ ದೇವತೆಗಳು ಮುಕ್ತ ಜೀವನನ್ನು ಮುಖ್ಯ ಪ್ರಾಣಸಹಿತನನ್ನಾಗಿ ಭಾರತೀದೇವಿಯಲ್ಲಿಗೆ ತಲುಪಿಸುವರು. ಆ ಭಾರತೀದೇವಿ ಮುಖ್ಯಪ್ರಾಣರಾದರೂ ಮುಕ್ತ ಜೀವನನ್ನು ಹರಿಯಲ್ಲಿಗೆ ತಲುಪಿಸುವರು ಎಂದು ಹೇಳಲಾಗಿದೆ.88

### ೨೪. ವಾಯುದೇವನ ಮೂಲಕ ಜಗತ್ತಿನ ಪ್ರವೃತ್ತಿ:

ಕಾಲಿಯ ನಾಗನ ಪತ್ನಿಯರು ಕೃಷ್ಣನನ್ನು ಸ್ತುತಿಸುತ್ತ 'ಎಲ್ಲರ ಶರೀರಗಳಲ್ಲಿ ವಾಯು ದೇವನ ಮೂಲಕ ಕರ್ಮಗಳನ್ನು ನಡೆಸುವುದಕ್ಕಾಗಿ ಇರುವವನೆಂದು' ಉಲ್ಲೇಖಿಸಿರುವರು.89

### ೨೫. ಭಗವಂತ ಪರಿಸರಪದ್ಧತಿ:

ಶ್ರುತಿಗೀತೆಯ ಐದನೆಯ ಪದ್ಯದಲ್ಲಿ ಶಾರ್ಕರಾಕ್ಷ್ಯರ ಹಾಗೂ ಆರುಣಿಯರ ಉಪಾಸನೆಗಳನ್ನು ತಿಳಿಸುವಾಗ ಭಗವಂತನನ್ನು 'ಪರಿಸರಪದ್ಧತಿ' ಎಂಬ ವಾಯುದೇವರ ಹೆಸರಿನ ಉಲ್ಲೇಖವುಳ್ಳ ನಾಮದಿಂದ ಪರಾಮರ್ಶಿಸಲಾಗಿದೆ. ಎಲ್ಲೆಡೆ ಸಂಚರಿಸುತ್ತಿರುವುದರಿಂದ ವಾಯುದೇವ ಪರಿಸರ ಎನಿಸಿದರೆ, ಜೀವಾತ್ಮರ ದೇಹವನ್ನು ಪ್ರವೇಶಿಸುವಲ್ಲಿ ಅಂತಹ ವಾಯುದೇವನನ್ನೇ ಅನುಸರಿಸುವುದರಿಂದಲೂ ವಾಯುದೇವನು ಪರಮಾತ್ಮನನ್ನು ಅನುಸರಿಸಿಯೇ ಪ್ರವೇಶ ಭೋಗಾದಿಗಳನ್ನು ನಡೆಸುವುದರಿಂದಲೂ ಭಗವಂತನು

---

* ಯಜ್ಞಾಭಿಮಾನಿನೋ ದೇವಾನ್........ ಮೂಲಸ್ಥಾ ನಾದರೂಪಾ ಯಾ ತಾಂ ವಾಯೌ ತಂ ಜನಾರ್ದನೇ । ಪ್ರಕೃತಾವಥವಾ ಪ್ರಾಣಂ ತಾಮೇವ ಪುರುಷೋತ್ತಮೇ ।
– *ಬ್ರಹ್ಮತರ್ಕೇ (ಭಾಗ.ತಾ.ನಿ. 7-15, 50, 51.)}*

88. ಅಗ್ನಿಃ ಸೂರ್ಯೋ ದಿವಾ ವಾಯುಃ ...... ಆತ್ಮಾ ಸಮನ್ವಯಃ ।
– *ಭಾಗ. 7-15-52.*

'......... ತದನ್ಯೇ ತು ದಿವಸ್ಪುತ್ರಾಃ ಸರ್ವೇ ಚ ದ್ಯುಸಮೀಪಗಾಃ ।
ತೇ ದಿವಂ ಪ್ರಾಪಯಂತ್ಯೇನಂ ಸವಾಯುಂ ಸ ಹರಿಃ ಪೃಥಕ್ ।
– *ಭಾಗ.ತಾ.ನಿ. 7-15-52.*

* ತೇ ದಿವಸ್ಪುತ್ರಾಃ ಏನಂ ಮುಕ್ತಜೀವಂ ಸವಾಯುಂ ದಿವಂ ಪ್ರಾಪಯಂತಿ । ತೌ ಚ ಭಾರತೀಪ್ರಾಣೌ ಹರಿಮಿತ್ಯುಪಸ್ಕರ್ತವ್ಯಮ್ ।

89. ........ಸ್ಥಾತುಶ್ಚ ತೇ ಕರ್ಮಪರೀಪ್ಸಯೇಹತಃ । – *ಭಾಗ. 10-15-50.*

* ಕರ್ಮಪರೀಪ್ಸಯಾ ಕರ್ಮಪ್ರವರ್ತನಾರ್ಥಂ ಸರ್ವಶರೀರೇಷು ಸ್ಥಾತುಃ । ಈಹತಃ ಪ್ರಾಣಸ್ಯ ಸಕಾಶಾತ್ । ಪ್ರಾಣಸಕಾಶಾದ್ಧಿ ಕರ್ಮಪ್ರವರ್ತನಮಿಚ್ಛತಿ ಭಗವಾನ್ ।
– *ಭಾಗ.ತಾ.ನಿ.*

* ವಾಯೋಃ ಸಕಾಶಾಜ್ಜಗತಃ ಪ್ರವೃತ್ತಿಂ ಕಾಮಯತ್ಯಜಃ । ಪ್ರಾಣಪ್ರಾಣವತಃ ಪ್ರಾಪುರ್ವಿಷ್ಣುಂ ವಾಯೋರಪಿ ಪ್ರಭುಮ್ । – *ಭಾಗ.ತಾ.ನಿ. 10-15-50.*

ಪರಿಸರಪದ್ಧತಿ ಎನಿಸುವನು. ಇದನ್ನು ಶ್ರೀ ಮಧ್ವರು ಷಟ್‌ಪ್ರಶ್ನೋಪನಿಷತ್ತಿನ ಮಾತಿನಿಂದಲೂ, ಹಿರಣ್ಯನಾಭಶ್ರುತಿಯ ವಚನದಿಂದಲೂ ವಿವರಿಸಿರುವರು.90

೨೬. 'ಉದರ' 'ಹೃದಯ'ಗಳಿಗೆ ವಾಯುದೇವನ ಸಂಪರ್ಕ:

ಐತರೇಯೋಪನಿಷತ್ತಿನಲ್ಲಿ ದಾಖಲೆಗೊಂಡಂತೆ ವಾಸುದೇವನು ವಾಯುದೇವನಿಂದ ಕೂಡಿಕೊಂಡು ಚತುರ್ಮುಖನ ಶರೀರವನ್ನು ಪ್ರವೇಶಿಸಿ ಹೊಟ್ಟೆಯ ಪ್ರದೇಶದಲ್ಲಿ ವಾಯುದೇವನಿಗೆ ಚೆನ್ನಾಗಿ ಸ್ತುತಿಸಲು ಆದೇಶಿಸುವನು. ಅದರಂತೆ ವಾಯುದೇವರು ಆ ಜಾಗದಲ್ಲಿ ಚೆನ್ನಾಗಿ ಸ್ತುತಿಸಲು ಅದು 'ಉದರ' ಎನಿಸುವುದು. ಹಾಗೆಯೇ ಮುಂದೆ ವಿಶಾಲ ಸ್ಥಳವನ್ನು ಮಾಡಿಕೊಡೆಂದು ವಾಸುದೇವನ ಆದೇಶಾನುಸಾರವಾಗಿ ವಾಯುದೇವನು ವಿಶಾಲ ಸ್ಥಳವನ್ನು ಮಾಡಿಕೊಟ್ಟದ್ದರಿಂದ ಆ ಜಾಗ 'ಉರಸ್' –ಎನಿಸಿದೆ. ಶಾರ್ಕರಾಕ್ಷ್ಯಮುನಿಗಳು ಉದರದಲ್ಲಿ ಉದರನಾಮಕನಾಗಿ ಇರುವ ವಾಸುದೇವನನ್ನು ಉಪಾಸನೆ ನಡೆಸಿದರೆ, ಆರುಣಿ ಮುನಿಗಳು ಹೃದಯದಲ್ಲಿ ಹೃದಯನಾಮಕನಾಗಿ ಇರುವ ವಾಸುದೇವನನ್ನು 'ಹೃದಯ'ನಾಮಕನಾಗಿ ಉಪಾಸನೆ ನಡೆಸುವರು.

ಹೀಗೆ ಶಾರ್ಕರಾಕ್ಷ್ಯರ ಹಾಗೂ ಆರುಣಿ ಋಷಿಗಳ ಉಪಾಸನೆಯ ಹಿನ್ನೆಲೆಯಾಗಿ ಉದರ ಮತ್ತು ಹೃದಯ ಎನಿಸುವಲ್ಲಿ ವಾಯುದೇವನ ಪಾತ್ರ ಇರುವುದು.91

೨೭. ಜ್ಞಾನಾತ್ಮಕ ವಿಷ್ಣುವಿನಲ್ಲಿ ರತನಾಗಿರುವವನು:

ಜ್ಞಾನಾತ್ಮಕ ವಿಷ್ಣುವಿನಲ್ಲಿ ರತನಾಗಿರುವವನು ಅಥವಾ ಜಗತ್ತನ್ನು ಧಾರಣೆ ಮಾಡುವವನು –ಎಂಬ ಅರ್ಥದಲ್ಲಿ ವಾಯುದೇವನನ್ನು 'ಭರತ' ಎಂದು ಉಲ್ಲೇಖಿಸಿ, ಅಂತಹ ಭರತನಿಂದ ಜಗತ್ಕಾರಣನಾಗಿ ತಿಳಿಯಲ್ಪಟ್ಟವನು ಭಗವಂತನೆಂದು ಸ್ತುತಿಸಲಾಗಿದೆ.92

---

90. ಉದರಮುಪಾಸತೇ ಯರ್ಹಿ ವರ್ತ್ಮನಿ ಸೂಕ್ಷ್ಮದೃಶಃ ಪರಿಸರಪದ್ಧತಿಂ ಹೃದಯಮಾರುಣಯೋದಹರಮ್ ।

*– ಭಾಗ. 10-94-18.*

* ಪರಿಸರಃ ಪ್ರಾಣಃ ಪದ್ಧತಿರ್ಮಾರ್ಗೋ ಯಸ್ಯ ಸ ಪರಿಸರಪದ್ಧತಿಃ.......... ಪರಿಸರಸ್ಯ ಪದ್ಧತಿರಿತಿ ವಾ ।

*– ಭಾಗ.ತಾ.ನಿ.*

91. '......... ಉರು ಗೃಣೇಹೀತ್ಯಬ್ರವೀತ್ ತದುರಮಭವದುರ್ವೇವ ಮೇ ಕುರ್ವಿತ್ಯಬ್ರವೀತ್ ತದುರೋಽಭವದುದರಂ ಬ್ರಹ್ಮೇತಿ ಶಾರ್ಕರಾಕ್ಷ್ಯಾ ಉಪಾಸತೇ ಹೃದಯಂ ಬ್ರಹ್ಮೇತ್ಯಾರುಣಯೋ....'

*– ಭಾಗ.ತಾ.ನಿ. 10-94-18.*

92. ರತತ್ವಾದ್ ಭಾತ್ಮಕೇ ವಿಷ್ಣಾವಥವಾಽಪಿ ಜಗದ್‌ಭೃತೇಃ ಭರತೋ ವಾಯುರದ್ದಿಷ್ಟಃ.........'

*– ನಾಮಸಂಹಿತಾ, ಭಾಗ.ತಾ.ನಿ. 10-94-19.*

* ಭರತಮತಃ ವಾಯುಜ್ಞಾತಃ । *– ಭಾಗ.ತಾ. 9.*

### ೨೮. ಮೋಕ್ಷಸಾಧನಜ್ಞಾನಪರಿಪೂರ್ಣನಾಗಿ ವಾಯುದೇವನಿಂದ:

ಭಗವಂತನನ್ನು 'ಹೃದಯ' 'ಎಂದು ಉಪಾಸನೆ ನಡೆಸುವ ಮುನಿಗಳು ಮೋಕ್ಷಕ್ಕೆ ಸಾಧನವಾದ ತಿಳಿವಳಿಕೆಯನ್ನು ಪೂರ್ಣವಾಗಿ ಅನುಗ್ರಹಿಸುವ ವಾಯುದೇವನ ಅನುಗ್ರಹ ದಿಂದಾಗಿಯಷ್ಟೇ ಹಾಗೆ ಉಪಾಸನೆ ನಡೆಸಲು ಸಮರ್ಥರಾಗಿರುವರೆಂದು ಸೂಚಿಸ ಲಾಗಿದೆ.93

### ೨೯. ಹರಿಸರ್ವೋತ್ತಮತ್ವಕ್ಕೆ ಪೂರಕವಾಗಿ ವಾಯುಜೀವೋತ್ತಮತ್ವದ ನಿರೂಪಣೆ:

ಹರಿಸರ್ವೋತ್ತಮತ್ವವನ್ನು ಸಾಧಿಸಹೊರಟ 'ನಹಿ ಪರಿಮಸ್ಯ....' ಎಂಬ ಪದ್ಯದಲ್ಲಿ 'ಜೀವರ ಮಧ್ಯದಲ್ಲಿ ವಾಯುದೇವನ ಉತ್ತಮತ್ವವನ್ನು ದೃಷ್ಟಾಂತವಾಗಿ ಉದಾಹರಿಸಿರು ವುದಲ್ಲದೆ94, ವಾಯುದೇವನನ್ನು ಜ್ಞಾನಿಯನ್ನಾಗಿ, ವಿಶ್ವಸಂಯೋಜಕನನ್ನಾಗಿ, ಸರ್ವಾ ಧಾರಕನನ್ನಾಗಿ ಉಲ್ಲೇಖಿಸಿ95 ಅಂತಹ ವಾಯುದೇವನಿಗಿಂತಲೂ ಉತ್ತಮನಾದವನನ್ನಾಗಿ ಶ್ರೀಹರಿಯನ್ನು ಪ್ರತಿಪಾದಿಸಲಾಗಿದೆ.96

ಹಾಗೆಯೇ ಮುಖ್ಯಪ್ರಾಣನ ಅನುಗ್ರಹದಿಂದ ಶರೀರಧಾರಿಗಳಾದ ನಿತ್ಯಜೀವರು ಅನಂತ ಸಂಖ್ಯೆಯಲ್ಲಿ ಇರುವರೆಂದೂ ತಿಳಿಸಲಾಗಿದೆ.97

ಈ ರೀತಿಯಾಗಿ ಈ ಪದ್ಯದಲ್ಲಿ ಹರಿಸರ್ವೋತ್ತಮತ್ವಕ್ಕೆ ಪೂರಕವಾಗಿ, ಪ್ರಾಸಂಗಿಕ ವಾಗಿ ಪ್ರತಿಪಾದಿಸಿರುವ ವಾಯುಜೀವೋತ್ತಮತ್ವದ ಅಂಶವೇ ಅಧಿಕವಾಗಿದೆ.

---

93. ನಿರ್ಭೃತಮೋಕ್ಷಹೃದಯಯೋಗಯುಜೋ ಹೃದಯಂ ಮುನಯ ಉಪಾಸತೇ.....। *– ಭಾಗ. 10-14-23.*

* ಯೇ ಮುನಯೋ ಹೃದ್ಯಯನಂ ಭಗವಂತಂ ನಿಭೃತಮೋಕ್ಷಹೃದಯೇನ ವಾಯುನಾ ಯೋಗೇನ ಯುಕ್ತಾಃ ನಿಯಮಿತಾಃ ಸಂತಃ ಉಪಾಸತೇ..... । *– ಭಾಗ.ತಾ.ನಿ.*

* ಪರಿಪೂರ್ಣಂ ಮೋಕ್ಷಾರ್ಥಂ ಜ್ಞಾನಂ ಯಸ್ಯ ಸ ನಿಭೃತಮೋಕ್ಷಹೃದಯಃ ।

* ನಿಭೃತೋ ಮೋಕ್ಷವಿತ್ ಪ್ರಾಣಸ್ತದ್ಯೋಗಾತ್ ತತ್ಪ್ರಸಾದತಃ ।
ಜಾನಂತಿ ಪರಮಂ ದೇವಂ ನಾನ್ಯಥಾ ತು ಕಥಂಚನ ॥
*– ಭಾಗವತಸಂಹಿತಾ (ಭಾಗ.ತಾ.ನಿ.)*

94. ......ವ್ಯಯತ ಇವಾತ್ರ ಯಸ್ಯ ಚ ಶೂನ್ಯತುಲ ಸಂದಧತಃ । *– ಭಾಗ. 10-94-30.*

* ಅತ್ರ ಜೀವಸಮುದಾಯೇ ವ್ಯಯತಃ ವಿಶೇಷೇಣಾಯತಃ ।
ಸರ್ವಜ್ಞಸ್ಯ ಥಾ ಪ್ರಾಣಸ್ಯ ನಾಪರಃ ಸ್ವತಂತ್ರಃ ತದ್ವತ್ ॥ *– ಭಾಗ.ತಾ.ನಿ.*

95. ಸಂದಧತಃ - ವಿವಿಧಾಕಾರೇಣ ವಿಶ್ವಂ ಸಂಯೋಜತಃ ಸರ್ವಾಧಾರಕಸ್ಯ ಚ । *– ಬ.ಗೋ.*

96. ನಹಿ ಪರಮಸ್ಯ ಕಶ್ಚಿದಪರೋಽನಪರಸ್ಯ ಭವೇತ್.... । *– ಭಾಗ.*

* ಅನಪರಸ್ಯ ಅನಾತ್ ಪ್ರಾಣಾದಪ್ಯುತ್ತಮಸ್ಯ । *– ಬ.ಗೋ.*

97. ಅಪರಿಮಿತಾ ಧ್ರುವಾಸ್ತನುಭೃತೋ ಯದಿ ಸರ್ವ ತತೋ । *– ಭಾಗ.*

* ಯದಿ ತತಃ ಪ್ರಾಣಾತ್ ತನುಭೃತೋ ಧ್ರುವಾ ಜೀವಾಸ್ತರ್ಹ್ಯಪರಿಮಿತಾಃ ಸಂತಿ ।
*– ಭಾಗ.ತಾ.ನಿ.*

ಹೀಗೆ ಭಾಗವತದ ಪ್ರಮುಖ ಭಾಗವಾದ ಶ್ರುತಿಗೀತೆಯಲ್ಲಿ ಮೂರು ಪದ್ಯಗಳಲ್ಲಿ ವಾಯುದೇವನ ಪ್ರಸ್ತಾವ ಬಂದಿದೆ.

## ೩೦. ವ್ಯವಹಾರದ ವ್ಯವಸ್ಥೆಗೆ ದೃಷ್ಟಾಂತ:

ಭಗವಂತನು ಬೇರೆ ಬೇರೆ ಇಂದ್ರಿಯಗಳಲ್ಲಿದ್ದು ಆಯಾ ಇಂದ್ರಿಯಕ್ಕೆ ಬೇಕಾಗುವ ಶಕ್ತಿಯನ್ನು ನೀಡುವವನಾದುದರಿಂದ ವ್ಯವಸ್ಥಿತವಾಗಿ ಚಕ್ಷುರಿಂದ್ರಿಯದಲ್ಲಿ ದರ್ಶನಶಕ್ತಿಪ್ರದ, ಶ್ರೋತ್ರೇಂದ್ರಿಯದಲ್ಲಿ ಶ್ರವಣಶಕ್ತಿಪ್ರದ –ಹೀಗೆ ವ್ಯವಸ್ಥಿತವಾಗಿ ವ್ಯವಹರಿಸಲ್ಪಡುವನು. ಹೀಗೆ ವಿದೇಹರಾಜನಿಗೆ ಉಪದೇಶಿಸಿದ ಪಿಪ್ಪಲಾಯನರು ಇದಕ್ಕೆ ವಾಯದೇವರ ದೃಷ್ಟಾಂತ ಕೊಡುವರು. ಹೇಗೆ ವಾಯುದೇವ ಬೇರೆ ಬೇರೆ ಇಂದ್ರಿಯದಲ್ಲಿದ್ದುಕೊಂಡು ಆಯಾ ಇಂದ್ರಿಯಕ್ಕೆ ಬೇಕಾಗುವ ಶಕ್ತಿಪ್ರದನೆಂದು ವ್ಯವಸ್ಥಿತವಾಗಿ ವ್ಯವಹರಿಸಲ್ಪಡುವನೋ ಹಾಗೆ –ಎಂದು.98

## ೩೧. ಬೇರೆ ಬೇರೆ ದೇಹಕ್ಕೆ ಪ್ರಾಣನಿಂದ ನಯನ:

ಬೇರೆ ಬೇರೆ ಸ್ಥಾವರಜಂಗಮಗಳಲ್ಲಿ ಪರಮಾತ್ಮಸಹಿತನಾದ ಪ್ರಾಣದೇವನಿಂದ ಒಯ್ಯಲ್ಪಡುವ ಜೀವನು ದೇಹದಿಂದ ಬೇರೆ ದೇಹಕ್ಕೆ ಓಡುವನು. ಸುಪ್ತವ್ಯವಸ್ಥೆಯಲ್ಲೂ ಹೀಗೆಯೇ –ಎಂದು ಪಿಪ್ಪಲಾಯನರು ವಿದೇಹರಾಜನಿಗೆ ಉಪದೇಶಿಸುವರು.99

## ೩೨. ವಾಯುಪ್ರತೀಕದಲ್ಲಿ ದೇವರಪೂಜೆ:

ಶ್ರೀಕೃಷ್ಣ ತನ್ನ ಪೂಜೆಗೆ ಪ್ರತೀಕಗಳನ್ನಾಗಿ ಉಲ್ಲೇಖಿಸಿರುವ ಸೂರ್ಯನೇ ಮುಂತಾದ ವುಗಳಲ್ಲಿ ವಾಯುದೇವನೂ ಒಬ್ಬನಾಗಿದ್ದು,100 ಅಂತಹ ವಾಯುದೇವನಲ್ಲಿ –ಅವನು ರುದ್ರಾದಿದೇವತೆಗಳಿಗಿಂತೆಲ್ಲ ಉತ್ತಮನಾದವನೆಂದು ತಿಳಿಯುವುದು ಭಗವಂತನಿಗೆ

---

98. ......ಪ್ರಾಣೋ ಯಥೇಂದ್ರಿಯಬಲೇನ ವಿಕಲ್ಪಿತಂ ಸತ್ । – *ಭಾಗ. 11-3-38.*

* ಯಥೇಂದ್ರಿಯಗತಃ ಪ್ರಾಣಸ್ತೇಷಾಂ ಶಕ್ತ್ಯಾ ವಿಕಲ್ಪ್ಯತೇ ।
ದೃಷ್ಟಿದಃ ಶ್ರುತಿದಶ್ಚೇತಿ ಮತಿದೋಽಜ್ಞಾನದಸ್ತಥಾ ॥
ಇತ್ಯಾದಿ ಭೇದತೋ ವಾಚ್ಯ ಏಕ ಏವ ಮಹಾಬಲಃ ।
ದೃಷ್ಟ್ಯಾದಿಶಕ್ತಿಸ್ತಸ್ಯೈವ ಯತೋ ನಾನ್ಯಸ್ಯ ಕಸ್ಯಚಿತ್ ॥
ಏವಂ ಸದ್ರೂಪಕಂ ಬ್ರಹ್ಮ ತತ್ತಚ್ಛಕ್ತ್ಯಾ ವಿಕಲ್ಪ್ಯತೇ ।
ಏವಮೇವ ಮಹಾಶಕ್ತಿಪ್ರಾಣಸ್ಯಾಪಿ ಬಲಪ್ರದಮ್ ॥ – *ಹರಿವಂಶೇಷು.*

99. ಅಂಡೇಷು ಪೇಶಿಷು ತರುಷ್ವನಿಶ್ಚಿತೇಷು ಪ್ರಾಣೇನ ಜೀವ ಉಪಧಾವತಿ ತತ್ರತತ್ರ । – *ಭಾಗ. 11-3-39.*

* ದೇಹಾದ್ ದೇಹಾಂತರಗತೌ ಪ್ರವಿಶೇತ್ ಪ್ರಾಣಮೇವ ತು ।
ಜೀವಃ ಪ್ರಾಣಃ ಪರಮಾತ್ಮನಮೇವಂ ಸುಪ್ತಾವಪಿ ಸ್ಫುಟಮ್ ॥
– *ಹರಿವಂಶೇಷು (ಭಾಗ.ತಾ.ನಿ. 11-3-39)*

100. ಸೂರ್ಯೋಽಗ್ನಿಃ ಖಂ ಮರುದ್ಗಾವಃ........' ಭದ್ರಪೂಜಾಪದಾನಿ ಮೇ ।

ಅತಿಪ್ರಿಯವಾದುದರಿಂದ, ಹಾಗೆ ತಿಳಿಯುವುದೇ ವಾಯುಪ್ರತೀಕದಲ್ಲಿ ಭಗವಂತನಿಗೆ ಸಲ್ಲಿಸುವ ಪೂಜೆ ಎಂದು ನಿರ್ದೇಶಿಸಲಾಗಿದೆ.101

**೩೩. ಪ್ರಾಣನನ್ನು ಒಲಿಸಿಕೊಳ್ಳುವಿಕೆ:**

ಶ್ರೀಕೃಷ್ಣನು ಉದ್ಧವನಿಗೆ ಪ್ರಾಣಾಯಾಮದ ಬಗ್ಗೆ ತಿಳಿಸುತ್ತ, ಒಂದು ಮಾಸದ ಅಭ್ಯಾಸದಿಂದ ಪ್ರಾಣಜಯ ಸಂಪಾದಿಸಿಕೊಳ್ಳಬಹುದೆಂದು ಹೇಳಲಾಗಿದ್ದು102. ಪ್ರಾಣ ದೇವನನ್ನು ಒಲಿಸಿಕೊಂಡು ಅವನ ಅನುಗ್ರಹಕ್ಕೆ ಪಾತ್ರನಾಗುವುದೇ ಪ್ರಾಣನ ಜಯ103 –ಎಂದು 'ಪ್ರಭಂಜನ' ಗ್ರಂಥದ ಮೂಲಕ ಶ್ರೀ ಮಧ್ವರು ಸಮರ್ಥಿಸಿರುವರು.

**೩೪. ಔತ್ಪತ್ತಿಕಗುಣಾಭಿಮಾನಿ ಪ್ರಾಣದೇವ:**

ಶ್ರೀಕೃಷ್ಣನು ತನ್ನ ವಿಭೂತಿರೂಪಗಳನ್ನು ತಿಳಿಸುತ್ತ ಗುಣಸಂಪನ್ನರಲ್ಲಿ ಶುಭಪ್ರಾಪ್ತಿಗೆ ಯೋಗ್ಯತಾರೂಪವಾದ ಔತ್ಪತ್ತಿಕಗುಣಕ್ಕೆ ಸೂತ್ರ ಎನಿಸುವ ಮುಖ್ಯಪ್ರಾಣನು ಅಭಿಮಾನಿ ಯಾಗಿದ್ದು ಅದರಲ್ಲಿ ಅವನು ತನ್ನ ತಿರೋಹಿತ ವಿಭೂತಿ ರೂಪನೆಂದು ತಿಳಿಸಿರುವನು.104

**೩೫. ಪರಮಾತ್ಮನನ್ನು ಒಪ್ಪದವರಿಗೆ ಮುಖ್ಯಪ್ರಾಣನ ದಂಡನೆ:**

ಶ್ರೀಕೃಷ್ಣನು ಎಲ್ಲರ ಹೃದಯದಲ್ಲಿರುವ ತನ್ನನ್ನು ತಿಳಿಯದವರನ್ನು ವಾಯುದೇವನು ದಂಡಿಸುವನೆಂದು ತಿಳಿಸಿರುವನು.105

**೩೬. ಸೂತ್ರನ ಉತ್ಪತ್ತಿ:**

ಶ್ರೀಕೃಷ್ಣ ತತ್ತ್ವಾಭಿಮಾನಿಗಳ ಉತ್ಪತ್ತಿಯನ್ನು ತಿಳಿಸುತ್ತ, ಸತ್ತ್ವಾದಿಗುಣಗಳಿಂದ ಗಾಯತ್ರ್ಯಾದಿಗಳಿಂದ ಸೂತ್ರನಾಮಕ ವಾಯು ಹುಟ್ಟುವನು. ಅವನು ಪರಮಾತ್ಮನಿಂದ

---

101. ವಾಯತೌ ಮುಖ್ಯಧಿಯಾ.......... । *– ಭಾಗ. 11-11-43.*
 * ಸರ್ವದೇವೋತ್ತಮೋ ವಾಯುರಿತಿ ಜ್ಞಾನನ್ನಚಾಪರಮ್ ।
 ಪ್ರಿಯಮಸ್ತಿ ಹರೇಃ ಕಿಂಚಿತ್....... । *– ಮಾಹಾತ್ಮ್ಯೇ (ಭಾಗ.ತಾ.ನಿ. 11-11-43.)*

102. ಏವಂ ಪ್ರಣವಸಂಯುಕ್ತಂ..... ಮಾಸಾದರ್ವಾಗ್ ಜಿತೋಽನಿಲಃ । *– ಭಾಗ. 11-14-35.*

103. ಪ್ರಸಾದಭಾಕ್ತ್ವಂ ಸಂಪ್ರೋಕ್ತಂ ಪ್ರಾಣವಿಷ್ಣ್ವೋರ್ಜಯಸ್ತ್ವಿತಿ ।
 *– ಪ್ರಭಂಜನ (ಭಾಗ.ತಾ.ನಿ.)*

104. .........ಗುಣನೌತ್ಪತ್ತಿಕೋ ಗುಣಃ । ಗುಣಿನಾಮಪ್ಯಹಂ ಸೂತ್ರಂ....... ।
 *– ಭಾಗ. 11-16-10, 11.*
 * ಔತ್ಪತ್ತಿಕಗುಣೋ ನಾಮ ಶುಭಪ್ರಾಪ್ತ್ಯೇಕಯೋಗ್ಯತಾ ।
 ತಸ್ಯಾಭಿಮಾನೀ ಪ್ರಾಣಸ್ತು ಸ ಹಿ ಸರ್ವಗುಣಾಧಿಕಃ ॥ *– ಭಾಗ.ತಾ.ನಿ.*

105. ನ ತೇ ಮಾಮಂಗ ಜಾನಂತಿ ಹೃದಿಸ್ಥಂ....... ಉಕ್ಥಶಾಸೋ......।
 *– ಭಾಗ.ತಾ.ನಿ.11-21-28.*
 * ........ತೇ ಯೇ ಉಕ್ಥೇನ ಪ್ರಾಣೇನ ಶಾಸ್ಯಾಃ । *– ಭಾಗ.ತಾ.ನಿ.*
 * ವಿಷ್ಣುಭಕ್ತಾನ್ ಸದಾ ವಾಯುಃ ಶಾಸಯೇತ್ ತಮಸಿ ಕ್ಷಿಪನ್..... । *– ಭಾಗ.ತಾ.ನಿ.*

ಕೂಡಿದವನಾಗುವನು.106 ಅವನ ಪುತ್ರ ಅಹಂಕಾರಾಭಿಮಾನೀ ರುದ್ರ –ಎಂದು ತಿಳಿಸಿರುವನು.

**೩೭. ಪಾವಮಾನಮಂಡಲ ನೀರಾಜನ:**

ಶ್ರೀಕೃಷ್ಣ ಋಗ್ವೇದದ ಪಾವಮಾನಮಂಡಲವನ್ನು 'ನೀರಾಜನ' ಎಂದು ಉಲ್ಲೇಖಿಸುವ107 ಮೂಲಕ ಅದು ತನಗೆ ಅತ್ಯಂತ ಪ್ರಿಯವಾದುದೆಂದು ಸೂಚಿಸಿ, ಅದರಲ್ಲಿ ಪ್ರತಿಪಾದ್ಯನಾದ ವಾಯುದೇವನ ಮಹಿಮೆಗಳೂ ತನಗೆ ಪ್ರಿಯವಾದವುಗಳೆಂದು ಸೂಚಿಸಿರುವನು.108

*

106. ........ತೇಭ್ಯಃ ಸಮಭವತ್ ಸೂತ್ರಂ ಮತ್ಸೂತ್ರೇಣ ಚ ಸಂಯುತಮ್ ।
*– ಭಾಗ. 11-24-6.*

* ತಾಸು ವೀರ್ಯಂ ಸಮುತ್ಸೃಷ್ಟಂ ಬ್ರಹ್ಮಣೇಕತ್ವಮಾಗತಮ್ ।
ಸ ಸೂತ್ರಾತ್ಮಾ ಸಮುದ್ದಿಷ್ಟೋ ವಾಯುರ್ಲೋಕಪ್ರಣಾಯಕಃ ॥
ತಸ್ಯಾಪಿ ಸೂತ್ರಂ ಭಗವಾನ್ ಧಾರಣಾತ್ ವಿಷ್ಣುರವ್ಯಯಃ ।
ಸೂತ್ರಪುತ್ರಸ್ತ್ವಹಂಕಾರಃ ಸ ರುದ್ರಃ ಸಮುದಾಹೃತಃ ॥ – ಪ್ರಾಥಮ್ಯೇ *(ಭಾಗ.ತಾ.ನಿ.)*

107. '..........ಧಾಮನೀರಾಜನಾದಿಭಿಃ । *– ಭಾಗ. 11-27-30.*

108. ನಿತರಾಂ ರಂಜಯೇದ್ ಯಸ್ಮಾ ಪಾವಮಾನಂ ತು ಮಂಡಲಮ್ ।
ವಿಷ್ಣುನೀರಾಜನಂ ತಸ್ಮಾದ್ ವಿದ್ವದ್ಭಿಃ ಸಮುದಾಹೃತಮ್ ॥ *– ಭಾಗ.ತಾ.ನಿ.*

## 'ಪ್ರಕಾಶಸಂಹಿತೆ'ಯಲ್ಲಿ

# • ವಾಯುದೇವನ ಪ್ರಸ್ತಾವ •

ಶ್ರೀ ಮಧ್ವರು ತಮ್ಮ ಸರ್ವಮೂಲಗ್ರಂಥಗಳಲ್ಲಿ ಉಲ್ಲೇಖಿಸಿರುವ ಆಕರಗ್ರಂಥಗಳಲ್ಲಿ ಪಂಚರಾತ್ರಾಗಮದಲ್ಲಿಯ ಪ್ರಕಾಶಸಂಹಿತೆಯಾಗಿಯೂ ಒಂದು. ಅಂತಹ ಪ್ರಕಾಶಸಂಹಿತೆ ಪದಿನೈದು ಅಧ್ಯಾಯಗಳನ್ನೊಳಗೊಂಡ ಪ್ರಥಮ ಪರಿಚ್ಛೇದದಿಂದಲೂ ಹನ್ನೆರಡು ಅಧ್ಯಾಯಗಳನ್ನೊಳಗೊಂಡ ದ್ವಿತೀಯ ಪರಿಚ್ಛೇದದಿಂದಲೂ ಕೂಡಿದ್ದಾಗಿ ಬೆಳಕಿಗೆ ಬಂದಿದೆ. ಅಂತಹ ಪ್ರಕಾಶಸಂಹಿತೆಯಲ್ಲಿ ವಾಯುದೇವನ ಪ್ರಸ್ತಾವ ಸುಮಾರು ಇಪ್ಪತ್ತ ಕ್ಕಿಂತಲೂ ಅಧಿಕ ಕಡೆಗಳಲ್ಲಿ ಬಂದಿದ್ದು, ಅದು ಎಲ್ಲೆಲ್ಲಿ ಹೇಗೆಹೇಗೆ ಬಂದಿದೆ ಎಂಬುದನ್ನು ಪರಿಶೀಲಿಸೋಣ-*

**೧. ಲಕ್ಷ್ಮೀದೇವಿಯ ಆಧಿಕ್ಯ:**

'ಬ್ರಹ್ಮವಾಯ್ವೋಃ ಕೋಟಿಗುಣೈರಧಿಕಾ ವಿಷ್ಣುವಲ್ಲಭಾ' [1-1-54] ಎಂದು ಲಕ್ಷ್ಮೀ ದೇವಿ ಚತುರ್ಮುಖನಿಗಿಂತ ಹೇಗೋ ಹಾಗೆ ವಾಯುದೇವನಿಗಿಂತಲೂ ಕೋಟಿಪಟ್ಟು ಗುಣಗಳಿಗಿಂತ ಅಧಿಕಳೆಂದು ನಿರೂಪಿಸಲಾಗಿದೆ.

**೨. ಚತುರ್ಮುಖನ ಬಳಿಕ ವಾಯುದೇವನ ಸೃಷ್ಟಿ:**

'ಬ್ರಹ್ಮಣಃ ಸೃಷ್ಟಿತಃ ಪಶ್ಚಾದ್ವಾಯೋಃ ಸೃಷ್ಟಿಃ ಶತಾಬ್ದಿತಃ' [1-6-47] ಚತುರ್ಮು ಖನ ಸೃಷ್ಟಿ ಆಗಿ ನೂರು ವರ್ಷಗಳ ಬಳಿಕ ವಾಯುದೇವನ ಸೃಷ್ಟಿ.

**೩. ಪ್ರತೀಕಾಲಂಬನರಿಂದ ವಾಯುದೇವನ ಪ್ರಾಪ್ತಿ:**

'......ತತ್ರ ಮುಖ್ಯಾ ಹರಿಂ ಯಾಂತಿ ತದನ್ಯೇ ವಾಯುಮೇವ ತು । ಅಪಕ್ವಾ ಯೇ ನ ತೇ ಯಾಂತಿ ವಾಯುಂ ವಾ ಹರಿಮೇವ ವಾ'* [1-8-57, 58] ಮುಕ್ತಿಯನ್ನು ಪಡೆಯುವಾಗ ಸಾಧಕರಲ್ಲಿ ಮುಖ್ಯರಾದ ಅಪ್ರತೀಕಾಲಂಬನರು ನೇರವಾಗಿ ಶ್ರೀಹರಿಯನ್ನೇ ಹೊಂದುವುದಾದರೆ, ಅಮುಖ್ಯರಾದ ಪ್ರತೀಕಾಲಂಬನರು- ತಮ್ಮ ದೇಹದಲ್ಲಷ್ಟೇ ದೇವ ರನ್ನು ಕಾಣುವವರು ವಾಯುದೇವನನ್ನು ಹೊಂದಿ, ಅವನ ಮೂಲಕ ದೇವರನ್ನು

---

1. ವಿದ್ವಾನ್ ಎಂ. ಉದಯಕುಮಾರ ಇವರು ಪ್ರೌಢಪ್ರಬಂಧವಾಗಿ ಸಿದ್ಧಪಡಿಸಿರುವ ಪ್ರಕಾಶಸಂಹಿತೆಯ ಕುರಿತಾದ ಕೃತಿಯ ಆಧಾರದಲ್ಲಿ ಸಂಗ್ರಹಿಸಲಾಗಿದೆ.

2. ಇದೇ ಮಾತು ಭಾಗವತತಾತ್ಪರ್ಯನಿರ್ಣಯದಲ್ಲಿ (೨೬೩೨೪) ಬ್ರಹ್ಮತರ್ಕದ ಮಾತಾಗಿಯೂ ಉಲ್ಲೇಖಗೊಂಡಿದೆ ಎಂಬುದು ಗಮನಾರ್ಹ.

ಹೊಂದುವರು. ಜ್ಞಾನದ ಪಕ್ವತೆ ಪಡೆಯದವರು ವಾಯುದೇವನನ್ನಾಗಲಿ, ಶ್ರೀಹರಿಯನ್ನಾಗಲಿ ಹೊಂದಲಾರರು.

೪. ಸಂಕರ್ಷಣಜಯರಿಂದ ವಾಯುದೇವನ ಸೃಷ್ಟಿ:

'ಏವಂ ಸಂಕರ್ಷಣೋ ವಾಯೋಃ ಜಯಾಯಾಂ ಸೂಕ್ಷ್ಮದೇಹಕೃತ್....... ಸಂಕರ್ಷಣಸ್ತು ಭಾರತ್ಯಾಃ ಮುಖ್ಯಪ್ರಾಣಂ ವ್ಯಧಾತ್ ಪತಿಮ್' [1-8-95, 96] ಸಂಕರ್ಷಣರೂಪಿ ಪರಮಾತ್ಮನು ತನ್ನ ಪತ್ನಿ ಜಯೆಯಲ್ಲಿ ವಾಯುದೇವನಿಗೆ ಸೂಕ್ಷ್ಮದೇಹವನ್ನು ಸೃಷ್ಟಿಸಿದನು. ಹಾಗೆಯೇ ವಾಯುದೇವ ಭಾರತಿಗೆ ಪತಿಯಾಗುವಂತೆ ಮಾಡಿದನು.

೫. ಮಹತ್ತತ್ತ್ವಕ್ಕೆ ಅಭಿಮಾನಿ:

'ಸಭಾರ್ಯೌ ಬ್ರಹ್ಮವಾಯೂ ಚ ಮಹತ್ತತ್ತ್ವಾಭಿಮಾನಿನೌ' [1-8-119] ಚತುರ್ಮುಖಸರಸ್ವತಿಯರು ಹೇಗೋ ಹಾಗೆ ವಾಯುದೇವ ಭಾರತಿಯರು ಮಹತ್ತತ್ತ್ವಕ್ಕೆ ಅಭಿಮಾನಿಗಳು.

೬. ಆನಂದನಾಮಕ ಭಗವಂತನ ಪುತ್ರ:

'ಮಹತ್ತತ್ತ್ವನಿಯಂತೇಶಃ ಆನಂದಾಖ್ಯೋ ಹರಿಃ ಸ್ವಯಮ್ । ಆನಂದನಾಮ್ನಸ್ತನಯೌ ಬ್ರಹ್ಮವಾಯೂ ಮಹದ್ಗತೌ' [1-8-119, 120] ಮಹತ್ತತ್ತ್ವನಿಯಾಮಕನಾದ ಭಗವಂತನು ಆನಂದನಾಮಕನಾಗಿರುವನು. ಅವನ ಪುತ್ರರು ಮಹತ್ತತ್ತ್ವದಲ್ಲಿರುವ ಬ್ರಹ್ಮವಾಯುಗಳು.

೭. ನಿತ್ಯವಸ್ತುಗಳ ಅಭಿಮಾನಿ:

ಸೂತ್ರನಾಮಾ ತದಾ ವಾಯುಃ ಬ್ರಹ್ಮಾ ಪುರುಷನಾಮಕಃ ।
ವೇದಾದಿಸರ್ವನಿತ್ಯಾನಾಂ ಅರ್ಥಾನಾಂ ಜೀವಸಂತತೇಃ ।
ನಿತ್ಯಾನಾಮಪಿ ಸೃಷ್ಟೌ ಹಿ ತಾವುಭಾವಭಿಮಾನಿನೌ ॥ [1-8-97, 98]

ಸೂತ್ರನಾಮಕ ವಾಯು ಹಾಗೂ ಪುರುಷನಾಮಕ ಬ್ರಹ್ಮ ವೇದವೇ ಮುಂತಾದ ಸಕಲನಿತ್ಯಪದಾರ್ಥಗಳಿಗೂ, ಜೀವಸಮೂಹಕ್ಕೂ ಅಭಿಮಾನಿಗಳಾದ ಸೃಷ್ಟಿಸಲ್ಪಟ್ಟಿರುವರು.

೮. ಯಾವಾಗಲೂ ಎಲ್ಲ ತತ್ತ್ವಗಳಲ್ಲಿ ವಾಸ:

'ಲಕ್ಷ್ಮೀನಾರಾಯಣೌ ಬ್ರಹ್ಮವಾಯೂ ಭಾರ್ಯಾಸಮನ್ವಿತೌ ಉಕ್ತೇಷು ಪಕ್ಷ್ಯಮಾಣೇಷು ಸರ್ವತತ್ತ್ವೇಷು ಸರ್ವದಾ । ವಸಂತಿ ತಾನ್ ವಿನಾ ಶೇಷವೀಶಾದ್ಯಾ ನ ಕ್ಷಮಾ ಕ್ವಚಿತ್' [1-8-132, 133] ಹೇಗೆ ಲಕ್ಷ್ಮೀನಾರಾಯಣರೋ ಸರಸ್ವತಿ ಚತುರ್ಮುಖರೋ ಹಾಗೆ ಭಾರತಿವಾಯುದೇವರೂ ಹಿಂದೆ ಹೇಳಲಾದ ಹಾಗೂ ಮುಂದೆ ಹೇಳಲಾಗುವ ಎಲ್ಲ ತತ್ತ್ವಗಳಲ್ಲೂ ಯಾವಾಗಲೂ ನೆಲೆಸುವರು. ಅವರನ್ನು ಹೊರತಾಗಿ ಶೇಷಾದಿಗಳು ಆಯಾ ತತ್ತ್ವವನ್ನು ನಿಯಮಿಸಲು ಸಮರ್ಥರೆನಿಸಲಾರರು.

**೯. ವಾಯುದೇವನ ಸರ್ವಾವತಾರಗಳಲ್ಲೂ ಭಗವಂತನ ವಿಶೇಷಾವೇಶ:**

'ವಾಯೋಃ ಸರ್ವಾವತಾರೇಷು ವಿಶೇಷಾವೇಶ ಏವ ಹಿ' [1-11-6] ವಾಯುದೇವನ ಎಲ್ಲ ಅವತಾರಗಳಲ್ಲೂ ಭಗವಂತನ ವಿಶೇಷಾವೇಶ ಇದೆ.

**೧೦. ಪ್ರಾಣದೇವನ ಪಾದದಲ್ಲಿ ಎಲ್ಲ ರೇಖೆಗಳು:**

'ಸಂಪೂರ್ಣಾಃ ಸರ್ವದಾ ರೇಖಾಃ ಪ್ರಾಣೇ ಪ್ರಾಯೋ ಹರಾವಪಿ' [1-11-23] ಮುಖ್ಯಪ್ರಾಣನ ಎಡ ಪಾದದಲ್ಲಿ ಶ್ರೀಹರಿಯ ಪಾದದಲ್ಲಿ ಹೇಗೋ ಹಾಗೆ ಧೇನು, ಶಂಖ, ಗದಾ –ಮುಂತಾದ ಎಲ್ಲ ರೇಖೆಗಳೂ ಸಂಪೂರ್ಣವಾಗಿ ಇವೆ.

**೧೧. ಸಕಲ ದೈಹಿಕಲಕ್ಷಣಗಳು ವಾಯುದೇವನಲ್ಲಿ:**

'ಸರ್ವಾಣಿ ಪರಿಪೂರ್ಣಾನಿ ಲಕ್ಷಣಾನಿ ವಿಧೀರಯೋಃ । ಶರೀರೇ ಚ ಸ್ವರೂಪೇ ಚ.......' [1-11-28, 29] ಚತುರ್ಮುಖನ ಹಾಗೂ ವಾಯುದೇವನ ಶರೀರದಲ್ಲೂ, ಸ್ವರೂಪದಲ್ಲೂ ಎಲ್ಲ ಲಕ್ಷಣಗಳೂ ಪರಿಪೂರ್ಣಗಳಾಗಿವೆ.

**೧೨. ವಾಯುದೇವನ ಗದಾಪ್ರಹಾರ:**

**ವಾಯೋರ್ಗದಾಪ್ರಹಾರೇಣ ಭಗ್ನಲಿಂಗಾಸ್ತಮೋನುಗಾಃ ।**
**ಲಯೇ ಸೃಷ್ಟೌ ತಮಸ್ಯಂಧೇ ಪತಂತಿ ಶ್ರೀಹರೀಚ್ಛಯಾ ॥** [1-13-36]

ತಮೋಯೋಗ್ಯರು ವಾಯುದೇವನ ಗದಾಪ್ರಹಾರದಿಂದ ಭಗ್ನವಾದ ಲಿಂಗದೇಹವುಳ್ಳವರಾಗಿ ಶ್ರೀಹರಿಯ ಇಚ್ಛೆಯಿಂದ ಅಂಧಂತಮಸ್ಸಿನಲ್ಲಿ ಬೀಳುವರು.

**೧೩. ವಾಯುವಿನಿಂದ ದುಃಖದಾನ:**

'......ಅವರ್ಣನೀಯದುಃಖೌಘಂ ವಾಯುರ್ದಾಸ್ಯತಿ ತಾನ್ ಪ್ರತಿ' [1-13-78] ಅಂಧಂತಮಸ್ಸಿನಲ್ಲಿ ಇರುವವರಿಗೆ ವಾಯುದೇವ ವರ್ಣಿಸಲಾಗದಷ್ಟು ದುಃಖರಾಶಿಯನ್ನು ನೀಡುವನು.

**೧೪. ಶೇಷನಿಗೆ ವಾಯುಕೂರ್ಮನ ಆಶ್ರಯ:**

'......ತಸ್ಯಾಶ್ರಯೋ ವಾಯುಕೂರ್ಮಃ ತಸ್ಯ ಕೂರ್ಮಾಕೃತಿರ್ಹರಿಃ' [1-14-19] ವಿಶ್ವವನ್ನು ತನ್ನ ಹೆಡೆಯ ಮೇಲೆ ಹೊತ್ತಿರುವ ಶೇಷನಿಗೆ ಕೂರ್ಮರೂಪದ ವಾಯು ಆಶ್ರಯನಾದರೆ, ಅಂತಹ ವಾಯು ಕೂರ್ಮನಿಗೆ ಕೂರ್ಮಾಕೃತಿಯ ಶ್ರೀಹರಿ ಆಶ್ರಯನು.

**೧೫. ವಾಯುದೇವನಿಗೆ ದೈತ್ಯಾವೇಶ ಇಲ್ಲ:**

'........ನ ವಾಯೋರ್ಹಿ ದೈತ್ಯಾವೇಶಃ ಕದಾಚನ' [2-2-55] ವಾಯುದೇವನಿಗೆ ಎಂದೂ ದೈತ್ಯಾವೇಶವಿಲ್ಲ.

೧೬. **ಲೋಕಪಾಲಕರು ಮುಖ್ಯಪ್ರಾಣವಶರು:**

**'....ತತ್ತಲ್ಲೋಕೇಷು ಸಂಸ್ಥಾಪ್ಯ ಮುಖ್ಯಪ್ರಾಣವಶಾನ್ ವ್ಯಧಾತ್'** [2-2-73] ಚತುರ್ಮುಖನು ಲೋಕಪಾಲಕರನ್ನು ಆಯಾ ಲೋಕದಲ್ಲಿ ಸ್ಥಾಪಿಸಿ ಮುಖ್ಯಪ್ರಾಣನ ಅಧೀನರನ್ನಾಗಿ ಮಾಡಿದನು.

೧೭. **ನೆತ್ತಿಯ ಕಮಲದಲ್ಲಿ ವಾಯುದೇವ:**

**'.......ಮೂರ್ಧ್ನ್ಯೇಕೋ ಬಹುರೂಪೇಣ ವಾಯುಃ ಸರ್ವದಳಾಧಿಪಃ'** [2-3-33] ನೆತ್ತಿಯಲ್ಲಿರುವ ೧೬ ದಳಗಳ ಪದ್ಮದಲ್ಲಿ ವಾಯುದೇವ ಬಹಳರೂಪಗಳಿಂದ ಸರ್ವದಳಗಳಿಗೂ ಒಡೆಯನಾಗಿ ಇರುವನು.

೧೮. **ಮೂರು ಕೋಟಿ ರೂಪಗಳಿಂದ ವಾಮನನ ಅರ್ಚಕ:**

**ತಸ್ಯ ತ್ರಿಕೋಟಿಲೋಮಭ್ಯೋ ವಾಯುಸ್ತಾವತ್ಸ್ವರೂಪಕಃ ।**
**ವಾಣ್ಯಾ ತಾವದ್ರೂಪವತ್ಯಾ ವಾಮನಸ್ಯಾರ್ಚಕೋಽಭವತ್ ॥** [2-4-31]

ವಾಮನನ ಮೂರು ಕೋಟಿ ರೋಮಗಳಿಂದ ಅಷ್ಟು ರೂಪಗಳನ್ನು ತಾಳಿದ ವಾಯುದೇವ ಅಷ್ಟು ರೂಪಗಳನ್ನು ತಾಳಿದ ಭಾರತಿಯಿಂದ ಕೂಡಿಕೊಂಡು ವಾಮನನ ಅರ್ಚಕನು ಆದನು.

೧೯. **ಕುಂಭಕಸ್ಥಿತಿಯಲ್ಲಿ 'ಹರೀರ'ರ ಧ್ಯಾನ:**

**'ಹರೀರೌ ಹೃದ್ಗತೌ ಸರ್ವಂ ಧ್ಯಾಯನ್ ಕುಂಭಕಮಾಚರೇತ್'** [2-11-14] ಪ್ರಾಣಾಯಾಮದ ಕುಂಭಕದ ಸ್ಥಿತಿಯಲ್ಲಿ ಶ್ರೀಹರಿ ಹಾಗೂ ಪ್ರಾಣದೇವ ಹೃದಯದಲ್ಲಿರುವರೆಂದು ಧ್ಯಾನಿಸುತ್ತಿರಬೇಕು.

೨೦. **ಶರೀರರಥದ ಸಾರಥಿ ಸೂತ್ರ:**

**'ಇದಂ ಶರೀರಂ ಶ್ರೀವಿಷ್ಣೋಃ ರಥಮಿತ್ಯನುಚಿಂತಯೇತ್ । .......ಯಂತಾರಂ ಸೂತ್ರನಾಮಕಮ್'** [2-12-1] ಈ ಶರೀರ ಶ್ರೀಹರಿಯ ರಥ ಎಂದೂ, ರಥವನ್ನು ನಡೆಸುವ ಸಾರಥಿ ಸೂತ್ರನಾಮಕ ವಾಯುದೇವನೆಂದೂ ಅನುಸಂಧಾನ ತಾಳಬೇಕು.

೨೧. **ಶ್ರೀಹರಿಯ ಆಜ್ಞಾನುಸಾರವಾಗಿ ಎಲ್ಲವನ್ನೂ ಮಾಡುವವನು:**

**......ಏತಾನ್ ದೇವಾನ್ ಪ್ರಾಪಯಿತ್ವಾ ತೈಸ್ತೈರ್ಜ್ಞಾನಂ ಪ್ರದಾಪ್ಯ ಚ ।**
**ಮಾರ್ಗದ್ರಷ್ಟಾ ಮಾನವಾಖ್ಯ ಪುಂಸಾಂ ಚೋಚ್ಚಂ ಚತುರ್ಮುಖಮ್ ।**
**ತೇನ ತಾರಕಾಮಾದಿಶ್ಯ ಯೋಗ್ಯತಾಭಿಜ್ಞಯಾಜ್ಞಯಾ ।**
**ಮಹರ್ಜನಸ್ತಪಸ್ಸತ್ಯೇಷ್ವಪಿ ಕಾಂಚಿನ್ನಿವೇಶ್ಯ ಚ ।**
**ಅಮುಕ್ತಸ್ಥಾನವೈಕುಂಠೇ ವಾಯುಃ ಸುಖಯತಿ ಸ್ಫುಟಮ್ ।**
**ಸರ್ವಮನ್ವಂತರೇಷ್ವೇವಂ ಸರ್ವಾಜದಿವಸೇಷು ಚ ।**
**ಸರ್ವಜೀವೇಷ್ವೇವಮೀರಃ ಸರ್ವಕರ್ತಾಽಽಜ್ಞಯಾ ಹರೇಃ ॥** [2-12-46....49]

ಅರ್ಚಿಮಾರ್ಗದಲ್ಲಿ ಸಾಗುವ ಜ್ಞಾನಿಗಳಿಗೆ ಮಾರ್ಗದರ್ಶಕನಾದ ಮಾನವ ಎನಿಸುವ ವಾಯುವು ಮಾರ್ಗದಲ್ಲಿ ವಿದ್ಯುದ್ದೇವತೆಗಳೇ ಮುಂತಾದ ದೇವತೆಗಳನ್ನು ಹೊಂದಿಸಿ, ಅವರವರಿಂದ ಜ್ಞಾನವನ್ನು ಕೊಡಿಸಿ, ಜೀವೋತ್ತಮನಾದ ಚತುರ್ಮುಖನನ್ನು ತಲುಪಿಸುವನು. ಅವನಿಂದ ತಾರಕವಿದ್ಯೆಯನ್ನು ಹೊಂದಿಸಿ, ಆಯಾ ಜೀವರ ಯೋಗ್ಯತೆಯನ್ನು ಬಲ್ಲ ಅವನ ಆಜ್ಞಾನುಸಾರವಾಗಿ ಮಹಃ, ಜನಃ, ತಪಃ ಹಾಗೂ ಸತ್ಯ –ಈ ಲೋಕಗಳಲ್ಲಿ ಕೆಲವರನ್ನು ಇರಿಸುವನು. ಉಳಿದವರನ್ನು ಅಮುಕ್ತ ಸ್ಥಾನ ವೈಕುಂಠದಲ್ಲಿ ಸಂತೋಷಪಡಿಸುವನು.

ಹೀಗೆ ವಾಯುದೇವ ಚತುರ್ಮುಖನ ಎಲ್ಲ ದಿನಗಳಲ್ಲಿ, ಎಲ್ಲ ಮನ್ವಂತರಗಳಲ್ಲಿ, ಎಲ್ಲ ಜೀವರ ವಿಷಯದಲ್ಲಿ ಶ್ರೀಹರಿಯ ಆದೇಶಾನುಸಾರವಾಗಿ ಎಲ್ಲವನ್ನೂ ನಡೆಸುವನು.

★

# ಸರ್ವಮೂಲಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟ
# • ವಾಯುದೇವಪರಗಳಾದ ಮಂತ್ರಗಳು •

## ಪ್ರಾಣಾಗ್ನಿಸೂಕ್ತ

ಋಗ್ವೇದಮಂಡಲದಲ್ಲಿ ಪ್ರಸ್ತುತವಾದ, ಶ್ರೀ ಮಧ್ವರಿಂದ ತಮ್ಮ ತಂತ್ರಸಾರಸಂಗ್ರಹದಲ್ಲಿ **ಪ್ರಾಣಾಗ್ನಿಸೂಕ್ತ** ಎಂದು ಕರೆಯಲ್ಪಟ್ಟಿರುವ,[1] **ಬಳಿತ್ಥಾಸೂಕ್ತ** ವಾಯು ದೇವನ ಮೂಲರೂಪದ ಕಿರು ಪರಿಚಯದೊಂದಿಗೆ ಅವತಾರರೂಪಗಳ ಸ್ವರೂಪ ಹಾಗೂ ಸಾಧನೆಗಳ ಪರಿಚಯಕ್ಕಾಗಿ ಮಹಾಭಾರತತಾತ್ಪರ್ಯನಿರ್ಣಯದಲ್ಲಿ [2-152...156] ಉಲ್ಲೇಖಿಸಲ್ಪಟ್ಟಿದೆ.

ಹಾಗೆಯೇ **......ಬಳಿತ್ಥಾ ತದ್ವಪುಷೇ ಧಾಯಿ ದರ್ಶತಮ್..... ಇತ್ಯಾದಿ ಸೂಕ್ತಾನಿ ಚ ತತ್ಪ್ರಮಾಣಮ್** [ಮ.ಭಾ.ತಾ.ನಿ. 32-132] ಮಹಾಭಾರತದ ತಾತ್ಪರ್ಯನಿರ್ಣಯದ ಕೊನೆಯಲ್ಲೂ ಉಲ್ಲೇಖಿಸಲ್ಪಟ್ಟಿದೆ.

ಅಲ್ಲಿ ಅದರ ಅರ್ಥನಿರೂಪಣೆಯನ್ನು ನಡೆಸದಿದ್ದರೂ ಶ್ರೀ ಮಧ್ವರು ತಮ್ಮ ಹೆಚ್ಚಿನ ಗ್ರಂಥಗಳಲ್ಲಿ ಬಳಿತ್ಥಾಸೂಕ್ತಕ್ಕೆ ವ್ಯಾಖ್ಯಾನದಂತಿರುವ ಪ್ರಮಾಣಗಳ ಉದಾಹರಣೆಯೊಂದಿಗೆ ಉಪಸಂಹಾರ ಮಾಡಿದ್ದರಿಂದ ಪರಂಪರಯಾ ಬಳಿತ್ಥಾಸೂಕ್ತವನ್ನು ವ್ಯಾಖ್ಯಾನಿಸಿದಂತಾಗಿದೆ.

ಶ್ರೀ ವಾದಿರಾಜಸ್ವಾಮಿಗಳು ಮಹಾಭಾರತತಾತ್ಪರ್ಯನಿರ್ಣಯದ [2-152... 156] ತಮ್ಮ 'ಭಾವಪ್ರಕಾಶಿಕಾವ್ಯಾಖ್ಯಾನ'ದಲ್ಲಿ ವ್ಯಾಖ್ಯಾನಿಸಿರುವರು. ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಮಧ್ವವಿಜಯದ [1-6] 'ತತ್ವಚಂದ್ರಿಕಾ' ಟಿಪ್ಪಣಿಯಲ್ಲಿ ವ್ಯಾಖ್ಯಾನಿಸಿರುವರು. ಆ ಎರಡು ವ್ಯಾಖ್ಯಾನಗಳ ಬೆಳಕಿನಲ್ಲಿ 'ಬಳಿತ್ಥಾಸೂಕ್ತವನ್ನು' ಇಲ್ಲಿ ಅರ್ಥೈಸಲಾಗಿದೆ.

**ಬಳಿತ್ಥಾ ತದ್ವಪುಷೇ ಧಾಯಿ ದರ್ಶತಂ**
**ದೇವಸ್ಯ ಭರ್ಗಸ್ಸಹಸೋ ಯತೋಽಜನಿ ।**
**ಯದೀಮುಪಹ್ವರತೇ ಸಾಧತೇ**
**ಮತಿರ್ಋತಸ್ಯ ಧೇನಾ ಅನಯಂತ ಸಸ್ರುತಃ ॥**

ಯಾವ ನಾರಾಯಣನ ಪ್ರೀತಿಗಾಗಿ, ಅವನ ಆದೇಶಾನುಸಾರವಾಗಿ ಅವತಾರಗಳನ್ನು ತಾಳಿರುವನೋ ಅಂತಹ ಬಲರೂಪಿಯಾದ, ಕಲ್ಯಾದಿ ಅಸುರರ ಉಪದ್ರವವನ್ನು ಎದುರಿಸಬಲ್ಲ ಮುಖ್ಯಪ್ರಾಣನ ಬಲಾತ್ಮಕವಾದ, ಜ್ಞಾನದಿಂದ ನಿಬಿಡವಾದ, ಶ್ವಾಸರೂಪದಿಂದ

---

1. ಬಳಾದ್ಯಂ ಭೃಗುಣಾ ದೃಷ್ಟಂ ಪ್ರಾಣಾಗ್ನೇಃ ಸೂಕ್ತಮುಚ್ಯತೇ । – *[ತಂ.ಸಾ.ಸಂ. 4-68]*

ಜಗತ್ತನ್ನು ಪೋಷಿಸುವ, ಯೋಗ್ಯಾಧಿಕಾರಿಗಳನ್ನು ಪರಬ್ರಹ್ಮನೆಡೆಗೆ ಒಯ್ಯುವ ವಾಯು ದೇವನ ಮೂಲರೂಪದಲ್ಲಿ ಹೇಗೋ ಹಾಗೆಯೇ ಅವತಾರರೂಪಗಳಲ್ಲೂ ಬಲಜ್ಞಾನಾದಿ ಗಳು ಸ್ಥಾಪಿತಗಳಾಗಿವೆ. ಮುಖ್ಯಪ್ರಾಣನ ಆ ಮೂರು ಅವತಾರಗಳಲ್ಲಿ ಯಾವುದು ಮೊದಲ ಅವತಾರವೋ ಅದು ಮತಿ ಶಬ್ದದಿಂದ ವಾಚ್ಯವಾದುದು. ಅದು ಜ್ಞಾನಾತ್ಮಕ ನಾದ ಶ್ರೀರಾಮಚಂದ್ರನ ಸಮೀಪದಲ್ಲಿಯೇ ಭಕ್ತ್ಯತಿಶಯದಿಂದ ನಮ್ರವಾಗಿ ಇರುವುದು. ಹೀಗೆ ಸಮೀಪದಲ್ಲಿ ಸೇವೆ ನಡೆಸುವಂತೆ ದೂರದಲ್ಲೂ ಶ್ರೀರಾಮಚಂದ್ರನ ಕಾರ್ಯಗಳನ್ನು ಮಾಡುವುದು. ಸತ್ಯವಚನನಾದ ಶ್ರೀರಾಮಚಂದ್ರನ ಅಮೃತ ಸುರಿಸುವ ಮಾತುಗಳನ್ನು ಸೀತೆಗೆ ತಲುಪಿಸಿತು.[2]

- ಯಾರಿಂದಲೂ ಎದುರಿಸಲಾಗದ, ಮುಖ್ಯವಾಗಿ ದೇವ ಎನಿಸುವ ಭಗವಂತನ ತೇಜಸ್ಸು ಯಾವ ವಾಯುದೇವನಿಂದ ವೇದಾರ್ಥಮಥನ ಮಾಡಿ ಅಭಿವ್ಯಕ್ತವಾಯಿತೋ ಅಂತಹ ವಾಯುದೇವ ಬಲರೂಪಿ. ಅವನು ಮೂಲರೂಪದಂತೆಯೇ ಬಲಾತ್ಮಕ ನಾಗಿ, ಸರ್ವಜ್ಞನಾಗಿ ಮೂರು ಅವತಾರಗಳನ್ನು ತಾಳಲು ನಿರ್ಧರಿಸಿದನು..... ಅವನು 'ಮತಿ' ಎಂದು ಪ್ರಸಿದ್ಧನಾದವನು. ಹನುಮಂತ ಎಂಬ ಹೆಸರಿನ ಮೊದಲ ರೂಪ. ಸತ್ಯವಚನನಾದ ಶ್ರೀರಾಮಚಂದ್ರನ ಯಾವಾಗಲೂ ಆನಂದರಸವನ್ನು ಸುರಿಸುವ ಸಂದೇಶವಚನಗಳು ಆ ಹನುಮಂತನನ್ನು ಲಂಕೆಗೆ ಕೊಂಡೊಯ್ದವು.....[3]

---

2. ಯತಃ ಯಸ್ಮಾನ್ನಾರಾಯಣಾತ್ ಅಜನಿ -ಸ್ವಯಮಜನಿ ತಸ್ಯ ದೇವಸ್ಯ ಪ್ರೀತ್ಯರ್ಥಂ ತದಾಜ್ಞಯಾ ಚ..... ಸಹಸಃ -ಬಲರೂಪಸ್ಯ, ಅತ ಏವ....ಕಲ್ಯಾದ್ಯಸುರಕೃತೋಪದ್ರವ ಸಹನಶೀಲಸ್ಯ.... ಮುಖ್ಯಪ್ರಾಣಸ್ಯ ಬಟ್ -ಬಲಾತ್ಮಕಂ ದರ್ಶತಂ -ಜ್ಞಾನೇನ ತತಂ, ಭರ್ಗಃ -ಭರತಿ ಶ್ವಾಸರೂಪೇಣ ಜಗತ್ ಬಿಭರ್ತಿ.... ಪರಂ ಬ್ರಹ್ಮ ಗಮಯತೀತಿ ಚೇತಿ ಭರ್ಗ ಶಬ್ದವಾಚ್ಯಂ ....ಇತ್ಥಾ ಇತ್ಥಮೇವ ಮೂಲರೂಪೇ ಯಥಾ ಬಲಜ್ಞಾನಾದಿಕಂ ತಥೈವ ವಪುಷೇ ಅವತಾರಾಯ ಧಾಯಿ -ಅಧಾಯೀತ್ಯರ್ಥಃ । ....ಯತ್ ಪ್ರಥಮಂ ವಪುಃ ತತ್ ಮತಿ -ಮತಿ ಶಬ್ದವಾಚ್ಯಮ್ । ಋತಸ್ಯ ಜ್ಞಾನಾತ್ಮಕಸ್ಯ ರಾಮಸ್ಯ ಉಪ -ಸಮೀಪೇ ಹ್ವರತೇ -ಭಕ್ತಿಭರೇಣ ನಮ್ರೀಭೂಯ ತಿಷ್ಠತಿ ಈಂ ಇತ್ಥಮೇವ ಸಮೀಪೇ ಸೇವಾಕರಣವತ್ ಸಾಧತೇ ದೂರೇಽಪಿ ರಾಮಕಾರ್ಯಾಣಿ ಸಾಧಯತೇ । ಸ್ರುತ್ ಅಮೃತಸ್ರವಣಂ ತೇನ ಯುತಾಃ ಸಸ್ರುತಃ ಋತಸ್ಯ ಸತ್ಯವಚನಸ್ಯ ರಾಮಸ್ಯ ಧೇನಾಃ..... ಸುರಕಾರ್ಯಪೋಷಕತ್ವಾತ್ ಧೇನಾ ಶಬ್ದವಾಚ್ಯಾಃ ವಾಚಃ ಅನಯಂತ....

*– ಶ್ರೀ ವಾದಿರಾಜಗುರುಗಳು [ಭಾವಪ್ರಕಾಶಿಕಾ]*

3. ಸಹಸಃ ಅನಭಿಭಾವ್ಯಸ್ಯ ದೇವಸ್ಯ ಭರ್ಗಃ ತೇಜಃ ಯತೋ ವಾಯೋರ್ಜನಿ ವೇದಾರ್ಥ ಮಥನೇನಾಭಿವ್ಯಕ್ತಮಜನಿ ತತ್ ಪ್ರಾಣತತ್ತ್ವಂ ಬಟ್ ಬಲರೂಪಂ, ಇತ್ಥಾ ಇತ್ಥಮೇವ ಮೂಲರೂಪವದೇವ ಬಲಾತ್ಮಕಂ ದರ್ಶತಂ ಸರ್ವಜ್ಞಂ ಚ ತ್ರೇಧಾ ವಪುಷೇ ಅವ ತಾರಾಯ ಧಾಯಿ ಅವಧೃತಮ್ । .....ಸ ಮತಿರ್ನಾಮ ಹನುಮನ್ನಾಮಕಂ ಪ್ರಥಮಂ ರೂಪಮ್ । ....ಸಸ್ರುತಃ ಸತತಮಾನಂದರಸಸ್ಯಂದಿನ್ಯಃ ಋತಸ್ಯ ಸತ್ಯವಚನಸ್ಯ ರಾಮಸ್ಯ ಧೇನಾಃ ಸಂದೇಶವಚನಾನಿ ಕಿಲ ತಂ ಲಂಕಾಮನಯಂತ ಅನಯನ್....

*– ಬನ್ನಂಜೆ ಗೋವಿಂದಾಚಾರ್ಯ [ತತ್ತ್ವಚಂದ್ರಿಕಾ]*

ಪೃಕ್ಷೋ ವಪುಃ ಪಿತುಮಾನ್ನಿತ್ಯ ಆಶಯೇ
ದ್ವಿತೀಯಮಾ ಸಪ್ತಶಿವಾಸು ಮಾತೃಷು ।
ತೃತೀಯಮಸ್ಯ ವೃಷಭಸ್ಯ ದೋಹಸೇ
ದಶಪ್ರಮತಿಂ ಜನಯಂತ ಯೋಷಣಃ ॥

ವಾಯುದೇವನ ಎರಡನೆಯ ಅವತಾರರೂಪ ಮಹಾಭಾರತ ಯುದ್ಧದಲ್ಲಿ ಕೌರವ ಸೇನೆಯನ್ನು ಪುಡಿಗೈದಿದೆ. ಬಹ್ವನ್ನಭೋಕ್ತೃ ಸ್ವಚ್ಛಂದಮೃತ್ಯುವುಳ್ಳವನಾಗಿರುವುದರಿಂದ ನಿತ್ಯ ಎನಿಸಿರುವ ಭೀಮಸೇನ ಶುಭಗಳಾದ ಋಗ್ವೇದಾದಿ ಏಳು ವಿದ್ಯೆಗಳಲ್ಲೂ ಚೆನ್ನಾಗಿ ಮಲಗಿ ರುವನು; ಅಂದರೆ ಮಲಗಿದ್ದವನು ಹೇಗೆ ಬಾಹ್ಯ ಪ್ರಪಂಚದ ಅರಿವಿಲ್ಲದವನಾಗಿರುವನೋ ಹಾಗೆಯೇ ಏಳು ವಿದ್ಯೆಗಳಲ್ಲಿ ವಿಚಾರಮಾಡುತ್ತ ಅವುಗಳಲ್ಲಿ ಮುಳುಗಿರುವನು.4

- ಬಕವಧದ ಪ್ರಸಂಗದಲ್ಲಿ ಬಹಳ ಅನ್ನವನ್ನು ಉಂಡಿರುವವನು. ....ಭಗವಂತನಲ್ಲಿ ನಿಯತನಾಗಿದ್ದುಕೊಂಡು ಯುದ್ಧಗಳಲ್ಲಿ ವಿಹರಿಸುತ್ತ ಪ್ರವರ್ತಿಸಿದವನು. ಹಾಗೆಯೇ ಸಪ್ತವಿದ್ಯೆಗಳಲ್ಲೂ ಯಾವಾಗಲೂ ವಿಹರಿಸುತ್ತಿದ್ದವನು.5

- ವೇದಾಭಿಮಾನಿನಿಯರಾದ ಶ್ರೀಭೂದುರ್ಗೆಯರು ಮಧ್ಯಗೇಹ ಭಟ್ಟರ ಪತ್ನಿಯ ಉದರದಲ್ಲಿದ್ದುಕೊಂಡು ಸರ್ವಜ್ಞಾನವನ್ನು ತುಂಬಿಸುವುದಕ್ಕಾಗಿ ದೇವಶ್ರೇಷ್ಠನಾದ ಈ ವಾಯುದೇವನ ಮೂರನೆಯ ಅವತಾರರೂಪವಾದ ಪೂರ್ಣಪ್ರಜ್ಞರನ್ನು ಹುಟ್ಟಿಸಿ ದರು.6

---

4. ದ್ವಿತೀಯಂ ವಪುಃ ಪೃಕ್ಷಃ । ಪೃತನಾಕ್ಷಯಕಾರಿತ್ವಾತ್ ಪೃಕ್ಷಃಶಬ್ದವಾಚ್ಯಂ, ಪಿತುಮಾನ್ ಬಹ್ವನ್ನಭೋಕ್ತೇತ್ಯರ್ಥಃ । ನಿತ್ಯಃ -ಸ್ವಚ್ಛಂದ ಮೃತ್ಯುತ್ವಾನ್ನಿತ್ಯಶಬ್ದವಾಚ್ಯಃ ಸ ಭೀಮಃ ಸಪ್ತಸಂಖ್ಯಾಕಾಸು ಶೋಭನಾಸು ಮಾತೃಶಬ್ದವಾಚ್ಯಾಸು ವಿದ್ಯಾಸು ಋಗ್ಯಜುಃಸಾಮಾ ಥರ್ವಭಾರತಪಂಚರಾತ್ರಮೂಲರಾಮಾಯಣಾಖ್ಯಾಸು ಆ ಸಮಂತಾತ್ ಸಮ್ಯಕ್ ಚ ಶಯೇ ಶಿಶ್ಯೇ -ಯಥಾ ಸುಪ್ತೋ ಪುರುಷೋ ಬಹಿರನ್ಯನ್ನ ಪಶ್ಯತಿ ತಥಾ ತಾಸಾಮರ್ಥ ವಿಚಾರೇ ಸಮಾಹಿತಚಿತ್ತತ್ವಾತ್.... ಬಹಿರ್ವ್ಯಾಪಾರಮಜಾನಾನಃ ಸನ್ ತಾ ಏವ ವಿಚಾರಯಾಮಾಸೇತ್ಯರ್ಥಃ ।
*– ಶ್ರೀ ವಾದಿರಾಜಗುರುಗಳು [ಭಾವಪ್ರಕಾಶಿಕಾ]*

5. ಪಿತುಮಾನ್..... ಬಕವಧೇ ಬಹ್ವನ್ನಭುಕ್ । .....ನಿತ್ಯಃ ಭಗವನ್ನಿಯತಃ ಸನ್ ಯುದ್ಧೇಷು ಆಶೇತೇ ವಿಹರನ್ ಪ್ರವರ್ತತೇ । ಅಥ ಖಲ್ವಪಿ..... ಸಪ್ತಶಿವಾಸು ಮಾತೃಷ್ವಪಿ ವಿದ್ಯಾಸು ನಿತ್ಯಮಾಶೇತೇ ವಿಹರತಿ..... *– ಬನ್ನಂಜೆ ಗೋವಿಂದಾಚಾರ್ಯ [ತತ್ವಚಂದ್ರಿಕಾ]*

6. ಯೋಷಣಃ -ಶ್ರೀಭೂದುರ್ಗಾಖ್ಯಾಃ ವೇದಾಭಿಮಾನಿನ್ಯೋ ಯೋಷಿತಃ ದೋಹಸೇ ಸರ್ವಜ್ಞಾನಪೂರಣಾಯ ವೃಷಭಸ್ಯ ದೇವಶ್ರೇಷ್ಠಸ್ಯ ಅಸ್ಯ ವಾಯೋಃ ತೃತೀಯಂ ತೃತೀಯಾವತಾರರೂಪಂ............ ಪೂರ್ಣಪ್ರಜ್ಞಮಿತಿ ಯಾವತ್ ಜನಯಂತ.......... ಅಜನಯಂತ । ಮಧ್ಯಗೇಹಾಖ್ಯ ವಿಪ್ರಪತ್ನ್ಯಾಃ ಉದರೇ ಸ್ಥಿತ್ವಾ....
*– ಶ್ರೀ ವಾದಿರಾಜಗುರುಗಳು [ಭಾವಪ್ರಕಾಶಿಕಾ]*

- ಈ ದೇವಶ್ರೇಷ್ಠನ ಮೂರನೆಯ ಅವತಾರ ಮಧ್ವನಾಮಕವಾದದ್ದು. ಇವರನ್ನೇ 'ದಶ ಪ್ರಮತಿ' ಎನ್ನುವರು. ಜ್ಞಾನವನ್ನು ಕರೆಯುವುದಕ್ಕಾಗಿ ವೇದಾಭಿಮಾನಿನಿ ದೇವಿಯರು ನಡಿಲ್ಲಾಯರ ಪತ್ನಿಯಲ್ಲಿದ್ದು ಇವರನ್ನು ಹುಟ್ಟಿಸಿದರು.[7]

**ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸಃ**
**ಈಶಾನಾಸಃ ಶವಸಾ ಕ್ರಂತ ಸೂರಯಃ ।**
**ಯದೀಮನು ಪ್ರದಿವೋ ಮಧ್ವ ಆಧವೇ**
**ಗುಹಾಸಂತಂ ಮಾತರಿಶ್ವಾ ಮಥಾಯತಿ ॥**

ಜ್ಞಾನರೂಪಿಯಾದ, ಸಜ್ಜನರನ್ನು ಪಾಲಿಸುವ ದೇವಶ್ರೇಷ್ಠನಾದ ವಾಯುದೇವನ ಮೂರನೆಯ ಅವತಾರರೂಪದಿಂದ ಜ್ಞಾನದ ದೋಹನ ನಡೆಸಿದ್ದರಿಂದ ರುದ್ರನೇ ಮುಂತಾದ ದೇವತೆಗಳು ಚೆನ್ನಾಗಿ ಅನಾಯಾಸವಾಗಿ ಜ್ಞಾನಿಗಳಾಗಿ ಮಾಡಲ್ಪಟ್ಟರು. ಮಧ್ವ ರೂಪದ ವಾಯುದೇವ ಪ್ರಕೃಷ್ಟಬುದ್ಧಿಪ್ರಕಾಶವುಳ್ಳ ರುದ್ರಾದಿದೇವತೆಗಳಿಗಾಗಿ ಹೃದಯ ಗುಹೆಯಲ್ಲಿರುವ ಪರಮಾತ್ಮನ ಸರ್ವೋತ್ತಮತ್ವವನ್ನು ಚೆನ್ನಾಗಿ ವಿಮರ್ಶೆ ಮಾಡಿದರು. ಆದ್ದರಿಂದಲೇ ರುದ್ರಾದಿಗಳು ಜ್ಞಾನಿಗಳಾಗಿ ಮಾಡಲ್ಪಟ್ಟರು.[8]

- ಯಾವ ಕಾರಣದಿಂದ ಪ್ರಕೃಷ್ಟಜ್ಞಾನವುಳ್ಳ ಮಧ್ವರೂಪಿ ವಾಯುದೇವ ಅವಿದ್ಯಾ ಗುಹೆ ಯಲ್ಲಿ ರಹಸ್ಯವಾಗಿ ಇದ್ದ ಐಶ್ವರ್ಯಾದಿ ಆರು ಗುಣಗಳಿಗೂ ಗೌರವ ತಂದುಕೊಟ್ಟು ಭಗವಂತನ ಸರ್ವೋತ್ತಮತ್ವದ ಸ್ಥಾಪನೆಗಾಗಿ ವೇದಗಳನ್ನು ಚೆನ್ನಾಗಿ ವಿಮರ್ಶಿಸಿದನು. ವಿಮರ್ಶಿಸಿ, ತತ್ವವೆಂಬ ಬೆಣ್ಣೆಯನ್ನು ವಿತರಿಸಿದನು –ಆದುದರಿಂದ ಅಂತಹ ಜ್ಞಾನಿ ಗಳಿಗೂ ನೇತಾರರಾಗಿದ್ದ ಮಧ್ವರಿಂದ ಷಡ್ಗುಣಗಳಿಗೂ ಮಾನ್ಯತೆಯನ್ನು ನೀಡಿರುವ

---

7. ಅಸ್ಯ ದೇವವೃಷಭಸ್ಯ ತೃತೀಯಂ ವಪುರ್ಮಧ್ವಾಖ್ಯಮ್, ಯಂ ದಶಪ್ರಮತಿಂ ಪ್ರವದಂತಿ, ದೋಹಸೇ ಜ್ಞಾನದೋಹಾಯ ಯೋಷಣೋ ವೇದಮಾನಿನ್ಯೋ ಯೋಷಿತ ಏವ ಮಧ್ಯಗೇಹಯೋಷಿದ್ಗತಾ ಜನಯಂತ ಅಜನಯಂತ ।
*– ಬನ್ನಂಜೆ ಗೋವಿಂದಾಚಾರ್ಯ [ತತ್ವಚಂದ್ರಿಕಾ]*

8. ಬುಧ್ನಾತ್.... ಜ್ಞಾನರೂಪಾತ್, ವರ್ಪಸಃ –ವರಯತಿ ಸಜ್ಜನಾನ್ ಪಾಲಯತೀತಿ ವ್ಯುತ್ಪತ್ತ್ಯಾ ವರ್ಪಶಬ್ದವಾಚ್ಯಾತ್, ಮಹಿಷಸ್ಯ –ಶ್ರೇಷ್ಠಸ್ಯ ವಾಯೋಃ ಯತ್ ಯಸ್ಮಾತ್ ತೃತೀಯರೂಪಾತ್ ಈಂ ಇತ್ಥಂ ಪೂರ್ವೋಕ್ತರೀತ್ಯಾ ಜ್ಞಾನಪೂರಣೇ ಕೃತೇ ಸತಿ ಈಶಾನಾಸಃ.... ಈಶಾನಾದ್ಯಾಃ ದೇವಾಃ ಶವಸಾ ಸುಖೇನ ಸೂರಯಃ ಜ್ಞಾನಿನಃ ನಿಃ ನಿತರಾಂ ಕ್ರಂತ ಅಕ್ರಿಯಂತ ಮಧ್ವಃ ಮಧ್ವನಾಮಕಃ ಮಾತರಿಶ್ವಾ ವಾಯುಃ ಪ್ರದಿವಃ ಪ್ರಕೃಷ್ಟಬುದ್ಧಿ ಪ್ರಕಾಶಮ್ ಪೂರ್ವೋಕ್ತಾನೀಶಾನಾದಿದೇವಾನ್ ಅನು ಅನುಸೃತ್ಯ ಗುಹಾಂ –ಗುಹಾಯಾಂ ಸಂತಂ ವಿದ್ಯಮಾನ್ಯಂ ಆಧವೇ ಸಮಂತಾತ್ ಪತಿತ್ವೇ ವಿಷಯೇ ಯತ್ ಯಸ್ಮಾತ್ ಕಾರಣಾತ್ ಮಥಾಯತಿ ವೇದಶಾಸ್ತ್ರಾದೀನಾಂ ಸಮ್ಯಕ್ ಮಥನಂ ಕರೋತಿ ....ತಸ್ಮಾತ್ ಕಾರಣಾತ್ ಈಶಾನಾಸಃ ಸೂರಯಃ ಅಕ್ರಿಯಂತೇತಿ ಪೂರ್ವೇಣಾನ್ವಯಃ
*– ಶ್ರೀ ವಾದಿರಾಜಗುರುಗಳು [ಭಾವಪ್ರಕಾಶಿಕಾ]*

ಭಗವಂತನ ಶ್ರೇಷ್ಠಗಳಾದ ಗುಣಗಳನ್ನು ಅಥವಾ ಅವತಾರಗಳನ್ನು ಸಮರ್ಥರಾದ ವಿದ್ವಾಂಸರು ಅನಾಯಾಸವಾಗಿ ಸಿದ್ಧಾಂತಿಸಿಕೊಂಡರು.9

**ಪ್ರಯತ್ ಪಿತುಃ ಪರಮಾನ್ನೀಯತೇ**
**ಪರ್ಯಾ ಪೃಕ್ಷುಧೋ ವೀರುಧೋ ದಂಸು ರೋಹತಿ ।**
**ಉಭಾ ಯದಸ್ಯ ಜನುಷಂ ಯದಿನ್ವತ**
**ಆದಿದ್ ಯವಿಷ್ಠೋ ಅಭವದ್ ಘೃಣಾ ಶುಚಿಃ ॥**

ಯಾವ ಕಾರಣದಿಂದ ಉತ್ತಮನಾದ ತನ್ನ ಜನಕನಾದ ಶ್ರೀಮನ್ನಾರಾಯಣನಿಂದ ಚೆನ್ನಾಗಿ ಪ್ರೇರಿಸಲ್ಪಡುವನೋ, ಅಂತಹ ಮಧ್ವರೂಪಿ ವಾಯುದೇವ ಪ್ರಶ್ನೆಗಳೆಂಬ ಬಳ್ಳಿಗಳನ್ನು ತನ್ನ ಹಲ್ಲುಗಳಲ್ಲಿಟ್ಟುಕೊಂಡು –ಎತ್ತು ಬಳ್ಳಿಗಳನ್ನು ಹಲ್ಲುಗಳಿಂದ ಜಗಿದು ನಾಶಪಡಿಸುವಂತೆ– ಪರಿಹರಿಸುವನು. ಯಾವ ಕಾರಣದಿಂದ ಲಕ್ಷ್ಮೀನಾರಾಯಣರು ಮಧ್ವರ ಜನ್ಮವನ್ನು ಚೆನ್ನಾಗಿ ಪ್ರೇರಿಸುವರೋ ಆ ಕಾರಣದಿಂದ ಅಕಾರವಾಚ್ಯ ನಾರಾಯಣದಿಂದ ವಾಯುದೇವನ ಅವತಾರಗಳಲ್ಲಿ ಕಿರಿಯವರಾದ ಮಧ್ವಾಚಾರ್ಯರು ಈಗ ದುರ್ಜನರನ್ನು ದಂಡಿಸಲು ಕೃಪೆವುಳ್ಳವರಾಗುವರು. ಆದುದರಿಂದಲೇ ಪರವಾದಿಗಳನ್ನು ಮಾತಿನಿಂದ ದೂಷಿಸಿದರೂ ಕೈಯಿಂದ ಹೊಡೆಯದ ಪ್ರಯುಕ್ತ ಶುಚಿಗಳಾಗಿರುವರು. ಅಂದರೆ ವಿಪ್ರಹತ್ಯಾದಿ ನಿಮಿತ್ತವಾದ ಜನಾಪವಾದದಿಂದಲೂ ಅಸ್ಪೃಷ್ಟರಾಗಿರುವರು.10

---

9. ಯದೀಂ ಯಸ್ಮಾದೇವ ಬುಧ್ನಾತ್ ಬುಧಾನಾಂ ನೇತುಃ ಮಧ್ವಾತ್ ಮಹಿಷಸ್ಯ -ಮಹಿತಷಡ್ಗುಣಸ್ಯ ವರ್ಪಸಃ ವರಣೀಯಾನ್ ಗುಣಾನ್ ಅವತಾರಾನ್ ವಾ ಈಶಾನಾಸಃ ಸಮರ್ಥಾ ಅಪಿ ಸೂರಯಃ ಶವಸಾ ಸುಖೇನ ನಿಃ ಕ್ರಂತ ನಿಷ್ಕೃತವಂತೋ ನಿರ್ಜ್ಞಾತವಂತ ಇತಿ । ಕುತಃ? ಯದೀಂ ಯಸ್ಮಾದೇವ ಕಾರಣಾತ್ ಪ್ರದಿವಃ ಪ್ರಕೃಷ್ಟಜ್ಞಾನೋ ಮಧ್ವರೂಪೋ ಮಾತರಿಶ್ವಾ ಅವಿದ್ಯಾಗುಹಾಯಾಂ ಗೂಢಂ ಸಂತಂ ಮಹಿಷಂ ಆಥವೇ ಆಥವತ್ವೇ ಸರ್ವೋತ್ತಮತ್ವೇ ಸರ್ವೋತ್ತಮತ್ವಸ್ಥಾಪನಾಯ ತದನುಗುಣತಯಾ ವೇದಾನ್ ಮಥಾಯತಿ । ಮಥಿತ್ವಾ ಚ ತತ್ವನವನೀತಂ ವಿಶ್ರಾಣಯತೀತಿ ।

*– ಬನ್ನಂಜೆ ಗೋವಿಂದಾಚಾರ್ಯ [ತತ್ವಚಂದ್ರಿಕಾ]*

10. ಯತ್ ಯಸ್ಮಾತ್ ಕಾರಣಾತ್ ಪರಮಾತ್ ಉತ್ತಮಾತ್ ಪಿತುಃ -ಸ್ವಜನಕಾತ್ ನಾರಾಯಣಾತ್ ಆ ಸಮಂತಾತ್ ಪರಿ ಪರಿತಃ ಪ್ರಣೀಯತೇ ಪ್ರೇರ್ಯತೇ.... ಪೃಕ್ಷುಧಃ ಪೃತಃ ಪ್ರಶ್ನಾ ಏವ ಕ್ಷುದ್ವತ್ ಪರಪೀಡಕತ್ವಾತ್ ಕ್ಷುಧಃ ತಾ ಏವ ವೀರುಧಃ ಲತಾಃ..... ದಂಸು ದಂತೇಷು ರೋಹತಿ -ಆರೋಪಯತಿ । ಯಥಾ ಬಲೀವರ್ದಃ ಲತಾಃ ದಂತೇಷು ನಿಕ್ಷಿಪ್ಯ ನಾಶಯತಿ ತದ್ವತ್ ಪರಪ್ರಶ್ನಾನಪಿ ನಾಶಯತೀತಿ ಭಾವಃ । ....ಯತ್ ಯಸ್ಮಾತ್ ಕಾರಣಾತ್ ಉಭೌ ಲಕ್ಷ್ಮೀನಾರಾಯಣೌ ಅಸ್ಯ ಮಧ್ವಸ್ಯ ಜನುಷಂ ಜನ್ಮ.... ಯತ್ ಜ್ಞಾನಮುದ್ದಿಶ್ಯ ಇನ್ವತಃ ಪ್ರೇರಯತಃ ಯುಗೇ ಯುಗೇ ಪ್ರೇರಯತಃ.... ತತ್ ತಸ್ಮಾತ್ ಕಾರಣಾತ್ ಆತ್ -ಅಕಾರವಾಚ್ಯಾತ್ ನಾರಾಯಣಾತ್ ಯವಿಷ್ಠಃ ವಾಯೋರವತಾರೇಷು ಕನಿಷ್ಠಃ ಮಧ್ವಾಚಾರ್ಯಃ ಇತ್ ಇತ್ಥಂ ಇದಾನೀಂ ದೃಶ್ಯಮಾನಪ್ರಕಾರೇಣ ಘೃಣಾ ಘೃಣಾವಾನ್ ಅತ ಏವ ಶುಚಿಃ.... ಸ್ವಪ್ರತಿವಾದಿತಯಾ ಪ್ರತ್ಯವಸ್ಥಿತಾನಾಮಪಿ....

- ವಾಯುದೇವನು ಶ್ರೇಷ್ಠ ತಂದೆಯಾದ ನಾರಾಯಣನಿಂದಲೇ ಸರ್ವಕಾರ್ಯಗಳಲ್ಲೂ ಸರ್ವಾವತಾರಗಳಲ್ಲೂ ಪ್ರೇರಿಸಲ್ಪಡುವನು. .....ಆದುದರಿಂದಲೇ ಕುವಾದಿಗಳ ಪ್ರಶ್ನೆಗಳನ್ನು –ಎತ್ತು ಬಳ್ಳಿಗಳನ್ನು ಹಲ್ಲುಗಳಲ್ಲಿ ಆರೋಪಿಸಿಕೊಂಡು ಹೇಗೆ ಪುಡಿಪುಡಿ ಮಾಡುವುದೋ ಹಾಗೆ– ನಾಶಪಡಿಸುವನು. ಯಾವ ಕಾರಣದಿಂದ ಜ್ಞಾನಾತ್ಮಕವಾದ ವಾಯುದೇವನ ಅವತಾರರೂಪವನ್ನು ಶ್ರೀಶ್ರೀಧರರಿಬ್ಬರೂ ವ್ಯಾಪಿಸಿರುವರೋ ಆದ್ದರಿಂದಲೇ ಮಧ್ವರು ನಿತ್ಯಯುವಕರು. ಭಗವಂತನಿಂದ ಚೆನ್ನಾಗಿ ಸಂಗತರಾದವರು. ಸಜ್ಜನರಲ್ಲಿ ಕೃಪೆವುಳ್ಳವರೂ ಪ್ರಕಾಶಿಸುತ್ತಿರುವವರೂ ಆಗಿದ್ದರು.11

**ಆದೀನ್ಮಾತೃ್ಯರಾವಿಶದ್ಯಾಸ್ವಾಶುಚಿರಹಿಂಸ್ಯಮಾನ ಉರ್ವಿಯಾ ವಿವಾವೃಧೇ ।**
**ಅನು ಯತ್ಪೂರ್ವಾ ಅರುಹತ್ ಸನಾಜುವೋ ನಿನವ್ಯಾಸೀಷ್ವವರಾಸು ಧಾವತೇ ॥**

- ಹೀಗೆಯೇ ಅಕಾರವಾಚ್ಯನಾದ ಶ್ರೀವಿಷ್ಣುವಿನ ಆಜ್ಞೆಯಿಂದಲೇ ಮೂರು ಅವತಾರಗಳಲ್ಲೂ ಅಂಜನಾ, ಕುಂತಿ ಹಾಗೂ ನಡಿಲ್ಲಾಯಪತ್ನಿ ಇವರನ್ನು ತ್ರೇತಾ, ದ್ವಾಪರ, ಕಲಿಯುಗಗಳಲ್ಲಿ ಪ್ರವೇಶಿಸಿರುವನು. ಆ ಮಾತೃಗಳಲ್ಲಿ ತನ್ನ ಸಾಮರ್ಥ್ಯದಿಂದಾಗಿ ದುಷ್ಕರ್ಮಾದಿಗಳ ಲೇಪಕ್ಕೊಳಗಾಗದೆ ದುಷ್ಕರ್ಮದಿಂದ ಹಾಗೂ ಉದರದೊಳಗಿನ ಜಂತ್ವಾದಿಗಳಿಂದ ಹಿಂಸಿಸಲ್ಪಡದವನಾಗಿಯೇ ಬೆಳೆದನು. ಸನಾತನನಾದ ಪರಮಾತ್ಮನನ್ನು ಪ್ರತಿಪಾದಿಸುವ ಋಗ್ವೇದಾದಿ ನಿತ್ಯವಿದ್ಯೆಗಳು ಯಾವ ಕಾರಣದಿಂದ ನಿತ್ಯಗಳಾಗಿವೆಯೋ ಆ ಕಾರಣದಿಂದ ಅವುಗಳ ಅರ್ಥವನ್ನು ಬೋಧಿಸುವ ಶಿಕ್ಷಾದಿಗಳನ್ನು ಅನುಸರಿಸಿ ಮರವನ್ನು ಏರುವವನಂತೆ ನಿಧಾನವಾಗಿ ವಿಚಾರ ನಡೆಸಿರುವರು. ಚೆನ್ನಾಗಿ ನೂತನಗಳಾದ ಪೌರುಷೇಯಗಳಾಗಿದ್ದು ವೇದವಿದ್ಯೆಗಳಿಗಿಂತ ಕೆಳಮಟ್ಟದವುಗಳೆನಿಸಿದ ಪಂಚರಾತ್ರಾದಿ ವಿದ್ಯೆಗಳಲ್ಲಿ ವೇದವಿದ್ಯೆಗಳಂತೆ ಕಠಿಣಗಳಾಗಿರದ ಪ್ರಯುಕ್ತ ಬೇಗ ಬೇಗನೆ ವ್ಯಾಖ್ಯಾನಿಸುವರು.12

---

ವಿದುಷಾಂ ವಾಚಾ ದೂಷಣೇsಪಿ ಕರೇಣ ಹಿಂಸನಾತ್ ವಿಪ್ರಹತ್ಯಾನಿಮಿತ್ತ ಜನಾಪವಾದೇನಾಪಿ ಅಸ್ಪೃಷ್ಟೋsಭವತ್

*– ಶ್ರೀ ವಾದಿರಾಜಗುರುಗಳು [ಭಾವಪ್ರಕಾಶಿಕಾ]*

11. ಯದಯಂ ಪರಮಾತ್ ಪಿತುರ್ನಾರಾಯಣಾದೇವ ಸರ್ವಕಾರ್ಯೇಷು ಸರ್ವಾವತಾರೇಷು ಚ ಪ್ರಣೀಯತೇ.... ತಸ್ಮಾದೇವಾಯಂ.... ಕುವಾದಿಪ್ರಶ್ನಾನ್ ಗೋವೃಷಭೋ ವೀರುಧೋ ಲತಾ ಇವ ಪ್ರಕರ್ಷೇಣ ಪರಿತೋ ದಂಸು ದಂತೇಷ್ವಾರೋಹಯತಿ । ನಿಷ್ಪಿಷ್ಯ ಶಕಲಶೋನಿರಾಕರೋತಿ । ಯತ್ ಯಸ್ಮಾತ್ ಯಾತೀತಿ ಯತ್ ಜ್ಞಾನರೂಪಮಸ್ಯ ಜನುಷಮವತಾರರೂಪಂ ಉಭೌ ಶ್ರೀಶ್ರೀಧರಾವಿನ್ವತಃ ವ್ಯಾಪ್ನುತಃ ಆದಿತ್ ತಸ್ಮಾದೇವಾಯಂ ಯವಿಷ್ಠಃ ನಿತ್ಯಯುವಾ ಅತಿತರಾಂ ಭಗವತಾ ಸಂಗತಃ ಅಭವತ್ । ಘೃಣಾವಾನ್ ಸತ್ಸು ಶುಚಿಃ ಪ್ರಕಾಶಮಾನಶ್ಚಾಭವತ್

*– ಬನ್ನಂಜೆ ಗೋವಿಂದಾಚಾರ್ಯ [ತತ್ವಚಂದ್ರಿಕಾ]*

12. ಆತ್ ಅಕಾರವಾಚ್ಯಾದ್ವಿಷ್ಣೋರಾಜ್ಞಯಾ ಇತ್ ಇತ್ಥಂ ಅವತಾರತ್ರಯೇsಪಿ ಮಾತೃ ಅಂಜನಾಕುಂತೀವಿಪ್ರಪತ್ನೀರೂಪಾಃ ಆ ತ್ರೇತಾಯುಗಂ ದ್ವಾಪರಯುಗಂ ಕಲಿಯುಗಂ ಚ

- ಆ ಭಗವಂತನ ಅನುಗ್ರಹದಿಂದಲೇ ಏಳು ಪವಿತ್ರಗಳಾದ ವಿದ್ಯೆಗಳನ್ನು ಪ್ರವೇಶಿಸಿರುವರು –ವಿದ್ಯಾಸಮುದ್ರದಲ್ಲಿ ಮುಳುಗಿರುವರು. ಆ ವಿದ್ಯೆಗಳಲ್ಲಿ ಕ್ರೀಡಿಸುತ್ತ ದುರ್ವಾದಿಗಳ ಅಪವ್ಯಾಖ್ಯಾನಗಳಿಂದ ಹಿಂಸಿಸಲ್ಪಡದವರಾಗಿ ತಮ್ಮ ಸ್ವರೂಪ ಸಾಮರ್ಥ್ಯದಿಂದಲೇ ಬೆಳೆದರು. ಯಾವಾಗಲೂ ಭಗವಂತನನ್ನು ಸೇವಿಸುತ್ತಿರುವ ಏಳು ವಿದ್ಯೆಗಳನ್ನು ಉಪಕ್ರಮಾದಿಗಳಿಗನುಗುಣವಾಗಿ ವಿಮರ್ಶಿಸಿ ಏರಿದರು. ಆದುದರಿಂದಲೇ ದುರ್ವಾದಿಗಳ ಅಪವ್ಯಾಖ್ಯಾನದ ಹಿಂಸೆಗೊಳಗಾಗಲಿಲ್ಲ. ಕಾವ್ಯ ವ್ಯಾಕರಣ ಇತ್ಯಾದಿ ಅರ್ವಾಚೀನಗಳಾದ ಕನಿಷ್ಠ ವಿದ್ಯೆಗಳಲ್ಲಿ ನಿಃಶಂಕವಾಗಿ ತೊಡಗಿರುವರು.13

## ಕರ್ಣಸೂಕ್ತದ ಆರು ಮಂತ್ರಗಳು

ಸೂರ್ಯನು ಚಂದ್ರನಂತೆ ಕಾಣಿಸುವುದೇ ಮುಂತಾದ ಮರಣಸೂಚಕ ಅಪಶಕುನಗಳು ಕಂಡಾಗ ಋಗ್ವೇದದ ಪವಮಾನಮಂಡಲದ ಕೊನೆಯ ಎರಡು ವರ್ಗಗಳ [9-7-113, 114] 2 +4 = 6 ಮಂತ್ರಗಳನ್ನು ಜಪಿಸಬೇಕು ಎಂದು ಐತರೇಯೋಪನಿಷತ್ತು [2-8-4-9] ವಿಧಿಸಿದೆ–

**'ಯತ್ರ ಬ್ರಹ್ಮಾ ಪವಮಾನೇತಿ ಷಟ್.....'**

---

ಮರ್ಯಾದೀಕೃತ್ಯ ಆವಿಶತ್ । ಯಾಸು ಮಾತೃಷು ಉರ್ವ್ಯಾ ಉರುತರಯಾ ಸ್ವಶಕ್ತ್ಯಾ ಆ ಸಮಂತಾತ್ ಶುಚಿಃ ದುಷ್ಕರ್ಮಾದಿಭಿರಸ್ಪೃಷ್ಟಃ ಅತ ಏವಾಹಿಂಸ್ಯಮಾನಃ ದುಷ್ಕರ್ಮಣಾ ಉದರಸ್ಥ ಜಂತ್ವಾದಿನಾ ವಾ ಅಹಿಂಸ್ಯಮಾನಃ ಸನ್ ವವೃಧೆ ಆ ಪ್ರಸವಂ ವವೃಧೇ ಸಖಾಜುವಃ ಸನಾತನಂ ಪರಮಾತ್ಮಾನಂ ಜುಷಂತಿ ಪ್ರತಿಪಾದಯಂತೀತಿ ಸನಾಜುವಃ ಪೂರ್ವಾಃ ನಿತ್ಯವಿದ್ಯಾಃ ಯತ್ ಯಸ್ಮಾತ್ ಕಾರಣಾತ್ ನಿತ್ಯಾಃ ತಸ್ಮಾತ್ ಕಾರಣಾತ್ ಅನು –ತದರ್ಥಬೋಧಕ ಶಿಕ್ಷಾ ಕಲ್ಪ ವ್ಯಾಕರಣಾದಿಕಮನುಸೃತ್ಯ ಅರುಹತ್ ವೃಕ್ಷಾ ರೋಹಣಕರ್ತೃವತ್ ಶನೈಃ ಶನೈರ್ವಿಚಾರಯಾಮಾಸೇತಿ ಭಾವಃ । ನಿ ನಿತರಾಂ ನವ್ಯಸೀಷು ನವೀನಾಸು ಅವರಾಸು ಪೌರುಷೇಯತ್ವೇನ ತತಃ ಅವರಾಸು ಪಂಚರಾತ್ರಭಾರತ ಮೂಲರಾಮಾಯಣಾಖ್ಯ ವಿದ್ಯಾಸು ಧಾವತೇ ತದ್ವತ್ ಕಾಠಿಣ್ಯಾಭಾವಾತ್ ಶೀಘ್ರಂ ಶೀಘ್ರಂ ವ್ಯಾಖ್ಯಾತೀತ್ಯರ್ಥಃ ।

*– ಶ್ರೀ ವಾದಿರಾಜಗುರುಗಳು [ಭಾವಪ್ರಕಾಶಿಕಾ]*

13. ಆದಿತ್ ತಸ್ಮಾದೇವ ಭಗವತಃ ಸಪ್ತ ಶಿವಾ ಮಾತೃರಾವಿಶತ್ । ವಿದ್ಯಾಜಲಧೌ ಮಗ್ನ ಇತ್ಯೇ ತತ್ । ಯಾಸು ವಿಹರನ್ ಆ ಶುಚಿಃ ದುರ್ವಾದಿಭಿರಪವ್ಯಾಖ್ಯಾನೈಶ್ಚಾಹಿಂಸ್ಯಮಾನಃ ಉರ್ವ್ಯಾ ಸ್ವರೂಪಶಕ್ತ್ಯೈವ ವಿ ವಾವೃಧೇ ವರ್ಧತೇ । ಸನಾತನಂ ಭಗವಂತಂ ಸನಾ ಸದಾ ಜವಂತ ಇತಿ ಸನಾಜುವಃ । .....ಪೂರ್ವಾಃ ಪೂರ್ವೋಕ್ತಾಃ ಸಪ್ತಮಾತೃಃ ಅನು ಉಪಕ್ರಮಾದ್ಯನುಗುಣಂ ಸವಿಮರ್ಶಮರುಹತ್ ಇತಿ ಯತ್ ತಸ್ಮಾದೇವ ಶುಚಿರಹಿಂಸ್ಯ ಮಾನಃ । ನವ್ಯಸೀಷು ಅರ್ವಾಚೀನಾಸು ಕಾವ್ಯವ್ಯಾಕರಣಾದಿಷು ತ್ವವರವಿದ್ಯಾಸು ನಿ ಧಾವತೇ ನಿಃಶಂಕಂ ಧಾವತೇ

*– ಬನ್ನಂಜೆ ಗೋವಿಂದಾಚಾರ್ಯ [ತತ್ತ್ವಚಂದ್ರಿಕಾ]*

ವಾಯುದೇವನಲ್ಲಿ ತನ್ನನ್ನು ಭಗವಂತನೆಡೆಗೆ ಸಾಗಿಸಲು ಸಲ್ಲಿಸಬೇಕಾದ ಪ್ರಾರ್ಥನಾ ರೂಪದಲ್ಲಿರುವ 'ಕರ್ಣಸೂಕ್ತ'ದ ಆರು ಮಂತ್ರಗಳಿಗೆ ಶ್ರೀಮದಾಚಾರ್ಯರು ತಮ್ಮ ಐತರೇಯಭಾಷ್ಯದಲ್ಲಿ ವ್ಯಾಖ್ಯಾನಿಸಿದ್ದು, ಅಂತಹ ವ್ಯಾಖ್ಯಾನದಡಿ ಅವುಗಳ ಅನುವಾದ ಸಹಿತವಾಗಿ ನೋಡೋಣ....

**ಯತ್ರ ಬ್ರಹ್ಮಾ ಪವಮಾನ ಛಂದಸ್ಯಾಂ ವಾಚಂ ವದನ್ ।**
**ಗ್ರಾವ್ಣಾ ಸೋಮೇ ಮಹೀಯತೇ ಸೋಮೇನಾನಂದಂ**
**ಜನಯನ್ನಿಂದ್ರಾಯೇಂದೋ ಪರಿಸ್ರವ ॥**

ಸಂಸಾರದಿಂದ ಪವಿತ್ರಗೊಳಿಸಿ, ಸ್ವರೂಪಾತ್ಮಕಾನಂದದಲ್ಲಿ ಮುಳುಗಿಸುವ ಪ್ರಯುಕ್ತ ಪವಮಾನ ಎನಿಸುವ,14 ಎಲ್ಲರ ಇಷ್ಟವನ್ನು ನೀಡುವ ಸ್ವಭಾವದವನಾಗಿದ್ದು 'ಇಂದು'

---

14. 'ಸಂಸಾರಾತ್ ಪಾವಯಿತ್ವಾ ಯನ್ಮಹಾನಂದೇ ಮಿನೋತ್ಯಯವುಕ್ । ಪವಮಾನಸ್ತತೋ ವಿಷ್ಣುಃ.....' [ಐ.ಉ.ಭಾ. 1-1-2] ಇತಿ ವಿಷ್ಣೌ ಪವಮಾನನಾಮ ನಿರುಕ್ತಂ ತದ್ವತ್ ವಾಯಾವಪಿ ।

* ಗ್ರಾವ್ಣಾ ಸೋಮವಿಷಯೇ ಸೋಮೇನೇಷ್ಟ್ವಾ ಮಹೀಯತೇ, ತೇನೈವ ವಿಷ್ಣುಪ್ರೀತಾ ಸ್ವಸ್ಯಾನಂದಂ ಜನಯನ್ ।

* ಸರ್ವೇಷ್ಟದ ಜಗತ್ಪ್ರಾಣ ಮಾಮಾದಾಯ ಪರಿಸ್ರವ । ಯತ್ರಾಸೌ ಭಗವಾನ್ ವಿಷ್ಣು ತ್ವಂ ಹಿ ಮೋಕ್ಷಪ್ರದಃ ಸದಾ । *– [ಐ.ಉ.ಭಾ.]*

* ಇಂದುರಿಷ್ಟಪ್ರದತ್ವಾತ್ ಯೋ ವಾಯುರಾದಾಯ ಗಚ್ಛತಿ । ಇಂದ್ರನಾಮ್ನ ಕೇಶವಸ್ಯ ಸಮೀಪಂ ಮುಕ್ತಮಂಜಸಾ ॥ *– [ಐ.ಉ.ಭಾ.]*

* ಸಂಸಾರಾತ್ ಪಾವಯಿತ್ವಾ ಮಹಾನಂದೇ ಮಿನೋತಿ ಕ್ಷಿಪತೀತಿ ಪವಮಾನ ಇಂದೋ ಇಷ್ಟಪ್ರದಾನಶೀಲ ವಾಯೋ । ಬ್ರಹ್ಮಾ ಮುಕ್ತಶ್ಚತುರ್ಮುಖೋ ಯತ್ರ ಯಸ್ಮಿನ್ ಲೋಕೇ ಛಂದಸ್ಯಾಂ ಛಂದಃಸಂಬಂಧಿನೀಂ ವಾಚಂ ವೇದವಾಚಂ ವದನ್ ವ್ಯಾಕುರ್ವನ್ ಗ್ರಾವ್ಣಾ ಸುತೇನ ಸೋಮೇನ ಸೋಮೇ ಸೌಮ್ಯಸ್ವರೂಪೇ ಭಗವದ್ವಿಷಯೇ ಇಷ್ಟ್ವಾ ಪ್ರಸನ್ನೇನ ತೇನ ಸೋಮೇನ ವಿಷ್ಣುನಾ ಸ್ವಸ್ಯ ಆನಂದಂ ವ್ಯಂಜಯನ್ ಮುಕ್ತನಿಕರೈಃ ಪೂಜ್ಯತೇ ತತ್ರಸ್ಥಾಯೇಂದ್ರಾಯ ವಿಷ್ಣವೇ ಮಾಂ ಪರಿಸ್ರವ ಪ್ರಾಪಯ
*– ತಾಮ್ರಪರ್ಣೀಯ [ಐ.ಉ.ಭಾ. 2-1-2-16]*

* ಸ್ವರ್ ಆನಂದರೂಪೋ ವಿಷ್ಣುಃ *– [ಐ.ಉ.ಭಾ.]*

* ಯತ್ರ ಲೋಕೇ ಅಜಸ್ರಂ ಸೂರ್ಯಜ್ಯೋತಿರ್ಯಸ್ಮಿನ್ ಲೋಕೇ ಸ್ವರಾನಂದರೂಪೋ ವಿಷ್ಣುಸ್ಸ ಹಿತಂ ನಿಹಿತಃ । ಅಮೃತೇ ಮುಕ್ತಿರೂಪೇಽಕ್ಷಿತೇ ನಾಶರಹಿತೇ ತಸ್ಮಿನ್ ಲೋಕೇ ಮಾಂ ಧೇಹಿ ನಿಧೇಹಿ । ತಸ್ಮಿನ್ನೇವ ಲೋಕೇ ವರ್ತಮಾನಾಯೇಂದ್ರಾಯ ಇಂದೋ ಪರಿಸ್ರವ *– ತಾಮ್ರಪರ್ಣೀಯ*

* ದಿವೋ ದೇವ್ಯಾ ಅವರೋಧನಂ ತಸ್ಯಾಃ ಪರಿವಾರಭೂತಾಃ ಸರ್ವದೇವ್ಯಃ । ದ್ಯೌರ್ನಾಮ ವಾಯುಪತ್ನೀ । 'ಆಜನಯೋ ಮರುತೋ ವಕ್ಷಣಾಭ್ಯೋ ದಿವ ಆವಕ್ಷಣಾಭ್ಯಃ, ಇತ್ಯಾದೇಃ, 'ಯಹ್ವತೀಃ ಸ್ಯಂದಮಾನಾಃ *– [ಐ.ಉ.ಭಾ.]*

ಎನಿಸುವ, ಹೇ ವಾಯುದೇವ! ಯಾವ ಲೋಕದಲ್ಲಿ ಮುಕ್ತನಾದ ಚತುರ್ಮುಖನು ವೇದ ವಾಕ್ಯವನ್ನು ಪ್ರವಚನ ಮಾಡುತ್ತ ಕಲ್ಲಿನಿಂದ ಜಜ್ಜಿ ಹಿಂಡಿ ತೆಗೆದ ಸೋಮರಸದಿಂದ ಸೌಮ್ಯ ಗುಣಸ್ವರೂಪನಾದ ಭಗವಂತನ ವಿಷಯದಲ್ಲಿ ಯಾಗಮಾಡಿ, ಅದರಿಂದ ಪ್ರಸನ್ನ ನಾದ ಸೋಮನಾಮಕ ವಿಷ್ಣುವಿನಿಂದ ತನ್ನ ಸ್ವರೂಪಾನಂದವನ್ನು ವ್ಯಕ್ತಮಾಡಿಕೊಳ್ಳುತ್ತ, ಉಳಿದ ಮುಕ್ತರಿಂದ ಗೌರವಿಸಲ್ಪಡುತ್ತಿರುವನೋ ಅಂತಹ ಲೋಕದಲ್ಲಿರುವ ಇಂದ್ರ ಎನಿಸುವ ಭಗವಂತನೆಡೆಗೆ ನನ್ನನ್ನು ಕರೆದೊಯ್ಯು.

**ಯತ್ರ ಜ್ಯೋತಿರಜಸ್ರಂ ಯಸ್ಮಿನ್ ಲೋಕೇ ಸ್ವರ್ಹಿತಮ್ ।**
**ತಸ್ಮಿನ್ ಮಾಂ ಧೇಹಿ ಪವಮಾನಾऽಮೃತೇ ಲೋಕೇ ಅಕ್ಷಿತ**
**ಇಂದ್ರಾಯೇಂದೋ ಪರಿ ಸ್ರವ ॥**

ಹೇ ಪವಮಾನ! ಯಾವ ಲೋಕದಲ್ಲಿ ಯಾವಾಗಲೂ ಸೂರ್ಯಜ್ಯೋತಿ ಉದ ಯಿಸಿಯೇ ಇರುವುದೋ, ಯಾವ ಲೋಕದಲ್ಲಿ ಆನಂದರೂಪಿ ಶ್ರೀವಿಷ್ಣು ವಿಶೇಷವಾಗಿ ಸನ್ನಿಹಿತನಾಗಿರುವನೋ, ಅಂತಹ ನಾಶರಹಿತವಾದ ಮುಕ್ತಿರೂಪವಾದ ಲೋಕದಲ್ಲಿ ನನ್ನನ್ನು ಇರಿಸು. ಅಲ್ಲಿರುವ ಭಗವಂತನೆಡೆಗೆ ನನ್ನನ್ನು ಕೊಂಡೊಯ್ಯು.

**ಯತ್ರ ರಾಜಾ ವೈವಸ್ವತೋ ಯತ್ರಾವರೋಧನಂ ದಿವಃ ।**
**ಯತ್ರಾಮೂರ್ಯಹ್ವತೀರಾಪಸ್ತತ್ರ ಮಾಮಮೃತಂ**
**ಕೃಧೀಂದ್ರಾಯೇಂದೋ ಪರಿ ಸ್ರವ ॥**

---

* ಯತ್ರ ಲೋಕೇ ವೈವಸ್ವತೋ ರಾಜಾ ಯಮೋऽಸ್ತಿ ಯತ್ರ ಚ ದಿವೋ ವಾಯುಪತ್ನಾ ಅವರೋಧನಂ ಪರಿವಾರಭೂತಾ ದೇವತಾಶ್ಚ ಸಂತಿ, ಯತ್ರ ಚ ಯಹ್ವತೀಃ ಸ್ಯಂದಮಾನಾ ಆಮೂರಾಪೋ ಗಂಗಾದ್ಯಬ್ದೇವತಾಃ ಸಂತಿ ತತ್ರ ಲೋಕೇ ಮಾಮಮೃತಂ ಕೃಧಿ ।
*– ತಾಮ್ರಪರ್ಣೀಯ*

* ತ್ರಿನಾಕೇ ಕಂ ಸುಖಮಕಂ ದುಃಖಂ ನಾಸ್ತ್ಯಕಂ ದುಃಖಂ ಯತ್ರ ತನ್ನಾಕಂ ಪರಮಸುಖ ಸಾಧನಂ ತ್ರಿವಿಧಂ ಚ ತತ್ ನಾಕಂ ಚ ತ್ರಿನಾಕಂ ಶ್ವೇತದ್ವೀಪಾನಂತಾಸನವೈಕುಂಠಾಖ್ಯಂ ಧಾಮತ್ರಯಂ ತಸ್ಮಿನ್ ತ್ರಿನಾಕೇ ತ್ರಿದಿವಶಬ್ದವಾಚ್ಯೇ । ಯತ್ರ ಲೋಕೇ ದಿವೋ ವಾಯುಪತ್ನ್ಯಾ ಅನ್ಯೇಷಾಂ ವಾ ಅನುಕಾಮಮಿಚ್ಛಾನುಸಾರೇಣ ಚಾರಣಮಸ್ತಿ । ಕಥಂ ಯತ್ರ ವಾಯುಪತ್ನ್ಯಾ ಜ್ಯೋತಿಷ್ಮಂತೋ ಲೋಕಾಃ ಪುರಾಣಿ ಸಂತಿ ತತ್ರ ಮಾಮೃತಂ ಕೃಧಿ । *– ತಾಮ್ರಪರ್ಣೀಯ*

ಯತ್ರ ಕಾಮಾ ನಿಕಾಮಾಶ್ಚ ಯತ್ರ ಬ್ರಧ್ನಸ್ಯ ವಿಷ್ಟಪಮ್ ।
ಸ್ವಧಾ ಚ ಯತ್ರ ತೃಪ್ತಿಶ್ಚ ತತ್ರ ಮಾಮಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥

ವಿ.ಸೂ.: ಈಗ ಮುದ್ರಿತವಾಗಿರುವ ವೇದಸಂಹಿತೆಯಲ್ಲಿ 9-113-10ನೆಯ ಮಂತ್ರವಾಗಿ ಇದು ಪಠಿತವಾಗಿರುವುದಾದರೂ ಶ್ರೀಮದಾಚಾರ್ಯರು ತಮ್ಮ ಐತರೇಯೋಪನಿಷದ್ಭಾಷ್ಯದಲ್ಲಿ [2-1-2-16] ಇದರ ಸ್ಥಾನದಲ್ಲಿ ಉಲ್ಲೇಖಿಸಿರುವ ಮಂತ್ರ 'ಯತ್ರ ತತ್...' ಇತ್ಯಾದಿ ಯಾಗಿರುವುದರಿಂದ ಇದನ್ನೇ ಇಲ್ಲಿ ಮುಖ್ಯವಾಗಿ ಪರಿಗಣಿಸಲಾಗಿದೆ.

ಹೇ ಇಂದೋ! ಯಾವ ಲೋಕದಲ್ಲಿ ಯಮ ಇರುವನೋ ಯಾವ ಲೋಕದಲ್ಲಿ ವಾಯುಪತ್ನಿಯಾದ ಭಾರತಿಯ ಪರಿವಾರದ ಎಲ್ಲ ದೇವಿಯರು ಇರುವರೋ, ಎಲ್ಲಿ ಹರಿಯುತ್ತಿರುವ ನೀರಿನ ಅಭಿಮಾನಿಗಳಾಗಿರುವ ಗಂಗಾದಿ ಜಲದೇವತೆಗಳಿರುವರೋ ಆ ಲೋಕದಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು. ಅಲ್ಲಿರುವ ಭಗವಂತನೆಡೆಗೆ ನನ್ನನ್ನು ಕೊಂಡೊಯ್ಯು.

ಯತ್ರಾನುಕಾಮಂ ಚರಣಂ ತ್ರಿನಾಕೇ ತ್ರಿದಿವೇ ದಿವಃ ।
ಲೋಕಾ ಯತ್ರ ಜ್ಯೋತಿಷ್ಮಂತಸ್ತತ್ರ ಮಾಮಮೃತಂ
ಕೃಧೀಂದ್ರಾಯೇಂದೋ ಪರಿ ಸ್ರವ ॥

ಹೇ ಇಂದೋ! ತ್ರಿದಿವ ಎನಿಸುವ ಯಾವ ಶ್ವೇತದೀಪ ಅನಂತಾಸನ ಹಾಗೂ ವೈಕುಂಠ ಲೋಕಗಳಲ್ಲಿ ವಾಯುಪತ್ನಿಯ ಪ್ರಕಾಶಮಯ ಪಟ್ಟಣಗಳಿವೆಯೋ, ಸ್ವೇಚ್ಛಾನುಸಾರವಾಗಿ ಸಂಚಾರವಿರುವುದೋ ಅಂತಹ ಲೋಕದಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು. ಹಾಗೂ ಅಲ್ಲಿರುವ ಭಗವಂತನೆಡೆಗೆ ನನ್ನನ್ನು ಸಾಗಿಸು.

ಯತ್ರ ತತ್ ಪರಮಂ ಪದಂ ವಿಷ್ಣೋರ್ಲೋಕೇ ಮಹೀಯತೇ ।
ದೇವೈಃ ಸುಕೃತಕರ್ಮಭಿಸ್ತತ್ರ ಮಾಮೃತಂ ಕೃಧೀಂದ್ರಾಯೇಂದೋ ಪರಿ ಸ್ರವ ॥

ಹೇ ಇಂದೋ! ಯಾವ ಲೋಕದಲ್ಲಿ ಶ್ರೀವಿಷ್ಣುವಿನ ಉತ್ತಮ ಸ್ವರೂಪವು ಸತ್ಕರ್ಮಗಳನ್ನು ನಡೆಸುವ ದೇವತೆಗಳಿಂದ ತಮ್ಮ ಒಳ್ಳೆಯ ಕರ್ಮಗಳ ಮೂಲಕ ಆರಾಧಿಸಲ್ಪಡುವುದೋ, ಅಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು; ಅಲ್ಲಿರುವ ಭಗವಂತನೆಡೆಗೆ ಕರೆದೊಯ್ಯು.[15]

ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।
ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮೃತಂ
ಕೃಧೀಂದ್ರಾಯೇಂದೋ ಪರಿ ಸ್ರವ ॥

---

15. ಯತ್ರ ಲೋಕೇ ವಿಷ್ಣೋಸ್ತತ್ಪರಮಂ ಪದಂ ಸ್ವರೂಪಂ ಸುಕೃತಕರ್ಮಭಿರ್ದೇವೈರ್ಮಹೀಯತೇ ಪೂಜ್ಯತೇ ತತ್ರ ಮಾಮಮೃತಂ ಕೃಧಿ – *ತಾಮ್ರಪರ್ಣೀಯ*

* ಅನನ್ಯಹೇತುಕಂ ಸಾಕ್ಷಾದ್ ಭಗವದ್ಭಕ್ತಿಪೂರ್ವಕಮ್ । ಸುಖಮಾನಂದ ಇತ್ಯುಕ್ತೋ ಮೋದೋ ಭೋಗನಿಮಿತ್ತಕಃ । ಪ್ರಮೋದಸ್ತದ್ವಿಶೇಷೋತ್ಥೋ ಮುನ್ನಾಮಾತ್ಯಲಭೋಗತಃ – *ಋಗ್ವೇದಸಂಹಿತಾ [ಐ.ಉ.ಭಾ. 2-8-4-9]*

* ಯತ್ರ ಲೋಕೇ ಆನಂದಾ ವಿಷಯಾನಭಿವ್ಯಕ್ತಾ ನಿರುಪಾಧಿಕಭಗವದ್ಭಕ್ತ್ಯಾದಿವ್ಯಂಗ್ಯಾ ಸುಖವಿಶೇಷಾಃ । ಮೋದಾಃ ಸಜಾತೀಯಭೋಗನಿಮಿತ್ತಕಾಃ ಪ್ರಮುದೋ ವಿಜಾತೀಯಭೋಗವಿಶೇಷನಿಮಿತ್ತಕಾಃ । ಮುದೋ ವಿಜಾತೀಯತ್ವೇಽಪ್ಯಲ್ಪಭೋಗನಿಮಿತ್ತಕಾಃ ಆಸತೇ ತಿಷ್ಠಂತಿ । ಯತ್ರ ಕಾಮಸ್ಯೇಚ್ಛಾಯಾಃ ಕಾಮಾಃ ಕಾಮ್ಯಂತ ಇತಿ ವಿಷಯಾಃ ಆಪ್ತಾಃ ಪರ್ಯಾಪ್ತಾಃ ತತ್ರ ಮಾಮಮೃತಂ ಕೃಧೀತ್ಯರ್ಥಃ – *ತಾಮ್ರಪರ್ಣೀಯ*

ಹೇ ಇಂದೋ! ಎಲ್ಲಿ ಸ್ವತಃ ಅಂದರೆ ನಿರುಪಾಧಿಕಭಗವದ್ಭಕ್ತ್ಯಾದಿಗಳಿಂದ ಅಭಿವ್ಯಕ್ತಗಳಾಗುವ ಸುಖಗಳೂ, ಒಂದೇ ಬಗೆಯ ಅನೇಕ ಭೋಗವಸ್ತುಗಳಿಂದ ಅಭಿವ್ಯಕ್ತಗಳಾಗುವ ಸುಖಗಳೂ, ಬೇರೆ ಬೇರೆ ಬಗೆಯ ಬಹುಭೋಗ ವಸ್ತುಗಳಿಂದ ಅಭಿವ್ಯಕ್ತಗಳಾಗುವ ಸುಖಗಳೂ, ಬೇರೆ ಬೇರೆ ಬಗೆಯ ಅಲ್ಪ ಭೋಗವಸ್ತುಗಳಿಂದ ಅಭಿವ್ಯಕ್ತಗಳಾಗುವ ಸುಖಗಳೂ, ಬಯಸಿದ ಎಲ್ಲ ಭೋಗಪದಾರ್ಥಗಳೂ ಇವೆಯೋ ಆ ಲೋಕದಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು. ಅಲ್ಲಿರುವ ಭಗವಂತನೆಡೆಗೆ ನನ್ನನ್ನು ಕರೆದೊಯ್ಯು.

## ಪವಮಾನಮಂಡಲದ ಆರು ಮಂತ್ರಗಳು

ಸೂರ್ಯ ಚಂದ್ರನಂತೆ ಕಾಣಿಸುವುದೇ ಮುಂತಾದ ಮರಣಸೂಚಕ ಅಪಶಕುನಗಳು ಸಂಭವಿಸಿದಾಗ ಜಪಿಸಲ್ಪಡಬೇಕೆಂದು ವಿಹಿತಗಳಾದ ಮಂತ್ರಗಳಲ್ಲಿ ಕರ್ಣಸೂಕ್ತದ ಆರು ಮಂತ್ರಗಳು ಇರುವಂತೆ, **ಯದಂತಿ ಯಚ್ಚ ದೂರಕೇ.....** ಇತ್ಯಾದಿ ಏಳು ಮಂತ್ರಗಳೂ [ಋಗ್ವೇದ 9-67-21....27] ಸೇರಿಕೊಂಡಿವೆ–

**ಯದಂತಿ ಯಚ್ಚ ದೂರಕ ಇತಿ ಸಪ್ತ ಜಪೇತ್....** [ಐ.ಉ. 2-8-4-8]

**ಯದಂತಿ ಯಚ್ಚ ದೂರಕೇ....** –ಎಂಬ ಋಕ್ಕಿನ ಜಪದಿಂದ ಅಪಮೃತ್ಯುವಿನ ಭಯ ಪರಿಹಾರವಾಗುವುದು. ಸಕಾಲಿಕಮರಣ ಸಂಭವಿಸಿದರೂ ಮುಂದೆ ಜನ್ಮಾದಿಗಳ ಭಯಕ್ಕೆ ಅವಕಾಶವಿಲ್ಲ. ಅಂದರೆ ಮುಕ್ತನಾಗುವನು. ಮುಂದಿನ **ಪವಮಾನಃ ಸೋ ಅದ್ಯ ನಃ....** ಮುಂತಾದ ಆರು ಋಕ್‌ಗಳ ಜಪದಿಂದ ಕರ್ಮದಿಂದ ಬಿಡುಗಡೆ ದೊರಕುವುದು. ಭಗವಂತನ ಲೋಕದ ಪ್ರಾಪ್ತಿ ಆಗುವುದು.[16] ದುಃಸ್ವಪ್ನ ಕಂಡಾಗಲೂ ಅದರ ದುಷ್ಪರಿಣಾಮ ಕಡಿಮೆ ಆಗುವಂತೆ **ಯದಂತಿ.....** ಮುಂತಾದ ಋಕ್ಕ್‌ಗಳನ್ನು ಜಪಿಸಬೇಕು.[17] ಹೀಗೆ ಐತರೇಯಭಾಷ್ಯದಲ್ಲಿ ಸಂದೇಶ ನೀಡಿರುವ ಶ್ರೀ ಮಧ್ವರು ಆ ಏಳು ಋಙ್ಮಂತ್ರಗಳನ್ನು ವ್ಯಾಖ್ಯಾನಿಸಿರುವರು. ಭಯವನ್ನು ಓಡಿಸಲು, ಪುನೀತನನ್ನಾಗಿ ಮಾಡಲು ಪವಮಾನನಲ್ಲಿ ಸಲ್ಲಿಸುವ ಪ್ರಾರ್ಥನಾರೂಪದಲ್ಲಿರುವ ಆ ಏಳು ಋಙ್ಮಂತ್ರಗಳನ್ನು ಶ್ರೀ ಮಧ್ವರ ವ್ಯಾಖ್ಯಾನದ ಕಂಪಿನಡಿ ಪರಿಶೀಲಿಸೋಣ....

---

16. .....ತಸ್ಮಾತ್ ತೇಷಾಂ ದರ್ಶನೇ ತು ಕರ್ತವ್ಯಂ ಪಾರಲೌಕಿಕಮ್ ।
ಸರ್ವಮೇವ ಜಪೇಚ್ಚೈವ ಯದಂತೀತ್ಯಾದಿಕಾ ಋಚಃ ।
....ಯತ್ರ ಬ್ರಹ್ಮೇತಿ ಷಡ್ಭಿಶ್ಚ ಪ್ರಾರ್ಥನೀಯಃ ಸ ಮಾರುತಃ ।
....ಅಪಮೃತ್ಯುಭಯಂ ತಸ್ಯ ಯದಂತೀತ್ಯೃಗ್‌ಜಪಾತ್ ವ್ರಜೇತ್ ।
ಕಾಲಮೃತ್ಯುರ್ಯದಿ ಭವೇತ್ ತದಾ ಜನ್ಮಾದಿಕಂ ಭಯಮ್ ।
ಅನ್ಯಾಭಿಃ ಕರ್ಮತಃ ಪೂತೋ ಯತ್ರ ಬ್ರಹ್ಮೇತಿ ವೈಷ್ಣವಮ್ ।
ಲೋಕಂ ವ್ರಜೇತ್..... *–[ಐ.ಉ.ಭಾ. 2-8-4-8]*

17. ಯದಂತೀತ್ಯಾದ್ಯೃಚಃ ಸರ್ವಾ ಅಪಿ ದುಃಸ್ವಪ್ನದರ್ಶನೇ । ಜಪ್ಯಾ ಏವ....... ।
*– ಐತರೇಯಸಂಹಿತಾ [ಐ.ಉ.ಭಾ.2-8-4-15]*

**ಯದಂತಿ ಯಚ್ಚ ದೂರಕೇ ಭಯಂ ವಿಂದತಿ ಮಾಮಿಹ ।**
**ಪವಮಾನ ವಿ ತಜ್ಜಹಿ ॥**

ಪವಿತ್ರೀಕರಿಸುವ ಪ್ರಯುಕ್ತ ಪವಮಾನ ಎಂದೆನಿಸುವ ಹೇ ಪ್ರಾಣದೇವ[18] ಇಹದಲ್ಲಿ ಸಮೀಪದಲ್ಲಾಗಲಿ ದೂರದಲ್ಲಾಗಲಿ ಯಾವುದೇ ಬಗೆಯ ಭಯ ನನಗೆ ಬಂದೊದಗಿದರೂ ಅದನ್ನು ಪರಿಹರಿಸು.[19]

**ಪವಮಾನಃ ಸೋ ಅದ್ಯ ನಃ ಪವಿತ್ರೇಣ ವಿಚರ್ಷಣಿ ।**
**ಯಃ ಪೋತಾ ಸ ಪುನಾತು ನಃ ॥**

ನಾನಾ ಬಗೆಯ ಪ್ರಜೆಗಳಿಗೆ ಒಡೆಯನಾದ, ಪಾವನವಾದ ವಾಯುದೇವನು ಸಾಕ್ಷಾತ್ತಾಗಿ ಪವಿತ್ರನಾದ ಜನಾರ್ದನನನ್ನು ಪ್ರಸನ್ನಗೊಳಿಸಿ, ಅವನ ಪ್ರಸಾದದಿಂದ ಲೋಕಗಳನ್ನೆಲ್ಲ ಪವಿತ್ರಗೊಳಿಸುವವನು.[20] ಅಂತಹ ವಾಯುದೇವ ಈಗ ನಮ್ಮನ್ನು ಪುನೀತರನ್ನಾಗಿ ಮಾಡಲಿ.[21]

**ಯತ್ತೇ ಪವಿತ್ರಮರ್ಚಿಷ್ಯಗ್ನೇ ವಿತತಮಂತರಾ । ಬ್ರಹ್ಮ ತೇನ ಪುನೀಹಿ ನಃ ।**

ಬೇರೆ ಬೇರೆ ದೇಹಗಳ ಅಥವಾ ಅವಯವಗಳ ಪ್ರೇರಕನಾಗಿರುವುದರಿಂದ 'ಅಗ್ನಿ' ಎನಿಸುವ ವಾಯುದೇವ,[22] ದೇಹದೊಳಗೆ ವ್ಯಾಪ್ತವಾಗಿರುವ ನಿನ್ನ ತೇಜಸ್ಸಿನಲ್ಲಿ ವ್ಯಾಪ್ತನಾಗಿರುವ ಪವಿತ್ರನಾದ ಬ್ರಹ್ಮನನ್ನು ಉಪದೇಶಿಸಿ ನಮ್ಮನ್ನು ಪವಿತ್ರಗೊಳಿಸು.[23]

**ಯತ್ತೇ ಪವಿತ್ರಮರ್ಚಿವದಗ್ನೇ ತೇನ ಪುನೀಹಿ ನಃ । ಬ್ರಹ್ಮಸವೈಃ ಪುನೀಹಿ ನಃ ।**

ಅಗ್ನಿ ಎನಿಸುವ ವಾಯುದೇವ! ನಿನ್ನ ಒಡೆಯನಾದ ಕಾಂತಿಯುಕ್ತನಾದ, ಪವಿತ್ರನಾದ ಪರಬ್ರಹ್ಮನನ್ನು ಪ್ರಸನ್ನಗೊಳಿಸಿ, ಅವನಿಂದ ನಮ್ಮನ್ನು ಪವಿತ್ರೀಕರಿಸು, ಹಾಗೆಯೇ ಅಂತಹ

---

18. 'ಪವಮಾನಶ್ಚ ಪಾವನಾತ್...' – *[ಐ.ಉ.ಭಾ. 2-8-4-8]*

19. ಇಹ ಅಂತಿ ದೂರಕೇ ಚ ಯತ್ ಭಯಂ ಮಾಂ ವಿಂದತಿ ತತ್ ವಿಜಹಿ –ಇತ್ಯನ್ವಯಃ ।

20. ಪವಿತ್ರಂ ನಾಮ ಸಾಕ್ಷಾತ್ ತತ್ ಪರಂ ಬ್ರಹ್ಮ ಜನಾರ್ದನಃ । ಪ್ರಸಾದಯಿತ್ವಾ ತಂ ವಿಷ್ಣುಂ ತೇನ ಲೋಕಾನ್ ಪುನಾತ್ಯಸು ‌। – *[ಐ.ಉ.ಭಾ. 2-8-4-8]*

21. ವಿವಿಧಾಃ ಚರ್ಷಣಯಃ ಪ್ರಜಾಃ ಯಸ್ಯ ನಿಯಾಮಕತಾಸಂಬಂಧೇನ ಸಃ ವಿಚರ್ಷಣಿಃ । ಸಃ ಪ್ರಸಿದ್ಧಃ ಯಃ ಪವಿತ್ರೇಣ ಪೋತಾ ಸಃ ನಃ ಅದ್ಯ ಪುನಾತು –ಇತ್ಯನ್ವಯಃ

22. ಸ್ತೂಯತೇ ಸೋಽಂಗನೇತೃತ್ವಾದಗ್ನಿರಿತ್ಯಭಿಧೀಯತೇ । – *[ಐ.ಉ.ಭಾ.]*

23. ಜ್ಞಾನಾಖ್ಯಪ್ರಸವೇನಾಪಿ ಸ್ವಯಂ ವಾಯುಃ ಪುನಾತ್ಯಯಮ್ । ಪ್ರಾಣಾಗ್ನೇರರ್ಚಿಷೋ ದೇಹೇ ವಿತತಾಸ್ತೇಷು ಕೇಶವಃ । ಅರ್ಚಿಷ್ಮಾನ್ ವಿತತೋ ನಿತ್ಯಂ ವಾಯುಸ್ತೇನ ಪುನಾತ್ಯಲಮ್ । – *[ಐ.ಉ.ಭಾ.]*

* ಹೇ ಅಗ್ನೇ ಅಂತರಾ ತೇ ಅರ್ಚಿಷಿ ವಿತತಂ ಯತ್ ಪವಿತ್ರಂ ಬ್ರಹ್ಮ ತೇನ ನಃ ಪುನೀಹಿ –ಇತ್ಯನ್ವಯಃ ।

ಪರಬ್ರಹ್ಮನ ಜ್ಞಾನ ನಮ್ಮಲ್ಲಿ ಉಂಟಾಗುವಂತೆ ಮಾಡಿ, ಅವುಗಳ ಮೂಲಕವೂ ನಮ್ಮನ್ನು ಪವಿತ್ರೀಕರಿಸು.24

**ಉಭಾಭ್ಯಾಂ ದೇವ ಸವಿತಃ ಪವಿತ್ರೇಣ ಸವೇನ ಚ ।**
**ಮಾಂ ಪುನೀಹಿ ವಿಶ್ವತಃ ॥**

ಹೇ ಸರ್ವಜ್ಞನಾದುದರಿಂದ ದೇವ ಎನಿಸುವ,25 ಭಗವಂತನ ಜ್ಞಾನವನ್ನು ಹುಟ್ಟಿಸುವುದರಿಂದ 'ಸವಿತೃ' ಎನಿಸುವ,26 ವಾಯೋ! ಪವಿತ್ರನಾದ ಬ್ರಹ್ಮನ ಅನುಗ್ರಹ ದಿಂದ ಹಾಗೂ ಅವನ ಜ್ಞಾನದಿಂದ –ಹೀಗೆ ಈ ಎರಡರಿಂದಲೂ ನನ್ನನ್ನು ಎಲ್ಲ ಕಡೆ ಗಳಲ್ಲೂ ಎಲ್ಲ ದೃಷ್ಟಿಗಳಿಂದಲೂ ಪುನೀತನನ್ನಾಗಿ ಮಾಡು.27

**ತ್ರಿಭಿಷ್ಟ್ವಂ ದೇವ ಸವಿತಃ ವರ್ಷಿಷ್ಠೈಃ ಸೋಮ ಧಾಮಭಿಃ ।**
**ಅಗ್ನೇ ದಕ್ಷೈಃ ಪುನೀಹಿ ನಃ ॥**

ಸೌಮ್ಯಗುಣ28 ಸ್ವರೂಪಿ, ಹೇ ದೇವ! ಹೇ ಸವಿತ! ಹೇ ಅಗ್ನೇ! ವಾಯೋ ಭಕ್ತರಿಗೆ ಅಭೀಷ್ಟಗಳನ್ನು ಸುರಿಸುವ ಸಮರ್ಥಗಳಾದ ಕ್ಷೀರಾಬ್ಧಿ ಅನಂತಾಸನ ಹಾಗೂ ವೈಕುಂಠ ಎಂಬ ಮೂರು ಲೋಕಗಳಲ್ಲಿರುವ ಪದ್ಮನಾಭ, ಅನಂತಾಸನ ಹಾಗೂ ನಾರಾಯಣ29 ಭಗವದ್ರೂಪಗಳಿಂದ, [ಅವುಗಳ ಅನುಗ್ರಹದಿಂದ] ನಮ್ಮನ್ನು ಪವಿತ್ರೀಕರಿಸು.30

---

24. ಪ್ರಸಾದಯಿತ್ವಾ ತಂ ವಿಷ್ಣುಂ ತೇನ ಲೋಕಾನ್ ಪುನಾತ್ಯಸುಃ । ಜ್ಞಾನಾಖ್ಯಪ್ರಸವೇನಾಪಿ ಸ್ವಯಂ ವಾಯುಃ ಪುನಾತ್ಯಯಮ್ । *– [ಐ.ಉ.ಭಾ.]*

* ಹೇ! ಅಗ್ನೇ! ತೇ ಅರ್ಚಿವತ್ ಯತ್ ಪವಿತ್ರಂ ಬ್ರಹ್ಮ ತೇನ ನಃ ಪುನೀಹಿ ಬ್ರಹ್ಮ ಸವೈಃ ನಃ ಪುನೀಹಿ । ಇತ್ಯನ್ವಯಃ ।

25. ದೀವ್ಯತಿ ಸರ್ವಂ ಅವಗಚ್ಛತೀತಿ ದೇವಃ, 'ದಿವು ಗತೌ'

26. ಪರಸ್ಯ ಬ್ರಹ್ಮಣೋ ವಿಷ್ಣೋರ್ಜ್ಞಾಪನಾಖ್ಯಪ್ರಸೂತಿಭಿಃ ವಾಯುಃ ಪುನಾತಿ ಯಲ್ಲೋಕಾನ್ ಸವಿತಾ ತೇನ ಕಥ್ಯತೇ ।

*– [ಐ.ಉ.ಭಾ.ಖ*

27. ಹೇ ದೇವ! ಸವಿತಃ ಪವಿತ್ರೇಣ ಪ್ರಸನ್ನೇನ ಬ್ರಹ್ಮಣಾ ಸವೇನ ಚ ಜ್ಞಾನಾಖ್ಯಪ್ರಸವೇನ ಚ ಇತಿ ಉಭಾಭ್ಯಾಂ ಮಾಂ ವಿಶ್ವತಃ ಪುನೀಹಿ । ಇತ್ಯನ್ವಯಃ ।

28. ಸೋಮಃ ಸೌಮ್ಯಸ್ವರೂಪತ್ವಾತ್.... *– [ಐ.ಉ.ಭಾ.]*

29. ಹೇ ಸೋಮ! ಹೇ ದೇವ! ಹೇ ಸವಿತಃ! ಹೇ ಅಗ್ನೇ ತ್ವಂ ವರ್ಷಿಷ್ಠೈಃ ದಕ್ಷೈಃ ತ್ರಿಭಿಃ ಧಾಮಭಿಃ ರೂಪೈಃ ನಃ ಪುನೀಹಿ ।

30. ಅನಂತಾಸನವೈಕುಂಠ ಪದ್ಮನಾಭಾಃ ಸ್ವಯಂ ಹರಿಃ ।
*– ವಾಮನೇ [ಭಾ.ತಾ.ನಿ. 2-6-18]*

* ಯತ್ರ ಬ್ರಹ್ಮಾ ವೇದವಾಕ್ಯಂ ವ್ಯಾಚಕ್ಷಾಣೋ ಮುಖ್ಯೈರ್ಯಜನ್ । ಸೋಮೇನ ಚ ಸುತೇನೇಶಂ ಆಸ್ತೇ ಲೋಕೇ ಪರೇರ್ಹಿ ಸಃ' *– ಸ್ಕಾಂದೇ [ಐ.ಉ.ಭಾ. 2-8-4-9]*

# ಋಷಭಸೂಕ್ತ

ದುರ್ಯೋಧನನ ಸೊಂಟವನ್ನು ಮುರಿದು, ಅವನ ನೆತ್ತಿಯನ್ನು ತುಳಿಯುತ್ತ ಭೀಮಸೇನ ಕಂಡ ಸೂಕ್ತ 'ಋಷಭಸೂಕ್ತ'. ಋಗ್ವೇದದಲ್ಲಿ [10-166] ಪ್ರಸ್ತುತವಾದ ಈ ಸೂಕ್ತ ಭೀಮಸೇನನಿಂದ ದುರ್ಯೋಧನನ ಸಂಹಾರ ನಡೆಸಲ್ಪಡುವಾಗ ಕಾಣಲ್ಪಟ್ಟದ್ದೆಂದು ಶ್ರೀಮದಾಚಾರ್ಯರು ತಿಳಿಸಿದ್ದರೆ,1 ಐದು ಮಂತ್ರಗಳನ್ನೊಳಗೊಂಡ ಆ ಸೂಕ್ತವನ್ನು ಶ್ರೀ ವಾದಿರಾಜಸ್ವಾಮಿಗಳು ತಮ್ಮ ಭಾವಪ್ರಕಾಶಿಕಾ ಟಿಪ್ಪಣಿಯಲ್ಲಿ ವ್ಯಾಖ್ಯಾನಿಸಿರುವರು.

**ಋಷಭಂ ಮಾ ಸಮಾನಾನಾಂ ಸಪತ್ನಾನಾಂ ವಿಷಾಸಹಿಮ್ ।**
**ಹಂತಾರಂ ಶತ್ರೂಣಾಂ ಕೃಧಿ ವಿರಾಜಂ ಗೋಪತಿಂ ಗವಾಮ್** ॥ ೧ ॥

ದೊಡ್ಡಮ್ಮ ಚಿಕ್ಕಮ್ಮ (ಗಾಂಧಾರಿ ಕುಂತಿ) ಇವರ ಮಕ್ಕಳಾಗಿದ್ದು ಹಸ್ತಿನಾಪುರದ ಸಿಂಹಾಸನಕ್ಕೆ ಅರ್ಹರಾಗಿದ್ದ ಪ್ರಯುಕ್ತ ಸಮಾನರೆನಿಸಿದ್ದ ಕೌರವ ಪಾಂಡವರ ಮಧ್ಯದಲ್ಲಿ ವಿಶೇಷವಾಗಿ ಸಹನಶೀಲನನ್ನಾಗಿ, ಮುಂದೆ ಶತ್ರುಗಳಾದ ದುರ್ಯೋಧನಾದಿಗಳನ್ನು ಕೊಲ್ಲುವವನನ್ನಾಗಿ, ವಿಶೇಷವಾಗಿ ಪ್ರಕಾಶಿಸುವವನನ್ನಾಗಿ, ವಿದ್ಯೆಗಳ ವಿಷಯದಲ್ಲಿ ವಿದ್ಯಾಪತಿಯನ್ನಾಗಿ, ವಿದ್ಯಾಭಿಮಾನಿಗಳೆಲ್ಲ ನನ್ನನ್ನು ಸೇವಿಸುವಂತೆ –ಹೀಗೆ ಶ್ರೇಷ್ಠನನ್ನಾಗಿ ನನ್ನನ್ನು ಮಾಡು.2

**ಅಹಮಸ್ಮಿ ಸಪತ್ನಹೇಂದ್ರ ಇವಾರಿಷ್ಟೋ ಅಕ್ಷತಃ ।**
**ಅಧಃ ಸಪನ್ನಾ ಮೇ ಪದೋರಿಮೇ ಸರ್ವೇ ಅಭಿಷ್ಠಿತಾಃ** ॥ ೨ ॥

ಇಂದ್ರನಂತೆ ನಾಶರಹಿತನಾಗಿ, ಹಾನಿರಹಿತನಾಗಿ ದಾಯಾದಿಗಳನ್ನು ನಾಶಪಡಿಸುವೆನು. ಈ ಎಲ್ಲ ದಾಯಾದಿಗಳು ನನ್ನ ಪಾದಗಳ ಅಡಿಯಲ್ಲಿ ಬಿದ್ದಿರುವವರಾಗಲಿ.3

---

1. ..........ತತ್ತ್ವತಿಜ್ಞಾನುಸಾರೇಣ ಭೀಮೋ ಮೂರ್ಧಾನಮಕ್ರಮೀತ್ । ಋಷಭಂ ಮಾ ಸಮಾನಾನಾಮಿತಿ ಸೂಕ್ತಂ ದದರ್ಶ ಹ । ತೇಷಾಂ ಪುಣ್ಯಾನಿ ವಿದ್ಯಾಶ್ಚ ಸಮಾದಾಯ್ಯೈವ ಸರ್ವಶಃ ॥ *– ಮ.ಭಾರ.ತಾ.ನಿ. 28-79.*

2. ಸಮಾನಾನಾಂ ಸಪತ್ನಾನಾಂ ಮಧ್ಯೇ ವಿಷಾಸಹಿಂ ವಿಶೇಷೇಣ ಸಹನಶೀಲಂ..... ಋಷಭಂ–ಶ್ರೇಷ್ಠಂ ಮಾ–ಮಾಂ ಶತ್ರೂಣಾಂ ಹಂತಾರಂ ಕೃಧಿ–ಕುರು, ವಿರಾಜಂ–ವಿಶೇಷೇಣ ಪ್ರಕಾಶಮಾನಂ ಕುರು । ಗವಾಂ ವಿದ್ಯಾನಾಂ ಮಧ್ಯೇ ಗೋಪತಿಂ ವಿದ್ಯಾಪತಿಂ ಕುರು । ವಿದ್ಯಾಭಿಮಾನಿನೋ ದೇವಾಃ ಮಾಂ ಯಥಾ ಸೇವಂತೇ ತಥಾ ಕುರ್ವಿತ್ಯರ್ಥಃ ।

3. ಇಂದ್ರ ಇವ ಅರಿಷ್ಟಃ ನಾಶರಹಿತಃ ಅಕ್ಷತಃ ಕ್ಷತರಹಿತಃ ಸನ್ ಸಪತ್ನಹಾ ಸಪತ್ನಾನಾಂ ಹಂತಾ ಅಸ್ಮಿ । ಇಮೇ ಸರ್ವೇ ಸಪತ್ನಾ ಮೇ ಪದೋರಧಃ ಅಭಿಷ್ಠಿತಾಃ– ಅಭಿತಃ ಸ್ಥಿತಾ ಭವಂತು ।

ಋಷಭಸೂಕ್ತದ ಈ ಮಾತು ತನ್ನ ಬಗ್ಗೆಯೇ ಹೊರಟಿದ್ದೆಂದು ತೋರಿಸಿಕೊಡುವುದಕ್ಕಾಗಿಯೇ ಭೀಮಸೇನ ದುರ್ಯೋಧನನ ನೆತ್ತಿಯ ಮೇಲೆ ಪುನಃ ಪುನಃ ನರ್ತಿಸಿದನು.4

**ಅತ್ರೈವ ವೋಽಪಿ ನಹ್ಯಾಮ್ಯುಭೇ ಆರ್ತ್ನೀ ಇವ ಜ್ಯಯಾ ।**
**ವಾಚಸ್ಪತೇ ನಿ ಷೇಧೇಮಾನ್ಯಥಾ ಮದಧರಂ ವದಾನ್ ॥ ೩ ॥**

ನನ್ನ ಪಾದಗಳ ಅಡಿಯಲ್ಲೇ ಬಿಲ್ಲಿನ ಎರಡು ತುದಿಗಳನ್ನೂ ಹಗ್ಗದಿಂದ ಎಳೆದು ಕಟ್ಟಿದಂತೆ ಎರಡು ಸೇನೆಯಲ್ಲಿರುವವರನ್ನೂ ಆಚೆ ಈಚೆ ಚಲಿಸದಂತೆ ಬಂಧಿಸುವೆನು. ಸಕಲವಿದ್ಯಾಧಿಪತಿಗಳಾದ ವೇದವ್ಯಾಸರೇ, ನನ್ನ ಅಡಿಯಲ್ಲೇ ವಕ್ತೃಗಳನ್ನಾಗಿ ಮಾಡಿ.5

ಭೀಮರೂಪದಲ್ಲೂ ಮುಂದಿನ ಮಧ್ವರೂಪದಲ್ಲೂ ನನಗೆ ವಿರುದ್ಧವಾಗಿ ವಾದಿಸುವವನು ಇಲ್ಲದಂತೆ ಸಾಧಿಸು ಎಂಬ ಆಶಯ.6

**ಅಭಿಭೂರಹಮಾಗಮಂ ವಿಶ್ವಕರ್ಮೇಣ ಧಾಮ್ನಾ ।**
**ಆ ವಶ್ಚಿತ್ತಮಾ ವೋ ವ್ರತಮಾವೋಽಹಂ ಸಮಿತಿಂ ದದೇ ॥ ೪ ॥**

ನಾನು ಸಕಲ ಜಗತ್‌ಕರ್ತೃ ಆದ, ಹಾಗೂ ಸಕಲಜಗದ್ಧಾರಕನಾದ ನಾರಾಯಣನಿಂದ, ಅವನ ಆಜ್ಞೆಯಿಂದ ಶತ್ರುಗಳನ್ನು ಸೋಲಿಸುವವನಾಗಿ ಇಲ್ಲಿಗೆ ಬಂದಿರುವೆನು. ನಿಮ್ಮ ಮನಸ್ಸನ್ನೂ, ಜ್ಞಾನದ ಫಲವನ್ನೂ, ವ್ರತಾದಿಗಳ ಫಲವನ್ನೂ ಬಲಾತ್ಕಾರವಾಗಿ ವಶ ಪಡಿಸಿಕೊಳ್ಳುವೆನು.7

- 'ತೇಷಾಂ ಪುಣ್ಯಾನಿ ವಿದ್ಯಾಶ್ಚ ಸಮಾದಾಯೈವ ಸರ್ವಶಃ' –ಎಂಬ ನಿರ್ಣಯದ ಮಾತು ಸೂಕ್ತದ ಮಾತಿನ ಆಶಯವನ್ನು ಸ್ಪಷ್ಟಪಡಿಸಿದೆ.8

---

4. ಏತದ್ವಾಕ್ಯಂ ಸ್ವವಿಷಯಮಿತಿ ದರ್ಶನಾಯೈವ ದುರ್ಯೋಧನಶಿರಸಿ ಪುನಃ ಪುನಃ ಪದಾಭ್ಯಾಂ ನನರ್ತ ।

5. ಅತ್ರೈವ–ಮಮ ಪದೋರಧಸ್ತಾದೇವ ಜ್ಯಯಾ –ಮೌರ್ವ್ಯಾ ಉಭೇ ಆರ್ತ್ನೀ ಇವ –ಧನುಷ್ಕೋಟೀ ಇವ ವೋಽಪಿ ಪರಸೇನಾಸ್ಥಾನಿವ ಮಮ ಸೇನಾಸ್ಥಾನಪಿ ನಹ್ಯಾಮಿ ಬಧ್ನಾಮಿ–ಬದ್ಧವದಿನತಸ್ತತಶ್ಚಲಿತುಮಪಿ ನ ಮುಂಚಾಮೀತಿ ಸೂಚನಾಯ ನಹ್ಯಾಮೀತ್ಯುಕ್ತಮ್ । ಹೇ ವಾಚಸ್ಪತೇ–ಸಕಲವಿದ್ಯಾಪತೇ ವೇದವ್ಯಾಸ ಇಮಾನ್ ಸರ್ವಾನ್ ಮತ್ತಃ ಅಧರಂ ಅಧಸ್ಥಾದೇವ ವದಾನ್ ವಕ್ತೄನ್ ನಿಷೇಧ ಸಾಧಯ ।

6. ಭೀಮರೂಪೇ ಭಾವಿನಿ ಮಮ ಮಧ್ವರೂಪೇ ಚ ಪ್ರತಿವಕ್ತಾ ಕೋಽಪಿ ಯಥಾ ನ ಭೂಯಾತ್ ತಥಾ ಸಾಧಯೇತಿ ಭಾವಃ ।

7. ಅಹಂ ವಿಶ್ವಕರ್ಮಣಾ–ಸಕಲಜಗತ್ಕರ್ತ್ರಾ ಧಾಮ್ನಾ–ಸಕಲಜಗದ್ಧಾರಕೇಣ ಚ ನಾರಾಯಣೇನ ಅಭಿಭೂಃ–ಅಭಿಭಾವಯತಿ ಪರಾನ್ ಪರಾಭಾವಯತೀತ್ಯಭಿಭೂಸ್ಸನ್ ಇಹ ಆಗಮಂ–ನಾರಾಯಣಾಜ್ಞಯಾ ಸರ್ವವಿಜಯೀ ಸನ್ ಅಹಮಿಹಾಗಮಮ್ । ಆ ಸಮಂತಾತ್ ವಃ–ಚಿತ್ತಂ ಸಂ–ಸಮೀಚೀನಾಂ ಇತಿಂ–ಜ್ಞಾನಂ ಜ್ಞಾನಫಲಭೂತಾಂ ಸದ್ಗತಿಂ ಚ ಅಹಮೇವ ಆದದೇ ಬಲಾದಪಹೃತ್ಯ ಮಮ ವಶಮಕರವಮಿತ್ಯರ್ಥಃ ।

8. ಏತತ್ತು 'ತೇಷಾಂ ಪುಣ್ಯಾನಿ ವಿದ್ಯಾಶ್ಚೇತ್ಯಾದಿನಾ ಭೀಮವಾಕ್ಯಾನುವಾದವ್ಯಾಜೇನ ಗ್ರಂಥಕಾರೇಣೈವೋಕ್ತಮ್ ।

**‘ಯೋಗಕ್ಷೇಮಂ ವ ಆದಾಯಾಹಂ ಭೂಯಾಸಮುತ್ತಮ ಆ ವೋ ಮೂರ್ಧಾನಮಕ್ರಮೀಮ್ । ಅಧಸ್ಪದಾನ್ನ ಉದ್ವದತ ಮಂಡೂಕಾ ಇವೋದಕಾನ್ ಮಂಡೂಕಾ ಉದಕಾದಿವ.... ॥ ೫ ॥’**

ಕಾಮ್ಯ ತಪಸ್ಸು ಮುಂತಾದವುಗಳಿಂದ ಗಳಿಸಲ್ಪಟ್ಟ ‘ಯೋಗಕ್ಷೇಮ’ವನ್ನು ಕಸಿದು ಕೊಂಡು, ಹಾಗೂ ನಾನು ಮಾಡಿದ ಪುಣ್ಯಕರ್ಮದಿಂದಲೂ ನಾನು ಉತ್ತಮನೆನಿಸಲಿರುವೆ. ರಣಾಂಗಣದಲ್ಲಿ ಬಿದ್ದಿರುವ ನಿಮ್ಮ ನೆತ್ತಿಯನ್ನು ಪಾದಗಳಿಂದ ಆಕ್ರಮಿಸಿ ನಿಲ್ಲುವೆನು. ಹಾಗೆ ನೆತ್ತಿಯನ್ನು ಆಕ್ರಮಿಸಿದ ನನ್ನ ಪಾದದ ಅಡಿಯಲ್ಲಿ ಗಟ್ಟಿಯಾಗಿ ಕಿರುಚಿಕೊಳ್ಳಿ. ನೀರಿನ ಅಡಿಯ ಕೆಸರಲ್ಲಿ ಇರುವ ಕಪ್ಪೆಗಳು ಹೇಗೆ ಕಿರುಚಿಕೊಳ್ಳುವವೋ ಹಾಗೆ.[9]

ಈ ಸೂಕ್ತದ ಅರ್ಥಕ್ಕೂ ಭೀಮಸೇನನ ಮೂಲಕ ಕುರುಕ್ಷೇತ್ರದಲ್ಲಿ ನಡೆದ ಸಾಧನೆಗೂ ಸ್ವಲ್ಪವೂ ವ್ಯತ್ಯಾಸ ಇಲ್ಲದಿರುವುದರಿಂದ ಈ ಸೂಕ್ತ ಈ ಅರ್ಥವನ್ನೇ ಒಳ ಗೊಂಡಿದೆ ಎಂಬುದು ಸ್ಪಷ್ಟ.[10]

*

---

9. ಯೋಗಕ್ಷೇಮಂ ಕಾಮ್ಯತಪ ಆದಿನಾ ಲಬ್ಧಂ ವಃ ಯೋಗಕ್ಷೇಮಂ ಆದಾಯ ಮತ್ಕೃತ ಪುಣ್ಯವಶಾತ್ ಭವದ್ಭ್ಯಃ ಅಪಹೃತಪುಣ್ಯವಶಾಚ್ಚ ಉತ್ತಮಃ ಭೂಯಾಸಮ್ । ಆ -ಸಮಂತಾತ್ ರಣರಂಗೇ ಪತಿತಾನಾಂ ವಃ ಮೂರ್ಧಾನಂ ಅಕ್ರಮೀಂ-ಅಕ್ರಮಂ ಪದ್ಭ್ಯಾಮಾಕ್ರಮ್ಯ ಅತಿಷ್ಠಮ್ । ಯೂಯಂ ಸರ್ವೇ ಉಕ್ತವಿಧಯಾ ಮೂರ್ಧಾನ ಮಾಕ್ರಮ್ಯ ಸ್ಥಿತಸ್ಯ ಮಮ ಪದಾತ್ ಪಾದಾತ್ ಅಧಸ್ತಾತ್ ಉದ್ವದತ -ಉಚ್ಚೈರಾಕ್ರೋಶಂ ಕುರುತ । ತತ್ರ ದೃಷ್ಟಾಂತಮಾಹ -ಉದಕಾತ್ ಅಧಃ ಪಂಕೇ ಮಂಡೂಕಾ ಇವ..... ।

10. ಶ್ರುತ್ಯರ್ಥಸ್ಯ ಭೀಮಚರಿತಸ್ಯ ಚೇಷದಪಿ ವೈಲಕ್ಷಣ್ಯಾಭಾವಾತ್ ಅನನ್ಯ ವಿಷಯೈವೇಯಂ ಶ್ರುತಿರಿತಿ ಯುಕ್ತಮುತ್ಪಸ್ಯಾಮಃ ।

# ಮುಖ್ಯಪ್ರಾಣಪರಗಳಾದ ಋಗ್ವೇದದ ೩೦ ಮಂತ್ರಗಳು

ಋಗ್ವೇದದ ೩೭, ೩೮ ಹಾಗೂ ೩೯ ಈ ಮೂರು ಸೂಕ್ತಗಳು ಮರುದ್ದೇವತಾಕ ಗಳೆಂದು ಪ್ರಸಿದ್ಧವಾದವು. ಇವುಗಳಲ್ಲಿ ಪ್ರಧಾನ ವಾಯುದೇವನ ಪ್ರಸ್ತಾವದಂತೆ ಇತರ ಮರುದ್ದೇವತೆಗಳ ಪ್ರಸ್ತಾವವೂ ಇದೆ. ಇತರ ಮರುದ್ದೇವತೆಗಳ ಪ್ರಸ್ತಾವ ಇರುವ ಮಂತ್ರಗಳಲ್ಲೂ ಆ ದೇವತೆಗಳಲ್ಲಿ ಪ್ರಧಾನವಾಯುದೇವನ ವಿಶೇಷಾವೇಶವಿರುವುದರಿಂದ ಪ್ರಧಾನ ವಾಯುದೇವನ ಗುಣಮಹಿಮೆಗಳ ಉಲ್ಲೇಖವೂ ಬಂದಿದೆ.[31] ಆದರೆ ಯಾವ ಮಂತ್ರದಲ್ಲಿ ಏಕವಚನದ ಶಬ್ದದಿಂದ ಮರುದ್ದೇವತೆಯ ಪ್ರಸ್ತಾವ ಇದೆಯೋ ಆ ಮಂತ್ರ ಪ್ರಧಾನವಾಯುದೇವಪರವಾದುದೆಂಬುದು ಸ್ಪಷ್ಟ.[32] ಹೀಗೆ ಪ್ರಧಾನವಾಯುದೇವಪರ ಗಳಾದ ಮಂತ್ರಗಳ ಸಂದೇಶವನ್ನು ಮಾಧ್ವಭಾಷ್ಯದ ಕಂಪಿನಲ್ಲಿ ಆಸ್ವಾದಿಸೋಣ. ಅಂತೆಯೇ ಉಳಿದ ವಾಯುದೇವನ ಪ್ರಸ್ತಾವ ಸ್ಪಷ್ಟವಾಗಿ ಉಳ್ಳ ಮಂತ್ರಗಳನ್ನು ಪರಿಶೀಲಿಸೋಣ.

೧. **ಕ್ರೀಳಂ ವಶ್ಮರ್ಧೋ ಮಾರುತಮನರ್ವಾಣಂ ರಥೇ ಶುಭಮ್ ।**
**ಕಣ್ವಾ ಅಭಿ ಪ್ರಗಾಯತ ।** ಋ.ವೇ. 37-1

ಹೇ ಮೇಧಾತಿಥಿ ಮುಂತಾದ ನನ್ನ ಪುತ್ರ ಹಾಗೂ ಮಿತ್ರಾದಿಗಳೇ (ಈ ಸೂಕ್ತದ ದ್ರಷ್ಟೃ ಕಣ್ವ ಮಾಡಿದ ಸಂಬೋಧನೆ) ಜಗತ್ಪಾಲನಾದಿ ಕ್ರೀಡಾಶೀಲನಾದ, ಸುಖಬಲಗಳಿಂದ ಸಮೃದ್ಧನಾದ, ಇಂದ್ರಿಯಾಭಿಮಾನಿದೇವತೆಗಳ ಪ್ರೇರಣೆಗೊಳಗಾಗದ ಪ್ರಯುಕ್ತ ಇಂದ್ರಿಯ ಗಳನ್ನು ಹೊಂದಿದ್ದರೂ ಇಂದ್ರಿಯರಹಿತನೆಂದು ಕರೆಯಲ್ಪಡುವ, ಜೀವಾತ್ಮರ ದೇಹದಲ್ಲಿ ಮಂಗಲನೆನಿಸಿರುವ ನಿಮ್ಮ ಒಡೆಯನಾದ ಮುಖ್ಯಪ್ರಾಣನನ್ನು ಚೆನ್ನಾಗಿ ಸ್ತುತಿಸಿ.[33]

೨. **ಪ್ರ ವಃ ಶರ್ಧಾಯ ಘೃಷ್ವಯೇ ತ್ವೇಷದ್ಯುಮ್ನಾಯ ಶುಷ್ಮಿಣೇ ।**
**ದೇವತ್ತಂ ಬ್ರಹ್ಮ ಗಾಯತ ॥** [ಋ.ವೇ. 37-4]

ಹೇ ಮೇಧಾತಿಥಿ ಮುಂತಾದ ಆತ್ಮೀಯರೇ! ನಿಮಗೆ ಬಲಸುಖಪ್ರದನಾದ, ಭಕ್ತರ ಪಾಪಶೋಧಕನಾದ, ಶುದ್ಧನಾದ, ಚೆನ್ನಾಗಿ ಪ್ರಕಾಶಿಸುವ ಜ್ಞಾನವುಳ್ಳ, ಅತಿಬಲಿಷ್ಠನಾದ, ಪ್ರಧಾನವಾಯುವಿಗಾಗಿ ದೇವತೆಗಳಲ್ಲಿ ವ್ಯಾಪಿಸಿರುವ ಪರಬ್ರಹ್ಮನನ್ನು ಚೆನ್ನಾಗಿ ಸ್ತುತಿಸಿ.

---

31. ಪ್ರಧಾನವಾಯುರನ್ಯೇಷು ನಿತ್ಯಾವಿಷ್ಟೋ ಯತಸ್ತತಃ । ತದ್ಗುಣಾಸ್ತೇಷು ಚೋಚ್ಯಂತೇ..... ।
*– ಬ್ರಹ್ಮವೈವರ್ತೇ (ಭಾಗ.ತಾ.ನಿ. 3-27-39)*

32. ಪಂಚದರ್ಶರ್ಚಮಿದಂ ಮಾರುತಂ ಸೂಕ್ತಮ್ । ತತ್ರಾದ್ಯಾ ಪ್ರಧಾನಮರುದ್ವಿಷಯಾ । ಏವಮೇಕವಚನಾದನ್ಯತ್ರಾಪಿ ಜ್ಞೇಯಮ್ । ಶೇಷಾಃ ಸಾಧಾರಣಾಃ ।
*– [ಋಗ್ಭಾಷ್ಯಟೀಕಾ]*

33. '.....ಕ್ರೀಡಾಶೀಲಂ ಚ ಮಾರುತಮ್ । ಶರ್ಧಃ ಸುಖಬಲಾಢ್ಯಂ ಚಾಪ್ಯನರ್ವಾಣ ಮಸಿಂದ್ರಿಯಮ್ । ನ ವಾಯೋರಿಂದ್ರಿಯಾಣಾಂ ಹಿ ದೇವಾಃ ಸಂತ್ಯಭಿಮಾನಿನಃ । ಅತೋಽನಿಂದ್ರಿಯತಾ ತಸ್ಯ ರಥೇ ದೇಹೇ ಶುಭಶ್ಚ ಸಃ । ಕಣ್ವಾಸ್ತಂ ಗಾಯತಾಭೀಕ್ಷ್ಣಂ.. ।
*– [ಋ.ಭಾ. 37-82, 83]*

......ತಥಾ ವಾಯೋರ್ಹರೇರ್ವಿದಃ –ಎಂಬ ಪ್ರಮಾಣ ಸಾರುತ್ತಿರುವಂತೆ ಶ್ರೀಹರಿಯನ್ನು ತಿಳಿದು, ಸ್ತುತಿಸುವುದರಿಂದ ವಾಯುದೇವನಿಗೆ ತುಂಬ ಸಂತೋಷವಾಗುವುದು.34

೩. **ಪ್ರಶಂಸಾ ಗೋಷ್ವಘ್ನ್ಯಂ ಕ್ರೀಳಂ ಯಚ್ಛರ್ಧೋ ಮಾರುತಮ್ ।**
**ಜಂಭೇ ರಸಸ್ಯ ವಾವೃಧೇ ॥** ಋ.ವೇ. 37-5

ಕಣ್ವರು ತಮ್ಮನ್ನು ಕುರಿತೇ ಹೀಗೆ ಹೇಳಿಕೊಳ್ಳುವರು. ಹೇ ಕಣ್ವ! ಯಾರು ಸೋಮಯಾಗದ ಸೋಮರಸದ ಪಾನಕ್ಕಾಗಿ ಯಜ್ಞದಲ್ಲಿ ಪ್ರಕಟವಾಗುವನೋ, ಯಾರು ಸುಖಬಲಾಢ್ಯನಾಗಿರುವನೋ, ಯಾರು ಹೊಡೆಯಲು-ಹಿಂಸಿಸಲು ಯೋಗ್ಯನಲ್ಲವೋ, ಪಸುಗಳ ನಡುವೆ ಎತ್ತು ಹೇಗೋ ಹಾಗೆ ವೇದಾಭಿಮಾನಿನಿಯರ ಮಧ್ಯೇ–ವೇದವಚನಗಳ ಮಧ್ಯೆ ಕ್ರೀಡಿಸುವ ವೃಷಭರೂಪದ, ಮಾರುತಗಳ ತಂದೆಯಾದ ಮುಖ್ಯಪ್ರಾಣನನ್ನು ಚೆನ್ನಾಗಿ ಸ್ತುತಿಸು.35

೪. **ಕೋ ವೋ ವರ್ಷಿಷ್ಠ ಆ ನರೋ....** [ಋ.ವೇ. 37-6]

ನಾಶರಹಿತರಾದ ಮರುದ್ದೇವತೆಗಳೇ, ನಿಮ್ಮ ಮಧ್ಯದಲ್ಲಿ ಪ್ರಧಾನವಾಯುದೇವನೇ ಚೆನ್ನಾಗಿ, ಅಂದರೆ ಕಾಲತಃ ದೇಶತಃ ಹಾಗೂ ಗುಣತಃ ಉತ್ತಮನಾಗಿರುವವನು.36

[ಅಂತಹವನನ್ನು ಒಡೆಯನನ್ನಾಗಿ ಹೊಂದಿರುವುದರಿಂದಲೇ ಸ್ವರ್ಗಭೂಮಿಗಳನ್ನು ಕಂಪಿಸುವಷ್ಟು ಸಾಮರ್ಥ್ಯ ಮರುದ್ದೇವತೆಗಳಲ್ಲಿ ಸಿದ್ಧಿಸಿದೆ ಎಂಬ ಅಭಿಪ್ರಾಯ]

೫. **ಅಚ್ಛಾ ವದಾ ತಾನಾ ಗಿರಾ ಜರಾಯೈ ಬ್ರಹ್ಮಣಸ್ಪತಿಮ್ ।**
**ಅಗ್ನಿಂ ಮಿತ್ರಂ ನ ದರ್ಶತಮ್ ॥** 38-13

---

34. .....ಶೋಧಕಾಯ ಪ್ರಧಾನಾಯ ವೋ ಬಲಾಯ ಚ ವಾಯವೇ ।
ಶುದ್ಧಾಯ ವಾ ಸುಪ್ರಕಾಶಜ್ಞಾನಾಯಾತಿಬಲಾಯ ಚ ।
ಗಾಯತ ಬ್ರಹ್ಮ ದೇವತ್ತಂ ದೇವೇಷು ತತಮೀಶ್ವರಮ್ ॥
ಪ್ರೀತಿರ್ವಾಯೋರ್ವಿಷ್ಣುಗಾನಾದ್..... *– [ಋ.ಭಾ. 37-87, 88]*

35. ಅಹಂತವ್ಯತ್ವತಸ್ತ್ವಘ್ನ್ಯಂ ವಾಯುಂ ವೃಷಭರೂಪಿಣಮ್ ।
ಕ್ರೀಡಂತಂ ವೇದರೂಪಾಸು ಗೋಷು ತಂ ಸ್ತುಹಿ ಮಾರುತಮ್ ।
ಮಾಭಿರ್ವೇದೈಃ ಸ್ತುತತ್ವೇನ ಮಾರುತೋ ವಿಷ್ಣುರೇವ ವಾ ।
ಭಕ್ಷಣಾರ್ಥಂ ರಸಸ್ಯಾಸೋ ವವೃಧೇ ಮರುತಾಂ ಪಿತಾ ॥
*– [ಋ.ಭಾ. 37-89, 90]*

36. ಆ ಸಮಂತಾದುತ್ತಮಃ ಕಃ ಪ್ರಧಾನೋ ವಾಯುರೇವ ವಃ । *– [ಋ.ಭಾ. 37-91]*

* ಏವಂ ಭೂತಸ್ವಾಮಿಸಂಪತ್ತ್ಯಾ ಯೂಯಮಪಿ ಮಹಾಂತ ಇತಿ ಭಾವಃ ।
*– [ಋಗ್ಭಾಷ್ಯಟೀಕಾ]*

(ಕಣ್ವರು ತಮ್ಮನ್ನು ಕುರಿತು ಹೇಳಿಕೊಳ್ಳುವರು) ಹೇ ಕಣ್ವ! ನೀನು ಅಗ್ನಿಸೂರ್ಯರಂತೆ ತನ್ನ ಸಾಮರ್ಥ್ಯದಿಂದಲೇ ಪ್ರಕಾಶಿಸುವ ಭಾರತೀಪತಿಯಾದ ವಾಯುದೇವನನ್ನು ಬಹ್ವರ್ಥವಿಷಯಕವಾದ ಸ್ತುತಿರೂಪದ ಮಾತಿನಿಂದ ಯಥಾವತ್ತಾಗಿ ಹೇಳು.37

೬. **ಮಿಮೀಹಿ ಶ್ಲೋಕಮಾಸ್ಯೇ ಪರ್ಜನ್ಯ ಇವ ತತನಃ ।**
**ಗಾಯ ಗಾಯತ್ರಮುಕ್ಥ್ಯಮ್ ॥** [38-14]

[ಕಣ್ವರು ತಮ್ಮನ್ನು ಕುರಿತು ಹೇಳಿಕೊಳ್ಳುವರು–] ಹೇ ಕಣ್ವ! ಬ್ರಹ್ಮಣಸ್ಪತಿ ಎನಿಸಿರುವ ವಾಯುದೇವನ ಕೀರ್ತಿಯನ್ನು ನಿನ್ನ ಬಾಯಿಯಲ್ಲಿ ಯಾವಾಗಲೂ ಇರುವಂತೆ ಮಾಡಿಕೊಳ್ಳು. ಮೋಡವು ಹೇಗೆ ಸಮುದ್ರಾದಿಗಳಿಂದ ನೀರನ್ನು ಸ್ವೀಕರಿಸಿ ಅದನ್ನು ತಾನೇ ಇಟ್ಟುಕೊಳ್ಳದೆ ಮಳೆಯ ಮೂಲಕ ಎಲ್ಲೆಡೆ ಹರಡುವುದೋ ಹಾಗೆ ಬ್ರಹ್ಮಣಸ್ಪತಿಯ ಕೀರ್ತಿಯನ್ನು ನಿನ್ನ ಬಾಯಿಯಲ್ಲಷ್ಟೇ ಇಟ್ಟುಕೊಳ್ಳದೆ ಜಗತ್ತಿನಲ್ಲಿ ಹರಡು. ಶಿಷ್ಯರಿಗೆ ಉಪದೇಶಿಸು. ಉಕ್ಥ ಎನಿಸುವ ಮುಖ್ಯಪ್ರಾಣನಿಗೆ ಸಂಬಂಧಿಸುವ ಸಾಮವನ್ನು ಗಾನ ಮಾಡು.38

೭. **ಅಭಿಸಿಧ್ಮೋ ಅಜಿಗಾದಸ್ಯ ಶತ್ರೂನ್ ವಿತಿಗ್ಮೇನ ವೃಷಭೇಣಾ ಪುರೋಭೇತ್॥** [33-13]

- ಎಲ್ಲೆಡೆ ಯಾವಾಗಲೂ ಸಿದ್ಧಿಯಿಂದ ಕೂಡಿರುವ ಪರಮಾತ್ಮನು ಜೀವಾತ್ಮರ ಶತ್ರು ಸಮೂಹವನ್ನು ತನ್ನ ಜ್ಞಾನವನ್ನು ನೀಡಿ ಗೆಲ್ಲುವನು. ಅಲ್ಲದೆ, ವಿರೋಧಿಗಳನ್ನು ಕುರಿತು ಕ್ರೂರನಾದ ಜೀವಶ್ರೇಷ್ಠನಾದ ಮುಖ್ಯಪ್ರಾಣನಿಂದ ಉಪದೇಶವನ್ನು ಕೊಡಿಸಿ, ಉತ್ತಮ ಜೀವರ ಸಂಸಾರಬಂಧನಕ್ಕೆ ಕಾರಣಗಳಾದ ಲಿಂಗಶರೀರಗಳನ್ನು ಭೇದಿಸುವನು.39

೮. **ತ್ವಮಗ್ನ..... ಆಧ್ರಸ್ಯ ಚಿತ್ ಪ್ರಮತಿರುಚ್ಯಸೇ ಪಿತಾ....** [ಋ. 31-14]

---

37. .....ಯಥಾವದ್ ವ್ಯಾಪ್ತಯಾ ಗಿರಾ । ಜರಾಯೈ ಸಂಸ್ತುತಿತ್ವೇನ ತೃತೀಯಾ ಭಾವರೂಪಿಣೀ ।
....ತತ್ ಸ್ತುತಿರೂಪತಃ । ವದ.... ಸ್ವಪ್ರಕಾಶಮಗ್ನಿವತ್ ಸೂರ್ಯವತ್ ತಥಾ ॥ ಆಹ ಚ್ಯಾತ್ಮಾನಮೇವಾತ್ರ ದಾರ್ಢ್ಯೇ ಸ್ವಪ್ರತಿಯೋಗಿತಾ । ಇತಿ ಸೂತ್ರಾತ್....
*–[ಋ.ಭಾ. 38-113, 114]*

* ಪತಿಸ್ತು ಬ್ರಹ್ಮಣೋ ವಿಷ್ಣುರ್ವಾಗೀರತ್ವಾತ್ ಸಮೀರಣಃ । *–[ಋ.ಭಾ.40-136]*

38. ....ಕೀರ್ತಿಮಸ್ಯ ವಿಷ್ಣೋಃ ಕುರು ಮುಖೇ ಸದಾ । ವಿಸ್ತಾರಯತಿ ಪರ್ಜನ್ಯೋಯದ್ವದ್ ವೃಷ್ಟಿಂ ತಥೈವ ಚ ವಿಸ್ತಣೀಹಿ ತಥೇಶಸ್ಯ ತಥಾ ಕೀರ್ತಿಂ ಜಗತ್ಯಪಿ
*–[ಋ.ಭಾ. 39-115, 116]*

39. ಸ ಸರ್ವತಃ ಸಿದ್ಧಿಯುತಃ ಸದೈವ ಜಿಗಾಯ ಜೀವಾರಿಗಣಾನ್ ಪುರಶ್ಚ । ಸಂಸಾರರೂಪಾ ಅಭಿನತ್ ವೃಷೇಣ ಪ್ರಾಣೇನ ತಿಗ್ಮೇನ ವಿರೋಧಿನಃ ಪ್ರತಿ ।
*–[ಋ.ಭಾ. 33-22]*

ಹೇ ಅಗ್ನಿನಾರಾಯಣ! ಚೆನ್ನಾಗಿ ಲೋಕಗಳನ್ನು ಧರಿಸುತ್ತಿರುವ ಪ್ರಾಣದೇವನಿಗೂ ನೀನು ಪ್ರಜ್ಞಾನವನ್ನು ನೀಡುವವನೆಂಧೂ, ತಂದೆ ಎಂದೂ ಹೇಳಲ್ಪಟ್ಟಿರುವಿ.40

೯. **ತ್ವಮಗ್ನೇ ಮನವೇ ದ್ಯಾಮವಾಶಯಃ ಪುರೂರವಸೇ ಸುಕೃತೇ ಸುಕೃತ್ತರಃ ।**
**ಶ್ವಾತ್ರೇಣ ಯತ್ ಪಿತ್ರೋರ್ಮುಚ್ಯಸೇ...... ।** [31-4]

ಹೇ ಅಗ್ನಿನಾರಾಯಣ, ಅತಿಶಯವಾಗಿ ಒಳ್ಳೆಯ ಕರ್ಮಗಳನ್ನು ನಡೆಸುವ ನೀನು ಉತ್ಕೃಷ್ಟವಾದ ಶಬ್ದವುಳ್ಳ, ಒಳ್ಳೆಯ ಕರ್ಮಗಳನ್ನು ಮಾಡುವ, ವಿಶಿಷ್ಟ ಜ್ಞಾನವುಳ್ಳ ವಾಯುದೇವನಿಗೆ ಸ್ವರ್ಗಾದಿಲೋಕಗಳ ಸ್ವಾಮ್ಯವನ್ನು, ಜ್ಞಾನವನ್ನು, ಭಾರತೀದೇವಿಯನ್ನು ನೀಡಿರುವಿ. ವಾಯುದೇವನನ್ನು ಸಂರಕ್ಷಿಸುವುದರಿಂದಾಗಿ ನೀನು ಪ್ರಕೃತಿಪುರುಷರ ಬಂಧ ದಿಂದ ನಿತ್ಯಮುಕ್ತನಾಗಿರುವಿ.41

೧೦. **ತ್ವಮಗ್ನೇ ಪ್ರಥಮೋ ಮಾತರಿಶ್ವನ ಆವಿರ್ಭವ ಸುಕ್ರತೂಯಾ ವಿವಸ್ವತೇ ।**
**..........ಅಸಘ್ನೋರ್ಭಾರಮಯಜೋ ವಸೋ ॥** [31-3]

ಹೇ ಅಗ್ನಿನಾರಾಯಣ, ನೀನು ವಿವಿಧ ವಸ್ತುಗಳಲ್ಲಿ ವಾಸಿಸುವ ವಾಯುದೇವನಿಂದ ಮುಖ್ಯವಾಗಿ ಆವಿರ್ಭವಿಸಿದಿ. ಯಾಕೆಂದರೆ ಅವನಲ್ಲಿ ಒಳ್ಳೆಯ ಬೋಧವಿದೆ. ಹಾಗೆಯೇ ಎಲ್ಲೆಡೆ ವಾಸಿಸುವವನೇ, ಪ್ರತಿ ಭಟರಿಂದ ಎದುರಿಸಲಾಗದ ವಾಯುವಿಗೆ ವಿಶ್ವದ ಭಾರ ವನ್ನು ನೀಡಿರುವಿ.42

೧೧. **ತ್ವಮಗ್ನೇ..... ತವ ವ್ರತೇ ಕವಯೋ ವಿದ್ಮನಾಪಸೋಽಜಾಯಂತ ಮರುತೋ ಭ್ರಾಜದೃಷ್ಟಯಃ** [ಋ.ವೇ. 31-1]

ಹೇ ಅಗ್ನಿನಾರಾಯಣ! ಹೊಳೆಯುವ ಶಕ್ತ್ಯಾಯುಧ ಮುಂತಾದ ಆಯುಧಗಳುಳ್ಳ, ಹಿಂದೆ ಇದ್ದ, ಈಗ ಇರುವ ವಾಯುದೇವತೆಗಳು ನಿನ್ನ ಕುರಿತಾದ ಶ್ರವಣಾದಿ ವ್ರತವುಳ್ಳವ

---

40. ಆ ಸಮಂತಾದ್ ಧಾರಕಸ್ಯಾಪಿ ವಾಯೋಃ ಪ್ರಜ್ಞಾನದಃ ಪ್ರೋಚ್ಯಸ್ಯೇ ತ್ವಂ ಪಿತಾ ಚ । *–[ಋ.ಭಾ. 31-204]*

41. ವಿಶಿಷ್ಟಬೋಧಾನ್ಮನವೇ ವಾಯವೇ ತ್ವಂ ಪ್ರದಾ ದಿವಂ ಜ್ಞಾನರೂಪಾಂ ಪ್ರಿಯಾಂ ಚ ।
ಯಥಾ ತದೀಯೇತಿ ತು ವಾಶನಂ ಸ್ಯಾಲ್ಲೋಕಸ್ಯ ಸರ್ವಸ್ಯ ತಥೈವ ದೇವ ।
ಪುರೂರವಾ ವಾಯುರೇವೋರುಶಬ್ದಾದನ್ಯಸ್ಮೈ ವಾ ಸುಕೃತೇ ಸುಕೃತ್ತರಃ ।
ಶ್ವಾ ವೈ ವಾಯುಃ ಶ್ವಸನಾತ್ ತ್ರಾಣತೋಽಸ್ಯ ನಿತ್ಯಂ ಮುಕ್ತಃ ಪ್ರಕೃತೇಃ ಪೂರುಷಾಚ್ಚ... *–[ಋ.ಭಾ. 31-188, 189]*

42. ತ್ವಂ ವಿಷ್ಣೋ ಪ್ರಥಮೋ ಮಾತರಿಶ್ವನ ಆವಿರ್ಬಭೂವಾಸ್ಯ ಸುಬೋಧವತ್ತಾತ್ ।
ವಾಯುರ್ವಿವಸ್ವಾನ್ ವಿವಿಧೇಷು ವಾಸಾತ್.... ಸಹಂತೇಽಮುಂ ನೈವ ಕೇಚಿದ್ದ್ವಿಷಘ್ನ ರ್ವಾಯುಃ... ತಸ್ಮೈ । ವಿಶ್ವಾಖ್ಯಭಾರಂ ಪ್ರತಿದಿಷ್ಟವಾಂಸ್ತ್ವಂ ವಾಸಾಚ್ಚ ಸರ್ವತ್ರ ವಸುರ್ಭವಾ ನಪಿ । *–[ಋ.ಭಾ. 31-186, 187]*

ರಾದುದರಿಂದ ವಿದ್ಯೆಯಿಂದ ಕೂಡಿದ ನಿವೃತ್ತ ಕರ್ಮಾನುಷ್ಠಾನವುಳ್ಳವರಾಗಿ ಅಪರೋಕ್ಷ ಜ್ಞಾನಿಗಳಾದರು.43

೧೨. **ಪತಾತಿ ಕುಂಡೃಣಾಚ್ಯಾ ದೂರಂ ವಾತೋ ವನಾದಧಿ ।** [ಋ.ವೇ. 29-6]

ವಾಯುದೇವನು ಭಗವನ್ನಿಂದಕರನ್ನು ಎಂದೆಂದಿಗೂ ಬಿಡುಗಡೆಯಿಲ್ಲದ, ಕುಂಭೀ ಪಾಕಕ್ಕಿಂತಲೂ ಕೆಳಗಿರುವ ಅಧಿಕ ಉಲ್ಬಣವೇದನೆಗಳನ್ನೊಳಗೊಂಡ ಪ್ರಯುಕ್ತ ಅತಿ ನೀಚ ವಾದ ಮಹಾತಮಸ್ಸಿನಲ್ಲಿ ದೂರದಿಂದ ಬೀಳಿಸಲಿ.44

೧೩. **ಉತಸ್ಮತೇ ವನಸ್ಪತೇ ವಾತೋ ವಿವಾತ್ಯಗ್ರಮಿತ್ ।**
**ಅಥೋ ಇಂದ್ರಾಯ ಪಾತವೇ ಸುನು ಸೋಮಮುಲೂಖಲ ।।**
[ಋ.ವೇ. 28-6]

ಹೇ ದೇವತೆಗಳಿಗೂ ಒಡೆಯನಾದ ವಿಷ್ಣೋ, ಮುಖ್ಯಪ್ರಾಣನೂ ಕೂಡಾ ನಿನ್ನ ಎದುರಿನಲ್ಲೇ ಸಂಚರಿಸುತ್ತ ನಿನ್ನ ಸೇವಕನೆನಿಸಿರುವನು. ಹೀಗೆ ಮುಖ್ಯಪ್ರಾಣನಿಗೂ ಸ್ವಾಮಿ ಎನಿಸಿ ಅತಿಸಮರ್ಥನಾಗಿರುವುದರಿಂದ ಮನಸ್ಸೆಂಬ ಸೋಮವನ್ನು ಸ್ವೀಕರಿಸು; ಅದರ ವಿಚಾರಕ್ಕೆ ವಿಷಯನಾಗಿ ತೃಪ್ತನಾಗು.45

೧೪. **ಹಸ್ಕಾರಾದ್ವಿದ್ಯುತಸ್ಪರ್ಯತೋ ಜಾತಾ ಅವಂತು ನಃ ।**
**ಮರುತೋ ಮೃಳಯಂತು ನಃ ।।** [ಋ.ವೇ. 23-12]

ದೋಷಗಳನ್ನು ತ್ಯಜಿಸಿ, ಗುಣಗಳನ್ನು ಸ್ವೀಕರಿಸಿರುವುದರಿಂದ ವಾಯುದೇವ ಹಸ್ಕಾರ ಎನಿಸುವನು. ವಿಶಿಷ್ಟ ಜ್ಞಾನಸಂಪನ್ನಳಾಗಿರುವುದರಿಂದ ಭಾರತೀದೇವಿ ವಿದ್ಯುತ್ ಎನಿಸು ವಳು. ಎಲ್ಲ ದೇವತೆಗಳು, ಮರುದ್ದೇವತೆಗಳು ಅವರಿಬ್ಬರಿಂದ ಹುಟ್ಟಿಸುವರು. ಅವರಲ್ಲಿ

43. .....ತವ ವ್ರತೇನೈವ ಸವಿದ್ಯಕರ್ಮಿಣೋ ಮಹಾವಿಜ್ಞಾನಾ ಮರುತೋ ಬಭೂವಿರೇ ।
*– [ಋ.ಭಾ. 31-1]*

* ಮರುತೋಽತೀತವರ್ತಮಾನಾ ವಾಯವಃ *– [ಋ.ಭಾ.ಟೀ.]*

44. ದೂರಂ ಚ ಪಾತಯತ್ವೇನಾನ್ ವಾಯುಸ್ತಸ್ಮಿಂಸ್ತಮಸ್ಯಧಃ ।
ವನಂ ದೃಢಗ್ರಹೇಣೈವ ತತ್ ತಮೋ ವೇದನೋಲ್ಬಣಾ ।
ಕುಂಡೃಣಾಚೀತಿ ಸಂಪ್ರೋಕ್ತಾ ಕುಂಡಾನೀಚತ್ವತೋಽಧಿಕಮ್ ।
ಕುಂಭಃ ಕುಂಡಾಭಿಧಃ ಕುಂಭೀಪಾಕಾನ್ನೀಚಾ ಹಿ ತದ್ಗತಿಃ ।
ರೇಫಃ ಸ್ವರವ್ಯತಯಶ್ಚ ತದಾಧಿಕ್ಯಾರ್ಥಮೀರಿತಃ । *– [ಋ.ಭಾ. 29-156, 157]*

45. ...ಭಜನೀಯ ದಿವೌಕಸಾಮ್ । ಪತಿರ್ವಿಷ್ಣುಸ್ತು ತಸ್ಯಾಗ್ರೇ ವಾಯುರ್ದೇವೋ ಹಿ ಗಚ್ಛತಿ ।
ಪಾತವೇ ಸ್ವಸ್ಯ ಸೋಮಂ ವಾ ಮನೋ ವಾ ಸುನು ವಿಷ್ಣವೇ ।
*– [ಋ.ಭಾ. 28-145]*

ಅಂತರ್ಯಾಮಿಯಾಗಿರುವ ಭಗವಂತನೂ ಅವರ ಮೂಲಕ ವ್ಯಕ್ತನಾಗಿ ಅವರ ಪುತ್ರ ಎನಿಸಿರುವನು. ಅಂತಹವರು ನಮ್ಮನ್ನು ರಕ್ಷಿಸಲಿ.46

೧೫. **ತದಿತ್ ಸಮಾನಮಾಶಾತೇ ವೇನಂತಾ ನ ಪ್ರಯುಚ್ಛತಃ ।**
**ಧೃತವ್ರತಾಯ ದಾಶುಷೇ.....** [ಋ.ವೇ. 25-6]

ವರುಣ ಎನಿಸುವ ಭಗವಂತನ ಅನುಗ್ರಹದಿಂದಲೇ ವಿಶೇಷವಾಗಿ ತಿಳಿದಿರುವ ಚತುರ್ಮುಖವಾಯುದೇವ –ಇವರು ಸಮಾನವಾಗಿರುವರು. ಇಂತಹ ಚತುರ್ಮುಖ ವಾಯುಗಳು ವ್ರತಧಾರಿಯಾಗಿದ್ದು ಯಥಾರ್ಥಜ್ಞಾನಪೂರ್ವಕವಾಗಿ ನಾವು ನಡೆಸುವ ಕರ್ಮಗಳ ಪ್ರಯೋಗ ಪ್ರಮಾದಕ್ಕೊಳಗಾಗದಂತೆ ಮಾಡುವರು.47

೧೬. **......ಇಂದ್ರಸ್ಯ ಯುಜ್ಯಃ ಸಖಾ......** [ಋ.ವೇ. 22-19]

ಇಂದ್ರ ಎನಿಸುವ ಮುಖ್ಯಪ್ರಾಣನ ಯಾವಾಗಲೂ ಜೊತೆಗೇ ಇರುವ ಗೆಳೆಯ ಶ್ರೀವಿಷ್ಣು.48

೧೭. **ಆ ಪೂಷನ್ ಚಿತ್ರಬರ್ಹಿಷಮಾಘೃಣೇ ಧರುಣಂ ದಿವಃ ।**
**ಆಜಾನಷ್ಟಂ ಯಥಾ ಪಶುಮ್ ॥** [ಋ.ವೇ. 23-13]

ಎಲ್ಲೆಡೆ ರಶ್ಮಿವುಳ್ಳ, ಪೂರ್ಣನಾದ ಶ್ರೀಹರೇ, ಚತುರ್ಮುಖನನ್ನು ನಮಗೆ ಗುರುವನ್ನಾಗಿ ತಲುಪಿಸು. ಭಾರತೀಪತಿಯಾದ ವಾಯುದೇವನನ್ನು ಗುರುವನ್ನಾಗಿ ಹೊಂದಿಸು. ಕಳೆದುಹೋದ ಹಸು ಮುಂತಾದ ಪಶುವನ್ನು ಹೇಗೆ ಮನೆಗೆ ತಲುಪಿಸುವರೋ ಅಂತೆ.49

---

46. .....ದೋಷತ್ಯಾಗಾತ್ ಗುಣಪ್ರಾಪ್ತೇರ್ಹಸ್ಕಾರೋ ವಾಯುರುಚ್ಯತೇ ।
ವಿದ್ಯುತ್ ವಿಶಿಷ್ಟಜ್ಞಾನತ್ವಾದ್ ಭಾರತೀ ತತ್ಸುತಾ ಹಿ ಯೇ ।
ಸರ್ವೇ ದೇವಾಶ್ಚ ಮರುತೋ ರಕ್ಷಂತ್ವೇತಾದೃಶೋ ಹರಿಃ ।
ತತ್ತದಂತರ್ಗತತ್ವೇನ.... *–[ಋ.ಭಾ. 23-12]*

47. .....ತತ್ಪ್ರಸಾದಾದ್ ಬ್ರಹ್ಮವಾಯೂ ಸಮಮೇವಾವಗಚ್ಛತಃ ।
ವೇನಂತೌ ಹಿ ವಿಜಾನಂತೌ ತೌ ಹಿ ಜ್ಞಾನಿವರೌ ಮತೌ ॥
ಯಥಾಜ್ಞಾನಂ ಪ್ರಯೋಗಂ ಚ ದಾಶುಷೇ ಕುರುತೋ ನ ತೌ
*–[ಋ.ಭಾ. 25-100, 101]*

48. ....ಇಂದ್ರಸ್ಯ ಸಹಿತಃ ಸಖಾ । ಪ್ರಾಣಸ್ಯೈವೇಂದ್ರನಾಮ್ನಶ್ಚ ಕಸ್ಮಿನ್ ನ್ವಹಮಿತಿ ಶ್ರುತೇಃ ।
ತ್ವಯೇದಿಂದ್ರೇತಿ ವಚನಾತ್ ಪ್ರಾಣ ಇಂದ್ರಾಭಿಧೋ ಮತಃ *–[ಋ.ಭಾ. 22-38]*

49. ಪೂಷಾ ಪೂರ್ಣತ್ವತಶ್ಚ ಸಃ । ಆಘೃಣೇಃ ಪೂರ್ಣರಶ್ಮಿತ್ವಾದಾಜ ನಶ್ಚಿತ್ರಬರ್ಹಿಷಮ್ । ಬ್ರಹ್ಮಾಣಂ ಚ ದಿವೋ ದೇವ್ಯಾ ಭರ್ತಾರಂ ವಾಯುಮಾಜ ಗಾಮ್ । ಯಥಾ ಗತಮ್.... *–[ಋ.ಭಾ. 23-50]*

೧೮. **ಅಭಿತೋ ದೇವೀರವಸಾ ಮಹಃ ಶರ್ಮಣಾ ನೃಪತ್ನೀಃ ।**
**ಅಚ್ಛಿನ್ನಪತ್ರಾಃ ಸಚಂತಾಮ್ ॥** [ಋ.ವೇ. 22-11]

ಒಲೆ ಭಾಗ್ಯದಿಂದ ಕೂಡಿದ ದೇವಿಯರನ್ನು ರಕ್ಷಣೆ ಮಾಡುವ ಮುಖ್ಯಪ್ರಾಣನಿಂದ ಕೂಡಿಕೊಂಡು ಸರ್ವೋತ್ತಮನಾದ ಶ್ರೀವಿಷ್ಣು ಮೋಕ್ಷಾದಿ ರೂಪವಾದ ಸುಖವನ್ನು ನೀಡಿ ನಮ್ಮನ್ನು ಎಲ್ಲ ವಿಧದಿಂದ ರಕ್ಷಿಸಲಿ.50

೧೯. **ಇಂದ್ರೋ..... ವಿಗೋಭಿರದ್ರಿಮೈರಯತ್** [ಋ.ವೇ. 7-3]

ಇಂದ್ರನಾಮಕ ಭಗವಂತನು ಸೂರ್ಯನನ್ನು ಗಗನಕ್ಕೆ ಏರಿಸಿದಂತೆ, ಆದರಯೋಗ್ಯನಾಗಿದ್ದು ಅದ್ರಿ ಎನಿಸುವ ವಾಯುದೇವನನ್ನು ಜ್ಞಾನಗಳಿಂದ ಚೆನ್ನಾಗಿ ಪ್ರೇರಿಸಿರುವನು.51

೨೦. **ನದಂ ವ ಓದತೀನಾಂ ನದಂ ಯೋ ಯುವತೀನಾಮ್ ।**
**ಪತಿಂ ವೋ ಅಘ್ನ್ಯಾನಾಂ ಧೇನೂನಾಮಿಷುಧ್ಯಸಿ ॥** [ಋ.ವೇ. 8-69-2]

ಪರಮೇಶ್ವರನಾದ ಪರಮಾತ್ಮನೇ, ಒದ್ದೆಮಾಡುವ ಸ್ವಭಾವದ, ಆಕಾಶದಲ್ಲಿ ಹಾರಾಡುವ ರೇತೋರೂಪದಿಂದ ಅಜರಗಳಾಗಿರುವ, ಜಗತ್ಪೋಷಕಗಳಾದ ನೀರಿಗೆ ಒಡೆಯನಾದ ನಿನ್ನ ಭೃತ್ಯನಾದ, ಅವ್ಯಕ್ತ ಶಬ್ದವನ್ನು ಮಾಡುವ ಮುಖ್ಯಪ್ರಾಣನಿಗೆ ಒಡೆಯನಾಗಿರುವಿ.

- ಹಾಗೆಯೇ, ಹಾಲನ್ನು ಸುರಿಸುವ, ಬೇರೆ ಬೇರೆ ದೇಶಕ್ಕೆ ಸಂಚರಿಸುತ್ತಿರುವ, ಕೊಲ್ಲಲು ಅಯೋಗ್ಯಗಳಾದ ಹಸುಗಳಿಗೆ ಒಡೆಯನಾದ ನಿನ್ನ ಸೇವಕನಾದ, ಅವ್ಯಕ್ತಶಬ್ದ ಮಾಡುವ ಮುಖ್ಯಪ್ರಾಣನಿಗೆ ಒಡೆಯನಾಗಿರುವಿ.
- ಅಂತೆಯೇ ಭಕ್ತಿಯನ್ನು ಸುರಿಸುವ, ಚೆನ್ನಾಗಿ ಆತ್ಮತತ್ತ್ವವನ್ನು ಪ್ರತಿಪಾದಿಸುವ ನಿತ್ಯಗಳಾದ ಧರ್ಮಾರ್ಥಕಾಮ ಯೋಗ್ಯಗಳಿಗೆ ಪೋಷಕಗಳಾದ ಮಾತುಗಳಿಗೆ ಒಡೆಯನಾದ ನಿಮ್ಮ ಸೇವಕನಾದ, ಶಬ್ದಮಾಡುವ ಮುಖ್ಯಪ್ರಾಣನಿಗೆ ಒಡೆಯನಾಗಿರುವಿ.52

---

50. ಶರ್ಮ ದತ್ತ್ವೈವ ಮಹತೋ ವಿಷ್ಣೋ ರಕ್ಷಂತು ನೋಽಭಿತಃ ।
ಪ್ರಾಣೇನೈವಾವಸಾ ಸಾಕಂ ಯಸ್ಮಾದವಿಧವಾಃ ಸದಾ । ಅತೋ ಹ್ಯಚ್ಛಿನ್ನಪತ್ರಾಸ್ತಾಃ ಸುದಾಯುಕ್ಕರ್ಣಭೂಷಣಾಃ । *– [ಋ.ಭಾ. 22-26, 27]*

51. ಜ್ಞಾನೈರಾದರಯೋಗ್ಯಂ ಚ ಪ್ರಾಣಾತ್ಮಾನಂ ಸಮೈರಯತ್ । *– [7-209]*

52. ಓದತೀನಾಂ ಉಂದನಕರ್ತ್ರೀಣಾಂ ವಃ ಅಪಾಂ ಭವದೀಯಾನಾಂ ಪತಿಂ ವಃ ಪುರುಷಂ ಪ್ರಾಣಂ ನದನಕರ್ತಾರಂ ಪ್ರತಿ ಇಷುಧ್ಯಸಿ ಪತಿರ್ಭವಸಿ । ಯೋ ಯುವತೀನಾಂ ಗಮನಶೀಲಾನಾಂ ಆಕಾಶೇ ಪ್ರೋಪ್ಲೂಯಮಾನಾನಾಂ ಅಘ್ನ್ಯಾನಾಂ ರೇತೋರೂಪೇಣ ಅಜರಾಣಾಂ ಧೇನೂನಾಂ ಜಗತ್ಪೋಷಕಾಣಾಮ್ ।

* ಪಯಸಾ ಸೇಚಕಾನಾಂ ದೇಶಾದ್ದೇಶಾಂತರ-ಗಮನಶೀಲಾನಾಂ ಅಘ್ನ್ಯಾನಾಂ ಹಂತುಮಯೋಗ್ಯಾನಾಂ ಧೇನೂನಾಂ ಗವಾಂ ಪತಿಂ ವಾಯುಂ ಪ್ರತಿ ಇಷುಧ್ಯಸೀತಿ ವಾ ।

* ಓದತೀನಾಂ ಭಕ್ತ್ಯಾ ಸೇಚಕಾನಾಂ ಯೋಽಯುವತೀನಾಂ ಅತಿಶಯೇನಾತ್ಮತತ್ತ್ವಾವಗಮಕಾನಾಂ ಅಘ್ನ್ಯಾನಾಂ ನಿತ್ಯಾನಾಂ ಧೇನೂನಾಂ ಧರ್ಮಾರ್ಥಕಾಮಮೋಕ್ಷಪೋಷಕಾಣಾಂ ವಾಚಾಂ ಪತಿಂ ಪ್ರತಿ ಪತಿರ್ಭವಸೀತಿ ವಾ ॥ *– ಖಂಡಾರ್ಥನಿರ್ಣಯ*

೨೧. ತಾ ಅಸ್ಯ ಸೂದದೋಹಸಃ ಸೋಮಂ ಶ್ರೀಣಂತಿ ಪ್ರಶ್ನಯಃ ।
ಜನ್ಮನ್ ದೇವಾನಾಂ ವಿಶಸ್ತ್ರಿಷ್ವಾರೋಚನೇ ದಿವಃ ॥ [ಋ.ವೇ. 8-6-9-3]

ಹಿಂದಿನ ಮಂತ್ರದಲ್ಲಿ ಪ್ರಸ್ತುತಗಳಾದ, ಪ್ರಶ್ನಿಸಲು ಯೋಗ್ಯಗಳಾದ, ಪ್ರಶಂಸಾ ರೂಪದ, ಪ್ರಶಂಸನೀಯಗಳಾದ ವೇದ ಮಾತುಗಳು, ಹಸುಗಳು, ನೀರು, ಋತ್ವಿಜರು ಕೂಡಾ ಒಳ್ಳೆಯ ಕರ್ಮವನ್ನು, ನೀರನ್ನು, ಜ್ಞಾನವನ್ನು ಹೊರಹೊಮ್ಮಿಸುವ ಮುಖ್ಯ ಪ್ರಾಣನ ಅಂತರ್ಯಾಮಿ ಪರಮಾತ್ಮನಿಗೆ ಸಂಬಂಧಿಸುವ ಸೋಮರಸವನ್ನು, ಮನಸ್ಸನ್ನು ಸಂಬಂಧಿಸುವವು. ಸೋಮರಸವು ನೀರಿನಿಂದ ಕಲಸಲ್ಪಡುವುದು, ಹಾಲಿನಿಂದ ಕುದಿಸಲ್ಪಡು ವುದು, ಮಂತ್ರಗಳಿಂದ ಸಂಸ್ಕರಿಸಲ್ಪಡುವುದು. ಆದುದರಿಂದ ಸೋಮರಸಕ್ಕೆ ನೀರು, ಗೋವು, ವೇದಮಾತುಗಳ ಸಂಬಂಧವಾದರೆ, ಮನಸ್ಸುರೂಪವಾದ ಸೋಮಕ್ಕೆ ಅರ್ಥ ಗಳಿಂದ ಮಾತುಗಳ ಸಂಬಂಧ.

ಭಾರತೀದೇವಿಯೆ, ಬೆಳಗುತ್ತಿರುವ ಆದಿತ್ಯ ಚಂದ್ರ ವಿದ್ಯುತ್‌ಲೋಕಗಳಲ್ಲಿ ಇರುವ, ದೇವತೆಗಳ ಅಭಿವ್ಯಕ್ತಿಗೆ ಕಾರಣವಾದ, ಯಜ್ಞದಲ್ಲಿ, ಜ್ಞಾನಾದಿಗಳನ್ನು ಹೊರಹೊಮ್ಮಿಸುವ ವಾಯುದೇವನ ಅಂತರ್ಗತನಾದ ಪರಮೇಶ್ವರನಿಗಾಗಿ, ಅವನ ಪಾನಕ್ಕಾಗಿ, ಸ್ವೀಕಾರಕ್ಕಾಗಿ ಇರುವ ಸೋಮರಸ ಮತ್ತು ಮನಸ್ಸು.[53]

೨೨. ಭೂಷನ್ನ ಯೋಽಧಿ ಬಭ್ರೂಷು ನಮ್ನತೇ
ವೃಷೇವ ಪತ್ನೀರಭ್ಯೇತಿ ರೋರುವತ್ ।
ಓಜಾಯಮಾನಸ್ತನ್ವಶ್ಚ ತನ್ವಶ್ಚ ಶುಂಭತೇ
ಭೀಮೋ ನ ಶೃಂಗಾ ದವಿಧಾವ ದುರ್ಗೃಭಿಃ ॥[54] [ಋ.ವೇ. 1-140-6]

---

53. ತಾಃ ಪ್ರಶ್ನಯಃ ಆಪೋ ಗಾವೋ ವಾಚೋ ವಾ.....ಪ್ರಶ್ನಯೋಗ್ಯತ್ವಾತ್ ಪೃಶ್ನಯೋ ವಾಚಃ ।

ಪ್ರಶಂಸನರೂಪತ್ವಾದ್, ಪ್ರಶಂಸನೀಯತ್ವಾದ್ವಾ । ಪ್ರಶಂಸನೀಯತ್ವಮೇವಾಪಾಂ ಗವಾಂ ಚ । ಅಸ್ಯ ಸೂದದೋಹಸಃ ಪ್ರಾಣಸ್ಯ ವಾಯುಸ್ಥಸ್ಯ ಪರಮೇಶ್ವರಸ್ಯ ಸೋಮಂ ಶ್ರೀಣಂತಿ । ಅದ್ಭಿರ್ಹಿ ಸಂಸ್ಪೃಷ್ಟೋ ಭವತಿ ಸೋಮಃ, ಪಯಸಾದಿನಾ ವಾ ಶ್ರಿತೋ ಭವತಿ, ಮಂತ್ರೈರ್ವಾ ಗೃಹ್ಯತೇ । 'ಅಥ ಸೂದದೋಹಾಃ ಪ್ರಾಣೋ ವೈಸೂದದೋಹಾಃ' ಇತಿ ಶ್ರುತೇಶ್ಚ । ಶೋಭನಮುದಂ ಕರ್ಮ, ಜಾನಂ ವಾ ದೋಗ್ಧೀತಿ ಸೂದದೋಹಾಃ । ಉದೇತ್ಯುಚ್ಚೋ ಭವತ್ಯನೇನ ಪುರುಷ ಇತ್ಯುದಂ ಜ್ಞಾನಾದಿ । 'ಮನೋ ತಾವಸೋಮಃ' । ತದ್ ವಾಚಃ ಶ್ರೀಣಂತಿ ಸ್ವಾರ್ಥೈಃ । ದೇವಾನಾಂ ಜನ್ಮನಿ ಯಜ್ಞೇ । ತತ್ರ ಹಿ ತೇಷಾಮಭಿವ್ಯಕ್ತಿಃ ॥ ಪೂರ್ವಂ ಜ್ಞಾನೇ ವಾ । ವಿಶಃ ಪ್ರಜಾಶ್ಚ ಶ್ರೀಣಂತಿ । ಮುಖ್ಯತಸ್ತಾ ಏವ ಶ್ರೀಣಂ ತೀತಿ ಚ ಶಬ್ದವರ್ಜನಮ್ । ದಿವಸ್ತ್ರಿಷ್ವಾರೋಚನೇಷು ಆದಿತ್ಯಚಂದ್ರವಿದ್ಯುತ್ ಪರ್ಯಂತಂ ಸ್ಥಿತಾನಾಂ ದೇವಾನಾಂ ಜನ್ಮನಿ ।

– *ಖಂಡಾರ್ಥನಿರ್ಣಯ.*

54. ಭೂಷನ್ನಯೋಽಧಿ ಬಭ್ರೂಷು ನಮ್ನತೇ ಬಳಿತ್ಥಾ ತದ್ವಪುಷೇ ಧಾಯಿ ದರ್ಶತಮ್ ।
ತಾಂ ಸುತೇ ಕೀರ್ತಿಂ ಮಘವನ್ ಮಹಿತ್ವೇತ್ಯಾದಿಸೂಕ್ತಾನಿ ಚ ತತ್ಪ್ರಮಾಣಮ್ ।

ಯಾವ ಭೀಮನು ಬೇರೆ ಬೇರೆ ಬಣ್ಣದ ಶತ್ರುಸೈನ್ಯಗಳಲ್ಲಿ ತಾನೇ ಅವರನ್ನು ಬಗ್ಗಿಸುವನೇ ಹೊರತು ತಾನು ಬಗ್ಗುವುದಿಲ್ಲ. ಗಟ್ಟಿಯಾಗಿ ಧ್ವನಿ ಮಾಡುತ್ತ ಘೂಳಿಯಂತೆ ದ್ರೌಪದ್ಯಾದಿ ಪತ್ನಿಯರಲ್ಲಿಗೆ ಹೋಗುವನು. ಯಾವ ಭೀಮನು ಓಂಕಾರವಾಚ್ಯ ಪರಮಾತ್ಮನ ಆಜ್ಞೆಯಿಂದ ಅವತರಿಸಿರುವನು. ಶರೀರಗಳನ್ನು ಅಲಂಕರಿಸುವನು. ಶತ್ರುಗಳಿಂದ ಹಿಡಿಯಲಶಕ್ಯನಾದ ಅವನು ಬೆಟ್ಟದ ಶೃಂಗಗಳಂತಿರುವ ಎರಡು ಆನೆಗಳನ್ನು ಅಂತರಿಕ್ಷದ ಮೇಲೆ ಬಹಳ ದೂರದವರೆಗೆ ಓಡಿಸಿರುವನು.55

- ಯಾವ ಮಧ್ವರು ವ್ಯಾಖ್ಯಾನಿಸುವ ಮೂಲಕ ಅಲಂಕರಿಸುವಂತಿರುವ, ಭಗವದ್ಗುಣಗಳನ್ನು ಧರಿಸಿರುವ, ಕೇವಲ ವಿಷ್ಣುಪರಗಳಾದ ವಿದ್ಯೆಗಳಲ್ಲಿ ಅಧಿಕವಾಗಿ ಬಾಗಿರುವರೋ, ಅಮುಖ್ಯವೃತ್ತಿಯಿಂದ ಬೇರೆ ಅರ್ಥಗಳೆಡೆಗೂ ಬೀಳುವ ಸ್ವಭಾವದ ವಿದ್ಯೆಗಳೆಡೆಗೆ ಗೂಳಿಯಂತೆ ಶಬ್ದಮಾಡುತ್ತ ಎದುರಿಸುವರೋ, ಅಲ್ಪಗಳಾದ ಅಂಗವಿದ್ಯೆಗಳನ್ನು ಯಥಾವತ್ತಾಗಿ ಆವಿಷ್ಕರಿಸಿ ಬೆಳಗಿಸಿರುವರೋ ಅಂತಹ ದುರ್ವಾದಿಗಳಿಗೆ ಭಯಂಕರರೆನಿಸಿರುವ ಮಧ್ವರು ಶುಷ್ಕತರ್ಕಗಳಿಂದ ಸೆರೆಹಿಡಿಯಲಶಕ್ಯರಾಗಿ ಭೀಮಸೇನ ಶತಶೃಂಗಪರ್ವತದ ಶಿಖರಗಳನ್ನು ಹೇಗೋ ಹಾಗೆ ದುರ್ವಾದಿಗಳ ಕುಭಾಷ್ಯ ಶಿಖರಗಳನ್ನು ಅಲ್ಲಾಡಿಸಿರುವರು.56

---

-ಎಂಬುದಾಗಿ ಮಹಾಭಾರತತಾತ್ಪರ್ಯನಿರ್ಣಯದಲ್ಲಿ [32-132] ವಾಯುದೇವನ ಹನೂಮದಾದಿ ಅವತಾರಗಳ ಬಗ್ಗೆ ಪ್ರಮಾಣಗಳೆಂದು ಶ್ರೀ ಮಧ್ವರಿಂದ ಉಲ್ಲೇಖಗೊಂಡ ಮೂರು ಋಗ್ವೇದ ಮಂತ್ರಗಳಲ್ಲಿ ಒಂದು ಈ ಮಂತ್ರ. ಇದಕ್ಕೆ ಶ್ರೀ ಮಧ್ವರು ಅರ್ಥ ಬರೆಯದಿದ್ದರೂ ಶ್ರೀ ವಾದಿರಾಜಸ್ವಾಮಿಗಳು ತಮ್ಮ 'ಭಾವಪ್ರಕಾಶಿಕಾ'ದಲ್ಲಿ ಇದನ್ನು ವ್ಯಾಖ್ಯಾನಿಸಿದ್ದು ಅದಕ್ಕನುಗುಣವಾಗಿ ಇಲ್ಲಿ ಅರ್ಥೈಸಲಾಗಿದೆ.

55. ಯಃ ಭೀಮಃ ಅಧಿ -ಅಧಿಕಂ ಬಭ್ರುಷು- ನಾನಾವರ್ಣೇಷು ಚತುರಂಗಸೈನ್ಯೇಷು ನ ನಮ್ನತೇ -ನ ಪ್ರಹ್ವೀ ಭವತಿ । ಸ್ವಯಮೇವ ತಾನ್ ಸರ್ವಾನ್ ಪ್ರಹ್ವೀಕರೋತಿ । ನ ತು ಸ್ವಯಂ ಕಸ್ಯಾಪಿ ಪ್ರಹ್ವೀಭವತೀತ್ಯರ್ಥಃ । ....ರೋರುವತ್ -ಅತಿಶಯೇನ ಧ್ವನಿಂ ಕುರ್ವನ್ ವೃಷೇವ ವೃಷಭ ಇವ ಪತ್ನೀಃ -ಕಾಲೀದ್ರೌಪದ್ಯಾದಿಪತ್ನೀಃ ಅಭ್ಯೇತಿ । ....ಯೋ ಭೀಮಃ ಓಜಾಯಮಾನಃ -ಓಂಕಾರವಾಚ್ಯಪರಮಾತ್ಮಾಜ್ಞಯಾ ಜಾಯಮಾನಃ । ತನ್ವಃ ತನೂಃ ಶುಂಭತೇ -ಶೋಭಯತಿ । ದುರ್ಗೃಭಿಃ -ಪರೈಃ ಗೃಹೀತುಮಶಕ್ಯಃ ಸಭೀಮಃ ಗಿರಿಶೃಂಗೌ ನ -ಇವ ಗಿರಿಶೃಂಗೋಪಮೌ ದ್ವೌಗಜಾವಿತ್ಯರ್ಥಃ । ದೃಷ್ಟಾಂತೇನ ದಾರ್ಷ್ಟಾಂತಿಕೋऽಪಿ ಸೂಚ್ಯತೇ ....ದವಿಧಾವ -ದ್ವಾಭ್ಯಾಂ ಕರಾಭ್ಯಂ ಬಹುದೂರಂ ಧಾವಯಾಮಾಸ । ಅಂತರಿಕ್ಷಂ ಪ್ರತ್ಯುದಕ್ಷಿಪದಿತಿ ಭಾವಃ ।

56. ವ್ಯಾಖ್ಯಾನೇನ ಭೂಷಯನ್ನಿವ, ಭಗವದ್ಗಣಾನ್ ಬಿಭ್ರತೀತಿ ಬಭ್ರುಷು ಕೇವಲಂ ವಿಷ್ಣುಪರಾಸು ವಿದ್ಯಾಸು ಅಧಿಕಂ ನತೋ ಭವತಿ । ಅಮುಖ್ಯವೃತ್ತ್ಯಾ ಅನ್ಯತ್ರಾಪಿ ಪತನಶೀಲಾಃ ವಿದ್ಯಾಃ ವೃಷೇವ ರೋರುವದಭ್ಯೇತಿ । ಅಸ್ಯಾಶ್ಚ ತನ್ವಃ..... ಅಲ್ಪಾ ಅಂಗವಿದ್ಯಾ ಯಥಾರ್ಥಾವಿಷ್ಕರಣೇನೋದ್ದೀಪಯತಿ । ಶತಶೃಂಗಶೃಂಗಾಣಿ ಭೀಮಸೇನ ಇವ ಮಧ್ವೋऽಪಿ ದುರ್ವಾದಿಭೀಮಃ ಶುಷ್ಕತರ್ಕೈರ್ದುರ್ಗೃಭಿರ್ದುರ್ಗ್ರಾಹ್ಯಃ ಕುಭಾಷ್ಯಶೃಂಗಾಣಿ ದುರ್ವಾದಿ ಶೃಂಗಾಣಿ ಚಾಯಂ ವಿಧೂನಯಾಮಾಸ ವಿಕಂಪಯಾಮಾಸ ।

*– ಬನ್ನಂಜೆ ಗೋವಿಂದಾಚಾರ್ಯ (ತತ್ತ್ವಚಂದ್ರಿಕಾದಲ್ಲಿ)*

೨೩. ತಾಂ ಸು ತೇ ಕೀರ್ತಿಂ ಮಘವನ್ ಮಹಿತ್ವಾ
ಯತ್ವಾ ಭೀತೇ ರೋದಸೀ ಅಹ್ವಯೇತಾಮ್ ।
ಪ್ರಾವೋ ದೇವಾಂ ಆತಿರೋದಾಸಮೋಜಃ
ಪ್ರಜಾಯೈ ತ್ವಸ್ಯೈ ಯದಶಿಕ್ಷ ಇಂದ್ರ ॥ – *[ಋ.ವೇ. 10-541]*

ಬಹ್ವನ್ನ ಭೋಗಿಸುವ ಶಕ್ತಿವುಳ್ಳ, ಪರಮೈಶ್ವರ್ಯಸಂಪನ್ನ ಭೀಮ, ನೀನು ಚೆನ್ನಾಗಿ ರಕ್ಷಿಸಿರುವಿ ಹಾಗೂ ಖಂಡನಶೀಲವಾದ ಶತ್ರುಸಾಮರ್ಥ್ಯವನ್ನು ಚೆನ್ನಾಗಿ ತಿರಸ್ಕರಿಸಿರುವಿ ಹಾಗೂ ನಿನ್ನ ಪೂಜೆಗಳಿಗೆ ಧರ್ಮದ ಶಿಕ್ಷಣ ನೀಡಿರುವಿ –ಈ ಕುರಿತಾದ ಕೀರ್ತಿಯನ್ನು, ನಿನ್ನ ಗದಾಪ್ರಹಾರವನ್ನು ಕಂಡು ಭೀತಗಳಾದ ಭೂಮಿ ಅಂತರಿಕ್ಷಗಳು ಹೇ ಭೀಮ! ಎಂದು ಕರೆದು ಸ್ತುತಿಸುವವು.57

ಹೇ ಯಶಸ್ವಿಯಾದ ಪ್ರಾಣಗಣನಾಯಕನೇ, ಯಾವಾಗ ದುರ್ಜನರ ದುರ್ವಚನಗಳ ಭಾರದಿಂದ ದ್ಯುಲೋಕದ ದೇವತೆಗಳೂ, ಪೃಥಿವಿಯ ಸಾತ್ವಿಕ ಪೂಜೆಗಳೂ ಭೀತರಾದರೋ, ಆಗ ಅವರು ನಿನ್ನ ಮಹಿಮೆಯಿಂದ ಸಹಿತವಾದ ನಿನ್ನ ಕೀರ್ತಿಯನ್ನು ಕೀರ್ತಿಸಿದರು; ತಮ್ಮ ರಕ್ಷಣೆಗಾಗಿ ನಿನ್ನನ್ನು ಆಹ್ವಾನಿಸಿದರು. ಆಗ ನೀನು ಬಂದು ದೇವತೆಗಳನ್ನು ರಕ್ಷಿಸಿದಿ. ಲೋಕೋಪದ್ರವಕಾರಿಗಳಾದ ಅಸುರರ ಸಮೂಹವನ್ನು ನಾಶಪಡಿಸಿದ್ದಿ. ದೇವಾಸುರಭೇದದಿಂದ ಎರಡು ಬಗೆಯ ಪ್ರಜೆಗಳಲ್ಲಿ ದೈವೀಸ್ವಭಾವದ ಪ್ರಜೆಗಳಿಗೆ ಸಾತ್ವಿಕ ಸಾಮರ್ಥ್ಯದ ಶಿಕ್ಷಣ ನೀಡಿದಿ.58

---

57. ಮಘವನ್ -ಬಹ್ವನ್ನಶಕ್ತಿಮನ್, ಇಂದ್ರ-ಪರಮೈಶ್ವರ್ಯಸಂಪನ್ನ ಭೀಮತ್ವಂ ಪ್ರ -ಪ್ರಕರ್ಷೇಣ ಆವಃ -ಅರಕ್ಷಃ ಇತಿ ಯತ್, ದಾಸಂ- ಖಂಡನಶೀಲಂ ಓಜಃ- ಶತ್ರುಸಾಮರ್ಥ್ಯಂ ಆ -ಸಮ್ಯಕ್ ಅತಿರಃ -ತಿರಸ್ಕೃತವಾನಿತಿಯತ್-ತ್ವಸ್ಯೈ -ತವ ವಿದ್ಯಮಾನಾಯೈ ಪ್ರಜಾಯೈ ಅಶಿಕ್ಷಃ -ಧರ್ಮಮಶಿಕ್ಷ ಇತಿ ಯತ್ ತಾಂ -ತೇ ಸುಕೀರ್ತಿಂ ತ್ವಾ-ತ್ವಾಂ ಪ್ರತಿ ಭೀತೇ ತವ ಗದಾಪ್ರಹಾರಂ ದೃಷ್ಟ್ವಾ ಭೀತೇ ರೋದಸೀ -ದ್ಯಾವಾಪೃಥಿವ್ಯೌ ಅಹ್ವಯೇವಾಂ -ಆಹ್ವಯೇತಾವಮ್ । ಹೇ ಭೀಮೇತ್ಯಾಮಮಂತ್ರ್ಯ ಅಸ್ತುತಾಮಿತಿ ಯಾವದಿತಿ

– *[ಭಾ.ಪ್ರ.]*

58. ಹೇ ಮಘವನ್ ಯಶಸ್ವಿನ್ ಇಂದ್ರ ಪ್ರಾಣಗಣನಾಯಕ, ಯದ್ ಯದಾ ದುರ್ಜನ ದುರ್ವಚನಭರೇಣ ಭೀತೇ ರೋದಸೀ ದ್ಯಾವ್ಯಾಪೃಥಿವ್ಯೌ, ದಿವಿ-ದೇವಾಃ ಪೃಥಿವ್ಯಾಂ ಸಾತ್ವಿಕಪ್ರಜಾಶ್ಚ...... ತೇ ಮಹಿತ್ವಾ ಮಹಿತ್ವೇನ ಮಹಿಮ್ನಾ ಸಹ ತಾಂ ತವ ಕೀರ್ತಿಂ ಸುಕೀರ್ತಯಂತಃ । ತ್ವಾಮವನಾಯ ಅಹ್ವಯೇತಾಮ್ । ತದಾ ದೇವಾನ್ ಪ್ರಾವಃ । ದಾಸಂ ಲೋಕೋಪಕ್ಷಯಕರಂ ಅಸುರನಿಕರಂ ಆತಿರಃ ವ್ಯನೀನಶಃ । ....ಯತ್ ಯಸ್ಮಾಚ್ಚ ನಿಮಿತ್ತಾತ್ ದೇವಾಸುರಭೇದೇನ ದ್ವಿವಿಧೇ ಪ್ರಜಾವರ್ಗೇ ತ್ವಸ್ಯೈ ಏಕಸ್ಯೈ ದೈವ್ಯೈ ಪ್ರಜಾಯೈ ಓಜಃ ಸಾತ್ವಿಕಂ ಸಾಮರ್ಥ್ಯಮಶಿಕ್ಷಃ....'

– *ಬನ್ನಂಜೆ ಗೋವಿಂದಾಚಾರ್ಯ [ತತ್ವಚಂದ್ರಿಕಾದಲ್ಲಿ]*

೨೪. ಪಥ ಏಕಃ ಪೀಪಾಯ ತಸ್ಕರೋ ಯಥಾ ಏಷ ವೇದ ನಿಧೀನಾಮ್.... ॥[59]

[ಋ.ವೇ. 8-29-8]

ಒಬ್ಬನೇ ಮುಖ್ಯಪ್ರಾಣ ಪಾಪಿಗಳನ್ನು ಪಾಪಮಾರ್ಗದಲ್ಲಿ ನಡೆಸಿ ತಮಸ್ಸಿನಲ್ಲಿ ಬೀಳಿಸುವನು. ಪುಣ್ಯಶಾಲಿಗಳನ್ನು ಪುಣ್ಯಮಾರ್ಗದಲ್ಲಿ ನಡೆಸಿ ಮೋಕ್ಷದೆಡೆಗೆ ಸಾಗಿಸುವನು. ಮಧ್ಯಮರನ್ನು ಸಂಸಾರಮಾರ್ಗದಲ್ಲಿ ಅಡ್ಡಾಡಿಸುವನು. ಯಾಕೆಂದರೆ ಶಾಸ್ತ್ರದಲ್ಲಿ ಬಚ್ಚಿಡಲ್ಪಟ್ಟ ಜ್ಞಾನಗಳ ಮಾರ್ಗಗಳನ್ನು ಬಲ್ಲವನಾಗಿರುವನು. ಹೇಗೆ ಕಳ್ಳನು ಭೂಮಿಯಲ್ಲಿ ಹುದುಗಿಟ್ಟ ನಿಧಿಯನ್ನು ತಿಳಿದಿರುವನೋ ಹಾಗೆ ಮುಖ್ಯಪ್ರಾಣನೂ ಜೀವಾತ್ಮರಿಗೆ ನಿಧಿಯಂತಿರುವ ಜ್ಞಾನದ ದಾನದಿಂದ ಭಕ್ತರ ಪಾಪದ, ದುಷ್ಟರ ಪುಣ್ಯದ ಕಳ್ಳತನ ಮಾಡುವುದರಿಂದ 'ಚೋರ' ಎಂದು ಹೋಲಿಸಲಾಗಿದೆ.60

೨೫. ಕುವಿದಂಗ ನಮಸಾ ಯೇ ವೃಧಾಸಃ
ಪುರಾ ದೇವಾ ಅನವದ್ಯಾಸ ಆಸನ್ ।
ತೇ ವಾಯವೇ ಮನವೇ ಬಾಧಿತಾಯಾ
ऽऽವಾಸಯನ್ನುಷಸಂ ಸೂರ್ಯೇಣ ॥61 [ಋ.ವೇ. 7-91-1]

ಸಂಬೋಧನಾರ್ಥದಲ್ಲಿ 'ಅಂಗ' ಎನ್ನಲಾಗಿದೆ. ಯಾವ ದೇವತೆಗಳು ವಾಯುದೇವನ ನಮಸ್ಕಾರಾದಿಗಳಿಂದ ಜ್ಞಾನಾದಿ ಗುಣಪೂರ್ಣರೂ, ಅಜ್ಞಾನಾದಿ ದೋಷದೂರರೂ ಹಿಂದೆ ಆಗಿದ್ದರೋ ಅವರು ಒಂದೆಡೆ ಏಕಾಂತದಲ್ಲಿ ಸೂರ್ಯದಿಂದ ಸಹಿತರಾಗಿ ಜ್ಞಾನಿಯಾದ, ಸಂಸಾರದ ಬಾಧೆಗೊಳಗಾದವರಿಂದ ಶರಣಾಗತನಾಗಿರುವ ವಾಯುವಿಗಾಗಿ

---

59. ಭಾಗವತದ [11-21-28] 'ಉಕ್ಥಶಾಸ' ಶಬ್ದಕ್ಕೆ ಸಂಬಂಧಿಸಿದಂತೆ ಉದಾಹೃತವಾದ ವೇದದ ಮಂತ್ರವನ್ನು ಬನ್ನಂಜೆ ಗೋವಿಂದಾಚಾರ್ಯರು ಟಿಪ್ಪಣಿಯಲ್ಲಿ ವ್ಯಾಖ್ಯಾನಿಸಿರುವರು.

60. ಏಕಃ ಮುಖ್ಯಪ್ರಾಣಃ ಪಾಪಸ್ಯ ಪುಣ್ಯಸ್ಯ ಚ ಪಥೋಮಾರ್ಗಾನ್ ಪೀಪಾಯ ।
ಪಾಪಕೃತಃ ಪಾಪೇ ಮಾರ್ಗೇ ನಯತಿ ತಮಶ್ಚ ಪ್ರಾಪಯತಿ ।
ಪುಣ್ಯಕೃತಃ ಪುಣ್ಯಮಾರ್ಗೇ ನಯತಿ, ಮೋಕ್ಷಂ ಚ ಪ್ರಾಪಯತಿ, ಮಧ್ಯಮಾನ್ ಸಂಸಾರಮಾರ್ಗೇ ಪರಿವರ್ತಯತೀತ್ಯೇತತ್ ಕುತಃ? ಯತ ಏಷ ನಿಧೀನಾಂ ಶಾಸ್ತ್ರೇಷು ಪಿಹಿತಾನಾಂ ಜ್ಞಾನಾನಾಂ ಪಥೋ ವೇದ ಜಾನಾತಿ । ತದ್ ಯಥಾ ತಸ್ಕರಃ ಭೂಮೌ ನಿಹಿತಾನಾಂ ನಿಧೀನಾಂ ವೇದ । ಅಯಮಪಿ ಪ್ರಾಣನಿಧಿರೂಪಸ್ಯ ಜ್ಞಾನಸ್ಯ ದಾನೇನ ಭಕ್ತಾನಾಂ ಪಾಪಸ್ಯ ದುಷ್ಟಾನಾಂ ಪುಣ್ಯಸ್ಯ ಚ ಚೋರಯತೃತ್ವಾತ್ ತಸ್ಕರ ಇವೇತ್ಯುಪಮೀಯತೇ । ತೇನ ಚ ಸ್ತುತಿರೇವ ವ್ಯಜ್ಯತೇ ನ ನಿಂದಾ ॥

*– [ಭಾಗ.ತಾ.ನಿ. ಟಿಪ್ಪಣಿ]*

61. ಬ್ರಹ್ಮಸೂತ್ರದ ವಾಮನಾಧಿಕರಣದಲ್ಲೂ [1-3-24] ಮಾತರಿಶ್ವಾಧಿಕರಣದಲ್ಲೂ [2-3-8] ಉಲ್ಲೇಖಿಸಲ್ಪಟ್ಟಿರುವ ಈ ವೇದಮಂತ್ರದ ಅರ್ಥವನ್ನು ಜಯತೀರ್ಥರು ವಾಮನಾಧಿಕರಣದ ತತ್ವಪ್ರಕಾಶಿಕಾದಲ್ಲಿ ತಿಳಿಸಿರುವರು.

ಬುದ್ಧಿಯನ್ನು ತೊಡಗಿಸಿದರು; ತಮ್ಮ ಬುದ್ಧಿಯನ್ನು ವಾಯುವಿಷಯಕವನ್ನಾಗಿ ಮಾಡಿದರು.62

೨೬. **ಅಪಶ್ಯಂ ಗೋಪಾಮನಿಪದ್ಯಮಾನ ಮಾ ಚ ಪರಾ ಚ ಪಥಿಭಿಶ್ಚರಂತಮ್।**
**ಸ ಸಧ್ರೀಚೀಃ ಸ ವಿಷೂಚೀರ್ವಸಾನ ಆ ವರೀವರ್ತಿ ಭುವನೇಷ್ವಂತಃ ॥**63
[ಋ.ವೇ. 1-164-31]

ರಕ್ಷಕನನ್ನು ಕಂಡೆ (ಎಂದು ಒಬ್ಬ ಋಷಿಯು ಉದ್ಗರಿಸುವನು) ವಾಯುದೇವನಲ್ಲಿರುವ ಪುರುಷೋತ್ತಮನೇ ಸರ್ವರಕ್ಷಕ. ವೇದಗಳಲ್ಲಿ ವಾಯು ಇರುವನು. ಅಂತಹ ವಾಯುವಿನಲ್ಲಿ ಭಗವಂತನಿರುವನು. ವಾಯುವೂ ಅವನಲ್ಲಿರುವ ಭಗವಂತನೂ ಎಂದೂ ಒಂದೆಡೆ ಸುಮ್ಮನಿರುವುದಿಲ್ಲ. ಏಕೆಂದರೆ ವಾಯು ಅವನೊಳಗೆ ಇರುವ ಅಮಿತಶಕ್ತಿಶಾಲಿಯಾದ ಕೇಶವನಿಂದ ಪ್ರೇರಿತನಾಗಿ ನಿತ್ಯವೂ ಸಂಚರಿಸುವನು; ಎಲ್ಲ ಪ್ರವೃತ್ತಿಗಳನ್ನು ಉಂಟುಮಾಡುವನು ಎಂಬುದು ಪ್ರಸಿದ್ಧ. ಸರ್ವಶಕ್ತನಾದ ವಾಯುವೂ, ಅವನೊಳಗಿರುವ ಅಮಿತ ಪುರುಷಶಾಯಿ ಶ್ರೀಹರಿಯೂ ಎಲ್ಲೆಡೆ ಪಂಚಭೂತಗಳ ಹೊರಗೂ ಸಂಚರಿಸುವನು. ಪೂರ್ವಾದಿ ನಾಲ್ಕು ದಿಕ್ಕುಗಳಲ್ಲೂ, ಆಗ್ನೇಯಾದಿ ನಾಲ್ಕು ವಿದಿಕ್ಕುಗಳಲ್ಲೂ ಸರ್ವದಾ ವಾಸಮಾಡುವರು. ಎಲ್ಲ ಜೀವಿಗಳಲ್ಲೂ ಒಳಗೆ ಲೋಕಸಾಕ್ಷಿಗಳಾಗಿ ಸಂಚರಿಸುವರು.64

---

62. ಅಂಗೇತಿ ಸಂಬೋಧನವ್ । ಯೇ ದೇವಾ ವಾಯೋರ್ನಮಸ್ಕಾರಾದಿನಾ ಜ್ಞಾನಾದಿಗುಣ ಪೂರ್ಣಾಜ್ಞಾನಾದ್ಯವದ್ಯವಿಧುರಾಶ್ಚ ಪುರಾ ಆಸಂಸ್ತೇ ಕ್ವಚಿದ್ರಹಸ್ಯಸ್ಥಾನೇ ಸೂರ್ಯೇಣ ಸಾಕಂ ಜ್ಞಾನಿನೇ ಸಂಸಾರಬಾಧವದ್ಭಿಃ ಶರಣಂ ಪ್ರಾಪ್ತಾಯ ವಾಯವೇ ಬುದ್ಧಿ ಮಾವಾಸಯಂಸ್ತದ್ವಿಷಯಾಮಕುರ್ವನ್ನಿತಿ – *ತತ್ವಪ್ರಕಾಶಿಕಾ [1-3-24 ಬ್ರ.ಸೂ.ಭಾ. ಟೀಕಾ]*

63. ಮಂತ್ರೋಽಪ್ಯರ್ಥಮಿಮಂ ಪ್ರಾಹಾಪಶ್ಯಂ ಗೋಪಾಮಿತಿ ಸ್ಮ ಹ –ಎಂದು ಐತರೇಯಭಾಷ್ಯದಲ್ಲಿ [1-4-17] ತಿಳಿಸಿರುವಂತೆ ಭಗವಂತನು ವಾಯುದೇವ ಸಹಿತನಾಗಿ ಛಂದಸ್ಸುಗಳಲ್ಲಿದ್ದುಕೊಂಡು ರಕ್ಷಿಸುವನೆಂಬ ವಿಚಾರಕ್ಕೆ ತದುಕ್ತ ಮೃಷಿಣಾ –ಎಂದು ಈ ಮಂತ್ರವನ್ನು ಸಂವಾದಿಯಾಗಿ ನೀಡಲಾಗಿದೆ.

64. ಏಷ ಗೋಪಾ ಹಿ ಸರ್ವಸ್ಯ ವಾಯುಸ್ಥಃ ಪುರುಷೋತ್ತಮಃ ।
ಛಂದಸ್ಸು ಸಂಸ್ಥಿತೋ ವಾಯುರ್ವಾಯೌ ಚ ಸ ಜನಾರ್ದನಃ ।
ವಾಯುಶ್ಚ ವಾಯುಸಂಸ್ಥಶ್ಚ ಕದಾಚಿನ್ನ ಹಿ ತಿಷ್ಠತಃ ।
ವಾಯುರ್ಹಿ ನಿತ್ಯಸಂಚಾರೀ ಸದಾ ಸರ್ವ ಪ್ರವೃತ್ತಿಮಾನ್ ।
ಚೋದಿತಃ ಕೇಶವೇನೈವ ತತ್ರೇ ನಾಮಿತಶಕ್ತಿನಾ ।
ಆ ಸಮಂತಾತ್ ಪರಾಕ್‌ಚಾಪಿ ಪಂಚಭೂತೇಭ್ಯ ಈಶ್ವರಃ ।
ವಾಯುಸ್ತಸ್ಥೋ ಹರಿಶ್ಚೈವ ಚರತ್ಯಮಿತ ಪುರುಷಃ ।
ಸಧ್ರೀಚೀನಾಸು ಪೂರ್ವಾದಿದಿಕ್ಷೇತೌ ಚತಸೃಷ್ವಪಿ ।
ನಿತ್ಯದಾ ವಸತಃ ಕೋಣದಿಕ್ಷ್ವಥಾಸು ವಿಷೂಚಿಷು ।
ಅಂತಶ್ಚ ಸರ್ವಭೂತೇಷು ಚರತೋ ಲೋಕಸಾಕ್ಷಿಣೌ । – *ಐ.ಉ.ಭಾ. [1-4-17]*

೨೭. **ಅಪಕ್ಷಿತಂ ವಸು ಬಿಭರ್ಷಿ ಹಸ್ತಯೋರ**
**ಷಾಳ್ಹಂ ಸಹಸ್ತನ್ವಿ ಶ್ರುತೋ ದಧೇ।**
**ಆವೃತಾಸೋಽವತಾಸೋ ನ ಕರ್ತೃಭಿಸ್ತನೂಷು**
**ತೇ ಕ್ರತವ ಇಂದ್ರ ಭೂರಯಃ ।**65 [ಋ.ವೇ. 1-55-8]

ಹೇ ವಿಷ್ಣೋ, ಹೇ ವಾಯೋ ಎಂದೂ ಕ್ಷಯಿಸದ ಧನಸಂಪತ್ತನ್ನೂ, ಜ್ಞಾನ ಸಂಪತ್ತನ್ನೂ ನೀನು ಎರಡೂ ಕೈಗಳಲ್ಲಿ ಹಿಡಿದುಕೊಂಡಿರುವಿ. ಉಪಾಸಕನಿಗೆ ಅವುಗಳನ್ನು ಕೊಟ್ಟು ರಕ್ಷಿಸುವಿ. ನಿನ್ನ ಕೈಗಳಿಂದ ಅವುಗಳನ್ನು ಅಪಹರಿಸಲು ಯಾರಿಗೂ ಸಾಧ್ಯವಿಲ್ಲ. ಯಾರಿಗೂ ಮಣಿಯದ ಶಕ್ತಿಯನ್ನು ನೀನು ನಿನ್ನ ಶರೀರದಲ್ಲಿ ಧರಿಸಿರುವಿ. ಇದು ಪ್ರಸಿದ್ಧ ವಾದುದು. ಧನಿಕರು ಭೂರಂಧ್ರಗಳಲ್ಲಿ ಧನಕನಕಾದಿಗಳನ್ನು ಬಚ್ಚಿಟ್ಟು ಕಾಪಾಡುವಂತೆ ನೀನೂ ನಿನ್ನ ಉದರದಲ್ಲಿ ಅನಂತಜೀವರನ್ನು ಇಟ್ಟುಕೊಂಡು ಕಾಪಾಡುತ್ತಿರುವಿ.66

೨೮. **ಆ ತೇನ ಯಾತಂ ಮನಸೋ ಜವೀಯಸಾ**
**ರಥಂ ಯಂ ವಾಮೃಭವಶ್ಚಕ್ರುರಶ್ವಿನಾ ।**
**ಯಸ್ಯ ಯೋಗೇ ದುಹಿತಾ ಜಾಯತೇ**
**ದಿವ ಉಭೇ ಅಹನೀ ಸುದಿನೇ ವಿವಸ್ವತಃ ॥** [ಋ.ಭಾ. 10-39-12]

೨೯. **ನಿಮಿಷಶ್ಚಿಜ್ಜವೀಯಸಾ ರಥೇನಾಯಾತಮಶ್ವಿನಾ ।**
**ಅಂತಿಷದ್ ಭೂತು ವಾಮವಃ ॥**67 [ಋ.ಭಾ. 10-39-13]

---

65. ಅಥೋ ಆವೃತಾಸೋಽವತಾಸೋ ನ ಕರ್ತೃಭಿರಿತಿ.... -ಎಂಬುದಾಗಿ ಐ.ಉ.ನಲ್ಲಿ [1-4-19] ಸಂವಾದವಾಗಿ ಉದಾಹರಿಸಲ್ಪಟ್ಟ ಈ ಮಂತ್ರವನ್ನು ಶ್ರೀ ಮಧ್ವರು ಐತರೇಯಭಾಷ್ಯದಲ್ಲಿ ವ್ಯಾಖ್ಯಾನಿಸಿರುವರು.

66. ಹಸ್ತಯೋರೇತಯೋರೇವ ನಿತ್ಯಾಕ್ಷೀಣಂ ವಸು ಸ್ಥಿತಮ್ ।
ತದ್ವ್ಯಸಹ್ಯಂ ಬಲಂ ವಾಯೋರನಂತಂ ಕಿಮು ತದ್ಧರೇಃ ।
ವಾಯೋರಾಧಾರಭೂತಸ್ಯ ತಾಭ್ಯಾಂ ಹಿ ಕ್ರತುನಾಮಕಾಃ ।
ಆವೃತಾ ಸರ್ವಜೀವಾ ಹಿ ಯಥೈವ ಕನಕಾವಟಾಃ ।
ಆಚ್ಛಾದ್ಯಂತೇ ವಿತ್ತವದ್ಭಿಸ್ತಾಭ್ಯಾಮೇವಂ ಚ ಚೇತನಾಃ ।
ಆವೃತಾಃ ಮಹಾದಾದ್ಯೈಸ್ತು ದೇಹೇ ತಿಷ್ಠಂತಿ ಚೈತಯೋಃ ।– *[ಐ.ಉ.ಭಾ. 1-4-19]*

67. ಐತರೇಯೋಪನಿಷತ್ತಿನಲ್ಲಿ ( ) ದೇವರಥದ ಪ್ರಸ್ತಾವದಲ್ಲಿ ಅದಕ್ಕೆ ಸಂವಾದವಾಗಿ ತದುಕ್ತ ಮೃಷಿಣಾ ಪಿಆ ತೇನ ಯಾತಂ ಮನಸೋ ಜವೀಯಸಾ ನಿಮಿಷಶ್ಚಜ್ಜವೀಯಸಾ ಇತಿ ಜವೀಯಸೇತಿ ಋಗ್ವೇದದ ಈ ಎರಡು ಮಂತ್ರಗಳು ಸಂವಾದರೂಪದಲ್ಲಿ ಉಲ್ಲೇಖ ಗೊಂಡಿದ್ದು ಶ್ರೀ ಮಧ್ವರು ಐತರೇಯಸಂಹಿತೆಯ ಮೂಲಕ .....ಆಯಾತಮಿತಿ ಹ್ಯೈತೌ ಪ್ರಾರ್ಥಯೇದ್ ಯಜ್ಞಕರ್ಮಣಿ । ಅನ್ಯದಾಪ್ಯರ್ಥಯೇದೇತೌ ಜ್ಞಾನೇಚ್ಛುಃ ಪುರುಷಃ ಸದಾ । ಜಪೇನ್ಮಂತ್ರದ್ವಯಂ ನಿತ್ಯಮಾತೇನ ನಿಮಿಷಸ್ತಥಾ ॥

- ಹಯಗ್ರೀವರೂಪದ ವಿಷ್ಣುವಾಯುಗಳೇ, ಅಧಿದೈವದಲ್ಲಿ, ಮನಸ್ಸಿಗಿಂತ ಹೆಚ್ಚು ವೇಗವುಳ್ಳ ರಥವನ್ನು ಏರಿ ಬನ್ನಿ. ಅಧ್ಯಾತ್ಮದಲ್ಲಿ ಮನಸ್ಸಿಗಿಂತ ಹೆಚ್ಚು ಕಾರ್ಯಸಾಧನ ಸಾಮರ್ಥ್ಯವುಳ್ಳ ದೇಹವೆಂಬ ರಥವನ್ನೇರಿ ಬನ್ನಿ. ಅಂದರೆ ದೇಹದಲ್ಲಿ ಸದಾ ಸನ್ನಿಹಿತರಾಗಿರಿ. ದೇವತೆಗಳು ನಿಮಗೋಸ್ಕರ ಈ ರಥವನ್ನು ಸಿದ್ಧಪಡಿಸಿರುವರು. ಅದರಿಂದ ನಿಮ್ಮ ಸೇವೆಮಾಡಿ ಜೀವರು ಅಪರೋಕ್ಷಜ್ಞಾನ ಪಡೆದು ಮುಕ್ತಿ ಹೊಂದುವಂತಾಗಲಿ, ಕಣ್ಣಿನ ರೆಪ್ಪೆ ಹೊಡೆಯುವುದರ ವೇಗಕ್ಕಿಂತಲೂ ಅಧಿಕವೇಗದ ನಮ್ಮ ದೇಹವೆಂಬ ರಥವನ್ನು ಏರಿ ಬನ್ನಿ. ಅಂದರೆ ಕಣ್ಣರೆಪ್ಪೆ ಹೊಡೆಯುವಷ್ಟು ಕಾಲವೂ ವ್ಯರ್ಥವಾಗದಂತೆ ಸದಾ ನನ್ನಿಂದ ಸಾಧನಾನುಷ್ಠಾನವಾಗಲು ನೀವಿಬ್ಬರೂ ದೇಹದಲ್ಲಿ ನೆಲೆಸಿರಿ. ನಿಮ್ಮಿಂದ ನಮಗೆ ಬೇಗ ರಕ್ಷಣೆ ದೊರಕಲಿ.68

**೩೦. ಮಾ ನಃ ಸ್ತೇನೇಭ್ಯೋ ಯೇ ಅಭಿದ್ರುಹಸ್ಪದೇ**
**ನಿರಾಮಿಣೋ ರಿಪವೋಽನ್ನೇಷು ಜಾಗೃಧುಃ ।**

---

-ಎಂಬುದಾಗಿ ಯಜ್ಞಕರ್ಮದಲ್ಲಿ, ಅದಲ್ಲದಿದ್ದರೂ ಜ್ಞಾನಾರ್ಥಿಯಾದವನು ಯಾವಾಗಲೂ ಹರಿಗುರುಗಳನ್ನು ಬೇಡಬೇಕು. ನಿತ್ಯವೂ 'ಆ ತೇನ' 'ನಿಮಿಷಃ' ಎಂಬ ಎರಡು ಮಂತ್ರಗಳನ್ನೂ ಜಪಿಸಬೇಕು -ಎಂದು ಸಂದೇಶಿಸಿರುವರು.

68. ನಿರ್ಮಿತೋ ದೇವತೈಃ ಸರ್ವೈರ್ವಿಷ್ಣುನಾ ವಾಯುನಾ ಸಹ ।
ಅಧಿಷ್ಠಿತೋ ರಥೋ ದಿವ್ಯಃ ಸೋಽಧ್ಯಾತ್ಮಂ ದೇಹನಾಮಕಃ ।
ಸಮ್ಯಗ್ ಯೋಗೋ ಯದಾ ತಸ್ಯ ಮನೋವಾಕ್‌ಕರ್ಮಭಿರ್ಭವೇತ್ ।
ದೇಹಾಖ್ಯಸ್ಯ ರಥಸ್ಯೈವ ತದಾ ನಾರಾಯಣಾತ್ ಪ್ರಭೋಃ ।
ವಿವಿಧಂ ವಾಸವತ್ವಾಚ್ಚ ವಿವಸ್ವಾನ್ನಾಮಕಾಚ್ಛುಭಮ್ ।
ಸಂಸಾರವಾರಕಂ ಜ್ಞಾನಂ ದಿವೋದುಹಿತೃನಾಮಕಮ್ ।
ವಿಷ್ಣುತತ್ವಾ ಪರೋಕ್ಷಾಖ್ಯಂ ಅಹನೀ ದ್ವೇ ಚ ಶೋಭನೇ ।
ಜ್ಞಾನಾವಸ್ಥಾ ಮುಕ್ತ್ಯವಸ್ಥೇ ತ್ಯುಭೇ ಏವಾಹನೀ ಪರೇ ।
ಜಾಯಂತೇ ದೇವತಾಸ್ತ್ವೇಷಾಂ ಭಾರತೀ ವಾಯುರೇವ ಚ ।
ಜಿವನ್ಮುಕ್ತೇಶ್ಚ ಮುಕ್ತೇಶ್ಚ ದಾತಾ ರೂಪದ್ವಯೀ ಪ್ರಭುಃ ।
ಸರ್ವಸ್ತ್ರೀಣಾಮುತ್ತಮತ್ವಾದ್ ದ್ಯೌರ್ನಾಮ ಶ್ರೀರುದಾಹೃತಾ ।
ದುಹಿತಾಽಸ್ಯಾ ಭಾರತೀ ತು ನಿತ್ಯಾಹೇಯಸ್ವರೂಪತಃ ।
ಅಹರಿತ್ಯುಚ್ಯತೇ ವಾಯುರ್ಜ್ಞಾನಾತ್ಮತ್ವಾತ್ ತಥೈವ ಚ ।
ಅಧಿದೈವೇ ರಥೇಽಪ್ಯೇತೇ ವಿಷ್ಣೋರ್ಲಕ್ಷ್ಮ್ಯಾಂ ಪ್ರಜಜ್ಞಿರೇ ।
ರಥೇನ ತೇನ ದೇವೇಶೌ ವಿಷ್ಣುವಾಯೂ ಜಗತ್ಪತೀ ।
ಆಯಾತಮಿತಿ ಹೃದ್ಯೈತ್ ಪ್ರಾರ್ಥಯೇತ್....
ರಕ್ಷಣಂ ವಾಂ ಸಮೀಪೇ ಸ್ಯಾನ್ಮಮೇತ್ಯಧ್ಯಾತ್ಮಮೇವ ಚ ।
ಹಯಾಸ್ಯತ್ವಾಚ್ಚಾಶ್ವಿನೌ ತಾವಿತ್ಯಾಹ ಪರಮಾ ಶ್ರುತಿಃ ।

*– ಐತರೇಯ ಸಂಹಿತಾ [ಐ.ಉ.ಭಾ. ...]*

ಯೇಷಾಂ ನೈತನ್ನಾಪರಂ ಕಿಂಚನೈಕಂ
ಬ್ರಹ್ಮಣಸ್ಪತೇ ಬ್ರೂಹಿ ತೇಭ್ಯಃ ಕದಾಚಿತ್ ।
ಅಥೋ ಶರ್ಮೇನೋಪರತಾ ಮನುಷ್ಯಾ
ಯೇ ಧರ್ಮಿಣೋ ಬ್ರೂಹಿ ತೇಭ್ಯಃ ಸದಾ ನಃ ।
ಆ ದೇವನಾಮೋಽಹತೇ ವಿ ವ್ರಯೋ ಹೃದಿ
ಬೃಹಸ್ಪತೇ ನ ಪರಃ ಸಾಮ್ನೋ ವಿದುಃ ।।69 [ಋ.ವೇ. 2-23-16]

ವೇದಪತಿಯಾದ ಮುಖ್ಯಪ್ರಾಣನೇ, ನಿತ್ಯದುಃಖಾತ್ಮಕತಮೋ ಯೋಗ್ಯರೂ, ಪೂರ್ಣಾನಂದಸ್ವರೂಪಿಯಾದ ಶ್ರೀಹರಿಯನ್ನು ತುಚ್ಛೀಕರಿಸುವವರೂ, ಅವನ ದ್ವೇಷಿಗಳೂ, ವಿಷಯಾಸಕ್ತರೂ, ಸರ್ವೋತ್ತಮ ಬ್ರಹ್ಮನೆಂಬುವವನಿಲ್ಲ; ಅಂತಹ ಒಬ್ಬ ಪರಬ್ರಹ್ಮನ ಅಧೀನಕ್ಕೊಳಪಡುವಂತಹ ಜಗತ್ತೆಂಬುದೂ ಇಲ್ಲ. ನಿರ್ಗುಣವಾದ ಒಂದು ವಸ್ತು ಮಾತ್ರವಿದೆ. ಕಣ್ಣಿಗೆ ಕಾಣುವ ಈ ಜಗತ್ತು ಅನಿರ್ವಚನೀಯ –ಎಂದು ಹೇಳುವವರೂ ಆದ ಕಳ್ಳರಿಗೆ ನಮ್ಮನ್ನು ಎಂದೂ ಉಪದೇಶಿಸಬೇಡ. ವೇದಪತಿಯಾದ ಮುಖ್ಯಪ್ರಾಣನೇ, ನಿಷ್ಕಾಮಕರ್ಮ ಮಾಡುತ್ತ ಭಕ್ತಿಪೂರ್ವಕ ವಿಷ್ಣೂಪಾಸನೆಯಲ್ಲಿ ನಿರತರಾಗಿದ್ದು ಸಾಮನಾಮಕನಾದ ವಾಸುದೇವನಿಗಿಂತ ಬೇರೆ ಉತ್ತಮನಿರುವನೆಂದು ಯಾವ ಮನುಷ್ಯರು ತಿಳಿಯುವುದಿಲ್ಲವೋ, ಯಾರು ದೇವತೆಗಳಿಗೂ ನಿಯಾಮಕನಾದ ಆ ಪರವಾಸುದೇವನನ್ನು ಹೃದಯದಲ್ಲಿ ಚೆನ್ನಾಗಿ ಧ್ಯಾನಿಸುವರೋ ಅವರಿಗೇ ಯಾವಾಗಲೂ ನಮ್ಮನ್ನು ಉಪದೇಶಿಸು.70

---

69. ವಾಸುದೇವ ಸಾಮನಾಮಕನೆಂದೂ ಅವನೇ ಸಂಹಿತಾಪ್ರತಿಪಾದ್ಯನೆಂದೂ ತಿಳಿಸಿದ ಐತರೇಯ ಉಪನಿಷತ್ತು [2-7-5-6] ಇದಕ್ಕೆ ಸಂವಾದವಾಗಿ ತದಪ್ಯೇತದೃಷಿಣೋಕ್ತಂ –ಬೃಹಸ್ಪತೇ ನ ಪರಃ ಸಾಮ್ನೋ ವಿದುಃ ಇತಿ –ಎಂಬುದಾಗಿ ಈ ಮಂತ್ರದ ಕೊನೆಯ ಪಾದವನ್ನು ಉಲ್ಲೇಖಿಸಿದ್ದು, ಶ್ರೀ ಮಧ್ವರು ತಮ್ಮ ಭಾಷ್ಯದಲ್ಲಿ ಈ ಪಾದಕ್ಕೆ ಸಂಬಂಧಿಸಿದ ಎರಡು ಮಂತ್ರಗಳ ಪೂರ್ಣ ಪಾಠವನ್ನು ನೀಡಿ ಅವನ್ನು ವ್ಯಾಖ್ಯಾನಿಸಿರುವರು. ಬ್ರಹ್ಮಸೂತ್ರದ ಅನಾವಿಷ್ಕುರ್ವನ್ನನ್ವಯಾತ್ ಎಂಬ ಬ್ರಹ್ಮಸೂತ್ರದ [3-4-49] ಭಾಷ್ಯದಲ್ಲೂ ಈ ಮಂತ್ರಗಳನ್ನು ಉದಾಹರಿಸಿರುವರು. ಹೃಷೀಕೇಶೀಯ ಪಾಠದ ಪ್ರಕಾರ ಒಂದೇ ಪಾದವನ್ನು ಉದಾಹರಿಸಿದ್ದರೆ, ಪ್ರಚಲಿತ ಪಾಠದ ಪ್ರಕಾರ ಎರಡೂ ಮಂತ್ರಗಳನ್ನು ಉದಾಹರಿಸಿರುವರು.

ಋಗ್ವೇದದ ಸಂಹಿತಾಪಾಠದಲ್ಲಿ ಮೊದಲಿನ ಮಂತ್ರದ ಪೂರ್ವಾರ್ಧವೂ, ಕೊನೆಯ ಮಂತ್ರದ ಉತ್ತರಾರ್ಧವೂ ಸೇರಿ ಒಂದು ಮಂತ್ರವಾಗಿ ಪಠಿತವಾಗಿದೆ. ಆದುದರಿಂದ ಶ್ರೀ ಮಧ್ವರು ಉದಾಹರಿಸಿರುವ ಪಾಠ ಬೇರೆ ಯಾವುದೋ ಉಪವೇದಕ್ಕೆ ಸೇರಿದ್ದೆಂದು ಭಾವಿಸಬೇಕಾಗಿದೆ.

70. ಅಭಿದ್ರುಹಸ್ಪದೇ–ಅಭಿತೋ ದ್ರೋಹಸ್ಯ ನಿತ್ಯನಿರತಿಶಯದುಃಖಸ್ಯಾಂಧತಮಸಸ್ಯ ಯೋಗ್ಯಾಃ ಶಾಸ್ತ್ರದಸ್ಯವಃ ।.....ಏವಂವಿಧಾ ಏವ 'ಸ್ತೇನಾಃ' ಅಭಿದ್ರುಹಸ್ಪದಸ್ಥಾಶ್ಚ' ನಿರಾಮಿಣಃ –ರಾಮಸ್ಯ ರಮಣರೂಪಸ್ಯ ಪೂರ್ಣಾನಂದಸ್ವರೂಪಸ್ಯ ವಿಷ್ಣೋರ್ಜೀವಸ್ವರೂಪತಾ ಜ್ಞಾನೇನ ನೀಚತಾವಿದಃ ।

[ವಿದ್ಯಾಭಿಮಾನಿದೇವತೆಗಳು ವಾಯುದೇವನಲ್ಲಿ ಬೇಡಿಕೊಳ್ಳುವ ಪರಿ]

೩೧. **ಘರ್ಮಾ ಸಮಂತಾ ತ್ರಿವೃತಂ ವ್ಯಾಪತುಸ್ತಯೋರ್ಜುಷ್ಟಿಂ ಮಾತರಿಶ್ವಾ ಜಗಾಮ ।**

[ಋ.ವೇ. 10-114-1]

● ಪ್ರಕಾಶಮಾನಗಳಾದ, ವ್ಯಾಪಿಸಿರುವ ಭಗವಂತನ ರೂಪಗಳು ತೇಜಸಿ-ಅನ್ನ ಹಾಗೂ ನೀರು -ಈ ಮೂರು ವಸ್ತುಗಳ ಸ್ವರೂಪವಾದ ಶರೀರದಲ್ಲಿ, ಅಲ್ಲೂ ವಿಶೇಷವಾಗಿ ಗುಹಾಸ್ಥಾನದಲ್ಲಿ ಇರುವವು. ಅವರ ಸೇವೆ ಮಾಡಲು ವಾಯುದೇವನೂ ಕೂಡಾ ಆ ದೇಹವನ್ನು ಸೇರಿಕೊಂಡಿರುವನು.71

೩೨. **ಆತ್ಮಾ ದೇವಾನಾಂ ಭುವನಸ್ಯ ಗರ್ಭೋ**
**ಯಥಾವಶಂ ಚರತಿ ದೇವ ಏಷಃ ।**
**ಘೋಷಾ ಇದಸ್ಯ ಶೃಣ್ವಿರೇ ನ ರೂಪಂ**
**ತಸ್ಮೈ ವಾತಾಯ ಹವಿಷಾ ವಿಧೇಮ** [ಋ.ವೇ. 10-168-4]

ದೇವತೆಗಳ ಒಡೆಯನಾದ, ಭುವನದ ಗರ್ಭದಂತೆ ಒಳಗೆ ಹೊಕ್ಕಿರುವ, ಈ ವಾಯುದೇವನು ತನ್ನ ಇಚ್ಛೆಗನುಗುಣವಾಗಿ ಸಂಚರಿಸುತ್ತಿರುತ್ತಾನೆ. ಅವನ ರಥಸಂಚಾರದ ಧ್ವನಿಗಳಷ್ಟೇ ಅಶರೀರವಾಣಿಯ ರೂಪದಲ್ಲಿ ಕೇಳಲ್ಪಡುವವು; ಅವನ ರೂಪವು

---

ತ ಏವ ರಿಪವಶ್ಚ ತಸ್ಯ..... ಅನ್ಯೇಷು ಜಾಗ್ರಧುಃ ಭೋಗಮಾತ್ರಗೃಧ್ನವಃ ।
ಯೇಷಾಂ ಏತತ್ ಸರ್ವೋತ್ತಮಂ ವಾಸುದೇವಾಖ್ಯಂ ಪರಂ ಬ್ರಹ್ಮ ನಾಸ್ತೀತಿ ಪಕ್ಷಃ ।
ಈಶಿತವ್ಯೇ ವಿದ್ಯಮಾನೇ ಹೀಶ್ವರೋ ಭವತೀತಿ । ನ ಚಾಪರಂ ಕಿಂಚಿತ್ ।
ಪರಮೇಶ್ವರಾಪೇಕ್ಷಯಾ ಹ್ಯಪರಮಿತಿ । ಕಿಂ ತರ್ಹಿ? ಕಿಂ ಚ ನೈಕಂ ಕಿಮಪ್ಯೇಕಮೇವ ವಸ್ತ್ವಸ್ತಿ ನ ಪರಮಪರಂ ಚೇತಿ ತೇಷಾಂ ಪಕ್ಷಃ । '.....ಬ್ರಹ್ಮಣಸ್ಪತೇ' ಬ್ರಹ್ಮಣೋ ವೇದಸ್ಯ ಪತೇ ವಾಯೋ ।.... ಏತಾದೃಶೇಭ್ಯೋ ಮಾ ಬ್ರೂಹಿ । ಶಮೇನ ವಿಷ್ಣುನಿಷ್ಠಯಾ ಉಪ ಸಮೀಪೇ ತಸ್ಮಿನ್ನೇವ ರತಾಃ । ಸಾಮ್ನೋ ವಿಷ್ಣೋಃ ಪರಂ ಕಿಮಪಿ ನ ವಿದುಃ । ತದೇವ ದೇವಾನಾಂ 'ಪ್ರಯಃ' ಸರ್ವದೇವಾನಾಂ ಪರತಮಂ ವಿಷ್ಣ್ವಾಖ್ಯಂ ಬ್ರಹ್ಮ ಹೃದಾ ವ್ಯೂಹತೇ । ವಾಸುದೇವಾದಿ ರೂಪೇಣ ವರಂ ನಿಯಾಮಕಂ ಚೇತಿ ವ್ರಯಃ । ತೇಭ್ಯೋ ಬ್ರೂಹಿ ।

* ವಾಯುಂ ವಿದ್ಯಾಃ ಸಮಾಸಾದ್ಯ ಸರ್ವಾಸಾಂ ಪತಿಮೂಚಿರೇ ।
ಸ್ತೇನೇಭ್ಯೋ ಮೈವ ನೋ ಬ್ರೂಹಿ ಬ್ರೂಹ್ಯಥೋ ವೈಷ್ಣವೇಷು ಚ ।
– ಐ.ಉ.ಭಾ. *[2-7-56]*

71. ದೀಪ್ತೌ ವ್ಯಾಪ್ತೌ ಭಗವಂತೌ ತೇಜೋಬನ್ನಾತ್ಮಕಂ ಶರೀರಂ ವಿಶೇಷೇಣ ಗುಹಾಸ್ಥಾನೇ ಪ್ರಾಪ್ತೌ, ತಯೋಃ ಸೇವಾಂ ಕರ್ತುಂ ಮಾತರಿಶ್ವಾಪಿ ತ್ರಿವೃತಂ ಜಗಾಮ
– *ಬ್ರ.ಸೂ.ಭಾ. [1-2-11]*

ಕಾಣಲ್ಪಡುವುದಿಲ್ಲ. ಅಂತಹ ವಾಯುದೇವನಿಗೆ ಹವಿಸ್ಸನ್ನು ಅರ್ಪಿಸುವೆವು; ನಮ್ಮಲ್ಲಿಗೆ ಬರಲು ಅಂತಹ ವಾಯುದೇವನಿಗೆ ಆಹ್ವಾನವನ್ನು ನೀಡುವೆವು.72

೩೩. **ಅಪಾಙ್ ಪ್ರಾಙ್ ಏತಿ ಸ್ವಧಯಾ ಗೃಭೀತೋ**
**ಅಮರ್ತ್ಯೋ ಮರ್ತ್ಯೇನಾ ಸ ಯೋನಿಃ ।**
**ತಾ ಶಶ್ವಂತಾ ವಿಷೂಚೀನಾ ವಿಯಂತಾ**
**ನ್ಯನ್ಯಂ ಚಿಕ್ಯುರ್ನ ನಿಚಿಕ್ಯುರನ್ಯಮ್ ।** [ಋ.ವೇ. 1-144-38]

ಪ್ರಾಣವಾಯು ಅಪಾನನಿಂದೊಡಗೂಡಿ ಆನಂದರೂಪಿಯಾದ ಶ್ರೀಹರಿಯಿಂದ ನಿಯಂತ್ರಿತನಾಗಿದ್ದು ಶರೀರದಲ್ಲಿ ಕೆಳಗೂ ಮೇಲೂ ಸಂಚರಿಸುತ್ತಿರುತ್ತಾನೆ. ಶ್ರೀ ಹರಿಯಿಂದ ನಿಯಂತ್ರಿತನಾಗಿರುವುದರಿಂದ ದೇಹದಿಂದ ಹೊರಗೆ ಹೋಗುವುದಿಲ್ಲ. ವಾಯು ದೇಹಗಳಿಂದ ಕೂಡಿದ್ದರೂ ಹರಿಯ ಅನುಗ್ರಹದಿಂದ ದೇಹಾಭಿಮಾನರಹಿತನಾಗಿ ಶಾಶ್ವತನೆನಿಸಿರುವನು. ಅನಿತ್ಯಗಳಾದ ಆ ದೇಹಗಳೂ ಮುಕ್ತಿಯ ತನಕ ಪ್ರವಾಹತಃ ನಿತ್ಯಗಳೇ ಆಗಿವೆ. ಸೃಷ್ಟಿಕಾಲದಲ್ಲಿ ಸ್ಥೂಲ ಶರೀರಗಳಿದ್ದರೆ, ಪ್ರಲಯಕಾಲದಲ್ಲಿ ಸೂಕ್ಷ್ಮಶರೀರಗಳಿರುವವು. ಹೀಗೆ ಸ್ಥೂಲ –ಸೂಕ್ಷ್ಮ ಭೇದದಿಂದ ಅನಿತ್ಯ ಶರೀರಗಳೇ ಪ್ರವಾಹತಃ ನಿತ್ಯಗಳೆಂದ ಮೇಲೆ ಅವುಗಳಿಗೆ ನಿಯಾಮಕನಾದ ವಾಯುದೇವ ನಿತ್ಯನೆಂದು ಬೇರೆ ಹೇಳಬೇಕೇ? ವಾಯು ಮತ್ತು ಅವನ ಶರೀರಗಳು ಬೇರೆ ಬೇರೆ ಗಮ್ಯಸ್ಥಾನಗಳುಳ್ಳವವು. ವಾಯು ಕೇಶವನನ್ನು ಸೇರುವನು. ಶರೀರ ನಾಶ ಹೊಂದಿ ಪಂಚಭೂತಗಳಲ್ಲಿ ಸೇರಿ ಹೋಗುತ್ತದೆ. ಜಡವಾದ ಶರೀರ ಜಡದಲ್ಲಿ ಸೇರಿ ಜಡವೇ ಆಗಿರುತ್ತದೆ. ಚೇತನನಾದ ವಾಯುದೇವ ಚೇತನಾಧಿಪತಿಯಾದ ಶ್ರೀಹರಿಯನ್ನು ಹೋಗಿ ಸೇರುವನು. ಹೀಗೆ ವಾಯು ಮತ್ತು ಅವನ ಶರೀರಗಳು ವಿರುದ್ಧ ರೀತಿಯ ಗಮನವುಳ್ಳವುಗಳು. ವಾಯುದೇವ ಶರೀರ ಬಿಟ್ಟು ಮೇಲೆ ಹೋಗುತ್ತಾನೆ. ಶರೀರ ಕೆಳಗೆ ಬಿದ್ದು ಹೋಗುವುದು. ಆ ಶರೀರ ಕಣ್ಣಿಗೆ ಕಾಣುವುದು; ವಾಯುದೇವ ಕಣ್ಣಿಗೆ ಕಾಣಿಸದವನು.73

*

---

72. ದೇವಾನಾಂ ಆತ್ಮಾ–ಸ್ವಾಮೀ ಭುವನಸ್ಯ ಗರ್ಭಃ –ಗರ್ಭ ಇವಾಂತರ್ಗತಃ ಯಥಾವಶಂ –ಯಥೇಷ್ಟಮ್, ಇಯದೇವ ಶೃಣ್ವಿರೇ –ಶ್ರೂಯಂತೇ ರೂಪಂ –ಪ್ರತಿಮಾ, ನ ದೃಶ್ಯತೇ –ಇತಿ ಶೇಷಃ ಯ ಏಷ ಚರತಿ । ಯಸ್ಯಾಸ್ಯ ರಥಘೋಷಾ ಏವ ಅಶರೀರವಾಗ್ರೂಪಾಃ ಶ್ರೂಯಂತೇ ನ ರೂಪಂ ದೃಶ್ಯತೇ ತಸ್ಮಾ ಇತ್ಯರ್ಥಃ ।
*–[ನ್ಯಾಯವಿವರಣ [3-3-21 ಭಾವಬೋಧ]*

73. ಅರ್ವಾಕ್ ಪ್ರಾಕ್ ಚ ಸದಾ ಗಚ್ಛೇದ್ ವಾಯುರಾನಂದರೂಪಿಣಾ ।
ಅನೇನೈವ ಗೃಹೀತೋ ಹಿ ಪ್ರಾಣೋಽಪಾನೇನ ಸಂಯುತಃ ।
ಅನೇನ ಹರಿಣಾ ಯಸ್ಮಾನ್ನಿಯತೋ ನ ಪರಾಙ್ ಭವೇತ್ ।
ಅಮರ್ತ್ಯಸ್ತತ್ಪ್ರಸಾದೇನ ವಾಯುರ್ದೇಹೈಃ ಸಹ ಸ್ಥಿತಃ ।
ಅನಿತ್ಯಾ ಅಪಿ ದೇಹಾಸ್ತೇ ಶಶ್ವತ್ ಸಂತ್ಯಾಮೋಕ್ಷತಃ ।
ಸ್ಥೂಲಸೂಕ್ಷ್ಮವಿಭಾಗೇನ ಕಿಮು ವಾಯುರ್ಜಗತ್ ಪ್ರಭುಃ ।
ನಾನಾಗತೀ ತು ತಾವೇತೌ ವಾಯುಃ ಪ್ರಾಪ್ನೋತಿ ಕೇಶವಮ್ ।

---

ಶರೀರಂ ತು ವಿನಷ್ಟಂ ಸತ್ ಪಂಚತ್ವಮುಪಗಚ್ಛತಿ ।
ಜಡಂ ತಜ್ಜಡತಾಮೇತಿ ಚೇತನಾ ವಾಯುದೇವತಾ ।
ಚೇತನೇಶಂ ಹರಿಂ ಯಾತಿ, ವಿರುದ್ಧಗಮನೌ ಚ ತೌ ।
ಊರ್ಧ್ವಂ ಗಚ್ಛತಿ ದೇವಸ್ಸಃ ದೇಹೋಽಧಃ ಪತತಿ ಕ್ಷಿತೌ ।
ದೃಶ್ಯತೇ ತಚ್ಛರೀರಂ ಚಾಪ್ಯದೃಶ್ಯಾ ವಾಯುದೇವತಾ । *– [ಐ.ಉ.ಭಾ. 1-6-3]*

# ಸರ್ವಮೂಲದಲ್ಲಿ

## • 'ಪ್ರಾಣಮೂಲ' •

[ಸರ್ವಮೂಲಗ್ರಂಥಗಳಲ್ಲಿ ಮುಖ್ಯಪ್ರಾಣನ ಬಗ್ಗೆ ಪುಸ್ತುತಗಳಾದ ಪ್ರಮಾಣಗಳು]

ಶ್ರೀ ಮಧ್ವರು ಪುಸ್ತುತಪಡಿಸಿರುವ 'ತತ್ವವಾದ'ದ ವೈಶಿಷ್ಟ್ಯಗಳಲ್ಲೊಂದು- ಮುಖ್ಯ ಪ್ರಾಣನ ವ್ಯಕ್ತಿತ್ವವನ್ನು ಪರಿಚಯಿಸಿಕೊಟ್ಟು, ಅವನ ಸ್ಥಾನಮಾನಗಳನ್ನು ಗುರುತಿಸಿ ಕೊಟ್ಟಿರುವುದು. ಇತರ ಯಾವುದೇ ತತ್ವಜ್ಞಾನ ಮುಖ್ಯಪ್ರಾಣನ ವ್ಯಕ್ತಿತ್ವದ ಕುರಿತು ಗಮನವನ್ನೇ ಹರಿಸಿದಂತಿಲ್ಲ. ಮುಖ್ಯಪ್ರಾಣನನ್ನು ಜೀವೋತ್ತಮನನ್ನಾಗಿ ಪರಿಚಯಿಸಿ ಕೊಟ್ಟಿರುವ ಮಾಧ್ವತತ್ವಜ್ಞಾನದಲ್ಲಿ ಮುಖ್ಯಪ್ರಾಣನ ವ್ಯಕ್ತಿತ್ವದ ಸ್ಥಾಪನೆಗಾಗಿ ಅನೇಕ ಅಪೂರ್ವ ಪ್ರಮಾಣಗಳನ್ನು ಉದಾಹರಿಸಲಾಗುವುದು. ಮಾಧ್ವತತ್ವಜ್ಞಾನದ ಆಕರಕೃತಿ ಗಳಾದ ಸರ್ವಮೂಲಗ್ರಂಥಗಳಲ್ಲಿ ಮುಖ್ಯಪ್ರಾಣನ ವ್ಯಕ್ತಿತ್ವದ ಪರಿಚಯಕ್ಕಾಗಿ ಅಲ್ಲಲ್ಲಿ ಉಲ್ಲೇಖಿಸಿರುವ ಆಕರಗ್ರಂಥಗಳ ಪ್ರಮಾಣಗಳನ್ನು ಕ್ರಮಬದ್ಧವಾಗಿ ಪೋಣಿಸಿದಲ್ಲಿ ಅದೊಂದು ಸರ್ವಮೂಲದ 'ಪ್ರಾಣಮೂಲ' ಆಗಿ ಮೆರೆಯಬಲ್ಲದು. ಪ್ರಾಣದೇವನ ಕುರಿತಾಗಿ ಅಧಿಕೃತಗ್ರಂಥವಾಗಿ ಶೋಭಿಸಬಲ್ಲದು.

ಈ ದೃಷ್ಟಿಯಿಂದ ಸರ್ವಮೂಲದಲ್ಲಿ ಉಲ್ಲೇಖಿಸಲಾದ ಪ್ರಮಾಣಗಳನ್ನು ೧೦ ವಿಭಾಗಗಳಲ್ಲಿ ಕ್ರೋಡೀಕರಿಸಲಾಗಿದೆ. ಆ ವಿಭಾಗಗಳು ಹೀಗಿವೆ-

*೧) ಮುಖ್ಯಪ್ರಾಣನ ಸ್ವರೂಪ*

*೨) ಮುಖ್ಯಪ್ರಾಣನ ಗುಣಧರ್ಮಗಳು*

*೩) ಮುಖ್ಯಪ್ರಾಣನ ಸಾಧನೆಗಳು*

*೪) ಮುಖ್ಯಪ್ರಾಣ ಮತ್ತು ದೇವರು*

*೫) ಮುಖ್ಯಪ್ರಾಣ ಮತ್ತು ಚತುರ್ಮುಖ*

*೬) ಮುಖ್ಯಪ್ರಾಣ ಮತ್ತು ಇತರ ದೇವತೆಗಳು*

*೭) ಮುಖ್ಯಪ್ರಾಣ ಮತ್ತು ಬ್ರಹ್ಮಾಂಡ*

*೮) ಮುಖ್ಯಪ್ರಾಣ ಮತ್ತು ಪಿಂಡಾಂಡ*

*೯) ಮುಖ್ಯಪ್ರಾಣ ಮತ್ತು ಮೋಕ್ಷ*

*೧೦) ಮುಖ್ಯಪ್ರಾಣನ ಉಪಾಸನೆ*

# 'ಪ್ರಾಣಮೂಲ'ದ ಸ್ಥೂಲ ಪರಿಚಯ

ಹೀಗೆ ಹತ್ತು ವಿಭಾಗಗಳಲ್ಲಿ ವಿಂಗಡಿಸಲ್ಪಟ್ಟಿರುವ 'ಪ್ರಾಣಮೂಲ'ದಲ್ಲಿ ಉದಾಹೃತಗಳಾದ ಪ್ರಮಾಣಗಳು ಮುನ್ನೂರಕ್ಕಿಂತಲೂ ಅಧಿಕ ಸಂಖ್ಯೆಯಲ್ಲಿದ್ದು (44 +55 + 15 +50 +13 +11 +22 +41 +28 +38 = 317) ಇವುಗಳಲ್ಲಿ (21 +27 + 8 +20 +5 +6 +14 +14 +13 +21 = 149) ನೂರನಲ್ವತ್ತೊಂಭತ್ತು ಪ್ರಮಾಣಗಳು ಬೇರೆ ಬೇರೆ ಪ್ರಮಾಣಗ್ರಂಥಗಳ ಹೆಸರುಗಳಿಂದ ಉಲ್ಲೇಖಗೊಂಡವುಗಳಾದರೆ, ಉಳಿದ ನೂರ ಅರವತ್ತೆಂಟು ಪ್ರಮಾಣಗಳು ಆಕರ ಗ್ರಂಥಗಳ ಹೆಸರಿನ ಉಲ್ಲೇಖ ಇಲ್ಲದೆ ಉದಾಹರಿಸಲ್ಪಟ್ಟವು. ಹೀಗೆ ಉದಾಹರಿಸಲ್ಪಟ್ಟ ಹೆಚ್ಚಿನ ಪ್ರಮಾಣಗಳ ಕೊನೆಯಲ್ಲಿ 'ಇತಿ ಚ' 'ಹೀಗೂ ಕೂಡಾ' –ಎಂಬ ಪದಗಳ ಪ್ರಯೋಗ ನಡೆದಿರುವುದರಿಂದ ಆ ಪ್ರಮಾಣಗಳು ಹಿಂದೆ ಉಲ್ಲೇಖಿಸಲ್ಪಟ್ಟ ಗ್ರಂಥಕ್ಕೇ ಸೇರಿದವು ಎಂದು ಭಾವಿಸಬಹುದಾಗಿದೆ. ಅನುಕ್ತ ಸಮುಚ್ಚಾಯಕವಾಗಿ ಚಕಾರ ಪ್ರಯೋಗಿಸಲ್ಪಟ್ಟಿದೆ ಎಂದಿಟ್ಟುಕೊಂಡಲ್ಲಿ ಅದು ಬೇರೆ ಗ್ರಂಥಕ್ಕೇ ಸೇರಿದ ಪ್ರಮಾಣ ಎಂದು ಪರಿಗಣಿತವಾಗುವುದು. ಯಾವುದೋ ಉದ್ದೇಶಕ್ಕಾಗಿ ಪ್ರಮಾಣಗ್ರಂಥದ ಹೆಸರನ್ನು ಉಲ್ಲೇಖಿಸದೆ ರಹಸ್ಯತ್ವವನ್ನು ಕಾಪಾಡಲಾಗಿದೆ ಎಂದು ಭಾವಿಸಬಹುದಾಗಿದೆ. ಉಪನಿಷತ್ತುಗಳನ್ನು ವ್ಯಾಖ್ಯಾನಿಸುವಾಗ ಆಯಾ ಉಪನಿಷತ್ತಿಗೆ ಸಂಬಂಧಿಸಿ ಅಧಿಕೃತಗಳೆನಿಸುವ ಸಂಹಿತೆಗಳ ಮಾತುಗಳನ್ನೇ ಅಧಿಕವಾಗಿ ಉದಾಹರಿಸಿರುವುದರಿಂದ, ಉಪನಿಷದ್ಭಾಷ್ಯಗಳಲ್ಲಿ ಹೆಸರಿನ ಉಲ್ಲೇಖವಿಲ್ಲದೆ ಪ್ರಸ್ತುತಗಳಾದ ಹೆಚ್ಚಿನ ಪ್ರಮಾಣಗಳು ಆಯಾ ಸಂಹಿತೆಗೆ ಸಂಬಂಧಪಟ್ಟವುಗಳೆಂದು ಊಹಿಸಬಹುದಾಗಿದೆ. ಉದಾಹರಣೆಗೆ– ಐತರೇಯೋಪನಿಷತ್ತಿನ ವ್ಯಾಖ್ಯಾನದ ಹೆಚ್ಚಿನ ಮಾತುಗಳು ಐತರೇಯಸಂಹಿತೆಗೆ ಸಂಬಂಧಿಸಿದವು. ಛಾಂದೋಗ್ಯೋಪನಿಷತ್ತಿನ ವ್ಯಾಖ್ಯಾನದ ಹೆಚ್ಚಿನ ಮಾತುಗಳು ಸಾಮಸಂಹಿತೆಗೂ, ತೈತ್ತಿರೀಯೋಪನಿಷತ್ತಿನ ವ್ಯಾಖ್ಯಾನದ ಹೆಚ್ಚಿನ ಮಾತುಗಳು ಯಜುಃಸಂಹಿತೆಗೆ ಸೇರಿದವೂ ಆಗಿರುವವು. ಆದುದರಿಂದ ಆಯಾ ಉಪನಿಷತ್ತಿನ ವ್ಯಾಖ್ಯಾನದಲ್ಲಿ ಉಲ್ಲೇಖಿಸಲ್ಪಡುವ ಕೆಲವು ಪ್ರಮಾಣಗಳು ಆಯಾ ಸಂಹಿತೆಗೆ ಸೇರಿದವುಗಳೆಂದು ಭಾವಿಸಬಹುದಾಗಿದೆ. ಅಂತೂ ಈ ಎಲ್ಲ ಮಾತುಗಳು ಬೇರೆ ಬೇರೆ ಪ್ರಮಾಣಗ್ರಂಥಗಳಿಗೆ ಸೇರಿದವುಗಳೇ ಹೊರತು ಆಚಾರ್ಯರ ಸ್ವಂತದ ಮಾತುಗಳಲ್ಲ. ಕಪೋಲಕಲ್ಪಿತ ಮಾತುಗಳಲ್ಲ.

## ಪ್ರಮಾಣಗ್ರಂಥಗಳ ವೈಭವ:

ಸರ್ವಮೂಲದ 'ಪ್ರಾಣಮೂಲ'ದಲ್ಲಿ ಬೇರೆ ಬೇರೆ ಹೆಸರಿನಿಂದಲೇ ಉದಾಹರಿಸಲ್ಪಟ್ಟಿರುವಂತೆ ಸುಮಾರು ಎಪ್ಪತ್ತೈದು ಗ್ರಂಥಗಳು ಮುಖ್ಯಪ್ರಾಣನ ವೈಭವವನ್ನು ಸಾರುತ್ತಿವೆ ಎಂದರೆ ಇಷ್ಟರಿಂದಲೇ ನಿರ್ಧರಿಸಿಕೊಳ್ಳಬಹುದು– ಮುಖ್ಯಪ್ರಾಣನಿಗೆ ಶಾಸ್ತ್ರಪ್ರಪಂಚದಲ್ಲಿ ಎಷ್ಟೊಂದು ದೊಡ್ಡ ಸ್ಥಾನಮಾನಗಳು ಸಂದಿವೆ ಎಂಬುದನ್ನು.

ಆದ್ದರಿಂದ ಮುಖ್ಯಪ್ರಾಣನ ವೈಭವಕ್ಕೆ ಪೂರಕವಾಗಿ ಅವನ ಬಗ್ಗೆ ಹೊರಟ ಪ್ರಮಾಣಗ್ರಂಥಗಳ ವೈಭವವನ್ನು ಆಸ್ವಾದಿಸೋಣ. ಪ್ರಾಣಮೂಲದಲ್ಲಿ ಉಲ್ಲೇಖಗೊಂಡ ಎಪ್ಪತ್ತೈದು ಗ್ರಂಥಗಳನ್ನು ಆರು ವಿಭಾಗಗಳನ್ನಾಗಿ ವಿಂಗಡಿಸಬಹುದಾಗಿದೆ–

೧. ಶ್ರುತಿಗಳು ೨. ಸಂಹಿತೆಗಳು ೩. ಇತಿಹಾಸ ಪುರಾಣಗಳು ೪. ತಂತ್ರಗ್ರಂಥಗಳು ೫. ತಾತ್ವಿಕಗ್ರಂಥಗಳು ೬. ಶಬ್ದಶಾಸ್ತ್ರೀಯ ಗ್ರಂಥಗಳು.

**೧. ಶ್ರುತಿಗಳು :** 1. ಪೈಂಗಿಶ್ರುತಿ [ಬೃ.ಉ.ಭಾ. 3-5-4 ಮತ್ತು ಬ್ರ.ಸೂ.ಭಾ. 2-4-11] 2. ಅಗ್ನಿವೇಶ್ಮಶ್ರುತಿ [ಬ್ರ.ಸೂ.ಭಾ. 2-4-11] 3. ಬಳಿತ್ಥಾಸೂಕ್ತ [ಮ.ಭಾ.ತಾ.ನಿ. 2-150... 154] 4. ಸೌತ್ರಾಯಣ ಶ್ರುತಿ [ಬ್ರ.ಸೂ.ಭಾ. 2-4-14] 5. ಕೌಂಡಿನ್ಯಶ್ರುತಿ [ಬ್ರ.ಸೂ.ಭಾ. 2-4-14, 2-4-13, 3-4] 6. ಭಾಲ್ಲವೇಯ ಶ್ರುತಿ [ಬ್ರ.ಸೂ.ಭಾ. 2-3-14] 7. ಮಾಂಡವ್ಯಶ್ರುತಿ [ಬ್ರ.ಸೂ.ಭಾ. 2-4-12] 8. ಷಟ್‌ಪ್ರಶ್ನೋಪನಿಷತ್ [ಭಾ.ತಾ.ನಿ. 10-94-18] 9. ಹಿರಣ್ಯನಾಭಶ್ರುತಿ [ಭಾ.ತಾ.ನಿ. 10-94-18] 10. ನಾರಾಯಣಶ್ರುತಿ [ಬ್ರ.ಉ.ಭಾ. 6-1-4 ಮತ್ತು ಬೃ.ಉ.ಭಾ. 3-6-28] 11. ಗೌಪವನಶ್ರುತಿ [ಬ್ರ.ಸೂ.ಭಾ. 2-4-4; 2-4-13] 12. ಪೌತ್ರಾಯಣ ಶ್ರುತಿ [ಬ್ರ.ಸೂ.ಭಾ. 2-4-19] 13. ಪರಮಶ್ರುತಿ [ಬೃ.ಉ.ಭಾ. 5-1-6]

**೨. ಸಂಹಿತೆಗಳು :** 1. ಮಹಾಸಂಹಿತೆ [ಬೃ.ಉ.ಭಾ. 3-3-28, ಛಾ.ಉ.ಭಾ. 3-3-28] 2. ಆಚಾರ್ಯಸಂಹಿತಾ [ಛಾ.ಉ.ಭಾ. 4-2-4] 3. ವ್ಯೋಮಸಂಹಿತಾ [ಭಾ.ತಾ.ನಿ. 3-7-9] 4. ಸಾಮಸಂಹಿತಾ [ಛಾ.ಉ.ಭಾ. 3-11-1, ಛಾ.ಉ.ಭಾ. 6-2-1, ಛಾ.ಉ.ಭಾ. 8-4-3, ಛಾಂ.ಉ.ಭಾ. 2-2-14, ಛಾಂ.ಉ.ಭಾ. 5-2-6] 5. ಪರಮಸಂಹಿತಾ [ಬೃ.ಉ.ಭಾ. 5-3-2] 6. ನಾಮಸಂಹಿತಾ [ಭಾ.ತಾ.ನಿ. 5-3-21] 7. ರಾಮಸಂಹಿತಾ [ಈ.ಉ.ಭಾ. 3-5] 8. ಹಯಗ್ರೀವಸಂಹಿತಾ [ಬೃ.ಉ.ಭಾ. 4-4-6] 9. ಪ್ರಜಾಪತಿಸಂಹಿತಾ [ಷಟ್.ಉ.ಭಾ. 1-2-3] 10. ಯಜುಃಸಂಹಿತಾ [ತೈ.ಉ.ಭಾ. 2-13, ● 2-9, ● 2-11, ● 2-14] 11. ಭಾಗವತಸಂಹಿತಾ [ಭಾ.ತಾ.ನಿ. 10-14-23] 12. ಐತರೇಯಸಂಹಿತಾ [ಐ.ಉ.ಭಾ. 3-3-3-6] ● 3-6-2-8] 13. ತತ್ವಸಂಹಿತಾ [ಬ.ಉ.ಭಾ. 5-2-21] 14. ಬೃಹತ್ಸಂಹಿತಾ [● ಬ್ರ.ಸೂ.ಭಾ. 2-4-8 ● ಐ.ಉ.ಭಾ. 2-1-2-12] 15. ಪ್ರಾಣಸಂಹಿತಾ [ಛಾಂ.ಉ.ಭಾ. 5-1-13]

**೩. ಇತಿಹಾಸ ಪುರಾಣಗಳು :** 1. ಬ್ರಹ್ಮಾಂಡ [● ಭಾ.ತಾ.ನಿ. 3-9-31 ● ಭಾ.ತಾ.ನಿ. 2-6-35 ● ಈ.ಉ.ಭಾ. 1-4 ● ಐ.ಉ.ಭಾ. 2-1-2-12 ● ಛಾಂ.ಉ.ಭಾ. 6-3-5 ● ಛಾ.ಉ.ಭಾ. 2-1-1 ● ಮ.ಭಾ.ತಾ.ನಿ. 2-170] 2. ಕೌರ್ಮ [ಬ್ರ.ಸೂ.ಭಾ. 2-3-8] 3 ಮಹಾಕೌರ್ಮ [● ಕಾ.ಉ.ಭಾ. 2-2-5, ● ತೈ.ಉ.ಭಾ. 2-2-2] 4. ಪಾದ್ಮ [ಛಾಂ.ಉ.ಭಾ. 4-4-3] 5. ನಾರದೀಯ [ಬೃ.ಉ.ಭಾ. 3-5-8] 6. ಭವಿಷ್ಯತ್ಪರ್ವ [ಕಾ.ಉ.ಭಾ. 2-1-5] 7. ಹರಿವಂಶ [ಭಾ.ತಾ.ನಿ. 11-3-39] 8. ವಾಮನ [ಬೃ.ಉ.ಭಾ. 3-5-3] 9. ಮಹಾಭಾರತ [● ಬೃ.ಉ.ಭಾ. 5-7-7 ● ಬ್ರ.ಸೂ.ಭಾ. 2-4-11 ● ಭಾ.ತಾ.ನಿ. 2-2-21] 10. ವಾರಾಹ [● ಬ್ರ.ಸೂ.ಭಾ. 4-4-9]

**೪. ತಾತ್ವಿಗ್ರಂಥಗಳು :** 1. ಸದ್ಭಾವ [● ಛಾಂ.ಉ.ಭಾ.ದ ಉಪಸಂಹಾರದಲ್ಲಿ] 2. ಷಾಡ್ಗುಣ್ಯ [● ಭಾ.ತಾ.ನಿ. 4-23-29 ● ಭಾ.ತಾ.ನಿ. 2-2-16] 3. ಸಾರನಿರ್ಣಯ

[ಛಾಂ.ಉ.ಭಾ. 1-1-1] 4. ತತ್ತ್ವವಿವೇಕ [ಛಾಂ.ಉ.ಭಾ. 7-1-10 ● 3-4-2 ● ಛಾ.ಉ.ಭಾ. 6-3-5 ● ಛಾಂ.ಉ.ಭಾ. 1-3-7 ● ಷಟ್.ಉ.ಭಾ. 6-1-6] 6. ಸಂತತ್ತ್ವ [ಛಾಂ.ಉ.ಭಾ. 1-3-7 ಪ್ರಚಲಿತ ಪಾಠದ ಪ್ರಕಾರ ಇದು– ಸತ್ತತ್ತ್ವ] 7. ಬ್ರಹ್ಮತರ್ಕ [ಛಾಂ.ಉ.ಭಾ. 7-1-16 ● ಬೃ.ಉ.ಭಾ. 3-2-2 ● ಭಾ.ತಾ.ನಿ. 2-3-24 ● ಬ್ರ.ಸೂ.ಭಾ. 4-3-5 ● ಭಾ.ತಾ.ನಿ. 7-15-5] 8. ತತ್ತ್ವ ನಿರ್ಣಯ [ಭಾ.ತಾ.ನಿ. 3-7-9 ಭಾ.ತಾ.ನಿ. 4-4-29] 9. ಮಹಾಮೀಮಾಂಸಾ [ಬೃ.ಉ.ಭಾ. 5-4-9 ● ಬೃ.ಉ.ಭಾ. 5-9-7] ● ಬೃ.ಉ.ಭಾ. 6-4-2] 10. ಪ್ರಭಂಜನ [ಭಾ.ತಾ.ನಿ. 11-16-13 ● ಬೃ.ಉ.ಭಾ. 3-2-2 ● ಭಾ.ತಾ.ನಿ. 11-14-75 ● ಬೃ.ಉ.ಭಾ. 3-2-3 ● ಭಾ.ತಾ.ನಿ. 11-14-75 ● ಷಟ್.ಉ.ಭಾ. 3-1 ● ಛಾ.ಉ.ಭಾ. 4-1-1 ● ಬೃ.ಉ.ಭಾ. 7-10-1 ● ಛಾಂ.ಉ.ಭಾ. 5-1-12 -ಹೀಗೆ ಪ್ರಭಂಜನ ಒಂಭತ್ತಕ್ಕಿಂತಲೂ ಅಧಿಕ ಬಾರಿ ಉಲ್ಲೇಖಿಗೊಂಡಿದೆ[ 11. ಮಾಹಾತ್ಮ್ಯ [ಭಾ.ತಾ.ನಿ. 11-15-14 ● ಛಾಂ.ಉ.ಭಾ. 1-3-7] 12. ನಾರಾಯಣೀಯ [ಬೃ.ಉ.ಭಾ. 4-2-3] 13. ಬ್ರಹ್ಮಸಾರ [ತಲ.ಉ.ಭಾ. 5-2 ● ಐ.ಉ.ಭಾ. 2-2-6-1] 14. ಪ್ರಾಥಮ್ಯ [ಭಾ.ತಾ.ನಿ. 11-24-7 ● ತೈ. ಉ.ಭಾ. 1-14] 15. ವಾಯುಪ್ರೋಕ್ತ [ಬ್ರ.ಸೂ.ಭಾ. 2-4-14 ● ಬ್ರ.ಸೂ.ಭಾ.2-4-7 ● ಬ್ರ.ಸೂ.ಭಾ. 2-4-13] 16. ಪ್ರವೃತ್ತ [ಬೃ.ಉ.ಭಾ. 6-1-4 ● ಬೃ.ಉ.ಭಾ. 6-3-36] 17. ಸಂಧಾನ [ಬೃ.ಉ.ಭಾ. 7-14-1] 18. ವೈಭವ [ಬೃ.ಉ.ಭಾ. 3-2-3] 19. ಪ್ರಕೃಷ್ಟ [ಬೃ.ಉ.ಭಾ. 3-2-3] 20. ಪ್ರಕಾಶಿಕಾ ಭಾಗ. ತಾ.ನಿ. 7-2-45 ● ಬೃ.ಉ.ಭಾ. 7-19-11] 21. ಮಾನಸ [ಛಾಂ.ಉ.ಭಾ. 1-3-8] 22. ಪ್ರಾಭವ [ಛಾಂ.ಉ.ಭಾ. 5-1-10] 23. ಪವಮಾನ [ಬೃ.ಉ.ಭಾ. 8-1-9] 24. ಪ್ರಧ್ಯಾನ [ಛಾಂ.ಉ.ಭಾ. 1-2-1] 25. ಸದ್ಧ್ಯಾನ [● ಛಾಂ.ಉ.ಭಾ. 1-3-4] 26. ಮುಕ್ತವಿವೇಕ [ಅಥ.ಉ.ಭಾ. 4-1-7] 27. ನಾರಾಯಣಾಧ್ಯಾತ್ಮ [ಭಾ.ತಾ.ನಿ. 1-15-4]

**೫. ತಾಂತ್ರಿಕ ಗ್ರಂಥಗಳು :** 1. ದತ್ತಾತ್ರೇಯಯೋಗ [ಭಾ.ತಾ.ನಿ. 27-29-11] 2. ಅರ್ಧನಾರೀ ನಾರಾಯಣತಂತ್ರ [● ಐ.ಉ.ಭಾ. 2-2-7-4 ● ಐ.ಉ.ಭಾ. 2-2-7-6] 3. ತಂತ್ರಮಾಲಾ [ಬೃ.ಉ.ಭಾ. 7-11-1 ● ಭಾ.ತಾ.ನಿ. 6-17-13] 4. ಕರ್ಮಾನುಪೂರ್ವೀ [● ಛಾಂ.ಉ.ಭಾ. 5-1-11] 5. ಬೃಹತ್ತಂತ್ರ [● ಬ್ರ.ಸೂ.ಭಾ. 4-3-6 ● ಬ್ರ.ಸೂ.ಭಾ. 3-3-38] 6. ಪರ್ಯಂಕೋಪಾಸನಾ [● ಛಾಂ.ಉ.ಭಾ. 8-1-10]

**೬. ಶಬ್ದಶಾಸ್ತ್ರೀಯಗ್ರಂಥಗಳು :** 1. ಶಬ್ದನಿರ್ಣಯ [ಛಾ.ಉ.ಭಾ. 1-1-1] 2. ಶಬ್ದತತ್ತ್ವ [ಬೃ.ಉ.ಭಾ. 3-5-5 ● ಐ.ಉ.ಭಾ. 3-6-1-1]

**೭. ಮಹಾಭಾರತತಾತ್ಪರ್ಯನಿರ್ಣಯ :** ಹೀಗೆ ನಾಮೋಲ್ಲೇಖದೊಂದಿಗೆ ಉದಾಹೃತಗಳಾದ ಸುಮಾರು ಎಪ್ಪತ್ತೈದು ಪ್ರಮಾಣಗ್ರಂಥಗಳ ಪ್ರಮಾಣವಚನಗಳಲ್ಲದೆ, ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಸುಮಾರು ೧೪ ಮಾತುಗಳನ್ನು ಮುಖ್ಯಪ್ರಾಣನ ಬಗ್ಗೆ ಉಲ್ಲೇಖಿಸಲಾಗಿದೆ.

ಮಹಾಭಾರತತಾತ್ಪರ್ಯನಿರ್ಣಯದ ೧. 1-14 ೨. 1-73,74 ೩. 2-35 ೪. 2-124 ೫. 2-126 ೬. 2-140,141 ೭. 2-148 ೮. 2-150....154 ೯. 2-156 ೧೦. 2-170 ೧೧. 3-10 ೧೨. 3-23,24 ೧೩. 3-74 ೧೪. 32-132 –ಹೀಗೆ ಉಲ್ಲೇಖಿಸಲ್ಪಟ್ಟಿರುವ ಇವುಗಳಲ್ಲಿ ಹೆಚ್ಚಿನವು ಯಾವುದೋ ಪ್ರಮಾಣ ಗ್ರಂಥಗಳಿಗೆ ಸೇರಿದ ಮಾತುಗಳೇ ಆಗಿರುವವೆಂದು ಅವುಗಳನ್ನೂ ಇಲ್ಲಿ 'ಪ್ರಾಣಮೂಲ'ದ ಆಕರಗ್ರಂಥಗಳಿಗೆ ಸಂಬಂಧಿಸಿದವುಗಳನ್ನಾಗಿ ಪರಿಗಣಿಸಿ ಉಲ್ಲೇಖಿಸಲಾಗಿದೆ.

'ರುದ್ರಾದಿಗಳಿಗಿಂತ ಎತ್ತರದಲ್ಲಿರುವ ಮುಖ್ಯಪ್ರಾಣನ ಹಾಗೂ ಅವನ ಅವತಾರ ತ್ರಯದ ಮೇಲೆ ಬೆಳಕುಚೆಲ್ಲಹೊರಟಿರುವ ಈ ವಿಭಾಗದಲ್ಲಿ ಮುಖ್ಯಪ್ರಾಣನ ಸ್ವರೂಪ ಹಾಗೂ ಸ್ವರೂಪಕ್ಕೆ ಸಂಬಂಧಿಸಿದಂತೆ ಕೆಲವು ವಿಚಾರಗಳು –ಇವನ್ನು ಪರಿಚಯಿಸುವ ೪೪ ಪ್ರಮಾಣಗಳನ್ನು ಉಲ್ಲೇಖಿಸಲಾಗಿದ್ದು ಇವುಗಳಲ್ಲಿ ೨೧ ಗ್ರಂಥದ ಹೆಸರಿನೊಂದಿಗೆ ಉಲ್ಲೇಖಿಸಲಾದ ಪ್ರಮಾಣಗಳಾದರೆ, ೨೩ ಪ್ರಮಾಣಗಳು ಆಕರಗ್ರಂಥದ ಹೆಸರಿನ ಉಲ್ಲೇಖವಿಲ್ಲದೆ ಉದಾಹೃತಗಳಾದವು.''

## ಮುಖ್ಯಪ್ರಾಣನ ಸ್ವರೂಪ

ಋಗ್ವೇದದ ಬಳಿತ್ಥಾಸೂಕ್ತ ಮುಖ್ಯಪ್ರಾಣನ ಸ್ವರೂಪವನ್ನೂ, ಕೆಲವು ಅಸಾಧಾರಣ ಗುಣಗಳನ್ನೂ, ಮೂರು ಅವತಾರಗಳನ್ನೂ ಅವತಾರಗಳಲ್ಲಿ ನಡೆಸಿದ ಕೆಲವು ಅಸಾಧಾರಣ ಸಾಧನೆಗಳನ್ನೂ ಸಂಗ್ರಹಿಸಿ, ಪ್ರಸ್ತುತಪಡಿಸುತ್ತಿದ್ದು, ಶ್ರೀಮುಖ್ಯಪ್ರಾಣನ ಬಗೆಗೆ ಪ್ರಮುಖ ಪ್ರಮಾಣವೆನಿಸಿದೆ. ಆದುದರಿಂದ ಶ್ರೀ ಮಧ್ವರು ತಮ್ಮ ಪ್ರಮುಖ ಗ್ರಂಥಗಳ ಉಪ ಸಂಹಾರದಲ್ಲಿ ಬಳಿತ್ಥಾಸೂಕ್ತದ ಛಾಯಾನುವಾದದಂತಿರುವ ಮೂರು ಪ್ರಮಾಣಗಳನ್ನು ಉಲ್ಲೇಖಿಸುವರು. ಅವುಗಳಲ್ಲಿ ಒಂದು 'ಸದ್ಭಾವ'. ಮುಖ್ಯಪ್ರಾಣನನ್ನು ಪ್ರಸ್ತುತಪಡಿಸುವ ಅದರ ಮಾತುಗಳು ಹೀಗಿವೆ– 'ಹನ ಹಿಂಸಾಗತ್ಯೋಃ' ಎಂಬ ಧಾತುವಿನಿಂದ ನಿಷ್ಪನ್ನವಾದ ಹನಶಬ್ದ ಹಿಂಸೆ ಎಂಬ ಅರ್ಥದಲ್ಲಿ ಹೇಗಿದೆಯೋ ಹಾಗೆಯೇ ಗತಿ ಎಂಬ ಅರ್ಥದಲ್ಲಿ ಅಂದರೆ ತಿಳಿವಳಿಕೆ ಎಂಬ ಅರ್ಥದಲ್ಲೂ ಇದೆ. ಆದುದರಿಂದ ಹನೂಮಾನ್ ಎಂಬ ಹೆಸರು ತಿಳಿವಳಿಕೆ ಉಳ್ಳವನೆಂಬ ಅರ್ಥವನ್ನೇ ತಿಳಿಸುವುದು. ಬಳಿತ್ಥಾಸೂಕ್ತದ 'ಮತಿ' ಶಬ್ದವು ಅತ್ಯಂತ ತಿಳಿವಳಿಕೆ ಉಳ್ಳವನೆಂಬ ಅಭಿಪ್ರಾಯದಲ್ಲಿಯೇ ಹನೂಮಂತನನ್ನು ತಿಳಿಸಿಕೊಡು ವುದು. ಬಲ, ಜ್ಞಾನ, ಸಹಸ್, ಓಜಸ್, ಭರ್ಗಸ್ ಮುಂತಾದ ಗುಣಗಳಿಂದ ಸಾಗರದಂತೆ ಇರುವ ಅವನು ಸತ್ಯವನ್ನೇ ನುಡಿಯುವ ಶ್ರೀರಾಮಚಂದ್ರನ ಸಂದೇಶವನ್ನು ಸೀತಾದೇವಿಗೆ ತಲುಪಿಸಿರುವನು. ಮುಖ್ಯ ಪ್ರಾಣನ ಎರಡನೇ ಅವತಾರ ಭೀಮ, ಪ್ರಮಾಣಗಳಾಗಿದ್ದು 'ಮ' ಎನಿಸುವ ಋಗ್ವೇದಾದಿವಿದ್ಯೆಗಳನ್ನು ಧರಿಸಿರುವುದರಿಂದಲೇ ಅವನು ಭೀಮ ಎನಿಸಿರುವನು. ಋಗ್ವೇದಾದಿ ನಾಲ್ಕು ವೇದಗಳು, ಮಹಾಭಾರತರೂಪದ ಇತಿಹಾಸ, ಪುರಾಣ ಹಾಗೂ ಪಂಚರಾತ್ರ –ಇವು ಏಳು ಮಂಗಳಗಳಾದ ವಿದ್ಯೆಗಳು. ಈ ವಿದ್ಯೆಗಳು ಪ್ರಮಾಣಗಳೆಂಬ ಅರ್ಥದಲ್ಲಿ 'ಮಾತ್ರ'ಗಳೆನಿಸುವವು. ಇವುಗಳಲ್ಲಿ ಯಾವಾಗಲೂ ಮುಳು ಗಿದ್ದು, ಇವುಗಳ ಬಗ್ಗೆ ಪ್ರಭುತ್ವವನ್ನು ಪಡೆದುಕೊಂಡಿದ್ದರಿಂದ ಭೀಮಸೇನನು ಇವುಗಳಲ್ಲಿ ಪವಡಿಸಿರುವವನಾಗಿ ತಿಳಿಸಲ್ಪಟ್ಟಿರುವನು. 'ಮಧು' ಎಂದರೆ ಆನಂದ. 'ವ' ಎಂದರೆ

ತೀರ್ಥ–ಶಾಸ್ತ್ರ. ಆನಂದಕರ ಶಾಸ್ತ್ರವನ್ನು ನೀಡುವ ಪ್ರಯುಕ್ತ 'ಆನಂದತೀರ್ಥ' ಎನಿಸಿರುವಂತೆಯೇ 'ಮಧ್ವ' –ಎನಿಸಿದೆ ಮುಖ್ಯ ಪ್ರಾಣನ ಮೂರನೆಯ ಅವತಾರ. ಬಳಿತ್ಥಾಸೂಕ್ತದಲ್ಲಿ ಮಹಾತ್ಮನಾದ ವಾಯುದೇವನ ಮೂರು ರೂಪಗಳು ಪ್ರತಿಪಾದಿಸಲ್ಪಟ್ಟಿದ್ದು, ಇವುಗಳನ್ನು ಯಾರು ಬಲ್ಲರೋ ಅವರು ಸಮಗ್ರ ವೇದಜ್ಞರೆನಿಸುವರು. ಮುಖ್ಯಪ್ರಾಣನ ಅನುಗ್ರಹದಿಂದ ಅವರು ತತ್ವಜ್ಞಾನಿಗಳೂ ಆಗಬಲ್ಲರು.1

- ಸೀತೆಗೆ ತನ್ನ ಅಭಿಜ್ಞಾಪಕವಾದ ಉಂಗುರವನ್ನು ತಲುಪಿಸಬೇಕೆಂಬ ಶ್ರೀರಾಮಚಂದ್ರನ ಮಾತುಗಳನ್ನು ಈಡೇರಿಸಿದ, ಯಾವಾಗಲೂ ಶ್ರೀರಾಮಚಂದ್ರನ ಸೇವೆಗಾಗಿ ಸಿದ್ಧನಾಗಿ ಅವನ ಬಳಿಯಲ್ಲೇ ವಿನೀತನಾಗಿ ಇರುವ 'ಹನೂಮಾನ್' ವಾಯುದೇವನ ಪ್ರಥಮಾವತಾರ ಎಂದು ತಿಳಿಯಬೇಕು. ಬಹು ಅನ್ನವನ್ನು ಭುಂಜಿಸುವ, ದುಷ್ಟರಾದ ದುರ್ಯೋಧನಾದಿಗಳ ಸೇನೆಯನ್ನು ಪುಡಿಗೈದ ಭೀಮನು ವಾಯುದೇವನ ಎರಡನೆಯ ಅವತಾರ. ಆನಂದತೀರ್ಥ ಎಂಬ ಹೆಸರುಳ್ಳ, ಪೂರ್ಣಪ್ರಜ್ಞ ಎಂದು ಹೇಳಲ್ಪಟ್ಟವರು ವಾಯುದೇವನ ಮೂರನೆಯ ಅವತಾರ ಎಂದು ಪರಿಗಣಿತವಾಗಿರುವರು. ದಶ

---

1. ಹನಶಬ್ದೋ ಜ್ಞಾನವಾಚೀ ಹನೂಮಾನ್ ಮತಿಶಬ್ದಿತಃ ।
ರಾಮಸ್ಯ ಹ್ಯೃತರೂಪಸ್ಯ ವಾಚೋ ನೇತಾ ಗುಣೋದಧಿಃ ।
ಭೃತಮೋ ಭೀಮ ಇತ್ಯುಕ್ತೋ ವಾಚೋ ಮಾ ಮಾತರಃ ಸ್ಮೃತಾಃ ।
ಋಗಾದ್ಯಾ ಇತಿಹಾಸಶ್ಚ ಪುರಾಣಂ ಪಂಚರಾತ್ರಕಮ್ ।
ಪ್ರೋಕ್ತಾಃ ಸಪ್ತಶಿವಾಸ್ತತ್ರ ಶಯೋ ಭೀಮಸ್ತತಃ ಸ್ಮೃತಃ ।
ಮಧ್ವಿತ್ಯಾನಂದ ಉದ್ದಿಷ್ಟೋ ವೇತಿ ತೀರ್ಥಮುದಾಹೃತಮ್ ।
ಮಧ್ವ ಆನಂದತೀರ್ಥಃ ಸ್ಯಾತ್ ತೃತೀಯಾ ಮಾರುತೀ ತನುಃ ।
ಇತಿ ಸೂಕ್ತಗತಂ ರೂಪತ್ರಯಮೇತನ್ಮಾಹಾತ್ಮನಃ ।
ಯೋ ವೇದ ವೇದವಿತ್ ಸ ಸ್ಯಾತ್ ತತ್ವವಿತ್ ತತ್ಪ್ರಸಾದತಃ ॥
––*ಇತಿ ಸದ್ಭಾವೇ (ಛಾಂದೋಗ್ಯೋಪನಿಷದುಪಸಂಹಾರೇ)*

* ಬಳಿತ್ಥಾಸೂಕ್ತದ ವ್ಯಾಖ್ಯಾನುವಾದದಂತಿರುವ ಈ ಪ್ರಮಾಣ ತೈತ್ತಿರೀಯೋಪನಿಷದ್ಭಾಷ್ಯ, ಬೃಹದಾರಣ್ಯಕೋಪನಿಷದ್ಭಾಷ್ಯ, ಐತರೇಯೋನಿಷದ್ಭಾಷ್ಯ –ಇವುಗಳ ಉಪಸಂಹಾರದಲ್ಲೂ ಉದಾಹರಿಸಲ್ಪಟ್ಟಿದೆಯಾದರೂ 'ಇತಿ ಸದ್ಭಾವೇ' ಎಂದು ಇದರ ಮೂಲ ಆಕರದ ಹೆಸರಿನ ಉಲ್ಲೇಖ ಛಾಂದೋಗ್ಯೋಪನಿಷದ್ಭಾಷ್ಯದ ಉಪಸಂಹಾರದಲ್ಲಷ್ಟೇ ಮಾಡಲಾಗಿದೆ.

* 'ಆನಂದತೀರ್ಥ' 'ಮಧ್ವ' –ಎಂಬ ಹೆಸರುಗಳು ಶ್ರೀಮದಾಚಾರ್ಯರ ಶಾಸ್ತ್ರದ ಅಧ್ಯಯನಾದಿಗಳು ಆನಂದಕ್ಕೆ ಪ್ರಯೋಜಕವಾದವುಗಳೆಂದು ಪ್ರತಿಪಾದಿಸುತ್ತಿದ್ದು, ಆ ಆನಂದ ಎಂದರೆ ಬರೇ ಸುಖ ಎಂಬ ಅರ್ಥ ಅಲ್ಲ. ಮತ್ತೆ 'ಅನನ್ಯಹೇತುಕಂ ಸಾಕ್ಷಾದ್ ಭಗವದ್‌ಭಕ್ತಿರೂಪಕಮ್ । ಸುಖಮಾನಂದ ಇತ್ಯುಕ್ತೋ......' –ಎಂದು ಋಗ್ವೇದ ಸಂಹಿತೆ (ಐ.ಉ.ಭಾ. 2-8-4-8) ತಿಳಿಸಿರುವಂತೆ ಬಾಹ್ಯವಿಷಯಪದಾರ್ಥಗಳಿಂದ ಉಂಟಾಗಿದ್ದಾಗಿರದೆ, ಸ್ವರೂಪಾತ್ಮಕವಾಗಿದ್ದು, ಭಗವದ್‌ಭಕ್ತಿಸ್ವರೂಪವಾದ, ಮೋಕ್ಷದ ಸುಖವೇ ಆನಂದ ಎನಿಸಿದೆ.

ಎಂದರೆ ಸರ್ವ. 'ಸರ್ವ' ಎಂದರೆ ಪೂರ್ಣ. 'ಪ್ರಜ್ಞಾ' ಎಂದರೆ ತಿಳಿವಳಿಕೆ. ಪೂರ್ಣ ಪ್ರಮಾಣದ ತಿಳಿವಳಿಕೆವುಳ್ಳವರಾದುದರಿಂದಲೇ ಶ್ರೀ ಮಧ್ವಾಚಾರ್ಯರು ಅನ್ವರ್ಥಕ ವಾಗಿಯೇ 'ಪೂರ್ಣಪ್ರಜ್ಞ' ಎಂದು ಕರೆಸಿಕೊಳ್ಳಲ್ಪಡುವರು. ಪೂರ್ಣಪ್ರಜ್ಞರ ಪ್ರಜ್ಞೆಯ ಪೂರ್ಣತೆ ಎಂದರೆ ಜಗತ್ತೇ ಮುಂತಾದ ಅಪರತತ್ವಗಳ ವಿಷಯದಲ್ಲಿ ಆಲೋಚನೆ ನಡೆಸಿದಲ್ಲಿ ಪ್ರತಿಯೊಂದನ್ನೂ ಗ್ರಹಿಸುವಿಕೆ.

ಕಲಿಯುಗದಲ್ಲಿ ಜಗತ್ತು ಮಾಯಾಮಯ. ಆದುದರಿಂದಲೇ ನಿರಾಧಾರ. ಆದುದ ರಿಂದಲೇ ಒಡೆಯನೊಬ್ಬನಿಂದ ನಿಯಂತ್ರಿಸಲ್ಪಡುವಂತಹದ್ದಲ್ಲ –ಎಂದು ವಾದಿಸುವವರ ವಾದದ ದುಷ್ಪ್ರಭಾವದಿಂದಾಗಿ ಮರೆಮಾಡಲ್ಪಟ್ಟಿದ್ದ ಶ್ರೀವಿಷ್ಣುತತ್ವದ ಸರ್ವೋತ್ತಮತ್ವವನ್ನು ಶಾಸ್ತ್ರದ ಮಾತುಗಳಿಂದ ಚೆನ್ನಾಗಿ ವಿಮರ್ಶೆ ಮಾಡಿ ಪ್ರಸ್ತುತಪಡಿಸಿರುವವರು ವಾಯು ದೇವನ ಮೂರನೆಯದಾದ ಮಧ್ವಾವತಾರ. ನಿರ್ಗುಣವಾದದಿಂದಾಗಿ ಅಡಗಿಸಲ್ಪಟ್ಟ ಭಗ ವಂತನ ಗುಣಗಳನ್ನು ಇವರಿಂದಾಗಿ ರುದ್ರಾದಿಗಳೂ, ಇತರ ಜ್ಞಾನಿಗಳೂ ತಿಳಿದುಕೊಳ್ಳು ವಂತಾಯಿತು. ಈ ಮೂರು ರೂಪಗಳು ತ್ರೇತಾಯುಗ, ದ್ವಾಪರಯುಗ ಹಾಗೂ ಕಲಿ ಯುಗ –ಹೀಗೆ ಈ ವಾಯುಯುಗಗಳಲ್ಲಿ ಕ್ರಮವಾಗಿ ಅವತರಿಸಿರುವವರು. ಈ ಮೂರು ರೂಪಗಳಿಗೂ ಸರ್ವೇಶ್ವರನಾದ, ಸ್ವಯಂಭೂ ಬ್ರಹ್ಮ ಎನಿಸುವ ಶ್ರೀವಿಷ್ಣುವು ಮುಖ್ಯ ಪ್ರೇರಕನಾಗಿರುವನು.[2]

---

2. ಸಾಧಕೋ ರಾಮವಾಕ್ಯಾನಾಂ ತತ್ಸಮೀಪಗತಃ ಸದಾ ।
ಹನೂಮಾನ್ ಪ್ರಥಮೋ ಜ್ಞೇಯೋ ಭೀಮಸ್ತು ಬಹುಭುಕ್ ಪಿತೋಃ ।
ಪೃತನಾಕ್ಷಯಕಾರೀ ಚ ದ್ವಿತೀಯಸ್ತು ತೃತೀಯಕಃ ।
ಪೂರ್ಣಪ್ರಜ್ಞಸ್ತಥಾಽಽನಂದತೀರ್ಥನಾಮಾ ಪ್ರಕೀರ್ತಿತಃ ।
ದಶೇತಿ ಸರ್ವಮುದ್ದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೇ ।
ಪ್ರಜ್ಞಾ ಪ್ರಮತಿರುದ್ದಿಷ್ಟಾ ಪೂರ್ಣಪ್ರಜ್ಞಸ್ತತಃ ಸ್ಮೃತಃ ।
ಆಸಮಂತಾತ್ ಪತಿತ್ವೇ ತು ಗೂಢಂ ಕಲಿಯುಗೇ ಹರಿಮ್ ।
ಅಸತ್ಯಮಪ್ರತಿಷ್ಠಂ ಚ ಜಗದೇತದನೀಶ್ವರಮ್ ।
ವದದ್ಭಿರ್ಗೂಹಿತಂ ಸಂತಂ ತೃತೀಯೋಽಸುರ್ಮಥಾಯತಿ ।
ಯೇನ ವಿಷ್ಣೋಸ್ತು ವರ್ಪಾಖ್ಯಾನ್ ಗುಣಾನಜ್ಞಾಸಿಷುಃ ಪರಾನ್ ।
ಈಶಾನಾಸಃ ಸೂರಯಶ್ಚ ನಿಗೂಢಾನ್ ನಿರ್ಗುಣೋಕ್ತಿಭಿಃ ।
ತ್ರೇತಾಯಾಂ ದ್ವಾಪರೇ ಚೈವ ಕಲೌ ಚೈತೇ ಕ್ರಮಾತ್ತ್ರಯಃ ।
ಏತೇಷಾಂ ಪರಮೋ ವಿಷ್ಣುಃ ನೇತಾ ಸರ್ವೇಶ್ವರೇಶ್ವರಃ ।
ಸ್ವಯಂಭುಬ್ರಹ್ಮಸಂಜ್ಞೋಽಸೌ ಪರಸ್ಮೈ ಬ್ರಹ್ಮಣೇ ನಮಃ ॥

* ಬಳಿತ್ಥಾಸೂಕ್ತದ ಕೆಲವು ಮಾತುಗಳ ವ್ಯಾಖ್ಯಾನರೂಪದಲ್ಲಿರುವ ಈ ಪ್ರಮಾಣ ತೈತ್ತಿರೀಯೋಪನಿಷದ್ಭಾಷ್ಯ, ಬೃಹದಾರಣ್ಯಕೋಪನಿಷದ್ಭಾಷ್ಯ, ಐತರೇಯೋಪನಿಷದ್ಭಾಷ್ಯ –ಇವುಗಳ ಉಪಸಂಹಾರದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಎಲ್ಲೂ ಯಾವ ಆಕರಗ್ರಂಥಕ್ಕೆ ಸೇರಿದ ಮಾತೆಂಬುದು ಉಲ್ಲೇಖಿಸಲ್ಪಟ್ಟಿಲ್ಲ.

ಯಾರ ಅಲೌಕಿಕಗಳಾದ ಮೂರು ರೂಪಗಳು ಬಳಿತ್ಥಾಸೂಕ್ತವೇ ಮುಂತಾದ ವೇದದ ಮಾತುಗಳಲ್ಲಿ ಚೆನ್ನಾಗಿ ನಿರೂಪಿತವಾಗಿವೆಯೋ, ಅಂತಹ ವಾಯುದೇವನ ಮೂಲ ರೂಪವು ಬಲಾತ್ಮಕವಾದುದು. ಜ್ಞಾನದಿಂದ ತುಂಬಿರುವುದು, ಸಕಲಜೀವರ ಪೋಷಣೆಗಾಗಿ ಎಲ್ಲರ ಹೃದಯದಲ್ಲಿ ನೆಲೆಸಿರುವಂತಹದ್ದು. ಸಕಲ ಜಗತ್ತಿನಿಂದ ಪೂಜ್ಯವಾದುದು. ಈ ಬಗೆಯ ಮೂಲರೂಪದ ವಾಯುದೇವನು ಭಗವಂತನಿಂದ ಪ್ರೇರಿತನಾಗಿ ಮೂಲ ರೂಪದಂತೆಯೇ ಇರುವ ಅವತಾರರೂಪಗಳನ್ನು ತಾಳಿರುವನು. ಆ ರೂಪಗಳಲ್ಲಿ ಮೊದಲನೆಯದಾದ ಆಂಜನೇಯರೂಪವು ರಾಮನ ಸಂದೇಶವನ್ನು ಸೀತೆಗೆ ತಲುಪಿಸಿದೆ. ಹಾಗೆಯೇ ರಾಮನ ಕುರಿತಾದ ರಾಮಾಯಣಾದಿಗಳ ಮಾತುಗಳನ್ನು ಸನಕಾದಿಗಳಿಗೆ ಉಪದೇಶಿಸಿದೆ. ವಾಯುದೇವನ ಎರಡನೆಯದಾದ ಭೀಮರೂಪವು ದುರ್ಯೋಧನಾದಿ ದುಷ್ಟರ ಸೇನೆಯನ್ನು ನಾಶಗೈದಿದೆ. ಮೂರನೆಯ ಮಧ್ವರೂಪವು ಭಗವಂತನ ಪ್ರೀತಿಗಾಗಿ ಈ ಭಾಷ್ಯವನ್ನು ರಚಿಸಿದೆ.3

---

* 'ಯೋಗಿಜ್ಞಾನಂ ಋಜೂನಾಂ..... ಅನ್ಯತ್ರ ಆಲೋಚನೇ ಸರ್ವವಿಷಯಮ್' -ಎಂಬ ಪ್ರಮಾಣಲಕ್ಷಣದ ಮಾತು ತಿಳಿಸಿರುವಂತೆ ಋಜುಯೋಗಿಗಳಾದ ಪೂರ್ಣಪ್ರಜ್ಞರು ಸರ್ವಜ್ಞರೆಂದರೆ ಅಪರತತ್ತ್ವದ ವಿಷಯದಲ್ಲಿ ಎಲ್ಲವನ್ನೂ ಬಲ್ಲವರೆಂದಷ್ಟೇ ಅರ್ಥ.

3. ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ
ಬಟ್‌ತದ್ ದರ್ಶತಮಿತ್ಥಮೇವನಿಹಿತಂ ದೇವಸ್ಯ ಭರ್ಗೋ ಮಹತ್ ।
ವಾಯೋರಾಮುವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುಃ
ಮಧ್ವೋ ಯತ್ತು ತೃತೀಯಕಂ ಕೃತಮಿದಂ ಭಾಷ್ಯಂ ಹಿ ತೇನ ಪ್ರಭೌ ॥

* ಬಳಿತ್ಥಾಸೂಕ್ತದ ಕೆಲವು ಮಾತುಗಳಿಗೆ ವ್ಯಾಖ್ಯಾನದಂತಿರುವ ಈ ಪದ್ಯ ಮಹಾಭಾರತ ತಾತ್ಪರ್ಯನಿರ್ಣಯ, ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನ, ನ್ಯಾಯವಿವರಣ, ತೈತ್ತಿರೀಯೋಪನಿಷದ್ಭಾಷ್ಯ, ಛಾಂದೋಗ್ಯೋಪನಿಷದ್ಭಾಷ್ಯ, ಬೃಹದಾರಣ್ಯಕೋಪನಿಷದ್ಭಾಷ್ಯ, ಐತರೇಯೋಪನಿಷದ್ಭಾಷ್ಯ, ಗೀತಾಭಾಷ್ಯ, ಗೀತಾತಾತ್ಪರ್ಯ -ಮುಂತಾದ ಹೆಚ್ಚಿನ ಪ್ರಮುಖ ಕೃತಿಗಳ ಉಪಸಂಹಾರದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಇದು ತನ್ನ ಮೊದಲ ಮೂರು ಚರಣಗಳಲ್ಲಿ ಏಕರೂಪವಾಗಿ ಇರುವುದರಿಂದ ಯಾವುದೋ ಗ್ರಂಥದ ಮಾತಾಗಿ ಉದಾಹೃತವಾಗಿದೆ ಎಂದು ಊಹಿಸಲು ಅವಕಾಶವಿದೆ. ಆಚಾರ್ಯರ ಸ್ವಂತ ರಚನೆಯಾಗಿದ್ದರೆ ಬೇರೆ ಬೇರೆ ಕೃತಿಯಲ್ಲಿ ಬೇರೆ ಬೇರೆ ರೂಪದಿಂದಲೇ ಪ್ರಸ್ತುತಪಡಿಸಲ್ಪಡುತ್ತಿತ್ತು ತಾನೇ? ಈ ಪದ್ಯದ ನಾಲ್ಕನೇ ಚರಣದಲ್ಲಿ ಮಾತ್ರ ಆಯಾ ಕೃತಿಗೆ ಸಂಬಂಧಿಸಿದಂತೆ ಸ್ವಲ್ಪ ಬದಲಾವಣೆಯೂ ಕಂಡುಬರುವುದು. '.....ಮಧ್ವೋ ಯತ್ತು ತೃತೀಯಮೇತದಮುನಾ ಭಾಷ್ಯಂ ಕೃತಂ ಕೇಶವೇ' [ಸೂತ್ರಭಾಷ್ಯದಲ್ಲಿ] '....ಮಧ್ವೋ ಯತ್ತು ತೃತೀಯಕಂ ಕೃತಮಿದಂ ಭಾಷ್ಯಂ ಪರೌ ತೇನ ಹಿ' [ಛಾಂದೋಗ್ಯಭಾಷ್ಯದಲ್ಲಿ] '......ಮಧ್ವೋ ಯತ್ತು ತೃತೀಯಮೇಷ ಹಿ ಕೃತೋ ಗ್ರಂಥೋಽಮುನಾ ಕೇಶವೇ' [ಗೀತಾತಾತ್ಪರ್ಯದಲ್ಲಿ] -ಹೀಗೆ ಆಯಾ ಗ್ರಂಥಕ್ಕನು ಗುಣವಾಗಿ ಅಲ್ಪಸ್ವಲ್ಪ ಪರಿವರ್ತನೆ ಕಂಡುಬರುವುದರಿಂದ ಈ ಪದ್ಯ ಶ್ರೀ ಮಧ್ವರ ಸ್ವಂತ ರಚನೆಯೇ ಆಗಿರಬಹುದೆಂದು ಊಹಿಸಲು ಅವಕಾಶವೂ ಇದೆ. ಬೇರೆ ಗ್ರಂಥಕ್ಕೆ ಸೇರಿದ ಮಾತಿಗೆ ಕೊನೆಯ ಚರಣದಲ್ಲಷ್ಟೇ ಆಯಾ ಕೃತಿಗೆ ಸಂಬಂಧಿಸಿದಂತೆ ಪರಿವರ್ತಿಸಿ

● ಮುಖ್ಯಪ್ರಾಣಪದವಿಗೆ ಯೋಗ್ಯರಾದ ಜೀವರು 'ಪವಮಾನರು' ಎಂದು ಕರೆಸಿಕೊಳ್ಳಲ್ಪಡುವರು. ಆ ಪದವಿಯನ್ನು ಏರಲು ಬೇಕಾದ ಯೋಗ್ಯತೆ ಅವರಲ್ಲಿ ಅನಾದಿಕಾಲದಿಂದಲೂ ಇರುವುದು. ಮೋಕ್ಷದಲ್ಲಿ ತಮ್ಮ ಜೊತೆಯಲ್ಲಿ ಮುಕ್ತರಾದವರಿಗಿಂತೆಲ್ಲ ಉನ್ನತ ಸ್ಥಾನವನ್ನು ಅವರು ಪಡೆಯುವರು. ಮೂವತ್ತೆರಡು ಶಾರೀರಿಕ ಲಕ್ಷಣಗಳಿಂದ ಚೆನ್ನಾಗಿ, ನಿಯತವಾಗಿ ಸಂಪನ್ನರಾಗಿರುವವರು ವಾಯುಪದಕ್ಕೆ ಯೋಗ್ಯರಾಗಿರುವರು.4

"ಋಜುಗಳೆಂದು ಪ್ರಸಿದ್ಧರಾದ ದೇವತೆಗಳು ಚತುರ್ಮುಖನ ಪದವಿಗೆ ಅರ್ಹರಾಗಿರುವವರು. ನೂರು ಜನ್ಮಗಳಲ್ಲಿ ವಿಶೇಷವಾಗಿ ಶ್ರೀಹರಿಯ ಉಪಾಸನೆ ನಡೆಸಿ, ಬಳಿಕ ಬ್ರಹ್ಮನ ಪದವಿಯನ್ನು ಹೊಂದುವರು. ಅಲ್ಲಿಯ ಭೋಗವನ್ನು ಅನುಭವಿಸಿದ ಬಳಿಕ ಲಕ್ಷ್ಮೀದೇವಿಯನ್ನು ಹೊಂದಿ, ಅವಳ ಅನುಮೋದನೆ ಪಡೆದು ಅವಳ ಮೂಲಕ ಪರಮಾತ್ಮನನ್ನು ಹೊಂದುವರು. ಅವನ ಸನ್ನಿಧಾನದಲ್ಲಿಯೇ ವಾಸಮಾಡುವರು. ಅನಾದಿಕಾಲದಿಂದ ಭಕ್ತರಾಗಿರುವ ಅವರು ಜ್ಞಾನಿಗಳು. ಉಳಿದೆಲ್ಲ ಜೀವರಿಗಿಂತ ಜ್ಞಾನಭಕ್ತ್ಯಾದಿಗಳ ವಿಷಯದಲ್ಲಿ ಯಾವಾಗಲೂ ವಿಶಿಷ್ಟರಾಗಿಯೇ ಇರುವವರು. ಈ ತಮ್ಮ ನೂರು ಜನ್ಮಗಳಲ್ಲಿ ವಿಶೇಷವಾಗಿ ಶ್ರೀಹರಿಯ ಉಪಾಸನೆ ನಡೆಸುವರು. ಅದರಿಂದಾಗಿ ತಮ್ಮ ಚತುರ್ಮುಖಪದವಿಯನ್ನು ಹೊಂದಿ ಬಳಿಕ ಮುಕ್ತಿಯನ್ನು ಪಡೆಯುವರು."5

---

* ಪ್ರಸ್ತುತಪಡಿಸಿರುವ ಸಾಧ್ಯತೆಯೂ ಇದೆ. ಆದ್ದರಿಂದ ಕೊನೆಯ ಚರಣದಲ್ಲಷ್ಟೇ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಯಾವುದೋ ಪ್ರಮಾಣಗ್ರಂಥಕ್ಕೆ ಸೇರಿದ ಮಾತನ್ನೇ ಇಲ್ಲಿ ಉಲ್ಲೇಖಿಸಲ್ಪಟ್ಟಿದೆ -ಎಂದೇ ಭಾವಿಸಿ, ಅದನ್ನು ಸರ್ವಮೂಲದ ಆಕರಗ್ರಂಥದ ಪ್ರಮಾಣವನ್ನಾಗಿ ಒಪ್ಪಿಕೊಳ್ಳಲಾಗಿದೆ.

4. ಪವಮಾನಾ ಇತಿ ಪ್ರೋಕ್ತಾ ಮುಖ್ಯವಾಯುತ್ವಯೋಗಿನಃ ।
ಅನಾದಿಕಾಲಸಂಬದ್ಧಾ ಯೋಗ್ಯತಾ ಸಾ ಪ್ರಕೀರ್ತಿತಾ ॥
ಸರ್ವಾಧಿಕ್ಯಾರೋಹಣಂ ತು ತೇಷಾಮೇವ ವಿಮುಕ್ತಿಗಮ್ ।
.......ದ್ವಾತ್ರಿಂಶಲ್ಲಕ್ಷಣೈಃ ಸಮ್ಯಗ್ ಯುಕ್ತಾ ವಾಯುತ್ವಯೋಗ್ಯತಾಃ ।
ನಿಯಮೇನೈವ...... ॥ *– ಮಹಾಸಂಹಿತಾ [ಬೃ.ಉ.ಭಾ. 3-3-28, 29]*

5. ಋಜವೋ ನಾಮ ಯೇ ದೇವಾ ಯೋಗ್ಯಾ ಬ್ರಹ್ಮಪದಸ್ಯ ತು ।
ತ ಏವ ಶತಜನ್ಮಾನಿ ವಿಶೇಷೋಪಾಸಕಾ ಹರೇಃ ॥
ಪ್ರಾಪ್ಯ ಬ್ರಹ್ಮಪದಂ ಪಶ್ಚಾಚ್ಛ್ರಿಯಂ ಪ್ರಾಪ್ಯಾನುಮೋದಿತಾಃ ।
ತಯಾ ತತೋ ಹರಿಂ ಯಾಂತಿ ವಸಂತಿ ಹರಿಸನ್ನಿಧೌ ॥
ಅನಾದಿಕಾಲಭಕ್ತಾಶ್ಚ ಜ್ಞಾನಿನಸ್ತೇ ನ ಸಂಶಯಃ ।
ವಿಶಿಷ್ಟಾ ಜ್ಞಾನಭಕ್ತ್ಯಾದೌ ಸರ್ವಜೀವನಿಕಾಯತಃ ॥
ಸರ್ವದಾSಪಿ ವಿಶೇಷೇಣ ಶತಜನ್ಮ ಪ್ರಯತ್ನತಃ ।
ಸ್ವಪದಪ್ರಾಪ್ತಿರುದ್ದಿಷ್ಟಾ ತತೋ ಮುಕ್ತಿರವಾಪ್ಯತೇ ॥
*– ಪಾದ್ಮಕಲ್ಪೇ [ಭಾ.ತಾ.ನಿ. 4-23-29]*

- 'ವಾಯುದೇವನು ಧರ್ಮ, ಜ್ಞಾನ, ವೈರಾಗ್ಯ ಹಾಗೂ ಸಾಮರ್ಥ್ಯ –ಈ ನಾಲ್ಕು ಗುಣಸ್ವರೂಪಿಯಾಗಿರುವವನು.6
- ವಿಷ್ಣುವಿನ ಹಾಗೆಯೇ ವಾಯುವಿನ ರೋಮ, ಚರ್ಮ, ಮಾಂಸ, ನರ, ಎಲುಬು, ಮಜ್ಜೆ –ಇವುಗಳಲ್ಲಿ ಉಷ್ಣಿಕ್‌ಛಂದಸ್ಸಿನ ಗಾಯತ್ರೀಛಂದಸ್ಸಿನ ಹೀಗೆಯೇ ಬೇರೆ ಬೇರೆ ಛಂದಸ್ಸಿನ ಮಂತ್ರಗಳು ಆಶ್ರಿತವಾಗಿವೆ. ವಿಷ್ಣುವಿನ ಹಾಗೆಯೇ ಮುಕ್ತವಾಯುವಿನ ರೋಮಾದಿಗಳು ಜ್ಞಾನಾತ್ಮಕವಾದವು. ಜ್ಞಾನಾತ್ಮಕವಾದ ಅವರ ಆತ್ಮದಲ್ಲಿ ರೋಮಚರ್ಮಾದಿಗಳ ಭೇದವೂ ಇಲ್ಲ. ಆದ್ದರಿಂದ ಹರಿವಾಯುಗಳು ವೇದಮಂತ್ರ ಗಳಿಂದ ಮುಚ್ಚಲ್ಪಟ್ಟಿರುವರು. ಹೀಗೆ ಮುಚ್ಚಿರುವುದರಿಂದಲೇ ವೇದಗಳಿಗೆ 'ಛಂದಸ್' ಎಂಬ ಹೆಸರು.7

ವಿಷ್ಣುವಿನ ಭಕ್ತರಲ್ಲಿ ಅವರ ತಾರತಮ್ಯಾನುಸಾರವಾಗಿ ಅಳವಡಿಸಿಕೊಳ್ಳಲಾಗುವ ಭಕ್ತಿ ಮೋಕ್ಷಕ್ಕೆ ಕಾರಣವಾಗುವುದು..... ಆದುದರಿಂದ ಶ್ರುತಿಯಲ್ಲಿ ಪ್ರಸ್ತುತವಾದ ದೇವತಾ ತಾರತಮ್ಯವನ್ನು ತಿಳಿಸುವೆನು.... ಋಗ್ವೇದಾಭಿಮಾನಿನಿಯಾದ ಸರಸ್ವತಿಗಿಂತ ಸಾಮವೇದಾಭಿ ಮಾನಿ ವಾಯುದೇವ ಶ್ರೇಷ್ಠನು; ಅವನಿಗಿಂತಲೂ ಶ್ರೇಷ್ಠನು ಶ್ರೀವಿಷ್ಣು.....8

ಪರಮಕ್ಕಿಂತ ಉತ್ಕೃಷ್ಟ ಪರರ್ಧ. ಅದಕ್ಕಿಂತ ಉತ್ಕೃಷ್ಟ ಪರಾರ್ಧ.... ಪರ ಮತ್ತು ಪರಮಕ್ಕಿಂತ ಉತ್ಕೃಷ್ಟನಾಗಿರುವ ಮುಖ್ಯಪ್ರಾಣ ಪರಾರ್ಧ.....9

- ವಾಯುದೇವ ಎತ್ತಿನ ರೂಪವುಳ್ಳವನಾಗಿ ಸತ್ಯಕಾಮನಿಗೆ ಉಪದೇಶಿಸಿದನು..... ಋಷಿ ಗಳಿಗಿಂತ ದೇವತೆಗಳು ಉತ್ತಮ ಗುರುಗಳು. ದೇವತೆಗಳಲ್ಲೂ ವಾಯುದೇವ ಉತ್ತಮ ಗುರು. ಅವನಿಗಿಂತಲೂ ಶ್ರೀವಿಷ್ಣು ಉತ್ತಮಗುರು. ಅವನಿಗಿಂತ ಉತ್ತಮಗುರು ಮತ್ತೊಬ್ಬನಿಲ್ಲ.10

---

6. ಧರ್ಮೋ ಜ್ಞಾನಂ ಚ ವೈರಾಗ್ಯಂ ಐಶ್ವರ್ಯಂ ಚತುರಾತ್ಮಕಃ । ವಾಯುರ್ದೇವೋ.... ॥
   *–[ಐ.ಉ.ಭಾ. 1-1-3]*

7. ವಿಷ್ಣೋರ್ವಾಯೋಶ್ಚ ಲೋಮಾದೌ ಛಂದಾಂಸ್ಯೇವಾಶ್ರಿತಾನಿ ಚ ।
   ವಿಷ್ಣೋರ್ವಿಮುಕ್ತವಾಯೋಶ್ಚ ಲೋಮಾದ್ಯಂ ತು ಚಿದಾತ್ಮಕಮ್ ॥
   ಲೋಮಪ್ರಾಣಾದಿಭೇದಶ್ಚ ನೈವ ಕಶ್ಚಿಚ್ಚಿದಾತ್ಮನಿ ।
   ಛನ್ನಶ್ಛಂದೋಭಿರೇವಂ ಸ ಕೇಶವಸ್ತೇನ ಚಾಭಿಧಾ ॥
   ಛಂದಾಂಸೀತ್ಯೇವ ತೇಷಾಂ ಹಿ..... । *–[ಐ.ಉ.ಭಾ. 1-4-16]*

8. .....ತದ್ ಭಕ್ತೇಷು ಕ್ರಮೇಣೈವ ರಮಾದ್ಯೇಷು ತ್ವನಂತರಮ್..... ಅತಸ್ತೇಷಾಂ ಕ್ರಮಂ ವಕ್ಷ್ಯೇ ದೇವಾನಾಂ ಯಃ ಶ್ರುತೌ ಶ್ರುತಃ.... ತಸ್ಮಾತ್ ಸರಸ್ವತೀ ವಾಗ್ಘಿ ಶ್ರೇಷ್ಠಾಸ್ಯಾ ಋಕ್‌ಸ್ವರೂಪಿಣೀ । ಸೈವ ಶ್ರೇಷ್ಠಾ ತತೋ ವಾಯುರ್ವರಿಷ್ಠಃ ಸಾಮನಾಮಕಃ । ......ತತಃ ಶ್ರೇಷ್ಠತಮೋ ವಿಷ್ಣುಃ...... ॥ *– ಸಾರನಿರ್ಣಯೇ [ಛಾಂ.ಉ.ಭಾ. 1-1-1]*

9. ಪರರ್ಧಂ ಪರಮಾದುಚ್ಚಂ ಪರಾರ್ಧಂ ತು ತತೋಽಧಿಕಮ್..... ಪರತಃ ಪರಮಾಚ್ಚೈವ ಪರಾರ್ಧೋ ವಾಯುರೀರಿತಃ..... ॥ *– ಶಬ್ದನಿರ್ಣಯೇ [ಛಾಂ.ಉ.ಭಾ. 1-1-1]*

10. ವಾಯುರ್ವೃಷಭರೂಪಃ ಸನ್..... ಸತ್ಯಕಾಮಾಯ ಹೋಚಿರೇ ।

- ಬಲದೇವತೆಯಾದ ಪ್ರಾಣದೇವ ಅಪರಬ್ರಹ್ಮ. ಜ್ಞಾನಾನಂದಾತ್ಮಕನಾದ, ಗುಣ ಪೂರ್ಣನಾದ ಶ್ರೀಹರಿ ಪರಬ್ರಹ್ಮ..... ಈ ರೀತಿಯಾಗಿ ಪ್ರಾಣ ಹಾಗೂ ಆಕಾಶ ಎನಿಸುವ ಪರಮಾತ್ಮ –ಹೀಗೆ ಇಬ್ಬರು ಬ್ರಹ್ಮರು.11
- 'ಅಗ್ನಿ, ನಾಸಿಕ್ಯವಾಯು ಮತ್ತು ಸೂರ್ಯ ಈ ಮೂವರು ಲೋಕಾಭಿಮಾನಿಗಳಿಗಿಂತ ಶ್ರೇಷ್ಠರಾದರೆ, ಇವರಲ್ಲಿ ಸೂರ್ಯನಿಗಿಂತ ಸಾಮಾಭಿಮಾನಿ ಮುಖ್ಯವಾಯು ಶ್ರೇಷ್ಠನು. ಇವನಿಗಿಂತ 'ಸ್ವಃ' –ಎಂಬ ವ್ಯಾಹೃತಿಪ್ರತಿಪಾದ್ಯ ಕಪಿಲನು ಶ್ರೇಷ್ಠನು.....12
- (ಬ್ರಹ್ಮನ ಉಪಾಸನೆಗೆ ನಾಮಾಭಿಮಾನಿನಿ ಉಷಾದೇವಿಯಿಂದ ಪ್ರಾರಂಭಿಸಿ ಕ್ರಮೇಣ ಉತ್ತಮೋತ್ತಮ ದೇವತೆಗಳನ್ನು ಹೆಸರಿಸುತ್ತ) ರುದ್ರನಿಗಿಂತಲೂ ಉತ್ತಮಳಾದ ಆಶಾದೇವಿಗಿಂತಲೂ ಮುಖ್ಯವಾಯು ಶ್ರೇಷ್ಠನು. ಪ್ರಕೃಷ್ಟರಾದ ಉಷಾದೇವಿಯೇ ಮುಂತಾದವರಿಗೆ ನಾಯಕನಾಗಿರುವುದರಿಂದ ಪ್ರಾಣ ಎನಿಸಿಕೊಳ್ಳುವ ವಾಯುದೇವ– ಸರಸ್ವತಿಗಿಂತಲೂ ಪ್ರಕೃಷ್ಟವಾದ ಸುಖವುಳ್ಳ ಪ್ರಯುಕ್ತವೂ ಪ್ರಾಣ ಎನಿಸಿರುವನು. 'ಣ' ಎಂದರೆ ಸುಖ. ಚೆನ್ನಾಗಿ ಸುಖ ಇರುವುದರಿಂದ ಸರಸ್ವತಿ ಆಣಾ ಎನಿಸುವಳು. ಅಂತಹವಳಿಗಿಂತಲೂ ಪ್ರಕೃಷ್ಟ ಸುಖವುಳ್ಳವನೆಂಬ ಅಭಿಪ್ರಾಯದಲ್ಲಿ ವಾಯುದೇವ ಪ್ರಾಣ ಎನಿಸುವನು.

......ರುದ್ರನಿಗಿಂತ ಆಶಾದೇವಿ ಹೇಗೋ ಹಾಗೆ ಆಶಾದೇವಿಗಿಂತ ಮುಖ್ಯಪ್ರಾಣ ನೂರುಪಟ್ಟು ಹೆಚ್ಚು ಉತ್ತಮನೆನಿಸಿರುವನು..... ಅಂತಹ ವಾಯುದೇವನಗಿಂತ ಶ್ರೀವಿಷ್ಣು ಅನಂತಪಟ್ಟು ಅಧಿಕ ಉತ್ತಮನಾಗಿರುವನು.13

---

....ಋಷಿಭ್ಯಸ್ತೂತ್ತಮಾ ದೇವಾ ದೇವೇಭ್ಯೋ ವಾಯುರುತ್ತಮಃ ॥
ವಾಯೋಶ್ಚ ಭಗವಾನ್ ವಿಷ್ಣುರ್ನ ತಸ್ಮಾದುತ್ತಮೋ ಗುರುಃ ।
– *ಆಚಾರ್ಯಸಂಹಿತಾ [ಛಾಂ.ಉ.ಭಾ. 4-2-4]*

11. ಅಪರಂ ಬ್ರಹ್ಮ ಸ ಪ್ರಾಣಃ ಸಾಕ್ಷಾದ್ಯೋ ಬಲದೇವತಾ ।
ಜ್ಞಾನಾನಂದಾತ್ಮಕಂ ಪೂರ್ಣಂ ಪರಂ ಬ್ರಹ್ಮ ಸ್ವಯಂ ಹರಿಃ ।
....ಏವಂ ಪ್ರಾಣಸ್ತಥಾಽಽಕಾಶೋ ಬ್ರಹ್ಮಣೋ ದ್ವೇ ಪ್ರಕೀರ್ತಿತೇ ॥
*– [ಛಾಂ.ಉ.ಭಾ. 4-3-1]*

12. ಅಗ್ನಿರ್ನಾಸಿಕ್ಯವಾಯುಶ್ಚ ಸೂರ್ಯೋ ಲೋಕರಸಾಸ್ತ್ರಯಃ
.....ಸಾಮವೇದಾಭಿಮಾನೀ ತು ವಾಯುಃ ಸೂರ್ಯರಸಃ ಸ್ಮೃತಃ ।
ವರಾಹಸಿಂಹಕಪಿಲಾಸ್ತೇಷಾಂ ಭೂರಾದಿನಾಮಕಾಃ..... ॥ *– [ಛಾಂ.ಉ.ಭಾ. 4-4-2]*

13. ಮುಖ್ಯವಾಯುಪ್ರಿಯಾ ತಸ್ಮಾತ್ ಪರಮೈವ ಸರಸ್ವತೀ ।
....ತಸ್ಯಾಃ ಶ್ರೇಷ್ಠೋ ಮುಖ್ಯವಾಯುಃ ಪ್ರಕೃಷ್ಟಾನಾಂ ಚ ನಾಯಕಃ ॥
ಪ್ರಾಣನಾಮಾ ಣ ಇತ್ಯೇವ ಹ್ಯಾನಂದಃ ಸಮುದೀರಿತಃ ।
ಆಣಾ ಸರಸ್ವತೀ ಪ್ರೋಕ್ತಾ ತತ್ಪ್ರಕೃಷ್ಟಸುಖತ್ವತಃ ॥

- ಸೃಷ್ಟಿಯ ಕ್ರಮವನ್ನು ತಿಳಿಸುತ್ತ ಪರಮಾತ್ಮನಿಂದ ಲಕ್ಷ್ಮೀದೇವಿ, ಲಕ್ಷ್ಮೀದೇವಿಯಿಂದ ಪ್ರಾಣದೇವ, ಅವನಿಂದ ಸರಸ್ವತಿ.... ಹೀಗೆ ಹೇಳಿ ಮೊದಲಿನವರು ಮುಂದಿನವರಿಗಿಂತ ಗುಣಗಳಲ್ಲಿ ಶ್ರೇಷ್ಠರು. ಮೊದಲಿನವರಲ್ಲಿಯೇ ಮುಂದಿನವರಿಗೆ ಮುಕ್ತಿಯಲ್ಲಿ ಲಯ; ಈ ತಾರತಮ್ಯ ಎಂದೂ ನಾಶಹೊಂದುವುದಿಲ್ಲ ಎಂದು ಸಮರ್ಥಿಸಲಾಗಿದೆ.14
- ಈ ಪ್ರಸಂಗದಲ್ಲಿ ತಾರತಮ್ಯಕ್ಕೆ ಸಂಬಂಧಿಸಿ ಉಲ್ಲೇಖಿಸಲ್ಪಟ್ಟ ಎರಡು ಪ್ರಮಾಣಗಳಲ್ಲಿ ಅಸ್ವತಂತ್ರದ ತಾರತಮ್ಯದ ಆರಂಭದ ವ್ಯಕ್ತಿಯಾಗಿ ಉಷಾದೇವಿಯನ್ನೂ ಕೊನೆಯ ವ್ಯಕ್ತಿಯನ್ನಾಗಿ ವಾಯುದೇವನನ್ನೂ ನಮೂದಿಸಲಾಗಿದೆ.15
- ಅಚೇತನಗಳು ಚೇತನಗಳಿಂದ ಹೇಗೋ, ಚೇತನರು ದೇವತೆಗಳಿಂದ ಹೇಗೋ, ದೇವತೆಗಳು ಪ್ರಾಣನಿಂದ, ಪ್ರಾಣ ವಿಷ್ಣುವಿನಿಂದ ಸ್ವಭಾವ, ಪ್ರವೃತ್ತಿ, ವಿಕಾರ –ಇವುಗಳನ್ನು ಹೊಂದುವರು. ಇವರಿಂದ ಹೊರತಾಗಿ ಅವರಿಗೆ ಯಾವ ಧರ್ಮವೂ ಎಂದೂ ಸಿದ್ಧಿಸದು.16
- ಪ್ರಾಣದೇವರ ಬಗ್ಗೆ ಉಪದೇಶಿಸುವವನು ಉತ್ತಮವಾದ ವಸ್ತುವನ್ನು ಉಪದೇಶಿಸುವುದರಿಂದ 'ಉತ್ಕೃಷ್ಟತತ್ವಬೋಧಕ' ಎನಿಸಿಕೊಳ್ಳುವನು.17
- ಪ್ರಾಣ, ಸೂತ್ರ, ಮಹಾನ್, ಬ್ರಹ್ಮಾ, ಚಿತ್ತ, ವಾಯು, ಬಲ, ಧೃತಿ, ಸ್ಥಿತಿ, ಯೋಗ, ವೈರಾಗ್ಯ, ಜ್ಞಾನ, ಪ್ರಜ್ಞಾ, ಸ್ಮೃತಿ, ಸುಖ, ಮೇಧಾ, ಮುಕ್ತಿ, ವಿಷ್ಣುಭಕ್ತಿ, ಆದಿಗೋಪ, ಮಹಾಪ್ರಭು, ಋಜು, ಸಮಾನ, ವಿಜ್ಞಾತಾ, ಮಹಾಧ್ಯಾತಾ, ಮಹಾಗುರು,

---

ಪ್ರಾಣ ಇತ್ಯುಚ್ಯತೇ ವಾಯುಃ.....ಶಿವಾದಾಶಾ ತಥೈವಾಸ್ಯಾ ಮುಖ್ಯವಾಯುಃ ಶತೋತ್ತರೌ...
ಪ್ರಾಣಾತ್ತು ಭಗವಾನ್ ವಿಷ್ಣುರನಂತಗುಣತೋಽಧಿಕಃ ॥
– -*ತತ್ತ್ವವಿವೇಕೇ [ಛಾಂ.ಉ.ಭಾ. 7-1-16]*

14. ಅಥಾತಃ ಸಂಭೂತಿಃ ಪರಮಾದ್ ವಿದ್ಯಾ ವಿದ್ಯಾಯಾಃ ಪ್ರಾಣಃ ಪ್ರಾಣಾಚ್ಛ್ರದ್ಧಾ.... ತೇಷಾಂ ಪರಃ ಪರೋ ಜ್ಯಾಯಾನ್ ಗುಣೈಃ.... ಪರಸ್ಮಾತ್ ಪರಸ್ಮಾದುತ್ತರ ಉತ್ತರೋ ಮುಚ್ಯತೇ....ನೈಷಾಂ ಪಾರಾವರ್ಯಮುಚ್ಛಿದ್ಯತೇ ಕದಾಚನ.... ಇತ್ಯಾದಿ ಶ್ರುತೇಃ ॥
– *[ಛಾಂ.ಉ.ಭಾ. 7-1-16]*

15. 'ನಾಮಾದಿಮಾರುತಾಂತೇಷು....' ಸತ್ತತ್ತ್ವೇ ॥ – *[ಛಾಂ.ಉ.ಭಾ. 7-1-16]*
   * 'ಉಷಾದಿಮಾರುತಾಂತೇಷು.... ತತ್ವವಿವೇಕೇ ॥ – *[ಛಾಂ.ಉ.ಭಾ. 7-1-16]*

16. ಅಚೇತನಂ ಚೇತನೇಭ್ಯೋ ದೈವತೇಭ್ಯಶ್ಚ ಚೇತನಾಃ ।
ದೇವಾಃ ಪ್ರಾಣಾಚ್ಚ ಸ ಪ್ರಾಣೋ ವಿಷ್ಣೋರೇವ ಸದೈವ ತು ॥
ಸ್ವಭಾವಂ ಚ ಪ್ರವೃತ್ತಿಂ ಚ ವಿಕಾರಂ ಚ ಸಮಾಪ್ನುಯುಃ ।
ಕಶ್ಚಿದ್ ಭಾವ ಋತೇ ತೇಷಾಂ ನೈತೈಃ ಸ್ಯಾಚ್ಚ ಕದಾಚನ ॥
– *ಬ್ರಹ್ಮತರ್ಕೇ [ಛಾಂ.ಉ.ಭಾ. 7-1-16]*

17. ಅತಿವಾದೀ ಪ್ರಾಣವಾದೀ..... ॥ – *[ಛಾಂ.ಉ.ಭಾ. 7-2-1]*

ಹನೂಮಾನ್, ಭೀಮ, ಆನಂದ –ಮೊದಲಾದ ಬಹಳ ರೂಪಗಳುಳ್ಳ, ಹಿಂದೆ ಇದ್ದ, ಮುಂದೆ ಬರಲಿರುವ ಹಾಗೂ ಈಗಿರುವ ಎಲ್ಲ ಚತುರ್ಮುಖಬ್ರಹ್ಮರು ಮುಕ್ತಿಗಿಂತ ಮುಂಚೆಯೂ, ಮುಕ್ತಿಯ ಬಳಿಕವೂ ಯಾವಾಗಲೂ ವಿಷ್ಣುವಿನ ವಶದಲ್ಲಿಯೇ ಇರುವವರು.

ಇವರು ಮುಕ್ತಿ ಹೊಂದಿದ ಮೇಲೂ ಇವರಿಗಿಂತ ಶ್ರೀದೇವಿ ಜ್ಞಾನಾನಂದಾದ ಸಕಲಗುಣಗಳ ವಿಷಯದಲ್ಲೂ ಕೋಟಿಪಟ್ಟು ಅಧಿಕಳು. ಪರಸ್ಪರವಾಗಿ ಭಿನ್ನರಾಗಿರುವ ಇವರ ಭಕ್ತಿ ಬೇರೆ ಬೇರೆ. ಆನಂದವು ವಿಷ್ಣುವಿನಿಂದೊಡಗೂಡಿ ಅನುಭವಿಸಲಾಗುವುದು. ಶ್ರೀಹರಿ, ಲಕ್ಷ್ಮೀದೇವಿ ಹಾಗೂ ಇತರರಿಗಿಂತ ಯಾವಾಗಲೂ ಭಿನ್ನರಾಗಿರುವ ಇವರಲ್ಲಿ ಶ್ರೀವಿಷ್ಣು ಆವೇಶಗೊಂಡಿರುವರು. ಶ್ರೀವಿಷ್ಣುವಿಗೆ ಅತಿಪ್ರಿಯರಾಗಿರುವುದರಿಂದ ಇವರು ಅಧ್ಯರ್ಧ– ಒಂದೂವರೆ– ಎಂದೇ ಶಾಸ್ತ್ರದಲ್ಲಿ ಸಾರಲ್ಪಟ್ಟಿರುವರು. ವಿಷ್ಣುವಿಗಿಂತ ಅತ್ಯಂತ ಭಿನ್ನರಾಗಿರುವರಾದರೂ ಶೇಷಾದಿಗಳಿಗಿಂತ ಅಧಿಕಪ್ರಿಯರು. ಆದರೆ ವಿಷ್ಣುವಿನ ಪ್ರಿಯತ್ವ ದಲ್ಲಿ, ಅವನ ಭಕ್ತಿಯಲ್ಲಿ, ಅವನ ಜ್ಞಾನದಲ್ಲಿ ಮುಕ್ತರಾದ ಮೇಲೂ ಶ್ರೀದೇವಿಗಿಂತ ಕೋಟಿ ಪಟ್ಟು ಕಡಿಮೆಯಾಗಿರುವವರು.

ಆದುದರಿಂದ ಅವರು ಶೇಷಾದಿಗಳಂತೆ ಶ್ರೀಹರಿಗಿಂತ ಎರಡನೆಯವರೆಂದಾಗಲೀ ಶ್ರೀದೇವಿಯಂತೆ ಶ್ರೀಹರಿಗಿಂತ ಬೇರೆಯಾಗಿ ಪರಿಗಣಿತರಾಗದಂತೆ ಇರುವವರಾಗಲೀ ಅಲ್ಲದಿರುವುದರಿಂದ 'ಅಧ್ಯರ್ಧ' ಎಂದು ಕರೆಯಲ್ಪಟ್ಟಿರುವರು.[18]

---

18. ಪ್ರಾಣಃ ಸೂತ್ರಂ ಮಹಾನ್ ಬ್ರಹ್ಮಾ ಚಿತ್ತಂ ವಾಯುರ್ಬಲಂ ಧೃತಿಃ ।
ಸ್ಥಿತಿರ್ಯೋಗಶ್ಚ ವೈರಾಗ್ಯಂ ಜ್ಞಾನಂ ಪ್ರಜ್ಞಾ ಸ್ಮೃತಿಃ ಸುಖಮ್ ॥
ಮೇಧಾ ಮುಕ್ತಿರ್ವಿಷ್ಣುಭಕ್ತಿರಾದಿಗೋಪ್ತೋ ಮಹಾಪ್ರಭುಃ ।
ಋಜುಃ ಸುಮಾನೋ ವಿಜ್ಞಾತಾ ಮಹಾಧ್ಯಾತಾ ಮಹಾಗುರುಃ ॥
ಹನೂಮಾನ್ ಭೀಮ ಆನಂದ ಇತ್ಯಾದಿ ಬಹುರೂಪಿಣಃ ॥
ಹಿರಣ್ಯಗರ್ಭಾ ಯೇಽತೀತಾ ಯೇ ಭಾವ್ಯಾ ಯಶ್ಚ ವರ್ತತೇ ।
ಸರ್ವೇ ವಿಷ್ಣುವಶಾ ನಿತ್ಯಂ ವಿಮುಕ್ತೇರಪ್ಯನಂತರಮ್ ॥
ಏತೇಭ್ಯಃ ಶ್ರೀಸ್ತು ಮುಕ್ತೇಭ್ಯೋ ಗುಣೈಃ ಕೋಟಿಗುಣೋತ್ತರಾ ।
ಜ್ಞಾನಾನಂದಬಲಾದಿಭ್ಯಃ ಸರ್ವೇಭ್ಯಃ ಸರ್ವದೈವ ತು ॥
ಭಿನ್ನಾ ಭಿನ್ನಾಶ್ಚ ತೇ ಸರ್ವೇ ಬ್ರಹ್ಮಾಣಸ್ತು ಪರಸ್ಪರಮ್ ।
ಅಭಿಮಾನಃ ಪೃಥಕ್ ತೇಷಾಮಾನಂದಃ ಸಹ ಭುಜ್ಯತೇ ॥
ತೇ ತು ಭಿನ್ನಾಹರೇರ್ನಿತ್ಯಂ ಶ್ರಿಯೋಽನ್ಯೇಭ್ಯಸ್ತಥೈವ ಚ ।
ಆವಿಷ್ಟೋ ವಿಷ್ಣುರೇತೇಷು ನ ವಿಷ್ಣುಸ್ತತ್ಸ್ವರೂಪಕಃ ॥
ವಿಷ್ಣೋರತಿಪ್ರಿಯತ್ವಾತ್ ತೇ ಹ್ಯಧ್ಯರ್ಧಾ ಇತಿ ಚೋದಿತಾಃ ।
ವಿಷ್ಣೋಃ ಕೇವಲಭೇದೇಽಪಿ ಶೇಷಾದಿಭ್ಯಃ ಪ್ರಿಯಾ ಯತಃ ॥
ವಿಷ್ಣೋಃ ಪ್ರಿಯತ್ವೇ ತದ್‌ಭಕ್ತೌ ತಜ್ಜ್ಞಾನೇ ಚ ಶ್ರಿಯಸ್ತು ತೇ ।
ಮುಕ್ತಾ ಅಪ್ಯವರಾ ನಿತ್ಯಂ ಸರ್ವೇ ಕೋಟಿಗುಣೇನ ಚ ॥
– *ಪೈಂಗಿಶ್ರುತಿ [ಬೃ.ಉ.ಭಾ. 3-5-4]*

[ಪೈಂಗಿಶ್ರುತಿಯ ಈ ಮಾತುಗಳು ಮುಖ್ಯವಾಗಿ ಚತುರ್ಮುಖಬ್ರಹ್ಮನ ಪರಿಚಯಕ್ಕಾಗಿ ಹೊರಟವುಗಳಾದರೂ ಚತುರ್ಮುಖಬ್ರಹ್ಮ ಹಾಗೂ ವಾಯುದೇವ ಸಮಾನರೆಂಬ ವಿಚಾರದ ಆಧಾರದ ಮೇಲೆ ಭಾವಿ ಚತುರ್ಮುಖಬ್ರಹ್ಮರೆನಿಸಿರುವ ವಾಯುದೇವನ ಪರಿಚಯವನ್ನೂ ನೀಡುತ್ತಿರುವುದರಿಂದ ವಾಯುದೇವನ ಸ್ವರೂಪದ ಪರಿಚಯಕ್ಕಾಗಿ ಇವುಗಳ ಉಲ್ಲೇಖ ಇಲ್ಲಿ ನಡೆದಿದೆ.]

- ಮುಖ್ಯಪ್ರಾಣನ ಸ್ವರೂಪಜ್ಞಾನವು ಗೋಪ್ಯವಾಗಿರುವುದರಿಂದ ಅಯೋಗ್ಯರಿಗೆ ಉಪದೇಶ ನೀಡದೆ ಅದನ್ನು ಹೇಗೆ ರಕ್ಷಿಸಲಾಗುವುದೋ ಹಾಗೆ ಸಪ್ತಾನ್ನವಿದ್ಯೋಪಾಸಕರಾದ ಮುಕ್ತ ದೇವತೆಗಳ ಸ್ವರೂಪವೂ ಗೋಪ್ಯವಾಗಿರುವುದರಿಂದ ಅದನ್ನು ಅಯೋಗ್ಯರಿಗೆ ಉಪದೇಶಿಸದೆ ರಕ್ಷಿಸುವರು.19
- ನಿತ್ಯಜ್ಞಾನಾತ್ಮಕನಾಗಿರುವುದರಿಂದ ವಾಯುದೇವ ಅಮೃತ ಎನಿಸಿರುವನು.20
- ರುದ್ರನಲ್ಲೂ, ಸರಸ್ವತಿಯಲ್ಲೂ ನಿಯಾಮಕ ಪ್ರವಿಷ್ಟನಾಗಿರುವ ಪ್ರಯುಕ್ತ ಪ್ರಾಣದೇವ ಅವರಿಂದ ಆವರಿಸಲ್ಪಟ್ಟವನೆಂದು ನಿರೂಪಿತನಾಗಿರುವನು. ಆದ್ದರಿಂದಲೇ ಸತ್ಯ ಎನಿಸುವನು. ಸ್ವರೂಪಜ್ಞಾನದಿಂದ 'ಅಮೃತ' ಎನಿಸುವನು.21
- ಜೀವಾತ್ಮರು ದುಃಖಸಂಬಂಧಕ್ಕೊಳಗಾಗಿರುವುದರಿಂದ 'ಅವರ' ಎನಿಸುವರು. ನಿತ್ಯನಿರ್ದುಃಖಸ್ವರೂಪಳಾಗಿರುವುದರಿಂದ ಲಕ್ಷ್ಮೀದೇವಿ ಪರ ಎನಿಸಿರುವಳು. ವಾಯುದೇವನಿಗೆ ಕಿಂಚಿತ್ ದುಃಖಸ್ಪರ್ಶವಿರುವುದಾದರೂ ಆ ದುಃಖದ ಪೀಡೆಗೆ ಒಳಗಾಗದ ಪ್ರಯುಕ್ತ ವಾಯುದೇವ ಅವರನೂ ಅಲ್ಲದೆ, ಪರನೂ ಅಲ್ಲದೆ 'ಮಧ್ಯಮ' ಎನಿಸುವನು.22
- ಪ್ರಾಣ, ಅಪಾನ, ವ್ಯಾನ, ಉದಾನ ಹಾಗೂ ಸಮಾನ ಎಂಬುದಾಗಿ ಐದು ರೂಪಗಳು; ನಾಗ, ಕೂರ್ಮ, ಕೃಕಲ, ದೇವದತ್ತ ಹಾಗೂ ಧನಂಜಯ ಎಂಬುದಾಗಿ ಐದು ರೂಪಗಳು –ಹೀಗೆ ಹತ್ತು ರೂಪಗಳನ್ನು ಹೊಂದಿರುವ ಮುಖ್ಯಪ್ರಾಣ ಅಧ್ಯಾತ್ಮ ಅಧಿದೈವ ಹಾಗೂ ಅಧಿಭೌತಿಕ ಈ ಮೂರಕ್ಕೂ ಸಂಬಂಧಿಸಿ ಹತ್ತತ್ತು ರೂಪಗಳನ್ನು ಹೊಂದಿರುವನು.23

---

19. ಪ್ರಾಣಜ್ಞಾನಂ ಯಥಾಽವಂತಿ ರಹಸ್ಯಮಿತಿ ಸರ್ವದಾ ।
ಏವಂ ಮುಕ್ತಸ್ವರೂಪಂ ಚಾಪ್ಯವಂತ್ಯೇವ ರಹಸ್ಯತಃ ॥ – [ಬೃ.ಉ.ಭಾ. 3-6-27]

20. ಅಮೃತೋ ವಾಯುರುದ್ದಿಷ್ಟೋ ನಿತ್ಯಜ್ಞಾನಾತ್ಮಕತ್ವತಃ । – [ಬೃ.ಉ.ಭಾ. 3-7-3]

21. ರುದ್ರೇ ವೇದೇಷು ಚ ಪ್ರಾಣಃ ಪ್ರವಿಷ್ಟಶ್ಛಾದಿತಃ ಸದಾ ।
ಸತ್ಯ ಇತ್ಯುಚ್ಯತೇ ನಿತ್ಯಂ ಸ್ವರೂಪೇಣಾಮೃತಂ ಸ್ಮೃತಃ ॥ – [ಬೃ.ಉ.ಭಾ. 3-7-3]

22. ಅವರಾ ದುಃಖಸಂಬಂಧಾತ್ ಜೀವಾ ಏವ ಪ್ರಕೀರ್ತಿತಾಃ ।
ನಿತ್ಯನಿರ್ದುಃಖರೂಪತ್ವಾತ್ ಪರಾ ಶ್ರೀರೇಕಲೈವ ತು ।
ದುಃಖಾಸಂಪೀಡಿತತ್ವಾತ್ತು ಮಧ್ಯಮೋ ವಾಯುರುಚ್ಯತೇ ॥ – [ಗೀ.ತಾ. 7-7]

23. ಪ್ರಾಣಾದಿಪಂಚಕಂ ಚೈವ ತಥಾ ನಾಗಾದಿಪಂಚಕಮ್ ।

- ಮೊದಲು ಹುಟ್ಟಿದ ಈ ಹತ್ತು ಪ್ರಭೇದಗಳನ್ನೊಳಗೊಂಡ ವಾಯು ಮುಖ್ಯ ವಾಯು.24
- ಮುಕ್ತವಾಯ್ವಾದಿಗಳಿಂದ ಕೂಡಿದ ವಿಷ್ಣುವನ್ನು ಚತುರ್ಮುಖನು ಪ್ರಳಯಕಾಲದಲ್ಲಿ ಕಂಡನು.25
- ಕ್ರಮವಾಗಿ ಪುರುಷ ಎನಿಸುವ ನಾರಾಯಣ ಮುಂತಾದ ವ್ಯಕ್ತಿಗಳ ಜ್ಞಾನ ಮುಕ್ತಿಗೆ ಸಾಧನ ಎನ್ನುತ್ತ, ಪುರುಷಶಬ್ದವಾಚ್ಯರಲ್ಲಿ ಮೂರನೆಯ ವ್ಯಕ್ತಿಯನ್ನಾಗಿ ವಾಯು ವನ್ನೂ ಸೇರಿಸಿ ಮುಕ್ತಿ ದೊರಕಬೇಕಾದರೆ ಅವನ ಜ್ಞಾನವೂ ಬೇಕೆಂದು ತಿಳಿಸ ಲಾಗಿದೆ.26
- ಏನೂ ತಿಳಿಯದ ಕೆಳಮಟ್ಟದ ಜನರು ಶರೀರದಲ್ಲಿರುವ ಪ್ರಾಣನನ್ನು ಬರೇ ಶ್ವಾಸದ ಗಾಳಿ ಎಂದು ಹೇಳುವರು. ಮಧ್ಯಮ ಮಟ್ಟದ ಜನರು ಆ ವಿಷಯದಲ್ಲಿ ಸರಿಯಾದ ನಿರ್ಧಾರ ಹೊಂದಿರುವುದಿಲ್ಲ. ಆದರೆ ಪ್ರಾಣಜ್ಞಾನಿಗಳಾದ ಉತ್ತಮಾಧಿಕಾರಿಗಳು ರುದ್ರಾದಿ ದೇವೋತ್ತಮನಾದ ಸೂತ್ರನಾಮಕನಾದ ಪ್ರಾಣದೇವನನ್ನು ಒಪ್ಪಿಕೊಳ್ಳು ವರು.

ಇದರಂತೆ ಕೆಳಮಟ್ಟದ ಜನರು ತಮ್ಮ ದೇಹದಲ್ಲಿರುವ ಶ್ರೀಹರಿಯನ್ನು ಜೀವನನ್ನಾಗಿ ಹೇಳುವರು. ಮಧ್ಯಮಮಟ್ಟದ ಜನರು ಆ ವಿಷಯದಲ್ಲಿ ಸಂದೇಹಕ್ಕೊಳಗಾಗಿರುವರು. ಉತ್ತಮಾಧಿಕಾರಿಗಳು ಮಾತ್ರ ಸರ್ವಜೀವವಿಲಕ್ಷಣನಾದ ಗುಣಪೂರ್ಣನಾದ ಶ್ರೀಹರಿ ಯನ್ನು ಒಪ್ಪಿಕೊಳ್ಳುವರು.27

---

ಏವಂ ತು ದಶಧಾ ಪ್ರಾಣ ಅಧ್ಯಾತ್ಮಾದಿ ತ್ರಿಧಾಽಖಿಲಾಃ ॥
*– ವ್ಯೋಮಸಂಹಿತಾ [ಭಾ.ತಾ.ನಿ. 3-7-9]*

24. ಪ್ರಾಣಃ ಪ್ರಥಮಜೋ ಯಸ್ತು ಪ್ರಧಾನೋ ವಾಯುರೀರಿತಃ ।
*– ತತ್ವನಿರ್ಣಯ [ಭಾ.ತಾ.ನಿ. 3-7-9]*

25. ಮುಕ್ತವಾಯ್ವಾದಿಭಿರ್ವಿಷ್ಣುಂ ವೃತಂ ಬ್ರಹ್ಮಾ ದದರ್ಶ ಹ ।
*– ಬ್ರಹ್ಮಾಂಡೇ [ಭಾ.ತಾ.ನಿ. 3-9-31]*

26. ನಾರಾಯಣೋ ಬ್ರಹ್ಮವಾಯೂ....ಕ್ರಮಶಃ ಪುರುಷಾಖ್ಯಾಭಿಶಬ್ದಿತಾಃ... ತಜ್ಞಾನಾದ್ ವಿಪ್ರಮುಚ್ಯತೇ । *– ದತ್ತಾತ್ರೇಯಯೋಗ [ಭಾ.ತಾ.ನಿ. 3-26-11]*

27. ಸ್ವದೇಹಸ್ಥಂ ಹರಿಂ ಪ್ರಾಹುರಧಮಾ ಜೀವಮೇವ ತು ।
ಮಧ್ಯಮಾಶ್ಚಾಪ್ಯನಿರ್ಣೀತಂ ಜೀವಾದ್ ಭಿನ್ನಂ ಜನಾರ್ದನಮ್ ॥
ಪೂರ್ಣಾನಂದಾದಿಗುಣಕಂ ಸರ್ವಜೀವವಿಲಕ್ಷಣಮ್ ।
ಉತ್ತಮಾಸ್ತು ಹರಿಂ ಪ್ರಾಹುಸ್ತಾರತಮ್ಯೇವ ತೇಷು ಚ ॥
ಬುದ್ಧಿಶುದ್ಧ್ಯನುಸಾರೇಣ ಯಥಾ ಪ್ರಾಣಂ ಶರೀರಗಮ್ ।
ಶ್ವಾಸಮಾತ್ರಂ ಜನಾಃ ಪ್ರಾಹುರನಿರ್ಣೀತಂ ಚ ಮಧ್ಯಮಾಃ ।
ದೇವದೇವೇಶ್ವರಂ ಸೂತ್ರಮಾನಂದಂ ಪ್ರಾಣವೇದಿನಃ ॥ *– [ಭಾ.ತಾ.ನಿ. 6-4-34]*

- ಭಗವಂತನ ಪ್ರಾಣನನ್ನು ವಾಯುದೇವನು ಆಶ್ರಯಿಸಿರುವನು.28
- ಮುಖ್ಯಪ್ರಾಣನು ಉದಯಿಸುವುದಿಲ್ಲ, ಅಸ್ತಮಿಸುವುದಿಲ್ಲ. ಅಂದರೆ ಹುಟ್ಟುಸಾವುಗಳಿಗೆ ಒಳಗಾಗುವುದಿಲ್ಲ. ಜೀವಾತ್ಮರ ಹಾಗೂ ಪರಮಾತ್ಮನ ಅಥವಾ ಪ್ರಧಾನಪ್ರಾಣ ಎನಿಸುವ ಪರಮಾತ್ಮನ ಮಧ್ಯದಲ್ಲಿ ಇರುವವನಾದುದರಿಂದ ಇವನನ್ನು 'ಮಧ್ಯಮ' ಎಂದು ಕರೆಯುವರು.29
- ಚಟುವಟಿಕೆ, ಹೊರಗಿನ ಗಾಳಿ ಹಾಗೂ ಮುಖ್ಯಪ್ರಾಣ –ಈ ಮೂವರಲ್ಲಿ ಪ್ರಾಣ ಶಬ್ದವು ಪ್ರಯೋಗಿಸಲ್ಪಡುವುದು. ಈ ಮೂವರಲ್ಲೂ ಪ್ರಮುಖನಾದ ವಾಯು ದೇವನಲ್ಲಿ ಮುಖ್ಯವಾದ ಪ್ರಾಣಶಬ್ದವು ಹೇಳಲ್ಪಡುವುದು.30
- ಪಂಚಭೂತಗಳು, ಚಟುವಟಿಕೆಗಳು, ಮಂತ್ರಗಳು ಹಾಗೂ ಈ ಜಗತ್ತು ಮುಖ್ಯ ಪ್ರಾಣನಿಂದ ಸೃಷ್ಟಿಸಲ್ಪಡುವವು. ಮುಖ್ಯಪ್ರಾಣನಾದರೂ ಸರ್ವೋತ್ತಮನಾದ ಶ್ರೀಹರಿ ಯಿಂದ ಸೃಷ್ಟಿಸಲ್ಪಡುವನು.31
- ಮುಖ್ಯಪ್ರಾಣನೇ ಇತರೆಲ್ಲ ದೇವತೆಗಳಿಗಿಂತ ಶ್ರೇಷ್ಠನು. ಪ್ರಾಣನಿಗಿಂತ ಶ್ರೇಷ್ಠ ಮತ್ತೊಬ್ಬನಿಲ್ಲ; ಪ್ರಾಣನೇ ಶ್ರೇಷ್ಠ; ಆದುದರಿಂದಲೇ ಅವನು 'ಭೂಯಾನ್' ಎಂಬ ಹೆಸರನ್ನು ಪಡೆದಿರುವನು.32
- ನಿತ್ಯ, ಪರಮನಿತ್ಯ, ಅನಿತ್ಯ ಹಾಗೂ ಪರಾನಿತ್ಯ ಎಂಬುದಾಗಿ ಜಗತ್ತು ನಾಲ್ಕು ವಿಧವಾ ಗಿದೆ. ಇವುಗಳಲ್ಲಿ ಘಟಾದಿಗಳು ಸ್ವರೂಪದಿಂದಲೂ ನಾಶವಾಗುವ ಪ್ರಯುಕ್ತ ಪರಾನಿತ್ಯಗಳಾದರೆ, ಸ್ವರೂಪದಿಂದ ನಿತ್ಯಗಳಾದರೂ ಶರೀರದಿಂದ ಅನಿತ್ಯಗಳಾದ ಜೀವಿಗಳು ಅನಿತ್ಯಗಳೆನಿಸಿವೆ. ವಾಯುದೇವ ಶರೀರದಿಂದ ಅನಿತ್ಯನಾದರೂ ಪ್ರಲಯ ದಲ್ಲೂ ಮಸುಕಾಗದ ಜ್ಞಾನವನ್ನು ಹೊಂದಿರುವುದರಿಂದ ನಿತ್ಯ ಎನಿಸುವರು. ಶರೀರದಿಂದಲೂ ನಾಶ ಇಲ್ಲದ ಚತುರ್ಮುಖ, ಪ್ರಕೃತಿ, ಕಾಲ ಇವು ಪರಮನಿತ್ಯ

---

28. ....ವಿಷ್ಣೋಃ ....ಪ್ರಾಣೇ ವಾಯುಃ.... । – *[ಭಾ.ತಾ.ನಿ. 6-4-46]*

29. ನೈಷ ಪ್ರಾಣ ಉದೇತಿ ನಾಸ್ತಮೇತ್ಯೇಕಲ ಏವ ಮಧ್ಯೇ ಸ್ಥಾತಾಽಥೈನಮಾಹುರ್ಮಧ್ಯಮ ಇತಿ । – *ಶ್ರುತಿ [ಬ್ರ.ಸೂ.ಭಾ. 2-4-9]*

30. ಚೇಷ್ಟಾಯಾಂ ಬಾಹ್ಯವಾಯೌ ಚ ಮುಖ್ಯಪ್ರಾಣೇ ಚ ಗೀಯತೇ ।
ಪ್ರಾಣಶಬ್ದಸ್ತ್ರಿಷು ಹ್ಯೇಷು ಮುಖೇ ಮುಖ್ಯಃ ಪ್ರಕೀರ್ತಿತಃ ॥
– *[ಬ್ರ.ಸೂ.ಭಾ. 3-4-10]*

31. ಭೂತಾನಿ ಚೇಷ್ಟಾ ಮಂತ್ರಾಶ್ಚ ಮುಖ್ಯಪ್ರಾಣಾದಿದಂ ಜಗತ್ ।
ಮುಖ್ಯಪ್ರಾಣಃ ಪರಸ್ಮಾಚ್ಚ ನ ಪರಃ ಕಾರಣಾನ್ವಿತಃ ॥
– *ಅಗ್ನಿವೇಶ್ಯಶ್ರುತಿ [ಬ್ರ.ಸೂ.ಭಾ. 2-4-10]*

32. ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್ ನ ಹಿ ಪ್ರಾಣಾದ್ ಭೂಯಾನ್ ಪ್ರಾಣೋ ಹ್ಯೇವ ಭೂಯಾಂಸ್ತಸ್ಮಾದ್ ಭೂಯಾನ್ ನಾಮ ।
– *ಕೌಂಠರವ್ಯಶ್ರುತಿ [ಬ್ರ.ಸೂ.ಭಾ. 3-3-35]*

ಎನಿಸಿವೆ. ಯಾವುದೇ ಬಗೆಯ ನಾಶಕ್ಕೊಳಗಾಗದೆ ಪರಾತ್ಪರನಿತ್ಯ ಎನಿಸಿರುವ ಭಗವಂತನು ಈ ನಾಲ್ಕು ಪ್ರಭೇದದ ಪದಾರ್ಥಗಳನ್ನು ಅತಿಕ್ರಮಿಸಿ, ವಿಭಜಿಸಿ, ಪ್ರತಿ ವಿಭಾಗಕ್ಕೂ ನಿಯಾಮಕನಾಗಿದ್ದುಕೊಂಡು ಅವುಗಳನ್ನು ಧರಿಸುವನು.33

- ಆರೋಹಣಕ್ರಮದ ತಾರತಮ್ಯದಲ್ಲಿ ಸರಸ್ವತಿಯ ಬಳಿಕ ವಾಯುದೇವನಿರುವನು. ಸರಸ್ವತಿಗಿಂತ ನೂರು ಪಟ್ಟು ಎತ್ತರದಲ್ಲಿರುವನು. ಮುಕ್ತರಾದ ಮೇಲೂ ಈ ತಾರತಮ್ಯ ಇದ್ದೇ ಇದೆ. ಬ್ರಹ್ಮ ಮತ್ತು ವಾಯು ಒಬ್ಬರೇ ಆಗಿರುವರು. ಮುಕ್ತರಾದ ರುದ್ರಾದಿಗಳಲ್ಲಿ ವಾಯುವಿಗೆ ಸಮಾನರಾದವರು ಯಾರೂ ಇಲ್ಲ. ವಾಯುವಿಗಿಂತ ಶ್ರೀದೇವಿ ಗುಣಗಳಲ್ಲಿ ಸಾವಿರಪಟ್ಟು ಅಧಿಕಳಾಗಿರುವಳು.34
- *ಋಗ್ವೇದದ ಬಳಿತ್ಥಾಸೂಕ್ತ ವಾಯುದೇವನ ಮೂರು ಅವತಾರಗಳ ಪ್ರಮುಖ ಸಾಧನೆಗಳನ್ನು ಸಾರುತ್ತಿದೆ.35
- ಸಂಕರ್ಷಣರೂಪಿ ಪರಮಾತ್ಮನಿಂದ ಜಯಾರೂಪಿ ಲಕ್ಷ್ಮೀದೇವಿಯಲ್ಲಿ ಬಲಜ್ಞಾನ ಸ್ವರೂಪಿಯಾದ ವಾಯುದೇವನು ಪ್ರಾದುರ್ಭವಿಸಿದನು. ಅವನೇ ಮುಂದೆ ಚತುರ್ಮುಖನ ಪದವಿಯನ್ನು ಏರಲಿರುವನು. ಆದುದರಿಂದ ಜೀವರಲ್ಲಿ ಅವನಿಗಿಂತ ಉತ್ತಮರು ಬೇರೆ ಯಾರೂ ಇಲ್ಲ.36

---

33. ನಿತ್ಯಃ ಪರಮನಿತ್ಯಶ್ಚ ತಥಾ ನಿತ್ಯಃ ಪರಸ್ತಥಾ ।
ಚತುರ್ಧೈತತ್ ಜಗತ್ಸರ್ವಂ ಪರಾನಿತ್ಯಂ ತು ಪಾರ್ಥಿವಮ್ ॥
ಅನಿತ್ಯಾನಿ ತು ಭೂತಾನಿ ನಿತ್ಯೋ ವಾಯುರುದಾಹೃತಃ ।
ಪರಸ್ತು ನಿತ್ಯಃ ಪುರುಷಃ ಪ್ರಕೃತಿಃ ಕಾಲ ಏವ ಚ ॥
ಏತಚ್ಚತುಷ್ಟಯಂ ವಿಷ್ಣುಃ ಸ್ವಯಂ ನಿತ್ಯಃ ಪರಾತ್ಪರಃ ।
ಪ್ರತಿವ್ಯೂಹ್ಯ ವ್ಯೂಹ್ಯ ಚಾಸಾವತೀತ್ಯ ಚ ಜನಾರ್ದನಃ ।
ಧಾರಯತ್ಯನಿಶಂ ದೇವೋ ನಿತ್ಯನಂದೈಕಲಕ್ಷಣಃ ॥
*– ಕೌರ್ಮ [ಬ್ರ.ಸೂ.ಭಾ. 2-3-8]*

34. .....ರುದ್ರಃ ಸರಸ್ವತೀ ವಾಯುರ್ಮುಕ್ತಾಃ ಶತಗುಣೋತ್ತರಾಃ ।
ಏಕೋ ಬ್ರಹ್ಮಾ ಚ ವಾಯುಶ್ಚ.... ನ ಕಶ್ಚಿದ್ವಾಯುನಾ ಸಮಃ ।
ಮುಕ್ತೇಷು ಶ್ರೀಸ್ತಥಾ ವಾಯೋಃ ಸಹಸ್ರಗುಣಿತಾ ಗುಣೈಃ ॥
*– [ಮ.ಭಾ.ತಾ.ನಿ. 1-73, 74]*

35. ಬಳಿತ್ಥಾ ತದ್ವಪುಷೇ..... ನಿ ನವ್ಯಸೀಷ್ವವರಾಸು ಧಾವತೇ ।
*– [ಮ.ಭಾ.ತಾ.ನಿ. 2-150....154]*

36. ಸಂಕರ್ಷಣಾಚ್ಚಾಪಿ ಜಯಾತನೂಜೋ ಬಭೂವ ಸಾಕ್ಷಾದ್ ಬಲಸಂವಿದಾತ್ಮಾ ।
ವಾಯುರ್ಯ ಏವಾಥ ವಿರಿಂಚನಾಮಾ ಭವಿಷ್ಯ ಆದ್ಯೋ ನ ಪರಸ್ತತೋ ಹಿ ॥
*– [ಮ.ಭಾ.ತಾ.ನಿ. 3-10]*

- ವಾಯುದೇವನ ದೇವೋತ್ತಮತ್ವದ ನಿರ್ಣಯಕ್ಕಾಗಿ ದೇವತೆಗಳಲ್ಲಿ ಚತುರ್ಮುಖನ ದೇಹದ ಮಾಧ್ಯಮದಲ್ಲಿ ನಡೆದ ಸ್ಪರ್ಧೆ, ಅದರಲ್ಲಿ ಗೆದ್ದ ವಾಯುದೇವನ ಸಿದ್ಧವಾದ ವಿಬುಧಪ್ರಧಾನತ್ವ ಸಾರಲಾಗಿದೆ.37
- ಶ್ರೀಹರಿಗೆ ವಾಯುದೇವನು ಪ್ರತಿಬಿಂಬ. ವಾಯುದೇವನಿಗೆ ಶೇಷಪದವಿಗೆ ಬರುವ ರುದ್ರ ಹಾಗೂ ಗರುಡ ಪ್ರತಿಬಿಂಬರು.38
- ಮುಖ್ಯಪ್ರಾಣನೇ ಭೀಮಸೇನನಾಗಿ ಅವತರಿಸಿರುವನೆಂಬುದಕ್ಕೆ 'ಭೂಷನ್ನಯೋದಿ ಬಭ್ರುಷು ನಮ್ನತೇ....' ಎಂಬ ಋಗ್ವೇದದ ಮಂತ್ರ (1-140-6) ಹಾಗೂ 'ಬಳಿತ್ಥಾ ತದ್ವಪುಷೇ ಧಾಯಿ ದರ್ಶತ....' –ಎಂಬ ಋಗ್ವೇದದ ಸೂಕ್ತ (      ) 'ತಾಂ ಸುತೇ ಕೀರ್ತಿಂ.....' ಎಂಬ ಋಗ್ವೇದದ ಮಂತ್ರ (10-54-1)ಪ್ರಮಾಣವೆನಿಸಬಲ್ಲವು.39

* * *

---

37. ......ತೇ ಜಾನಮಾನಾ ಅಪಿ ನಿರ್ಣಯಾಯ.... ತದನ್ಯದೇವಾಧಿಪತಿಃ ಸ ಮಾರುತಃ ।
*– [ಮ.ಭಾ.ತಾ.ನಿ. 3-23, 24, 25]*

* ಉಪನಿಷತ್ತುಗಳಲ್ಲಿ ನಿರೂಪಿತವಾದ ಈ ಘಟನೆಯನ್ನು ಆಚಾರ್ಯರು ತಮ್ಮ ಮಾತಿನಲ್ಲಿ ತಿಳಿಸಿರುವ ಸಾಧ್ಯತೆ ಇದೆ. ಹಾಗಿದ್ದಲ್ಲಿ ಇದು ಪ್ರಾಣನ ಬಗೆಗೆ ಮೂಲಪ್ರಮಾಣ ಎನಿಸದು.

38. ಆಭಾಸಕೋಽಸ್ಯ ಪವನಃ ಪವನಸ್ಯ ರುದ್ರಃ ಶೇಷಾತ್ಮಕೋ ಗರುಡ ಏವ ಚ.... ।
*– [ಮ.ಭಾ.ತಾ.ನಿ. 1-14]*

39. 'ಭೂಷನ್ನಯೋಧಿ ಬಭ್ರುಷು ನಮ್ನತೇ' 'ಬಳಿತ್ಥಾ ತದ್ವಪುಷೇ ಧಾಯಿ ದರ್ಶತಮ್ ।' ತಾಂ ಸುತೇ ಕೀರ್ತಿಂ ಮಘವನ್ ಮಹಿತ್ವೇತ್ಯಾದಿಸೂಕ್ತಾನಿ ಚ ತತ್ಪ್ರಮಾಣಮ್ ।
*– [ಮ.ಭಾ.ತಾ.ನಿ. 32-132]*

# ಮುಖ್ಯಪ್ರಾಣನ ಗುಣಧರ್ಮಗಳು

**ಜೀವೋತ್ತಮನೆನಿಸಿರುವ ಮುಖ್ಯಪ್ರಾಣ ಅಷ್ಟು ಎತ್ತರದ ವ್ಯಕ್ತಿತ್ವವನ್ನು ಹೊಂದಿರಲು ಅವನಲ್ಲಿರುವ ಗುಣಧರ್ಮಗಳು ಯಾವುದೆಂದು ಬೆಳಕು ಚೆಲ್ಲಹೊರಟ ಈ ವಿಭಾಗದಲ್ಲಿ ೫೫ ಪ್ರಮಾಣಗಳು ಅವನ ಗುಣಧರ್ಮಗಳನ್ನು ಸಾರುತ್ತಿದ್ದು, ಅವುಗಳಲ್ಲಿ ೨೭ ಪ್ರಮಾಣಗಳು ಆಕರ ಗ್ರಂಥಗಳ ಹೆಸರಿನ ಉಲ್ಲೇಖದೊಂದಿಗೆ ಉದಾಹೃತಗ ಳಾಗಿದ್ದರೆ, ೨೮ ಪ್ರಮಾಣಗಳು ಗ್ರಂಥದ ಹೆಸರಿನ ಉಲ್ಲೇಖವಿಲ್ಲದೆಯೇ ಉದಾ ಹರಿಸಲ್ಪಟ್ಟವು.**

ವಾಯುದೇವನಲ್ಲಿ ಯಾವಾಗಲೂ ಗುಣಗಳು ಸಮೃದ್ಧಗಳಾಗಿರುವುದರಿಂದ ಅವನು 'ಅಧ್ಯರ್ಥ' ಎನಿಸುವನು.[1] ಪರಮಾತ್ಮನ ಅನುಗ್ರಹದಿಂದ ವಾಯುದೇವನಲ್ಲಿ ಎಲ್ಲ ಗುಣಗಳು ಸಿದ್ಧಿಸಿರುವವು.[2] ಗುಣಸಂಪನ್ನರಲ್ಲಿ ಇರುವ ಗುಣಪ್ರಾಪ್ತಿ ಯೋಗ್ಯತ್ವಕ್ಕೆ ವಾಯು ದೇವನು ಅಭಿಮಾನಿ ಎನಿಸುವನು. ಆದುದರಿಂದಲೇ ಅವನು ಸರ್ವಗುಣಗಳಲ್ಲೂ ಶ್ರೇಷ್ಠ ನೆನಿಸಿರುವನು.[3] ಶುಭವನ್ನು ಹೊಂದಲು ಬೇಕಾದ ಮುಖ್ಯ ಯೋಗ್ಯತೆ ಔತ್ಪತ್ತಿಕಗುಣ ಎನಿಸಿದ್ದು ಅದಕ್ಕೆ ಮುಖ್ಯಪ್ರಾಣನು ಅಭಿಮಾನಿ. ಆದುದರಿಂದಲೇ ಅವನು ಎಲ್ಲ ಗುಣ ಗಳಿಂದಲೂ ಅಧಿಕನು[4] ಅಧಿಕಗುಣಸಂಪನ್ನನಾಗಿ ಇರುವುದರಿಂದ ವಾಯು ಉಕ್ಥ ಎನಿಸು ವನು. ವಾಯುದೇವ ಇತರ ತತ್ತ್ವಾಭಿಮಾನಿಗಳಿಂದ ಉಕ್ಥ ಎಂದು ಸ್ತುತನಾಗಲು ಪ್ರಯೋ ಜಕವಾದ ಧರ್ಮಗುಣಾಧಿಕ್ಯರೂಪವಾದ ಉಚ್ಚತ್ವ. ತ್ವಂ ಉಚ್ಚೋऽಸಿ –ನೀನು ಗುಣಾಧಿಕ ನಾಗಿರುವಿ ಎಂಬ ಅಭಿಪ್ರಾಯದಲ್ಲಿ ತತ್ತ್ವಾಭಿಮಾನಿದೇವತೆಗಳು 'ತ್ವಮುಕ್ಥಮಸಿ' –ಎಂದು ಸ್ತುತಿಸಿರುವರು.[5] ವಾಯುದೇವ ರುದ್ರಾದಿದೇವತೆಗಳಲ್ಲೆಲ್ಲ ಅಧಿಕಗುಣಪೂರ್ಣನಾಗಿರು ವನು. ಆದುದರಿಂದಲೇ 'ಬ್ರಹ್ಮ' ಎನಿಸುವನು. ಅಧಿಕ ಮಾಹಾತ್ಮ್ಯಸಂಪನ್ನನಾಗಿರುವುದ

---

1. ಅಧ್ಯರ್ಥಾ ಹಿ ಗುಣಾ ನಿತ್ಯಂ ವಾಯೋರಧ್ಯರ್ಥ ಏವ ತತ್ ।
*– ಮಹಾಮೀಮಾಂಸೆ [ಬೃ.ಉ.ಭಾ. 5-9-9]*

2. ಸರ್ವೇ ಗುಣಾಸ್ತು ಪ್ರಾಣಸ್ಯ ಪರಮಾತ್ಮಪ್ರಸಾದತಃ ।
*– ಮಾಹಾತ್ಮ್ಯೆ [ಭಾ.ತಾ.ನಿ. 11-15-14]*

3. ಗುಣಿನಾಂ ಗುಣಯೋಗ್ಯತ್ವಂ ಯತ್ ಸರ್ವಗುಣಿಷು ಸ್ಥಿತಮ್ ।
ವಾಯುಸ್ತದಭಿಮಾನ್ಯೇಕಃ ಸರ್ವಗುಣ್ಯಾಧಿಕಸ್ತತಃ ॥
*– ಪ್ರಭಂಜನೇ [ಭಾ.ತಾ.ನಿ. 11-16-13]*

4. ಔತ್ಪತ್ತಿಕಗುಣೋ ನಾಮ ಶುಭಪ್ರಾಪ್ತ್ಯೇಕಯೋಗ್ಯತಾ ।
ತಸ್ಯಾಭಿಮಾನೀ ಪ್ರಾಣಸ್ತು ಸ ಹಿ ಸರ್ವಗುಣಾಧಿಕಃ ॥ *– [ಭಾ.ತಾ.ನಿ. 11-16-13]*

5. ಉಚ್ಚೈಃ ಸ್ಥಿತತ್ವಾ ದುಕ್ಥೋऽಭೂದ್ ವಾಯುರೇವ ತತಃ ಪ್ರಭುಃ ।
ಉಚ್ಚತ್ವಂ ಚ ಗುಣಾಧಿಕ್ಯಂ ತ್ವಮುಚ್ಚೋऽಸೀತಿ ತೇऽಬ್ರುವನ್ ॥
*– [ಐ.ಉ.ಭಾ. 1-4-9]*

ರಿಂದ 'ಬೃಹತೀ' ಎಂಬ ನಾಮವನ್ನು ಹೊಂದಿರುವನು.[6] ಜೀವಸಮುದಾಯದಲ್ಲಿ ಪೂರ್ಣ ನಾಗಿರುವುದರಿಂದ ವಾಯುದೇವನು ವಿಶ್ವ ಎನಿಸಿರುವನು.[7] ಸರ್ವಸಾಧುಗುಣಗಳನ್ನೂ ಹೊಂದಿದ್ದು 'ಸತ್ಯ' ಎನಿಸಿರುವನು.[8] ಅಕ್ರೌರ್ಯ[9] ಅಥವಾ ಆನಂದಾನುಭವದಿಂದ[10] ಕೂಡಿರುವಿಕೆ ಸೌಮ್ಯ ಎನಿಸಿದ್ದು, ಅಂತಹ ಸೌಮ್ಯಗುಣವನ್ನು ಹೊಂದಿರುವುದರಿಂದ ವಾಯುದೇವ 'ಸೋಮ' ಎನಿಸುವನು.[11] 'ಸತ್ ಎಂದರೆ ಸತ್ಯ. ಸಾಧುತ್ವವೇ ಸತ್ಯತ್ವ. ವಾಯುದೇವ ಸಾಧುತ್ವ ಎನಿಸುವ ಸಜ್ಜನಿಕೆಯನ್ನು ಎಲ್ಲರಿಗಿಂತ ಅತಿಶಯವಾಗಿ ಹೊಂದಿರು ವುದರಿಂದ ಸತ್ಯ ಎನಿಸುವನು.'[12]

- ಕೇಶವನು ಸ್ವತಂತ್ರನಾಗಿರುವುದರಿಂದ 'ಸ್ವ' ಎನಿಸುವನು. ಅವನಲ್ಲಿ ರತನಾಗಿ, ಆಸಕ್ತ ನಾಗಿ ಇರುವುದರಿಂದ ಜೀವಿಗಳ ಶರೀರಗಳಲ್ಲಿರುವ ಮುಖ್ಯಪ್ರಾಣನು 'ಸ್ವರ' ಎನಿಸು ವನು. ಸೂರ್ಯಮಂಡಲದಲ್ಲಿರುವ ಪ್ರಾಣದೇವನಾದರೂ ಎಲ್ಲ ಕಡೆಗಳಿಂದಲೂ ಪ್ರತಿಯೊಬ್ಬರಿಂದಲೂ 'ನನಗೆ ಅಭಿಮುಖವಾಗಿ' ಎಂದು ಹೇಳಲ್ಪಡುವುದರಿಂದ 'ಪ್ರತ್ಯಾಸ್ವರ' ಎನಿಸುವನು.[13]

- ಮುಖ್ಯವಾಯು ಆಶ್ಚರ್ಯಕರವಾಗಿ ಬರುವುದರಿಂದ ಅಥವಾ ಸುಖವನ್ನು ಉಂಟು ಮಾಡುವುದರಿಂದ 'ಹಾಯಿ' ಎಂದು ಕರೆಸಿಕೊಳ್ಳಲ್ಪಡುವ ಪ್ರಯುಕ್ತ 'ಹಾಯಿಕಾರ' ಎನಿಸಿರುವನು.[14]

---

6. ಪೂರ್ಣೋ ಹಿ ವಾಯುರ್ದೇವಾನಾಂ ತಸ್ಮಾದ್ ಬ್ರಹ್ಮೇತಿ ಚೋಚ್ಯತೇ ।
ಮಾಹಾತ್ಮ್ಯಾಧಿಕ್ಯತಶ್ಚೈವ ಬೃಹತೀತ್ಯೇವ ನಾಮ ತತ್ ॥ – *[ಐ.ಉ.ಭಾ. 2-2-5-4]*
7. ವಿಶ್ವೋ ವಾಯುಃ ಸಮುದ್ದಿಷ್ಟಃ ಪೂರ್ಣತ್ವಾಜ್ಜೀವಸಂಘತಃ ।
– *[ಬೃ.ಉ.ಭಾ. 6-4-13]*
8. ಸರ್ವಸಾಧುಗುಣತ್ವಾತ್ತು ವಾಯುಃ ಸತ್ಯ ಇತೀರ್ಯತೇ । – *[ಐ.ಉ.ಭಾ. 2-2-7-1]*
9. ಸೌಮ್ಯತ್ವಮಕ್ರೌರ್ಯಂ – *[ಋ.ಭಾ.ಟಿ. 18-4]*
10. ಆನಂದಾನುಭವಃಸೂಮ ಉತ್ಕೃಷ್ಟಾನುಭವಾತ್ ಸ್ಮೃತಃ ।
ತದ್ಯುಕ್ತತ್ವಂ ತಥಾ ಸೌಮ್ಯಂ.... ॥ – *[ಭಾ.ತಾ.ನಿ. 11-16-10]*
11. ಸೋಮಃ ಸೌಮಸ್ವರೂಪತ್ವಾತ್.... – *[ಐ.ಉ.ಭಾ. 2-8-49]*
12. ಸದೇವ ಸತ್ಯಮಿತ್ಯುಕ್ತಂ ಸತ್ಯೋ ವಾಯುರುದಾಹೃತಃ ।
ಸಾಧುತ್ವಂ ಸತ್ಯತಾ ಪ್ರೋಕ್ತಾ ಸಾಧುರ್ವಾಯುರ್ಹಿ ಸರ್ವತಃ ॥
– *ಶಬ್ದನಿರ್ಣಯ [ಐ.ಉ.ಭಾ. 2-1-2-16]*
13. ಕೇಶವಃ ಸ್ವಃ ಸ್ವತಂತ್ರತ್ವಾತ್ ತದ್ರತೇರ್ಮಾರುತಃ ಸ್ವರಃ ।
ಶರೀರಸ್ಥಶ್ಚ ಸೂರ್ಯಸ್ಥಃ ಪ್ರತಿ ಪ್ರತ್ಯಾ ಸಮಂತತಃ ।
ಮಾಂ ಪ್ರತೀತ್ಯತ ಏವಾಸೌ ಪ್ರತ್ಯಾಸ್ವರ ಉದಾಹೃತಃ ॥ – *[ಛಾಂ.ಉ.ಭಾ. 1-3-2]*
14. ಹೇತ್ಯಾಶ್ಚರ್ಯವದಾಯಾತಿ ಹೇತಿ ವಾ ಸುಖಕೃತ್ತತಃ ।
ಹಾಯಿಕಾರಸ್ತತೋ ವಾಯುಃ.... ॥ – *ಮಾಹಾತ್ಮ್ಯೇ [ಛಾಂ.ಉ.ಭಾ. 1-3-17]*

- ಮೃದುವಾದ ಮೋಡದ ಸ್ವರದಂತೆ ವಾಯುದೇವನ ಸ್ವರ.... ಇಪ್ಪತ್ತು ವರ್ಷ ವಯಸ್ಸಿನ ಎತ್ತಿನ ಸ್ವರದಂತೆ ಗಂಭೀರವಾದದ್ದು ವಾಯುದೇವನ ಸ್ವರ.15
- [ಮಧು ಎನಿಸುವ ವಿಷ್ಣುವಿಗೆ ಜೇನುತುಪ್ಪದ ಸಾದೃಶ್ಯವನ್ನು ತಿಳಿಸುತ್ತ] ಲಕ್ಷ್ಮಿಯು ಜೇನುಗೂಡಿನಂತಿರುವ ವಾಯುದೇವನಿಗೆ ಆಶ್ರಯಳಾಗಿರುವ ಪ್ರಯುಕ್ತ ಅಡ್ಡತೊಲೆ ಯಂತೆ. ವಿಷ್ಣುವು ವಿಶೇಷವಾಗಿ ವಾಯುದೇವರಲ್ಲಿ ಸದಾ ಸನ್ನಿಹಿತನಾಗಿರುವುದರಿಂದ ವಾಯುದೇವ ಜೇನುಗೂಡಿನಂತೆ. ವಾಯುದೇವನು ತನ್ನೊಳಗೆ ಶ್ರೀಹರಿಯನ್ನು ಚೆನ್ನಾಗಿ ನೋಡುವುದರಿಂದ ಮತ್ತು ಅಂತರಿಕ್ಷಲೋಕದಲ್ಲಿರುವುದರಿಂದ ಅಂತರಿಕ್ಷ ನಾಮಕ.16

[ಆದಿತ್ಯನಲ್ಲಿರುವ ಮಧುನಾಮಕ ವಾಸುದೇವನ ದಕ್ಷಿಣ ದಿಕ್ಕಿನ ಕಿರಣಗಳ ಬಗ್ಗೆ ತಿಳಿಸುತ್ತ ಯಜುರ್ವೇದಾಭಿಮಾನಿಗಳೇ ಜೇನುಹುಳಗಳಂತೆ ಎಂದು ಹೇಳಿದ್ದು ಅಲ್ಲಿ ಯಜುಶ್ಶಬ್ದದಿಂದ ವಾಚ್ಯರಾದವರನ್ನು ನಿರೂಪಿಸುತ್ತ] ಇಂದ್ರನ ಸಹಕಾರದಿಂದಾಗಿ ಇಂದ್ರಾದಿ ರುದ್ರರು 'ಯಜುಷ್' ಶಬ್ದವಾಚ್ಯರಾಗಿರುವರು. ಇಂದ್ರಶಬ್ದದಿಂದ ವಾಯು ದೇವನು ಹೇಳಲ್ಪಟ್ಟಿರುವನು. ಮಾಧ್ಯಂದಿನ ಸವನದಲ್ಲಿ ಸೋಮಪಾನಮಾಡುವ ರುದ್ರರಿ ಗಿಂತ ಪೂರ್ವದಲ್ಲಿ ವಾಯುವೇ ಪೂಜ್ಯನಾಗಿರುವುದರಿಂದ ಅವನನ್ನೇ ಇಲ್ಲಿ ಇಟ್ಟುಕೊಳ್ಳ ಬೇಕು. ಪಾರ್ವತೀಪತಿ ಮುಂತಾದ ರುದ್ರರಿಗಿಂತೆಲ್ಲ ಆ ಇಂದ್ರನೇ ಮುಖ್ಯ.17

- ...... ಸ್ವರ್ಗಾದಿಲೋಕಗಳಿಗೆ ವಾಯುದೇವನು ಅಧಿಪತಿ.18
- ರೈಕ್ವ ಮುನಿಗಳಿಂದ ಪೌತ್ರಾಯಣರಾಜನು ಶೋಕವುಳ್ಳವನಾದ್ದರಿಂದ 'ಶೂದ್ರ' ಸಂಬೋಧಿಸಲ್ಪಟ್ಟಿದ್ದರೂ ಪ್ರಾಣವಿದ್ಯೆಯ ಉಪದೇಶವನ್ನು ಅವನಿಂದ ಪಡೆದು ಅದರ ಫಲವಾಗಿ ಹೆಚ್ಚು ಧರ್ಮವನ್ನು ಸಂಪಾದಿಸಿದನು.19

---

15. '.....ಮೃದು ಮೇಘಸ್ವರೋ ವಾಯೋಃ....ವಾಯೋರ್ವಿಂಶತಿ ವರ್ಷಸ್ಯ ।
*– [ಛಾಂ.ಉ.ಭಾ. 2-2-14]*

16. .....ಶ್ರೀಸ್ತು ವಾಯೋರಾಶ್ರಯರೂಪತಃ ।
ತಿರೋವಂಶ ಇತಿ ಪ್ರೋಕ್ತಾ ಮಧ್ವಪೂಪಸ್ತು ಮಾರುತಃ ॥
ತಸ್ಮಿನ್ ಸನ್ನಿಹಿತೋ ವಿಷ್ಣುರ್ವಿಶೇಷೇಣ ಯತಃ ಸದಾ ।
ಸೋಽಂತರಿಕ್ಷಮಿತಿ ಪ್ರೋಕ್ತಃ ಸ್ವಾಂತಃ ಸಮ್ಯಗ್ಪರೀಕ್ಷಣಾತ್ ॥
ಅಂತರಿಕ್ಷಸ್ಥಿತಶ್ಚಾಸೌ.... । *– ಸಾಮಸಂಹಿತಾ [ಛಾಂ.ಉ.ಭಾ. 3-1-1]*

17. ಇಂದ್ರಾದ್ಯಾ ಯಜುರುದ್ದಿಷ್ಟಾ ರುದ್ರಾ ಇಂದ್ರಸಹಾಯತಃ ।
ಇಂದ್ರಶಬ್ದೋದಿತೋ ವಾಯುಃ ಸ ಯಾಜ್ಯಃ ಸೋಮಭುಕ್ ಪುರಃ ।
ಸ ಹಿ ಶಂಕರಪೂರ್ವಾಣಾಂ ರುದ್ರಾಣಾಂ ಮುಖ್ಯ ಏವ ಚ ॥
*– [ಛಾಂ.ಉ.ಭಾ. 3-1-2]*

18. .....ದ್ಯುವಾದೀಶಸ್ತು ಮಾರುತಃ । *– [ಛಾಂ.ಉ.ಭಾ. 3-1-11]*

19. ರಾಜಾ ಪೌತ್ರಾಯಣಃ ಶೋಕಾತ್ ಶೂದ್ರೇತಿ ಮುನಿನೋದಿತಃ ।
ಪ್ರಾಣವಿದ್ಯಾಮವಾಪ್ಯಾಸ್ಮಾತ್ ಪರಂ ಧರ್ಮಮವಾಪ್ತವಾನ್ ।
*– ಪಾದ್ಮೇ [ಛಾಂ.ಉ.ಭಾ. 4-1-3]*

- [ಮರಣ ಮತ್ತು ಮೋಕ್ಷದ ಸಂದರ್ಭಗಳಲ್ಲಿ] 'ವಾಗಭಿಮಾನಿನಿ ಉಮಾಳಿಂದ ಹೊಂದಲ್ಪಟ್ಟ ಮನೋಭಿಮಾನಿರುದ್ರನು ವಾಯುವನ್ನು ಹೊಂದುವನು. ವಾಯು ದೇವ ತೇಜಃ ಎನಿಸುವ ಶ್ರೀದೇವಿಯನ್ನು ಹೊಂದುವನು. ಶ್ರೀದೇವಿ ವಾಯುವನ್ನು ವಿಷ್ಣುವಿನಲ್ಲಿಗೆ ಕರೆದೊಯ್ಯುವಳು. ವಾಯು ಶ್ರೀಹರಿಯನ್ನು ಹೊಂದಲು ಶ್ರೀದೇವಿ ದ್ವಾರಮಾತ್ರಳೇ ಹೊರತು ಶ್ರೀದೇವಿಯಲ್ಲಿ ವಾಯು ಲಯ ಹೊಂದುವುದಿಲ್ಲ. ಶ್ರೀಹರಿಯಲ್ಲೇ ದೇಹಲಯವನ್ನು ಹೊಂದುವನು.20
- ವಾಯುದೇವನು ಮುಂದೆ ನಿಂತು ಕೊಂಡೊಯ್ಯುವವನು; ಶರೀರಿಗಳಿಗೆ ಪ್ರೇರಕ, ಎಲ್ಲವನ್ನೂ ಭಕ್ಷಿಸುವವನು –ಈ ಮೂರು 'ಪ್ರವೃತ್ತಿನಿಮಿತ್ತ'ಗಳಾದ ಧರ್ಮಗಳಿಂದಾಗಿ 'ಅಗ್ನಿ' ಎನಿಸುವನು.21
- ಗಾನಕಾಲದಲ್ಲಿ ಪ್ರಾಣನಿಗೆ ವಾಗಿಂದ್ರಿಯವು ಪೀಠ ಎನಿಸಿದರೆ, ಬೇರೆ ಕಾಲದಲ್ಲಿ ಅನ್ನವು ಅವನ ಪೀಠ ಎನಿಸಿದೆ.22
- ಈಶಾನ, ಮಾರುತ, ಪ್ರಾಣ, ವಾಯು, ಜಿಷ್ಣು, ಧೃಷ್ಣು, ಪವಮಾನ ಹಾಗೂ ಪವನ –ಈ ಹೆಸರುಗಳಿಂದ ಮುಖ್ಯಪ್ರಾಣ ಕರೆಸಿಕೊಳ್ಳಲ್ಪಡುವನು.23
- ದೇವತೆಗಳನ್ನು ಸೃಷ್ಟಿಸಿದ ಚತುರ್ಮುಖ 'ನಾನು ಸೃಷ್ಟಿಕರ್ತ; ನನ್ನಿಂದ ಸೃಷ್ಟರಾದ ದೇವತೆಗಳು ಪಾಲನಕರ್ತೃಗಳು. ಈ ಜಗತ್ತಿನ ಧಾರಣೆ ಹಾಗೂ ಶ್ರೇಷ್ಠವಾದ ಮೋಕ್ಷವೆಂಬ ಸದ್ಗತಿ ಹೇಗೆ ಉಂಟಾಗುವುದು? ಎಂದು ಯೋಚಿಸಿ, ವಿಷ್ಣುವಿನ ಆಜ್ಞಾಪುರಸ್ಸರವಾಗಿ ವಿಷ್ಣುಭಕ್ತ್ಯಭಿಮಾನಿಯೂ, ವಿಷ್ಣುಧರ್ಮಕ್ಕೆ ಅಭಿಮಾನಿಯೂ, ಪ್ರಾಣಗಳ ಧೈರ್ಯಕ್ಕೆ ಅಭಿಮಾನಿಯೂ ಆದ ವಾಯುದೇವನ ರೂಪಾಂತರವನ್ನು ಸೃಷ್ಟಿಸಿದನು. ಆದುದರಿಂದ ಸನಾತನನಾದ ಶ್ರೀವಿಷ್ಣುವನ್ನು ಬಿಟ್ಟರೆ ವಾಯುದೇವನಿಗಿಂತ

---

20. ಮುಕ್ತಾವುಮಾ ತು ವಾಗಾಖ್ಯಾ ರುದ್ರಂ ಯಾತಿ ಮನೋಽಭಿಧಮ್ ।
ವಾಯುಂ ಯಾತಿ ಶಿವಶ್ಚಾಪಿ ವಾಯುಸ್ತೇಜೋಽಭಿಧಾಂ ಶ್ರಿಯಮ್ ॥
ವಾಯುಮಾದಾಯ ಸಾ ದೇವೀ ಯಾತಿ ವಿಷ್ಣುಂ ಪರಾತ್ ಪರಮ್ ।
ದ್ವಾರಮಾತ್ರಾ ತು ಸಾ ದೇವೀ ವಾಯುಪ್ರಾಪ್ಯೋ ಜನಾರ್ದನಃ ॥
ಮೃತಿಕಾಲೇ ಚ ಮುಕ್ತೌ ಚ ಪುರುಷಾ ವಾಚಮಾಪ್ನುಯುಃ ।
– *ಸತ್ತತ್ತ್ವೇ [ಛಾಂ.ಉ.ಭಾ. 6-3-5]*

21. ವಾಯುರಗ್ನಿರಿತಿ ಪ್ರೋಕ್ತೋ ಹ್ಯಗ್ರಣೇತ್ವಾದಥಾಂಗಿನಾಮ್ ।
ನೇತೃತ್ವಾದದನಾದ್ ವಾಽಪಿ ತಸ್ಯ ಸ್ರಷ್ಟಾ ಜನಾರ್ದನಃ ॥
– *ಪ್ರಭಂಜನೇ [ಬೃ.ಉ.ಭಾ. 3-2-2]*

22. ವಾಗಿಂದ್ರಿಯಂ ಪೀಠರೂಪಂ ತಸ್ಯ ಪ್ರಾಣಸ್ಯ ಸಂಸ್ಥಿತಮ್ ।
ಗಾನಕಾಲೇಽನ್ಯದಾ ತ್ವನ್ನಂ ಪ್ರಾಣಪೀಠಮಿತಿ ಸ್ಮೃತಮ್ ॥ – *[ಬೃ.ಉ.ಭಾ. 3-3-27]*

23. ಈಶಾನೋ ಮಾರುತಃ ಪ್ರಾಣೋ ವಾಯುರ್ಜಿಷ್ಣುಸ್ತಥೈವ ಚ ।
ಧೃಷ್ಣುಶ್ಚ ಪವಮಾನಶ್ಚ ಪವನಶ್ಚೇತಿ ಕಥ್ಯತೇ ॥ – *ಶಬ್ದತತ್ತ್ವೇ [ಬೃ.ಉ.ಭಾ. 3-5-5]*

ಶ್ರೇಷ್ಠರಾದವರು ಯಾರೂ ಇಲ್ಲ. ಶೇಷ ಮುಂತಾದ ಕ್ಷತ್ರಿಯದೇವತೆಗಳಿಗೆ ವಾಯು ದೇವನೇ ಅಧಿಪತಿ. ಜಗದ್ಧಾರಕರಾದ ಶೇಷಾದಿಗಳನ್ನೂ ವಾಯುವೇ ಧಾರಣ ಮಾಡುವುದರಿಂದ ಅವನೇ 'ಧರ್ಮ' ಎನಿಸುವನು. ಪ್ರಜೆಗಳನ್ನೆಲ್ಲ ಅವನೇ ಧರಿಸುವನು. ಆದುದರಿಂದ ಸ್ವತಃ ವಿಷ್ಣುವನ್ನು ಹೊಂದಲು ಅಸಮರ್ಥನಾದವನಾದರೂ ವಿಷ್ಣು ಭಕ್ತ್ಯಾದಿಗಳಿಗೆ ಅಭಿಮಾನಿಯಾದ ವಾಯುವಿನ ಅನುಗ್ರಹದಿಂದ ಸರ್ವಶಕ್ತನಾದ ವಿಷ್ಣುವನ್ನು ಹೊಂದಲು ಬಯಸುವನು. ಹೇಗೆ ಯುವರಾಜನ ನೆರವಿನಿಂದ ಮಹಾರಾಜನನ್ನು ಹೊಂದಲು ಪ್ರಜೆಗಳು ಬಯಸುವರೋ ಹಾಗೆ. ಧರ್ಮಾಭಿಮಾನಿಯಾದ ವಾಯುವೇ ಸತ್ಯಾಭಿಮಾನಿಯೂ ಆಗಿರುವನು. ವಾಯುವೇ ಸತ್ಯ ಮತ್ತು ಧರ್ಮ ಇವೆರಡಕ್ಕೂ ಅಭಿಮಾನಿಯಾಗಿರುವುದರಿಂದ ಧರ್ಮವನ್ನು ತಿಳಿದವನನ್ನು ಸತ್ಯವನ್ನು ತಿಳಿದವನನ್ನಾಗಿಯೂ, ಸತ್ಯವನ್ನು ತಿಳಿದವನನ್ನು ಧರ್ಮವನ್ನು ತಿಳಿದವನನ್ನಾಗಿಯೂ ಜ್ಞಾನಿಗಳು ಹೇಳುವರು.24

- ಶ್ರೇಷ್ಠಸಾಮರ್ಥ್ಯಸಂಪನ್ನನಾಗಿರುವುದರಿಂದ ವಾಯುದೇವ 'ಇಂದ್ರ' ಎಂದೂ, ಸಮಾನ ಬಲವುಳ್ಳ ಶತ್ರು ಇಲ್ಲದಿರುವುದರಿಂದ 'ಅಶತ್ರು' ಎಂದೂ ಕರೆಸಿಕೊಳ್ಳುವನು.25
- ವಾಯುದೇವ ಎಲ್ಲ ಜೀವಿಗಳನ್ನು ರಕ್ಷಿಸುವವನಾಗಿ 'ಪ್ರಜಾಪತಿ' ಎನಿಸುವನು. ಚಂದ್ರನಲ್ಲಿದ್ದುಕೊಂಡು ವಿಶೇಷವಾಗಿ 'ಪ್ರಜಾಪತಿ' –ಪ್ರಜಾರಕ್ಷಕನೆನಿಸುವನು. ಕೃಷ್ಣ ಪಕ್ಷದ ಪ್ರತಿ ರಾತ್ರಿಯಲ್ಲೂ ಕಲೆಗಳು ಕ್ಷೀಣವಾಗುವುದರಿಂದಲೂ, ಶುಕ್ಲಪಕ್ಷದ ಪ್ರತಿ ರಾತ್ರಿಯಲ್ಲೂ ಕಲೆಗಳು ವೃದ್ಧಿಯಾಗುವುದರಿಂದಲೂ ಕಲೆಗಳಿಗೆ ರಾತ್ರಿ ಎಂಬ ಹೆಸರು.

---

24. ಸ್ರಷ್ಟಾ ಸ್ವಯಂ ಸಮುದ್ದಿಷ್ಟಃ ಪಾಲಕಾ ದೇವತಾ ಇಮಾಃ ।
ಧಾರಣಂ ಕಥಮಸ್ಯ ಸ್ಯಾದ್ ಗತಿಶ್ಚಾಸ್ಯ ಕಥಂ ಪರಾ ॥
ಇತಿ ಮತ್ವಾ ಹರೇರ್ಭಕ್ತಿಧರ್ಮರೂಪಂ ಪುನರ್ವಿಭುಃ ।
ಪ್ರಾಣಿನಾಂ ಧೈರ್ಯರೂಪಂ ಚ ವಾಯೋ ರೂಪಾಂತರಂ ಪುನಃ ॥
ಸಸರ್ಜ ಮತಿಮಾನ್ ಬ್ರಹ್ಮಾ ವಿಷ್ಣೋರಾಜ್ಞಾಪುರಸ್ಸರಃ ।
ತಸ್ಮಾದ್ ವಾಯೋಃ ಪರೋ ನಾಸ್ತಿ ಋತೇ ವಿಷ್ಣುಂ ಸನಾತನಮ್ ॥
ಶೇಷಾದೀನಾಂ ಕ್ಷತ್ರಿಯಾಣಾಂ ವಾಯುರೇವಾಧಿಪಃ ಸ್ಮೃತಃ ।
ಧಾರಣಾತ್ ಧರ್ಮ ಇತ್ಯಾಹುರ್ವಾಯುರ್ಧಾರಯತಿ ಪ್ರಜಾಃ ॥
ಅಬಲೋಽಪಿ ತತೋ ವಾಯೋರ್ವಿಷ್ಣುಭಕ್ತ್ಯಾದಿರೂಪಿಣಃ ।
ಪ್ರಾಪ್ತುಮಿಚ್ಛತಿ ಯುಕ್ತಃ ಸನ್ ವಿಷ್ಣುಂ ಸುಬಲವತ್ತರಮ್ ॥
ಯಥೈವ ಯುವರಾಜೇನ ಮಹಾರಾಜಮಭೀಪ್ಸತಿ ।
ಪ್ರಾಪ್ತುಂ ಧರ್ಮಾಭಿಮಾನೀ ಸ ವಾಯುಃ ಸತ್ಯಾಭಿಮಾನವಾನ್ ॥
ತಸ್ಮಾದಾಹುರ್ಧರ್ಮವಿದಂ ಸತ್ಯವೇತ್ತೇತಿ ವೇದಿನಃ ।
ಸತ್ಯಜ್ಞಮಥ ಧರ್ಮಜ್ಞಂ ವಾಯುರ್ದೇವೋ ಯತಸ್ತಯೋಃ ॥
*– ನಾರದೀಯ [ಬೃ.ಉ.ಭಾ. 3-5-8]*

25. ಸ ಇಂದ್ರಃ ಪರಮೈಶ್ವರ್ಯಾದಶತ್ರುಃ ಸಮವರ್ಜನಾತ್ । *– [ಬೃ.ಉ.ಭಾ. 3-6-18]*

ಹದಿನೈದು ಕಲೆಗಳು ವಾಯುದೇವನ ಹದಿನಾರನೆಯ ಕಲೆ ಶಾಶ್ವತವಾದುದು. ವಾಯುದೇವನಿಗೆ ಕಲೆಗಳಿಲ್ಲದಿದ್ದರೂ ಚಂದ್ರನ ಕಲೆಗಳಿಂದಾಗಿ ಅವನೂ ಕಲೆಗಳುಳ್ಳವ ನೆಂದು ಹೇಳಲ್ಪಡುವನಷ್ಟೇ. ಆ ಹದಿನಾರನೆಯ ಕಲೆಯಿಂದ ಅಮಾವಾಸ್ಯೆಯ ರಾತ್ರಿಯಂದು ಪ್ರಾಣಿಗಳಲ್ಲಿ ವಿಶೇಷವಾಗಿ ಆವೇಶಗೊಂಡಿರುವನು. ಓತಿಕೇತ ಕಲಿಯ ಆವೇಶಕ್ಕೊಳಗಾಗಿರುವುದರಿಂದ ಅದರ ವಧೆ ಅಲ್ಪದೋಷಪ್ರದವಾದರೂ ಅಮಾವಾಸ್ಯೆಯ ರಾತ್ರಿಯಲ್ಲಿ ವಾಯುದೇವನ ಆವೇಶವಿರುವುದರಿಂದ ಅದರ ವಧೆಯೂ ಮಹಾದೋಷ ಪ್ರದವೆನಿಸಬಲ್ಲದು. ಶ್ರೀವಿಷ್ಣುವಿನ 'ವತ್ಸ'ನಾಗಿ, ಕಂದನಾಗಿ ಅವನಿಂದ ಚೆನ್ನಾಗಿ ಸುಖವನ್ನು ಪಡೆಯುವುದರಿಂದಾಗಿ ವಾಯುದೇವ 'ಸಂವತ್ಸರ' ಎನಿಸಿರುವನು.26

- ಚಂದ್ರನಲ್ಲಿರುವ ಮುಖ್ಯಪ್ರಾಣ ಸಪ್ತಾನ್ನಸೃಷ್ಟಿಯ ಜ್ಞಾನಿಯಲ್ಲಿಯೂ ಸನ್ನಿಹಿತನಾಗಿರುವನು. ಚಂದ್ರನ ಕಲೆಗಳು ಅನಿತ್ಯಗಳಾಗಿರುವಂತೆ ಜ್ಞಾನಿಯ ಹಣವೂ ಅನಿತ್ಯ. ಹೀಗೆ ಅನಿತ್ಯವಾದುದರಿಂದ ಅದು ಚಂದ್ರನ ಹದಿನೈದು ಕಲೆಗಳ ಸ್ಥಾನದಲ್ಲಿರುವಂತಹದ್ದು. ಜ್ಞಾನಿಯ ಶರೀರವಾದರೂ ಧ್ರುವವಾದದ್ದೆನಿಸುವ ಹದಿನಾರನೆಯ ಕಲೆಯ ಸ್ಥಾನದಲ್ಲಿರುವಂತಹದ್ದು. ಶರೀರವು ಚಕ್ರದ ನಾಭಿಯಂತೆ ಇದ್ದರೆ, ಹಣವು ಸುತ್ತ ಆವರಕದಂತೆ ಇರುವಂತಹದ್ದು. ಸರ್ವಸ್ವ ಸೋಲಿನ ಸಂದರ್ಭದಲ್ಲೂ ಚಕ್ರದ ನಾಭಿ ಇದ್ದೇ ಇರುವುದು. ಹೀಗೆ ಮುಖ್ಯಪ್ರಾಣನ ಸನ್ನಿಧಿಯಿಂದಾಗಿ ಜ್ಞಾನಿಯ ದೇಹ ನಾಶಕ್ಕೊಳಗಾಗದು. ಯಾರು ಚತುರ್ಮುಖ, ಸರಸ್ವತಿ, ಮುಖ್ಯಪ್ರಾಣ ಇವರನ್ನು ಮಹಾಗುಣಸಂಪನ್ನರನ್ನಾಗಿ ತಿಳಿಯುವರೋ ಶ್ರೀವಿಷ್ಣುವಿಗೆ ಅವರಿಗಿಂತ ಅಧಿಕವಾಗಿ ಅತಿಪ್ರಿಯರೆನಿಸುವವರು ಬೇರೆಯವರಿಲ್ಲ.27

---

26. ವಾಯುಃ ಪ್ರಜಾಪತಿಃ ಸೋಽಸೌ ಚಂದ್ರಸಂಸ್ಥೋ ವಿಶೇಷತಃ ।
ರಾತ್ರೌ ರಾತ್ರೌ ಕ್ಷಯಾದಸ್ಯ ಪೂರಣಾದ್ ರಾತ್ರಿನಾಮಕಾಃ ॥
ಕಲಾಃ ಪಂಚದಶ ಪ್ರೋಕ್ತಾ ಧ್ರುವೈವಾಸ್ಯ ತು ಷೋಡಶೀ ।
ಅಕಲೋಽಪಿ ಸ ಚಂದ್ರಸ್ಯ ಕಲಾಭಿಃ ಪ್ರೋಚ್ಯತೇ ತಥಾ ॥
ಸೋಽಮಾವಾಸ್ಯಾಂ ಯತೋ ರಾತ್ರೌ ಪ್ರಾಣಭೃತ್ಸು ವ್ಯವಸ್ಥಿತಃ ।
ಕಲ್ಯಾವೇಶಾದಲ್ಪದೋಷಃ ಕೃಕಲಾಸವಧೋಽಪಿ ಸನ್ ॥
ತಸ್ಯಾಂ ರಾತ್ರೌ ಮಹಾದೋಷೋ ದೇವತಾವೇಶತೋ ಭವೇತ್ ।
ವಾಯುಃ ಸಂವತ್ಸರಃ ಪ್ರೋಕ್ತೋ ವತ್ಸೋ ವಿಷ್ಣೋರಸೌ ಯತಃ ॥
ಸಮ್ಯಗೇವ ರತಿಂ ಯಾತಿ..... । – [ಬೃ.ಉ.ಭಾ. 3-6-20, 21, 22]

27. .....ಸ ಏವಂ ವಿದುಷಿ ಸ್ಥಿತಃ ।
ಅಧ್ರುವಾಸ್ತು ಕಲಾ ಯದ್ವತ್ ಸೌಮ್ಯಾಸ್ತಸ್ಯ ತಥಾ ಧನವಮ್ ।
ಆಗಮಾಪಾಯವತ್ವಾತ್ತು ಧ್ರುವಾವದ್ ದೇಹ ಉಚ್ಯತೇ ॥
ನಾಭಿಸ್ಥಾನಂ ಶರೀರಂ ತು ಚಕ್ರಸ್ಯ ಪ್ರಧಿವದ್ ಧನವಮ್ ।
ಸರ್ವಸ್ವವಿಜಯೋಽಪ್ಯಸ್ಮಾತ್ ಪ್ರಧಿಮಾತ್ರಂ ಹಿ ಗಚ್ಛತಿ ॥
ಏವಂ ಮಹಾಗುಣಾನ್ ದೇವಾನೇವಂ ಯೋ ವೇದ ಪೂರುಷಃ ।
ನ ಚೈಭ್ಯೋಽತಿಪ್ರಿಯಃ ಕಶ್ಚಿತ್ ವಿಷ್ಣೋರಸ್ತಿ ಕದಾಚನ । – [ಬೃ.ಉ.ಭಾ. 3-6-22]

- [ರುದ್ರಾದಿಗಳು ಬಲಗಣ್ಣ ತುದಿಯಲ್ಲಿರುವ ವಾಯುದೇವನನ್ನು ಉಪಾಸನೆ ಮಾಡುವ ರೆಂಬುದನ್ನು ತಿಳಿಸುವ 'ಅರ್ವಾಗ್ಬಿಲಃ....' ಇತ್ಯಾದಿ ಮಂತ್ರದಲ್ಲಿ] 'ವಿಶ್ವರೂಪಂ' ಹಾಗೂ 'ಯಶಃ' ಎಂಬ ನಾಮಗಳಿಂದ ವಿಷ್ಣು ಹಾಗೂ ರಮಾದೇವಿಯನ್ನು ಹೇಗೋ ಹಾಗೆ ವಾಯುದೇವನನ್ನು ಪರಾಮರ್ಶಿಸಲಾಗಿದೆ. ಎಲ್ಲರ ಬಲಗಣ್ಣಿನಲ್ಲಿ ವಿಷ್ಣು ಹಾಗೂ ರಮಾದೇವಿಯರಂತೆ ವಾಯುದೇವನೂ ಇರುವನು. ಶ್ರೀವಿಷ್ಣು ಪೂರ್ಣ ನಾಗಿರುವಂತೆ, ರಮಾದೇವಿ ಸ್ತ್ರೀಯಲ್ಲಿ ಪೂರ್ಣಳಾಗಿರುವಂತೆ ವಾಯುದೇವ ಜೀವರ ಸಮೂಹದಲ್ಲಿ ಎಲ್ಲರಿಗಿಂತ ಅಧಿಕ ಪೂರ್ಣನಾಗಿರುವುದರಿಂದ ವಿಷ್ಣುವಿನಂತೆ, ರಮಾ ದೇವಿಯಂತೆ 'ವಿಶ್ವ' ಎನಿಸಿರುವನು. ಜ್ಞಾನ ಸುಖಸ್ವರೂಪರಾಗಿರುವುದರಿಂದ ವಿಷ್ಣು ರಮಾರಂತೆ ವಾಯುದೇವನೂ 'ಯಶಃ' ಎನಿಸುವನು.28

- ಪರಮಾತ್ಮನ ಮನಸ್ಸಿನಿಂದ ಹುಟ್ಟಿದ ಚತುರ್ಮುಖ ಹೇಗೆ ಮನಸ್ಸಿಗೆ ಅಭಿಮಾನಿ ಎನಿಸಿರುವನೋ ವಾಕ್‌ನಿಂದ ಹುಟ್ಟಿದ ಸರಸ್ವತಿ ಹೇಗೆ ವಾಕ್‌ಗೆ ಅಭಿಮಾನಿನಿಯೋ ಹಾಗೆ ಪರಮಾತ್ಮನ ಪ್ರಾಣನಿಂದ ಹುಟ್ಟಿದ ವಾಯುದೇವ ಪ್ರಾಣಕ್ಕೆ ಅಭಿಮಾನಿ ಎನಿಸಿರುವನು.29

- ಸಕಲಜೀವೋತ್ತಮನಾದ ವಾಯು ಪ್ರತ್ಯೇಕವಾಗಿ ನಾನಾ ವಿಧರಾದ ದೇವ, ಋಷಿ, ಪಿತೃ, ಯಕ್ಷ, ಗಂಧರ್ವ, ಮಾನುಷ, ಉರಗ ಮತ್ತು ಅಸುರ –ಎಂಬ ಎಂಟು ವಿಧ ಚೇತನಗಳನ್ನು ಯಾವಾಗಲೂ ತನ್ನ ವಶದಲ್ಲಿಟ್ಟುಕೊಂಡಿರುತ್ತಾನೆ. ಆದುದರಿಂದ ವಾಯುವಿಗೆ ವ್ಯಷ್ಟಿ ಎಂಬ ಹೆಸರು.30

- ವಾಯುದೇವನು ಭಯಂಕರ, ವಿದ್ಯಾಧಾರಕ. ಭಯಂಕರ ಸದ್ದು ಮಾಡುವವನು. ಮಹಾಬಲಶಾಲಿ. ಸಕಲಪ್ರಾಣಿಗಳ ಪ್ರಾಣಪ್ರದ. ದೇಹಿಗಳ ದೇಹ ಬೀಳಲು (ಅಂದರೆ

---

28. ವಿಶ್ವರೂಪಂ ಯಶಶ್ಚೇತಿ ನಾಮ್ನಾ ವಿಷ್ಣುರಮಾ ತಥಾ ।
ವಾಯುಶ್ಚ ಸಂಸ್ಥಿತಾ ನಿತ್ಯಂ ಸರ್ವೇಷಾಂ ದಕ್ಷಿಣಾಕ್ಷಿಗಾಃ ॥
ಪೂರ್ಣತ್ವಾದ್ ವಿಶ್ವತಾ ವಿಷ್ಣೋಃ ರಮಾಯಾಃ ಸ್ತ್ರೀಷು ಪೂರ್ಣತಃ ।
ವಾಯೋರ್ಜೀವೇಷು ಪೂರ್ಣತ್ವಾದ್ ಯಶೋ ಜ್ಞಾನಸುಖಾತ್ಮಕಾಃ ॥
ನಾರಾಯಣೀಯ [ಬೃ.ಉ.ಭಾ. 4-2-3]

29. ಮನೋವಾಕ್‌ಪ್ರಾಣತಸ್ತಸ್ಯ ಜಾತಾ ಅನ್ಯೇಽಭಿಮಾನಿನಃ ।
ಬ್ರಹ್ಮಾ ಸರಸ್ವತೀ ವಾಯುರ್ಮನಆದ್ಯಭಿಮಾನಿನಃ ॥ *–[ಬೃ.ಉ.ಭಾ. 3-6-9]*

30. ತಸ್ಮಾತ್ ಸರ್ವೋತ್ತಮೋ ವಾಯುರ್ವಿವಿಧಂ ತು ಯದಷ್ಟಕಮ್ ।
ದೇವಾನ್ ಋಷೀನ್ ಪಿತೄನ್ ಯಕ್ಷಾನ್ ಗಂಧರ್ವಾನ್ ಮಾನುಷೋರಗಾನ್ ॥
ಅಸುರಾಂಶ್ಚ ವಶೇ ನಿತ್ಯಂ ನಯತ್ಯಮಿತಪೌರುಷಃ ।
.....ಅತೋ ವ್ಯಷ್ಟಿಃ......ವಾಯುರೇವಾಭಿಧೀಯತೇ ।
*– ಪರಮಸಂಹಿತಾ [ಬೃ.ಉ.ಭಾ. 5-3-2]*

ಮರಣ ಹೊಂದಲು) ವಾಯುದೇವ ದೇಹದಿಂದ ಹೊರಟುಹೋಗುವುದೇ ಕಾರಣ. ಆದ್ದರಿಂದ ವಾಯುದೇವತೆಗಳಿಗೆಲ್ಲ ಸ್ತುತ್ಯ. ಉಳಿದೆಲ್ಲ ದೇವತೆಗಳಿಗಿಂತ ವಿಶಿಷ್ಟ.31

- ಭಗವಂತನು ನಿರ್ದೋಷನಾಗಿರುವುದರಿಂದ 'ಅ' ಎನಿಸಿರುವನು. ಅಂತಹ ಭಗವಂತನೇ ನಿಲಯ ವಾಸಸ್ಥಾನನಾಗಿರುವುದರಿಂದ ವಾಯುದೇವ ಅನಿಲ ಎನಿಸುವನು. ಅಮೃತ ಎನಿಸಿರುವ ಭಗವಂತನನ್ನು ಆಶ್ರಯಿಸಿರುವುದರಿಂದಲೇ ವಾಯುದೇವ ಅಮೃತ ಎನಿಸುವನು. ಹೀಗಿರುವಾಗ ಶ್ರೀಹರಿ ಸ್ವಾಭಾವಿಕವಾಗಿ, ಮುಖ್ಯವಾಗಿ ಅಮೃತ ಎನಿಸಬಲ್ಲನು,32
- ಎಂದೂ ತಿರೋಧಾನಕ್ಕೊಳಗಾಗದ ಜ್ಞಾನವನ್ನು ಹೊಂದಿರುವುದರಿಂದ ವಾಯುದೇವನೂ ಅಮೃತ ಎನಿಸಿರುವನು.33
- ಪತ್ನೀ ಸಹಿತರಾದ ಚತುರ್ಮುಖ, ಶೇಷ, ಗರುಡ ಹಾಗೂ ಶಿವ –ಇವರು ಹೇಗೋ ಹಾಗೆ ಭಾರತಿಯಿಂದ ಕೂಡಿದ ವಾಯುದೇವನೂ ಭಗವಂತನು ದೇವತೆಗಳಿಗೆ ಅನುಗ್ರಹಿಸಿದ ವಿಜಯದ ವಿಷಯದಲ್ಲಿ ಅಹಂಕಾರಪಟ್ಟಿಲ್ಲ. ಆದುದರಿಂದಲೇ ಇವರೆಲ್ಲ ಇತರ ದೇವತೆಗಳಿಗಿಂತ ಶ್ರೇಷ್ಠರು.34
- ಸಾಮವೇದಕ್ಕೆ ಪ್ರಾಣದೇವರುದ್ರಾದಿಗಳು ಅಭಿಮಾನಿದೇವತೆಗಳು.35
- ಕ್ಷತ್ರಿಯ ಜಾತ್ಯಾಭಿಮಾನಿ ವಾಯುದೇವ ಕ್ಷತ್ರಿಯಜಾತಿಯರಾದ ಗರುಡ, ಶೇಷ, ರುದ್ರ ಮುಂತಾದ ದೇವತೆಗಳಲ್ಲೂ, ಮನುಷ್ಯರಲ್ಲಿಯ ರಾಜರುಗಳಲ್ಲೂ ಅಂತರ್ಗತನಾಗಿ ಇರುವನು.36

---

31. ವಾಯುರ್ಭೀಮೋ ಭೀಮನಾದೋ ಮಹೌಜಾಃ ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ । ಅನಾವೃತ್ತಿರ್ದೇಹಿನಾಂ ದೇಹಪಾತೇ ತಸ್ಮಾದ್ ವಾಯುರ್ದೇವದೇವೋ ವಿಶಿಷ್ಟಃ ॥ *– [ಬೃ.ಉ.ಭಾ. 5-9-8]*

32. ಅದೋಷತ್ವಾದ ಇತ್ಯುಕ್ತೋ ವಾಯುಸ್ತನ್ನಿಲಯೋ ಯತಃ ।
ಅನಿಲಂ ತತ ಏವಾಸಾವಮೃತಂ ಚೇತಿ ಕೀರ್ತ್ಯತೇ ।
ತದಾಶ್ರಯೋಽಪಿ ಹ್ಯಮೃತಃ ಕಿಮು ಸಾಕ್ಷಾತ್ ಸ್ವಯಂ ಹರಿಃ ॥
*– [ಬೃ.ಉ.ಭಾ. 7-30-3]*

33. ಅತಿರೋಹಿತವಿಜ್ಞಾನಾದ್ ವಾಯುರಪ್ಯಮೃತಃ ಸ್ಮೃತಃ ।
*– ರಾಮಸಂಹಿತಾ [ಈ.ಉ.ಭಾ. 2-3]*

34. ಯಸ್ಮಾದ್ ಬ್ರಹ್ಮಾ ಚ ವಾಯುಶ್ಚ ಶೇಷವೀಂದ್ರೌ ಶಿವಸ್ತಥಾ ।
ಸಭಾರ್ಯಾ ಗರ್ವಿಣೋ ಮಾಽಸನ್ ಸುರೇಭ್ಯಸ್ತೇಽಧಿಕಾಸ್ತತಃ ॥
*– ಬ್ರಹ್ಮಸಾರೇ [ತ.ಉ.ಭಾ. 5-2]*

35. .....ಸಾಮ್ನಃ ಪ್ರಾಣಶಿವಾದಯಃ *– [ಗೀ. 10-22]*

36. ಕ್ಷತ್ರಜಾತ್ಯಭಿಮಾನೀ ತು ಪವನೋ ದೇವರಾಜಭಿಃ ।
ಸುಪರ್ಣಶೇಷರುದ್ರಾದ್ಯೈರ್ಮಾನುಷೇಷು ಚ ರಾಜಭಿಃ.... ಸಹೈವಾಸ್ತೇ.... ॥
*– ಬ್ರಹ್ಮಾಂಡೇ [ಬೃ.ಉ.ಭಾ. 3-5-9]*

- ವಾಯುದೇವನು ಎಲ್ಲರಿಂದ ಚಟುವಟಿಕೆಗಳನ್ನು ಮಾಡಿಸುವುದರಿಂದ ಪ್ರಾಣ ಎನಿಸುವನು. ಮತ್ತೊಬ್ಬನನ್ನು ಎದುರಿಸುವ ಸಾಮರ್ಥ್ಯ ಇರುವುದರಿಂದ 'ಓಜಃ' ಎನಿಸುವನು. ಇನ್ನೊಬ್ಬರ ಆಕ್ರಮಣಕ್ಕೆ ಒಳಗಾಗದೆ ಇರುವುದರಿಂದ 'ಸಹಃ' ಎನಿಸುವನು. ಯಾವುದನ್ನಾದರೂ ಸ್ವಚ್ಛಾನುಸಾರವಾಗಿ ಮಾಡಬಲ್ಲನಾದುದರಿಂದ ಬಲ ಎನಿಸುವನು. ಎಲ್ಲವನ್ನೂ ವಿಶೇಷವಾಗಿ ಧರಿಸುವುದರಿಂದ ವಿಧೃತಿ ಎನಿಸುವನು.37

- ಸರ್ವಜೀವಸಮೂಹದಲ್ಲಿ ಶ್ರೀಹರಿಯನ್ನು ಚೆನ್ನಾಗಿ ತಿಳಿದವರೆಂದರೆ ಚತುರ್ಮುಖ ಮತ್ತು ವಾಯುದೇವ. ಆದರೆ ಶ್ರೀಹರಿ ತನ್ನನ್ನು ಎಷ್ಟು ತಿಳಿದಿರುವನೋ ಅಷ್ಟು ಅವನನ್ನು ತಿಳಿದವರು ಯಾರೂ ಇಲ್ಲ. ಲೋಕವಂದಿತರಾದ ಚತುರ್ಮುಖ ವಾಯುಗಳೂ, ಪರಮಾತ್ಮನು ತನ್ನನ್ನು ಎಷ್ಟು ತಿಳಿದಿರುವನೋ ಅಷ್ಟು ಅವನನ್ನು ತಿಳಿದಿಲ್ಲ.38

- ಆಧಾರಗಳಿಗೆ ಒಡೆಯನಾದವನು ವಾಯುದೇವ.39

- ಪ್ರಕಾಶಸ್ವರೂಪಿಯಾದ ವಿಷ್ಣುವಿನಲ್ಲಿ ಯಾವಾಗಲೂ ಆಸಕ್ತನಾಗಿರುವುದರಿಂದ ಹಾಗೆಯೇ ಜಗತ್ತಿನ ಭರಣೆ ಮಾಡುತ್ತಿರುವುದರಿಂದ ವಾಯುದೇವನು ಭರತ ಎನಿಸುವನು. ಆದುದರಿಂದಲೇ ಅವನ ಪತ್ನಿ ಸರಸ್ವತಿ ಭಾರತಿ ಎನಿಸುವಳು.40

- ಶ್ರೀವಿಷ್ಣುವನ್ನು ಒಲಿಸಿಕೊಂಡು ಅವನ ಅನುಗ್ರಹಕ್ಕೆ ಪಾತ್ರವಾಗುವುದೇ ಹೇಗೆ ವಿಷ್ಣು ವಿಜಯ ಎನಿಸುವುದೋ ಹಾಗೆಯೇ ಪ್ರಾಣವಿಜಯವೂ ಪ್ರಾಣನನ್ನು ಒಲಿಸಿಕೊಂಡು ಅವನ ಅನುಗ್ರಹಕ್ಕೆ ಪಾತ್ರವಾಗುವುದು. ಯಾಕೆಂದರೆ ಎಲ್ಲರನ್ನೂ ಗೆಲ್ಲಬಲ್ಲ ಅವರು ಯಾರಿಂದಲೂ ಎಲ್ಲೂ ಗೆಲ್ಲಲ್ಪಡಲಾರರು ತಾನೇ? ಅಪೇಕ್ಷಿತವಾದ ಫಲವು ಯಾರಿಂದ ನೀಡಲ್ಪಡುವುದೋ ಅವನು ಗೆಲ್ಲಲ್ಪಟ್ಟ ಎಂದು ವ್ಯವಹರಿಸಲಾಗುವುದು. ಹೇಗೆ

---

37. ಸರ್ವಚೇಷಯಿತೃತ್ವಾತ್ತು ಪ್ರಾಣೋಽಭಿಭವಶಕ್ತಿತಃ ।
ಓಜಸ್ತ್ವನಭಿಭಾವ್ಯತ್ವಾತ್ ಸಹಶ್ಚ ಸ್ವೇಚ್ಛಯಾ ಕೃತೇಃ ।
ಬಲಂ ವಿಧಾರಕತ್ವಾಚ್ಚ ವಿಧೃತಿರ್ವಾಯುರುಚ್ಯತೇ ।
*– ಭಾರತೇ [ಭಾ.ತಾ.ನಿ. 2-5-25]*

38. ಸರ್ವಜೀವನಿಕಾಯೇಷು ಬ್ರಹ್ಮವಾಯೂ ಪರೇರ್ವಿದೌ ।
ನ ಚಾನ್ಯಸ್ತಾದೃಶೋ ವೇತ್ತಾ ಯಾವದ್ ವೇತ್ತಿ ಹರಿಃ ಸ್ವಯಮ್ ।
ತಾವತ್ ತಾವಪಿ ನೋ ವಿಷ್ಣುಂ ಜಾನೀತೋ ಲೋಕವಂದಿತೌ ॥
*– ಬ್ರಹ್ಮಾಂಡೇ [ಭಾ.ತಾ.ನಿ. 2-6-35]*

39. ......ವಾಯುರಾಧಾರಪಃ ಸ್ಮೃತಃ । *– ಬ್ರಹ್ಮತರ್ಕ [ಭಾ.ತಾ.ನಿ. 5-18-37]*

40. ರತತ್ವಾದ್ ಭಾತ್ಮಕೇ ವಿಷ್ಣಾವಥವಾಽಪಿ ಜಗದ್‌ಭೃತೇಃ ।
ಭರತೋ ವಾಯುರುದ್ದಿಷ್ಟೋ ಭಾರತೀ ತತ್ ಸರಸ್ವತೀ ।
*– ನಾಮಸಂಹಿತಾ [ಭಾ.ತಾ.ನಿ. 10-94-19]*

ಭೂಮಿ ಈ ಅಭಿಪ್ರಾಯದಲ್ಲೇ ಜಿತಾ, ಮೋಕ್ಷಪದವಿಯು ಜಿತ ಎನ್ನಲಾಗುವುದೋ ಹಾಗೆ.41

- ವಾಯುದೇವನು ಯಾವಾಗಲೂ ಶ್ರೀವಿಷ್ಣುವಿನ ಬಗ್ಗೆ ಭಕ್ತರಾಗದಿದ್ದವರನ್ನು ಹಾಗೂ ವಿಷ್ಣುಭಕ್ತವಿರೋಧಿಗಳನ್ನು ಅಂಧಂತಮಸ್ಸಿನಲ್ಲಿ ಎಸೆದು ದಂಡಿಸುವನು. ವಿಷ್ಣುಭಕ್ತರನ್ನು ಮೋಕ್ಷದೆಡೆಗೆ ಸಾಗಿಸಿ, ಅಲ್ಲಿ ಸುಖವನ್ನು ಹೊಂದಿಸುವನು.42

- ವಾಯು ಚತುರ್ಮುಖನ ಪುತ್ರನಾಗಿ ಪ್ರಕೃತಿಯಲ್ಲಿ ಹುಟ್ಟಿರುವನು. ತ್ರಿಗುಣಗಳಿಗೂ ಅಭಿಮಾನಿ ಆದ ಅವನು ಸತ್ವಗುಣಕ್ಕೆ ವಿಶೇಷ. ಒಬ್ಬಳೇ ಪ್ರಕೃತಿ ಸತ್ವಾದಿ ಗುಣಭೇದದಿಂದಾಗಿ ಗಾಯತ್ರೀ, ಸಾವಿತ್ರೀ ಹಾಗೂ ಸರಸ್ವತೀ –ಎಂದು ಮೂರು ರೂಪಗಳನ್ನು ತಾಳುವಳು. ಆ ಮೂವರಲ್ಲೂ ಚತುರ್ಮುಖನು ವೀರ್ಯವನ್ನು ಸೃಷ್ಟಿಸುವನು. ಆ ವೀರ್ಯವು ಒಟ್ಟು ಸೇರಿ, ಅದರಿಂದ ಸೂತ್ರ ಎನಿಸುವ ವಾಯು ದೇವನು ಹುಟ್ಟುವನು. ಲೋಕನಾಯಕನಾದ ಅವನಿಗೂ ಧಾರಕನಾಗಿರುವ ಭಗ ವಂತನು ಸೂತ್ರ.43

- ವಾಯುವೇ ಹಸುಗಳ ಒಡೆಯ.44

- ಸೋಮಾದಿ ರೂಪದಲ್ಲಿರುವ ಒಳ್ಳೆಯ ನೀರು, ಒಳ್ಳೆಯ ಕರ್ಮ ಹಾಗೂ ಒಳ್ಳೆಯ ಜ್ಞಾನಾದಿಗಳು –ಇವುಗಳನ್ನು ಕರೆಯುವವನು.

---

41. ಪ್ರಸಾದಭಾಕ್ತ್ವಂ ಸಂಪ್ರೋಕ್ತಂ ಪ್ರಾಣವಿಷ್ಣೋರ್ಜಯಸ್ಥಿತಿ ।
ನಹಿ ವಿಜೇತಾರೌ ವಿಜೇಯೌ ಕೇನಚಿತ್ ಕ್ವಚಿತ್ ॥
ಅಪೇಕ್ಷಿತಂ ಫಲಂ ಯೇನ ದೀಯತೇ ತಜ್ಜಿತಂ ತ್ವಿತಿ ।
ಯಥಾ ಜಿತಾ ವಸುಮತೀ ಯಥಾ ಮೋಕ್ಷಪದಂ ಜಿತಮ್ ॥
*– ಪ್ರಭಂಜನೇ [ಭಾ.ತಾ.ನಿ. 11-14-35]*

42. ವಿಷ್ಣುಭಕ್ತಾನ್ ಸದಾ ವಾಯುಃ ಶಾಸಯೇತ್ ತಮಸಿ ಕ್ಷಿಪನ್ ।
ವಿಷ್ಣುಭಕ್ತಾನ್ ವಿಮೋಕ್ಷಾಯ ಪ್ರಾಪಯಿತ್ವಾ ಸುಖಂ ನಯೇತ್ ।
*– [ಭಾ.ತಾ.ನಿ. 11-21-28]*

43. .........ವಾಯುಶ್ಚ ಬ್ರಹ್ಮಣಃ ಪುತ್ರಃ ಪ್ರಕೃತೌ ಸಮಜಾಯತ ।
ತ್ರಿಗುಣಾತ್ಮಾ ಸ ಉದ್ದಿಷ್ಟಃ ಪ್ರಾಯಃ ಸತ್ವಾತ್ಮಕಸ್ತಥಾ ॥
ಗಾಯತ್ರೀ ಚೈವ ಸಾವಿತ್ರೀ ತಥೈವ ಚ ಸರಸ್ವತೀ ।
ಏವಂ ತ್ರಿರೂಪಾ ಪ್ರಕೃತಿರೇಕಾ ಸತ್ವಾದಿಭೇದತಃ ॥
ತಾಸು ವೀರ್ಯಂ ಸಮುತ್ಸೃಷ್ಟಂ ಬ್ರಹ್ಮಣೈಕತ್ವಮಾಗತಮ್ ।
ಸ ಸೂತ್ರಾತ್ಮಾ ಸಮುದ್ದಿಷ್ಟೋ ವಾಯುರ್ಲೋಕಪ್ರಣಾಯಕಃ ।
ತಸ್ಯಾಪಿ ಸೂತ್ರಂ ಭಗವಾನ್ ಧಾರಣಾದ್ ವಿಷ್ಣುರವ್ಯಯಃ ॥
*– ಪ್ರಾಥಮ್ಯೇ [ಭಾ.ತಾ.ನಿ. 11-24-7]*

44. ವಾಯುರ್ವಾವ ಗವಾಂ ಪತಿಃ । *– ಶ್ರುತಿ [ಖಂಡಾರ್ಥನಿರ್ಣಯ]*

ಅಂದರೆ ಆಯಾ ಯೋಗ್ಯ ವ್ಯಕ್ತಿಗಳಿಂದ ಹೊರಹೊಮ್ಮಿಸುವವನು.45

- ಯಾರ ಆಶ್ರಯದಿಂದ ಈ ಜಗತ್ತಿನ ಚಟುವಟಿಕೆ ನಡೆಯುವುದೋ ಅಂತಹವನು ಮತ್ತೊಬ್ಬನನ್ನು ಹೇಗೆ ಆಶ್ರಯಿಸಿಯಾನು? ಹೇಗೆ ಪ್ರಾಣ ಎಲ್ಲರಿಗೂ ಒಬ್ಬನೇ ಸರ್ವಾಶ್ರಯ ಎನಿಸುವನೋ ಹಾಗೆಯೇ ರಾಜನೂ ಎಲ್ಲರಿಗೂ ಒಬ್ಬನೇ ಸರ್ವಾಶ್ರಯ.46
- ಚಕ್ಷುರಾದಿ ಇಂದ್ರಿಯಗಳೆಲ್ಲ ಕರಣಗಳು. ಪ್ರಾಣ ಮಾತ್ರ ಕರಣ ಅಲ್ಲ. ಆದುದರಿಂದಲೇ ಅವನನ್ನು ಮುಖ್ಯ ಎಂದು ಕರೆಯುವರು.47
- ಮುಖ್ಯಪ್ರಾಣನೇ ಕೆಳಗೆ ಇರುವನು; ಮುಖ್ಯಪ್ರಾಣನೇ ಮೇಲೆ ಇರುವನು. ಮುಖ್ಯಪ್ರಾಣನೇ ಮಧ್ಯದಲ್ಲಿ ಇರುವನು. ಮುಖ್ಯಪ್ರಾಣನೇ ಎಲ್ಲೆಡೆ ಇರುವನು. ಹೀಗೆ ಎಲ್ಲೆಡೆ ಮುಖ್ಯಪ್ರಾಣನು ವ್ಯಾಪಿಸಿರುವನು.48
- ಮುಖ್ಯಪ್ರಾಣನು ಸಮಸ್ತ ಜಗತ್ತನ್ನು ವ್ಯಾಪಿಸಿರುವುದರಿಂದಲೇ, ಅವನಿಂದ ಇಡೀ ಜಗತ್ತು ಧರಿಸಲ್ಪಟ್ಟಿದೆ. ಹೀಗೆ ಅವನು ವ್ಯಾಪಿಸಿ, ಧರಿಸಿರುವುದಲ್ಲದಿದ್ದರೆ ಈ ಜಗತ್ತು ಬೇರೆ ಯಾರಿಂದ ಧರಿಸಲ್ಪಡುವುದು?49
- ಅಣುಪರಿಮಾಣವುಳ್ಳವನಿಂದ ಈ ಜಗತ್ತಿನ ಸೃಷ್ಟಿ ಆಗುವುದು; ಈ ಜಗತ್ತಿನ ಧಾರಣೆ ಆಗುವುದು; ಅಣುಪರಿಮಾಣವುಳ್ಳವನಲ್ಲಿಯೇ ಈ ಜಗತ್ತಿನ ಲಯವೂ ಸಂಭವಿಸು

---

45. ಅಥ ಸೂದದೋಹಾಃ ಪ್ರಾಣೋ ವೈ ಸೂದದೋಹಾಃ ।
*– ಶ್ರುತಿ [ಖಂಡಾರ್ಥನಿರ್ಣಯಃ]*

* ಶೋಭನಂ ಉದಂ ಕರ್ಮ ಜ್ಞಾನಂ ವಾ ದೋಗ್ಧೀತಿ ಸೂದದೋಹಾಃ ।
*– [ಖಂಡಾರ್ಥನಿರ್ಣಯಃ]*

* ಉದೇತ್ಯುಚ್ಚೋ ಭವತ್ಯನೇನ ಪುರುಷ ಇತ್ಯುದಂ ಜ್ಞಾನಾದಿ ।
*– [ಖಂಡಾರ್ಥನಿರ್ಣಯಃ]*

46. ಯದಾಶ್ರಯಾದಸ್ಯ ಚೇಷ್ಟಾ ಸೋಽನ್ಯಂ ಕಥಮುಪಾಶ್ರಯೇತ್ ।
ಯಥಾ ಪ್ರಾಣಸ್ತಥಾ ರಾಜಾ ಸರ್ವಸ್ಯೈಕಾಶ್ರಯೋ ಭವೇತ್ ॥
*– ಭಾರತೇ [ಬ್ರ.ಸೂ.ಭಾ. 2-4-11]*

47. ತಾನಿ ಹವಾ ಏತಾನಿ ಸರ್ವಾಣಿ ಕರಣಾನ್ಯಥ ಪ್ರಾಣ ಏವಾಕರಣಸ್ತಸ್ಮಾನ್ಮುಖ್ಯಸ್ತಸ್ಮಾನ್ಮುಖ್ಯ ಇತ್ಯಾಚಕ್ಷತೇ । *– ಮೂಂಡವ್ಯಶ್ರುತಿ [ಬ್ರ.ಸೂ.ಭಾ. 2-4-12]*

48. ಪ್ರಾಣ ಏವಾಧಸ್ತಾತ್ ಪ್ರಾಣ ಉಪರಿಷ್ಟಾತ್ ಪ್ರಾಣೋ ಮಧ್ಯತಃ ಪ್ರಾಣಃ ಸರ್ವತಃ ಪ್ರಾಣ ಏವೇದಂ ಸರ್ವಮ್ । *– [ಬ್ರ.ಸು.ಭಾ. 2-4-14]*

49. ಯತಃ ಸರ್ವಂ ಜಗದ್ ವ್ಯಾಪ್ಯ ತಿಷ್ಠತಿ ಪ್ರಾಣ ಏವ ತು ।
ಅತೋ ಧೃತಂ ಜಗತ್ ಸರ್ವಮನ್ಯಥಾ ಕೇನ ಧಾರ್ಯತೇ ॥
*– ವಾಯುಪ್ರೋಕ್ತ [ಬ್ರ.ಸೂ.ಭಾ. 2-4-14]*

ವುದು. ಆ ಅಣುಪರಿಮಾಣವುಳ್ಳವನು ಬೇರೆ ಯಾರೂ ಅಲ್ಲ; ಮತ್ತೆ ಮುಖ್ಯಪ್ರಾಣ. ಅಂತಹ ಮುಖ್ಯಪ್ರಾಣನಲ್ಲಿಯೇ ಈ ಜಗತ್ತು ಇರುವುದು.50

- ಅಂತಹ ಮುಖ್ಯಪ್ರಾಣ ಅಣುವೂ ಹೌದು ಮಹಾನ್ ಕೂಡಾ. ಒಳಗೆ ಅಣು. ಹೊರಗೆ ಮಹಾನ್. ಮುಖ್ಯಪ್ರಾಣ ಈಶಿತವ್ಯನೂ ಈಶನೂ ಆಗಿರುವನು. ಈ ಎಲ್ಲದ್ದಕ್ಕೂ ಈಶನಾಗಿರುವನು. ಪರಮಾತ್ಮನ ಪಾಲಿಗೆ ಮಾತ್ರ ಈಶಿತವ್ಯ –ಎಂದರೆ ಅವನ ಸ್ವಾಮಿತ್ವಕ್ಕೆ ಒಳಪಡುವವನು.51
- ಮುಖ್ಯಪ್ರಾಣನ ಪ್ರಾಣಾದಿ ಐದು ಪ್ರಮುಖ ರೂಪಗಳು ಅಶೇಷಗುಣಸಂಪನ್ನ ವಾದವು. ಆ ಐದು ಪ್ರಾಣಾದಿಗಳ ದಾಸರೆನಿಸಿರುವ ಪ್ರಾಣಾದಿಗಳೂ ಸದ್ಗುಣಗಳಿಂದ ಯುತರಾದವರು.52
- ಯಾವ ಮುಖ್ಯಪ್ರಾಣನಿಂದ ಚರಾಚರಾತ್ಮಕವಾದ ಈ ಜಗತ್ತು ವ್ಯಾಪಿಸಲ್ಪಟ್ಟಿದೆಯೋ ಅಂತಹ ಮುಖ್ಯಪ್ರಾಣನು 'ಮಹಾನ್' –ಅತಿದೊಡ್ಡ ಪರಿಮಾಣವುಳ್ಳವನು.53
- ನಾಡಿಗಳಲ್ಲಿ ಸಂಚರಿಸುವ ಮುಖ್ಯಪ್ರಾಣ ಅಣುಪರಿಮಾಣವುಳ್ಳವನು.54
- ನಿತ್ಯ ಮತ್ತು ಅನಿತ್ಯ ಪದಾರ್ಥಗಳಿವೆ. ಪಂಚಭೂತಗಳಲ್ಲಿ ತೇಜಸ್ಸು, ನೀರು, ಪೃಥಿವಿ ಹಾಗೂ ಆಕಾಶ –ಇವು ಅನಿತ್ಯಗಳು. ವಾಯುವೊಬ್ಬನೇ ನಿತ್ಯ. ಯಾಕೆಂದರೆ ವಾಯು ದೇವನಿಂದಲೇ ಉಳಿದೆಲ್ಲ ಪೃಥಿವ್ಯಾದಿ ಭೂತಗಳು, ತಮ್ಮ ಕಾರ್ಯಗಳಲ್ಲಿ ವಿಶೇಷ ವಾಗಿ ಪ್ರೇರಿಸಲ್ಪಡುವವು. ಹಾಗೆಯೇ ಚೇತನ ಮತ್ತು ಅಚೇತನ ಎಂದು ಎರಡು ಪ್ರಭೇದದ ವಸ್ತುಗಳಿವೆ. ಪಂಚಭೂತಗಳಲ್ಲಿ ತೇಜಸ್ಸು, ನೀರು, ಪೃಥಿವೀ ಹಾಗೂ ಆಕಾಶ ಇವು ಅಚೇತನ. ವಾಯು ಮಾತ್ರ ಚೇತನ. ಯಾಕೆಂದರೆ ವಾಯುವಿನಿಂದಲೇ ಸಕಲಭೂತಗಳೂ ತಿಳಿಯಲ್ಪಡುವವು.55

---

50. ಅಣುನ್ಯೈತತ್ ಸೃಜ್ಯತೇಽಣುನ್ಯೈತದ್ ಧಾರ್ಯತೇಽಣೌ ಲಯಮಭ್ಯುಪೈತಿ ಪ್ರಾಣೋ ವಾ ಅಣುಃ ಪ್ರಾಣೇ ಹ್ಯೇತದ್ ಭವತಿ । *– ಸೌತ್ರಾಯಣಶ್ರುತಿ [ಬ್ರ.ಸೂ.ಭಾ. 2-4-14]*

51. ಸ ವಾ ಏಷ ಪ್ರಾಣೋಽಣುರ್ಮಹಾನ್ ನಾಮಾಂತರ್ವಾಽಣುರ್ಬಹಿರ್ಮಹಾನ್ ।
ಪ್ರಾಣೋ ವಾ ಈಶಿತವ್ಯೇಶ ಈಶೋ ಹ್ಯಸೌ ಸರ್ವಸ್ಯೇಶಿತವಶ್ಚ ಪರಸ್ಯ ॥
*– ಕೌಂಡಿನ್ಯಶ್ರುತಿ [ಬ್ರ.ಸೂ.ಭಾ. 2-4-14]*

52. ಅಶೇಷಗುಣಪೂರ್ಣಾನಿ ಮುಖ್ಯರೂಪಾಣಿ ಪಂಚ ಚ ।
ತದ್ದಾಸಾಃ ಪಂಚ ಚಾನ್ಯೇಽಪಿ ಪ್ರಾಣಾದ್ಯಾಃ ಸದ್ಗುಣೈರ್ಯುತಾಃ ॥
*– ಶ್ರುತಿಃ [ನ್ಯಾಯವಿವರಣ 2-4-14]*

53. ಮಹಾನ್ ವೈ ಮುಖ್ಯಪ್ರಾಣೋ ಯೇನ ವ್ಯಾಪ್ತಂ ಚರಾಚರಮ್ ।
*– [ನ್ಯಾ.ವಿ. 2-4-14]*

54. ಅಣುರ್ವೈ ಮುಖ್ಯಪ್ರಾಣೋ ಯ ಉತ್ಕ್ರಾಮತಿ ನಾಡೀಭಿಃ । *– [ನ್ಯಾ.ವಿ. 2-4-14]*

55. ಅಥ ಹ ನಿತ್ಯಾಶ್ಚಾನಿತ್ಯಾಶ್ಚ ತೇಜೋಽಬನ್ನಾನ್ಯಾಕಾಶ ಇತಿ ತಾನ್ಯನಿತ್ಯಾನಿ ।
ವಾಯುರ್ವಾವ ನಿತ್ಯೋ ವಾಯುನಾ ಹಿ ಸರ್ವಾಣಿ ಭೂತಾನಿ ನೇನೀಯಂತೇ ॥

- ಯಾರು ಕಲ್ಮಷವನ್ನು ಶುದ್ಧಿಗೊಳಿಸುವನೋ, ಅಂತಹ ದೇವತೆ ಅನಾದಿ ಆಗಿರುವನು. ಅವನಿಗೆ ಆದಿ, ಮಧ್ಯ, ಅಂತ್ಯ, ಉದಯ, ಅಸ್ತಮಾನ ಇವುಗಳಿಲ್ಲ.56
- ಚತುರ್ಮುಖ, ಪ್ರಕೃತಿ, ಪರಮಾತ್ಮ ಹಾಗೂ ಕಾಲ –ಇವರು ನಿತ್ಯರು. ಮುಖ್ಯ ವಾಯು, ಅವನ ಪತ್ನಿ ಶ್ರದ್ಧೆ, ಪಂಚಭೂತಗಳು, ಅವುಗಳ ಕಾರ್ಯಗಳು –ಇವೆಲ್ಲ ಅನಿತ್ಯಗಳು. ಪ್ರಕೃತ್ಯಾದಿಗಳು ಎಂದೂ ಹುಟ್ಟುವುದಿಲ್ಲ; ಎಂದೂ ನಶಿಸುವುದಿಲ್ಲ. ಪ್ರಾಣಶ್ರದ್ಧಾದಿಗಳು ಬಹುಭಾಗಗಳ ವಿಷಯದಲ್ಲಿ ಉತ್ಪನ್ನವಾಗುವವುಗಳಾದರೆ, ಕೆಲವು ಭಾಗದ ವಿಷಯದಲ್ಲಿ ನಿತ್ಯಗಳೆನಿಸುವವು.57
- ಭಗವದ್‌ಭಕ್ತಿ, ಭಗವದ್‌ಜ್ಞಾನ, ವೈರಾಗ್ಯ, ಪ್ರಜ್ಞೆ, ಮೇಧಾ, ಧೈರ್ಯ, ಅಚಲತೆ, ಯೋಗ, ಪ್ರೇರಕತ್ವ ಹಾಗೂ ಬಲ –ಈ ಹತ್ತು ಗುಣಗಳು ವೃಕೋದರ ಎನಿಸಿವೆ. ವಾಯು ಈ ಹತ್ತು ಗುಣಗಳ ಸ್ವರೂಪಿ. ಅಂತಹ ವಾಯುದೇವನ ಪುತ್ರನಾದುದರಿಂದಲೇ ಭೀಮ ಈ ಹತ್ತು ಗುಣಸ್ವರೂಪಿ.58

* * *

---

ಅಥ ಹ ಚೇತನಾಶ್ಚೇತನಾಶ್ಚ ತೇಜೋಽಬನ್ನಾನ್ಯಾಕಾಶ ಇತಿ ತಾನ್ಯಚೇತನಾನಿ ।
ವಾಯುರ್ವಾವ ಚೇತನೋ ವಾಯುನಾ ಹಿ ಸರ್ವಾಣಿ ಭೂತಾನಿ ವಿಜ್ಞಾಯಂತೇ ॥
*–[ಬ್ರ.ಸೂ.ಭಾ. 2-3-8]*

56. ಸಾ ವಾ ಏಷಾ ದೇವತಾಽನಾದಿರ್ಯೋಽಯಂ ಪವತ ಇತಿ ।
ಯಸ್ಯಾನಾಽದಿರ್ನಮಧ್ಯಂ ನಾಂತೋ ನೋದಯೋ ನ ನಿಮ್ಲೋಚಃ ॥
*–ಶ್ರುತಿಃ [ಬ್ರ.ಸೂ.ಭಾ. 2-3-8]*

57. ಅಥ ಹ ವಾವ ನಿತ್ಯಾನಿ ಪುರುಷಃ ಪ್ರಕೃತಿರಾತ್ಮಾ ಕಾಲ ಇತಿ ।
ಅಥ ಯಾನ್ಯನಿತ್ಯಾನಿ ಪ್ರಾಣಃ ಶುದ್ಧಾ ಭೂತಾನಿ ಭೌತಿಕಾನೀತಿ ।
ಯಾನಿ ಹ ವಾ ಉತ್ಪತ್ತಿಮಂತಿ ತಾನ್ಯನಿತ್ಯಾನಿ ।
ಯಾನಿ ಹ ವಾ ಅನುತ್ಪತ್ತಿಮಂತಿ ತಾನಿ ನಿತ್ಯಾನಿ ।
......ಅಥೈವಾನ್ಯನುತ್ಪತ್ತಿಮಂತಿ ಚಾನುತ್ಪತ್ತಿಮಂತಿ ಚ ।
ಪ್ರಾಣಃ ಶ್ರದ್ಧಾಽಽಕಾಶ ಇತಿ ಭಾಗಶೋ ಹ್ಯುತ್ಪದ್ಯಂತೇ ॥
*– ಭಾಲ್ಲವೇಯಶ್ರುತಿ [ಬ್ರ.ಸೂ.ಭಾ. 2-3-4]*

58. ಭಕ್ತಿರ್ಜ್ಞಾನಂ ಸವೈರಾಗ್ಯಂ ಪ್ರಜ್ಞಾ ಮೇಧಾ ಧೃತಿಃ ಸ್ಥಿತಿಃ ।
ಯೋಗಃ ಪ್ರಾಣೋ ಬಲಂ ಚೈವ ವೃಕೋದರ ಇತಿ ಸ್ಮೃತಃ ।
ಏತಾದೃಶಾತ್ಮಕೋ ವಾಯುಸ್ತಸ್ಮಾದ್ ಭೀಮಸ್ತದಾತ್ಮಕಃ ॥
*– [ಮ.ಭಾ.ತಾ.ನಿ. 2-140, 141]*

# ಮುಖ್ಯಪ್ರಾಣನ ಸಾಧನೆ

**ಚತುರ್ಮುಖ ಬ್ರಹ್ಮನ ಪದವಿಗೆ ಏರಲಿರುವ ಮುಖ್ಯಪ್ರಾಣ ಸಾಧಕೋತ್ತಮನಾಗಿ ತಾನು ಹಾಗೂ ಮತ್ತೊಬ್ಬರ ಮೂಲಕ ನಡೆಸುವ ಸಾಧನೆಗಳ ಮೇಲೆ ಬೆಳಕು ಚೆಲ್ಲಹೊರಟ ಈ ವಿಭಾಗದಲ್ಲಿ ಆಕರಗ್ರಂಥದ ಹೆಸರಿನ ಉಲ್ಲೇಖದೊಂದಿಗೆ ಎಂಟು ಪ್ರಮಾಣಗಳನ್ನೂ, ಆಕರಗ್ರಂಥದ ಹೆಸರಿನ ಉಲ್ಲೇಖವಿಲ್ಲದೆ ಏಳು ಪ್ರಮಾಣಗಳನ್ನೂ -ಹೀಗೆ ಒಟ್ಟು ೧೫ ಪ್ರಮಾಣಗಳನ್ನು ಸಂಗ್ರಹಿಸಲಾಗಿದೆ.**

- ಕರ್ಮಾಧ್ಯಕ್ಷನಾದ ಭಗವಂತನಲ್ಲಿ ವಾಯುದೇವ ಎಲ್ಲರ ಮೂಲಕ ನಡೆಯುವ ಎಲ್ಲ ಕರ್ಮಗಳನ್ನು ಸಮರ್ಪಿಸುವನು. ವಾಯುದೇವನ ಪ್ರೇರಣೆಯಿಂದಲೇ ಪ್ರತಿಯೊಬ್ಬರ ಮೂಲಕವೂ ಕರ್ಮ ನಡೆಯುವುದರಿಂದ ವಾಯುದೇವನೇ ತಾನು ಮಾಡಿಸಿರುವ ಕರ್ಮವನ್ನು ಅರ್ಪಿಸುವನು.1

'ವಾಯುಪದಯೋಗ್ಯನಾಗಿದ್ದು ಸಾಮಗಾನ ಮಾಡಲು ಯೋಗ್ಯನಾಗಿರುವವನು ಸಾಮಗಾನಕಾಲದಲ್ಲಿ ವಿಷ್ಣುಪ್ರಾರ್ಥನಾರೂಪವಾದ 'ಅಸತೋ ಮಾ ಸದ್ಗಮಯ' 'ತಮಸೋ ಮಾ ಜ್ಯೋತಿರ್ಗಮಯ' 'ಮೃತ್ಯೋರ್ಮಾ ಅಮೃತಂ ಗಮಯ' –ಎಂಬ ಮೂರು ಮಂತ್ರಗಳನ್ನು ಸದಾ ವಿಷ್ಣುಸ್ಮರಣಪೂರ್ವಕವಾಗಿಯೇ ಜಪಿಸಬೇಕು. ಅಸದ್ ಎಂದರೆ ದುಃಖಾತ್ಮಕವಾದ ಸಂಸಾರ. ಅನಂತಾತ್ಮಕವಾದ ಮೋಕ್ಷವೇ ಸತ್. ಅಜ್ಞಾನಾತ್ಮಕವಾದ ಸಂಸಾರ ತಮಃ ಎನಿಸಿದರೆ ಜ್ಞಾನಾತ್ಮಕವಾದ ಮೋಕ್ಷ 'ಜ್ಯೋತಿಃ' ಎನಿಸಿದೆ. ಮೃತ್ಯು ಎಂದರೆ ಮರಣ. ಅಮೃತ ಎಂದರೆ ಮೋಕ್ಷ. ಈ ಬಗೆಯ ಅರ್ಥವನ್ನು ಬಲ್ಲ, ವಾಯುಪದವಿಗೆ ಯೋಗ್ಯರಾದವರು ಉದ್ಗಾತೃಗಳಾಗಿ ದೊರೆತಾಗ ಯಜಮಾನನು ಅವರಲ್ಲಿ ಅಭೀಷ್ಟವನ್ನು ಬೇಡಬೇಕು. ಯಾಕೆಂದರೆ ಇಂತಹ ಉದ್ಗಾತೃ ತನಗಾಗಲೀ ಯಜಮಾನನಿಗಾಗಲೀ ಸಾಮಗಾನ ಮಾಡಿದರೆ ಫಲವು ದೊರೆತೇ ದೊರೆಯುವುದು.2

---

1. ....ತಸ್ಮಿನ್ ಕರ್ಮಾಣ್ಯಧಾನ್ಮರುತ್ । – *[ಯಾ.ಉ.]*

* ಮಾರುತ್ಯೇವ ಯತಶ್ಚೇಷ್ಟಾ ಸರ್ವಾ ತಾಂ ಹರಯೇಽರ್ಪಯೇತ್ ॥
– *ಬ್ರಹ್ಮಾಂಡ [ಯಾಜ್ಞೀಯೋಪನಿಷದ್ಭಾಷ್ಯ 1-4]*

2. '.....ಪ್ರಸ್ತಾವಕಾಲೇ ಪ್ರಸ್ತೋತುಂ ಯೋಗ್ಯೋ ವಾಯುಪದಸ್ಯ ಯಃ ।
ಜಪೇದ್ ಯಜೂಂಷಿ ತ್ವೇತಾನಿ ತ್ರೀಣಿ ವಿಷ್ಣುಂ ಸದಾ ಸ್ಮರನ್ ॥
ಅಸತೋ ಮಾ ಸದಿತ್ಯಾದಿ ವಿಷ್ಣುಪ್ರಾರ್ಥನಭಾಂಜಿ ಚ ।
....ಅಸದ್ ದುಃಖಾತ್ಮಕೋ ಮೃತ್ಯುಃ ಸದಾನಂದಾಮೃತಂ ಸ್ಮೃತಮ್ ॥
ತಮೋಽಜ್ಞಾನಾತ್ಮಕೋ ಮೃತ್ಯುಃ ಜ್ಯೋತಿರ್ಜ್ಞಾನಾಮೃತಂ ಮತಮ್ ।
ಮೃತ್ಯೋರ್ಮಾಽಮೃತಮಿತ್ಯತ್ರ ಮೃತ್ಯುರ್ಮರಣಮೇವ ಚ ॥
ಏವಂವಿದ್ ವಾಯುಪದಯೋಗ್ಯಾ ಉದ್ಗಾತಾರ ಏವ ತು ।
ಯದಾ ಭವೇಯುಸ್ತೇಷು ಸದಾ ಯಾಚೇತು ವೃಣುಯಾದ್ ವರಮ್ ॥

- 'ವಿಷ್ಣುವಿನ ಪ್ರಾಣವೇ ಮುಂತಾದ ಅಂಗಗಳಿಂದ ಹುಟ್ಟಿದ ವಾಯು ಮುಂತಾದ ದೇವತೆಗಳು ತಾವು ಹುಟ್ಟಿದ ಅಂಗವನ್ನೇ ಸೇವಿಸುವರು. ವಿಷ್ಣುವಿನ ಪ್ರಾಣದಿಂದ ಹುಟ್ಟಿದ ವಾಯುದೇವ ತನ್ನ ಉತ್ಪತ್ತಿಗೆ ಆಶ್ರಯವಾದ 'ಪ್ರಾಣ'ದ ಭಾಗವಾದ ಘ್ರಾಣೇಂದ್ರಿಯಕ್ಕೆ ಸಂಬಂಧಿಸಿದಂತೆ ಭಗವಂತನ ಯಜ್ಞಾದಿ ಕರ್ಮಗಳಿಗೆ ಉಪಯುಕ್ತ ವಾಗುವಂತೆ ಸುಗಂಧವನ್ನೂ 'ಪ್ರಾಣ'ದ ಪ್ರೀತಿಯ ಭಾಗಕ್ಕೆ ಸಂಬಂಧಿಸಿದಂತೆ ಭಗವಂತನ ಯಜ್ಞಾದಿಗಳ ನಿರ್ವಹಣೆಗೆ ಆವಶ್ಯಕವಾದ ಜ್ಞಾನ ಮತ್ತು ಭಕ್ತಿಗಳನ್ನೂ ನೀಡುವನು.3'
- ಜ್ಞಾನೈಶ್ವರ್ಯಾದಿ ಸದ್ಗುಣಗಳ ಸಂಪತ್ತನ್ನು ನೀಡುವುದರಿಂದ ಭಗವಂತನು 'ಭೂತಿ' ಎನಿಸುವನು. ವಾಯುವೇ ಮುಂತಾದ ದೇವತೆಗಳು ಭಗವಂತನನ್ನು ಸರ್ವಗುಣ ಪ್ರದನನ್ನಾಗಿಯೂ, ಸರ್ವಗುಣಪೂರ್ಣನನ್ನಾಗಿಯೂ ಉಪಾಸಿಸುವರು. ಅದರ ಫಲ ವಾಗಿ ಸುಖಜ್ಞಾನಾದಿ ಸಕಲಗುಣಗಳಿಂದ ಯುಕ್ತರಾಗಿ ಮೆರೆಯುವರು.4
- 'ದೇವತೆಗಳಲ್ಲಿ ಪ್ರಧಾನನಾದ ವಾಯುದೇವನು ಈಗಲೂ ನಿದ್ರಿಸುವವರಲ್ಲಿ ಇದ್ದು ಕೊಂಡು ಶ್ರೀವಿಷ್ಣುವನ್ನು 'ಭೂಃ' 'ಭೂಃ' ಎಂದು ಗೊರಕೆಯ ರೂಪದಲ್ಲಿ ಉಪಾಸನೆ ನಡೆಸುತ್ತಿರುವನು. 'ಭೂಃ' ಎಂದರೆ ಭೂತಿ. ಜ್ಞಾನೈಶ್ವರ್ಯಾದಿ ಗುಣರೂಪವಾದ ಸಂಪತ್‌ಪ್ರದ ಎಂದರ್ಥ.5
- ವಾಯುದೇವನು ಯಾವಾಗಲೂ ಶ್ರೀವಿಷ್ಣುವಿನ ಭಕ್ತರಾಗದೆ, ದ್ವೇಷಿಗಳಾಗಿರುವವರನ್ನು ತಮಸ್ಸಿನಲ್ಲಿ ಬೀಳಿಸಿ ದಂಡಿಸುವನು. ವಿಷ್ಣುವಿನ ಭಕ್ತರಾಗಿರುವವರನ್ನು ಮೋಕ್ಷಕ್ಕೆ ಕೊಂಡೊಯ್ದು ಸ್ವರೂಪಾನಂದವನ್ನು ಉಣ್ಣಿಸುವನು.6

---

ಆತ್ಮನೇ ಯಾಜಿನೇ ವಾಽಪಿ ಹ್ಯದ್ಗಾತ್ಯೈವಂವಿಧೋ ಯದಿ ।
ಆಗಾಯೇತ್ ತದ್‌ಭವೇನ್ನಾತ್ರ ಕಾರ್ಯಾಽಭೀಪ್ಸೇ ವಿಚಾರಣಾ ॥
*– ಮಹಾಸಂಹಿತಾ [ಛಾಂ.ಉ.ಭಾ. 3-3-29]*

3. ಪ್ರಾಣಾದಿಭ್ಯಶ್ಚ ವಾಯ್ವಾದ್ಯಾ ಏವಂ ವಿಷ್ಣೋಃ ಪ್ರಜಜ್ಞಿರೇ.... ಸ್ವೋತ್ಪತ್ತ್ಯಂಗಂ ಚ ತೇ ವಿಷ್ಣೋಃ ಶುಶ್ರೂಷಂತೇ ಪೃಥಕ್‌ಪೃಥಕ್..... ವಾಯುರ್ಗಂಧವಹಶ್ಚಾಸ್ಯ ಭಕ್ತಿಜ್ಞಾನಪ್ರದ ಸ್ತಥಾ ॥ *– [ಐ.ಉ.ಭಾ. 1-5-1]*
4. ಸ ಏವ ಭೂತಿನಾಮಾಽಪಿ ಜ್ಞಾನೈಶ್ವರ್ಯಾದಿಭೂತಿದಃ.... ।
ಸುಖಜ್ಞಾನಾದಿಗುಣದಂ ಪೂರ್ಣಂ ಸರ್ವಗುಣೈಃ ಪ್ರಭುಮ್ ।
ಉಪಾಸತೇ ತಂ ವಾಯ್ವಾದ್ಯಾ ದೇವಾಸ್ತಸ್ಮಾಚ್ಚ ತೇಽಖಿಲಾಃ ।
ಬಭೂವುಃ ಸುಖಸಜ್ಜ್ಞಾನಪೂರ್ವೈಃ ಸರ್ವೈರ್ಗುಣೈರ್ಯುತಾಃ । [ಐ.ಉ.ಭಾ. 1-6-2]
5. ದೇವಾನಾಮಪಿ ಸರ್ವೇಷಾಂ ಪ್ರಧಾನೋಽದ್ಯಾಽಪಿ ಮಾರುತಃ ।
ಸ್ಥಿತ್ವಾ ಸುಪ್ತೇಷು ವಿಷ್ಣುಂ ತಂ ಭೂರ್ಭೂರಿತ್ಯೇವ ಶಂಸತಿ ।
ಭೂಶಬ್ದಾರ್ಥೋ ಭೂತಿರಿತಿ.... । *– [ಐ.ಉ.ಭಾ. 1-6-2]*
6. ವಿಷ್ಣುದ್ವಭಕ್ತಾನ್ ಸದಾ ವಿಷ್ಣುಃ ಶಾಸಯೇತ್ ತಮಸಿ ಕ್ಷಿಪನ್ ।
ವಿಷ್ಣುಭಕ್ತಾನ್ ವಿಮೋಕ್ಷಾಯ ಪ್ರಾಪಯಿತ್ವಾ ಸುಖಂ ನಯೇತ್ ॥
*– [ಭಾ.ತಾ.ನಿ. 11-21-28]*

- 'ಬೃಹತೀಛಂದಸ್ಸಿಗೆ ಪ್ರಭುವಾದ ವಾಯುದೇವನೇ ಅಭಿಮಾನಿಯಾಗಿರುವುದರಿಂದ ಬೃಹತೀಛಂದಸ್ಸು ಛಂದಸ್ಸುಗಳಲ್ಲೆಲ್ಲ ಶ್ರೇಷ್ಠ ಎನಿಸಿದೆ. ದೇವತೆಗಳಲ್ಲೆಲ್ಲ ಪೂರ್ಣನಾಗಿರುವ ವಾಯುದೇವ 'ಬ್ರಹ್ಮ' ಎನಿಸುವನು. ಅಧಿಕ ಮಾಹಾತ್ಮ್ಯ ಇರುವುದರಿಂದ 'ಬೃಹತೀ' ಎಂದೂ ಕರೆಸಿಕೊಳ್ಳಲ್ಪಡುವನು.'7
- 'ಯಾರಿಗೂ ಕೇಳಿಸದಂತೆ ಉಚ್ಚರಿಸಿದ ಅಕಾರಕ್ಕೆ ವಾಯುವು ಅಭಿಮಾನಿ. ಗಟ್ಟಿಯಾಗಿ ಉಚ್ಚರಿಸಿದ ವರ್ಣಕ್ಕೆ ಭಾರತೀದೇವಿ ಅಭಿಮಾನಿ. ಆದುದರಿಂದ ಜಪಾದಿಗಳಲ್ಲಿ ಗಟ್ಟಿಯಾಗಿ ಉಚ್ಚರಿಸುವುದಕ್ಕಿಂತ ಮೆಲ್ಲನೆ ಉಚ್ಚರಿಸುವುದು ಅಧಿಕ ಫಲಪ್ರದ. ಯಾಕೆಂದರೆ ಭಾರತೀದೇವಿ ಗಟ್ಟಿಯಾಗಿ ಉಚ್ಚರಿಸುವುದಕ್ಕೆ ಅಭಿಮಾನಿನಿಯಾದರೆ, ಅವಳ ಪತಿ ವಾಯುದೇವ ಮೆಲ್ಲನೆ ಉಚ್ಚರಿಸುವುದಕ್ಕೆ ಅಭಿಮಾನಿ'8
- 'ವಾಯುದೇವ ಹಾಗೂ ಚತುರ್ಮುಖ ಇವರಿಬ್ಬರೂ ಅಕಾರದ ಅಭಿಮಾನಿದೇವತೆಗಳು ಹೊರತು ಅಕಾರನಾಮವುಳ್ಳವರಲ್ಲ. ವೇದಪ್ರತಿಪಾದ್ಯ ಬೇರೆ; ವೇದಾಭಿಮಾನಿ ಬೇರೆ ಹೇಗೋ ಹಾಗೆ ಅಕಾರರೂಪವಾದ ನಾಮಾಭಿಮಾನಿ ವಾಯುದೇವನಾದರೆ ಅಕಾರವಾಚ್ಯ ಜನಾರ್ದನ.'9
- 'ವಾಯುದೇವನ ವರೆಗಿನ ದೇವತೆಗಳು ತಾರತಮ್ಯದಿಂದ ವಿಷ್ಣುನಾಮದ ಅರ್ಥವನ್ನು ತಿಳಿದಿರುವರು. ವಾಯುದೇವನು ಎಲ್ಲರಿಗಿಂತ ಚೆನ್ನಾಗಿ ತಿಳಿದಿರುವನು. ಆದುದರಿಂದ ಹರಿಯ ಅನಂತರ ಎಲ್ಲ ಮುಕ್ತದೇವತೆಗಳಿಗಿಂತಲೂ ಅಧಿಕ ಆನಂದವನ್ನು ವಾಯುವು ಭೋಗಿಸುವನು.'10

---

7. '.....ಅಭಿಮಾನೀ ಬೃಹತ್ಯಾಸ್ತು ವಾಯುರೇವ ಯತಃ ಪ್ರಭುಃ ।
ತಸ್ಮಾದೇಷಾ ಛಂದಸಾಂ ಹಿ ವರಿಷ್ಠಾ ಬೃಹತೀ ಸ್ಮೃತಾ ॥
ಪೂರ್ಣೋ ಹಿ ವಾಯುರ್ದೇವಾನಾಂ ತಸ್ಮಾದ್ ಬ್ರಹ್ಮೇತಿ ಚೋಚ್ಯತೇ ।
ಮಾಹಾತ್ಮ್ಯಾಧಿಕ್ಯತಶ್ಚೈವ ಬೃಹತೀತ್ಯೇವ ನಾಮ ತತ್ ॥
– *[ಐ.ಉ.ಭಾ. 2-2-5-4, 5]*

8. ಅಕಾರಸ್ಯ ತಥೋಪಾಂಶೋರಭಿಮಾನೀ ತು ಮಾರುತಃ ।
.....ತಸ್ಮಾದುಪಾಂಶುರ್ಹಿ ಜಪಾದಿಷು ಫಲಾಧಿಕಃ ।
ವಾಯುಃ ಪತಿರ್ಹಿ ಭಾರತ್ಯಾ ಉಪಾಂಶೋರ್ದೇವತಾ.. ॥ – *[ಐ.ಉ.ಭಾ. 2-2-6-5]*

9. ವಾಯುರ್ಬ್ರಹ್ಮಾಪಿ ಚಾಕಾರದೇವತೇ ನ ತು ನಾಮಿನೌ ।
ಯಥಾ ವೇದಾಭಿಧೇಯೋಽನ್ಯೋ ವೇದಾಖ್ಯಾ ದೇವತಾ ಪರಾ ।
ಏವಂ ನಾಮಾಭಿಮಾನೀ ತು ವಾಯುರ್ವಾಚ್ಯೋ ಜನಾರ್ದನಃ ॥
– *ಬ್ರಹ್ಮಸಾರ [ಐ.ಉ.ಭಾ. 2-2-6-1]*

10. ವಾಯ್ವಂತಾಸ್ತಾರತಮ್ಯೇನ ವಿಷ್ಣುನಾಮಾರ್ಥವೇದಿನಃ ।
ಸಮ್ಯಗ್ ವೇತ್ತಾ ಮಾರುತೋಽತ್ರ ತಸ್ಮಾನ್ಮುಕ್ತೇಭ್ಯ ಏವ ಚ ॥
ಸುರೇಭ್ಯೋಽಧಿಕಮಾನಂದಂ ನಿತ್ಯಂ ಭುಂಕ್ತೇ ಹರೇರನು ।
– *ಅರ್ಧನಾರೀನಾರಾಯಣತಂತ್ರ, [ಐ.ಉ.ಭಾ. 2-2-7-4]*

- ಸಾಮವೇದಾಭಿಮಾನಿಯಾದ ವಾಯುದೇವನು ಅಗ್ನಿ, ಭೂತವಾಯು, ಆದಿತ್ಯ, ಚಂದ್ರ ಹಾಗೂ ಸೂರ್ಯನ ನೀಲ ತೇಜಸ್ಸು ಇವುಗಳಲ್ಲಿ ಇರುವನು. ಋಗಭಿಮಾನಿನಿ ಯಾದ ಸರಸ್ವತಿ ಭೂಮಿ, ಅಂತರಿಕ್ಷ, ದ್ಯುಲೋಕ, ನಕ್ಷತ್ರ, ಸೂರ್ಯನ ಶುಕ್ಲ ತೇಜಸ್ಸು –ಇವುಗಳಲ್ಲಿ ಇರುವಳು. ಪತ್ನಿಯಾದ ಸರಸ್ವತಿ 'ಸಾ' ಎಂದೂ, ಪತಿಯಾದ ವಾಯು ದೇವ 'ಅಮ' ಎಂದೂ ಹೇಳಲ್ಪಡುವನು. ಹೀಗೆ ಇವರಿಬ್ಬರೂ ಅರ್ಧನಾರೀನರಾಕಾರ ದಿಂದ ಮಿಲಿತರಾಗಿ 'ಸಾಮ' ಎಂದು ಹೇಳಲ್ಪಡುವರು. ಆದ್ದರಿಂದ ಸಾಮವೇದ ಋಕ್ ಸಾಮಮಿಲಿತರೂಪ ಉಳ್ಳದ್ದು. ಹೀಗೆಯೇ ಸರಸ್ವತೀ ಪ್ರಾಣದೇವರು. ವಾಕ್–ಪ್ರಾಣ, ಚಕ್ಷುಷ್–ಆತ್ಮಾ, ಶ್ರೋತ್ರ–ಮನಸ್ಸು, ಶುಕ್ಲ–ನೀಲ ಇವುಗಳಲ್ಲಿ ಯಾವಾಗಲೂ ಇರುವರು. ಅವರೊಳಗೆ ಶ್ರೀವಿಷ್ಣುವು ಇರುವನು. ಅವನನ್ನು ಸರಸ್ವತಿ ಋಗ್ವೇದ ದಿಂದಲೂ, ವಾಯುದೇವ ಸಾಮವೇದದಿಂದಲೂ ಸ್ತುತಿಸುತ್ತಿರುವರು. ಆ ವಿಷ್ಣುವು ಪಾಪವನ್ನು ದಾಟಿ ಇರುವುದರಿಂದಲೂ, ಉತ್ಕೃಷ್ಟನಾಗಿರುವುದರಿಂದಲೂ 'ಉತ್' ಎನಿಸಿರುವನು.11
- ಮಧುನಾಮಕ ಸಂಕರ್ಷಣ ರೂಪವನ್ನು ವಾಯುದೇವನನ್ನು ಆಶ್ರಯಿಸಿದ ಶಿವನೇ ಮೊದಲಾದವರು ಶ್ರವಣಾದಿಮಾರ್ಗದಿಂದ ಸಾಕ್ಷಾತ್ಕರಿಸಿಕೊಂಡಿರುವರು. ವಾಯು ದೇವನೇ ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಗೆ ಬರುವುದರಿಂದ ಅವನಲ್ಲಿ ರುದ್ರಾಧಿ ಪತಿತ್ವವನ್ನೂ ಸಾಧ್ಯರೆನಿಸಿರುವ ಋಜುಗಣಾಧಿಪತಿತ್ವವನ್ನೂ ಹೇಳಲಾಗಿದೆ. ರುದ್ರ ಗಣಕ್ಕೂ ಋಜುಗಣಕ್ಕೂ ಅಧಿಪತಿಯಾಗಿರುವುದರಿಂದಲೇ ವಾಯುದೇವನಿಗೆ ಬ್ರಹ್ಮನಿ ಗಿಂತಲೂ ವಿಶೇಷವಾದ ಯಜುರ್ವೇದದ ವಿಚಾರವೂ, ಸಕಲವೇದಗಳ ವಿಚಾರವೂ ಇರುವುದು. ಮೋಕ್ಷದಲ್ಲೂ ವಾಯುದೇವನು ಯಾವಾಗಲೂ ರುದ್ರರಿಗೂ, ಋಜು ಗಳಿಗೂ ಅಧಿಪತಿಯಾಗಿರುವನು.12

---

11. ಅಗ್ನೀರಸೂರ್ಯನೀಲೇಷು ವಾಯುಃಸ್ಥಃ ಸಾಮದೇವತಾ ।
ಉರ್ವೀವಿಯದ್ದ್ಯುಶುಕ್ಲೇಷು ಋಗ್ದೇವೀಸ್ಥಾ ಸರಸ್ವತೀ ॥
ಸೇತಿ ಭಾರ್ಯಾ ಹಿ ವಾಗ್ದೇವೀ ಪ್ರಾಣೋಽಮಃ ಪತಿರೀರಿತಃ ।
ಏವಂ ತೌ ಸಾಮನಾಮಾನಾವುಭಾವೇವಾಪ್ಯುದಾಹೃತ್ ॥
ಅತೋ ಹಿ ಸಾಮವೇದೋಽಯಂ ಋಕ್ಸಾಮಾತ್ಮಕ ಈರಿತಃ ।
ವಾಗಾದಿಷ್ವೇವಮೇವೈತೌ ವಾಕ್ಪ್ರಾಣೌ ಸರ್ವದಾ ಸ್ಥಿತೌ ॥
ತಯೋರಂತಃ ಸ್ಥಿತೋ ವಿಷ್ಣುರ್ಗಾಯಕೌ ತಸ್ಯ ತಾವುಭೌ ।
ಋಕ್ಸಾಮಾಭ್ಯಾಂ ಸ ಉನ್ನಾಮಾ ಪಾಪೋದ್ಗಶ್ಚೋಚ್ಚ ಏವಚ ॥
*– ಸತ್ತತ್ತ್ವೇ [ಛಾಂ.ಉ.ಭಾ. 1-3-7]*

12. ಏವಂ ದ್ವಿತೀಯರೂಪಂ ತು ಶಿವಾದ್ಯಾಃ ವಾಯುಸಂಶ್ರಿತಾಃ ।
ವಾಯೋರ್ಹಿರಣ್ಯಗರ್ಭತ್ವಾತ್ ಪದದ್ವಯಮುದಾಹೃತವ್ ॥
ರುದ್ರಾಣಾಮಾಶ್ರಯತ್ವಂ ಚ ಸಾಧ್ಯಾನಾಮಪಿ ಸರ್ವಶಃ ।
ಅತೋ ಯಜುರ್ವಿಚಾರಶ್ಚ ಸರ್ವವೇದಾತ್ಮನಸ್ತಥಾ ॥

- ಮೇಲಿನ ಹಾಗೂ ಕೆಳಗಿನ ಎಲ್ಲ ಲೋಕಗಳಲ್ಲಿರುವ ಶ್ರೀವಿಷ್ಣು ಎಲ್ಲರ ಹೃದಯದಲ್ಲಿ ಇರುವನು. ಆ ವಿಷ್ಣು ಮುಖ್ಯಪ್ರಾಣನಲ್ಲಿ ಇರುವನು. ಮುಖ್ಯಪ್ರಾಣನು ಅಗ್ನಿಯಲ್ಲಿ ಇರುವನು. .....ಮುಖ್ಯಪ್ರಾಣನು ಆ ವಿಷ್ಣುವನ್ನು ಸ್ತೋತ್ರಮಾಡುತ್ತಿರುವನು. ಆ ಸ್ತೋತ್ರ ಕಿವಿಗಳನ್ನು ಮುಚ್ಚಿಕೊಂಡಾಗ ಯಾವಾಗಲೂ ಕೇಳಲ್ಪಡುವುದು.13

- ಉದರದೊಳಗಿನ ಅಗ್ನಿಯಲ್ಲಿ ಅಗ್ನಿನಾಮಕ ಭಗವಂತನಿರುವನು......... ಅಂತಹ ಭಗವಂತನ ಸ್ತುತಿಯನ್ನು ವಾಯುದೇವ ಯಾವಾಗಲೂ ನಡೆಸುತ್ತಿರುವನು. ಕಿವಿಗಳನ್ನು ಮುಚ್ಚಿಕೊಂಡಲ್ಲಿ ವಾಯುದೇವ ನಡೆಸುವ ಆ ಸ್ತುತಿಯನ್ನು ಎಲ್ಲರೂ ಕೇಳಿಸಿಕೊಳ್ಳ ಬಹುದಾಗಿದೆ.14

- ರಾಜರ ಹೃದಯದಲ್ಲಿರುವ 'ಇಂದ್ರ' ಹೆಸರಿನ ಹರಿಯ ಹಾಗೂ ವಿರಾಟ್ ಹೆಸರಿನ ಲಕ್ಷ್ಮೀದೇವಿಯ ಸ್ತುತಿಯನ್ನು ಪ್ರಾಣದೇವನು ಎಲ್ಲರ ಹೃದಯದಲ್ಲಿದ್ದುಕೊಂಡು ಯಾವಾಗಲೂ ನಡೆಸುತ್ತಿರುವನು. ಸರ್ವವೇದಸ್ವರೂಪವಾದ, ಎಲ್ಲ ಜೀವರಿಗೂ ಗೋಚರವಾಗುವ ಪ್ರಯುಕ್ತ 'ಆಕಾಶ' ಎನಿಸಿರುವ ಈ ಸ್ತುತಿಯನ್ನು ಕಿವಿಗಳನ್ನು ಮುಚ್ಚಿಕೊಂಡು ಎಲ್ಲರೂ ತಿಳಿಯಬಹುದಾಗಿದೆ..... ಈ ಇಂದ್ರನಿಗೆ ಮೇಲಿನ ದಿಕ್ಕಿನಲ್ಲಿ ಪತ್ನೀಸಹಿತರಾದ ಬ್ರಹ್ಮವಾಯುಗಳು ಸೇವಕರಾಗಿರುವರು.15

ದೇಹದಲ್ಲಿ ಜೀವನನ್ನೂ ಮುಖ್ಯಪ್ರಾಣನನ್ನೂ ಇಂದ್ರಿಯಗಳನ್ನೂ ಚೆನ್ನಾಗಿ ವ್ಯಾಪಿಸಿ ಆಯಾ ವ್ಯಕ್ತಿಗಳ ಗುಣಗಳನ್ನು ಅನುಭವಿಸುವನು. ಅಂತಹ ವಿಷ್ಣುವನ್ನು ಮುಖ್ಯಪ್ರಾಣನೇ

---

ವಾಯೋರೇವ ವಿಚಾರಃ ಸ್ಯಾದ್ ಬ್ರಹ್ಮಣೋಽಪಿ ವಿಶೇಷತಃ ।
ಉಭಯಾಶ್ರಯಃ ಸಮೋಕ್ಷೇಽಪಿ ವಾಯುರೇವ ಹಿ ಸರ್ವದಾ ॥
*– [ಛಾಂ.ಉ.ಭಾ. 3-1-9]*

13. '......ಪುರುಷೇಷು ಚ ಸರ್ವೇಷು ಸ ಏಕಃ ಸಂವ್ಯವಸ್ಥಿತಃ ।
ಪ್ರಾಣಸಂಸ್ಥಃ ಸ ವೈ ವಿಷ್ಣುಃ ಪ್ರಾಣಾಗ್ನೌ ಸಂವ್ಯವಸ್ಥಿತಃ ।
.....ಸ ಪ್ರಾಣಃ ಸ್ತೌತಿ ತಂ ವಿಷ್ಣುಂ ಸಾ ಸ್ತುತಿಃ ಶ್ರೂಯತೇ ಸದಾ ।
ಕರ್ಣೌ ಪಿಧಾಯ......... *– ಸಂಸ್ತುತ್ವೇ [ಛಾಂ.ಉ.ಭಾ. 3-2-8]*

14. ಅಗ್ನಿನಾಮಾ ತು ಭಗವಾನೌದರ್ಯಾಗ್ನೌ ಪ್ರತಿಷ್ಠಿತಃ..... ತಸ್ಯ ವಿಷ್ಣೋಃ ಸ್ತುತಿರಿಯಂ

15. ರಾಜ್ಞಾಂ ಹೃದಯಸಂಸ್ಥೋಯ ಇಂದ್ರೋ ನಾಮ ಜನಾರ್ದನಃ ।
.....ವಿರಾಣ್ ನಾಮ ತದಾಶ್ರಯಾ ॥
ಶ್ರೀಸ್ತಯೋಃ ಸ್ತುತಿರೇಷಾ ಹಿ ಪ್ರಾಣೇನ ಕ್ರಿಯತೇ ಸದಾ ।
ಕರ್ಣೌ ಪಿಧಾಯ ಯಾ ಜ್ಞೇಯಾ ಸರ್ವವೇದಾತ್ಮಿಕಾ ಹಿ ಸಾ ॥
ಕಾಶನಾತ್ ಸರ್ವಜೀವಾನಾಮಾಕಾಶ ಇತಿ ಸಾ ಸ್ತುತಿಃ...... ।
ಬ್ರಹ್ಮಾ ಪ್ರಧಾನ ವಾಯುಶ್ಚ ತಥೋರ್ಧ್ವಾಯಾಂ ದಿಶಿ ಸ್ಥಿತಿ ।
....ಸಭಾರ್ಯಾಃ ಸರ್ವ ಏವ ಚ ॥ *– [ಬೃ.ಉ.ಭಾ. 6-2-1,.....4]*

ಮುಂತಾದ ದೇವತೆಗಳು ಉಪಾಸನೆ ನಡೆಸುವರು. ಅದರ ಫಲವಾಗಿ ಲೋಕಾಧಿಪತ್ಯಾದಿಗಳನ್ನು ಪಡೆಯುವರು.16

* * *

# ಮುಖ್ಯಪ್ರಾಣ ಮತ್ತು ದೇವರು

**ದೇವರ ಅತ್ಯಂತ ಪ್ರೀತಿಗೆ ಪಾತ್ರನಾಗಿರುವ ಮುಖ್ಯಪ್ರಾಣ ಹಾಗೂ ದೇವರ ನಡುವೆ ಇರುವ ಗಾಢವಾದ ಅನ್ಯೋನ್ಯತೆಯನ್ನು ಸಾರ ಹೊರಟ ಈ ವಿಭಾಗ ೫೦ ಪ್ರಮಾಣಗಳನ್ನು ಒಳಗೊಂಡಿದ್ದು ಅವುಗಳಲ್ಲಿಯ ೨೦ ಪ್ರಮಾಣಗಳು ಆಕರಗ್ರಂಥದ ಹೆಸರಿನೊಂದಿಗೆ ಉಲ್ಲಿಖಿತಗಳಾದವು. ಉಳಿದ ಮೂವತ್ತು ಆಕರದ ಹೆಸರಿನ ಉಲ್ಲೇಖವಿಲ್ಲದೆಯೇ ಉದಾಹರಿಸಲ್ಪಟ್ಟವು.**

- 'ಶ್ರೀಹರಿ ವಾಯುವಿಗಿಂತ ಬೇರೆಯಾಗಿರುವುದರಿಂದ ವಾಯು ಮತ್ತು ಶ್ರೀಹರಿ ಒಬ್ಬರೇ ಎಂದು ಹೇಳಲಾಗದು. ಶ್ರೀಹರಿಗೆ ವಾಯುದೇವನಲ್ಲಿ ತುಂಬ ಪ್ರೀತಿ ಇರುವುದರಿಂದ, ಹೀಗೆ ಶ್ರೀಹರಿಯ ತುಂಬ ಪ್ರೀತಿಗೆ ಪಾತ್ರನಾಗಿರುವ ವಾಯುದೇವ ಶ್ರೀಹರಿಗಿಂತ ಎರಡನೆಯವನೆಂದೂ ಹೇಳಲಾಗದು. ಆದುದರಿಂದ ಅಧ್ಯರ್ಧ –ಒಂದೂವರೆ– ಎಂದೇ ಕರೆಯಲಾಗುವುದು.'1
- 'ಜೀವರ ದೇಹದಿಂದ ಯಾರು ಹೊರಡಲು ನಾನೂ ಹೊರಡಬೇಕು; ಯಾರು ದೇಹದಲ್ಲಿ ಇರಲು ನಾನೂ ಇರಬೇಕು –ಎಂದು ಯೋಚಿಸಿ ಜೀವರ ದೇಹಕ್ಕೆ ತನ್ನ ಪ್ರವೇಶ ನಿರ್ಗಮನಗಳಿಗೆ ದ್ವಾರವಾಗಿ ಮುಖ್ಯಪ್ರಾಣನನ್ನು ಭಗವಂತನು ಸೃಷ್ಟಿಸಿದನು.'2

---

16. ಯದಾಶ್ರಿತನೀಂದ್ರಿಯಾಣಿ ಪ್ರಾಣಶ್ಚಾಪಿ ಯದಾಶ್ರಯಃ ।
.....ಜೀವಂ ತದಿಂದ್ರಿಯಾಣ್ಯೇವಂ ಪ್ರಾಣಂ ಚ ವ್ಯಾಪ್ಯ ಕೃತ್ಸ್ನಶಃ ॥
ಭುಂಕ್ತೇ ತತ್ತದ್ಗುಣಾನ್ ವಿಷ್ಣುಃ ....ತಮೇವಂ ದೇವತಾಃ ಸರ್ವಾ ವಾಯ್ವಾದ್ಯಾಃ ಸಮುಪಾಸತೇ ।
ತಸ್ಮಾತ್ ದೇವವಶಾ ಲೋಕಾಃ ಸರ್ವಕಾಮಾ ಸ ಜೀವಕಾಃ ॥
*– ಸಾಮಸಂಹಿತಾ [ಛಾಂ.ಉ.ಭಾ. 8-4-4]*

1. '......ಅಧ್ಯರ್ಧ ಏವ ತತ್ । ನ ಚೈಕತ್ವಂ ಭವೇದ್ ವಾಯೋಃ ತದ್ವಿಶಿಷ್ಟೋ ಯತೋ ಹರಿಃ । ನ ಚ ದ್ವಿತೀಯತಾ ತಸ್ಮಿನ್ ಪ್ರೀತಿರಭ್ಯಧಿಕಾ ಹರೇಃ ।
*– ಮಹಾಮೀಮಾಂಸಾ [ಬೃ.ಉ.ಭಾ. 5-9-9]*

2. ಕಸ್ಮಿನ್ನಹಮುತ್ಕ್ರಾಂತ ಉತ್ಕ್ರಾಂತೋ ಭವಿಷ್ಯಾಮಿ ಕಸ್ಮಿನ್ ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ ಸ ಪ್ರಾಣಮಸೃಜತ । *– ಷಟ್‌ಪ್ರಶ್ನ ಉಪನಿಷತ್ [ಭಾ.ತಾ.ನಿ. 1-94-18]*

- 'ಪ್ರಾಣದೇವನು ಯಾವಾಗಲೂ ಭಗವಂತನನ್ನು ಅನುಸರಿಸಿಯೇ ಪ್ರವೇಶಿಸುವನು. ಅಂತಹ ಪ್ರಾಣನನ್ನು ಇತರ ದೇವತೆಗಳು ಅನುಸರಿಸಿ ಪ್ರವೇಶಿಸುವರು. ಪ್ರಾಣನಿಗಿಂತ ಬೇರೆ ಯಾರೂ ಪರಮಾತ್ಮನನ್ನು ಅನುಸರಿಸಿ ಪ್ರವೇಶಿಸುವುದಿಲ್ಲ. ಪ್ರಾಣನೇ ಪರಮಾತ್ಮನನ್ನು ಅನುಸರಿಸಿ ಭೋಗಿಸುವನು. ಪ್ರಾಣನನ್ನು ಅನುಸರಿಸಿ ಇತರ ದೇವತೆಗಳು ಭೋಗಿಸುವರು. ಪ್ರಾಣನಿಗಿಂತ ಬೇರೆ ಯಾರೂ ಪರಮಾತ್ಮನನ್ನು ಅನುಸರಿಸಿ ಭೋಗಿಸುವುದಿಲ್ಲ. ಪ್ರಾಣನೇ ಭಗವಂತನನ್ನು ಅನುಸರಿಸಿ ಆನಂದವನ್ನು ಅನುಭವಿಸುವನು. ಪ್ರಾಣನನ್ನು ಅನುಸರಿಸಿ ಇತರ ದೇವತೆಗಳು ಆನಂದವನ್ನು ಅನುಭವಿಸುವರು. ಪ್ರಾಣನಿಗಿಂತ ಬೇರೆ ಯಾರೂ ಪರಮಾತ್ಮನನ್ನು ಅನುಸರಿಸಿ ಆನಂದವನ್ನು ಅನುಭವಿಸುವುದಿಲ್ಲ.

ಹೀಗೆ ಪ್ರವೇಶ, ಭೋಗ ಹಾಗೂ ಆನಂದಾನುಭವ –ಈ ಮೂರು ಚಟುವಟಿಕೆಗಳಲ್ಲಿ ಮುಖ್ಯಪ್ರಾಣನು ಭಗವಂತನನ್ನು ಅನುಸರಿಸಿಯೇ ನಡೆದುಕೊಳ್ಳುವುದರಿಂದ, ಪ್ರಾಣನಿಗೆ ಮಾರ್ಗ ಎಂಬ ಆಶಯದಲ್ಲಿ ಭಗವಂತನು 'ಪ್ರಾಣಪದ್ಧತಿ' ಎನಿಸುವನು.[3]

- 'ವಾಯುದೇವನು ರುದ್ರಾದಿದೇವತೆಗಳಿಗಿಂತೆಲ್ಲ ಉತ್ತಮನಾಗಿರುವವನೆಂಬ ಜ್ಞಾನಕ್ಕಿಂತ ಅಧಿಕ ಪ್ರಿಯವಾದದ್ದು ಶ್ರೀಹರಿಗೆ ಮತ್ತೊಂದಿಲ್ಲ. ಹಾಗೆಯೇ ಶ್ರೀಹರಿ ಬ್ರಹ್ಮಾದಿ ದೇವತೆಗಳಿಗಿಂತೆಲ್ಲ ಶ್ರೇಷ್ಠನಾಗಿರುವವನೆಂಬ ಜ್ಞಾನಕ್ಕಿಂತ ಅಧಿಕಪ್ರಿಯವಾದದ್ದು ವಾಯುದೇವನಿಗೆ ಮತ್ತೊಂದಿಲ್ಲ.'[4]

- 'ಶ್ರೀಮನ್ನಾರಯಣನ ಭೃತ್ಯನಾದ ವಾಯುದೇವನನ್ನು ಉತ್ತಮ ದೇವತೆಗಳಾದ ರುದ್ರಾದಿಗಳಿಗಿಂತೆಲ್ಲ ಉತ್ತಮನಾದವನನ್ನಾಗಿ ಧ್ಯಾನಗೈದು, ಅದರ ಫಲವಾಗಿ ಜಗಜ್ಜನಕನಾದ ಶ್ರೀವಿಷ್ಣುವಿನ ಅನುಗ್ರಹದಿಂದ ಸಕಲಭೋಗಗಳನ್ನು ಹೊಂದುವೆವು.[5]

- 'ವೇದಾಭಿಮಾನಿಗಳಲ್ಲಿರುವ ಹರಿವಾಯುಗಳೇ ಉಪಾಸಕರನ್ನು ರಕ್ಷಿಸುವರೆಂಬುದನ್ನು 'ಅಪಶ್ಯಂ ಗೋಪಾಂ....' ಎಂಬ ಮಂತ್ರವೂ ತಿಳಿಸುತ್ತಿದೆ. ವಾಯುದೇವನಲ್ಲಿರುವ

---

3. ಪ್ರಾಣ ಏವೈನಮನು ಪ್ರವಿಶತಿ ಪ್ರಾಣಮಿತರಾ ದೇವತಾ ನ ಪ್ರಾಣಾದಪರಃ ಪರಮನು ಪ್ರವಿಶತಿ ಪ್ರಾಣ ಏವೈನಮನು ಭುಂಕ್ತೇ ಪ್ರಾಣಮಿತರಾ ದೇವತಾ ನ ಪ್ರಾಣಾದಪರಃ ಪರಮನುಭುಂಕ್ತೇ ಪ್ರಾಣ ಏವೈನಮನ್ವಾನಂದೀ ಭವತಿ ಪ್ರಾಣಮಿತಾರಾ ದೇವತಾ ನ ಪ್ರಾಣಾದಪರಃ ಪರಮನ್ವಾನಂದೀ ಭವತಿ ತಸ್ಮಾದಾಹುಃ ಪ್ರಾಣಪದ್ಧತಿರಿತಿ ।

   *– ಹಿರಣ್ಯನಾಭಶ್ರುತಿ [ಭಾ.ತಾ.ನಿ. 10-94-18]*

4. ಸರ್ವದೇವೋತ್ತಮೋ ವಾಯುರಿತಿ ಜ್ಞಾನಾನ್ನ ಚಾಪರಮ್ ।
   ಪ್ರಿಯಮಸ್ತಿ ಹರೇಃ ಕಿಂಚಿತ್ ತಥಾ ವಾಯೋರ್ಹರೇರ್ವಿದಃ ॥

   *– ಮಾಹಾತ್ಮ್ಯೇ [ಭಾ.ತಾ.ನಿ. 11-11-43]*

5. ನಾರಾಯಣೀಯಂ ತಂ ವಾಯುಂ ಚಿಂತಯಿತ್ವೋತ್ತಮೋತ್ತಮಮ್ ।
   ಜಗತ್ಪ್ರಸವಿತುರ್ವಿಷ್ಣೋಃ ಸಕಾಶಾದ್ ಭೋಗಮಾಪ್ನುಮಃ ॥

   *– [ಛಾಂ.ಉ.ಭಾ. 5-1-14]*

ಪುರುಷೋತ್ತಮನಾದ ಪರಮಾತ್ಮನು ಸರ್ವರ ರಕ್ಷಕ. ಛಂದಸ್ಸುಗಳಲ್ಲಿ ವಾಯು ಇರುವನು. ವಾಯುವಿನಲ್ಲಿ ಜನಾರ್ದನ ಇರುವನು. ವಾಯುದೇವನಾಗಲೀ, ಅವನಲ್ಲಿರುವ ಭಗವಂತನಾಗಲೀ ಎಂದೂ ಸುಮ್ಮನೆ ಇರುವುದಿಲ್ಲ. ಯಾಕೆಂದರೆ ವಾಯುದೇವನು ಅವನೊಳಗಿರುವ ಅಮಿತಶಕ್ತಿಸಂಪನ್ನನಾದ ಕೇಶವನಿಂದ ಪ್ರೇರಿತನಾಗಿ ಯಾವಾಗಲೂ ಸಂಚರಿಸುತ್ತಿರುವನು; ಎಲ್ಲರ ಎಲ್ಲ ಪ್ರವೃತ್ತಿಗಳನ್ನೂ ಮಾಡುತ್ತಿರುವನು –ಎಂಬುದು ಪ್ರಸಿದ್ಧ. ಸರ್ವಶಕ್ತನಾದ ವಾಯುವೂ ಅವನೊಳಗಿರುವ ಅಮಿತ ಪರಾಕ್ರಮಶಾಲಿಯಾದ ಶ್ರೀಹರಿಯೂ ಎಲ್ಲೆಡೆ ಪಂಚಭೂತಗಳ ಹೊರಗೂ ಕೂಡಾ ಸಂಚರಿಸುವರು. ಪೂರ್ವಾದಿ ನಾಲ್ಕು ದಿಕ್ಕುಗಳಲ್ಲೂ ಆಗ್ನೇಯಾದಿ ನಾಲ್ಕು ವಿದಿಕ್ಕುಗಳಲ್ಲೂ ಸದಾ ವಾಸಮಾಡುವರು. ಎಲ್ಲ ಜೀವಿಗಳ ಒಳಗೆ ಲೋಕಸಾಕ್ಷಿಗಳಾಗಿ ಸಂಚರಿಸುತ್ತಿರುತ್ತಾರೆ.6

- 'ಈ ಹರಿವಾಯುಗಳ ಕೈಯಲ್ಲಿ ಎಂದೂ ಕ್ಷೀಣವಾಗದ ಧನಸಂಪತ್ತೂ ಜ್ಞಾನ ಸಂಪತ್ತೂ ಇದೆ. ವಾಯುವಿನ ಬಲವೆ ಅಪರಿಮಿತ, ಯಾರಿಗೂ ಎದುರಿಸಲಾಗದಂತಹದ್ದು –ಎಂಬುದು ಪ್ರಸಿದ್ಧ ಎಂದ ಮೇಲೆ ಶ್ರೀಹರಿಯ ಬಲ ಹೇಗಿರಬಹುದು? ಯಾಕೆಂದರೆ ಅವನು ವಾಯುವಿಗೂ ಆಧಾರಭೂತನಾದವನು. ಜ್ಞಾನ–ಕ್ರಿಯಾಶಕ್ತಿ ಇರುವುದರಿಂದ 'ಕ್ರತು' ಎನಿಸಿರುವ ಸರ್ವಜೀವರನ್ನು ಹರಿವಾಯುಗಳು ತಮ್ಮ ಉದರದೊಳಗೆ ಮುಚ್ಚಿಟ್ಟು ಕಾಪಾಡುತ್ತಾರೆ. ಚಿನ್ನದಿಂದ ತುಂಬಿದ ಹೊಂಡವನ್ನು ಮುಚ್ಚಿಟ್ಟು ಧನಿಕರು ಹೇಗೆ ಕಾಪಾಡುವರೋ ಹಾಗೆ ಚೇತನರರನ್ನು ಮಹತ್ತತ್ತ್ವ ಮುಂತಾದವುಗಳಿಂದ ಮುಚ್ಚಿಟ್ಟು ತಮ್ಮ ದೇಹದೊಳಗೆ ಸುರಕ್ಷಿತವಾಗಿರಿಸಿಕೊಂಡಿದ್ದಾರೆ.7

---

6. ಮಂತ್ರೋऽಪ್ಯರ್ಥಮಿಮಂ ಪ್ರಾಹಾಪಶ್ಯಂ ಗೋಪಾಮಿತಿ ಸ್ಮ ಹ ।
ಏಷ ಗೋಪ್ತಾ ಹಿ ಸರ್ವಸ್ಯ ವಾಯುಸ್ಥಃ ಪುರುಷೋತ್ತಮಃ ॥
ಛಂದಸ್ಸು ಸಂಸ್ಥಿತೋ ವಾಯುರ್ವಾಯೌ ಚ ಸ ಜನಾರ್ದನಃ ।
ವಾಯುಶ್ಚ ವಾಯುಸಂಸ್ಥಶ್ಚ ಕದಾಚಿನ್ನ ತಿಷ್ಠತಃ ॥
ವಾಯುರ್ಹಿ ನಿತ್ಯಸಂಚಾರೀ ಸದಾ ಸರ್ವಪ್ರವೃತ್ತಿಮಾನ್ ।
ಚೋದಿತಃ ಕೇಶವೇನೈವ ತತ್‌ಸ್ಥೇನಾಮಿತಶಕ್ತಿನಾ ॥
ಆ ಸಮಂತಾತ್ ಪರಾಕ್ ಚಾಪಿ ಪಂಚಭೂತೇಭ್ಯ ಈಶ್ವರಃ ।
ವಾಯುಸ್ತಸ್ಥೋ ಹರಿಶ್ಚೈವ ಚರತ್ಯಮಿತಪೌರುಷಃ ॥
ಸಧ್ರೀಚೀನಾಸು ಪೂರ್ವಾದಿದಿಕ್ಷ್ವೇತೌ ಚತಸೃಷ್ವಪಿ ।
ನಿತ್ಯದಾ ವಸತಃ ಕೋಣಾದಿಷ್ವಥಾಪಿ ವಿಷೂಚಿಷು ।
ಅಂತಶ್ಚ ಸರ್ವಭೂತೇಷು ಚರತೋ ಲೋಕಸಾಕ್ಷಿಣೌ ॥ – *[ಐ.ಉ.ಭಾ. 1-4-17, 18]*

7. ಹಸ್ತಯೋರೇತಯೋರೇವ ನಿತ್ಯಾಕ್ಷೀಣಂ ವಸು ಸ್ಥಿತಮ್ ।
ತದ್ಧ್ಯಸಹ್ಯಂ ಬಲಂ ವಾಯೋರನಂತಂ ಕಿಮು ತದ್ಧರೇಃ ॥
ವಾಯೋರಾಧಾರಭೂತಸ್ಯ ತಾಭ್ಯಾಂ ಹಿ ಕ್ರತುನಾಮಕಾಃ ।

- 'ಎಲ್ಲ ಜೀವರೂ, ಆಕಾಶವೂ ಹರಿವಾಯುಗಳಿಂದಲೇ ಧರಿಸಲ್ಪಟ್ಟಿರುವರು. ವಾಯು ದೇವನೂ ಚಿತ್‌ಪ್ರಕೃತಿಯೂ ಕೇಶವನಿಂದಲೇ ಧರಿಸಲ್ಪಟ್ಟಿರುವರು. ಗುಣಪೂರ್ಣರಾಗಿರುವ ಪ್ರಯುಕ್ತ ವಾಯುಕೇಶವರಿಬ್ಬರೂ 'ಬೃಹತೀ' ಎನಿಸುವರು. ಸರ್ವಪ್ರೇರಕರಾಗಿರುವುದರಿಂದ ಹರಿವಾಯುಗಳಿಬ್ಬರೂ 'ಪ್ರಾಣ' ಎನಿಸುವರು. ಇವರಿಬ್ಬರಲ್ಲೂ ಕೇಶವನು ವಿಶೇಷವಾಗಿ ಗುಣಪೂರ್ಣನಾಗಿರುವರಿಂದ ಮುಖ್ಯವಾಗಿ 'ಬೃಹತೀ' ಎಂದೂ ವಿಶೇಷವಾಗಿ ಪ್ರೇರಕನಾಗಿರುವುದರಿಂದ ಮುಖ್ಯವಾಗಿ 'ಪ್ರಾಣ' ಎಂದೂ ಕರೆಸಿಕೊಳ್ಳಲ್ಪಡುವನು.8

- 'ವಾಯು ದೇಹಗಳಿಂದ ಕೂಡಿದ್ದರೂ ಹರಿಯ ಅನುಗ್ರಹದಿಂದ ದೇಹಾಭಿಮಾನ ರಹಿತನಾಗಿ ಶಾಶ್ವತನೆನಿಸಿರುವನು. ಅನಿತ್ಯಗಳಾದ ದೇಹಗಳೂ ಮುಕ್ತಿಯವರೆಗೆ ಪ್ರವಾಹತಃ ನಿತ್ಯಗಳೇ ಆಗಿವೆ. ಸೃಷ್ಟಿಕಾಲದಲ್ಲಿ ಸ್ಥೂಲಶರೀರಗಳಿದ್ದರೆ, ಪ್ರಳಯಕಾಲದಲ್ಲಿ ಸೂಕ್ಷ್ಮಶರೀರಗಳಿವೆ. ಹೀಗೆ ಸ್ಥೂಲ–ಸೂಕ್ಷ್ಮ ಭೇದಗಳಿಂದ ಅನಿತ್ಯಗಳಾದ ಶರೀರಗಳೇ ಪ್ರವಾಹತಃ ನಿತ್ಯಗಳೆಂದ ಮೇಲೆ ಅವುಗಳಿಗೆ ನಿಯಾಮಕನಾದ ವಾಯುದೇವ ನಿತ್ಯನೆಂದು ಬೇರೆ ಹೇಳಬೇಕೇ? ವಾಯು ಮತ್ತು ಅವನ ಶರೀರಗಳು ಬೇರೆ ಬೇರೆ ಗಮ್ಯಸ್ಥಾನವುಳ್ಳವುಗಳು. ವಾಯುದೇವ ಕೇಶವನನ್ನು ಹೊಂದುವನು. ಶರೀರ ನಾಶ ಹೊಂದಿ ಪಂಚಭೂತಗಳಲ್ಲಿ ಸೇರಿಕೊಳ್ಳುವುದು. ಜಡವಾದ ಶರೀರ ಜಡದಲ್ಲಿ ಸೇರಿಕೊಳ್ಳುವುದು. ಚೇತನನಾದ ವಾಯುದೇವ ಚೇತನಾಧಿಪತಿ ಶ್ರೀಹರಿಯನ್ನು ಹೋಗಿ ಸೇರುವನು. ವಾಯು ಮತ್ತು ಅವನ ಶರೀರ ವಿರುದ್ಧ ರೀತಿಯ ಗಮನವುಳ್ಳವುಗಳು. ವಾಯುದೇವ ಶರೀರವನ್ನು ಬಿಟ್ಟು ಮೇಲೆ ಹೋಗುವನು. ಶರೀರ ಕೆಳಗೆ ಬಿದ್ದುಹೋಗುವುದು. ಆ ಶರೀರ ಕಣ್ಣಿಗೆ ಕಾಣಿಸುವುದು. ವಾಯುದೇವ ಕಣ್ಣಿಗೆ ಕಾಣಿಸದವನು.

- ಯಾರು ಈ ರೀತಿಯಾಗಿ ವಾಯುದೇವನನ್ನು ಹೀಗೆ ನಿತ್ಯನೆಂದೂ ಸರ್ವನಿಯಾಮಕನೆಂದೂ ಪೂರ್ಣಾನಂದಸ್ವರೂಪಿಯಾದ ಶ್ರೀಹರಿಯಿಂದ ನಿಯಂತ್ರಿತನಾಗಿದ್ದು, ಸರ್ವದಾ

---

ಆವೃತಾ ಸರ್ವಜೀವಾ ಹಿ ಯಥೈವ ಕನಕಾವಟಾಃ ॥
ಆಚ್ಛಾದ್ಯ ಯೇ ವಿತ್ತವದ್ಭಿಸ್ತಾಭ್ಯಾಮೇವಂ ಚ ಚೇತನಾಃ ।
ಆವೃತಾ ಮಹದಾದ್ಯಾಸ್ತು ದೇಹೇ ತಿಷ್ಠಂತಿ ಚೈತಯೋಃ ॥
– [ಐ.ಉ.ಭಾ. 1-4-17, 18]

8. ವಿಷ್ಟಬ್ಧಾಶ್ಚೈವ ಸರ್ವೇಽಪಿ ಜೀವಾ ಆಕಾಶ ಏವ ಚ ।
ಸ ವಾಯುಃ ಪ್ರಕೃತಿಶ್ಚೈವ ವಿಷ್ಟಬ್ಧೌ ಕೇಶವೇನ ಹಿ ॥
ಬೃಹತ್ವಾದ್ ಬೃಹತೀತ್ಯೇವ ತಯೋರ್ನಾಮ ಪ್ರಕೀರ್ತಿತಮ್ ।
ವಾಯುಕೇಶವಯೋಃ ಪ್ರಾಣನಾಮ ಸರ್ವಪ್ರಣಾಯನಾತ್ ॥
ವಿಶೇಷತೋ ಬೃಹತ್ಪ್ರಾಣೋ ಭಗವಾಂಸ್ತತ್ರ ಕೇಶವಃ ।
ಇತಿ ವಿದ್ಯಾತ್....... ॥ – [ಐ.ಉ.ಭಾ. 1-4-19]

ಅವನ ವಶದಲ್ಲಿರುವವನೆಂದೂ ತಿಳಿಯುವನೋ ಅವನು ಮುಕ್ತನಾಗಿ ವಿಷ್ಣುಲೋಕ ವನ್ನು ಹೊಂದುವನು. ಮುಕ್ತರಿಗೆ ಗೋಚರನಾಗುವನು.9

- 'ಭಗವಂತನೇ ಮುಖ್ಯಪ್ರಾಣನಲ್ಲಿ ಪ್ರಾಣನಾಮಕನಾಗಿದ್ದುಕೊಂಡು ಪ್ರಾಣವಾಯು ವನ್ನು ಪ್ರೇರಿಸುವುದರಿಂದ ಪ್ರಾಣ ಎಂದೂ ಅಪಾನನಾಮಕ ಮುಖ್ಯಪ್ರಾಣನ ರೂಪದಲ್ಲಿದ್ದುಕೊಂಡು ಅಪಾನವಾಯುವಿನ ಮೂಲಕ ಮಲಮೂತ್ರಾದಿಗಳನ್ನು ವಿರೇಚನ ಮಾಡುವುದರಿಂದ ಅಪಾನ ಎನಿಸಿರುವನು.'10
- 'ಪರಮಾತ್ಮನಲ್ಲಿ ಹೇಗೋ ಹಾಗೆ ವಾಯುದೇವನಲ್ಲೂ ಎಲ್ಲ ನಾಮಗಳೂ ವ್ಯವಹರಿ ಸಲ್ಪಡುವವು. ಆದರೆ ಪರಮಾತ್ಮನಲ್ಲಿ ಹೇಗೋ ಹಾಗೆ ಪರಮಮುಖ್ಯ ವೃತ್ತಿಯಿಂದ ಅಲ್ಲ. ಇತರ ವ್ಯಕ್ತಿಗಳಿಗೆ ಹೋಲಿಸಿದಾಗ ಹೆಚ್ಚು ಮುಖ್ಯವೆನಿಸುವ ವೃತ್ತಿಯಿಂದಷ್ಟೇ. ವಾಯುದೇವನೂ ಶ್ರೀಹರಿಯ ಆಜ್ಞೆಯಿಂದ ಸೂರ್ಯನಲ್ಲಿದ್ದುಕೊಂಡು ಈ ಮೂರ್ಲೋಕಗಳಿಗೆ ಶಾಖ ನೀಡುವನು. ಸೂರ್ಯನಾದರೂ ವಾಯುವಿನ ಶಕ್ತಿಯಿಂದ ಶಾಖ ನೀಡುವನು.'11 (ಆದುದರಿಂದ 'ಪ್ರಾಣೋ ಹ್ಯೇಷ ಯ ಏಷ ತಪತಿ'

---

9. '.....ಅಮರ್ತ್ಯಸ್ತತ್ಪ್ರಸಾದೇನ ವಾಯುರ್ದೇಹೈಃ ಸಹಸ್ಥಿತಃ ।
ಅನಿತ್ಯಾ ಅಪಿ ದೇಹಾಸ್ತೇ ಶಶ್ವತ್ ಸಂತ್ಯಾವಿಮೋಕ್ಷತಃ ॥
ಸ್ಥೂಲಸೂಕ್ಷ್ಮವಿಭಾಗೇನ ಕಿಮು ವಾಯುರ್ಜಗತ್ಪ್ರಭುಃ ।
ನಾನಾಗತೀ ತು ತಾವೇತೌ ವಾಯುಃ ಪ್ರಾಪ್ನೋತಿ ಕೇಶವಮ್ ॥
ಶರೀರಂ ತು ವಿನಷ್ಟಂ ಸತ್ ಪಂಚತ್ವಮುಪಗಚ್ಛತಿ ।
ಜಡಂ ತಜ್ಜಡತಾಮೇತಿ ಚೇತನಾ ವಾಯುದೇವತಾ ॥
ಚೇತನೇಶಂ ಹರಿಂ ಯಾತಿ ವಿರುದ್ಧಗಮನೌ ಚ ತೌ ।
ಊರ್ಧ್ವಂ ಗಚ್ಛತಿ ದೇವಃ ಸ ದೇಹೋಽಧಃ ಪತತಿ ಕ್ಷಿತೌ ॥
ದೃಶ್ಯತೇ ತಚ್ಛರೀರಂ ಚಾಪ್ಯದೃಶ್ಯಾ ವಾಯುದೇವತಾ ।
ಯ ಏವಂ ತಂ ವಾಯುಮಮೃತಂ ಸರ್ವನಾಯಕಮ್ ॥
ಪೂರ್ಣಾನಂದೇನ ಹರಿಣಾ ಗೃಹೀತಂ ತದ್ವಶಂ ಸದಾ ।
ಸ ಮುಕ್ತೋ ಲೋಕಮಾಪ್ನೋತಿ ವಿಷ್ಣೋರ್ಮುಕ್ತೈಶ್ಚ ದೃಶ್ಯತೇ ॥
*– [ಐ.ಉ.ಭಾ. 1-6-5]*

10. ಪ್ರಾಣಸ್ಥಃ ಪ್ರಾಣನಾಮಾಽಸೌ ಅಪಾನೇಽಪಾನನಾಮಕಃ ।
ನೇತೃತ್ವಾಚ್ಚಾಪನೇತೃತ್ವಾದ್ ಭಗವಾನ್ ಪುರುಷೋತ್ತಮಃ ॥ *– [ಐ.ಉ.ಭಾ. 2-1-3]*

11. '.....ತಥೈವ ಸರ್ವನಾಮಾನಿ ಪ್ರವರ್ತಂತೇ ಚ ಮಾರುತೇ ।
ನ ತಾವನ್ಮುಖ್ಯವೃತ್ತ್ಯೈವ ಮುಖ್ಯತೋಽನ್ಯವ್ಯಪೇಕ್ಷಯಾ ॥
......ಅನ್ಯವ್ಯಪೇಕ್ಷಯಾ ವಾಯೌ ಮುಖ್ಯವೃತ್ತಿರ್ವಿಧೀಯತೇ ।
ವಾಯುಶ್ಚ ಸೂರ್ಯಸಂಸ್ಥಃ ಸನ್ ತಪತ್ಯೇತಜ್ಜಗತ್‌ತ್ರಯಮ್ ।
ಆಜ್ಞಯೈವ ಹರೇರ್ವಾಯೋಃ ಶಕ್ತ್ಯಾ ಸೂರ್ಯಸ್ತಪತ್ಯಯಮ್ ॥
*– ಬೃಹತ್ಸಂಹಿತಾ [ಐ.ಉ.ಭಾ. 2-1-2-12]*

–ಎಂಬಲ್ಲಿ [೨–೧–೧] ಪ್ರಾಣಶಬ್ದದಿಂದ ಮುಖ್ಯವಾಗಿ ಪರಮಾತ್ಮನನ್ನು ಇಟ್ಟುಕೊಳ್ಳುವಂತೆ ಗೌಣವಾಗಿ ಮುಖ್ಯಪ್ರಾಣನನ್ನೂ ಇಟ್ಟುಕೊಳ್ಳಬಹುದಾಗಿದೆ ಎಂಬ ಆಶಯ)

'ವೇದಗಳಲ್ಲಿ ಇಬ್ಬರು ಆತ್ಮರು; ಇಬ್ಬರು ಪ್ರಾಣರು; ಇಬ್ಬರು ಚೇತನರು ಅಜ್ಞಾನ, ಪರಾಭವಗಳಿಗೆ ಒಳಗಾಗದವರಾಗಿ ಪ್ರಸ್ತುತರಾಗಿರುವರು. ವಾಯುದೇವ ಮತ್ತು ನಾರಾಯಣ –ಇವರೇ ಆ ಎರಡು ವ್ಯಕ್ತಿಗಳು. ಉಳಿದೆಲ್ಲ ಆತ್ಮರು, ಪ್ರಾಣರು, ಚೇತನರು ಅಜ್ಞಾನ ಹಾಗೂ ಪರಾಭವಗಳಿಗೆ ಒಳಗಾಗುವವರು. ಆದುದರಿಂದಲೇ ಅವರು ಅಧಮರು. ವಾಯುದೇವನು ಮಧ್ಯಮ ಎನಿಸಿದರೆ ಶ್ರೀಹರಿಯೊಬ್ಬನೇ ಉತ್ತಮನು. ಆದುದರಿಂದ ಈ ಇಬ್ಬರೇ ಸರ್ವಶಬ್ದವಾಚ್ಯರು. ಉಳಿದವರು ಮಿತ ಶಬ್ದಗಳಿಂದಷ್ಟೇ ವಾಚ್ಯರಾಗುವರು. ಅಮಿತ ಶಬ್ದಗಳಿಂದ ವಾಚ್ಯರಾಗಲಾರರು. ಶ್ರೀದೇವಿಯೂ ಅಖಿಲ ಶಬ್ದವಾಚ್ಯಳಾಗಿರುವಳಾದರೂ ಶ್ರೀವಿಷ್ಣುವಿನಂತೆ ಪರಮಮುಖ್ಯವೃತ್ತಿಯಿಂದ ಅಲ್ಲ. ಆದುದರಿಂದ ಶ್ರೀದೇವಿಯಾಗಲೀ ವಾಯುದೇವನಾಗಲೀ ಅಮಿತನಾಮವುಳ್ಳವರಾಗಿರುವರಾದರೂ ಮಿತನಾಮವುಳ್ಳರಂತೆಯೇ. ಶ್ರೀವಿಷ್ಣುವಾದರೂ ಪರಮಮುಖ್ಯವೃತ್ತಿಯಿಂದ ವಾಚ್ಯನಾಗುವುದರಿಂದ ಮುಖ್ಯವಾಗಿ ಅಮಿತನಾಮವುಳ್ಳವನು......12

- ಇಂದ್ರನು ನಡೆಸಿದ ಮಹಾವ್ರತದಲ್ಲಿ ವಾಯುದೇವನೇ ಉದ್ಗಾತೃ ಆಗಿದ್ದನು. ವಿಶ್ವಾಮಿತ್ರರು ನಡೆಸುತ್ತಿದ್ದ 'ಬೃಹತೀಸಹಸ್ರ'ದ ಶಂಸನದ ಶ್ರವಣ ನಡೆಸಲು ಶ್ರೀವಿಷ್ಣು ವಾಯುಸಹಿತನಾಗಿ ದೇವೇಂದ್ರನನ್ನು ಪ್ರವೇಶಿಸಿದ್ದನು.'13
- 'ಸಕಲನಿರ್ದುಷ್ಟಗುಣಸಂಪನ್ನನಾದ ವಾಯು ಸತ್ಯ ಎನಿಸುವನು. ಅವನಿಗೂ ಸತ್ಯತ್ವವನ್ನು ಅನುಗ್ರಹಿಸಿದವನು ದೋಷರಹಿತಗುಣಪೂರ್ಣನಾದ ಶ್ರೀಹರಿ. ಆದುದರಿಂದಲೇ ಅವನು 'ಸತ್ಯಸ್ಯ ಸತ್ಯ' ಎನಿಸುವನು.'14

---

12. ದ್ವಾವಾತ್ಮಾನೌ ಹಿ ವೇದೇಷು ದ್ವೌ ಪ್ರಾಣೌ ದ್ವೌ ಚ ಚೇತನೌ ।
ಅಜ್ಞಾನಾಭಿಭವಾಸ್ಪೃಷ್ಟೌ ವಾಯುರ್ನಾರಾಯಣಶ್ಚ ತೌ ॥
ತದನ್ಯೇ ಚೇತನಾಃ ಸರ್ವೇ ಪ್ರಾಣಾಶ್ಚಾತ್ಮಾನ ಏವ ಚ ।
ಅಜ್ಞಾನಾಭಿಭವಾಸ್ಪೃಷ್ಟಾಸ್ತಸ್ಮಾತ್ ತೇ ಹ್ಯಧಮಾಃ ಶ್ರುತಾಃ ॥
ಮಧ್ಯಮೋ ವಾಯುರೇವೈಕ ಉತ್ತಮಃ ಕೇವಲೋ ಹರಿಃ ।
ಸರ್ವಶಬ್ದೋದಿತೌ ತಸ್ಮಾದೇತೌ ದ್ವಾವೇವ ನಾಪರಃ ॥
ಅನ್ಯೇ ಚೈವ ಮಿತೈಃ ಶಬ್ದೈರುಚ್ಯಂತೇ ನಾಮಿತೈಃ ಕ್ವಚಿತ್ ।
ಶ್ರೀರಪ್ಯಖಿಲಶಬ್ದೋಕ್ತಾ ವಿಷ್ಣುವನ್ನತು ಮುಖ್ಯತಃ ॥
ತಸ್ಮಾದಮಿತನಾಮಾನಾವಪಿ ತೌ ಮಿತನಾಮವತ್ ।
ಶ್ರೀಶ್ಚ ವಾಯುಶ್ಚ ವಿಷ್ಣುಸ್ತು ಮುಖ್ಯೋಕ್ತೇರಮಿತಾಭಿಧಃ ॥
– –*ಬ್ರಹ್ಮಾಂಡೇ [ಐ.ಉ.ಭಾ. 2-1-2-12]*

13. 'ಉದ್ಗಾತಾ ವಾಯುರಭವತ್..... ಬೃಹತೀಸಹಸ್ರಂ ಶಂಸಿಷ್ಯನ್ ಯದಾ ಸಸ್ಮಾರ ಕೇಶವಮ್ । ವಾಯುನಾ ಸಹ ದೇವೇಶಸ್ತದಾ ವಾಸವಮಾವಿಶತ್ ॥
– *ಬ್ರಹ್ಮಾಂಡ [ಐ.ಉ.ಭಾ. 2-1-2-13]*

14. ಸರ್ವಸಾಧುಗುಣತ್ವಾತ್ತು ವಾಯುಃ ಸತ್ಯ ಇತೀರ್ಯತೇ ।

- 'ಬೃಹತೀಸಹಸ್ರದ ವ್ಯಂಜನಾಕ್ಷರಗಳಲ್ಲೂ ಸ್ವರಾಕ್ಷರಗಳಲ್ಲೂ ಇರುವ ತನ್ನ ಸ್ತ್ರೀರೂಪಗಳಿಂದಲೂ ಪುರುಷರೂಪಗಳಿಂದಲೂ ಕ್ರೀಡಿಸುವ ಭಗವಂತನು ಪ್ರಾಣನ ಉತ್ಪತ್ತಿಯನ್ನು ಬಯಸಿ ರಮೆಯಲ್ಲಿರುವ ತನ್ನದೇ ಆದ ಸ್ತ್ರೀರೂಪದ ಜೊತೆಗೆ ರಮಿಸುವನು.'15

- ಸರ್ವವೇದಗಳಿಗೂ ಆಧಾರನಾಗಿರುವ ಪ್ರಾಣನು ವೇದಾಣೀ ಎನಿಸುವನು. ಅವನಲ್ಲಿ ನಿತ್ಯ ನೆಲೆಸಿರುವ ಭಗವಂತನು 'ಆಣೀಷ್ಠ' ಎನಿಸುವನು.16

- ಪ್ರಾಣಾಂತರ್ಗತ ವಿಷ್ಣುವಿನಿಂದಲೇ ಎಲ್ಲರೂ ಜನಿಸುವರು. ಆದ್ದರಿಂದ ಪ್ರಾಣಾಂತರ್ಗತ ವಿಷ್ಣುವೇ ಪ್ರಸ್ತಾವದೇವತೆ.17

- ಜೀವನ ಯಜ್ಞದ ಅವಭೃಥಸ್ನಾನದಂತಿರುವ ಮರಣಕಾಲದಲ್ಲಿ ಧ್ಯಾನಿಸಬೇಕಾದ ಭಗವಂತನ ಮೂರು ಮಹಿಮೆಗಳಲ್ಲಿ ಒಂದು –'ಮುಖ್ಯಪ್ರಾಣನಿಗಿಂತ ಸದಾ ಅಧಿಕಸುಖ ಉಳ್ಳವನು.'18

- ವಾಯುದೇವ ಸರ್ವದೇವತೆಗಳ ಸಂಹಾರಕ. ಅಂತಹ ವಾಯುದೇವನ ಸಂಹಾರಕ ಜನಾರ್ದನ. ಆ ಜನಾರ್ದನನನ್ನು ಸಂಹರಿಸುವವರು ಯಾರೂ ಇಲ್ಲ. ಚೆನ್ನಾಗಿ ವಿರಾಜಿಸುವುದರಿಂದ 'ವಿರಾಟ್' ಎನಿಸುವವನು ಅವನು.19

- ವೈಶ್ವಾನರರೂಪಿ ಪರಮಾತ್ಮನ ಪ್ರಾಣವು ವಾಯುದೇವನೇ ಮುಂತಾದವರಿಂದ ಮಾಡಲಶಕ್ಯವಾದ ಕರ್ಮಗಳನ್ನು ಮಾಡುವುದರಿಂದ 'ಪೃಥಗ್‌ವರ್ತ್ಮಾ' ಎನಿಸಿದೆ.

---

ತಸ್ಮಾಪಿ ಸತ್ಯತಾದಾತಾ ಸಾಧುಪೂರ್ಣಗುಣೋ ಹರಿಃ ॥
ಸತ್ಯಸ್ಯ ಸತ್ಯ ಏತಸ್ಮಾತ್.... ॥ *–[ಐ.ಉ.ಭಾ. 2-2-7-2]*

15. .....ಸ ಏವ ರಮತೇ ಮಾಯಾಂ ಸ್ಥಿತಾತ್ಮಸ್ತ್ರೀತನೌ ಹರಿಃ ।
ಪ್ರಾಣಸ್ಯೋತ್ಪತ್ತಿಕಾಮಃ ಸನ್ ಅನೇಚ್ಛಾಮಾರನಾಮಕಃ ॥
*– ಅರ್ಧನಾರೀನಾರಾಯಣತಂತ್ರ [ಐ.ಉ.ಭಾ. 2-2-7-6]*

16. ಆಧಾರಃ ಸರ್ವವೇದಾನಾಂ ವೇದಾಣೀ ಪ್ರಾಣ ಉಚ್ಯತೇ ।
ತಸ್ಮಿನ್ ಸ್ಥಿತೋ ಹರಿರ್ನಿತ್ಯಮಾಣೀಷ್ಠ ಇತಿ ಗೀಯತೇ ॥
*– ಶಬ್ದತತ್ತ್ವೇ [ಐ.ಉ.ಭಾ. 2-6-1-1]*

17. ಪ್ರಾಣಸ್ಥವಿಷ್ಣುನಾ ಸರ್ವೇ ಪ್ರಸೂಯಂತೇ ಯತಸ್ತತಃ ।
ಪ್ರಸ್ತಾವದೇವತಾ ಸ ಸ್ಯಾತ್.... *–[ಛಾಂ.ಉ.ಭಾ. 1-3-15]*

18. ....ಪ್ರಾಣಾಚ್ಚ ಸುಖತೋ ನಿತ್ಯಮಧಿಕಶ್ಚೇತಿ ಚಿಂತಯೇತ್ ।
*– ಸತ್ತತ್ತ್ವೇ [ಛಾಂ.ಉ.ಭಾ. 3-4-2]*

19. ವಾಯುಸ್ತು ಸರ್ವದೇವತ್ತಾ ವಾಯೋರತ್ತಾ ಜನಾರ್ದನಃ ।
ನ ತಸ್ಯ ಕಶ್ಚಿದತ್ತಾಽಸ್ತಿ ಸ ವಿರಾಟ್ ಅಧಿರಾಜನಾತ್ ॥ *–[ಛಾಂ.ಉ.ಭಾ. 4-1-4]*

ಜ್ಞಾನರೂಪಿಯಾಗಿದ್ದು ಆಯುಷ್ಯವನ್ನು ಕೊಡುವುದಲ್ಲದೆ ಮುಖ್ಯ ವಾಯುವಿಗೂ ನಿತ್ಯ ಆಶ್ರಯವಾಗಿರುವುದರಿಂದ ವಾಯು ಎಂದೂ ಎನಿಸಿದೆ.20

- ಭೂಮೋಪಾಸಕ ಪರಮಾತ್ಮನಿಂದ ನಡೆಯುವ ಸೃಷ್ಟ್ಯಾದಿಗಳನ್ನು ಸಾಕ್ಷಾತ್ಕರಿಸುತ್ತಿರುವನು.21
- ಶ್ರೀವಿಷ್ಣು ವಾಯುದೇವನಲ್ಲಿ ಸದಾ ಸನ್ನಿಹಿತನಾಗಿರುವುದರಿಂದ 'ಶ್ವೇತ' ಎನಿಸುವನು.22
- ಬ್ರಹ್ಮಾಂಡವನ್ನು ಸೃಷ್ಟಿಸಿ, ಅದರೊಳಗೆ ಪವಡಿಸಿದ ಭಗವಂತನು 'ಅಗ್ನಿ'ಯು ಉತ್ಪನ್ನವಾಗಲೆಂದು ಯೋಚಿಸಲು, ಅಗ್ನಿ ಹೆಸರಿನ ವಾಯುದೇವನ ಉತ್ಪತ್ತಿಯಾಯಿತು. ಮೊದಲು ಜನಿಸಿದ್ದರಿಂದಲೂ, ಮುಂದೆನಿಂತು ಎಲ್ಲರನ್ನೂ ನಡೆಸುವುದರಿಂದಲೂ ವಾಯು 'ಅಗ್ನಿ' ಎನಿಸುವನು.23
- ವಾಯುದೇವ ಜೀವಸಮೂಹದಲ್ಲಿಯೇ ಪೂರ್ಣನಾಗಿರುವುದರಿಂದ 'ವಿಶ್ವ' ಎನಿಸುವನು. ಅಂತಹ ವಾಯುದೇವನನ್ನೂ ಸೃಷ್ಟಿಸುವವನು ಭಗವಂತ.24
- ಮೂರ್ತಾಮೂರ್ತಸ್ವರೂಪವಾದ ಜಗತ್ತು ಭಗವಂತನ ಪ್ರತಿಮೆ. ಅದರಲ್ಲಿ ಶ್ರೀದೇವಿ, ಚತುರ್ಮುಖ ಹಾಗೂ ವಾಯು ಈ ಮೂವರಿಗಿಂತ ಉಳಿದೆಲ್ಲರೂ ಮೂರ್ತರು. ಮೂರ ಎನಿಸುವ ಪಾಪಕ್ಕೆ ಭಾಗಿಗಳಾದವರೇ ಮೂರ್ತ ಎನಿಸುವರು. ಇಂತಹ ಮೂರ್ತಕ್ಕಿಂತ ವಿರುದ್ಧ ರೂಪವುಳ್ಳದ್ದರಿಂದ ಲಕ್ಷ್ಮೀದೇವಿ ಹಾಗೂ ವಾಯುದೇವ ಅಮೂರ್ತರು. ಸರ್ವಜ್ಞರು. ವ್ಯಾಪ್ತರು. ಶ್ರೀಹರಿಯ ನಿಯಂತ್ರಣಕ್ಕೆ ಒಳಗಾದವರು. ಆದ್ದರಿಂದ 'ತ್ಯ' ಎನಿಸಿರುವರು. ಅಂತಹವರಿಗೂ ಸಾರ –ಅಂದರೆ ಶ್ರೇಷ್ಠನಾದವನು ಶ್ರೀಹರಿ.25

---

20. ವಾಯ್ವಾದಿಪ್ರಾಣಶಕ್ಯಂ ನ ಯತ್ ತತ್ಕರ್ತಾ ಹರೇರ್ಯತಃ ।
ಪ್ರಾಣಸ್ತೇನ ಪೃಥಗ್ವರ್ತ್ಮಾ ವಾಯುರ್ಜ್ಞಾನಾಯುರೂಪತಃ ॥
ವಾಯೋರಪ್ಯಾಶ್ರಯೋ ನಿತ್ಯಂ... ॥ – *[ಛಾಂ.ಉ.ಭಾ. 5-4-8]*

21. ಪಶ್ಯೇಚ್ಚ ಪ್ರಾಣಸೃಷ್ಟ್ಯಾದ್ಯಂ..... । – *ಪರಮತತ್ತ್ವೇ [ಛಾಂ.ಉ.ಭಾ. 7-3-3]*

22. ವಿಷ್ಣ್ವಾಖ್ಯಂ ಪರಮಂ ಬ್ರಹ್ಮ ಶ್ವೇತಂ ಶ್ವಸನಗಂ ಯತಃ । – *[ಛಾಂ.ಉ.ಭಾ. 8-5-2]*

23. ...ತತಃ ಸ ಚಿಂತಯಾಮಾಸ ಸ್ಯಾದಗ್ನಿರಿತಿ ವೇದರಾಟ್ ।
ತಚ್ಚಿಂತನಾತ್ ಸಮುತ್ಪನ್ನೋ ವಾಯುರಗ್ನ್ಯಭಿಧಾನವಾನ್ ।
ಅಗ್ರಜತ್ವಾದಗ್ರಣೇತ್ವಾದ್ ವಾಯೋರಗ್ನಿತ್ವಮಿಷ್ಯತೇ ॥
– *ಪ್ರವೃತ್ತೇ [ಬೃ.ಉ.ಭಾ. 3-2-2]*

24. ಸ ಹಿ ವಿಷ್ಣುಃ ಪರೋ ವಾಯೋರಪಿ ಕರ್ತಾ ಪ್ರಕೀರ್ತಿತಃ ।
ವಿಶ್ವೋ ವಾಯುಃ ಸಮುದ್ದಿಷ್ಟಃ ಪೂರ್ಣತ್ವಾಜ್ಜೀವಸಂಘತಃ ॥ [ಬೃ.ಉ.ಭಾ. 6-4-13]

25. ಮೂರ್ತಾಮೂರ್ತಮಿದಂ ರೂಪಂ ಬ್ರಹ್ಮಣಃ ಪ್ರತಿಮಾತ್ಮಕಮ್ ।
....ಶ್ರಿಯೋ ವಾಯೋರ್ವಿರಿಂಚಾಚ್ಚ ಯೇಽನ್ಯೇ ಮೂರ್ತಾ ಹಿ ತೇ ಸ್ಮೃತಾಃ ॥

- ಬ್ರಾಹ್ಮಣಜಾತಿಗೆ ಅಭಿಮಾನಿಯಾದ ಚತುರ್ಮುಖಬ್ರಹ್ಮನನ್ನು ಶ್ರೀವಿಷ್ಣುವಿಗೆ ಅಧೀನನ್ನಾಗಿ ತಿಳಿದುಕೊಳ್ಳದಿದ್ದರೆ ಹೇಗೆ ಅವನು ಅಂತಹವನನ್ನು ನಿಶ್ಚಿತವಾಗಿ ಅಂಧಂತಮಸ್ಸಿನಲ್ಲಿ ಬೀಳಿಸುವನೋ ಹಾಗೆಯೇ ಕ್ಷತ್ರಿಯ ಜಾತ್ಯಭಿಮಾನಿಯಾದ ವಾಯುದೇವನೂ ತನ್ನನ್ನು ಶ್ರೀವಿಷ್ಣುವಿಗೆ ಅಧೀನನೆಂದು ತಿಳಿಯದಿದ್ದಲ್ಲಿ ಅಂತಹವನನ್ನು ಅಂಧಂತಮಸ್ಸಿನಲ್ಲಿ ಬೀಳಿಸುವನು..... ಚತುರ್ಮುಖಾದಿಗಳು ಹೇಗೋ ಹಾಗೆ ವಾಯುದೇವನೂ ಶ್ರೀವಿಷ್ಣುವಿನಿಂದ ಹುಟ್ಟಿದವನು. ಯಾವಾಗಲೂ ಅವನ ವಶದಲ್ಲಿಯೇ ಇರುವವನು.26
- ಮುಖ್ಯಪ್ರಾಣನು ತನ್ನ ಪ್ರಾಣ–ಅಪಾನ–ವ್ಯಾನ–ಉದಾನ ಹಾಗೂ ಸಮಾನ ಎಂಬ ಐದು ರೂಪಗಳಿಂದ ಪ್ರತಿಯೊಬ್ಬರ ಶರೀರದಲ್ಲಿ ಉಸಿರಾಟ ಇತ್ಯಾದಿಗಳನ್ನು ಪ್ರೇರಿಸುತ್ತಿರುವನೋ ಅಂತಹ ವಾಯುವಿಗೂ ಯಾವಾಗಲೂ ಮುಖ್ಯ ನಿಯಾಮಕನಾಗಿರುವವನು ಶ್ರೀವಿಷ್ಣು.27
- ಮಧ್ಯಮಪ್ರಾಣ ಎನಿಸಿರುವ ವಾಯುದೇವನು ವಿಷ್ಣುವಿನ ಶಿಶು.28
- ಪರಮಾತ್ಮನಿಂದ ಪ್ರಾಣದೇವನು ಹುಟ್ಟುವನು.29
- ವಾಯುದೇವನಲ್ಲಿ ಭಗವಂತನು ಅಂತರ್ಯಾಮಿಯಾಗಿ ಇರುವನು.30

---

ಮೂರಂ ಪಾಪಂ ಹಿ ತೇನಾಽಪ್ತಂ ಮೂರ್ತಮಿತ್ಯಭಿಧೀಯತೇ ।
.....ಮೂರ್ತಾದ್ ವಿರುದ್ಧರೂಪತ್ವಾತ್ ಶ್ರೀರ್ವಾಯುಶ್ಚಾಪ್ಯಮೂರ್ತಕೌ ॥
ಸರ್ವಜ್ಞೌ ಚ ತತೌ ಚೈವ ನಿಯತೌ ಹರಿಣೈವ ತೌ ।
ತಯೋಃ ಸಾರಸ್ತು ಭಗವಾನ್ ಹರಿರ್ನಾರಾಯಣಃ ಪರಃ ॥
– *ನಾರಾಯಣಶ್ರುತಿ [ಬೃ.ಉ.ಭಾ. 4-4-3]*

26. ಬ್ರಹ್ಮಜಾತ್ಯಾತ್ಮಕಂ ವೇತ್ತಿ ನೈವ ವಿಷ್ಣುವಶಂ ಹಿ ಯಃ ।
ಬ್ರಹ್ಮಾಣಂ ತಂ ತತೋ ಬ್ರಹ್ಮಾ ಪಾತಯೇತ್ ತಮಸಿ ಧ್ರುವಮ್ ॥
ಏವಂ ಕ್ಷತ್ರಾತ್ಮಕೋ ವಾಯುಃ..... ।
ಸರ್ವಂ ವಿಷ್ಣೌ ಸ್ಥಿತಂ ವಿಷ್ಣೋರ್ಜಾತಂ ವಿಷ್ಣೋರ್ವಶೇ ಸದಾ ॥
– *ಹಯಗ್ರೀವಸಂಹಿತೆ [ಬೃ.ಉ.ಭಾ. 4-4-6]*

27. ಪ್ರಾಣಾದಿಪಂಚರೂಪೋ ಯೋ ವಾಯುಃ ಸರ್ವನಿಯಾಮಕಃ ।
ನಿಯಂತಾ ಪರಮೋ ವಿಷ್ಣುರ್ವಾಯೋಸ್ತಸ್ಯಾಪಿ ಸರ್ವದಾ ॥ – *[ಬೃ.ಉ.ಭಾ. 5-4-1]*

28. ಅಯಂ ವಾವ ಶಿಶುರ್ಯೋಽಯಂ ಮಧ್ಯಮಃ ಪ್ರಾಣಃ – *[ಬೃ.ಉ.ಭಾ. 5-9-8]*

29. ಆತ್ಮತ ಏಷ ಪ್ರಾಣೋ ಜಾಯತೇ । – *[ಬೃ.ಉ.ಭಾ. 5-9-8]*

30. ಯೋ ವಾಯೌ ತಿಷ್ಠನ್ । – *[ಬೃ.ಉ.ಭಾ. 5-9-8]*

* 'ಸರ್ವಜ್ಞಾನಾತ್ ತಥಾಽಯುಷ್ಟ್ವಾತ್ ಸೂತ್ರಾತ್ಮಾ ವಾಯುರುಚ್ಯತೇ..... ಎಂದು [ಬೃ.ಉ.ಭಾ.5-9-2] ಮುಂದೆ ವಾಯುಶಬ್ದವನ್ನು ಮುಖ್ಯಪ್ರಾಣನ ಪರವಾಗಿ ಮಂಡಿಸಿ, 'ಅತ್ರೋಕ್ತಾ ಅಪಿ ಪೃಥಿವ್ಯಾದ್ಯಾ ಅಂತರ್ಯಾಮಿಬ್ರಾಹ್ಮಣೇ ಭವಂತಿ' ಎನ್ನಲಾಗಿದೆ.

- ಪ್ರಾಣನಲ್ಲಿರುವ ವಿಷ್ಣುವಿಗೆ ಪ್ರೀತಿಕರವಾಗಿಯೇ ಭೋಜನವನ್ನು ಮಾಡುವರು. ಅಜ್ಞರೂ ಕೂಡ ಪ್ರಾಣನಲ್ಲಿರುವ ಪರಮಾತ್ಮನ ಇಚ್ಛೆಯಿಂದಲೇ ಕಳ್ಳತನ ಮುಂತಾದ ನಿಷಿದ್ಧ ಚಟುವಟಿಕೆಗಳನ್ನು ನಡೆಸುವರು. ಆದರೂ ಪ್ರಾಣಾಂತರ್ಯಾಮಿ ಪರಮಾತ್ಮನನ್ನು ತಿಳಿಯುವುದಿಲ್ಲ.31
- ವಾಯುದೇವನಿಗೆ ಪರಮಾತ್ಮನು ಆನಂದವನ್ನು ನೀಡುವುದರಿಂದ 'ವಾಯುರಮ್' ಎಂದೇ ಕರೆಸಿಕೊಳ್ಳಲ್ಪಡುವನು.32
- ಬೇರೆ ಯಾವ ದೇವತೆಗಳ ಮೂಲಕವೂ ಶ್ರೀಹರಿಯ ಸಾಕ್ಷಾತ್ಕಾರ ಪಡೆಯಲಾಗದು. ಜ್ಞಾನರೂಪಿಗಳಾದ ವಾಯುದೇವ ಹಾಗೂ ಚತುರ್ಮುಖ ಇವರ ಮೂಲಕ ಹಾಗೂ ಪರಮಜ್ಞಾನಸ್ವರೂಪಿಯಾದ ಭಗವಂತನನ್ನು ಸಂತೋಷಗೊಳಿಸಿದಾಗ, ಪ್ರಸನ್ನನಾದ ಅವನ ಮೂಲಕ ಭಗವಂತನ ದರ್ಶನ ಪಡೆಯಲು ಸಾಧ್ಯ. ಉಳಿದ ದೇವತೆಗಳೆಲ್ಲ ಭಗವತ್ಸಾಕ್ಷಾತ್ಕಾರ ಪಡೆಯುವಲ್ಲಿ ಅನುಜ್ಞಾಪ್ರದರಷ್ಟೇ.33
- ಪರಮಾತ್ಮನ ಮುಖ್ಯವಾದ ನೆಲೆಬೀಡು ಮುಖ್ಯಪ್ರಾಣ. ಶ್ರವಣ, ಮನನ, ನಿದಿಧ್ಯಾಸನಗಳಿಂದ ಪ್ರಾಣನಲ್ಲಿರುವ ಶ್ರೀಹರಿಯನ್ನು ಉಪಾಸನೆ ಮಾಡಿದವನಿಗೆ ಹರಿಯು ಅವನಲ್ಲಿರುವ ಮುಖ್ಯಪ್ರಾಣನಲ್ಲಿ ಆವೇಶಗೊಳ್ಳುವನು. ಪರಮಾತ್ಮನು ಮುಖ್ಯಪ್ರಾಣನಲ್ಲಿ ಯಾವಾಗಲೂ ಸನ್ನಿಹಿತನಾಗಿಯೇ ಇರುವನು. ಆದರೂ ಮುಖ್ಯಪ್ರಾಣನ ಮೂಲಕ ಸಾಧಕನಲ್ಲಿ ಜ್ಞಾನವನ್ನು ಅಭಿವೃದ್ಧಿಗೊಳಿಸುವುದೇ ಮುಖ್ಯಪ್ರಾಣನಲ್ಲಿ ಪರಮಾತ್ಮನ ಆವೇಶವೆನಿಸುತ್ತದೆ. ಒಬ್ಬ ಮನುಷ್ಯನಲ್ಲಿ ಸನ್ನಿಹಿತವಾಗಿ ಭೋಗವನ್ನು ಅನುಭವಿಸುತ್ತಲೇ ಇರುವ ಪಿಶಾಚವು ಮಂತ್ರೌಷಧಿಪ್ರಯೋಗದಿಂದ ತನ್ನ ವಿಶೇಷ ಪ್ರಭಾವವನ್ನು ತೋರಿದಾಗ ಅದನ್ನು ಆವೇಶ ಎಂದು ಕರೆಯುವಂತೆ ವಿಷ್ಣುವು ಮುಖ್ಯಪ್ರಾಣನಲ್ಲಿ ನಿತ್ಯ ನೆಲೆಸಿರುವವನೇ ಆದರೂ, ಜ್ಞಾನಿಯಿಂದ ವಿಶೇಷವಾಗಿ ಉಪಾಸಿತನಾದ ಅವನು ಆ ಜ್ಞಾನಿಗೆ ಆಗಾಗಲೇ ಸಂಪಾದಿಸಿಕೊಂಡಿದ್ದ ಜ್ಞಾನದ ಅಭಿವೃದ್ಧಿಯನ್ನಾಗಲೀ ಹೊಸತಾಗಿ ಜ್ಞಾನದ ಉತ್ಪತ್ತಿಯನ್ನಾಗಲಿ ಮಾಡಿ ಕೊಡುವನು.34

---

31. ಪ್ರಾಣಸಂಸ್ಥಸ್ಯ ವೈ ವಿಷ್ಣೋಃ ಸಂಪ್ರೀತ್ಯೈ ಭೋಜನಂ ಭವೇತ್ ।
ತದಿಚ್ಛೆಯ್ಯೈವ ಚೌರ್ಯಾದಿ ಕುರ್ಯುರಜ್ಞಾ ಅಪಿ ಧ್ರುವಮ್ ।
ತಥಾಪಿ ತಂ ನ ಜಾನೀಯುಃ ಪ್ರಾಣಾತ್ಮಾನಂ ಜನಾರ್ದನಮ್ ॥
– *ಪ್ರವೃತ್ತೇ [ಬೃ.ಉ.ಭಾ. 6-1-4]*

32. ವಾಯೋಶ್ಚ ರತಿದಂ ಯಸ್ಮಾದ್ ವಾಯುರಂ ಬ್ರಹ್ಮ ತತ್ ಪರಮ್ ।
– *[ಬೃ.ಉ.ಭಾ. 7-1-1]*

33. ನಾನ್ಯೈರ್ದೇವೈರ್ಹರಿಂ ಪಶ್ಯೇಜ್ಜ್ಞಾನರೂಪೇಣ ವಾಯುನಾ ।
ಬ್ರಹ್ಮಣಾ ಪರಮಜ್ಞಾನರೂಪೇಣ ಹರಿಣಾ ತಥಾ ।
ಪ್ರಸನ್ನೇನೈವ ತಂ ಪಶ್ಯೇದನ್ಯೇನುಜ್ಞಾಪ್ರದಾಯಿನಃ ॥ – *[ತ.ಉ.ಭಾ. 3-1-8]*

34. ಪ್ರಧಾನಂ ಧಾಮ ವಿಷ್ಣೋಸ್ತು ಪ್ರಾಣ ಏವ ಪ್ರಕೀರ್ತಿತಃ ।

- ಮುಕ್ತರಾದ ಮನುಷ್ಯರಿಗಿಂತಲೂ ದೇವತೆಗಳು ಅಧಿಕಗುಣಸಂಪನ್ನರು. ಉಳಿದ ದೇವತೆಗಳಿಗಿಂತೆಲ್ಲ ವಾಯುದೇವ ಶ್ರೇಷ್ಠ. ವಾಯುವಿಗಿಂತಲೂ ಸಕಲಗುಣಪೂರ್ಣ ನಾದ ವಿಷ್ಣುವು ಸರ್ವದಾ ಶ್ರೇಷ್ಠ. ಯಾರು ಈ ಪ್ರಮೇಯವನ್ನು ತಪ್ಪಾಗಿ ತಿಳಿಯು ವರೋ ಅವರು ಅಂಧಂತಮಸ್ಸನ್ನು ಹೊಂದುವರು. ಈ ಪ್ರಮೇಯವನ್ನು ಯಥಾರ್ಥ ವಾಗಿಯೇ ಯಾರು ತಿಳಿಯುವರೋ ಅವರು ಶ್ರೀಹರಿಯನ್ನು ಸೇರುವರು.35
- ಪ್ರಜಾಪಾಲಕನಾಗಿ ಪ್ರಜಾಪತಿ ಎನಿಸುವ ಭಗವಂತನು ಸೂರ್ಯನಲ್ಲಿ ಸೂರ್ಯ ನಾಮಕನಾದ ವಾಯುದೇವನನ್ನೂ, ಚಂದ್ರನಲ್ಲಿ ಚಂದ್ರನಾಮಕಳಾಗಿ ಸರಸ್ವತೀದೇವಿ ಯನ್ನೂ ಸೃಷ್ಟಿಮಾಡಿ, ಆ ಇಬ್ಬರಲ್ಲಿ ತಾನು ಪ್ರವೇಶಿಸಿ, ಅವರ ಮೂಲಕ ತಾನೇ ಸರ್ವಸೃಷ್ಟಿಯನ್ನು ನಡೆಸಿದನು. ಪ್ರಕೃತ್ಯಾದಿ ಜಗದುಪಾದಾನಪದಾರ್ಥಗಳಲ್ಲಿ ವಾಯು ದೇವನೂ, ಪೃಥ್ವೀ, ಅಪಃ, ತೇಜಸ್‌ಗಳಲ್ಲಿ ಸರಸ್ವತಿಯೂ ನಿಯಾಮಕರಾಗಿ ಇರುವರು. ಆದಿತ್ಯನಲ್ಲಿರುವ ಮುಖ್ಯಪ್ರಾಣನು ಎಲ್ಲ ದಿಗಭಿಮಾನಿಗಳನ್ನು ಚೆನ್ನಾಗಿ ಪ್ರೇರಿಸುವನು. .....ಸಂವತ್ಸರದಲ್ಲಿ ನಿಯಾಮಕನಾಗಿ ಭಗವಂತನಿದ್ದರೆ ದಕ್ಷಿಣಾಯನ ಉತ್ತರಾಯಣ ಗಳಲ್ಲಿ ಭಾರತಿಮುಖ್ಯಪ್ರಾಣರು ನಿಯಾಮಕರಾಗಿ ಇರುವರು. ಭಗವಂತನು ಮಾಸದಲ್ಲಿ ನಿಯಾಮನಾಗಿದ್ದರೆ, ಕೃಷ್ಣಪಕ್ಷ ಶುಕ್ಲಪಕ್ಷಗಳಲ್ಲಿ ಭಾರತಿಮುಖ್ಯಪ್ರಾಣರು ಇರುವರು. ರಾತ್ರಿಹಗಲುಗಳಿಂದ ಕೂಡಿದ ಸಮಗ್ರದಿನದಲ್ಲಿ ಭಗವಂತ ನಿಯಾಮಕ ನಾಗಿ ಇದ್ದರೆ, ಪ್ರಾಣನು ಹಗಲಿನಲ್ಲೂ ಭಾರತಿ ರಾತ್ರಿಯಲ್ಲೂ ನಿಯಾಮಕರಾಗಿ ಇರು ವರು. ದಂಪತಿಗಳಲ್ಲಿ ಭಗವಂತನು ನಿಯಾಮಕನಾಗಿದ್ದಲ್ಲಿ ಪತ್ನಿಯಲ್ಲಿ ಭಾರತಿಯೂ, ಪತಿಯಲ್ಲಿ ವಾಯುದೇವನೂ ಇರುವನು. ಇದನ್ನು ಬಲ್ಲವರು ಮುಕ್ತರಾಗುವರು.36

---

ಉಪಾಯೈರ್ಯೋ ವಿಜಾನೀಯಾತ್ ಪ್ರಾಣಸ್ಥಂ ಪರಮೇಶ್ವರಮ್ ॥
ತಸ್ಯ ಪ್ರಾಣೇ ಹರಿರ್ನಿತ್ಯಮಾವಿಷ್ಟೋ ಭವತಿ ಧ್ರುವಮ್ ।
ನಿತ್ಯಂ ಪ್ರಾಣಸ್ಥಿತಸ್ಯೈವ ವಿಷ್ಣೋರಾವೇಶ ಏವ ಹಿ ॥
ಪ್ರಾಣದ್ವಾರೇಣ ಯಜ್ಜ್ಞಾನದೀಪನಂ ಜ್ಞಾನಿನಂ ಸದಾ ।
ಸನ್ನಿಧಾನಂ ಯಥಾ ಪ್ರಾಪ್ತಾಃ ಪಿಶಾಚಾಃ ಪುರುಷೇಷ್ವಪಿ ॥
ತತ್ರ ಸ್ಥಿತ್ವಾಽಪಿ ಭುಂಜಂತ ಆವಿಶೇಯುಃ ಪುನಶ್ಚ ತೇ ।
ಮಂತ್ರಾದಿಭಿಸ್ತಥಾ ವಿಷ್ಣುಃ ಸದಾ ಪ್ರಾಣಸ್ಥಿತೋಽಪಿ ಸನ್ ।
ಜ್ಞಾನದೀಪ್ತ್ಯಾದಿಕಂ ಕುರ್ಯಾಜ್ಜ್ಞಾನಿನಃ ಪುನರೇವ ತು ॥
*– [ಆಥರ್ವಣಭಾಷ್ಯ 4-1-1]*

35. ಮುಕ್ತೇಭ್ಯೋಽಪಿ ಮನುಷ್ಯೇಭ್ಯೋ ದೇವಾ ಏವ ಗುಣಾಧಿಕಾಃ ।
ತೇಭ್ಯೋ ವಾಯುಸ್ತತೋ ವಿಷ್ಣುಃ ಪರಿಪೂರ್ಣಗುಣಃ ಸದಾ ॥
ಯೇ ತ್ವೇತದನ್ಯಥಾ ವಿದ್ಯುಸ್ತೇ ಹಿ ಯಾಂತ್ಯಧರಂ ತಮಃ ।
ಯೇ ತ್ವೇತದೇವಂ ಜಾನಂತಿ ತೇ ಯಾಂತಿ ಪರಮಂ ಹರಿಮ್ ॥
*– ಆಥರ್ವಣಭಾಷ್ಯ [4-1-8]*

36. ಸ ವಾಯುಂ ಸೂರ್ಯನಾಮಾನಂ ಚಂದ್ರನಾಮ್ನೀಂ ಸರಸ್ವತೀಮ್ ।
ಸೂರ್ಯಾಚಂದ್ರಗತೌ ದೇವಃ ಸಸರ್ಜ ಪುರುಷೋತ್ತಮಃ ॥

- ಪರಮಾತ್ಮನಿಂದ ಮುಖ್ಯಪ್ರಾಣ ಹುಟ್ಟುವನು. ಮುಖ್ಯಪ್ರಾಣನಿಂದ ಮನೋಭಿಮಾನಿ ರುದ್ರ.... ಇವನ ಸೃಷ್ಟಿ.37

- ಸೃಷ್ಟಿಯ ಆದಿಯಲ್ಲಿ ಪರಮಾತ್ಮನೊಬ್ಬನೇ ಇರುವನು. ಅವನು ಮುಖ್ಯಪ್ರಾಣನನ್ನು ಸೃಷ್ಟಿಸುವನು. ಮುಖ್ಯಪ್ರಾಣನು ಇತರ ಇಂದ್ರಿಯಗಳನ್ನು ಸೃಷ್ಟಿಸುವನು.38

- ವಿಷ್ಣುವಿನಿಂದ ಪ್ರಾಣ, ಪ್ರಾಣನಿಂದ ಶ್ರದ್ಧೆ.... ಹೀಗೆ ಮುಕ್ತರಾದಮೇಲೂ ಇವರೆಲ್ಲ ಕ್ರಮವಾಗಿ ಸರ್ವಗುಣಗಳಿಂದಲೂ ಕಡಿಮೆಯವರೆನಿಸಿರುವರು. ನಿತ್ಯಮುಕ್ತನಾದ ವಿಷ್ಣು ಮುಖ್ಯಪ್ರಾಣನಿಗಿಂತಲೂ ಉತ್ತಮೋತ್ತಮನು.39

- ಮುಕ್ತಿಯನ್ನು ಹೊಂದಿದ ಪ್ರಾಣಾದಿ ಕಲೆಗಳು ತಮ್ಮ ಪ್ರತ್ಯೇಕ ಪ್ರತ್ಯೇಕ ನಾಮ ರೂಪಗಳಿಂದ ನಿತ್ಯ ಯಾವ ಪರಮಾತ್ಮನನ್ನು ಆಶ್ರಯಿಸಿರುವರೋ ಅಂತಹ ಶ್ರೇಷ್ಠ ನಾದ ಪರಮಾತ್ಮನಿಗೆ ನಮಸ್ಕಾರ.40

- 'ಮಹಃ' –ಎಂಬ ವ್ಯಾಹೃತಿ ಪ್ರತಿಪಾದ್ಯ ವಾಸುದೇವನು ವಾಯುದೇವನಿಗೆ ವಿಶೇಷ ವಾಗಿ ಆನಂದಪ್ರದನಾಗಿರುವವನು.41

---

ತಾವಾವಿಶ್ಯ ಸ್ವಯಂ ವಿಷ್ಣುಃ ಸರ್ವಸೃಷ್ಟೀಃ ಕರೋತ್ಯಜಃ ।
ಅಮೂರ್ತಸ್ಥಃ ಸ ವಾಯುಸ್ತು ಮೂರ್ತಸಂಸ್ಥಾ ಸರಸ್ವತೀ ॥
ಆದಿತ್ಯಸ್ಥಃ ಸ ವಾಯುಸ್ತು ಪ್ರಾಣಾನಾತ್ಮನಿ ಸನ್ನಯೇತ್ ।
.....ಸಂವತ್ಸರಸ್ಥೋ ಭಗವಾನ್ ವಾಗೀರಾವಯನಸ್ಥಿತೌ ॥
ಮಾಸಸ್ಥಿತಃ ಸ ಭಗವಾನ್ ಪಕ್ಷಯೋರ್ವಾಕ್ ಚ ಮಾರುತಃ ।
ಅಹೋರಾತ್ರೇ ತು ಭಗವಾನ್ ಪ್ರಾಣೋಽಹ್ನ್ಯಥ ಚ ವಾಙ್ ನಿಶಿ ॥
ದಂಪತ್ಯೋರ್ಭಗವಾನ್ ವಿಷ್ಣುರ್ಭಾರ್ಯಾಸ್ಥಾ ತು ಸರಸ್ವತೀ ।
ಭರ್ತೃಸ್ಥಃ ಸ ಸ್ವಯಂ ವಾಯುರೇವಂ ಜಾನನ್ ವಿಮುಚ್ಯತೇ ॥
*– ಪ್ರಜಾಪತಿಸಂಹಿತಾ [ಷಟ್.ಉ.ಭಾ. 1-2, 3]*

37. ಏತಸ್ಮಾಜ್ಜಾಯತೇ ಪ್ರಾಣೋ ಮನಃ..... । *– [ಷಟ್.ಉ.ಭಾ. 6-1-6]*

38. ಆತ್ಮೈವೇದಮಗ್ರ ಆಸೀತ್ ಸ ಪ್ರಾಣಮಸೃಜತ ಸ ಪ್ರಾಣಾನ್....
*– –ನ್ಯಾಯವಿವರಣ [2-4-4]*

39. ವಿಷ್ಣೋಃ ಪ್ರಾಣಸ್ತತಃ ಶ್ರದ್ಧಾ..... ಕ್ರಮಾತ್ ಪ್ರತ್ಯವರಾ ಏತೇ ಮುಕ್ತಾ ಸರ್ವಗುಣೈರಪಿ ।
ನಿತ್ಯಮುಕ್ತಸ್ತಥಾ ವಿಷ್ಣುಃ ಪ್ರಾಣಾದಪ್ಯುತ್ತಮೋತ್ತಮಃ ।
*– [ಷಟ್.ಉ.ಭಾ. 6-1-6]*

40. ಪ್ರಾಣಾದಯಃ ಕಲಾ ಯಸ್ಮಿನ್ ಮುಕ್ತಾ ನಿತ್ಯಂ ಪ್ರತಿಷ್ಠಿತಃ ।
ಪೃಥಕ್ ಪೃಥಙ್ನಾಮರೂಪೈರ್ನಮಸ್ತಸ್ಮೈ ಪರಾಯ ತೇ ॥
*– ಸತ್ತತ್ವ [ಷಟ್.ಉ.ಭಾ. 6-1-6]*

41. ವಾಯೋರ್ವಿಶೇಷರಮಕೋ...... । *– ಬ್ರಹ್ಮಸಾರ [ತೈ.ಉ.ಭಾ. 1-14]*

- ಭಗವಂತನು ಜ್ಞಾನಿಗಳಿಗೂ ಅಜ್ಞಾನಿಗಳಿಗೂ 'ಭಯಕೃತ್'. ಜ್ಞಾನಿಗೆ ಮುಕ್ತಿಯನ್ನು ತಲುಪುವವರೆಗೆ ಅಲ್ಪಭಯವನ್ನು ಉಂಟುಮಾಡುವನು. ಜ್ಞಾನಿಯು ಮುಕ್ತನಾದ ಮೇಲೆ ಅವನ ಪಾಲಿಗೆ ಭಗವಂತನು ಯಾವಾಗಲೂ 'ಅಭಯ' ಎನಿಸುವನು. ಆದುದರಿಂದ ವಾಯ್ವಾದಿದೇವತೆಗಳು ವಿಶೇಷವಾಗಿ ಜ್ಞಾನಿಗಳಾಗಿರುವರಾದರೂ ಭಗವಂತನ ನಿಯತಿಯ ಭೀತಿಗೊಳಗಾಗಿ, ಹಾಗೆಯೇ ಅವನು ಚೆನ್ನಾಗಿ ಪ್ರಸನ್ನನಾಗಬೇಕೆಂಬ ಉದ್ದೇಶದಿಂದಲೂ ತಮ್ಮ ತಮ್ಮ ಚಟುವಟಿಕೆಗಳನ್ನು ಮಾಡುವರು.42
- ವಿಶೇಷವಾಗಿ ಎಲ್ಲ ಜ್ಞಾನಿಗಳಿಗೂ, ದೇವತೆಗಳಿಗೂ ಒಡೆಯನಾದ ವಾಯುದೇವ ಕೂಡಾ ಮುಕ್ತನಾಗಿ ವಿಷ್ಣುವಿನ ಸಾದೃಶ್ಯವನ್ನು ಹೊಂದುವನೇ ಹೊರತು ಅವನ ಐಕ್ಯವನ್ನಲ್ಲ. ಹೀಗಿರುವಾಗ ವಾಯುದೇವರ ಪ್ರತಿಬಿಂಬರಾದ ದೇವತೆಗಳಾಗಲೀ, ಆ ದೇವತೆಗಳ ಪ್ರತಿಬಿಂಬರಾದ ಮನುಷ್ಯರಾಗಲೀ ಮುಕ್ತರಾದಾಗ ಪರಮಾತ್ಮನ ಐಕ್ಯವನ್ನು ಹೊಂದುವುದಿಲ್ಲ –ಎಂದು ಸುತರಾಂ ಸಿದ್ಧವಾಗುವುದು.43
- ಮುಖ್ಯಪ್ರಾಣ ಸ್ವತಂತ್ರವಾಗಿ ಚೇತನರ ಧಾರಕನಲ್ಲ. ಮತ್ತೆ ವಿಷ್ಣುವನ್ನು ಆಶ್ರಯಿಸಿಕೊಂಡಷ್ಟೇ ಜೀವರನ್ನು ಧರಿಸುವನು. ಆದುದರಿಂದ ಸ್ವತಂತ್ರವಾಗಿ ಚೇತನರಿಗೆ ಮುಖ್ಯಾಶ್ರಯ ಶ್ರೀವಿಷ್ಣುವೇ.44
- ಭಗವಂತನು ಮುಖ್ಯಪ್ರಾಣನ ಮೂಲಕ ಜಗತ್ತಿನ ಪ್ರವೃತ್ತಿಯನ್ನು ನಡೆಸಬಯಸುವನು. ವಾಯುವಿಗೂ ಒಡೆಯನಾಗಿರುವ ಅವನನ್ನು ಆದುದರಿಂದಲೇ 'ಪ್ರಾಣಪ್ರಾಣ' –ಎನ್ನುವರು.45

---

42. ತದೇವ ಬ್ರಹ್ಮ ಭಯಕೃದ್ ವಿದುಷೋಽವಿದುಷಸ್ತತಃ ।
ವಿದುಷೋಽಲ್ಪಭಯಂ ಕುರ್ಯಾದ್ ಯಾವನ್ಮುಕ್ತಿಂ ವ್ರಜತ್ಯಸೌ ॥
ಅಥಾಭಯಂ ಭವೇದ್ ಬ್ರಹ್ಮ ತಸ್ಯ ಮುಕ್ತಸ್ಯ ಸರ್ವದಾ ।
ತಸ್ಮಾದ್ ವಾಯ್ವಾದಯೋ ದೇವಾ ವಿದ್ವಾಂಸೋಽಪಿ ವಿಶೇಷತಃ ।
ಭೀತಾಃ ಸ್ವಕರ್ಮ ಕುರ್ವಂತಿ ವಿಷ್ಣೋಃ ಪ್ರೀತ್ಯರ್ಥಮಂಜಸಾ ॥
*– ಯಜುಃಸಂಹಿತಾ [ತೈ.ಉ.ಭಾ. 2-13]*

43. ಸರ್ವೇಷಾಂ ಜ್ಞಾನಿನಾಮಾತ್ಮಾ ದೇವಾನಾಂ ಚ ವಿಶೇಷತಃ ।
ಮುಕ್ತೋ ವಾಯುಶ್ಚ ಸಾದೃಶ್ಯಮೇವ ವಿಷ್ಣೋಸ್ತು ಗಚ್ಛತಿ ॥
ನ ತು ತದ್ರೂಪತಾಂ ಯಾತಿ ಕಿಮ್ವನ್ಯೇ ದೇವಮಾನುಷಾಃ ।
ಆಭಾಸಾಭಾಸರೂಪಾಸ್ತು ವಾಯೋರ್ದೇವಸ್ಯ ಸರ್ವಶಃ ॥
*– ಭವಿಷ್ಯತ್ಪರ್ವಣಿ [ಕಾ.ಉ.ಭಾ. 2-1-5]*

44. ನ ಕೇವಲಂ ಪ್ರಾಣ ಏವ ಚೇತನಾನಾಂ ವಿಧಾರಕಃ ।
ಕಿಂತು ವಿಷ್ಣುಂ ಸಮಾಶ್ರಿತ್ಯ ಪ್ರಾಣೋ ಜೀವಾನ್ ಬಿಭರ್ತ್ಯಯಮ್ ।
ಅತೋ ಮುಖ್ಯಾಶ್ರಯೋ ವಿಷ್ಣುಃ ಚೇತನಾನಾಂ ಸ್ವತಂತ್ರತಃ ॥
*– ಮಹಾಕೌರ್ಮ [ಕಾ.ಉ.ಭಾ. 2-2-5]*

45. ವಾಯೋಃ ಸಕಾಶಾಜ್ಜಗತಃ ಪ್ರವೃತ್ತಿಂ ಕಾಮಯತ್ಯಜಃ ।

- ಮೋಕ್ಷದ ಉಪಾಯಗಳನ್ನು ಬಲ್ಲವನಾಗಿ 'ನಿಭೃತ' ಎನಿಸಿರುವ ಮುಖ್ಯಪ್ರಾಣನ ಅನುಗ್ರಹದಿಂದಲೇ ದೇವರನ್ನು ಸರಿಯಾಗಿ ತಿಳಿಯಲು ಸಾಧ್ಯ.46
- ಒಬ್ಬನೇ ಮುಖ್ಯಪ್ರಾಣನು ಎಲ್ಲ ಇಂದ್ರಿಯಗಳಲ್ಲಿದ್ದುಕೊಂಡು ಆಯಾ ಚಟುವಟಿಕೆಯನ್ನು ನಡೆಸಲು ಬೇಕಾದ ಶಕ್ತಿಯನ್ನು ನೀಡುವವನಾದರೂ ಕಣ್ಣಿನಲ್ಲಿದ್ದುಕೊಂಡು ದರ್ಶನವನ್ನು ನೀಡುವವನು ಹೊರತು ಶ್ರವಣವನ್ನಲ್ಲ.... ಹೀಗೆಲ್ಲ ಆಯಾ ಇಂದ್ರಿಯಗಳಿಗೆ ಶಕ್ತಿಪ್ರದನಾಗಿಯಷ್ಟೇ ವ್ಯವಹರಿಸಲ್ಪಡುವನು. ಇದೇ ರೀತಿಯಾಗಿ ದೇವರು ಎಲ್ಲ ಇಂದ್ರಿಯಗಳಿಗೂ ಶಕ್ತಿಪ್ರದನಾದರೂ ಆಯಾ ಇಂದ್ರಿಯಶಕ್ತಿಪ್ರದನಂತೆ ವ್ಯವಹರಿಸಲ್ಪಡುವನು. ಮುಖ್ಯಪ್ರಾಣನಿಗೂ ಬಲಪ್ರದನಾದ ಭಗವಂತನು ಮಹಾಶಕ್ತಿಸಂಪನ್ನ.47
- ಶ್ರೀವಿಷ್ಣು ಮಹಾತ್ಮರಾದ ಬ್ರಹ್ಮಾದಿಗಳಿಗಿಂತಲೂ ಮಹತ್ತ್ವವನ್ನು ಒಳಗೊಂಡಿರುವುದರಿಂದ ಮುಖ್ಯಪ್ರಾಣನಿಗೂ ಸೃಷ್ಟಿಕರ್ತೃ ಎನಿಸಿರುವನು. ಹೀಗಿರುವಾಗ ಯಾವ ಶ್ರೀವಿಷ್ಣುವಿನ ಶಕ್ತಿಯಿಂದ ಈ ಎಲ್ಲ ಜಗತ್ತು ವ್ಯಾಪಿಸಿದೆಯೋ ಅಂತಹ ಪರಮಾತ್ಮನು ಯಾವುದನ್ನು ತಾನೇ ಸೃಷ್ಟಿಸದಿರಲಾರ?48
- ಈ ಎಲ್ಲವೂ ಪ್ರಾಣನ ವಶದಲ್ಲಿದೆ. ಪ್ರಾಣನು ಪರಮಾತ್ಮನ ವಶದಲ್ಲಿ ಇರುವನು. ಪರಮಾತ್ಮನಾದರೂ ಸರ್ವಶ್ರೇಷ್ಠನಾದುದರಿಂದ ಬೇರೆ ಯಾರನ್ನೂ ಆಶ್ರಯಿಸಿ ಇಲ್ಲ.49

---

ಪ್ರಾಣಪ್ರಾಣಮತಃ ಪ್ರಾಹುರ್ವಿಷ್ಣುಂ ವಾಯೋರಪಿ ಪ್ರಭುಮ್ ॥
*– [ಭಾ.ತಾ.ನಿ. 10-15-50]*

46. ನಿಭೃತೋ ಮೋಕ್ಷವಿತ್ ಪ್ರಾಣಸ್ತದ್ಯೋಗಾತ್ ತತ್ಪ್ರಸಾದತಃ ।
ಜಾನಂತಿ ಪರಮಂ ದೇವಂ ನಾನ್ಯಥಾ ತು ಕಥಂಚನ ॥
*– ಭಾಗವತಸಂಹಿತಾ [ಭಾ.ತಾ.ನಿ. 10-14-23]*

47. ಯಥೇಂದ್ರಿಯಗತಃ ಪ್ರಾಣಸ್ತೇಷಾಂ ಶಕ್ತ್ಯಾ ವಿಕಲ್ಪ್ಯತೇ ।
ದೃಷ್ಟಿದಃ ಶ್ರುತಿದಶ್ಚೇತಿ ಮತಿದೋಽಜ್ಞಾನದಸ್ತಥಾ ॥
ಇತ್ಯಾದಿಭೇದತೋ ವಾಚ್ಯ ಏಕ ಏವ ಮಹಾಬಲಃ ।
ದೃಷ್ಟ್ಯಾದಿಶಕ್ತಿಸ್ತಸ್ಯೈವ ಯತೋ ನಾನ್ಯಸ್ಯ ಕಸ್ಯಚಿತ್ ॥
ಏವಂ ಸದ್ರೂಪಕಂ ಬ್ರಹ್ಮ ತತ್ತಚ್ಛಕ್ತ್ಯಾ ವಿಕಲ್ಪ್ಯತೇ ।
ಏವಮೇವ ಮಹಾಶಕ್ತಿಃ ಪ್ರಾಣಸ್ಯಾಪಿ ಬಲಪ್ರದಮ್ ॥
*– ಹರಿವಂಶೇಷು [ಭಾ.ತಾ.ನಿ. 11-3-38]*

47. ಮಹತ್ತ್ವಾನ್ಮಹತಾಂ ವಿಷ್ಣುಃ ಕರ್ತಾ ಪ್ರಾಣಸ್ಯ ಚೈಕರಾಟ್ ।
ಕಿಂ ನಾಮ ನ ಸೃಜೇದೇಷ ಯೇನ ಶಕ್ತ್ಯೇದಮಾವೃತಮ್ ॥
*– ಶ್ರುತಿ [ನ್ಯಾಯವಿವರಣ.ಬ್ರ.ಸೂ. 2-4-10]*

48. ಪ್ರಾಣಸ್ಯೈತದ್ ವಶೇ ಸರ್ವಂ ಪ್ರಾಣಃ ಪರವಶೇ ಸ್ಥಿತಃ ।
ನ ಪರಃ ಕಂಚಿದಾಶಿತ್ಯ ವರ್ತತೇ ಪರಮೋ ಯತಃ ॥
*– ಪೈಂಗಿಶ್ರುತಿ [ಬ್ರ.ಸೂ.ಭಾ. 2-4-11]*

49. ಸರ್ವಂ ಹ್ಯೇವೈತತ್ ಪರಮೋಽವತಿಷ್ಠತೇ ಪ್ರಾಣಾಶ್ಚ ಪ್ರಾಣನಶ್ಚ ಸಹ್ಯೇಕ ಏವೈತಾನ್ ನಯತ್ಯುನ್ನಯತಿ ವಶೀಕರೋತಿ । *– ಗೌಪವನಶ್ರುತಿ [ಬ್ರ.ಸೂ.ಭಾ. 2-4-11]*

- ಮುಖ್ಯಪ್ರಾಣ, ಇಂದ್ರಿಯಗಳು ಹಾಗೂ ಇಂದ್ರಿಯವುಳ್ಳವರು –ಇವರಿಗೆಲ್ಲ ಪರಮಾತ್ಮನೇ ಆಧಾರ. ಅವನೊಬ್ಬನೇ ಇವರನ್ನೆಲ್ಲ ತನ್ನ ವಶದಲ್ಲಿಟ್ಟುಕೊಂಡಿದ್ದಾನೆ, ಪ್ರೇರಿಸುತ್ತಾನೆ. ಹಾಗೂ ಎತ್ತರಕ್ಕೆ ಕೊಂಡೊಯ್ಯುತ್ತಿರುತ್ತಾನೆ.50
- ಪ್ರಾಣದೇವನು ಸರ್ವಕರ್ತೃ ಆಗಿರುವನಾದರೂ ಪರಮಾತ್ಮನ ಆಶ್ರಯದಲ್ಲಿರುವನು. ಪರಮಾತ್ಮನನ್ನು ಆಶ್ರಯಿಸಿಕೊಂಡಿರದಿದ್ದರೆ ಮತ್ತೆ ಹೇಗೆ ತಾನೇ ಮುಖ್ಯಪ್ರಾಣನಿರುವನು? ಸರ್ವೇಶ್ವರನಾಗಿ ಅವನು ಇರಲು ಸಾಧ್ಯವಿಲ್ಲ. ಯಾಕೆಂದರೆ ಸ್ವತಂತ್ರರಾಗಿ ಇಬ್ಬರು ಈಶ್ವರ ಇರಲಾರರು. ಮುಖ್ಯಪ್ರಾಣನನ್ನು ಶಾಸ್ತ್ರದಲ್ಲಿ ಈಶ್ವರ ಎಂದು ಕರೆದಿರುವುದು ಅವನು ಅಮುಖ್ಯ ಈಶ್ವರನಾಗಿದ್ದಾನೆಂಬ ಆಶಯದಲ್ಲಿ. ಆದುದರಿಂದ ಜ್ಞಾನಿಗಳು ವೇದದಲ್ಲಿ ಮುಖ್ಯಪ್ರಾಣನಿಗೆ ಮಧ್ಯಮತ್ವವನ್ನು ಹೇಳಿ ಮಧ್ಯಮಪ್ರಾಣ ಎಂದು ಕರೆಯುವರು. ಪ್ರಾಣನನ್ನು ಅನನ್ಯೇಶ್ವರ ಎಂದಿದ್ದರೆ ಪರಮಾತ್ಮನನ್ನು ಬಿಟ್ಟು ಉಳಿದ ಯಾರೂ ಅವನಿಗೆ ಈಶ್ವರರಿಲ್ಲ ಎಂಬ ಅಭಿಪ್ರಾಯದಲ್ಲಿ. ಪ್ರಾಣನಿಗೆ ಪರಮಾತ್ಮನ ಸಾಮ್ಯವನ್ನು ತಿಳಿಸುವ ಮಾತುಗಳಿಗೆ ಪರಮಾತ್ಮನ ಅಧೀನತ್ವವನ್ನು ತಿಳಿಸುವ ವಿಶೇಷ ವಾಕ್ಯಗಳಿಂದಾಗಿ ಬೇರೆಯೇ ಅರ್ಥವನ್ನು ಹೇಳಲಾಗುವುದು.51
- ಈ ಜಗತ್ತೆಲ್ಲ ಮುಖ್ಯಪ್ರಾಣನ ವಶದಲ್ಲಿದೆ. ಮುಖ್ಯಪ್ರಾಣನಾದರೂ ಪರಮಾತ್ಮನ ವಶದಲ್ಲಿರುವನು.52
- 'ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ....' –ಎಂಬ ಉಪನಿಷತ್ತಿನ ಮಾತಿನಲ್ಲಿ ಪ್ರಾಣನಿಗೆ ತೇಜಃ ಎನಿಸುವ ಲಕ್ಷ್ಮೀದೇವಿಯಲ್ಲಿ ಲಯಮಾರ್ಗವನ್ನು ಹೇಳಲಾಗಿದೆಯೇ ಹೊರತು ಲಯವನ್ನಲ್ಲ. ಸರ್ವವನ್ನೂ ಕಬಳಿಸುವ ರುದ್ರಾದಿಗಳಿಗೆ ಒಡೆಯನಾದ ವಾಯುದೇವನಿಗೆ ಪರಮಾತ್ಮನಿಗಿಂತ ಬೇರೆಡೆ ಲಯ ಹೇಗೆ ತಾನೇ ಸಂಭವಿಸೀತು?53

---

50. ಸರ್ವಕರ್ತಾಽಪಿ ಸನ್ ಪ್ರಾಣಃ ಪರಮಾಧಾರತಃ ಸ್ಥಿತಃ ।
ಕಥಮೇವಾನ್ಯಥಾ ಸ ಸ್ಯಾದ್ ಯತೋ ನೈವೇಶ್ವರದ್ವಯಮ್ ॥
ಅವಾಂತರೇಶ್ವರತ್ವೇನ ತಸ್ಯೇಶ್ವರವಚೋ ಭವೇತ್ ।
ಅತೋ ಮಧ್ಯಮತಾಮಾಹುಸ್ತಸ್ಯ ವೇದೇಷು ವೇದಿನಃ ॥
ಅನನ್ಯೇಶ್ವರತಾ ಪ್ರಾಣೇ ತದನ್ಯೇಶ್ವರವರ್ಜನಮ್ ।
ಯತೋ ವಿಶೇಷವಾಕ್ಯೇನ ಹ್ರಿಯತೇ ಸಮತಾವಚಃ ॥ *– [ಬ್ರ.ಸೂ.ಭಾ. 2-4-11]*

51. ಪ್ರಾಣಸ್ಯೈತದ್ ವಶೇ ಸರ್ವಂ ಪ್ರಾಣಃ ಪರವಶೇ ಸ್ಥಿತಃ ।
*– ಶ್ರುತಿ [ನ್ಯಾ.ವಿ.ಬ್ರ.ಸೂ. 2-4-20]*

52. ಪ್ರಾಣಸ್ಯ ತೇಜಸಿ ಲಯೋ ಮಾರ್ಗಮಾತ್ರಮುದಾಹೃತಮ್ ।
ಸರ್ವೇಶಿತುಶ್ಚ ಸರ್ವಾದೇಸ್ತಸ್ಯಾನ್ಯತ್ರ ಲಯಃ ಕಥಮ್ ॥ *– [ಬ್ರ.ಸೂ.ಭಾ. 4-2-4]*

* ಚತುರ್ಮುಖಸ್ಯ ತೇಜಸಿ ಲಯೋ ನಾಮ ತತ್ಪ್ರಾಪ್ತಿಮಾತ್ರಂ ನ ತು ತತ್ರ ದೇಹಲಯಃ ।
ತಸ್ಯ ಸಾಕ್ಷಾತ್ ಪರಮಾತ್ಮನಿ ಲಯಯೋಗ್ಯತ್ವಾದಿತಿ ಭಾವಃ ।
ಪ್ರಾಣತ್ವೇಽಸ್ಯೈವ ತೇಜಸಿ ಲಯಃ ॥ *– ತತ್ತ್ವಪ್ರಕಾಶಿಕಾ*

53. ತಸ್ಯಾಂಗಂ ಪ್ರಥಮಂ ವಾಯುಃ ಪ್ರಾದುರ್ಭಾವತ್ರಯಾನ್ವಿತಃ ।

- ಶ್ರೀಹರಿಗೆ ಮೂರು ಅವತಾರಗಳಿಂದ ಕೂಡಿರುವ ವಾಯುದೇವನು ಮೊದಲ ಅಂಗ; ಅಂದರೆ ಪ್ರಧಾನಸೇವಕ. ಹನೂಮಂತ ಎಂಬುದು ಮೊದಲನೆಯ ಅವತಾರ. ಭೀಮಸೇನ ಎರಡನೆಯ ಅವತಾರ. ಪೂರ್ಣಪ್ರಜ್ಞ -ಶ್ರೀ ಮಧ್ವರು ಮೂರನೆಯ ಅವತಾರ. ಈ ಮೂರು ಅವತಾರಗಳಲ್ಲೂ ಭಗವಂತನ ಕಾರ್ಯಗಳನ್ನು ತಾವು ನಡೆಸುವವರು; ಅಲ್ಲದೆ ಯೋಗ್ಯರಿಂದ ನಡೆಯಿಸುವವರು.54

- ಶ್ರೀವಿಷ್ಣುವಿನ ಕೌಮೋದಕೀ ಗದೆ ವಾಯುಸ್ವರೂಪ. ಶ್ರೀವಿಷ್ಣುವಿನ ಬಾಣಗಳು ಪ್ರಾಣಾದಿ ಪಂಚರೂಪಗಳುಳ್ಳ ವಾಯುದೇವ.55

* * *

## ಮುಖ್ಯಪ್ರಾಣ ಮತ್ತು ಚತುರ್ಮುಖ

**ಮುಂದಿನ ಕಲ್ಪದಲ್ಲಿ ನಿಯತವಾಗಿ ಚತುರ್ಮುಖನ ಪದವಿಗೆ ಏರಲಿರುವ ಮುಖ್ಯಪ್ರಾಣನನ್ನು ಚತುರ್ಮುಖನ ಸಮಾನ ಸ್ಥಾನಮಾನಗಳಿಂದ ಗೌರವಿಸಲಾಗುತ್ತಿದೆ. ಅವರೀರ್ವರ ನಡುವೆ ಇರುವ ಸಮಾನಾಂಶಗಳು, ವಿಷಮಾಂಶಗಳು -ಇವುಗಳ ಮೇಲೆ ಬೆಳಕುಚೆಲ್ಲುವ ೧೩ ಪ್ರಮಾಣಗಳ ಸಂಗ್ರಹ ಇರುವ ಇಲ್ಲಿ ೫ ಪ್ರಮಾಣಗಳು ಆಕರಗ್ರಂಥದ ಹೆಸರಿನ ಉಲ್ಲೇಖದೊಂದಿಗೆ ಉದಾಹೃತಗಳಾದರೆ, ೮ ಪ್ರಮಾಣಗಳು ಆಕರದ ಹೆಸರಿನ ಉಲ್ಲೇಖ ಇಲ್ಲದೆ ಉದಾಹರಿಸಲ್ಪಟ್ಟವು.**

- ವಾಯುದೇವನೇ ಮುಂದೆ ನಿಯತವಾಗಿ ಬ್ರಹ್ಮಪದವಿಯನ್ನು ಏರುವವನು. ಇದನ್ನು ತಿಳಿಸುವುದಕ್ಕೋಸ್ಕರವೇ ವಾಯುದೇವ ಮತ್ತು ಚತುರ್ಮುಖ ಇಬ್ಬರೂ ಜೊತೆಗೆಯೇ ಹುಟ್ಟುವವರಾದರೂ ಕೆಲವೆಡೆ ವಾಯುವಿನ ಜನನವನ್ನು ಚತುರ್ಮುಖನ ಜನನಕ್ಕಿಂತ ಮೊದಲು ತಿಳಿಸಲಾಗುವುದು. ಬ್ರಹ್ಮಪದವಿಯು ವಾಯುಪದವಿಗಿಂತ ಶ್ರೇಷ್ಠವಾಗಿದೆ ಎಂದು ತಿಳಿಸುವುದಕ್ಕೋಸ್ಕರ ಮತ್ತೆ ಕೆಲವೆಡೆ ಬ್ರಹ್ಮನ ಉತ್ಪತ್ತಿಯನ್ನು ವಾಯುವಿನ ಉತ್ಪತ್ತಿಗಿಂತ ಮೊದಲು ತಿಳಿಸಲಾಗುವುದು.'1 'ಅನ್ನಾಭಿಮಾನಿ ಚತುರ್ಮುಖನಾದರೆ ವಾಯುದೇವ ಪ್ರಾಣ ಎನಿಸುವನು. ಇವರಿಬ್ಬರು ಅನ್ಯೋನ್ಯವಾಗಿ ತಮ್ಮ ಶರೀರಗಳಲ್ಲಿ

---

ಪ್ರಥಮೋ ಹನೂಮಾನ್ನಾಮ ದ್ವಿತೀಯೋ ಭೀಮ ಏವ ಚ ।
ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥ – *[ಮ.ಭಾ.ತಾ.ನಿ. 2-124]*

54. ಗದಾ ತು ವಾಯುರ್ಬಲಸಂವಿದಾತ್ಮಾ...... ಪಂಚಾತ್ಮಕೋ ಮಾರುತ ಏವ ಬಾಣಃ ।
– *[ಮ.ಭಾ.ತಾ.ನಿ. 3-74]*

1. ವಾಯುರೇವ ಯತೋ ಬ್ರಹ್ಮಪದಂ ನಿಯಮತೋ ವ್ರಜೇತ್ ।
ಸಹೈವ ಜನನೇಽಪ್ಯಸ್ಮಾತ್ಪೂರ್ವಂ ವಾಯೋರ್ಜನಿಂ ವದೇತ್ ।
ಕ್ವಚಿತ್ತು ಬ್ರಹ್ಮಣಃ ಪೂರ್ವಂ ಪ್ರಾಧಾನ್ಯಾತ್ ತತ್ಪದಸ್ಯ ಚ ॥
– *ಬ್ರಹ್ಮತರ್ಕ [ಬೃ.ಉ.ಭಾ. 3-2-2]*

ಪ್ರವೇಶಿಸಿದಾಗಷ್ಟೇ ಇಬ್ಬರೂ ಸುಸ್ಥಿತಿಯಲ್ಲಿ ಇರುವರು. ವಾಯುವಿನ ಪ್ರವೇಶವಿಲ್ಲದಿದ್ದರೆ ಚತುರ್ಮುಖನ ದೇಹ ದುರ್ಗಂಧಕ್ಕೊಳಗಾಗುವುದು. ಚತುರ್ಮುಖನ ಪ್ರವೇಶವಿಲ್ಲದಿದ್ದರೆ ವಾಯುವಿನ ದೇಹ ಒಣಗಿ ಹೋಗುವುದು. ಇವರಿಬ್ಬರ ಬಗ್ಗೆ ಹೀಗೆ ತಿಳಿದಿರುವ ವಸಿಷ್ಠರ ಪುತ್ರ ಪಾಣಿ ಎಂಬವನು ಚತುರ್ಮುಖನನ್ನೂ ವಾಯುದೇವನನ್ನೂ ಹೀಗೆ ತಿಳಿದ ಹಾಗೂ ಶ್ರೀಹರಿಯನ್ನು ಸರ್ವೋತ್ತಮನೆಂದು ತಿಳಿದ ಜ್ಞಾನಿಗೆ ಅಪಕಾರದಿಂದ ಯಾವ ತೊಂದರೆಯೂ ಆಗಲಾರದು. ಅಂತಹವನು ಕೃತಕೃತ್ಯನಾಗಿರುವುದರಿಂದ ಅವನಿಗೆ ಉಪಕಾರದಿಂದಲೂ ಏನೂ ಆಗಬೇಕಾದದ್ದಿಲ್ಲ. ಆದುದರಿಂದ ಅಂತಹವನಿಗೆ ನಾನು ಉಪಕಾರವನ್ನಾಗಲೀ ಅಪಕಾರವನ್ನಾಗಲೀ ಮಾಡಲು ಸಮರ್ಥನಲ್ಲ ಎಂದು ಸಾರುವ ಮೂಲಕ ಚತುರ್ಮುಖಮುಖ್ಯಪ್ರಾಣರ ಕುರಿತಾದ ಜ್ಞಾನವನ್ನು ಪ್ರಶಂಸಿಸಿ, ವಸಿಷ್ಠರಲ್ಲಿ ವಿಚಾರಿಸುವನು –ಬ್ರಹ್ಮವಾಯುಗಳು ಒಬ್ಬರಲ್ಲಿ ಮತ್ತೊಬ್ಬರು ಪ್ರವೇಶಿಸಿರುವುದರಿಂದ ಇಬ್ಬರಲ್ಲಿ ಯಾರಿಗೆ ವಿಶೇಷ ಪ್ರಯೋಜನ? ಇದಕ್ಕೆ ವಸಿಷ್ಠರು ಸಮಾಧಾನಿಸುವರು: ಬ್ರಹ್ಮನು ವಾಸಸ್ಥಾನನಾದರೆ, ಮುಖ್ಯಪ್ರಾಣನು ಸುಖಪ್ರದನು. ಆದ್ದರಿಂದ ಪರಸ್ಪರ ಪ್ರವೇಶದಿಂದ ಇಬ್ಬರಿಗೂ ಸಮವಾದ ಪ್ರಯೋಜನ.'2

'ಚತುರ್ಮುಖನು ವಾಗಾದಿಗಳಿಂದ ಕೂಡಿದ ತನ್ನ ಶರೀರವನ್ನು ಅನುಭವಿಸಲು ಬಯಸಿದನು. ಆದರೆ ಶಕ್ತನಾಗಲಿಲ್ಲ. ಅಪಾನನಾಮಕ ಮುಖ್ಯವಾಯುವಿನ ಸಹಾಯವಿಲ್ಲದೆ ವಾಗಾದಿಗಳಿಂದಲೇ ಅನ್ನಾತ್ಮಕ ಶರೀರವನ್ನು ಭೋಗಿಸಲು ಶಕ್ಯವಿಲ್ಲವೆಂದು ಚತುರ್ಮುಖನು ಅರಿತಿದ್ದರೂ ವಾಗಾದಿಗಳು ಹಾಗೂ ಅಪಾನನಾಮಕ ವಾಯು ಇವರಲ್ಲಿರುವ ತಾರತಮ್ಯವನ್ನು ಲೋಕಕ್ಕೆ ಎತ್ತಿ ತೋರಿಸುವುದಕ್ಕಾಗಿಯೇ ಚತುರ್ಮುಖನು ಹೀಗೆ ನಡೆದು

---

2. ಅನ್ನಾಭಿಮಾನೀ ಬ್ರಹ್ಮೈವ ಪ್ರಾಣೋ ವಾಯುರುದಾಹೃತಃ ।
ಅನ್ಯೋನ್ಯಾನುಪ್ರವಿಷ್ಟೌ ತೌ ಸರ್ವದೈವ ಸುಸಂಸ್ಥಿತೌ ॥
ವಾಯುಂ ವಿನಾ ಬ್ರಹ್ಮಣೋಽಪಿ ಶರೀರಂ ಪೂತಿಮೇಷ್ಯತಿ ।
ವಾಯುಶ್ಚ ಶೋಷಮಾಯಾತಿ ವಿನಾ ಬ್ರಹ್ಮಾಣಮಂಜಸಾ ॥
ತಯೋರೇವಂ ಪರಿಜ್ಞಾನೀ ವಾಸಿಷ್ಠಃ ಪಾಣನಾಮಕಃ ।
ಬ್ರಹ್ಮವಾಯುವಿದೇ ಕಾರ್ಯಂ ಕಿಂ ಮಯಾ ಸಾಧ್ವಸಾಧು ವಾ ॥
ನಾಸಾಧುನಾ ಬಾಧಯಿತುಂ ಶಕ್ಯೋಽಸೌ ಸಾಧುನಾಽಪಿ ವಾ ।
ನಾರ್ಥೋಽಸ್ಯ ಕೃತಕೃತ್ಯತ್ವಾದ್ ಯದಿ ವೇದ ಪರಂ ಹರಿಮ್ ॥
ಇತಿ ಪ್ರಶಸ್ಯ ತಜ್ಞಾನಂ ವಸಿಷ್ಠಂ ಪ್ರಾಬ್ರವೀತ್ ತತಃ ।
ಅನ್ಯೋನ್ಯಾನುಪ್ರವೇಶೇನ ಬ್ರಹ್ಮವಾಯ್ವೋರ್ವಿಶೇಷತಃ ॥
ಪ್ರಯೋಜನಂ ಕಸ್ಯ ಭವೇದಿತಿ ತಂ ಪ್ರಾತೃದೋಽಬ್ರವೀತ್ ।
ಬ್ರಹ್ಮಾ ನಿವೇಶನೀಯಃ ಸ್ಯಾದ್ ವಾಯುಶ್ಚಾಸ್ಯ ರತಿಪ್ರದಃ ।
ಅತಃ ಪ್ರಯೋಜನಂ ತುಲ್ಯಮನ್ಯೋನ್ಯಾತ್ಮಪ್ರವೇಶನಾತ್ ॥
*– ಸಂಧಾನೇ [ಬೃ.ಉ.ಭಾ. 7-14-1]*

ಕೊಂಡನು ಹೊರತು ಅಜ್ಞಾನದಿಂದಲ್ಲ. ಲೋಕಕರ್ತನಾದ ಅವನಲ್ಲಿ ಅಜ್ಞಾನ ಹೇಗೆ ತಾನೇ ಬರಬೇಕು? ....ಬಳಿಕ ಚತುರ್ಮುಖನು ಅಪಾನ ಎನಿಸುವ ಪ್ರಧಾನವಾಯುವಿನಿಂದ ಕೂಡಿಕೊಂಡು ಅನ್ನಾತ್ಮಕವಾದ ತನ್ನ ಶರೀರವನ್ನು ಭೋಗಿಸಲು ಬಯಸಿದನು. ಆಗಲೇ ಅವನು ಸಮರ್ಥನಾದನು. ಆದ್ದರಿಂದ ಪ್ರಧಾನವಾಯುವೊಬ್ಬನೇ ಎಲ್ಲ ಅನ್ನವನ್ನೂ ಭೋಗಿಸುವವನು. ಅವನ ಅನುಗ್ರಹದಿಂದ ಇತರ ರುದ್ರಾದಿಗಳು ಸ್ವಲ್ಪವೇ ಅಂದರೆ ತಮಗಿಂತ ಕಡಿಮೆಯಾದವರ ಎಲ್ಲ ಭೋಗ್ಯಪದಾರ್ಥಗಳನ್ನೇ ಭೋಗಿಸುವವರು. ಈ ವಾಯುವೇ ಎಲ್ಲ ದೇವತೆಗಳ ಆಯುಸ್ಸಿಗೆ ಅಭಿಮಾನಿಯೂ ಆಗಿದ್ದಾನೆ. ಅನ್ನಾಭಿಮಾನಿ ಚತುರ್ಮುಖನಿಗೂ ಆಯುಃಪ್ರದನಾಗಿದ್ದಾನೆ. ಆದುದರಿಂದ ಅವನು ದೇವೋತ್ತಮನು. ಆಯುಃ ಶಬ್ದವು ಜ್ಞಾನವಾಚಿ ಹಾಗೂ ಗತಿವಾಚಿ ಆಗಿರುವುದರಿಂದ ಅಂತಹ ಆಯು ಶಬ್ದವನ್ನೊಳಗೊಂಡು ರೂಪುಗೊಂಡ ವಾಯು ಎಂಬ ಹೆಸರುಳ್ಳ ವಾಯುದೇವ ದೇವತೆಗಳಿಗೆ ಚತುವರ್ಟಿಕೆಗಳನ್ನೂ, ಮೋಕ್ಷರೂಪಗತಿಯನ್ನೂ, ಅದಕ್ಕೆ ಬೇಕಾದ ಜ್ಞಾನವನ್ನೂ ನೀಡುವನು. ಬ್ರಹ್ಮ ವಾಯುಗಳು ಸಮಾನರು. ಯಾಕೆಂದರೆ ಅವರು ಪರಸ್ಪರ ವಾಗಿ ಗುಣದಾಯಕರು. ಅಂದರೆ ವಾಯು ಬ್ರಹ್ಮನಿಗೆ ಆಯುಃಪ್ರದನಾದರೆ ಬ್ರಹ್ಮನು ವಾಯುವಿಗೆ ಅನ್ನದ್ವಾರಾ ಪುಷ್ಟಿಪ್ರದ. ಆದ್ದರಿಂದ ಮೋಕ್ಷಸುಖದಲ್ಲಿ, ಜ್ಞಾನದಲ್ಲಿ, ವಿಷ್ಣು ಭಕ್ತ್ಯಾದಿಗಳಲ್ಲಿ ಎಲ್ಲರಿಗಿಂತ ಶ್ರೇಷ್ಠರು ಬ್ರಹ್ಮವಾಯುಗಳು.[3]

'ವಾಸುದೇವರೂಪಿ ಪರಮಾತ್ಮನು ಚತುರ್ಮುಖನ ಶರೀರವನ್ನು ವಾಯುದೇವನ ಜೊತೆಗೆ ಪ್ರವೇಶಿಸಿ, ತೊಡೆಗಳ ಮೇಲೇರುತ್ತ ಹೊಟ್ಟೆಯಲ್ಲಿ ಸೇರಿ ವಾಯುದೇವನಿಗೆ

---

3. ......ತಂ ತದಾಽಸೌ ಚತುರ್ಮುಖಃ ।
ಅತ್ತುಂ ವಾಗಾದಿಭಿಃ ಸರ್ವೈರೈಚ್ಛನ್ನಾಪ್ಯಶಕತ್ ತದಾ ॥
ಜಾನನ್ನಪಿ ಕ್ರೀಡಯೈವ ತಾರತಮ್ಯಂ ಪ್ರಕಾಶಯನ್ ।
ಏವಂ ಚಕಾರ ಬ್ರಹ್ಮಾ ಸ ಕ್ವಾಜ್ಞಾನಂ ಲೋಕಕರ್ತರಿ ॥
.....ಅನ್ನಮೂರ್ತಂ ತತೋ ಬ್ರಹ್ಮಾ ಪ್ರಧಾನೇನೈವ ವಾಯುನಾ ।
ಅಪಾನಾಖ್ಯೇನಾತ್ತುಮೈಚ್ಛತ್ ತದೈವಾಶಕದಾಶು ಸಃ ॥
ತಸ್ಮಾದ್ ಭೋಕ್ತೈಕ ಏವಾಸೌ ಸರ್ವಸ್ಯಾನ್ನಸ್ಯ ಮಾರುತಃ ।
ತತ್ಪ್ರಸಾದಾತ್ ಪರೇಽಶ್ನಂತಿ ಕಿಂಚಿತ್ ಕಿಂಚಿನ್ನಚಾಖಿಲಮ್ ॥
ಆಯೂರೂಪೋಽಖಿಲಾನಾಂ ಚ ದೇವಾನಾಂ ವಾಯುರೇವ ಹಿ ।
ಅನ್ನದೇವಸ್ಯ ಚಾಽಯುಃ ಸ ತಸ್ಮಾದ್ ದೇವೋತ್ತಮೋ ಮರುತ್ ॥
ಆಯುಃಶಬ್ದೋ ಜ್ಞಾನವಾಚೀ ಗತಿವಾಚೀ ಚ ಯತ್ ತತಃ ।
ಚೇಷ್ಟಾವಿಮೋಕ್ಷಜ್ಞಾನದಾತಾ ಸುರಾಣಾಂ ಮಾರುತಸ್ತತಃ ॥
ಅನ್ಯೋನ್ಯ ಗುಣದಾತೃತ್ವಾತ್ ಸಮಾನೌ ಬ್ರಹ್ಮಮಾರುತೌ ।
ತಸ್ಮಾನ್ಮೋಕ್ಷಸುಖೇ ಜ್ಞಾನೇ ವಿಷ್ಣುಭಕ್ತ್ಯಾದಿಕೇಷು ಚ ।
ಸರ್ವೇಭ್ಯಶ್ಚಾಧಿಕೌ ತೌ ಹಿ ತಯೋರ್ವಿಷ್ಣುಃ ಪರಃ ಸದಾ ॥
*– ಐತರೇಯಸಂಹಿತಾ [ಐ.ಉ.ಭಾ. 2-3-3-2.....6]*

ನೀನಲ್ಲಿ ಚೆನ್ನಾಗಿ ಉಣ್ಣು ಮತ್ತು ಚೆನ್ನಾಗಿ ನನ್ನನ್ನು ಸ್ತುತಿಸು ಎಂದನು. ವಾಯುದೇವ ಯಾವ ಸ್ಥಳದಲ್ಲಿ ಚೆನ್ನಾಗಿ ಉಂಡನೋ ಮತ್ತು ಚೆನ್ನಾಗಿ ಹರಿಯನ್ನು ಸ್ತುತಿಸಿದನೋ ಆ ಸ್ಥಾನ ಉದರ ಎನಿಸುವುದು. ಪುನಃ ಹರಿಯು ಆ ಶರೀರದಲ್ಲಿ ಮೇಲೆ ಹೋಗಿ ಎದೆಯಲ್ಲಿ ನಿಂತು ವಾಯುದೇವನಿಗೆ ನೀನಿಲ್ಲಿ ನನಗೆ ವಿಸ್ತಾರವಾದ ವಾಸಸ್ಥಾನ ಮಾಡಿಕೊಡು ಎಂದನು. ವಾಯುದೇವನು ಹಾಗೆಯೇ ಮಾಡಿದನು. ಎದೆಯು ವಿಸ್ತಾರವಾದ ಸ್ಥಾನವಾದುದರಿಂದ 'ಉರಸ್' ಎನಿಸುವುದು. ಆ ಉರಸ್ಸಿನ ಮಧ್ಯದಲ್ಲಿಯೇ ಹೃದಯವಿದ್ದು ಅಲ್ಲಿಯೇ ಶ್ರೀಹರಿ ಯಾವಾಗಲೂ ನೆಲೆಸಿರುವನು. ಬಳಿಕ ಶ್ರೀವಿಷ್ಣುವು ವಾಯುದೇವನಿಂದಲೂ, ಇತರ ದೇವತೆಗಳಿಂದಲೂ ಕೂಡಿಕೊಂಡು ಎದೆಯಿಂದಲೂ ಮೇಲೆ ಹೋಗಿ ತಲೆಯಲ್ಲಿ ನಿಂತನು. ಹೀಗೆ ತಲೆಯನ್ನು ದೇವರೂ, ಇತರ ದೇವತೆಗಳೂ ಆಶ್ರಯಿಸಿರುವುದರಿಂದ ತಲೆ 'ಶಿರಸ್' ಎನಿಸಿದೆ. ಶಿರಸ್ಸಿನಲ್ಲಿ ರುದ್ರಾದಿದೇವತೆಗಳಂತೆ ವಾಯುದೇವನು ಪ್ರಾಣಾಭಿಮಾನಿಯಾಗಿ ಆಶ್ರಯಿಸಿರುವನು..... ಅಲ್ಲಿದ್ದುಕೊಂಡು ಶ್ರೀಹರಿಯ ಉಪಾಸನೆ ನಡೆಸುವನು.4

- ಬ್ರಹ್ಮನ ಶರೀರವನ್ನು ದೇವತೆಗಳು ಪ್ರವೇಶಿಸುವ ಮುಂಚೆ ದೇವತೆಗಳ ಪ್ರವೃತ್ತಿಗಾಗಿ ಪ್ರವೇಶಿಸಬಯಸಿದ ಭಗವಂತನು ವಾಯುವಿನಿಂದ ಕೂಡಿಕೊಂಡು ಪ್ರವೇಶಿಸುವೆನೆಂದು ಸಂಕಲ್ಪಿಸಿ, ಚತುರ್ಮುಖನ ಶರೀರವನ್ನು ಸುಷುಮ್ನಾನಾಡಿಯ ಮೂಲಕ ಬ್ರಹ್ಮ ವಾಯುಗಳಿಂದ ಸಹಿತನಾಗಿ ಪ್ರವೇಶಿಸಿದನು.5

---

4. ತಂ ಪ್ರಪದಾಭ್ಯಾಂ ಪ್ರಾಪದ್ಯತ ಬ್ರಹ್ಮೇಮಂ..... ಶಿರಸಃ ಶಿರಸ್ತ್ವಂ ವೇದ ।
*– ಐತರೇಯ ಉಪನಿಷತ್ [ಭಾ.ತಾ.ನಿ. 10-94-18]*

ತಮಿಮಂ ಪ್ರಥಮಜ್ಞಾನಿಪುರುಷಂ ಚತುರಾನನಮ್ ।
ವಾಸುದೇವಾಭಿಧಂ ಬ್ರಹ್ಮ ಪ್ರಾಪ.....ಕಿಂಚಿದೂರ್ಧ್ವಂ ತತೋ ಗತ್ವಾ ವಾಯುನಾ ಸಹಕೇಶವಃ ।
ವಾಯುಮಾಹೋರುಗರಣಂ ಕುರ್ವತ್ರ ಸ್ಥಿತ ಇತ್ಯಪಿ ।
ಉರ್ವೇವ ಗರಣಂ ಚಕ್ರೇ ವಾಯುರ್ಯತ್ರ ಸ್ಥಿತಃ ಸದಾ ।
ತತ್ ಸ್ಥಾನಮುದರಂ ನಾಮ ಪುನರಾಹ ಜನಾರ್ದನಃ ।
ಉರುಸ್ಥಾನಂ ನಿವಾಸಂ ಮೇ ಕುರು ವಿಸ್ತಾರಸಂಯುತಮ್ ।
ತಥಾಽಕರೋತ್ ಸ ವಾಯುಶ್ಚ ತದುರೋಽಭೂದುರುತ್ವತಃ ।
ಉರೋ ಮಧ್ಯೇ ಚ ಹೃದಯಂ ತತ್ರ ವಾಸೋ ಹರೇಃ ಸದಾ....
ತತ ಊರ್ಧ್ವಂ ಗತೋ ವಿಷ್ಣುರ್ವಾಯುನಾ ಸಹ ದೈವತೈಃ ।
ಸ್ಥಿತೋ ಮೂರ್ಧನಿ ದೇವೇಶಃ ಶ್ರಿತೋಽಸಾವಿತಿ ತಚ್ಛಿರಃ ।
ತತ್ರ ಪ್ರಾಣಾತ್ಮನಾ ವಾಯುಃ..... ಉಪಾಸತೇ ಸದಾ ವಿಷ್ಣುಂ....।
*– [ಐ.ಉ.ಭಾ. 1-3-8, 1-4-1]*

5. ದೇವತಾನಾಂ ಪ್ರವೇಶಾತ್ತು ಪೂರ್ವಮೇವ ಜನಾರ್ದನಃ ।
ಇತ್ಯಮೈಕ್ಷತ ದೇವೇಶೋ...... .

ಕೊಂಡನು ಹೊರತು ಅಜ್ಞಾನದಿಂದಲ್ಲ. ಲೋಕಕರ್ತನಾದ ಅವನಲ್ಲಿ ಅಜ್ಞಾನ ಹೇಗೆ ತಾನೇ ಬರಬೇಕು? ....ಬಳಿಕ ಚತುರ್ಮುಖನು ಅಪಾನ ಎನಿಸುವ ಪ್ರಧಾನವಾಯುವಿನಿಂದ ಕೂಡಿಕೊಂಡು ಅನ್ನಾತ್ಮಕವಾದ ತನ್ನ ಶರೀರವನ್ನು ಭೋಗಿಸಲು ಬಯಸಿದನು. ಆಗಲೇ ಅವನು ಸಮರ್ಥನಾದನು. ಆದ್ದರಿಂದ ಪ್ರಧಾನವಾಯುವೊಬ್ಬನೇ ಎಲ್ಲ ಅನ್ನವನ್ನೂ ಭೋಗಿಸುವವನು. ಅವನ ಅನುಗ್ರಹದಿಂದ ಇತರ ರುದ್ರಾದಿಗಳು ಸ್ವಲ್ಪವೇ ಅಂದರೆ ತಮಗಿಂತ ಕಡಿಮೆಯಾದವರ ಎಲ್ಲ ಭೋಗ್ಯಪದಾರ್ಥಗಳನ್ನೇ ಭೋಗಿಸುವವರು. ಈ ವಾಯುವೇ ಎಲ್ಲ ದೇವತೆಗಳ ಆಯುಸ್ಸಿಗೆ ಅಭಿಮಾನಿಯೂ ಆಗಿದ್ದಾನೆ. ಅನ್ನಾಭಿಮಾನಿ ಚತುರ್ಮುಖನಿಗೂ ಆಯುಃಪ್ರದನಾಗಿದ್ದಾನೆ. ಆದುದರಿಂದ ಅವನು ದೇವೋತ್ತಮನು. ಆಯುಃ ಶಬ್ದವು ಜ್ಞಾನವಾಚಿ ಹಾಗೂ ಗತಿವಾಚಿ ಆಗಿರುವುದರಿಂದ ಅಂತಹ ಆಯು ಶಬ್ದವನ್ನೊಳಗೊಂಡು ರೂಪುಗೊಂಡ ವಾಯು ಎಂಬ ಹೆಸರುಳ್ಳ ವಾಯುದೇವ ದೇವತೆಗಳಿಗೆ ಚತುವಟಿಕೆಗಳನ್ನೂ, ಮೋಕ್ಷರೂಪಗತಿಯನ್ನೂ, ಅದಕ್ಕೆ ಬೇಕಾದ ಜ್ಞಾನವನ್ನೂ ನೀಡುವನು. ಬ್ರಹ್ಮ ವಾಯುಗಳು ಸಮಾನರು. ಯಾಕೆಂದರೆ ಅವರು ಪರಸ್ಪರ ವಾಗಿ ಗುಣದಾಯಕರು. ಅಂದರೆ ವಾಯು ಬ್ರಹ್ಮನಿಗೆ ಆಯುಃಪ್ರದನಾದರೆ ಬ್ರಹ್ಮನು ವಾಯುವಿಗೆ ಅನ್ನದ್ವಾರಾ ಪುಷ್ಟಿಪ್ರದ. ಆದ್ದರಿಂದ ಮೋಕ್ಷಸುಖದಲ್ಲಿ, ಜ್ಞಾನದಲ್ಲಿ, ವಿಷ್ಣು ಭಕ್ತ್ಯಾದಿಗಳಲ್ಲಿ ಎಲ್ಲರಿಗಿಂತ ಶ್ರೇಷ್ಠರು ಬ್ರಹ್ಮವಾಯುಗಳು.3

'ವಾಸುದೇವರೂಪಿ ಪರಮಾತ್ಮನು ಚತುರ್ಮುಖನ ಶರೀರವನ್ನು ವಾಯುದೇವನ ಜೊತೆಗೆ ಪ್ರವೇಶಿಸಿ, ತೊಡೆಗಳ ಮೇಲೇರುತ್ತ ಹೊಟ್ಟೆಯಲ್ಲಿ ಸೇರಿ ವಾಯುದೇವನಿಗೆ

---

3. ......ತಂ ತದಾಽಸೌ ಚತುರ್ಮುಖಃ ।
ಆತ್ತುಂ ವಾಗಾದಿಭಿಃ ಸರ್ವೈರೈಚ್ಛನ್ನಾಪ್ಯಶಕತ್ ತದಾ ॥
ಜಾನನ್ನಪಿ ಕ್ರೀಡಯೈವ ತಾರತಮ್ಯಂ ಪ್ರಕಾಶಯನ್ ।
ಏವಂ ಚಕಾರ ಬ್ರಹ್ಮಾ ಸ ಕ್ವಾಜ್ಞಾನಂ ಲೋಕಕರ್ತರಿ ॥
.....ಅನ್ನಮೂರ್ತಂ ತತೋ ಬ್ರಹ್ಮಾ ಪ್ರಧಾನೇನೈವ ವಾಯುನಾ ।
ಅಪಾನಾಖ್ಯೇನಾತ್ತುಮೈಚ್ಛತ್ ತದೈವಾಶಕದಾಶು ಸಃ ॥
ತಸ್ಮಾದ್ ಭೋಕ್ತೈಕ ಏವಾಸೌ ಸರ್ವಸ್ಯಾನ್ನಸ್ಯ ಮಾರುತಃ ।
ತತ್ಪ್ರಸಾದಾತ್ ಪರೇಽಶ್ನಂತಿ ಕಿಂಚಿತ್ ಕಿಂಚಿನ್ನಚಾಖಿಲಮ್ ॥
ಆಯೂರೂಪೋಽಖಿಲಾನಾಂ ಚ ದೇವಾನಾಂ ವಾಯುರೇವ ಹಿ ।
ಅನ್ನದೇವಸ್ಯ ಚಾಽಯುಃ ಸ ತಸ್ಮಾದ್ ದೇವೋತ್ತಮೋ ಮರುತ್ ॥
ಆಯುಃಶಬ್ದೋ ಜ್ಞಾನವಾಚೀ ಗತಿವಾಚೀ ಚ ಯತ್ ತತಃ ।
ಚೇಷ್ಟಾಮೋಕ್ಷಜ್ಞಾನದಾತಾ ಸುರಾಣಾಂ ಮಾರುತಸ್ತತಃ ॥
ಅನ್ಯೋನ್ಯ ಗುಣದಾತೃತ್ವಾತ್ ಸಮಾನೌ ಬ್ರಹ್ಮಮಾರುತೌ ।
ತಸ್ಮಾನ್ಮೋಕ್ಷಸುಖೇ ಜ್ಞಾನೇ ವಿಷ್ಣುಭಕ್ತ್ಯಾದಿಕೇಷು ಚ ।
ಸರ್ವೇಭ್ಯಶ್ಚಾಧಿಕೌ ತೌ ಹಿ ತಯೋರ್ವಿಷ್ಣುಃ ಪರಃ ಸದಾ ॥
*– ಐತರೇಯಸಂಹಿತಾ [ಐ.ಉ.ಭಾ. 2-3-3-2.....6]*

ನೀನಲ್ಲಿ ಚೆನ್ನಾಗಿ ಉಣ್ಣು ಮತ್ತು ಚೆನ್ನಾಗಿ ನನ್ನನ್ನು ಸ್ತುತಿಸು ಎಂದನು. ವಾಯುದೇವ ಯಾವ ಸ್ಥಳದಲ್ಲಿ ಚೆನ್ನಾಗಿ ಉಂಡನೋ ಮತ್ತು ಚೆನ್ನಾಗಿ ಹರಿಯನ್ನು ಸ್ತುತಿಸಿದನೋ ಆ ಸ್ಥಾನ ಉದರ ಎನಿಸುವುದು. ಪುನಃ ಹರಿಯು ಆ ಶರೀರದಲ್ಲಿ ಮೇಲೆ ಹೋಗಿ ಎದೆಯಲ್ಲಿ ನಿಂತು ವಾಯುದೇವನಿಗೆ ನೀನಿಲ್ಲಿ ನನಗೆ ವಿಸ್ತಾರವಾದ ವಾಸಸ್ಥಾನ ಮಾಡಿಕೊಡು ಎಂದನು. ವಾಯುದೇವನು ಹಾಗೆಯೇ ಮಾಡಿದನು. ಎದೆಯು ವಿಸ್ತಾರವಾದ ಸ್ಥಾನವಾದು ದರಿಂದ 'ಉರಸ್' ಎನಿಸುವುದು. ಆ ಉರಸ್ಸಿನ ಮಧ್ಯದಲ್ಲಿಯೇ ಹೃದಯವಿದ್ದು ಅಲ್ಲಿಯೇ ಶ್ರೀಹರಿ ಯಾವಾಗಲೂ ನೆಲೆಸಿರುವನು. ಬಳಿಕ ಶ್ರೀವಿಷ್ಣುವು ವಾಯುದೇವನಿಂದಲೂ, ಇತರ ದೇವತೆಗಳಿಂದಲೂ ಕೂಡಿಕೊಂಡು ಎದೆಯಿಂದಲೂ ಮೇಲೆ ಹೋಗಿ ತಲೆಯಲ್ಲಿ ನಿಂತನು. ಹೀಗೆ ತಲೆಯನ್ನು ದೇವರೂ, ಇತರ ದೇವತೆಗಳೂ ಆಶ್ರಯಿಸಿರುವುದರಿಂದ ತಲೆ 'ಶಿರಸ್' ಎನಿಸಿದೆ. ಶಿರಸ್ಸಿನಲ್ಲಿ ರುದ್ರಾದಿದೇವತೆಗಳಂತೆ ವಾಯುದೇವನು ಪ್ರಾಣಾಭಿಮಾನಿ ಯಾಗಿ ಆಶ್ರಯಿಸಿರುವನು..... ಅಲ್ಲಿದ್ದುಕೊಂಡು ಶ್ರೀಹರಿಯ ಉಪಾಸನೆ ನಡೆಸುವನು.[4]

- ಬ್ರಹ್ಮನ ಶರೀರವನ್ನು ದೇವತೆಗಳು ಪ್ರವೇಶಿಸುವ ಮುಂಚೆ ದೇವತೆಗಳ ಪ್ರವೃತ್ತಿಗಾಗಿ ಪ್ರವೇಶಿಸಬಯಸಿದ ಭಗವಂತನು ವಾಯುವಿನಿಂದ ಕೂಡಿಕೊಂಡು ಪ್ರವೇಶಿಸುವೆನೆಂದು ಸಂಕಲ್ಪಿಸಿ, ಚತುರ್ಮುಖನ ಶರೀರವನ್ನು ಸುಷುಮ್ನಾನಾಡಿಯ ಮೂಲಕ ಬ್ರಹ್ಮ ವಾಯುಗಳಿಂದ ಸಹಿತನಾಗಿ ಪ್ರವೇಶಿಸಿದನು.[5]

---

4. ತಂ ಪ್ರಪದಾಭ್ಯಾಂ ಪ್ರಾಪದ್ಯತ ಬ್ರಹ್ಮೇಮಂ..... ಶಿರಸಃ ಶಿರಸ್ತ್ವಂ ವೇದ ।
*– ಐತರೇಯ ಉಪನಿಷತ್ [ಭಾ.ತಾ.ನಿ. 10-94-18]*

ತಮಿಮಂ ಪ್ರಥಮಜ್ಞಾನಿಪುರುಷಂ ಚತುರಾನನಮ್ ।
ವಾಸುದೇವಾಭಿಧಂ ಬ್ರಹ್ಮ ಪ್ರಾಪ.....ಕಿಂಚಿದೂರ್ಧ್ವಂ ತತೋ ಗತ್ವಾ ವಾಯುನಾ ಸಹಕೇಶವಃ ।
ವಾಯುಮಾಹೋರುಗರಣಂ ಕುರ್ವತ್ರ ಸ್ಥಿತ ಇತ್ಯಪಿ ।
ಉರ್ವೇವ ಗರಣಂ ಚಕ್ರೇ ವಾಯುರ್ಯತ್ರ ಸ್ಥಿತಃ ಸದಾ ।
ತತ್ ಸ್ಥಾನಮುದರಂ ನಾಮ ಪುನರಾಹ ಜನಾರ್ದನಃ ।
ಉರುಸ್ಥಾನಂ ನಿವಾಸಂ ಮೇ ಕುರು ವಿಸ್ತಾರಸಂಯುತಮ್ ।
ತಥಾಽಕರೋತ್ ಸ ವಾಯುಶ್ಚ ತದುರೋಽಭೂದುರುತ್ವತಃ ।
ಉರೋ ಮಧ್ಯೇ ಚ ಹೃದಯಂ ತತ್ರ ವಾಸೋ ಹರೇಃ ಸದಾ....
ತತ ಊರ್ಧ್ವಂ ಗತೋ ವಿಷ್ಣುರ್ವಾಯುನಾ ಸಹ ದೈವತೈಃ ।
ಸ್ಥಿತೋ ಮೂರ್ಧನಿ ದೇವೇಶಃ ಶ್ರಿತೋಽಸಾವಿತಿ ತಚ್ಛಿರಃ ।
ತತ್ರ ಪ್ರಾಣಾತ್ಮನಾ ವಾಯುಃ..... ಉಪಾಸತೇ ಸದಾ ವಿಷ್ಣುಂ....।
*– [ಐ.ಉ.ಭಾ. 1-3-8, 1-4-1]*

5. ದೇವತಾನಾಂ ಪ್ರವೇಶಾತ್ತು ಪೂರ್ವಮೇವ ಜನಾರ್ದನಃ ।
ಇತ್ಥಮೈಕ್ಷತ ದೇವೇಶೋ...... .

- ವಿಷ್ಣುವಿನಿಂದ ಚತುರ್ಮುಖಬ್ರಹ್ಮನು ಬ್ರಾಹ್ಮಣಜಾತಿಯವನಾಗಿ ಹುಟ್ಟಿ, ಆ ಬ್ರಹ್ಮನಿಂದ ಜಗತ್ತು ಸೃಷ್ಟಿಯಾಗುವುದಕ್ಕಿಂತ ಮುಂಚೆ ಕ್ಷತ್ರಿಯಜಾತಿ ಜನಿಸಿತು. ಚತುರ್ಮುಖನಿಂದ ಹುಟ್ಟಿದ ಕ್ಷತ್ರಿಯಜಾತಿಯ ದೇವತೆಗಳಲ್ಲಿ ವಾಯುದೇವನೂ ಒಬ್ಬ.6

- ಚತುರ್ಮುಖ ಮುಖ್ಯವಾಯುವನ್ನು ಬಿಟ್ಟು ಉಳಿದ ನಲವತ್ತೊಂಭತ್ತು ಮರುತ್ತುಗಳನ್ನು ವೈಶ್ಯಜಾತಿಯ ದೇವತೆಗಳನ್ನಾಗಿ ಹುಟ್ಟಿಸಿದನು.7

- ಚತುರ್ಮುಖನು ಶ್ರೀಹರಿಯ ಪೂಜಾತ್ಮಕಕರ್ಮವನ್ನು ಮಾಡಲು ಬೇಕಾದ ಪೂರ್ಣತೆಗಾಗಿ ಭಾರ್ಯಾದಿಗಳನ್ನು ಬಯಸಿದಂತೆ ಪುತ್ರನನ್ನೂ ಬಯಸಿ, ತನ್ನ ಸ್ವರೂಪಭೂತಬಲವನ್ನು ಪುತ್ರನೆಂದು ಭಾವಿಸಿ ನಡೆಸಿದ ಕೇಶವನ ಮಾನಸಯಜ್ಞದ ಫಲವಾಗಿ ತನ್ನ ಪ್ರಾಣದಿಂದ ಪುತ್ರನಾದ ವಾಯುವನ್ನು ಪಡೆದನು.8

- ಚತುರ್ಮುಖ, ಸರಸ್ವತಿ ಹಾಗೂ ಪ್ರಾಣದೇವರು ವ್ಯಾಪ್ತಿಯಲ್ಲಿ ಸಮಾನರು. ಗುಣದ ವಿಷಯದಲ್ಲಿ ಚತುರ್ಮುಖ ಮತ್ತು ಪ್ರಾಣದೇವ ಸರಸ್ವತಿಗಿಂತ ಅಧಿಕರು. ಇತರ ಜೀವರಿಗೆ ಹೋಲಿಸಿದಲ್ಲಿ ಚತುರ್ಮುಖಾದಿಗಳು ಅನಂತಗುಣಸಂಪನ್ನರು. ಅವರಿಗಿಂತಲೂ ಶ್ರೀವಿಷ್ಣು ಅಧಿಕ ಅನಂತಗುಣಸಂಪನ್ನ. ಈ ರೀತಿಯಾಗಿ ಉಪಾಸನೆ ಮಾಡುವವನು ವಿಷ್ಣುಲೋಕದಲ್ಲಿ ಶಾಶ್ವತವಾಗಿ ಆನಂದವನ್ನು ಅನುಭವಿಸುವನು. ಹೀಗೆ

---

ತಸ್ಮಾದೇಷಾಂ ಪ್ರವೃತ್ತ್ಯರ್ಥಂ ಪ್ರವೇಕ್ಷ್ಯೇ ಸಹ ವಾಯುನಾ....... ॥
ಇತಿ ಮತ್ವಾ ವಿರಿಂಚಸ್ಯ ಶರೀರಂ ಪ್ರವಿವೇಶ ಸಃ ।
ಮೂರ್ಧನ್ಯ ನಾಡ್ಯಾ ಪ್ರಥಮಂ ಬ್ರಹ್ಮವಾಯುಸಮನ್ವಿತಃ..... ॥
*– ಐತರೇಯಸಂಹಿತಾ [ಐ.ಉ.ಭಾ. 2-3-3-7....10]*

6. ವಿಷ್ಣೋರ್ಬ್ರಾಹ್ಮಣಜಾತಿಃ ಸನ್ ಬ್ರಹ್ಮಾಜಜ್ಞೇ ಚತುರ್ಮುಖಃ ।
ಇತೋಽಗ್ರೇ ಜಗತಸ್ತಸ್ಮಾತ್ ಕ್ಷತ್ರಜಾತಿರಜಾಯತ ।
ವಾಯುಃ........ ಏವಮಾದ್ಯಾಃ ಕ್ಷತ್ರಿಯಾಸ್ತು ದೇವಾನಾಂ ಬ್ರಹ್ಮನಿರ್ಮಿತಾಃ...... ॥
*– ವಾಮನೇ [ಬೃ.ಉ.ಭಾ. 3-5-5]*

7. ..........ವಾಯೋರನ್ಯೇ ಚ ವಾಯವಃ ।
.........ವೈಶ್ಯಾ ಇತ್ಯೇವ ಕೀರ್ತಿತಾಃ ॥ *– [ಬೃ.ಉ.ಭಾ. 3-5-6]*

8. ಸೋಽಕಾಮಯತ ಭಾರ್ಯಾ ಮೇ ಸ್ಯಾತ್ ಪುತ್ರಸ್ತದನಂತರಮ್....... ।
.........ಕರ್ಮ ಕುರ್ಯಾಂ ತತೋ ಹರೇಃ ।
.........ಮತ್ವಾ ಪೂರ್ಣತ್ವಸಿದ್ಧ್ಯರ್ಥಂ...... ಅಕಲ್ಪಯತ್ ।
ಪ್ರಾಣಂ ಪುತ್ರಂ...... ಏವಂ ಸ ಮಾನಸೇ ಯಜ್ಞೇ ತ್ವಯಜತ್ ಕೇಶವಂ ವಿಭುಮ್ ।
ತತೋಽಸ್ಯ........ಪುತ್ರಃ ಪ್ರಾಣಾದಭೂದ್ ವಾಯುಃ.......॥
*– [ಬೃ.ಉ.ಭಾ. 3-5-11]*

ಉಪಾಸನೆ ಮಾಡದೆ ರುದ್ರಾದಿಗಳಿಗಿಂತ ಅಲ್ಪಗುಣವುಳ್ಳವರೆಂದು ಉಪಾಸನೆ ಮಾಡಿದರೆ ಅನಿತ್ಯಲೋಕದ ಪ್ರಾಪ್ತಿ ಆಗುವುದು.9

- ಚತುರ್ಮುಖನು ಒಂದಂಶದಿಂದ ತನ್ನ ಆ ಶರೀರದಲ್ಲಿ ಸುಪ್ತನಾಗಿದ್ದರೆ, ಮತ್ತೊಂದು ಅಂಶದಿಂದ ಆ ಶರೀರದಿಂದ ಹೊರಟುಹೋಗುವನು. ಅವನ ಜೊತೆಗೆ ವಾಯು ಹಾಗೂ ವಿಷ್ಣು ಕೂಡಾ ಆ ಶರೀರದಿಂದ ಹೊರಟುಹೋಗುವರು. ಆ ಮೂವರನ್ನು ಹೊರತುಪಡಿಸಿ ಉಳಿದ ರುದ್ರಾದಿ ತತ್ವಾಭಿಮಾನಿದೇವತೆಗಳೆಲ್ಲ ಆ ಶರೀರವನ್ನು ಮೇಲಕ್ಕೆ ಎಬ್ಬಿಸಲು ಅಸಮರ್ಥರಾದರು. ಆಗ ಆ ಮೂರು ದೇವತೆಗಳು ಬ್ರಹ್ಮನ ದೇಹವನ್ನು ಪ್ರವೇಶಿಸಲು ಆ ಶರೀರ ಎದ್ದುನಿಂತಿತು. ಹಾಗೆ ಆ ದೇಹ ಏಳಲು ಆ ಮೂರು ದೇವತೆಗಳ ಪ್ರಭಾವ ಕಾರಣ. ವಿಶೇಷವಾಗಿ ಶ್ರೀಪತಿಯ ಪ್ರಭಾವ. ಅದರಲ್ಲಿ ಶ್ರೀಹರಿ ಕ್ಷೇತ್ರಜ್ಞನಾಗಿ ಚತುರ್ಮುಖ ಚಿತ್ತಾಭಿಮಾನಿಯಾಗಿ ಇದ್ದರೆ, ವಾಯುದೇವ ಪ್ರಾಣಾಭಿಮಾನಿಯಾಗಿ ಇರುವನು.10
- ವಾಯು ಚತುರ್ಮುಖಬ್ರಹ್ಮಸ್ವರೂಪಿ. ಆದುದರಿಂದಲೇ ಹಿಂದೆ ವಾಯು ಆಗಿದ್ದವನೇ ಈ ಕಲ್ಪದಲ್ಲಿ ಚತುರ್ಮುಖಬ್ರಹ್ಮನ ಪದವಿಗೆ ಬಂದಿರುವನು. ವಾಯುದೇವನಿಗಿಂತ ಬೇರೆ ಯಾರೂ ಚತುರ್ಮುಖನ ಪದವಿಯನ್ನು ಏರುವಂತಿಲ್ಲ. ಆದುದರಿಂದ ವಾಯುದೇವನೇ ಚತುರ್ಮುಖಬ್ರಹ್ಮ11.

---

9. ........ಏತೇ ಸಮಾ ವ್ಯಾಪ್ತೌ ಬ್ರಹ್ಮೇರೌ ಗುಣತೋಽಧಿಕೌ ।
ಅನಂತಾಶ್ಚ ಗುಣಾ ಹ್ಯೇಷಾಮನ್ಯಜೀವವ್ಯಪೇಕ್ಷಯಾ ॥
ತೇಭ್ಯೋಽಪ್ಯನಂತಾ ವಿಷ್ಣೋಸ್ತು ತೇಷಾಮೇವಮುಪಾಸಕಃ ।
ನಿತ್ಯಲೋಕೋಪಭೋಗೀ ಸ್ಯಾದನಿತ್ಯಸ್ಯಾನ್ಯಥಾ ಭವೇತ್ ॥ – *[ಬೃ.ಉ.ಭಾ. 3-6-19]*

10. ಅಂಶೇನ ಸುಪ್ತೋ ಬ್ರಹ್ಮಾ ತು ಅಂಶೇನ ನಿರಗಾತ್ ತಥಾ ।
ಸ್ವದೇಹಾದ್ ವಾಯುಸಹಿತೋ ವಿಷ್ಣುನಾ ಚ ಜಗತ್ಪ್ರಭುಃ ॥
ತಮುತ್ಥಾಪಯಿತುಂ ದೇವಾಸ್ತಾನೃತೇ ತ್ರೀನ್ ಮಹಾಬಲಾನ್ ।
ನಾಶಕ್ನುವನ್ನೇಕಸಂಸ್ಥಾಸ್ತತಸ್ತೇ ತ್ರ್ಯವಿಶಂಸ್ತ್ರಯಃ ॥
ಉದತಿಷ್ಠದ್ ಬ್ರಹ್ಮದೇಹಸ್ತದಾ ತೇಷಾಂ ಪ್ರಭಾವತಃ ।
ವಿಶೇಷೇಣ ಹರೇರೇವ ಪ್ರಭಾವೇನ ಶ್ರಿಯಃಪತೇ ॥
ಚಿತ್ತಾಭಿಮಾನೀ ಬ್ರಹ್ಮೈವ ಕ್ಷೇತ್ರಜ್ಞಸ್ತದ್ಗತೋ ಹರಿಃ ।
ಪ್ರಾಣೋ ವಾಯುರಿತಿ ಪ್ರೋಕ್ತಸ್ತಯೋರೀಶೋ ಹರಿಃ ಸ್ವಯಮ್ ॥
– *[ಭಾಗ.ತಾ.ನಿ. 3-27-71.]*

11. ಬ್ರಹ್ಮಾತ್ಮಕೋ ಯತೋ ವಾಯುಃ ಪದಂ ಬ್ರಾಹ್ಮಮಗಾತ್ ಪುರಾ ।
ವಾಯೋರನ್ಯಸ್ಯ ನ ಬ್ರಾಹ್ಮಂ ಪದಂ ತಸ್ಮಾತ್ ಸ ಏವ ಸಃ ॥
– *[ಭಾಗ.ತಾ.ನಿ. 2-35]*

- ಈ ಕಲ್ಪದ ವಾಯುದೇವನೇ ಮುಂದಿನ ಕಲ್ಪದಲ್ಲಿ ಚತುರ್ಮುಖನಾಗುವನು. ಆದುದರಿಂದ ಬ್ರಹ್ಮನೇ ವಾಯುಷೆಂದು ಪ್ರತಿಪಾದ್ಯನಾಗಿರುವನು. ಅಂತಹ ಚತುರ್ಮುಖ ಬ್ರಹ್ಮನಿಗೆ ಶಿವಾದಿಗಳಲ್ಲಿ ಯಾರೂ ಎಂದೂ ಬ್ರಹ್ಮನಿಗೆ ಸದೃಶರಾದವರು ಇಲ್ಲ.[12]

* * *

## 'ಮುಖ್ಯಪ್ರಾಣ ಮತ್ತು ಇತರ ದೇವತೆಗಳು'

**ರುದ್ರಾದಿದೇವತೆಗಳೆಲ್ಲ ಮುಖ್ಯಪ್ರಾಣನ ಆಶ್ರಯದಿಂದಲೇ, ಪ್ರೇರಣೆಯಿಂದಲೇ ತಮ್ಮ ತಮ್ಮ ಕಾರ್ಯವನ್ನು ನಿರ್ವಹಿಸುವವರು. ಹೀಗೆ ಮುಖ್ಯಪ್ರಾಣ ರುದ್ರಾದಿಗಳಿಗೆ ಹೇಗೆ ಆಧಾರನಾಗಿರುವನು? ಮುಖ್ಯಪ್ರಾಣನ ನೆಚ್ಚಿನ ಮಡದಿ ಭಾರತೀದೇವಿಗೂ ಮುಖ್ಯಪ್ರಾಣನಿಗೂ ಇರುವ ನಂಟು ಎಷ್ಟು ಗಾಢವಾದದ್ದು? -ಈ ಬಗ್ಗೆ ಬೆಳಕುಚೆಲ್ಲುವ ೪೧ ಪ್ರಮಾಣಗಳ ಸಂಗ್ರಹವಿರುವ ಈ ವಿಭಾಗದಲ್ಲಿ ೧೪ ಪ್ರಮಾಣಗಳು ಆಕರದ ಹೆಸರಿನೊಂದಿಗೆ ಉಲ್ಲೇಖಗೊಂಡವುಗಳಾದರೆ, ೨೭ ಪ್ರಮಾಣಗಳು ಆಕರದ ಹೆಸರಿನ ಉಲ್ಲೇಖವಿಲ್ಲದೆ ಉದಾಹರಿಸಲ್ಪಟ್ಟವು.**

- 'ಚಕ್ಷುರಾದ್ಯಭಿಮಾನಿದೇವತೆಗಳು ಪರಸ್ಪರವಾಗಿ ನಿಂದಿಸುತ್ತ ಮಾತಿನ ಮೂಲಕ ಹಿಂಸೆ ಮಾಡಿಕೊಂಡರು. ಶ್ರೀವಿಷ್ಣುವಿನ ಪ್ರೇರಣೆಯಿಂದ ಅವರು ಹೀಗೆ ಹೇಳಿಕೊಂಡರು –'ನಾವು ಒಬ್ಬೊಬ್ಬರಾಗಿ ಈ ಚತುರ್ಮುಖನ ಶರೀರದಿಂದ ಹೊರಗೆ ಹೋಗೋಣ. ಯಾರು ಹೋದರೆ ಮಾತ್ರ ಶರೀರವು ಬೀಳುವುದೋ ಅವನು ನಮ್ಮೊಳಗೆ ಶ್ರೇಷ್ಠನೆಂದು ತೀರ್ಮಾನಿಸಲ್ಪಡಲಿ' –ಎಂದು ಬಳಿಕ ಅಗ್ನಿ ಮುಂತಾದ ದೇವತೆಗಳು ಒಬ್ಬೊಬ್ಬರಾಗಿ ಹೊರಗೆ ಬಂದರು. ಅವರು ಎಲ್ಲರೂ ಹೊರಟು ಹೋದರೂ ಶರೀರಪಾತ ಆಗಲೇ ಇಲ್ಲ. ವಾಯುದೇವನು ಹೊರಟು ಹೋದಾಗಲೇ ಶರೀರವು ನೆಲದಲ್ಲಿ ಬಿದ್ದಿತು. ಆ ವಾಯ್ವಾದಿದೇವತೆಗಳ ಸತ್ವಪರೀಕ್ಷೆಗಾಗಿಯೇ ಶ್ರೀಹರಿಯೂ ಚತುರ್ಮುಖನೂ ಆ ಶರೀರದಲ್ಲಿದ್ದೂ ಶರೀರವನ್ನು ಪ್ರೇರಿಸದೆ ಉದಾಸೀನರಂತಿದ್ದರು. ಹಾಗೆಯೇ ದೇವತೆಗಳ ಕಲಹವನ್ನು ನಿವಾರಿಸದೆ, ಆ ವಿಷಯದಲ್ಲೂ ಉದಾಸೀನರಂತಿದ್ದರು. ಪುನಃ ಆ ಅಗ್ನಿ, ಸೂರ್ಯ, ಚಂದ್ರ, ರುದ್ರ ಮುಂತಾದ ಎಲ್ಲ ದೇವತೆಗಳೂ ಒಬ್ಬೊಬ್ಬರಾಗಿ ಶರೀರವನ್ನು ಪ್ರವೇಶಿಸಿದರು. ಅವರೆಲ್ಲರೂ ಪ್ರವೇಶಿಸಿದರೂ ಶರೀರ ಏಳಲಿಲ್ಲ. ವಾಯು ಪ್ರವೇಶ ಮಾಡಿದಾಗ ಮಾತ್ರ ಶರೀರ ಎದ್ದಿತು. ಆದ್ದರಿಂದ ಶರೀರಧಾರಣಸಾಮರ್ಥ್ಯವುಳ್ಳ ವಾಯುವೇ ಎಲ್ಲ ದೇವತೆಗಳಿಗಿಂತ ಉಚ್ಚನಾಗಿ ನಿಂತುದರಿಂದ, ಉಕ್ಥ –ಶ್ರೇಷ್ಠ ಎಂದೆನಿಸಿದನು.[1]

---

12. ವಾಯುರ್ಹಿ ಬ್ರಹ್ಮತಾಮೇತಿ ತಸ್ಮಾದ್ ಬ್ರಹ್ಮೈವ ಸ ಸ್ಮೃತಃ ।
ನ ಬ್ರಹ್ಮಸದೃಶಃ ಕಶ್ಚಿಚ್ಛಿವಾದಿಷು ಕಥಂಚನ ॥ –*[ಭಾಗ.ತಾ.ನಿ. 2-148.]*

1. ವಾಚಾ ಹಿಂಸಾಮಕುರ್ವಂಸ್ತೇ ವಿನಿಂದಂತಃ ಪರಸ್ಪರಮ್ ।

ಉಚ್ಚ ಎಂದರೆ ಅಧಿಕಗುಣಶಾಲಿ. 'ತ್ವಮುಚ್ಚಮಸಿ' –ನೀನು ಗುಣಗಳಿಂದ ಅಧಿಕನಾಗಿರುವಿ ಎಂದು ದೇವತೆಗಳು ವಾಯುದೇವನಲ್ಲಿ ನಿವೇದಿಸಿಕೊಂಡಿರುವರು. ಅಲ್ಲದೆ ಯಾವಾಗಲೂ ನಾವೆಲ್ಲ ನಿನ್ನ ಸೇವಕರು; ನೀನು ನಮ್ಮ ಒಡೆಯ. ನಾವು ಸ್ಪರ್ಧಿಸಿರುವುದಾದರೂ ನಿನ್ನ ಸಾಮರ್ಥ್ಯದಿಂದಲೇ ಹೊರತು ಸ್ವಶಕ್ತಿಯಿಂದಾಗಿ ಅಲ್ಲ. ಹೀಗೆ ಗರುಡ, ಶೇಷ, ಇಂದ್ರ, ಚಂದ್ರ ಮುಂತಾದ ದೇವತೆಗಳು ಪ್ರತ್ಯೇಕ ಪ್ರತ್ಯೇಕವಾಗಿ ಸ್ತುತಿಸಿದರು. ಹೀಗೆ ಅವರಿಂದ ಭಕ್ತಿಪೂರ್ವಕವಾಗಿ ಸ್ತುತನಾದ ವಾಯುದೇವದೇವತೆಗಳ ವಿಷಯದಲ್ಲಿ ಪ್ರಸನ್ನನಾದನು.2

- 'ಭಗವಂತನಿಂದ ಸೃಷ್ಟಿಸಲ್ಪಟ್ಟ ವಾಗಾದಿ ಇಂದ್ರಿಯಾಭಿಮಾನಿಗಳು ದೇಹದೊಳಗೆ 'ನಾನೇ ಶ್ರೇಷ್ಠ ನಾನೇ ಶ್ರೇಷ್ಠ' –ಎಂದು ವಿವಾದ ಮಾಡಿದರು. ಹಾಗೆಯೇ ದೇಹದ ಹೊರಗೆ ಜ್ವಲಿಸುವ, ಸುಡುವ ಮುಂತಾದ ಕಾರ್ಯನಿರ್ವಹಣೆಯಲ್ಲೂ ದೇವತೆಗಳು 'ನಾನೇ ಶ್ರೇಷ್ಠ ನಾನೇ ಶ್ರೇಷ್ಠ' ಎಂದು ಸ್ಪರ್ಧಿಸಿದರು. ಆಗ ಆ ದೇವತೆಗಳನ್ನು ಕುರಿತು ಶ್ರೀಹರಿಯು 'ನಿಮ್ಮಲ್ಲಿ ಯಾರು ತಮ್ಮ ಕರ್ತವ್ಯವನ್ನು ಶ್ರಮವಿಲ್ಲದೆ ಅವಿರತವಾಗಿ ಮಾಡುತ್ತಾನೆಯೋ ಅವನು ಶ್ರೇಷ್ಠ' ಎಂದು ಹೇಳಿದನು. ಅದನ್ನು ಕೇಳಿದ ದೇವತೆಗಳು ತಮ್ಮ ತಮ್ಮ ಕರ್ಮಗಳನ್ನು ಶ್ರಮವಿಲ್ಲದೆ ಅವಿರತವಾಗಿ ಮಾಡಲು ತೊಡಗಿದರು. ಆಗ ಬ್ರಹ್ಮನು ಶ್ರಮಕಾರಕನಾಗಿ ಆ ದೇವತೆಗಳನ್ನು ಪ್ರವೇಶಿಸಿದನು. ಆಗ ಈ ಎಲ್ಲ

---

ತೇ ವಿಷ್ಣೋರಾಜ್ಞಯಾಽವೋಚನ್ 'ಉತ್ಕ್ರಮಾಮ ಪೃಥಕ್ ಪೃಥಕ್ ॥
ದೇಹಾದಬ್ಜಭವಸ್ಯಾಸ್ಮಾದ್ ಯಸ್ಮಿನ್ನುತ್ಕ್ರಾಂತ ಏವ ಹಿ ।
ಶರೀರಂ ಪದ್ಯತೇ ಶ್ರೇಯಾಂಸ್ತು ನ ಇತ್ಯವಧಾರ್ಯತಾಮ್ ॥
ತತಃ ಕ್ರಮೇಣ ಚಾಗ್ನ್ಯಾದ್ಯಾ ನಿಷ್ಕ್ರಾಂತಾಸ್ತೇಷು ಸರ್ವಶಃ ।
ನಿಷ್ಕ್ರಾಂತೇಷು ನ ವೈ ಪಾತಃ ಶರೀರಸ್ಯಾಭವತ್ ಕ್ವಚಿತ್ ॥
ವಾಯಾವುತ್ಕ್ರಾಂತ ಏವೈತಚ್ಛರೀರಮಪತತ್ ಕ್ಷಿತೌ ।
ಉದಾಸೀನವದಾಸ್ತಾಂ ತೌ ಕೇಶವಶ್ಚಾಬ್ಜಸಂಭವಃ ॥
ತೇಷಾಂ ಬಲಪರೀಕ್ಷಾರ್ಥಂ ವಾಯ್ವಾದೀನಾಂ ಚ ಸರ್ವಶಃ ।
ಪುನಸ್ತೇ ಪ್ರಾವಿಶನ್ ಸರ್ವೇ ವಹ್ನಿಸೂರ್ಯೌ ಶಶೀ ಶಿವಃ ॥
ನೋತ್ಥಾನಮಭವತ್ತೇಷು ಪ್ರವಿಷ್ಟೇಷ್ವಪಿ ಸರ್ವಶಃ ।
ವಾಯೌ ಪ್ರವಿಷ್ಟೇ ತೂತ್ಥಾನಂ ಕಾಯಸ್ಯಾಸೀತ್ ತದೈವ ಚ ॥
ಉಚ್ಚೈಃ ಸ್ಥಿತತ್ವಾದ್ ಉಕ್ಥೋಽಭೂದ್ ವಾಯುರೇವ ತತಃ ಪ್ರಭುಃ ।

2. ಉಚ್ಚತ್ವಂ ಚ ಗುಣಾಧಿಕ್ಯಂ ತ್ವಮುಚ್ಚೋಽಸೀತಿ ತೇಽಬ್ರುವನ್ ॥
ಭೃತ್ಯಾ ವಯಂ ತವೈವ ಸ್ಮಃ ತ್ವಮಸ್ಮಾಕಂ ಪತಿಃ ಸದಾ ।
ಸ್ಪರ್ಧಾಮಹೇ ತ್ವದ್‌ಬಲೇನ ತ್ವಯಾ ನಾನ್ಯೇನ ಕೇನಚಿತ್ ॥
ಇತ್ಯೂಚುರ್ವೀಂದ್ರಶೇಷೇಶಶಕ್ರಚಂದ್ರಾದಿಕಾಃ ಪೃಥಕ್ ।
ವಾಯುಃ ಸ ಸಂಸ್ತುತಸ್ತೈಸ್ತ ಪ್ರಸನ್ನೋಽಭೂದ್ ದಿವೌಕಸಾಮ್ ॥

*–[ಐ.ಉ.ಭಾ. 1-4-1....10]*

ದೇವತೆಗಳು ಆಯಾಸಗೊಂಡು ಅಧ್ಯಾತ್ಮವಾಗಿಯೂ ಅಧಿದೈವವಾಗಿಯೂ ಭಗವತ್ಪೂಜಾರೂಪವಾದ ತಮ್ಮ ತಮ್ಮ ಕರ್ಮಗಳನ್ನು ಮಾಡಲು ಅಸಮರ್ಥರಾದರು. ವಾಯುದೇವನಾದರೂ ಚತುರ್ಮುಖನ ಸಮಾನ ಸಾಮರ್ಥ್ಯವನ್ನು ಹೊಂದಿರುವುದರಿಂದ ಅಂತಹ ವಾಯುವನ್ನು ಚತುರ್ಮುಖನು ಶ್ರಮಕಾರಕನಾಗಿ ಪ್ರವೇಶಿಸಲಿಲ್ಲ. ಆದ್ದರಿಂದ ಶ್ರಮವಿಲ್ಲದೆ ವಾಯುದೇವ ತನ್ನ ಭಗವತ್ಪೂಜಾತ್ಮಕವಾದ ಎಲ್ಲ ಕರ್ಮಗಳನ್ನೂ ಯಾವಾಗಲೂ ಮಾಡುವನು. ಶ್ರಮಪೂರ್ವಕವಾದ, ಭಗವತ್ಪೂಜಾತ್ಮಕವಾದ ಕರ್ಮವನ್ನು ತ್ಯಜಿಸಿದುದರಿಂದ ಪಾಪಾಭಿಮಾನಿ ಮೃತ್ಯು ಉಳಿದ ಎಲ ದೇವತೆಗಳನ್ನು ಪ್ರವೇಶಿಸಿದನು. ವಾಯುವನ್ನು ಮಾತ್ರ ಎಂದೂ ಪ್ರವೇಶಿಸಲೇ ಇಲ್ಲ. ಆದ್ದರಿಂದ ದೇವತೆಗಳು ವಾಯುವನ್ನು ಶ್ರೇಷ್ಠನೆಂದು ನಿರ್ಧರಿಸಿ, ಅವನ ಸ್ವರೂಪವನ್ನು ತಿಳಿಯಲು ಇಷ್ಟಪಟ್ಟರು. ಅವನನ್ನು ಯಥಾಯೋಗ್ಯವಾಗಿ ತಿಳಿದು ಅವನಿಂದ ಆವಿಷ್ಟರಾಗಿ ಅವನ ಭೃತ್ಯರಾದರು. ಹೀಗೆ ಎಲ್ಲ ದೇವತೆಗಳಲ್ಲಿ ವಾಯುದೇವರು ಪ್ರವೇಶ ಮಾಡಿರುವುದರಿಂದಲೇ ಎಲ್ಲ ದೇವತೆಗಳು ಅಧ್ಯಾತ್ಮವಾಗಿ 'ಪ್ರಾಣಗಳು' ಎಂದೂ ಅಧಿದೈವವಾಗಿ 'ಮರುತ್ತು'ಗಳು ಎಂದೂ ಹೆಸರಿಸಲ್ಪಡುವರು. ದೇವತೆಗಳೆಲ್ಲರೂ ವಾಯುವಿನಿಂದಲೇ ಜನಿಸುವರು. ಅವನಲ್ಲಿಯೇ ಲಯ ಹೊಂದುವರು. ಆದುದರಿಂದಲೇ ಯಾವಾಗಲೂ ಅವನ ಹಂಸಮಂತ್ರ ಜಪರೂಪ ವ್ರತವನ್ನೇ ಆಚರಿಸುವರು.3

---

3. ಇಂದ್ರಿಯಾಣಿ ಸಸರ್ಜಾದೌ ವಾಸುದೇವಃ ಪ್ರಜಾಪತಿಃ ।
ಅಧ್ಯಾತ್ಮಮಿಂದ್ರಿಯಾಣ್ಯಾಹು ರಧಿದೈವಂ ತು ದೇವತಾಃ ॥
......ತ ಏತೇ ಭಗವತ್ಸೃಷ್ಟಾ ವ್ಯೂದಿರೇಽಧ್ಯಾತ್ಮಸಂಸ್ಥಿತಾಃ ।
......ತೇಽಧಿದೈವೇ ಚ ಪಸ್ಪೃಧುಃ ॥
ಅಹಂ ಶ್ರೇಯಾನಹಂ ಶ್ರೇಯಾನಿತಿ ತಾನಬ್ರವೀದ್ಧರಿಃ ।
ಸ್ವಕರ್ಮ ಯಸ್ತ್ವವಿಶ್ರಾಂತಂ ಕುರ್ಯಾಚ್ಛ್ರೇಯಾನ್ ಸ ಯಃ ಸ್ಮೃತಃ ॥
ಇತಿ ಶ್ರುತ್ವಾ ತತಶ್ಚಕ್ರುಃ ಕರ್ಮ ಸ್ವಂ ಸ್ವಮನಾರತಮ್ ।
ತಾನೇನಾಞ್ಛ್ರಮರೂಪೇಣ ಪ್ರಾಪ ಬ್ರಹ್ಮಾ ಪ್ರಜಾಪತಿಃ ॥
ಶ್ರಾಂತಾಃ ಸ್ವಂ ಭಗವತ್ಕರ್ಮ ನ ಶೇಕುಃ ಸರ್ವದೇವತಾಃ ।
ವಾಯುಂ ತು ಸಮಶಕ್ತಿತ್ವಾನ್ನಾಽಪ ಬ್ರಹ್ಮಾ ಪ್ರಜಾಪತಿಃ ॥
ತೇನಾಸೌ ಭಗವತ್ಕರ್ಮ ಸರ್ವಂ ಚ ಕೃತವಾನ್ ಸದಾ ।
ಶ್ರಮಾತ್ ಪಾಪಾತ್ಮಕೋ ಮೃತ್ಯುರ್ಭಗವತ್ಕರ್ಮವರ್ಜನಾತ್ ॥
ಅನ್ಯಾನ್ ದೇವಾನವಾಪಾಶು ನೈವ ವಾಯುಂ ಕದಾಚನ ।
ತೇ ವಾಯುಂ ಜ್ಞಾತುಮೈಚ್ಛಂತ ಶ್ರೇಷ್ಠೋಽಯಮಿತಿ ನಿಶ್ಚಿತಾಃ ॥
ತಂ ಜ್ಞಾತ್ವಾ ತೇನ ಚಾಽವಿಷ್ಟಾಸ್ತದ್ಭೃತ್ಯತ್ವಮುಪಾಗತಾಃ ।
ತಸ್ಮಾತ್ ಪ್ರಾಣಾಶ್ಚ ಮರುತ ಇತ್ಯೇಷಾಂ ನಾಮ ಸಂಸ್ಥಿತಮ್ ॥
ವಾಯೋರ್ದೇವಾ ಹಿ ಜಾಯಂತೇ ಲಯಮೇಷ್ಯಂತಿ ತತ್ರ ಚ ।
ತಸ್ಮಾನ್ನಿತ್ಯಂ ತದ್ವ್ರತಾಶ್ಚ..... ॥ – *ನಾರಾಯಣಶ್ರುತಿ [ಬೃ.ಉ.ಭಾ. 3-6-28, 29]*

- ವಾಯುದೇವನ ಜೊತೆಯಲ್ಲಿ ದೇವತೆಗಳು 'ನಾನೇ ಶ್ರೇಷ್ಠ, ನಾನೇ ಶ್ರೇಷ್ಠ' ಎಂದು ಸ್ಪರ್ಧೆ ಮಾಡುತ್ತ ಕೊನೆಯಲ್ಲಿ ಮುಖ್ಯಪ್ರಾಣನಿಲ್ಲದೆ ತಮ್ಮನ್ನು ತಾವೇ ರಕ್ಷಿಸಿಕೊಳ್ಳಲು ಅಸಮರ್ಥರಾದರು. ಆದ್ದರಿಂದ ವಾಯು ದೇವತೆಗಳಿಗೆ ನಾಯಕ ಎಂದು ಸಿದ್ಧ ವಾಯಿತು. ವಾಯುವೇ ಮುಂತಾದ ಎಲ್ಲ ದೇವತೆಗಳೂ ಹೀಗೆ ಸ್ಪರ್ಧೆ ಮಾಡಿ ಪ್ರಭು ವಾದ ನಾರಾಯಣನ ಬಳಿಗೆ ಹೋದರು. ಆಗ ಭಗವಂತನು ನಿಮ್ಮಲ್ಲಿ ಯಾರು ಬ್ರಹ್ಮನ ಶರೀರದಿಂದ ಹೊರಗೆ ಹೋದರೆ ಉಳಿದವರೆಲ್ಲರೂ ಆ ಶರೀರದಲ್ಲಿ ಇರುವುದಕ್ಕೂ ಅಸಮರ್ಥರಾಗುವರೋ ಅವರು ನಿಮ್ಮಲ್ಲಿ ಶ್ರೇಷ್ಠರು ಎಂದು ಹೇಳಿದರು. ಅನಂತರ ಎಲ್ಲರೂ ಬ್ರಹ್ಮನ ಶರೀರಕ್ಕೆ ಬಂದರು. ಶ್ರೇಷ್ಠ ಯಾರೆಂಬುದನ್ನು ನಿರ್ಣಯಿಸುವುದಕ್ಕಾಗಿ ಒಬ್ಬೊಬ್ಬರಾಗಿ ಎಲ್ಲರೂ ಆ ದೇಹದಿಂದ ಹೊರಗೆ ಹೊರಟರು. ಗರುಡ ಶೇಷ ರುದ್ರ ಇಂದ್ರ ಸೂರ್ಯ ಮೊದಲಾದ ಎಲ್ಲ ದೇವತೆಗಳೂ ಒಬ್ಬೊಬ್ಬರಾಗಿ ಬ್ರಹ್ಮನ ಶರೀರದಿಂದ ಹೊರಹೋದಾಗ ಆ ಶರೀರವು ಬೀಳಲಿಲ್ಲ. ಹೊರಗೆ ಹೊರಟ ದೇವತೆಯೊಬ್ಬನನ್ನು ಬಿಟ್ಟು ಉಳಿದ ಎಲ್ಲ ದೇವತೆಗಳು ಆ ಶರೀರದಲ್ಲಿಯೇ ವಾಸ ಮಾಡಿದರು. ಮುಖ್ಯಪ್ರಾಣನು ಹೊರಡಲು ಮನಸ್ಸು ಮಾಡಿದ ಮಾತ್ರಕ್ಕೆ ಉಳಿದ ದೇವತೆಗಳು ಆ ಶರೀರದಲ್ಲಿ ಇರಲೂ ಅಸಮರ್ಥ ರಾದರು. ಪ್ರಾಣಬ್ರಹ್ಮರು ಪರಸ್ಪರವಾಗಿ ಆಶ್ರಯಿಸಿರುವುದರಿಂದ ಪ್ರಾಣನನ್ನು ಬಿಟ್ಟು ಬ್ರಹ್ಮನೂ, ಬ್ರಹ್ಮನನ್ನು ಬಿಟ್ಟು ಪ್ರಾಣನೂ ಇರಲು ಅಸಮರ್ಥರು ಎಂದ ಮೇಲೆ ಉಳಿದ ದೇವತೆಗಳು ಪ್ರಾಣನನ್ನು ಬಿಟ್ಟು ಇರಲು ಅಸಮರ್ಥರು ಎಂದು ಸುತರಾಂ ಸಿದ್ಧವಾಗುವುದು. ಆದ್ದರಿಂದ ಪ್ರಾಣನು ಎಲ್ಲ ದೇವತೆಗಳಲ್ಲಿ ಶ್ರೇಷ್ಠನೆಂದು ಎಲ್ಲರೂ ತಿಳಿದರು.4

- ಎಲ್ಲ ದೇವತೆಗಳ ಮಧ್ಯದಲ್ಲಿ ಮುಖ್ಯವಾಗಿ ವಾಯುದೇವನೇ ಜ್ಯೇಷ್ಠನು –ವಯಸ್ಸಿ ನಿಂದ ಹಿರಿಯನು, ಶ್ರೇಷ್ಠನು –ಗುಣಗಳಿಂದ ಉತ್ತಮನು. ವಸಿಷ್ಠನು ವಾಸಿಸುವವರ ಮಧ್ಯದಲ್ಲಿ ಶ್ರೇಷ್ಠನು. ಸಂಪತ್ತಿಗೆ ಹಾಗೂ ಆಶ್ರಯಕ್ಕೆ ಕಾರಣನು. ಇಂತಹ ವಾಯು ದೇವನ ಅನುಗ್ರಹದಿಂದಾಗಿಯೇ ಅಗ್ನಿಯು ಅಮುಖ್ಯವಾಗಿ ವಸಿಷ್ಠ ಎನಿಸುವನು. ಸೂರ್ಯನು ಒಳ್ಳೆಯ ಸ್ಥಿತಿಗೆ ಕಾರಣನಾಗಿ ಪ್ರತಿಷ್ಠಾ ಎನಿಸುವನು. ಇಂದ್ರನು ಸಂಪತ್ತಿಗೆ ಕಾರಣನಾಗಿ 'ಸಂಪತ್' ಎನಿಸುವನು. ರುದ್ರನು ಆಶ್ರಯಕ್ಕೆ ಕಾರಣನಾಗಿ 'ಆಯತನ' ಎನಿಸುವನು.5

---

4. ಜ್ಯೇಷ್ಠಃ ಶ್ರೇಷ್ಠೋ ವಸಿಷ್ಠಶ್ಚ ಸಂಪದಾಯತನಂ ತಥಾ ।
ವಾಯುರೇವ ಮಹಾನ್ ತಸ್ಯ ಪ್ರಸಾದಾತ್ ಅಗ್ನಿರೇವ ತು ॥
ಉಪಚಾರತೋ ವಸಿಷ್ಠಃ ಸ್ಯಾತ್ ಪ್ರತಿಷ್ಠೈವಂ ರವಿಸ್ತಥಾ ।
ಸಂಪದಿಂದ್ರಸ್ತಥೈವೋಕ್ತೋ ರುದ್ರ ಆಯತನಂ ತಥಾ ॥
– *ಪ್ರಾಭವೇ [ಛಾಂ.ಉ.ಭಾ. 5-1-10, 11]*

5. ತಸ್ಮಾಚ್ಛ್ರುತ್ವಾ ಪರಂ ಬ್ರಹ್ಮ ದೇವಾ ನಾರಾಯಣಾಭಿಧಮ್ ।
ಶಿಷ್ಯಪ್ರಶಿಷ್ಯಾದಿಷು ಚ ತೇऽನಯನ್ ವಾಯುನೋದಿತಮ್ ।

- 'ದೇವತೆಗಳ ಸ್ತುತಿಯಿಂದ ಪ್ರಸನ್ನನಾದ ವಾಯುದೇವನು ಅವರಿಗೆ ಶ್ರೀಮನ್ನಾರಾಯಣನನ್ನು ಉಪದೇಶಿಸಿದನು. ಅದನ್ನು ಕೇಳಿ ದೇವತೆಗಳು ಶ್ರೀಮನ್ನಾರಾಯಣನನ್ನು ಉಪದೇಶದ ಮೂಲಕ ತಮ್ಮ ಶಿಷ್ಯ ಪ್ರಶಿಷ್ಯಾದಿಗಳಲ್ಲಿ ತಲುಪಿಸಿದರು. ಹಾಗೆಯೇ ವಾಯುದೇವನನ್ನೂ ಅವನ ಯಶಸ್ಸನ್ನೂ ಗುಣಧರ್ಮಗಳನ್ನೂ ಉಪದೇಶಿಸುವ ಮೂಲಕ ತಮ್ಮ ಶಿಷ್ಯ ಪ್ರಶಿಷ್ಯಾದಿಗಳಲ್ಲಿ ತಲುಪಿಸಿದರು. ಯಾರು ಯಾರು ವಾಯುದೇವನ ಗುಣಗಳನ್ನು ತಿಳಿಯುವರೋ ಅವರನ್ನು ವಾಯುದೇವನು ಪ್ರವೇಶಿಸುವನು. ಹೀಗೆ ಅಲ್ಲಲ್ಲಿ ಪ್ರವೇಶಿಸಿರುವುದರಿಂದ ಪ್ರತತ –ಚೆನ್ನಾಗಿ ವ್ಯಾಪ್ತನಾದವನು ಆದನು. ವ್ಯಾಪ್ತನಾದುದರಿಂದ ಅವನಿಗೆ 'ಪ್ರಾತಃ' ಎಂಬ ಹೆಸರು ಬಂದಿದೆ. ವಾಯುದೇವ ಮತ್ತೊಂದು ರೂಪದಿಂದ ಜೀವಚೈತನ್ಯದೊಂದಿಗೆ ಸೇರಿಕೊಂಡಿರುವುದರಿಂದ, ಅವನ ಆ ರೂಪವು 'ಸಾಯಂ' ಎಂದೆನಿಸಿದೆ. ವಾಯುವಿನ ಪ್ರಾಣ ಮತ್ತು ಅಪಾನ ಎಂಬ ಇನ್ನೆರಡು ರೂಪಗಳು ಜೀವರ ಶರೀರಗಳಲ್ಲಿ ಇರುವವು.6

---

ವಾಯುಮಪ್ಯನಯನ್ ಸರ್ವೇ ಯಶಸಾ ತದ್ಗುಣೋಕ್ತಿತಃ ।
ಯೇಯೇ ಗುಣಾನ್ ವಿಜಾನಂತಿ ವಾಯೋಸ್ತಾನಾವಿಶನ್ ಮರುತ್ ।
ತತ್ರ ತತ್ರ ಪ್ರವಿಷ್ಟತ್ವಾತ್ ಪ್ರತತೋಽಸೌ ಬಭೂವ ಹ ।
ಪ್ರತತತ್ವಾತ್ ಪ್ರಾತರಿತಿ ತಸ್ಯ ನಾಮಾಭವದ್ ವಿಭೋಃ ।
ಸಂಗತಶ್ಚಾಭವಜ್ಜೀವಚಿತಾರೂಪಾಂತರೇಣ ಸಃ ।
ಸಂಗತತ್ವಾತ್ ಸಾಯಮಿತಿ ತದ್ರೂಪಂ ನಾಮತೋಽಭವತ್ ।
ವಾಯೋಸ್ತತ್ ಪುನರಧ್ಯಾತ್ಮಂ ಪ್ರಾಣಾಪಾನಾಭಿಧಂ ದ್ವಯಮ್ ।

*– [ಐ.ಉ.ಭಾ. 1-4-11]*

6. ಅಹಂ ಶ್ರೇಯೋ ವಿವಾದಂ ತು ಯೇನ ಕೃತ್ವಾಽಖಿಲಾಃ ಸುರಾಃ ।
ಅಸಮರ್ಥಾಃ ಸ್ವರಕ್ಷಾಯಾಂ ಸ ವಾಯುಃ ಸುರನಾಯಕಃ ॥
ವಿವದಂತೋಽಖಿಲಾ ದೇವಾ ಯಯುರ್ನಾರಾಯಣಂ ಪ್ರಭುಮ್ ।
ಅಹಂ ಶ್ರೇಯೋನಹಂ ಶ್ರೇಯಾನಿತಿ ವಾಯುಪುರಃಸರಾಃ ॥
ಉಕ್ತಂ ಭಗವತಾ ತೇನ ಯೇನ ತ್ಯಕ್ತೇಽಖಿಲಾ ಅಪಿ ।
ಸ್ಥಾತುಂ ನ ಶಕ್ತಾಃ ಸ ಶ್ರೇಯಾನಿತ್ಯುಕ್ತಾಃ ಪುನರಾಗತಾಃ ॥
ಉತ್ಕ್ರಾಂತಾಶ್ಚ ಪುನಃ ಸರ್ವೇ ತದ್ವಿಜ್ಞಪ್ತ್ಯೈ ಪೃಥಕ್ ಪೃಥಕ್ ।
ಸುಪರ್ಣಶೇಷರುದ್ರೇಂದ್ರ ಸೂರ್ಯಾದಿಷು ಪೃಥಕ್ ಪೃಥಕ್ ॥
ಉತ್ಕ್ರಾಂತೇಷು ಬ್ರಹ್ಮದೇಹಾಚ್ಛರೀರಂ ನ ಪಪಾತ ಹ ।
ಋತ ಉತ್ಕ್ರಾಂತಮೇಕಂ ತು ತದನ್ಯೇ ನಿವಸಂತಿ ಚ ॥
ಪ್ರಾಣ ಉಚ್ಚಕ್ರಮಿಷತಿ ಸ್ಥಾತುಂ ನಾಶಕ್ನುವನ್ ಪರೇ ।
ಪ್ರಾಣಂ ವಿನಾ ನಚ ಬ್ರಹ್ಮಾ ತಂ ವಿನಾ ಪ್ರಾಣ ಏವಚ ॥
ಅನ್ಯೋನ್ಯಾಪಾಶ್ರಯಾಚ್ಛಕ್ತೌ ಸ್ಥಾತುಮನ್ಯೇ ಕುತಸ್ತತಃ ।
ತಸ್ಮಾತ್ ಪ್ರಾಣೋ ವರೋ ದೇವೇಷ್ವತಿ ಸರ್ವೇಽಪಿ ಮೇನಿರೇ ॥

*– ಪವಮಾನ [ಬೃ.ಉ.ಭಾ. 8-1, 3]*

- ನಾರಾಯಣನಿಂದ ವೇದಮಾತೆಂಬ ತಂತಿಯಿಂದ ಜಗತ್ತು ಹೇಗೆ ಬಂಧಿಸಲ್ಪಟ್ಟಿದೆಯೋ ಅಂತೆಯೇ ವಾಯುವಿನಿಂದಲೂ ಅವನಿಗಿಂತ ಕನಿಷ್ಠರಾಗಿರುವ ಗರುಡ, ಶೇಷ, ರುದ್ರ, ಇಂದ್ರ, ಸೂರ್ಯ ಮುಂತಾದವರನ್ನೊಳಗೊಂಡ ಜಗತ್ತು ಚೆನ್ನಾಗಿ ಬಂಧಿಸಲ್ಪಟ್ಟಿದೆ.7
- 'ಚತುರ್ಮುಖಾದಿಗಳಿಗೆ ಉಪದೇಶಿಸುವ ಹಂಸರೂಪಿ ವಿಷ್ಣುವನ್ನು ಹೇಗೋ ಹಾಗೆ ಉತ್ತಮವಾದ ನೃಸಿಂಹಾನುಷ್ಟುಪ್ ಮಂತ್ರವನ್ನು ಶಿವಾದಿಗಳಿಗೆ ಉಪದೇಶಿಸುವ ಹಂಸಸ್ವರೂಪಿಯಾದ ವಾಯುವನ್ನು ಮೇಘದಲ್ಲಿ ಮುನಿಗಳು ಕಂಡರು.'8
- 'ಬ್ರಹ್ಮಶರೀರದ ಅಂಗಗಳಿಂದ ಸೃಷ್ಟರಾದ ದೇವತೆಗಳ ಸಮೂಹದಲ್ಲಿ ಭಗವಂತನು ಅಶನಾ ಮತ್ತು ಪಿಪಾಸಾ ಎಂಬ ಎರಡು ರೂಪದ ವಾಯುದೇವನನ್ನು ಪ್ರವೇಶ ಗೊಳಿಸಿದನು..... ಅಶನಾ ಪಿಪಾಸಾಭಿಮಾನಿ ಎರಡು ರೂಪದ ವಾಯುದೇವ 'ನಾವು ನಿನ್ನ ಆಜ್ಞಾನುಸಾರವಾಗಿ ಇರುವಂತೆ ಏನು ಮಾಡಬೇಕೆಂದು ಆದೇಶಿಸು ಎನ್ನಲು ಎಲ್ಲ ದೇವತೆಗಳಲ್ಲೂ ಪ್ರವೇಶಿಸಲು ತಿಳಿಸುವನು. ಆದ್ದರಿಂದ ಎಲ್ಲ ದೇವತೆಗಳ ಹವಿರ್ಭಾಗವನ್ನು ಪ್ರಾಣನಾಮಕನಾದ ವಾಯು ಒಬ್ಬನೇ ಭುಂಜಿಸುವನು. ನಾಭಿ ಯಲ್ಲಿ ಇರುವವನೂ ಅವನೇ. ಅಶನಾ ಪಿಪಾಸಾ ಅಪಾನ ಹಾಗೂ ಮೃತ್ಯು ಎಂಬ ನಾಲ್ಕು ರೂಪಗಳಿಂದ ಮುಖ್ಯಪ್ರಾಣನು ಎಲ್ಲ ದೇವತೆಗಳಲ್ಲಿ ಇರುವನು.9
- ಪ್ರಾಣದೇವನ ಅಧೀನದಲ್ಲಿಯೇ ಇರುವ ಅನ್ನವಸ್ತ್ರಾದಿಗಳನ್ನು ತಮ್ಮ ಸ್ವಾರ್ಥಕ್ಕಾಗಿ ಹೇಗೆ ದೇವತೆಗಳು ಹಿಂದೆ ಸಮರ್ಪಿಸಿರುವರೋ ಹಾಗೆ ಸ್ವತಂತ್ರನಾದ ಭಗವಂತನಿಗೇ ಸೇರಿದ ಅನ್ನ ವಸ್ತ್ರಾದಿಗಳನ್ನು ತಮ್ಮ ಸ್ವಾರ್ಥಕ್ಕಾಗಿ ಭಕ್ತರು ಸಮರ್ಪಿಸುವರು.10

---

7. ತಥೈವ ವಾಯುನಾ ಬದ್ಧಂ ಜಗದೇತತ್ ತತೋಽವರಮ್ ।
ಸುಪರ್ಣಶೇಷಗಿರಿಶಶಕ್ರಸೂರ್ಯಾದ್ಯಮಂಜಸಾ । *– [ಐ.ಉ.ಭಾ. 1-4-14]*

8. ....ಏವಂ ವಾಯುಂ ಚ ದದೃಶುಸ್ತತ್ರ ಹಂಸಸ್ವರೂಪಿಣವಮ್ ।
ಶಿವಾದಿಭ್ಯೋ ವ್ಯಾಹರಂತಂ ತಾಮೇವಾನುಷ್ಟುಭಂ ಪರಾಮ್ ॥
*– [ಐ.ಉ.ಭಾ.2-2-5-2]*

9. '......ತದಾಽಶನಾಪಿಪಾಸಾಖ್ಯಂ ದ್ವಿರೂಪಂ ಮಾರುತಂ ಪುನಃ ।
ತಸ್ಮಿನ್ ದೇವಸಮೂಹೇ ತು ವಿಷ್ಣುಃ ಪ್ರಾವೇಶಯತ್ ಪ್ರಭುಃ ॥
......ಅಶನಾಪಿಪಾಸಾಮಾನೀ ತು ದ್ವಿರೂಪೋ ಮಾರುತೋಽವದತ್ ।
ಕುರ್ವಾಜ್ಞಾಮಾವಯೋಶ್ಚೈವ ಯಥಾ ತ್ವಚ್ಛಾಸನಾನುಗೌ ॥
ನಿತ್ಯಂ ಭವಾವೇತಿ ಹರಿಃ ಸರ್ವತ್ರ ಪ್ರವಿಶೇತ್ಯಮುವ್ ।
ಆಹ ತಸ್ಮಾದ್ ದೇವತಾನಾಂ ಸರ್ವಾಸಾಂ ಭಾಗಭುಙ್ಮರುತ್ ॥
ಏಕ ಏವ ಪ್ರಾಣನಾಮಾ ನಾಭಿಸ್ಥೋಽಪಿ ಸ ಏವ ತು ।
ಅಶನಾ ಪಿಪಾಸಾಽಪಾನಶ್ಚ ಮೃತ್ಯುಶ್ಚೇತಿ ಚತುರ್ವಿಧಃ ।
ಏಕ ಏವ ಮಹಾನ್ ವಾಯುಃ ಸರ್ವದೇವೇಷು ಸಂಸ್ಥಿತಃ ॥ [ಐ.ಉ.ಭಾ. 2-3-2-4]

10. ಸಿದ್ಧಮೇವಾನ್ನವಸ್ತ್ರಾದ್ಯಂ ವಿಷ್ಣೋಃ ಸ್ವಾತಂತ್ರ್ಯತಃ ಸದಾ ।
ಸ್ವಾರ್ಥಂ ಸಮರ್ಪಯೇತ್ ವಿಷ್ಣೌ ಯಥಾ ಪ್ರಾಣೇ ಸುರಾಃ ಪುರಾ ॥
*– ಕರ್ಮಾನುಪೂರ್ವೀ [ಛಾಂ.ಉ.ಭಾ. 5-1-11]*

- ಮನೆಯ ಮೇಲ್ಛಾವಣಿ ಮುಂತಾದವುಗಳಿಗೆ ನಡುವಿನ ಮುಖ್ಯ ತೊಲೆ ಹೇಗೆ ಆಧಾರವೋ ಹಾಗೆ ಇಂದ್ರಿಯಾಭಿಮಾನಿಗಳೇ ಮುಂತಾದ ಎಲ್ಲ ದೇವತೆಗಳಿಗೆ ವಾಯುದೇವನು ಆಶ್ರಯ.11
- ಸಮಸ್ತ ಜಗತ್ತಿಗಿಂತ ಶ್ರೇಷ್ಠನಾಗಿರುವವನು ವಾಯುದೇವ. ಅಂತಹ ವಾಯುದೇವನಿಗಿಂತಲೂ ಉತ್ತಮನಾಗಿರುವವನು ಶ್ರೀವಿಷ್ಣುವು ಎಂಬ ವಿವೇಚನೆಯೊಂದಿಗೆ ವಾಯುದೇವನಲ್ಲಿ ಪರಮಾತ್ಮನನ್ನು ಉಪಾಸನೆ ಮಾಡಿದಲ್ಲಿ ಅದರಿಂದ ಅವನು ಪರಮಸಂತುಷ್ಟನಾಗುವನು. ಹೀಗೆ ಎಲ್ಲ ದೇವತೆಗಳು ವಿಚಾರಮಾಡಿ ದೈತ್ಯರನ್ನು ಗೆಲ್ಲಲು ಪಾಪರಹಿತನಾದ ಮುಖ್ಯಪ್ರಾಣನಲ್ಲಿ ಜನಾರ್ದನನನ್ನು ಉಪಾಸನೆ ಮಾಡಿದರು. ಯಾವಾಗ ದೇವತೆಗಳು ವಾಯುಪುತ್ರನಾದ ನಾಸಿಕಾಭಿಮಾನಿ ವಾಯು, ವಾಗಿಂದ್ರಿಯಾಭಿಮಾನಿ ಅಗ್ನಿ, ಶ್ರವಣೇಂದ್ರಿಯಾಭಿಮಾನಿ ಚಂದ್ರ, ಚಕ್ಷುರಿಂದ್ರಿಯಾಭಿಮಾನಿ ಸೂರ್ಯ, ಮನೋಭಿಮಾನಿ ರುದ್ರ, ಅಹಂಕಾರಾಭಿಮಾನಿ ಶೇಷ ಹಾಗೂ ಚಿತ್ತಾಭಿಮಾನಿ ಗರುಡ ಇವರಲ್ಲಿ ಶ್ರೀಹರಿಯ ಉಪಾಸನೆಗೆ ತೊಡಗಿದರೋ ಆಗ ಅವರನ್ನು ಅಸುರರು ಆಕ್ರಮಿಸಿ ಪಾಪಯುಕ್ತರನ್ನಾಗಿ ಮಾಡಿದರು. ಅದರಿಂದಾಗಿ ಅವರೆಲ್ಲ ದೋಷದೂಷಿತರಾದರು. ಯಾವಾಗ ದೇವತೆಗಳೂ ಶರೀರದಲ್ಲಿರುವ ಹಾಗೂ ಸೂರ್ಯನಲ್ಲಿರುವ ಮುಖ್ಯವಾಯುವಿನಲ್ಲಿ ಉದ್ಗೀಥನಾಮಕ ಶ್ರೀವಿಷ್ಣುವಿನ ಉಪಾಸನೆಯನ್ನು ನಡೆಸಿದರೋ ಆಗ ಅಸುರರು ಮುಖ್ಯಪ್ರಾಣನನ್ನು ಆಕ್ರಮಿಸಲು ಯತ್ನಿಸಿದರು. ಆದರೆ ಆ ಅಸುರರೇ ಮುಖ್ಯಪ್ರಾಣನಿಂದ ಪುಡಿಪುಡಿಯಾದರು. ಹೇಗೆ ಭೇದಿಸಲಾಗದ ಬಂಡೆಗಲ್ಲಿಗೆ ಬಡಿಯಲ್ಪಟ್ಟ ಮಣ್ಣಿನ ಹೆಂಟೆಯು ಪುಡಿಪುಡಿಯಾಗುವುದೋ ಹಾಗೆ. ಶ್ರೀವಿಷ್ಣುವಿನ ಅತ್ಯಂತ ಪ್ರೀತಿಗೆ ಪಾತ್ರವಾದ ಪ್ರತಿಮೆ ಎನಿಸಿರುವ ಮುಖ್ಯಪ್ರಾಣನನ್ನು ತಡವಿದ ಅಸುರರೂ ಪುಡಿಪುಡಿಯಾದರು.

ಆದುದರಿಂದ ಸೂರ್ಯನಲ್ಲಿರುವ ಅಥವಾ ಶರೀರದಲ್ಲಿರುವ ಬಲ ಜ್ಞಾನಸ್ವರೂಪನಾದ, ದಿವ್ಯ ಆಕಾರವುಳ್ಳ, ಪ್ರಕಾಶಮಾನನಾದ ಮುಖ್ಯಪ್ರಾಣನಲ್ಲಿ ಸರ್ವದೇವೋತ್ತಮನಾದ ವಿಷ್ಣುವನ್ನು ಮುಖ್ಯಪ್ರಾಣನಿಗಿಂತಲೂ ಅಧಿಕ ಎಂದು ಉಪಾಸನೆ ನಡೆಸಬೇಕು.

ಇಂದ್ರ, ಬೃಹಸ್ಪತಿ, ಶಂಭು ಮೊದಲಾದ ನಾಮಗಳು ಮುಖ್ಯಪ್ರಾಣನಿಗೆ ವಾಚಕಗಳಾಗಿವೆ. ಮುಖ್ಯಪ್ರಾಣವಾಚಕಗಳಾದ ಈ ಎಲ್ಲ ನಾಮಗಳಾದರೂ ಮುಖ್ಯವಾಗಿ ವಿಷ್ಣುವಾಚಕಗಳಾಗಿವೆ. ಆದ್ದರಿಂದ ದೇವತೆಗಳು ಮುಖ್ಯಪ್ರಾಣಪ್ರತೀಕದಲ್ಲಿ ಶ್ರೀವಿಷ್ಣುವನ್ನು ಉದ್ಗೀಥನಾಮಕನನ್ನಾಗಿ ಉಪಾಸನೆ ನಡೆಸಿದ ಫಲವಾಗಿ ತಮ್ಮ ತಮ್ಮ ನಾಮಗಳನ್ನು ಪಡೆದರು.12

---

11. ಗೃಹಸ್ಯಾಚ್ಛಾದನಾದೀನಾಂ ಮಧ್ಯವಂಶೋ ಯಥಾಽಶ್ರಯಃ ।
ತಥೇಂದ್ರಿಯಾಭಿಮಾನ್ಯಾದಿದೇವಾನಾಂ ವಾಯುರಾಶ್ರಯಃ ।
*– [ಐ.ಉ.ಭಾ. 2-8-1-1]*

12. ಯಸ್ಮಾದ್ ವಾಯೌ ಸ್ಮೃತೋ ವಿಷ್ಣುರ್ವಾಯೋರ್ಮುಖ್ಯತಯೋಽಖಿಲಾತ್ ।
ಸ್ವಸ್ಯ ಮುಖ್ಯತಯಾ ತಸ್ಮಾತ್ ಪರಾಂ ತುಷ್ಟಿಂ ಗಮಿಷ್ಯತಿ ॥

- ಸಂಖ್ಯಾಬಲವಿದ್ದುದರಿಂದಲೂ ರುದ್ರನ ವರಬಲವಿದ್ದುದರಿಂದಲೂ ದೈತ್ಯರಿಂದ ಸೋಲಿಸಲ್ಪಟ್ಟ ದೇವತೆಗಳು ಯಜ್ಞದಿಂದ ವಿಷ್ಣುವನ್ನು ಆರಾಧಿಸಿ, ಅದರಲ್ಲಿ ಉದ್ಗಾತೃವಿನ ಸಾಮರ್ಥ್ಯದಿಂದ ಅಸುರರನ್ನು ಗೆಲ್ಲೋಣ ಎಂದು ಯೋಚಿಸಿದರು. ಅಗ್ನಿ ಮುಂತಾದ ದೇವತೆಗಳನ್ನು ಉದ್ಗಾತೃ ಆಗುವಂತೆ ಕೇಳಿಕೊಂಡರು. ಅದರಂತೆ ಅಗ್ನಿ ಮುಂತಾದ ದೇವತೆಗಳು ಇಂದ್ರ ರುದ್ರರೂ ಉದ್ಗಾತೃಗಳಾಗಿ ಸಾಮಗಾನ ನಡೆಸಲು ಅಸುರರು ಅವರನ್ನು ಆಕ್ರಮಿಸಿ ಪಾಪಕಲುಷಿತರನ್ನಾಗಿ ಮಾಡಿದರು. ಆಗ ದೇವತೆಗಳು ಮುಖ್ಯಪ್ರಾಣನನ್ನು ಕೇಳಿಕೊಂಡರು. ಮುಖ್ಯಪ್ರಾಣ ಉದ್ಗಾತೃ ಆಗಿ ಸಾಮಗಾನ ನಡೆಸಲು ಆ ದೈತ್ಯರು ಅವನನ್ನೂ ಆಕ್ರಮಿಸಿ ಪಾಪಕಲುಷಿತನನ್ನಾಗಿಸಲು ತೊಡಗಿದರು. ಆದರೆ ಅವನ ಮೇಲೆ ಎರಗಿದ ದೈತ್ಯರು ಮಣ್ಣಿನ ಹೆಂಟೆಯು ವಜ್ರಶಿಲೆಯ ಮೇಲೆ ಅಪ್ಪಳಿಸಿ ಪುಡಿಪುಡಿಯಾಗುವಂತೆ ನುಚ್ಚುನೂರಾಗಿ ನಶಿಸಿದರು. ಆದುದರಿಂದ ಮುಖ್ಯಪ್ರಾಣನು ಅಖಂಡಶಕ್ತಿಸಂಪನ್ನ ಎಂದು ಶಾಸ್ತ್ರದಲ್ಲಿ ಸಾರಲ್ಪಡುವನು.13

---

ಅತೋ ವಿಚಾರ್ಯ ಸಕಲೈರ್ದೇವೈಃ ಪ್ರಾಣೇ ಜನಾರ್ದನಃ ।
ಉಪಾಸಿತೋ ದೈತ್ಯಜಯಕಾರಣಾತ್ ಪಾಪವರ್ಜಿತೇ ॥
ವಾಯುಪುತ್ರಂ ಚ ನಾಸಿಕ್ಯಮಗ್ನಿಂ ವಾಗಾತ್ಮಕಂ ತಥಾ ।
ಸೋಮಂ ಶ್ರೋತ್ರಾತ್ಮಕಂ ಚೈವ ಸೂರ್ಯಂ ಚಕ್ಷುಃ ಸ್ವರೂಪಿಣಮ್ ॥
ರುದ್ರಂ ಮನಃಸ್ವರೂಪಂ ಚ ಶೇಷಂ ಚಾಹಂ ಸ್ವರೂಪಿಣಮ್ ।
ಚಿತ್ತಾತ್ಮಕಂ ಚ ಗರುಡಂ ವಾಮೇನ ವಿವಿಧುಃ ಸುರಾನ್ ॥
ಅಸುರಾಸ್ತೈರ್ಯತೋ ವಿದ್ಧಾಸ್ತಸ್ಮಾತ್ ತೇ ದೋಷಯೋಗಿನಃ ।
ಮುಖ್ಯವಾಯೌ ಯದಾ ದೇವಾಃ ಶರೀರಸ್ಥೇ ಚ ಸೂರ್ಯಗೇ ॥
ವಿಷ್ಣುಮುದ್ಗೀಥನಾಮಾನಂ ತದಾ ತಂ ಚ ವಿದಧ್ವಸುಃ ।
ಯದಾ ವಿದಧ್ವಸುಃ ಪ್ರಾಣಂ ವಿಧ್ವಸ್ತಾಸ್ತೇ ತದಾಽಸುರಾಃ ॥
ಅಖನ್ಯಾಶ್ಮಾನಮೇವಾಪ್ಯ ಲೋಷ್ಟೋ ವಿಧ್ವಂಸತೇ ಯಥಾ ।
ಪ್ರತಿಮಾಂ ಪ್ರೇಯಸೀಂ ಪ್ರಾಪ್ಯ ವಿಷ್ಣೋಃ ಪ್ರಾಣಂ ತಥಾಽಸುರಾಃ ॥
ತಸ್ಮಾದಾದಿತ್ಯಸಂಸ್ಥೇ ವಾ ಶರೀರಸ್ಥೇಽಪಿ ವಾಽನಿಲೇ ।
ಬಲಜ್ಞಾನಾತ್ಮಕೇ ದಿವ್ಯಾಕೃತಿಮತ್ಯುಜ್ಜ್ವಲಾತ್ಮನಿ ॥
ಸರ್ವದೇವೋತ್ತಮಂ ವಿಷ್ಣುಮುಪಾಸೀತ ತತೋಽಧಿಕಮ್ ।
ಅಸ್ಯೋಪಾಸನಯಾ ದೇವಾಃ ಸರ್ವೇ ನಾಮಾನಿ ಭೇಜಿರೇ ॥
ಇಂದ್ರೋ ಬೃಹಸ್ಪತಿಃ ಶಂಭುರಿತ್ಯಾದ್ಯಾಃ ಪ್ರಾಣಗಾ ಯತಃ ।
ಪ್ರಾಣಸ್ಯ ನಾಮಶಬ್ದಾಶ್ಚ ಮುಖ್ಯತೋ ವಿಷ್ಣುಸಂಸ್ಥಿತಾಃ ॥

*– ಪ್ರಧ್ಯಾನೇ [ಛಾಂ.ಉ.ಭಾ. 1-2-1]*

13. .....ಬಹುತ್ವಾತ್ ತೈರ್ಜಿತಾ ದೇವಾಃ ಶಂಕರಸ್ಯ ವರೇಣ ಚ ।
ಯಜ್ಞೇನ ವಿಷ್ಣುಮಭ್ಯರ್ಚ್ಯ ತತ್ರೋದ್ಗಾತೃಬಲೇನ ಚ ॥
ಜಯಾಮೈತಾನಿತಿ ಸ್ಮೃತ್ವಾ ವಹ್ನ್ಯಾದೀನಪ್ಯಚೂಚುದನ್ ।

ಮಕ್ಕಳೇ, ಭಗವದಿಚ್ಛಾನುಸಾರವಾಗಿ ಸ್ವೇಚ್ಛೆಯಿಂದಲೇ ಎಂದಾದರೂ ತನ್ನ ಶಕ್ತಿ ಕುಂಠಿತವಾದಂತೆ ತೋರಿಸಬಹುದೇ ಹೊರತು ಬೇರೆ ಯಾರ ವರಗಳಿಂದಾಗಲೀ, ಶಾಪ ಗಳಿಂದಾಗಲೀ ಇವನ ಶಕ್ತಿಗೆ ತಡೆ ಉಂಟಾಗಲಾರದು. ಮುಖ್ಯಪ್ರಾಣನ ಈ ಮಹಿಮೆ ಯನ್ನು ತಿಳಿಯುವವನೂ ಕೂಡಾ ಪಾಪಗಳಿಂದಲೂ ಶತ್ರುಗಳಿಂದಲೂ ಬಿಡುಗಡೆ ಹೊಂದುವನು.

- ವಾಸುದೇವನ ಅನುಗ್ರಹವನ್ನು ಆಶ್ರಯಿಸಿಕೊಂಡಿರುವ ಮುಖ್ಯಪ್ರಾಣನು ರುದ್ರ, ಇಂದ್ರ ಮೊದಲಾದ ದೇವತೆಗಳಿಂದ ಪಾಪದ ಸಮೂಹವನ್ನು ಬಿಡಿಸಿದ ಬಳಿಕ ಅದನ್ನು ದಿಕ್ಕುಗಳ ಕೊನೆಯಲ್ಲಿ ಎಸೆದನು. ಆ ದೇವತೆಗಳನ್ನು ಹೀಗೆ ಮೃತ್ಯುವಿನಿಂದ ಬಿಡಿಸಿ ಊರ್ಧ್ವಲೋಕಗಳಿಗೆ ಕರೆದುಕೊಂಡು ಹೋದನು. ಆದ್ದರಿಂದ ಅಗ್ನಿ, ನಾಸಿಕ್ಯವಾಯು, ಇಂದ್ರಾದಿ ಸಕಲದಿಕ್ಪಾಲಕರು, ಸೂರ್ಯ, ಚಂದ್ರ ಮತ್ತು ರುದ್ರರೂ ಮುಖ್ಯಪ್ರಾಣನ ಅನುಗ್ರಹದಿಂದಲೇ ತಮ್ಮ ತಮ್ಮ ಪದವಿಗಳಲ್ಲಿ ಇರುವರು.14

- ದೇವತೆಗಳು ಉದ್ಗೀಥನಾಮಕ ವಿಷ್ಣುವನ್ನು ಚೆನ್ನಾಗಿ ಉಪಾಸನೆ ನಡೆಸಿಯೇ ಅವನನ್ನು ತಮ್ಮಲ್ಲಿ ತಂದುಕೊಂಡರು. ಆದರೂ ಅವನು ಪ್ರಾಣಪ್ರತೀಕದಲ್ಲಿ ಉಪಾಸಿಸಲ್ಪಟ್ಟಿದ್ದ ರಿಂದಲೇ ಅವರ ಬಗ್ಗೆ ಪ್ರೀತನಾದನು.15

---

ಔದ್ಗಾತ್ರೇಽಗ್ನಿಮುಖಾಃ ಸರ್ವೇ ಇಂದ್ರರುದ್ರೌ ಚ ವೇಧಿತೌ ॥
ಅಸುರೈಃ ಪಾಪಪೂಗೇನ ಮುಖ್ಯವಾಯುಂ ತತೋಽಬ್ರುವನ್ ।
ದೈತ್ಯಾಸ್ತಂ ವೇದ್ಧುಮೀಪ್ಸಂತೋ ಧ್ವಸ್ತಾ ನೇಶುಶ್ಚ ಸರ್ವತಃ ॥
ಪಾಂಸುಪಿಂಡೊ ಯಥಾ ವಜ್ರಶಿಲಾಂ ಪ್ರಾಪ್ಯೈವ ನಶ್ಯತಿ ।
ತಸ್ಮಾದಖಂಡಶಕ್ತಿಃ ಸ ಮುಖ್ಯವಾಯುರುದಾಹೃತಃ ॥
ಶಾಪೈರಪಿ ವರೈರ್ವಾಪಿ ನಾಸ್ಯ ಪ್ರತಿಹತಿರ್ಭವೇತ್ ।
ಸ್ವೇಚ್ಛಯೈವಾನುಸಾರೇಣ ವಿನಾ ಕುತ್ರಾಪಿ ಪುತ್ರಕಾಃ ।
ಏವಂ ವಿದಪಿ ಪಾಪೇಭ್ಯಃ ಶತ್ರುಭ್ಯೋಽಪಿ ಪ್ರಮುಚ್ಯತೇ ॥
*– [ಬೃ.ಉ.ಭಾ. 3-3-.....16]*

14. ಸ ವಾಯೂ ರುದ್ರಶಕ್ರಾದೇರ್ವಾಸುದೇವಬಲಾಶ್ರಯಃ ।
ವಿಮೋಚ್ಯ ಪಾಪಸಂಘಾತಾನ್ ದಿಶಾಮಂತೇಷ್ವಕ್ಷಿಪತ್ ॥
ಉನ್ಮುಚ್ಯ ಮೃತ್ಯೋಸ್ತಾಂಶ್ಚೈವಾಥೋರ್ಧ್ವಲೋಕೇಷು ಚಾವಹತ್ ।
ಅಗ್ನಿರ್ನಾಸಿಕ್ಯವಾಯುಶ್ಚ ದಿಕ್ಪಾ ಇಂದ್ರಾದಯೋಽಖಿಲಾಃ ।
ಸೂರ್ಯಃ ಸೋಮಶ್ಚ ರುದ್ರಶ್ಚ ತೇನೈವ ಸ್ವಪದೇ ಸ್ಥಿತಾಃ ॥
*– [ಬೃ.ಉ.ಭಾ. 3-3-1.....16]*

15. ಉದ್ಗೀಥಾಖ್ಯಂ ಪರಂ ವಿಷ್ಣುಮುಪಾಸ್ಯಾಽಽಜಹ್ರುರಂಜಸಾ ।
ತಥಾಽಪಿ ಪ್ರಾಣ ಏವಾಸೌ ಪ್ರೀತಿಮಾಗಾದುಪಾಸಿತಃ ॥ *– [ಬೃ.ಉ.ಭಾ. 3-3-1-16]*

- ಸರ್ವಭಕ್ಷಕನಾಗಿರುವುದರಿಂದ 'ಅತ್' ಎನಿಸುವ ವಾಯುದೇವನಿಂದ ಪ್ರೇರಿಸಲ್ಪಡುವ ಸರಸ್ವತಿಯು 'ಅನ್ನ' ಎನಿಸುವಳು. ಅಂತಹ ಸರಸ್ವತಿಯು, ಯಾವಾಗಲೂ ಸಂಚರಿಸುತ್ತಿರುವುದರಿಂದ 'ಯಯಿ' ಎನಿಸುವ ವಾಯುದೇವನಿಗೆ ವಿಶೇಷವಾಗಿ ಅಧೀನಳಾಗಿರುವುದರಿಂದ 'ಯಾಯಾ' ಎನಿಸುವಳು.16

- ವಾಯುದೇವ ಎಲ್ಲ ದೇವತೆಗಳನ್ನು ಸಂಹರಿಸುವುದರಿಂದ 'ಸಂವರ್ಗ' ಎನಿಸುವನು. ಭಗವಂತನನ್ನು ಹೊರತುಪಡಿಸಿ ಬೇರೆ ಯಾರೂ ವಾಯುದೇವನನ್ನು ಸಂಹರಿಸುವವರಿಲ್ಲ. ಅವನು ಮಾತ್ರ ಎಲ್ಲ ದೇವತೆಗಳನ್ನೂ ಸಂಹರಿಸುವನು. ಇದು ಅವನ ದೊಡ್ಡ ಮಹಿಮೆ.17

- ಸ್ತ್ರೀಗುಣಗಳಿಂದ ಪೂರ್ಣಳಾಗಿರುವುದರಿಂದ 'ಬೃಹತೀ' ಎನಿಸಿರುವ ಸರಸ್ವತಿಯ ಪತಿಯಾಗಿರುವುದರಿಂದ ವಾಯುದೇವ 'ಬೃಹಸ್ಪತಿ' ಎಂದೂ, ಅನಂತ ವೇದಾಭಿಮಾನಿನಿಯಾಗಿರುವುದರಿಂದ ಹಾಗೂ ವಿಷ್ಣುವಿನ ಪೂರ್ಣ ಸನ್ನಿಧಾನಪಾತ್ರಳಾಗಿರುವುದರಿಂದ 'ಬ್ರಹ್ಮ' ಎನಿಸಿರುವ ಸರಸ್ವತಿಯ ಪತಿಯಾಗಿರುವುದರಿಂದ ವಾಯುದೇವ 'ಬ್ರಹ್ಮಣಸ್ಪತಿ' ಎಂದೂ ಕರೆಸಿಕೊಳ್ಳಲ್ಪಡುವನು.18

- ಸ್ತ್ರೀಯರಲ್ಲಿ ಶ್ರೇಷ್ಠಳಾದುದರಿಂದ 'ಸಾ' ಎಂದೂ, ಸಾಮವೇದಾಭಿಮಾನಿನಿಯಾಗಿರುವುದರಿಂದ 'ಗೀಥಾ' ಎಂದೂ ಕರೆಸಿಕೊಳ್ಳಲ್ಪಡುವ ಭಾರತೀದೇವಿಯಿಂದ ಕೂಡಿದ್ದು ಅರ್ಧನಾರೀನರರೂಪನಾದ ವಾಯುವು ಕೆಲವೆಡೆ 'ಸಾಮ' ಎಂದೂ ಮತ್ತೆ ಕೆಲವೆಡೆ ಉದ್ಗೀಥ ಎಂದೂ ಹೇಳಲ್ಪಡುವನು.19

- ಸಮರ್ಥನಾದ ಆ ವಾಯು ಸಂಪೂರ್ಣರಾದ, ಅಂದರೆ ದೇವಾದಿಚೇತನರ ಎಂಟು ಗುಂಪುಗಳಲ್ಲಿ ಹೆಚ್ಚು ಪೂರ್ಣರಾದ ಗರುಡ, ರುದ್ರ, ಶೇಷ, ಇಂದ್ರ ಮತ್ತು ಅವರ ಪತ್ನಿಯರು ಎಂಬ ಎಂಟು ಮಂದಿ ದೇವತೆಗಳನ್ನು ತಾನೇ ವಶದಲ್ಲಿಟ್ಟುಕೊಂಡು

---

16. ಯಯಿರ್ನಿತ್ಯಗತೇರ್ವಾಯುಸ್ತದ್ಗಾ ಯಾಯಾ ಸರಸ್ವತೀ ।
ಸೈವಾನ್ನದೇವತಾ ಪ್ರೋಕ್ತಾ ಯಾತ್ತಾ ಪ್ರಾಣೇನ ನೀಯತೇ ॥
*– ಮಾಹಾತ್ಮ್ಯೇ [ಛಾಂ.ಉ.ಭಾ. 1-3-17]*

17. ಸಂವೃಂಕ್ತೇ ಸರ್ವದೇವಾನ್ ಯದ್ ವಾಯುಃ ಸಂವರ್ಗ ಈರಿತಃ ।
ಮಹಿಮಾಸ್ಯ ಮಹಾನೇಷ ಯದನಾದ್ಯೋಽತ್ತಿ ದೇವತಾಃ ॥
*– ಪ್ರಭಂಜನೇ [ಛಾಂ.ಉ.ಭಾ. 4-1-4]*

18. ಸ್ತ್ರೀಗುಣೈಃ ಸರ್ವಪೂರ್ಣತ್ವಾದ್ ಬೃಹತೀ ತು ಸರಸ್ವತೀ ।
ಅನಂತವೇದರೂಪತ್ವಾತ್ ಸೈವ ಬ್ರಹ್ಮೇತಿ ಕೀರ್ತಿತಾ ।
ವಿಷ್ಣುನಾ ಬೃಂಹಿತತ್ವಾದ್ವಾ ತತ್ಪತಿರ್ವಾಯುರೀಶ್ವರಃ ॥ *–[ಬೃ.ಉ.ಭಾ. 3-3-20]*

19. ಸಾರತ್ವಾತ್ ಸ್ತ್ರೀಷು ಸಾ ದೇವೀ ಸೇತ್ಯುಕ್ತಾ ಸಾಮರೂಪತಃ ।
ಗೀಥೇತ್ಯುಕ್ತಾ ತದುದ್ಗೀಥ ಸಾಮಾಖ್ಯೋಽರ್ಥತನುಸ್ತಯಾ ।
ಅರ್ಧನಾರೀನರವಪುರ್ವಾಯುಃ ಕುತ್ರಚಿದೀರಿತಃ ॥ *–[ಬೃ.ಉ.ಭಾ. 3-3-23]*

ಪ್ರೇರಣೆ ಮಾಡುತ್ತಾನೆ. ಉನ್ನತಿಯನ್ನು ನೀಡುತ್ತಾನೆ. ಆದ್ದರಿಂದ ಅವನಿಗೆ ಸಮಷ್ಟಿ ಎಂಬ ಹೆಸರೂ ಇದೆ.20

ಮೂವತ್ತಮೂರು ದೇವತೆಗಳಲ್ಲಿ ಆರು ದೇವತೆಗಳನ್ನು ವಸುಗಳೆಂದು ಹೆಸರಿಸಿ, ಅವರಲ್ಲಿ ಒಬ್ಬನನ್ನಾಗಿ ವಾಯುದೇವನನ್ನೂ ಉಲ್ಲೇಖಿಸಿದ ಹಿನ್ನೆಲೆಯಲ್ಲಿ ಸರ್ವಜ್ಞನಾಗಿರುವುದರಿಂದ, ಆಯುಷ್ಯವನ್ನು ಕೊಡುವವನೂ ಆಗಿರುವುದರಿಂದ 'ವಾಯು' ಎನಿಸುವ ಮುಖ್ಯಪ್ರಾಣ ಎಂಟು 'ವಸುಗಳಲ್ಲಿ' ಒಬ್ಬನಾಗಿ ಗುರುತಿಸಲ್ಪಟ್ಟಿದ್ದು, ಜಗತ್ತನ್ನು ತನ್ನಲ್ಲಿ ನೆಲೆಸುವಂತೆ ಮಾಡಿರುವುದರಿಂದ ವಸು ಎನಿಸುವ ಅವನಲ್ಲಿ ಜ್ಞಾನವೇ ಮುಂತಾದ ಆರು ಗುಣಗಳು ಇತರ ದೇವತೆಗಳಿಗಿಂತ ಅಧಿಕವಾಗಿ ಇದೆ.21

- ಶ್ರೇಷ್ಠ ದೇವತೆಗಳೆಂದು ಪರಿಗಣಿತರಾದವರಲ್ಲಿ ಶ್ರೇಷ್ಠರೆಂದು ಗುರುತಿಸಲ್ಪಟ್ಟ ಮೂವರಲ್ಲಿ ವಾಯು ಮೊದಲಿಗನಾಗಿ ಹೆಸರಿಸಲ್ಪಟ್ಟಿರುವನು. ಜ್ಞಾನರೂಪಿಯಾಗಿರುವುದರಿಂದಲೂ, ತನ್ನ ಪತ್ನಿ ಭಾರತೀದೇವಿಗೆ ಆಶ್ರಯನಾಗಿರುವುದರಿಂದಲೂ 'ಲೋಕ' ಎಂದು ಹೇಳಲ್ಪಟ್ಟಿರುವನು. ಬ್ರಹ್ಮವಾಯುಗಳ ಪದವಿ ಒಂದೇ ಆಗಿರುವುದರಿಂದ ಚತುರ್ಮುಖಬ್ರಹ್ಮನನ್ನು ಬೇರೆಯಾಗಿ ಉಲ್ಲೇಖಿಸಲಾಗಲಿಲ್ಲ. ಶ್ರೇಷ್ಠರೆಂದು ಪರಿಗಣಿತರಾದ ಮೂವರಲ್ಲೂ ಶ್ರೇಷ್ಠರೆಂದು ಗುರುತಿಸಲ್ಪಟ್ಟವರು ವಾಯುದೇವ ಹಾಗೂ ಅವನ ಪತ್ನಿ ಶ್ರದ್ಧೆ.22
- ಸ್ವಾಯಂಭುವಮನುವಿಗೆ ನಿಯಾಮಕದೇವತೆಯಾಗಿ 'ಅಮೃತ' ಶಬ್ದದಿಂದ ಹೇಳಲ್ಪಟ್ಟವನು ವಾಯುದೇವ.23

---

20. ಸಂಪೂರ್ಣಾಂಶ್ಚ ಸುಪರ್ಣೇಶ ಶೇಷೇಂದ್ರಾನ್ ತತ್ಸ್ತ್ರಿಯೋಽಪಿ ಚ ।
ಅಷ್ಟೌ ನಯತ್ಯನ್ಯಯತಿ ವಶೀಕೃತ್ಯ ಸ್ವಯಂ ಪ್ರಭುಃ ।
ಅತೋ ವ್ಯಷ್ಟಿಃ ಸಮಷ್ಟಿಶ್ಚ ವಾಯುರೇವಾಭಿಧೀಯತೇ ॥
*– ಪರಮಸಂಹಿತಾ [ಬೃ.ಉ.ಭಾ. 5-3-2]*

21. ಸರ್ವಜ್ಞಾನಾತ್ ತಥಾಽಯುಷ್ಟ್ವಾತ್ ಸೂತ್ರಾತ್ಮಾ ವಾಯುರುಚ್ಯತೇ ।
....ವಾಸಯಂತಿ ಜಗದ್ಯಸ್ಮಾದೇತೇಽಷ್ಟೌ ವಸವಃ ಸ್ಮೃತಾಃ ॥
....ಜ್ಞಾನಾದಿ ಷಡ್ಗುಣಾಃ ಷಟ್ಸು ತದನ್ಯೇಭ್ಯೋಽಧಿಕಾ ಯತಃ ।
ವಸುಷ್ವಪಿ ಚತ ಏವೋಚ್ಯಾವೀಂದ್ರಾದ್ಯಾಃ ಪೂರ್ವಕೀರ್ತಿತಾಃ ॥
*– ಮಹಾಮೀಮಾಂಸಾ [ಬೃ.ಉ.ಭಾ. 5-9-3]*

22. ಷಟ್ಸು ಪ್ರಧಾನಾಸ್ತ್ರಿಸ್ರೋ ಹಿ ವಾಯುವೀಂದ್ರಮಹೇಶ್ವರಾಃ ।
ಸ್ವಭಾರ್ಯಾಣಾಂ ಸ್ವಾಶ್ರಯತ್ವಾತ್ ತೇ ಲೋಕಾ ಜ್ಞಾನರೂಪತಃ ॥
ಪದೈಕ್ಯಾದ್ ಬ್ರಹ್ಮವಾಯ್ವೋಸ್ತು..... ನೈವೋಕ್ತಿಃ ಪೃಥಕ್ ಶ್ರದ್ಧಾ ಚ ಮಾರುತಃ ।
ದ್ವೌ ದೇವಾವಿತಿ ಸಂಪ್ರೋಕ್ತೌ.... ॥
*– ಮಹಾಮೀಮಾಂಸಾ [ಬೃ.ಉ.ಭಾ. 5-9-8]*

23. ಅಮೃತಂ ವಾಯುರುದ್ದಿಷ್ಟಃ..... ॥ *– [ಬೃ.ಉ.ಭಾ. 5-9-10]*

- ಸೂರ್ಯನಿಗೆ ನಿಯಾಮಕದೇವತೆಯಾಗಿ 'ಅಸು' ಶಬ್ದದಿಂದ ಹೇಳಲ್ಪಟ್ಟವನು ಜೀವನ ಒಳಗಿರುವ ರೂಪದ ವಾಯುದೇವ.24
- ಲೋಕವನ್ನು ವ್ಯಾಪಿಸಿರುವ ವಾಯುವು ದೇವತೆಗಳ ನಿಯಾಮಕ.25
- ಇಂದ್ರನೇ ವಾಯು ನಿನಗೆ ಸ್ವಾಮಿ26
- ಇಂದ್ರ ಎನಿಸುವ ವಾಯುದೇವನೇ ದೇವತೆಗಳ ಮಧ್ಯದಲ್ಲಿ ಹೆಚ್ಚು ಶಕ್ತಿಸಂಪನ್ನ.27
- ಮುಖ್ಯಪ್ರಾಣನನ್ನು ಈ ಏಳು ದೇವತೆಗಳು ಉಪಾಸನೆ ಮಾಡುವರು.28
- ಕಣ್ಣಿನಲ್ಲಿರುವ ಕೆಂಪು ರೇಖೆಯನ್ನು ಆಶ್ರಯಿಸಿ ರುದ್ರನು ಮುಖ್ಯಪ್ರಾಣನನ್ನು ಉಪಾಸಿಸುವನು. ಕಣ್ಣಿನಲ್ಲಿರುವ ಬಿಳಿಯಾದ ಸ್ಥಳವನ್ನು ಆಶ್ರಯಿಸಿ ಇಂದ್ರನು ಮುಖ್ಯಪ್ರಾಣನನ್ನು ಉಪಾಸಿಸುವನು.29
- ಅಶ್ವಮೇಧಯಾಗಗಳಲ್ಲಿ ಶ್ರೇಷ್ಠವಾಗಿರುವಂತೆ ಜ್ಯೋತಿಗಳಲ್ಲಿ ಸೂರ್ಯನು ಶ್ರೇಷ್ಠ ಆಗಿರುವಂತೆ ಎರಡು ಕಾಲುಗಳುಳ್ಳ ಪ್ರಾಣಿಗಳಲ್ಲಿ ಬ್ರಾಹ್ಮಣನು ಶ್ರೇಷ್ಠವಾಗಿರುವಂತೆ ರುದ್ರಾದಿದೇವತೆಗಳಲ್ಲಿ ವಾಯುದೇವನು ಶ್ರೇಷ್ಠ.30
- ವರುಣಾದಿದೇವತೆಗಳು ವಾಯುದೇವರ ಪ್ರೀತಿಗಾಗಿ ಯಾಗವನ್ನು ಮಾಡಿದರು.31
- ದೇವತೆಗಳಿಗೆ ಸ್ತುತ್ಯ ವಾಯುದೇವನಾದರೆ, ಅಂತಹ ವಾಯುದೇವನಿಗೂ ಸ್ತುತ್ಯ ಶ್ರೀಹರಿ.32

---

24. ಅಂತರ್ಗತೇನ ರೂಪೇಣ ವಾಯುರೇವ ತ್ವಸುಃ ಸ್ಮೃತಃ । – *[ಬೃ.ಉ.ಭಾ. 5-9-15]*
25. ಆತ್ಮಾ ದೇವಾನಾಂ ಭುವನಸ್ಯ ಗರ್ಭಃ । – *[ಬೃ.ಉ.ಭಾ. 5-9-8]*
26. ಆತ್ಮಾ ತೇ ವಾತಃ । – *[ಬೃ.ಉ.ಭಾ. 5-9-8]*
27. ಇಂದ್ರೋ ವೈ ದೇವಾನಾಮೋಜಿಷ್ಠಃ । – *[ಬೃ.ಉ.ಭಾ. 5-9-8]*
28. ತಮೇತಾಃ ಸಪ್ತಾಕ್ಷಿತಯ ಉಪತಿಷ್ಠಂತೇ । – *[ಬೃ.ಉ.ಭಾ. 5-9-8]*
29. ತದ್ ಯಾ ಇಮಾ ಅಕ್ಷನ್ ಲೋಹಿನ್ಯೋ ರಾಜಯಸ್ತಾಭಿರೇನಂ ರುದ್ರೋऽನ್ವಾಯತ್ತೋ ಯಚ್ಚಕ್ಷಂ ತೇನೇಂದ್ರಃ – *[ಬೃ.ಉ.ಭಾ. 5-9-8]*
30. ಅಶ್ವಮೇಧಃ ಕ್ರತುಶ್ರೇಷ್ಠೋ ಜ್ಯೋತಿಃಶ್ರೇಷ್ಠೋ ದಿವಾಕರಃ ।
    ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ದೇವಶ್ರೇಷ್ಠಸ್ತು ಮಾರುತಃ ॥
    – *[ಬೃ.ಉ.ಭಾ. 5-9-8]*
31. ಕ್ರತುಂ ಸಚಂತ ಮಾರುತಸ್ಯ ವೇಧಸಃ । – *[ಬೃ.ಉ.ಭಾ. 5-9-8]*
32. ದೇವಾನಾಂ ದೇವತಾ ವಾಯುರ್ವಾಯೋರ್ದೇವೋ ಜನಾರ್ದನಃ ।
    – *[ಬೃ.ಉ.ಭಾ. 5-9-8]*

- ಅಪಾನ ಎನಿಸುವ ಭಾರತಿಗೆ ವ್ಯಾನ ಎನಿಸುವ ವಾಯುದೇವ ಆಶ್ರಯ. ವಾಯುದೇವ ವಿಶಿಷ್ಟ ರೀತಿಯಲ್ಲಿ ಪ್ರೇರಿಸುವುದರಿಂದ ವ್ಯಾ ಎನಿಸಿರುವನು. ಅಂತಹ ವ್ಯಾನನಿಗೆ ಉದಾನ ಎನಿಸುವ ಲಕ್ಷ್ಮೀದೇವಿ ಆಶ್ರಯಳು. ಚೆನ್ನಾಗಿ ಊರ್ಧ್ವಲೋಕಗಳಿಗೆ ಕರೆ ದೊಯ್ಯುವುದರಿಂದ ಲಕ್ಷ್ಮೀದೇವಿ ಉದಾನ ಎನಿಸುವಳು.33
- ಸರಸ್ವತಿ ಹಸುವಿನ ರೂಪವುಳ್ಳವಳು. ವಾಯುದೇವ ಅವಳ ಪತಿ ಎತ್ತಿನ ರೂಪದಲ್ಲಿ ಇರುವನು.34
- ಪರಮಾತ್ಮನಿಗೆ ಮುಖ್ಯಪ್ರಾಣನು ಪ್ರತಿಬಿಂಬನು. ಅವನಿಗೆ ಇತರ ಕಲಾದೇವತೆಗಳಾದ ಶ್ರದ್ಧಾದಿಗಳು ಕ್ರಮವಾಗಿ ಪ್ರತಿಬಿಂಬರು. ಅವರಿಗೆ ಇತರ ದೇವತೆಗಳು ಪ್ರತಿಬಿಂಬರು. ದೇವತೆಗಳಿಗೆ ಮನುಷ್ಯ ಮುಂತಾದವರು ಪ್ರತಿಬಿಂಬರು. ಆದುದರಿಂದ ಮನುಷ್ಯರೂ ತಮಗಿಂತ ಕೆಳಗಿನ ದೇವತೆಗಳು ಮುಕ್ತರಾಗಲು ಅವರಿಗೆ ನಿಯಾಮಕರಾಗಿ ಇರುವರು. ಹಾಗೂ ಪರಮಾತ್ಮನನ್ನು ಆಶ್ರಯಿಸಿಕೊಂಡು ಇರುವರು.35
- ....ಶ್ರದ್ಧಾ ಎನಿಸುವ ಭಾರತಿಗೆ ರುದ್ರಾದಿ ದೇವೋತ್ತಮನಾದ ಮುಖ್ಯಪ್ರಾಣನು ಕಾರಣನಾಗಿರುವನು. ಮುಖ್ಯಪ್ರಾಣನಿಗೂ ಕೂಡಾ ಒಡೆಯ ಹಾಗೂ ಕಾರಣ ವಾಸು ದೇವನು... ಹೀಗೆ ಉತ್ತಮನಾದ ವಾಯುದೇವನಿಗಿಂತಲೂ ಉತ್ತಮನಾಗಿರುವವನು ವಾಸುದೇವನೆಂದು ತಿಳಿದಾಗ ಮೋಕ್ಷ ದೊರಕುವುದು.36
- ಮನೋಭಿಮಾನಿಗಳಾದ ರುದ್ರಾದಿಗಳನ್ನು ಸರಸ್ವತೀಭಾರತಿಯರ ದ್ವಾರಾ ಮಹತ್ತತ್ತ್ವಾ ಭಿಮಾನಿಗಳಾದ ಚತುರ್ಮುಖವಾಯುಗಳ ಅಧೀನರನ್ನಾಗಿಯೂ, ಬ್ರಹ್ಮವಾಯು ಗಳನ್ನು ರಮಾದೇವಿಯ ಅಧೀನರನ್ನಾಗಿಯೂ ತಿಳಿಯಬೇಕು.37

---

33. ತಸ್ಯಾ ವ್ಯಾನಾಭಿಧೋ ವಾಯುರ್ವಿಶಿಷ್ಟಾನೋ ಯತೋ ಹಿ ನಃ ।
ಉನ್ನೇತೃತ್ವಾದುದಾನಾಖ್ಯಾ ತಸ್ಯ ಶ್ರೀರಾಶ್ರಯಃ ಸದಾ ॥ – *[ಬೃ.ಉ.ಭಾ. 5-9-26]*

34. ಸರಸ್ವತೀ ಚ ಗೋರೂಪಾ..... ತಸ್ಯಾ ವಾಯುಃ ಪತಿಃಪ್ರಭುಃ ।
– *ಪ್ರಭಂಜನೇ [ಬೃ.ಉ.ಭಾ. 7-10-1]*

35. ಪ್ರತಿಬಿಂಬೋ ಹರೇ ಪ್ರಾಣಸ್ತಸ್ಯ ಚಾನ್ಯಾಃ ಕಲಾಃ ಕ್ರಮಾತ್ ।
ಕಲಾನಾಂ ದೇವತಾ ಅನ್ಯಾ ದೇವತಾನಾಂ ನರಾ ಅಪಿ ॥
ತಸ್ಮಾತ್ ಸರ್ವೇಽಪಿ ಮುಕ್ತೇಷು ನರೇಷ್ವಪಿ ನಿಯಾಮಕಾಃ ।
ತಿಷ್ಠಂತಿ ನಾತ್ರ ಸಂದೇಹಃ ಪರಮಾತ್ಮನಿ ಚಾಖಿಲಾಃ ॥
– *ಮುಕ್ತವಿವೇಕೇ [ಆಥರ್ವಣಭಾಷ್ಯ 4-1-7]*

36. ......ತಸ್ಯಾಶ್ಚ ಕಾರಣಂ ಪ್ರಾಣಃ ಸರ್ವೇಷಾಮುತ್ತಮೋತ್ತಮಃ ।
ತಸ್ಯಾಪೀಶಃ ಕಾರಣಂ ಚ ವಾಸುದೇವಃ ಪರೋಽವ್ಯಯಃ ।
.....ತಂ ಜ್ಞಾತ್ವಾ ಮುಚ್ಯತೇ ಜಂತುರ್ವಿದಿತ್ವೈವಂ ಪರಾವರಮ್ ॥
– *ತತ್ವ ವಿವೇಕೇ [ಷಟ್.ಉ.ಭಾ. 6-1-6]*

37. .......ಶಿವಾದೀನ್ ಬ್ರಹ್ಮವಾಯ್ವೋಸ್ತು ನಿಯುಚ್ಯೇನ್ಮಹದಾತ್ಮನೋಃ ।

- ಸ್ವರ್ಗದಲ್ಲಿ ಏನೇನಿದೆಯೋ ಅವೆಲ್ಲ ಮುಖ್ಯಪ್ರಾಣನ ವಶದಲ್ಲಿದೆ.38
- ಮುಖ್ಯವಾಯುವಿನ ಮೂಲಕವೇ ರುದ್ರನ ಹುಟ್ಟು; ರುದ್ರನು ಲಯ ಹೊಂದುವುದೂ ಕೂಡಾ ಮುಖ್ಯವಾಯುವಿನಲ್ಲೇ. ಆದುದರಿಂದ ವಾಯುದೇವನನ್ನು ದೇವತೆಗಳಲ್ಲೆಲ್ಲ ಶ್ರೇಷ್ಠ ಎಂದು ಸಾರುವರು.39
- ಉಳಿದೆಲ್ಲ ದೇವತೆಗಳು ಮುಖ್ಯಪ್ರಾಣನನ್ನು ಆಶ್ರಯಿಸುವರು. ಮುಖ್ಯಪ್ರಾಣನಾದರೂ ಪರಮಾತ್ಮನನ್ನು ಆಶ್ರಯಿಸುವನು. ಉಳಿದ ದೇವತೆಗಳೆಲ್ಲ ಮುಖ್ಯಪ್ರಾಣನನ್ನು ಅನುಸರಿಸಿಯೇ ಪ್ರವರ್ತಿಸುವರು. ಮುಖ್ಯಪ್ರಾಣನಾದರೂ ಸರ್ವೋತ್ತಮನಾದ ಪರಮಾತ್ಮನನ್ನೇ ಅನುಸರಿಸಿ ಪ್ರವರ್ತಿಸುವನು. ಆದುದರಿಂದ ಪರಮಾತ್ಮನನ್ನು 'ಪ್ರಾಣಸ್ಯ ಪ್ರಾಣ' ಎಂದು ಕರೆಯುವರು.40
- ದೇವೇಂದ್ರನು ಮುಕ್ತನಾದಾಗ ಮುಖ್ಯಪ್ರಾಣನನ್ನು ಆವೇಶಗೊಂಡು ಹೊರಗಿನ ಭೋಗಗಳನ್ನು ಭೋಗಿಸುವನು. ವಾಯುದೇವನಾದರೂ ಪರಮಾತ್ಮನನ್ನು ಆವೇಶ ಗೊಂಡು ಹೊರಗಿನ ಭೋಗಗಳನ್ನು ಅನುಭವಿಸುವನು.41
- ದೇವತೆಗಳು ಮುಖ್ಯಪ್ರಾಣನನ್ನು ಹೊಂದಿ, ಅವನಲ್ಲಿ ಇರುವವರಾಗಿ ಪರಮಾತ್ಮನನ್ನು ಹೊಂದುವರು. ಅವನಲ್ಲಿ ನೆಲೆಸುವರು ಕೂಡಾ.42
- ಹೇ ದೇವತೆಗಳೇ, ವಾಯುದೇವನ ನಮಸ್ಕಾರಾದಿಗಳಿಂದಾಗಿ ಹಿಂದೆ ಜ್ಞಾನಾದಿ ಗುಣ ಪೂರ್ಣರಾಗಿ ಅಜ್ಞಾನಾದಿ ದೋಷದೂರರಾಗಿದ್ದರೋ ಅಂತಹವರು ಒಂದು ಏಕಾಂತ

---

ತೌ ರಮಾಯಾಂ....... ತದ್ವಶತ್ವೇನ ತದ್ಧ್ಯಾನಂ ನಿಯಮೋ ನಾಮ ನಾಪರಃ ॥
*– [ಕಾ.ಉ.ಭಾ. 1-7-13]*

38. ಪ್ರಾಣಸ್ಯೈತದ್ ವಶೇ ಸರ್ವಂ ತ್ರಿದಿವೇ ಯತ್ ಪ್ರತಿಷ್ಠಿತಮ್ ।
*– ಶ್ರುತಿಃ [ನ್ಯಾ.ವಿ.ಬ್ರ.ಸೂ. 1-4-10]*

39. ವಾಯೋರ್ವಾವ ರುದ್ರ ಉದೇತಿ ವಾಯೌ ವಿಲೀಯತೇ ತಸ್ಮಾದಾಹುರ್ವಾಯು ರ್ದೇವಾನಾಂ ಶ್ರೇಷ್ಠ ಇತಿ ।
*– ಕೌಂಡಿನ್ಯ [ಬ್ರ.ಸೂ.ಭಾ. 3-4-3]*

40. ಸರ್ವೇ ಪ್ರಾಣಮುಪಗಚ್ಛಂತಿ ಪ್ರಾಣಃ ಪರಮುಪಗಚ್ಛತಿ । ಪ್ರಾಣಂ ದೇವಾ ಅನುಪ್ರಾಣಂತಿ ಪ್ರಾಣಃ ಪರಮನುಪ್ರಾಣಿತಿ ತಸ್ಮಾದಾಹುಃ ಪ್ರಾಣಸ್ಯ ಪ್ರಾಣ ಇತಿ ।
*– [ಬ್ರ.ಸೂ.ಭಾ. 4-2-4]*

41. ......ತಥೇಂದ್ರಶ್ಚ ವಾಯುಮಾವಿಶ್ಯ ಸೋಽಪಿ ತು ।
ಆವಿಶ್ಯ ಪರಮಾತ್ಮಾನಂ ಭುಂಕ್ತೇ ಭೋಗಾಂಸ್ತು ಬಾಹ್ಯಕಾನ್ ॥
*– ಶ್ರುತಿಃ [ಬ್ರ.ಸೂ.ಭಾ. 4-2-4]*

42. ಪ್ರಾಣಂ ಪ್ರದ್ಯಪರಂ ದೇವಾಸ್ತದನ್ಯೇ ಚೈವ ತದ್ಗತಾಃ ।
ಪ್ರಾಪ್ನುವಂತಿ ಪರಂ ದೇವಂ ವಸಂತಿ ಚ ಯಥಾ ಸುಖಮ್ ॥
*– ಶ್ರುತಿಃ [ನ್ಯಾಯವಿವರಣ ಬ್ರ.ಸೂ. 4-2-4]*

ಸ್ಥಳದಲ್ಲಿ ಸೂರ್ಯಸಹಿತರಾಗಿ ಜ್ಞಾನಿಯಾದ, ಸಂಸಾರ ಬಾಧೆಯಿಂದ ಕೂಡಿದವರಿಂದ ಶರಣಾಗತನಾದ ವಾಯುವಿನ ಕುರಿತಾಗಿ ಚಿಂತನೆ ನಡೆಸಿದರು.43

- ಸುಖಸ್ವರೂಪಿಯಾದ ವಾಯುದೇವನಲ್ಲೇ ಆಸಕ್ತಳಾಗಿರುವುದರಿಂದ ಭಾರತೀದೇವಿ 'ಶ್ರೀ' ಎನಿಸುವಳು.44
- ಇಂದ್ರನಿಗೆ ಬಲಪ್ರದ ಗಿರೀಶನಾದರೆ, ಗಿರೀಶನಿಗೆ ವಾಯುದೇವ ಬಲಪ್ರದ. ಅವನಿಗೆ ನೇರವಾಗಿ ಶ್ರೀಹರಿ ಬಲಪ್ರದ. ಹರಿಗೆ ಬಲಪ್ರದ ಮತ್ತೊಬ್ಬನಿಲ್ಲ.45
- ಯಾರು ವಾಯುದೇವನಿಂದ ಗರ್ಭಧಾರಣೆ ಮಾಡಿ ಶೇಷ, ಗರುಡ, ರುದ್ರ ಹಾಗೂ ಸುರೇಂದ್ರ –ಈ ಚತುರ್ಮುಖನಿಗೆ ಸದೃಶರಾದ ನಾಲ್ಕು ಮಕ್ಕಳನ್ನು ಪಡೆದಳೋ ಆ ಭಾರತಿಯೇ ದ್ರೌಪದಿಯಾಗಿ ಭೂಮಿಯಲ್ಲಿ ಅವತರಿಸಿದಳು.46

* * *

## 'ಮುಖ್ಯಪ್ರಾಣ ಮತ್ತು ಬ್ರಹ್ಮಾಂಡ'

**ಬ್ರಹ್ಮಾಂಡವನ್ನು ಕೂರ್ಮರೂಪದಿಂದ ಹೊತ್ತಿರುವುದು, ತತ್ವಾಭಿಮಾನಿಗಳಿಂದ ಆಯಾ ಕರ್ತವ್ಯವನ್ನು ಮಾಡಿಸುವುದು -ಹೀಗೆ ಹತ್ತು ಹಲವು ರೀತಿಗಳಿಂದ ಬ್ರಹ್ಮಾಂಡದ ನಿರ್ವಹಣೆಯಲ್ಲಿ ಪಾತ್ರ ತಾಳಿರುವ ಮುಖ್ಯಪ್ರಾಣನ ಆ ಪಾತ್ರದ ಮೇಲೆ ಬೆಳಕು ಚೆಲ್ಲುವ ಇಲ್ಲಿ ೧೧ ಪ್ರಮಾಣಗಳು ಸಂಗ್ರಹಿಸಲ್ಪಟ್ಟಿದ್ದು, ಅವುಗಳಲ್ಲಿ ೬ ಆಕರಗ್ರಂಥದ ಹೆಸರು ಸಹಿತವಾಗಿ ಉಲ್ಲೇಖಗೊಂಡವು. ೫ ಪ್ರಮಾಣಗಳು ಆಕರದ ಉಲ್ಲೇಖವಿಲ್ಲದೆಯೇ ಉದಾಹೃತವಾದವು.**

---

43. ಕುವಿದಂಗ ನಮಸಾ ಯೇ ವೃಧಾನಃ ಪುರಾ ದೇವಾ ಅನವದ್ಯಾಸ ಆಸನ್ ।
ತೇ ವಾಯುವೇ ಮನವೇ ಬಾಧಿತಾಯಾವಾಸಯನ್ನುಷಸಂ ಸೂರ್ಯೇಣ ॥
*– ಋ.ವೇ. 7-11-1; [ಬ್ರ.ಸೂ.ಭಾ. 2-3-8]*

44. ಶಂರೂಪೇ ತು ರತೇರ್ವಾಯೌ ಶ್ರೀರಿತ್ಯೇವ ಚ ಕೀರ್ತ್ಯತೇ ।
*– [ಮ.ಭಾರ.ತಾ.ನಿ. 2-126]*

45. ಬಲಮಿಂದ್ರಸ್ಯ ಗಿರಿಶೋ ಗಿರಿಶಸ್ಯ ಬಲಂ ಮರುತ್ ।
ಬಲಂ ತಸ್ಯ ಹರಿಃ ಸಾಕ್ಷಾನ್ನ ಹರೇರ್ಬಲಮನ್ಯತಃ ॥ *– [ಮ.ಭಾರ.ತಾ.ನಿ. 2-170]*

46. ಯಾ ಮಾರುತಾದ್ಗರ್ಭಮಧತ್ತಪೂರ್ವಂ
ಶೇಷಂ ಸುಪರ್ಣಂ ಗಿರಿಶಂ ಸುರೇಂದ್ರಮ್ ।
ಚತುರ್ಮುಖಾಭಾಂಶ್ಚತುರಃ ಕುಮಾರಾನ್
ದ್ರೌಪದೀ ನಾಮ ಬಭೂವ ಭೂಮೌ ॥
*– ಬ್ರಹ್ಮಾಂಡ [ಮ.ಭಾರ.ತಾ.ನಿ. 2-170]*

- ಕೂರ್ಮರೂಪಿ ಶ್ರೀಹರಿ ಬ್ರಹ್ಮಾಂಡವನ್ನು ಧರಿಸಿರುವನು. ಆ ಬ್ರಹ್ಮಾಂಡದಲ್ಲಿರುವ ಅಗಾಧವಾದ ನೀರಿನಲ್ಲಿರುವ ಕೂರ್ಮರೂಪಿ ಶ್ರೀಹರಿಯ ಬಾಲವನ್ನು ಆಶ್ರಯಿಸಿ ಕೊಂಡು ಕೂರ್ಮರೂಪಿ ವಾಯುದೇವನು ಇರುವನು. ಅವನ ಬಾಲವನ್ನು ಆಶ್ರಯಿಸಿ ಕೊಂಡು ಇರುವ ಕೂರ್ಮರೂಪಿ ಶೇಷನು ಈ ಪೃಥಿವಿಯನ್ನು ಧರಿಸಿರುವನು. ಆ ಪೃಥಿವಿಯಲ್ಲಿ ಸಕಲ ಜಗತ್ತು ನೆಲೆಗೊಂಡಿದೆ.[1]

'ಅಂಡೋದಕದಲ್ಲಿ ಕೂರ್ಮರೂಪಿಯಾದ ವಾಯುವಿನ ಮುಖವು ಪೂರ್ವಾಭಿ ಮುಖವಾಗಿಯೂ, ಬಾಹುಗಳು ಆಗ್ನೇಯ-ಈಶಾನ್ಯ ದಿಗಭಿಮುಖವಾಗಿಯೂ, ಪಾದಗಳು ನೈರ್ಋತ್ಯ-ವಾಯವ್ಯ ದಿಗಭಿಮುಖವಾಗಿಯೂ ಇವೆ.[2]

'ವಾಯುದೇವನು ಕೂರ್ಮರೂಪಿಯಾಗಿ ಅಂಡೋದಕದಲ್ಲಿ ನೆಲೆಸಿರುವನು. ವಿಷ್ಣು ಕೂರ್ಮವನ್ನು ಆಧಾರವಾಗಿ ಹೊಂದಿರುವ ಈ ವಾಯುಕೂರ್ಮನು ಶೇಷನಿಗೆ ಆಧಾರ ನಾಗಿರುವನು.

ಈ ವಾಯುಕೂರ್ಮನ ನಾಲ್ಕು ಪಾದಗಳು ಅಂಡೋದಕದ ನಾಲ್ಕು ಮೂಲೆ ಗಳಲ್ಲಿವೆ. ನೀರಿನಲ್ಲಿ ನೆಲೆಸಿವೆ. ಎದೆಯು ಭೂಮಿಯನ್ನು ಒತ್ತಿಕೊಂಡಿದೆ. ಅಂಡೋದಕ ದಲ್ಲಿರುವ ಶಿರಸ್ಸು ಭೂಮಿಯನ್ನು ಅತಿಕ್ರಮಿಸಿ ನಿಂತಿದೆ. ಪಾರ್ಶ್ವಗಳಲ್ಲಿ ಬಾಲಗಳೂ ಕೂಡಾ ಭೂಮಿಯನ್ನು ಮೀರಿ ನಿಂತಿವೆ.[3]

- 'ವಾಯುದೇವನು ವಾಯುರೂಪದಿಂದ ಎಲ್ಲರ ಶರೀರದಲ್ಲಿದ್ದುಕೊಂಡು ಸಮಸ್ತ ಜಗತ್ತನ್ನು ರಕ್ಷಿಸುವನು. ಆದಿತ್ಯನಲ್ಲಿದ್ದುಕೊಂಡು ಜಗತ್ತನ್ನು ಬೆಳಗಿಸುವನು.

---

1. ಬಿಭರ್ತ್ಯಂಡಂ ಹರಿಃ ಕೂರ್ಮಸ್ಥಂಡೇ ಚಾಪ್ಯುದಕಂ ಮಹತ್ ।
ಉದಕೇ ಕೂರ್ಮರೂಪಸ್ಯ ವಾಯುಃ ಪುಚ್ಛಂ ಸಮಾಶ್ರಿತಃ ॥
ವಾಯೋಃ ಪುಚ್ಛಂ ಸಮಾಶ್ರಿತ್ಯ ಶೇಷಸ್ತು ಪೃಥಿವೀಮಿಮಾಮ್ ।
ಬಿಭರ್ತಿ ತಸ್ಯಾಂ ಚ ಜಗದಿದಂ ಸರ್ವಂ ಪ್ರತಿಷ್ಠಿತಮ್ ॥
*– ವೈಭವೇ [ಬ್ರ.ಸೂ.ಭಾ. 3-2-3]*

2. ವಾಯೋಸ್ತು ಕೂರ್ಮರೂಪಸ್ಯ ಪೂರ್ವತಶ್ಚೋದಕೇ ಮುಖಮ್ ।
ಆಗ್ನೇಯ್ಯೈಶಾನಿಗೌ ಬಾಹೂ ಪಾದೌ ನಿರ್ಋತಿವಾಯುಗೌ ॥
*– ಪ್ರಕೃಷ್ಟೇ [ಬ್ರ.ಸೂ.ಭಾ. 3-2-3]*

3. .........ಸ ಏಷ ಕೂರ್ಮರೂಪೇಣ ವಾಯುರಂಡೋದಕೇ ಸ್ಥಿತಃ ।
ವಿಷ್ಣುನಾ ಕೂರ್ಮರೂಪೇಣ ಧಾರಿತೋಽನಂತಧಾರಕಃ ॥
ಅಸ್ಯ ಪಾದಾ ಹಿ ಚತ್ವಾರೋ ಹ್ಯಂಡೋದೇ ಕೋಣಸಂಸ್ಥಿತಾಃ ।
ಉರಸ್ತು ಭೂಮಿಸಂಶ್ಲಿಷ್ಟಮತಿರಿಚ್ಯ ಭುವಂ ಪುನಃ ॥
ಪಾರ್ಶ್ವತಃ ಪುಚ್ಛತಶ್ಚೈವ ಶಿರಶ್ಚೋದಕಸಂಸ್ಥಿತಮ್ ।
ಆಕಾಶಮುದರೇ ತಸ್ಯ ದ್ಯೌಃ ಪೃಷ್ಠೇ ಸಂಸ್ಥಿತಾ ವಿಭೋಃ ।
ಏವಂ ವಿದ್ವಾಂಸ್ತು ಯತ್ರೈತಿ ತತ್ರೈವ ಪ್ರತಿತಿಷ್ಠತಿ ॥
*– ಪ್ರಭಂಜನೇ [ಬ್ರ.ಸೂ.ಭಾ. 3-2-3]*

ಅಗ್ನಿಯಲ್ಲಿರುವ ರೂಪದಿಂದ ಎಲ್ಲ ಯಾಜ್ಞಿಕರಿಂದ ಹೋಮಿಸಲ್ಪಡುವನು. ಆದಿತ್ಯನಲ್ಲಿರುವ ತನ್ನ ರೂಪ ದಿಂದ ವಾಯುದೇವ ಎಲ್ಲರ ಆಯುಷ್ಯವನ್ನು ಹೀರಿಕೊಂಡು ಸಾಗುವನು. ಆದುದರಿಂದ ಮುಖ್ಯವಾಗಿ ಅವನೇ ಆದಿತ್ಯ. ಅವನ ಸಂಬಂಧದಿಂದಷ್ಟೇ ಸೂರ್ಯನು ಆದಿತ್ಯ ಎಂದೂ, ಬೆಂಕಿ ಅಗ್ನಿ ಎಂದೂ ಕರೆಸಿಕೊಳ್ಳಲ್ಪಡುವುದು.4

- 'ತೇಜಸ್ಸಿಗೆ ಅಭಿಮಾನಿ ಚತುರ್ಮುಖ. ನೀರಿಗೆ ಅಭಿಮಾನಿ ವಾಯುದೇವ. ರುದ್ರದೇವ ಭೂಮಿಗೆ ಅಭಿಮಾನಿ. ಈ ಜಗತ್ತು ತೇಜಸ್ಸು, ನೀರು ಹಾಗು ಪೃಥಿವಿಯ ಸ್ವರೂಪ ದಲ್ಲಿದೆ. ತೇಜಸ್ಸು, ಅಪ್ ಹಾಗೂ ಅನ್ನ ಅಥವಾ ಪೃಥಿವೀ –ಎಂಬ ಹೆಸರು ಕ್ರಮವಾಗಿ ಈ ದೇವತೆಗಳಿಗೇ ಮುಖ್ಯವಾಗಿ ಇರುವುದು. ಬ್ರಹ್ಮ, ವಾಯು, ರುದ್ರ ಇವರಿಂದ ಈ ಜಗತ್ತು ಹುಟ್ಟಿದೆ. ಆದುದರಿಂದ ಅಗ್ನಿ, ಸೂರ್ಯ, ಸೋಮ –ಇವರ ರೂಪಗಳೂ ಹೆಸರುಗಳೂ ಬ್ರಹ್ಮವಾಯುರುದ್ರರಿಗೇ ಸೇರಿದವು.5' 'ತೇಜಸ್ಸಿನಲ್ಲಿರುವ 'ತೇಜಃ' ಎನಿಸುವ ಲಕ್ಷ್ಮಿಯ ರೂಪವನ್ನೂ ಜಲಾಭಿಮಾನಿಯಾದ 'ಆಪಃ' ಎನಿಸುವ ವಾಯು ದೇವನನ್ನೂ ಅನ್ನ ಅಥವಾ ಪೃಥಿವೀ ಎನಿಸುವ ರುದ್ರನನ್ನೂ ಸೃಷ್ಟಿ ಮಾಡಿದ ಭಗವಂತನು ಜೀವ ಎನಿಸುವ ಅನಿರುದ್ಧರೂಪದಿಂದ ಲಕ್ಷ್ಮ್ಯಾದಿಗಳನ್ನು ಪ್ರವೇಶಿಸಿ, ಅವರ ನಾಮರೂಪಗಳನ್ನು ಸೃಷ್ಟಿಸುವುದಾಗಿಯೂ ಲಕ್ಷ್ಮೀ ವಾಯು ರುದ್ರ ಈ ಮೂವರಲ್ಲೂ ಪರಸ್ಪರವಾಗಿ ಉಳಿದ ಇಬ್ಬರು ದೇವತೆಗಳು ಆಂಶಿಕವಾಗಿ ಪ್ರವೇಶಿಸುವಂತೆ ಮಾಡುವೆ ನೆಂದು ಯೋಚಿಸಿ ಲಕ್ಷ್ಮ್ಯಾದಿಗಳನ್ನು ಪ್ರವೇಶಿಸುವನು. ಅವರ ಮೂಲಕ ಇಂದ್ರಾದಿಗಳ ನಾಮಗಳನ್ನೂ, ರೂಪಗಳನ್ನೂ ಸೃಷ್ಟಿಮಾಡಿಸುವನು.

---

4. ಸ ವಾಯುರ್ವಾಯುರೂಪೇಣ ಜಗತ್ ಪಾತಿ ಶರೀರಗಃ ।
ಆದಿತ್ಯಸ್ಥೇನ ರೂಪೇಣ ಜಗದ್ಯಾತಿ ಪ್ರಕಾಶಯನ್ ॥
ಅಗ್ನಿಸ್ಥೇನ ತು ರೂಪೇಣ ಹೂಯತೇ ಸರ್ವಯಷ್ಟೃಭಿಃ ।
ಆದಾಯ ಯಾತ್ಯಾಯುರಿತಿ ಸ ಏವಾದಿತ್ಯ ಉಚ್ಯತೇ ।
ತತ್ಸಂಬಂಧಾತ್ತು ತನ್ನಾಮ ಸೂರ್ಯಸ್ಯಾಗ್ನೇಸ್ತಥೈವ ಚ ॥
*– ಪ್ರಭಂಜನೇ [ಬ್ರ.ಸೂ.ಭಾ. 3-2-3]*

5. ತೇಜೋಽಭಿಮಾನವಾನ್ ಬ್ರಹ್ಮಾ ವಾಯುಶ್ಚಾಬಭಿಮಾನವಾನ್ ।
ರುದ್ರಃ ಕ್ಷಿತ್ಯಭಿಮಾನೀ ಚಾಪ್ಯೇತನ್ಮಯಮಿದಂ ಜಗತ್ ॥
.....ತೇಜೋಽಬನ್ನಾಭಿಧಾ ತಸ್ಮಾದೇಷಾಮೇವ ಪ್ರಕೀರ್ತಿತಾಃ ।
......ಬ್ರಹ್ಮವಾಯುಗಿರೀಶೇಭ್ಯಸ್ತೇಭ್ಯೋ ಜಾತಮಿದಂ ಜಗತ್ ॥
ಅತೋಽಗ್ನಿಸೂರ್ಯಸೋಮಾನಾಮಪಿ ರೂಪಂ ತದುದ್ಭವಮ್ ।
ಅತೋಽಗ್ನಿಸೂರ್ಯಸೋಮಾನಾಂ ನಾಮಾಪ್ಯೇಷಾಂ ಪ್ರಕೀರ್ತಿತಮ್ ॥
*– ಬ್ರಹ್ಮಾಂಡೇ [ಬ್ರ.ಸೂ.ಭಾ. 3-5-4]*

6. ಸೃಷ್ಟ್ವೇಷ್ವೇತೇಷು ಭಗವಾನೀಕ್ಷಾಂ ಚಕ್ರೇ ಸ ಕೇಶವಃ ।
ಜೀವಾಖ್ಯೇನೈವ ರೂಪೇಣ ಯೋಽನಿರುದ್ಧ ಇತಿ ಸ್ಮೃತಃ ॥

ಆ ಮೂರು ದೇವತೆಗಳನ್ನೂ ಅಗ್ನಿ, ಚಂದ್ರ, ಸೂರ್ಯ ಮೊದಲಾದ ದೇವತೆಗಳಲ್ಲಿ ಪ್ರವೇಶಿಸುವಂತೆ ಮಾಡುವನು.6

ಹೀಗೆ 'ತ್ರಿವೃತ್ಕರಣ'ದ ಪ್ರಕ್ರಿಯೆಯಲ್ಲಿ ವಾಯುದೇವನ ಪಾತ್ರವನ್ನು ತಿಳಿಸಿ, ಅಗ್ನಿ-ಸೋಮ-ಸೂರ್ಯಾದಿಗಳಲ್ಲಿ ಬಿಳಿಬಣ್ಣ ಪ್ರಾಣದೇವನ ರೂಪದಿಂದ ಉಂಟಾದ ದ್ದೆಂದು ತಿಳಿಸಲಾಗಿದೆ.

ಇಂದ್ರಾದಿ ದೇವತೆಗಳಿಗಿಂತ ಲಕ್ಷ್ಮೀ, ವಾಯು, ರುದ್ರ ಈ ದೇವತೆಗಳು ಹೆಚ್ಚಿನ ಬಲ ವುಳ್ಳವರಾಗಿದ್ದು, ಇಂದ್ರಾದಿಗಳು ಇವರ ವಶದಲ್ಲಿರುವುದರಿಂದ ಇಂದ್ರಾದಿ ನಾಮಗಳೂ, ಅವುಗಳ ಪ್ರವೃತ್ತಿನಿಮಿತ್ತ ಧರ್ಮಗಳೂ ಲಕ್ಷ್ಮ್ಯಾದಿಗಳಲ್ಲಿಯೇ ಮುಖ್ಯವಾಗಿ ಇರುವವು. ಇಂದ್ರಾದಿಗಳಲ್ಲಿ ಅಮುಖ್ಯವಾಗಿಯಷ್ಟೇ ಇರುವವು. ಮುಖ್ಯಪ್ರಾಣ ರುದ್ರನಿಗಿಂತ ಅಧಿಕಬಲವುಳ್ಳವನಾಗಿದ್ದು, ರುದ್ರನನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವುದರಿಂದ ರುದ್ರ ದೇವನ ನಾಮಗಳೂ ರೂಪವೂ ಮುಖ್ಯಪ್ರಾಣನಲ್ಲೇ ಮುಖ್ಯವಾದವು. ರುದ್ರದೇವನಲ್ಲಿ ಅಮುಖ್ಯವಾಗಿಯಷ್ಟೇ ಇರುವವು. ಹೀಗೆಯೇ ಶ್ರೀದೇವಿ ಮುಖ್ಯಪ್ರಾಣನಿಗಿಂತ ಅಧಿಕಬಲ ವುಳ್ಳವಳಾಗಿದ್ದು, ಅವಳ ಅಧೀನದಲ್ಲಿ ವಾಯುದೇವನಿರುವುದರಿಂದ ಅವನ ನಾಮಗಳೂ, ರೂಪವೂ ಮುಖ್ಯವಾಗಿ ಶ್ರೀದೇವಿಯಲ್ಲಿ ಇರುವವು. ಅಮುಖ್ಯವಾಗಿಯಷ್ಟೇ ಮುಖ್ಯ ಪ್ರಾಣನಲ್ಲಿ ಇರುವವು.

ಹೀಗೆ 'ತ್ರಿವೃತ್ಕರಣ'ದ ಪ್ರಸ್ತಾವದಲ್ಲಿ ಸೂರ್ಯಾದಿ ದೇವತೆಗಳ ನಾಮಗಳಲ್ಲೂ ರೂಪದಲ್ಲೂ ರುದ್ರನ ನಾಮರೂಪಗಳಲ್ಲೂ ವಾಯುದೇವನ ಪ್ರಭುತ್ವವನ್ನು ತಿಳಿಸಲಾಗಿದೆ ಯಲ್ಲದೆ ವಾಯುದೇವನ ನಾಮರೂಪಗಳೂ ಮುಖ್ಯವಾಗಿ ಲಕ್ಷ್ಮೀದೇವಿಯಲ್ಲಿದ್ದು, ಗೌಣ ವಾಗಿಯಷ್ಟೇ ವಾಯುದೇವನಲ್ಲಿ ಇರುವವೆಂದು ಪ್ರತಿಪಾದಿಸಲಾಗಿದೆ.

- 'ಜಗತ್ತು ವಾಯುದೇವನ ನಿಯಮನಕ್ಕೊಳಪಟ್ಟು ಬದ್ಧವಾಗಿರುವುದರಿಂದ ವಾಯು ದೇವನು ಸೂತ್ರ ಎನಿಸುವನು.'7

---

ತೇನ ರೂಪೇಣ ಲಕ್ಷ್ಮ್ಯಾದೀನ್ ಪ್ರವಿಷ್ಟೋ ರೂಪನಾಮನೀ ।
ಕರಿಷ್ಯೇ ತ್ರಿವೃತಶ್ಚೈತಾನೇಕೈಕಂ ಕರವಾಣಿ ಚ ॥
ಇತಿ ಮತ್ವಾ ಪ್ರವಿಶ್ಯಾಥ ತೇಭ್ಯ ಇಂದ್ರಾದಿನಾಮಪಿ ।
ನಾಮರೂಪಾಣಿ ಕೃತವಾನ್ ತಾಂಶ್ಚಾನ್ಯೋನ್ಯ ಪ್ರವೇಶಿನಃ ॥
ಕೃತ್ವಾಽಗ್ನಿಸೋಮಸೂರ್ಯಾದಿಷ್ವೇತಾನ್ ತ್ರೀನ್ ವಿದಧೇ ಪುನಃ ।
ಅತೋ ಯತ್...... ಶುಕ್ಲಂ ವಾಯುಜಂ ವಿದ್ಯಾತ್ ....... ॥
ಇಂದ್ರಾದಿನಾಮರೂಪಾಣಿ ಯಥೈವ ತ್ರಿಷು ಮುಖ್ಯತಃ ।
ತದಧೀನತ್ವತಃ ತೇಷಾಮೇಷಾಮುಚ್ಚಬಲತ್ವತಃ ॥
ಶಿವನಾಮಾನಿ ರೂಪಾಣಿ ತಥಾ ವಾಯೋಸ್ತು ಮುಖ್ಯತಃ ।
ತದೀಯಾನಿ ತಥಾ ಲಕ್ಷ್ಮ್ಯಾಃ....... ॥ *– ಸಾಮಸಂಹಿತಾ [ಛಾಂ.ಉ.ಭಾ. 6-2-1-6]*

7. ಸ್ಯೂತಂ ಜಗದಿದಂ ಯಸ್ಮಿನ್ ಸೂತ್ರಂ ವಾಯುರಸೌ ಸ್ಮೃತಃ ।
*– [ಬ್ರ.ಸೂ.ಭಾ. 5-7-1]*

- ಸೂರ್ಯಮಂಡಲದಲ್ಲಿರುವ ಮುಖ್ಯಪ್ರಾಣದೇವನೇ ನಿತ್ಯವೂ ಪ್ರಕಾಶಿಸುವನು. ಹೊರತು ಸೂರ್ಯನಲ್ಲ. ಅಗ್ನಿಸಂಬಂಧದಿಂದ ಕಟ್ಟಿಗೆಯಲ್ಲಿ ಹೇಗೆ ಪ್ರಕಾಶ ಹಾಗೂ ಸುಡುವಿಕೆ ಕಾಣಿಸಿಕೊಳ್ಳುವುದೋ ಹಾಗೆ ಸೂರ್ಯನಲ್ಲಿ ಮುಖ್ಯಪ್ರಾಣನ ಸಂಬಂಧ ದಿಂದಾಗಿಯಷ್ಟೇ ಪ್ರಕಾಶ ಮತ್ತು ಸುಡುವಿಕೆ ಕಾಣಿಸುವುದು. ಮುಖ್ಯಪ್ರಾಣನಿಗೆ ಉದಯವಾಗಲೀ ಅಸ್ತಮಾನವಾಗಲೀ ಇಲ್ಲದಿದ್ದರೂ ಪ್ರಜೆಗಳಿಗೋಸ್ಕರ ಸೂರ್ಯ ಮಂಡಲದ ಮೂಲಕ ಉದಯಿಸುತ್ತ ಶ್ರೀಜನಾರ್ದನನನ್ನು ಗಾನ ಮಾಡುವನು. ಸೂರ್ಯಮಂಡಲದಲ್ಲಿರುವ ಪ್ರಾಣನೂ ಎಲ್ಲ ಪ್ರಾಣಿಗಳ ದೇಹದಲ್ಲಿರುವ ಪ್ರಾಣನೂ ಸಮಾನರೇ. ಯಾಕೆಂದರೆ ಅವರಿಬ್ಬರೂ ಸ್ಪಷ್ಟವಾಗಿ ಉಷ್ಣತ್ವಧರ್ಮ ಉಳ್ಳವರು. ಆದ್ದರಿಂದ ಆ ಇಬ್ಬರ ನಡುವೆ ಯಾರಲ್ಲಾದರೊಬ್ಬರಲ್ಲಿ ಉದ್ಗೀಥ ಹೆಸರಿನ ಜನಾರ್ದನನನ್ನು ಮೋಕ್ಷಕ್ಕಾಗಿ ಹಾಗು ಸಕಲ ಇಷ್ಟಗಳ ಪ್ರಾಪ್ತಿಗಾಗಿ ಉಪಾಸನೆ ಮಾಡಬೇಕು.8
- ಮುಖ್ಯಪ್ರಾಣನು ನೀರಿಗೆ ಅಭಿಮಾನಿ.9
- ಗೃಹಕೋಶಾದಿ ವಸ್ತುಗಳಿಗೆ ಅಭಿಮಾನಿಯಾದ ಪ್ರಾಣನು ಉದ್ಗಾತೃವಿನ ಸ್ವರದಲ್ಲಿ ಸನ್ನಿಹಿತನಾಗಿರುವನು. ಆ ಪ್ರಾಣನೇ ಭೂಷಣ ಸ್ವರ್ಣಾಭಿಮಾನಿಯಾಗಿ ಉದ್ಗಾತೃವಿನ ಸ್ವರದಲ್ಲಿ ಸನ್ನಿಹಿತನಾಗಿರುವನು.10
- ಸತ್ಯಕ್ಕೆ ಹಾಗೂ ಗುಡುಗಿಗೆ ಅಭಿಮಾನಿಯಾಗಿ ವಾಯುದೇವನ 'ಸತ್ಯ ಹಾಗೂ ಸ್ತನಯಿತ್ನು' ಎಂಬ ಎರಡು ರೂಪಗಳಿವೆ. ಈ ರೂಪಗಳೇ ಜೀವಗಳ ಶರೀರಗಳಲ್ಲಿ

---

8. ಆದಿತ್ಯಸಂಸ್ಥಿತೋ ನಿತ್ಯಂ ಪ್ರಾಣಸ್ತಪತಿ ನಾಪರಃ ।
ಪ್ರಕಾಶನಂ ಚ ತಪನಂ ಕಾಷ್ಠವತ್ ಸೂರ್ಯಗಂ ಭವೇತ್ ॥
ಸೂರ್ಯಮಂಡಲಗೋ ವಾಯುರುದಯಾಸ್ತಮಯೋಜ್ಝಿತಃ ।
ಅಪಿ ಪ್ರಜಾಭ್ಯ ಉದ್ಯಂಶ್ಚೈವೋದ್ಗಾಯತಿ ಜನಾರ್ದನಮ್ ॥
ಆದಿತ್ಯಮಂಡಲಸ್ಥಶ್ಚ ಸರ್ವಪ್ರಾಣಿಗತಸ್ತಥಾ ।
ವಾಯುಃ ಸಮಾನ ಏವಾಯುಮುಷ್ಣೋಽಸಾವಪಿ ಚ ಸ್ಫುಟಮ್ ॥
ತಸ್ಮಾದಸ್ಮಿನ್ನಮುಷ್ಮಿನ್ ವಾಪ್ಯುದ್ಗೀಥಾಖ್ಯಂ ಜನಾರ್ದನಮ್ ।
ಉಪಾಸೀತ ವಿಮೋಕ್ಷಾಯ ಸರ್ವಕಾಮಾಪ್ತಯೇ ತಥಾ ॥
– *[ಛಾಂ.ಉ.ಭಾ. 1-3-1,2]*

9. ......ಪ್ರಾಣಸ್ತ್ವಬಭಿಮಾನವಾನ್ ..... ತಿಸ್ರಸ್ತಾ ದೇವತಾಃ ಪುರಾ ।
– *ಬ್ರಹ್ಮಾಂಡೇ [ಛಾಂ.ಉ.ಭಾ. 6-3-5]*

10. ಗೃಹಕೋಶಾದಿಕಂ ಯತ್ ಸ್ವಂ ತದ್ರೂಪ್ಯಸ್ಯ ಸ್ವರಸ್ಥಿತಃ ।
ಭೂಷಣಸ್ವರ್ಣರೂಪೀ ಚ ಸ ಏವಾಪಿ ಸ್ವರಸ್ಥಿತಃ ॥ – *[ಬೃ.ಉ.ಭಾ. 3-3-25, 26]*

11. ಸತ್ಯಂ ಚ ಸ್ತನಯಿತ್ನುಶ್ಚ ವಾಯೋ ರೂಪಾಂತರೇ ಸ್ಮೃತೇ ।
ಏತೇ ಏವ ಸ್ವರೇ ಸತ್ಯೇ ಜೀವೇ ಬಾಧ್ಯಾತ್ಮಸಂಸ್ಥಿತಾಃ ॥
ತೇಷಾಂ ನಿಯಾಮಕೋ ವಿಷ್ಣುಸ್ತತ್ರ ತತ್ರೈವ ಸಂಸ್ಥಿತಃ ।

ಸ್ವರಕ್ಕೆ ಅಭಿಮಾನಿಯಾಗಿ, ಸತ್ಯಕ್ಕೆ ಅಭಿಮಾನಿಯಾಗಿ ಇರುವವು. ಆ ರೂಪಗಳಿಗೆ ನಿಯಾಮಕನಾಗಿ 'ಸೌವರ' 'ಸಾತ್ಯ' ರೂಪಗಳಿಂದ ಶ್ರೀವಿಷ್ಣು ಇರುವನು.11

- ಮುಖ್ಯಪ್ರಾಣ ಒಬ್ಬನೇ ಎಲ್ಲ ಲೋಕಗಳನ್ನು ಪ್ರವೇಶಿಸಿ ಧಾರಕನಾಗಿರುವನು. ಸ್ಪರ್ಶ ಗುಣದಿಂದ ಅನುಮೇಯವಾದ ಭೂತವಾಯುಗಳು ವಾಯುದೇವನ ಪ್ರತಿಯೊಂದು ರೂಪಕ್ಕೆ ಪ್ರತಿಬಿಂಬಗಳಾಗಿವೆ. ಇದರಂತೆಯೇ ಒಬ್ಬನೇ ಪರಮಾತ್ಮ ಸರ್ವಜೀವಾಂತ ರ್ಯಾಮಿಯಾಗಿರುವನು.12

* * *

## 'ಮುಖ್ಯಪ್ರಾಣ ಮತ್ತು ಪಿಂಡಾಂಡ'

**ಪಿಂಡಾಂಡ ಎನಿಸುವ ಶರೀರದ ಮೇಲೆ ಉಸಿರಾಟವೇ ಮುಂತಾದ ಚಟುವಟಿಕೆಗಳಲ್ಲಿ ಮುಖ್ಯಪ್ರಾಣನ ಪಾತ್ರ ಬಹಳ ದೊಡ್ಡದು. ಅದರ ಬಗ್ಗೆ ಬೆಳಕುಚೆಲ್ಲುವ ೨೨ ಪ್ರಮಾಣಗಳ ಸಂಗ್ರಹವಿರುವ ಈ ವಿಭಾಗದಲ್ಲಿ ೧೪ ಪ್ರಮಾಣಗಳು ಆಕರಗ್ರಂಥದ ಹೆಸರಿನೊಂದಿಗೆ ಉಲ್ಲೇಖಿಸಲ್ಪಟ್ಟಿದ್ದರೆ, ೯ ಪ್ರಮಾಣಗಳು ಹೆಸರಿನ ಉಲ್ಲೇಖವಿಲ್ಲದೆ ಉಲ್ಲೇಖಗೊಂಡವು.**

- 'ತನ್ನ ಸ್ಥಾನದಲ್ಲಿ ಇದ್ದುಕೊಂಡೇ ಎಲ್ಲ ಚಟುವಟಿಕೆಗಳನ್ನೂ ತಾನು ಮಾಡುವನು. ಮತ್ತೊಬ್ಬರ ಮೂಲಕ ಮಾಡಿಸುವನು. ಬಲಸಂಪನ್ನನಾಗಿ ನಡೆದುಕೊಳ್ಳುವನು. ಬಲ ಸಂಪನ್ನರನ್ನಾಗಿ ಪ್ರೇರಿಸುವನು. ಎಲ್ಲವನ್ನೂ ಧರಿಸುವನು. ಇಂದ್ರಿಯಾಭಿಮಾನಿಗಳು ಆಯಾ ಇಂದ್ರಿಯವನ್ನು ಧರಿಸುವಂತೆ ಮಾಡುವನು. ಇಂತಹ ಮುಖ್ಯಪ್ರಾಣನನ್ನು ಸಮರ್ಥನನ್ನಾಗಿ ಜ್ಞಾನಿಗಳು ಹೇಳುವರು.1

---

...... ಸೌವರಃ ಸ್ವರಗಃ ಸ್ಮೃತಃ ।
ಸತ್ಯಗಃ ಸಾತ್ಯನಾಮಾಽಸೌ..... ॥ *– ಬೃ.ಉ.ಭಾ. 4-5-9,12*

12. ಏವಂ ದೇವೋ ವಾಯುರಪಿ ಧಾರಕೋಽನ್ಯೋ ನ ವಿದ್ಯತೇ ।
ರೂಪಂ ರೂಪಂ ತಥಾಪ್ಯಸ್ಯ ಪ್ರತ್ಯಭೂತ್ ಪ್ರತಿರೂಪಕಃ ।
ಅಚೇತನಃ ಸ್ಪರ್ಶಗಮ್ಯೋ ಯೋಽಯಮೇವಂ ಜನಾರ್ದನಃ ॥
*– ಕಾಠ.ಉ.ಭಾ. 2-2-11.*

1. ಸ್ಥಿತ ಏವ ಹೀದಂ ಮುಖ್ಯಪ್ರಾಣಃ ಕರೋತಿ ಕಾರಯತಿ ಬಲತಿ ಬಾಲಯತಿ ಧತ್ತೇ ಧಾರಯತಿ ಪ್ರಭುಂ ವಾ ಏನಮಾಹುಃ ।
*– ಪೌತ್ರಾಯಣಶ್ರುತಿ [ಬ್ರ.ಸೂ.ಭಾ. 2-4-19]*

- ಹನ್ನೆರಡೇ ಇಂದ್ರಿಯಗಳು ಎಂದು ಜ್ಞಾನಿಗಳು ಹೇಳುವರು. ಮುಖ್ಯಪ್ರಾಣ ಇಂದ್ರಿಯ ಅಲ್ಲ. ವಿಷಯಪದಾರ್ಥಗಳತ್ತ ಧಾವಿಸುವ ಇಂದ್ರಿಯಗಳ ನಿಯಾಮಕನಾಗಿರುವವನು ಮುಖ್ಯಪ್ರಾಣ.2

- 'ಶ್ರೋತ್ರ ಮುಂತಾದ ಐದು ಜ್ಞಾನೇಂದ್ರಿಯಗಳು. ವಾಗಿಂದ್ರಿಯವೇ ಮುಂತಾದ ಐದು ಕರ್ಮೇಂದ್ರಿಯಗಳು. ಮನಸ್ಸು ಮತ್ತು ಬುದ್ಧಿ ಈ ಇಂದ್ರಿಯಗಳಿಗೆ ಸಹಕಾರಿಗಳು. ಹೀಗೆ ಒಟ್ಟು ಹನ್ನೆರಡು ಇಂದ್ರಿಯಗಳು ವಿಷಯಪದಾರ್ಥಗಳತ್ತ ಹರಿಯುವ ಪ್ರಯುಕ್ತ ಇಂದ್ರಿಯಗಳೆನಿಸಿರುವವು. ಇವುಗಳನ್ನು ನಿಯಂತ್ರಿಸುವವನು ಮುಖ್ಯಪ್ರಾಣ. ಅವನು ತನ್ನ ಸ್ಥಾನದಲ್ಲಿದ್ದುಕೊಂಡೇ ಎಲ್ಲ ಚಟುವಟಿಕೆಗಳನ್ನೂ ನಿಭಾಯಿಸುವವ; ಸರ್ವಸಮರ್ಥ.3

- 'ಮುಖ್ಯಪ್ರಾಣನು ಪ್ರತ್ಯೇಕವಾಗಿಯೇ ಇದ್ದುಕೊಂಡು ತಾನೇ ಎಲ್ಲವನ್ನೂ ಮಾಡಲು ಸಮರ್ಥನಾಗಿರುವವನಾದರೂ ಇಂದ್ರಿಯಗಳಲ್ಲಿ ಹಾಗೂ ಇಂದ್ರಿಯಾಭಿಮಾನಿಗಳಲ್ಲಿ ಇದ್ದುಕೊಂಡು ಎಲ್ಲ ಇಂದ್ರಿಯಗಳ ಚಟುವಟಿಕೆಗಳನ್ನೂ ನಡೆಸುವನು.4

- 'ಆರು ತಿಂಗಳಿಗಿಂತ ಕಡಮೆ ವಯಸ್ಸಿನ ಮಕ್ಕಳಲ್ಲಿ ಮನಸ್ಸಿನಿಂದ ನಡೆಯಬೇಕಾದ ಚಟುವಟಿಕೆ ಕೇವಲ ಪ್ರಾಣನಿಂದಲೇ ನಡೆಯುವುದು. ಹೊರತು ಮನೋಽಭಿಮಾನಿ ರುದ್ರನಿಂದಲ್ಲ. ಆದುದರಿಂದಲೇ ಆ ವಯಸ್ಸಿನಲ್ಲಿ ಅನುಭವಕ್ಕೆ ಬಂದ ವಿಷಯದ ಸ್ಮರಣೆಯು ದೊಡ್ಡವರಾದ ಮೇಲೆ ಮಕ್ಕಳಿಗೆ ಇರುವುದಿಲ್ಲ. ಮೋಕ್ಷಾವಸ್ಥೆಯಲ್ಲೂ ಕೇವಲ ಪ್ರಾಣದೇವರ ಪ್ರೇರಣೆಯಿಂದಲೇ ಜ್ಞಾನ ಉಂಟಾಗುವುದು. ಹೀಗಿದ್ದರೂ ಮುಕ್ತನಿಗೆ ಸಂಸಾರಾವಸ್ಥೆಯಲ್ಲಿ ಅನುಭವಿಸಿದ ವಿಷಯದ ಸ್ಮರಣೆ ಉಂಟಾಗುವುದು. ಯಾಕೆಂದರೆ ಮುಕ್ತನಿಗೆ ಪ್ರಾಣದೇವನು ವಶನಾಗಿರುವನು. ಪ್ರಾಣದೇವ ವಶನಾಗುವುದೆಂದರೆ ಬಲಾತ್ಕಾರದಿಂದ ಅಧೀನನಾಗುವುದೆಂಬ ಅರ್ಥವಲ್ಲ. ಮತ್ತೆ ಭಕ್ತಿಯಿಂದ ಅವನ ಅನುಗ್ರಹಕ್ಕೆ ಪಾತ್ರನಾಗಿ ಅವನನ್ನು ಒಲಿಸಿಕೊಳ್ಳುವುದೆಂಬ ಅರ್ಥ. ಪ್ರಾಣನನ್ನು

---

2. ದ್ವಾದಶೈವೇಂದ್ರಿಯಾಣ್ಯಾಹುಃ ಪ್ರಾಣೋ ಮುಖ್ಯಸ್ತ್ವನಿಂದ್ರಿಯಮ್ ।
ದ್ರವತಾಂ ಹೀಂದ್ರಿಯಾಣಾಂ ತು ನಿಯಂತಾ ಪ್ರಾಣ ಏಕರಾಟ್ ॥
*– ಪೌತ್ರಾಯಣ ಶ್ರುತಿ [ಬ್ರ.ಸೂ.ಭಾ. 2-4-18]*

3. ಶ್ರೋತ್ರಾದೀನಿ ತು ಪಂಚೈವ ತಥಾ ವಾಗಾದಿಪಂಚಕಮ್ ।
ಮನೋಬುದ್ಧಿಸಹಾಯಾನಿ ದ್ವಾದಶೈವೇಂದ್ರಿಯಾಣಿ ತು ॥
ವಿಷಯದ್ರವಣಾತ್ ತೇಷಾಮಿಂದ್ರಿಯತ್ವಮುದಾಹೃತಮ್ ।
ತೇಷಾಂ ನಿಯಾಮಕಃ ಪ್ರಾಣಃ ಸ್ಥಿತ ಏವಾಖಿಲಪ್ರಭುಃ ॥
*– ಬೃಹತ್ಸಂಹಿತಾ [ಬ್ರ.ಸೂ.ಭಾ. 2-4-18]*

4. ಸರ್ವೇಂದ್ರಿಯಾಣಾಂ ವ್ಯಾಪಾರಾನ್ ಪ್ರಾಣ ಏವ ಕರೋತ್ಯಯಮ್ ।
ಇಂದ್ರಿಯಸ್ಥಃ ಪೃಥಕ್ ಚಾಸೌ ಶಕ್ತೋಽಪಿ ಸ್ವಯಮೇವ ತು ॥
*– [ಛಾಂ.ಉ.ಭಾ. 5-1-11]*

ಹೀಗೆ ಭಕ್ತಿಯಿಂದ ಒಲಿಸಿಕೊಂಡರೆ ಅವನ ಅಧೀನದಲ್ಲಿರುವ ಮನಸ್ಸು ಹಾಗೂ ಇತರ ಇಂದ್ರಿಯಗಳು ವಶವಾಗುವವು.5

- ಚಕ್ಷುರಾದಿ ಇಂದ್ರಿಯಗಳು ಹಾಗೂ ಅವುಗಳ ಅಭಿಮಾನಿ ದೇವತೆಗಳು, ಮನಸ್ಸು, ಅದರ ಅಭಿಮಾನಿದೇವತೆ, ಜೀವ ಹಾಗೂ ಜೀವನ ಜ್ಞಾನಾದಿಗಳು ಯಾರ ವಶದಲ್ಲಿ ಇದೆಯೋ ಅವನೇ ಮುಖ್ಯಪ್ರಾಣ –ಎಂದು ತಿಳಿಯಬೇಕು. ಅವನೇ ಜೀವನಿಗಿಂತಲೂ ಮುಖ್ಯವಾಗಿ ಜ್ಞಾತೃ ಹಾಗೂಮಂತೃ. ಅವನಿಗೂ ಸ್ವತಂತ್ರವಾಗಿ ಜ್ಞಾತೃತ್ವವನ್ನಾಗಲೀ, ಮಂತೃತ್ವವನ್ನಾಗಲೀ ಹೊಂದಲು ಸಾಧ್ಯವಿಲ್ಲ. ಅವನಿಗೆ ಜ್ಞಾತೃತ್ವ, ಮಂತೃತ್ವಾದಿ ಗಳನ್ನು ನೀಡುವವನು ಶ್ರೀಹರಿ.6

- ವಾಯುದೇವನು ಇಂದ್ರಿಯಗಳಲ್ಲಿರುವ, ಇಂದ್ರಿಯಗಳಲ್ಲೂ ವಿಶೇಷವಾಗಿ ಮನಸ್ಸಿನಲ್ಲಿ ರುವ ತನ್ನ ಸ್ವರೂಪಗಳಿಂದ ಜ್ಞಾನಗಳನ್ನು ಹುಟ್ಟಿಸುವನು. ಕರ್ಮೇಂದ್ರಿಯಗಳಿಂದ ಕರ್ಮಗಳನ್ನು ಮಾಡಿಸುವನು. ಬೇರೆಯೇ ಇರುವ ತನ್ನ ರೂಪದಿಂದ ಜೀವನನ್ನು ಧರಿಸುವನು. ಜೀವಸ್ವರೂಪದಲ್ಲಿರುವ ರೂಪದಿಂದ 'ಅಹಂ' –ನಾನು ಎಂದು ಸ್ವರೂಪದ ಜ್ಞಾನ ಬರುವಂತೆ ಮಾಡುವನು. ಹೀಗೆ ಒಬ್ಬನೇ ಪ್ರಾಣ ಹೊರಗಿನ ಹಾಗೂ ಒಳಗಿನ ಕರಣಗಳಿಗೆ ಒಡೆಯನಾಗಿರುವನು. ಹೀಗೆ ಕರಣಗಳಿಗೆ ಬೇರೆ ಬೇರೆ ದೇವತೆಗಳು ಅಭಿಮಾನಿಗಳಾಗಿರುವರಾದರೂ ವಾಯುದೇವನ ಕೃಪೆಯಿಂದ ಆ ಅಭಿಮಾನಿಗಳಲ್ಲಿದ್ದುಕೊಂಡು ಅವರ ಮೂಲಕ ಕಾರ್ಯ ನಡೆಸುವನು. ತಾನು ಆ ಅಭಿಮಾನಿಗಳ ಮಾಧ್ಯಮವಿಲ್ಲದೆಯೇ ನಡೆಸಬಹುದಾದರೂ ಆ ದೇವತೆಗಳಿಂದಲೂ ಇಂದ್ರಿಯಾದಿಗಳನ್ನು ನಿಯಮಿಸುವ ಪ್ರಯುಕ್ತ ಫಲ ದೊರಕಲೆಂದು ಕೃಪೆಯಿಂದ ಆ ಅಭಿಮಾನಿಗಳನ್ನು ಮಾಧ್ಯಮರನ್ನಾಗಿಟ್ಟುಕೊಳ್ಳುವನು. ಅವನಿಗೂ ಭಗವಾನ್ ವಿಷ್ಣು ಒಡೆಯನಾಗಿರುವನು. ವಾಯುದೇವನು ಹೇಗೆ ಇತರರಲ್ಲಿದ್ದುಕೊಂಡು ಅವರ

---

5. ಷಣ್ಮಾಸಾತ್ ಪೂರ್ವಬಾಲಾನಾಂ ಕೇವಲಂ ಪ್ರಾಣತೋ ಭವೇತ್ ।
ವ್ಯಾಪಾರ್ಯಂ ಮನಸಾ ಸರ್ವಂ ಅತಃ ಪಶ್ಚಾದಸಂಸ್ಮೃತಿಃ ॥
ತುರೀಯಾಯಾಮವಸ್ಥಾಯಾಂ ಪ್ರಾಣಾದೇವ ವಿಬೋಧನಮ್ ।
ತಥಾಪಿ ಸಂಸ್ಮೃತಿಸ್ತತ್ರ ಪ್ರಾಣವಶ್ಯತಯಾ ಭವೇತ್ ॥
ಪ್ರಾಣಸ್ಯ ವಶ್ಯತಾ ನಾಮ ಭಕ್ತ್ಯಾ ಸ್ಯಾತ್ ತತ್ಪ್ರಸಾದತಃ ।
ಪ್ರಾಣೇ ವಶ್ಯೇ ಮನೋ ವಶ್ಯಮಿಂದ್ರಿಯಾಣಿ ಚ ಸರ್ವಶಃ ॥
*– [ಛಾಂ.ಉ.ಭಾ. 5-1-11]*

6. ಚಕ್ಷುರಾದ್ಯ ಮನೋ ಜೀವೋ ದೃಷ್ಟ್ಯಾದಿಶ್ಚಾಪಿ ಯದ್ವಶೇ ।
ಸ ಪ್ರಾಣ ಇತಿ ವಿಜ್ಞೇಯೋ ಜ್ಞಾತಾ ಮಂತಾ ಚ ಸ ಪ್ರಭುಃ ॥
ತಸ್ಯಾಪಿ ಜ್ಞಾತೃಮಂತೃತ್ವಂ ನ ಸ್ವತಃ ಶಕ್ಯತೇ ಕ್ವಚಿತ್ ।
ಯಸ್ತಸ್ಯ ಜ್ಞಾತೃಮಂತ್ರತ್ವಾದಾತಾ ಸ ಭಗವಾನ್ ಹರಿಃ ॥
*– ಪ್ರಕಾಶಿಕಾ [ಭಾಗ.ತಾ.ನಿ. 7-2-45, 46.]*

ಮೂಲಕ ಕರ್ಮಗಳನ್ನು ನಡೆಸುವನೋ ಹಾಗೆ ಶ್ರೀವಿಷ್ಣು ಪ್ರಾಣದೇವನ ಒಳಗೆ ಇದ್ದು ಕೊಂಡು ಪ್ರಾಣನ ಮೂಲಕ ಕರ್ಮಗಳನ್ನು ನಡೆಸುವನು.7

- 'ಯಾರು ಶರೀರವನ್ನು ಹೊಂದುವುದು ಉತ್ಪತ್ತಿ ಎನಿಸುವುದೋ ಯಾರು ಶರೀರವನ್ನು ತ್ಯಜಿಸುವುದು ಮರಣ ಎನಿಸುವುದೋ ಅಂತಹ ಮುಖ್ಯಪ್ರಾಣನಿಗೆ ಸೂಕ್ಷ್ಮವಾಗಿ ಉತ್ಪತ್ತಿಯಾಗಲೀ ಮರಣವಾಗಲೀ ಹೇಗೆ?'8
- 'ದೇಹದಲ್ಲಿ ಇರುವ ಪ್ರಾಣ, ಅಪಾನ, ವ್ಯಾನ, ಉದಾನ ಹಾಗೂ ಸಮಾನ ಈ ಎಲ್ಲರೂ ಮುಖ್ಯಪ್ರಾಣನ ದಾಸರು. ಮುಖ್ಯಪ್ರಾಣನು ಇವರೆಲ್ಲರಿಗೆ ಚಕ್ರವರ್ತಿಯಂತೆ ಇರುವವನು.'9
- 'ಪ್ರಾಣಾಪಾನಾದಿಗಳೆಲ್ಲರೂ ಯಾವಾಗಲೂ ಮುಖ್ಯಪ್ರಾಣನ ದಾಸರಾಗಿಯೇ ಇರುವುದರಿಂದ ಯಾವಾಗಲೂ ಮುಖ್ಯಪ್ರಾಣನ ಆಜ್ಞಾನುಸಾರವಾಗಿಯೇ ಉಸಿರಾಟ, ಮಲಮೂತ್ರ ವಿಸರ್ಜನೆ ಮುಂತಾದ ತಮ್ಮತಮ್ಮ ಕರ್ತವ್ಯಗಳನ್ನು ನಡೆಸುತ್ತಿರುವರು.'10
- 'ಪ್ರಾಣ ಅಪಾನ ವ್ಯಾನ ಉದಾನ ಹಾಗೂ ಸಮಾನ –ಈ ಪಂಚವಾಯುಗಳು ಮುಖ್ಯಪ್ರಾಣನದ್ದೇ ಸ್ವರೂಪಗಳು. ಆದುದರಿಂದ ಮುಖ್ಯಪ್ರಾಣನೇ ಪ್ರಾಣಿಗಳ ದೇಹದಲ್ಲಿ ತನ್ನ ಐದು ರೂಪಗಳಿಂದ ಯಾವಾಗಲೂ ಇರುವನು.'11

---

7. ಇಂದ್ರಿಯಸ್ಥೈಃ ಸ್ವರೂಪೈಸ್ತು ಜ್ಞಾನಾನಿ ಜನಯತ್ಯಸೌ ।
ಮನಸ್ಥೇನ ವಿಶೇಷೇಣ ಕಾರ್ಮ್ಯೈಃ ಕರ್ಮಕೃದೇವ ಚ ॥
ಪೃಥಕ್‌ಸ್ಥಿತೇನ ರೂಪೇಣ ಜೀವಂ ಧಾರಯತಿ ಪ್ರಭುಃ ।
ಜೀವಸ್ಥಿತೇನ ರೂಪೇಣ ವೇದಯತ್ಯಹಮಿತ್ಯಪಿ ।
ಪ್ರಾಣ ಏಕೋ ವಶೀ ನಿತ್ಯಂ ಬಾಹ್ಯಾಂತಃಕರಣೇಶ್ವರಃ ।
ತಾನ್ಯೇತಾನ್ಯವಶಾನ್ಯೇವ ತಥಾಽಪಿ ಕೃಪಯೈವ ಸಃ ।
ಪೃಥಕ್ ಭಕ್ತೋಽಪಿ ತದ್ಗೈಸ್ತು ಸ್ವರೂಪೈಸ್ತದ್ಗಕಾರ್ಯ ಕೃತ್ ।
ತಸ್ಯೇಶೋ ಭಗವಾನ್ ವಿಷ್ಣುರೇವಮೇಷ ಯಥಾಽನ್ಯಗಃ ॥
*– ಶ್ರುತಿ (ನ್ಯಾಯವಿವರಣ, 4-2-2)*

8. ಯತ್ಪ್ರಾಪ್ತಿರ್ಯತ್‌ಪರಿತ್ಯಾಗ ಉತ್ಪತ್ತಿರ್ಮರಣಂ ತಥಾ ।
ತಸ್ಯೋತ್ಪತ್ತಿರ್ಮೃತಿಶ್ಚೈವ ಕಥಂ ಪ್ರಾಣಸ್ಯ ಯುಜ್ಯತೇ ॥
*– ವಾಯುಪ್ರೋಕ್ತೇ [ಬ್ರ.ಸೂ.ಭಾ. 2-4-9]*

9. ಸರ್ವೇ ವಾ ಏತೇ ಮುಖ್ಯದಾಸಾಃ ಪ್ರಾಣೋಽಪಾನೋ ವ್ಯನ ಉದಾನಃ ಸಮಾನ ಇತಿ ।
ಅಥ ಪ್ರಾಣೋ ವಾವ ಸಮ್ರಾಡಿತಿ ॥ *– ಕೌಂಡಿನ್ಯಶ್ರುತಿ [ಬ್ರ.ಸೂ.ಭಾ. 2-4-13]*

10. ಪ್ರಾಣಾಪಾನಾದಯಃ ಸರ್ವೇ ಮುಖ್ಯದಾಸಾ ಯತೋಽನಿಶಮ್ ।
ಅತಸ್ತದಾಜ್ಞಯಾ ನಿತ್ಯಂ ಸ್ವಾನಿ ಕರ್ಮಾಣಿ ಕುರ್ವತೇ ॥
*– ವಾಯುಪ್ರೋಕ್ತೋ [ಬ್ರ.ಸೂ.ಭಾ. 2-4-13]*

11. ಮುಖ್ಯಸ್ಯೈವ ಸ್ವರೂಪಾಣಿ ಪ್ರಾಣಾದ್ಯಾಃ ಪಂಚವಾಯವಃ ।

- 'ಈ ಶರೀರವು ಐದು ಸ್ವರೂಪವುಳ್ಳವನಿಂದ ನಡೆಯುತ್ತಿದೆ. ಮುಖ್ಯಪ್ರಾಣನೇ ಐದು ಸ್ವರೂಪಗಳುಳ್ಳವನು. ಪ್ರಾಣ, ಅಪಾನ, ವ್ಯಾನ, ಉದಾನ ಹಾಗೂ ಸಮಾನ ಎಂಬುದಾಗಿ ಐದು ಸ್ವರೂಪಗಳು. ಅಂತಹ ಐದು ರೂಪಗಳಿಂದ ಐದು ದಾಸರು ಹುಟ್ಟಿಕೊಳ್ಳುವರು. ಪ್ರಾಣನಿಂದ ಪ್ರಾಣ, ಅಪಾನನಿಂದ ಅಪಾನ, ವ್ಯಾನನಿಂದ ವ್ಯಾನ, ಉದಾನನಿಂದ ಉದಾನ ಹಾಗೂ ಸಮಾನನಿಂದ ಸಮಾನ.12
- 'ವಾಯು ಚತುರ್ಮುಖ ಹಾಗೂ ಆದಿತ್ಯ –ಈ ಮೂರು ದೇವತೆಗಳು ಸತ್ಯ ಎನಿಸು ವಲ್ಲಿ ವಾಯುದೇವನು ಶೇಷ, ಗರುಡ, ರುದ್ರಾದಿಗಳಿಂದ ಯಾವಾಗಲೂ ಉತ್ತಮ ನಾಗಿರುವುದರಿಂದ 'ಸತ್' ಎನಿಸುವನು. ಕಣ್ಣಿನ ಬಿಳಿ ಗುಡ್ಡೆಯಲ್ಲಿ ಇರುವನು.'13
- 'ಶ್ರೀಹರಿಯು ಪುರುಷಶರೀರದಲ್ಲಿರುವ ಅಗ್ನ್ಯಾದಿ ಪಂಚಭೂತಗಳಲ್ಲಿಯೂ ಬೇರೆ ಬೇರೆಯಾಗಿ ಪ್ರದ್ಯುಮ್ನಾದಿ ರೂಪದಿಂದ ಪಂಚರೂಪನಾಗಿ ಇರುವನು. ಅವನೇ ಪ್ರಾಣಾದಿ ರೂಪನಾದ ವಾಯುವಿನಲ್ಲಿ ಅನಿರುದ್ಧಾದಿ ಐದು ರೂಪಗಳಿಂದ ಇರುವನು. ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಹಾಗೂ ನಾರಾಯಣ –ಹೀಗೆ ಐದು ರೂಪಗಳಲ್ಲಿ ಇರುವ ಭಗವಂತನು ವಾಯುವಿನಲ್ಲಿ ವಿಶೇಷವಾಗಿ ಸನ್ನಿಧಾನವುಳ್ಳವನಾಗಿದ್ದಾನೆ. ಆದುದರಿಂದಲೇ ಪೃಥಿವ್ಯಾದಿ ಸ್ವರೂಪವಾದ ಮನಸ್ಸು ಮುಂತಾದ ಇಂದ್ರಿಯಗಳ ಅಭಿಮಾನಿದೇವತೆಗಳು ಪ್ರಾಣಾಭಿಮಾನಿ ವಾಯುವನ್ನೇ ಯಾವಾಗಲೂ ಆಶ್ರಯಿಸಿಕೊಂಡಿರುವರು. ಅವನು ಶರೀರದಿಂದ ತೊಲಗಿದರೆ ಅವನನ್ನೇ ಅನುಸರಿಸಿ ಇವರೂ ತೊಲಗುವರು.'14

---

ಸ ಏವ ಪ್ರಾಣಿನಾಂ ದೇಹೇ ಪಂಚಧಾ ವರ್ತತೇಽನಿಶಮ್ ॥

*– ಗೌಪವನಶ್ರುತಿ [ಬ್ರ.ಸೂ.ಭಾ. 2-4-13]*

12. ಅಥ ಪಂಚವೃತ್ತ್ಯುತ್ ಪ್ರವರ್ತತೇ ಪ್ರಾಣೋ ವಾವ ಪಂಚವೃತ್ತಿಃ ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನ ಇತಿ ತೇಭ್ಯೋ ವಾ ಏತೇಭ್ಯಃ ಪಂಚದಾಸಾಃ ಪ್ರಜಾಯಂತೇ ಪ್ರಾಣಾದ್ ವಾವ ಪ್ರಾಣೋಽಪಾನಾದಪಾನೋ ವ್ಯಾನಾದ್ ವ್ಯಾನ ಉದಾನಾದುದಾನಃ ಸಮಾನಾದೇವ ಸಮಾನೋ...... ॥ *– [ಬ್ರ.ಸೂ.ಭಾ. 2-4-13]*

13. ದೇವತಾತ್ರಯಮನ್ಯಚ್ಚ ಪೃಥಕ್ ಸತ್ಯಮಿತೀರ್ಯತೇ ।
ಶೇಷವೀಂದ್ರ ಶಿವಾದಿಭ್ಯ ಉತ್ತಮತ್ವಾತ್ ಸದೈವ ಹಿ ॥
ವಾಯುಃ ಸದಿತಿ ಸಂಪ್ರೋಕ್ತೋ.... ಶುಕ್ಲಕೃಷ್ಣಕನೀನಾಸು ಚಕ್ಷುಷೋಽಪ್ಯೇತ ಆಶ್ರಿತಾಃ
*– [ಐ.ಉ.ಭಾ. 1-4-13]*

14. ಪುರುಷಸ್ಥ ಪಂಚಭೂತೇಷು ಪಂಚರೂಪೋ ಹರಿಃ ಸ್ಥಿತಃ ।
ಪ್ರದ್ಯುಮ್ನಾದಿಸ್ವರೂಪೇಣ ಜ್ಯೋತಿರಾದೌ ಪೃಥಕ್‌ಪೃಥಕ್ ॥
ಸ ಏವ ಚ ಪುನರ್ವಾಯೌ ಪಂಚಧಾಽವಸ್ಥಿತಃ ಪ್ರಭುಃ ।
ಪ್ರಾಣಾದಿರೂಪೇ ವಸತಿ ಹ್ಯನಿರುದ್ಧಾದಿರೂಪವಾನ್ ॥
ಅನಿರುದ್ಧಶ್ಚ ಪ್ರದ್ಯುಮ್ನಸ್ತಥಾ ಸಂಕರ್ಷಣಃ ಪ್ರಭುಃ ।
ವಾಸುದೇವೋ ನಾರಾಯಣಃ ಪಂಚರೂಪ ಇತಿ ಕ್ರಮಾತ್ ॥

- ದೇಹದ ಮಜ್ಜೆಗಳಲ್ಲಿ ಭಗವಂತನ ವಿಶೇಷ ಸನ್ನಿಧಾನವಿದೆ. ಯಾಕೆಂದರೆ ಪ್ರಾಣನು ವಿಶೇಷವಾಗಿ ಮಜ್ಜೆಗಳಲ್ಲಿ ನೆಲೆಸಿರುವನು. ಮಜ್ಜೆಯೇ ರೇತಸ್ಸಾಗುವುದು. ರೇತಸ್ಸಿನಲ್ಲಿ ವಾಯುದೇವ ವಿಶೇಷವಾಗಿ ಸನ್ನಿಹಿತನಾಗಿರುವನು. ಪ್ರಾಣನಿಂದ ಕೂಡಿದ ಆ ರೇತಸ್ಸೇ ಗರ್ಭವಾಗಿ ಪರಿಣಾಮ ಹೊಂದುವುದು. ಒಂದು ವೇಳೆ ರೇತಸ್ಸಿನಲ್ಲಿ ಪ್ರಾಣ ಇಲ್ಲದಿದ್ದರೆ, ಆ ರೇತಸ್ಸಿನಿಂದ ಗರ್ಭ ಆಗಿ ಪರಿಣಮಿಸದು. ಆದ್ದರಿಂದಲೇ ಪ್ರಾಣನ ವಿಶೇಷ ಸನ್ನಿಧಾನವಿರದ ಮಾಂಸಾದಿ ಇತರ ಧಾತುಗಳು ಗರ್ಭವಾಗಿ ಪರಿಣಮಿಸುವುದಿಲ್ಲ. ಆದ್ದರಿಂದ ಪ್ರಾಣನು ರೇತಸ್ಸಿನಲ್ಲಿ ವಿಶೇಷವಾಗಿ ಸನ್ನಿಹಿತನಾಗಿದ್ದಾನೆ. ಪ್ರಾಣನಲ್ಲಿ ನಾರಾಯಣನು ವಿಶೇಷವಾಗಿ ಸನ್ನಿಹಿತನಾಗಿದ್ದಾನೆ. ಆದುದರಿಂದ ಮಜ್ಜೆಗಳಲ್ಲೂ ಅವನು ವಿಶೇಷವಾಗಿ ಸನ್ನಿಹಿತನಾಗಿರುವನು.15

- ಸರಸ್ವತಿಯು ಕಣ್ಣಿನಲ್ಲಿರುವಳು. ವಾಯು ಜೀವನಲ್ಲಿರುವನು. ಈ ಇಬ್ಬರು ದೇವತೆಗಳನ್ನೂ ತಿಳಿದುಕೊಂಡು, ಇವರಲ್ಲಿರುವ ಶ್ರೀಹರಿಯನ್ನು ಯಾವಾಗಲೂ ಧ್ಯಾನಮಾಡಬೇಕು.16

- ಶರೀರದಲ್ಲಿರುವ ಪ್ರಾಣದೇವ, ಸ್ವತಂತ್ರನಾಗಿರುವುದರಿಂದ 'ಸ್ವ' ಎನಿಸುವ ವಿಷ್ಣುವಿನಿಂದ, ಜೀವರನ್ನು ಸಂತೋಷಪಡಿಸುವುದರಿಂದ 'ಸ್ವರ' ಎನಿಸುವನು.17

---

ಪಂಚರೂಪೋಽಪಿ ಭಗವಾನ್ ಯಸ್ಮಾದ್ ವಾಯೌ ವಿಶೇಷತಃ ।
ಸ್ಥಿತಸ್ತೇನ ಚ ಖಾದಿಭ್ಯೋ ವಾಯುರೇವ ವಿಶಿಷ್ಯತೇ ॥
ಅತ ಏವ ಪೃಥಿವ್ಯಾದಿಸ್ವರೂಪಾ ಮನ ಆದಯ ।
ದೇವಾಃ ಪ್ರಾಣಾಶ್ರಿತಾ ನಿತ್ಯಂ ಗಚ್ಛಂತಿ ಪ್ರಾಣಮನ್ವಪಿ ॥ – *[ಐ.ಉ.ಭಾ. 2-2-3-2]*

15. ..........ವ್ಯಕ್ತಿರ್ಮಜ್ಜಾಸು ತಸ್ಯೈವ ಪ್ರಾಣೋ ಮಜ್ಜಾಸು ಸಂಸ್ಥಿತಃ ।
ಮಜ್ಜೈವ ರೇತೋ ಭವತಿ ರೇತಸಿಸ್ಥೋ ವಿಶೇಷತಃ ॥
ಪ್ರಾಣಸ್ತೇನ ಹಿ ತದ್ರೇತೋ ಯುಕ್ತಂ ಪ್ರಾಣೇನ ಸರ್ವದಾ ।
ಯದಿ ಪ್ರಾಣೋ ನ ತದ್ರೇತೋ ನ ಗರ್ಭತ್ವಂ ವ್ರಜೇತ್ ಕ್ವಚಿತ್ ॥
ವಿಶೇಷಪ್ರಾಣಸಂಬಂಧವರ್ಜಿತಾನ್ಯತ ಏವ ಹಿ ।
ನ ಮಾಂಸಾದೀನಿ ಗರ್ಭತ್ವಂ ಯಾಂತ್ಯತಃ ಸ ಹಿ ರೇತಸಿ ॥
ವಿಶೇಷೇಣ ಸ್ಥಿತಃ ಪ್ರಾಣಃ ಪ್ರಾಣೇ ಚೈವ ವಿಶೇಷತಃ ।
ಸ್ಥಿತೋ ನಾರಾಯಣೋ ದೇವಸ್ತಸ್ಮಾನ್ಮಜ್ಜಾಸು ಚ ಸ್ಥಿತಃ ॥
– *[ಐ.ಉ.ಭಾ. 2-8-2-3,4,5]*

16. ಸರಸ್ವತೀ ಹಿ ಚಕ್ಷುಃಸ್ಥಾ ಜೀವಸ್ಥೋ ವಾಯುರೀಶ್ವರಃ ।
ವಿದಿತ್ವಾ ತಾವುಭೌ ದೇವೌ ತದ್ಗಂ ಧ್ಯಾಯೇದ್ಧರಿಂ ಸದಾ ॥
– *ಮಾನಸೇ [ಛಾ.ಉ.ಭಾ. 1-3-8]*

17. .......ವಾಯುಃ ಪ್ರಾಣಃ ಶರೀರಗಃ ।
ಸ್ವೇ ವಿಷ್ಣೌ ರಮಯತ್ಯೇನಂ ಜೀವಂ ತಸ್ಮಾತ್ ಸ್ವರಃ ಸ್ಮೃತಃ ॥
– *ಮಾಹಾತ್ಮ್ಯೇ [ಛಾ.ಉ.ಭಾ. 1-3-17]*

- ರಥದಲ್ಲಿ ಸಾರಥಿ ಹೇಗೋ ಹಾಗೆ ಶರೀರದಲ್ಲಿ ಮುಖ್ಯಪ್ರಾಣದೇವ.18
- ಪ್ರತಿಯೊಂದು ದೇಹದಲ್ಲೂ ಪಂಚಭೂತ, ಮನಸ್ಸು, ಬುದ್ಧಿ ಹಾಗೂ ರುದ್ರನೇ ಕೊನೆಯಾಗಿ ಉಳ್ಳ ತತ್ತ್ವಾಭಿಮಾನಿದೇವತೆಗಳು –ಈ ಎಂಟು ವ್ಯಕ್ತಿಗಳನ್ನು ಒಳಗಿನಿಂದಲೂ ಹೊರಗಿನಿಂದಲೂ ಪ್ರೇರಿಸುವುದರಿಂದ ವಾಯುದೇವ ವ್ಯಷ್ಟಿ ಹಾಗೂ ಸಮಷ್ಟಿ ಎನಿಸಿರುವನು. ಹಾಗೆಯೇ ಸಮಷ್ಟಿಯಾಗಿ ಪ್ರೇರಿಸುವುದರಿಂದ ಸಮಷ್ಟಿ ಎಂದೂ, ಪ್ರತ್ಯೇಕವಾಗಿ ಪ್ರೇರಿಸುವುದರಿಂದ 'ವ್ಯಷ್ಟಿ' –ಎಂದೂ ಎನಿಸಿರುವನು.19
- ವಿಷ್ಣುವಿನಿಂದ ಮುಖ್ಯಪ್ರಾಣನು ಹುಟ್ಟಿದನು. ಮುಖ್ಯಪ್ರಾಣನಿಂದ ಪ್ರಾಣಾದಿ ಹೆಸರಿನ ಇತರ ದೇವತೆಗಳು ಹುಟ್ಟಿದರು. ಮುಖ್ಯಪ್ರಾಣನು ತಾನು ಪ್ರಾಣಾದಿ ಐದು ರೂಪಗಳುಳ್ಳವನಾಗಿ ಚಕ್ರವರ್ತಿ ಸಾಮಂತರಾಜರನ್ನು ಹೇಗೋ ಹಾಗೆ ಇತರ ಪ್ರಾಣಾದಿಗಳನ್ನು ಉಸಿರಾಟ ಮುಂತಾದ ಆಯಾ ಚಟುವಟಿಕೆಗಳಲ್ಲಿ ತೊಡಗಿಸುವನು. ಭಗವಂತನ ಅನುಜ್ಞೆಯಿಂದ ಮೋಕ್ಷ ಮುಂತಾದವುಗಳನ್ನು ನೀಡುವನು.20
- ಎಲ್ಲರ ಹೃದಯದಲ್ಲಿ ಶ್ರೀವಿಷ್ಣು ಆತ್ಮ ಹಾಗೂ ಅಂತರಾತ್ಮ ಎಂಬ ಎರಡು ರೂಪಗಳಿಂದ ಇರುವನು. ರುದ್ರಾದಿಗಳಿಗಿಂತೆಲ್ಲ ಪರಿಪೂರ್ಣಸ್ವರೂಪನಾದ, ಜೀವೋತ್ತಮನಾದ ವಾಯುದೇವನಲ್ಲಿ ಆ ಎರಡು ರೂಪಗಳಿಂದ ಇರುವನು.21
- ಎಲ್ಲವನ್ನೂ ಭಕ್ಷಿಸುವುದರಿಂದ ಅದಿತಿ ಎನಿಸಿರುವ ವಿಷ್ಣು ಪ್ರಾಣಸಹಿತನಾಗಿ ಎಲ್ಲರ ಹೃದಯ ಗುಹೆಯಲ್ಲಿ ಇರುವನು.22
- ಜೀವನು ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಸಾಗುವಾಗ ಮೊದಲು ಪ್ರಾಣನನ್ನು ಪ್ರವೇಶಿಸುವನು. ಪ್ರಾಣನು ಪರಮಾತ್ಮನನ್ನು ಪ್ರವೇಶಿಸುವನು. ಹೀಗೆಯೇ ಸುಪ್ತಿಯಲ್ಲೂ ಉಳಿದ ತತ್ತ್ವಾಭಿಮಾನಿದೇವತೆಗಳೆಲ್ಲರೂ ಪ್ರಾಣನ ವಶದಲ್ಲಿರುವರು.

---

18. ಯಥೈವ ಸಾರಥಿರ್ಯಾನ ಏವಂ ದೇಹೇ ಚ ಮಾರುತಃ ।
*– ಸಾಮಸಂಹಿತಾ [ಛಾ.ಉ.ಭಾ. 8-4-3]*

19. ಪಂಚಭೂತಮನೋಬುದ್ಧಿರುದ್ರಾಣಾಂ ಪ್ರತಿದೇಹಕಮ್ ।
ಬಾಹ್ಯತಶ್ಚಾಪಿ ನೇತೃತ್ವಾದ್ ವಾಯುರ್ವ್ಯಷ್ಟಿಃ ಸಮಷ್ಟಿಕಃ ॥
*– ಪ್ರಭಂಜನೇ [ಭಾಗ.ತಾ.ನಿ. 11-12-43]*

20. ವಿಷ್ಣೋರ್ವಾಯೋಃ ಸಮುತ್ಪನ್ನೋ ವಾಯೋಃ ಸರ್ವಾಶ್ಚ ದೇವತಾಃ ।
ಪ್ರಾಣಾದ್ಯಾಸ್ತನ್ನಯನ್ ಪ್ರಾಣ ಆಜ್ಞಾಪಯತಿ ರಾಜವತ್ ॥
ಸ್ವಯಂ ಚ ಪಂಚರೂಪಃ ಸನ್ ದದ್ಯಾನ್ಮೋಕ್ಷಾದಿಕಂ ಪ್ರಭುಃ ।
*– ಪ್ರಭಂಜನೇ [ಷಟ್.ಉ.ಭಾ. 3.1]*

21. ಆತ್ಮಾಂತರಾತ್ಮೇತಿ ವಿಭುಃ ಏಕ ಏವ ದ್ವಿಧಾ ಸ್ಥಿತಃ ।
ಸ ವಿಷ್ಣುಃ ಪರಮೇ ವಾಯೌ ಪರೇಭ್ಯೋಽಪ್ಯೂರ್ದ್ಧರೂಪಕೇ ॥ *– [ಕಾ.ಉ.ಭಾ. 1-7-1]*

22. ಅದನಾದದಿತಿರ್ವಿಷ್ಣುರ್ಯಃ ಪ್ರಾಣಸಹಿತಃ ಸ್ಥಿತಃ ..... । *– [ಕಾ.ಉ.ಭಾ. 2-1-7]*

* ಪ್ರಾಣೇನ ಸಹ ಸ್ಥಿತೋ ಭವತಿ । *– [ಕಾ.ಉ.ಭಾ.]*

......ಆದುದರಿಂದ ದೇವದೇವೇಶ ಪ್ರಾಣನಾದರೆ, ಅಂತಹ ಪ್ರಾಣನಿಗೂ ಈಶ್ವರ ಶ್ರೀಹರಿ.23

- ಸೃಷ್ಟಿಯ ಪ್ರಾರಂಭದಲ್ಲಿ ಪರಮಾತ್ಮನೊಬ್ಬನೇ ಇದ್ದನು. ಅವನು ಮುಖ್ಯಪ್ರಾಣನನ್ನು ಸೃಷ್ಟಿಸಿದನು. ಮುಖ್ಯಪ್ರಾಣನು ಇಂದ್ರಿಯಗಳನ್ನು ಇಂದ್ರಿಯಾಭಿಮಾನಿಗಳನ್ನು ಸೃಷ್ಟಿಸಿದನು.24

* * *

## 'ಮುಖ್ಯಪ್ರಾಣ ಮತ್ತು ಮೋಕ್ಷ'

**ಸಾಧಕರಿಂದ ಆಧ್ಯಾತ್ಮಿಕ, ಧಾರ್ಮಿಕ ಸಾಧನೆಗಳನ್ನು ನಡೆಸುವಲ್ಲೂ ಪ್ರಮುಖ ಪಾತ್ರವಹಿಸುವ ಮುಖ್ಯಪ್ರಾಣ ಯೋಗ್ಯ ಅಧಿಕಾರಿಗಳಿಗೆ ಮೋಕ್ಷಪುರುಷಾರ್ಥವನ್ನು ದೊರಕಿಸಿಕೊಡುವಲ್ಲೂ, ಮುಕ್ತಿಯೋಗ್ಯರನ್ನು ದೇವರಲ್ಲಿಗೆ ಕರೆದೊಯ್ಯುವಲ್ಲೂ ಪಾತ್ರವಹಿಸುವನು. ಈ ಬಗ್ಗೆ ಬೆಳಕುಚೆಲ್ಲುವ ೨೫ ಪ್ರಮಾಣಗಳ ಸಂಗ್ರಹ ಇರುವ ಇಲ್ಲಿ ೧೩ ಪ್ರಮಾಣಗಳು ಆಕರಗ್ರಂಥದ ಹೆಸರಿನ ಉಲ್ಲೇಖದೊಂದಿಗೇ ಉದಾಹರಿಸಲ್ಪಟ್ಟಿದ್ದರೆ, ೧೨ ಪ್ರಮಾಣಗಳು ಆಕರದ ಉಲ್ಲೇಖವಿಲ್ಲದೆ ಉದಾಹೃತವಾದವು.**

- 'ಪ್ರತೀಕಾಲಂಬನ'ರೆನಿಸಿರುವ ಮುಕ್ತಿಯೋಗ್ಯರನ್ನು ವಿದ್ಯುತ್ಪತಿಯಾದ ವಾಯುದೇವನೇ ಪರಬ್ರಹ್ಮನಲ್ಲಿಗೆ ಕೊಂಡೊಯ್ಯುವನು. ಪ್ರಾಣನಾಮಕನಾದ ಅವನನ್ನು ಹೊರತಾಗಿ ಬೇರೆ ಯಾರಿಗೆ ತಾನೇ ಪರಬ್ರಹ್ಮನಲ್ಲಿಗೆ ಕೊಂಡೊಯ್ಯುವ ಶಕ್ತಿ ಇದ್ದೀತು?1

- ವಾಯುದೇವನೇ ಬ್ರಹ್ಮನಲ್ಲಿಗೆ ಕೊಂಡೊಯ್ಯುವನು. ಅವನಿಗಷ್ಟೇ ಆ ಶಕ್ತಿ. ವಾಯುದೇವನನ್ನು ಬಿಟ್ಟು ಬೇರೆ ಯಾರೂ ಬ್ರಹ್ಮನಲ್ಲಿಗೆ ಕೊಂಡೊಯ್ಯುವುದಿಲ್ಲ. ಯಾಕೆಂದರೆ

---

23. ದೇಹಾದ್ ದೇಹಾಂತರ್ಗತೌ ಪ್ರವಿಶೇತ್ ಪ್ರಾಣಮೇವ ತು ।
ಜೀವಃ ಪ್ರಾಣಃ ಪರಾತ್ಮಾನಮೇವಂ ಸುಪ್ತಾವಪಿ ಸ್ಫುಟಮ್ ॥
ತದನ್ಯಾ ದೇವತಾಃ ಸರ್ವಾಃ ಪ್ರಾಣಸ್ಯೈವ ವಶೇ ಸ್ಥಿತಾಃ ।
........ತತಸ್ತು ದೇವದೇವೇಶಃ ಪ್ರಾಣಃ ಪ್ರಾಣೇಶ್ವರೋ ಹರಿಃ ॥
*– ಹರಿವಂಶೇಷು [ಭಾಗ.ತಾ.ನಿ. 11-3-39]*

24. ಆತ್ಮೈವೇದಮಗ್ರ ಆಸೀತ್ ಸ ಪ್ರಾಣಮಸೃಜತ ಸ ಪ್ರಾಣಾನ್ ।
*– ನ್ಯಾಯವಿವರಣ [ಬ್ರ.ಸೂ.ಭಾ. 2-4-3]*

1. ವಿದ್ಯುತ್ಪತಿರ್ವಾಯುರೇವ ನಯೇದ್ ಬ್ರಹ್ಮ ನ ಚಾಪರಃ ।
ಕುತೋಽನ್ಯಸ್ಯ ಭವೇಚ್ಛಕ್ತಿಸ್ತಮೃತೇ ಪ್ರಾಣನಾಯಕಮ್ ॥
*– ಬೃಹತ್ತಂತ್ರೇ [ಬ್ರ.ಸೂ.ಭಾ. 4-3-6]*

ಬ್ರಹ್ಮನಿಗೆ ಪ್ರಿಯನಾಗಿರುವವನು ತಾನೇ ಬ್ರಹ್ಮನಲ್ಲಿಗೆ ಕೊಂಡೊಯ್ಯುವನು. ವಾಯುವನ್ನು ಬಿಟ್ಟರೆ, ಅವನಷ್ಟು ಪರಬ್ರಹ್ಮನಿಗೆ ಪ್ರಿಯರಾದವರು ಮತ್ತೊಬ್ಬರಿಲ್ಲ.'2

- 'ಚತುರ್ಮುಖನಿಂದ ಪ್ರಾರಂಭಿಸಿ, ಮನುಷ್ಯೋತ್ತಮರ ವರೆಗಿನ ಮುಕ್ತರಾದವರಿಗೆಲ್ಲ ವಿಷ್ಣು ಪರಮಾಧಿಪತಿಯಾಗಿದ್ದರೆ, ಅವನ ಬಳಿಕ ಮುಖ್ಯಪ್ರಾಣನಿಂದ ಪ್ರಾರಂಭಿಸಿ ನಾಮಾಭಿಮಾನಿನಿ ಸ್ವಾಹಾಳವರೆಗೆ ಇರುವವರೆಲ್ಲ ಕ್ರಮವಾಗಿ ಒಡೆಯರೆನಿಸುವರು. ಹಾಗೂ ಇವರೆಲ್ಲ ಕ್ರಮವಾಗಿ ಗುರುಗಳೂ ಆಗಿರುವರು. ಯಾಕೆಂದರೆ ಮುಕ್ತರಿಗೆ ಇವರೆಲ್ಲರಿಂದ ತತ್ತ್ವಜ್ಞಾನವು ಸುದೃಢವಾಗಿರುವುದು.3
- 'ವಾಯುದೇವನನ್ನು ತಾತ್ವಿಕವಾಗಿ ವ್ಯಷ್ಟಿಯನ್ನಾಗಿಯೂ, ಸಮಷ್ಟಿಯನ್ನಾಗಿಯೂ ತಿಳಿದು, ಅಂತಹ ವಾಯುದೇವನಿಗಿಂತ ಉತ್ತಮನಾಗಿರುವವನು ಶ್ರೀಹರಿ ಎಂದು ತಿಳಿದವನು ಸಂಸಾರಬಂಧನದಿಂದ ಬಿಡುಗಡೆ ಹೊಂದುವನು.4
- 'ಇಂದ್ರ ಎನಿಸುವ ಪುರುಷರೂಪದ ಗರುಡನು ಹಕ್ಕಿಯ ರೂಪ ತಾಳಿ ಕಾಮರನ್ನು ಮುಕ್ತಿಗಾಗಿ ವಾಯುದೇವನಿಗೆ ಒಪ್ಪಿಸುವನು. ವಾಯುದೇವನು ಮೊದಲು ಅವರನ್ನು ತನ್ನ ದೇಹದಲ್ಲಿಟ್ಟುಕೊಂಡು ಮುಕ್ತರಾದ ಇಂದ್ರರು ಯಾವ ಪ್ರದ್ಯುಮ್ನ ಹೆಸರಿನ ವಿಷ್ಣುವಿನಲ್ಲಿ ಇರುವರೋ ಅಂತಹ ವಿಷ್ಣುವಿನಲ್ಲಿಗೆ ಅವರನ್ನು ಕಳುಹಿಸುವನು. ಹೀಗೆ ವಾಯುದೇವನು ಮೋಕ್ಷಪ್ರದನೆನಿಸುವನು.5 '....ಘನೋದಕದ ಆಚೆ ಇರುವ

---

2. ವಾಯುರೇವ ಬ್ರಹ್ಮ ಗಮಯತಿ ತಸ್ಯ ಹ್ಯೆಷಾ ಶಕ್ತಿಃ ।
ನ ಹ್ಯನ್ಯೋ ಬ್ರಹ್ಮ ಗಮಯತಿ ಪ್ರಿಯೋ ಹ್ಯೇನದ್ ಗಮಯತಿ ನ ಹ್ಯನ್ಯಃ ಪ್ರಿಯೋ ಬ್ರಹ್ಮಣಃ ॥
*– ಶ್ರುತಿಃ [ನ್ಯಾಯವಿವರಣ 4-3-15]*

3. ಪರಮೋಽಧಿಪತಿಸ್ತೇಷಾಂ ವಿಷ್ಣುರೇವ ನ ಸಂಶಯಃ ।
ಬ್ರಹ್ಮಾದಿ ಮಾನುಷಾಂತಾನಾಂ ಸರ್ವೇಷಾಮವಿಶೇಷತಃ ॥
ತತಃ ಪ್ರಾಣಾದಿನಾಮಾಂತಾಃ ಸರ್ವೇಽಪಿ ಪತಯಃ ಕ್ರಮಾತ್ ।
ಆಚಾರ್ಯಾಶ್ಚೈವ ಸರ್ವೇಽಪಿ ಯೈರ್ಜ್ಞಾನಂ ಸುಪ್ರತಿಷ್ಠಿತಮ್ ॥
*– ವಾರಾಹ [ಬ್ರ.ಸೂ.ಭಾ. 4-4-9]*

4. .......ಏವಂ ವ್ಯಷ್ಟಿಂ ಸಮಷ್ಟಿಂ ಚ ಯೋ ವಾಯುಂ ವೇದ ತತ್ವತಃ ।
ತತ್ಪರಂ ಚ ಹರಿಂ ನಿತ್ಯಂ ಮುಚ್ಯತೇ ಸಂಸೃತೇಃ ಪುಮಾನ್ ॥
*– ಪರಮಸಂಹಿತಾ [ಬೃ.ಉ.ಭಾ. 5-3-2]*

5. ಇಂದ್ರನಾಮಾ ತು ಗರುಡಃ ಸಾಮರ್ಥ್ಯಾದೇವ ಕಥ್ಯತೇ ।
ತಸ್ಯ ರೂಪದ್ವಯಂ ನಿತ್ಯಂ ಸೌಪರ್ಣಂ ಪೌರುಷಂ ತಥಾ ॥
ತತ್ರ ಪೌರುಷರೂಪೀ ಸನ್ ಭೂತ್ವಾ ಸೌಪರ್ಣರೂಪವಾನ್ ।
ಕಾಮದೇವಾನುಪಾದಾಯ ಮುಕ್ತೌ ವಾಯೋಃ ಪ್ರಯಚ್ಛತಿ ॥
ವಾಯುಸ್ತಾನ್ ಸ್ವಶರೀರಸ್ಥಾನ್ ಕೃತ್ವೇಂದ್ರಾ ಯತ್ರ ಮುಕ್ತಿಗಾಃ ।
ಪ್ರದ್ಯುಮ್ನನಾಮಕೇ ವಿಷ್ಣಾ ವೇವಂ ವಾಯುರ್ಹಿ ಮೋಕ್ಷದಃ ॥
*– ಪರಮಸಂಹಿತಾ [ಬೃ.ಉ.ಭಾ. 5-3-2]*

ಸುವರ್ಣಮಯವಾದ ಬ್ರಹ್ಮಾಂಡದ ಕಟಾಹ ತ್ರಿವಿಕ್ರಮರೂಪಿ ಪರಮಾತ್ಮನಿಂದ ಒಡೆಯಲ್ಪಟ್ಟಿದ್ದು, ಎಲ್ಲೆಡೆ ಬಿರುಕು ಇದೆ. ಕ್ಷೌರದ ಕತ್ತಿಯ ಅಲಗಿನಂತೆ ಸೂಕ್ಷ್ಮವಾಗಿರುವ ಈ ಬಿರುಕುರೂಪವಾದ ಮಾರ್ಗದ ಮೂಲಕ ಮುಕ್ತರಾಗುತ್ತಿರುವ ಮನ್ಮಥರನ್ನು ಗರುಡನು ವಾಯುವಿಗೆ ಒಪ್ಪಿಸುವನು.'6

- 'ಮುಕ್ತರೂ ಬದುಕುವುದು ಪ್ರಾಣನಿಂದಲೇ. ಆಗಲೂ ಪ್ರಾಣನ ಜೀವನಾಧಾರ ಜನಾರ್ದನನೇ.'7

- ಸರ್ವಲೋಕಾಧಾರರಾಗಿರುವುದರಿಂದ ಹರಿಯನ್ನೂ ವಾಯುವನ್ನೂ 'ವಂಶ' –ಎಂದು ಉಪಾಸನೆ ಮಾಡಿದವನು ಮುಕ್ತಿಯನ್ನು ಹೊಂದುವನು. ಹೀಗೆ ಉಪಾಸನೆ ಮಾಡುವವನನ್ನು ವಿಷ್ಣುವಿಜ್ಞಾನವಿಷಯದಲ್ಲಿ ಯಾರು ನಿಂದಿಸುವರೋ ಅವನಿಗೆ ಉಪಾಸಕನು ಹೀಗೆ ಹೇಳಬೇಕು –ಸರ್ವಾಧಾರನಾದ ಶ್ರೀಹರಿಯನ್ನೂ, ವಾಯುವನ್ನೂ ಉಪಾಸನೆಯಿಂದ ಒಲಿಸಿಕೊಂಡಿರುವ ನನ್ನನ್ನು ಉಪಾಸನೆಯಲ್ಲಿ ಅಸಮರ್ಥನೆನ್ನುತ್ತಿರುವಿ. ಆದರಿಂದ ಹರಿವಾಯುಗಳು ನಿನ್ನನ್ನು ಪರಿತ್ಯಜಿಸುವರು. ಉಪಾಸನಾಸಾಮರ್ಥ್ಯವುಳ್ಳ ಉತ್ತಮಾಧಿಕಾರಿಗಳಾದ ದೇವಾದಿಗಳು ಹೀಗೆ ಹೇಳಬೇಕಾದರೆ, ಅಲ್ಪಜ್ಞಾನಬಲವುಳ್ಳ ಗಂಧರ್ವ ಪಿತೃ ಮುಂತಾದವರು ಹೀಗೆ ಹೇಳಬೇಕು –ಹರಿವಾಯುಗಳನ್ನು ಒಲಿಸಿಕೊಳ್ಳಲು ಬಯಸುತ್ತಿರುವ ನನ್ನನ್ನು ಪ್ರೀತಿಸಲು ನೀನು ಶಕ್ತನಾಗಲಿಲ್ಲ. ಆದ್ದರಿಂದ ಹರಿವಾಯುಗಳು ನಿನ್ನನ್ನು ತೊರೆಯುವರು.8

---

6 .........ತತಸ್ತದಂಡಂ ಚ ಸೌವರ್ಣಂ ತದ್ ಭಿನ್ನಂ ಹರಿಣಾ ಪುರಾ ।
ಸುಷಿರಂ ಸರ್ವತೋ ದಿಕ್ಷು ಕ್ಷುರಧಾರಾಸಮಂ ತತಃ ।
ಸುಪರ್ಣೋ ವಾಯವೇ ತೇನ ಮುಕ್ತಾನ್ ಕಾಮಾನ್ ಪ್ರಯಚ್ಛತಿ ॥
*– ತತ್ತ್ವಸಂಹಿತಾ [ಬೃ.ಉ.ಭಾ. 5-3-2]*

7. ......ಮುಕ್ತಾನಾಮಪಿ ಜೀವನಮ್ ।
ಪ್ರಾಣಾದೇವ ಹಿ ತತ್ರಾಪಿ ಪ್ರಾಣಾಧಾರೋ ಜನಾರ್ದನಃ ॥ *– [ಐ.ಉ.ಭಾ. 1-6-3]*

8. ಸರ್ವಾಧಾರತ್ವತೋ ವಂಶ ಇತ್ಯುಪಾಸೀತ ಯೋ ಹರಿಮ್ ।
ವಾಯುಂ ಚ ಮುಕ್ತಿಮಾಪ್ನೋತಿ ಯ ಏವಂ ತದುಪಾಸಕಮ್ ॥
ನಿಂದೇತ ವಿಷ್ಣುವಿಜ್ಞಾನವಿಷಯೇ ತಂ ವದೇತ ಸಃ ।
ವಿಷ್ಣುನಾ ವಂಶಭೂತೇನ ವಾಯುನಾ ಸಹಿತಂ ತಥಾ ॥
ನ ಶಕ್ನೋಷೀತಿ ಮಾಮಾತ್ಥ ಹಾಸ್ಯತಸ್ತ್ವಾಮತೋ ಹಿ ತೌ ।
ಜ್ಞಾನಸಾಮರ್ಥ್ಯವಾನಿತ್ಥಂ ಬ್ರೂಯಾದ್ ದೇವಾದಿರುತ್ತಮಃ ॥
ಅನ್ಯೋ ಗಂಧರ್ವಪಿತ್ರಾದಿರಲ್ಪಜ್ಞಾನಬಲೋ ಹಿ ಯಃ ।
ಸ ಬ್ರೂಯಾದ್ ವಿಷ್ಣುವಾಯುಭ್ಯಾಂ ಸಂಧಿಮಿಚ್ಛಂತಮೇವ ಮಾಮ್ ॥
ಸಂಧಾತುಂ ನಾಶಕೋ ಯಸ್ಮಾದ್ಧಾಸ್ಯತಸ್ತ್ವಾಮತೋ ಹಿ ತೌ ॥
*– [ಐ.ಉ.ಭಾ. 2-7-4-1,2]*

- ಸಂಸಾರಬಾಧೆಗೊಳಗಾಗಿರುವ ಜೀವರು ವಾಯುದೇವನನ್ನು ಶರಣುಹೊಂದಬೇಕಾಗಿರುವುದರಿಂದ ವಾಯುದೇವನು ಚಾದ್ವ ಎನಿಸುವನು. ಅವನು ಶ್ರೀವಿಷ್ಣುವಿನ ಆಜ್ಞಾನುಸಾರವಾಗಿ ಮೋಕ್ಷಪ್ರದನಾಗಿರುವನು.9

- ಮುಖ್ಯಪ್ರಾಣನನ್ನು ಚೆನ್ನಾಗಿ ತಿಳಿದವನು ನಿಶ್ಚಿತವಾಗಿಯೂ ಸಂಸಾರದಿಂದ ಮುಕ್ತಿಯನ್ನು ಪಡೆಯುವನು. ಯಾಕೆಂದರೆ ಮುಖ್ಯಪ್ರಾಣಜ್ಞಾನಿಯು ಶ್ರೀವಿಷ್ಣುವನ್ನು ಸರ್ವೋತ್ತಮನನ್ನಾಗಿ ಚೆನ್ನಾಗಿ ತಿಳಿಯುವನು.

[ಛಾಂದೋಗ್ಯೋಪನಿಷತ್ತಿನ (1-2-1) **'ವ್ಯಾದದಾತ್ಯೇವ ಅಂತತಃ'** ಎಂಬ ಮಾತಿನಲ್ಲಿ ಈ ವಿಚಾರವನ್ನೇ ತಿಳಿಯಲಾಗಿದೆ.] ವಿ ಎಂದರೆ ಎಲ್ಲರಿಗಿಂತ ವಿಶಿಷ್ಟನಾದ ವಿಷ್ಣು ಎಂದರ್ಥ. ಪ್ರಾಣಜ್ಞಾನಿಯಾದವನು ಅಂತಹ ವಿಷ್ಣುವನ್ನು ಪ್ರಾಣಜ್ಞಾನಕ್ಕಿಂತ ಕೊನೆಯಲ್ಲಿ ಅವನ ಅನುಗ್ರಹದಿಂದ ಬೌದ್ಧಿಕವಾಗಿ ಸ್ವೀಕಾರಮಾಡಿಯೇ ತೀರುವನು. ಯಾರು ಮುಖ್ಯಪ್ರಾಣನಿಗಿಂತ ಉತ್ತಮನನ್ನಾಗಿ ಶ್ರೀವಿಷ್ಣುವನ್ನೂ, ಪ್ರಾಣನಿಗಿಂತ ಅವರರನ್ನಾಗಿ ಉಳಿದ ಜೀವರನ್ನೂ ತಿಳಿಯುವರೋ ಅವರಷ್ಟೇ ಮುಖ್ಯಪ್ರಾಣನನ್ನು ತಿಳಿದವರೆನಿಸುವರು. ಹೀಗೆ ತಿಳಿಯದಿದ್ದರೆ ಅವರು ಖಂಡಿತಾ ಮುಖ್ಯಪ್ರಾಣಜ್ಞಾನಿಗಳೆನಿಸಲಾರರು.10

- ತಾನಾಗಿಯೇ ಸುಖವನ್ನು ಪಡೆಯುವುದರಿಂದ ಶ್ರೀವಿಷ್ಣು ಸ್ವರ ಎನಿಸಿದರೆ, ಸ್ವತಂತ್ರನಾಗಿದ್ದು ಸ್ವ ಎನಿಸುವ ಶ್ರೀವಿಷ್ಣುವಿನಲ್ಲಿ ರತನಾಗಿರುವುದರಿಂದ ವಾಯುದೇವನು ಸ್ವರ ಎನಿಸುವನು. ಅಂತಹ ಸ್ವರ ಎನಿಸುವ ವಾಯುದೇವನಲ್ಲಿ ಸ್ವರನಾಮಕನಾದ ಹಾಗೂ ಓಂಕಾರ ಪ್ರತಿಪಾದ್ಯನಾದ ಶ್ರೀವಿಷ್ಣುವನ್ನು ಉಪಾಸನೆ ನಡೆಸಿದ ದೇವತೆಗಳು ಆದರ ಫಲವಾಗಿ ಮುಕ್ತಿರೂಪವಾದ ಅಮೃತವನ್ನು ಪಡೆದರು.11

---

9. ಸಂಸಾರಬಾಧಿತೈಃ ಪ್ರಾಪ್ಯೋ ಬಾಧ್ವೋ ವಾಯುರುದಾಹೃತಃ ।
ಸ ಹಿ ಮೋಕ್ಷಪ್ರದೋ ವಿಷ್ಣೋರಾಜ್ಞಯಾ...... ॥ *– [ಐ.ಉ.ಭಾ. 2-8-3-1]*

10. ಏತಂ ವಿದಿತ್ವಾ ಸಂಸಾರಾನ್ಮುಕ್ತಿಮೇಷ್ಯತ್ಯಸಂಶಯಮ್ ।
ವಿಷ್ಣುಮಪ್ಯಂತತೋ ವೇತ್ತಿ ಪ್ರಾಣವೇತ್ತಾ ಯತಃ ಸ್ಫುಟಮ್ ॥
ವೀತಿ ವಿಷ್ಣುಃ ಸಮುದ್ದಿಷ್ಟೋ ವಿಶಿಷ್ಟತ್ವಾತ್ತು ಸರ್ವತಃ ।
ಆದದಾತ್ಯೇವ ತಂ ಪ್ರಾಣವೇತ್ತಾಂತೇ ತತ್ಪ್ರಸಾದತಃ ॥
ಪ್ರಾಣಾತ್ ಪರಂ ತು ಯೋ ವಿಷ್ಣುಂ ಜೀವಾಂಶ್ಚೈವಾವರಾಂಸ್ತತಃ ।
ಯೋ ವಿದುಸ್ತೇ ವಿದುಃ ಪ್ರಾಣಂ ನಾನ್ಯಥಾ ತು ಕಥಂಚನ ॥
*– [ಛಾಂ.ಉ.ಭಾ. 1-2-1]*

11. ಸ್ವರತೇಸ್ತು ಸ್ವರೋ ವಿಷ್ಣುಸ್ತದ್ರತೇರ್ವಾಯುರುಚ್ಯತೇ ।
ವಾಯುಸ್ವರೇ ಸ್ವರಂ ವಿಷ್ಣುಮೋಮಾಖ್ಯಂ ಸಮುಪಾಸಿರೇ ।
ದೇವಾಸ್ತೇನಾಮೃತಂ ಪ್ರಾಪ್ತಾ ಮುಕ್ತ್ಯಾಖ್ಯಂ ಮೃತ್ಯುವರ್ಜಿತಾಃ ॥
*– ಸದ್ವಾ್ಯನೇ [ಛಾಂ.ಉ.ಭಾ. 1-3-4]*

- ಸೂರ್ಯನಲ್ಲಿರುವ, ಕಣ್ಣಿನಲ್ಲಿರುವ ಶ್ರೀವಿಷ್ಣುವು ಬಾಡದಿರುವ ಕೆನ್ನೈದಿಲೆಯಂತೆ ಕಣ್ಣು ಗಳುಳ್ಳವನು. ಆ ವಿಷ್ಣುವನ್ನು ಸ್ತುತಿಸುವ ಉದ್ಗಾತೃ ಮನುಷ್ಯನಾಗಿದ್ದರೆ, ಯಜಮಾನ ನಿಗೆ ಮನುಷ್ಯಲೋಕದಲ್ಲಿರುವ ಸ್ವರ್ಗಲೋಕದಲ್ಲಿರುವ ಅಭೀಷ್ಟಗಳನ್ನು ಶ್ರೀಹರಿಯ ಅನುಗ್ರಹದಿಂದ ತಂದುಕೊಡುವವನಷ್ಟೇ. ಉದ್ಗಾತೃ ಮುಖ್ಯಪ್ರಾಣನಾಗಿದ್ದರೆ, ಹರಿಯ ಅನುಗ್ರಹದಿಂದ ಅವನು ದೇವತೆಗಳಿಗೂ, ಮನುಷ್ಯರಿಗೂ ಮೋಕ್ಷಪ್ರದನಾಗುವನು. ಆದ್ದರಿಂದ ಮುಖ್ಯಪ್ರಾಣನೇ ಮುಖ್ಯ ಉದ್ಗಾತಾ.12
- ಸ್ವತಂತ್ರನಾದ ವಿಷ್ಣು ಸ್ವ ಎನಿಸಿದರೆ ಅವನಲ್ಲೇ ಆಸಕ್ತನಾಗಿರುವ ವಾಯು 'ಸ್ವರ್' ಎನಿಸುವನು. ಮುಕ್ತಿಯಲ್ಲಿ ರುದ್ರನು ವಾಯುವನ್ನು ಪ್ರವೇಶಿಸುವುದರಿಂದ ರುದ್ರನು 'ಸ್ವರ್ಗ' ಎನಿಸುವನು. ಹಾಗೆಯೇ 'ಅಸು' ಎಂದರೆ ಪ್ರಾಣ. ಅಂತಹ ಪ್ರಾಣನಲ್ಲಿ ಇರುವುದರಿಂದ ರುದ್ರನು 'ಅಸೌ' ಎನಿಸುವನು.13
- ಸಾಮಗಾನದಲ್ಲಿ ಯಾವಾಗಲೂ ವಾಯುದೇವನೇ ಮುಖ್ಯಾಧಿಕಾರಿ. ದೇವಾದಿಗಳಿಗೆ ಮೋಕ್ಷಾದಿ ಪುರುಷಾರ್ಥಗಳನ್ನು ಕೊಡಲು ಅವನೇ ಸಮರ್ಥ. ಆದುದರಿಂದ ಅವನೇ ಉದ್ಗಾತೃ ಆಗಿದ್ದರೆ ಗಾನದಿಂದ ಮೋಕ್ಷಾದಿಗಳನ್ನು ಸಾಧಿಸುವೆನೆಂದು ಸಂಕಲ್ಪಿಸಬೇಕು. ಗಾನ ಮಾಡುವವರು ಬೇರೆಯವರಾಗಿದ್ದರೆ ಅವರಿಗೆ 'ನಮ್ಮ ಹೃದಯದಲ್ಲಿರುವ ಪ್ರಾಣನೇ ಮೋಕ್ಷಾದಿಗಳನ್ನು ಕೊಡುವನು' ಎಂಬ ಅನುಸಂಧಾನ ಮಾಡಬೇಕು. ಹೊರತು 'ನಾನೇ ಮೋಕ್ಷಾದಿಗಳನ್ನು ದೇವತೆಗಳಿಗೆ ಸಾಧಿಸಿಕೊಡುವೆನು' ಎಂಬ ಅನುಸಂಧಾನ ಮಾಡಕೂಡದು. ಇಂತಹ ಅನುಸಂಧಾನ ಮಾಡಿದರೆ ದೇವಾದಿಗಳಿಗೆ ಅವಮಾನ ಮಾಡಿದಂತಾಗುವುದು. ದೇವತೆಗಳಿಗೆ ಮೋಕ್ಷವನ್ನು ಕೊಡುವುದು ಮುಂತಾದ ಕಾರ್ಯಗಳಲ್ಲಿ ಮಾನವ ಸಮರ್ಥನಲ್ಲ. ಆದ್ದರಿಂದ ನಮ್ಮ ಹೃದಯ ದಲ್ಲಿರುವ ಪ್ರಾಣನೇ ದೇವಾದಿಗಳಿಗೆ ಮೋಕ್ಷಾದಿಗಳನ್ನು ಕೊಡುವನೆಂಬ ಅನುಸಂಧಾನ ಬೇಕು. ಸಂಕಲ್ಪಿಸುವುದು, ಅದನ್ನು ಹೇಳುವುದು, ಗಾನಮಾಡುವುದು ಇವುಗಳನ್ನೆಲ್ಲ ಯಾವಾಗಲೂ ಮಾಡುವವನು ಪ್ರಾಣನೇ. ಆದ್ದರಿಂದ 'ಗಾನದಿಂದ ಸಾಧಿಸಿ ಕೊಡುತ್ತೇನೆ' ಎನ್ನುವುದು ಮುಖ್ಯವಾಗಿ ಪ್ರಾಣನಲ್ಲೇ ಸರಿಹೊಂದುವುದು.

'ಅನ್ನಂ ಆತ್ಮನೇ ಅಗಾಯಾನಿ' ಎಂಬಲ್ಲಿ ತನ್ನ ಅನ್ನಕ್ಕಾಗಿ ಗಾನ ಮಾಡುವೆನೆಂಬ ಅರ್ಥ ಅಲ್ಲ. ಇಲ್ಲಿ ಆತ್ಮ ಎಂದರೆ ಪ್ರಾಣಾಂತರ್ಗತನಾದ ಪುರುಷೋತ್ತಮನಾದ ಶ್ರೀವಿಷ್ಣು.

---

12. ಕಪ್ಯಾಸರಕ್ತಪದ್ಮಾಕ್ಷಃ ಸೂರ್ಯಗಶ್ಚಾಕ್ಷಿಗಶ್ಚ ಸಃ ।
ಗಾಯಕಸ್ತಸ್ಯ ವಿಷ್ಣೋರ್ಯಃ ಸ ಸ್ವರ್ಗಾಂಶ್ಚ ನೃಲೋಕಗಾನ್ ॥
ಕಾಮಾನ್ ದದ್ಯಾನ್ನರಶ್ಚೇತ್ ಸ್ಯಾತ್ ಸುರಾಣಾಂ ಚ ನೃಣಾಮಪಿ ।
ಮೋಕ್ಷದೋ ಯದಿ ವಾಯುಃ ಸ್ಯಾತ್ ಮುಖ್ಯೋದ್ಗಾತಾ ತತೋಽನಿಲಃ ॥
*– [ಛಾಂ.ಉ.ಭಾ. 1-3-7]*

13. ಸ್ವೋ ವಿಷ್ಣುಸ್ತದ್ರತಿರ್ವಾಯುಸ್ತದ್ಗೋ ಮುಕ್ತೌ ಸದಾಶಿವಃ ।
ಅತಃ ಸ್ವರ್ಗೋಽಸುಸಂಸ್ಥತ್ವಾದಸಾವಿತಿ ಚ ಕೀರ್ತಿತಃ ॥ *– [ಛಾಂ.ಉ.ಭಾ. 1-3-10]*

ಆ ವಿಷ್ಣುವಿನ ಅನ್ನಕ್ಕಾಗಿ ಗಾನಮಾಡುವೆನೆಂದರ್ಥ. ಪ್ರಾಣಸ್ಥ ವಿಷ್ಣುವಿಗೆ ಅನ್ನಭೋಜನವಾದರೆ ಅರ್ಥಾತ್ ಪ್ರಾಣನಿಗೂ ಅನ್ನಭೋಜನವಾಗುವುದು.

ಪ್ರಾಣನು ದೇವತೆಗಳ ಮೋಕ್ಷಕ್ಕಾಗಿ ಗಾನಮಾಡುವಾಗ ತಾನೂ ದೇವತೆಗಳಲ್ಲಿ ಸೇರಿದ ಪ್ರಯುಕ್ತ ತನಗೂ ಮುಖ್ಯವಾದ ಮೋಕ್ಷವೆಂಬ ಫಲ ದೊರಕುವುದರಿಂದ **'ಅನ್ನಂ ಆತ್ಮನೇ ಆಗಾಯಾನಿ'** –ಎಂಬ ಮಾತಿಗೆ ತನ್ನ ಅನ್ನಕ್ಕಾಗಿ ಪ್ರಾಣನು ಗಾನಮಾಡುವನೆಂಬ ಅರ್ಥ ಅಲ್ಲ. ಆದರೆ ದೇವತೆಗಳಲ್ಲಿ ಸೇರಿದ ವಿಷ್ಣುವಿನ ಮೋಕ್ಷದ ಉದ್ದೇಶದಿಂದಲೂ ಪ್ರಾಣನು ಗಾನ ಮಾಡುವನೆಂದು ತಿಳಿಯಬಾರದು. ಯಾಕೆಂದರೆ, ವಿಷ್ಣುವಿನ ಮುಕ್ತಿಯು ನಿತ್ಯ ಹೊರತು ಆದಿಯುಳ್ಳದ್ದಲ್ಲ.[14]

ಇಂದ್ರಪದವಾಚ್ಯನಾದ ವಾಯುವಿಗೆ ಬಲದಾನ ಮಾಡುವೆನೆಂದು ಸಂಕಲ್ಪಿಸಿ ಗಟ್ಟಿಯಾದ ಧ್ವನಿಯಿಂದ ಸ್ವರಗಳನ್ನು ಉಚ್ಚರಿಸಬೇಕು. ವಿಷ್ಣುವಿಗೆ ನನ್ನನ್ನೇ ಸಮರ್ಪಿಸಿಕೊಳ್ಳುತ್ತೇನೆಂದು ಸಂಕಲ್ಪಿಸಿ ಊಷ್ಮಾಕ್ಷರಗಳನ್ನು ಸ್ಪಷ್ಟವಾಗಿ ಲೋಪವಾಗದಂತೆ ಉಚ್ಚರಿಸಬೇಕು. ಮುಕ್ತಿಯೋಗ್ಯರಿಗೆ ಮೃತ್ಯು ಇಲ್ಲದಂತೆ ಮಾಡುವೆನೆಂದು ಸಂಕಲ್ಪಿಸಿ ಸ್ಪರ್ಶಾಕ್ಷರಗಳನ್ನು ಉಚ್ಚರಿಸಬೇಕು. ಉದ್ಗಾತೃ ಮುಖ್ಯಪ್ರಾಣನಾಗಿದ್ದರೆ ಇವೆಲ್ಲವನ್ನೂ ಅವನೇ ಮಾಡುವನು. ಬೇರೆಯವರಾಗಿದ್ದರೆ ಅವರಿಗೆ 'ನಮ್ಮ ಹೃದಯದಲ್ಲಿರುವ ಪ್ರಾಣನೇ ಈ ಎಲ್ಲ ಫಲಗಳನ್ನುಂಟುಮಾಡಲು ಸಮರ್ಥ, ಎಂಬ ಅನುಸಂಧಾನ ಬೇಕು. ಹೊರತು ನಾನೇ ಎಲ್ಲವನ್ನೂ ಮಾಡುವೆನು ಎಂಬ ಅನುಸಂಧಾನ ಇರಕೂಡದು. ಇಂತಹ ಅನುಸಂಧಾನ ವಿದ್ದರೆ ದೇವತೆಗಳಿಗೆ ಅವಮಾನ ಮಾಡಿದವನಾಗುವನು. ಅಂತಹವನು ನಿಶ್ಚಿತವಾಗಿ ಅಂಧಂತಮಸ್ಸನ್ನು ಹೊಂದುವನು. ಆದ್ದರಿಂದ ಯಾವಾಗಲೂ ಉದ್ಗಾತೃ 'ನಾನು ವಾಯು, ಪ್ರಜಾಪತಿ ಶಬ್ದವಾಚ್ಯನಾದ ವಿಷ್ಣು ಮತ್ತು ರುದ್ರ –ಇವರನ್ನು ರಕ್ಷಣೆಗಾಗಿ ಮೊರೆ ಹೊಂದಿದ್ದೇನೆ' ಎಂದೂ ಧ್ಯಾನಿಸಬೇಕು. ಸ್ವರಗಳಿಗೆ ಅಧಿಪತಿಯಾದ ವಾಯು ಐಶ್ವರ್ಯ

---

14. ಅಧಿಕಾರೀ ಸದೌದ್ಗಾತ್ರೇ ಮುಖ್ಯತಃ ಪ್ರಾಣ ಏವ ಯತ್ ।
ಅತೋ ಮೋಕ್ಷಾದಿದಾನೇ ಸ ದೇವಾದೀನಾಂ ಕ್ಷಮೋ ಭವೇತ್ ॥
ಅನ್ಯೇಷಾಂ ಸ ದದಾತೀಹ ಮದ್ಧೃದಿಸ್ಥ ಇತಿ ಸ್ಮೃತಿಃ ।
ಕಾರ್ಯಾ ಹಿ ನಾನ್ಯಥಾ ಕುರ್ಯಾತ್ ಅವಮಂತಾsನ್ಯಥಾ ಭವೇತ್ ॥
ದೇವಾನಾಂ ಮೋಕ್ಷದಾನಾದೌ ನ ಹಿ ಮಾನುಷ ಈಶ್ವರಃ ।
ಅತಃ ಪ್ರಾಣೋ ಹೃದಿಸ್ಥೋ ಮೇ ದದಾತೀತಿ ಸ್ಮೃತಿರ್ಭವೇತ್ ॥
ಸಂಕಲ್ಪೋಕ್ತ್ಯಾದಿಕರ್ತಾ ಚ ಪ್ರಾಣ ಏವ ಯತಃ ಸದಾ ।
ಆಗಾಯಾನೀತಿ ಯುಜ್ಯೇತ ತಸ್ಮಾತ್ ತಸ್ಮಿನ್ ಹಿ ಮುಖ್ಯತಃ ॥
ಆತ್ಮೇತಿ ಭಗವಾನ್ ವಿಷ್ಣುಃ ಪ್ರಾಣಸ್ಥಃ ಪುರುಷೋತ್ತಮಃ ।
ತಸ್ಮಾತ್ ಅನ್ನಂ ಹ್ಯರ್ಥತಸ್ತು ಪ್ರಾಣಸ್ಯಾನ್ನ ಭುಜಿರ್ಭವೇತ್ ॥
ಪ್ರಾಣಸ್ಯಾಪ್ಯಮೃತತ್ವಂ ಹಿ ಮುಖ್ಯಮೇವ ಫಲಂ ಯತಃ ।
ದೇವಾಂತರ್ಭಾವತೋ ವಿಷ್ಣೋಃ ನಾಮೃತತ್ವಂ ಕ್ವ ಚಾದಿಮತ್ ॥
*– ಸಾಮಸಂಹಿತಾ [ಛಾಂ.ಉ.ಭಾ. 2-2-14]*

ಶಾಲಿಯಾದುದರಿಂದ ಇಂದ್ರ ಶಬ್ದವಾಚ್ಯ. ಊಷ್ಮಾಕ್ಷರಗಳಿಗೆ ಅಧಿಪತಿಯಾದವನು ಪ್ರಜಾಪತಿ ಶಬ್ದವಾಚ್ಯನಾದ ವಿಷ್ಣು. ಸ್ಪರ್ಶಾಕ್ಷರಗಳಿಗೆ ಅಧಿಪತಿಯಾದ ರುದ್ರನು ಸಂಹಾರಕನಾದುದರಿಂದ ಮೃತ್ಯು ಶಬ್ದವಾಚ್ಯ. ವಾಯುದೇವನಿಗಿಂತ ಇತರರಾದ ಮನುಷ್ಯರು ಉದ್ಗಾತೃಗಳಾಗಿದ್ದರೆ ಮಾತ್ರ ಅವರಿಗೆ ವಾಯು ಮುಂತಾದವರಿಂದ ರಕ್ಷಣೆ ಎಂದು ತಿಳಿಯಬೇಕು ಹೊರತು ವಾಯುದೇವರಾಗಿದ್ದರೆ ಅಲ್ಲ. ವಾಯುದೇವರಿಗಾದರೂ ಬಲದಾನಾದಿ ಎಂದರೆ ವಾಯುಪದಯೋಗ್ಯರಾದ ಋಜುಗಳಿಗೆ ಶ್ರೀಹರಿಯಿಂದ ಮೋಕ್ಷಾದಿ ದಾನ. ವಾಯುವೇ ಉದ್ಗಾತೃ ಆದ ಪಕ್ಷದಲ್ಲಿ 'ಇಂದ್ರನ ಬಲದಾನಕ್ಕಾಗಿ' –ಎಂಬ ಸಂಕಲ್ಪವನ್ನು ಹೀಗೆ ಕೂಡಿಸಬೇಕು –ಇಂದ್ರ ಎಂದರೆ ವಾಯುಪದಯೋಗ್ಯರಾದ ಋಜುಗಳು. ವಾಯುಪದವಿಗೆ ಯೋಗ್ಯರಾದ ಅವರೆಲ್ಲರೂ ಇಂದ್ರನಾಮಕರೇ. ಅಂತಹವರ ಮೋಕ್ಷಾದಿ ದಾನಕ್ಕಾಗಿ ಸಂಕಲ್ಪ ಎಂಬ ಅಭಿಪ್ರಾಯ.[15]

- ಧರ್ಮಜ್ಞಾನಾದಿಗಳನ್ನು ನೀಡುವುದರಿಂದ ಭಗವಂತನು ಬಾಹುಗಳು 'ದಿಕ್' ಎನಿಸಿವೆ. ಆ ಬಾಹುಗಳಿಂದ ಹುಟ್ಟಿದ ಮುಖ್ಯಪ್ರಾಣ 'ದಿಶಾಂವತ್ಸ' –ದಿಕ್ಕುಗಳ ಪುತ್ರ ಎನಿಸಿರುವನು. ಹೀಗೆ ಶ್ರೀವಿಷ್ಣುವಿನ ದಿಕ್ ಎನಿಸುವ ಬಾಹುಗಳಿಂದ ಹುಟ್ಟಿದವನು –ಎಂದು ವಾಯುದೇವನನ್ನು ತಿಳಿದರೆ, ಅಂತಹವನು ಪುತ್ರನಾಗಿ ಅಳುವುದಿಲ್ಲ. ಅಂದರೆ ಜನನಮರಣಗಳಿಂದ ದೂರನಾಗಿ ಮುಕ್ತನಾಗಿ ಸುಖಿಯಾಗಿ ಇರುವನು. ವಾಯುವು ಶ್ರೀಹರಿಯ ಸುತ ಎಂದು ತಿಳಿದಿದ್ದರಿಂದ ನಾನು ಶ್ರೀಹರಿಯ ಅನುಗ್ರಹ

---

15. ಇಂದ್ರೇ ಬಲಂ ದದಾನೀತಿ ಸ್ವರಾನ್ ಘೋಷಬಲಾತ್ಮಕಾನ್ ।
ಬ್ರೂಯಾದಗ್ರಸ್ತಾನಿರಸ್ತಾನೂಷ್ಮಣಃ ಸ್ಪರ್ಶಾನಪಿ ॥
ಸಮಸ್ತಾನ್ ಬಲದಾನಾರ್ಥಮಿಂದ್ರೇ ಚೈವ ಪ್ರಜಾಪತೇಃ ।
ವಿಷ್ಣೋಃ ಸ್ವಾತ್ಮಾನಮೇವಾಹಮರ್ಪಯೇ ಮೃತ್ಯುವರ್ಜಿತಾನ್ ॥
ಮೋಕ್ಷಯೋಗ್ಯಾನ್ ಕರಿಷ್ಯಾಮೀತ್ಯೇವಂ ಸ ಪ್ರಾಣ ಏವ ತು ।
ಕುರ್ಯಾದನ್ಯಸ್ತು ಮತ್‌ಸ್ಥಸ್ತು ಪ್ರಾಣ ಏವೇದೃಶಕ್ಷಮಃ ॥
ಕರೋತೀತಿ ಸ್ಮರೇನ್ನಿತ್ಯಂ ನಾನ್ಯಥಾ ತು ಕಥಂಚನ ।
ದೇವಾವಮಂತಾ ಹಿ ತಮೋ ಯಾತ್ಯಸಂಶಯತೋ ಯತಃ ॥
ಅತ ಇಂದ್ರಂ ಪ್ರಜಾಪಾಖ್ಯಂ ವಿಷ್ಣುಂ ಮೃತ್ಯುಂ ಚ ಸರ್ವದಾ ।
ಶರಣಂ ಗತೋऽಹಮಿತಿವದ್ ಧ್ಯಾಯೇತ್ ಸರ್ವತ್ರ ಸರ್ವದಾ ॥
ಐಶ್ವರ್ಯಾದಿಂದ್ರನಾಮಾ ತು ವಾಯುಃ ಸ್ವರಪತಿಃ ಸದಾ ।
ಊಷ್ಮಾಧಿಪಸ್ತು ಭಗವಾನ್ ವಿಷ್ಣುರೇವ ಪ್ರಜಾಪತಿಃ ॥
ಮೃತ್ಯುನಾಮಾ ತು ಸಂಹಾರಾತ್ ರುದ್ರಃ ಸ್ಪರ್ಶಾಧಿಪಃ ಸ್ಮೃತಃ ।
ಮಾನುಷಾಣಾಂ ತು ಶರಣಮಿತರೇಷಾಂ ತು ವಾಯುತಃ ॥
ವಾಯೋಸ್ತು ಬಲದಾನಾದ್ಯಂ ಮೋಕ್ಷದಾನಾದಿಕಂ ಹರೇಃ ।
ಯಸ್ಮಾದ್ ವಾಯುಪದೇ ಯೋಗ್ಯಾ ಬಹವಸ್ತ್ವಿಂದ್ರನಾಮಕಾಃ ।
ಅತ ಇಂದ್ರೇ ದಾದಾನೀತಿ ಸ್ಮೃತಿಃ ಪ್ರಾಣಸ್ಯ ಯುಜ್ಯತೇ ॥
*– ಸಾಮಸಂಹಿತಾ [ಛಾಂ.ಉ.ಭಾ. 2-2-15]*

ಸಾಮರ್ಥ್ಯದಿಂದ ನಾನು ಪುತ್ರಿಯಾಗಿ ಅಳಲಿಲ್ಲ. ಅನಾದಿಕಾಲದಿಂದಲೂ ಜರಾಮರಣ ರಹಿತಳಾಗಿದ್ದೇನೆ –ಎಂದು ಉತ್ತಮಳಾದ ರಮಾದೇವಿ ಹೇಳಿರುವಳು.16

- ದೇಹದ ನಾಡಿಗಳಲ್ಲಿರುವ ಪರಮಾತ್ಮನ ತೇಜಸ್ಸಿನಿಂದ ಜೀವನು ಸಂಪನ್ನನಾದಾಗ, ಓಂ ಎಂದು ಜಪಿಸುತ್ತ ಶ್ರೀಹರಿಯನ್ನು ಯಾವಾಗಲೂ ಹೊತ್ತಿದ್ದು 'ಓಂ ವ' ಎಂದೇ ಎನಿಸಿರುವ ವಾಯುದೇವನಿಂದ ದಿವ್ಯವಾದ ಚಿದ್ರೂಪವನ್ನು ಹೊಂದುವನು. ಈ ವಾಯುದೇವನು ಈ ಜೀವನನ್ನು ಆದಿತ್ಯ ಎನಿಸುವ ವಿಷ್ಣುವಿನಲ್ಲಿಗೆ ಕೊಂಡೊಯ್ಯಲು ಮನಸ್ಸು ಮಾಡುವನೋ ಆಗ ಆ ಜೀವನು ಆದಿತ್ಯಮಂಡಲದಲ್ಲಿರುವ ಆದಿತ್ಯನಾಮಕ ಭಗವಂತನನ್ನು ಸೇರುವನು.17

- ಸಂಸಾರಾವಸ್ಥೆಯಲ್ಲಿ ಪೃಥಿವ್ಯಾದಿಗಳಿಗೆ ಅಭಿಮಾನಿಗಳಾದ ಸರಸ್ವತೀ, ಬ್ರಹ್ಮ ಹಾಗೂ ವಾಯು ಈ ಮೂರು ದೇವತೆಗಳು ಸಪ್ತಾನ್ನವಿದ್ಯಾಭಿಜ್ಞರಾದ ಮುಕ್ತ ದೇವತೆಗಳಲ್ಲಿ ಮತ್ತು ಮುಕ್ತ ಪೃಥಿವ್ಯಾದಿ ದೇವತೆಗಳಲ್ಲಿ ವಿಶೇಷವಾಗಿ ಸನ್ನಿಹಿತರಾಗಿರುವುದರಿಂದ 'ದೈವ' –ಎಂದರೆ ದೇವಸಂಬಂಧಿಗಳು ಎಂದು ಪರಿಗಣಿತರಾಗಿರುವರು. ...ದೈವ ಮುಖ್ಯಪ್ರಾಣನ ಆವೇಶದಿಂದಾಗಿ ಮುಕ್ತನು ಯಾವ ಕಾರ್ಯ ಮಾಡಿದರೂ ಆಯಾಸ ಪಡುವುದಿಲ್ಲ. ಅಲ್ಲದೆ, ಮುಕ್ತನು ಸರ್ವಸಾಮರ್ಥ್ಯಯುಕ್ತನೂ, ಯಾವ ಕಾಲದಲ್ಲೂ ಮರಣರಹಿತನೂ ಆಗುವನು.18

---

16. ದಿಜ್ಞಾಮಾನಶ್ಚ ತೇ ಪ್ರೋಕ್ತಾ ಧರ್ಮಜ್ಞಾನಾದಿದೇಶನಾತ್ ।
ತೇಭ್ಯೋ ಜಾತೋ ಮಹಾನ್ ವಾಯುರ್ದಿಶಾಂ ವತ್ಸಸ್ತತಃ ಸ್ಮೃತಃ ॥
ಧರ್ಮಜ್ಞಾನಾದಿರೂಪೇಣ ವಿಷ್ಣೋರ್ಬಾಹುಚತುಷ್ಟಯಾತ್ ।
ಜಾತಂ ವಾಯುಂ ವಿದಿತ್ವೈವ ಪುತ್ರೋ ಭೂತ್ವಾ ನ ರೋದಿತಿ ॥
ನ ಜಾಯತೇ ನ ಮ್ರಿಯತೇ ಮುಕ್ತೋ ಭೂತ್ವಾ ಸುಖೀ ಭವೇತ್ ।
ವಾಯುಂ ಹರೇಃ ಸುತಂ ಜ್ಞಾತ್ವಾ ನಾಹಂ ಪುತ್ರತಯಾಽರುದಮ್ ॥
ಹರೇಃ ಪ್ರಸಾದ ಸಾಮರ್ಥ್ಯಾದಜರಾ ಚಾಮರಾ ಹ್ಯಹಮ್ ।
ಅನಾದಿಕಾಲಸಂಬಂಧಾದಿತ್ಯುವಾಚ ಪರಾ ರಮಾ ॥ – *[ಛಾಂ.ಉ.ಭಾ. 3-3-2]*

17. ........ತತ್ತೇಜಸಾ ಸಂಪನ್ನ ಸುಪ್ತ ಇತ್ಯಭಿಧೀಯತೇ ।
ಓಮಿತ್ಯೇವ ವಹನ್ ನಿತ್ಯಂ ವಾಯುರೋಂವ ಇತೀರಿತಃ ॥
ತೇನ ವಾವುತ್ವಮಾಯಾತಿ ಮುಕ್ತಿಕಾಲೇ ಹ್ಯುಪಾಸಕಃ ।
ದಿವ್ಯಚಿದ್ರೂಪಭಾವೋ ಹಿ ವಾಮಭಾವ ಉದೀರಿತಃ ॥
ಯದ್ಯೈನಂ ನೇತುಮನ್ವಿಚ್ಛನ್ ಮನಃ ಕ್ಷಿಪತಿ ಮಾರುತಃ ।
ಆದಿತ್ಯಾಖ್ಯಂ ತದಾ ವಿಷ್ಣುಂ ಯಾತಿ ಜೀವಃ ಸ್ವವಿದ್ಯಯಾ ॥
– *ಪರ್ಯಂಕೋಪಾಸನಾ [ಛಾಂ.ಉ.ಭಾ. 8-1-10]*

18. ಪೃಥಿವ್ಯಾದಿಸ್ಥಿತಾ ದೇವಾಃ ಸರಸ್ವತ್ಯಾದಿಕಾಸ್ತ್ರಯಃ ।
ಅಧಿಕಾವೇಶತೋ ದೇವೇಷ್ವತೋ ದೇವಾ ಇತಿ ಸ್ಮೃತಾಃ ॥

- ತತ್ವಜ್ಞಾನಿಯಾದ ಜೀವನು ಮೋಕ್ಷವನ್ನು ಹೊಂದುವುದಕ್ಕಾಗಿ ಅರ್ಚಿರಾದಿ ಮಾರ್ಗದಲ್ಲಿ ವಾಯುದೇವನ ಸಮೀಪಕ್ಕೆ ಹೋಗುವನು. ಹಿಂದೆ ಅವನ ಅನುಗ್ರಹದಿಂದಲೇ ಜ್ಞಾನಿಯಾದುದರಿಂದ ಈಗ ಪುನಃ ಅವನ ಬಳಿಗೆ ಹೋಗುವನು. ಹೀಗೆ ಎಲ್ಲರೂ ಮೊದಲಿಗೆ ಭಕ್ತಿಯಿಂದ ವಾಯುದೇವನನ್ನು ಆಶ್ರಯಿಸಿ, 'ಹುಟ್ಟು ಜ್ಞಾನವನ್ನು ಹೊಂದು' –ಎಂದು ಅವನು ನೀಡುವ ವರದಿಂದಲೇ ಹುಟ್ಟಿಬರುವರು ಹಾಗೂ ಜ್ಞಾನಿಗಳಾಗುವರು. ಮತ್ತೆ ಅರ್ಚಿರಾದಿ ಮಾರ್ಗದಲ್ಲಿ ಅವನನ್ನು ಹೊಂದಿ ಅವನ ಅನುಗ್ರಹದಿಂದ ಮುಕ್ತಿಯನ್ನು ಪಡೆಯುವರು.19

- ವಿಷ್ಣುವಿನ ಸ್ವರೂಪಪ್ರಕಾಶದಿಂದ ಹೃದಯದ ತುದಿ ಭಾಗವು ಬೆಳಗುವುದು. ಆ ದಾರಿಯಿಂದ ಪರಮಾತ್ಮನು ಜೀವನನ್ನು ಕರೆದುಕೊಂಡು ಹೊರಗೆ ಹೋಗುವನು. ಆಗ ಮುಖ್ಯಪ್ರಾಣನು ಇವನನ್ನು ಅನುಸರಿಸುವನು. ಮುಖ್ಯಪ್ರಾಣನನ್ನು ಬೇರೆ ಇಂದ್ರಿಯಾಭಿಮಾನಿದೇವತೆಗಳು ಅನುಸರಿಸುವರು. ವಿದ್ಯಾಕರ್ಮಗಳ ಅಭಿಮಾನಿ ದೇವತೆಗಳೂ, ಯೋಗ್ಯತಾಭಿಮಾನಿದೇವತೆಗಳೂ ಹೊರಡುವರು.20

- ವಿಷ್ಣು ಜೀವನನ್ನು ಶರೀರದಿಂದ ಹೊರಗೆ ಕರೆದೊಯ್ಯುವಾಗ ಜ್ಞಾನರೂಪ ಹಾಗೂ ಬಲರೂಪ –ಹೀಗೆ ಎರಡು ರೂಪದ ವಾಯುದೇವ ಎಲ್ಲ ದೇವತೆಗಳ ಜೊತೆಗೆ ವಿಷ್ಣುವನ್ನು ಅನುಸರಿಸಿ ಹೋಗುವನು.21

---

.....ಯದಾವೇಶಾತ್ ಸರ್ವಕಾರ್ಯೇಷ್ವಮ್ಲಾನಃ ಪ್ರಾಣ ಏವ ಸಃ ।
ಸರ್ವಸಾಮರ್ಥ್ಯಯುಕ್ತಃ ಸ್ಯಾನ್ನ ಮ್ರಿಯೇತ ಕದಾಚನ ॥

*– [ಬೃ.ಉ.ಭಾ. 3-6-26]*

19. ವಾಯುಮೇವಾದ್ರವತ್ಯೇಷ ಜೀವೋ ಮೋಕ್ಷಾಯ ತತ್ವವಿತ್ ।
ತದನುಜ್ಞಯೈವ ಜ್ಞಾನಿತ್ವಮತಸ್ತಂ ಪುನರಾವ್ರಜೇತ್ ॥
ಸರ್ವೇಽಪಿ ವಾಯುಮಾಸಾದ್ಯ ಜಾಯಸ್ವ ಜ್ಞಾನಮಾಪ್ನುಹಿ ।
ಇತಿ ತಸ್ಯ ವರಾದೇವ ಜಾಯಂತೇ ಜ್ಞಾನಿನೋಽಖಿಲಾಃ ।
ಪುನಸ್ತಂ ಪ್ರಾಪ್ಯ ಮುಕ್ತಿಂ ಚ ಪ್ರಾಪ್ನುಯುಸ್ತದನುಜ್ಞಯಾ ॥

*– ಪ್ರವೃತ್ತೇ [ಬೃ.ಉ.ಭಾ. 6-3-36]*

20. .......ತದಾ ವಿಷ್ಣೋಃ ಸ್ವತೇಜಸಾ ।
ದ್ಯೋತತೇ ಹೃದಯಾಗ್ರಂ ಚ ತೇನ ದ್ವಾರೇಣ ಕೇಶವಃ ॥
ನಿಷ್ಕ್ರಾಮೇಜ್ಜೀವಮಾದಾಯ ಪ್ರಾಣ ಏನಮನುವ್ರಜೇತ್ ।
ಪ್ರಾಣಮನ್ಯೇ ತಥಾ ದೇವಾ ವಿದ್ಯಾ ಕರ್ಮ ಚ ಯೋಗ್ಯತಾ ॥

*– ಮಹಾಮೀಮಾಂಸಾ [ಬೃ.ಉ.ಭಾ. 6-4-2]*

21. ವಾಯುರ್ಜ್ಞಾನಾತ್ಮಕಶ್ಚೈವ ಪ್ರಾಣಾತ್ಮಕ ಇತಿ ದ್ವಿಧಾ ।
ಅನುಯಾತಿ ಹೃಷೀಕೇಶಂ ಸರ್ವೈರ್ದೇವೈಃ ಸಮನ್ವಿತಃ ॥

*– [ಬೃ.ಉ.ಭಾ. 7-12-1]*

- ಜ್ಞಾನಿಯು ಪ್ರವಹ, ಸೂರ್ಯ, ಚಂದ್ರ, ಭಾರತೀದೇವಿ –ಇವರ ಲೋಕಗಳನ್ನು ಹೊಂದಿ, ಅನಂತರ ಮುಖ್ಯಪ್ರಾಣನ ಲೋಕವನ್ನು ತಲುಪಿ ಆ ಬಳಿಕ ಮುಕ್ತಿಯನ್ನು ಹೊಂದುವನು.22
- ಚತುರ್ಮುಖನು ಮುಖ್ಯಪ್ರಾಣನಲ್ಲಿರುವ ಸಂಕರ್ಷಣನನ್ನು ಪ್ರವೇಶಿಸಿ ಮುಕ್ತಿಯಲ್ಲಿ ವ್ಯಾಪಿಸಿರುವನು.23
- ಭೂಮಿ–ಅಂತರಿಕ್ಷ–ಸ್ವರ್ಗಲೋಕಗಳನ್ನು ಕರ್ಮದಿಂದಲೇ ಪಡೆಯುವರು. ಇವುಗಳಿಗಿಂತ ಮೇಲಿನ ಲೋಕಗಳನ್ನು ಜ್ಞಾನದಿಂದಲೇ ಪಡೆಯಬಲ್ಲರು. ಹೀಗೆ ಜ್ಞಾನದಿಂದ ಮೇಲಿನ ಲೋಕಗಳನ್ನು ಪಡೆಯುವವರಲ್ಲೂ ಅಪ್ರತೀಕಾಲಂಬನರಾಗಿದ್ದು ಮುಖ್ಯ ಭಕ್ತರಾಗಿದ್ದರೆ ಅವರು ಶ್ರೀಹರಿಯನ್ನೇ ಹೊಂದುವರು. ಪ್ರತೀಕಾಲಂಬನರಾಗಿದ್ದು, ಅಮುಖ್ಯ ಭಕ್ತರಾಗಿದ್ದರೆ ಸತ್ಯಲೋಕವನ್ನಷ್ಟೇ ಹೊಂದಿ ಅಲ್ಲಿ ವಾಯುದೇವರನ್ನು ಹೊಂದುವರು. ಅಪಕ್ವಸಾಧಕರು ಹರಿಯನ್ನಾಗಲೀ ವಾಯುವನ್ನಾಗಲೀ ಹೊಂದುವುದಿಲ್ಲ.24
- ದೇವಯಾನದಲ್ಲಿ ಪ್ರಾಪ್ಯರಾದ ದೇವತೆಗಳಲ್ಲಿ 'ದಿವಸ್ಪುತ್ರ' –ಎಂದು ಒಂದು ಬಗೆಯ ದೇವತೆಗಳೂ ಸೇರಿದ್ದು, ಅವರು ಮುಕ್ತ ಜೀವನನ್ನು ಮುಖ್ಯಪ್ರಾಣಸಹಿತನನ್ನಾಗಿ ಭಾರತೀದೇವಿಯಲ್ಲಿಗೆ ತಲುಪಿಸುವರು. ಆ ಭಾರತಿ ಮುಖ್ಯಪ್ರಾಣರಾದರೂ ಮುಕ್ತ ಜೀವನನ್ನು ಹರಿಯಲ್ಲಿಗೆ ತಲುಪಿಸುವರು.25
- ಭಾರತೀದೇವಿಯೇ ವಿದ್ಯುತ್. ಅವಳ ಪತಿಯಾದ ವಾಯುದೇವನನ್ನು ಹೊಂದಿ, ಅವನ ಮೂಲಕವೇ ಪರಮಾತ್ಮನನ್ನು ಹೊಂದುವಳು. ಅಂತಹ ಭಾರತೀದೇವಿ ವಿಷ್ಣುಲೋಕದಲ್ಲಿ ವಿರಾಜಿಸುವಳು.26

---

22. ಪ್ರವಹಂ ವಾಯುಪುತ್ರಂ ಚ ಸೂರ್ಯಸೋಮೌ ಚ ವಿದ್ಯುತಮ್ ।
ಪ್ರಾಪ್ಯ ಪ್ರಧಾನ ವಾಯುಂ ಚ ಯಾತಿ ತತ್ ಪರಮಂ ಪದಮ್ ॥
*– ಬ್ರಹ್ಮಾಂಡ [ಬೃ.ಉ.ಭಾ. 7-12-1]*

23. ಸಂಕರ್ಷಣಂ ವಾಯುಸಂಸ್ಥಂ ವ್ಯಾಪ್ಯ ಬ್ರಹ್ಮಾ ವಿಮುಕ್ತಿಗಃ ।
*– ಪ್ರಕಾಶಿಕಾ [ಬೃ.ಉ.ಭಾ. 7-19-7]*

24. ಈಯುಸ್ತ್ರೀನ್ ಕರ್ಮಣಾ ಲೋಕಾನ್ ಜ್ಞಾನೇನೈವ ತದುತ್ತರಾನ್ ।
ತತ್ರ ಮುಖ್ಯಾ ಹರಿಂ ಯಾಂತಿ ತದನ್ಯೇ ವಾಯುಮೇವ ತು ।
ಅಪಕ್ವಾ ಯೇ ನ ತೇ ಯಾಂತಿ ವಾಯುಂ ವಾ ಹರಿಮೇವ ವಾ ॥
*– ಬ್ರಹ್ಮತರ್ಕ [ಭಾಗ.ತಾ.ನಿ. 2-3-24]*

25. ........ತದನ್ಯೇ ತು ದಿವಸ್ಪುತ್ರಾಃ ಸರ್ವೇ ಚ ದ್ಯುಸಮೀಪಗಾಃ ।
ತೇ ದಿವಂ ಪ್ರಾಪಯುಂತ್ಯೇನಂ ಸವಾಯುಂ ಸ ಹರಿಃ ಪೃಥಕ್ ॥
*– [ಭಾಗ.ತಾ.ನಿ. 7-15-52]*

26. ದ್ಯೌರ್ವಾವ ವಿದ್ಯುತ್ ತತ್ಪತಿಂ ವಾಯುಮುಪಗಮ್ಯ ತೇನೈವ ಪರಮುಪಗಚ್ಛತಿ ಸೈಷಾ ಬ್ರಹ್ಮಲೋಕೇ ವಿರಾಜತೇ । *– ಶ್ರುತಿ [ಖಂಡಾರ್ಥನಿರ್ಣಯ]*

- ದೇಹದಿಂದ ಉತ್ಕ್ರಾಂತನಾಗುವ ಜ್ಞಾನಿಯು ಪರಮಾತ್ಮನೆಡೆಗೆ ಸಾಗುತ್ತ ವಿದ್ಯುತ್ ಎನಿಸುವ ಭಾರತಿಯನ್ನು ಹೊಂದುವನು. ಬಳಿಕ ಭಾರತೀಪತಿಯಾದ ವಾಯುವನ್ನು ಹೊಂದಿ ಅವನ ಮೂಲಕ ಪರಬ್ರಹ್ಮನನ್ನು ಪಡೆಯುವನು.27
- ಶರೀರದಿಂದ ಉತ್ಕ್ರಾಂತನಾದವನು ಅರ್ಚಿರ್ಮಾರ್ಗದಲ್ಲಿ ಅತಿವಾಹಿಕವಾಯು ಮುಂತಾದವರನ್ನು ಹೊಂದಿ ಕ್ರಮೇಣ ಸರಸ್ವತಿಯನ್ನು ಹೊಂದಿ ಬಳಿಕ ಮುಖ್ಯ ವಾಯುದೇವನನ್ನು ಪಡೆದು ಅವನ ಮೂಲಕ ಪುರುಷೋತ್ತಮನೆಡೆಗೆ ಸಾಗುವನು.28
- ದೇವತೆಗಳು ಮೋಕ್ಷದಲ್ಲೂ ಮನುಷ್ಯರಿಗಿಂತ ಉತ್ತಮರೆನಿಸಿರುವರು. ಅಂತಹ ದೇವತೆಗಳಿಗಿಂತ ಮುಖ್ಯಪ್ರಾಣ ಶ್ರೇಷ್ಠ; ಅವನಿಗಿಂತಲೂ ನಿತ್ಯಮುಕ್ತ ಶ್ರೀಹರಿ ಉತ್ತಮ.29
- ಶ್ರೀವಿಷ್ಣು ಮೋಕ್ಷವನ್ನು ನೀಡುವವನು. ವಾಯುದೇವ ಅವನ ಅನುಜ್ಞೆಯಂತೆ ಮೋಕ್ಷವನ್ನು ನೀಡುವನು.30

* * *

## ಮುಖ್ಯಪ್ರಾಣನ ಉಪಾಸನೆ

**ಐಹಿಕ ಹಾಗೂ ಪಾರತ್ರಿಕ ಇಷ್ಟಗಳ ಪೂರಣೆಗಾಗಿ ಮುಖ್ಯಪ್ರಾಣನನ್ನು ಹೇಗೆ ಉಪಾಸನೆ ನಡೆಸಬೇಕು? ಸ್ತುತಿಸಬೇಕು? ಪರಮಾತ್ಮನ ಪ್ರತೀಕವಾಗಿ ಹೇಗೆ ವಿನಿಯೋಗಿಸಿಕೊಳ್ಳಬೇಕು? ಈ ಬಗ್ಗೆ ಬೆಳಕುಚೆಲ್ಲುವ ಪ್ರಮಾಣಗಳ ಸಂಗ್ರಹ ಇರುವ ಇಲ್ಲಿ ೨೧ ಪ್ರಮಾಣಗಳು ಆಕರಗ್ರಂಥದ ಹೆಸರಿನೊಂದಿಗೆ ಉಲ್ಲೇಖಗೊಂಡವುಗಳಾದರೆ, ೧೭ ಪ್ರಮಾಣಗಳ ಆಕರದ ಹೆಸರಿನ ಉಲ್ಲೇಖವಿಲ್ಲದೆ ಉದಾಹರಿಸಲ್ಪಟ್ಟವು.**

- ಉಪನಿಷತ್ತುಗಳಲ್ಲಿ ಶ್ರೀವಿಷ್ಣುವನ್ನು ಬಿಟ್ಟು ಬೇರೆ ಯಾವುದೂ ಪ್ರತಿಪಾದ್ಯವಲ್ಲ. ಆದರೂ ಕೆಲವೆಡೆ ಸೂತ್ರ ಎನಿಸುವ ವಾಯುದೇವನ ಪ್ರತಿಪಾದನೆ ನಡೆದಿದೆ.

---

27. ಉತ್ಕ್ರಾಂತೋ ವಿದ್ವಾನ್ ಪರಮಾಭಿಗಚ್ಛನ್ ವಿದ್ಯುತಮೇವಾಂತಕ ಉಪಗಚ್ಛತಿ ದ್ಯೌರ್ವಾವ ವಿದ್ಯುತ್ ತತ್ಪತಿಂ ವಾಯುಮುಪಗಮ್ಯ ತೇನೈವ ಬ್ರಹ್ಮ ಗಚ್ಛತಿ ।
*– ಶ್ರುತಿ [ಬ್ರ.ಸೂ.ಭಾ. 4-3-5]*

28. ಉತ್ಕ್ರಾಂತಸ್ತು ಶರೀರಾತ್ ಸ್ವಾದ್ ....... ದಿವಂ ತಥಾ ।
ತತೋ ವಾಯುಂ ಪರಂ ಪ್ರಾಪ್ಯ ತೇನೈವ ಪುರುಷೋತ್ತಮಮ್ ॥
*– ಬ್ರಹ್ಮತರ್ಕ [ಬ್ರ.ಸೂ.ಭಾ. 4-3-5]*

29. ಉತ್ತಮತ್ವಂ ಹಿ ದೇವಾನಾಂ ಮುಕ್ತಾವಪಿ ಹಿ ಮಾನವಾತ್ ।
ತೇಭ್ಯಃ ಪ್ರಾಣಸ್ಯ ತಸ್ಮಾಚ್ಚ ನಿತ್ಯಮುಕ್ತಸ್ಯ ವೈ ಹರೇಃ ॥
*– ಬೃಹತ್ತಂತ್ರ [ಬ್ರ.ಸೂ.ಭಾ. 3-3-38]*

30. ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ । *– [ಮ.ಭಾರ.ತಾ.ನಿ. 1-78]*

ಯಾಕೆಂದರೆ ಅಂತಹ ವಾಯುದೇವನಿಗಿಂತಲೂ ಭಗವಂತನು ಉತ್ತಮನೆಂದು ಸಾರುವುದಕ್ಕಾಗಿ ಹೊರತು ವಾಯುದೇವನ ಮಾಹಿತಿಗಾಗಿಯಷ್ಟೇ ವಾಯುದೇವನ ಪ್ರತಿಪಾದನೆ ನಡೆದಿರುವಂತಹದ್ದಲ್ಲ. ಹಾಗೆಯೇ ಕೆಲವೆಡೆ ವಾಯುದೇವನ ಉಪಾಸನೆ ಪ್ರಸ್ತುತವಾಗಿದ್ದರೆ, ಅದರ ಉದ್ದೇಶ –ವಾಯುದೇವ ಭಗವಂತನ ಅರ್ಧ್ಯರ್ಧತನು –ಒಂದೂವರೆ ದೇಹ– ಅಂದರೆ ಭಗವಂತನು ವಾಯುದೇವನಿಗಿಂತ ವಿಶಿಷ್ಟನಾಗಿರುವುದರಿಂದ ಅವರಿಬ್ಬರೂ ಒಂದೇ ಎನ್ನುವಂತಿಲ್ಲ; ವಾಯುದೇವ ಭಗವಂತನ ಅತ್ಯಂತ ಪ್ರೀತಿಗೆ ಪಾತ್ರನಾದುದರಿಂದ ಭಗವಂತನಿಗಿಂತ ಎರಡನೆಯವನಾಗಿರುವವನೆಂದೂ ಹೇಳುವಂತಿಲ್ಲ. ಈ ಬಗೆಯ ಭಗವಂತನ ನಂಟಿಗೆ ಒಳಗಾದವನಾದುದರಿಂದ, ಅಂತಹ ವಾಯುದೇವನಲ್ಲಿಯೇ ಭಗವಂತನ ಉಪಾಸನೆ ನಡೆಸಬೇಕೆಂಬ ದೃಷ್ಟಿಯಿಂದಷ್ಟೇ ವಾಯುದೇವನ ಉಪಾಸನೆಯನ್ನು ತಿಳಿಸಲಾಗಿದೆ ಹೊರತು ವಾಯುದೇವನ ಉಪಾಸನೆಯಲ್ಲೇ ಆ ಮಾತುಗಳಿಗೆ ತಾತ್ಪರ್ಯವಲ್ಲ.[1]

- 'ಯಾರು ಪ್ರಾಣದೇವನನ್ನು ರುದ್ರಾದಿ ದೇವತೆಗಳಿಗಿಂತೆಲ್ಲ ಉತ್ತಮನಾಗಿದ್ದು ಗುಣಗಳಲ್ಲಿ ಉತ್ತಮನಾಗಿದ್ದು ಶ್ರೇಷ್ಠನೆಂದೂ ವಯಸ್ಸಿನಲ್ಲಿ ಉತ್ತಮನಾಗಿದ್ದು ಜ್ಯೇಷ್ಠನೆಂದೂ ತಿಳಿದು, ಉಪಾಸನೆ ನಡೆಸುವರೋ ಅಂತಹವರು ಮೋಕ್ಷದಲ್ಲಿ ತಮ್ಮ ಸಮಾನರಿಗಿಂತ ಜ್ಯೇಷ್ಠರಾಗಿಯೂ, ಶ್ರೇಷ್ಠರಾಗಿಯೂ ಮೆರೆಯುವರು.'[2] ಮುಖ್ಯಪ್ರಾಣನ ಕುರಿತಾದ ವಿಜ್ಞಾನಕ್ಕೆ ಮುಖ್ಯವಾಗಿ ಯೋಗ್ಯನಾಗಿರುವವನು ರುದ್ರ. ಆದುದರಿಂದ ನಾಯಿಯಿಂದ, ಪಕ್ಷಿಗಳಿಂದ ಆರಂಭಿಸಿ ಪ್ರತಿಯೊಬ್ಬರೂ ಉಣ್ಣುವ ಅನ್ನ ಪ್ರಾಣದೇವನಿಗೆ ಸೇರುವ ಆಹಾರ ಎಂದು ಉಪಾಸನೆ ಮಾಡುವವನಿಗೆ ಹೇಳಿರುವ ಸರ್ವಭೋಕ್ತೃತ್ವ ಫಲವು ಮುಖ್ಯವಾಗಿ ರುದ್ರನಿಗೆ ದೊರಕುವುದಾದರೆ, ಉಳಿದ ಉಪಾಸಕರಿಗೆ

---

1. ಆರಣ್ಯಕೇಷ್ವೃತೇ ವಿಷ್ಣುಂ ನೈವಾನ್ಯತ ಕಿಂಚಿದುಚ್ಯತೇ ।
ಸೂತ್ರಾತ್ಮಾ ತೂಚ್ಯತೇ ವಿಷ್ಣೋಸ್ತದ್ವಿಶಿಷ್ಟತ್ವವಿತ್ತಯೇ ॥
ಕುತ್ರಚಿತ್ ತದುಪಾಸ್ತಿಶ್ಚ ತಸ್ಯಾಧ್ಯರ್ಧತನುತ್ವತಃ ।
ತಸ್ಮಿನ್ ವಿಷ್ಣೋರುಪಾಸ್ತ್ಯರ್ಥಂ ನಾನ್ಯಥಾ ಕಿಂಚಿದುಚ್ಯತೇ ॥
*– ಬ್ರಹ್ಮಾಂಡೇ [ಛಾಂ.ಉ.ಭಾ. 3-1-1]*

2. ಯಃ ಶ್ರೇಷ್ಠಂ ಜ್ಯೇಷ್ಠಮಖಿಲದೇವಾನಾಂ ವಾಯುಮಂಜಸಾ ।
ವೇದ ಸ ಸ್ವಸಮಾನಾನಾಂ ಜ್ಯೇಷ್ಠಃ ಶ್ರೇಷ್ಠೋ ವಿಮುಕ್ತಿಗಃ ॥
*– ಪ್ರಾಭವೇ [ಛಾಂ.ಉ.ಭಾ. 5-1-1]*

* ವೇದನಂ ಹ್ಯಾಪರೋಕ್ಷ್ಯೇಣ ಮುಖ್ಯಂ ಭವತಿ ನಾನ್ಯಥಾ ।
ಏಕದೇಶವಿದೋ ಯಸ್ಮಾತ್ ಪರೋಕ್ಷಜ್ಞಾನಿನೋಽಖಿಲಾಃ ॥
ಆಪರೋಕ್ಷಂ ಭವೇದ್ ಯಸ್ಮಾನ್ನೋಪಾಸಾಮೃತೇ ಕ್ವಚಿತ್ ।
ತಸ್ಮಾದುಪಾಸಾ ಪೂರ್ವಂ ತು ಯೋಽಪರೋಕ್ಷಂ ಪ್ರಪಶ್ಯತಿ ।
ಸ ಏವ ವೇದ ನಾನ್ಯಸ್ತು ಯೋಗ್ಯಶ್ಚೈವಾಪರೋಕ್ಷದೃಕ್ ॥
*–[ಐ.ಉ.ಭಾ. 1-5-1]*

ಅವರವರ ಯೋಗ್ಯತೆಗನುಗುಣವಾಗಿಯಷ್ಟೇ ಸರ್ವಭೋಕ್ತೃತ್ವ ಸಿದ್ಧಿಸುವುದು.3 ಮುಖ್ಯ ಪ್ರಾಣನಿಗೆ ಬಟ್ಟೆ ಎಂಬ ಅನುಸಂಧಾನದಿಂದ ಭೋಜನದ ಮೊದಲೂ ಕೊನೆಗೂ –ಪೂರ್ವಾಪೋಶನ ಹಾಗೂ ಉತ್ತರಾಪೋಶನ ಆಗಿ ನೀರನ್ನು ಕುಡಿಯುವವನಿಗೆ ಸ್ವರ್ಗದಲ್ಲೂ ಮೋಕ್ಷದಲ್ಲೂ ಚೆನ್ನಾಗಿ ದಿವ್ಯ ವಸ್ತುಗಳ ಪ್ರಾಪ್ತಿ ಸಂಭವಿಸುವುದು.4

'ಪ್ರಾಣವಿದ್ಯೆಗೆ ಯೋಗ್ಯ ಜೀವನಾಗಿದ್ದು, ಅವನು ಒಣಗಿದ ಮೋಟು ಮರದ ರೂಪದಲ್ಲಿದ್ದರೂ ಯೋಗ್ಯ ಗುರುವಿನಿಂದ ಆ ವಿದ್ಯೆಯನ್ನು ಕೇಳಿಸಿಕೊಂಡನೆಂದರೆ ಆ ಮರದಲ್ಲಿ ಎಲೆ ಮೊದಲಾದವು ಹುಟ್ಟಿಕೊಳ್ಳುತ್ತವೆ. ಮುಂದೆ ಆ ಮರವೇ ಮನುಷ್ಯ ಜನ್ಮವನ್ನು ಪಡೆದು ಅದರಲ್ಲಿ ವಿಷ್ಣುವಿನ ಜ್ಞಾನವನ್ನು ಸಂಪಾದಿಸಿಕೊಂಡು, ಮುಕ್ತಿಯನ್ನು ನಿಶ್ಚಿತವಾಗಿ ಪಡೆಯುವನು.5 'ಪ್ರಾಣದೇವರಿಗೆ 'ಜ್ಯೇಷ್ಠಾಯ ಸ್ವಾಹಾ' 'ಶ್ರೇಷ್ಠಾಯ ಸ್ವಾಹಾ' –ಮುಂತಾದ ಮಂತ್ರಗಳಿಂದ ಹೋಮಿಸಿದರೆ ಅಂತಹ ಯಜಮಾನನು ಅದರ ಫಲವಾಗಿ ಈ ಲೋಕದಲ್ಲೂ, ಪರಲೋಕದಲ್ಲೂ ತನ್ನ ಸಮಾನರಿಗಿಂತ ವಯಸ್ಸಿನಲ್ಲಿ ಉತ್ತಮನಾಗಿ 'ಜ್ಯೇಷ್ಠ'ನೆಂದೂ, ಯೋಗ್ಯತೆಯಲ್ಲಿ ಉತ್ತಮನಾಗಿ 'ಶ್ರೇಷ್ಠ'ನೆಂದೂ ಪರಿಗಣಿಸಲ್ಪಡುವನು'.6

'ಶ್ರೀಹರಿಯ ಬಳಿಕ ಉಳಿದೆಲ್ಲ ದೇವತೆಗಳಲ್ಲಿ ಪ್ರಾಣನೇ ಉತ್ತಮ. ಚತುರ್ಮುಖನಿಗೂ ವಾಯುದೇವನಿಗೂ ಏನೂ ತರತಮಭಾವ ಇಲ್ಲದುದರಿಂದ ಪ್ರಾಣನು ಉತ್ತಮನೆನಿಸಬಹುದಾಗಿದೆ. ಆದುದರಿಂದ ವಿಷ್ಣುವ್ರತವನ್ನು ಆಚರಿಸಿದ ಮೇಲೆ ನಿತ್ಯವೂ ಪ್ರಾಣವ್ರತವನ್ನು ಆಚರಿಸಬೇಕು.7 ಶ್ವಾಸರೂಪವಾದ ಅಧಿಷ್ಠಾನದಲ್ಲಿ ಹಂಸೋಪಾಸನೆ

---

3. ಪ್ರಾಣವಿಜ್ಞಾನಯೋಗ್ಯಸ್ತು ರುದ್ರೋ ಮುಖ್ಯತಯಾ ಸ್ಮೃತಃ ।
ತಸ್ಮಾತ್ ಸ ಸರ್ವಭೋಕ್ತಾ ಸ್ಯಾತ್ ತದನ್ಯೇಷಾಂ ಸ್ವಯೋಗ್ಯತಃ ॥
*– [ಛಾಂ.ಉ.ಭಾ. 5-1-12]*

4. ಪ್ರಾಣಸ್ಯ ವಸ್ತ್ರಬುದ್ಧ್ಯಾ ತು ಭೋಜನೋಭಯತಃ ಪಿಬನ್ ।
ಸ್ವರ್ಗೇ ಮುಕ್ತೌ ತಥಾ ದಿವ್ಯವಸ್ತ್ರಲಾಭೀ ಭವತ್ಯಲಮ್ ॥
*– ಪ್ರಭಂಜನೇ [ಛಾಂ.ಉ.ಭಾ. 5-1-12]*

5. ಯೋಗಸ್ಯ ಪ್ರಾಣವಿದ್ಯಾಯಾಂ ಸ್ಥಾಣೋರಪಿ ಹಿ ತಚ್ಛ್ರುತೇಃ ।
ಪಲಾಶಾದ್ಯಂ ಭವೇದತ್ರ ಪರತೋ ಮುಕ್ತಿರೇವ ಚ ॥
ವಿಷ್ಣೋರ್ಜ್ಞಾನಮನುಪ್ರಾಪ್ಯ ಭವೇನ್ನಾಸ್ತ್ಯತ್ರ ಸಂಶಯಃ ।
*– ಪ್ರಾಣಸಂಹಿತಾ [ಛಾಂ.ಉ.ಭಾ. 5-1-13]*

6. ಜ್ಯೇಷ್ಠಶ್ರೇಷ್ಠಾದಿಕೈರ್ಹುತ್ವಾ ಪ್ರಾಣಾಯಾತ್ರ ಪರತ್ರ ಚ ।
ಜ್ಯೇಷ್ಠಃ ಶ್ರೇಷ್ಠಃ ಸಮಾನೇಭ್ಯೋ ಭವೇನ್ನಿತ್ರ ವಿಚಾರಣಾ ॥
*– [ಛಾಂ.ಉ.ಭಾ. 5-1-13]*

7. ಉತ್ತಮಃ ಸರ್ವದೇವೇಷು ಪ್ರಾಣ ಏವ ಹರೇರನು ।
ಚತುರ್ಮುಖಸ್ಯ ಪ್ರಾಣಸ್ಯ ನ ವಿಶೇಷೋಽಸ್ತಿ ಕಶ್ಚನ ॥
ತಸ್ಮಾದ್ ವಿಷ್ಣೋರ್ವ್ರತಸ್ಯಾನು ನಿತ್ಯಂ ಪ್ರಾಣವ್ರತಂ ಚರೇತ್ ।

ಮಾಡುವುದೇ ವಿಷ್ಣು ಪ್ರಾಣರ ವ್ರತವೆನಿಸುವುದು. ಯಾಕೆಂದರೆ 'ವಾಯುವಿನಲ್ಲಿ ಪವಮಾನ ಎಂಬ ಹೆಸರಿನಿಂದ ಇರುವ ಶ್ರೀಹರಿಯನ್ನು ಆಶ್ರಯಿಸಿಯೇ ದೇವತೆಗಳು ಮುಕ್ತಿಯನ್ನು ಪಡೆಯುವರು. ಎಲ್ಲ ಕಡೆಗಳಲ್ಲಿ ವ್ಯಾಪಿಸಿ ವಿಷ್ಣು ಎನಿಸುವ ಭಗವಂತನು ಸಂಸಾರ ಬಂಧನದಿಂದ ಪವಿತ್ರಗೊಳಿಸಿ, ಮೋಕ್ಷದ ಮಹಾನಂದದಲ್ಲಿ ಮುಳುಗಿಸುವುವನೆಂಬ ಅಭಿ ಪ್ರಾಯದಲ್ಲಿ ಪವಮಾನ ಎನಿಸುವನು.'[8]

'ಅಧಿದೈವದ ರಥದಿಂದ ಜಗದೊಡೆಯರಾದ ದೇವೇಶರಾದ ವಿಷ್ಣುವಾಯುಗಳೇ ನೀವು ಬನ್ನಿರಿ ಎಂದು ಈ ದೇವತೆಗಳನ್ನು ಪ್ರಾರ್ಥಿಸಬೇಕು. ಯಜ್ಞಕರ್ಮದಲ್ಲಿ ಅಥವಾ ಯಜ್ಞಕರ್ಮವಲ್ಲದಿದ್ದರೂ ಜ್ಞಾನಾರ್ಥಿಯಾದವನು ಯಾವಾಗಲೂ ಇರವನ್ನು ಬೇಡ ಬೇಕು. **'ಆ ತೇನ ಯಾತಂ.....'** **'ನಿಮಿಷಶ್ಚಿಜವೀಯಸಾ....'** –ಎಂಬ ಎರಡು ಮಂತ್ರಗಳನ್ನೂ ಜಪಿಸಬೇಕು. ಅಧ್ಯಾತ್ಮದಲ್ಲೂ ನಿಮ್ಮಿಂದ ನನಗೆ ರಕ್ಷಣೆ ಸಮೀಪದಲ್ಲಿ ಸಿಗಲಿ –ಎಂದು ಪ್ರಾರ್ಥಿಸಬೇಕು. ರಥದಲ್ಲಿರುವ ವಿಷ್ಣುವೂ ವಾಯುವೂ ಹಯಮುಖರಾದ್ದರಿಂದ ಅವರನ್ನು 'ಅಶ್ವಿನೌ' ಎಂದು ಉತ್ತಮ ಮಂತ್ರ ಸಂಬೋಧಿಸಿದೆ. ವಾಯುದೇವನಲ್ಲಿರುವ ಮತ್ತು ಪ್ರತ್ಯೇಕವಾಗಿಯೂ ಇರುವ ದ್ವಿರೂಪಿ ಕೇಶವನನ್ನೇ ದ್ವಿವಚನಯುಕ್ತವಾದ ಮಂತ್ರವು ಹೊಗಳುತ್ತದೆ.'[9]

---

ಹಂಸೋಪಾಸ್ತಿಃ ಶ್ವಾಸರೂಪೇ ತಯೋರ್ವ್ರತಮುದೀರಿತಮ್ ॥
ಹಂಸರೂಪೌ ಹಿ ತೌ ದೇವೌ ಶ್ವಾಸೋಚ್ಛ್ವಾಸಪ್ರವರ್ತಕೌ ।
ತಸ್ಮಾತ್ ಪ್ರಾಣ್ಯಾದಪಾನಾಚ್ಚ ತದ್ರೂಪಂ ಸಂಸ್ಮರನ್ ಸದಾ ॥
ನಾನ್ಯಸ್ಯೋಪಾಸನಂ ಕುರ್ಯಾತ್ ತದ್‌ಭೃತ್ಯತ್ವಂ ವಿನಾ ಕ್ವಚಿತ್ ।
*– ನಾರಾಯಣಶ್ರುತಿ [ಬೃ.ಉ.ಭಾ. 3-6-28]*

8. ವಾಯುಸ್ಥಮಾಶ್ರಿತಾಃ ದೇವಾಃ ಪವಮಾನಾಭಿಧಂ ಹರಿಮ್ ।
ಸಂಸಾರಾತ್ ಪಾವಯಿತ್ವಾ ಯನ್ಮಹಾನಂದೇ ಮಿನೋತ್ಯಯಮ್ ।
ಪವಮಾನಸ್ತತೋ ವಿಷ್ಣುರ್ವ್ಯಾಪ್ತಃ ಸರ್ವಾಸು ದಿಕ್ಷು ಚ ॥
*– [ಐ.ಉ.ಭಾ. 1-1-5]*

9. ರಥೇನ ತೇನ ದೇವೇಶೌ ವಿಷ್ಣುವಾಯೂ ಜಗತ್ಪತೀ ।
ಆಯಾತಮಿತಿ ಕೈ ವೈ ತೌ ಪ್ರಾರ್ಥಯೇದ್ ಯಜ್ಞಕರ್ಮಣಿ ॥
ಅನ್ಯದಾಪ್ಯರ್ಥಯೇದೇತೌ ಜ್ಞಾನೇಚ್ಛುಃ ಪುರುಷಃ ಸದಾ ।
ಜಪೇನ್ಮಂತ್ರದ್ವಯಂ ನಿತ್ಯಮಾತೇನ ನಿಮಿಷಸ್ತಥಾ ॥
ರಕ್ಷಣಂ ವಾಂ ಸಮೀಪೇ ಸ್ಯಾನ್ಮಮೇತ್ಯಧ್ಯಾತ್ಮಮೇವ ಚ ।
ಹಯಾಸ್ಯ ತ್ವಾಚ್ಚಾಶ್ವಿನೌ ತಾವಿತ್ಯಾಹ ಪರಮಾ ಶ್ರುತಿಃ ॥
..... ಅಥವಾ ವಾಯುದೇವಸ್ಥಂ ಪೃಥಕ್‌ಸಂಸ್ಥಂ ಚ ಕೇಶವಮ್ ।
ಮಂತ್ರೋ ದ್ವಿವಚನೋ ವಕ್ತಿ...... ॥
*– ಐತರೇಯಸಂಹಿತಾ [ಐ.ಉ.ಭಾ. 2-2-7-7]*

- 'ವಿದ್ಯಾಭಿಮಾನಿಗಳು ಅವರೆಲ್ಲರಿಗೂ ಅಧಿಪತಿಯಾದ ವಾಯುದೇವನ ಬಳಿಗೆ ಸಾರಿ ನಮ್ಮನ್ನು ಕಳ್ಳರಿಗೆ ಉಪದೇಶಿಸಬೇಡ. ವಿಷ್ಣುಭಕ್ತರಲ್ಲಿ ಉಪದೇಶಿಸು' –ಎಂದು ಕೇಳಿಕೊಳ್ಳುವರು.10

- ದುರ್ನಿಮಿತ್ತಗಳು ಕಾಣಿಸಿಕೊಂಡಾಗ 'ಯದಂತಿ....' ಇತ್ಯಾದಿ ಋಚೆಗಳನ್ನು ಜಪಿಸ ಬೇಕು. ಯದಂತಿ ಮುಂತಾದ ಏಳು ಋಚೆಗಳಲ್ಲಿ ಆರು ಋಚೆಗಳಿಂದ ವಾಯು ದೇವನೇ 'ಪವಮಾನ' 'ಅಗ್ನಿ' 'ಸವಿತೃ' 'ಸೋಮ' ನಾಮಕನಾಗಿ ಸ್ತುತಿಸಲ್ಪಡುವನು. [ಏಳನೆಯ ಋಚೆ ದೇವಜನಾದಿ ಪರಿವೃತನಾದ ಜಾತವೇದೋ ನಾಮಕ ವಾಯು ವನ್ನು ಹೊಗಳುತ್ತದೆ.] ವಾಯುದೇವ ಶರೀರಪ್ರೇರಕನಾಗಿರುವುದರಿಂದ 'ಅಗ್ನಿ' ಎನಿಸುವನು. ಪರಬ್ರಹ್ಮನಾದ ವಿಷ್ಣುವನ್ನು ಲೋಕಕ್ಕೇ ತಿಳಿಸಿಕೊಡುವ ಮೂಲಕ ಅವನನ್ನು ಪ್ರಾದುರ್ಭಾವಗೊಳಿಸುವುದರಿಂದ 'ಸವಿತಾ' ಎನಿಸುವನು. ವಿಷ್ಣುವನ್ನು ಪ್ರಾದುರ್ಭಾವಗೊಳಿಸುವ ಪ್ರಕ್ರಿಯೆಯಿಂದ ಲೋಕವನ್ನು ಪಾವನಗೊಳಿಸುವುದರಿಂದ 'ಪವಮಾನ' ಎನಿಸುವನು. ಶ್ರೀಜನಾರ್ದನನು ಸಾಕ್ಷಾತ್ತಾಗಿ 'ಪವಿತ್ರ' ಎನಿಸಿರುವವನು. ಅವನನ್ನು ಒಲಿಸಿ, ಸಂತೋಷಪಡಿಸಿ ಅವನಿಂದ ಜನರನ್ನು ಪವಿತ್ರಗೊಳಿಸುವನು. ವಿಷ್ಣುವಿನ ತಿಳಿವಳಿಕೆಯನ್ನು ನೀಡಿ ಪ್ರಾದುರ್ಭವಿಸುವಂತೆ ಮಾಡುವುದರಿಂದಲೂ ವಾಯುದೇವನು ಪವಿತ್ರಗೊಳಿಸುವನು. ಶರೀರದಲ್ಲಿ ಮುಖ್ಯಪ್ರಾಣನೆಂಬ ಅಗ್ನಿಯ ಜ್ವಾಲೆಗಳು ಹರಡಿವೆ. ಅವುಗಳಲ್ಲಿ ಕಿರಣಗಳುಳ್ಳ ಕೇಶವ ವ್ಯಾಪಿಸಿರುವನು. ಅವನಿಂದಾಗಿ ವಾಯುದೇವನು ಚೆನ್ನಾಗಿ ಪವಿತ್ರಗೊಳಿಸುವನು. 'ಯತ್ರ ಬ್ರಹ್ಮಾ....' ಮುಂತಾದ ಆರು ಋಚೆಗಳಿಂದಲೂ ವಾಯುದೇವನನ್ನೇ ಸಂಸಾರದಿಂದ ಬಿಡುಗಡೆ ಗೊಳಿಸಿ ವಿಷ್ಣುವಿನ ಲೋಕಕ್ಕೆ ಒಯ್ಯಲು ಪ್ರಾರ್ಥಿಸಬೇಕು. ....ಅಭೀಷ್ಟವನ್ನು ಕೊಡುವ ಸ್ವಭಾವದವನಾದುದರಿಂದ ವಾಯು ಇಂದು ಎನಿಸಿದ್ದಾನೆ. ಸೌಮ್ಯಸ್ವರೂಪದವ ನಾದುದರಿಂದ ಅವನು 'ಸೋಮ' ಎನಿಸಿರುವನು. ಪವಿತ್ರೀಕರಿಸುವುದರಿಂದ ಅವನು 'ಪವಮಾನ್ಯ' ಎನಿಸುವನು.11

---

10. ವಾಯುಂ ವಿದ್ಯಾಃ ಸಮಾಸಾದ್ಯಾ ಸರ್ವಾಸಾಂ ಪತಿಮೂಚಿರೇ ।
ಸ್ತೇನೇಭ್ಯೋ ಮೈವ ನೋ ಬ್ರೂಹಿ ಬ್ರೂಹ್ಯಥೋ ವೈಷ್ಣವೇಷು ಚ ॥
*– [ಐ.ಉ.ಭಾ. 2-7-5-6]*

11. .......ತಸ್ಮಾತ್ ತೇಷಾಂ ದರ್ಶನೇ ತು ಕರ್ತವ್ಯಂ ಪಾರಲೌಕಿಕಮ್ ।
ಸರ್ವಮೇವ ಜಪೇಚ್ಚೈವ ಯದಂತೀತ್ಯಾದಿಕಾ ಋಚಃ ॥
ಋಗ್ಭಿಃ ಷಡ್ಭಿರ್ವಾಯುರೇವ ಪವಮಾನಾದಿನಾಮಕಃ ।
ಸ್ತೂಯತೇ ಸೋಽಂಗನೇತೃತ್ವಾದಗ್ನಿರಿತ್ಯಭಿಧೀಯತೇ ॥
ಪರಸ್ಯ ಬ್ರಹ್ಮಣೋ ವಿಷ್ಣೋರ್ಜ್ಞಾಪನಾಖ್ಯಪ್ರಸೂತಿಭಿಃ ।
ವಾಯುಃ ಪುನಾತಿ ಯಲ್ಲೋಕಾನ್ ಸವಿತಾ ತೇನ ಕಥ್ಯತೇ ॥
ಪವಿತ್ರಂ ನಾಮ ಸಾಕ್ಷಾತ್ ತತ್ ಪರಂ ಬ್ರಹ್ಮ ಜನಾರ್ದನಃ ।
ಪ್ರಸಾದಯಿತ್ವಾ ತಂ ವಿಷ್ಣುಂ ತೇನ ಲೋಕಾನ್ ಪುನಾತ್ಯಸೌ ॥

- 'ಯದಂತಿ' ಎಂಬ ಮೊದಲ ಋಙ್ಮಂತ್ರದ ಜಪದಿಂದ ಅಪಮೃತ್ಯುಭಯ ದೂರಾಗುವುದು. ಸಕಾಲಿಕಮರಣವೇ ಪ್ರಾಪ್ತವಾಗಿದ್ದಲ್ಲಿ ಸಂಸಾರಬಂಧನದಿಂದ ಬಿಡುಗಡೆಯಾಗಿ ಜನ್ಮಾದಿಗಳ ಭಯ ದೂರವಾಗುವುದು. ಮುಂದಿನ ಆರು ಋಙ್ಮಂತ್ರಗಳ ಜಪದಿಂದ ಕರ್ಮದಿಂದ ಬಿಡುಗಡೆ ಹೊಂದುವನು. 'ಯತ್ರ ಬ್ರಹ್ಮಾ.....' ಎಂಬ ಆರು ಋಙ್ಮಂತ್ರಗಳ ಜಪದಿಂದ ವಿಷ್ಣುಲೋಕವನ್ನು ಹೊಂದುವನು.12
- ಸರ್ವಾಭೀಷ್ಟಪ್ರದನಾದ ಜಗತ್ಪ್ರಾಣನೇ, ಎಲ್ಲಿ ಆ ಭಗವಂತ ಇರುವನೋ ಅಲ್ಲಿಗೆ ನನ್ನನ್ನು ಕರೆದೊಯ್ಯು. ನೀನೇ ಸದಾ ಮೋಕ್ಷದಾಯಕ ತಾನೇ? –ಎಂದು 'ಇಂದ್ರಾಯೇಂದೋ ಪರಿಸ್ರವ' ಎಂಬ ಮಾತಿನ ಆಶಯವನ್ನು ಸ್ಪಷ್ಟಪಡಿಸಲಾಗಿದೆ.13
- ಇಷ್ಟಪ್ರದನಾದುದರಿಂದ ಇಂದು ಎನಿಸುವ ವಾಯು ಇಂದ್ರ ಎನಿಸುವ ಕೇಶವನ ಬಳಿಗೆ ಮುಕ್ತನನ್ನು ಚೆನ್ನಾಗಿ ಕರೆದೊಯ್ಯುವನು –ಎಂದು 'ಇಂದ್ರಾಯೇಂದೋ ಪರಿಸ್ರವ' ಎಂಬ ಮಾತಿನ ಅಂತರ್ಯವನ್ನು ವಿವರಿಸಲಾಗಿದೆ.14
- ಎಲ್ಲ ಅಸುರರು ಪ್ರಾಣನನ್ನು ಹೊಂದಿ ನಾಶವನ್ನೇ ಹೇಗೆ ಹೊಂದಿದರೋ ಹಾಗೆ ಮುಖ್ಯಪ್ರಾಣನ ಉಪಾಸಕನಿಗೆ ಯಾರಾದರೂ ವಿರೋಧವನ್ನುಂಟುಮಾಡಬಯಸಿದರೆ ಅವರೂ ನಾಶಹೊಂದುವರು.15

---

ಜ್ಞಾನಾಖ್ಯಪ್ರಸವೇನಾಪಿ ಸ್ವಯಂ ವಾಯುಂ ಪುನಾತ್ಯಯಮ್ ।
ಪ್ರಾಣಾಗ್ನೇರರ್ಚಿಷೋ ದೇಹೇ ವಿತತಾಸ್ತೇಷು ಕೇಶವಃ ॥
ಅರ್ಚಿಷ್ಮಾನ್ ವಿತತೋ ನಿತ್ಯಂ ವಾಯುಸ್ತೇನ ಪುನಾತ್ಯಲಮ್ ।
ಯತ್ರ ಬ್ರಹ್ಮೇತಿ ಷಡ್ಭಿಶ್ಚ ಪ್ರಾರ್ಥನೀಯಃ ಸ ಮಾರುತಃ ॥
ಮೋಚಯಿತ್ವೈವ ಸಂಸಾರಾದ್ ವಿಷ್ಣೋರ್ಲೋಕೇ ಕೃಧೀತಿ ಹ ।
.....ಇಷ್ಟಪ್ರದಾನಶೀಲತ್ವಾದಿಂದುರ್ವಾಯುಃ ಸ ಏವ ಚ ॥
ಸೋಮಃ ಸೌಮ್ಯಸ್ವರೂಪತ್ವಾತ್ ಪವಮಾನಶ್ಚ ಪಾವನಾತ್ ॥
– [ಐ.ಉ.ಭಾ. 2-8-4-8,9]

12. ಅಪಮೃತ್ಯುಭಯಂ ತಸ್ಯ ಯದಂತೀತ್ಯೃಗ್ ಜಪಾದ್ ವ್ರಜೇತ್ ।
ಕಾಲಮೃತ್ಯುರ್ಯದಿ ಭವೇತ್ ತದಾ ಜನ್ಮಾದಿಕಂ ಭಯಮ್ ॥
ಅನ್ಯಾಭಿಃ ಕರ್ಮತಃ ಪೂತೋ ಯತ್ರ ಬ್ರಹ್ಮೇತಿ ವೈಷ್ಣವಮ್ ।
ಲೋಕಂ ವ್ರಜೇತ್ .......... ॥ – [ಐ.ಉ.ಭಾ. 2-8-4-1]

13. ಸರ್ವೇಷ್ಟದ ಜಗತ್ಪ್ರಾಣ ಮಾಮಾದಾಯ ಪರಿಸ್ರವ ।
ಯತ್ರಾಸೌ ಭಗವಾನ್ ವಿಷ್ಣುಸ್ತ್ವಂ ಹಿ ಮೋಕ್ಷಪ್ರದಃ ಸದಾ ॥
– [ಐ.ಉ.ಭಾ. 2-8-4-9]

14. ಇಂದುರಿಷ್ಟಪ್ರದತ್ವಾದ್ ಯೋ ವಾಯುರಾದಾಯ ಗಚ್ಛತಿ ।
ಇಂದ್ರನಾಮ್ನಃ ಕೇಶವಸ್ಯ ಸಮೀಪಂ ಮುಕ್ತಮುಂಜಸಾ ॥ – [ಐ.ಉ.ಭಾ. 2-8-4-9]

15. ಪ್ರಾಣಂ ಪ್ರಾಪ್ಯೈವ ವಿಧ್ವಸ್ತಾ ಯಥಾ ಸರ್ವೇಽಸುರಾಸ್ತಥಾ ।
ತದುಪಾಸಕಸ್ಯ ಯಶ್ಚಾಪಿ ಪ್ರತೀಪಂ ಕರ್ತುಮಿಚ್ಛತಿ ॥ – [ಛಾಂ.ಉ.ಭಾ. 1-2-2]

- 'ಪ್ರಾಣ ಉದ್ಗೀಥಃ' ಇತ್ಯಾದಿ ವಾಕ್ಯಗಳಲ್ಲಿ 'ಪ್ರಾಣಃ' –ಎಂಬಲ್ಲಿಯ ಪ್ರಥಮಾವಿಭಕ್ತಿ ಸಪ್ತಮೀವಿಭಕ್ತಿಯ ಅರ್ಥದಲ್ಲಿ ಪ್ರಯುಕ್ತವಾಗಿದೆ. ಅಂದರೆ 'ಪ್ರಾಣನಲ್ಲಿ ಉದ್ಗೀಥ'ನ ಉಪಾಸನೆ ಎಂದರ್ಥ. ಹಾಗೆಯೇ '....ಮುಖ್ಯಪ್ರಾಣಸ್ತಂ ಉದ್ಗೀಥಮುಪಾಸಾಂ ಚಕ್ರರೇ' ಇತ್ಯಾದಿ ಕಡೆಗಳಲ್ಲಿ 'ಪ್ರಾಣಂ' ಎಂಬಲ್ಲಿಯ ದ್ವಿತೀಯಾವಿಭಕ್ತಿ ಸಪ್ತಮ್ಯರ್ಥದಲ್ಲಿ ಪ್ರಯುಕ್ತವಾಗಿದೆ.16

- ಪ್ರಾಣ, ಅಪಾನ, ವ್ಯಾನ, ಉದಾನ ಹಾಗೂ ಸಮಾನ –ಎಂಬ ಈ ಐದು ದೇವತೆಗಳು ಮೂರು ವಿಧರಾಗಿರುವರು. ಮುಖ್ಯಪಂಚಕ, ಮಧ್ಯಪಂಚಕ ಹಾಗೂ ಅವಮಪಂಚಕ –ಎಂಬ ಮೂರು ಸಮೂಹಗಳಲ್ಲಿಯ ಮುಖ್ಯಪಂಚಕರೂಪವಾಗಿ ಮುಖ್ಯಪ್ರಾಣನೇ ಇರುವನು. ಅಂದರೆ ಅವನ ಪ್ರಾಣಾಪಾನಾದಿ ಐದು ರೂಪಗಳೇ ಮುಖ್ಯಪಂಚಕ. ಗರುಡನ ಪ್ರಾಣಾಪಾನಾದಿ ಐದುರೂಪಗಳು ಮಧ್ಯಮಪಂಚಕ. ಮುಖ್ಯಪ್ರಾಣನ ಮಕ್ಕಳಾದ ಪ್ರಾಣಾಪಾನಾದಿಗಳು ಅಧಮಪಂಚಕರೂಪ. ಇದಲ್ಲದೆ ಮತ್ತೊಂದು ನಾಲ್ಕನೆಯದಾದ ರೂಪಪಂಚಕವಿದೆ. ಅದರಲ್ಲಿ ಶೇಷಗರುಡರು ಪ್ರಾಣಾಪಾನರೆನಿಸಿದರೆ, ರುದ್ರ ಇಂದ್ರರು ಉದಾನಸಮಾನರೆನಿಸಿರುವರು. ಈ ನಾಲ್ವರಿಗಿಂತ ಶ್ರೇಷ್ಠನಾದ ವ್ಯಾನ ಮುಖ್ಯಪ್ರಾಣ. ಇಂತಹ ಮುಖ್ಯಪ್ರಾಣಸ್ವರೂಪನಾದ ವ್ಯಾನನಲ್ಲಿ ಉದ್ಗೀಥನಾಮಕ ಭಗವಂತನ ಉಪಾಸನೆಯನ್ನು ನಡೆಸಬೇಕು. ವ್ಯಾನನಲ್ಲಿರುವ ಶ್ರೀವಿಷ್ಣುವೇ ವೇದ, ಋಗ್ವೇದ, ಸಾಮವೇದ ಹಾಗೂ ಉದ್ಗೀಥ ಎಂಬ ಸಾಮಪ್ರಭೇದ ಇವುಗಳಲ್ಲಿ ನಿಯಾಮಕನಾಗಿ ಇರುವನು. ವೇದಾದಿಪಂಚಕದಲ್ಲಿ ನಿಯಾಮಕನಾಗಿರುವ ವ್ಯಾನನಾಮಕ ವಾಯುವಿನಲ್ಲಿ ಉದ್ಗೀಥನಾಮಕ ವಿಷ್ಣುನಿಯಾಮಕನಾಗಿರುವುದರಿಂದ ಅಂತಹ ವ್ಯಾನನಿಂದಲೇ ವೇದೋಚ್ಚಾರಣಾದಿಕ್ರಿಯೆಗಳು ನಡೆಯುವವು.17

---

16. ಪ್ರಾಣ ಉದ್ಗೀಥ ಇತ್ಯಾದ್ಯಾ ನಾಮಬ್ರಹ್ಮಾದಿಕಾಸ್ತಥಾ ।
ಸಪ್ತಮ್ಯರ್ಥಾಃ ಸಮುದ್ದಿಷ್ಟಾಃ ಸಪ್ತಸು ಪ್ರಥಮಾಯತಃ ।
ಪ್ರಾಣಮುದ್ಗೀಥ ಇತ್ಯಾದ್ಯಾ ದ್ವಿತೀಯಾ ಸಪ್ತಮೀ ಮತಾ ॥
*– [ಛಾಂ.ಉ.ಭಾ. 1-2-1]*

17. ಪ್ರಾಣಾದ್ಯಾಸ್ತ್ರಿವಿಧಾಃ ಪಂಚಪ್ರಧಾನೋ ವಾಯುರೇವ ಚ ।
ಮುಖ್ಯಪಂಚಕರೂಪಃ ಸನ್ ಗರುಡೋ ಮಧ್ಯಪಂಚಕಃ ॥
ಅವಮಃ ಪಂಚಕಸ್ತ್ವನ್ಯೇ ಪ್ರಾಣಾದ್ಯಾಸ್ತಸ್ಯ ಸೂನವಃ ।
ಇತಿ ತ್ರೇಧಾ ವಿಭಾಗೋಽಯಂ ವಿಭಾಗೋಽನ್ಯಶ್ಚತುರ್ಥಕಃ ॥
ಪ್ರಾಣಾಪಾನೌ ಶೇಷವೀಂದ್ರೌ ತಥೋದಾನಸಮಾನಕೌ ।
ರುದ್ರೇಂದ್ರೋ ತತ್ಪರಃ ಶ್ರೇಷ್ಠೋ ವಾಯುರ್ವ್ಯಾನ ಉದಾಹೃತಃ ॥
ತಸ್ಮಿನ್ನುದ್ಗೀಥನಾಮಾನಮುಪಾಸೀತ ಹರಿಂ ಪರಮ್ ।
ಯೋಽಸೌ ವ್ಯಾನಗತೋ ವಿಷ್ಣುಃ ಸ ವಾಗ್ರುಕ್ಸಾಮಗಃ ಸದಾ ॥
ಉದ್ಗಿಥೇ ಚ ಸ ಏವೈಕಃ ತಸ್ಮಾದ್ ವ್ಯಾನಾದ್ಧಿ ತತ್ಕ್ರಿಯಾಃ ॥ *– [ಛಾಂ.ಉ.ಭಾ. 3-2]*

- ವ್ಯಾನ, ವಾಕ್, ಉದಾನ, ಸಮಾನ ಹಾಗೂ ಉದ್ಗೀಥ –ಈ ಐದರಲ್ಲಿ ಉದ್ಗೀಥ ನಾಮಕ ಭಗವಂತನು ನಿಯಾಮಕನಾಗಿ ಇರುವುದರಿಂದ ಬಹುಶ್ರಮ ಸಾಧ್ಯ ಕರ್ಮ ಗಳನ್ನು ನಡೆಸುವವನು ವ್ಯಾನನೇ ಹೊರತು ಪ್ರಾಣಾಪಾನಾದಿಗಳಲ್ಲ. ಆದುದರಿಂದ ವ್ಯಾನನಾಮಕ ಮುಖ್ಯಪ್ರಾಣನಲ್ಲಿರುವ ವಿಷ್ಣುವನ್ನೇ ಯಾವಾಗಲೂ ಉಪಾಸನೆ ನಡೆಸಬೇಕು.18
- ಪ್ರಾಣಾದಿಗಳು ಉತ್ ಶಬ್ದದಿಂದ ವಾಚ್ಯರು. ಗೀ ಶಬ್ದದಿಂದ ವಾಚ್ಯರು ಸರಸ್ವತ್ಯಾದಿ ಗಳು. ಅನ್ನಾಭಿಮಾನಿ ಚತುರ್ಮುಖನೇ ಮುಂತಾದವರು ಶಬ್ದವಾಚ್ಯರು. ಇವರಲ್ಲಿ ಉದ್ಗೀಥನಾಮಕ ಭಗವಂತನಿರುವನು.19
- ಆದಿತ್ಯನಲ್ಲಿ ಮುಖ್ಯಪ್ರಾಣನಿರುವನು. ಅವನಲ್ಲಿ ಇರುವ ಶ್ರೀಹರಿ ಪ್ರಣವ ಎನಿಸಿರು ವನು. ಪ್ರಕೃಷ್ಟನೂ, ನಿಯಾಮಕನೂ ಎಲ್ಲರಿಗೂ ಗತಿಯಾಗಿರುವುದರಿಂದ ಶ್ರೀಹರಿ ಪ್ರಣವ ಎನಿಸುವನು. ಸರ್ವೋತ್ತಮನೆಂದು ಕೊಂಡಾಡಲ್ಪಡುವುದರಿಂದ ಅವನೇ ಉದ್ಗೀಥನಾಮಕನೂ ಆಗಿರುವನು. ಅವನೇ ದೇಹದಲ್ಲಿರುವ ಮುಖ್ಯಪ್ರಾಣನಲ್ಲೂ ನೆಲೆಸಿರುವನು. ಇವನು ಓಂಕಾರವನ್ನು ಸದಾ ಜಪಿಸುತ್ತ ಸಂಚರಿಸುತ್ತಿರುವನು. ಆ ಒಂದು ಭಗವದ್ರೂಪವನ್ನು ಧ್ಯಾನಿಸುವವನು ಒಂದು ಪುತ್ರನನ್ನು ಪಡೆದು ಮುಕ್ತ ನಾಗುವನು. ಇಂದ್ರಿಯಗಳಲ್ಲಿ ಸೂರ್ಯಕಿರಣಗಳಲ್ಲಿ ಇರುವ ವಾಯುದೇವನಲ್ಲಿ ಭಗವಂತನನ್ನು ಧ್ಯಾನಿಸುವವನು ಬಹುಪುತ್ರವಂತನಾಗಿ ವಿಮುಕ್ತನಾಗುವನು. ಆದ್ದ ರಿಂದ ಸೂರ್ಯಕಿರಣ ದೇಹ ಇಂದ್ರಿಯಗಳಲ್ಲಿರುವ ಭಗವಂತನನ್ನು ಧ್ಯಾನಿಸಬೇಕು.20
- ನಾಯಿರೂಪದ ವಾಯುದೇವ ನಾಯಿರೂಪದ ರುದ್ರಾದಿಗಳನ್ನೂ ಬಕನನ್ನೂ ಅನು ಗ್ರಹಿಸುವುದಕ್ಕಾಗಿ ಅವರಿಗೆ ಉಪದೇಶಿಸಿದ ಉಪಾಸನೆಯು 'ಶೌವೋದ್ಗೀಥ' ಎಂದು

---

18. ಉದ್ಗೀಥನಾಮಾ ಭಗವಾನ್ ಸ್ಥಿತೋ ವ್ಯಾನಾದಿಪಂಚಕೇ ।
ವೀರ್ಯವತ್ಕರ್ಮಕೃತ್ ತಸ್ಮಾದ್ ವ್ಯಾನ ಏವ ಉದಾಹೃತಃ ॥
ತಸ್ಮಾದ್ ವ್ಯಾನಗತಂ ವಿಷ್ಣುಂ ಉಪಾಸೀತೈವ ನಿತ್ಯಶಃ ॥ *– [ಛಾಂ.ಉ.ಭಾ. 1-1-2]*

19. ಉಚ್ಛಬ್ದವಾಚ್ಯಾಃ ಪ್ರಾಣಾದ್ಯಾ ವಾಗಾದ್ಯಾ ಗೀರಿತೀರಿತಾಃ ।
ಅನ್ನಾದ್ಯಾಸ್ಥಮಿತಿ ಪ್ರೋಕ್ತಾಸ್ತೇಷೂದ್ಗೀಥೋ ಹರಿಃ ಸ್ಥಿತಃ ॥ *– [ಛಾಂ.ಉ.ಭಾ. 1-3-2]*

20. ಆದಿತ್ಯಸಂಸ್ಥಿತೋ ವಾಯುಃ ಪ್ರಣವಸ್ತದ್ಗತೋ ಹರಿಃ ।
ಪ್ರಕೃಷ್ಟತ್ವಾಚ್ಚ ನೇತೃತ್ವಾದ್ಗತಿತ್ವಾದಖಿಲಸ್ಯ ಚ ॥
ಉದ್ಗೀಥ ಉಚ್ಚೈರ್ಗೇಯತ್ವಾತ್ ಸ ಏವ ಪುರುಷೋತ್ತಮಃ ।
ಸ ಏವ ಪ್ರಾಣಗೋ ದೇಹೇ ಓಮಿತ್ಯೇವ ಸದಾ ಜಪನ್ ॥
ಏತ್ಯೇಷ ಭಗವಾನ್ ವಿಷ್ಣುರ್ಧ್ಯಾಯನ್ನೇಕಂ ತಮಕ್ಷರಮ್ ।
ಏಕಪುತ್ರೋ ಮುಕ್ತಿಮೇತಿ ಧ್ಯಾಯನ್ ಪ್ರಾಣೇಷು ರಶ್ಮಿಷು ।
ಬಹುಪುತ್ರೋ ವಿಮುಕ್ತಃ ಸ್ಯಾದ್ ತಸ್ಮಾದ್ ಧ್ಯಾಯೇತ್ ತಥಾ ಪರಮ್ ॥
*– [ಛಾಂ.ಉ.ಭಾ. 1-3-5]*

ಕರೆಯಲ್ಪಡುವುದು. ಭಗವಂತನನ್ನು ಪೌರ್ಣಮಾದಂದು ಶೌವೋದ್ಗೀಥದಿಂದ ಉಪಾಸಿಸಿದರೆ, ಅವನು ಸರ್ವಾಭೀಷ್ಟಗಳನ್ನು ಕೊಡುವನು. ಆದ್ದರಿಂದ ವಾಯುದೇವರು 'ನಾಳೆ ಬೆಳಗ್ಗೆ ಬನ್ನಿರಿ' ಎಂದು ಹೇಳಿದರು. ರುದ್ರಾದಿದೇವತೆಗಳು ವಾಯು ಹೇಳಿದ ಓಮದಾಮ ಇತ್ಯಾದಿ ಮಂತ್ರವನ್ನು ವಾಯು ಮತ್ತು ವಾಯುಸ್ಥವಿಷ್ಣುವಿನ ಉದ್ದೇಶದಿಂದ ಹಿಂಕಾರದಿಂದ ಜಪಿಸಿ ಅಭೀಷ್ಟವನ್ನು ಹೊಂದಿದರು.

ವಿಷ್ಣು ಮತ್ತು ವಾಯು ಕ್ರಮವಾಗಿ ಸರ್ವಜ್ಞರಾಗಿರುವುದರಿಂದ 'ದೇವ' ಎನಿಸುವರು. ವರಿಸಲು ಅರ್ಹರಾಗಿರುವುದರಿಂದ 'ವರುಣ' ಎನಿಸುವರು. ಜಗತ್ಸೃಷ್ಟಿ ಮಾಡುವುದರಿಂದ 'ಸವಿತಾ' ಎನಿಸುವರು. ಪ್ರಜೆಗಳಿಗೆ ಕ್ರಮವಾಗಿ ಅಧಿಪತಿಗಳಾಗಿರುವುದರಿಂದ 'ಪ್ರಜಾಪತೀ' ಎನಿಸುವರು.21

- ಪರಬ್ರಹ್ಮನಿಗೆ ಹೃದಯಮಂದಿರದಲ್ಲಿ ಊರ್ಧ್ವದ್ವಾರಾಧಿಪತಿಯು ಪ್ರಧಾನವಾಯು ಆಗಿರುವನು. ಅವನು ಸರ್ವಜ್ಞನಾದುದರಿಂದ ಆಕಾಶ ಎಂದೂ, ಸರ್ವೋನ್ನತನಾದುದರಿಂದ ಉದಾನ ಎಂದೂ, ಉತ್ಕೃಷ್ಟನಾದುದರಿಂದ 'ಓಜಃ' ಎಂದೂ ಪೂರ್ಣನಾದುದರಿಂದ 'ಮಹಃ' ಎಂದೂ ಕರೆಯಲ್ಪಡುವನು. ಹೃದಯಮಂದಿರದಲ್ಲಿ ಹೇಗೋ ಹಾಗೆ ವಿಷ್ಣುಲೋಕದಲ್ಲೂ ಯಾವಾಗಲೂ ಊರ್ಧ್ವದ್ವಾರಾಧಿಪತಿ. ಜಯಾದಿಗಳು ಹೊರಗಿನ ದ್ವಾರಾಧಿಪತಿಗಳಾಗಿದ್ದರೆ, ಇವನು ಒಳಗಿನ ದ್ವಾರಪಾಲಕ.22

- ಯಜ್ಞಾಭಿಮಾನಿಯಾದ ಯಜ್ಞನಾಮಕನಾದ ವಾಯುದೇವ ಯಜ್ಞದಲ್ಲಿರುವನು. ಯಜ್ಞ ಎಂಬಲ್ಲಿ 'ಜ್ಞ' ಎಂಬುದು 'ಜ್ಞ' ಶುದ್ಧಭಾವೇ –ಎಂಬ ಕ್ರಿಯಾಪದದಿಂದ ಶುದ್ಧ

---

21. ಪ್ರಸಾದಾರ್ಥಂ ಬಕಸ್ಯಾಪಿ ವಾಯುನೋಕ್ತಃ ಶ್ವರೂಪಿಣಾ ।
ಶೌವೋದ್ಗೀಥ ಇತಿ ಪ್ರೋಕ್ತೋ ರುದ್ರಾದೀನಾಂ ಶ್ವರೂಪಿಣಾಮ್ ॥
ಉಪಾಸಿತಃ ಪೌರ್ಣಮಾಸ್ಯಾಂ ಶೌವೋದ್ಗೀಥೇನ ಕೇಶವಃ ।
ಸರ್ವಾಭೀಷ್ಟಂ ದದಾತೀತಿ ಪ್ರಾತರಿತ್ಯಾಹ ಮಾರುತಃ ॥
ಓಮವಾಮಾದಿಕಂ ಮಂತ್ರಂ ವಾಯುನೋಕ್ತಂ ತು ದೇವತಾಃ ।
ವಾಯುಸ್ಥವಿಷ್ಣುಮುದ್ದಿಶ್ಯ ಹಿಂಕೃತ್ಯ ಪ್ರಾಪುರೀಪ್ಸಿತಮ್ ॥
ದೇವೌ ವಿಷ್ಣುಶ್ಚ ವಾಯುಶ್ಚ ಸರ್ವಜ್ಞತ್ವಾತ್ ಕ್ರಮೇಣ ತು ।
ವರುಣೌ ವರಣೀಯತ್ವಾತ್ ಸವಿತಾರೌ ಪ್ರಸೂತಿತಃ ।
ಪ್ರಜಾನಾಂ ಚ ಪತೀ ತದ್ವತ್ ಕ್ರಮಾದೇವ ಪ್ರಕೀರ್ತಿತೌ ॥
*– [ಛಾಂ.ಉ.ಭಾ. 1-3-16]*

22. .......ಊರ್ಧ್ವದ್ವಾರಪ ಏವ ಚ ।
ಪ್ರಧಾನವಾಯುರಾಕಾರಃ ಸಾರ್ವಜ್ಞಾದುನ್ನತೇಸ್ತಥಾ ॥
ಉದಾನ ಊರ್ಜಿತತ್ವಾತ್ ಸ ಓಜಃ ಪೂರ್ಣತ್ವತೋ ಮಹಃ ।
.......ದ್ವಾರಪಾ ಹೃದಯೇ ಚೈವ ವಿಷ್ಣುಲೋಕೇ ಚ ಸರ್ವದಾ ॥
ಆಂತರ ದ್ವಾರಪಾಹ್ಯೇತೇ ಜಯಾದ್ಯಾ ಬಾಹ್ಯತಃ ಸ್ಮೃತಾಃ ॥
*– ಸಂಸ್ತತ್ತ್ವೇ [ಛಾಂ.ಉ.ಭಾ. 3-2-7]*

ಮಾಡುವವನೆಂಬ ಅರ್ಥದಲ್ಲಿ ರೂಪುಗೊಂಡಿದೆ. 'ಯ' ಎಂಬುದು ಸಂಚಾರಾರ್ಥ ಯನ್ ಎಂಬುದರ ರೂಪ.

ಹೀಗೆ ಸಂಚರಿಸುತ್ತ ಪವಿತ್ರೀಕರಿಸುವರೆಂಬ ಅಭಿಪ್ರಾಯದಲ್ಲಿ ವಾಯುದೇವರು ಯಜ್ಞ ಎನಿಸಿರುವರು. ಅವರ ಪಾದಗಳು ವಾಕ್ ಮತ್ತು ಮನಸ್ಸಿನಲ್ಲಿ ಇದೆ. ಬಲಪಾದವು ಮನಸ್ಸಿನಲ್ಲಿ ಇದೆ. ಬ್ರಹ್ಮಾ ಎಂಬ ಋತ್ವಿಜನು ಆ ಪಾದದ ಪೂಜಕನಾಗಿರುವನು. ಹೋತೃ ಮೊದಲಾದವರು ವಾಗಿಂದ್ರಿಯದಲ್ಲಿರುವ ಎಡ ಪಾದದ ಪೂಜಕರು. ಆದುದರಿಂದ ಪಾತ್ರರನುವಾಕ ಮಂತ್ರಪಠನ ಮತ್ತು ಯಜ್ಞ ಸಮಾಪ್ತಿ ಕಾಲದ ಋಙ್ಮಂತ್ರದ ಜಪ –ಇವುಗಳ ಮಧ್ಯದಲ್ಲಿ ಬ್ರಹ್ಮನು ಮಾತನಾಡಿದರೆ ಯಜ್ಞದ ಒಂದು ಪಾದದ ಲೋಪ ಮಾಡಿದವನಾಗುವನು. ಯಾಕೆಂದರೆ ವಾಕ್ ಮತ್ತು ಮನಸ್ಸು ಎಂಬ ಪಾದಗಳುಳ್ಳ ಯಜ್ಞವು ವಾಯುದೇವನ ಪ್ರತಿಮೆ ಎನಿಸಿದೆ. ಆದುದರಿಂದ ವಾಯು ಮತ್ತು ಹರಿಯನ್ನು ಧ್ಯಾನಿಸುತ್ತ ಬ್ರಹ್ಮಾ ಎಂಬ ಋತ್ವಿಜನು ಯಜ್ಞದಲ್ಲಿ ಮೌನವನ್ನಾಚರಿಸಬೇಕು.23

- ಪಂಚಾಗ್ನಿಗಳಲ್ಲಿಯ ಮೊದಲಾಗಿ ನಾರಾಯಣ ಮುಖ್ಯಪ್ರಾಣನಲ್ಲಿ ಇರುವವನಾಗಿ ಪ್ರಕಾಶಮಾನನಾಗಿ 'ಅಸೌ ಲೋಕಃ' ಎನಿಸಿರುವನು.24

- (ಭೋಜನಾವಧಿಯಲ್ಲಿ ನೀಡುವ ಯಾವ ಯಾವ ಆಹುತಿಯಿಂದ ವೈಶ್ವಾನರನ ಮಂದಿರದ ಯಾವ ಯಾವ ದ್ವಾರಪಾಲಕರಿಗೆ ತೃಪ್ತಿಯಾಗುವುದೆಂಬುದನ್ನು ತಿಳಿಸುತ್ತ) 'ಉದಾನಾಯ ಸ್ವಾಹಾ' –ಎಂಬ ಐದನೆಯ ಆಹುತಿಯಿಂದ ಮೇಲಿನ ದ್ವಾರಾಧಿಪರಾದ ಉದಾನ, ವಾಯು, ಆಕಾಶ ಎನಿಸಿರುವ ಮುಖ್ಯ ವಾಯು ತೃಪ್ತನಾಗುವನು. ಆಕಾಶನಾಮಕನು ಲಕ್ಷ್ಮಿಯಿಂದ ಆವಿಷ್ಟನಾಗಿರುವನು.25

---

23. ಯಜ್ಞಾಭಿಮಾನೀ ಯಜ್ಞಾಖ್ಯೋ ವಾಯುರ್ಯಜ್ಞೇ ಪ್ರತಿಷ್ಠಿತಃ ।
ಜ್ಞಶುದ್ಧಭಾವ ಇತ್ಯಸ್ಮಾದ್ ಯನ್ನಯಂ ಪಾವಯೇದ್ ಯತಃ ॥
ಅತೋ ವಾಯುರ್ಯಜ್ಞನಾಮಾ ತತ್ಪಾದೌ ವಾಙ್ಮನಃ ಸ್ಥಿತೌ ।
ದಕ್ಷಿಣೋಽಸ್ಯ ಮನಃಸಂಸ್ಥೋ ಬ್ರಹ್ಮರ್ತ್ವಿಕ್ ತಸ್ಯ ಪೂಜಕಃ ॥
ಹೋತ್ರಾದ್ಯಾ ವಾಚಿ ಸಂಸ್ಥಸ್ಯ ವಾಮಪಾದಸ್ಯ ಪೂಜಕಾಃ ।
ತಸ್ಮಾತ್ ಪ್ರಾತರನೂವಾಕ ಪರಿಧಾನ್ಯೋರ್ಯದಂತರಾ ॥
ಬ್ರಹ್ಮಾ ಚೇದುತ್ಸೃಜೇದ್ ವಾಚಂ ಯಜ್ಞಪಾಲ್ಲೋಪವದ್ ಭವೇತ್ ।
ವಾಙ್ಮನಃ ಪಾದಯಜ್ಞಾಖ್ಯ ಪ್ರತಿಮೋ ವಾಯುರೀರಿತಃ ।
ಧ್ಯಾಯನ್ ವಾಯುಂ ಹರಿಂ ಚೈವ ತತೋ ಬ್ರಹ್ಮಾ ಮುನಿರ್ಭವೇತ್ ॥
– *[ಛಾಂ.ಉ.ಭಾ. 4-4-1]*

24. ಅಸೌ ಲೋಕಃ ಪ್ರಕಾಶತ್ವಾತ್ ಪ್ರಾಣಸ್ಥತ್ವಾಚ್ಚ ಕೇಶವಃ ।
– *ಸಾಮಸಂಹಿತಾ [ಛಾಂ.ಉ.ಭಾ. 5-2-6]*

25. ಉದಾನೋ ವಾಯುರಿತ್ಯೇಕ ಊರ್ಧ್ವದ್ವಾರಾಧಿಪಶ್ಚ ಸಃ ।
ಸ ಏವಾಽಕಾರನಾಮಾ ಚ ಲಕ್ಷ್ಮ್ಯಾವಿಷ್ಟೋ ವಿಶೇಷತಃ ॥
– *[ಛಾಂ.ಉ.ಭಾ. 5-5-6]*

- ಸಾಮನಾಮಕ ಪ್ರಾಣನನ್ನು ಭಕ್ತಿಯಿಂದ ಉಪಾಸನೆ ಮಾಡುವವನಿಗೆ ಕೂಡಾ ಇಷ್ಟ ಲೋಕದ ಪ್ರಾಪ್ತಿ ಆಗದಿರಲಿ ಎಂದು ಅವನ ಶತ್ರುವು ಆಸೆ ಮಾಡಬಾರದು. ಹೀಗಿರುವಾಗ ವಾಯುಪದವಿಯೋಗ್ಯರು ಸಾಮಗಾನ ಮಾಡುವಾಗ ಯಾರಿಗೆ ಉತ್ತಮಲೋಕದ ಪ್ರಾಪ್ತಿಯಾಗಲೆಂದು ಹೇಳುವರೋ ಅವರಿಗೆ ಉತ್ತಮ ಲೋಕದ ಪ್ರಾಪ್ತಿ ಆಗದಿರಲೆಂದು ಯಾರೂ ಎಂದೂ ಆಸೆ ಪಡುವಂತಿಲ್ಲ ಎಂದು ಬೇರೆ ಹೇಳಬೇಕಾಗಿಲ್ಲ. ಯಾಕೆಂದರೆ ವಾಯುಪದವಿಗೆ ಯೋಗ್ಯರಾದವರು ನಾರಾಯಣನಿಗೆ ಅತ್ಯಂತ ಪ್ರಿಯರು.26
- ವಾಯುದೇವನು ಹಸುವಿನ ಕರುವಿನ ರೂಪದಿಂದ ಎಲ್ಲ ಪ್ರಾಣಿಗಳಲ್ಲಿ ಇರುವನು. ಜೀವನ ಸೂಕ್ಷ್ಮದೇಹವು ಅವನ ಹಟ್ಟಿ. ಸ್ಥೂಲದೇಹ ಆ ಹಟ್ಟಿ ಇರುವ ಪ್ರದೇಶ. ಅನ್ನ ಎನಿಸುವ ಲಕ್ಷ್ಮೀದೇವಿ ಅವನನ್ನು ಕಟ್ಟುವ ಹಗ್ಗ. ಭಗವಂತ ಆ ಹಗ್ಗ ಕಟ್ಟಲು ಬೇಕಾದ ಗೂಟ. ಯಾರು ಹೀಗೆ ವಾಯುದೇವನನ್ನು ಉಪಾಸನೆ ಮಾಡುವನೋ ಅವನು ವಿಷಯಗಳ ಕಡೆಗೆ ಓಡುತ್ತ ಶತ್ರುಗಳಂತಿರುವ ತನ್ನ ಮನಸ್ಸು, ಬುದ್ಧಿ ಮತ್ತು ಶ್ರೋತ್ರಾದಿ ಪಂಚೇಂದ್ರಿಯಗಳು ಈ ಏಳನ್ನೂ, ಇನ್ನೂ ಕೆಟ್ಟ ಮಾರ್ಗದಲ್ಲಿ ಪ್ರೇರಿಸುತ್ತಿರುವ ಅಸುರರನ್ನೂ ಚೆನ್ನಾಗಿ ವಶದಲ್ಲಿರಿಸಿಕೊಂಡು ಸರ್ವೋತ್ತಮನಾದ ನಾರಾಯಣನನ್ನು ತಿಳಿಯುವನು.27

ಬಲಗಣ್ಣಿನಲ್ಲಿರುವ ವಾಯುದೇವನನ್ನು ಕುಂದದ ಜ್ಞಾನಪ್ರಕಾಶವುಳ್ಳ ರುದ್ರಾದಿ ಸಪ್ತದೇವತೆಗಳು ಉಪಾಸನೆ ನಡೆಸುವರು. ಮೋಕ್ಷದ ಉದ್ದೇಶದಿಂದ ಆ ದೇವತೆಗಳಿಂದ ಉಪಾಸಿಸಲ್ಪಡುವ ವಾಯುದೇವನನ್ನು ಅವನಿಗೆ ಗೂಟದಂತೆ ಆಧಾರನಾಗಿ ಇರುವ ವಿಷ್ಣುವಿನಿಂದ ಸಹಿತವಾಗಿ ಯಾರು ಉಪಾಸನೆ ಮಾಡುವನೋ ಅವನು ಮುಕ್ತನಾಗಿ, ಸರ್ವದುಃಖರಹಿತನಾಗಿ ಅಕ್ಷಯವಾದ ಆನಂದವನ್ನು ಅನುಭವಿಸುವನು.28

---

26. ಏವಂ ತಂ ಸಾಮನಾಮಾನಂ ವಾಯುಂ ಯೋ ವೇದ ಸಾದರಮ್ ।
ತಸ್ಯೇಷ್ಟಲೋಕರಾಹಿತ್ಯೇ ನಾಽಶಾ ಕಾರ್ಯಾಽರಿಣಾ ಕ್ವಚಿತ್ ॥
ತಸ್ಮಾದ್ ವಾಯುತ್ವಯೋಗ್ಯೈರ್ಹಿ ಯೇಷಾಂ ಲೋಕಾಃ ಪ್ರಕೀರ್ತಿತಾಃ ।
ತೇಷಾಮಲೋಕಶಂಕಾ ಚ ನೈವ ಕಾರ್ಯಾ ಕದಾಚನ ।
ಯಸ್ಮಾನ್ನಾರಾಯಣಸ್ಯಾತಿಪ್ರಿಯಾಃ ಪ್ರಾಣತ್ವಯೋಗಿನಃ ॥
*– ಮಹಾಸಂಹಿತಾ [ಬೃ.ಉ.ಭಾ. 3-3-29]*

27. ವಾಯುರ್ಗೋವತ್ಸರೂಪೇಣ ಸರ್ವಪ್ರಾಣಿಷು ಸಂಸ್ಥಿತಃ ।
ಸೂಕ್ಷ್ಮದೇಹೋ ಗೃಹಂ ತಸ್ಯ ವಿತಾನಂ ಸ್ಥೂಲ ಉಚ್ಯತೇ ॥
ಅನ್ನಂ ದಾನಾತ್ಮಕಂ ತಸ್ಯ ಸ್ಥೂಣಾ ತು ಭಗವಾನ್ ಹರಿಃ ।
ಧ್ಯಾಯತ್ಯೇವಂ ಹಿ ಯೋ ವಾಯುಂ ಶ್ರೋತ್ರಾದೀನ್ ಮನಸಾ ಸಹ ॥
ಬುದ್ಧಿಂ ಚ ಸಪ್ತಶತ್ರೂನ್ ಸ ವಿಷಯೇಷ್ವಭಿಧಾವತಃ ।
ಅಸುರಾನ್ ಸನ್ನಿರುದ್ಧ್ಯೈವ ವೇತ್ತಿ ನಾರಾಯಣಂ ಪರಮ್ ॥
*– ನಾರಾಯಣೀಯ [ಬೃ.ಉ.ಭಾ. 4-2-1]*

28. ದಕ್ಷಿಣಾಕ್ಷಿಸ್ಥಿತಂ ವಾಯುಂ ಸಪ್ತದೇವಾ ಉಪಾಸತೇ ।

- ಯಾರು ಉದ್ಗಾತೃ ವಾಯು ಪ್ರಾಣ –ಇವರಲ್ಲಿ ಇರುವ ಪ್ರದ್ಯುಮ್ನರೂಪ ಪರಮಾತ್ಮ ಮುಕ್ತಿಪ್ರದನೆಂದು ಉಪಾಸನೆ ನಡೆಸುವರೋ ಅವರು ಮುಕ್ತಿ ಹೊಂದಿ ಸುಖ ಪೂರ್ಣನಾದ ವಿಷ್ಣುವನ್ನು ನೋಡುತ್ತ ಅಧಿಕ ಸುಖ ಪಡೆಯುವರು.29
- ಪ್ರಾಣ, ಅಪಾನ, ವ್ಯಾನ –ಎಂಬ ರೂಪಗಳ ಮುಖ್ಯವಾಯುವಿನಲ್ಲಿರುವ ಈ ಮೂರು ಪದಗಳಿಂದ ಪ್ರತಿಪಾದ್ಯವಾದ ಸಂಕರ್ಷಣರೂಪವೇ ಗಾಯತ್ರಿಯ ಮೂರನೆಯ ಪಾದದಿಂದ ಪ್ರತಿಪಾದ್ಯ.30
- ಶೇಷನಿಗಿಂತ ವಾಯುದೇವ ಬಲಶಾಲಿಯಾಗಿರುವುದರಿಂದ ಶೇಷನು ವಾಯುದೇವ ನನ್ನು ಆಶ್ರಯಿಸಿರುವನು.31
- ಪುರುಷನಾಮಕ ಭಗವಂತನು ಮುಖ್ಯಪ್ರಾಣನಲ್ಲಿರುವುದರಿಂದ 'ಅಸೌ' ಎನಿಸುವನು. ತ್ಯಜಿಸಲು ಅನರ್ಹನಾಗಿರುವುದರಿಂದ 'ಅಹಮ್' ಎಂದೂ, ಪ್ರಾಣರೂಪನೂ ತಿಳಿ ಯಲು ಯೋಗ್ಯನೂ ಆಗಿರುವುದರಿಂದ 'ಅಸ್ಮಿ' ಎಂದೂ ಕರೆಯಲ್ಪಡುವನು.32
- ಭುವಃ ಎನ್ನುವ ವ್ಯಾಹೃತಿಯಿಂದ ಪ್ರತಿಪಾದ್ಯನಾಗಿರುವ ಪ್ರದ್ಯುಮ್ನರೂಪಿ ಪರ ಮಾತ್ಮನು ವಾಯುದೇವನಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವನು.33
- 'ಮಹಃ' ಎಂಬ ವ್ಯಾಹೃತಿ ಪ್ರತಿಪಾದ್ಯ ವಾಸುದೇವನು ವಾಯುದೇವನಿಗೆ ವಿಶೇಷ ವಾಗಿ ಆನಂದಪ್ರದನಾಗಿರುವನು.34

---

ಅಕ್ಷೀಣಜ್ಞಾನಮಹಸಃ ಸದಾಶಿವಪುರಸ್ಸರಾಃ ॥
ಉಪಾಸ್ಯಮಾನ್ಯಂ ತೈರ್ದೇವೈಃ ಮೋಕ್ಷಾರ್ಥಂ ವಾಯುಮೀಶ್ವರಮ್ ।
ಸ್ಥೂಣಯಾ ವಿಷ್ಣುನಾ ಸಾರ್ಧಂ ಯೋ ವಿದ್ಯಾತ್ ಸೋಽನ್ನಮಶ್ನುತೇ ।
ಅಕ್ಷೀಣಮೇವ ಮುಕ್ತಃ ಸನ್ ಸರ್ವದುಃಖವಿವರ್ಜಿತಃ ॥
*– ಪರಮಶ್ರುತಿ [ಬೃ.ಉ.ಭಾ. 4-2-2]*

29. .......ತಥೋದ್ಗಾತೃವಾಯುಪ್ರಾಣೇಷು ಯಃ ಸ್ಮರೇತ್ ।
ಪೂರ್ಣಚಂದ್ರಂ ಸದಾ ಪಶ್ಯೇದಧಿಕಾಹ್ಲಾದಸಂಯುತಃ ॥
*– ಪರಮಶ್ರುತಿ [ಬೃ.ಉ.ಭಾ. 5-1-6]*

30. .....ತೃತೀಯೇನ ಸಮೀರಗಃ । *– [ಬೃ.ಉ.ಭಾ. 7-19-3]*

31. ಶೇಷಃ ಪ್ರತಿಷ್ಠಿತೋ ವಾಯೌ ಸ ಹ್ಯಸ್ಮಾದ್ ಬಲವತ್ತರಃ ।
.......ವಾಯುಃ ಸಮಾಶ್ರಿತೋ ದೇವೀಂ ಮುಖ್ಯಾಂ ಗಾಯತ್ರಿನಾಮಿಕಾಮ್ ॥
*– [ಬೃ.ಉ.ಭಾ. 7-19-5]*

32. ಪ್ರಾಣೇ ಸ್ಥಿತೋ ಯಃ ಪುರುಷಃ ಸೋಽಸೌ ಅಹಮಿತಿ ಸ್ಮೃತಃ ।
ಅಹೇಯತ್ವಾದ್ ಅಸುತ್ವಾಚ್ಚ ಮೇಯತ್ವಾಚ್ಚಾಸ್ಮಿನಾಮಕಃ ॥ *– [ಬೃ.ಉ.ಭಾ. 7-20-3]*

33. ಪ್ರದ್ಯುಮ್ನೋ ಭಗವಾನ್ ವಾಯೌ ಭುವ ಇತ್ಯೇವ ಕೀರ್ತಿತಃ ।
*– ಬ್ರಹ್ಮಸಾರ [ತೈ.ಉ.ಭಾ. 1-13]*

34. ವಾಯೋರ್ವಿಶೇಷರಮಕೋ...... । *– ಬ್ರಹ್ಮಸಾರ [ತೈ.ಉ.ಭಾ. 1-14]*

- ಆನಂದಮಯನಾಮಕನ ಪುಚ್ಛ ಎನಿಸುವ ಪಾದವು ವಾಯುದೇವನಲ್ಲಿ ಯಾವಾಗಲೂ ನೆಲೆಗೊಂಡಿದೆ.35

- ಸಾತ್ಯತ್, ಅನಿರುಕ್ತ, ವಿಜ್ಞಾನ, ನಿಲಯನ ಹಾಗೂ ಸತ್ಯ –ಈ ಶಬ್ದಗಳಿಂದ ಮುಖ್ಯ ವಾಗಿ ಭಗವಂತನು ವಾಚ್ಯನಾಗಿ ಅವನ ಸಂಬಂಧದಿಂದಾಗಿ ಶ್ರೀದೇವಿಯಂತೆ ಮುಖ್ಯ ಪ್ರಾಣನೂ ವಾಚ್ಯನಾಗಿರುವನು. ಲಕ್ಷ್ಮೀದೇವಿ ಹಾಗೂ ಮುಖ್ಯಪ್ರಾಣನಿಗಿಂತ ಬೇರೆ ಜಗತ್ತಿನಲ್ಲಿ ಖೇದ, ಸುವಾಚ್ಯತ್ವ, ದುರ್ಬಲತೆ, ಅಜ್ಞಾನ ಹಾಗೂ ಅಸಾಧುತ್ವ –ಇವುಗಳನ್ನು ಮಾಡಿ, ಆಯಾ ಹೆಸರನ್ನು ಶ್ರೀಹರಿ ಪಡೆದಿರುವನು.36

- ಮುಖ್ಯಪ್ರಾಣನಲ್ಲಿ ಭಗವಂತನು ಬಲಪ್ರದನಾಗಿ ಬಲನಾಮಕನಾಗಿ ಯಾವಾಗಲೂ ಇರುವನು.37

- ಪವಿತ್ರ ಹಾಗೂ ಪ್ರಕಾಶಕನಾಗಿರುವುದರಿಂದ 'ಶುಚಿ' ಎನಿಸಿರುವ ವಾಯುವಿನಲ್ಲಿ ಭಗವಂತನು ವಿಶೇಷವಾಗಿ ಸನ್ನಿಹಿತನಾಗಿರುವುದರಿಂದ 'ಶುಚಿಷತ್' ಎನಿಸಿರುವನು.38

- ವಾಗಭಿಮಾನಿನಿ ಉಮೆ ರುದ್ರನಿಂದ ಹುಟ್ಟಿರುವಳು. ಮನೋಭಿಮಾನಿರುದ್ರ ಪ್ರಾಣ ನಾಮಕ ಮುಖ್ಯವಾಯುವಿನಿಂದ ಪ್ರಾಣನಾದರೂ ತನ್ನದೇ ಆದ ಅಪಾನರೂಪದಿಂದ ಅಭಿವ್ಯಕ್ತನಾಗುವನು. ಅಪಾನ ತನ್ನದೇ ಆದ ವ್ಯಾನರೂಪದಿಂದ ಅಭಿವ್ಯಕ್ತನಾಗುವನು. ಮತ್ತೊಂದು ಪಕ್ಷದ ಪ್ರಕಾರ– ಉದಾನನು ವ್ಯಾನರೂಪದಿಂದ ಅಭಿವ್ಯಕ್ತನಾಗುವನು. ಸಮಾನನಿಂದ ಅಭಿವ್ಯಕ್ತಿ. ಸಮಾನನ ಅಭಿವ್ಯಕ್ತಿಯ ಬಳಿಕ ವ್ಯಾನನಿಂದಲೇ ಅಪಾನ. ಅಪಾನನಿಂದ ಪ್ರಾಣ. ಮೊದಲನೆಯ ಪಕ್ಷದ ಪ್ರಕಾರ– ಸಮಾನ ಮತ್ತು ಉದಾನರ ಅಭಿವ್ಯಕ್ತಿ ಹೀಗಿದೆ –ಮೊದಲು ವ್ಯಾನ, ಅವನಿಂದ ಅಪಾನ, ಅವನಿಂದ ಪ್ರಾಣ –ಒಟ್ಟು ಸೇರಿದ ಈ ಮೂವರಿಂದ ಉದಾನ ಮತ್ತು ಸಮಾನರ ಅಭಿವ್ಯಕ್ತಿ.

---

35. ಪುಚ್ಛಂ ಪ್ರಧಾನವಾಯೌ ಚ ಬ್ರಹ್ಮಾಖ್ಯೇ ಸಂಸ್ಥಿತಂ ಸದಾ ।
*– ಯಜುಃಸಂಹಿತಾ [ತೈ.ಉ.ಭಾ. 2-9]*

36. ತ್ಯಚ್ಚಾನಿರುಕ್ತಂ ವಿಜ್ಞಾನಂ ತಥಾ ನಿಲಯನಂ ಮಹಾನ್ ।
ಸತ್ಯಂ ಪ್ರಾಣಸ್ತಥಾ ಶ್ರೀಶ್ಚ ಸನ್ನಿರುಕ್ತಂ ತಥಾಽನೃತಮ್ ॥
ಅವಿಜ್ಞಾನಂ ಚಾನಿಲಯನಂ ಪ್ರಕೃತಿಪ್ರಾಣಯೋಃ ಪರಮ್ ।
ತದ್ಗವಿಷ್ಣೋಸ್ತು ಸಂಬಂಧಾತ್ ಸ್ವತಸ್ತನ್ನಾಮಕೋ ಹರಿಃ ॥
*– ಯಜುಃಸಂಹಿತಾ [ತೈ.ಉ.ಭಾ. 2-4]*

37. ವಾಯೌ ತು ಬಲನಾಮಾ ಚ ಬಲದತ್ವಾತ್ ಸದೈವ ಹಿ ।
*– ಯಜುಃಸಂಹಿತಾ [ತೈ.ಉ.ಭಾ. 3-11]*

38. .........ವಾಯುಸ್ಥಃ ಶುಚಿಷನ್ಮತಃ । *– ಮಹಾಕೌರ್ಮ [ಕಾ.ಉ.ಭಾ. 2-2-2]*

* ತಥಾಪಿ ಶೋಚಸ್ಯಾತ್ಮಾನಂ... ।
[ಭಾಗ. 1-5-4] ಎಂಬಲ್ಲಿ ಶುಚಿಧಾತುಪ್ರಕಾಶಾರ್ಥದಲ್ಲಿ ಪ್ರಯೋಗಿಸಲಾಗಿದೆ.

ಮತ್ತೊಂದು ಪ್ರಕಾರ– ಪ್ರಾಣಾಪಾನವ್ಯಾನರು– ಮೂಲರೂಪ ವಾಯುವಿನಿಂದ ಅಭಿವ್ಯಕ್ತರಾಗುವರು. ಈ ಮೂವರಿಂದ ಉದಾನಸಮಾನರ ಅಭಿವ್ಯಕ್ತಿ. ಇನ್ನೊಂದು ಪ್ರಕಾರ– ಪ್ರಾಣ ಅಪಾನ ವ್ಯಾನ ಉದಾನ ಸಮಾನ –ಈ ಐದು ರೂಪಗಳೂ ಮುಖ್ಯ ಪ್ರಾಣನ ಮೂಲರೂಪದಿಂದ ಅಭಿವ್ಯಕ್ತವಾಗುವವು. ಆ ಪ್ರಾಣನಾದರೂ ಹೃದಯ ದಲ್ಲಿರುವ ಆತ್ಮನಾಮಕ ಭಗವಂತನಿಂದ ಅಭಿವ್ಯಕ್ತನಾಗುವನು. ಆ ಆತ್ಮನಾಮಕ ಭಗವಂತನಾದರೂ ವಿಶ್ವರೂಪಿ ಪರಬ್ರಹ್ಮನಿಂದ ಅಭಿವ್ಯಕ್ತನಾಗುವನು.

ಈ ರೀತಿಯಾಗಿ ಇವರಿಗೆ ಪರಬ್ರಹ್ಮನ ವರೆಗೆ ವಿಲಯ ಹಾಗೂ ಅಭಿವ್ಯಕ್ತಿಯ ಚಿಂತನವೇ ಬ್ರಹ್ಮಯಜ್ಞ ಎನಿಸುವುದು. ಇದು ಸಂಸಾರದಿಂದ ಬಿಡುಗಡೆಗೆ ಪ್ರಯೋಜಕ ವಾಗಬಲ್ಲದು.39

- ಭಕ್ತಿಯಿಂದ ಮುಖ್ಯಪ್ರಾಣನನ್ನು ಒಲಿಸಿಕೊಂಡು ಪ್ರಾಣಜಯ ಸಂಪಾದಿಸಿದವನೆಂದು ಎನಿಸಬಹುದಷ್ಟೇ.40

- ಇಡಾನಾಡಿಯಲ್ಲಿ ಪ್ರಾಣ, ಪಿಂಗಲಾದಲ್ಲಿ ಅಪಾನ, ಎಲ್ಲ ಸಂಧಿಗಳಲ್ಲಿ ವ್ಯಾನ, ಬ್ರಹ್ಮ ನಾಡಿನಲ್ಲಿ ಉದಾನ, ಸಮಾನ ಎಲ್ಲೆಡೆ ಸಂಚರಿಸುವನು.41

---

39. ಉಮಾ ವಾಗಾತ್ಮಿಕಾ ರುದ್ರಾಜ್ಜಾತಾ ಸಾ ಮನ ಆತ್ಮನಃ ।
ಪ್ರಾಣಾಹ್ವಯಾ ತೌ ಸ ವಾಯೋಶ್ಚ ಸೋಽಪಾನಾದಾತ್ಮರೂಪತಃ ॥
ಸ್ವರೂಪಾದೇವ ಸ ವ್ಯಾನಾದುದಾನೋ ವ್ಯಾನತಸ್ತಥಾ ।
ತಸ್ಮಾತ್ ಸಮಾನೋ ವ್ಯಾನಾಚ್ಚಾಪ್ಯಪಾನಃ ಪ್ರಾಣ ಏವ ಚ ॥
ಅಪಾನಾತ್ ತಿಸೃಭಿಶ್ಚಾಪಿ ಸಮಾನೋ ದಾನಯೋರ್ಜನಿಃ ।
ತ್ರಯಾಣಾಮಥ ಪಂಚಾನಾಮನಾದ್ ವಾ ಪ್ರಾಣತೋ ಭವಃ ॥
ಏಕಸ್ಯೈವ ಸ್ವರೂಪಾಣಿ ಪ್ರಾಣಸ್ಯೈತಾನಿ ಪಂಚ ಚ ।
ಆತ್ಮಾ ಬ್ರಹ್ಮಣೋ ಜಾತೋ ವಿಶ್ವರೂಪಾಜ್ಜನಾರ್ದನಾತ್ ॥
ಏತೇಷಾಂ ಬ್ರಹ್ಮಪರ್ಯಂತಂ ವಿಲಯೋತ್ಪತ್ತಿಚಿಂತನಮ್ ।
ಬ್ರಹ್ಮಯಜ್ಞ ಇತಿ ಪ್ರೋಕ್ತಃ ಸರ್ವಸಂಸಾರಮೋಚಕಃ ॥
*– ನಾರಾಯಣಾಧ್ಯಾತ್ಮ [ಭಾಗ.ತಾ.ನಿ. 1-15-11]*

40. ಭಕ್ತ್ಯಾ ಪ್ರಾಣಂ ವಶಂ ನೀತ್ವಾ ಜಿತಪ್ರಾಣೋ ಭವತ್ಯುತ ।
*– ಷಾಡ್ಗುಣ್ಯ [ಭಾಗ.ತಾ.ನಿ. 2-2-16]*

41. ಪ್ರಾಣಾಪಾನಾವಿಡಾಯಾಂ ಚ ಪಿಂಗಲಾಯಾಂ ಚ ವರ್ತತಃ ।
ವ್ಯಾನಃ ಸಂಧಿಷು ಸರ್ವತ್ರ ಉದಾನೋ ಬ್ರಹ್ಮನಾಡಿಗಃ ॥
ಸರ್ವತ್ರೈವ ಸಮಾನಸ್ತು ಸಮಂ ಚರತಿ ಸರ್ವಗಃ ॥
*– ಭಾರತೇ [ಭಾಗ.ತಾ.ನಿ. 2-2-21]*

- ಸತೀದೇವಿ ತನ್ನ ದೇಹತ್ಯಾಗದ ಸಂದರ್ಭದಲ್ಲಿ ರುದ್ರ, ಚತುರ್ಮುಖ, ವಾಯು, ವಿಷ್ಣು, ಶ್ರೀದೇವಿ, ಭಾರತಿ –ಇವರನ್ನು ಹೊರತುಪಡಿಸಿ ಬೇರೆ ಯಾರನ್ನೂ ಚಿಂತಿಸದೆ, ಇವರನ್ನು ಚಿಂತಿಸುತ್ತ ತನ್ನ ದೇಹವನ್ನು ತ್ಯಜಿಸಿದಳು.42

- ವಿಷ್ಣು ಬ್ರಹ್ಮಾದಿಗಳನ್ನು ಹೇಗೋ ಹಾಗೆಯೇ ಮುಖ್ಯಪ್ರಾಣನನ್ನೂ ಹೊರತು ಪಡಿಸಿಯೇ ಅವರ ಬಳಿಕ ಧ್ಯೇಯನೆನಿಸಿರುವವನು ರುದ್ರದೇವ. ಶ್ರೀಹರಿಯ ಪಾರ್ಷದನಾಗಿಯೇ ಧ್ಯೇಯನೆನಿಸಿರುವ ರುದ್ರ ತಾನು ಹರಿ ಮುಂತಾದವರನ್ನು ಹೇಗೋ ಹಾಗೆ ಮುಖ್ಯಪ್ರಾಣನನ್ನೂ ಅವನ ಮಡದಿಯಾದ ಭಾರತೀದೇವಿಯನ್ನೂ ಧ್ಯಾನಿಸುತ್ತಿರುವವನಾಗಿಯೂ ಧ್ಯೇಯನೆನಿಸಿರುವನು.43

- ಯಜ್ಞಾಭಿಮಾನಿ ದೇವತೆಗಳೇ ಮೊದಲಾದವರು ಇಂದ್ರಿಯಾಭಿಮಾನಿದೇವತೆಗಳೇ ಮೊದಲಾದವರಿಗೆ ಅಧೀನರೆಂದು ಹೇಗೆ ಸ್ಮರಿಸಬೇಕೋ ಹಾಗೆ ಮೂಲಾಧಾರಸ್ಥ ನಾದರೂಪಳಾದ ಸರಸ್ವತಿಯನ್ನು ಮುಖ್ಯಪ್ರಾಣನ ಅಧೀನಳೆಂದೂ, ಮುಖ್ಯಪ್ರಾಣನನ್ನು ಜನಾರ್ದನನ ಅಧೀನನೆಂದೂ ಅಥವಾ ಮುಖ್ಯಪ್ರಾಣನನ್ನು ಚಿತ್‌ಪ್ರಕೃತಿಯ ಅಧೀನನ್ನಾಗಿ, ಚಿತ್‌ಪ್ರಕೃತಿಯನ್ನು ಪುರುಷೋತ್ತಮನ ಅಧೀನಳನ್ನಾಗಿ ಅನುಸಂಧಾನ ಮಾಡಬೇಕು.44

- ಋಗ್ವೇದದ ಪವಮಾನಮಂಡಲವು ವಾಯುದೇವನ ಗುಣಮಹಿಮೆಗಳನ್ನು ಪ್ರತಿಪಾದಿಸುತ್ತಿದ್ದು ಶ್ರೀವಿಷ್ಣುವಿಗೆ ತುಂಬ ಸಂತೋಷಪ್ರದವಾಗಿದೆ. ಆದುದರಿಂದ ಜ್ಞಾನಿಗಳು ಪವಮಾನಮಂಡಲವನ್ನು 'ವಿಷ್ಣುನೀರಾಜನ' –ಶ್ರೀವಿಷ್ಣುವಿಗೆ ಚೆನ್ನಾಗಿ ತೃಪ್ತಿಪ್ರದವಾದುದೆಂದೇ ಕರೆಯುವರು.45

---

42. ರುದ್ರಂ ಚ ಬ್ರಹ್ಮವಾಯೂ ಚ ವಿಷ್ಣುಂ ಚೈವ ಶ್ರಿಯಂ ಗಿರಮ್ ।
ಉಮಾ ಚಿಂತಯತೀ ದೇಹಂ ತತ್ಯಾಜಾನ್ಯಂ ನ ಚಾ ಸ್ಮರತ್ ॥
– *ತತ್ವನಿರ್ಣಯೇ [ಭಾಗ.ತಾ.ನಿ. 4-4-27]*

43. ವಿಷ್ಣುಬ್ರಹ್ಮಪ್ರಾಣವೀಂದ್ರಾನ್ ....... ಋತೇ ಹರಃ ।
ಧ್ಯೇಯೋ ಹರೇಃ ಪಾರ್ಷದೋ ಧ್ಯಾಯನ್ ಹರಿಚತುರ್ಮುಖೌ ಪ್ರಾಣಮೇಷಾಂ ತಥಾ ದಾರಾನ್ ನ ಸ್ವತಂತ್ರತಯಾ ಕ್ವಚಿತ್ ॥
– *ತಂತ್ರಮಾಲಾ [ಭಾಗ.ತಾ.ನಿ. 6-17-13]*

44. ......ಮೂಲಸ್ಥಾ ನಾದರೂಪಾಯಾ ತಾಂ ವಾಯೌ ತಂ ಜನಾರ್ದನೇ ।
ಪ್ರಕೃತಾವಥವಾ ಪ್ರಾಣಂ ತಾಮೇವ ಪುರುಷೋತ್ತಮೇ ॥
– *ಬ್ರಹ್ಮತರ್ಕ [ಭಾಗ.ತಾ.ನಿ. 7-15-51]*

45. ನಿತರಾಂ ರಂಜಯೇದ್ ಯಸ್ಮಾ ಪಾವಮಾನಂ ತು ಮಂಡಲಮ್ ।
ವಿಷ್ಣುನೀರಾಜನಂ ತಸ್ಮಾದ್ ವಿದ್ವದ್ಭಿಃ ಸಮುದಾಹೃತಮ್ ॥
– *[ಭಾಗ.ತಾ.ನಿ. 11-27-30]*

ದೇವನಾದ ನಾರಾಯಣನನ್ನು, ದೇವಿಯಾದ ಲಕ್ಷ್ಮಿಯನ್ನು ಹೊರತುಪಡಿಸಿ, ಉಳಿದೆಲ್ಲ ದಕ್ಕೂ ಕಾರಣನಾಗಿದ್ದು ಸರ್ವ ಎನಿಸುವ ಮುಖ್ಯಪ್ರಾಣನನ್ನು ಯಾರು ಕಡೆಗಣಿಸು ವನೋ ಅವನು ಪ್ರಾಣಾಯಾಮ ಮಾಡಿ ಮುಂದಿನ ಈ ಮಂತ್ರವನ್ನು ಪುನಃ ಪುನಃ ಜಪಿಸಬೇಕು. ದೇವತೆಗಳಿಗೆ ಸ್ವಾಮಿ, ಭುವನಕ್ಕೆ ಗರ್ಭದಂತೆ ಒಳಗಿರುವವನು, ತನ್ನಿಚ್ಛೆಗೆ ಅನುಗುಣವಾಗಿ ಸಂಚರಿಸುತ್ತಿರುವವನು. ಅಶರೀರವಾಣಿ ರೂಪದಲ್ಲಿರುವ ಅವನ ರಥ ಧ್ವನಿಗಳು ಕೇಳಿಸುವವು. ಆದರೆ ಅವನ ರೂಪ ಕಾಣಿಸದು. ಅಂತಹ ವಾಯುದೇವನಿಗೆ ಹವಿಸ್ಸನ್ನು ಅರ್ಪಿಸುವೆವು. ನಮ್ಮಡೆಗೆ ಸಾಗಿ ಬರಲು ಅವನಿಗೆ ಆಹ್ವಾನ ನೀಡುವೆವು. ವಾಯುದೇವನನ್ನು ಅವಜ್ಞೆ ಮಾಡಿದವನು ಯಾಕೆ ಈ ಮಂತ್ರವನ್ನು ಆವರ್ತನೆ ಮಾಡಬೇಕೆಂದರೆ-

ಆ ಮುಖ್ಯಪ್ರಾಣನೇ ಎಲ್ಲ ಜೀವರಲ್ಲಿ ಶ್ರೇಷ್ಠನಾದವನು. ದೇವನಾದ ನಾರಾಯಣ ನನ್ನೂ, ದೇವಿಯಾದ ಲಕ್ಷ್ಮಿಯನ್ನೂ ಬಿಟ್ಟರೆ ಅವನಿಗಿಂತ ಎತ್ತರದಲ್ಲಿ ಬೇರೆ ಯಾರೂ ಇಲ್ಲ.46

★

46. 'ಯಃ ಸರ್ವಮವಜಾನೀಯಾದೃತೇ ದೇವಂ ನಾರಾಯಣಂ ದೇವೀಂ ಚ ಪರಮಾಂ ಶ್ರಿಯಂ ಸ ಪ್ರಾಣಾನವರುದ್ಧ್ಯೇಮಂ ಮಂತ್ರಮಾವರ್ತಯೀತ - ಆತ್ಮಾ ದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ । ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮೇತೀ ಸ ಹ್ಯೇಷಾಂ ಭೂತಾನಾಂ ವರಿಷ್ಠೋ ನ ಹ್ಯಸ್ಮಾತ್ ಕಶ್ಚನೋಪರಿ ವಿನಾ ದೇವಂ ನಾರಾಯಣಂ ದೇವೀಂ ಚ ಪರಮಾಂ ಶ್ರಿಯಮ್ ।' -ಇತಿ ನ್ಯಾಯವಿವರಣ (ಬ್ರ.ಸೂ.3-3-1)

★ ಸರ್ವಂ-ಪ್ರಾಣಸಹಿತಮ್ ಸಃ - ವಾತಾವಜ್ಞಾಕರ್ತಾ ಪ್ರಾಣಾನವರುದ್ಧ್ಯ - ಪ್ರಾಣಾಯಾಮಂ ಕೃತ್ವಾ ಮಂತ್ರಮಾವರ್ತಯೀತ ವಾತಾವಜ್ಞಾಪ್ರತಿಕ್ರಿಯಾತ್ವೇನ । ದೇವಾನಾಂ ಆತ್ಮಾ-ಸ್ವಾಮೀ ಭುವನಸ್ಯ ಗರ್ಭಃ - ಗರ್ಭ ಇವಾಂತರ್ಗತಃ, ಯಥಾವಶಂ- ಯಥೇಷ್ಟಮ್ ಇಯದೇವ ಶೃಣ್ವಿರೇ -ಶ್ರೂಯಂತೇ ರೂಪಂ -ಪ್ರತಿಮಾ, 'ನ ದೃಶ್ಯತೇ' ಇತಿ ಶೇಷಃ । ಯಸ್ಯಾಸ್ಯ ರಥಘೋಷಾ ಏವ, ಅಶರೀರವಾಗ್ರೂಪಾಃ ಶ್ರೂಯಂತೇ ನ ರೂಪಂ ದೃಶ್ಯತೇ ತಸ್ಮಾ ಇತ್ಯರ್ಥಃ । ಕುತೋ ವಾತಾವಜ್ಞಾಪ್ರತಿಕ್ರಿಯಾತ್ವೇನೈತ-ನ್ಮಂತ್ರಜಪಕರಣಮಿತ್ಯತ ಉಕ್ತಮ್ - ಸ ಹ್ಯೇಷಾಮಿತಿ । ವರಿಷ್ಠತ್ವೇ ಹೇತುಃ - ನ ಹ್ಯೇತಸ್ಮಾದಿತಿ । ಕಂಚನೇತಿ ಅಸ್ಯಾಪವಾದಃ- ವಿನಾ ದೇವಮಿತಿ -ಭಾವಬೋಧಃ ।

# • ನಾಮಪ್ರಪಂಚ •

## 'ವಾಯುದೇವನಲ್ಲಿ ಸರ್ವನಾಮವಾಚ್ಯತ್ವ'

ಸರ್ವನಾಮವಾಚ್ಯತ್ವ, ಸರ್ವಶಬ್ದವಾಚ್ಯತ್ವ ಭಗವಂತನ ಅಸಾಧಾರಣ ಧರ್ಮಗಳಲ್ಲಿ ಒಂದು. ಯಾಕೆಂದರೆ ಪ್ರತಿಯೊಂದು ನಾಮದ, ಪ್ರತಿಯೊಂದು ಶಬ್ದದ 'ಪ್ರವೃತ್ತಿನಿಮಿತ್ತ' ವಾದ ಅಂದರೆ ಆ ನಾಮ, ಆ ಶಬ್ದ, ಆಯಾ ವ್ಯಕ್ತಿಯನ್ನು-ವಸ್ತುವನ್ನು ಹೇಳಲು ಪ್ರಯೋಜಕವಾದ ಧರ್ಮವನ್ನು ಸ್ವತಂತ್ರವಾಗಿ ಹಾಗೂ ಪೂರ್ಣಪ್ರಮಾಣದಲ್ಲಿ ಹೊಂದಿರುವವನು ಅವನು ಮಾತ್ರ. ಹಾಗೆಯೇ ವಿದ್ವದ್ರೂಢಿಯಿಂದ ಎಲ್ಲ ಶಬ್ದಗಳ ಪ್ರಯೋಗ ಅವನಲ್ಲಷ್ಟೇ ಇದೆ. ಉಳಿದ ಲಕ್ಷ್ಮಿಯೇ ಮುಂತಾದ ಯಾರಲ್ಲೂ ಅವರಿಗೇ ಸಂಬಂಧಿಸುವ ಲಕ್ಷ್ಮೀ ಮುಂತಾದ ನಾಮಗಳ ಪ್ರವೃತ್ತಿನಿಮಿತ್ತ ಧರ್ಮಗಳೂ ಪೂರ್ಣಪ್ರಮಾಣದಲ್ಲಿ ಇರಲಾರವು. ಉಳಿದ ವ್ಯಕ್ತಿಗಳಿಗಿಂತ ಅಧಿಕ ಪ್ರಮಾಣದಲ್ಲಿ ಇರುವ ಆ ಪ್ರವೃತ್ತಿನಿಮಿತ್ತಧರ್ಮಗಳ ಬಗ್ಗೆ ಸ್ವಾತಂತ್ರ್ಯವೂ ಇರಲಾರದು. ಎಲ್ಲ ಶಬ್ದಗಳ ಪ್ರಯೋಗವೂ ಅಲ್ಲಿ ಇರಲಾರದು. ಆದುದರಿಂದ 'ಪರಮಮುಖ್ಯ ವೃತ್ತಿಯಿಂದ ಸಕಲ ಶಬ್ದವಾಚ್ಯ ಭಗವಂತನೆಂದು ಶಾಸ್ತ್ರದಲ್ಲಿ ಸಿದ್ಧಾಂತಿಸಲಾಗಿದೆ.[1]

## ಏಕೈವ ವ್ಯಾಹೃತಿಃ ಪ್ರಾಣ ಏವ

ಭಗವಂತನ ಈ ಸರ್ವನಾಮವಾಚ್ಯತ್ವವನ್ನು, ಸರ್ವಶಬ್ದವಾಚ್ಯತ್ವವನ್ನು ಸ್ಪಷ್ಟವಾಗಿ ಐತರೇಯೋಪನಿಷತ್ತು [2-1-2-12] ಹೀಗೆ ಉದ್ಘೋಷಿಸುತ್ತಿದೆ–

'**ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ**' ಸಕಲ ಋಗ್ವೇದದ ಮಂತ್ರಗಳು, ಇತರ ಎಲ್ಲ ವೇದಗಳು, ಸಮುದ್ರದ ಮೊರೆ ಮುಖಿಕೆಯೇ ಮುಂತಾದ ಎಲ್ಲ ಧ್ವನ್ಯಾತ್ಮಕ ಶಬ್ದಗಳೂ ಕೂಡ ನಿರ್ದೋಷತ್ವ ಪೂರ್ವಕವಾದ, ಗುಣಪೂರ್ಣತ್ವರೂಪವಾದ ಒಂದೇ ರೀತಿಯಿಂದಲೇ ಪ್ರಾಣ ಎನಿಸುವ ಶ್ರೀಮನ್ನಾರಾಯಣನನ್ನು ಗೋಚರಿಸುವ ನಾಮ ಎನಿಸಿವೆ. ಋಗ್ವೇದದ ಮಂತ್ರಗಳಂತೂ ಇಂದ್ರ ಮುಂತಾದ ನಾಮಗಳನ್ನು ಸಾಮಾನ್ಯರಿಗೂ ಭಗವತ್ಪರವಾಗಿ ತಿಳಿಯುವಂತೆ ಒಳಗೊಂಡಿದ್ದು, ಅವುಗಳನ್ನು ವಿಶೇಷವಾಗಿ ಪ್ರಾಣ ಎನಿಸುವ ನಾರಾಯಣನ ವಿಷಯದಲ್ಲಿ ಇರುವವುಗಳೆಂದು ತಿಳಿದುಕೊಳ್ಳಬೇಕು.

---

1. ಪ್ರವೃತ್ತಿಹೇತೋರ್ಬಾಹುಲ್ಯಂ ಜ್ಞೇಯಂ ಪರಮಮುಖ್ಯತಾ ।
ತತ್ರ ಪ್ರಯೋಗಬಾಹುಲ್ಯಂ ಯದಿ ತತ್ಪರತಾ ಕಿಮು ।
ಉಭಯಂ ದೃಶ್ಯತೇ ವಿಷ್ಣೌ ಶಬ್ದಾನಾಮಪಿ ಸರ್ವಶಃ । – *[ಅನುವ್ಯಾಖ್ಯಾನ 1-4-33]*

* *ಸ್ವಾತಂತ್ರ್ಯ ತದ್ಗತತ್ವಂ ಚ ಶಬ್ದವೃತ್ತೇರ್ಹಿ ಕಾರಣಮ್ ।
ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್..... – *[ಅನುವ್ಯಾಖ್ಯಾನ 1-4-2]*

ಈ ಮಾತು ಮುಖ್ಯವಾಗಿ ನಾರಾಯಣನಿಗೆ ಸರ್ವಶಬ್ದವಾಚ್ಯತ್ವವನ್ನು ಸಾರಲು ಹೊರಟಿರುವಂತಹದ್ದಾದರೂ ಭಗವಂತನಲ್ಲಿ ವಿಷ್ಣು, ನಾರಾಯಣಾದಿ ನಾಮಗಳಷ್ಟು ಪ್ರಸಿದ್ಧವಲ್ಲದ 'ಪ್ರಾಣ' ಎಂಬ ನಾಮದಿಂದ ಭಗವಂತನನ್ನು ಪರಾಮರ್ಶಿಸುತ್ತಿದೆ ಎಂದರೆ 'ಪ್ರಾಣ' ನಾಮದಿಂದ ಮುಖ್ಯವಾಗಿ ವಾಚ್ಯನಾಗಿರುವ 'ಪ್ರಾಣಪ್ರಾಣ' ಎನಿಸಿರುವ ಭಗವಂತನ ಜೊತೆಗೆ ಪ್ರಾಣನಾಮದಿಂದ ಅಮುಖ್ಯವಾಗಿ ವಾಚ್ಯನಾಗಿರುವ 'ಮಧ್ಯಮ ಪ್ರಾಣ' ಎನಿಸಿರುವ ವಾಯುದೇವನಿಗೂ ಸರ್ವಶಬ್ದವಾಚ್ಯತ್ವವನ್ನು ಪ್ರತಿಪಾದಿಸುವ ಉದ್ದೇಶವುಳ್ಳದ್ದೆಂದು ಮಧ್ವಗುರುಗಳು ವ್ಯಾಖ್ಯಾನಿಸಿರುವರು.2

ಉಪನಿಷತ್ತಿನ ಈ ಘೋಷಣೆಯನ್ನು ಸ್ಪಷ್ಟಪಡಿಸುವುದಕ್ಕಾಗಿ ಶ್ರೀ ಮಧ್ವರು ಸಂವಾದವಾಗಿ ಉಲ್ಲೇಖಿಸಿರುವ 'ಬೃಹತ್ಸಂಹಿತೆ' ಭಗವಂತನ ಸರ್ವನಾಮವಾಚ್ಯತ್ವವನ್ನು ಸಮರ್ಥಿಸಿ, ಇದೇ ರೀತಿಯಾಗಿ ಮಾರುತನಲ್ಲೂ ಎಲ್ಲ ನಾಮಗಳೂ ವಾಚಕಗಳಾಗುವವು. ಆದರೆ ಭಗವಂತನನ್ನು ಹೇಗೆ ಪರಮುಖ್ಯವೃತ್ತಿಯಿಂದ ಪ್ರತಿಪಾದಿಸುತ್ತಿರುವವೋ ಅಷ್ಟು ಮುಖ್ಯವೃತ್ತಿಯಿಂದ ಅಲ್ಲ. ಉಳಿದ ರುದ್ರಾದಿಗಳಿಗಿಂತ ಅಧಿಕ ಮುಖ್ಯವಾಗಿ ಸರ್ವಶಬ್ದ ವಾಚ್ಯನಾಗಿರುವನಷ್ಟೇ. ಮುಖ್ಯವಾಗಿ ಸರ್ವನಾಮವುಳ್ಳವನೆಂದರೆ ಅದು ಶ್ರೀವಿಷ್ಣು ಮಾತ್ರ. ಬೇರೆ ಯಾರೂ ಇಲ್ಲ. ವಾಯುವಿನಲ್ಲಾದರೂ ಉಳಿದ ರುದ್ರಾದಿಗಳಿಗಿಂತ ಮುಖ್ಯವಾದ ವೃತ್ತಿಯಿಂದ ವಾಚ್ಯತ್ವವೇ.3 ಶ್ರೀ ಮಧ್ವರು ಅದೇ ಪ್ರಸಂಗದಲ್ಲಿ ಉದಾಹರಿಸಿರುವ 'ಬ್ರಹ್ಮಾಂಡ'ವು ಶ್ರೀಮನ್ನಾರಾಯಣನಿಗೆ ಹೇಗೆ ಹಾಗೆ ಲಕ್ಷ್ಮೀದೇವಿಗೂ ಹಾಗೂ ಪ್ರಾಣ ದೇವನಿಗೂ ಸರ್ವಶಬ್ದವಾಚ್ಯತ್ವ ಇದೆ ಎಂದು ತಿಳಿಸಿ, ಆದರೆ ಪರಮಾತ್ಮನಲ್ಲಿ ಇರುವ ಸರ್ವಶಬ್ದವಾಚ್ಯತ್ವದಲ್ಲೂ ಲಕ್ಷ್ಮಿ ಮತ್ತು ವಾಯುದೇವನಲ್ಲಿ ಇರುವ ಸರ್ವಶಬ್ದವಾಚ್ಯತ್ವ ದಲ್ಲೂ ತುಂಬ ತಾರತಮ್ಯ ಇದೆ ಎಂದೂ ಸಾರುತ್ತಿದೆ–

**'ವೇದಗಳಲ್ಲಿ ಇಬ್ಬರು ಆತ್ಮರು, ಇಬ್ಬರು ಪ್ರಾಣರು, ಇಬ್ಬರು ಚೇತನರು ಪ್ರತಿಪಾದ್ಯರಾಗಿರುವರು. ಅಜ್ಞಾನಕ್ಕೂ ಯಾವುದೇ ಬಗೆಯ ಸೋಲಿಗೂ ಒಳಗಾಗದ ಅವರು ನಾರಾಯಣ ಮತ್ತು ವಾಯುದೇವ. ಉಳಿದೆಲ್ಲ ಚೇತನರು, ಪ್ರಾಣರು, ಆತ್ಮರು ಅಜ್ಞಾನ ಮತ್ತು ಅಪಜಯದ ಸ್ಪರ್ಶಕ್ಕೆ ಒಳಗಿರುವವರಾದುದರಿಂದ ಅಧಮರೆನಿಸಿರು ವರು. ವಾಯುದೇವನಾದರೂ 'ಮಧ್ಯಮ' ಎನಿಸಿದರೆ ಶ್ರೀಹರಿಯೊಬ್ಬನೇ ಉತ್ತಮನು.**

---

2. ಪ್ರಾಣಶಬ್ದಶ್ಚ ಮುಖ್ಯತೋ ವಿಷ್ಣೌ ವರ್ತಮಾನೋऽಪಿ ವಾಯಾವಪಿ ವರ್ತತೇ ।
ಅತಃ ಸರ್ವವೇದಾದ್ಯಭಿಧೇಯತ್ವಂ ವಾಯೋರಪ್ಯಸ್ತಿ ।
'ಪ್ರಾಣಸ್ಯ ಪ್ರಾಣಃ' ಇತಿ ಶ್ರುತೇರುಭಯೋರಪಿ ಪ್ರಾಣಶಬ್ದ ಸಿದ್ಧ ಏವ ।
'ಅಯಂ ವಾವ ಶಿಶುರ್ಯೋऽಯಂ ಮಧ್ಯಮಃ ಪ್ರಾಣಃ' ಇತಿ ವಾಯೋರ್ವಿಶೇಷಣಾ ದುತ್ತಮಃ ಪ್ರಾಣೋ ವಿಷ್ಣುರಿತಿ ಚ ಸಿದ್ಧಮ್ । – *[ಐ.ಉ.ಭಾ.]*

3. .....ತಥೈವ ಸರ್ವನಾಮಾನಿ ಪ್ರವರ್ತಂತೇ ಚ ಮಾರುತೇ ।
ನ ತಾವನ್ಮುಖ್ಯವೃತ್ತ್ಯೈವ ಮುಖ್ಯತೋऽನ್ಯವ್ಯಪೇಕ್ಷಯಾ ।
ಮುಖ್ಯತಃ ಸರ್ವನಾಮಾ ತು ವಿಷ್ಣುರೇಕೋ ನ ಚಾಪರಃ ।
.....ಅನ್ಯವ್ಯಪೇಕ್ಷಯಾ ವಾಯೌ ಮುಖ್ಯವೃತ್ತಿರ್ವಿಧೀಯತೇ ।
– *ಬೃಹತ್ಸಂಹಿತಾ [ಐ.ಉ.ಭಾ.]*

ಹೀಗೆ ಶ್ರೀಹರಿಯ ಮತ್ತು ಪ್ರಾಣದೇವನ ಹಿರಿಮೆಯನ್ನು ಸಾರಿದ 'ಬ್ರಹ್ಮಾಂಡ' ಆದುದರಿಂದಲೇ ಶ್ರೀಹರಿವಾಯುಗಳಿಗಿಬ್ಬರಿಗೂ ಸರ್ವಶಬ್ದವಾಚ್ಯತ್ವವನ್ನು ಪ್ರತಿಪಾದಿಸುತ್ತಿದೆ-

**ಆದುದರಿಂದ ಈ ಇಬ್ಬರೇ ಸರ್ವಶಬ್ದವಾಚ್ಯರು. ಉಳಿದವರೆಲ್ಲ 'ಮಿತ'ಗಳಾದ ಅಂದರೆ ಕೆಲವು ಶಬ್ದಗಳಿಂದ ವಾಚ್ಯರಾಗಬಲ್ಲರು. ಹೊರತು ಅಮಿತನಾಮವಾಚ್ಯತ್ವ ಅವರಲ್ಲಿ ಇಲ್ಲ. ಶ್ರೀದೇವಿಯೂ ಅಖಿಲ ಶಬ್ದವಾಚ್ಯಳು. ಆದರೆ ಅವಮುಖ್ಯವಾಗಿಯೇ ಹೊರತು ವಿಷ್ಣುವಿನಂತೆ ಮುಖ್ಯವಾಗಿ ಅಖಿಲಶಬ್ದವಾಚ್ಯಳಲ್ಲ. ಆದುದರಿಂದ ಲಕ್ಷ್ಮೀದೇವಿ ಹಾಗೂ ವಾಯುದೇವ 'ಅಮಿತನಾಮ'ರಾದರೂ 'ಮಿತನಾಮ'ರಂತೆ. ವಿಷ್ಣುವಾದರೂ ಮುಖ್ಯವಾಗಿಯೇ ಅಮಿತನಾಮಪ್ರತಿಪಾದ್ಯ.**[4]

## ವಿಷ್ಣುವನ್ನತು ಮುಖ್ಯತಃ

ಲಕ್ಷ್ಮೀದೇವಿಯಾಗಲೀ, ವಾಯುದೇವನಾಗಲೀ ವಿಷ್ಣುವಿನಂತೆ ಮುಖ್ಯವಾಗಿ ಸರ್ವಶಬ್ದ ವಾಚ್ಯರಲ್ಲ ಎಂಬ ಮಾತನ್ನು ಹೀಗೆ ಸ್ಪಷ್ಟಪಡಿಸಬಹುದಾಗಿದೆ-

೧. ಶ್ರೀವಿಷ್ಣು ವೇದದ ಪ್ರತಿಯೊಂದು ಮಂತ್ರದಿಂದಲೂ ಅಕಾರ, ಓಂಕಾರ, ನಾರಾಯಣಾದಿ ಪ್ರತಿಯೊಂದು ನಾಮಗಳಿಂದಲೂ ಪ್ರತಿಪಾದ್ಯನು.

- ಆದರೆ ಲಕ್ಷ್ಮೀದೇವಿ, ಶ್ರೀವಿಷ್ಣುವಿನಲ್ಲಿ ಪ್ರಸಿದ್ಧಗಳಾದ ಪುರುಷಸೂಕ್ತಾದಿಗಳನ್ನು ಹೊರತುಪಡಿಸಿ ಉಳಿದ ಮಂತ್ರಗಳಿಂದಷ್ಟೇ ಪ್ರತಿಪಾದ್ಯಳಾದರೆ, ಚತುರ್ಮುಖ ಹಾಗೂ ವಾಯುದೇವ ಲಕ್ಷ್ಮೀದೇವಿಯಲ್ಲಿ ಪ್ರಸಿದ್ಧಗಳಾದ ಅಂಭೃಣೀಸೂಕ್ತ ಮುಂತಾದವುಗಳನ್ನು ಹೊರತುಪಡಿಸಿ ಉಳಿದ ಮಂತ್ರಗಳಿಂದಷ್ಟೇ ಪ್ರತಿಪಾದ್ಯರು.[5]

---

4. ದ್ವಾವಾತ್ಮಾನೌ ಹಿ ವೇದೇಷು ದ್ವೌ ಪ್ರಾಣೌ ದ್ವೌ ಚ ಚೇತನೌ ।
ಅಜ್ಞಾನಾಭಿಭವಾಸ್ಪೃಷ್ಟೌ ವಾಯುರ್ನಾರಾಯಣಶ್ಚ ತೌ ।
ತದನ್ಯೇ ಚೇತನಾಃ ಸರ್ವೇ ಪ್ರಾಣಾಶ್ಚಾತ್ಮಾನ ಏವ ಚ ।
ಅಜ್ಞಾನಾಭಿಭವಸ್ಪೃಷ್ಟಾಸ್ತಸ್ಮಾತ್ ತೇ ಹ್ಯಧಮಾಃ ಶ್ರುತಾಃ ।
ಮಧ್ಯಮೋ ವಾಯುರೇವೈಕ ಉತ್ತಮಃ ಕೇವಲೋ ಹರಿಃ ।
ಸರ್ವಶಬ್ದೋದಿತೌ ತಸ್ಮಾದೇತೌ ದ್ವಾವೇವ ನಾಪರಃ ।
ಅನ್ಯೇ ಚೈವ ಮಿತೈಃ ಶಬ್ದೈರುಚ್ಯಂತೇ ನಾಮಿತೈಃ ಕ್ವಚಿತ್ ।
ಶ್ರೀರಪ್ಯಖಿಲಶಬ್ದೋಕ್ತಾ ವಿಷ್ಣುವನ್ನತು ಮುಖ್ಯತಃ ।
ತಸ್ಮಾದಮಿತನಾಮಾನಾವಪಿ ತೌ ಮಿತನಾಮವತ್ ।
ಶ್ರೀಶ್ಚ ವಾಯುಶ್ಚ ವಿಷ್ಣುಸ್ತು ಮುಖ್ಯೋಕ್ತೇರಮಿತಾಭಿಧಃ ।
*– ಬ್ರಹ್ಮಾಂಡೇ [ಐ.ಉ.ಭಾ. 2-1-2-12]*

5. ದೇವತಾ ಸರ್ವವಿದ್ಯಾನಾಂ ಸ್ವಯಂ ನಾರಾಯಣಃ ಪ್ರಭುಃ ।
ಋತೇ ತತ್ರ ಪ್ರಸಿದ್ಧಾಶ್ಚ ದೇವತಾ ಶ್ರೀಸ್ತಥಾತ್ರ ಚ ।
ಋತೇ ಪ್ರಸಿದ್ಧಾ ಬ್ರಹ್ಮೈವ...... *– [ಋ.ಭಾ. 1-46, 47]*

ಹಾಗೆಯೇ ಅಕಾರವು ಭಗವಂತನನ್ನು ಹೊರತುಪಡಿಸಿ ಬೇರೆ ಯಾರ ವಾಚಕವೂ ಆಗಲಾರದು. ಬ್ರಹ್ಮರುದ್ರಾದಿನಾಮಗಳು ಭಗವಂತನಿಗೇ ಸೇರಿದವುಗಳಾದರೂ ಅಮುಖ್ಯ ವಾಗಿಯಾದರೂ ಚತುರ್ಮುಖ, ಪಾರ್ವತೀಪತ್ಯಾದಿಗಳಿಗೆ ವಾಚಕಗಳಾಗಿವೆ; ನಾರಾ ಯಣ, ವಿಷ್ಣು ಇತ್ಯಾದಿಗಳು ಅಮುಖ್ಯವಾಗಿಯೂ ಚತುರ್ಮುಖಾದಿ ವಾಚಕಗಳಾಗ ದಿದ್ದರೂ ಮನುಷ್ಯರ ನಾಮಕರಣದಲ್ಲಿ ಸಾಂಕೇತಿಕವಾಗಿ ವಿನಿಯೋಗಿಸಲ್ಪಡುವುದುಂಟು –ಎಂದು ಒಪ್ಪಿಕೊಳ್ಳುವ 'ಬ್ರಹ್ಮಸಾರ'ವು ಭಗವಂತನ ಪ್ರಧಾನನಾಮ 'ಅಕಾರ' ಎಂದು ಘೋಷಿಸಿ, ಆ ಅಕಾರದಿಂದ ಅಮುಖ್ಯವಾಗಿಯೂ ಬ್ರಹ್ಮಾದಿಗಳು ವಾಚ್ಯರಾಗುವುದಿಲ್ಲ. 'ನಾಮಕರಣ'ದಲ್ಲೂ ಅಕಾರದ ವಿನಿಯೋಗ ಇಲ್ಲ ಎಂದು ಸಾರಿದೆ.[6]

ಹೀಗೆ ಅಕಾರವು ಭಗವಂತನನ್ನಷ್ಟೇ ಹೇಳುವುದರಿಂದ ಅಕಾರದಿಂದ ಅಭಿವ್ಯಕ್ತವಾದ ಓಂಕಾರವೂ ಭಗವಂತನನ್ನೇ ಹೇಳುವುದು ಹೊರತು ಭಗವಂತನನ್ನು ಹೊರತುಪಡಿಸಿ ಬೇರೆ ಯಾರನ್ನೂ ಹೇಳಲಾರದೆಂದು 'ತತ್ವಸಾರ' ಒತ್ತಿ ಸಾರುವುದು. ಎಂಟು ವರ್ಣ ಗಳನ್ನೊಳಗೊಂಡ ಪ್ರಣವ ಅವುಗಳಲ್ಲಿಯ ಒಂದೊಂದು ವರ್ಣದಿಂದಲೂ ಭಗವಂತನ ರೂಪಗಳನ್ನೇ ಹೇಳುತ್ತಿರುವುದನ್ನು ತೋರಿಸಿಕೊಟ್ಟುದರಿಂದ, ಪ್ರಣವದಿಂದ ನಾರಾಯಣ ನನ್ನು ಬಿಟ್ಟು ಬೇರೆ ಯಾರೂ ಪ್ರತಿಪಾದ್ಯ ಆಗುವುದಿಲ್ಲ ಎಂದು ತೀರ್ಮಾನಿಸಲಾಗಿದೆ.[7]

ಹಾಗೆಯೇ ಭಗವಂತನಲ್ಲಿ ಪ್ರಸಿದ್ಧಗಳಾದ ನಾರಾಯಣಾದಿ ನಾಮಗಳಿಂದ ಉಳಿದ ಯಾರೂ ವಾಚ್ಯರಾಗಲಾರರು; ಆದರೆ ಬ್ರಹ್ಮ, ರುದ್ರಾದಿ ನಾಮಗಳಿಂದ ಭಗವಂತನೇ ಮುಖ್ಯವಾಚ್ಯನಾಗಿದ್ದು, ಅವುಗಳಿಗೆ ಅವನೇ ಗತಿ ಎಂದು ವಾಮನಪುರಾಣವು ನಾರಾ ಯಣಾದಿ ನಾಮಗಳಿಂದ ಉಳಿದವರಿಗೆ ವಾಚ್ಯತ್ವವಿಲ್ಲ ಎಂದು ತಿಳಿಸಿದ್ದರೆ,[8] ಸ್ಕಾಂದ

---

6. .....ತತೋಽಕಾರಃ ಪ್ರಧಾನಂ ನಾಮ ಚಕ್ರಿಣಃ ।
ಅಕಾರನಾಮಾ ನಾನ್ಯೋಽಸ್ತಿ ತಮೃತೇ ಪುರುಷೋತ್ತಮಮ್ ।
ಬ್ರಹ್ಮರುದ್ರಾದಿ ನಾಮಾನಿ ಬ್ರಹ್ಮಾದಿಷ್ವಪ್ಯಮುಖ್ಯತಃ ।
ವರ್ತಂತೇ ನತ್ವಕಾರೋಽಯಂ ವರ್ತತೇ ಕೇಶವಂ ವಿನಾ ।
ನಾರಾಯಣಾದಿನಾಮಾನಿ ನೃಣಾಂ ನಾಮಕ್ರಿಯಾಸ್ವಪಿ ।
ವಿಹಿತಾನ್ಯಕಾರೋ ನೈವಾಯಂ ವಿಹಿತಸ್ತಮೃತೇ ಪ್ರಭುಮ್ ।
– –*ಬ್ರಹ್ಮಸಾರ [ಐ.ಉ.ಭಾ. 2-2-6-5]*

7. ಯತೋಽಕಾರಃ ಸದಾ ವಿಷ್ಣೋರ್ವಾಚಕತ್ವೇನ ಸಂಸ್ಥಿತಃ ।
ತಸ್ಮಾದ್ ವರ್ಣತ್ರಯಾತ್ಮಾಽಯಂ ಪ್ರಣವೋಽಪಿ ತ್ರಯಾತ್ಮಕಮ್ ।
ಹರಿಮೇವ ಸದಾ ವಕ್ತಿ ನೈವಾನ್ಯಂ ಕಂಚನ ಕ್ವಚಿತ್....
....ಪ್ರಣವೋಽಯಂ ವದತ್ಯಷ್ಟೌ ತಸ್ಮಾನ್ನಾನ್ಯಾಭಿಧಾಯಕಃ ।
– *ತತ್ವಸಾರ [ಐ.ಉ.ಭಾ. 2-2-7-5]*

8. ನ ತು ನಾರಾಯಣಾದೀನಾಂ ನಾಮ್ನಾಮನ್ಯತ್ರ ಸಂಭವಃ ।
ಅನ್ಯನಾಮ್ನಾಂ ಗತಿರ್ವಿಷ್ಣುರೇಕ ಏವ ಪ್ರಕೀರ್ತಿತಃ ।
– *ವಾಮನ [ಬ್ರ.ಸೂ.ಭಾ. 1-3-3]*

ಪುರಾಣ ಹೇಗೆ ಚಕ್ರವರ್ತಿಯು ರಾಜಧಾನಿಯನ್ನು ತನ್ನ ಅಧೀನದಲ್ಲಿಯೇ ಇಟ್ಟುಕೊಂಡು ಉಳಿದ ರಾಜ್ಯದ ಭಾಗಗಳನ್ನು ಆಯಾ ಸಾಮಂತರಾಜರಿಗೆ ನೀಡುವನೋ ಹಾಗೆ ಶ್ರೀವಿಷ್ಣು ನಾರಾಯಣಾದಿ ನಾಮಗಳನ್ನು ತಾನೇ ಇಟ್ಟುಕೊಂಡು ಬ್ರಹ್ಮ, ರುದ್ರ ಇತ್ಯಾದಿ ನಾಮ ಗಳನ್ನು ಉಳಿದ ದೇವತೆಗಳಿಗೂ ನೀಡಿರುವನೆಂದು ದೃಷ್ಟಾಂತಪೂರ್ವಕವಾಗಿ ಸಾರಿದೆ.[9]

ಇದರಿಂದ ವಾಯುದೇವ ಅಕಾರ, ಓಂಕಾರ ಹಾಗೂ ನಾರಾಯಣಾದಿ ನಾಮ ಗಳಿಂದಲೂ ವಾಚ್ಯ ಅಲ್ಲ ಎಂದು ಸಿದ್ಧವಾಗುವುದು.

## ಅಭಿಮಾನಿಯಾಗಿ ವಾಚ್ಯ:

ಹೀಗಿದ್ದರೂ ವಾಯುದೇವ ಪುರುಷಸೂಕ್ತಾದಿಗಳನ್ನೂ, ಅಕಾರ ಓಂಕಾರಗಳನ್ನೂ ನಾರಾಯಣಾದಿ ನಾಮಗಳನ್ನೂ ಒಳಗೊಂಡ ಸರ್ವಶಬ್ದಗಳಿಂದ ವಾಚ್ಯನಾಗಿರುವನೆಂಬು ದನ್ನು ಹೇಗೆ ಕೂಡಿಸಬೇಕು? ಎಂಬ ಸಂದೇಹ ಸಹಜ.

ಇದಕ್ಕೆ ಅಕಾರದ ವಿಷಯದಲ್ಲಿ ಮಧ್ವಗುರುಗಳು ಒಂದು ಸಮಾಧಾನವನ್ನು ಸೂಚಿಸಿ ರುವರು. ಅಕಾರದಿಂದ ಶ್ರೀವಿಷ್ಣುವೇ ವಾಚ್ಯನಾಗಿರುವನಾದರೂ, ಅಂತಹ ಅಕಾರಕ್ಕೆ ವಾಯುದೇವನೂ, ಚತುರ್ಮುಖನೂ ಅಭಿಮಾನಿಗಳು. ವೇದವಾಚ್ಯ ಬೇರೆ ವೇದಾಭಿ ಮಾನಿದೇವತೆ ಬೇರೆ ಹೇಗೋ ಹಾಗೆ.[10] ಅಕಾರವಾಚ್ಯ ಭಗವಂತನೇ ಆದರೂ ಅಕಾರಕ್ಕೆ ಅಭಿಮಾನಿ ಬ್ರಹ್ಮ ಮತ್ತು ವಾಯು ಆಗಿರುವುದರಿಂದ ಅಭಿಮಾನಾಸ್ಪದ ವಸ್ತುವಿನ ನಾಮದಿಂದ ಅಭಿಮಾನಿಯನ್ನೂ ಕರೆಯುವ ರೂಢಿ ಇರುವುದರಿಂದ[11] ಅಕಾರ, ಓಂಕಾರ ಮುಂತಾದ ಅಭಿಮಾನಾಸ್ಪದಗಳಾದ ನಾಮಗಳಿಂದ ಅಭಿಮಾನಿಯಾಗಿ ವಾಯುದೇವನು ವಾಚ್ಯನಾಗಬಲ್ಲನು. 'ವೇದಾಣೀ' ಎನಿಸುವ ಅವನು ಪುರುಷಸೂಕ್ತಾದಿಗಳನ್ನೊಳಗೊಂಡ ಸಮಗ್ರ ವೇದಕ್ಕೆ ಆಧಾರನಾಗಿ ಅಭಿಮಾನಿಯಾಗಿರುವುದರಿಂದ ಪುರುಷಸೂಕ್ತಾದಿಗಳಿಂದಲೂ ವಾಚ್ಯನಾಗಬಲ್ಲನು. ನಾರಾಯಣಾದಿ ನಾಮಗಳಿಗೂ ಅಭಿಮಾನಿಯಾಗಿದ್ದು, ಅವುಗಳಿಂದ ವಾಚ್ಯನಾಗಬಲ್ಲನು.

ಆದರೆ ಈ ಬಗೆಯ ವಾಚ್ಯತ್ವವು ಆಯಾ ಶಬ್ದದ ಪ್ರವೃತ್ತಿನಿಮಿತ್ತಧರ್ಮವನ್ನು ಹೊಂದಿರುವ ಪ್ರಯುಕ್ತವಾದ ವಾಚ್ಯತ್ವದಷ್ಟು ಮುಖ್ಯವಾದುದಲ್ಲ. ಭಗವಂತನಲ್ಲಾದರೂ ಪ್ರವೃತ್ತಿನಿಮಿತ್ತ ಧರ್ಮಗಳನ್ನು ಹೊಂದಿರುವ ಪ್ರಯುಕ್ತವಾದ ವಾಚ್ಯತ್ವವಾದುದರಿಂದ

---

9. ಇತೀ ನಾರಾಯಣಾದೀನಿ ನಾಮಾನಿ ಪುರುಷೋತ್ತಮಃ ।
ಪ್ರಾದಾದನ್ಯತ್ರ ಭಗವಾನ್ ರಾಜೇವಾರ್ತೇ ಸ್ವಕಂ ಪುರಮ್ ।
*– ಸ್ಕಾಂದ [ಬ್ರ.ಸೂ.ಭಾ. 1-3-3]*

10. ವಾಯುರ್ಬ್ರಹ್ಮಾಽಪಿ ಚಾಕಾರದೇವತೇ ನ ತು ನಾಮಿನೌ ।
ಯಥಾ ವೇದಾಭಿಧೇಯೋಽನ್ಯೋ ವೇದಾಖ್ಯಾ ದೇವತಾಽಪರಾ ।
ಏವಂ ನಾಮಾಭಿಮಾನೀ ತು ವಾಯುರ್ವಾಚ್ಯೋ ಜನಾರ್ದನಃ ।
*– ಬ್ರಹ್ಮಸಾರ [ಐ.ಉ.ಭಾ. 2-2-6-1]*

11. ಅಭಿಮಾನಿವ್ಯಪದೇಶಸ್ತು... *– [ಬ್ರ.ಸೂ. 2-1-6]*

ಮುಖ್ಯವಾದ ವಾಚ್ಯತ್ವ. ಮುಖ್ಯಪ್ರಾಣನಲ್ಲಿ ಈ ಬಗೆಯ ವಾಚ್ಯತ್ವ ಇಲ್ಲ ಎನ್ನುವುದನ್ನೇ ಶ್ರೀ ಮಧ್ವರು 'ವಿಷ್ಣುವನ್ನತು ಮುಖ್ಯತಃ' ಎಂದಿರುವಂತಹದ್ದು.

## ಮತ್ತೊಂದು ಬಗೆಯ ಅಮುಖ್ಯತ್ವ:

ಓಂಕಾರಾದಿಗಳನ್ನು ಬಿಟ್ಟು ಉಳಿದ ಶಬ್ದಾದಿಗಳ ವಿಷಯದಲ್ಲೂ ಭಗವಂತನಲ್ಲಿರುವಷ್ಟು ಮುಖ್ಯವಾಚ್ಯತ್ವ ವಾಯುದೇವನಲ್ಲಿ ಇಲ್ಲ. ಯಾಕೆಂದರೆ ಆಯಾ ಶಬ್ದದ ಪ್ರವೃತ್ತಿನಿಮಿತ್ತಧರ್ಮ ಪೂರ್ಣ ಪ್ರಮಾಣದಲ್ಲಿ ವಾಯುದೇವನಲ್ಲಿ ಇರುವುದಿಲ್ಲ. ಹಾಗೂ ಅಪೂರ್ಣ ಪ್ರಮಾಣದಲ್ಲಿರುವ ಪ್ರವೃತ್ತಿನಿಮಿತ್ತಧರ್ಮಗಳ ವಿಷಯದಲ್ಲಿ ಸ್ವಾತಂತ್ರ್ಯವೂ ವಾಯುದೇವನಲ್ಲಿ ಇರಲಾರದು.

## ಎರಡು ಬಗೆಯ ಸಮರ್ಥನೆ:

ಆದರೂ ವಾಯುದೇವ ಸರ್ವಶಬ್ದವಾಚ್ಯನಾಗಬಲ್ಲ. ಇದನ್ನು ಶ್ರೀ ಮಧ್ವರು ಎರಡು ಬಗೆಗಳಲ್ಲಿ ಸಮರ್ಥಿಸಿರುವರು.

'ಪ್ರಾಣಪ್ರಾಣ' ಎನಿಸಿರುವ ಭಗವಂತನು ಜಗತ್ತಿಗೆ ಸಂಬಂಧಿಸುವ ಯಾವುದೇ ಪ್ರವೃತ್ತಿಯನ್ನು ವಾಯುದೇವನ ಮೂಲಕವೇ ಮಾಡಿಸುವನು. ಹೊರತು ನೇರವಾಗಿ ತಾನೇ ಮಾಡುವುದಿಲ್ಲ[12]. ಆದ್ದರಿಂದ ಆಯಾ ಪ್ರವೃತ್ತಿಪ್ರಯುಕ್ತವಾದ ನಾಮ ಭಗವದಾದೇಶಾನುಸಾರವಾಗಿ ವಾಯುದೇವನಲ್ಲಿ ಬರಲೇ ಬೇಕು ತಾನೇ? ಇದನ್ನು 'ಬೃಹತ್ಸಂಹಿತೆ' ಸ್ಪಷ್ಟಪಡಿಸಿದೆ. ವಾಯುದೇವ ಭಗವಂತನಷ್ಟು ಅಲ್ಲದಿದ್ದರೂ ರುದ್ರಾದಿ ಇತರರಿಗಿಂತ ಅಧಿಕವಾಗಿ ಶಬ್ದವಾಚ್ಯನಾಗುವನೆಂದು ತಿಳಿಸಿದ ಬೃಹತ್ಸಂಹಿತೆ ತನ್ನ ಆ ಹೇಳಿಕೆಗೆ ಉಪಪಾದಕವಾಗಿ ಸೂರ್ಯನ ದೃಷ್ಟಾಂತವನ್ನು ಪ್ರಸ್ತುತಪಡಿಸಿದೆ –ವಾಯುದೇವನು ಶ್ರೀಹರಿಯ ಆದೇಶಾನುಸಾರವಾಗಿ ಸೂರ್ಯನಲ್ಲಿದ್ದುಕೊಂಡು ಜಗತ್ತ್ರಯವನ್ನು ಬೆಳಗುವನು. ಅಂತಹ ವಾಯುದೇವನ ಸಾಮರ್ಥ್ಯವನ್ನವಲಂಬಿಸಿ ಸೂರ್ಯನು ಬೆಳಗುವನು. ಆದ್ದರಿಂದ ಬೆಳಗುವ ಪ್ರವೃತ್ತಿನಿಮಿತ್ತವನ್ನಿಟ್ಟುಕೊಂಡು ಹೊರಡಿರುವ 'ಭಾನು' ಇತ್ಯಾದಿ ನಾಮಗಳಿಂದ ಸೂರ್ಯನಿಗಿಂತಲೂ ಅಧಿಕವಾಗಿ ವಾಚ್ಯನಾಗಿರುವವನು ವಾಯುದೇವ ಎಂಬುದಾಗಿ[13]. ಹೀಗೆಯೇ ಪ್ರತಿಯೊಂದು ನಾಮದ, ಶಬ್ದದ 'ಪ್ರವೃತ್ತಿನಿಮಿತ್ತ'ವೂ ಭಗವದಾಜ್ಞಾನುಸಾರವಾಗಿ ವಾಯುದೇವನಲ್ಲಿ ಇರುವುದರಿಂದ ಅವನು ಆಯಾ ಶಬ್ದದಿಂದ, ನಾಮದಿಂದ ವಾಚ್ಯನಾಗುವನು.

---

12. ವಾಯೋಃ ಸಕಾಶಾಜ್ಜಗತಃ ಪ್ರವೃತ್ತಿಂ ಕಾಮಯತ್ಯಜಃ ।
ಪ್ರಾಣಪ್ರಾಣಮತಃ ಪ್ರಾಹುರ್ವಿಷ್ಣುಂ ವಾಯೋರಪಿ ಪ್ರಭುಮ್ ।
*– [ಭಾ.ತಾ.ನಿ. 10-15-50]*

13. .........ಅನ್ಯವ್ಯಪೇಕ್ಷಯಾ ವಾಯೌ ಮುಖ್ಯವೃತ್ತಿರ್ವಿಧೀಯತೇ ।
ವಾಯುಶ್ಚ ಸೂರ್ಯಸಂಸ್ಥಃ ಸಂಸ್ತಪತ್ಯೇತಜ್ಜಗತ್ತ್ರಯಮ್ ।
ಆಜ್ಞಯೈವ ಹರೇರ್ವಾಯೋಃ ಶಕ್ತ್ಯಾ ಸೂರ್ಯಸ್ತಪತ್ಯಯಮ್ ।
*– ಬೃಹತ್ಸಂಹಿತಾ [ಐ.ಉ.ಭಾ. 2-1-2-12]*

## 'ತ್ರಿವೃತ್ಕರಣ'ದ ಮೂಲಕ:

ತೇಜಸ್ಸು, ನೀರು ಹಾಗೂ ಪೃಥಿವೀ –ಈ ಮೂರಕ್ಕೆ ಅಭಿಮಾನಿಗಳಾದ ಶ್ರೀದೇವಿ, ವಾಯುದೇವ ಹಾಗೂ ರುದ್ರ –ಈ ಮೂವರನ್ನು ಪರಸ್ಪರ ಅಂಶಯುಕ್ತರನ್ನಾಗಿ ಮಾಡುವೆನೆಂದು ಯೋಚಿಸಿದ ಭಗವಂತ ಅವರೊಳಗೆ ಪ್ರವೇಶಿಸಿ, ಅವರನ್ನು ಪರಸ್ಪರ ಅಂಶಯುಕ್ತರನ್ನಾಗಿ ಮಾಡಿ ಅವರ ಮೂಲಕ ಇಂದ್ರಾದಿದೇವತೆಗಳ ಹೆಸರುಗಳನ್ನೂ ಅವರ ರೂಪವನ್ನೂ ಸೃಷ್ಟಿಮಾಡಿದನು. ಆದ್ದರಿಂದ ಇಂದ್ರಾದಿಗಳ ನಾಮಗಳೂ ರೂಪಗಳೂ ಶ್ರೀದೇವಿ, ವಾಯುದೇವ ಹಾಗೂ ರುದ್ರ ಇವರಿಗೆ ಅಧೀನವಾದವು.[14] ಈ ಮೂರು ದೇವತೆಗಳಲ್ಲೂ ರುದ್ರನೂ ವಾಯುದೇವನಿಗೆ ಅಧೀನನಾಗಿರುವುದರಿಂದ ರುದ್ರನ ನಾಮ ರೂಪಗಳೂ ವಾಯುದೇವನಿಗೆ ಅಧೀನವಾದವು; ವಾಯುದೇವನಿಗಿಂತಲೂ ಶ್ರೀದೇವಿ ಪ್ರಬಲಳಾಗಿರುವುದರಿಂದ ವಾಯುದೇವನ ನಾಮರೂಪಗಳೂ ಶ್ರೀದೇವಿಗೆ ಅಧೀನ ವಾದವು.

ಹೀಗೆ ರುದ್ರಾದಿಗಳ ಸೃಷ್ಟಿಗೆ ಪ್ರಯೋಜಕನಾಗಿರುವ ಪ್ರಯುಕ್ತ ವಾಯುದೇವ ಅವರ ನಾಮರೂಪಗಳಿಗೆ ಕಾರಣನಾಗಿರುವನೆಂದು, ಅವರೆಲ್ಲರಿಗಿಂತ ಅಧಿಕವಾಗಿ ರುದ್ರಾದಿ ನಾಮಗಳಿಂದ ವಾಚ್ಯನಾಗುವನು; ಆದರೆ ವಾಯುದೇವನಿಗಿಂತಲೂ ಅಧಿಕವಾಗಿ ಶ್ರೀದೇವಿ ಸೃಷ್ಟಿಗೆ ಪ್ರಯೋಜಕಳಾಗಿದ್ದು, ಅವಳು ಅಧಿಕವಾಗಿ ವಾಚ್ಯಳಾಗಿದ್ದರೆ, ಶ್ರೀಹರಿ ತ್ರಿವೃತ್ಕರಣ ವನ್ನು ಮೂರು ದೇವತೆಗಳ ಮಾಧ್ಯಮದಲ್ಲಿ ನಡೆಸಿ ವಾಯುದೇವ ಶ್ರೀದೇವಿಗಳಿಗಿಂತಲೂ ಅಧಿಕವಾಗಿ ರುದ್ರಾದಿಗಳ ಸೃಷ್ಟಿಗೆ ಕಾರಣನಾಗಿರುವುದರಿಂದ ಅವನೇ ಮುಖ್ಯವಾಗಿ ರುದ್ರಾದಿ ನಾಮಗಳನ್ನೂ, ಆ ರೂಪಗಳನ್ನೂ ಹೊಂದಿರುವನು. ವಾಯುದೇವ ಶ್ರೀಹರಿ ಯಷ್ಟು, ಶ್ರೀದೇವಿಯಷ್ಟು ಅಲ್ಲದಿದ್ದರೂ, ರುದ್ರಾದಿಗಳಿಗಿಂತ ಅಧಿಕವಾಗಿ ಸೃಷ್ಟಿಗೆ ಕಾರಣ

---

14. ಸೃಷ್ಟೇಷ್ವೇತೇಷು ಭಗವಾನೀಕ್ಷಾಂಚಕ್ರೇ ಸ ಕೇಶವಃ ।
ಜೀವಾಖ್ಯೇನೈವ ರೂಪೇಣ ಯೋಽನಿರುದ್ಧ ಇತಿ ಸ್ಮೃತಃ ।
ತೇನ ರೂಪೇಣ ಲಕ್ಷ್ಮ್ಯಾದೀನ್ ಪ್ರವಿಷ್ಟೋ ರೂಪನಾಮನೀ ।
ಕರಿಷ್ಯೇ ತ್ರಿವೃತಶ್ಚೈತಾನೇಕೈಕಂ ಕರವಾಣಿ ಚ ।
ಇತಿ ಮತ್ವಾ ಪ್ರವಿಶ್ಯಾಥ ತೇಭ್ಯ ಇಂದ್ರಾದಿನಾಮಪಿ ।
ನಾಮರೂಪಾಣಿ ಕೃತವಾಂಸ್ತಾಶ್ಚಾನ್ಯೋನ್ಯಪ್ರವೇಶಿನಃ ।
ಕೃತ್ವಾಽಗ್ನಿಸೋಮಸೂರ್ಯಾದಿಷ್ವೇತಾಂಸ್ತ್ರೀನ್ ನಿದಧೇ ಪುನಃ ।
.....ಇಂದ್ರಾದಿನಾಮರೂಪಾಣಿ ಯಥೈವ ತ್ರಿಷು ಮುಖ್ಯತಃ ।
ತದಧೀನತ್ವತಸ್ತೇಷಾಮೇಷಾಮುಚ್ಚಬಲತ್ವತಃ ।
ಶಿವನಾಮಾನಿ ರೂಪಾಣಿ ತಥಾ ವಾಯೋಸ್ತು ಮುಖ್ಯತಃ ।
ತದೀಯಾನಿ ತಥಾ ಲಕ್ಷ್ಮ್ಯಾಸ್ತದೀಯಾನಿ ಹರೇಸ್ತಥಾ ।
ತಸ್ಮಾತ್......ಸರ್ವನಾಮಾ ಸ ಏವೈಕಃ ।
ಅನ್ಯೇಷಾಂ ಯಚ್ಚ ರೂಪಾದ್ಯಂ ತತ್ ತಸ್ಮಾತ್ ಪ್ರತಿಬಿಂಬಿತಮ್ ।
– *–ಸಾಮಸಂಹಿತಾ [ಬೃ.ಉ.ಭಾ. 6-2-2.....6]*

ನಾಗಿ ಅವರೆಲ್ಲರಿಗಿಂತ ಅಧಿಕವಾಗಿ ಆಯಾ ನಾಮದಿಂದ ವಾಚ್ಯನಾಗಿರುವನು. ಈ ಹಿನ್ನೆಲೆಯಲ್ಲೂ 'ವಿಷ್ಣುವನ್ನತು ಮುಖ್ಯತಃ' ಎನ್ನಲಾಗಿದೆ.

## ನೂರ ಎಪ್ಪತ್ತು ನಾಮಗಳು

ಹೀಗೆ 'ಸರ್ವಶಬ್ದವಾಚ್ಯ' ಎಂದು ಗುರುತಿಸಲ್ಪಟ್ಟಿರುವ ವಾಯುದೇವನ ಶಾಸ್ತ್ರ ಪ್ರಪಂಚದಲ್ಲಿ ಪ್ರಸಿದ್ಧಗಳಾದ ನೂರ ಎಪ್ಪತ್ತು ನಾಮಗಳ ಪರಿಶೀಲನೆಯನ್ನಾದರೂ ನಡೆಸೋಣ.

೧. ಮುಖ್ಯಪ್ರಾಣನ ಗುಣಧರ್ಮಗಳಿಗೆ ಸಂಬಂಧಿಸುವ ನಾಮಗಳು . . . ೧ – ೭೭

೨. ಮುಖ್ಯಪ್ರಾಣನ ಸಾಧನೆಗೆ ಸಂಬಂಧಿಸುವ ನಾಮಗಳು . . . . . . . . ೭೮ – ೯೨

೩. ಮುಖ್ಯಪ್ರಾಣ ಮತ್ತು ದೇವರು ಇವರ ನಂಟಿಗೆ ಸಂಬಂಧಿಸುವ ನಾಮಗಳು . . . . . . . . . . . . . . . . . . . . . . ೯೩ – ೧೦೫

೪. ಮುಖ್ಯಪ್ರಾಣ ಮತ್ತು ಇತರ ದೇವತೆಗಳು ಇವರ ನಂಟಿಗೆ ಸಂಬಂಧಿಸುವ ನಾಮಗಳು . . . . . . . . . . . . . . ೧೦೬ – ೧೧೯

೫. ಮುಖ್ಯಪ್ರಾಣ ಮತ್ತು ಭಾರತೀದೇವಿ ಇವರ ನಂಟಿಗೆ ಸಂಬಂಧಿಸುವ ನಾಮಗಳು . . . . . . . . . . . . . . ೧೨೦ – ೧೨೪

೬. ಮುಖ್ಯಪ್ರಾಣ ಮತ್ತು ಇತರ ಜೀವರು ಇವರ ನಂಟಿಗೆ ಸಂಬಂಧಿಸುವ ನಾಮಗಳು . . . . . . . . . . . . . . ೧೨೪ – ೧೪೦

೭. ಮುಖ್ಯಪ್ರಾಣನ ಬ್ರಹ್ಮಾಂಡದ ನಿರ್ವಹಣೆಗೆ ಸಂಬಂಧಿಸುವ ನಾಮಗಳು . . . . . . . . . . . . . . . . . . . . . . . ೧೪೧ – ೧೫೩

೮. ಮುಖ್ಯಪ್ರಾಣನ ಪಿಂಡಾಂಡದ ನಿರ್ವಹಣೆಗೆ ಸಂಬಂಧಿಸುವ ನಾಮಗಳು . . . . . . . . . . . . . . . . . . . . . . . ೧೫೫ – ೧೭೦

ಹೀಗೆ ಪ್ರಮೇಯಾಧಾರಿತವಾಗಿ ೮ ವಿಭಾಗಗಳಾಗಿ ವಿಂಗಡಿಸಲ್ಪಟ್ಟ ವಾಯುದೇವನ ೧೭೦ ನಾಮಗಳನ್ನು ಅಕ್ಷರಾನುಕ್ರಮಣಿಕೆಗನುಗುಣವಾಗಿ ಪರಿಶೀಲಿಸಿ ಆ ಬಳಿಕ ಅವುಗಳ ಅರ್ಥಚಿಂತನೆ ನಡೆಸೋಣ.

## ಸಂಗೃಹೀತಗಳಾದ ವಾಯುನಾಮಗಳ ಅಕ್ಷರಾನುಕ್ರಮಣಿಕೆ

*[ಇಲ್ಲಿ ಸಂಗ್ರಹಿಸಲ್ಪಟ್ಟ ವಾಯುದೇವನ ನಾಮಗಳ ವಿಶೇಷಾಧ್ಯಯನಾದಿಗಳನ್ನು ನಡೆಸಲು ಜಿಜ್ಞಾಸುಗಳಿಗೆ ಅನುಕೂಲವಾಗಲೆಂದು ಅವುಗಳನ್ನು ಅಕ್ಷರಾನುಕ್ರಮವಾಗಿ ಜೋಡಿಸಿ ಯಾವ ವಿಭಾಗದಲ್ಲಿ ಪ್ರಸ್ತುತವಾಗಿದೆ ಎಂಬ ಮಾಹಿತಿಯನ್ನು ನೀಡಲಾಗಿದೆ.]*

| ನಾಮಗಳು | ಅರ್ಥೈಸುವಲ್ಲಿ ಪ್ರಸ್ತುತ ವಿಭಾಗ | ಅರ್ಥೈಸುವಲ್ಲಿ ಬಳಸಲಾದ ಸಂಖ್ಯೆ |
|---|---|---|
| ೧. ಅಗ್ನಿಃ | ೧ | ೧ |
| ೨. ಅಘ್ನ್ಯಃ | ೧ | ೫೫ |
| ೩. ಅದ್ರಿಃ | ೩ | ೧೦೫ |
| ೪. ಅನಃ | ೬ | ೧೪೦ |
| ೫. ಅನಾರ್ವಣಃ | ೧ | ೫೪ |
| ೬. ಅನ್ನಸ್ಯ ಗ್ರಹಃ | ೮ | ೧೫೪ |
| ೭. ಅನ್ನಾಯುಃ | ೪ | ೧೦೬ |
| ೮. ಅನಿಲಮ್ | ೩ | ೯೫ |
| ೯. ಅಧ್ಯರ್ದ್ವಃ | ೧ | ೨ |
| ೧೦. ಅಪಾನಃ | ೮ | ೧೬೧ |
| ೧೧. ಅಮಃ | ೧ | ೩ |
| ೧೨. ಅಮೂರ್ತಮ್ | ೧ | ೪ |
| ೧೩. ಅಮೃತಮ್ | ೧ | ೫ |
| ೧೪. ಅಮರ್ತ್ಯಃ | ೧ | ೬ |
| ೧೫. ಅಶನಾ | ೮ | ೧೫೫ |
| ೧೬. ಅಸುಃ | ೮ | ೧೫೭ |
| ೧೭. ಅಸಪತ್ನಃ | ೧ | ೭ |
| ೧೮. ಅಹಃ | ೧ | ೮ |
| ೧೯. ಅಂತರಿಕ್ಷಮ್ | ೨ | ೮೪ |
| ೨೦. ಆಕಾಶಃ | ೭ | ೧೪೮ |
| ೨೧. ಆಖಣಾಶ್ಮಸಮಃ | ೧ | ೯ |
| ೨೨. ಆಂಗೀರಸಃ | ೮ | ೧೬೫ |
| ೨೩. ಆತ್ಮಾ | ೨ | ೮೨ |
| ೨೪. ಆದಿಗೋಪಃ | ೨ | ೯೧ |
| ೨೫. ಆದಿತ್ಯಃ | ೭ | ೧೪೭ |
| ೨೬. ಆರ್ದ್ರಃ | ೭ | ೧೫೧ |
| ೨೭. ಆನಂದಃ | ೨ | ೯೪ |
| ೨೮. ಆಪಃ | ೧ | ೧೦ |
| ೨೯. ಆಯತನಮ್ | ೪ | ೧೦೭ |
| ೩೦. ಆಯಾಸ್ಯಃ | ೭ | ೧೫೮ |
| ೩೧. ಇಂದುಃ | ೬ | ೧೩೫ |
| ೩೨. ಇಂದ್ರಃ | ೧ | ೧೧ |
| ೩೩. ಈರಃ | ೧ | ೧೨ |
| ೩೪. ಈಶಾನಃ | ೧ | ೧೩ |
| ೩೫. ಉಕ್ಥಮ್ | ೧ | ೧೪ |
| ೩೬. ಉತ್ | ೭ | ೧೪೧ |
| ೩೭. ಉದಾನಃ | ೮ | ೧೬೩ |
| ೩೮. ಉದ್ಗೀಥಃ | ೫ | ೧೨೦ |
| ೩೯. ಋಜುಃ | ೧ | ೬೮ |
| ೪೦. ಋಷಭಃ | ೫ | ೧೨೧ |
| ೪೧. ಏಕಋಷಿಃ | ೧ | ೧೮ |
| ೪೨. ಓಜಃ | ೧ | ೪೬ |
| ೪೩. ಓಂವಃ | ೧ | ೮೬ |
| ೪೪. ಐಶ್ವರ್ಯಮ್ | ೧ | ೧೯ |
| ೪೫. ಕಾಲಃ | ೧ | ೪೫ |
| ೪೬. ಕೂರ್ಮರೂಪಃ | ೭ | ೧೪೦ |
| ೪೭. ಗಿರಿಃ | ೧ | ೪೦ |

| | | | | | | | |
|---|---|---|---|---|---|---|---|
| ೪೮. | ಚಿತ್ತಮ್ | ೮ | ೧೭೦ | ೮೦. | ಬಲಮ್ | ೧ | ೨೩ |
| ೪೯. | ಜಾತವೇದಾಃ | ೧ | ೨೦ | ೮೧. | ಬಾಧ್ವಃ | ೬ | ೧೩೪ |
| ೫೦. | ಜಿಷ್ಣುಃ | ೧ | ೫೭ | ೮೨. | ಭರತಃ | ೧ | ೮೯ |
| ೫೧. | ಜ್ಯೇಷ್ಠಃ | ೪ | ೧೧೫ | ೮೩. | ಭೀಮಃ | ೧ | ೭೩ |
| ೫೨. | ಜ್ಯೋತಿಃ | ೧ | ೭೭ | ೮೪. | ಬೃಹತೀ | ೧ | ೨೪ |
| ೫೩. | ಜ್ಞಾನಮ್ | ೧ | ೧೫ | ೮೫. | ಬೃಹಸ್ಪತಿಃ | ೫ | ೧೨೩ |
| ೫೪. | ತುರಮ್ | ೧ | ೧೬ | ೮೬. | ಬ್ರಹ್ಮ | ೧ | ೨೫ |
| ೫೫. | ತೇಜೋರಸಃ | ೭ | ೧೪೩ | ೮೭. | ಬ್ರಹ್ಮಾ | ೧ | ೫೮ |
| ೫೬. | ತ್ಯಮ್ | ೧ | ೧೭ | ೮೮. | ಬ್ರಹ್ಮಣಸ್ಪತಿಃ | ೫ | ೧೨೪ |
| ೫೭. | ದಿಶಾಂವತ್ಸಃ | ೩ | ೯೭ | ೮೯. | ಬ್ರಹ್ಮಧಾಮ | ೩ | ೯೬ |
| ೫೮. | ದೂಃ | ೧ | ೨೧ | ೯೦. | ಭರ್ಗಃ | ೬ | ೧೩೭ |
| ೫೯. | ದೇವಃ | ೧ | ೨೨ | ೯೧. | ಭೂಯಾನ್ | ೧ | ೪೪ |
| ೬೦. | ದೈವಃ ಪ್ರಾಣಃ | ೬ | ೧೩೬ | ೯೨. | ಮಘವಾನ್ | ೨ | ೭೯ |
| ೬೧. | ಧರ್ಮಃ | ೬ | ೧೩೯ | ೯೩. | ಮಧ್ಯಮಃ | ೧ | ೪೨ |
| ೬೨. | ಧೃಷ್ಣುಃ | ೭ | ೧೫೩ | ೯೪. | ಮಧ್ವಪೂಪಃ | ೨ | ೮೩ |
| ೬೩. | ನಿಭೃತಃ | ೨ | ೮೮ | ೯೫. | ಮನುಃ | ೧ | ೫೦ |
| ೬೪. | ಪವಮಾನಃ | ೨ | ೮೦ | ೯೬. | ಮಹಾಗುರುಃ | ೨ | ೯೩ |
| ೬೫. | ಪರ್ಜನ್ಯಃ | ೭ | ೧೪೬ | ೯೭. | ಮಹಾಧ್ಯಾತಾ | ೧ | ೭೧ |
| ೬೬. | ಪರಾಯಣಮ್ | ೪ | ೧೧೭ | ೯೮. | ಮಹಾನ್ | ೭ | ೧೫೩ |
| ೬೭. | ಪರಾರ್ಧ್ಯಃ | ೫ | ೧೨೨ | ೯೯. | ಮಹಾಪ್ರಭುಃ | ೨ | ೯೨ |
| ೬೮. | ಪವನಃ | ೨ | ೯೦ | ೧೦೦. | ಮಹಾರಾಜಃ | ೪ | ೧೧೦ |
| ೬೯. | ಪಿಪಾಸಾ | ೭ | ೧೫೭ | ೧೦೧. | ಮಾತರಿಶ್ವಾ | ೧ | ೨೬ |
| ೭೦. | ಪುರುಷಃ | ೩ | ೧೦೩ | ೧೦೨. | ಮಾರುತಃ | ೧ | ೫೬ |
| ೭೧. | ಪುರೂರವಾಃ | ೧ | ೫೧ | ೧೦೩. | ಮುಕ್ತಿಃ | ೧ | ೬೬ |
| ೭೨. | ಪ್ರತಿಷ್ಠಃ | ೪ | ೧೧೭ | ೧೦೪. | ಮುಖ್ಯಪ್ರಾಣಃ | ೧ | ೪೩ |
| ೭೩. | ಪ್ರತ್ಯಕ್ಷಮ್ | ೮ | ೧೬೦ | ೧೦೫. | ಮೇಧಾ | ೧ | ೬೩ |
| ೭೪. | ಪ್ರತ್ಯಾಸ್ವರಃ | ೩ | ೯೮ | ೧೦೬. | ಮೃತ್ಯುಃ | ೧ | ೨೭ |
| ೭೫. | ಪ್ರಜಾಪತಿಃ | ೬ | ೧೩೩ | ೧೦೭. | ಯಜುಃ | ೬ | ೧೩೧ |
| ೭೬. | ಪ್ರಜ್ಞಾ | ೧ | ೬೨ | ೧೦೮. | ಯಜ್ಞಃ | ೨ | ೭೫ |
| ೭೭. | ಪ್ರಾತಃ | ೧ | ೭೪ | ೧೦೯. | ಯತ್ | ೩ | ೯೯ |
| ೭೮. | ಪ್ರಾಣಃ | ೮ | ೧೬೧ | ೧೧೦. | ಯಯಿಃ | ೧ | ೪೧ |
| ೭೯. | ಪ್ರಾಪ್ತಿಃ | ೧ | ೭೫ | ೧೧೧. | ಯಶಃ | ೧ | ೨೮ |

## ನಾಮಾರ್ಥಚಿಂತನೆ

## 1. ಮುಖ್ಯಪ್ರಾಣನ ಗುಣಧರ್ಮಗಳಿಗೆ ಸಂಬಂಧಿಸುವ ನಾಮಗಳು.

೧. ಅಗ್ನಿ:

ಅ. ಮೊದಲು ಜನಿಸಿದವನು.15

ಆ. ಸಕಲಜೀವರಿಗೆ ನೇತಾರನಾಗಿರುವವನು.16

ಇ. ಸಕಲಶರೀರಗಳಿಗೆ ಪ್ರೇರಕನಾಗಿರುವವನು.

ಈ. ಎಲ್ಲವನ್ನೂ ಭಕ್ಷಿಸುವವನು.

ಉ. ಶರೀರಗಳ ಪ್ರತಿಯೊಂದು ಅವಯವವನ್ನೂ ಪ್ರೇರಿಸುವವನು.17

ವಾಯುದೇವನ ಅಗ್ನಿನಾಮಕ್ಕೆ ಸಂಬಂಧಿಸುವ ಅಧಿಕ ವಿಚಾರವನ್ನು ಬೃ.ಉ.ಭಾ.ನಲ್ಲಿ [3-2-2] ಹಾಗೂ [3-2-3] ನೋಡಬಹುದು.18

೨. ಅಧ್ಯರ್ಧ:

ಅ. ಜ್ಞಾನ ಮುಂತಾದ ಗುಣಗಳು ಯಾರಲ್ಲಿ ಅಧಿಕವಾಗಿ ಸಮೃದ್ಧವಾಗಿವೆಯೋ ಅಂತಹವನು.19

ಆ. ಯಾರಲ್ಲಿ ಈ ಜಗತ್ತು ನಿಯಮ್ಯತ್ವ ಪಾಲನತ್ವಾದಿಗಳಿಂದ ಸ್ಥಾಪಿತವಾಗಿದೆಯೋ ಅಂತಹವನು. ಅಂದರೆ ಜಗತ್ತಿನ ನಿಯಮನ, ಪಾಲನೆ ಮುಂತಾದುವನ್ನು ನಡೆಸುವವನು.20

ವಾಯುದೇವನ ಅಧ್ಯರ್ಧನಾಮದ ಬಗ್ಗೆ ಹೆಚ್ಚಿನ ವಿಚಾರವನ್ನು ಬೃ.ಉ.ಭಾ.ನಲ್ಲಿ [5-9-9] ನೋಡಬಹುದು.

---

15. ಅಗ್ರಜತ್ವಾದಗ್ರಣೇತ್ವಾದ್ ವಾಯೋರಗ್ನಿತ್ವಮಿಷ್ಯತೇ । ಪ್ರವೃತ್ತೇ [ಬೃ.ಉ.ಭಾ. 3-2-2]
16. ವಾಯುರಗ್ನಿರಿತಿ ಪ್ರೋಕ್ತೋ ಹ್ಯಗ್ರಣೇತ್ವಾದಥಾಂಗಿನಾಮ್ ।
    ನೇತೃತ್ವಾದದನಾದ್ ವಾಽಪಿ..... ಪ್ರಭಂಜನೇ । *– [ಬೃ.ಉ.ಭಾ. 3-2-2]*
17. .....ಸೋಽಂಗನೇತೃತ್ವಾದಗ್ನಿರಿತ್ಯಭಿಧೀಯತೇ । *– [ಐ.ಉ.ಭಾ. 2-8-4-8]*
18. ವಾಯುದೇವನ ನೂರಹತ್ತು ನಾಮಗಳ ಸಂಗ್ರಹವನ್ನು ಪರವಿದ್ಯಾಪ್ರಕಾಶನದಿಂದ ಪ್ರಕಟಿತವಾದ 'ವಾಯುತತ್ತ್ವ ಪ್ರದೀಪ'ದಲ್ಲಿ ಮಾಡಲಾಗಿದ್ದು, ಆ ನಾಮಗಳ ಅರ್ಥವಿವರಣೆಯನ್ನು ಮಾಡದೆ ಸೂಚನೆಯನ್ನಷ್ಟೇ ನೀಡಲಾಗಿದೆ.
19. ಅಧ್ಯರ್ಧಾ ಹಿ ಗುಣಾ ನಿತ್ಯಂ ವಾಯೋರಧ್ಯರ್ಧ ಏವ ತತ್ ।
    *– ಮಹಾಮೀಮಾಂಸಾ [ಬೃ.ಉ.ಭಾ. 5-9-9]*
20. ಇದಂ ಸರ್ವಂ ಜಗತ್ ಅಧ್ಯಾರ್ಧ್ನೋತ್ ನಿಯಮ್ಯತ್ವಾದಿನಾ
    ಸ್ಥಾಪಿತಮಭೂತ್ ಯಸ್ಮಿನ್ ಸಃ ಅದ್ಧ್ಯರ್ಧಃ *– [ಬೃ.ಉ.ಭಾವಬೋಧ]*

**೩. ಅಮಃ:**

ಅ. ಸಾಮಾನ್ಯರಿಗೆ ತಿಳಿಯಲಶಕ್ಯವಾದ ಮಹಿಮೆ ಉಳ್ಳವನು.21

ಆ. ಜಗತ್ತೆಲ್ಲ ಯಾರ ಜೊತೆಗೇ ಇರುವುದೋ ಅಂತಹವನು.22

ವಾಯುದೇವನ 'ಅಮ' ನಾಮದ ಬಗ್ಗೆ ಹೆಚ್ಚಿನ ವಿಚಾರವನ್ನು ಬೃ.ಉ.ಭಾ.ನಲ್ಲಿ [3-3-22] ಹಾಗೂ ಛಾಂ.ಉ.ಭಾ.ದಲ್ಲಿ [5-1-13] ನೋಡಬಹುದು.

**೪. ಅಮೂರ್ತಮ್:** ಪಾಪದ ಆಕ್ರಮಣಕ್ಕೊಳಗಾಗಿ 'ಮೂರ್ತ' ಎನಿಸುವ ವ್ಯಕ್ತಿಗಳಿಗಿಂತ ವಿಲಕ್ಷಣನಾಗಿರು ವವನು.23

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಬೃ.ಉ.ಭಾ.ನಲ್ಲಿ [4-3-1,3] ನೋಡಬಹುದು.

**೫. ಅಮೃತಮ್: (ಅಮೃತಃ, ಅಮೃತಾ)**

ಅ. ಪ್ರಲಯಕಾಲದಲ್ಲೂ ತಿರೋಧಾನಕ್ಕೆ ಒಳಗಾಗದ ವಿಜ್ಞಾನವನ್ನು ಒಳಗೊಂಡಿರುವ ಪ್ರಯುಕ್ತ ನಿತ್ಯನಂತೆ ಇರುವವನು.24

ಈ ನಾಮದ ಬಗ್ಗೆ ಈಶಾವಾಸ್ಯೋಪನಿಷತ್ತಿನಲ್ಲಿ [1-2-3] ಬೃಹದಾರಣ್ಯಕೋಪನಿಷತ್ತಿನಲ್ಲಿ [7-20-3] ಅಧಿಕ ವಿಚಾರವನ್ನು ನೋಡಬಹುದು.

**೬. ಅಮರ್ತ್ಯ:**

ಅ. ತಿರೋಧಾನಕ್ಕೊಳಗಾಗದ ವಿಜ್ಞಾನವನ್ನು ಹೊಂದಿರುವ ಪ್ರಯುಕ್ತ ನಿತ್ಯನಂತೆ ಇರುವವನು.25

ಈ ನಾಮದ ಕುರಿತಾದ ಅಧಿಕ ವಿಚಾರಕ್ಕಾಗಿ ಐ.ಉ.ಭಾ.ನಲ್ಲಿ [1-6-3,4,5] ಸಂವಾದವಾಗಿ ಉಲ್ಲೇಖಿಸಲಾದ ಋಜ್ಮಂತ್ರವನ್ನು ಪರಿಶೀಲಿಸಬಹುದು.

---

21. (ಸಾಮಾನ್ಯೈಃ) ಅಮೇಯತ್ವಾತ್ ಅಮಃ – *ಭಾವಬೋಧ [ಬೃ.ಉ.ಭಾ. 3-3-22]*

22. ಅಮೋ ನಾಮಾಸಿ ಅಮಾ ಹಿ ತೇ ಸರ್ವಮಿದಂ.... – *[ಛಾಂ.ಉ. 5-1-13]*

23. ಮೂರಂ ಪಾಪಂ ಹಿ ತೇನಾಪ್ತಂ ಮೂರ್ತಮಿತ್ಯಭಿಧೀಯತೇ ।
......ಮೂರ್ತಾದ್ ವಿರುದ್ಧರೂಪತ್ವಾತ್ ಶ್ರೀರ್ವಾಯುಶ್ಚಾಪ್ಯಮೂರ್ತಕೌ ।
– *[ಬೃ.ಉ.ಭಾ. 4-3-1,3]*

24. ಅತಿರೋಹಿತವಿಜ್ಞಾನಾತ್ ವಾಯುರಪ್ಯಮೃತಃ ಸ್ಮೃತಃ ।
– *ರಾಮಸಂಹಿತಾ [ಈ.ಉ.ಭಾ. 1-2-3]*

* ಏವಂ ಪ್ರಳಯಕಾಲೇಽಪಿ ಪ್ರತಿಭಾತಪರಾವರಃ ।
ಮುಖ್ಯವಾಯುರ್ನಿತ್ಯಸಮಃ..... – *ಅನುವ್ಯಾಖ್ಯಾನ [2-3-8]*

25. ಅತಿರೋಹಿತವಿಜ್ಞಾನಾತ್ ಅಮೃತ ಇತಿವತ್ ಅಮರ್ತ್ಯಃ ಇತ್ಯಪಿ ಸ್ಮೃತಃ ।

೭. ಅಸಪತ್ನಃ:

ಅ. (ಸಮಾನಬಲಸಾಮರ್ಥ್ಯಸಂಪನ್ನನಾದ) ಶತ್ರು ಇಲ್ಲದವನು.26

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಬೃ.ಉ.ಭಾ.ನಲ್ಲಿ [3-6-11] ನೋಡಬಹುದು.

೮. ಅಹಃ:

ಅ. ಎಂದೂ ಹೇಯ ಎನಿಸದ ಸ್ವರೂಪ ಉಳ್ಳವನು.

ಆ. ಜ್ಞಾನಸ್ವರೂಪಿ27

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಐ.ಉ.ನಲ್ಲಿ [2-2-7-7] ಸಂವಾದವಾಗಿ ಉದಾಹರಿಸಿರುವ ಋಙ್ಮಂತ್ರದ ಬಗ್ಗೆ ಪರಿಶೀಲಿಸಬೇಕು.

೯. ಅಖಣಾಶ್ಮಸಮಃ:

ಅ. ಭೇದಿಸಲಾಗದ ಕಲ್ಲಿನಂತಿರುವವನು.28

ಈ ನಾಮದ ಕುರಿತಾದ ಅಧಿಕ ವಿಚಾರಕ್ಕಾಗಿ ಛಾಂ.ಉ.ನ್ನು [1-2-1] ಹಾಗೂ ಭಾ.ತಾ.ನಿ.ವನ್ನು [10-22-30] ಪರಿಶೀಲಿಸಬಹುದು.

೧೦. ಆಪಃ:

ಅ. (ರುದ್ರಾದಿಗಳಿಗಿಂತೆಲ್ಲ) ಅಧಿಕವಾಗಿ ಗುಣಪೂರ್ಣನಾಗಿರುವವನು.29

ಆ. ನೀರಿಗೆ ಅಭಿಮಾನಿಯಾಗಿರುವವನು.30

ಈ ನಾಮದ ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [6-2-1] ನೋಡಬಹುದು.

೧೧. ಇಂದ್ರಃ: ಪರಮೈಶ್ವರ್ಯ–ಶ್ರೇಷ್ಠ ಸಾಮರ್ಥ್ಯ ಉಳ್ಳವನು.31

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಐ.ಉ.ನಲ್ಲಿ [2-8-4-9] ಹಾಗೂ ಬೃ.ಉ.ನಲ್ಲಿ [3-6-15] ನೋಡಬಹುದು.

---

26. .....ಅಶತ್ರುಃ ಶತ್ರುವರ್ಜನಾತ್ *–[ಬೃ.ಉ.ಭಾ. 3-6-18]*

27. .....ನಿತ್ಯಾಹೇಯಸ್ವರೂಪತಃ ।
ಅಹರಿತ್ಯುಚ್ಯತೇ ವಾಯುರ್ಜ್ಞಾನಾತ್ಮತ್ವಾತ್ ತಥೈವ ಚ ।
*–ಐತರೇಯಸಂಹಿತಾ [ಐ.ಉ.ಭಾ. 2-2-7-7]*

28. ನ ಖನ್ಯತೇ ಭಿದ್ಯತ ಇತಿ ಅಖಣಃ ।
ಅಖಣ ಏವಾಽಖಣಃ ಅಭೇದ್ಯಃ *–ಬ.ಗೋ. [ಭಾ.ತಾ.ನಿ.ಟಿ. 10-22-30]*
ತಾದೃಶಾಶ್ಮನಾ ಸಮ ಇತಿ ಆಖಣಾಶ್ಮಸಮಃ ।

29. ಆ ಸಮಂತಾತ್ ಪಿಪರ್ತಿ ಗುಣೈರಾತ್ಮಾನಂ ಪೂರಯತೀತಿ ಆಪಃ, ಗುಣಪೂರ್ಣಃ

30. ಪ್ರಾಣೋಽಪ್ಸು ಸ್ಥಿತ ಏವ ಚ *–[ಛಾಂ.ಉ.ಭಾ. 6-2-1]*

31. ಸ ಇಂದ್ರಃ ಪರಮೈಶ್ವರ್ಯಾತ್... *–[ಬೃ.ಉ.ಭಾ. 3-6-18]*

**೧೨. ಈರಃ:** ಪ್ರೇರಿಸುವವನು.32

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಐ.ಉ.ನಲ್ಲಿ [1-1-3] ನೋಡಬಹುದು.

**೧೩. ಈಶಾನಃ:**

ಅ. ಸಮರ್ಥನಾಗಿರುವವನು.33

ಆ. ಸಮರ್ಥರಾದ ರುದ್ರಾದಿಗಳಿಗೆ ಚಟುವಟಿಕೆಯನ್ನು ನೀಡುವವನು.34

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಬ.ಉ.ನಲ್ಲಿ [3-5-5] ನೋಡಬಹುದು.

**೧೪. ಉಕ್ಥಮ್:**

ಅ. ಅಧಿಕಗುಣಸಂಪನ್ನನಾಗಿರುವವನು.35

ಆ. ವಿಶ್ವವನ್ನು ಸೃಷ್ಟಿಸುವವನು.36

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಐ.ಉ.ನಲ್ಲಿ [1-4-3-9] ಹಾಗೂ ಬೃ.ಉ.ನಲ್ಲಿ [7-16-1] ನೋಡಬಹುದು.

**೧೫. ಜ್ಞಾನಮ್:**

ಅ. ಜ್ಞಾನಾಭಿಮಾನಿ.37

ಆ. ಜ್ಞಾನಸ್ವರೂಪಿ.

ಈ ಗುಣನಾಮದ ಬಗ್ಗೆ ಅಧಿಕವಿಚಾರವನ್ನು ಐ.ಉ.ನಲ್ಲಿ [1-1-3] ಹಾಗೂ ಆಥ.ಉ.ನಲ್ಲಿ [3-1-8] ನೋಡಬಹುದು.

**೧೬. ತುರಮ್:**

ಅತ್ಯಂತ ವೇಗವುಳ್ಳವನು.38

---

32. ಈರಯತಿ ಪ್ರೇರಯತೀತಿ 'ಈರಃ'
33. ಈಶಾನೋ ಮಾರುತಃ ಪ್ರಾಣೋ..... ಕಥ್ಯತೇ – *ಶಬ್ದತತ್ತ್ವೇ [ಬೃ.ಉ.ಭಾ. 3-5-5]*
34. ಈಶಾನ್ ಸಮರ್ಥಾನ್ ರುದ್ರಾದೀನಪಿ ಅನಯತಿ ಚೇಷ್ಟಯತೀತಿ ಈಶಾನಃ ।
35. ಉಚ್ಚೈಃ ಸ್ಥಿತತ್ವಾದುಕ್ಥೋಽಭೂದ್ ವಾಯುರೇವ ತತಃ ಪ್ರಭುಃ ।
ಉಚ್ಚತ್ವಂ ಚ ಗುಣಾಧಿಕ್ಯಂ ತ್ವಮುಚ್ಥೋಽಸೀತಿ ತೇಽಬ್ರುವನ್ ।
*– [ಐ.ಉ.ಭಾ. 1-4-3....9]*
36. ಉತ್ಥಾಪನಾದುಕ್ಥನಾಮಾ.....ವಾಯುರೇವ ಜಗತ್ಪತಿಃ *– [ಬೃ.ಉ.ಭಾ. 7-16-1]*
37. ನಾನ್ಯೈರ್ದೇವೈರ್ಹರಿಂ ಪಶ್ಯೆಜ್ಜ್ಞಾನರೂಪೇಣ ವಾಯುನಾ ।
.....ಪ್ರಸನ್ನೇನೈವ ತಂ ಪಶ್ಯೇತ್.... *– [ಆಥ.ಉ.ಭಾ. 3-1-8]*
38. 'ತುರ ತ್ವರಣೇ' ಧಾತುವಿನಿಂದ ನಿಷ್ಪನ್ನ ಶಬ್ದ.

ಋಗ್ವೇದದಲ್ಲಿ ವಾಯುದೇವನನ್ನು 'ತುರಃ' ಎಂದು ಕರೆಯಲಾಗಿದೆ.39

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಛಾ.ಉ.ನಲ್ಲಿ [5-1-14] ನೋಡಬಹುದು.

**೧೭. ತ್ಯಮ್:** ವ್ಯಾಪಿಸಿರುವವನು ಹಾಗೂ ಸರ್ವಜ್ಞನಾಗಿರುವವನು.40

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [4-3-3] ನೋಡಬಹುದು.

**೧೮. ಏಕಋಷಿಃ:** ಮುಖ್ಯ ಜ್ಞಾನಿಯಾಗಿರುವವನು.41

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಷಟ್.ಉ.ನಲ್ಲಿ [2-1-15] ನೋಡಬಹುದು.

**೧೯. ಐಶ್ವರ್ಯಮ್:** ಐಶ್ವರ್ಯ ಎಂದರೆ ಸಾಮರ್ಥ್ಯ –ಈ ಗುಣಕ್ಕೆ ಅಭಿಮಾನಿಯಾಗಿದ್ದು ಈ ಗುಣವೇ ಸ್ವರೂಪವಾಗಿ ಉಳ್ಳವನು.42

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಐ.ಉ.ನಲ್ಲಿ [1-1-3] ನೋಡಬಹುದು.

**೨೦. ಜಾತವೇದಾಃ:** ಹುಟ್ಟಿದ್ದೆಲ್ಲವನ್ನೂ ಬಲ್ಲವನು –ಸರ್ವಜ್ಞ.43

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಷಟ್.ಉ.ನಲ್ಲಿ [1-1-10] ಹಾಗೂ ಐ.ಉ.ನಲ್ಲಿ [2-8-4-8] ನೋಡಬಹುದು.

**೨೧. ದೂಃ:** ಪಾಪರೂಪವಾದ ಮೃತ್ಯು ಯಾರ ದೂರದಲ್ಲಿಯೇ ಇರುವುದೋ ಅಂತಹವನು.44

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [3-3-9] ನೋಡಬಹುದು.

**೨೨. ದೇವಃ:** ಸರ್ವಜ್ಞನು; ಅಂದರೆ ಭಗವಂತನನ್ನು ಬಿಟ್ಟು ಉಳಿದೆಲ್ಲವನ್ನೂ ಆಲೋಚನೆಯನ್ನು ನಡೆಸಿದರೆ ತಿಳಿಯಬಲ್ಲವನು.45

---

39. ....ಸನಸ್ಸಿಪಕ್ತು ಯಸ್ತುರಃ । –*[ಋ.ವೇ. 18-2]*

* ತುರೋ ವೇಗಾದ್ ಹರಿರ್ವಾಯುಃ –*[ಋ.ಭಾ. 18-2]*

40. ತತಂ ಸರ್ವಜ್ಞಂ ಚ ತ್ಯಮ್ –*[ಬೃ.ಉ.ಭಾ. 4-3-3]*

41. ಋಷತಿ ಜಾನಾತೀತಿ ಋಷಿಃ ಜ್ಞಾನೀ, 'ಋಷ ಜ್ಞಾನೇ' –*[ಐ.ಉ.ಭಾ. 2-2-7-6]*
ಏಕಃ ಮುಖ್ಯಃ ತಾದಶಶ್ಚಾಸೌ ಋಷಿಶ್ಚ ಏಕಋಷಿಃ ।

42. ಧರ್ಮೋ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚತುರಾತ್ಮಕಃ ।
ವಾಯುರ್ದೇವೋ.... –*[ಐ.ಉ.ಭಾ. 1-1-3]*

43. ಜಾತಂ ಸರ್ವಂ ವೇತ್ತೀತಿ ಜಾತವೇದಾಃ
–*ತಾತ್ಪರ್ಯನಿರ್ಣಯ [ಐ.ಉ.ಭಾ.ಟಿ. 2-8-4-8]*

44. ಸಾ ವಾ ಏಷಾ ದೇವತಾ ದೂರ್ನಾಮ ದೂರಂ ಹ್ಯಸ್ಯಾ ಮೃತ್ಯುಃ.... –*[ಬೃ.ಉ.3-3-9]*

45. ದೇವೌ ವಿಷ್ಣುಶ್ಚ ವಾಯುಶ್ಚ ಸಾರ್ವಜ್ಞತ್ವಾತ್ ಕ್ರಮೇಣ ತು..... ಪ್ರಕೀರ್ತಿತೌ
–*[ಛಾಂ.ಉ.ಭಾ. 1-3-16]*

* ತದಿತರತ್ರ ಆಲೋಚನೇ ಸರ್ವವಿಷಯಿಕಂ ಋಜುಯೋಗಿಜ್ಞಾನಮ್ ।

**೨೩. ಬಲಮ್:** ಬಲದೇವತಾ[46]

ಭಗವದಿಚ್ಛಾನುಗುಣವಾಗಿ ಮೂಡಿಬಂದ ಸ್ವೇಚ್ಛಾನುಸಾರವಾಗಿ ಕಾರ್ಯಗಳನ್ನು ನಡೆಸುವವನು.[47]

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಛಾ.ಉ.ನಲ್ಲಿ [4-3-1] ನೋಡಬಹುದು.

**೨೪. ಬೃಹತೀ:**

ಅ. ಗುಣಪೂರ್ಣನಾಗಿರುವವನು.[48]

ಆ. ಬೃಹತೀಛಂದಸ್ಸಿನ ಅಭಿಮಾನಿ.[49]

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಐ.ಉ.ನಲ್ಲಿ [1-4-19] ಮತ್ತು [2-2-5-4] ನೋಡಬಹುದು.

**೨೫. ಬ್ರಹ್ಮ:** ರುದ್ರಾದಿದೇವತೆಗಳಲ್ಲಿ ಉಳಿದವರಿಗಿಂತ ಪೂರ್ಣನಾಗಿರುವವನು.[50]

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [4-2-3] ಛಾ.ಉ.ನಲ್ಲಿ [4-3-1] ನೋಡಬಹುದು.

**೨೬. ಮಾತರಿಶ್ವಾ:**

ಅ. ವಿದ್ಯೆಗಳ ವಿಷಯದಲ್ಲಿ ಸಮೃದ್ಧನಾಗಿರುವವನು.[51]

ಆ. ಜಗನ್ನಿರ್ಮಾತೃ ಶ್ರೀಹರಿಯ ವಿಷಯದಲ್ಲಿ ಜ್ಞಾನಿಯಾಗಿರುವವನು.[52]

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಷಟ್.ಉ.ನಲ್ಲಿ [2-1-15] ಹಾಗೂ ಈ.ಉ.ನಲ್ಲಿ [1-4] ನೋಡಬಹುದು.

---

46. ಅಪರಂ ಬ್ರಹ್ಮ ಸ ಪ್ರಾಣಃ ಸಾಕ್ಷಾದ್ ಯೋ ಬಲದೇವತಾ – *[ಛಾಂ.ಉ.ಭಾ. 4-3-1]*

47. .....ಸ್ವೇಚ್ಛಯಾ ಕೃತೇಃ ಬಲಂ..... ವಾಯುರುದಾಹೃತಃ
– *ಭಾರತೇ [ಭಾ.ತಾ.ನಿ. 2-5-25]*

48. ಬೃಹತ್ತ್ವಾದ್ ಬೃಹತೀತ್ಯೇವ ತಯೋರ್ನಾಮ ಪ್ರಕೀರ್ತಿತಮ್ ।
ವಾಯುಕೇಶವಯೋಃ..... – *[ಐ.ಉ.ಭಾ. 2-2-54]*

49. ಅಭಿಮಾನೀ ಬೃಹತ್ಯಾಸ್ತು ವಾಯುರೇವ ಯತಃ ಪ್ರಭುಃ ।
ತಸ್ಮಾದೇಷಾ ಛಂದಸಾಂ ಹಿ ವರಿಷ್ಠಾ ಬೃಹತೀ ಸ್ಮೃತಾ – *[ಐ.ಉ.ಭಾ. 2-2-5-4]*

50. ಪೂರ್ಣೋ ಹಿ ವಾಯುರ್ದೇವಾನಾಂ ತಸ್ಮಾದ್ ಬ್ರಹ್ಮೇತಿ ಚೋಚ್ಯತೇ ।
– *[ಐ.ಉ.ಭಾ. 2-2-5-4]*

51. ಮಾಪಯತಿ ಜ್ಞಾಪಯತೀತಿ ಮಾತಾ ವಿದ್ಯಾ, '....ವಾಚೋ ಮಾ ಮಾತರಃ ಸ್ಮೃತಾಃ' [ಐ.ಉ.ಭಾ.] ಉಪಸಂಹಾರೇ । ತಥಾ ಚ ತದ್ವಿಷಯೇ ಶ್ವಯತಿ ಅಭಿವರ್ಧತೇ ಇತಿ ಮಾತರಿಶ್ವಾ ।

52. ಮಾತರಿ ನಿರ್ಮಾತರಿ ಜಗನ್ನಿರ್ಮಾತೃವಿಷಯೇ ಶ್ವಯತಿ ಅವಗಚ್ಛತೀತಿ ಮಾತರಿಶ್ವಾ । ಸಪ್ತಮ್ಯಾ ಅಲುಕ್ 'ಟು ಓಶ್ವಿ ಗತಿವೃದ್ಧ್ಯೋಃ'

೨೭. **ಮೃತ್ಯುಃ**: ಸಂಹರಿಸುವವನು.53

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಐ.ಉ.ನಲ್ಲಿ [2-3-2-3] ನೋಡಬಹುದು.

೨೮. **ಯಶಃ**: ಜ್ಞಾನಸುಖಾತ್ಮಕನಾಗಿರುವವನು.54

೨೯. **ವರುಣ**:: ವರಿಸಿಕೊಳ್ಳಲು ಅರ್ಹನಾದವನು.55

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಛಾ.ಉ.ನಲ್ಲಿ [1-3-15] ನೋಡಬಹುದು.

೩೦. **ವಿಶ್ವಃ**: ಜೀವಸಮುದಾಯದಲ್ಲೆಲ್ಲ ಅತ್ಯಧಿಕ ಗುಣಪೂರ್ಣನಾದವನು.56

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [6-4-15] ನೋಡಬಹುದು.

೩೧. **ವಿಶ್ವರೂಪಃ**: ಜೀವರಲ್ಲೆಲ್ಲ ಅತ್ಯಧಿಕಪೂರ್ಣವಾದ ಸ್ವರೂಪ ಉಳ್ಳವನು.57

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [4-2-3] ನೋಡಬಹುದು.

೩೨. **ಸಹಸ್ರರಶ್ಮಿಃ**: ಸಾವಿರಾರು ಕಿರಣಗಳನ್ನು ಹೊಂದಿರುವವನು.58

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಷಟ್.ಉ.ನಲ್ಲಿ [2-1-10] ನೋಡಬಹುದು.

೩೩. **ಶುಚಿಃ**:

ಅ. ಪಾಪದ ಸಂಪರ್ಕವಿಲ್ಲದ ಪ್ರಯುಕ್ತ ಶುದ್ಧನಾಗಿರುವವನು.59

ಆ. ಚೆನ್ನಾಗಿ ಪ್ರಕಾಶಿಸುವವನು.60

೩೪. **ಶ್ರೇಷ್ಠಃ**: ರುದ್ರಾದಿದೇವತೆಗಳಿಗಿಂತೆಲ್ಲ ಗುಣಗಳಿಂದ ಉತ್ತಮನಾಗಿರುವವನು.61

---

53. ಮೃತ್ಯುರಪಾನೋ ಭೂತ್ವಾ ನಾಭಿಂ ಪ್ರಾವಿಶತ್ – *[ಐ.ಉ. 2-3-2-3]*
54. ಯಶೋ ಜ್ಞಾನಸುಖಾತ್ಮಕಾಃ – *[ಬೃ.ಉ.ಭಾ. 4-2-3]*
55. ವರುಣೌ ವರಣೀಯತ್ವಾತ್....ಕ್ರಮಾದೇವ ಪ್ರಕೀರ್ತಿತೌ – *[ಛಾಂ.ಉ.ಭಾ. 1-3-11]*
56. ವಿಶ್ವೋ ವಾಯುಃ ಸಮುದ್ದಿಷ್ಟಃ ಪೂರ್ಣತ್ವಾಜ್ಜೀವಸಂಘತಃ । – *[ಬೃ.ಉ.ಭಾ. 6-4-15]*
57. ತಸ್ಮಿನ್ ಯಶೋ ನಿಹಿತಂ ವಿಶ್ವರೂಪಮಿತಿ ಪ್ರಾಣಾ ವೈ ಯಶೋ ವಿಶ್ವರೂಪಮ್ । – *[ಬೃ.ಉ.ಭಾ. 4-2-3]*
58. ತದೇತದೃಚಾಽಭ್ಯುಕ್ತಮ್.....ಸಹಸ್ರರಶ್ಮಿಃ..... ಉದಯತ್ಯೇಷ ಸೂರ್ಯಃ – *[ಷ.ಉ. 2-1-10]*
59. 'ಹಂಸಃ ಶುಚಿಷದ್....' – *[ಕಾ.ಉ. 2-2-2]*

* .....ವಾಯುಸ್ಥಃ ಶುಚಿಷನ್ಮತಃ – ಮಹಾಕೌರ್ಮ *[ಕಾ.ಉ.ಭಾ.]*

60. 'ತಥಾಪಿ ಶೋಚಿಸ್ಯಾತ್ಮಾನಂ.... ಎಂಬ ಭಾಗವತದ ಮಾತಿನಲ್ಲಿ [1-5-4] ಪ್ರಕಾಶ ಎಂಬ ಅರ್ಥದಲ್ಲಿ ಶುಚಿಧಾತುವನ್ನು ಪ್ರಯೋಗಿಸಲಾಗಿದೆ. ಆದುದರಿಂದ ಶೋಚತಿ ಪ್ರಕಾಶತೇ ಇತಿ ಶುಚಿಃ –ಎಂದು ಅರ್ಥೈಸಬಹುದು.
61. ಪ್ರಾಣೋ ವೈ ಜ್ಯೇಷ್ಠಶ್ಚ ಶ್ರೇಷ್ಠಶ್ಚ... – *[ಬೃ.ಉ. 8-1-1]*

'ಶ್ರೇಷ್ಠಶ್ಚ' [2-4-9] ಎಂಬ ಬ್ರಹ್ಮಸೂತ್ರದಲ್ಲಿ ಜಗದ್ಗುರು ಶ್ರೀವೇದವ್ಯಾಸರಿಂದ ಶ್ರೇಷ್ಠ ಶಬ್ದದಿಂದಲೇ ಉಲೇಖಿಸಲ್ಪಟ್ಟು ಅನುಗೃಹೀತರಾದವ ಮುಖ್ಯಪ್ರಾಣದೇವ.

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಛಾ.ಉ.ನಲ್ಲಿ [5-1-1] ಹಾಗೂ ಬೃ.ಉ.ನಲ್ಲಿ [8-1-1] ನೋಡಬಹುದು.

**೨೫. ಸತ್:** ಯಾವಾಗಲೂ ಶೇಷ, ಗರುಡ, ರುದ್ರರಿಗಿಂತ ಉತ್ತಮನಾಗಿಯೇ ಇರುವವನು.62

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಐ.ಉ.ನಲ್ಲಿ [1-4-13]ನೋಡಬಹುದು.

**೨೬. ಸತ್ಯಮ್:**

ಅ. ಸಕಲಸಾಧುಗುಣಗಳಿಂದ ಪರಿಪೂರ್ಣನಾಗಿರುವವನು.63

ಆ. ಸತ್ಯನಿಷ್ಠೆಗೆ ಅಭಿಮಾನಿಯಾಗಿರುವವನು.64

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಐ.ಉ.ನಲ್ಲಿ [2-2-7-2] ನೋಡಬಹುದು.

**೨೭. ಸೋಮಃ:**

ಅ. ಆನಂದಾನುಭವದಿಂದ ಕೂಡಿರುವಿಕೆಯೇ ಸೌಮ್ಯಗುಣ ಎನಿಸಿದ್ದು ಅಥವಾ ಅಕ್ರೌರ್ಯವೇ ಸೌಮ್ಯಗುಣ ಎನಿಸಿದ್ದು,65 ಅಂತಹ ಗುಣಸ್ವರೂಪಿಯಾಗಿರು ವವನು.

ಆ. ಉತ್ಕೃಷ್ಟವಾದ ಭಗವದ್‌ಜ್ಞಾನದಿಂದ ಯಾವಾಗಲೂ ಕೂಡಿರುವವನು.66

**೨೮. ಹಾಯಿಕಾರಃ:** ಆಶ್ಚರ್ಯ ರೀತಿಯಿಂದ ಬರುವವನು ಅಥವಾ ಸುಖವನ್ನು ಉಂಟುಮಾಡುವವನು ಎಂಬುದಕ್ಕಾಗಿ 'ಹಾಯಿ' ಎಂದು ಕರೆಯಲ್ಪಡುವವನು.67

---

62. ಶೇಷವೀಂದ್ರಶಿವಾದಿಭ್ಯ ಉತ್ತಮತ್ವಾತ್ ಸದೈವ ಹಿ ।
ವಾಯುಃ ಸದಿತಿ ಸಂಪ್ರೋಕ್ತೋ.... *–[ಐ.ಉ.ಭಾ. 1-4-13]*

63. ಸರ್ವಸಾಧುಗುಣತ್ವಾತ್ತು ವಾಯುಃ ಸತ್ಯ ಇತೀರ್ಯತೇ *–[ಐ.ಉ.ಭಾ. 2-2-7-2]*

64. ....ಧರ್ಮಾಭಿಮಾನೀ ಸ ವಾಯುಃ ಸತ್ಯಾಭಿಮಾನವಾನ್.... ವಾಯುರ್ದೇವೋ ಯತಸ್ತಯೋಃ *– ನಾರದೀಯೇ [ಬೃ.ಉ.ಭಾ.]*

65. ಆನಂದಾನುಭವಸ್ಸೂಮ ಉತ್ಕೃಷ್ಟಾನುಭವಾತ್ ಸ್ಮೃತಃ ।
ತದ್ಯುಕ್ತತ್ವಂ ತಥಾ ಸೌಮ್ಯಂ ಗುಣಾನಾಮಧಿಕಂ ಹಿ ತತ್ ।
*–[ಭಾ.ತಾ.ನಿ. 11-16-10]*
ಸೌಮ್ಯತ್ವಮಕ್ರೌರ್ಯಂ..... *–[ಋ.ಭಾ. 23-18-4]*
ಏತಾದೃಶಸೌಮ್ಯಸ್ವರೂಪತ್ವಾತ್ ಸೋಮಃ ।

66. ಉತ್ಕೃಷ್ಟಾ-ಶ್ರೇಷ್ಠಾ ಮಾ-ಜ್ಞಾನಂ ಭಗವದ್-ಜ್ಞಾನಮ್ ।
ತತ್ ಸಹಿತತ್ವಾತ್ ಸೋಮಃ ।

67. ಹೇತ್ಯಾಶ್ಚರ್ಯವದಾಯಾತಿ ಹೇತಿ ವಾ ಸುಖಕೃತ್ತ್ವತಃ ।
ಹಾಯಿಕಾರಸ್ತತೋ ವಾಯುಃ.... *–[ಛಾಂ.ಉ.ಭಾ. 1-3-17]*

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಛಾ.ಉ.ನಲ್ಲಿ [1-3-17] ನೋಡಬಹುದು.

**೩೯. ಹಸ್ಕಾರಃ:**

ಅ. ದೋಷಗಳನ್ನೆಲ್ಲ ತ್ಯಜಿಸಿರುವವನು. ಎಲ್ಲ ಗುಣಗಳನ್ನೂ ಹೊಂದಿರುವವನು.[68]

ಆ. ವಾಯುದೇವ-ಭಾರತೀಯರಿಂದ ದೇವತೆಗಳೆಲ್ಲ ಹುಟ್ಟಿದರೆಂದು ಋಗ್ವೇದದ ಮಂತ್ರವೊಂದು ತಿಳಿಸುವಾಗ ವಾಯುದೇವನನ್ನು 'ಹಸ್ಕಾರ' ಎಂಬ ಹೆಸರಿನಿಂದ ಉಲ್ಲೇಖಿಸಿದೆ.[69]

ದೋಷಗಳನ್ನೆಲ್ಲ ತ್ಯಜಿಸಿರುವುದರಿಂದಲೂ ಗುಣಗಳನ್ನೆಲ್ಲ ಹೊಂದಿರುವುದರಿಂದಲೂ ವಾಯುದೇವ 'ಹಸ್ಕಾರ' ಎನಿಸುವನೆಂದು ಶ್ರೀ ಮಧ್ವರು ವ್ಯಾಖ್ಯಾನಿಸಿರುವರು.[70]

**೪೦. ಗಿರಿಃ:**

ಅ. ಕಾಲಕೂಟ ವಿಷವನ್ನು ಕಬಳಿಸಿದವನು.[71]

ಆ. ದೈತ್ಯರೆಂಬ ಪಾಪವನ್ನು ಕಬಳಿಸಿದವನು.

ಇ. 'ಆಖಣಾಶ್ಮಸಮ' ಎನಿಸಿರುವ ವಾಯುದೇವ ಆಸುರೀಶಕ್ತಿಗಳ ವಿರುದ್ಧ ಬಂಡೆಯಂತೆ ಇರುವುದರಿಂದಲೂ 'ಗಿರಿ' ಎನಿಸುವನು.

ಸತೀದೇವಿ ಶಾಪ ಕೊಡುವಾಗ ವೇದವಚನವನ್ನು ವಾಯುದೇವನ ಸುತೆಯನ್ನಾಗಿ ತಿಳಿಸುತ್ತ ವಾಯುದೇವನನ್ನು 'ಗಿರಿ' ಎಂದು ಕರೆದಿರುವಳು.[72] ಶ್ರೀ ಮಧ್ವರು ವಾಮನದ ಮೂಲಕ 'ಗಿರಿ' ಎಂದರೆ ಪ್ರಾಣದೇವರೆಂದು ಸ್ಪಷ್ಟಪಡಿಸಿರುವರು.[73]

**೪೧. ಯಯಿಃ:** ಯಾವಾಗಲೂ ಸಂಚರಿಸುತ್ತ ಇರುವವನು.[74]

ಸ್ತೋಭಾಕ್ಷರಗಳಲ್ಲಿ ದೇವತೋಪಾಸನೆಯನ್ನು ತಿಳಿಸುತ್ತ ಅನ್ನ ಎನಿಸುವ ಭಾರತೀದೇವಿ 'ಯಾಯಾ' ಎನಿಸುವಳೆಂದು ನಿರೂಪಿಸುವಾಗ[75] ವಾಯುದೇವನು ನಿತ್ಯ ಸಂಚರಿಸು

---

68. ಜಹಾತಿ ತ್ಯಜತಿ ದೋಷಾನಿತಿ ಹಃ ।
ಸ್ವೇನ ಸಹ ಕರೋತಿ ಗುಣಾನಿತಿ ಸ್ಕಾರಃ ।
ಹಶ್ಚಾಸೌ ಸ್ಕಾರಶ್ಚ ಹಸ್ಕಾರಃ । *–[ಋ.ಟೀ.]*

69. ಹಸ್ಕಾರಾದ್ವಿದ್ಯುತಸ್ಪರ್ಯತೋ ಜಾತಾ ಅವಂತು ನಃ *–[ಋ.ವೇ. 23-12]*

70. ದೋಷತ್ಯಾಗಾತ್ ಗುಣಪ್ರಾಪ್ತೇರ್ಹಸ್ಕಾರೋ ವಾಯುರುಚ್ಯತೇ । *–[ಋ.ಭಾ.]*

71. ಕಾಲಕೂಟನಿಗರಣಾತ್ ದೈತ್ಯಾಖ್ಯಪಾಪನಿಗರಣಾಚ್ಚ ಗಿರಿರ್ಮುಖ್ಯಪ್ರಾಣಃ ।
– ವಿಜಯಧ್ವಜೀಯ

72. ಗಿರೇಃ ಸುತಾಯಾಃ..... *–[ಭಾಗ. 4-2-24]*

73. ಗಿರಿಃ ಪ್ರಾಣಃ ಸಮುದ್ದಿಷ್ಟಸ್ತತ್ಸುತಾ ವೇದವಾಕ್ ಸ್ಮೃತಾವಾಮನೇ*[ಭಾ.ತಾ.ನಿ. 4-2-24]*

74. ಸರ್ವದಾ ಗಮನಶೀಲತ್ವಾತ್ ಯಯಿಃ ।

75. .....ಅನ್ನಂ ಯಾಯಾ.... *–[ಛಾಂ.ಉ. 1-3-17]*

ವುದರಿಂದ ಯಯಿ ಎನಿಸಿ, ಅಂತಹವನ ಅಧೀನಳಾಗಿರುವುದರಿಂದ ಭಾರತೀದೇವಿ ಯಾಯಾ ಎನಿಸುವಳೆಂದು ಸ್ಪಷ್ಟಪಡಿಸಲಾಗಿದೆ.76

**೪೨. ಮಧ್ಯಮಃ:**

ಅ. ಜನನಮರಣಗಳ ಮಧ್ಯದ ಅವಸ್ಥೆಯಲ್ಲಿ ಇರುವವನು. 77

ಆ. ದುಃಖಸಂಬಂಧವಿದ್ದು ಅವರ ಎನಿಸುವ ಜೀವರಿಗಿಂತ ಮೇಲೆ ಇದ್ದು ನಿತ್ಯ ನಿರ್ದುಃಖಳಾಗಿ ಪರಾ ಎನಿಸುವ ಲಕ್ಷ್ಮೀದೇವಿಯಂತೆ ನಿರ್ದುಃಖನಾಗಿರದೆ, ದುಃಖವಿದ್ದರೂ ಅದರ ಪೀಡೆಗೆ ಒಳಗಾಗದೆ ಇರುವವನು.79

ಪ್ರಾಣದೇವನು ಹುಟ್ಟುವುದಿಲ್ಲ; ಸಾಯುವುದಿಲ್ಲ. ಪ್ರಧಾನನಾಗಿ ಹುಟ್ಟುಸಾವುಗಳ ಮಧ್ಯದ ಅವಸ್ಥೆಯಲ್ಲಿ ಇರುವವನು. ಆದುದರಿಂದ ಇವನನ್ನು 'ಮಧ್ಯಮ' ಎನ್ನುವರು.78

**೪೩. ಮುಖ್ಯಪ್ರಾಣಃ:** ಕರ್ತೃಪ್ರಯೋಜ್ಯತ್ವರೂಪವಾದ ಕರಣತ್ವ ಇಲ್ಲದ ಪ್ರಯುಕ್ತ ಪ್ರಧಾನ ಎನಿಸುವ ಪ್ರಾಣನು.80

ಚಕ್ಷುರಾದಿ ಇಂದ್ರಿಯಗಳೆಲ್ಲ ಕರಣಗಳು. ಅಂದರೆ ಕರ್ತೃಪ್ರಯೋಜ್ಯತ್ವರೂಪವಾದ ಕರಣತ್ವವನ್ನು ಹೊಂದಿರುವವು. ಆದರೆ ವಾಯುದೇವನಲ್ಲಿ ಕರ್ತೃಪ್ರಯೋಜ್ಯತ್ವರೂಪವಾದ ಕರಣತ್ವ ಇಲ್ಲ. ಆದುದರಿಂದ ಅವನು 'ಮುಖ್ಯಪ್ರಾಣ' ಎನಿಸುವವನೆಂದು ಮಾಂಡವ್ಯಶ್ರುತಿ ಸಾರುತ್ತಿದೆ.81 ಚಟುವಟಿಕೆ, ಹೊರಗಿನ ಗಾಳಿ ಹಾಗೂ ಮುಖ್ಯಪ್ರಾಣ –ಈ ಮೂವರಲ್ಲೂ ಪ್ರಾಣ ಶಬ್ದವು ಪ್ರಯೋಗಿಸಲ್ಪಡುವುದಾದರೂ ಪ್ರಧಾನನಾದ ವಾಯುದೇವನಲ್ಲಿ ಮುಖ್ಯವಾಗಿ ಹೇಳಲ್ಪಡುವುದು.82

---

76. ಯಯಿರ್ನಿತ್ಯಗತೇರ್ವಾಯುಃ ತದ್ಗಾ ಯಾಯಾ ಸರಸ್ವತೀ ।
– *ಮಾಹಾತ್ಮ್ಯೇ [ಛಾಂ.ಉ.ಭಾ.]*

77. ಮಧ್ಯೇ ಜನನಮರಣಯೋರ್ಮಧ್ಯಾವಸ್ಥಾಯಾಂ ಸ್ಥಾತಾ ಮಧ್ಯಮಃ ।

78. ನೈಷ ಪ್ರಾಣ ಉದೇತಿ ನಾಸ್ತಮೇತ್ಯೇಕಲ ಏವ ಮಧ್ಯೇ ಸ್ಥಾತಾ ।
ಅಥೈನಮಾಹುರ್ಮಧ್ಯಮ ಇತಿ – *ಶ್ರುತಿಃ [ಬ್ರ.ಸೂ.ಭಾ. 2-4-9]*

79. ಅವರಾ ದುಃಖಸಂಬಂಧಾಜ್ಜೀವಾ ಏವ ಪ್ರಕೀರ್ತಿತಾಃ ।
ನಿತ್ಯನಿರ್ದುಃಖರೂಪಾತ್ವಾತ್ ಪರಾ ಶ್ರೀಕಲೈವ ತು ।
ದುಃಖಾಸಂಪೀಡಿತತ್ವಾತ್ತು ಮಧ್ಯಮೋ ವಾಯುರುಚ್ಯತೇ । – *[ಗೀ.ತಾ. 7-7]*

80. ಕರ್ತೃಪ್ರಯೋಜ್ಯತ್ವರೂಪಸ್ಯ ಕರಣತ್ವಸ್ಯ ಅಭಾವಾತ್ ವಾಯುದೇವಃ ಮುಖ್ಯಪ್ರಾಣಃ ।

81. ತಾನಿ ಹ ವಾ ಏತಾನಿ ಸರ್ವಾಣಿ ಕರಣಾನ್ಯಥ ಪ್ರಾಣ ಏವಾಕರಣಸ್ತಸ್ಮಾನ್ಮುಖ್ಯಸ್ತಸ್ಮಾನ್ಮುಖ್ಯ ಇತ್ಯಾಚಕ್ಷತೇ – *ಮಾಂಡವ್ಯಶ್ರುತಿ [ಬ್ರ.ಸೂ.ಭಾ. 2-4-12]*

82. ಚೇಷ್ಟಾಯಾಂ ಬಾಹ್ಯವಾಯೌ ಚ ಮುಖ್ಯಪ್ರಾಣೇ ಚ ಗೀಯತೇ ।
ಪ್ರಾಣಶಬ್ದಸ್ತ್ರಿಷು ಹ್ಯೇಷು ಮುಖೇ ಮುಖ್ಯಃ ಪ್ರಕೀರ್ತಿತಃ ।
– *[ಬ್ರ.ಸೂ.ಭಾ. 2-4-10]*

**೪೪. ಭೂಯಾನ್:** ರುದ್ರಾದಿಗಳಿಗಿಂತೆಲ್ಲ ಉತ್ತಮನಾದವನು.

ಪ್ರಾಣನು ರುದ್ರಾದಿಗಳಿಗಿಂತೆಲ್ಲ ಉತ್ತಮನಾದವನು. ಪ್ರಾಣನೇ ಉತ್ತಮ; ಪ್ರಾಣನಿಗಿಂತ ಉತ್ತಮನಾದವನು ಮತ್ತೊಬ್ಬನಿಲ್ಲ. ಆದುದರಿಂದ ಭೂಯಾನ್ –ರುದ್ರಾದಿಗಳಿಗಿಂತ ಉತ್ತಮನಾದವನೆಂದೇ ಪ್ರಸಿದ್ಧನಾಗಿರುವನು.83

**೪೫. ಕಾಲಃ:**

ಅ. ರುದ್ರನ ಸಂಹಾರಕನು.84

ಆ. ಎಲ್ಲವನ್ನೂ ಬಲ್ಲವನು.85

ಇ. ಶತ್ರುಗಳನ್ನು ದೂರ ಓಡಿಸುವವನು.86

ಈ. ಸಕಲಸದ್ಗುಣಗಳಿಂದ ಸಂಬಂಧನಾಗಿರುವವನು.87

ಉ. ಜಗತ್ತನ್ನು ಪರಸ್ಪರವಾಗಿ ಸಂಯೋಜಿಸುವವನು.88

ಯಮದೇವನು ಮನುಷ್ಯರಿಗೆ ಸಂಹಾರಕನಾಗಿದ್ದು ಕಾಲ ಎನಿಸಿದರೆ, ಅಂತಹ ಯಮನಿಗೆ ಸಂಹಾರಕನಾಗಿದ್ದು ಕಾಲ ಎನಿಸಿರುವವನು ಸುದರ್ಶನ; ಸುದರ್ಶನಚಕ್ರಕ್ಕೆ ಅವಾಂತರ ಅಭಿಮಾನಿಯಾದ ಕಾಮ; ಅವನಿಗೂ ಸಂಹಾರಕನಾಗಿ ಕಾಲ ಎನಿಸಿರುವವನು ರುದ್ರ ಆದರೆ, ರುದ್ರನಿಗೂ ಸಂಹಾರಕನಾಗಿ ಕಾಲ ಎನಿಸಿರುವವನು ಚತುರ್ಮುಖಬ್ರಹ್ಮ ಎಂಬ ಪ್ರಮಾಣದಿಂದ89 ಚತುರ್ಮುಖನ ಸಮಾನ ಪದವಿಯ ವಾಯುದೇವನೂ ರುದ್ರನಿಗೆ ಕಾಲ ಎಂದು ಸಿದ್ಧಿಸುವುದು.

ಕಾಲ ಶಬ್ದವಾಚ್ಯರನ್ನು ಕ್ರಮವಾಗಿ ಹೆಸರಿಸಹೊರಟ 'ಉದಾರಸಂಹಿತೆ' ನಾಲ್ಕನೆಯ ಕಾಲಶಬ್ದವಾಚ್ಯನನ್ನಾಗಿ ವಾಯುದೇವನನ್ನು ಹೆಸರಿಸಿದೆ.90

---

83. ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್ ನಹಿ ಪ್ರಾಣಾದ್ ಭೂಯಾನ್
ಪ್ರಾಣೋ ಹ್ಯೇವ ಭೂಯಾಂಸ್ತಸ್ಮಾದ್ ಭೂಯಾನ್ ನಾಮ.....
*– –ಕೌಂಠರವ್ಯಶ್ರುತಿ [ಬ್ರ.ಸೂ.ಭಾ. 3-3-35]*

84. ಕಲಯತಿ ರುದ್ರಂ ಭಿನತ್ತೀತಿ ಕಾಲಃ, 'ಕಲ ಚ್ಛೇದನೇ'

85. ಕಲಯತಿ ಸರ್ವಂ ಜಾನಾತೀನಿ ಕಾಲಃ, 'ಕಲ ಜ್ಞಾನೇ'

86. ಕಲಯತಿ ಶತ್ರೂನ್ ವಿದ್ರಾವಯತೀತಿ ಕಾಲಃ, 'ಕಲ ವಿದ್ರಾವಣೇ'

87. ಸರ್ವಾನ್ ಗುಣಾನ್ ಆತ್ಮನಿ ಬಧ್ನಾತೀತಿ ಕಾಲಃ, 'ಕಲ ಬಂಧನೇ'

88. ಸರ್ವಂ ಜಗತ್ ಸಂಕಲಯತೀತಿ ಕಾಲಃ, 'ಕಲ ಬಂಧನೇ'

89. ಯಮಃ ಕಾಲೋ ಮನುಷ್ಯಾಣಾಂ ತಸ್ಯ ಕಾಲಃ ಸುದರ್ಶನಃ ।
ಕಸ್ಯಾಪಿ ರುದ್ರಸ್ತತ್ಕಾಲೋ ಬ್ರಹ್ಮಾ..... *– [ಭಾ.ತಾ.ನಿ. 3-12-38]*

90. ಪರಿಶ್ಚ ಪ್ರಕೃತಿಶ್ಚೈವ ಬ್ರಹ್ಮವಾಯೂ ತಥೈವ ಚ.... ಕಾಲಶಬ್ದೋದಿತಾಃ ಕ್ರಮಾತ್ ।
*– ಉದಾರಸಂಹಿತಾ [ಭಾ.ತಾ.ನಿ. 2-2-18]*

**೪೭. ಓಜಃ:** ಮತ್ತೊಬ್ಬನನ್ನು ಮಣಿಸುವ ಶಕ್ತಿ ಉಳ್ಳವನು; ಹಾಗೂ ತನ್ನ ಉಪಾಸಕರಿಗೆ ಆ ಶಕ್ತಿಯನ್ನು ನೀಡುವವನು.

**೪೭. ಸಹಃ:** ಮತ್ತೊಬ್ಬರಿಂದ ಸೋಲದ ಸಾಮರ್ಥ್ಯವುಳ್ಳವನು ಹಾಗೂ ತನ್ನ ಉಪಾಸಕರಿಗೆ ಆಸಾಮರ್ಥ್ಯವನ್ನು ನೀಡುವವನು.

ಅ. ಋಗ್ವೇದ ವಾಯುದೇವನನ್ನು 'ಸಹಃ' ಎಂಬ ನಾಮದಿಂದ ಕರೆದಿದೆ.92

**೪೮. ವಿಧೃತಿಃ:** ವಿಶೇಷವಾಗಿ ಧಾರಕನಾಗಿರುವವನು.

ಮಹಾಭಾರತ ವಾಯುದೇವನನ್ನು ಆಯಾ ಸಾಮರ್ಥ್ಯ ಇರುವ ಪ್ರಯುಕ್ತ ಈ ಹೆಸರುಗಳಿಂದ ಕರೆದಿದೆ.91

**೪೯. ಶವಃ:**

ಅ. ಸುಖಸ್ವರೂಪಿ93

ಆ. ಸುಖಜ್ಞಾನಸ್ವರೂಪಿ.94

ಋಗ್ವೇದ ಅಗ್ನಿಯನ್ನು ವಾಯುದೇವನ ಸೂನು ಎಂದು ನಿರೂಪಿಸುವಾಗ ವಾಯುದೇವನನ್ನು 'ಶವಃ' ಶಬ್ದದಿಂದ ಕರೆದಿದೆ.95

**೫೦. ಮನುಃ:** ವಿಶಿಷ್ಟವಾದ ಬೋಧವುಳ್ಳವನು.96

---

91. '......ಅಭಿಭವಶಕ್ತಿತಃ । ಓಜಸ್ತನಭಿಭಾವ್ಯತ್ವಾತ್ ಸಹಶ್ಚ..... ವಿಧಾರಕತ್ವಾಚ್ಚ ವಿಧೃತಿರ್ವಾಯುರುಚ್ಯತೇ – *ಭಾರತೇ [ಭಾ.ತಾ.ನಿ. 2-5-25]*
 * ಅಭಿಭವಶಕ್ತಿಪ್ರದತ್ವಾದೋಜ ಇತಿ ।
 * ಅನಭಿಭವಶಕ್ತಿದತ್ವಾತ್ ಸಹ ಇತಿ । – *–ಅನಂತತೀರ್ಥಾಃ ।*
92. ....ಚನೋಧಾಸಹಸೋ ಯಹೋ.... – *[ಋ.ವೇ. 26-10]*
 * ವಾಯೋಃ ಪುತ್ರೋsಗ್ನಿರೇವ ಚೇತ್... – *[ಋ.ಭಾ.]*
 * ....ಜನಾಸೋ ಅಗ್ನಿಂ ದಧಿರೇ ಸಹೋವೃಧಂ... – *[ಋ.ವೇ. 36-2]*
 * ಇಲ್ಲಿಯ 'ಸಹೋವೃಧಂ' ಎಂಬ ವಿಶೇಷಣವನ್ನು ಅಗ್ನಿಗೆ ಅನ್ವಯಿಸಿ, ವಾಯುದೇವ ಅಗ್ನಿಯನ್ನು ವೃದ್ಧಿಗೊಳಿಸುವವನೆಂದಿದ್ದರೆ, ಭಗವಂತನಿಗೆ ಅನ್ವಯಿಸಿ ಭಗವಂತನಿಂದ ಅಭಿವೃದ್ಧಿ ಪಡೆಯುವನೆಂದು ಶ್ರೀ ಮಧ್ವರು ವ್ಯಾಖ್ಯಾನಿಸಿರುವರು– '...ಸಹಸಾ ವಾಯುನೇಧಿತಮ್..... ವಿಷ್ಣುರ್ವಾಯೋರಪಿ ವಿವೃದ್ಧಿಕೃತ್ [ಋ.ಭಾ.36-58]
93. '....ಶವಸಾ ಕ್ರಂತ ಸೂರಯಃ' -ಎಂಬ ಬಳಿತ್ಥಾಸೂಕ್ತದಲ್ಲಿ 'ಶವಸ್' ಶಬ್ದವನ್ನು ಸುಖ ಎಂಬ ಅರ್ಥದಲ್ಲಿ ಪ್ರಯೋಗಿಸಲಾಗಿದೆ.
94. ' ಸುಖಮ್, ವರಿತಿ ಜ್ಞಾನಮುಚ್ಯತೇ' -ಸುಖಜ್ಞಾನಾತ್ಮಕತ್ವಾತ್ ಶವಃ ಇತಿ ।
95. ಸ ಘಾನಸ್ಸೂನುಶ್ಶವಸಾ.... – *[ಋ.ವೇ. 27-2]*
 * ಸೂನುಃ ಸ ಶವಸೋ ವಾಯೋಃ.... – *[ಋಗ್ಭಾಷ್ಯ]*
96. ವಿಶಿಷ್ಟಬೋಧಾನ್ಮನವೇ ವಾಯವೇ.... – *[ಋ.ಭಾ. 31-189]*

ಅಗ್ನಿನಾಮಕ ಭಗವಂತನು ವಾಯುದೇವನಿಗೆ ದ್ಯುಲೋಕಾದಿಗಳನ್ನು ನೀಡಿರುವ ನೆಂದು ನಿರೂಪಿಸುವಾಗ ಋಗ್ವೇದದಲ್ಲಿ ವಾಯುದೇವನನ್ನು ವಿಶಿಷ್ಟಬೋಧವುಳ್ಳವನೆಂಬ ಅಭಿಪ್ರಾಯದಲ್ಲಿ 'ಮನು' ಎಂದೇ ಕರೆಯಲಾಗಿದೆ.97

'ಯದ್ವೈ ಕಿಂ ಚ ಮನುರವದತ್ ತದ್ಭೇಷಜಮ್' –ಎಂದು ತೈತ್ತಿರೀಯಸಂಹಿತೆ [2-2-102]ಯಲ್ಲಿ ವಾಯುದೇವನನ್ನು ಮನು ಶಬ್ದದಿಂದಲೇ ಕರೆದು ಅವನ ಉಪದೇಶ ಸಂಸಾರರೋಗಕ್ಕೆ ಔಷಧ ಎಂದು ಸಾರಲಾಗಿದೆ.

**೫೧. ಪುರೂರವಾಃ:** ಭಗವಂತನನ್ನು ಸಾರುವ ಪ್ರಯುಕ್ತ ಉತ್ಕೃಷ್ಟ ಎನಿಸಿರುವ ಶಬ್ದವನ್ನು ಹೊರಡಿಸುವವನು.98

ಅಗ್ನಿನಾಮಕ ಭಗವಂತನು ವಾಯುದೇವನಿಗೆ ದ್ಯುಲೋಕಾದಿಗಳನ್ನು ನೀಡಿರುವ ನೆಂದು ನಿರೂಪಿಸುವಾಗ ಋಗ್ವೇದದಲ್ಲಿ 'ವಾಯುದೇವನನ್ನು' ಉತ್ಕೃಷ್ಟ ಶಬ್ದವುಳ್ಳವನೆಂಬ ಅಭಿಪ್ರಾಯದಲ್ಲಿ 'ಪುರೂರವಾಃ' ಎಂದು ಕರೆಯಲಾಗಿದೆ.99

**೫೨. ಸುಕೃತ್:** ಚೆನ್ನಾಗಿ ಕರ್ಮಗಳನ್ನು ಮಾಡುವವನು.

ಅಗ್ನಿನಾಮಕ ಭಗವಂತನನ್ನು 'ಸುಕೃತ್ತರ' –ಒಳ್ಳೆಯ ರೀತಿಯಿಂದ ಕೆಲಸ ಮಾಡುವವ ರಲ್ಲಿ ಶ್ರೇಷ್ಠನಾಗಿರುವವನೆಂದು ಕರೆದು, ಅಂತಹ ನೀನು ವಾಯುದೇವನಿಗೆ ದ್ಯುಲೋಕಾದಿ ಗಳನ್ನು ಕೊಟ್ಟಿರುವಿ ಎಂದು ನಿರೂಪಿಸುವಾಗ ವಾಯುದೇವನನ್ನು 'ಸುಕೃತ್' ಎಂದು ಕರೆಯಲಾಗಿದೆ.100

**೫೩. ಶರ್ಧಃ:** ಸುಖ ಹಾಗೂ ಬಲಗಳಿಂದ ಕೂಡಿದವನು.101

ಋಗ್ವೇದದಲ್ಲಿ ಕಣ್ವರಲ್ಲಿ ಗಾನಮಾಡಲು ಹೇಳಿದ ವಾಯುವನ್ನು 'ಶರ್ಧಃ' –ಎಂಬ ವಿಶೇಷಣದಿಂದ ಸುಖ ಮತ್ತು ಬಲದಿಂದ ಕೂಡಿದವನೆಂಬುದನ್ನು ನಿರೂಪಿಸಲಾಗಿದೆ.102

**೫೪. ಅನರ್ವಾಣಃ:** ಯಾರ ಇಂದ್ರಿಯಗಳಿಗೆ ಅಭಿಮಾನಿದೇವತೆಗಳು ಇಲ್ಲದ ಪ್ರಯುಕ್ತ ಇಂದ್ರಿಯಗಳೇ ಇಲ್ಲದಂತೆ ಇರುವನೋ ಅಂತಹವನು.103

---

97. ತ್ವಮಗ್ನೇ ಮನವೇ ದ್ಯಾಂ... –*[ಋ.ವೇ. 31-4]*

98. ಪುರೂರವಾ ವಾಯುರೇವೋರುಶಬ್ದಾತ್.... –*[ಋ.ಭಾ. 31-189]*

99. ತ್ವಮಗ್ನೇ ಮನವೇ ದ್ಯಾಮವಾಶಯಃ ಪುರೂರವಸೇ... –*[ಋ.ವೇ. 31-4]*

100. ತ್ವಮಗ್ನೇ ಮನವೇ.... ಸುಕೃತೇ ಸುಕೃತ್ತರಃ –*[ಋ.ವೇ. 31-4]*

101. ಸುಖಾಢ್ಯಂ ಬಲಾಢ್ಯಂ ಚ । 'ಶರ್ಧಃ ಬಾಧಃ....' ಇತಿ ಬಲನಾಮಾಸು ನಿಘಂಟುಃ । ಶಂ ಸುಖಮ್ । ತೇನರ್ಧಃ ಶರ್ಧಃ ಸುಖಾಢ್ಯಃ –*[ಬ.ಗೋ.]*

102. ಕ್ರೀಳಂ ವಶ್ಯರ್ಧೋ ಮಾರುತಮನರ್ವಾಣಂ.... –*[ಋ.ವೇ. 27-1]*

* ಕ್ರೀಡಾಶೀಲಂ ಚ ಮಾರುತವಮ್ । ಶರ್ಧಃ ಸುಖಬಲಾಢ್ಯಂ ಚ... –*[ಋ.ಭಾ.37-82]*

103. ...ಅನರ್ವಾಣಮನಿಂದ್ರಿಯಮ್ । ನ ವಾಯೋರಿಂದ್ರಿಯಾಣಾಂ ಹಿ ದೇವಾಃ ಸಂತ್ಯಭಿಮಾನಿನಃ । ಅತೋಽನಿಂದ್ರಿಯತಾ ತಸ್ಯ.... –*[ಋಗ್ಭಾಷ್ಯ 37-83]*

ಋಗ್ವೇದದಲ್ಲಿ ಕಣ್ವರಲ್ಲಿ ಗಾನ ಮಾಡಲು ಹೇಳಿದ ವಾಯುವನ್ನು 'ಅನರ್ವಾಣಂ' -ಎಂಬ ವಿಶೇಷಣದಿಂದ ಇಂದ್ರಿಯಾಭಿಮಾನಿದೇವತೆಗಳಿಲ್ಲದ ಪ್ರಯುಕ್ತ ಇಂದ್ರಿಯಗಳೇ ಇಲ್ಲದವನಂತೆ ಎಂದು ಸ್ತುತಿಸಲಾಗಿದೆ.104

**೫೫. ಅಘ್ನ್ಯಃ:** ಹಿಂಸಿಸಲು ಅಯೋಗ್ಯನಾದವನು.105

ವೇದರೂಪವಾದ ಗೋವಿನಲ್ಲಿ ಕ್ರೀಡಿಸುವ ಎತ್ತಿನ ರೂಪಕವನ್ನು ವಾಯುದೇವನಿಗೆ ನೀಡಿದ ಋಗ್ವೇದ, ಅಂತಹ ಎತ್ತು 'ಅಘ್ನ್ಯ' -ಹೊಡೆಯಲು, ಹಿಂಸಿಸಲು ಅಯೋಗ್ಯ ವಾದುದೆಂದು ಸಂದೇಶಿಸಿದೆ.106

**೫೬. ಮಾರುತಃ:** ವೇದಗಳಿಂದ ಅಮುಖ್ಯವಾಗಿ ಸ್ತುತನಾಗುವವನು.107

ಶಬ್ದತತ್ತ್ವ ವಾಯುದೇವನ ಹೆಸರುಗಳನ್ನು ಸಂಗ್ರಹಿಸುವಾಗ ಮಾರುತನಾಮವನ್ನೂ ಉಲ್ಲೇಖಿಸಿದೆ.108

ಅ. ಸಂಸಾರಾವಸ್ಥೆಗೊಳಗಾಗಿ ಅಳುವ ಪ್ರಸಂಗವು ಯಾರಿಂದಾಗಿ ಇಲ್ಲ ಎಂದಾಗು ವುದೋ ಅವನೇ ಮಾರುತ.109

ಲಕ್ಷ್ಮೀದೇವಿ ವಾಯುದೇವನನ್ನು 'ದಿಕ್' ಎನಿಸುವ ಭಗವಂತನ ಬಾಹುಗಳ ಪುತ್ರ ಎಂದು ಉಪಾಸನೆ ಮಾಡಿದ್ದರ ಫಲವಾಗಿ ತಾನು ನಿತ್ಯಮುಕ್ತಳಾಗಿದ್ದು ಸಂಸಾರಾವಸ್ಥೆ ಗೊಳಗಾಗಿ ಅಳುವುದನ್ನೂ ಕಳೆದುಕೊಂಡಿರುವೆನೆಂದು ಸಾರಿರುವಳು.110

---

104. ಕ್ರೀಳಂ ವಶ್ಯರ್ಧೋ ಮಾರುತಮನರ್ವಾಣಂ.... – *[ಋ.ವೇ. 37-1]*

105. ಅಹಂತವ್ಯತ್ವತಸ್ತ್ವಘ್ನ್ಯಂ ವಾಯುಂ ವೃಷಭರೂಪಿಣಮ್.... – *[ಋ.ಭಾ. 37-89]*

106. ಪ್ರಶಂಸಾ ಗೋಷ್ವಘ್ನ್ಯಂ ಕ್ರೀಳಂ ಯಚ್ಛರ್ಧೋ ಮಾರುತಮ್ – *[ಋ.ವೇ. 37-5]*

107. 'ಮಾಭಿರ್ವೇದ್ಯೈಃ ಸ್ತುತತ್ತ್ವೇನ ಮಾರುತೋ ವಿಷ್ಣುರೇವ ವಾ' -ಎಂದು ಋಗ್ಭಾಷ್ಯದಲ್ಲಿ [37-90] ವೇದಗಳಿಂದ ಸ್ತುತನಾಗಿರುವ ಪ್ರಯುಕ್ತ ಶ್ರೀವಿಷ್ಣು ಮಾರುತನಾಮ ವಾಚ್ಯ ನೆಂದು ತಿಳಿಸಿರುವಂತೆ ಅಮುಖ್ಯವಾಗಿ ವೇದವಾಚ್ಯನಾಗಿರುವುದರಿಂದ ವಾಯುದೇವನೂ 'ಮಾರುತ' ಎನಿಸಬಲ್ಲ.

108. ಈಶಾನೋ ಮಾರುತಃ ಪ್ರಾಣೋ.... ಇತಿ ಕಥ್ಯತೇ – *ಶಬ್ದತತ್ತ್ವ [ಬೃ.ಉ.ಭಾ. 3-5-5]*

109. '....ರುದಂತಂ ಸಪ್ತಧೈಕೈಕಂ ಮಾ ರೋದೀರಿತಿ ತಾನ್ ಪುನಃ' -ಎಂದು ಭಾಗವತ ನಿರೂಪಿಸುವಂತೆ [6-18-62] ಮರುತ್ ದೇವತೆಗಳು ಆ ಹೆಸರನ್ನು ಪಡೆಯುವಲ್ಲಿ ಹೇಗೆ ರೋದನಾಭಾವವು ಪ್ರವೃತ್ತಿನಿಮಿತ್ತವಾಗಿ ಸೂಚಿತವಾಗಿದೆಯೋ ಅಂತೆಯೇ ವಾಯುದೇವ 'ಮಾರುತ' ಎನಿಸುವಲ್ಲೂ ರೋದನಾಭಾವ -ಅಳುವಿಕೆಯ ದೂರೀಕರಣ ಪ್ರವೃತ್ತಿ ನಿಮಿತ್ತವಾಗಬಲ್ಲದು.

110. .......ಸೋಽಹಮೇತಮೇವಂ ವಾಯುಂ ದಿಶಾಂವತ್ಸಂ ವೇದ ಮಾ ಪುತ್ರರೋದಂ ರುದಂ..... – *[ಛಾಂ.3-3-2]*

* ವಾಯುಂ ಹರೇಃ ಸುತಂ ಜ್ಞಾತ್ವಾ ನಾಹಂ ಪುತ್ರತಯಾಽರುದಮ್ ।
ಹರೇಃ ಪ್ರಸಾದಸಾಮರ್ಥ್ಯಾದಜರಾಮರಾ ಹ್ಯಹಮ್ ॥ – *[ಛಾಂ.ಉ.ಭಾ.]*

**೫೭. ಜಿಷ್ಣುಃ:** ಜಯಿಸುವ ಸ್ವಭಾವದವನು.[111]

'ತಿಷ್ಟಪ್ಯೇವಾವತಾರೇಷು.....' ಎಂಬ ವಾಯುಸ್ತುತಿಯ ಶ್ಲೋಕದಲ್ಲಿ ತಿಳಿಸಿರುವಂತೆ, 'ತ್ರಾತಾ ಯಸ್ಯ ತ್ರಿಧಾಮಾ' –ಮೂರು ಲೋಕಗಳಲ್ಲೂ ಮೂರುಕಾಲಗಳಲ್ಲೂ ನೆಲೆಸಿದ್ದು 'ತ್ರಿಧಾಮಾ' ಎನಿಸಿರುವ ಭಗವಂತನೇ ವಾಯುದೇವನಿಗೆ ರಕ್ಷಕನಾಗಿ ಇರುವುದರಿಂದ ವಾಯುದೇವ ಯಾವ ಕಾಲದಲ್ಲೂ, ಯಾವ ದೇಶದಲ್ಲೂ, ಯಾವ ವ್ಯಕ್ತಿಯಿಂದಲೂ ಸೋಲುವ ಸಾಧ್ಯತೆಯೇ ಇಲ್ಲ.

ವಾಯುದೇವನ ಹೆಸರುಗಳ ಸಂಗ್ರಹಣೆಗೆ ಹೊರಟ 'ಶಬ್ದತತ್ವ' ಅವನನ್ನು 'ಜಿಷ್ಣು' ಎಂದೂ ಕರೆದಿದೆ.[112]

**೫೮. ಬ್ರಹ್ಮಾ:** ಗುಣಗಳಿಂದ ಸಮೃದ್ಧನಾಗಿರುವವನು.[113]

ಚತುರ್ಮುಖನು 'ಬ್ರಹ್ಮಾ' –ಎಂದು ಕರೆಸಿಕೊಳ್ಳುವವನಾದರೂ ಹಿರಣ್ಯಗರ್ಭನ ರೂಪಗಳನ್ನು ಸಂಗ್ರಹಿಸಹೊರಟ 'ಪೈಂಗಿಶ್ರುತಿ' ಹಿಂದೆ ಆಗಿಹೋದ ಹಿರಣ್ಯಗರ್ಭದಂತೆ, ಈಗ ಇರುವ ಹಿರಣ್ಯಗರ್ಭನಂತೆ, ಮುಂದೆ ಬರಲಿರುವ ಹಿರಣ್ಯಗರ್ಭರೂ ಹೊಂದಿರುವ ರೂಪಗಳೆಂದು ನಿರೂಪಿಸಿ, ಪ್ರಸ್ತುತಪಡಿಸಿರುವ ರೂಪಗಳಲ್ಲಿ ಒಂದು ಬ್ರಹ್ಮಾ ಎಂದ ಮೇಲೆ 'ಬ್ರಹ್ಮಾ' ಎಂಬ ನಾಮಕರೂಪವೂ, ಆ ಹೆಸರೂ 'ಭಾವಿ'[114] ಹಿರಣ್ಯಗರ್ಭನಾದ ವಾಯುದೇವನಿಗೂ ಸೇರಿದೆ ಎಂದು ತಿಳಿದುಬರುವುದು.

**೫೯. ಸ್ಥಿತಿಃ:** ಭಗವಂತನು ಮೆಚ್ಚುವಂತೆ ಧಾರ್ಮಿಕವಾಗಿ, ಆಧ್ಯಾತ್ಮಿಕವಾಗಿ ಇರುವಿಕೆಗೆ ಅಭಿಮಾನಿಯಾಗಿರುವವನು.

ಪೈಂಗಿಶ್ರುತಿ ಭಾವಿ ಬ್ರಹ್ಮನ ರೂಪಗಳಲ್ಲಿ ಒಂದಾಗಿ 'ಸ್ಥಿತಿ'ಯನ್ನೂ ಪರಿಗಣಿಸಿದ್ದರೆ,[115] ವಾಯುದೇವನ ಹತ್ತುಗುಣಗಳಲ್ಲಿ ಒಂದಾಗಿ 'ಸ್ಥಿತಿ' ಉಲ್ಲೇಖಗೊಂಡಿದೆ.[116]

---

111. 'ಜೀ ಜಯೇ' ಧಾತುವಿನ ಮೇಲೆ ತಾಚ್ಛೀಲ್ಯಾರ್ಥಕಷ್ಣುಪ್ರತ್ಯಯವನ್ನು ವಿಧಿಸಿದಲ್ಲಿ ಜಿಷ್ಣು ಎಂಬ ಶಬ್ದವು ನಿಷ್ಪನ್ನವಾಗುವುದು.

112. ಈಶಾನೋ ಮಾರುತಃ ಪ್ರಾಣೋ ವಾಯುರ್ಜಿಷ್ಣುಸ್ತಥೈವ ಚ....
*– ಶಬ್ದತತ್ವೇ [ಬೃ.ಉ.ಭಾ. 3-5-5]*

113. ಬೃಂಹತಿ ಸಮೃದ್ಧೋ ಭವತೀತಿ ಬ್ರಹ್ಮಾ । 'ಬೃಹ ವೃದ್ಧೌ'

114. ಪ್ರಾಣಃ ಸೂತ್ರಂ ಮಹಾನ್ ಬ್ರಹ್ಮಾ.... ಇತ್ಯಾದಿ ರೂಪಿಣಃ ।
ಹಿರಣ್ಯಗರ್ಭಾ ಯೇಽತೀತಾ ಯೇ ಭಾವ್ಯಾ ಯಶ್ಚ ವರ್ತತೇ.....
*– ಪೈಂಗಿಶ್ರುತಿ [ಬೃ.ಉ.ಭಾ. 3-5-4]*

115. ...ಸ್ಥಿತಿ ಯೋಗಶ್ಚ ವೈರಾಗ್ಯಂ... ಇತ್ಯಾದಿ ಬಹುರೂಪಿಣಃ ।
ಹಿರಣ್ಯಗರ್ಭಾಃ.... ಯೇ ಭಾವ್ಯಾಃ.... *– ಪೈಂಗಿಶ್ರುತಿ [ಬೃ.ಉ.ಭಾ. 3-5-3]*

116. ಭಕ್ತಿರ್ಜ್ಞಾನಂ ಸವೈರಾಗ್ಯಂ ಪ್ರಜ್ಞಾ ಮೇಧಾ ಧೃತಿಃ ಸ್ಥಿತಿಃ.... ವೃಕೋದರ ಇತಿ ಸ್ಮೃತಃ ।
ಏತಾದೃಶಾತ್ಮಕೋ ವಾಯುಃ.... *– [ಮ.ಭಾ.ತಾ.ನಿ. 2-142]*

**೬೦. ಯೋಗಃ:** ಮೋಕ್ಷೋಪಾಯಕ್ಕೆ ಅಭಿಮಾನಿಯಾಗಿರುವವನು.117

ಪೈಂಗಿಶ್ರುತಿ ಭಾವ್ಯಬ್ರಹ್ಮನ ರೂಪಗಳಲ್ಲಿ ಯೋಗವನ್ನೂ ಒಂದನ್ನಾಗಿ ಉಲ್ಲೇಖಿಸಿದೆ.118 ವಾಯುದೇವನ ಹತ್ತು ಗುಣಗಳಲ್ಲಿ ಯೋಗ ಎಂಬುದೂ ಒಂದು.119

**೬೧. ವೈರಾಗ್ಯಂ:** ಸ್ತ್ರೀ ಮುಂತಾದ ವಿಷಯಪದಾರ್ಥಗಳಲ್ಲಿಯ ಅನಾಸಕ್ತಿ ವೈರಾಗ್ಯ ಎನಿಸಿದ್ದು ಇದಕ್ಕೆ ಅಭಿಮಾನಿಯಾಗಿರುವವನು.

**೬೨. ಪ್ರಜ್ಞಾ:** ಹೇಳಿದ್ದನ್ನು ಚೆನ್ನಾಗಿ ಗ್ರಹಣ ಮಾಡುವ ಸಾಮರ್ಥ್ಯ ಪ್ರಜ್ಞಾ ಎನಿಸಿದ್ದು ಇದಕ್ಕೆ ಅಭಿಮಾನಿಯಾಗಿರುವವನು.

**೬೩. ಮೇಧಾ:** ಹೇಳಿದ್ದನ್ನು ಮನಸ್ಸಿನಲ್ಲಿ ಧರಿಸಿಕೊಳ್ಳುವ ಸಾಮರ್ಥ್ಯ ಮೇಧಾ ಎನಿಸಿದ್ದು ಇದಕ್ಕೆ ಅಭಿಮಾನಿಯಾಗಿರುವವನು.120

ಪೈಂಗಿಶ್ರುತಿ ಹಾಗೂ ಮ.ಭಾ.ತಾ.ನಿರ್ಣಯೋದಾಹೃತಪ್ರಮಾಣ –ಇವೆರಡೂ ಮೇಲಿನ ಮೂರು ಗುಣಗಳನ್ನೂ ಭಾವಿಬ್ರಹ್ಮನ–ವಾಯುದೇವನ ರೂಪಗಳನ್ನಾಗಿ ಪರಿಗಣಿಸಿವೆ.121

**೬೪. ಸ್ಮೃತಿಃ:** ಸದ್ವಿಷಯಗಳ ಸ್ಮರಣೆಗೆ ಅಭಿಮಾನಿ.

**೬೫. ಸುಖಂ:** ವಿಷಯಪದಾರ್ಥಗಳ ಅನುಭವದಿಂದ ಬರುವ ಸುಖಕ್ಕೆ ಅಭಿಮಾನಿ.

**೬೬. ಮುಕ್ತಿಃ:** ಸಂಸಾರಬಂಧನದಿಂದ ಬಿಡುಗಡೆಗೆ ಅಭಿಮಾನಿ.

**೬೭. ವಿಷ್ಣುಭಕ್ತಿಃ:** ಭಗವಂತನ ಕುರಿತಾದ ಭಕ್ತಿಗೆ ಅಭಿಮಾನಿ.

---

117. ಮೋಕ್ಷೋಪಾಯೋ ಯೋಗ ಇತಿ.... – *ಆಗ್ನೇಯ [ಗೀ.ತಾ. 5-6]*

118. .....ಸ್ಥಿತಿರ್ಯೋಗಶ್ಚ ವೈರಾಗ್ಯಂ..... ಇತ್ಯಾದಿ ಬಹುರೂಪಿಣಃ ।
ಹಿರಣ್ಯಗರ್ಭಾಃ..... ಯೇ ಭಾವ್ಯಾಃ..... – *ಪೈಂಗಿಶ್ರುತಿ [ಬೃ.ಉ.ಭಾ. 3-5-3]*

119. ....ಯೋಗಃ ಪ್ರಾಣೋ..... ವೃಕೋದರ ಇತಿ ಸ್ಮೃತಃ ।
ಏತಾದೃಶಾತ್ಮಕೋ ವಾಯುಃ... – *[ಮ.ಭಾ.ತಾ.ನಿ. 2-142]*

120. ವೈರಾಗ್ಯ, ಪ್ರಜ್ಞಾ ಹಾಗೂ ಮೇಧಾ –ಈ ಮೂರು ಗುಣಗಳಿಗೂ ಅಭಿಮಾನಿಯಾಗಿರುವವನು ವಾಯುದೇವ. 'ಅಭಿಮಾನಿವ್ಯಪದೇಶಸ್ತು....' –ಎಂಬ ಬ್ರಹ್ಮಸೂತ್ರ [2-1-6] ಅಭಿಮಾನಕ್ಕೆ ಗೋಚರವಾದ ವಸ್ತುವಿನ ಹೆಸರು ಮುಖ್ಯವಾಗಿ ಆಯಾ ಅಭಿಮಾನಿಗೆ ಸಂಬಂಧಿಸುವುದೆಂದು ಮಾಡಿರುವ ಸಿದ್ಧಾಂತಕ್ಕನುಗುಣವಾಗಿ ಗುಣಗಳ ಹೆಸರು ವಾಯುದೇವನ ಹೆಸರೆಂದೇ ಪರಿಗಣಿತವಾಗಿದೆ.

121. ವೈರಾಗ್ಯಂ....ಪ್ರಜ್ಞಾ.....ಮೇಧಾ..... ಇತ್ಯಾದಿ ಬಹುರೂಪಿಣಃ ।
ಹಿರಣ್ಯಗರ್ಭಾಃ ....ಯೇ ಭಾವ್ಯಾಃ....

* .....ಸವೈರಾಗ್ಯಂ.....ಪ್ರಜ್ಞಾ ಮೇಧಾ..... ವೃಕೋದರ ಇತಿ ಸ್ಮೃತಃ ।
ಏತಾದೃಶಾತ್ಮಕೋ ವಾಯುಃ.... – *[ಮ.ಭಾ.ತಾ.ನಿ. 2-143]*

ಸ್ಮೃತ್ಯಾದಿಗಳಿಗೆ ಭಾವಿಬ್ರಹ್ಮ ಅಭಿಮಾನಿಯಾಗಿರುವುದರಿಂದ ಆಯಾ ಗುಣ ಮೌಲ್ಯಗಳಿಗೆ ಅಭಿಮಾನಿಯಾಗಿರುವ ಭಾವಿಬ್ರಹ್ಮನಿಗೆ–ವಾಯುದೇವನಿಗೆ ಸಂಬಂಧಿಸುವ ರೂಪಗಳು ಅವುಗಳೆಂದು ಪೈಂಗಿಶ್ರುತಿ ನಿರೂಪಿಸಿದೆ.122

೭೮. **ಋಜುಃ:** ಮನಸ್ಸು–ಮಾತು–ದೇಹ –ಈ ತ್ರಿಕರಣಗಳಲ್ಲೂ ನೇರವಾದ ನಡತೆಯುಳ್ಳವನು.123

ಆಡುಭಾಷೆಯಲ್ಲಿ ಪ್ರಾಮಾಣಿಕತೆ ಎಂದು ವ್ಯವಹರಿಸಲ್ಪಡುವ ಮೌಲ್ಯವು ಸಂಸ್ಕೃತದಲ್ಲಿ 'ಆರ್ಜವ' ಎನಿಸಿದ್ದು ಪರಶುಕ್ಲತ್ರಯ ಸಮುದಾಯಕ್ಕೆ ಸೇರಿದ ವಾಯುದೇವ ಅಂತಹ ಆರ್ಜವವನ್ನು ಪೂರ್ಣಪ್ರಮಾಣದಲ್ಲಿ ಹೊಂದಿರುವವನಾದುದರಿಂದ 'ಋಜು' ಎನಿಸುವನು.

೭೯. **ಸುಮಾನಃ:** ದೇವತೆಗಳ ಸಭೆಗಳಲ್ಲಿ ಒಳ್ಳೆಯ ಗೌರವಕ್ಕೆ ಪಾತ್ರನಾಗಿರುವವನು.

ವಾಯುಸ್ತುತಿಯ 'ಪೀಠೇ ರತ್ನೋಪಕ್ಲಪ್ತೇ....... ಮುಂತಾದ ಶ್ಲೋಕಗಳಲ್ಲಿ ನಿರೂಪಿತವಾಗಿರುವಂತೆ ವಾಯುದೇವನು ದೇವತಾಸಭೆಗಳಲ್ಲಿ ಚೆನ್ನಾಗಿ ಗೌರವಿಸಲ್ಪಡುವವನು. ಆದುದರಿಂದ ಅವನು 'ಸುಮಾನ' ಎನಿಸುವನು.

೮೦. **ವಿಜ್ಞಾತಾ:** ಪರಾಪರತತ್ವಗಳನ್ನು ವಿಶೇಷವಾಗಿ ತಿಳಿದುಕೊಂಡಿರುವವನು. ಪರಮಾತ್ಮನ ವಿಷಯದಲ್ಲಿ ಇತರ ಜೀವರಿಗಿಂತ ಅಧಿಕವಾಗಿ ವಿಷಯೀಕರಿಸುವ, ಜಗತ್ತಿನ ವಿಷಯದಲ್ಲಿ ಆಲೋಚಿಸಿದಾಗ ಸರ್ವವನ್ನೂ ವಿಷಯೀಕರಿಸುವ ಜ್ಞಾನ ಋಜುಯೋಗಿಗಳ ಜ್ಞಾನವಾಗಿರುವುದರಿಂದ124 ಇತರ ಜೀವರಿಗಿಂತ ವಿಶೇಷವಾಗಿ ತಿಳಿಯುವವರು ಋಜುಯೋಗಿಗಳಾದ ವಾಯುದೇವರೆಂದು 'ವಿಜ್ಞಾತಾ' ಎಂಬ ಹೆಸರಿನ ಒಂದು ರೂಪ ಅವರದ್ದಾಗಿದೆ.

೮೧. **ಮಹಾಧ್ಯಾತಾ:** ಶ್ರೇಷ್ಠಚಿಂತಕ ಎನಿಸಿರುವವನು.

---

122. ....ಸ್ಮೃತಿಃ ಸುಖಮ್ । ಮೇಧಾ ಮುಕ್ತಿರ್ವಿಷ್ಣುಭಕ್ತಿಃ.... ಇತ್ಯಾದಿ ಬಹುರೂಪಿಣಃ ।
ಹಿರಣ್ಯಗರ್ಭಾಃ.... ಯೇ ಭಾವ್ಯಾಃ.... – *ಪೈಂಗಿಶ್ರುತಿ [ಬ್ರ.ಸೂ.ಭಾ.]*

* 'ಸುಖಂ ಸ್ವರೂಪಭೂತಂ ಯದಾನಂದ ಇತಿ ಕಥ್ಯತೇ....' ಎಂದಿರುವಂತೆ [ಬೃ.ಉ.ಭಾ. 6-3-10] ಸ್ವರೂಪಸುಖ ಆನಂದ ಎನಿಸುತ್ತಿದ್ದು, ಅಂತಹ ಆನಂದವನ್ನು ಮುಂದೆ ಪ್ರತ್ಯೇಕವಾಗಿ ಉಲ್ಲೇಖಿಸುವುದರಿಂದ 'ಸುಖ' ಶಬ್ದಕ್ಕೆ ಇಂದ್ರಿಯಭೋಗಜನ್ಯಸುಖ ಎಂಬ ಅರ್ಥ ಸಿದ್ಧಿಸುವುದು.

123. ಋಜುಃ ಸುಮಾನೋ ವಿಜ್ಞಾತಾ ಮಹಾಧ್ಯಾತಾ.... ಹನೂಮಾನ್ ಭೀಮ.... ಇತ್ಯಾದಿ ಬಹುರೂಪಿಣಃ । ಹಿರಣ್ಯಗರ್ಭಾಃ.... ಯೇ ಭಾವ್ಯಾಃ.....
– *ಪೈಂಗಿಶ್ರುತಿ [ಬೃ.ಉ.ಭಾ. 3-5-8]*

124. ......ಋಜೂನಾಮನಾದಿನಿತ್ಯಮೀಶೇ ಚ ।
ಅನ್ಯೇಭ್ಯೋಽಧಿಕಮನ್ಯತ್ರಾಲೋಚನೇ ಸರ್ವವಿಷಯಮ್ ॥ – *ಪ್ರಮಾಣಲಕ್ಷಣಮ್*

**೬೦. ಯೋಗಃ:** ಮೋಕ್ಷೋಪಾಯಕ್ಕೆ ಅಭಿಮಾನಿಯಾಗಿರುವವನು.117

ಪೈಂಗಿಶ್ರುತಿ ಭಾವ್ಯಬ್ರಹ್ಮನ ರೂಪಗಳಲ್ಲಿ ಯೋಗವನ್ನೂ ಒಂದನ್ನಾಗಿ ಉಲ್ಲೇಖಿಸಿದೆ.118 ವಾಯುದೇವನ ಹತ್ತು ಗುಣಗಳಲ್ಲಿ ಯೋಗ ಎಂಬುದೂ ಒಂದು.119

**೬೧. ವೈರಾಗ್ಯಂ:** ಸ್ತ್ರೀ ಮುಂತಾದ ವಿಷಯಪದಾರ್ಥಗಳಲ್ಲಿಯ ಅನಾಸಕ್ತಿ ವೈರಾಗ್ಯ ಎನಿಸಿದ್ದು ಇದಕ್ಕೆ ಅಭಿಮಾನಿಯಾಗಿರುವವನು.

**೬೨. ಪ್ರಜ್ಞಾ:** ಹೇಳಿದ್ದನ್ನು ಚೆನ್ನಾಗಿ ಗ್ರಹಣ ಮಾಡುವ ಸಾಮರ್ಥ್ಯ ಪ್ರಜ್ಞಾ ಎನಿಸಿದ್ದು ಇದಕ್ಕೆ ಅಭಿಮಾನಿಯಾಗಿರುವವನು.

**೬೩. ಮೇಧಾ:** ಹೇಳಿದ್ದನ್ನು ಮನಸ್ಸಿನಲ್ಲಿ ಧರಿಸಿಕೊಳ್ಳುವ ಸಾಮರ್ಥ್ಯ ಮೇಧಾ ಎನಿಸಿದ್ದು ಇದಕ್ಕೆ ಅಭಿಮಾನಿಯಾಗಿರುವವನು.120

ಪೈಂಗಿಶ್ರುತಿ ಹಾಗೂ ಮ.ಭಾ.ತಾ.ನಿರ್ಣಯೋದಾಹೃತಪ್ರಮಾಣ –ಇವೆರಡೂ ಮೇಲಿನ ಮೂರು ಗುಣಗಳನ್ನೂ ಭಾವಿಬ್ರಹ್ಮನ–ವಾಯುದೇವನ ರೂಪಗಳನ್ನಾಗಿ ಪರಿಗಣಿಸಿವೆ.121

**೬೪. ಸ್ಮೃತಿಃ:** ಸದ್ವಿಷಯಗಳ ಸ್ಮರಣೆಗೆ ಅಭಿಮಾನಿ.

**೬೫. ಸುಖಂ:** ವಿಷಯಪದಾರ್ಥಗಳ ಅನುಭವದಿಂದ ಬರುವ ಸುಖಕ್ಕೆ ಅಭಿಮಾನಿ.

**೬೬. ಮುಕ್ತಿಃ:** ಸಂಸಾರಬಂಧನದಿಂದ ಬಿಡುಗಡೆಗೆ ಅಭಿಮಾನಿ.

**೬೭. ವಿಷ್ಣುಭಕ್ತಿಃ:** ಭಗವಂತನ ಕುರಿತಾದ ಭಕ್ತಿಗೆ ಅಭಿಮಾನಿ.

---

117. ಮೋಕ್ಷೋಪಾಯೋ ಯೋಗ ಇತಿ.... – *ಆಗ್ನೇಯ [ಗೀ.ತಾ. 5-6]*

118. .....ಸ್ಥಿತಿರ್ಯೋಗಶ್ಚ ವೈರಾಗ್ಯಂ..... ಇತ್ಯಾದಿ ಬಹುರೂಪಿಣಃ ।
ಹಿರಣ್ಯಗರ್ಭಾಃ..... ಯೇ ಭಾವ್ಯಾಃ..... – *ಪೈಂಗಿಶ್ರುತಿ [ಬೃ.ಉ.ಭಾ. 3-5-3]*

119. ....ಯೋಗಃ ಪ್ರಾಣೋ..... ವೃಕೋದರ ಇತಿ ಸ್ಮೃತಃ ।
ಏತಾದೃಶಾತ್ಮಕೋ ವಾಯುಃ... – *[ಮ.ಭಾ.ತಾ.ನಿ. 2-142]*

120. ವೈರಾಗ್ಯ, ಪ್ರಜ್ಞಾ ಹಾಗೂ ಮೇಧಾ -ಈ ಮೂರು ಗುಣಗಳಿಗೂ ಅಭಿಮಾನಿಯಾಗಿರುವವನು ವಾಯುದೇವ. 'ಅಭಿಮಾನಿವ್ಯಪದೇಶಸ್ತು....' -ಎಂಬ ಬ್ರಹ್ಮಸೂತ್ರ [2-1-6] ಅಭಿಮಾನಕ್ಕೆ ಗೋಚರವಾದ ವಸ್ತುವಿನ ಹೆಸರು ಮುಖ್ಯವಾಗಿ ಆಯಾ ಅಭಿಮಾನಿಗೆ ಸಂಬಂಧಿಸುವುದೆಂದು ಮಾಡಿರುವ ಸಿದ್ಧಾಂತಕ್ಕನುಗುಣವಾಗಿ ಗುಣಗಳ ಹೆಸರು ವಾಯುದೇವನ ಹೆಸರೆಂದೇ ಪರಿಗಣಿತವಾಗಿದೆ.

121. ವೈರಾಗ್ಯಂ....ಪ್ರಜ್ಞಾ.....ಮೇಧಾ..... ಇತ್ಯಾದಿ ಬಹುರೂಪಿಣಃ ।
ಹಿರಣ್ಯಗರ್ಭಾಃ ....ಯೇ ಭಾವ್ಯಾಃ....

* .....ಸವೈರಾಗ್ಯಂ.....ಪ್ರಜ್ಞಾ ಮೇಧಾ..... ವೃಕೋದರ ಇತಿ ಸ್ಮೃತಃ ।
ಏತಾದೃಶಾತ್ಮಕೋ ವಾಯುಃ.... – *[ಮ.ಭಾ.ತಾ.ನಿ. 2-143]*

ಸ್ಮೃತ್ಯಾದಿಗಳಿಗೆ ಭಾವಿಬ್ರಹ್ಮ ಅಭಿಮಾನಿಯಾಗಿರುವುದರಿಂದ ಆಯಾ ಗುಣ ಮೌಲ್ಯಗಳಿಗೆ ಅಭಿಮಾನಿಯಾಗಿರುವ ಭಾವಿಬ್ರಹ್ಮನಿಗೆ–ವಾಯುದೇವನಿಗೆ ಸಂಬಂಧಿಸುವ ರೂಪಗಳು ಅವುಗಳೆಂದು ಪೈಂಗಿಶ್ರುತಿ ನಿರೂಪಿಸಿದೆ.122

**೬೮. ಋಜುಃ:** ಮನಸ್ಸು–ಮಾತು–ದೇಹ –ಈ ತ್ರಿಕರಣಗಳಲ್ಲೂ ನೇರವಾದ ನಡತೆಯುಳ್ಳವನು.123

ಆಡುಭಾಷೆಯಲ್ಲಿ ಪ್ರಾಮಾಣಿಕತೆ ಎಂದು ವ್ಯವಹರಿಸಲ್ಪಡುವ ಮೌಲ್ಯವು ಸಂಸ್ಕೃತದಲ್ಲಿ 'ಆರ್ಜವ' ಎನಿಸಿದ್ದು ಪರಶುಕ್ಲತ್ರಯ ಸಮುದಾಯಕ್ಕೆ ಸೇರಿದ ವಾಯುದೇವ ಅಂತಹ ಆರ್ಜವವನ್ನು ಪೂರ್ಣಪ್ರಮಾಣದಲ್ಲಿ ಹೊಂದಿರುವವನಾದುದರಿಂದ 'ಋಜು' ಎನಿಸುವನು.

**೬೯. ಸುಮಾನಃ:** ದೇವತೆಗಳ ಸಭೆಗಳಲ್ಲಿ ಒಳ್ಳೆಯ ಗೌರವಕ್ಕೆ ಪಾತ್ರನಾಗಿರುವವನು.

ವಾಯುಸ್ತುತಿಯ 'ಪೀಠೇ ರತ್ನೋಪಕ್ಲಪ್ತೇ....... ಮುಂತಾದ ಶ್ಲೋಕಗಳಲ್ಲಿ ನಿರೂಪಿತವಾಗಿರುವಂತೆ ವಾಯುದೇವನು ದೇವತಾಸಭೆಗಳಲ್ಲಿ ಚೆನ್ನಾಗಿ ಗೌರವಿಸಲ್ಪಡುವವನು. ಆದುದರಿಂದ ಅವನು 'ಸುಮಾನ' ಎನಿಸುವನು.

**೭೦. ವಿಜ್ಞಾತಾ:** ಪರಾಪರತತ್ವಗಳನ್ನು ವಿಶೇಷವಾಗಿ ತಿಳಿದುಕೊಂಡಿರುವವನು. ಪರಮಾತ್ಮನ ವಿಷಯದಲ್ಲಿ ಇತರ ಜೀವರಿಗಿಂತ ಅಧಿಕವಾಗಿ ವಿಷಯೀಕರಿಸುವ, ಜಗತ್ತಿನ ವಿಷಯದಲ್ಲಿ ಆಲೋಚಿಸಿದಾಗ ಸರ್ವವನ್ನೂ ವಿಷಯೀಕರಿಸುವ ಜ್ಞಾನ ಋಜುಯೋಗಿಗಳ ಜ್ಞಾನವಾಗಿರುವುದರಿಂದ124 ಇತರ ಜೀವರಿಗಿಂತ ವಿಶೇಷವಾಗಿ ತಿಳಿಯುವವರು ಋಜುಯೋಗಿಗಳಾದ ವಾಯುದೇವರೆಂದು 'ವಿಜ್ಞಾತಾ' ಎಂಬ ಹೆಸರಿನ ಒಂದು ರೂಪ ಅವರದ್ದಾಗಿದೆ.

**೭೧. ಮಹಾಧ್ಯಾತಾ:** ಶ್ರೇಷ್ಠಚಿಂತಕ ಎನಿಸಿರುವವನು.

---

122. ....ಸ್ಮೃತಿಃ ಸುಖಮ್ । ಮೇಧಾ ಮುಕ್ತಿರ್ವಿಷ್ಣುಭಕ್ತಿಃ.... ಇತ್ಯಾದಿ ಬಹುರೂಪಿಣಃ ।
ಹಿರಣ್ಯಗರ್ಭಾಃ.... ಯೇ ಭಾವ್ಯಾಃ.... *– ಪೈಂಗಿಶ್ರುತಿ [ಬ್ರ.ಸೂ.ಭಾ.]*

* 'ಸುಖಂ ಸ್ವರೂಪಭೂತಂ ಯದಾನಂದ ಇತಿ ಕಥ್ಯತೇ....' ಎಂದಿರುವಂತೆ [ಬೃ.ಉ.ಭಾ. 6-3-10] ಸ್ವರೂಪಸುಖ ಆನಂದ ಎನಿಸುತ್ತಿದ್ದು, ಅಂತಹ ಆನಂದವನ್ನು ಮುಂದೆ ಪ್ರತ್ಯೇಕವಾಗಿ ಉಲ್ಲೇಖಿಸುವುದರಿಂದ 'ಸುಖ' ಶಬ್ದಕ್ಕೆ ಇಂದ್ರಿಯಭೋಗಜನ್ಯಸುಖ ಎಂಬ ಅರ್ಥ ಸಿದ್ಧಿಸುವುದು.

123. ಋಜುಃ ಸುಮಾನೋ ವಿಜ್ಞಾತಾ ಮಹಾಧ್ಯಾತಾ.... ಹನೂಮಾನ್ ಭೀಮ.... ಇತ್ಯಾದಿ ಬಹುರೂಪಿಣಃ । ಹಿರಣ್ಯಗರ್ಭಾಃ.... ಯೇ ಭಾವ್ಯಾಃ.....
*– ಪೈಂಗಿಶ್ರುತಿ [ಬೃ.ಉ.ಭಾ. 3-5-8]*

124. ......ಋಜೂನಾಮನಾದಿನಿತ್ಯಮೀಶೇ ಚ ।
ಅನ್ಯೇಭ್ಯೋಽಧಿಕಮನ್ಯತ್ರಾಲೋಚನೇ ಸರ್ವವಿಷಯಮ್ ॥ *– ಪ್ರಮಾಣಲಕ್ಷಣಮ್*

ಪ್ರತಿಯೊಬ್ಬ ಜೀವನಲ್ಲೂ ಇದ್ದುಕೊಂಡು ಉಸಿರಾಟದ ಸಂದರ್ಭದಲ್ಲಿ ಹಂಸ ಮಂತ್ರವನ್ನು ಜಪಿಸುತ್ತ ಇರುವ ವಾಯುದೇವ ಭಗವಂತನನ್ನು ನಿರಂತರವಾಗಿ ಧ್ಯಾನ ಮಾಡುತ್ತಿರುವುದರಿಂದ 'ಮಹಾಧ್ಯಾತಾ' ಎನಿಸಿರುವನಲ್ಲದೆ, ಮಧ್ವಾಚಾರ್ಯರೂಪದಿಂದ ಶಾಸ್ತ್ರಪ್ರಮಾಣದಲ್ಲಿ ಯಥಾರ್ಥವಾದ ಚಿಂತನೆ ನಡೆಸಿರುವುದರಿಂದಲೂ 'ಮಹಾಧ್ಯಾತಾ' ಎನಿಸುವನು.

**೭೨. ಹನೂಮಾನ್:** ಒಳ್ಳೆಯ ತತ್ವಜ್ಞಾನವನ್ನು ಹೊಂದಿರುವವನು.125

**೭೩. ಭೀಮಃ:** ಋಗ್ವೇದಾದಿ ಏಳು ವಿದ್ಯೆಗಳನ್ನು ಚೆನ್ನಾಗಿ ಧರಿಸಿರುವವನು.126

ವಾಯುದೇವನ ದೇವದೇವತ್ವವನ್ನು ಸಾರುವ ಮಹಾಭಾರತದ ಮಾತಿನಲ್ಲಿ ವಾಯು ದೇವನನ್ನೂ ಭೀಮ ಎಂದು ಉಲ್ಲೇಖಿಸಲಾಗಿದೆ.127

**೭೪. ಪ್ರಾತಃ:** ತನ್ನ ಮಹಿಮೆಯನ್ನು ಕೇಳಿದವರ ಕಿವಿಯ ಮೂಲಕ ಅವರ ಶರೀರ ದಲ್ಲಿ ಒಂದೊಂದು ರೂಪದಿಂದ ಪ್ರವೇಶಿಸುವ ಪ್ರಯುಕ್ತ ವ್ಯಾಪಿಸಿರುವವನು ಹಾಗೂ ಪ್ರಾತಃಕಾಲಕ್ಕೆ ಅಭಿಮಾನಿಯಾಗಿರುವವನು.128

[ಈ ನಾಮದ ಅಧಿಕ ವಿಚಾರವನ್ನು ಐ.ಉ.ನಲ್ಲಿ ನೋಡಬಹುದು.]

**೭೫. ಪ್ರಾಪ್ತಿ:** ತನ್ನ ಸಾಮರ್ಥ್ಯದಿಂದ ಹಾಗೂ ಶ್ರೀಹರಿಯ ಅನುಗ್ರಹದಿಂದ ಎಲ್ಲವನ್ನೂ ಹೊಂದುವವನು.128A

ವಾಯುದೇವನು ತನ್ನ ಸಾಮರ್ಥ್ಯದಿಂದ ಹಾಗೂ ಶ್ರೀಹರಿಯ ಅನುಗ್ರಹದಿಂದ ಎಲ್ಲವನ್ನೂ ಹೊಂದಿರುವವನು ಎಂಬ ಅಭಿಪ್ರಾಯದಲ್ಲಿ ಅವನನ್ನು 'ಪ್ರಾಪ್ತಿ' ಎಂದೇ ಜ್ಞಾನಿಗಳು ಕರೆಯುವರು.128B

---

125. 'ಹನಶಬ್ದೋ ಜ್ಞಾನವಾಚೀ....' ತಥಾ ಚ ವಿಶಿಷ್ಟಂ ತತ್ವಜ್ಞಾನಂ ಅಸ್ಯಾಸ್ತೀತಿ ಹನೂಮಾನ್ ।

126. ಭೃತಾಃ ಮಾಃ ಋಗ್ವೇದಾದಿವಿದ್ಯಾಃ ಯೇನ ಸಃ ಭೀಮಃ ।

127. ವಾಯುರ್ಭೀಮೋ ಭೀಮನಾದೋ ಮಹೌಜಾಃ.... ತಸ್ಮಾದ್ ವಾಯುರ್ದೇವದೇವೋ ವಿಶಿಷ್ಟಃ । *–[ಮ.ಭಾ.ತಾ.ನಿ. 2-157]*

128. ......ತತ್ರ ತತ್ರ ಪ್ರವಿಷ್ಟತ್ವಾತ್ ಪ್ರತತೋಽಸೌ ಬಭೂವ ಹ ।
ಪ್ರತತ್ವಾತ್ ಪ್ರಾತರಿತಿ ತಸ್ಯ ನಾಮಾಽಭವದ್ ವಿಭೋಃ । *–[ಐ.ಉ.ಭಾ. 1-4-11]*

* ತದೇತದ್ರೂಪಂ ಪ್ರಾತಃಕಾಲನಿಯಾಮಕಂ ಪ್ರಾತರ್ನಾಮಕಮಭವತ್ ।
*– ತಾಮ್ರಪರ್ಣೀಯ.*

128A. ಸ್ವಶಕ್ತ್ಯಾ ಭಗವದನುಗ್ರಹೇಣ ಚ ಸರ್ವಂ ಪ್ರಾಪ್ನೋತೀತಿ ಪ್ರಾಪ್ತಿಃ ।

128B. ಪ್ರಾಪ್ನೋತಿ ವಾಯುಃ ಸರ್ವಂ ತು ಸ್ವತ ಏವ ಹರೇಸ್ತಥಾ ।
ಅತಃ ಪ್ರಾಪ್ತಿರಿತಿ ಪ್ರಾಹುರ್ವಾಯುಂ ಭೂತಪತಿಂ ಪ್ರಭುಮ್ ॥
*– –ಬ್ರಹ್ಮವೈವರ್ತ [ಭಾ.ಗ.ತಾ.ನಿ.3-27-39]*

**೭೬. ವಿದ್ಯುತ್:** ವಿಶೇಷವಾಗಿ ಪ್ರಕಾಶಿಸುವವನು.128C

ವಿದ್ಯುತ್ ಎನಿಸುವ ಭಾರತೀದೇವಿಗೆ ಪತಿಯಾದವನೆಂದು 'ವಿದ್ಯುತ್‌ಪತಿ' ಎನಿಸುವ ವಾಯುದೇವನನ್ನು ತೈತ್ತಿರೀಯೋಪನಿಷತ್ತು 'ವಿದ್ಯುತ್' ಹೆಸರಿನಿಂದ ಕರೆದು, ಅವನಲ್ಲಿ ಬಲನಾಮಕ ಭಗವಂತನಿರುವನೆಂದು ತಿಳಿಸಿದೆ.128D

**೭೭. ಜ್ಯೋತಿ:** –ಬೆಳಗಿಸುವವನು.128E

- ಜಗತ್ತೆಲ್ಲ ಯಾರನ್ನು ಅವಲಂಬಿಸಿ ಇದೆಯೋ ಅಂತಹವನು.128F ಅಧಿಕವಿಚಾರವನ್ನು ಷಟ್.ಪ್ರ.ಉ.ನಲ್ಲಿ [1-1-10] ನೋಡಬಹುದು.

## 2. ಮುಖ್ಯಪ್ರಾಣನ ಸಾಧನೆಗೆ ಸಂಬಂಧಿಸುವ ನಾಮಗಳು

**೭೮. ಯಜ್ಞಃ:**

ಅ. ಯಜ್ಞಕ್ಕೆ ಅಭಿಮಾನಿ

ಆ. ಎಲ್ಲೆಡೆ ಸಂಚರಿಸುತ್ತ ಶುದ್ಧಗೊಳಿಸುವವನು.129

ಈ ನಾಮದ ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [4-4-1] ನೋಡಬಹುದು.

**೭೯. ಮಘವಾನ್:**

ಅ. ಯಜ್ಞಗಳಿಗೆ ಒಡೆಯ.130

ಆ. ಯಶಸ್ವಿಯಾಗಿರುವವನು.

ಇ. ಧನವುಳ್ಳವನು.

---

128C. ವಿಶೇಷೇಣ ದ್ಯೋತತೇ ಇತಿ ವಿದ್ಯುತ್ ।

128D. ಬಲಮಿತಿ ವಿದ್ಯುತಿ *–[ತೈ.ಉ. 3-11]*

* ವಾಯೌ ತು ಬಲನಾಮಾ ಚ ಬಲದತ್ವಾತ್ ಸದೈವ ಹಿ ।
*– –ಯಜುಃ ಸಹಿತಾ [[ತೈ.ಉ.ಭಾ.]*

129E. ದ್ಯೋತಯತೀತಿ ಜ್ಯೋತಿಃ ।

128F. ಜಾತಂ ಜಗತ್ ಓತಂ ಪ್ರವಿಷ್ಟಂ ಯಸ್ಮಿನ್ನಿತಿ ಜ್ಯೋತಿಃ ।

129. ಯಜ್ಞಾಭಿಮಾನೀ ಯಜ್ಞಾಖ್ಯೋ ವಾಯುರ್ಯಜ್ಞೇ ಪ್ರತಿಷ್ಠಿತಃ ।
ಜ್ಞ ಶುದ್ಧಭಾವ ಇತ್ಯಸ್ಮಾದ್ ಯನ್ನಯಂ ಪಾವಯೇದ್ ಯತಃ ।
ಅತೋ ವಾಯುರ್ಯಜ್ಞನಾಮಾ... *–[ಛಾಂ.ಉ.ಭಾ. 4-4-1]*

130. 'ತೇ ಪ್ರೀತಾಃ ಪ್ರಾಣಂ ಸ್ತುವಂತಿ....ಮಘವಾನೇಷಃ.....' *– [ಷ.ಉ. 2-1-10]*

* ತಂ ವಾ ಏತಂ ಮಖವಂತಂ ಸಂತಂ ಮಘವಾನಿತ್ಯಾಚಕ್ಷತೇ । ಖಂಡಾರ್ಥನಿರ್ಣಯ
.....ಭಗವಂತಃ ಪರಂ ಮುಖ್ಯಪ್ರಾಣಸ್ಯ ಮಖಾಧಿಪತ್ವಾತ್ ಸಃ ಮಘವಾನ್ ।
'ಯಶೋ ವಾವ ಮಘಮ್' 'ಧನಂ ವಾವ ಮಘಮ್' -ಖಂಡಾರ್ಥನಿರ್ಣಯ
ಇತಿ ಯಶಸ್ವೀ, ಧನೀ ಅಪಿ ಮಘವಾನ್ ಇತ್ಯುಚ್ಯತೇ ।

೮೦. ಪವಮಾನಃ: ಸಾಕ್ಷಾತ್ ಪವಿತ್ರನಾದ ಭಗವಂತನನ್ನು ಸಂತೋಷಪಡಿಸಿ, ಅವನ ಮೂಲಕ ಹಾಗೂ ಅವನ ಅರಿವಿನ ಮೂಲಕ ಪವಿತ್ರಗೊಳಿಸುವವನು.131

ಅಧಿಕ ವಿಚಾರವನ್ನು ಐ.ಉ.ನಲ್ಲಿ [2-8-4-8] ನೋಡಬಹುದು.

೮೧. ಶ್ವಾ: 'ಶೌವೋದ್ಗೀಥ' ಎಂಬ ಉಪಾಸನೆಯ ಉಪದೇಶ ನೀಡುವುದಕ್ಕಾಗಿ ನಾಯಿಯ ರೂಪ ಧರಿಸಿದವನು.132

- ಋಗ್ವೇದದಲ್ಲಿ ಶ್ವಾಸಕ್ಕೆ ಕಾರಣನಾಗಿರುವವನೆಂಬ ದೃಷ್ಟಿಯಿಂದ ವಾಯುದೇವನನ್ನು 'ಶ್ವಾ' ಎಂದು ಉಲ್ಲೇಖಿಸಲಾಗಿದೆ.133 ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [1-3-16] ನೋಡಬಹುದು.

೮೨. ಆತ್ಮಾ: ಆತ್ಮಾ ಎನಿಸುವ ಹೆಸರಿನಿಂದ ಉಲ್ಲೇಖಿಸಿ ಕರ್ಮಗಳಿಗೆ ದೇವತೆಯಾಗಿರುವನೆಂದು ತಿಳಿಸಲಾಗಿದೆ. ಕರ್ಮಗಳ ಸೃಷ್ಟಿಕರ್ತ ಹಾಗೂ ಕರ್ಮಗಳ ಜೊತೆಗೆ ನಾಮಗಳನ್ನೂ ರೂಪಗಳನ್ನೂ ತಿಳಿಯುವವನು ಮತ್ತು ಕರ್ಮಗಳ ಧಾರಕ –ಎಂಬುದಾಗಿ ಕರ್ಮದೇವತಾತ್ವವನ್ನು ಉಪಪಾದಿಸಲಾಗಿದೆ.134

೮೩. ಮಧ್ವಪೂಪಃ: ಜೇನುಗೂಡು ಹೇಗೆ ಜೇನಿಗೆ ಆಧಾರವಾಗಿರುವುದೋ ಹಾಗೆ 'ಮಧು' ನಾಮಕ ಭಗವಂತನ ವಿಶೇಷ ಸನ್ನಿಧಾನಕ್ಕೆ ಪಾತ್ರನಾಗಿರುವವನು.135

---

131. ಪವಿತ್ರಂ ನಾಮ ಸಾಕ್ಷಾತ್ ತತ್ ಪರಂ ಬ್ರಹ್ಮ ಜನಾರ್ದನಃ ।
ಪ್ರಸಾದಯಿತ್ವಾ ತಂ ವಿಷ್ಣುಂ ತೇನ ಲೋಕಾನ್ ಪುನಾತ್ಯಸೂ ।
ಜ್ಞಾನಾಖ್ಯಪ್ರಸವೇನಾಪಿ ಸ್ವಯಂ ವಾಯುಃ ಪುನಾತ್ಯಯಮ್ ।
*– [ಐ.ಉ.ಭಾ. 2-8-4-8]*

132. ....ಪ್ರಸಾದಾರ್ಥಂ ಬಕಸ್ಯಾಪಿ ವಾಯುನೋಕ್ತಃ ಶ್ವರೂಪಿಣಾ ।
ಶೌವೋದ್ಗೀಥ ಇತಿ ಪ್ರೋಕ್ತೋ ರುದ್ರಾದೀನಾಂ ಶ್ವರೂಪಿಣಾಮ್ ।
*– [ಛಾಂ.ಉ.ಭಾ. 1-3-16]*

133. ಶ್ವಾತ್ರೇಣ ಯತ್ ಪಿತ್ರೋಃ.... *– [ಋ.ವೇ.31-4*
ಶ್ವಾ ವೈ ವಾಯುಃ ಶ್ವಸನಾತ್.... *– ಋ.ಭಾ.]*

134. ....ಅಥ ಕರ್ಮಣಾಮಾತ್ಮೇತ್ಯೇತದೇಷಾಮುಕ್ಥಮತೋ ಹಿ ಸರ್ವಾಣಿ ಕರ್ಮಾಣ್ಯುತ್ತಿಷ್ಠಂತೇತ್ಯೇತದೇಷಾಂ ಸಾಮೈತದ್ಧಿ ಸರ್ವೈಃ ಕರ್ಮಭಿಃ ಸಮಮೇತದೇಷಾಂ ಬ್ರಹ್ಮೈತದ್ಧಿ ಸರ್ವಾಣಿ ಕರ್ಮಾಣಿ ಬಿಭರ್ತಿ । *– [ಬೃ.ಉ. 3-7-3]*

135. '.....ಯಸ್ಮಿನ್ ಆಪ್ಯಮುಪಸ್ಥಿತಮ್ ।
ಸೋಽಪೂಪ ಆಪ್ಯೋ ಭಗವಾನ್ ಮಧ್ವಾಜ್ಯಾದಿ ಪ್ರಸಿದ್ಧಗಮ್ ।
ಸಾಮಸಂಹಿತಾ [ಛಾಂ.ಉ.ಭಾ.3-1-1]ದಲ್ಲಿ ತಿಳಿಸಿರುವಂತೆ ಜೇನು, ತುಪ್ಪ ಮುಂತಾದ 'ಆಪ್ಯ' ಎಲ್ಲಿರುವುದೋ ಅಂತಹ ಜೇನುಗೂಡು ಅಪೂಪ ಎನಿಸುವಂತೆ 'ಆಪ್ಯ' ಎನಿಸುವ ಭಗವಂತ ಇರುವ ವಾಯುದೇವನೂ 'ಅಪೂಪ'. ಮಧುರೂಪನಾದ ಭಗವಂತನನ್ನು ಹೊಂದಿ

ಮಧುವಿದ್ಯೆಯಲ್ಲಿ ಮಧು ಶಬ್ದಪ್ರತಿಪಾದ್ಯನಾದ ಭಗವಂತನಿಗೆ ಜೇನಿನ ಸಾದೃಶ್ಯವನ್ನು ತಿಳಿಸುತ್ತ –ಮಧ್ವಪೂಪ ಅಂದರೆ ಜೇನಿನ ಗೂಡು ವಾಯುದೇವ ಎನ್ನಲಾಗಿದೆ. ಜೇನುಗೂಡಿನಲ್ಲಿ ಜೇನು ಇರುವಂತೆ 'ಮಧು' ಎನಿಸುವ ಭಗವಂತನು ವಾಯುದೇವನಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವನು. ಆದುದರಿಂದಲೇ ವಾಯುದೇವ –ಮಧ್ವಪೂಪ– ಜೇನುಗೂಡು.

**೮೪. ಅಂತರಿಕ್ಷಮ್:**

- ತನ್ನ ಒಳಗೆ ಶ್ರೀಹರಿಯನ್ನು ಯಾವಾಗಲೂ ಕಾಣುತ್ತಿರುವವನು.
- ಅಂತರಿಕ್ಷದಲ್ಲಿ ಇರುವವನು.136

ಮಧುವಿದ್ಯೆಯನ್ನು ಪ್ರಸ್ತುತಪಡಿಸಿದ ಛಾಂಧೋಗ್ಯೋಪನಿಷತ್ತು ಆದಿತ್ಯಗತನಾದ ಶ್ರೀವಿಷ್ಣುವನ್ನು 'ಮಧು' ಎಂದು ಕರೆದು, ಅಂತಹ 'ಮಧು'ಗೆ ಗೂಡಿನಂತೆ ಇರುವವನು ವಾಯುದೇವನೆಂದು ತಿಳಿಸುವಾಗ ವಾಯುದೇವನನ್ನು 'ಅಂತರಿಕ್ಷ' ಎಂದು ಕರೆದಿದೆ.137

**೮೫. ವೇದಾಣೀ:** ಆಣಿ ಹೇಗೆ ಸ್ಥಾಪಕವಾಗುವುದೋ ಹಾಗೆ ಸರ್ವವೇದಗಳಿಗೂ ಆಧಾರನಾಗಿ ಸ್ಥಾಪಕ ನಾಗಿರುವವನು.138

ಐತರೇಯೋಪನಿಷತ್ತಿನಲ್ಲಿ ಪ್ರಸ್ತುತವಾದ ಋಗ್ವೇದದ ಶಾಂತಿಪಾಠದಲ್ಲಿ ಶ್ರೀವಿಷ್ಣುವನ್ನು ಸಂಬೋಧಿಸುವಾಗ 'ಆಣೀಸ್ಥ' –ಮುಖ್ಯಪ್ರಾಣನಲ್ಲಿ ನಿತ್ಯ ನೆಲೆಸಿರುವವನು ಎಂದೇ ಉಲ್ಲೇಖಿಸಲಾಗಿದೆ.139

**೮೬. ಓಂವಃ:** ಓಂಕಾರವನ್ನು ಪಠಿಸುತ್ತ ಓಂಕಾರಪ್ರತಿಪಾದ್ಯದೇವರನ್ನು ಯಾವಾಗಲೂ ಹೊತ್ತಿರುವವನು.140

---

ರುವುದರಿಂದ ಅವನು ಮಧ್ವಪೂಪ ಎನಿಸಿರುವನು– '....ಮಧ್ವಪೂಪಸ್ತು ಮಾರುತಃ । ತಸ್ಮಿನ್ ಸನ್ನಿಹಿತೋ ವಿಷ್ಣುರ್ವಿಶೇಷೇಣ ಯತಃ ಸದಾ –ಎಂದು 'ಸಾಮಸಂಹಿತೆ' ಸ್ಪಷ್ಟಪಡಿಸಿದೆ.

136. ಸೋಽಂತರಿಕ್ಷಮಿತಿ ಪ್ರೋಕ್ತಃ ಸ್ವಾಂತಃ ಸಮ್ಯಗ್‌ಪರೀಕ್ಷಣಾತ್ ।
ಅಂತರಿಕ್ಷಸ್ಥಿತಶ್ಚಾಸೌ.... *– ಸಾಮಸಂಹಿತಾ [ಛಾಂ.ಉ.ಭಾ. 3-1-1]*

137. ಅಸೌ ವಾ ಆದಿತ್ಯೋ ದೇವಮಧು..... ಅಂತರಿಕ್ಷಮಪೂಪೋ....
*– [ಛಾಂ.ಉ.ಭಾ. 3-1-1]*

138. ಆಧಾರಃ ಸರ್ವವೇದಾನಾಂ ವೇದಾಣೀ ಪ್ರಾಣ ಉಚ್ಯತೇ ।
*– ಶಬ್ದತತ್ತ್ವೇ [ಐ.ಉ.ಭಾ. 2-6-1-1]*

* ಅಣಶಬ್ದಸ್ಯ ಗತಿವಾಚಿತ್ವಾಚ್ಚಲಮಾಣಮುಚ್ಯತೇ ।
ತಸ್ಯ ಧಾರಣೇನ ತದ್ವಾನಾಣೀ ಸ್ಥಾಪಕ ಇತ್ಯರ್ಥಃ । *– [ಐ.ಉ.ಭಾ.]*

139. ....ವೇದಸ್ಯ ಮ ಆಣೀಸ್ಥ ಶ್ರುತಂ ಮೇ ಮಾ ಪ್ರಹಾಸೀಃ.... *– [ಐ.ಉ.ಭಾ. 2-6-1-1]*

* ಆಣೀಸ್ಥಿತ ಆಣ್ಯಾಂ ಸ್ಥಿತ ವಿಷ್ಣಾವಿತಿ ಸಂಬೋಧನಾ । *– [ಐ.ಉ.ಭಾ.*

140. ಓಮಿತ್ಯೇವ ವಹನ್ ನಿತ್ಯಂ ವಾಯುರೋಂವ ಇತೀರಿತಃ ।
ಪಯಂಕೋಪಾಸನಾ । *– [ಛಾಂ.ಉ.ಭಾ. 8-1-10]*

ನಾಡಿಗಳಲ್ಲಿ ಸಂಚರಿಸುವ ಜ್ಞಾನಿಯು ಮುಕ್ತಿಕಾಲದಲ್ಲಿ ವಾಯುದೇವನಿಂದ ದಿವ್ಯ ಚಿದ್ರೂಪವನ್ನು ಹೊಂದುವನೆಂದು ನಿರೂಪಿಸುವ ಸಂದರ್ಭದಲ್ಲಿ ವಾಯುದೇವನನ್ನು ಓಂಕಾರವನ್ನು ಪರಿಸುತ್ತ ದೇವರನ್ನು ಹೊತ್ತುಕೊಂಡಿರುವವನೆಂದೇ ಪರಿಚಯಿಸಲಾಗಿದೆ.141

**೮೭. ಸೂದದೋಹಾಃ:** ಪುರುಷನ ಉನ್ನತಿಗೆ ಕಾರಣವಾದ ಜ್ಞಾನವನ್ನು ಅಥವಾ ಕರ್ಮವನ್ನು ಹೊರಹೊಮ್ಮುವಂತೆ ಮಾಡುವವನು.142

ಶ್ರುತಿ ವಚನವೊಂದರಲ್ಲಿ ನೀರು, ಮಾತು ಅಥವಾ ಗೋವು ಸೋಮರಸಕ್ಕೆ ಸಂಬಂಧಿಸುವವೆಂದು ತಿಳಿಸುವಾಗ, ಆ ಸೋಮರಸ ವಾಯುದೇವನಲ್ಲಿರುವ ದೇವರ ಪಾನಕ್ಕಾಗಿ ಎಂದು ಸಾರುತ್ತ ವಾಯುದೇವನನ್ನು ಈ ನಾಮದಿಂದ ಉಲ್ಲೇಖಿಸಿ ಅವನಿಂದ ಕರ್ಮ ಜ್ಞಾನಾದಿಗಳ ದೋಹನವನ್ನು ತಿಳಿಸಲಾಗಿದೆ.143 ಈ ಸಂದರ್ಭದಲ್ಲಿ ಉದಾಹೃತ ಶ್ರುತಿಯೊಂದರಲ್ಲಿ ವಾಯುವನ್ನು 'ಸೂದದೋಹಾಃ' ಎಂದು ಸಾರಲಾಗಿದೆ.144

**೮೮. ನಿಭೃತ:** ಪರಿಪೂರ್ಣನಾಗಿರುವವನು.145

ಜ್ಞಾನಿಗಳು ತಮ್ಮ ಹೃದಯದಲ್ಲಿರುವ ಭಗವಂತನನ್ನು ವಾಯುದೇವನ ಅನುಗ್ರಹದಿಂದ ಉಪಾಸನೆ ಮಾಡುವರೆಂದು ತಿಳಿಸುವಾಗ ವಾಯುದೇವನನ್ನು 'ನಿಭೃತಮೋಕ್ಷಹೃದಯ' –ಮೋಕ್ಷಗಳಿಕೆಗೆ ಬೇಕಾದ ಜ್ಞಾನವನ್ನು ಪರಿಪೂರ್ಣವಾಗಿ ಹೊಂದಿರುವವನೆಂಬುದಾಗಿ ಉಲ್ಲೇಖಿಸಲಾಗಿದೆ.146 ಭಾಗವತದ ಈ ಮಾತನ್ನು ವ್ಯಾಖ್ಯಾನಿಸಲು ಶ್ರೀ

---

141. .....ಸ ಓಮಿತಿ ವಾಹೋದ್ವಾಮೀಯತೇ.... – *[ಛಾಂ.ಉ. 8-1-10]*
   * ಪ್ರಚಲಿತ ಪಾಠದ ಪ್ರಕಾರ ಭಾಷ್ಯದಲ್ಲಿ 'ವಾಯುರೋಂವದ ಬದಲು ವಾಯುರೋಂವಾಟ್' ಎಂದಿದೆ.

142. ಶೋಭನಂ ಉದಂ ಕರ್ಮ ಜ್ಞಾನಂ ವಾ ದೋಗ್ಧೀತಿ ಸೂದದೋಹಾಃ ।
ಉದೇತಿ ಉಚ್ಚೋಭವತ್ಯನೇನ ಪುರುಷ ಇತಿ ಉದಂ ಜ್ಞಾನಂ ಕರ್ಮ ವಾ ।
– *ಖಂಡಾರ್ಥನಿರ್ಣಯ.*

143. ತಾ ಅಸ್ಯ ಸೂದದೋಹಸಸ್ಸೋಮಂ ಶ್ರೀಣಂತಿ ಪೃಷ್ಣಯಃ । .....
   * ತಾ ಪೃಷ್ಣಯಃ ಆಪೋ ಗಾವೋ ವಾಚೋ ವಾ।
   ಅಸ್ಯ ಸೂದದೋಹಸಃ ಪ್ರಾಣಸ್ಯ ವಾಯುಸ್ಥಸ್ಯ ಪರಮೇಶ್ವರಸ್ಯ ಸೋಮಂ ಶ್ರೀಣಂತಿ ।
   – *ಖಂಡಾರ್ಥನಿರ್ಣಯ*

144. ಅಥ ಸೂದದೋಹಾಃ ಪ್ರಾಣೋ ವೈ ಸೂದದೋಹಾಃ – *ಶ್ರುತಿಃ*

145. ನಿತರಾಂ ಭೃತಃ ಪೂರ್ಣಃ, ಪರಿಪೂರ್ಣಃ ।

146. ನಿಭೃತಮೋಕ್ಷಹೃದಯಯೋಗಯುಜೋ ಹೃದಯಂ ಮುನಯ ಉಪಾಸತೇ....
– *[ಭಾಗ. 10-94-23]*
   * ಯೇ ಮುನಯೋ ಹೃದ್ಯಯಿನಂ ಭಗವಂತಂ ನಿಭೃತಮೋಕ್ಷಹೃದಯೇನ ವಾಯುನಾ ಯೋಗೇನ ಯುಕ್ತಾ ನಿಯಮಿತಾಃ ಸಂತ ಉಪಾಸತೇ....
   * ಪರಿಪೂರ್ಣಂ ಮೋಕ್ಷಾರ್ಥಂ ಜ್ಞಾನಂ ಯಸ್ಯ ಸ ನಿಭೃತಮೋಕ್ಷಹೃದಯಃ [ಭಾ.ತಾ.ನಿ.]

ಮಧ್ವರು ಉದಾಹರಿಸಿರುವ ಭಾಗವತಸಂಹಿತೆ ಮೋಕ್ಷವನ್ನು ಬಲ್ಲ ವಾಯುದೇವನನ್ನು 'ನಿಭೃತ' ಎಂದೇ ಕರೆದಿದೆ.147

೮೯. ಭರತಃ:

ಅ. ಜ್ಞಾನಾನಂದಾತ್ಮಕನಾದ, ಪ್ರಕಾಶಸ್ವರೂಪಿಯಾದ ಪರಮಾತ್ಮನಲ್ಲಿ ಆಸಕ್ತ ನಾಗಿರುವವನು.148

ಆ. ಜಗತ್ತು ಯಾರಿಂದ ಪೋಷಿಸಲ್ಪಡುವುದೋ ಅಂತಹವನು.149

ಇ. ಯಾವಾಗಲೂ ಭಗವಂತನ ಸಾಮೀಪ್ಯದಲ್ಲಿ ಅಂದರೆ ಬೌದ್ಧಿಕವಾಗಿಯೂ ಸಮೀಪದಲ್ಲಿ ಆಸಕ್ತನಾಗಿರುವವನು.150 ಈ. ಬ್ರಹ್ಮಾಂಡ ಭಾರದಿಂದ ವ್ಯಾಪ್ತ ನಾಗಿರುವವನು.151

ಉ. ಜಗತ್ತಿಗೆ ಒಡೆಯನಾಗಿರುವವನು.152

ಭಗವಂತನಿಗೆ 'ಭರತಮತಃ' –ಎಂಬ ವಿಶೇಷಣವೊಂದನ್ನು ನೀಡಲಾಗಿದ್ದು, ಅಲ್ಲಿ ಭರತ ಶಬ್ದದಿಂದ ವಾಯುದೇವನನ್ನು ಜ್ಞಾನಾನಂದಾತ್ಮಕನಾದ ಪರಮಾತ್ಮನಲ್ಲಿ ಆಸಕ್ತ ನಾಗಿರುವವನೆಂಬುದಾಗಿ, ಜಗತ್ತಿನ ಪೋಷಣೆಯನ್ನು ನಡೆಸುವವನೆಂಬುದಾಗಿ ಸ್ತುತಿಸ ಲಾಗಿದೆ.153

---

* ನಿತರಾಂ ಭೃತಂ ಪೂರ್ಣಂ ನಿಭೃತಮ್ । ಪರಿಪೂರ್ಣಮಿತಿ ಯಾವತ್ । ಮೋಕ್ಷ ಸಾಧನಂ ಹೃದಯಂ ಜ್ಞಾನಂ ಮೋಕ್ಷಹೃದಯಂ ಯಸ್ಯ ಸಃ... ಮೋಕ್ಷಹೃದಯಃ ।
*– ಟಿಪ್ಪಣೀ*

147. ನಿಭೃತೋ ಮೋಕ್ಷವಿತ್ ಪ್ರಾಣಸ್ತದ್ಯೋಗಾತ್ ತತ್ಪ್ರಸಾದತಃ ।
ಜಾನಂತಿ ಪರಮಂ ದೇವಂ ನಾನ್ಯಥಾ ತು ಕಥಂಚನ ।
*– ಭಾಗವತಸಂಹಿತಾ [ಭಾ.ತಾ.ನಿ. 10-94-23]*

148. ಭಾತ್ಮಕೇ ಜ್ಞಾನಾನಂದಮಯೇ ಪ್ರಕಾಶಾತ್ಮಕೇ ವಾ ।
'ಭಾ ದೀಪ್ತೌ' 'ಭಾ ಜ್ಞಾನೇ' 'ಭ ಆನಂದೇ' ಇತಿ ಧಾತು ಪಾಠಃ ।
ತಾದೃಶೇ ಭಗವತಿ ರತತ್ವಾತ್ ಭರತಃ ।

149. ಜಗದ್ ಭೃತಂ ಯೇನ ಸಃ ಭರತಃ ।

150. 'ಭ ನಿಕಟಭಾವೇ' ಇತಿ ಧಾತುಃ.... ಅಂತರಂಗತ್ವಾತ್ ಸದಾ ನಿಕಟೇ
ಭಗವತಿ ಭಗವತೋ ನೈಕಟ್ಯೇ ಚ ಸದಾ ರತತ್ವಾಚ್ಚ ಭರತಃ । *– [ಬ.ಗೋ.]*

151. ಪ್ರಾಣಸ್ತು ಭರತೋ ಭಾರತತತ್ವಾತ್ ಭರ್ತೃರೂಪತಃ । *– [ಋ.ಭಾ. 22-25]*
ಅ. ಬ್ರಹ್ಮಾಂಡಭಾರೇಣ ತತತ್ವಾತ್
ಆ. ಜಗತಃ ಭರ್ತೃತ್ವಾತ್, ಭರ್ತಾ ಏವ ವಿಶ್ಲಿಷ್ಯ ಭರತ ಇತ್ಯುಚ್ಯತೇ ।

152. .....ಭರತಮುತಶ್ಚಕಾಸ್ತ್ಯನಲವತ್.... । *– ಭಾಗ.10-94-19]*

153. ರತತ್ವಾದ್ ಭಾತ್ಮಕೇ ವಿಷ್ಣಾವಥವಾಽಪಿ ಜಗದ್‌ಭೃತೇಃ ।
ಭರತೋ ವಾಯುರುದ್ದಿಷ್ಟೋ ಭಾರತೀ ತತ್ ಸರಸ್ವತೀ ।
*– ನಾಮಸಂಹಿತಾ [ಭಾ.ತಾ.ನಿ. 10-94-19]*

ದೇಹದಲ್ಲಿರುವ ಭಗವಂತನನ್ನು ಜ್ಞಾನಿಗಳು ತಿಳಿದುಕೊಳ್ಳುವರೆಂದು ನಿರೂಪಿಸುವಾಗ ಜ್ಞಾನಿಗಳನ್ನು 'ನಿಕಟಧಿಯಃ' ಎಂಬ ವಿಶೇಷಣದಿಂದ ಕರೆಯಲಾಗಿದ್ದು, ಆದರಿಂದ ಹೊರಡುವ –ಬೌದ್ಧಿಕವಾಗಿ ಭಗವಂತನ ಸಮೀಪದಲ್ಲಿರುವ, ಭಗವಂತನ ಸಾಮೀಪ್ಯವನ್ನು ಯಾವಾಗಲೂ ಇಚ್ಛಿಸುವ –ಎಂಬ ಅರ್ಥಕ್ಕೆ ಪುಷ್ಟಿ ನೀಡುವಂತೆ 'ಭರತಮತಃ' –ಎಂಬ ವಿಶೇಷಣವನ್ನು ನೀಡಲಾಗಿದೆ. ಆದ್ದರಿಂದ 'ಭರತಮತಃ' –ಎಂಬುದರಿಂದ ಯಾವಾಗಲೂ ಭಗವಂತನ ಸಮೀಪದಲ್ಲಿಯೇ ಆಸಕ್ತರಾದ, ಅವನ ಸಾಮೀಪ್ಯವನ್ನೂ ಬಯಸುವ ವಾಯುದೇವನಿಂದ ತಿಳಿಯಲ್ಪಡುವವನು –ಎಂಬ ಅರ್ಥವು ಹೊರಡುವುದು.154 ಋಗ್ವೇದದ ಮಂತ್ರವೊಂದರಲ್ಲಿ ಪರಮಾತ್ಮನನ್ನು 'ಭಾರತೀ' –ಎಂದು ಕರೆಯಲಾಗಿದ್ದು155 ಭರತ ಎನಿಸುವ ವಾಯುದೇವನಿಗೆ ಒಡತಿಯಾಗಿರುವುದರಿಂದ ವಿಷ್ಣು ಭಾರತೀ ಎನಿಸುವನು; ವಾಯುದೇವನಾದರು ಬ್ರಹ್ಮಾಂಡಭಾರದಿಂದ ವ್ಯಾಪ್ತನಾಗಿರುವುದರಿಂದಲೂ ಜಗತ್ತಿಗೆ ಒಡೆಯನಾಗುವುದರಿಂದಲೂ 'ಭರತ' ಎನಿಸುವನೆಂದು ಶ್ರೀ ಮಧ್ವರು ವ್ಯಾಖ್ಯಾನಿಸಿರುವರು.156

೯೦. **ಪವನಃ:** ಪವಿತ್ರೀಕರಿಸುವವನು.157

ವಾಯುದೇವ ಪವಿತ್ರ ಎನಿಸುವ ಭಗವಂತನ ಸನ್ನಿಧಾನ ದೊರಕುವಂತೆ ಮಾಡಿಯೂ, ಭಗವಂತನ ಜ್ಞಾನದ ಮೂಲಕವೂ ಪವಿತ್ರೀಕರಿಸುವನೆಂದು ಪವಮಾನ ತಿಳಿಸಿದೆ.158

'ಶಾಬ್ದತತ್ತ್ವ' ವಾಯುದೇವನ ನಾಮಗಳಲ್ಲಿ ಪವನ ಎಂಬ ಒಂದು ನಾಮವನ್ನೂ ಸೇರಿಸಿದೆ.159

೯೧. **ಆದಿಗೋಪಃ:** ಮೊದಲ ರಕ್ಷಕ.160

---

154. .... ಬುದ್ಧ್ಯಾ ತ್ವಾಂ ಸಮೀಪತಃ ಸ್ಪೃಶಂತಃ, ತ್ವನ್ನಿಕಟಭಾವಂ ತ್ವತ್ಸಾಮೀಪ್ಯಂ ಸದಾ$\S$ ಅಭಿಲಷಂ ತಶ್ಚ ।
ಏತದರ್ಥದ್ಯೋತನಾಯೈವ ಮೂಲೇ ವಾಯುರ್ಭರತಶಬ್ದೇನೋದಿತಃ ।
'ಭ ನಿಕಟಭಾವೇ' ಇತಿ ಧಾತುಃ । 'ನಿಕಟತ್ವೇ ಚ ಕಥ್ಯತೇ' ಇತಿ ನರಹರಿತೀರ್ಥಾಃ ।
ಅಂತರಂಗತ್ವಾತ್ ಸದಾ ನಿಕಟೇ ಭಗವತಿ, ಭಗವತೋ ನೈಕಟ್ಯೇ ಚ ಸದಾ ರತತ್ವಾಚ್ಚ ಭರತಃ । – *ಬ.ಗೋ.*

155. 'ಅಗ್ನ.... ಭಾರತೀಂ.... ಆವಹ' – *[ಋ.ವೇ. 22-10]*

156. ವಿಷ್ಣುಶ್ಚ ಪ್ರಾಣಸಂಬಂಧಾದ್ ಭಾರತೀತ್ಯೇವ ಚೋದಿತಃ ।
ಪ್ರಾಣಸ್ತು ಭರತೋ ಭಾರತತತ್ವಾತ್ ಭರ್ತೃರೂಪತಃ । – *[ಋ.ಭಾ. 22-25]*

157. ಪುನಾತೀತಿ ಪವನಃ ।

158. ಉಭಾಭ್ಯಾಂ ದೇವ ಸವಿತಃ ಪವಿತ್ರೇಣ ಸವೇನ ಚ । ಮಾಂ ಪುನೀಹಿ ವಿಶ್ವತಃ ।

159. '.....ಪವಮಾನಶ್ಚ ಪವನಶ್ಚೇತಿ ಕಥ್ಯತೇ – *ಶಬ್ದತತ್ವ [ಬೃ.ಉ.ಭಾ. 3-5-5]*

160. ಪೈಂಗಿಶ್ರುತಿ ಭಾವ್ಯಹಿರಣ್ಯಗರ್ಭನ ರೂಪಗಳನ್ನು ಸಂಗ್ರಹಿಸುತ್ತ '.....ಆದಿಗೋಪೋ ಮಹಾಪ್ರಭುಃ... ಮಹಾಗುರುಃ..... ಆನಂದ ಇತ್ಯಾದಿ ಬಹುರೂಪಿಣಃ ।

ಸಾತ್ತ್ವಿಕರನ್ನು ಸಂಸಾರಾವಸ್ಥೆಯಿಂದ ಮೋಕ್ಷದೆಡೆಗೆ ಸಾಗಿಸುವ ಪ್ರಯುಕ್ತ ಪ್ರಮುಖವಾದ ರಕ್ಷಣೆಯನ್ನು ನೀಡುವುದರಿಂದ ವಾಯುದೇವ 'ಆದಿಗೋಪ' ಎನಿಸುವನು.

೯೨. **ಮಹಾಪ್ರಭುಃ:** ರುದ್ರಾದಿಗಳಿಗಿಂತೆಲ್ಲ ಹಿರಿಯ ಸ್ವಾಮಿ.

ರುದ್ರಾದಿ ತತ್ತ್ವಾಭಿಮಾನಿದೇವತೆಗಳೆಲ್ಲ ಆಯಾ ತತ್ತ್ವದ ವಿಷಯದಲ್ಲಿ ನಮಗೆ ರಕ್ಷಕರಾಗಿದ್ದು ಒಡೆಯರೆನಿಸಿದರೆ, ವಾಯುದೇವ ಆ ತತ್ತ್ವಾಭಿಮಾನಿಗಳಿಗೂ ಒಡೆಯನಾಗಿದ್ದು ನಮ್ಮ ಪಾಲಿಗೆ 'ಮಹಾಪ್ರಭು' ಎನಿಸುವನು.

೯೩. **ಮಹಾಗುರುಃ:** ಶ್ರೇಷ್ಠಗುರುಗಳಾಗಿರುವವನು.

ವಾಯುದೇವನು ಜ್ಞಾನ ಭಕ್ತ್ಯಾದಿಗಳಿಗೆ ಅಭಿಮಾನಿಯಾಗಿದ್ದು ಸಾತ್ತ್ವಿಕರಲ್ಲಿ ಜ್ಞಾನ ಭಕ್ತ್ಯಾದಿಗಳನ್ನು ಉಂಟುಮಾಡುವನು ಹಾಗೂ ಅಭಿವೃದ್ಧಿಗೊಳಿಸುವನು. ಅಲ್ಲದೆ, ಮಧ್ವರೂಪದಲ್ಲಿ ಸತ್ ಸಿದ್ಧಾಂತದ ಸಂಪ್ರದಾಯದ ಪ್ರವರ್ತಕರಾಗಿಯೂ ಗುರುಗಳೆನಿಸಿರುವನು. ಆದುದರಿಂದಲೇ ಯಾವುದೇ ವಿದ್ಯೆಯ ಅಭ್ಯಾಸದ ಪ್ರಾರಂಭದಲ್ಲಿ ಆದಿಗುರುಗಳನ್ನಾಗಿ ಶ್ರೀಮಧ್ವರನ್ನು ನಮಿಸಬೇಕೆಂದು ತಿಳಿಸಲಾಗಿದೆ.[161] ಏಳುಮಂದಿ ಮೂಲಗುರುಗಳಲ್ಲಿ ವಾಯುದೇವನನ್ನೂ ಗುರುವನ್ನಾಗಿ ಪಂಚರಾತ್ರ ಗುರುತಿಸಿದೆ.[162]

೯೪. **ಆನಂದಃ:** ಸ್ವರೂಪಸುಖವು ಆನಂದ ಎನಿಸಿದ್ದು,[163] ವಾಯುದೇವನು ಶ್ರೀಮಧ್ವರೂಪದಲ್ಲಿ ಪ್ರಸಿದ್ಧಪಡಿಸಿದ ಆನಂದ ಎನಿಸುವ ಸ್ವರೂಪಸುಖಕ್ಕೆ ಕಾರಣನಾಗಿರುವ ಶಾಸ್ತ್ರದ ಮೂಲಕ ಅಂತಹ ಆನಂದವನ್ನು ಪಡೆಯಬಹುದಾದುದರಿಂದ 'ಆನಂದತೀರ್ಥ' ಎನಿಸುವ ವಾಯುದೇವ 'ನಾಮನಿರ್ದೇಶೇ ನಾಮೈಕನಿರ್ದೇಶಃ –ಹೆಸರಿನ ಏಕದೇಶದಿಂದ ಸಮಗ್ರ ಹೆಸರಿನ ನಿರ್ದೇಶನ ಎಂಬ ನೀತಿಗನುಗುಣವಾಗಿ 'ಆನಂದ' ಎನಿಸುವನು.

---

'ಹಿರಣ್ಯಗರ್ಭಾಃ..... ಯೇ ಭಾವ್ಯಾಃ....' -ಎಂದು ಆದಿಗೋಪಾದಿ ಹೆಸರಿನ ರೂಪಗಳನ್ನು ಉಲ್ಲೇಖಿಸಿದೆ.

161. ಸ್ಮೃತ್ವಾ ಗುರುಂ ಪೂರ್ವಗುರುಮಾದಿಮೂಲಗುರೂ ತಥಾ.... ವಿದ್ಯಾಭ್ಯಾಸೀ ತು ಸಿದ್ಧಿಭಾಕ್ – *[ತಂ.ಸಾ.ಸಂ. 4-110]*

* ಆದಿಗುರುಂ -ಶ್ರೀ ಮಧ್ವಾಚಾರ್ಯಮ್

162. ವ್ಯಾಸಂ ಚ ಭಾರತೀಂ ವಾಣೀಂ ವಿಧಿಂ ವಾಯುಂ ರಮಾಂ ತಥಾ ।
ತಥಾ ನಾರಾಯಣಂ ಮೂಲಗುರುನಾಹುರ್ವಿಪಶ್ಚಿತಃ । – *ಪಂಚರಾತ್ರೇ [ಭಲಾರೀ]*

163. ಸುಖಂ ಸ್ವರೂಪಭೂತಂ ಯದಾನಂದ ಇತಿ ಕಥ್ಯತೇ.... – *[ಬೃ.ಉ.ಭಾ. 6-3-10]*

## 3. ಮುಖ್ಯಪ್ರಾಣ ಮತ್ತು ದೇವರು ಇವರ ಸಂಬಂಧದ ಕುರಿತಾದ ನಾಮಗಳು

**೯೫. ಅನಿಲಮ್:** ಅ ಎನಿಸುವ ಭಗವಂತನೇ ಆಶ್ರಯವಾಗಿ ಉಳ್ಳವನು.164

ಈ ನಾಮದ ಅಧಿಕ ವಿಚಾರವನ್ನು ಈ.ಉ.[2-3]ನಲ್ಲೂ, ಬೃ.ಉ.[7-20-3]ನಲ್ಲೂ ನೋಡಬಹುದು.

**೯೬. ಬ್ರಹ್ಮಧಾಮ:** ಶ್ರೀವಿಷ್ಣುವಿಗೆ ಮುಖ್ಯ ನಿವಾಸಸ್ಥಾನವಾಗಿರುವವನು.165

ಮುಖ್ಯಪ್ರಾಣನಲ್ಲಿ ಶ್ರೀವಿಷ್ಣುವನ್ನು ತಿಳಿದುಕೊಳ್ಳಬೇಕೆಂದು ತಿಳಿಸುವಾಗ, ಆಥರ್ವಣೋಪನಿಷತ್ತಿನಲ್ಲಿ ಮುಖ್ಯಪ್ರಾಣನನ್ನು 'ಬ್ರಹ್ಮಧಾಮ' ಎಂದೇ ಕರೆಯಲಾಗಿದೆ.166

**೯೭. ದಿಶಾಂ ವತ್ಸಃ:** ಧರ್ಮ, ಜ್ಞಾನ, ವೈರಾಗ್ಯ ಹಾಗೂ ಐಶ್ವರ್ಯ ಈ ನಾಲ್ಕು ಧರ್ಮಗಳನ್ನು ನೀಡುವ ಪ್ರಯುಕ್ತ 'ದಿಕ್' ಎನಿಸಿರುವ ಭಗವಂತನ ನಾಲ್ಕು ಬಾಹುಗಳಿಂದ ಹುಟ್ಟಿದವನು.167

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [3-3-2] ನೋಡಬಹುದು.

**೯೮. ಪ್ರತ್ಯಾಕ್ಸ್ವರಃ:** ಎಲ್ಲೆಡೆ ಪ್ರತಿಯೊಬ್ಬ ಪುರುಷನನ್ನು ಕುರಿತು ಅಭಿಮುಖವಾಗಿರುವ ಸೂರ್ಯಮಂಡಲದಲ್ಲಿರುವ ಸ್ವತಂತ್ರನಾದ ಪರಮಾತ್ಮನಲ್ಲಿ ಆಸಕ್ತನಾಗಿರುವವನು.168

ಈ ನಾಮದ ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [1-3-2] ನೋಡಬಹುದು.

**೯೯. ಯತ್:** ಶ್ರೀಹರಿಯಿಂದ ಮಾತ್ರ ನಿಯಮಿಸಲ್ಪಡುತ್ತಿದ್ದ ಉಳಿದ ಯಾರಿಂದಲೂ ನಿಯಮಿಸಲ್ಪಡದಿರುವವನು.169

---

164. ಅದೋಷತ್ವಾದ ಇತ್ಯುಕ್ತೋ ವಾಯುಸ್ತನ್ನಿಲಯೋ ಯತಃ ।
ಅನಿಲಂ ತತ ಏವಾಸೌ.... – *[ಬೃ.ಉ.ಭಾ. 7-20-3]*

165. ಪ್ರಧಾನಂ ಧಾಮ ವಿಷ್ಣೋಸ್ತು ಪ್ರಾಣ ಏವ ಪ್ರಕೀರ್ತಿತಃ । – *[ಆಥ.ಉ.ಭಾ. 4-1-1]*

166. ಸ ವೇದೈತತ್ ಪರಮಂ ಬ್ರಹ್ಮಧಾಮ ಯತ್ರ ವಿಶ್ವಂ ನಿಹಿತಂ ಭಾತಿ....
– *[ಆಥ. ಉ. 4-1-1]*

167. ದಿಙ್ನಾಮಾನಶ್ಚ ತೇ ಪ್ರೋಕ್ತಾ ಧರ್ಮಜ್ಞಾನಾದಿದೇಶನಾತ್ ।
ತೇಭ್ಯೋ ಜಾತೋ ಮಹಾವಾಯುರ್ದಿಶಾಂ ವತ್ಸಸ್ತತಃ ಸ್ಮೃತಃ ।
– *[ಛಾಂ.ಉ.ಭಾ. 3-3-2]*

168. ಕೇಶವಃ ಸ್ವಃ ಸ್ವತಂತ್ರತ್ವಾತ್ ತದ್ರತೇರ್ಮಾರುತಃ ಸ್ವರಃ ।
ಶರೀರಸ್ಥಶ್ಚ ಸೂರ್ಯಸ್ಥಃ ಪ್ರತಿಪ್ರತ್ಯಾಸಮಂತತಃ ।
ಮಾಂ ಪ್ರತೀತ್ಯತ ಏವಾಸೌ ಪ್ರತ್ಯಾಕ್ಸ್ವರ ಉದಾಹೃತಃ । – *[ಛಾಂ.ಉ.ಭಾ. 1-3-2]*

169. ಅಥಾಮೂರ್ತಂ ಪ್ರಾಣಶ್ಚ..... ಏತದ್ ಯತ್.... – *[ಬೃ.ಉ. 4-3-5]*

* ಯತ್ ಹರಿಮಾತ್ರನಿಯಮ್ಯಮ್ । ತದ್ವ್ಯತಿರಿಕ್ತಪುರುಷಾನಿಯಮ್ಯಮಿತಿ ಯಾವತ್ ।
– *ಭಾವಬೋಧ*

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [4-3-5] ನೋಡಬಹುದು.

**೧೦೦. ಸವಿತಾ:** ಶ್ರೀವಿಷ್ಣುವನ್ನು ಜಗತ್ತಿಗೆ ಸರಿಯಾಗಿ ತಿಳಿಸಿಕೊಡುವ ಮೂಲಕ ಜಗತ್ತಿನ ಸಾಧಕರ ಹೃದಯದಲ್ಲಿ ಅವನು ಪ್ರಾದುರ್ಭವಿಸುವಂತೆ ಮಾಡುವವನು.170

- ಜಗತ್ತನ್ನು ಸೃಷ್ಟಿ ಮಾಡುವವನು.171

ಈ ನಾಮದ ಅಧಿಕ ವಿಚಾರವನ್ನು ಐ.ಉ.ಭಾ.ದಲ್ಲಿ [2-8-4-8] ಹಾಗೂ ಛಾ.ಉ.[1-3-16]ದಲ್ಲಿ ನೋಡಬಹುದು.

**೧೦೧. ಸಂವತ್ಸರಃ:** ಶ್ರೀವಿಷ್ಣುವಿನ ಪುತ್ರನಾಗಿದ್ದು, ಅವನಿಂದ ಚೆನ್ನಾಗಿ ಸುಖ ಪಡೆಯುವವನು.172

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ[3-6-22] ನೋಡಬಹುದು.

**೧೦೨. ಸ್ವರಃ:**

ಅ. ಸ್ವತಂತ್ರನಾಗಿದ್ದು 'ಸ್ವ' ಎನಿಸುವ ಭಗವಂತನ ವಿಷಯದಲ್ಲಿಯೇ ಆನಂದ ಪಡುತ್ತಿರುವವನು.173

ಆ. ಜೀವಾತ್ಮನು ಸ್ವತಂತ್ರನಾದ ಭಗವಂತನ ವಿಷಯದಲ್ಲಿ ಆನಂದಿಸುವಂತೆ ಮಾಡುವವನು.174

ಇ. ಉದ್ಗಾತೃವಿನ ಸ್ವರದಲ್ಲಿ ಸನ್ನಿಹಿತನಾಗಿರುವವನು.175

ಈ ನಾಮದ ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [1-3-4] ಹಾಗೂ ಬೃ.ಉ.ನಲ್ಲಿ [3-3-26] ನೋಡಬಹುದು.

**೧೦೩. ಪುರುಷಃ:** ಗುಣಪೂರ್ಣನಾಗಿರುವ ಬ್ರಹ್ಮನನ್ನು ರುದ್ರಾದಿಗಳಿಗಿಂತೆಲ್ಲ ಅಧಿಕವಾಗಿ ತಿಳಿದಿರುವವನು.176

---

170. ಪರಸ್ಯ ಬ್ರಹ್ಮಣೋ ವಿಷ್ಣೋರ್ಜ್ಞಾಪನಾಖ್ಯಪ್ರಸೂತಿಭಿಃ ।
ವಾಯುಃ ಪುನಾತಿ ಯಲ್ಲೋಕಾನ್ ಸವಿತಾ ತೇನ ಕಥ್ಯತೇ । [ಐ.ಉ.ಭಾ. 2-8-4-8]

171. ಪ್ರಸೂತೇ ಜಗದಿತಿ ಸವಿತಾ ।

172. ವಾಯುಃ ಸಂವತ್ಸರಃ ಪ್ರೋಕ್ತೋ ವತ್ಸೋ ವಿಷ್ಣೋರಸೌ ಯತಃ ।
ಸಮ್ಯಗೇವ ರತಿಂ ಯಾತಿ.... *–[ಬೃ.ಉ.ಭಾ. 3-6-22]*

173. ಕೇಶವಃ ಸ್ವಃ ಸ್ವತಂತ್ರತ್ವಾತ್ ತದ್ರತೇರ್ಮಾರುತಃ ಸ್ವರಃ ।
ಶರೀರಸ್ಥಶ್ಚ ಸೂರ್ಯಸ್ಥಃ..... *–[ಛಾಂ.ಉ.ಭಾ. 1-3-4]*

174. .....ವಾಯುಃ ಪ್ರಾಣಃ ಶರೀರಗಃ । ಸ್ವೇ ವಿಷ್ಣೌ ರಮಯತ್ಯೇನಂ ಜೀವಂ ತಸ್ಮಾತ್ ಸ್ವರಃ ಸ್ಮೃತಃ । *– ಮಾಹಾತ್ಮ್ಯೇ [ಛಾಂ.ಉ.ಭಾ. 1-3-4]*

175. ಗೃಹಕೋಶಾದಿಕಂ ಯತ್ ಸ್ವಂ ತದ್ರೂಪ್ಯಸ್ಯ ಸ್ವರೇ ಸ್ಥಿತಃ *–[ಬೃ.ಉ.ಭಾ. 3-3-26]*

176. ಪುರು ಬ್ರಹ್ಮ ಗುಣಾಧಿಕ್ಯಾತ್ ತಜ್ಞಾನಾತ್ ಪುರುಷಃ ಸ್ಮೃತಃ ।
*– ಪ್ರವೃತ್ತೇ [ಗೀ.ತಾ. 2-15]*

ಅ. ಪುರುಷತತ್ವಕ್ಕೆ ಅಭಿಮಾನಿಯಾಗಿರುವವನು.[177]

ನಾರಾಯಣನೇ ಮುಂತಾದವರನ್ನು ಪುರುಷಶಬ್ದವಾಚ್ಯರನ್ನಾಗಿ ಹೆಸರಿಸಿರುವ 'ದತ್ತಾತ್ರೇಯಯೋಗ' ವಾಯುದೇವನನ್ನೂ ಪುರುಷಶಬ್ದವಾಚ್ಯರಲ್ಲಿ ಮೂರನೆಯವನ ನ್ನಾಗಿ ಹೆಸರಿಸಿ, ಮೋಕ್ಷ ಆಗಬೇಕೆಂದರೆ ಅವನ ಜ್ಞಾನವೂ ಅತ್ಯಾವಶ್ಯಕ ಎಂದು ತಿಳಿಸಿದೆ.[178]

**೧೦೪. ಸರಸ್ವಾನ್:** ಎಲ್ಲೆಡೆ ವ್ಯಾಪಿಸಿರುವುದರಿಂದ, ಸರ್ವಜ್ಞನಾಗಿರುವುದರಿಂದ 'ಸರಃ' ಎನಿಸಿರುವ ಭಗವಂತನಿಗೆ ಪ್ರಿಯನಾಗಿದ್ದು ಅವನನ್ನು ಹೊಂದಿರುವವನು.[179]

ಋಗ್ವೇದದ ಸಾರಸ್ವತಸೂಕ್ತದಲ್ಲಿ ಸರಸ್ವತೀಶಬ್ದವನ್ನು ವ್ಯಾಖ್ಯಾನಿಸುವಾಗ ಸರಸ್ವಾನ್ ಶಬ್ದವನ್ನು ವಾಯುದೇವನ ಪರವಾಗಿ ಅರ್ಥೈಸಲಾಗಿದೆ.

**೧೦೫. ಅದ್ರಿಃ:** ಭಗವಂತನ ಆದರಕ್ಕೆ ಅರ್ಹನಾಗಿರುವವನು.[180]

ಋಗ್ವೇದದ ಏಳನೇ ಸೂಕ್ತದ ಎರಡನೇ ಮಂತ್ರದಲ್ಲಿ ಇಂದ್ರನಾಮಕ ಭಗವಂತನು ತನ್ನ ಆದರಕ್ಕೆ ಯೋಗ್ಯನಾಗಿರುವುದರಿಂದ 'ಅದ್ರಿ' ಎನಿಸಿರುವ ವಾಯುದೇವನನ್ನು ಜ್ಞಾನಗಳಿಂದ ಪ್ರೇರಿಸಿದನೆಂದು ತಿಳಿಸಲಾಗಿದ್ದರೆ,[181] ಹತ್ತನೇ ಸೂಕ್ತದ ಏಳನೇ ಮಂತ್ರದಲ್ಲಿ ಆದರಯೋಗ್ಯನಾಗಿರುವುದರಿಂದ ಮುಖ್ಯವಾಯುವನ್ನು ಅದ್ರಿ ಎಂದು ಕರೆದು ಇಂದ್ರ ನಾಮಕ ಭಗವಂತನು ಅವನ ಪ್ರೇರಕನೆಂದು ತಿಳಿಸಲಾಗಿದೆ.[182]

---

* ಪುರುಸರಣಾತ್ ಪುರುಷ ಇತ್ಯರ್ಥಃ — *ಗೀ.ತಾ.*

177. ಬ್ರಹ್ಮಾ ತು ಪುರುಷಃ ಸ್ಮೃತಃ ।....ಏವಂ ವಾಯುರಪಿ ಜ್ಞೇಯೋ.... — *[ತಂ.ಸಾ.ಸಂ. 3-133]*

178. ನಾರಾಯಣೋ ಬ್ರಹ್ಮವಾಯೂ.... ಕ್ರಮಶಃ ಪುರುಷಾಖ್ಯಾಭಿಶಬ್ದಿತಾಃ.....
ತಜ್ಜ್ಞಾನಾದ್ ವಿಪ್ರಮುಚ್ಯತೇ
— *ದತ್ತಾತ್ರೇಯಯೋಗ [ಭಾ.ತಾ.ನಿ. 3-26-11]*

179. ಸರಣಾತ್ ಸರ್ವಗತತ್ವೇನ ಸರ್ವಜ್ಞೋ ವಾ ಸರೋ ಹರಿಃ ।
.....ಹರಿಪ್ರಿಯತ್ವತೋ ವಾಯುಃ ಸರಸ್ವಾನ್.... — *[ಋ.ಭಾ. 3-151]*

180. ಭಗವತಃ ಆದರಯೋಗ್ಯತ್ವಾತ್ ಅದ್ರಿಃ ವಾಯುಃ ।

181. ಜ್ಞಾನೈರಾದರಯೋಗ್ಯಂ ಚ ಪ್ರಾಣಾತ್ಮಾನಂ ಸಮ್ಪ್ರೈರಯತ್ । — *[ಋ.ಭಾ. 7-209]*

182. ಅದ್ರಿರಾದರಯೋಗ್ಯತ್ವಾತ್ ಪ್ರಾಣಸ್ತದ್ವರ್ತಕೋಽದ್ರಿವಾ — *[ಋ.ಭಾ. 10-243]*

## 4. ಮುಖ್ಯಪ್ರಾಣ ಮತ್ತು ಇತರ ದೇವತೆಗಳು ಇವರ ಸಂಬಂಧದ ಕುರಿತಾದ ನಾಮಗಳು

**೧೦೬. ಅನ್ನಾಯುಃ:** ಅನ್ನಾತ್ಮಕ ದೇಹವುಳ್ಳ ದೇವತೆಗಳಿಗೆ ಆಯುಷ್ಯವನ್ನು ನೀಡುವವನು.

ಅ. ಅನ್ನಾಭಿಮಾನಿಯಾಗಿದ್ದು ಅನ್ನದೇವ ಎನಿಸುವ ಚತುರ್ಮುಖನಿಗೆ ಆಯುಷ್ಯವನ್ನು ನೀಡುವವನು.

ಆ. ಅನ್ನಾತ್ಮಕ ದೇಹವುಳ್ಳ ದೇವತೆಗಳಿಗೆ ಜ್ಞಾನ-ಕ್ರಿಯಾ-ಮೋಕ್ಷಗಳನ್ನು ನೀಡುವವನು.183

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಐ.ಉ.ನಲ್ಲಿ [2-3-6] ನೋಡಬಹುದು.

**೧೦೭. ಆಯತನಮ್:**

ಅ. ಮುಖ್ಯ ಆಶ್ರಯನಾಗಿರುವವನು.184

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [5-1-1] ನೋಡಬಹುದು.

**೧೦೮. ಪರಾಯಣಮ್:**

ಅ. ಇಂದ್ರಾದಿಗಳಿಗಿಂತ ಶ್ರೇಷ್ಠರಾದ ರುದ್ರಾದಿಗಳಿಗೂ ಆಸರೆ ಆಗಿರುವವನು.

ಆ. ರುದ್ರಾದಿಗಳಿಗಿಂತಲೂ ಮುಖ್ಯ ಆಸರೆ ಆಗಿರುವವನು.185

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಷ.ಉ.ನಲ್ಲಿ [1-1-10] ನೋಡಬಹುದು.

**೧೦೯. ವ್ರಾತ್ಯಃ:** ದೇವತಾಸಮುದಾಯ, ಇಂದ್ರಿಯಸಮುದಾಯ, ಪಂಚಭೂತಗಳ ಸಮುದಾಯ ಇವುಗಳಿಗೆಲ್ಲ ನಿಯಾಮಕನಾಗಿರುವವನು.186

ಅ. ವಿಷ್ಣು ಪ್ರೀತಿಕರಗಳಾದ ವ್ರತಗಳನ್ನು ಮಾಡುವವನು. ಸಾತ್ವಿಕರು ಅಂತಹ ವ್ರತಗಳನ್ನು ಮಾಡುವಂತೆ ಪ್ರೇರಿಸುವವನು ಹಾಗೂ ಸಾತ್ವಿಕರು ನಡೆಸಿದ ಅಂತಹ ವ್ರತಗಳನ್ನು ಶ್ರೀವಿಷ್ಣುವಿಗೆ ಸಮರ್ಪಿಸುವವನು.187

---

183. ಆಯುರೂಪೋಽಖಿಲಾನಾಂ ಚ ದೇವಾನಾಂ ವಾಯುರೇವ ಹಿ ।
ಅನ್ನದೇವಸ್ಯ ಚಾಯುಃ ಸ ತಸ್ಮಾದ್ ದೇವೋತ್ತಮೋ ಮರುತ್ ।
ಆಯುಶ್ಶಬ್ದೋ ಜ್ಞಾನವಾಚೀ ಗತಿವಾಚೀ ಚ ಯತ್ ತತಃ ।
ಚೇಷ್ಟಾಮೋಕ್ಷಜ್ಞಾನದಾತಾ ಸುರಾಣಾಂ ಮಾರುತಸ್ತತಃ । – *[ಐ.ಉ.ಭಾ. 2-3-6]*

184. ...ಆಯತನಂ ತಥಾ । ವಾಯುರೇವ ಮಹಾನ್..– *ಪ್ರಭಾವೇ [ಛಾಂ.ಉ.ಭಾ.5-1-1]*

185. ತದೇತದೃಚಾಽಭ್ಯುಕ್ತಮ್ -ವಿಶ್ವರೂಪಂ ಕರಿಣಂ ಜಾತವೇದಸಂ ಪರಾಯಣಂ.... – *[ಷ.ಉ. 1-1-10]*

186. ವ್ರಾತಃ ಸಮುದಾಯಃ । ದೇವತಾದಿ ವ್ರಾತಸ್ಯ ನಿಯಾಮಕತ್ವೇನ ತತ್ಸಂಬಂಧೀತಿ ವ್ರಾತ್ಯಃ ।

187. ವಿಷ್ಣುಪ್ರೀತಿಕರಾಣಾಂ ವ್ರತಾನಾಂ ಕರ್ತೃತ್ವಾತ್, ಕಾರಯಿತೃತ್ವಾತ್, ಅರ್ಪಯಿತೃತ್ವಾಚ್ಚ ತತ್ಸಂಬಂಧೀತಿ ವ್ರಾತ್ಯಃ ।

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಷ.ಉ.ನಲ್ಲಿ [2-1-15] ನೋಡಬಹುದು.

**೧೧೦. ಮಹಾರಾಜಃ:** ಇಂದ್ರ ಮುಂತಾದ ಕ್ಷತ್ರಿಯ ದೇವತೆಗಳಲ್ಲಿ ಶ್ರೇಷ್ಠನಾಗಿರುವವನು.188

ಈ ನಾಮದ ಬಗ್ಗೆ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [4-1-19] ನೋಡಬಹುದು.

**೧೧೧. ಸರ್ವಧಾತಮಮ್:**

ಅ. ಧಾರಕರಾದ ತತ್ತ್ವಾಭಿಮಾನಿದೇವತೆಗಳಲ್ಲೆಲ್ಲ ಉತ್ತಮನಾಗಿರುವವನು.189

ಈ ನಾಮದ ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [5-1-14] ನೋಡಬಹುದು.

**೧೧೨. ವಹ್ನಿತಮಃ:**

ಅ. ದೇವತೆಗಳಿಗೆ ಯಜ್ಞದ ಆಹುತಿಯನ್ನು ಮುಖ್ಯವಾಗಿ ತಲುಪಿಸುವವನು.190

ಆ. ದೇವತೆಗಳ ಚಟುವಟಿಕೆಗಳನ್ನು ಮುಖ್ಯವಾಗಿ ನಿರ್ವಹಿಸುವವನು.191

ಈ ನಾಮದ ಅಧಿಕ ವಿಚಾರವನ್ನು ಷ.ಉ.ನಲ್ಲಿ [2-1-12] ನೋಡಬಹುದು.

**೧೧೩. ಸಮಷ್ಟಿಃ:**

ಅ. ಗುಣಪೂರ್ಣರಾದ ಗರುಡ, ರುದ್ರ, ಶೇಷ, ಇಂದ್ರ, ಸೌಪರ್ಣಿ, ಪಾರ್ವತಿ, ವಾರುಣಿ ಹಾಗೂ ಶಚಿ –ಈ ಎಂಟು ಮಂದಿಗಳನ್ನು ತನ್ನ ವಶದಲ್ಲಿಟ್ಟುಕೊಂಡು ಪ್ರೇರಿಸುತ್ತಿರುವವನು.192

ಆ. ರುದ್ರ ಕೊನೆಯವನಾಗಿ ಉಳ್ಳ, ಸಕಲತತ್ತ್ವದೇವತೆಗಳನ್ನೂ ಜೀವರನ್ನೂ ಪ್ರತಿಯೊಂದು ದೇಹದಲ್ಲೂ ಹೊರಗಿನಿಂದ ಪ್ರೇರಿಸುವವನು.193

---

188. ಮಹಾರಾಜೋ ವಾಯುಃ – *[ಬೃ.ಉ.ಭಾ. 4-1-19]*

* ರಾಜಾ ಕ್ಷತ್ರಿಯಃ, 'ರಾಜಾ ತು ಕ್ಷತ್ರಿಯೇ ಚಂದ್ರೇ....' ಮಹಾಂಶ್ಚಾಸೌ ರಾಜಾ ಚ ಮಹಾರಾಜಃ ಕ್ಷತ್ರಿಯಶ್ರೇಷ್ಠಃ ।

189. ಸರ್ವಧಾತ್ರೄಣಾಂ ಉತ್ತಮಂ.... ಧೀಮಹಿ – *[ಛಾಂ.ಉ.ಭಾ. 5-1-14]*

190. ವಹತಿ ಆಹುತಿಂ ಪ್ರಾಪಯತೀತಿ ವಹ್ನಿಃ ।
ಅತಿಶಯೇನ, ಪ್ರಧಾನತಯಾ ಇತಿ ಯಾವತ್ ವಹತೀತಿ ವಹ್ನಿತಮಃ ।

191. ವಹತಿ ನಿರ್ವಹತಿ ಇಂದ್ರಿಯಾಭಿಮಾನಿಚೇಷ್ಟಾಃ ಅತಿಶಯೇನ ಪ್ರಧಾನತಯಾ ಇತಿ ಯಾವತ್, ವಹ್ನಿತಮಃ ।

192. ಸಂಪೂರ್ಣಾಂಶ್ಚ ಸುಪರ್ಣಶಶೇಷೇಂದ್ರಾನ್ ತತ್ಸ್ತ್ರಿಯೋಽಪಿ ಚ । ಅಷ್ಟೌ ನಯಿತ್ವನ್ನ ಯತಿ ವಶೀಕೃತ್ಯ ಸ್ವಯಂ ಪ್ರಭುಃ । ಅತೋ.... ಸಮಷ್ಟಿಶ್ಚಿ ವಾಯುರೇವಾಭಿಧೀಯತೇ ।
– *ಪರಮಸಂಹಿತಾ [ಬೃ.ಉ.ಭಾ. 5-3-2]*

193. ಪಂಚಭೂತಮನೋಬುದ್ಧಿರುದ್ರಾಣಾಂ ಪ್ರತಿದೇಹಕಮ್ ।
ಬಾಹ್ಯತಶ್ಚಾಪಿ ನೇತೃತ್ವಾತ್ ವಾಯುರ್ವ್ಯಷ್ಟಿಃ ಸಮಷ್ಟಿಕಃ ।
– *ಪ್ರಭಂಜನೇ [ಭಾ.ತಾ.ನಿ. 11-11-46]*

ಈ ನಾಮದ ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [4-1-4] ನೋಡಬಹುದು.

**೧೧೪. ಸಂವರ್ಗ:** ಎಲ್ಲ ದೇವತೆಗಳನ್ನು ಸಂಹರಿಸುವವನು.194

ಈ ನಾಮದ ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [4-1-4] ನೋಡಬಹುದು.

**೧೧೫. ಜ್ಯೇಷ್ಠಃ:** ಉಳಿದೆಲ್ಲ ದೇವತೆಗಳಿಗಿಂತ ವಯಸ್ಸಿನಲ್ಲಿ ಹಿರಿಯನಾಗಿರುವವನು.

**೧೧೬. ವಸಿಷ್ಠಃ:** ಸಮೀಪದಲ್ಲಿ ವಾಸಿಸುವವರಲ್ಲೆಲ್ಲ ಉತ್ತಮನಾಗಿರುವವನು.

**೧೧೭. ಪ್ರತಿಷ್ಠಃ:** ಒಂದೆಡೆ ನೆಲೆವೂರಲು ಕಾರಣನಾಗಿರುವವನು.

**೧೧೮. ಸಂಪತ್:** ಭಕ್ತರ ಪಾಲಿಗೆ ಸಂಪತ್ ಎನಿಸಿರುವವನು.

ವಾಯುದೇವನೇ ಶ್ರೇಷ್ಠ, ಜ್ಯೇಷ್ಠ, ವಸಿಷ್ಠ, ಪ್ರತಿಷ್ಠ ಹಾಗೂ ಸಂಪತ್ ಆಗಿದ್ದು ಅವನ ಅನುಗ್ರಹದಿಂದಷ್ಟೇ ಅಗ್ನಿಯು ವಸಿಷ್ಠ ಎನಿಸಿದರೆ, ಸೂರ್ಯನು ಪ್ರತಿಷ್ಠಾ ಎನಿಸುವನು. ಇಂದ್ರನು ಸಂಪತ್ ಎನಿಸುವನು. ರುದ್ರನು ಆಯತನ ಎನಿಸುವನು.196

ಈ ನಾಮದ ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [5-1-8, 9] ನೋಡಬಹುದು.

**೧೧೯. ವಂಶಃ:** ಮನೆಯ ಮೇಲು ಛಾವಣಿಯ ಮಧ್ಯದ ಪ್ರಧಾನ ತೊಲೆ ಉಳಿದ ಸಣ್ಣ ತೊಲೆಗಳಿಗೆ ಹೇಗೋ ಹಾಗೆ ಇಂದ್ರಿಯಾಭಿಮಾನಿದೇವತೆಗಳೇ ಮುಂತಾದವರಿಗೆ ಆಧಾರನಾಗಿರುವವನು.197

ಈ ನಾಮದ ಅಧಿಕ ವಿಚಾರವನ್ನು ಐ.ಉ.ನಲ್ಲಿ [2-7-4-1 ಮತ್ತು 2-8-1-1] ನೋಡಬಹುದು.

---

194. ಸಂವೃಕ್ತೇ ಸರ್ವದೇವಾನ್ ಯತ್ ವಾಯುಃ ಸಂವರ್ಗ ಈರಿತಃ ।
*– [ಛಾಂ.ಉ.ಭಾ. 4-1-4]*

195. ಜ್ಯೇಷ್ಠಃ ಶ್ರೇಷ್ಠೋ ವಸಿಷ್ಠಶ್ಚ ಸಂಪದಾಯತನಂ ತಥಾ ।
ವಾಯುರೇವ ಮಹಾಂಸ್ತಸ್ಯ ಪ್ರಸಾದಾದಗ್ನಿರೇವ ತು ।
ಉಪಚಾರವಸಿಷ್ಠಃ ಸ್ಯಾತ್ ಪ್ರತಿಷ್ಠೈವಂ ರವಿಸ್ತತಃ ।
ಸಂಪದಿಂದ್ರಸ್ತಥೈವೋಕ್ತೋ.... *– ಪ್ರಾಭವ [ಛಾಂ.ಉ.ಭಾ. 5-1-8, 9, 10]*

197. ಗೃಹಸ್ಯಾಚ್ಛಾದನಾದೀನಾಂ ಮಧ್ಯವಂಶೋ ಯಥಾಽಽಶ್ರಯಃ ।
ತಥೇಂದ್ರಿಯಾಭಿಮಾನ್ಯಾದಿದೇವಾನಾಂ ವಾಯುರಾಶ್ರಯಃ ।
*– [ಐ.ಉ.ಭಾ. 2-8-1-1]*

# 5. ಮುಖ್ಯಪ್ರಾಣ ಮತ್ತು ಭಾರತೀದೇವಿ ಇವರ ಸಂಬಂಧದ ಕುರಿತಾದ ನಾಮಗಳು

**೧೨೦. ಉದ್ಗೀಥಃ** ಜಗತ್ತನ್ನು ಮೇಲೆತ್ತಿ ಹಿಡಿದುದರಿಂದ 'ಉತ್' ಎನಿಸುವ ವಾಯುದೇವನು, ಸಾಮವೇದಾಭಿಮಾನಿಯಾಗಿದ್ದು 'ಗೀಥಾ' ಎನಿಸುವ ಭಾರತೀದೇವಿಯಿಂದ ಕೂಡಿಕೊಂಡು ಅರ್ಧನಾರೀರೂಪದಿಂದ 'ಉದ್ಗೀಥ' ಎನಿಸುವನು.198

**೧೨೧. ಋಷಭಃ**

ಅ. ಗೋರೂಪದ ಸರಸ್ವತಿಗೆ ಪತಿ.199

ಆ. ಎತ್ತಿನ ರೂಪ ಧರಿಸಿರುವವನು.200

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [7-10-1] ಹಾಗೂ ಛಾಂ.ಉ.ನಲ್ಲಿ [4-2-4] ನೋಡಬಹುದು.

**೧೨೨. ಪರಾರ್ಧಃ** ರುದ್ರಾದಿಗಳಿಗಿಂತ ಪರಮಳೆನಿಸಿರುವ ವಾಗಭಿಮಾನಿನಿ ಸರಸ್ವತಿಗಿಂತಲೂ ಉತ್ತಮಳಾದ ಋಗ್ವೇದಾಭಿಮಾನಿನಿ ಸರಸ್ವತಿ ಪರರ್ಧ ಎನಿಸಿದ್ದರೆ ಆಕೆಗಿಂತಲೂ ಉತ್ತಮನಾದ ವಾಯುದೇವನು ಪರಾರ್ಧ ಎನಿಸುವನು.201 ಜ್ಞಾನಾದಿಗುಣಗಳ ವಿಷಯದಲ್ಲಿ ಭಾರತ್ಯಾದಿಗಳಿಗಿಂತಲೂ ಸಮೃದ್ಧನಾಗಿರುವವನು.

ಈ ನಾಮದ ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [1-1-1] ಹಾಗೂ ಕಾಠ.ಉ.ನಲ್ಲಿ [1-7-1] ನೋಡಬಹುದು.

---

198. ಏಷ ಉ ವಾ ಉದ್ಗೀಥಃ ಪ್ರಾಣೋ ವಾ ಉತ್ ।
ಪ್ರಾಣೇನ ಹೀದಂ ಸರ್ವಮುತ್ತಬ್ಧಂ ವಾಗೇವ ಗೀಥೋಚ್ಚ ಗೀಥಾ ಚೇತಿ ಸ ಉದ್ಗೀಥಃ ।
*– [ಬೃ.ಉ. 3-3-23]*

* .....ಸಾ ದೇವೀ ಸಾಮರೂಪತಃ ।
ಗೀಥೇತ್ಯುಕ್ತಾ ತದುದ್ಗೀಥಸಾಮಾಖ್ಯೋಽರ್ಧತನುಸ್ತಯಾ ।
ಅರ್ಧನಾರೀನರವಪುರ್ವಾಯುಃ ಕುತ್ರಚಿದೀರಿತಃ । *– [ಬೃ.ಉ.ಭಾ.]*

199. ಸರಸ್ವತೀ ತು ಗೋರೂಪಾ ...... ತಸ್ಯಾ ವಾಯುಃ ಪತಿಃ ಪ್ರಭುಃ ।

200. ವಾಯುಃ ವೃಷಭರೂಪಃ ಸನ್.... ಸತ್ಯಕಾಮಾಯ ಹೋಚಿರೇ ।
*– ಆಚಾರ್ಯಸಂಹಿತಾ [ಛಾಂ.ಉ.ಭಾ. 4-2-4]*

201. ಪರರ್ಧಂ ಪರಮಾದುಚ್ಚಂ ಪರಾರ್ಧಂ ತು ತತೋಽಧಿಕಮ್ ।
ತತೋಽಧಿಕಂ ಪರಾರ್ಧಿ ಸ್ಯಾತ್ ಪರಾರ್ಧ್ಯಮಿತಿ ತತ್ಪರಮ್ ।
ಪರತಃ ಪರಮಾಚ್ಚೈವ ಪರಾರ್ಧ್ಯೋ ವಾಯುರೀರಿತಃ ॥ *– [ಛಾಂ.ಉ. 1-1-1]*

* ಪರಸ್ಮಾದಪಿ ಆ ಸಮಂತ್ಯಾತ್ ಋದ್ಧಂ ಹಿ ಪರಾರ್ಧಮ್ । *– [ಛಾಂ.ಉ.ಭಾ.]*

೧೨೩. ಬೃಹಸ್ಪತಿಃ: ಸ್ತ್ರೀಗುಣಗಳಿಂದ ಪರಿಪೂರ್ಣಳಾಗಿದ್ದು 'ಬೃಹತೀ' ಎನಿಸುವ ಭಾರತೀದೇವಿಗೆ ಪ್ರತಿಯಾಗಿರುವವನು.202

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [3-3-20] ನೋಡಬಹುದು.

೧೨೪. ಬ್ರಹ್ಮಣಸ್ಪತಿಃ: ಅನಂತವೇದಾಭಿಮಾನಿನಿಯಾಗಿರುವುದರಿಂದ ಅಥವಾ ಶ್ರೀಹರಿಯ ವಿಶೇಷ ಸನ್ನಿಧಾನಕ್ಕೆ ಪಾತ್ರಳಾಗಿರುವುದರಿಂದ 'ಬ್ರಹ್ಮ' ಎನಿಸುವ ಭಾರತೀ ದೇವಿಗೆ ಪತಿಯಾಗಿರುವವನು.203

ಅ. ಋಗ್ವೇದ ವಾಯುದೇವನನ್ನು ಬ್ರಹ್ಮಣಸ್ಪತಿ ಎಂದು ಈ ಅರ್ಥದಲ್ಲಿಯೇ ಕರೆದಿದೆ.204

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [3-3-21] ನೋಡಬಹುದು.

## 6. ಮುಖ್ಯಪ್ರಾಣ ಮತ್ತು ಇತರ ಜೀವರು ಇವರ ಸಂಬಂಧದ ಕುರಿತಾದ ನಾಮಗಳು

೧೨೫. ರಮ್: ಎಲ್ಲರನ್ನೂ ಸುಖಪಡಿಸುವವನು.205

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [7-14-1] ನೋಡಬಹುದು.

೧೨೬. ರಯಿಃ: ಸಜ್ಜನರ ಪಾಲಿಗೆ ಸಂಪತ್ತಾಗಿರುವವನು.206

ಈ ನಾಮದ ಅಧಿಕ ವಿಚಾರವನ್ನು ಷ.ಉ.ನಲ್ಲಿ [2-1-10] ನೋಡಬಹುದು.

೧೨೭. ವಿಶ್ವಸ್ಯ ಅತ್ತಾ: ಎಲ್ಲರನ್ನೂ ಕಬಳಿಸುವವನು.207

ಈ ನಾಮದ ಅಧಿಕ ವಿಚಾರವನ್ನು ಷ.ಉ.ನಲ್ಲಿ [2-1-15] ನೋಡಬಹುದು.

---

202. ಸ್ತ್ರೀಗುಣೈಃ ಸರ್ವಪೂರ್ಣತ್ವಾದ್ ಬೃಹತೀ ಚ ಸರಸ್ವತೀ ।
....ತತ್ಪತಿರ್ವಾಯುರೀಶ್ವರಃ...

203. ಅನಂತವೇದರೂಪತ್ವಾತ್ ಸೈವ ಬ್ರಹ್ಮೇತಿ ಕೀರ್ತಿತಾ ।
ವಿಷ್ಣುನಾ ಬೃಂಹಿತತ್ವಾದ್ವಾ ತತ್ಪತಿರ್ವಾಯುರೀಶ್ವರಃ । *–[ಬೃ.ಉ.ಭಾ. 3-3-21]*

204. ಪ್ರೈತು ಬ್ರಹ್ಮಣಸ್ಪತಿಃ... *– ಋ.ವೇ. 40-3*

* ಪತಿಸ್ತು ಬ್ರಹ್ಮಣೋ....ವಾಗೀಶತ್ವಾತ್ ಸಮೀರಣಃ । *– [ಋ.ಭಾ.]*

205. ಪ್ರಾಣೋ ವೈ ರಂ ಪ್ರಾಣೇ ಹೀಮಾನಿ ಸರ್ವಾಣಿ ಭೂತಾನಿ ರಮಂತೇ.... *– [ಬೃ.ಉ. 7-14-1]*

206. ತೇ ಪ್ರೀತಾಃ ಪ್ರಾಣಂ ಸ್ತುವಂತಿ....ಏಷ ಪೃಥಿವೀ ರಯಿಃ... *– [ಷ.ಉ. 2-1-10]*

207. ತೇ ಪ್ರೀತಾಃ ಪ್ರಾಣಂ ಸ್ತುವಂತಿ.... ಅತ್ತಾ ವಿಶ್ವಸ್ಯ..... । *– [ಷ.ಉ. 2-1-15]*

೧೨೮. ಸತ್ಪತಿಃ:

ಅ. ಸಜ್ಜನರಿಗೆ ಅಧಿಪತಿಯಾಗಿರುವವನು.208

ಆ. ಉತ್ತಮನಾದ ಒಡೆಯ.

ಈ ನಾಮದ ಅಧಿಕ ವಿಚಾರವನ್ನು ಷ.ಉ.ನಲ್ಲಿ [2-1-15] ನೋಡಬಹುದು.

೧೨೯. ವ್ಯಷ್ಟಿಃ:

ಅ. ವಿವಿಧರಾದ ದೇವ, ಋಷಿ, ಪಿತೃ, ಯಕ್ಷ, ಗಂಧರ್ವ, ಮಾನುಷ, ಉರಗ ಹಾಗೂ ಅಸುರ –ಈ ಎಂಟು ವಿಧದ ಚೇತನರನ್ನು ತನ್ನ ವಶದಲ್ಲಿ ಇಟ್ಟು ಕೊಂಡಿರುವವನು.209

ಆ. ಪ್ರತಿಯೊಂದು ದೇಹದಲ್ಲೂ ಪಂಚಭೂತಗಳು, ಮನಸ್ಸು, ಬುದ್ಧಿ ಹಾಗೂ ಅಹಂಕಾರತತ್ವ –ಹೀಗೆ ಈ ಎಂಟು ತತ್ವಗಳಿಗೆ ಅಭಿಮಾನಿಗಳಾದ ದೇವತೆ ಗಳನ್ನೂ ಜೀವರನ್ನೂ ಆಂತರಿಕವಾಗಿ ಪ್ರೇರಿಸುವವನು.210

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [5-3-2] ಹಾಗೂ ಭಾಗ.ತಾ.ನಿ. [11-11-46] ದಲ್ಲಿ ನೋಡಬಹುದು.

೧೩೦. ವಾಯುಃ: ಬಲದೇವತೆ ಹಾಗೂ ಶರೀರಿಗಳಿಗೆ ಆಯುಷ್ಯವನ್ನು ಕೊಡುವವನು.211

೧೩೧. ಯಜುಃ: ಮುಕ್ತಿಯಲ್ಲಿ ಸಕಲ ಚೇತನರೂ ಯಾರನ್ನು ಸೇರಿಕೊಳ್ಳುವರೋ ಅಂತಹವನು.212

---

208. ತೇ ಪ್ರೀತಾಃ ಪ್ರಾಣಂ ಸ್ತುವಂತಿ.....ತ್ವಂ....ಸತ್ಪತಿಃ...[ಷ.ಉ. 2-1-15]

209. ತಸ್ಮಾತ್ ಸರ್ವೋತ್ತಮೋ ವಾಯುರ್ವಿವಿಧಂ ತು ಯದಷ್ಟಕಮ್ ।
ದೇವಾನ್ ಋಷೀನ್ ಪಿತೄನ್ ಯಕ್ಷಾನ್ ಗಂಧರ್ವಾನ್ ಮಾನುಷೋರಗಾನ್ ।
ಅಸುರಾಂಶ್ಚ ವಶೇ ನಿತ್ಯಂ ನಯತ್ಯಮಿತಪೌರುಷಃ ।
...ಅತೋ ವ್ಯಷ್ಟಿಃ......ವಾಯುರೇವಾಭಿಧೀಯತೇ ।
*– ಪರಮಸಂಹಿತಾ [ಬೃ.ಉ.ಭಾ. 5-3-2]*

210. ಪಂಚಭೂತಮನೋಬುದ್ಧಿರುದ್ರಾಣಾಂ ಪ್ರತಿದೇಹಕಮ್ ।
ಬಾಹ್ಯತಶ್ಚಾಪಿ ನೇತೃತ್ವಾದ್ ವಾಯುರ್ವ್ಯಷ್ಟಿಃ ಸಮುಷ್ಟಿಕಃ ।
*– ಪ್ರಭಂಜನೇ [ಭಾ.ತಾ.ನಿ. 11-11-46]*

* .....ಪ್ರತಿದೇಹಮಂತರ್ನೇತೃತ್ವಾದ್ ವ್ಯಷ್ಟಿಃ ।

211. ಬಲದೇವತ್ವಾತ್ ವಃ । ಶರೀರಿಣಾಂ ಆಯುಃಪ್ರದತ್ವಾತ್ ಆಯುಶ್ಚ ।

212. '......ಮೋಕ್ಷೇ ಪ್ರಾಪ್ಯೋ ಯತೋಽಖಿಲೈಃ ।
ಯಜುಶ್ಚ....ಪ್ರೋಕ್ತೋ ವಾಯುರೇವ ಜಗತ್ಪತಿಃ ।
*– [ಬೃ.ಉ.ಭಾ. 7-16-1]*

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [7-16-1] ನೋಡಬಹುದು.

**೧೩೨. ಸಾಮ:**

ಅ. ಎಲ್ಲ ಚೇತನರೂ ಪರಸ್ಪರ ಸೌಹಾರ್ದದಿಂದ ಇರುವಂತೆ ಮಾಡುವವನು.213

ಆ. ಸ್ತ್ರೀಯರಲ್ಲಿ ಶ್ರೇಷ್ಠಳಾಗಿರುವುದರಿಂದ 'ಸಾ' ಎನಿಸುವ ಭಾರತೀದೇವಿ ಮತ್ತು ಅಮಿತಮಹಿಮನಾದುದರಿಂದ ಅಮ ಎನಿಸುವ ಪ್ರಾಣ –ಇವರಿಬ್ಬರೂ ಸೇರಿ ಆಗಿರುವ ಅರ್ಧನಾರೀನರರೂಪದ ವಾಯುದೇವ.214

ಇ. ಸಾಮವೇದಾಭಿಮಾನಿ.215

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [7-17-1 ಮತ್ತು 3-3-22] ನೋಡಬಹುದು.

**೧೩೩. ಸಾಯಂ:** ಜೀವಾತ್ಮನ ಸ್ವರೂಪದ ಜೊತೆಗೆ ತನ್ನ ಬೇರೆ ರೂಪದಿಂದ ಸೇರಿಕೊಂಡಿರುವವನು.216

ಈ ನಾಮದ ಅಧಿಕ ವಿಚಾರವನ್ನು ಐ.ಉ.ನಲ್ಲಿ [1-4-11] ನೋಡಬಹುದು.

**೧೩೪. ಪ್ರಜಾಪತಿಃ:** ಪ್ರಜೆಗಳ ಪಾಲಕ217

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [3-6-20] ಹಾಗೂ ಛಾಂ.ಉ.ನಲ್ಲಿ [1-3-16]ನಲ್ಲಿನೋಡಬಹುದು.

**೧೩೫. ಬಾಧ್ವಃ:** ಸಂಸಾರ ಬಾಧೆಗೊಳಗಾಗಿರುವವರಿಂದ ಶರಣು ಹೊಂದಬೇಕಾಗಿರುವವನು.218

---

213. .....ಸಮ್ಯಕ್ತ್ವಕಾರಣಾತ್ ಸರ್ವೇಷಾಂ ಸಾಮ ಚ ಪ್ರೋಕ್ತೋ ವಾಯುರೇವ ಜಗತ್ಪತಿಃ ।
*–[ಬೃ.ಉ.ಭಾ. 7-17-1]*

214. ಸಾರಸ್ವಾತ್ ಸ್ತ್ರೀಷು ಸಾ ದೇವೀ ಸೇತ್ಯುಕ್ತಾ ಸಾಮರೂಪತಃ... ಸಾಮಾಖ್ಯೋಽರ್ಧತನುಸ್ತಯಾ, ಅರ್ಧನಾರೀನರವಪುರ್ವಾಯುಃ ಕುತ್ರಚಿದೀರಿತಃ ।
*–[ಬೃ.ಉ.ಭಾ. 3-3-32]*

215. ಪ್ರಾಣೋ ವೈ ಸಾಮ *–[ಬೃ.ಉ. 7-17-1]*

216. ಸಂಗತಶ್ಚಾಭವಜ್ಜೀವಚಿತಾ ರೂಪಾಂತರೇಣ ಸಃ ।
ಸಂಗತ್ವಾತ್ ಸಾಯುಮಿತಿ ತದ್ ರೂಪಂ ನಾಮತೋಽಭವತ್ ।
*–[ಐ.ಉ.ಭಾ. 1-4-11]*

217. ವಾಯುಃ ಪ್ರಜಾಪತಿಃ ಸೋಽಸೌ ಚಂದ್ರಸಂಸ್ಥೋ ವಿಶೇಷತಃ ।
*–[ಬೃ.ಉ.ಭಾ. 3-6-20]*

218. ಬಾಧ್ಯಂತ ಇತಿ ಬಾಧಾಃ ತೈರ್ವಾಯತೇ ಪ್ರಾಪ್ಯತ ಇತಿ ಬಾಧ್ವಃ ।
*–-ತಾ.ಪ. [ಐ.ಉ.ಭಾ. ಟಿ. 2-8-3-1]*

ಈ ನಾಮದ ಅಧಿಕ ವಿಚಾರವನ್ನು ಐ.ಉ.ನಲ್ಲಿ [2-8-3-1] ನೋಡಬಹುದು.

೧೨೬. ಇಂದುಃ ಭಕ್ತರಿಗೆ ಅಭೀಷ್ಟಗಳನ್ನು ನೀಡುವ ಸ್ವಭಾವದವನು.219

ಈ ನಾಮದ ಅಧಿಕ ವಿಚಾರವನ್ನು ಐ.ಉ.ನಲ್ಲಿ [2-8-4-9] ನೋಡಬಹುದು.

೧೨೭. ದೈವಃ ಪ್ರಾಣಃ ಯಾರಿಂದ ಆವಿಷ್ಟನೂ ಪ್ರೇರಿತನೂ ಆದ ಮುಕ್ತ ಸಂಚರಿಸಿದರೂ, ಸಂಚರಿಸದಿದ್ದರೂ ವ್ಯಥೆಪಡುವುದಿಲ್ಲವೋ, ಮರಣಕ್ಕೊಳಗಾಗುವುದಿಲ್ಲವೋ ಅವನೇ ಪ್ರಾಣ.220

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [3-6-27] ನೋಡಬಹುದು.

೧೨೮. ಭರ್ಗಃ ಜಗತ್ತನ್ನು ಶ್ವಾಸರೂಪದಿಂದ ಪೋಷಿಸುವವನು ಹಾಗೂ ಪರಬ್ರಹ್ಮನಲ್ಲಿಗೆ ಸಾತ್ತ್ವಿಕರನ್ನು ಕೊಂಡೊಯ್ಯುವವನು.221

ಬಳಿತ್ಥಾಸೂಕ್ತ ವಾಯುದೇವನ ರೂಪವನ್ನು 'ಭರ್ಗಃ' ಎಂದು ಪರಿಚಯಿಸಿ ಕೊಟ್ಟಿದೆ.222

೧೨೯. ವೈಶ್ವಾನರಃ ಆದಿತ್ಯನಲ್ಲಿದ್ದುಕೊಂಡು ಸುಡುವುದು, ಪಾಕಮಾಡುವುದು, ಒಣಗಿಸುವುದು, ಬೆಳಗಿಸುವುದು ಈ ನಾಲ್ಕು ಚಟುವಟಿಕೆಗಳ ಮೂಲಕ ಎಲ್ಲ ನರರಿಗೆ ಸಂಬಂಧಿಸುವವನು.223

ಷಟ್‌ಪ್ರಶ್ನೋಪನಿಷತ್ತು ಆದಿತ್ಯನಲ್ಲಿದ್ದುಕೊಂಡು ಪ್ರಾಣನು ಉದಯಿಸುವನೆಂದು ತಿಳಿಸುವಾಗ ಪ್ರಾಣನನ್ನು 'ವೈಶ್ವಾನರ' ಎಂದು ಕರೆದಿದೆ.224

---

219. ಇಷ್ಟಪ್ರದಾನಶೀಲತ್ವಾತ್ ಇಂದುರ್ವಾಯುಃ.... *–[ಐ.ಉ.ಭಾ. 2-8-4-9]*

220. ಸ ವೈ ದೈವಃ ಪ್ರಾಣೋ ಯಃ ಸಂಚರಂಶ್ಚಾಸಂಚರಂಶ್ಚ ನ ವ್ಯಥತೇ ಅಥೋ ನ ರಿಷ್ಯತಿ । *–[ಬೃ.ಉ. 3-6-27]*

* ಯದಾವೇಶಾತ್ ಸರ್ವಕಾರ್ಯೇಷ್ವಮ್ಲಾನಃ ಪ್ರಾಣ ಏವ ಸಃ ।
ಸರ್ವಸಾಮರ್ಥ್ಯಯುಕ್ತಃ ಸ್ಯಾನ್ನ ಮ್ರಿಯೇತ ಕದಾಚನ । *–[ಬೃ.ಉ.ಭಾ.]*

221. ಭರ್ಗಃ -ಭರತಿ ಶ್ವಾಸರೂಪೇಣ ಜಗತ್ ಬಿಭರ್ತಿ, 'ಸ ಏನಾನ್ ಬ್ರಹ್ಮ ಗಮಯತೀತಿ ಶ್ರುತೇಃ
ಪರಂಬ್ರಹ್ಮ ಗಮಯತೀತಿ ಚೇತಿ ಭರ್ಗಶಬ್ದವಾಚ್ಯಂ.... ವಾಯೋಃ ಮೂಲರೂಪಂ.... *– ಭಾವಪ್ರಕಾಶಿಕಾ [ಮ.ಭಾ.ತಾ.ನಿ.ಟಿ. 2-152]*

222. ಬಳಿತ್ಥಾ ತದ್ವಪುಷೇ ಧಾಯಿ ದರ್ಶತಂ ದೇವಸ್ಯ ಭರ್ಗಃ....'

223. ವಿಶ್ವನರಸಂಬಂಧೀ ತಾಪನಪಾಚನಶೋಷಣಾದಿನಾ ಸರ್ವಪ್ರಜೋತ್ಪತ್ತಿಹೇತುಃ ಸನ್ನುದಯತೇ । *–[ಪ.ಉ.ಭಾ.ಟೀ.]*

224. ಸ ಏಷ ವೈಶ್ವಾನರೋ ವಿಶ್ವರೂಪಃ ಪ್ರಾಣೋಽಗ್ನಿರುದಯತೇ ।

೧೪೦. ಧರ್ಮಃ:

ಅ. ಪ್ರಜೆಗಳನ್ನು ಧಾರಣೆ ಮಾಡುವವನು.

ಆ. ಭಕ್ತ್ಯಾದಿನಿವೃತ್ತಧರ್ಮಗಳಿಗೆ ಅಭಿಮಾನಿಯಾಗಿರುವವನು.

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [3-5-8] ನೋಡಬಹುದು.

೧೪೧. **ಅನಃ** ಜೀವಾತ್ಮರು ಬದುಕುವಂತೆ ಮಾಡುವವನು.224A

- ಜೀವಾತ್ಮರು ಚಟುವಟಿಕೆಗೊಳಗಾಗುವಂತೆ ಮಾಡುವವನು.224B ಈ ನಾಮದ ಬಗ್ಗೆ ಅಧಿಕ ವಿಚಾರವನ್ನು [ಐ.ಉ.ಭಾ. 2-2-7-6]ದಲ್ಲಿ ನೋಡಬಹುದು.

## 7. ಬ್ರಹ್ಮಾಂಡದ ನಿರ್ವಹಣೆಗೆ ಸಂಬಂಧಿಸುವ ವಾಯುದೇವನ ನಾಮಗಳು

೧೪೨. **ಕೂರ್ಮರೂಪಃ:** ಆಮೆಯ ರೂಪವನ್ನು ಧರಿಸಿರುವವನು.

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [3-2-3] ನೋಡಬಹುದು.

೧೪೩. **ಉತ್:** ಜಗತ್ತನ್ನು ಎತ್ತಿ ಹಿಡಿದಿರುವವನು.225

ಜಗತ್ತಿಗೆ ಉತ್ಪತ್ತ್ಯಾದಿಗಳನ್ನು ನೀಡುವವನು.226

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [3-3-2] ಹಾಗೂ ಛಾಂ.ಉ.ನಲ್ಲಿ [1-3-2] ನೋಡಬಹುದು.

೧೪೪. **ತೇಜೋರಸಃ:** ಜಗತ್ತಿನ ಸಾಮರ್ಥ್ಯದ ಸಾರ ಆಗಿರುವವನು.227

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [3-2-3] ನೋಡಬಹುದು.

೧೪೫. **ಸೂತ್ರಮ್:**

---

224A. ಅನಯತಿ ಪ್ರಾಣಯತೀತಿ ಅನಃ 'ಅನ ಪ್ರಾಣನೇ'

224B. ಅನಯತಿ ಚೇಷ್ಟಯತೀತಿ ಅನಃ, 'ಅನ ಚೇಷ್ಟಾಯಾಮ್' –*[ಷ.ಉ.]*

225. ಉತ್ತಬ್ಧಂ ಸರ್ವಮನೇನೇತಿ ಉತ್ ।
ಪ್ರಾಣೇನ ಹೀದಂ ಸರ್ವಮುತ್ತಬ್ಧಂ... –*[ಬ.ಉ. 3-3-2...3]*

226. .....ಪ್ರಾಣ ಏವ ಉತ್ ಪ್ರಾಣೇನ ಹಿ ಉತ್ತಿಷ್ಠತಿ –*[ಛಾಂ.ಉ. 1-3-2]*

* ಪ್ರಾಣೇನೋತ್ತಿಷ್ಠತ್ಯುತ್ಪತ್ತ್ಯಾದಿಮದ್ಭವತಿ ಹಿ ಯತೋಽತಃ ಪ್ರಾಣ ಉದಿತ್ಯುಚ್ಯತ ಇತಿ –*[ಛಾಂ.ಉ.ಭಾ.]*

227. .....ತಸ್ಯ ಶ್ರಾಂತಸ್ಯ ತಪ್ತಸ್ಯ ತೇಜೋರಸೋ ನಿವರ್ತತಾಗ್ನಿಃ –*[ಬೃ.ಉ. 3-2-2]*

* ತೇಜೋರಸಃ ಜಗತಃ ಸಾಮರ್ಥ್ಯಸಾರಭೂತಃ । –*[ಬೃ.ಉ.ಭಾ.]*

ಜಗತ್ತು ಯಾರ ನಿಯಮನಕ್ಕೊಳಪಟ್ಟು ಬದ್ಧವಾಗಿದೆಯೋ ಅಂತಹವನು.228

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [5-7-1] ನೋಡಬಹುದು.

**೧೪೬. ಸುವರ್ಣಮ್:** ಅಲಂಕಾರರೂಪದಲ್ಲಿರುವ ಸ್ವರ್ಣಕ್ಕೆ ಅಭಿಮಾನಿಯಾಗಿರುವವನು.229

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [3-3-26] ನೋಡಬಹುದು.

**೧೪೭. ಪರ್ಜನ್ಯಃ:** ಮೋಡ ಹಾಗೂ ಅದನ್ನು ನಿಯಮಿಸುವ ದೇವೇಂದ್ರನೇ ಮುಂತಾದ ದೇವತೆಗಳನ್ನು ನಿಯಂತ್ರಿಸಿ ಮಳೆ ಸುರಿಸುವ ಮೂಲಕ ಉತ್ತಮವಾದ ಸಸ್ಯಾದಿಗಳನ್ನು ಉಂಟುಮಾಡುವವನು.230

ಈ ನಾಮದ ಅಧಿಕ ವಿಚಾರವನ್ನು ಷ.ಉ.ನಲ್ಲಿ [2-1-10] ನೋಡಬಹುದು.

**೧೪೮. ಸ್ತನಯಿತ್ನುಃ:** ಗುಡುಗಿನಲ್ಲಿರುವವನು.231

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [4-5-9] ನೋಡಬಹುದು.

**೧೪೯. ಆದಿತ್ಯಃ:** ಸೂರ್ಯನಲ್ಲಿದ್ದುಕೊಂಡು ಜೀವರ ಆಯುಷ್ಯವನ್ನು ತೆಗೆದುಕೊಂಡು ಹೋಗುವವನು.232

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [3-2-3 ಮತ್ತು 3-1-10] ನೋಡಬಹುದು.

**೧೫೦. ಆಕಾಶಃ:** ಆಕಾಶಾಭಿಮಾನಿಯಾಗಿರುವವನು.233

ಈ ನಾಮದ ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [5-5-6] ನೋಡಬಹುದು.

---

228. ಸ್ಯೂತಂ ಜಗದಿದಂ ಯಸ್ಮಿನ್ ಸೂತ್ರಂ ವಾಯುರಸೌ ಸ್ಮೃತಃ ।
'ಷಿಞ್ ಬಂಧನೇ' – *[ಬೃ.ಉ.ಭಾ. 5-7-1]*

229. ಭೂಷಣಸ್ವರ್ಣರೂಪೀ ಚ ಸ ಏವಾಪಿ ಸ್ವರೇ ಸ್ಥಿತಃ – *[ಬೃ.ಉ.ಭಾ. 3-3-26]*

230. ಜನನಾತ್ ಪರಸಸ್ಯಾದೇಃ ಪರ್ಜನ್ಯೋ ಮೇಘಸಂತತಿಃ । ಎಂಬ 'ನಾರದೀಯ' [ಗೀ.ತಾ.ನಿ.] ಪ್ರಮಾಣ ಸಾರುತ್ತಿರುವಂತೆ ನೂತನವಾದ ಸಸ್ಯಾದಿಗಳನ್ನು ಹುಟ್ಟಿಸುವ ಪ್ರಯುಕ್ತ ಮೇಘಮಂಡಲ ಪರ್ಜನ್ಯ ಎನಿಸಿದರೆ, ಆ ಮೇಘಮಂಡಲವನ್ನು ನಿಯಮಿಸುವ ಇಂದ್ರಾದಿದೇವತೆಗಳು ಮುಖ್ಯವಾಗಿ ಪರ್ಜನ್ಯ ಎನಿಸಿದರೆ, ಆ ಇಂದ್ರಾದಿಗಳನ್ನೂ ನಿಯಂತ್ರಿಸುವ ವಾಯುದೇವ ಅವರಿಗಿಂತಲೂ ಮುಖ್ಯವಾಗಿ ಪರ್ಜನ್ಯ ಎನಿಸುವನು.

231. ಸತ್ಯಂ ಚ ಸ್ತನಯಿತ್ನುಶ್ಚ ವಾಯೋಃ ರೂಪಾಂತರೇ ಸ್ಮೃತೇ । – *[ಬೃ.ಉ.ಭಾ. 4-5-9]*

232. ಆದಾಯ ಯಾತ್ಯಾಯುರಿತಿ ಸ ಏವಾದಿತ್ಯ ಉಚ್ಯತೇ ।
– *ಪ್ರಭಂಜನೇ [ಬೃ.ಉ.ಭಾ. 3-2-3]*

233. ಸ ಏವಾಕಾಶನಾಮಾ ಚ ಲಕ್ಷ್ಮ್ಯಾವಿಷ್ಟೋ ವಿಶೇಷತಃ । – *[ಛಾಂ.ಉ.ಭಾ. 5-5-6]*

**೧೫೧. ಸೂರ್ಯಃ:** ಜ್ಞಾನಿಗಳಿಂದಷ್ಟೇ ತಿಳಿಯಲ್ಪಡುವವನು.234

ಪ್ರಜಾಪತಿ ಎನಿಸುವ ಭಗವಂತನು ತಾನು ಮಾಡಬೇಕಾದ ಸಕಲ ವಿಧದ ಸೃಷ್ಟಿಗೆ ಮಾಧ್ಯಮನನ್ನಾಗಿ ಸೂರ್ಯಗತನಾದ ಸೂರ್ಯನಾಮಕನಾದ ಮುಖ್ಯಪ್ರಾಣನನ್ನು ಸೃಷ್ಟಿಸಿದನು.235

**೧೫೨. ವಿವಸ್ವಾನ್:** (ನಿಯಂತ್ರಿಸುವುದಕ್ಕಾಗಿ) ವಿವಿಧ ವಸ್ತುಗಳಲ್ಲಿ ನೆಲೆಸಿರುವವನು.236

ಋಗ್ವೇದದಲ್ಲಿ ವಾಯುದೇವನು ವಿವಿಧ ವಸ್ತುಗಳಲ್ಲಿ ವಾಸಿಸುವನೆಂಬ ದೃಷ್ಟಿಯಿಂದ ಅವನನ್ನು ವಿವಸ್ವಾನ್ ಎಂದು ಕರೆಯಲಾಗಿದೆ.237

**೧೫೩. ಆಧೃಃ:** ಎಲ್ಲೆಡೆ ಧಾರಕನಾಗಿರುವವನು.238

ಋಗ್ವೇದದಲ್ಲಿ ವಾಯುದೇವನಿಗೂ ಜ್ಞಾನಾದಿಗಳನ್ನು ನೀಡುವವನು ಅಗ್ನಿನಾಮಕ ಭಗವಂತನೆಂದು ತಿಳಿಸುವಾಗ, ವಾಯುದೇವನನ್ನು ಎಲ್ಲೆಡೆ ಧಾರಕನಾಗಿರುವವನೆಂಬ ಅಭಿಪ್ರಾಯದಲ್ಲಿ 'ಆಧೃ' ಎಂದೇ ಕರೆಯಲಾಗಿದೆ.239

**೧೫೪. ಧೃಷ್ಣುಃ:** ಧರಿಸುವ ಸ್ವಭಾವದವನು.240

ಕೂರ್ಮರೂಪದಿಂದ ಕೂರ್ಮರೂಪದ ಶೇಷನನ್ನು ಯಾವಾಗಲೂ ಧರಿಸಿರುವ ವಾಯುದೇವ 'ಧೃಷ್ಣು' ಎನಿಸುವನು.

ವಾಯುದೇವನ ನಾಮಗಳನ್ನು ಕ್ರೋಡೀಕರಿಸುವ 'ಶಬ್ದತತ್ತ್ವ' ವಾಯುದೇವನ ನಾಮಗಳಲ್ಲಿ ಒಂದಾಗಿ 'ಧೃಷ್ಣು' ಎಂಬ ನಾಮವನ್ನು ಉಲ್ಲೇಖಿಸಿದೆ.241

**೧೫೫. ಮಹಾನ್:** ಮಹತ್ತತ್ತ್ವಕ್ಕೆ ಅಭಿಮಾನಿಯಾಗಿರುವವನು.

---

234. ಸೂರಿಭಿಃ ಜ್ಞಾನಿಭಿರೇವ ಈಯತೇ ಜ್ಞಾಯತೇ ಇತಿ ಸೂರಿಗಮ್ಯತ್ವಾತ್ ಸೂರ್ಯಃ ।
235. ಸ ವಾಯುಂ ಸೂರ್ಯನಾಮಾನಂ... । –[ಷ.ಉ.ಭಾ. 1-1-7]
ಸೂರ್ಯಾಚಂದ್ರಗತೌ ದೇವಃ ಸಸರ್ಜ ಪುರುಷೋತ್ತಮಃ ।
ತಾವಾವಿಶ್ಯ ಸ್ವಯಂ ವಿಷ್ಣುಃ ಸರ್ವಸೃಷ್ಟೀಃ ಕರೋತ್ಯಜಃ –[ಷಟ್.ಉ.ಭಾ.1-1-7]
236. ವಾಯುರ್ವಿವಸ್ವಾನ್ ವಿವಿಧೇಷು ವಾಸಾತ್.... –[ಋಗ್ಭಾಷ್ಯ 31-187]
237. ತ್ವಮಗ್ನೇ ಪ್ರಥಮೋ ಮಾತರಿಶ್ವನೇ ಆವಿರ್ಭಭೂವ ಸುಕ್ರತುಯಾ ವಿವಸ್ವತೇ ।
–[ಋ.ವೇ. 31-3]
238. ಆ ಸಮಂತಾದ್ ಭಾರಕಸ್ಯಾಪಿ ವಾಯೋಃ.... –[ಋ.ಭಾ. 33-204]
239. ಆಧ್ರಸ್ಯ ಚಿತ್ ಪ್ರಮತಿರುಚ್ಯಸೇ ಪಿತಾ.... –[ಋ.ವೇ. 31-14]
240. ಧಾರಣಾರ್ಥಕ ಧೃಧಾತುವಿಗೆ ಶೀಲಾರ್ಥದಲ್ಲಿ 'ಷ್ಣು' ಪ್ರತ್ಯಯ ಬಂದರೆ, ಧರಿಸುವ ಸ್ವಭಾವದವನೆಂಬ ಅರ್ಥ ಹೊರಡುವುದು.
241. '.....ಧೃಷ್ಣುಶ್ಚ ಪವಮಾನಶ್ಚ ಪವನಶ್ಚೇತಿ ಕಥ್ಯತೇ –ಶಬ್ದತತ್ತ್ವೇ [ಬೃ.ಉ.ಭಾ. 3-5-5]

ಮಹತ್ತತ್ತ್ವಕ್ಕೆ ಚತುರ್ಮುಖನನ್ನು ಅಭಿಮಾನಿ ಎಂದು ಗುರುತಿಸಿದ ತಂತ್ರಸಾರಸಂಗ್ರಹದಲ್ಲಿ ವಾಯುದೇವನನ್ನೂ ಮಹತ್ತತ್ತ್ವಾಭಿಮಾನಿಯನ್ನಾಗಿ ತಿಳಿಸಲಾಗಿದೆ.[242]

## 8. ಪಿಂಡಾಂಡ ನಿರ್ವಹಣೆಗೆ ಸಂಬಂಧಿಸುವ ವಾಯುದೇವನ ನಾಮಗಳು

**೧೫೬. ಅನ್ನಸ್ಯ ಗ್ರಹಃ** ಅನ್ನವನ್ನು ಉಣ್ಣಿಸುವವನು ಮತ್ತು ಉಣ್ಣುವವನು.[243]

ಈ ನಾಮದ ಅಧಿಕ ವಿಚಾರವನ್ನು ಐ.ಉ.ನಲ್ಲಿ [2-3-6]] ನೋಡಬಹುದು.

**೧೫೭. ಅಶನಾ:** ಹಸಿವಿಗೆ ಅಭಿಮಾನಿಯಾದ ವಾಯುದೇವನ ರೂಪ.

**೧೫೮. ಪಿಪಾಸಾ:** ನೀರಡಿಗೆ ಅಭಿಮಾನಿಯಾದ ವಾಯುದೇವರೂಪ.[244]

ಈ ಎರಡು ನಾಮಗಳಿಗೆ ಸಂಬಂಧಿಸುವ ವಿಚಾರಗಳನ್ನು ಐ.ಉ.ನಲ್ಲಿ [2-3-2-1,3] ನೋಡಬಹುದು.

**೧೫೯. ಅಸುಃ** ಜೀವಿಗಳ ಶ್ವಾಸವನ್ನು ನಿಯಂತ್ರಿಸುವ ವಾಯುದೇವನ ರೂಪ.[245]

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [5-9-15] ನೋಡಬಹುದು.

**೧೫೯. ಆಯಾಸ್ಯಃ** (ಶರೀರಿಗಳ) ಬಾಯಿಯಿಂದ ಒಳಗೆ ಹೊರಗೆ ಹೋಗುತ್ತ ಉಸಿರಾಟವನ್ನು ನಿಯಂತ್ರಿಸುವವನು.[246]

ಈ ನಾಮದ ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [1-2-2] ನೋಡಬಹುದು.

**೧೬೦. ಪ್ರತ್ಯಕ್ಷಂ:** ಪ್ರತಿಯೊಂದು ಇಂದ್ರಿಯದಲ್ಲೂ, ಅದರ ಅಭಿಮಾನಿದೇವತೆಯಲ್ಲೂ ನಿಯಾಮಕನಾಗಿ ಇರುವವನು.[247]

---

242. ಬ್ರಹ್ಮಾ ಚ ಪುರುಷಃ ಸ್ಮೃತಃ । ಮಹಾಂಶ್ಚ.... ಏವಂ ವಾಯುರಪಿ ಜ್ಞೇಯಃ.... *– [ತಂತ್ರಸಾರಸಂಗ್ರಹ 3-133]*

243. ಅನ್ನಸ್ಯ ಗ್ರಾಹಯತೀತಿ ಗ್ರಹೋ ಭೋಜಕಃ, ಗೃಹ್ಣಾತೀತಿ ಗ್ರಹೋ ಭೋಕ್ತಾ ಚ *– ತಾಮ್ರಪರ್ಣೀಯ [ಐ.ಉ.ಭಾ. 2-3-6]*

244. ತದಶನಾಪಿಪಾಸಾಖ್ಯಂ ದ್ವಿರೂಪಂ ಮಾರುತಂ ಪುನಃ ।
ತಸ್ಮಿನ್ ದೇವಸಮೂಹೇ ತು ವಿಷ್ಣುಃ ಪ್ರಾವೇಶಯತ್ ಪ್ರಭುಃ ॥
*– [ಐ.ಉ. 2-3-2-1,3]*

245. ಅಂತರ್ಗತೇನ ರೂಪೇಣ ವಾಯುರೇವ ತ್ವಸುಃ ಸ್ಮೃತಃ । *– [ಬೃ.ಉ.ಭಾ. 5-9-15]*

246. ಅಸ್ಮಾತ್ ಮುಖಾತ್ ಅಯತೇ ಗಚ್ಛತೀತಿ ಅಸ್ಯಾಯಃ, ಅಸ್ಯಾಯ ಏವ ಆಯಾಸ್ಯಃ

247. ಅಕ್ಷೇಷು ಪ್ರತಿಪ್ರತಿ ಸ್ಥಿತತ್ವಾದನಃ ಪ್ರತ್ಯಕ್ಷಮ್ *– [ಛಾಂ.ಉ.ಭಾ. 5-1-12]*

ಈ ನಾಮದ ಅಧಿಕವಿಚಾರವನ್ನು ಛಾಂ.ಉ.ನಲ್ಲಿ [5-1-12] ನೋಡಬಹುದು.

೧೬೧. ಪ್ರಾಣಃ:

ಅ. ಸಕಲೇಂದ್ರಿಯಗಳ ಚಟುವಟಿಕೆಗಳನ್ನೂ ನಡೆಸಲು ಪ್ರೇರಿಸುವವನು.248

ಆ. ಶರೀರಿಗಳು ಬದುಕುವಂತೆ ಮಾಡುವವನು.249

ಇ. ಪೂರ್ಣವಾದ ಆನಂದವನ್ನು ಹೊಂದಿದ್ದು ಆಣಾ ಎನಿಸಿರುವ ಭಾರತೀದೇವಿ ಗಿಂತಲೂ ಪ್ರಕೃಷ್ಟವಾದ ಸುಖವನ್ನು ಹೊಂದಿರುವವನು.250

ಈ. ಬಲಾತ್ಮಕ; ಬಲಾಭಿಮಾನಿ251

ವಾಯುದೇವನ ಇಂದ್ರಿಯಪ್ರೇರಕತ್ವದ ಬಗ್ಗೆ ಐ.ಉ.ನಲ್ಲಿ [1-4-3.....9] ಬೃ.ಉ. ನಲ್ಲಿ [8-1-1...14] ಛಾಂ.ಉ.ನಲ್ಲಿ [5-1-1.....11] ಷ.ಉ.ನಲ್ಲಿ [2-1-3...7] ನೋಡಬಹುದು.

೧೬೨. ಅಪಾನಃ: ಅಪಾನ ಎನಿಸುವ ವಾಯುವಿನ ಮೂಲಕ ಜೀವಾತ್ಮರ ದೇಹದ ಮಲಮೂತ್ರಗಳನ್ನು ಹೊರಹಾಕುವವನು.252

ಈ ನಾಮದ ಅಧಿಕ ವಿಚಾರವನ್ನು ಷಟ್.ಪ್ರ.ಉ.ನಲ್ಲಿ [3-1-6,7] ಐ.ಉ.ನಲ್ಲಿ [2-3-1-3] ನೋಡಬಹುದು.

೧೬೩. ವ್ಯಾನಃ:

ಅ. (ವ್ಯಾನ ಎಂಬ ಗಾಳಿಯ ಮೂಲಕ ದೇಹಗಳಲ್ಲಿ) ಅನ್ನದ ರಸವನ್ನು ನಾಡಿಗಳಲ್ಲಿ ಬೇರೆಬೇರೆಯಾಗಿ ಕೊಂಡೊಯ್ಯುವವನು.253

ಆ. ವಿಶಿಷ್ಟ ರೀತಿಯಿಂದ ಪ್ರೇರಕನಾಗಿರುವವನು.254

---

248. ಸರ್ವಚೇಷ್ಟಯಿತೃತ್ವಾತ್ತು ಪ್ರಾಣಃ.... – *ಭಾರತೇ [ಭಾ.ತಾ.ನಿ. 2-5-25]*

249. ಪ್ರಕರ್ಷೇಣ ಅನಯತಿ ಜೀವಯತೀತಿ ಪ್ರಾಣಃ 'ಅನ ಪ್ರಾಣನೇ'

250. '.......ಣ ಇತ್ಯೇವ ಹ್ಯಾನಂದಃ ಸಮುದೀರಿತಃ ।
ಆಣಾ ಸರಸ್ವತೀ ಪ್ರೋಕ್ತಾ ತತ್ಪ್ರಕೃಷ್ಟಸುಖತ್ವತಃ ।
ಪ್ರಾಣ ಇತ್ಯುಚ್ಯತೇ ವಾಯುಃ....' – *ತತ್ತ್ವವಿವೇಕೇ [ಛಾಂ.ಉ.ಭಾ. 7-1-16]*

251. ಪ್ರಾಣೋ ಬ್ರಹ್ಮ ಬಲರೂಪಂ ಬ್ರಹ್ಮ – *[ಛಾಂ.ಉ.ಭಾ. 4-3-1]*

252. ಅಪಾನಯತಿ ಅಪಾನವಾಯುದ್ವಾರಾ ಮಲಮೂತ್ರೇ ಬಹಿಃ ನಿಸ್ಸಾರಯತೀತಿ ಅಪಾನಃ ।

253. ವಿವಿಧಂ ಅನಯತಿ ಅನ್ನರಸಂ ನಾಡೀಷು ಇತಿ ವ್ಯಾನಃ ।

254. '.....ವ್ಯಾನಾಭಿಧೋ ವಾಯುರ್ವಿಶಿಷ್ಟಾನೋ ಯತೋ ಹಿ ಸಃ....।
– *[ಬೃ.ಉ.ಭಾ. 5-9-26]*

ಈ ನಾಮದ ಅಧಿಕ ವಿಚಾರವನ್ನು ಷ.ಉ.ನಲ್ಲಿ [3-1-9] ಹಾಗೂ ಬೃ.ಉ.ನಲ್ಲಿ [5-9-26] ನೋಡಬಹುದು.

**೧೬೪. ಉದಾನಃ:** ಜೀವಾತ್ಮರನ್ನು ಸ್ವರ್ಗಾದಿ ಊರ್ಧ್ವಲೋಕಗಳಿಗೆ ಒಯ್ಯುವವನು.[255]

ಅ. ಜೀವನನ್ನು ಹೃದಯಾಕಾಶದಲ್ಲಿರುವ ಪ್ರಾಜ್ಞರೂಪಿ ಪರಮಾತ್ಮನೆಡೆಗೆ ಕೊಂಡೊಯ್ಯುವವನು.[256]

ಈ ನಾಮದ ಅಧಿಕ ವಿಚಾರವನ್ನು ಷಟ್.ಪ್ರ.ಉ.ನಲ್ಲಿ [3-1-9] ನೋಡಬಹುದು.

**೧೬೫. ಸಮಾನಃ:** ಸಮಾನ ವಾಯುವಿನ ಮೂಲಕ ಉಂಡ ಅನ್ನವನ್ನು ಶರೀರದ ಆಯಾ ಅಂಗಗಳಿಗೆ ಸರಿಯಾಗಿ ಕೊಂಡೊಯ್ಯುವವನು.[257]

ಈ ನಾಮದ ಅಧಿಕ ವಿಚಾರವನ್ನು ಷ.ಉ.ನಲ್ಲಿ [3-1-8] ನೋಡಬಹುದು.

**೧೬೬. ಆಂಗೀರಸಃ:** ಶರೀರಿಗಳ ಶರೀರವನ್ನು, ಶರೀರದ ಅಂಗಗಳನ್ನು ನಿಯಮಿಸುವವನು.[258]

ಈ ನಾಮದ ಅಧಿಕ ವಿಚಾರವನ್ನು ಛಾಂ.ಉ.ನಲ್ಲಿ [1-2-2] ಮತ್ತು ಬೃ.ಉ.ನಲ್ಲಿ [3-3-19] ನೋಡಬಹುದು.

**೧೬೭. ಕ್ಷತ್ರಮ್:** ಜೀವಾತ್ಮನನ್ನು ತೊಂದರೆಗಳಿಂದ ರಕ್ಷಿಸುವವನು.[259]

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [7-18-1] ನೋಡಬಹುದು.

**೧೬೮. ರುದ್ರಃ:** ಜ್ವರಾದಿ ದೈಹಿಕರೋಗಗಳನ್ನೂ, ಸಂಸಾರರೋಗವನ್ನೂ ಪರಿಹರಿಸುವವನು.[260]

ಈ ನಾಮದ ಅಧಿಕ ವಿಚಾರವನ್ನು ಷ.ಉ.ನಲ್ಲಿ [2-1-13] ನೋಡಬಹುದು.

---

255. ಉದಾನಯತಿ ಊರ್ಧ್ವಲೋಕಾನ್ ಪ್ರತಿ ನಯತೀತಿ ಉದಾನಃ ।
256. ಉತ್ -ಉತ್ಕೃಷ್ಟಂ, ಆ -ಆನಂದಾತ್ಮಕಂ ಪ್ರಾಜ್ಞರೂಪಿಣಂ ಪ್ರತಿ ನಯತೀತಿ ಉದಾನಃ ।
257. ಮಧ್ಯೇ ತು ಸಮಾನ ಏಷ ಹ್ಯೇತದ್ಧುತಮನ್ನಂ ಸಮಂ ನಯತಿ — *[ಷ.ಉ. 3-1-8]*
258. ಸೋಽ..... ಆಂಗೀರಸೋಽಂಗಾನಾಂ ಹಿ ರಸಃ ಪ್ರಾಣೋ ವಾ ಅಂಗಾನಾಂ ಹಿ ರಸಃ ಪ್ರಾಣೋ ಹಿ ವಾ ಅಂಗಾನಾಂ ರಸಃ.... — *[ಬೃ.ಉ. 3-3-9]*

* ಅಂಗಾನಾಂ ಸರ್ವಪ್ರಾಣಿಶರೀರಾಣಾಂ ರಸೋ ನಿಯಂತಾ ಆಂಗೀರಸಃ — *[ಛಾಂ.ಉ. ಖಂಡಾರ್ಥೇ]*

259. ಪ್ರಾಣೋ ವೈ ಕ್ಷತ್ರಂ ಪ್ರಾಣೋ ಹಿ ವೈ ಕ್ಷತ್ರಂ ತ್ರಾಯತೇ.... — *[ಬೃ.ಉ. 7-18-1]*
260. ರುಜಾಂ ದ್ರವಣತೋ ರುದ್ರೋ ವಾಯುಃ..... — *[ಋ.ಭಾ. 3-3]*

- ವೈದಿಕ ವಾಙ್ಮಯದಲ್ಲಿ ರುದ್ರ ಎಂಬ ನಾಮದಿಂದ ಪಾರ್ವತೀಪತಿಗಿಂತಲೂ ವಾಯು ದೇವನೇ ಪ್ರಸಿದ್ಧನಾಗಿರುವವನು. ಆದುದರಿಂದಲೇ ಕೆಲವು ಪುರಾಣಗಳಲ್ಲಿ ಹನೂ ಮಂತನನ್ನು ರುದ್ರಪುತ್ರ ಎಂದೇ ಕರೆಯಲಾಗಿದೆ. ಹೊರತು ಹನೂಮಂತ ಪಾರ್ವತೀ ಪತಿಯ ಪುತ್ರ ಎಂಬ ಅಭಿಪ್ರಾಯದಲ್ಲಿ ಅಲ್ಲ.

**೧೬೯. ಶಿಶುಃ:** ಸರ್ವಪ್ರಾಣಿಗಳಲ್ಲಿ ಕರುವಿನ ರೂಪದಲ್ಲಿ ಇರುವ ವಾಯುದೇವ.[261]

ಈ ನಾಮದ ಅಧಿಕ ವಿಚಾರವನ್ನು ಬೃ.ಉ.ನಲ್ಲಿ [4-2-1] ನೋಡಬಹುದು.

**೧೭೦. ಚಿತ್ತಂ:** ಸ್ಮರಣಕಾರಣವಾದ ಅಂತಃಕರಣದ ವಿಭಾಗ ಚಿತ್ತ ಎನಿಸಿದ್ದು ಅದಕ್ಕೆ ಅಭಿಮಾನಿಯಾಗಿರುವವನು.

ಸ್ಮರಣಕಾರಣವಾದ ಅಂತಃಕರಣದ ವಿಭಾಗ ಚಿತ್ತ ಎನಿಸಿದೆ.[262] ಅದಕ್ಕೆ ಚತುರ್ಮುಖ ಅಭಿಮಾನಿ.[263] ವಾಯುದೇವ 'ಭಾವ್ಯ' ಚತುರ್ಮುಖನಾಗಿರುವುದರಿಂದ ಚತುರ್ಮುಖನ ರೂಪವಾಗಿ, ಹೆಸರಾಗಿ ಉಲ್ಲೇಖಿಸಲ್ಪಟ್ಟ 'ಚಿತ್ತ' ವಾಯುದೇವನಿಗೂ ಸಂಬಂಧಿಸಬಲ್ಲದು.[264]

★

---

261. ವಾಯುರ್ಗೋವತ್ಸರೂಪೇಣ ಸರ್ವಪ್ರಾಣಿಷು ಸಂಸ್ಥಿತಃ । — *[ಬೃ.ಉ.ಭಾ. 4-2-1]*
262. .......ಚಿತ್ತಂ ಸ್ಮರಣಕಾರಣಮ್ — *ಸ್ಕಾಂದ [ಭಾ.ತಾ.ನಿ. 3-27-15]*
263. ಚಿತ್ತಾಭಿಮಾನೀ ಬ್ರಹ್ಮೈವ..... — *[ಭಾ.ತಾ.ನಿ. 3-27-71]*
264. ಪ್ರಾಣಃ ಸೂತ್ರಂ ಮಹಾನ್ ಬ್ರಹ್ಮಾ ಚಿತ್ತಂ ....... ಇತ್ಯಾದಿ ಬಹುರೂಪಿಣಃ ......ಯೇ ಭಾವ್ಯಾಃ........ । — *ಪೈಂಗಿಶ್ರುತಿ [ಬೃ.ಉ.ಭಾ.3-5-3]*

# • ವಾಯುದೇವನ ಕುರಿತಾದ ಸ್ತೋತ್ರಪ್ರಪಂಚ •

ಶಾಸ್ತ್ರದಲ್ಲಿ ಪ್ರತಿಪಾದಿತ ಪ್ರಮೇಯಗಳನ್ನು ಮನನ ನಡೆಸಲು ಅನುಕೂಲವಾಗಿ ಹೊರಟಿರುವಂತಹದ್ದು ಸ್ತೋತ್ರವಾಙ್ಮಯ. ಉಪನಿಷತ್ತುಗಳಲ್ಲಿ, ಮಹಾಭಾರತರಾಮಾಯಣಾದಿಗಳಲ್ಲಿ, ಮಧ್ವಚರಿತೆಯಲ್ಲಿ ಪ್ರಸ್ತುತಗಳಾಗಿರುವ ಮುಖ್ಯಪ್ರಾಣನ ಮೂಲ ರೂಪದ ಗುಣಲೀಲೆಗಳನ್ನೂ, ಮೂರು ಅವತಾರಗಳ ಗುಣಲೀಲೆಗಳನ್ನೂ ಆಧುನಿಕ ಪರಿಭಾಷೆಯ 'ಕ್ಯಾಪ್‌ಶ್ಯೂಲ್' ರೂಪದಲ್ಲಿ ತುಂಬಿ ಉಣಬಡಿಸುತ್ತಿದೆ ಮುಖ್ಯಪ್ರಾಣ ವಿಷಯಕ ಸ್ತೋತ್ರ ಸಾಹಿತ್ಯ. ಐತರೇಯ ಪ್ರಕಾಶನ ವ್ಯಾಸನಕೆರೆ ಇದರಿಂದ ಪ್ರಕಟಿತವಾದ ಡಾ। ವ್ಯಾಸನಕೆರೆ ಪ್ರಭಂಜನಾಚಾರ್ಯರಿಂದ ಸಂಪಾದಿತವಾದ 'ವಾಯುದೇವನ ಸ್ತೋತ್ರಮಾಲಿಕಾ'ದ ಆಧಾರದಲ್ಲಿ ರೂಪಿಸಲಾದ ಈ ವಿಭಾಗದಲ್ಲಿ ಮುಖ್ಯಪ್ರಾಣನ ಹಾಗೂ ಅವನ ಮೂರು ಅವತಾರಗಳ ಕುರಿತಾದ ಸುಮಾರು ಎಪ್ಪತ್ತಕ್ಕಿಂತಲೂ ಅಧಿಕ ಸ್ತೋತ್ರಗಳ ಸ್ಥೂಲ ಮಾಹಿತಿಯನ್ನು ನೀಡಲಾಗಿದೆ. ಮುಖ್ಯಪ್ರಾಣನ ಮೂಲರೂಪ, ಮೂಲರೂಪ ಹಾಗೂ ಮೂರೂ ಅವತಾರಗಳು, ಹನೂಮದವತಾರ, ಭೀಮಾವತಾರ ಮತ್ತು ಮಧ್ವಾವತಾರ –ಹೀಗೆ ಅನುಕ್ರಮವಾಗಿ ಈ ವಿಷಯಗಳ ಕುರಿತಾದ ಸ್ತೋತ್ರಗಳನ್ನು ಸಂಗ್ರಹಿಸಲಾಗಿದೆ. ಧ್ಯಾನ, ಸ್ತುತಿ, ಅಷ್ಟಕ, ಗೀತಾಕವಚ –ಹೀಗೆ ಬೇರೆ ಬೇರೆ ಬಗೆಯ ಸ್ತೋತ್ರಗಳನ್ನೊಳಗೊಂಡಿದೆ. ಮುಖ್ಯಪ್ರಾಣನ ಕುರಿತಾದ ಈ ಸ್ತೋತ್ರಮಾಹಿತಿಸಂಗ್ರಹ, ಜಿಜ್ಞಾಸುಗಳು ಪದ್ಯದ ಪ್ರಮೇಯದ ಮೊದಲ ಮಾತಿನ ಆಧಾರದ ಮೇಲೆ ಸ್ತೋತ್ರವನ್ನು ಆಯ್ಕೆಮಾಡಿ ಪಠನೆಗೆ, ಅನುಸಂಧಾನಕ್ಕೆ ವಿನಿಯೋಗಿಸಿಕೊಳ್ಳಲು ಅವರಿಗೆ ಅನುಕೂಲವಾದೀತೆಂದು ಭಾವಿಸಲಾಗಿದೆ.

## ಪ್ರಾಣದೇವನ ಕುರಿತಾದ ಸ್ತೋತ್ರಗಳು

[ಸ್ಥೂಲಪರಿಚಯ]

### ಮುಖ್ಯಪ್ರಾಣನ ಮೂಲರೂಪದ ಸ್ತೋತ್ರಗಳು

೧. ಶ್ರೀಮುಖ್ಯಪ್ರಾಣ ಧ್ಯಾನಮ್:

'ಸಹಸ್ರ ಸೂರ್ಯೇಂದುಸಮಾನಕಾಂತಿಂ....' ಸಾವಿರಾರು ಸೂರ್ಯರ, ಹಾಗೂ ಚಂದ್ರರ ಕಾಂತಿಗೆ ಸಮಾನವಾದ ಕಾಂತಿವುಳ್ಳ ಎಂದು ಮುಖ್ಯಪ್ರಾಣನ ಅಸಾಧಾರಣ ಕಾಂತಿಯ ವರ್ಣನೆಯಿಂದಲೇ ಪ್ರಾರಂಭವಾಗುವ ಮುಖ್ಯಪ್ರಾಣನ ಧ್ಯಾನರೂಪದ ಐದು ಶ್ಲೋಕಗಳನ್ನೊಳಗೊಂಡ ಈ ಸ್ತೋತ್ರ ನಾರಾಯಣತಂತ್ರದಲ್ಲಿ ಪಠಿತವಾದುದು. ಶ್ರೀ ಮಧ್ವರು ತಮ್ಮ ತಂತ್ರಸಾರಸಂಗ್ರಹದಲ್ಲಿ [4-66] ಮುಖ್ಯಪ್ರಾಣನ ಧ್ಯಾನಶ್ಲೋಕದಲ್ಲಿ

ತಿಳಿಸಿರುವಂತೆ '......ಸದಾ ಶ್ರೀಪತಯೇ ನಮಂತಮ್' –ಎರಡು ಕೈಗಳಿಂದ ಯಾವಾಗಲೂ ಶ್ರೀಪತಿಗೆ ನಮಸ್ಕರಿಸುತ್ತಿರುವ ಹಾಗೂ ಮತ್ತೆರಡು ಎತ್ತಲ್ಪಟ್ಟ ಕೈಗಳಲ್ಲಿಯ ಒಂದು ಕೈಯಿಂದ ಚಿನ್ನದ ಗದೆಯನ್ನು ಧರಿಸಿರುವ ಮತ್ತೊಂದು ಕೈಯಿಂದ ಸಜ್ಜನರಿಗೆ ಅಭಯ ಪ್ರದಾನ ಮಾಡುತ್ತಿರುವ– **'ಉದ್ಯಮ್ಯ ದೋರ್ಭ್ಯಾಮಭಯಪ್ರದಂ ತಂ ಗದಾಯುಧಂ ಸ್ವರ್ಣ ಮಯಂ ದಧಾನಮ್'** ಎಂಬ ಭಂಗಿಯಿಂದ ಕೂಡಿರುವುದಾಗಿ ವರ್ಣಿತವಾಗಿದೆ. ಮೂವತ್ತೆರಡು ಶಾರೀರಿಕ ಲಕ್ಷಣಗಳು ಮನುಷ್ಯಶರೀರಕ್ಕೇ ಹೆಚ್ಚು ಒಗ್ಗುವವುಗಳಾಗಿರು ವುದರಿಂದ **'ದ್ವಾತ್ರಿಂಶಪೂರ್ಣಶುಭಲಕ್ಷಣಸಾಂದ್ರಂ ದೇಹಂ....'** ಎಂದು ಮೂವತ್ತೆರಡು ಲಕ್ಷಣಭರಿತ ದೇಹವುಳ್ಳವರನ್ನಾಗಿ ಸ್ತುತಿಸಲಾಗಿದೆ ಎಂದರೆ ಈ ಧ್ಯಾನಸ್ತೋತ್ರದ ಪ್ರಕಾರ ಮುಖ್ಯಪ್ರಾಣದೇವರ ಶರೀರ ಮಾನವಾಕಾರದ ಶರೀರ ಎಂದು ಸ್ಪಷ್ಟವಾಗಬಲ್ಲದು.

**'ಪ್ರಾಣದೇವಸ್ಯ ಶಿಷ್ಯೇಣ ನಾರದೇನ ಮಹಾತ್ಮನಾ । ಇದಂ ಸ್ತೋತ್ರಂ ಕೃತಂ....'** –ಎಂದು ಸ್ತೋತ್ರದ ಉಪಸಂಹಾರದಲ್ಲಿ ನಾರದರಿಂದ ರಚಿತವಾದ ಸ್ತೋತ್ರ ಇದೆಂದೂ ತಿಳಿಸಲಾಗಿದೆ.

### ೨. ಮುಖ್ಯಪ್ರಾಣಾವಯವಸ್ಥ ಭಗವದ್ರೂಪಸಂಸ್ತವಃ

**'ಶಿಂಶುಮಾರೋ ಹರಿಃ ಸಾಕ್ಷಾತ್ ಪ್ರಾಣವಕ್ತ್ರೇ ಚ ಸಂಸ್ಥಿತಃ....'** ಮುಖ್ಯಪ್ರಾಣನ ಬಾಯಿಯಲ್ಲಿ ಶಿಂಶುಮಾರರೂಪಿ ಪರಮಾತ್ಮನಿರುವನೆಂದು ಪ್ರಾರಂಭವಾಗುವ ೧೨ ಶ್ಲೋಕಗಳನ್ನೊಳಗೊಂಡ ಈ ಸ್ತೋತ್ರ ನಾರದಪುರಾಣದಲ್ಲಿ ಪಠಿತವಾದುದು. ಮುಖ್ಯ ಪ್ರಾಣನ ಬಾಯಿಯೇ ಮುಂತಾದ ಇಪ್ಪತ್ತಕ್ಕಿಂತಲೂ ಅಧಿಕ ಅವಯವಗಳನ್ನು ಉಲ್ಲೇಖಿಸಿ ಅವುಗಳಲ್ಲಿ ಇರುವ ಭಗವಂತನ ಶಿಂಶುಮಾರವೇ ಮುಂತಾದ ಇಪ್ಪತ್ತೈದಕ್ಕಿಂತಲೂ ಅಧಿಕ ರೂಪಗಳ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ.

ವಾಯುದೇವರ ಶರೀರದಲ್ಲಿ ತತ್ತ್ವಾಭಿಮಾನಿದೇವತೆಗಳು ಇರುವರೋ ಇಲ್ಲವೋ? ಇದ್ದರೆ, ಅವರು ಆ ಶರೀರದ ಆಯಾ ಅವಯವವನ್ನು ನಿಯಮಿಸುತ್ತಿರುವರೋ ಇಲ್ಲವೋ? ಎಂಬ ಸಂದೇಹಕ್ಕೆ ಪರಿಹಾರ ದೊರಕುವಂತೆ ಈ ಸ್ತೋತ್ರದಲ್ಲಿ ಹೀಗೆ ಸ್ತುತಿಸಲಾಗಿದೆ–

**ರುದ್ರಾದ್ಯಾಸ್ತತ್ವದೇವಾಶ್ಚ ವಾಯುದೇಹೇ ಚ ಸಂಸ್ಥಿತಾಃ ।**
**ನಿಯಮ್ಯಾಸ್ತು ಸದಾ ಸರ್ವೇ ಪ್ರಾಣದೇವೇನ ಕೇವಲಮ್ ॥**

ರುದ್ರಾದಿ ತತ್ತ್ವಾಭಿಮಾನಿದೇವತೆಗಳು ವಾಯುದೇವರ ಬೇರೆ ಬೇರೆ ಅವಯವದಲ್ಲಿ ಇರುವರಾದರೂ ಅವರು ಉಳಿದವರ ಶರೀರಗಳಲ್ಲಿ ಹೇಗೋ ಹಾಗೆ ನಿಯಾಮಕರಾಗಿ ಇರುವುದಿಲ್ಲ; ಬದಲಾಗಿ ವಾಯುದೇವರಿಂದ ನಿಯಮ್ಯರಾಗಿಯೇ ಇರುವರು.

**ಸಾಕ್ಷಾನ್ನಿಯಾಮಕೋ ವಿಷ್ಣುಃ ಬ್ರಹ್ಮವಾಯ್ವೋಃ ಸದೈವ ಚ ।**
**ರುದ್ರಾದಿಸರ್ವಜೀವಾನಾಂ ತದ್ದ್ವಾರೇಣ ನಿಯಾಮಕಃ ॥**

# • ವಾಯುದೇವನ ಕುರಿತಾದ ಸ್ತೋತ್ರಪ್ರಪಂಚ •

ಶಾಸ್ತ್ರದಲ್ಲಿ ಪ್ರತಿಪಾದಿತ ಪ್ರಮೇಯಗಳನ್ನು ಮನನ ನಡೆಸಲು ಅನುಕೂಲವಾಗಿ ಹೊರಟಿರುವಂತಹದ್ದು ಸ್ತೋತ್ರವಾಙ್ಮಯ. ಉಪನಿಷತ್ತುಗಳಲ್ಲಿ, ಮಹಾಭಾರತರಾಮಾಯಣಾದಿಗಳಲ್ಲಿ, ಮಧ್ವಚರಿತೆಯಲ್ಲಿ ಪ್ರಸ್ತುತಗಳಾಗಿರುವ ಮುಖ್ಯಪ್ರಾಣನ ಮೂಲ ರೂಪದ ಗುಣಲೀಲೆಗಳನ್ನೂ, ಮೂರು ಅವತಾರಗಳ ಗುಣಲೀಲೆಗಳನ್ನೂ ಆಧುನಿಕ ಪರಿಭಾಷೆಯ 'ಕ್ಯಾಪ್‌ಸ್ಯೂಲ್' ರೂಪದಲ್ಲಿ ತುಂಬಿ ಉಣಬಡಿಸುತ್ತಿದೆ ಮುಖ್ಯಪ್ರಾಣ ವಿಷಯಕ ಸ್ತೋತ್ರ ಸಾಹಿತ್ಯ. ಐತರೇಯ ಪ್ರಕಾಶನ ವ್ಯಾಸನಕೆರೆ ಇದರಿಂದ ಪ್ರಕಟಿತವಾದ ಡಾ। ವ್ಯಾಸನಕೆರೆ ಪ್ರಭಂಜನಾಚಾರ್ಯರಿಂದ ಸಂಪಾದಿತವಾದ 'ವಾಯುದೇವನ ಸ್ತೋತ್ರಮಾಲಿಕಾ'ದ ಆಧಾರದಲ್ಲಿ ರೂಪಿಸಲಾದ ಈ ವಿಭಾಗದಲ್ಲಿ ಮುಖ್ಯಪ್ರಾಣನ ಹಾಗೂ ಅವನ ಮೂರು ಅವತಾರಗಳ ಕುರಿತಾದ ಸುಮಾರು ಎಪ್ಪತ್ತಕ್ಕಿಂತಲೂ ಅಧಿಕ ಸ್ತೋತ್ರಗಳ ಸ್ಥೂಲ ಮಾಹಿತಿಯನ್ನು ನೀಡಲಾಗಿದೆ. ಮುಖ್ಯಪ್ರಾಣನ ಮೂಲರೂಪ, ಮೂಲರೂಪ ಹಾಗೂ ಮೂರೂ ಅವತಾರಗಳು, ಹನೂಮದವತಾರ, ಭೀಮಾವತಾರ ಮತ್ತು ಮಧ್ವಾವತಾರ –ಹೀಗೆ ಅನುಕ್ರಮವಾಗಿ ಈ ವಿಷಯಗಳ ಕುರಿತಾದ ಸ್ತೋತ್ರಗಳನ್ನು ಸಂಗ್ರಹಿಸಲಾಗಿದೆ. ಧ್ಯಾನ, ಸ್ತುತಿ, ಅಷ್ಟಕ, ಗೀತಾಕವಚ –ಹೀಗೆ ಬೇರೆ ಬೇರೆ ಬಗೆಯ ಸ್ತೋತ್ರಗಳನ್ನೊಳಗೊಂಡಿದೆ. ಮುಖ್ಯಪ್ರಾಣನ ಕುರಿತಾದ ಈ ಸ್ತೋತ್ರಮಾಹಿತಿಸಂಗ್ರಹ, ಜಿಜ್ಞಾಸುಗಳು ಪದ್ಯದ ಪ್ರಮೇಯದ ಮೊದಲ ಮಾತಿನ ಆಧಾರದ ಮೇಲೆ ಸ್ತೋತ್ರವನ್ನು ಆಯ್ಕೆಮಾಡಿ ಪಠನೆಗೆ, ಅನುಸಂಧಾನಕ್ಕೆ ವಿನಿಯೋಗಿಸಿಕೊಳ್ಳಲು ಅವರಿಗೆ ಅನುಕೂಲವಾದೀತೆಂದು ಭಾವಿಸಲಾಗಿದೆ.

## ಪ್ರಾಣದೇವನ ಕುರಿತಾದ ಸ್ತೋತ್ರಗಳು

[ಸ್ಥೂಲಪರಿಚಯ]

### ಮುಖ್ಯಪ್ರಾಣನ ಮೂಲರೂಪದ ಸ್ತೋತ್ರಗಳು

೧. ಶ್ರೀಮುಖ್ಯಪ್ರಾಣ ಧ್ಯಾನಮ್:

'ಸಹಸ್ರ ಸೂರ್ಯೇಂದುಸಮಾನಕಾಂತಿಂ....' ಸಾವಿರಾರು ಸೂರ್ಯರ, ಹಾಗೂ ಚಂದ್ರರ ಕಾಂತಿಗೆ ಸಮಾನವಾದ ಕಾಂತಿವುಳ್ಳ ಎಂದು ಮುಖ್ಯಪ್ರಾಣನ ಅಸಾಧಾರಣ ಕಾಂತಿಯ ವರ್ಣನೆಯಿಂದಲೇ ಪ್ರಾರಂಭವಾಗುವ ಮುಖ್ಯಪ್ರಾಣನ ಧ್ಯಾನರೂಪದ ಐದು ಶ್ಲೋಕಗಳನ್ನೊಳಗೊಂಡ ಈ ಸ್ತೋತ್ರ ನಾರಾಯಣತಂತ್ರದಲ್ಲಿ ಪಠಿತವಾದುದು. ಶ್ರೀ ಮಧ್ವರು ತಮ್ಮ ತಂತ್ರಸಾರಸಂಗ್ರಹದಲ್ಲಿ [4-66] ಮುಖ್ಯಪ್ರಾಣನ ಧ್ಯಾನಶ್ಲೋಕದಲ್ಲಿ

ತಿಳಿಸಿರುವಂತೆ '......ಸದಾ ಶ್ರೀಪತಯೇ ನಮಂತಮ್' –ಎರಡು ಕೈಗಳಿಂದ ಯಾವಾಗಲೂ ಶ್ರೀಪತಿಗೆ ನಮಸ್ಕರಿಸುತ್ತಿರುವ ಹಾಗೂ ಮತ್ತೆರಡು ಎತ್ತಲ್ಪಟ್ಟ ಕೈಗಳಲ್ಲಿಯ ಒಂದು ಕೈಯಿಂದ ಚಿನ್ನದ ಗದೆಯನ್ನು ಧರಿಸಿರುವ ಮತ್ತೊಂದು ಕೈಯಿಂದ ಸಜ್ಜನರಿಗೆ ಅಭಯ ಪ್ರದಾನ ಮಾಡುತ್ತಿರುವ– 'ಉದ್ಯಮ್ಯ ದೋರ್ಭ್ಯಾಮಭಯಪ್ರದಂ ತಂ ಗದಾಯುಧಂ ಸ್ವರ್ಣಮಯಂ ದಧಾನಮ್' ಎಂಬ ಭಂಗಿಯಿಂದ ಕೂಡಿರುವುದಾಗಿ ವರ್ಣಿತವಾಗಿದೆ. ಮೂವತ್ತೆರಡು ಶಾರೀರಿಕ ಲಕ್ಷಣಗಳು ಮನುಷ್ಯಶರೀರಕ್ಕೇ ಹೆಚ್ಚು ಒಗ್ಗುವವುಗಳಾಗಿರುವುದರಿಂದ 'ದ್ವಾತ್ರಿಂಶಪೂರ್ಣಶುಭಲಕ್ಷಣಸಾಂದ್ರಂ ದೇಹಂ....' ಎಂದು ಮೂವತ್ತೆರಡು ಲಕ್ಷಣಭರಿತ ದೇಹವುಳ್ಳವರನ್ನಾಗಿ ಸ್ತುತಿಸಲಾಗಿದೆ ಎಂದರೆ ಈ ಧ್ಯಾನಸ್ತೋತ್ರದ ಪ್ರಕಾರ ಮುಖ್ಯಪ್ರಾಣದೇವರ ಶರೀರ ಮಾನವಾಕಾರದ ಶರೀರ ಎಂದು ಸ್ಪಷ್ಟವಾಗಬಲ್ಲದು.

'ಪ್ರಾಣದೇವಸ್ಯ ಶಿಷ್ಯೇಣ ನಾರದೇನ ಮಹಾತ್ಮನಾ । ಇದಂ ಸ್ತೋತ್ರಂ ಕೃತಂ....' –ಎಂದು ಸ್ತೋತ್ರದ ಉಪಸಂಹಾರದಲ್ಲಿ ನಾರದರಿಂದ ರಚಿತವಾದ ಸ್ತೋತ್ರ ಇದೆಂದೂ ತಿಳಿಸಲಾಗಿದೆ.

## ೨. ಮುಖ್ಯಪ್ರಾಣಾವಯವಸ್ಥ ಭಗವದ್ರೂಪಸಂಸ್ತವಃ

'ಶಿಂಶುಮಾರೋ ಹರಿಃ ಸಾಕ್ಷಾತ್ ಪ್ರಾಣವಕ್ತ್ರೇ ಚ ಸಂಸ್ಥಿತಃ....' ಮುಖ್ಯಪ್ರಾಣನ ಬಾಯಿಯಲ್ಲಿ ಶಿಂಶುಮಾರರೂಪಿ ಪರಮಾತ್ಮನಿರುವನೆಂದು ಪ್ರಾರಂಭವಾಗುವ ೧೨ ಶ್ಲೋಕಗಳನ್ನೊಳಗೊಂಡ ಈ ಸ್ತೋತ್ರ ನಾರದಪುರಾಣದಲ್ಲಿ ಪಠಿತವಾದುದು. ಮುಖ್ಯಪ್ರಾಣನ ಬಾಯಿಯೇ ಮುಂತಾದ ಇಪ್ಪತ್ತಕ್ಕಿಂತಲೂ ಅಧಿಕ ಅವಯವಗಳನ್ನು ಉಲ್ಲೇಖಿಸಿ ಅವುಗಳಲ್ಲಿ ಇರುವ ಭಗವಂತನ ಶಿಂಶುಮಾರವೇ ಮುಂತಾದ ಇಪ್ಪತ್ತೈದಕ್ಕಿಂತಲೂ ಅಧಿಕ ರೂಪಗಳ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ.

ವಾಯುದೇವರ ಶರೀರದಲ್ಲಿ ತತ್ತ್ವಾಭಿಮಾನಿದೇವತೆಗಳು ಇರುವರೋ ಇಲ್ಲವೋ? ಇದ್ದರೆ, ಅವರು ಆ ಶರೀರದ ಆಯಾ ಅವಯವವನ್ನು ನಿಯಮಿಸುತ್ತಿರುವರೋ ಇಲ್ಲವೋ? ಎಂಬ ಸಂದೇಹಕ್ಕೆ ಪರಿಹಾರ ದೊರಕುವಂತೆ ಈ ಸ್ತೋತ್ರದಲ್ಲಿ ಹೀಗೆ ಸ್ತುತಿಸಲಾಗಿದೆ–

ರುದ್ರಾದ್ಯಾಸ್ತತ್ತ್ವದೇವಾಶ್ಚ ವಾಯುದೇಹೇ ಚ ಸಂಸ್ಥಿತಾಃ ।
ನಿಯಮ್ಯಾಸ್ತು ಸದಾ ಸರ್ವೇ ಪ್ರಾಣದೇವೇನ ಕೇವಲಮ್ ॥

ರುದ್ರಾದಿ ತತ್ತ್ವಾಭಿಮಾನಿದೇವತೆಗಳು ವಾಯುದೇವರ ಬೇರೆ ಬೇರೆ ಅವಯವದಲ್ಲಿ ಇರುವರಾದರೂ ಅವರು ಉಳಿದವರ ಶರೀರಗಳಲ್ಲಿ ಹೇಗೋ ಹಾಗೆ ನಿಯಾಮಕರಾಗಿ ಇರುವುದಿಲ್ಲ; ಬದಲಾಗಿ ವಾಯುದೇವರಿಂದ ನಿಯಮ್ಯರಾಗಿಯೇ ಇರುವರು.

ಸಾಕ್ಷಾನ್ನಿಯಾಮಕೋ ವಿಷ್ಣುಃ ಬ್ರಹ್ಮವಾಯ್ವೋಃ ಸದೈವ ಚ ।
ರುದ್ರಾದಿಸರ್ವಜೀವಾನಾಂ ತದ್‌ದ್ವಾರೇಣ ನಿಯಾಮಕಃ ॥

ಶ್ರೀವಿಷ್ಣು ಚತುರ್ಮುಖ ಹಾಗೂ ವಾಯುದೇವರಿಗೆ ಸಾಕ್ಷಾತ್ ನಿಯಾಮಕ. ಅವರ ಮೂಲಕ ರುದ್ರಾದಿ ಜೀವರಿಗೆ ನಿಯಾಮಕನಾಗಿರುವನು –ಎಂದೂ ಈ ಸ್ತೋತ್ರದ ಉಪಸಂಹಾರದಲ್ಲಿ ತಿಳಿಸಲಾಗಿದೆ.

೩. **ಋಜುಶತನಾಮಾವಲಿ:**

'ಕಲ್ಕೀ ಸುತೇಜಾ ದಾಸಶ್ಚ....' ಎಂದು ಕಲ್ಕಿನಾಮಕ ಋಜುವಿನ ಹೆಸರಿನಿಂದ ಪ್ರಾರಂಭವಾಗುವ ನೂರುಮಂದಿ ಋಜುಗಳ ಹೆಸರುಗಳ ಪಟ್ಟಿಯನ್ನು ಸಂಗ್ರಹಿಸ ಹೊರಟ 'ಋಜುಶತನಾಮಾವಲಿ' ಸ್ತೋತ್ರ ವಾಮನಪುರಾಣೋಕ್ತ. '.....ತಥಾ ಪಾಪವಿನಾಶಶ್ಚ ಹ್ಯೇತೇ ಪಂಚಾಶದೀರಿತಾಃ' ಎಂದು ಪಾಪವಿನಾಶನಾಮಕ ಋಜುವಿನಲ್ಲಿಗೆ ಐವತ್ತರ ಒಂದು ಗುಂಪನ್ನೂ, '.....ವಾಯುಶ್ಚೈವ ತಥಾ ಬ್ರಹ್ಮೇತ್ಯೇವಂ ಪಂಚಾಶದೀರಿತಾಃ' –ಎಂದು ಮತ್ತೊಂದು ಐವತ್ತರ ಗುಂಪನ್ನೂ ವಿಂಗಡಿಸಿ ಇಲ್ಲಿ ಪ್ರಸ್ತುತಪಡಿಸಲಾಗಿದೆ.

## ಮುಖ್ಯಪ್ರಾಣನ ಮೂಲರೂಪದೊಂದಿಗೆ ಅವತಾರತ್ರಯವನ್ನು ಕುರಿತಾದ ಸ್ತೋತ್ರಗಳು

**ತ್ರಿವಿಕ್ರಮಪಂಡಿತಾಚಾರ್ಯವಿರಚಿತಾ 'ವಾಯುಸ್ತುತಿ:** ಶ್ರೀ ಮಧ್ವರ ನೆಚ್ಚಿನ ಶಿಷ್ಯರಲ್ಲಿ ಒಬ್ಬರಾಗಿದ್ದ ತ್ರಿವಿಕ್ರಮಪಂಡಿತರಿಂದ ರಚಿತವಾಗಿರುವ ಈ ವಾಯುಸ್ತುತಿ ४ गे ಪದ್ಯಗಳನ್ನೊಳಗೊಂಡಿದೆ. ವಾಯುದೇವನ ಮೂಲರೂಪದ ಕೆಲವು ಮಹಿಮೆಗಳನ್ನೂ, ವಾಯುದೇವನ ಮೂರೂ ಅವತಾರಗಳ ಅಸಾಧಾರಣ ಮಹಿಮೆಗಳನ್ನೂ ಕ್ರೋಡೀಕರಿಸಿ ಪ್ರಸ್ತುತಪಡಿಸುತ್ತಿರುವ ಈ ಸ್ತೋತ್ರ ಐತಿಹ್ಯ ಸಾರುತ್ತಿರುವಂತೆ ವಾಯುದೇವರ ಮೂರೂ ಅವತಾರಗಳ ದರ್ಶನಕ್ಕೊಳಗಾದ ತ್ರಿವಿಕ್ರಮಪಂಡಿತರಿಂದ ಆ ಸ್ಫೂರ್ತಿಯ ಹಿನ್ನೆಲೆಯಲ್ಲಿ ರೂಪುಗೊಂಡದ್ದು. ಶ್ರೀ ಮಧ್ವರೂ ಇದನ್ನು ಮೆಚ್ಚಿಕೊಂಡಿದ್ದು ತಮ್ಮ ಮೆಚ್ಚುಗೆಯ ಸಂಕೇತ ಎಂಬಂತೆ ಅವರಿಂದ ರಚಿತವಾಗಿದ್ದ ನಖಸ್ತುತಿಯಿಂದ ಅಲಂಕೃತವಾಗಿರುವ ಈ ಸ್ತೋತ್ರ ಮಂತ್ರತುಲ್ಯ ಎಂದು ಶ್ರೀ ವಾದಿರಾಜಸ್ವಾಮಿಗಳೇ ಮುಂತಾದವರ ಮನ್ನಣೆಗೂ ಪಾತ್ರ ವಾಗಿರುವಂತಹದ್ದು. ಈ ಸ್ತುತಿಯ ಒಂದೊಂದು ಶ್ಲೋಕವೂ ಪುರಶ್ಚರಣಪದ್ಧತಿಗೆ ಅಳ ವಡಿಸಲ್ಪಟ್ಟದ್ದಾಗಿ ಬೇರೆ ಬೇರೆ ಫಲಕ್ಕೆ ಪ್ರಯೋಜಕವಾಗಬಲ್ಲದೆಂಬ ದೃಢನಂಬಿಕೆ ಇದೆ. ವೇದದ ಅಗ್ನಿಸೂಕ್ತ ಮುಂತಾದವುಗಳಲ್ಲಿ ದ್ರಷ್ಟೃಋಷಿಯು ಸೂಕ್ತಪ್ರತಿಪಾದ್ಯ ಅಗ್ನಿ ನಾರಾಯಣ ಇದ್ದಕ್ಕಿದ್ದಂತೆ ಪ್ರತ್ಯಕ್ಷನಾದ ಎಂದಾಗ 'ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ....' ಎಂದು ಅಗ್ನಿನಾರಾಯಣನಲ್ಲಿ ನೇರವಾಗಿ ನಡೆಸುವ ಸಂಭಾಷಣೆಯೂ, ಅಗ್ನಿನಾರಾಯಣ ಇದ್ದಕ್ಕಿಂದ್ದಂತೆ ಕಣ್ಮರೆಯಾದನೆಂದರೆ 'ಅಗ್ನಿರ್ಹೋತಾ ಕವಿಕ್ರತುಃ.....' ಇತ್ಯಾದಿಯಾಗಿ ಅಗ್ನಿನಾರಾಯಣನ ಪರೋಕ್ಷ ಸ್ತುತಿಯೂ ಕಂಡುಬರುವಂತೆ ವಾಯುಸ್ತುತಿ ಯಲ್ಲೂ 'ಸ್ಫುಟಮವತಿ ಸದಾ ವಾಯುರಸ್ಮದ್ಗುರುಸ್ತಂ....' ಎಂದು ವಾಯುದೇವನ ಪರೋಕ್ಷ ಸ್ತುತಿಯೂ, 'ಮಾತರ್ಮೇ ಮಾತರಿಶ್ವನ್.....' –ಇತ್ಯಾದಿಯಾಗಿ ಪ್ರತ್ಯಕ್ಷವಾಗಿ ವಾಯುದೇವ ನನ್ನು ಕಂಡು ಸಲ್ಲಿಸುವ ಪ್ರಾರ್ಥನೆಯೂ ಕಂಡುಬರುತ್ತಿರುವುದು ಈ ಸ್ತುತಿಯ ಒಂದು ಹೆಗ್ಗಳಿಕೆ. ಭಕ್ತಿಯ ಲಕ್ಷಣ, ತಾರತಮ್ಯ, ಭೇದಪ್ರತಿನಿಧಿವಿಶೇಷ –ಮುಂತಾದ ಶಾಸ್ತ್ರೀಯ

ಪ್ರಮೇಯಗಳನ್ನು ಹಾಸುಹೊಕ್ಕಾಗಿ ಅಳವಡಿಸಿಕೊಂಡು ರಚಿತವಾಗಿರುವ ಸ್ತೋತ್ರ ಎಂದು ಇದರ ಮತ್ತೊಂದು ಹೆಗ್ಗಳಿಕೆ.

**೫. ಖಿಲವಾಯುಸ್ತುತಿ:**

ತ್ರಿವಿಕ್ರಮಪಂಡಿತರು ರಚಿಸಿರುವ ವಾಯುಸ್ತುತಿಯ ಖಿಲ ಭಾಗದಂತೆ ಇರುವಂತಹದ್ದೆಂಬ ಅಭಿಪ್ರಾಯದಲ್ಲಿ 'ಖಿಲವಾಯುಸ್ತುತಿ' ಎಂದೇ ಪ್ರಸಿದ್ಧವಾಗಿರುವ ಇದರಲ್ಲಿ 'ವಾಯುರ್ಭೀಮೋ....' [ಮಹಾಭಾರತ ಶಾಂತಿಪರ್ವ 264-41] 'ಪ್ರಥಮೋ ಹನೂಮಾನ್ನಾಮ.....' [ಮ.ಭಾ.ತಾ.ನಿ. 9.2-125] 'ಜ್ಞಾನೇ ವಿರಾಗೇ....' [ಮ.ಭಾ.ತಾ.ನಿ. 2-151] 'ವಾತೇನ ಕುಂತ್ಯಾಂ ಬಲವಾನ್.....' [ಮ.ಭಾ.ವನಪರ್ವ 154-19, ಮ.ಭಾ.ತಾ.ನಿ. 22-303] 'ಯಸ್ಯ ತ್ರೀಣ್ಯುದಿತಾನಿ....' [ಸರ್ವಮೂಲಗ್ರಂಥಗಳ ಉಪಸಂಹಾರದಲ್ಲಿ] ಮಹಾವ್ಯಾಕರಣಾಂಭೋಧಿ......' [ಸಂಗ್ರಹರಾಮಾಯಣ ಬಾಲಕಾಂಡ 1-3] ಮುಖ್ಯಪ್ರಾಣಾಯ ಭೀಮಾಯ..... [ಸಂಗ್ರಹರಾಮಾಯಣ ಬಾಲಕಾಂಡ 1-5] ಸೂಕ್ತಿರತ್ನಾಕರೇ ರಮ್ಯೇ.... [ಸಂಗ್ರಹರಾಮಾಯಣ ಬಾಲಕಾಂಡ 1-6] 'ತತ್ವಜ್ಞಾನೇ..... ಭೀಮಸೇನಸಮೋ ನಾಸ್ತಿ....' [ಮ.ಭಾ.ತಾ.ನಿ. 160-161] 'ಮನೋಜವಂ ಮಾರುತ ತುಲ್ಯವೇಗಂ....' [ಹನೂಮದ್ರಕ್ಷಾಸ್ತೋತ್ರದಲ್ಲಿ 11] 'ಬುದ್ಧಿರ್ಬಲಂ ಯಶೋ ಧೈರ್ಯಂ....' [ಬ್ರಹ್ಮಾಂಡಪುರಾಣದ ಹನುಮತ್ ಸ್ತವನದಲ್ಲಿ] ಹೀಗೆ ಬೇರೆ ಬೇರೆ ಕೃತಿಗಳಿಗೆ ಸೇರಿರುವ ವಾಯುದೇವರ ಮೂಲರೂಪ ಹಾಗೂ ಅವತಾರತ್ರಯದ ಕುರಿತಾದ ಮಾತುಗಳ ಸಂಗ್ರಹ ಇಲ್ಲಿದೆ.[1]

**೬. ಕಲ್ಯಾಣಿದೇವಿ ವಿರಚಿತ ಲಘುವಾಯುಸ್ತುತಿ:**

'ವಾಯುದೇವಂ ಸದಾನಂದತೀರ್ಥಂ.....' ಎಂದು ಆನಂದತೀರ್ಥರ ಸ್ವಾಮಿಯಾದ ವಾಸುದೇವನ ಸ್ತುತಿಯಿಂದ ಪ್ರಾರಂಭವಾಗುವ ೬ ಶ್ಲೋಕಗಳನ್ನೊಳಗೊಂಡ ಲಘು ವಾಯುಸ್ತುತಿ ಮೊದಲ ಪದ್ಯದಲ್ಲಿ ಹೇಗೋ ಹಾಗೆ ಕೊನೆಯ ಪದ್ಯದಲ್ಲೂ ಇಂದಿರಾನಂದ ವಂದನೆಯನ್ನು ಮಾಡುತ್ತಿದ್ದು ಮಧ್ಯದ ನಾಲ್ಕು ಶ್ಲೋಕಗಳಲ್ಲಿ ಮುಖ್ಯಪ್ರಾಣನ ಮೂರು

---

1. ಐತರೇಯ ಪ್ರಕಾಶನದಿಂದ ಪ್ರಕಟಿತವಾದ ವಾಯುಸ್ತೋತ್ರಮಾಲಿಕಾದಲ್ಲಿ ಪ್ರಚಲಿತ ಪಾಠದ ಪ್ರಕಾರ ಖಿಲವಾಯುಸ್ತುತಿಯಲ್ಲಿ 'ಅನನ್ಯಾಶ್ಚಿಂತಯಂತೋ ಮಾಂ.....' ಎಂಬ ಹಾಗೂ 'ಯಃ ಸರ್ವಗುಣಸಂಪೂರ್ಣಃ.....' -ಎಂಬ ಎರಡು ಭಗವತ್ಪರ ಶ್ಲೋಕಗಳನ್ನು ಸೇರಿಸಲಾಗಿದೆ. ಅವು ಭಗವತ್ಪರಗಳೆಂದು ಅವುಗಳನ್ನು ಇಲ್ಲಿ ಸೇರಿಸಿಲ್ಲ.

ಇಪ್ಪತ್ತು ಶ್ಲೋಕಗಳನ್ನೊಳಗೊಂಡ ಈ ಸ್ತುತಿಯ ಮಧ್ಯದಲ್ಲಿ ಆಂಜನೇಯರೂಪಕ್ಕೆ ಸಂಬಂಧಿಸಿರುವ ಹನ್ನೆರಡು ನಾಮಗಳು, ಭೀಮಸೇನರೂಪಕ್ಕೆ ಸಂಬಂಧಿಸಿರುವ ಹನ್ನೆರಡು ನಾಮಗಳು ಹಾಗೂ ಮಧ್ವರೂಪಕ್ಕೆ ಸಂಬಂಧಿಸಿರುವ ಹನ್ನೆರಡು ನಾಮಗಳು -ಹೀಗೆ ಒಟ್ಟು ಅವತಾರತ್ರಯದ ಮೂವತ್ತಾರು ನಾಮಗಳ ಸಂಗ್ರಹಾತ್ಮಕವಾದ 'ಹನೂಮಾನಂಜನಾಸೂನುಃ....' ಎಂಬಲ್ಲಿಂದ 'ಲಭತೇ ವೈಷ್ಣವೀಂ ಭಕ್ತಿಂ ಗುರುಭಕ್ತಿಸಮನ್ವಿತಾಮ್' -ಎಂಬಲ್ಲಿಯವರೆಗೆ [14.....19] ಆರು ಶ್ಲೋಕಗಳನ್ನೊಳಗೊಂಡಿದ್ದು ಪ್ರತ್ಯೇಕವಾಗಿ ಸ್ತುತಿ ಎನಿಸಲು ಯೋಗ್ಯವೆನಿಸಿರುವ ಭಾಗ ಸೇರಿಕೊಂಡಿದೆ. ಅದರ ಆಕರಗ್ರಂಥ ಸಿಕ್ಕಿಲ್ಲ.

ಅವತಾರಗಳನ್ನು ಪ್ರಸ್ತಾವಿಸಿದೆ. ಎರಡು ಶ್ಲೋಕಗಳಲ್ಲಿ ಶ್ರೀ ಮಧ್ವರೂಪದ ವರ್ಣನೆ ನಡೆಸಲಾಗುವ ಈ ಸ್ತುತಿಯ ಪ್ರತಿಯೊಂದು ಪದ್ಯದ ಕೊನೆಯ ಚರಣ –'ನಂದಯಾಮೋ ವಯಂ ನಂದತೀರ್ಥಮ್' ಎಂದು ಆನಂದತೀರ್ಥರ ಪ್ರಸ್ತಾವವನ್ನೊಳಗೊಂಡಿರುವುದರಿಂದ ಮುಖ್ಯವಾಗಿ ಈ ಸ್ತುತಿ ಆನಂದತೀರ್ಥರ ಸ್ತುತಿಯಾಗಿ ಹೊರಟದ್ದೆಂದು ಸ್ಪಷ್ಟ.

೭. **ಕಲ್ಯಾಣದೇವಿ ವಿರಚಿತ ಅಣುವಾಯುಸ್ತುತಿ:**

'ಆನಂದತೀರ್ಥಮಹಾಮುನಿರಾಜಂ ಗೋವಿಂದಭಕ್ತಶಿಖಾಮಣಿಮೀಡೇ' –ಎಂಬ ಪಲ್ಲವಿಯನ್ನೊಳಗೊಂಡ ೫ ಶ್ಲೋಕಗಳ ಅಣುವಾಯುಸ್ತುತಿ ಮೊದಲ ಎರಡು ಶ್ಲೋಕಗಳಲ್ಲಿ ಪವಮಾನನ ಮೂಲರೂಪದ ಪ್ರಸ್ತಾವವನ್ನು ಮಾಡಿದರೆ ಮುಂದಿನ ಮೂರು ಶ್ಲೋಕಗಳಲ್ಲಿ ಕ್ರಮವಾಗಿ ಆಂಜನೇಯ, ಭೀಮಸೇನ ಹಾಗೂ ಮಧ್ವರೂಪಗಳ ಸ್ತುತಿಯನ್ನು ನಡೆಸಿದೆ.

೮. **ಸುಬ್ರಹ್ಮಣ್ಯವಿರಚಿತಾ ನಕ್ಷತ್ರಮಾಲಾ ವಾಯುಸ್ತುತಿ:**

'ವಂದೇ ಶ್ರೀಧರಮರ್ದನಂ.....' ಎಂದು ಶ್ರೀಕೃಷ್ಣನ ಸ್ತುತಿಯಿಂದ ಪ್ರಾರಂಭಗೊಂಡು 'ಭಟ್ಟಾರಕ ಪ್ರಭೃತಿಸೇವಿತಪಾದಪದ್ಮಃ.....' ಎಂದು ಪದ್ಮಾವತಿಯ ಸ್ತುತಿಯೊಂದಿಗೆ ಕೊನೆಗೊಳ್ಳುವ ೨೯ ಶ್ಲೋಕಗಳನ್ನೊಳಗೊಂಡ ಈ ವಾಯುಸ್ತುತಿ ಮಧ್ಯದ ೨೭ ಶ್ಲೋಕ ಗಳಲ್ಲಿ ಮುಖ್ಯಪ್ರಾಣನ ಮೂರು ಅವತಾರಗಳ ವರ್ಣನೆಯನ್ನು ನಡೆಸುತ್ತಿದೆ. ಪ್ರತಿ ಯೊಂದು ಶ್ಲೋಕವೂ ಮುಖ್ಯಪ್ರಾಣ ಶಬ್ದದಿಂದಲೇ ಪ್ರಾರಂಭವಾಗುತ್ತಿರುವ 'ಶ್ರೀ ಮಧ್ವ ತುಭ್ಯಂ ನಮಃ' –ಎಂಬ ಮಾತಿನಿಂದಲೇ ಕೊನೆಗೊಳ್ಳುತ್ತಿರುವ ಈ ಸ್ತುತಿ ನಕ್ಷತ್ರಗಳ ಒಟ್ಟು ಸಂಖ್ಯೆಯಾದ ೨೭ ಸಂಖ್ಯೆಯಲ್ಲಿ ಶ್ಲೋಕಗಳನ್ನೊಳಗೊಂಡಿರುವುದರಿಂದ 'ನಕ್ಷತ್ರಮಾಲಾ' –ಎಂಬ ಹೆಸರನ್ನು ಪಡೆದಿರುವುದು.

೯. **ಪಾಂಘ್ರಿಕೃಷ್ಣಾಚಾರ್ಯಕೃತ ವಾಯುಸ್ತೋತ್ರ:**

'ಮೇದಿನೀನಂದನೀಕಾಂತಪಾದಾಂಬುಜಂ....' ಎಂದು ಭೂಮಿಯನ್ನು ಸಂತೋಷ ಪಡಿಸುವ ಆಂಜನೇಯನ ಪಾದಾರವಿಂದದ ವರ್ಣನೆಯಿಂದ ಪ್ರಾರಂಭವಾಗುವ ಈ ವಾಯುಸ್ತೋತ್ರ ಮೂರು ಶ್ಲೋಕಗಳಲ್ಲಿ ವಾಯುದೇವನ ಮೂರು ಅವತಾರಗಳನ್ನು ಸ್ತುತಿಸುತ್ತಿದೆ. ಕೊನೆಯ ಶ್ಲೋಕದಲ್ಲಿ ಫಲಶ್ರುತಿ.

೧೦. **ಶ್ರೀವಾಯುಸಹಸ್ರನಾಮಸ್ತೋತ್ರ:**

'ವಾಯುರ್ವಿಶ್ವಗುರುಃ ಪ್ರಾಣೋ....' ಎಂದು ಪ್ರಾರಂಭವಾಗುವ ವಾಯುಸಹಸ್ರ ನಾಮಸ್ತೋತ್ರದ ಆಕರಗ್ರಂಥ ಅಪ್ರಸಿದ್ಧ. 164 ಶ್ಲೋಕಗಳನ್ನೊಳಗೊಂಡ ಈ ಸ್ತೋತ್ರ ವಾಯುದೇವನ ಮೂಲರೂಪಕ್ಕೆ ಸಂಬಂಧಿಸುವ ವಾಯು, ಪ್ರಾಣ, ಸಮೀರಣ, ಉಕ್ಥ ಮುಂತಾದ ನಾಮಗಳನ್ನೂ ಅವತಾರತ್ರಯಕ್ಕೆ ಸಂಬಂಧಿಸುವ ನಾಮಗಳನ್ನೂ ಒಳ ಗೊಂಡಿದೆ. ಸುಮಾರು 140 ಶ್ಲೋಕಗಳಲ್ಲಿ [100 ರಿಂದ 149] ಮಧ್ವಚರಿತಾಧಾರಿತವಾಗಿ ಮಧ್ವರೂಪಕ್ಕೆ ಸಂಬಂಧಿಸಿ ನಾಮಗಳನ್ನು ಹೆಣೆದು ಸಂಗ್ರಹಿಸಲಾಗಿದೆ. ಉಪಸಂಹಾರದಲ್ಲಿ

ತಾರತಮ್ಯಜ್ಞಾನವುಳ್ಳ ಗುರುಗಳಲ್ಲಿ ಭಕ್ತಿವುಳ್ಳವರಿಗಷ್ಟೇ ಅವರ ಶ್ರದ್ಧೆಯನ್ನು ಪರಿಶೀಲಿಸಿ ಈ ಸ್ತೋತ್ರವನ್ನು ನೀಡಬೇಕೆಂದು ತಿಳಿಸಲಾಗಿದೆ–

**ತಾರತಮ್ಯಜ್ಞಾನವತೇ ಗುರೌ ಭಕ್ತಿಮತೇ ಸದಾ ।**
**ಶ್ರದ್ಧಾಂ ಪರೀಕ್ಷ್ಯ ತದ್ದೇಯಂ ವಾಯೋಃ ಸ್ತೋತ್ರಮನುತ್ತಮಮ್ ॥**

೧೧. **ವಾಯ್ವಷ್ಟೋತ್ತರಶತನಾಮಸ್ತೋತ್ರ:**

'....ಪ್ರೋವಾಚ ವಾಯೋರ್ಮಾಹಾತ್ಮ್ಯಂ ನಾರದಾಯ ಮಹಾತ್ಮನೇ' [5] ಎಂದು ಸ್ತೋತ್ರದಲ್ಲೇ ಉಲ್ಲೇಖಿಗೊಂಡಂತೆ ಚತುರ್ಮುಖ ನಾರದರಿಗೆ ನೀಡಿದ ಉಪದೇಶವೇ ಈ ಸ್ತೋತ್ರರೂಪದಲ್ಲಿದೆ. ಅವತಾರತ್ರಯದ ಚರಿತ್ರೆಗೆ ಸಂಬಂಧಿಸಿದಂತೆ ರೂಪುಗೊಂಡ ಶತ ನಾಮಗಳ ಸಂಗ್ರಹ ಇಲ್ಲಿದೆ. ಈ ಸ್ತೋತ್ರದ ಆಕರಗ್ರಂಥ ಅನುಪಲಬ್ಧ. 36 ಶ್ಲೋಕಗಳ ನ್ನೊಳಗೊಂಡ ಈ ಸ್ತೋತ್ರದ ಕೊನೆಯ ನಾಲ್ಕು ಶ್ಲೋಕಗಳು ಫಲಶ್ರುತ್ಯಾತ್ಮಕಗಳು.

೧೨. **ಶ್ರೀವಾಯುನಾಮನಿರ್ವಚನಸ್ತೋತ್ರ:**

11 ಶ್ಲೋಕಗಳನ್ನೊಳಗೊಂಡ 'ಶ್ರೀವಾಯುನಾಮನಿರ್ವಚನಸ್ತೋತ್ರ'ದಲ್ಲಿ ಮುಖ್ಯ ಪ್ರಾಣನ ಮೂಲರೂಪ ಹಾಗೂ ಅವತಾರಗಳಿಗೆ ಸಂಬಂಧಿಸಿ ವಾಯು, ಪ್ರಾಣ, ಹನೂಮಾನ್, ಭೀಮಸೇನ, ವೃಕೋದರ, ಮಧ್ವ, ಆನಂದತೀರ್ಥ, ಪೂರ್ಣಪ್ರಜ್ಞ –ಈ ಎಂಟು ನಾಮಗಳಿಗೆ ಎಂಟು ಶ್ಲೋಕಗಳಲ್ಲಿ ನಿರ್ವಚನವನ್ನು ತೋರಿಸಿ, ಕೊನೆಯ ಮೂರು ಶ್ಲೋಕಗಳಲ್ಲಿ 'ಫಲಶ್ರುತಿ'ಯನ್ನು ನೀಡಲಾಗಿದೆ.

೧೩. **ಹುಲಿಗೀಶ್ರಿಯಃಪತ್ಯಾಚಾರ್ಯ ವಿರಚಿತ ಶ್ರೀಪ್ರಾಣಪಂಚಕಸ್ತೋತ್ರಮ್:**

'ತೀರ್ತ್ವಾ ವಾರಾಶಿಮಾಶು.....' ಎಂದು ಆಂಜನೇಯನ ಸಮುದ್ರತರಣದ ಮಹಿಮೆ ಯಿಂದ ಪ್ರಾರಂಭವಾಗುವ ಐದು ಶ್ಲೋಕಗಳನ್ನೊಳಗೊಂಡ ಈ ಸ್ತೋತ್ರದಲ್ಲಿ ಮೊದಲ ಮೂರು ಶ್ಲೋಕಗಳಲ್ಲಿ ಆಂಜನೇಯ, ಭೀಮಸೇನ ಹಾಗೂ ಶ್ರೀ ಮಧ್ವರ ಸ್ತುತಿ ನಡೆಸಿ, ಕೊನೆಯ ಎರಡು ಶ್ಲೋಕಗಳಲ್ಲಿ ವಾಯುದೇವನ ಮೂಲರೂಪದ ವರ್ಣನೆಯನ್ನು ಮಾಡ ಲಾಗಿದೆ. 'ಅಪರಮಾಂಕಗತಃ ಪರಿಮಾಂಕಗಃ....' ಎಂಬ ಶ್ಲೋಕದಲ್ಲಿ ತಂತ್ರಸಾರಸಂಗ್ರಹದ ಮುಖ್ಯಪ್ರಾಣನ ಕುರಿತಾದ 'ಉದ್ಯದ್ರವಿಪ್ರಕರಸನ್ನಿಭಂ.....' ಎಂಬ ಪದ್ಯದಲ್ಲಿ ಉಲ್ಲೇಖಿಸ ಲಾದ 'ಅಚ್ಯುತಾಂಕೇ ಸ್ವಾಸೀನಂ' –ಎಂಬ ಮಾತಿನ ಪ್ರಮೇಯವನ್ನೂ, ಎರಡು ಕೈಗಳಲ್ಲಿ ಗದಾಭಯಗಳನ್ನು ಧರಿಸಿರುವ ಪ್ರಮೇಯವನ್ನೂ ವರ್ಣಿಸಲಾಗಿದೆ.

೧೪. **ಶ್ರೀನಿವಾಸವಿರಚಿತ ಶ್ರೀಪ್ರಾಣಾಷ್ಟಕ:**

'ಜಲಧಿಲಂಘನಂ ಪಂಕಜಾನನಂ...' –ಎಂದು ಪ್ರಾರಂಭವಾಗುವ ಈ ಪ್ರಾಣಾಷ್ಟಕ ಒಂಭತ್ತು ಪದ್ಯಗಳನ್ನೊಳಗೊಂಡಿದ್ದು ಪ್ರತಿಯೊಂದು ಮಾತಿನ ಕೊನೆಯಲ್ಲಿ 'ಮಾರುತಿಂ ಭಜೇ' ಎಂದು ಉಲ್ಲೇಖಿಸುತ್ತ ಮುಖ್ಯಪ್ರಾಣನ ಅವತಾರತ್ರಯದ ಮಹಿಮೆಗಳನ್ನು ಸಂಗ್ರಹಿಸಿದೆ.

### ೧೫. ಶ್ರೀವೇಂಕಟಾದ್ರಿರಮಣಕೃತ ಭಾರತೀಶಕರಾವಲಂಬನ ಸ್ತೋತ್ರ:

ಶ್ರೀವೇಂಕಟೇಶಪದಪದ್ಮಸುಚಂಚರೀಕ....' ಎಂದು ಪ್ರಾರಂಭವಾಗುವ ಈ ಭಾರತೀ ಶಕರಾವಲಂಬನಸ್ತೋತ್ರ ಹನ್ನೆರಡು ಶ್ಲೋಕಗಳನ್ನೊಳಗೊಂಡಿದ್ದು ಹೆಸರಿಗೆ ಅನುಗುಣವಾಗಿ ಇದರ ಪ್ರತಿಯೊಂದು ಶ್ಲೋಕದ ಕೊನೆಯ ಚರಣ 'ಶ್ರೀಭಾರತೀಶ ಮಮ ದೇಹಿ ಕರಾವಲಂಬಮ್' –ಎಂದು ಭಾರತೀಶನಲ್ಲಿ ಕೈಹಿಡಿದು ಉದ್ಧರಿಸಲು ಸಲ್ಲಿಸಲಾಗುವ ಬಿನ್ನಹದಿಂದ ಕೂಡಿದೆ. ಮೊದಲ ಎರಡು ಪದ್ಯಗಳಲ್ಲಿ ವಾಯುದೇವನ ಮೂಲರೂಪದ ಪ್ರಸ್ತಾವ ಮಾಡಿ ಮುಂದೆ ವಾಯುದೇವನ ಅವತಾರತ್ರಯದ ಬಗ್ಗೆ ತಿಳಿಸಲಾಗುವುದು. ಈ ಸ್ತುತಿಯ ಫಲಶ್ರುತಿಯಾಗಿ '....ಯ ಸ್ತೌತಿ ತಂ ನರವರಂ ನ ಜಹಾತಿ ಮಧ್ವಃ' –ಎಂದು ಈ ಸ್ತುತಿಯಿಂದ ಬೇಡಿಕೊಳ್ಳುವವರನ್ನು ಶ್ರೀ ಮಧ್ವರು ಬಿಟ್ಟುಹಾಕುವುದಿಲ್ಲ ಎನ್ನಲಾಗಿದೆ.

### ೧೬. ಶ್ರೀ ವಾದಿರಾಜ ವಿರಚಿತ ವಾಯುಸ್ತುತಿ:

ಅಶೋಕವನವನ್ನು ಪುಡಿಗೈದ ಹನೂಮಂತನನ್ನು ರಾವಣನು ವಿಚಾರಿಸುವುದನ್ನೂ ಅದಕ್ಕೆ ಹನೂಮಂತ ಕೊಡುವ ಉತ್ತರವನ್ನೂ ಹದಿನಾಲ್ಕು ಶ್ಲೋಕಗಳಲ್ಲಿ ಪ್ರಸ್ತುತಪಡಿಸಿ, ಹದಿನೈದನೆಯ ಶ್ಲೋಕದಲ್ಲಿ ಫಲಶ್ರುತಿಯನ್ನು ಪ್ರಸ್ತುತಪಡಿಸುತ್ತಿರುವ ಶ್ರೀ ವಾದಿರಾಜಯತಿ ವಿರಚಿತ ವಾಯುಸ್ತುತಿಯ ಕೊನೆಯ ಎರಡು ಶ್ಲೋಕಗಳಲ್ಲಿ ಹನೂಮಂತ ತಾನು ಕೃಷ್ಣಾವತಾರದ ಸಂದರ್ಭದಲ್ಲಿ ಭೀಮಸೇನನಾಗಿಯೂ, ವ್ಯಾಸಾವತಾರದ ಸಂದರ್ಭದಲ್ಲಿ ಶ್ರೀ ಮಧ್ವಾಚಾರ್ಯರಾಗಿಯೂ ಅವತರಿಸಿ ಬರುವುದಾಗಿ ತಿಳಿಸಿರುವುದನ್ನು ಉಲ್ಲೇಖಿಸ ಲಾಗಿದೆ.

### ೧೭. ಪವನಜಾಷ್ಟಕ:

'ಭವಭಯಾಪಹಂ ಭಾರತೀಪತಿಂ.....' ಎಂದು ಪ್ರಾರಂಭವಾಗುವ ಪವನಜಾಷ್ಟಕ ಪವನನ ಆಂಜನೇಯ, ಭೀಮ ಹಾಗೂ ಮಧ್ವರೂಪಗಳಿಗೆ ಸಂಬಂಧಿಸುವ ಕೆಲವು ಗುಣ ಗಳನ್ನು ಉಲ್ಲೇಖಿಸುತ್ತಿದೆ. '.....ಭಜತ ಸಜ್ಜನಾ ಮಾರುತಾತ್ಮಜಮ್' –ಎಂಬ ಪಲ್ಲವಿ ಯಿಂದ ಕೂಡಿದೆ. ಒಂದೇ ಶ್ಲೋಕದಲ್ಲಿ ಮೂರೂ ಅವತಾರಗಳ ಪ್ರಸ್ತಾವವನ್ನೂ ಮಾಡಿದ್ದಿದೆ.

### ೧೮. ಭೀಮಸೇನ ವಿರಚಿತ ಯಂತ್ರೋದ್ಧಾರಕ ಮಂಗಲಾಷ್ಟಕ:

ಯಂತ್ರೋದ್ಧಾರಕನಾಮಕೋ ರಘುಪತೇರಾಜ್ಞಾಂ.....' ಎಂದು ಆಂಜನೇಯನ ಯಂತ್ರೋದ್ಧಾರಕನಾಮದ ಉಲ್ಲೇಖದೊಂದಿಗೇ ಪ್ರಾರಂಭವಾಗುತ್ತಿರುವ ಯಂತ್ರೋದ್ಧಾರಕ ಮಂಗಲಾಷ್ಟಕದ ಪ್ರತಿಯೊಂದು ಶ್ಲೋಕವೂ 'ಯಂತ್ರೋದ್ಧಾರಕನಾಮಮಾರುತಿರಯಂ ಕುರ್ಯಾತ್ ಸದಾ ಮಂಗಲಮ್' –ಎಂಬ ಚರಣದಿಂದ ಕೊನೆಗೊಳ್ಳುವುದು. ವಾಯು ದೇವನ ಮೂರೂ ಅವತಾರಗಳ ಸಾಧನೆಗಳ ಕುರಿತೂ ಬೆಳಕುಚೆಲ್ಲುತ್ತಿರುವ ಈ ಮಂಗ ಲಾಷ್ಟಕ ಭೀಮಸೇನವಿರಚಿತ ಎಂದು ಪ್ರಸಿದ್ಧಿ ಇದೆ. ಮಂಗಲಾಷ್ಟಕದಲ್ಲೇ 'ಭಕ್ತಾಗ್ರೇಸರ ಭೀಮಸೇನರಚಿತಂ....' ಎಂದು ಉಲ್ಲೇಖ ಬಂದಿದೆ. ಆದರೆ ಕುಂತೀಸುತ ಭೀಮಸೇನ ತನ್ನ ಮುಂದಿನ ಮಧ್ವಾವತಾರದ ಸಾಧನೆಯನ್ನು ಉಲ್ಲೇಖಿಸಿರುವನೆಂಬುದೂ, ಇದಕ್ಕಿಂತಲೂ ಅಧಿಕವಾಗಿ 'ಶ್ರೀಮದ್‌ವ್ಯಾಸಮುನೀಂದ್ರವಂದ್ಯಚರಣ...' ಎಂದು ವ್ಯಾಸತೀರ್ಥರನ್ನೂ

ಉಲ್ಲೇಖಿಸಿರುವನೆಂಬುದೂ ಒಪ್ಪಿಕೊಳ್ಳಲಾಗದ ಸಂಗತಿ. ಆದ್ದರಿಂದ ಬೇರೆ ಯಾರೋ ಭೀಮಸೇನ ಎಂಬ ಹೆಸರಿನ ವ್ಯಕ್ತಿಯಿಂದ ರಚಿತವಾಗಿರುವ ಮಂಗಲಾಷ್ಟಕ ಇದೆಂದು ಭಾವಿಸಬಹುದಾಗಿದೆ. ಹಾಗಾದರೆ ಭೀಮಸೇನನಿಗೆ 'ಭಕ್ತಾಗ್ರೇಸರ' ಎಂದು ನೀಡಲಾದ ವಿಶೇಷಣವನ್ನು ಹೇಗೆ ಕೂಡಿಸಬೇಕೆಂಬುದು ವಿಚಾರಣೀಯ.

೧೯. **ವಾಯುಭಾರತೀಸ್ತೋತ್ರಮ್:**

'ಮಹಾಲಕ್ಷ್ಮೀಪತಿಶ್ರೀಮಚ್ಚರಣಾಬ್ಜಪರಾಯಣಮ್ । ಶ್ರೀವಾಯುಂ...' ಎಂದು ಪ್ರಾರಂಭವಾಗುವ ವಾಯುಭಾರತೀಸ್ತೋತ್ರ ಹದಿನೇಳು ಪದ್ಯಗಳನ್ನೊಳಗೊಂಡಿದ್ದು, ಹೆಚ್ಚಿನ ಪದ್ಯಗಳ ಉತ್ತರಾರ್ಧ 'ಶ್ರೀವಾಯುಂ ಭಾರತೀಸೇವ್ಯಂ ಸೇವೇ ಸರ್ವೇಷ್ಟಸಿದ್ಧಯೇ' –ಎಂಬುದಾಗಿದೆ. ಶ್ರೀ ಸತ್ಯನಿಧಿತೀರ್ಥ ವಿರಚಿತವಾದ ಇದರಲ್ಲಿ ವಾಯುದೇವರ ಮೂರೂ ಅವತಾರಗಳ ಪ್ರಸ್ತಾವ ಬಂದಿದೆ. 'ಗಂಗಾ ಗೋದಾವರೀ ಕೃಷ್ಣ ಕಾವೇರೀ ದಿವ್ಯತೀರಗಮ್' 'ಶ್ರೀಸುರಶ್ರೀರಂಗಸತ್ಯಾಪತಿ ಶ್ರೀಪಾದಪೂಜಕಮ್' ಇತ್ಯಾದಿಯಾಗಿ ಆಯಾ ಪ್ರದೇಶಕ್ಕೆ ಸಂಬಂಧಿಸಿದ ಕೆಲವು ವಿಶೇಷಗಳನ್ನೂ ಈ ಸ್ತೋತ್ರದಲ್ಲಿ ಉಲ್ಲೇಖಿಸಲಾಗಿದೆ. 'ತಸ್ಯ ವಾಯೋರ್ಹಿ ಮಾಹಾತ್ಮ್ಯಂ ಲೇಶಲೇಶಾತಿಲೇಶತಃ । ವರ್ಣಿತಂ.....' –ಎಂದು ವಾಯು ದೇವರ ಮಹಿಮೆಯ ಅತ್ಯಲ್ಪ ಅಂಶವನ್ನಷ್ಟೇ ತಿಳಿಸಲಾಗಿದೆ ಎಂದು ನಿವೇದಿಸಿಕೊಳ್ಳ ಲಾಗಿದೆ.

೨೦. **ಶ್ರೀ ಮಧ್ವಾಷ್ಟಕಮ್:**

'ಭಕ್ತಿಂ ಶ್ರೀರಮಣಸ್ಯ ಪಾದಯುಗಲೇ ಪ್ರೀತ್ಯಾ ಪ್ರದೇಹೀಶ....' –ಎಂದು ಪ್ರಾರಂಭ ವಾಗುವ ಮಧ್ವಾಷ್ಟಕ ಶ್ರೀ ವಾದಿರಾಜಯತಿಗಳ ರಚನೆ. ವಾಯುದೇವನ ಮೂರೂ ಅವತಾರಗಳ ಪ್ರಸ್ತಾವವುಳ್ಳ ಇದರಲ್ಲಿ 'ಕಾಮೀ ಯೇನ ಹಿ ಕೀಚಕೋ ವಿನಿಹತಃ....' ಇತ್ಯಾದಿ ಪದ್ಯದಲ್ಲಿ ಭೀಮಸೇನನಿಂದ ಸಂಹೃತರಾದ ಕೀಚಕಾದಿಗಳು ಹೇಗೆ ಅರಿಷಡ್ವರ್ಗಕ್ಕೆ ಸಂಕೇತವೆನಿಸುವರೆಂದು ಉಲ್ಲೇಖಿಸಿ, '....ಷಡ್ವೈರಿವರ್ಗಾತ್ ಸದಾ ಸ ತ್ವಂ ಭೀಮ ಗುಣಾಭಿರಾಮ ದಯಯಾ ದಾಸಂ ಹಿ ಮಾಮುದ್ಧರ' –ಎಂದು ಅರಿಷಡ್ವರ್ಗದಿಂದ ಪಾರು ಮಾಡುವಂತೆ ಭೀಮಸೇನನನ್ನು ಪ್ರಾರ್ಥಿಸಿರುವಂತಹದ್ದು ತುಂಬ ಉದ್‌ಬೋಧಕವೆನಿಸಿದೆ.

೨೧. **ಮಧ್ವಸ್ತುತಿ:**

'ಯಃ ಸೀತಾಮುದ್ರಿಕಾಧರಕರೋ....' ಎಂದು ಪ್ರಾರಂಭವಾಗುವ, ಆರು ಪದ್ಯಗಳ ನ್ನೊಳಗೊಂಡ ಮಧ್ವಸ್ತುತಿ ಯದುಪತ್ಯಾಚಾರ್ಯ ರಚಿತವಾದುದು. ವಾಯುದೇವನ ಮೂರೂ ಅವತಾರಗಳ ಪ್ರಸ್ತಾವವುಳ್ಳ ಈ ಸ್ತುತಿಯ ಪ್ರತಿಯೊಂದು ಪದ್ಯವೂ '.....ಮಧ್ವಂ ತಮೀಡ್ಯಂ ನುಮಃ' –ಎಂಬ ಪಲ್ಲವಿಯೊಂದಿಗೆ ಕೊನೆಗೊಳ್ಳುವುದು.

೨೨. **ಶ್ರೀಮದಾನಂದತೀರ್ಥಸ್ತವರತ್ನಮಾಲಿಕಾ:**

'ಶ್ರೀಶಂ ಶ್ರೀವಿಧಿವಾಯುರುದ್ರಮಘವಪ್ರಾಣಾನ್.....' ಎಂದು ಪ್ರಾರಂಭವಾಗುವ ಶ್ರೀಮದಾನಂದತೀರ್ಥಸ್ತವರತ್ನಮಾಲಿಕಾ ಹದಿನೇಳು ಪದ್ಯಗಳನ್ನೊಳಗೊಂಡಿದೆ. ಮೊದಲ ಎರಡು ಪದ್ಯಗಳಲ್ಲಿ ಶ್ರೀಮದಾನಂದತೀರ್ಥರ ವರೆಗಿನ ಗುರುಪರಂಪರೆಯನ್ನು ಉಲ್ಲೇಖಿಸಿ,

'.....ನತ್ವಾ ವಕ್ಷ್ಯೇ ತಸ್ಯ ಲೀಲಾಮವತಾರತ್ರಯಸ್ಯ ಚ' –ಎಂಬುದಾಗಿ ಪ್ರತಿಜ್ಞೆಗೈದು ವಾಯುದೇವನ ಮೂರೂ ಅವತಾರಗಳ ಲೀಲೆಗಳನ್ನು, ಮಹಿಮೆಗಳನ್ನು ಸಂಗ್ರಹಿಸಲಾಗಿದೆ. ಶ್ರೀನಿವಾಸಾಚಾರ್ಯಕೃತವಾದ ಈ ಸ್ತವರತ್ನಮಾಲಿಕಾದ ಕೊನೆಯ ರತ್ನ–

**ಶ್ರೀರಾಮಂ ಹನುಮತ್ಸೇವ್ಯಂ ಶ್ರೀಕೃಷ್ಣಂ ಭೀಮಸೇವಿತಮ್ ।**
**ಶ್ರೀ ವ್ಯಾಸಂ ಶ್ರೀಮದಾನಂದತೀರ್ಥಸಂಸೇವಿತಂ ಭಜೇ ॥**

ಎಂಬ ಪ್ರಸಿದ್ಧವಾದ ಶ್ಲೋಕ.

೨೩. **ಶ್ರೀವಾಯುಗದ್ಯಮ್:**

**ಭಾರತೀರಮಣಂ ವಾಯುಂ ಕಾರಣಂ ಸರ್ವಸಂಪದಾಮ್ ।**
**ತಾರಕಂ ಭವಪಾಥೋಧೇರ್ನಾರಾಯಣಪರಂ ನುಮಃ ॥**

ಎಂಬ ವಾಯುದೇವನ ಸ್ತುತಿಯಿಂದ ಆರಂಭಗೊಳ್ಳುವ ವಾಯುಪದ್ಯ ಶ್ರೀ ವ್ಯಾಸತೀರ್ಥರಿಂದ ರಚಿತವಾಗಿದ್ದು ವಾಯುದೇವನ ಮೂರೂ ಅವತಾರಗಳ ಪ್ರಸ್ತಾವವನ್ನೊಳಗೊಂಡಿದೆ. ವಾಯುದೇವನ ಉಪನಿಷತ್ ಪ್ರತಿಪಾದ್ಯಗಳಾದ ಮೂಲಾವತಾರದ ಗುಣಮಹಿಮೆಗಳ ಉಲ್ಲೇಖವೂ ಬಂದಿದೆ. 'ಹೃದ್ಯಗದ್ಯಸ್ತುತೋ ದದ್ಯಾತ್....' ಎಂಬ ಅನುಷ್ಟುಪ್ ಛಂದಸ್ಸಿನ, ಅವಿದ್ಯೆಯನ್ನು ಪರಿಹರಿಸಿ, ವಿದ್ಯೆಯನ್ನು ನೀಡಲು ಶಾರದಾಪತಿಯನ್ನು ಬೇಡಿಕೊಳ್ಳುವ ಪದ್ಯದೊಂದಿಗೆ ಕೊನೆಗೊಳ್ಳುವುದು.

೨೪. **ಮುಖ್ಯಪ್ರಾಣ ಸ್ತೋತ್ರಮ್:**

ಬಿದರಹಳ್ಳಿ ಶ್ರೀನಿವಾಸತೀರ್ಥ ವಿರಚಿತವಾದ ಶ್ರೀಮುಖ್ಯಪ್ರಾಣ ಸ್ತೋತ್ರಗದ್ಯದ ಮೊದಲ ಭಾಗದಲ್ಲಿ ವಾಯುಸ್ತುತಿ ಉಲ್ಲೇಖಿಸುವ ಗುಣಮಹಿಮೆಗಳನ್ನು ನಿರೂಪಿಲಾಗಿದೆ. ಎರಡನೆ ಭಾಗದಲ್ಲಿ ಶ್ರೀ ಮಧ್ವರ ಸರ್ವಮೂಲಗ್ರಂಥಗಳನ್ನೂ, ಮಧ್ವರ ಗುಣಲೀಲೆಗಳನ್ನೂ ಉಲ್ಲೇಖಿಸಲಾಗಿದೆ. ಎರಡು ಶ್ಲೋಕಗಳಿಂದ ಕೊನೆಗೊಳ್ಳುವ ಈ ಸ್ತೋತ್ರಗದ್ಯದ ಕೊನೆಯಲ್ಲಿ ಮುಖ್ಯಪ್ರಾಣನನ್ನು ಹೀಗೆ ಪ್ರಾರ್ಥಿಸಲಾಗುವುದು–

**ಮುಖ್ಯಪ್ರಾಣಸ್ತು ಸದ್ವಿದ್ಯಾಂ ಸರ್ವವಿಘ್ನನಿವಾರಣಮ್ ।**
**ಸರ್ವದಾ ರಕ್ಷಣಂ ಕೃತ್ವಾ ಸರ್ವಾಭೀಷ್ಟಪ್ರದೋ ಭವೇತ್ ॥**

೨೫. **ಶ್ರೀ ಮಧ್ವಮಾಹಾತ್ಮ್ಯಮ್:**

'ಹನೂಮಾನ್ ಪ್ರಥಮೋ ಜಜ್ಞೇ....' ಎಂಬುದಾಗಿ ವಾಯುದೇವನ ಹನೂಮಂತ ಹಾಗೂ ಭೀಮಸೇನ ಅವತಾರಗಳ ಪ್ರಸ್ತಾವದೊಂದಿಗೆ ಪ್ರಾರಂಭವಾಗುವ 'ಶ್ರೀ ಮಧ್ವಮಾಹಾತ್ಮ್ಯಮ್' ಹತ್ತು ಪದ್ಯಗಳನ್ನೊಳಗೊಂಡಿದ್ದು ಶ್ರೀ ಮಧ್ವರನ್ನು ದೇವೋತ್ತಮ ಗುರುಗಳನ್ನಾಗಿಯೂ, ಮಧ್ವಸರೋವರದ ಸ್ನಾನ, ಉಡುಪಿ ಕೃಷ್ಣನ ದರ್ಶನ ಹಾಗೂ ಮಧ್ವಶಾಸ್ತ್ರಶ್ರವಣ –ಈ ಮೂರು, ಮೂರು ಲೋಕಗಳಲ್ಲೇ ದುರ್ಲಭವಾದವುಗಳೆಂದೂ

ಸಾರುತ್ತಿದೆ. ಪಂಚರಾತ್ರಾಗಮದ ಬ್ರಹ್ಮಸಂಹಿತೆಯಲ್ಲಿ ಪ್ರಸ್ತುತವಾದ ಸ್ತೋತ್ರವಿದೆಂದು ನಂಬಲಾದ ಈ ಸ್ತೋತ್ರದ ಆರು ಶ್ಲೋಕಗಳು ಫಲಶ್ರುತಿಗೇ ಮೀಸಲಾಗಿವೆ.

## ಹನೂಮದ್ರೂಪದ ಕುರಿತಾದ ಸ್ತೋತ್ರಗಳು

**೨೬. ಮಧ್ವದೃಷ್ಟಸುಂದರಕಾಂಡರಾಮಾಯಣ:**

ವಾಲ್ಮೀಕಿ ರಾಮಾಯಣದ 68 ಅಧ್ಯಾಯಗಳಲ್ಲಿ ಪ್ರಸ್ತುತವಾಗಿರುವ ಸಮಗ್ರ ಸುಂದರಕಾಂಡ ರಾಮಾಯಣವನ್ನು ಶ್ರೀ ಮಧ್ವರು ತಮ್ಮ ಮಹಾಭಾರತತಾತ್ಪರ್ಯ ನಿರ್ಣಯದ ಏಳನೇ ಅಧ್ಯಾಯದ ಬರೇ ಐವತ್ತು ಶ್ಲೋಕಗಳಲ್ಲಿ ಬೇರೆ ಬೇರೆ ಪ್ರಮೇಯಕ್ಕೆ ಸಂಬಂಧಿಸುವ ನಿರ್ಣಯಸಹಿತವಾಗಿ ಸೆರೆಹಿಡಿದಿರುವರು. ಲೌಕಿಕದೃಷ್ಟಿಯಿಂದ ಸೀತಾ ರಾಮರ ಸಂಯೋಜನೆಗೆ ಅಡಿಗಲ್ಲಂತಿ ರುವ, ಸೀತಾರಾಮರ ಸಂದೇಶಗಳನ್ನು ಪರಸ್ಪರವಾಗಿ ತಲುಪಿಸಿರುವ ಆಂಜನೇಯನ ಪ್ರಮುಖ ಸೇವೆಯನ್ನೂ ಅದಕ್ಕೆ ಪ್ರಸನ್ನನಾದ ರಾಮಚಂದ್ರ ಅನುಗ್ರಹಿಸಿದ 'ಸ್ವಾತ್ಮಪ್ರದಾನ'ಫಲವನ್ನೂ ಸಾರುತ್ತಿರುವುದರಿಂದ ಈ ಅಧ್ಯಾಯ ಪ್ರತ್ಯೇಕ ವಾಗಿ ಆಂಜನೇಯನ ಸ್ತೋತ್ರವಾಗಿ ಪರಿಗಣಿಸಲರ್ಹವಾದುದು.

**೨೭. ಹನೂಮತ್ಸಹಸ್ರನಾಮಸ್ತೋತ್ರಮ್:**

ಈ ಸ್ತೋತ್ರದ ಪ್ರಸ್ತಾವನಾರೂಪದಲ್ಲಿ ಋಷಿಗಳು, ವಾಲ್ಮೀಕಿ, ಹನೂಮಾನ್, ಶ್ರೀರಾಮ –ಇವರ ಸಂಭಾಷಣೆ ನಡೆದು ಋಷಿಗಳ ಬಿನ್ನಹಕ್ಕೆ ಒಳಗಾಗಿ ವಾಲ್ಮೀಕಿ ಋಷಿಗಳು 'ಹನೂಮಾನ್ ಶ್ರೀಪದೋ....' ಇತ್ಯಾದಿಯಾಗಿ ಪ್ರಾರಂಭಿಸಿ '.....ಶ್ರೀಭೂರುಗ್ರಶ್ಚ ಕಾಮಧುಕ್' ಎಂದು 123 ಶ್ಲೋಕಗಳಲ್ಲಿ ಹನೂಮಂತನ ಸಾವಿರ ನಾಮಗಳನ್ನು ಕ್ರೋಡೀ ಕರಿಸಲಾಗಿದೆ. ಇವುಗಳಲ್ಲಿ 'ಅಕಾರಾದಿಕ್ಷಕಾರಾಂತವರ್ಣನಿರ್ಮಿತವಿಗ್ರಹಃ' 'ಉಲೂಖಲ ಮುಖಃ' 'ಅಷ್ಟಾಂಗಯೋಗಫಲಭೂಃ' 'ಶ್ಮಶಾನಸ್ಥಾನನಿಲಯಃ' 'ಪಂಚಾಕ್ಷರಪರಃ' –ಮುಂತಾದ ವಿಶಿಷ್ಟ ನಾಮಗಳ ಅಭಿಪ್ರಾಯ ವಿಚಾರಣೀಯ. ಸ್ತೋತ್ರದ ಕೊನೆಯಲ್ಲಿ ಈ ಸಹಸ್ರನಾಮಕ್ಕೆ ಸಂಬಂಧಿಸಿ ವಾಲ್ಮೀಕಿ, ಹನೂಮಂತ ಹಾಗೂ ಶ್ರೀರಾಮ –ಇವರ ಸಂಭಾಷಣೆಯನ್ನೂ ಪ್ರಸ್ತುತಪಡಿಸಲಾಗಿದೆ.

**೨೮. ಪದ್ಮಪುರಾಣೋಕ್ತ ಶ್ರೀಹನೂಮದಷ್ಟೋತ್ತರಶತನಾಮಸ್ತೋತ್ರ:**

'ಸರ್ವಶಾಸ್ತ್ರಾರ್ಥತತ್ತ್ವಜ್ಞಃ....' –ಎಂದು ಪ್ರಾರಂಭವಾಗುವ ಹನೂಮದಷ್ಟೋತ್ತರ ಶತನಾಮಸ್ತೋತ್ರ, ಪದ್ಮಪುರಾಣದ ಉತ್ತರಖಂಡದಲ್ಲಿ ಪ್ರಸ್ತುತವಾಗಿರುವುದು. ಒಟ್ಟು 37 ಶ್ಲೋಕಗಳನ್ನೊಳಗೊಂಡಿರುವುದಾದರೂ ಇವುಗಳಲ್ಲಿ 27 ಶ್ಲೋಕಗಳಷ್ಟೇ ಆಂಜನೇಯನ ನಾಮಗಳ ಸಂಗ್ರಹವಿದ್ದು ಚತುರ್ಮುಖನಿಂದ ಈ ಅಷ್ಟೋತ್ತರವನ್ನು ಕೇಳಿದ ನಾರದರು ನಡೆಸಿರುವ ಆಂಜನೇಯನ ಸ್ತುತಿಯೂ ಇದರಲ್ಲಿ ಸೇರಿಕೊಂಡಿದೆ.

**೨೯. ಪಂಚರಾತ್ರಾಗಮೋಕ್ತ ಶ್ರೀಹನೂಮದಷ್ಟೋತ್ತರಶತನಾಮಸ್ತೋತ್ರಮ್:**

'ರಾಮದಾಸಾಗ್ರಣೀಃ ಶ್ರೀಮಾನ್....' –ಎಂದು ಪ್ರಾರಂಭವಾಗುವ ಈ ಹನೂ ಮದಷ್ಟೋತ್ತರ ಶತನಾಮಸ್ತೋತ್ರ ಪಂಚರಾತ್ರಾಗಮದ 'ಹಂಸಬ್ರಹ್ಮ ಸಂವಾದ'ದ

ವಿಭಾಗದಲ್ಲಿ ಬಂದಿದೆ. ಇದರ 39 ಶ್ಲೋಕಗಳಲ್ಲಿ 31 ಶ್ಲೋಕಗಳಲ್ಲಿ ಆಂಜನೇಯನ ಅಷ್ಟೋತ್ತರಶತನಾಮಗಳನ್ನು ಸಂಗ್ರಹಿಸಿ, ಉಳಿದ ಎಂಟು ಶ್ಲೋಕಗಳಲ್ಲಿ ಈ ಅಷ್ಟೋತ್ತರದ ಫಲಶ್ರುತಿಯನ್ನು ಹೇಳಲಾಗಿದೆ.

**೩೦. ಬ್ರಹ್ಮವೈವರ್ತದಲ್ಲಿ ಶ್ರೀಹನೂಮದಷ್ಟೋತ್ತರಶತನಾಮಸ್ತೋತ್ರ:**

'ಅತಿಪಾಟವವಕ್ತ್ರಾಬ್ಜಂ....' ಎಂದು ಪ್ರಾರಂಭವಾಗುವ ಶ್ರೀಹನೂಮದಷ್ಟೋತ್ತರಶತ ನಾಮಸ್ತೋತ್ರ ಬ್ರಹ್ಮವೈವರ್ತದ ಘಟಿಕಾಚಲ ಮಾಹಾತ್ಮ್ಯದಲ್ಲಿ ಪ್ರಸ್ತುತವಾಗಿದೆ. ಇದರ 22 ಶ್ಲೋಕಗಳಲ್ಲಿಯ 17 ಶ್ಲೋಕಗಳು ಹನೂಮಂತನ ಅಷ್ಟೋತ್ತರಶತನಾಮ ಸ್ತೋತ್ರ ವನ್ನು ಸಂಗ್ರಹಿಸಿದ್ದರೆ ಉಳಿದ ಐದು ಶ್ಲೋಕಗಳಲ್ಲಿ ಫಲಶ್ರುತಿಯನ್ನು ನಿರೂಪಿಸಲಾಗಿದೆ.

**೩೧. ಬ್ರಹ್ಮಾಂಡ ಪುರಾಣೋಕ್ತ ಶ್ರೀಘಾಟಿಕಾಚಲಹನುಮತ್‌ಸ್ತೋತ್ರ:**

ಬ್ರಹ್ಮಾಂಡಪುರಾಣದ ಬ್ರಹ್ಮನಾರದ ಸಂವಾದದಲ್ಲಿ ಪ್ರಸ್ತುತವಾಗಿರುವ ಶ್ರೀಘಟಿಕಾ ಚಲಹನುಮತ್‌ಸ್ತೋತ್ರ ನಾರದರಿಗೆ ಬ್ರಹ್ಮದೇವರಿಂದ ಉಪದಿಷ್ಟವಾದುದು. 21 ಶ್ಲೋಕಗಳ ವ್ಯಾಪ್ತಿಯನ್ನು ಪಡೆದಿರುವ ಈ ಸ್ತೋತ್ರದ ಮೊದಲ ಮೂರು ಶ್ಲೋಕಗಳಲ್ಲಿ ಘಟಿಕಾಚಲದಲ್ಲಿ ಇರುವ ಆಂಜನೇಯನ ಮುಖಾದಿ ಅಂಗಗಳನ್ನೂ, ಕುಳಿತ ಭಂಗಿಯನ್ನೂ ವರ್ಣಿಸಲಾಗಿದೆ. ಮುಂದಿನ ಶ್ಲೋಕಗಳಲ್ಲಿ ನಾರದರ ಪ್ರಶ್ನೆಗಳಿಗೆ ಉತ್ತರಿಸುತ್ತ ಘಟಿಕಾ ಚಲದ ಆಂಜನೇಯನನ್ನು ಹೇಗೆ ಉಪಾಸನೆ ನಡೆಸಬೇಕೆಂಬ ಮಾಹಿತಿಯನ್ನು ಚತು ರ್ಮುಖಬ್ರಹ್ಮನು ನೀಡಿರುವನು.

**೩೨. ಶ್ರೀರಘುಪ್ರವೀರತೀರ್ಥವಿರಚಿತಂ 'ಹನೂಮದಷ್ಟೋತ್ತಶತನಾಮಸ್ತೋತ್ರಮ್':**

ಉಡುಪಿ ಪಲಿಮಾರುಮಠದ ಯತಿಪರಂಪರೆಯಲ್ಲಿ 24ನೆಯ ಯತಿಗಳಾಗಿ ಮೆರೆ ದಿದ್ದ ಶ್ರೀರಘುಪ್ರವೀರತೀರ್ಥರು ರಚಿಸಿರುವ ಶ್ರೀಹನೂಮದಷ್ಟೋತ್ತರಶತನಾಮಸ್ತೋತ್ರ 28 ಶ್ಲೋಕಗಳಲ್ಲಿ ಹನೂಮಂತನ ಚರಿತ್ರೆಯ ಆಧಾರದಲ್ಲಿ ಅವನ 108 ನಾಮಗಳನ್ನು ಸಂಗ್ರಹಿಸಿದೆ. ಮೊದಲ ಶ್ಲೋಕ ಪ್ರಸ್ತಾವನೆಯನ್ನು ಮಾಡಿದ್ದರೆ, ಕೊನೆಯ ೬ ಶ್ಲೋಕಗಳಲ್ಲಿ ಫಲಶ್ರುತಿಯನ್ನು ಪ್ರಸ್ತಾವಿಸಲಾಗಿದೆ. ಉಳಿದ ೨೧ ಶ್ಲೋಕಗಳಲ್ಲಿ 108 ನಾಮಗಳ ಕ್ರೋಡೀ ಕರಣ ನಡೆದಿದೆ.

**೩೩. ಹನೂಮತ್‌ಸ್ತೋತ್ರಮ್:**

'ಅಕ್ಷಾದಿರಾಕ್ಷಸಹರಂ....' ಎಂದು ಪ್ರಾರಂಭವಾಗುವ ಹನೂಮತ್‌ಸ್ತೋತ್ರ ಎಂಟು ಶ್ಲೋಕಗಳನ್ನೊಳಗೊಂಡಿದ್ದು ಇದರ ಮೊದಲ ಪದ್ಯದಲ್ಲಿ ಆಂಜನೇಯನಿಗೆ ನಮಸ್ಕಾರವನ್ನು ಸಲ್ಲಿಸಿ ಮುಂದಿನ ಏಳು ಶ್ಲೋಕಗಳಲ್ಲಿ ಆಂಜನೇಯನನ್ನು ಸಂಬೋಧಿಸಿ, ರಕ್ಷಿಸಲು, ಸಂಪತ್ತಾದಿಗಳನ್ನು ನೀಡಲು –ಹೀಗೆ ಬೇರೆ ಬೇರೆ ರೀತಿಯಿಂದ ಅನುಗ್ರಹಿಸಲು ಪ್ರಾರ್ಥಿಸ ಲಾಗಿದೆ.

**೩೪. ವಿಭೀಷಣಕೃತ ಹನೂಮತ್‌ಸ್ತೋತ್ರ:**

'ಆಪನ್ನಾಖಿಲಲೋಕಾರ್ತಿಹಾರಿಣೇ....' ಎಂದು ಆರಂಭವಾಗುವ ಒಂಬತ್ತು ಶ್ಲೋಕಗಳನ್ನೊಳಗೊಂಡ ಈ ಹನೂಮತ್‌ಸ್ತೋತ್ರದ ಎರಡನೇ ಶ್ಲೋಕದಲ್ಲಿ ಎಡಕೈಯಲ್ಲಿ ಶೈಲಧಾರಿಯಾದ ಆಂಜನೇಯನ ಚಿತ್ರಣವನ್ನು ನೀಡಿ ಮುಂದಿನ ನಾಲ್ಕು ಶ್ಲೋಕಗಳಲ್ಲಿ ವಿಭೀಷಣ ಸಲ್ಲಿಸುವ ಆಂಜನೇಯನ ಕುರಿತಾದ ಪ್ರಾರ್ಥನೆಯನ್ನು ಸಂಗ್ರಹಿಸಲಾಗಿದೆ.

**೩೫. ಸುದರ್ಶನಸಂಹಿತೆಯ ಹನೂಮತ್‌ಸ್ತೋತ್ರ:**

'ಶೃಣುದೇವಿ ಪ್ರವಕ್ಷ್ಯಾಮಿ....' ಎಂದು ಪ್ರಾರಂಭವಾಗುವ ಸುದರ್ಶನ ಸಂಹಿತೆಯ ತಾರ್ಕ್ಷ್ಯ ಹಾಗೂ ವಿಭೀಷಣ ಇವರ ಸಂವಾದ ರೂಪದಲ್ಲಿ ಪ್ರಸ್ತುತವಾದ ಈ ಹನೂಮತ್‌ಸ್ತೋತ್ರ 25 ಪದ್ಯಗಳನ್ನೊಳಗೊಂಡಿದೆ. ಮೊದಲ ಶ್ಲೋಕದಲ್ಲ ಪ್ರಸ್ತಾವನೆ, ಕೊನೆಯ ಮೂರು ಶ್ಲೋಕಗಳಲ್ಲಿ ಫಲಶ್ರುತಿ ಬಂದಿದೆ. ಕೆಲವು ಶ್ಲೋಕಗಳಲ್ಲಿ ನಮಿಸ ಲಾಗಿದ್ದರೆ, ಮತ್ತೆ ಕೆಲವು ಶ್ಲೋಕಗಳಲ್ಲಿ ಆಂಜನೇಯನನ್ನು ಸಂಬೋಧಿಸಿ ರಕ್ಷಣೆಯೇ ಮುಂತಾದುವನ್ನು ಕೊಡಲು ಪ್ರಾರ್ಥಿಸಲಾಗುವುದು.

ಶ್ರೀರಾಮಚಂದ್ರನ ಕೀರ್ತನೆ ನಡೆಯುವಲ್ಲಿ, ನೆತ್ತಿಯ ಮೇಲೆ ಕೈಜೋಡಿಸಿ, ಆನಂದ ಬಾಷ್ಪ ಸುರಿಸಿ ಸನ್ನಿಹಿತನಾಗಿರುವ ಆಂಜನೇಯನನ್ನು ನಮಿಸಲು ಕರೆಕೊಟ್ಟಿರುವ ಪ್ರಸಿದ್ಧ ಶ್ಲೋಕ ಈ ಸ್ತೋತ್ರದಲ್ಲಿಯೇ ಪಠಿತವಾಗಿದೆ–

**ಯತ್ರ ಯತ್ರ ರಘುನಾಥಕೀರ್ತನಂ ತತ್ರ ತತ್ರ ಕೃತಮಸ್ತಕಾಂಜಲಿಮ್ ।**
**ಬಾಷ್ಪವಾರಿಪರಿಪೂರ್ಣಲೋಚನಂ ಮಾರುತಿಂ ನಮತ ರಾಕ್ಷಸಾಂತಕಮ್ ॥**

**೩೬. ಘಟಿಕಾಚಲ ಸನ್ನಿಹಿತ ಹನೂಮತ್‌ಸ್ತೋತ್ರ:**

'ಶಂಖಚಕ್ರಧರಂ ದೇವಂ ಘಟಿಕಾಚಲವಾಸಿನಮ್...' ಎಂದು ಘಟಿಕಾಚಲದಲ್ಲಿ ಸನ್ನಿಹಿತನಾದ ಹನೂಮಂತನ ನಮನದೊಂದಿಗೆ ಪ್ರಾರಂಭವಾಗುವ ಒಂಬತ್ತು ಪದ್ಯ ಗಳನ್ನೊಳಗೊಂಡ ಹನೂಮಂತನ ಸ್ತೋತ್ರದಲ್ಲಿ–

**ನೃಸಿಂಹಾಭಿಮುಖೋ ಭೂತ್ವಾ ಪರ್ವತಾಗ್ರೇ ಚ ಸಂಸ್ಥಿತಮ್ ।**
**ವಾಂಛಂತಂ ಬ್ರಹ್ಮಪದವೀಂ ನಮಾಮಿ ಕಪಿನಾಯಕಮ್ ॥**

ಘಟಿಕಾಚಲದ ಒಂದು ಬೆಟ್ಟದಲ್ಲಿ ಇರುವ ಆಂಜನೇಯ ಪಕ್ಕದ ಬೆಟ್ಟದಲ್ಲಿ ಇರುವ ನರಸಿಂಹನಿಗೆ ಅಭಿಮುಖಿವಾಗಿ, ಯೋಗಾರೂಢನಾಗಿ ಮುಂದೆ ತನಗೆ ದೊರಕಬೇಕಾದ ಬ್ರಹ್ಮಪದವಿಯನ್ನು ಇಚ್ಛಿಸಿ ಅದಕ್ಕೆ ಬೇಕಾದ ಉಪಾಸನೆಯನ್ನು ನಡೆಸುತ್ತಿರುವುದರ ಚಿತ್ರಣವನ್ನು ಮಾಡಲಾಗಿದೆ.

### ೩೭. ವಿಭೀಷಣಕೃತ ಆಪದುದ್ಧಾರಕಹನೂಮತ್‌ಸ್ತೋತ್ರ:

'ಆಪನ್ನಾಖಿಲಲೋಕಾರ್ತಿಹಾರಿಣೇ....' ಎಂದು ಪ್ರಾರಂಭವಾಗುವ ವಿಭೀಷಣ ಕೃತವಾದ ಆ ಆಪದುದ್ಧಾರಕಹನೂಮತ್‌ಸ್ತೋತ್ರದ ೧೨ ಪದ್ಯಗಳಲ್ಲಿ ಹನೂಮಂತ ನಲ್ಲಿರುವ ಆಪದುದ್ಧಾರಕವ್ಯಕ್ತಿತ್ವವನ್ನು ಉಲ್ಲೇಖಿಸಿ, ಬೇರೆ ಬೇರೆ ಆಪತ್ತಿನ ಪ್ರಸಂಗದಲ್ಲಿ ರಕ್ಷಣೆ ನೀಡಲು ಪ್ರಾರ್ಥಿಸಿಕೊಳ್ಳಲಾಗಿದೆ.

### ೩೮. ಬ್ರಹ್ಮಾಂಡಪುರಾಣೋಕ್ತ ಹನೂಮತ್‌ಸ್ತವನಮ್:

'ಕಂದರ್ಪಕೋಟಿಲಾವಣ್ಯಂ.....' ಎಂದು ಆಂಜನೇಯನ ಕೋಟಿ ಕೋಟಿ ಕಾಮರನ್ನೂ ಮೀರಿಸುವ ಸೌಂದರ್ಯದ ಉಲ್ಲೇಖದೊಂದಿಗೇ ಪ್ರಾರಂಭವಾಗುವ ಈ ಹನೂಮತ್ ಸ್ತೋತ್ರ ೮ ಪದ್ಯಗಳನ್ನೊಳಗೊಂಡಿದೆ. ಬ್ರಹ್ಮಾಂಡಪುರಾಣದ ಅಗಸ್ತ್ಯ ನಾರದ ಸಂವಾದ ದಲ್ಲಿ ಪ್ರಸ್ತುತವಾದ ಈ ಸ್ತೋತ್ರದಲ್ಲಿ ಆಂಜನೇಯನ ಸರ್ವವಿದ್ಯಾವಿಶಾರದತ್ವ ಮುಂತಾದ ಗುಣಗಳ ಹಾಗೂ 'ಉಲ್ಲಂಘ್ಯ ಸಿಂಧೋಃ ಸಲಿಲಂ....' ಇತ್ಯಾದಿಯಾಗಿ ಕೆಲವು ಮಹಿಮೆಗಳ ಪ್ರಸ್ತಾವವೂ ನಡೆದಿದೆ.

ಹನೂಮಂತನ ಸ್ಮರಣೆಯಿಂದ ಬುದ್ಧಿ ಮುಂತಾದ ಎಂಟು ಗುಣಗಳ ಸಿದ್ಧಿಯನ್ನು ಸಾರುವ ಪ್ರಸಿದ್ಧವಾದ ಶ್ಲೋಕ ಈ ಸ್ತೋತ್ರದಲ್ಲಿ ಹೀಗೆ ಬಂದಿದೆ–

**ಬುದ್ಧಿರ್ಬಲಂ ಯಶೋ ಧೈರ್ಯಂ ನಿರ್ಭಯತ್ವಮರೋಗತಾ ।**
**ಅಜಾಡ್ಯಂ ವಾಕ್‌ಪಟುತ್ವಂ ಚ ಹನೂಮತ್‌ಸ್ಮರಣಾದ್ ಭವೇತ್ ॥**

### ೩೯. ಸುದರ್ಶನಸಂಹಿತೆಯ ಪಂಚಮುಖಿ ವೀರಹನೂಮತ್‌ಕವಚಸ್ತೋತ್ರ:

ಸುದರ್ಶನಸಂಹಿತೆಯ ರುದ್ರಯಾಮಲದಲ್ಲಿ ಪ್ರಸ್ತುತವಾಗಿರುವ ಪಂಚಮುಖಿ ವೀರಹನೂಮತ್‌ಕವಚಸ್ತೋತ್ರದಲ್ಲಿ ಕರನ್ಯಾಸ, ಅಂಗನ್ಯಾಸ, ಧ್ಯಾನ, ಕವಚಸ್ತೋತ್ರ, ಮಹಾಮಂತ್ರ ಹಾಗೂ ಫಲಶ್ರುತಿ –ಇವಿಷ್ಟರ ಉಲ್ಲೇಖ ನಡೆದಿದೆ.

### ೪೦. ವೇಂಕಟಪಂಡಿತಕೃತ ಪಂಚಮುಖಿ ಹನೂಮತ್ ಪಂಚರತ್ನ:

'ಪಂಚಾನನೇಶ ಮಮ ದೇಹಿ ಕರಾವಲಂಬಮ್' –ಎಂಬ ಪಲ್ಲವಿಯಿಂದ ಕೂಡಿರುವ ವೇಂಕಟಪಂಡಿತಕೃತ ಪಂಚಮುಖಿ ಹನೂಮತ್‌ಸ್ತೋತ್ರದಲ್ಲಿ ವೇಂಕಟಪಂಡಿತರು ತಮ್ಮಿಂದ ಎಸಗಲ್ಪಟ್ಟ ಬೇರೆ ಬೇರೆ ಅಪರಾಧದ ಪ್ರಮಾರ್ಜನೆಗಾಗಿ ಬೇಡಿಕೊಂಡಿರುವರು.

### ೪೧. ಹನುಮನ್ನವರತ್ನಪದ್ಯಮಾಲಾ:

'ಶ್ರಿತಜನಪರಿಪಾಲಂ....' ಎಂದು ಪ್ರಾರಂಭವಾಗುವ 'ಹನುಮನ್ನವರತ್ನಪದ್ಯ ಮಾಲಾ'ದ ಒಂಬತ್ತು ಪದ್ಯಗಳಲ್ಲಿ ಆಂಜನೇಯನ ಆಶ್ರಿತಜನ ಪರಿಪಾಲಕತ್ವ ಮುಂತಾದ ಗುಣಗಳನ್ನೂ ಕೆಲವು ಮಹಿಮೆಗಳನ್ನೂ ತಿಳಿಸಲಾಗಿದೆ.

## ೪೨. ಹನೂಮತ್ಕವಚಮ್:

ಸ್ಕಂದಪುರಾಣದಲ್ಲಿ ಅಗಸ್ತ್ಯನಾರದಸಂವಾದವಾಗಿ ಪ್ರಸ್ತುತವಾಗಿರುವ 'ಹನೂಮತ್ಕ ವಚಮ್' ಸ್ತೋತ್ರದಲ್ಲಿ ಧ್ಯಾನರೂಪದಲ್ಲಿ ಎರಡು ಪದ್ಯಗಳ ಬಳಿಕ 'ಹನೂಮಾನ್ ಪೂರ್ವತಃ ಪಾತು ದಕ್ಷಿಣೇ ಪವನಾತ್ಮಜಃ....' ಇತ್ಯಾದಿಯಾಗಿ ಹನೂಮಂತನ ಮಹಿಮೆಗೆ ಸಂಬಂಧಿಸಿದಂತೆ ರೂಪುಗೊಂಡ ಬೇರೆ ಬೇರೆ ಹೆಸರಿನಿಂದ ಹನೂಮಂತನನ್ನು ಉಲ್ಲೇಖಿಸಿ, ಅವನು ಎಲ್ಲೆಡೆ ರಕ್ಷಣೆ ನೀಡಲಿ –ಎಂದು ಪ್ರಾರ್ಥಿಸಲಾಗುವುದು. ಹನ್ನೊಂದು ಶ್ಲೋಕ ಗಳಲ್ಲಿ ಕವಚಸ್ತೋತ್ರವನ್ನು ನಿರೂಪಿಸಿ, ಮುಂದೆ ಏಳು ಶ್ಲೋಕಗಳಲ್ಲಿ ಫಲಶ್ರುತಿಯನ್ನು ಹೇಳಲಾಗಿದೆ.

'ಮನೋಜವಂ ಮಾರುತತುಲ್ಯವೇಗಂ.... ಶರಣಂ ಪ್ರಪದ್ಯೇ' ಎಂಬ ಹಾಗೂ 'ಯತ್ರ ಯತ್ರ ರಘುನಾಥಕೀರ್ತನಂ.... ನಮತ ರಾಕ್ಷಸಾಂತಕಮ್' –ಎಂಬ ಹನೂಮಂತನ ಕುರಿತಾದ ಪ್ರಸಿದ್ಧ ಶ್ಲೋಕಗಳು ಈ ಸ್ತೋತ್ರದಲ್ಲಿ ಉಲ್ಲೇಖಗೊಂಡಿದೆ. ಪುನಃ ಏಳು ಶ್ಲೋಕ ಗಳಲ್ಲಿ ಆಂಜನೇಯನ ಸ್ತುತಿ ನಡೆದಿದೆ. ಹೀಗೆ ಒಟ್ಟು ಹದಿನಾರು ಶ್ಲೋಕಗಳನ್ನೊಳಗೊಂಡ ಸ್ತೋತ್ರ ಇದಾಗಿದೆ.

## ೪೩. ಬ್ರಹ್ಮಾಂಡಪುರಾಣದ ಹನುಮದಷ್ಟಕಮ್:

'ಏಕವೀರಂ ಮಹಾರೌದ್ರಂ...' ಎಂದು ಪ್ರಾರಂಭವಾಗುವ ಹನುಮದಷ್ಟಕ ಬ್ರಹ್ಮಾಂಡಪುರಾಣದ ಅಗಸ್ತ್ಯನಾರದಸಂವಾದವಾಗಿ ಹೊರಹೊಮ್ಮಿರುವಂತಹದ್ದು. ಎಂಟು ಶ್ಲೋಕಗಳನ್ನೊಳಗೊಂಡ ಇದರಲ್ಲಿ ಆಂಜನೇಯನ ಪರಾಕ್ರಮಾದಿ ಗುಣಗಳಿಗೂ, ರಾವಣನ ದರ್ಪನಾಶಕತ್ವ ಮುಂತಾದ ಮಹಿಮೆಗಳಿಗೂ ಸಂಬಂಧಿಸುವ ಮಾತುಗಳು ಬಂದಿವೆ. ಪ್ರತಿಯೊಂದು ಪದ್ಯವೂ '.....ವಂದೇಽಹಂ ವಾಯುನಂದನಮ್' –ಎಂಬ ಪಲ್ಲವಿಯೊಂದಿಗೆ ಕೊನೆಗೊಳ್ಳುವುದು.

## ೪೪. ಮುದ್ಗಲಾಚಾರ್ಯಕೃತ ಹನುಮದಷ್ಟಕ:

ಮುದ್ಗಲಾಚಾರ್ಯಕೃತ ಹನುಮದಷ್ಟಕ 'ಜಯ ಜಯ ಹೇ ಹನುಮನ್ನವ....' ಎಂದು ಪ್ರಾರಂಭವಾಗುವುದು. ಒಂಬತ್ತು ಶ್ಲೋಕಗಳನ್ನೊಳಗೊಂಡ ಈ ಅಷ್ಟಕದಲ್ಲಿ ಹನೂ ಮಂತನನ್ನು ಸಂಬೋಧನೆ ಮಾಡಿ ಬೇರೆ ಬೇರೆ ಅವನ ಮಹಿಮೆಗಳನ್ನು ಉಲ್ಲೇಖಿಸುತ್ತ 'ಕರುಣಾಂ ಕುರು' 'ಪಾಲಯ' 'ಮಮ ದೇಹಿ' –ಹೀಗೆಲ್ಲ ಪ್ರಾರ್ಥಿಸಿಕೊಳ್ಳಲಾಗುವುದು.

## ೪೫. ಹನೂಮದಷ್ಟಕಮ್:

'ಅಂಜನಾಶುಭಾಂಗಜಾತಂ...' –ಎಂದು ಪ್ರಾರಂಭವಾಗುವ ಹನೂಮದಷ್ಟಕ ೯ ಪದ್ಯಗಳನ್ನೊಳಗೊಂಡಿದ್ದು ಆಂಜನೇಯನ ಗುಣಗಾನ ನಡೆಸುತ್ತಿದೆ.

## ೪೬. ಯಂತ್ರೋದ್ಧಾರಕ ಹನೂಮತ್‌ಸ್ತೋತ್ರ:

ಶ್ರೀ ವ್ಯಾಸತೀರ್ಥರು ರಚಿಸಿರುವ ಯಂತ್ರೋದ್ಧಾರಕ ಹನೂಮತ್‌ಸ್ತೋತ್ರ 'ನಮಾಮಿ ದೂತಂ ರಾಮಸ್ಯ....' ಎಂದು ಪ್ರಾರಂಭವಾಗುತ್ತಿದೆ. ಎಂಟು ಶ್ಲೋಕಗಳ ಸ್ತೋತ್ರದಲ್ಲಿ

ಮೊದಲ ಐದು ಶ್ಲೋಕಗಳು ಹನೂಮಂತನ ಗುಣಗಳನ್ನು ತಿಳಿಸಿದರೆ ಕೊನೆಯ ಮೂರು ಶ್ಲೋಕಗಳು ಫಲಶ್ರುತಿ ರೂಪದಲ್ಲಿ ಬಂದಿವೆ.

೪೭. **ಹನೂಮದ್‌ಗೀತಾ:**

'ವಿನುತದೈವತೇ ವಿಶ್ವಸದ್ಗುರೋ....' ಇತ್ಯಾದಿಯಾಗಿ ಪ್ರಾರಂಭವಾಗುವ ಹನೂಮದ್ ಗೀತಾ 'ಸೋನ್ನಮಿತ್ಯಭಿಧೋಪೇತಗ್ರಾಮಸಂಸ್ಥಹನೂಮತಃ । ಇಮಾಂ ಸಾಂಕರ್ಷಿಣೀಂ ಗೀತಾಂ.....' –ಎಂದು ಉಪಸಂಹಾರದಲ್ಲಿ ತಿಳಿಸಿರುವಂತೆ ಸೋನ್ನ ಗ್ರಾಮದ ಹನೂಮಂತನ ಗೀತೆಯಾಗಿ ಹೊರಹೊಮ್ಮಿರುವಂತಹದ್ದು. ಒಂಬತ್ತು ಪದ್ಯಗಳನ್ನೊಳಗೊಂಡ ಇದರಲ್ಲಿ ಹನೂಮಂತನ ವಿಶ್ವಸದ್ಗುರುತ್ವಾದಿ ಗುಣಗಳ ನಿರೂಪಣೆ ನಡೆದಿದೆ. 'ಭೀಮ' 'ಮಧ್ವ' –ಎಂದು ಉಳಿದ ಎರಡು ಅವತಾರಗಳ ಉಲ್ಲೇಖವಷ್ಟೇ ನಡೆದಿದೆ.

೪೮. **ಭೋಗಾಪುರೇಶ ಹನುಮತ್‌ಸ್ತೋತ್ರಮ್:**

'ಪ್ರಣಮತು ಮಮ ಮೂರ್ಧಾ.....' ಇತ್ಯಾದಿಯಾಗಿ ಪ್ರಾರಂಭವಾಗುವ, ಭೋಗಾಪುರೇಶ ಹನುಮತ್‌ಸ್ತೋತ್ರದ ಪ್ರತಿಯೊಂದು ಶ್ಲೋಕದ ಕೊನೆಯಲ್ಲೂ '....ಭೋಗಾಪುರೇಶಮ್' –ಎಂದು ಪಠಿಸಲಾಗುವುದು. ಹತ್ತು ಪದ್ಯಗಳನ್ನೊಳಗೊಂಡ ಈ ಸ್ತೋತ್ರದಲ್ಲಿ '.....ಕಪಿವರವಪುಷಾऽऽವಿರ್ಭೂಯ ಭೋಗಾಪುರೇ ಭೋಃ....' ಇತ್ಯಾದಿಯಾಗಿ ಭೋಗಾಪುರದಲ್ಲಿ ಆವಿರ್ಭೂತನಾದ ಆಂಜನೇಯನ ಮಹಿಮೆಯನ್ನು ಉಲ್ಲೇಖಿಸಲಾಗಿದೆ.

೪೯. **ಭೋಗಾಪುರೇಶಾಷ್ಟಕಮ್:**

'ಶ್ರೀಮದ್‌ಭೋಗಾಪುರೇಶೋ ಭವತು....' ಎಂದು ಪ್ರಾರಂಭವಾಗುವ ಭೋಗಾಪುರೇಶಾಷ್ಟಕದಲ್ಲಿ ಭೋಗಾಪುರೇಶನಲ್ಲಿ ಜ್ಞಾನಭಕ್ತ್ಯಾದಿಗಳನ್ನು ನೀಡಲು ಪ್ರಾರ್ಥಿಸಿಕೊಳ್ಳಲಾಗುವುದು. 'ಭಗ್ನೇ ಬಿಂಬೇ ಕದಾಚಿತ್ ಪುನರಪಿ ಗುರುಸತ್ಪಾಣಿ–ಲಬ್ಧಪ್ರತಿಷ್ಠಃ....' ಎಂದು ಭೋಗಾಪುರದ ಆಂಜನೇಯನ ಪ್ರತಿಮೆಗೆ ಸಂಬಂಧಿಸಿದ ಘಟನೆಯನ್ನೂ ಉಲ್ಲೇಖಿಸಲಾಗಿದೆ.

ಭೋಗಾಪುರೇಶನಿಗೆ ಸಂಬಂಧಿಸುವ ಈ ಎರಡು ಸ್ತೋತ್ರಗಳನ್ನೂ ಪಾಂಗರಿ ಪ್ರಾಣೇಶಾಚಾರ್ಯರು ರಚಿಸಿರುವರು.

## ಭೀಮರೂಪದ ಪರವಾದ ಸ್ತೋತ್ರಗಳು

೫೦. **ಭೀಮ ಧ್ಯಾನಮ್:**

'ಉತ್ತಪ್ತಕಾಂಚನಸಮಪ್ರತಿಭಾಸಮಾನಂ....' ಪುಟಕ್ಕಿಟ್ಟ ಚಿನ್ನದಂತೆ ಹೊಳೆಯುವ ಭೀಮಸೇನನ ದೇಹದ ಕಾಂತಿಯ ವರ್ಣನೆಯಿಂದಲೇ ಪ್ರಾರಂಭವಾಗುತ್ತಿರುವ ಭೀಮ ಧ್ಯಾನ ಐದು ಶ್ಲೋಕಗಳನ್ನೊಳಗೊಂಡಿದೆ. ಭೀಮಸೇನನ ದೇಹದ ಸೊಬಗನ್ನೂ, ದುರ್ಯೋಧನಾದಿಗಳ ಸಂಹಾರಕತ್ವ ಮುಂತಾದ ಗುಣಗಳನ್ನೂ ಉಲ್ಲೇಖಿಸುವ ಈ

ಸ್ತೋತ್ರ '....ಧ್ಯಾಯೇತ್ ಪತಿಂ ಜಗತಾಂ ಭೀಮಸೇನಮ್' ಎಂಬ ಮಾತಿನೊಂದಿಗೆ ಕೊನೆಗೊಳ್ಳುವುದು.

೫೧. **ಭೀಮಾಷ್ಟೋತ್ತರ ಶತನಾಮಸ್ತೋತ್ರ:**

'ನಮಃ ಶ್ರೀಭೀಮಸೇನಾಯ ಸಂಹೃತಾಶೇಷಶತ್ರವೇ । ಪೂರ್ಣಾನಂದಾಯ ಪಾಂಚಾಲೀಕಟಾಕ್ಷಪ್ರೇಕ್ಷಿತಾತ್ಮನೇ' –ಎಂಬ ಸ್ತುತಿಯಿಂದ ಪ್ರಾರಂಭವಾಗುವ ಈ ಸ್ತೋತ್ರ 'ಶ್ರೀಭೀಮೋ ಭೀಮಸೇನಶ್ಚ....' ಇತ್ಯಾದಿಯಾಗಿ ಭೀಮಸೇನನ ಗುಣಧರ್ಮಗಳಿಗೆ ಸಂಬಂಧಿಸಿದಂತೆ 'ಪುರೋಚನಪ್ರದಗ್ಧಾ ಚ....' ಇತ್ಯಾದಿಯಾಗಿ ಅವನ ಸಾಧನೆಗಳಿಗೆ ಸಂಬಂಧಿಸಿದಂತೆಯೂ 108 ನಾಮಗಳನ್ನು ಸಂಗ್ರಹಿಸಿದೆ. 'ತ್ರಯೋವಿಂಶತ್ಸುತರುಣೀ ಪತಿಃ....' –ಎಂದು ಭೀಮಸೇನನಿಗೆ 23 ಪತ್ನಿಯರಿದ್ದರೆಂದು ಉಲ್ಲೇಖಿಸಲಾಗಿದೆ. ಕೊನೆಯ ಮೂರು ಶ್ಲೋಕಗಳಲ್ಲಿ ಫಲಶ್ರುತಿಯನ್ನೂ, ಕಡೆಯ ಶ್ಲೋಕದಲ್ಲಿ 'ರಘುಪ್ರವೀರಕರ್ಮಂದೀ ಚಕ್ರೇ...' ಎಂದು ಶ್ರೀ ರಘುಪ್ರವೀರತೀರ್ಥರಿಂದ ರಚಿತವಾದುದೆಂಬುದನ್ನೂ ನಮೂದಿಸ ಲಾಗಿದೆ.

೫೨. **ಭೀಮಗೀತಾ:**

'ಭುವನಭೂಷಣೇ ಭೀಮಸೇನ ಭೋ....' ಎಂದು ಪ್ರಾರಂಭವಾಗುವ, ಒಂಬತ್ತು ಪದ್ಯಗಳನ್ನೊಳಗೊಂಡ ಭೀಮಗೀತಾ ಸಂಕರ್ಷಣಾಚಾರ್ಯಕೃತವಾದುದು. ಇದರಲ್ಲಿ ಭೀಮಸೇನನ ಬಲಾದಿಗುಣಗಳ ಪ್ರತಿಪಾದನೆ ನಡೆದಿದೆ.

೫೩. **ಭೀಮಾಷ್ಟಕ:**

'ಕಮಲೇಶನಿದೇಶತೋಽಸುರಾನ್ ವಿನಿಹಂತುಂ...' ಎಂದು ಪ್ರಾರಂಭವಾಗುವ ಭೀಮಾಷ್ಟಕ ಮುದ್ಗಲಾಚಾರ್ಯವಿರಚಿತವಾದುದು. ಭೀಮಸೇನನ ಶತಶೃಂಗಪರ್ವತದ ವಿಭೇದನ ಇತ್ಯಾದಿ ಸಾಧನೆಗಳ ಉಲ್ಲೇಖ ಇದರಲ್ಲಿ ನಡೆದಿದೆ. '.....ಸತತಂ ಭೀಮಮು ದಾರಮಾಶ್ರಯೇ' –ಎಂಬ ಪಲ್ಲವಿಯನ್ನು ಪ್ರತಿಯೊಂದು ಶ್ಲೋಕವೂ ಒಳಗೊಂಡಿದೆ.

## ಮಧ್ವರೂಪದ ಪರವಾದ ಸ್ತೋತ್ರಗಳು

೫೪. **ಶ್ರೀ ಮಧ್ವರೂಪ ಧ್ಯಾನಮ್:**

'ಧ್ವಜವಜ್ರಾಂಕುಶಾಂಭೋಜಚಿಹ್ನಿತಾರುಣಸತ್ಪದಮ್....' –ಎಂದು ಶ್ರೀ ಮಧ್ವರ ಪಾದದ ಧ್ವಜ ಇತ್ಯಾದಿ ಚಿಹ್ನೆಗಳ ಉಲ್ಲೇಖದೊಂದಿಗೆ ಪ್ರಾರಂಭವಾಗುವ 'ಮಧ್ವರೂಪ ಧ್ಯಾನ' ಪಂಚರಾತ್ರಾಗಮದಲ್ಲಿ ಪಠಿತವಾಗಿರುವಂತಹದ್ದೆಂದು ನಂಬಲಾಗಿದೆ–

ಅನಂತಗುಣಪೂರ್ಣೇನ ವ್ಯಾಸರೂಪೇಣ ವಿಷ್ಣುನಾ ।
ಕರುಣಾಪೂರ್ಣದೃಷ್ಟಿಭ್ಯಾಂ ಸರ್ವದೈವಾಭಿವೀಕ್ಷಿತಮ್ ॥

ಎಂಬುದಾಗಿ ಶ್ರೀವ್ಯಾಸರ ದಯಾಪೂರ್ಣ ದೃಷ್ಟಿಗೆ ಯಾವಾಗಲೂ ಪಾತ್ರವಾಗುತ್ತಿರುವವರೆಂದು ಶ್ರೀ ಮಧ್ವರವೈಶಿಷ್ಟ್ಯಕ್ಕೆ 'ಪ್ರಮುಖ ಕಾರಣವನ್ನು ಸ್ಪಷ್ಟಪಡಿಸಿದಂತಾಗಿದೆ.

೫೬. **ಅನುಮಧ್ವವಿಜಯ:**

'ಶ್ರೀಶಪ್ರೀತ್ಯೈ ಪ್ರಜಾತಃ....' ಇತ್ಯಾದಿಯಾಗಿ ಪ್ರಾರಂಭವಾಗುವ 'ಅಣುಮಧ್ವವಿಜಯ'ದ ಮೊದಲ ಎರಡು ಪದ್ಯಗಳಲ್ಲಿ ಕ್ರಮವಾಗಿ ಹನೂಮಂತನ ಹಾಗೂ ಭೀಮಸೇನನ ಪ್ರಸ್ತಾವ ಮಾಡಿ ಮುಂದೆ 31 ಶ್ಲೋಕಗಳಲ್ಲಿ ಮಧ್ವವಿಜಯದಲ್ಲಿ ನಿರೂಪಿಸಲಾದ ಮಧ್ವಲೀಲೆಗಳನ್ನು, ಮಹಿಮೆಗಳನ್ನು ಸಂಗ್ರಹಿಸಲಾಗಿದೆ. ಮಧ್ವವಿಜಯವನ್ನು ರಚಿಸಿರುವ ನಾರಾಯಣಪಂಡಿತರೇ ಅಣುಮಧ್ವವಿಜಯವನ್ನೂ ನಿರ್ಮಿಸಿರುವರು. 'ಪ್ರಮೇಯನವಮಾಲಿಕಾಂ ಪುನರಿಮಾಂ ಚ ದಕ್ಷಾಂಚಿತಾಂ ಸತಾಂ ಶ್ರವಣಭೂಷಣಂ ವ್ಯತನುತೈಷ ನಾರಾಯಣಃ' –ಎಂದು ಕೃತಿಯ ಉಪಸಂಹಾರದಲ್ಲಿ ಇದನ್ನು 'ಪ್ರಮೇಯನವಮಾಲಿಕಾ' ಎಂದು ಹೆಸರಿಸಲಾಗಿದೆ. ಗ್ರಂಥಕಾರರ ಹೆಸರನ್ನೂ ಉಲ್ಲೇಖಿಸಲಾಗಿದೆ.

೫೭. **ಸುಮಧ್ವವಿಜಯಸಾರಸಂಗ್ರಹ:**

'ಶ್ರೀಕಾಂತಾಜ್ಞಾಂ ವಹನ್ ಯಃ....' ಎಂದು ಪ್ರಾರಂಭವಾಗುವ 'ಮಧ್ವವಿಜಯಸಾರ ಸಂಗ್ರಹ' ಕೃತಿ ಶ್ರೀ ವಿದ್ಯಾರತ್ನಾಕರತೀರ್ಥ ವಿರಚಿತವಾದುದು. 32 ಪದ್ಯಗಳಲ್ಲಿ ಮಧ್ವವಿಜಯದ ಹದಿನಾರು ಸರ್ಗಗಳ ಪ್ರಮುಖ ಘಟನೆಗಳನ್ನೆಲ್ಲ ಕ್ರೋಡೀಕರಿಸಲಾಗಿದೆ.

೫೮. **ಸುಮಧ್ವವಿಜಯಪ್ರಮೇಯಮಾಲಿಕಾ:**

ಮಾದನೂರು ವಿಷ್ಣುತೀರ್ಥವಿರಚಿತವಾದ ಸುಮಧ್ವವಿಜಯಪ್ರಮೇಯಮಾಲಿಕಾದಲ್ಲಿ–

**ಶ್ರೀಮಧ್ವವಿಜಯೇ ಸರ್ಗಾಃ ಷೋಡಶಾನುಕ್ರಮಾದಹಮ್ ।**
**ತೇಷಾಂ ಪ್ರಮೇಯಂ ವಕ್ಷ್ಯಾಮಿ ಸಂಗ್ರಹೇಣ ಫಲಂ ತಥಾ ॥**

ಎಂದು ಮೊದಲೇ ಪ್ರತಿಜ್ಞೆ ಗೈದಂತೆ ಮೊದಲ ಹದಿನಾರು ಶ್ಲೋಕಗಳಲ್ಲಿ ಮಧ್ವವಿಜಯದ ಹದಿನಾರು ಸರ್ಗಗಳ ಚರಿತ್ರೆಯ ಭಾಗವನ್ನು ಸಂಗ್ರಹಿಸಿ, ಮುಂದೆ ನಾಲ್ಕು ಶ್ಲೋಕಗಳಲ್ಲಿ ಸುಮಧ್ವವಿಜಯದ ಅಧ್ಯಯನದ ಫಲಗಳನ್ನು ಸಂಗ್ರಹಿಸಲಾಗಿದೆ.

೫೯. **ವಾಯುಪುರಾಣೋಕ್ತಂ ಅಣುಮಧ್ವವಿಜಯಮ್:**

'ದ್ವಾಪರೇ ಭೀಮಸೇನನ ಹತೇಷು ಸುರಶತ್ರುಷು । ಮಣಿಮಾನವನೌ ಜಾತೋ.....' ಎಂದು ಮಣಿಮಂತನ ಪ್ರಸ್ತಾವದೊಂದಿಗೇ ಪ್ರಾರಂಭವಾಗುವ 'ಅಣುಮಧ್ವಚರಿತ' ವಾಯುಪುರಾಣೋಕ್ತವಾದುದೆಂದು ನಂಬಲಾಗಿದೆ.

ಹತ್ತು ಪದ್ಯಗಳನ್ನೊಳಗೊಂಡ ಇದರ ಕೊನೆಯ ಪದ್ಯ–

**ಏಕೋನಾಶೀತಿವರ್ಷಾಣಿ ನೀತ್ವಾ ಮಾನುಷದೃಷ್ಟಿಗಃ ।**
**ಪಿಂಗಲಾಬ್ದೇ ಮಾಘಶುದ್ಧನವಮ್ಯಾಂ ಬದರೀ ಯಯೌ ॥**

-ಎಂಬುದಾಗಿ 89 ವರ್ಷಗಳ ಕಾಲ ಶ್ರೀ ಮಧ್ವರು ದೃಶ್ಯರಾಗಿದ್ದು, ಪಿಂಗಲ ಸಂವತ್ಸರದ ಮಾಘಶುದ್ಧ ನವಮಿಯಂದು ಬದರೀಕ್ಷೇತ್ರಕ್ಕೆ ತೆರಳಿದರೆಂದು ಸ್ಪಷ್ಟಪಡಿಸಲಾಗಿದೆ.

## ೬೦. ನಾರಾಯಣಪಂಡಿತಾಚಾರ್ಯಕೃತ ಮಧ್ವಕವಚಮ್:

'ಶ್ರೀ ಮಧ್ವಃ ಪೂರ್ವತಃ ಪಾತು....' ಇತ್ಯಾದಿಯಾಗಿ ಮಧ್ವರನ್ನು ಬೇರೆ ಬೇರೆ ಹೆಸರಿನಿಂದ ಉಲ್ಲೇಖಿಸಿ, ಆ ಹೆಸರಿನ ಮಧ್ವರು ಕವಚದಂತೆ ಸುತ್ತಮುತ್ತ ಹಾಗೂ ಎಲ್ಲ ಅಂಗಗಳಲ್ಲಿದ್ದುಕೊಂಡು ರಕ್ಷಣೆ ನೀಡಲೆಂದು ಪ್ರಾರ್ಥಿಸಿಕೊಳ್ಳಲಾಗಿದೆ-

> ಇತ್ಯೇತನ್ಮಧ್ವಕವಚಂ ಸುಖಜ್ಞಾನಾದಿಸತ್ಫಲಮ್ ।
> ಪಠನ್ ಪ್ರಯತ್ನತಃ ಕಾಲೇ ಪ್ರಯಾತಿ ಪ್ರೀತಿಮಸ್ಯ ತು ॥

ಎಂದು ಸುಖಜ್ಞಾನಾದಿ ಫಲಗಳಿಗೆ ಕಾರಣವಾದ ಮಧ್ವಕವಚದ ಪಠನ ಶ್ರೀ ಮಧ್ವರ ಪ್ರೀತಿಸಂಪಾದನೆಯನ್ನೂ ಮಾಡಿಕೊಡಬಲ್ಲದೆಂಬ ಫಲಶ್ರುತಿಯೊಂದಿಗೆ ಉಪಸಂಹರಿಸ ಲಾಗಿದೆ.

## ೬೧. ಶ್ರೀಪೂರ್ಣಬೋಧಸ್ತೋತ್ರಮ್:

'ನಲಿನಸೌಂದರ್ಯಜಿಷ್ಣಂ ಪದಾಭ್ಯಾಂ....' ಎಂದು ಶ್ರೀ ಮಧ್ವರ ಪಾದದ ವರ್ಣನೆ ಯಿಂದ ಪ್ರಾರಂಭವಾಗುವ ಶ್ರೀ ಪೂರ್ಣಬೋಧಸ್ತೋತ್ರ ಶ್ರೀ ಮಧ್ವರ ಮೊಣಕಾಲು, ಕಟಿ ಹೀಗೆ ೧೪ ಪದ್ಯಗಳಲ್ಲಿ ಕ್ರಮೇಣ ದೇಹದ ತಲೆಯ ವರೆಗಿನ ಅಂಗಗಳ ಸೊಬಗನ್ನು ವರ್ಣಿಸುತ್ತ 'ಕಮಲನಾಭಂ ಭಜಂತಂ ಸುಭಕ್ತ್ಯಾ ಸುಜನತುಷ್ಟಿಪ್ರದಂ ವಾಸುದೇವಮ್' -ಭಗವಂತನನ್ನು ಭಕ್ತಿಯಿಂದ ಭಜಿಸುತ್ತಿರುವವರನ್ನಾಗಿ ಸ್ತುತಿಸಲಾಗಿದೆ. 'ಪ್ರಣತವಾನ್ ಪ್ರಾಣಿನಾಂ ಪ್ರಾಣಭೂತಂ ಪ್ರಣತಿಭಿಃ ಪ್ರೀಣಯೇ ಪೂರ್ಣಬೋಧಮ್' -ಎಂಬ ಪಲ್ಲವಿಯಿಂದ ಪೂರ್ಣಬೋಧರಿಗೆ ಪ್ರಣಾಮಪುಂಜವನ್ನು ಸಮರ್ಪಿಸಲಾಗುವ ಈ ಸ್ತೋತ್ರದಲ್ಲಿ ಶ್ರೀ ಮಧ್ವಗುರುಗಳು ತಮ್ಮ ಎರಡು ಹಸ್ತಗಳಿಂದ ಸಜ್ಜನರಿಗೆ ನೀಡುವ ಸಂದೇಶವನ್ನು ಆಶ್ವಾಸನೆಯನ್ನು ಸ್ವರಸವಾಗಿ ಹೀಗೆ ಸಾರಲಾಗಿದೆ:

> ಭುಜಗಭೋಗಾಭಮುದ್ಯಮ್ಯ ಹೃದ್ಯಂ
> ನಿಜಭುಜಂ ದಕ್ಷಿಣಂ ಲಕ್ಷಣಾಢ್ಯಮ್ ।
> ಲಲಿತ ಮುದ್ರಿಕ್ತ ವಿಜ್ಞಾನ ಮುದ್ರಂ
> ಭಜ ಭಜಾನಂತಮಿತ್ಯಾಲಪಂತಮ್ ॥

ಶೇಷನ ದೇಹಕ್ಕೆ ಸದೃಶವಾದ, ಮನೋಹರವಾದ, ಲಕ್ಷಣಭರಿತವಾದ, ಜ್ಞಾನ ಮುದ್ರೆಯಿಂದ ಕೂಡಿದ ತನ್ನ ಬಲಗೈಯನ್ನು ಮೇಲೆತ್ತಿ ಅನಂತವನನ್ನು ಭಜಿಸು ಭಜಿಸು ಎಂದು ಸಂದೇಶಿಸುತ್ತಿರುವವರನ್ನು ನಮಿಸುವೆನು-

> ಭವದವೋಷ್ಣೇನ ತಾತಪ್ಯಮಾನಾನ್
> ಭುವಿ ಪರಂ ನಾಥಮಪ್ರೇಕ್ಷಮಾಣಾನ್ ।

ಭುವನಮಾನ್ಯೇನ ಛಾನ್ಯೇನ ದೋಷ್ಣಾ
ಭವತು ಭೀರ್ಮೇತಿ ಸಾಂತ್ವಯಂತಮ್ ॥
ಪ್ರಣತವಾನ್ ಪ್ರಾಣಿನಾಂ ಪ್ರಾಣಭೂತಂ....

ಸಂಸಾರದ ಬೇಗೆಗೆ ಸಿಲುಕಿ ಸುಡುತ್ತಿರುವ, ಭೂಮಿಯಲ್ಲಿ ಬೇರೆ ಒಡೆಯನನ್ನು ಕಾಣದಿರುವ, ಸಜ್ಜನರನ್ನು ತನ್ನ ಭುವನದಲ್ಲೇ ಗೌರವಾರ್ಹವಾದ ಮತ್ತೊಂದು ತೋಳಿನಿಂದ 'ಭಯ ಪಡಬೇಡಿ' ಎಂದು ಸಮಾಧಾನಪಡಿಸುತ್ತಿರುವ ಜೀವಿಗಳಿಗೆ ಪ್ರಾಣದಂತಿರುವ ಮುಖ್ಯಪ್ರಾಣಾವತಾರ ಶ್ರೀ ಮಧ್ವರನ್ನು ನಮಿಸುವೆನು.

೬೨. **ಮಧ್ವಮುನಿಪ್ರತಾಪಾಷ್ಟಕಮ್:**

'ಕ್ವಚಿತ್ ಸುರಾನ್ ಶಾಸ್ತಿ....' ಇತ್ಯಾದಿಯಾಗಿ ಪ್ರಾರಂಭವಾಗುವ ಮಧ್ವಮುನಿ ಪ್ರತಾಪಾಷ್ಟಕದಲ್ಲಿ ಶ್ರೀ ಮಧ್ವಮುನಿಗಳ ದೇವಾದಿಗಳನ್ನು ಶಾಸನೆ ಮಾಡುವುದೇ ಮುಂತಾದ ಲೀಲೆಗಳನ್ನು, ಮಹಿಮೆಗಳನ್ನು '....ಅಯಂ ಮಧ್ವಮುನಿಃ ಪ್ರತಾಪವಾನ್' ಎಂಬ ಪಲ್ಲವಿಯ ಮೂಲಕ ಮಧ್ವಮುನಿ ಪ್ರತಾಪಗಳನ್ನಾಗಿ ಉಲ್ಲೇಖಿಸಲಾಗಿದೆ. ಶ್ರೀ ವಾದಿರಾಜ ಸ್ವಾಮಿಗಳಿಂದ ರಚಿತವಾದ ಈ ಸ್ತೋತ್ರದಲ್ಲಿ 'ಪ್ರಹೃಷ್ಟರೋಮಾ ನೃಹರೌ ಕ್ವಚಿನ್ಮನೋಯುನಕ್ತ್ಯಯಂ....' ಕೆಲವೊಮ್ಮೆ ರೋಮಾಂಚನಗೊಂಡು ನರಹರಿಯಲ್ಲಿ ತಮ್ಮ ಮನಸ್ಸನ್ನು ಸಂಯೋಜಿಸಿರುವರೆಂದು ಶ್ರೀ ಮಧ್ವರ ವಿಶಿಷ್ಟ ಸಾಧನೆಯ ಉಲ್ಲೇಖವೂ ನಡೆದಿದೆ.

೬೩. **ತ್ರಿವಿಕ್ರಮಪಂಡಿತರವಿರಚಿತ ಮಧ್ವಾಷ್ಟಕ:**

ಅಜ್ಞಾನನಾಶಾಯ ಸತಾಂ ಜನಾನಾಂ ಕೃತಾವತಾರಾಯ....' ಎಂದು ಪ್ರಾರಂಭವಾಗುವ ಮಧ್ವಾಷ್ಟಕ ಹನ್ನೆರಡು ಪದ್ಯಗಳನ್ನೊಳಗೊಂಡಿದೆ. ತ್ರಿವಿಕ್ರಮಪಂಡಿತರಿಂದ ರಚಿತವಾದ ಇದರಲ್ಲಿ ಶ್ರೀ ಮಧ್ವರ ಗುಣಗಳನ್ನು ಉಲ್ಲೇಖಿಸಲಾಗಿದೆ.

ಸಮಸ್ತಶಾಸ್ತ್ರಾಣಿ ಚ ಸಮ್ಯಗೇವ
ಕೃತ್ವಾ ಹರೇಃ ಶಾಶ್ವತಸದ್ಗುಣಾನ್ ಯಃ ।
ಪ್ರಕಾಶಯಾಮಾಸ ಸಮಸ್ತಯುಕ್ತಿಭಿಃ
ಶ್ರೀಮಧ್ವನಾಮಾ ಚ ಸದಾ ಪ್ರಸೀದತಾಮ್ ॥

ಸಮಸ್ತ ಶಾಸ್ತ್ರಗಳನ್ನು ಚೆನ್ನಾಗಿ ನಿರ್ಮಾಣಮಾಡಿ, ಅವುಗಳಲ್ಲಿ ಸಮಸ್ತಯುಕ್ತಿಗಳಿಂದ ಶ್ರೀಹರಿಯ ಸದ್ಗುಣಗಳನ್ನು ಚೆನ್ನಾಗಿ ಪ್ರಕಾಶಗೊಡಿಸಿರುವ ಮಧ್ವ ಹೆಸರಿನ ಗುರುಗಳು ಯಾವಾಗಲೂ ನನ್ನ ಬಗ್ಗೆ ಪ್ರಸನ್ನರಾಗಲಿ' –ಎಂದು ಪ್ರಾರ್ಥಿಸಲಾಗುವ ಈ ಪದ್ಯದಲ್ಲಿ ಶ್ರೀ ಮಧ್ವರ ಕೊಡುಗೆಯನ್ನು ಸಂಕ್ಷಿಪ್ತವಾಗಿ, ಸ್ಪಷ್ಟವಾಗಿ ಸಾರಲಾಗಿದೆ.

೬೪. **ರಘುವರ್ಯತೀರ್ಥವಿರಚಿತ ಮಧ್ವಾಷ್ಟಕ:**

'ವಿಷ್ಣ್ವಜ್ಞಪ್ತಿಸಮರ್ದಿತಸ್ವಜನಸತ್ಕಾರುಣ್ಯನುತ್........' ಇತ್ಯಾದಿಯಾಗಿ ಪ್ರಾರಂಭವಾಗುವ ಮಧ್ವಾಷ್ಟಕ ಶ್ರೀ ರಘುವರ್ಯತೀರ್ಥ ವಿರಚಿತವಾದುದು. ಶ್ರೀ ಮಧ್ವರ

ಚರಿತ್ರೆಯ ಕೆಲವು ಘಟನೆಗಳ ಉಲ್ಲೇಖವುಳ್ಳ ಈ ಅಷ್ಟಕದಲ್ಲಿ 'ಭಕ್ತ್ಯಾ ಯಚ್ಚರಿತಂ ಶೃಣೋತಿ ಮನುಜೋ ವ್ಯಾಖ್ಯಾತಿ ವಾ ತಸ್ಯ ಕಿಂ ಕೃತ್ಯಂ...' ಶ್ರೀ ಮಧ್ವರ ಚರಿತೆಯನ್ನು ಭಕ್ತಿಯಿಂದ ಶ್ರವಣ ಮಾಡಿದರೆ, ಪ್ರವಚನ ಮಾಡಿದರೆ ಅಂತಹವರು ಬೇರೇನೂ ಕರ್ತವ್ಯ ವನ್ನು ನಿರ್ವಹಿಸಬೇಕಾಗಿಲ್ಲ –ಎನ್ನುವಷ್ಟೂ ಫಲಪ್ರದವಾದುದೆಂದು ಸಾರಲಾಗಿದೆ.

**೬೫. ವಿದ್ಯಾರತ್ನಾಕರತೀರ್ಥವಿರಚಿತ ಮಧ್ವಾಷ್ಟಕ:**

'ರುಗ್ಮಿಣೀಶಪದಾಂಬುಜಾರ್ಪಿತಮಾನಸಂ....' ಎಂದು ಪ್ರಾರಂಭವಾಗುವ ಮಧ್ವಾಷ್ಟಕ ಮಧ್ವರ ಚರಿತ್ರೆಯ ಕೆಲವು ಅಂಶಗಳನ್ನು ಸಾರುತ್ತಿದೆ. ಶ್ರೀ ವಿದ್ಯಾಕರತೀರ್ಥ ವಿರಚಿತವಾದ ಈ ಸ್ತೋತ್ರ ಒಂಭತ್ತು ಪದ್ಯಗಳನ್ನೊಳಗೊಂಡಿದೆ.

**೬೬. ಮುದ್ಗಲಾಚಾರ್ಯಕೃತಂ ಮಧ್ವಾಷ್ಟಕಮ್:**

'ಪುರುಷೋತ್ತಮದಾಸಸಂಹತೌ....' ಎಂದು ಪ್ರಾರಂಭವಾಗುವ ಮಧ್ವಾಷ್ಟಕ ಮುದ್ಗ ಲಾಚಾರ್ಯ ವಿರಚಿತವಾದುದು. ಮಧ್ವರ ಗ್ರಾಂಥಿಕ ಕೊಡುಗೆಯ ಮೇಲೆ ವಿಶೇಷವಾಗಿ ಬೆಳಕು ಚೆಲ್ಲುತ್ತಿದೆ. '.....ಜಯದೋ ಮೇಽಸ್ತು ಸ ಮಧ್ವ ಸಂಯಮೀ' ಎಂಬ ಪಲ್ಲವಿ ಯನ್ನೊಳಗೊಂಡಿದೆ.

**೬೭. ತ್ರಿವಿಕ್ರಮಪಂಡಿತಾಚಾರ್ಯಕೃತ ಮಧ್ವಸ್ತುತಿ:**

ಶ್ರೀ ಮಧ್ವರ ಬ್ರಹ್ಮಸೂತ್ರಭಾಷ್ಯಕ್ಕೆ ಅವರ ಅಣತಿಯ ಮೇರೆಗೇ 'ತತ್ವದೀಪಿಕಾ' ಎಂಬ ಟೀಕೆ ಬರೆದಿರುವ ಅವರ ಸಾಕ್ಷಾಚ್ಛಿಷ್ಯರಾಗಿರುವ ತ್ರಿವಿಕ್ರಮಪಂಡಿತರು ಆ ಟೀಕೆಯ ಪ್ರಾರಂಭದಲ್ಲಿ ಮೂರು ಶ್ಲೋಕಗಳಲ್ಲಿ ಭಗವಂತನನ್ನೂ, ವ್ಯಾಸರನ್ನೂ ಸ್ತುತಿಸಿ ಮುಂದೆ ಇಪ್ಪತ್ತೊಂದು ಶ್ಲೋಕಗಳಲ್ಲಿ [4ರಿಂದ 25] ಶ್ರೀ ಮಧ್ವರನ್ನು ಸ್ತುತಿಸಿರುವರು. ಪ್ರತ್ಯೇಕವಾಗಿ ಮಧ್ವಸ್ತುತಿ ಎಂದೇ ಪರಿಗಣಿಸಲು ಯೋಗ್ಯವಾಗಿರುವ ಇದು ವಾಯುಸ್ತುತಿಯಂತೆ ಶ್ರೀ ಮಧ್ವರ ದೃಷ್ಟಿಯಿಂದ ಪವಿತ್ರವಾಗಿರುವಂತಹದ್ದು.

**೬೮. ಮಧ್ವಸ್ತುತಿ:**

'ಕೂರ್ಮಾಸನೇ ಸಮಾಸೀನಂ....' ಎಂದು ಪ್ರಾರಂಭವಾಗುವ, ಐದು ಪದ್ಯಗಳ ನ್ನೊಳಗೊಂಡ ಮಧ್ವಸ್ತುತಿ ಪಾಠಪ್ರವಚನದಲ್ಲಿ ತೊಡಗಿದ್ದ ಶ್ರೀ ಮಧ್ವರ ವರ್ಣನೆಯನ್ನು ನಡೆಸುತ್ತಿದೆ.

**೬೯. ಶ್ರೀ ಮಧ್ವಾಷ್ಟೋತ್ತರಶತನಾಮಸ್ತೋತ್ರಮ್:**

**ಶ್ರೀಮದಾನಂದತೀರ್ಥಾಯ ಕಲ್ಯಾಣಗುಣರಾಶಯೇ ।**
**ಸರ್ವದೋಷಾತಿದೂರಾಯ ನಮೋ ಮಸ್ಕರಿಮೌಲಯೇ ॥**

–ಎಂದು ಶ್ರೀ ಮಧ್ವರಿಗೆ ನಮಿಸಿ, 'ವಾಸುದೇವೋ ಮಹಾತೇಜಾಃ....' ಇತ್ಯಾದಿಯಾಗಿ ಇಪ್ಪತ್ತೈದು ಶ್ಲೋಕಗಳಲ್ಲಿ ಶ್ರೀ ಮಧ್ವರ ಚರಿತ್ರೆಗೆ ಸಂಬಂಧಿಸುವ ನೂರೆಂಟು ನಾಮಗಳನ್ನು ಸಂಗ್ರಹಿಸಿ, ಮುಂದಿನ ಮೂರು ಶ್ಲೋಕಗಳಲ್ಲಿ ಫಲಶ್ರುತಿಯನ್ನೂ ಕೊನೆಯ ಶ್ಲೋಕದಲ್ಲಿ

ತಮ್ಮಿಂದ ಈ ಅಷ್ಟೋತ್ತರಶತನಾಮಸ್ತೋತ್ರ ರಚಿತವಾಗಿದೆ ಎಂಬುದನ್ನೂ ಈ ಅಷ್ಟೋತ್ತರಶತನಾಮಸ್ತೋತ್ರದ ಕರ್ತೃಗಳಾದ ರಘುಪ್ರವೀರತೀರ್ಥರು ತಿಳಿಸಿರುವರು.

೭೦. ಶ್ರೀಮಧ್ವಾರ್ಯಾಷ್ಟೋತ್ತರಶತನಾಮಸ್ತೋತ್ರಮ್:

'ಶ್ರೀವೇಂಕಟೇಶಂ ಗುರುಮಧ್ವವರ್ಯಾನ್.....' ಎಂದು ಪ್ರಾರಂಭವಾಗುವ ಈ ಸ್ತೋತ್ರ ಇಪ್ಪತ್ತೇಳು ಶ್ಲೋಕಗಳಲ್ಲಿ ಮಧ್ವಚರಿತ್ರೆಗೆ ಸಂಬಂಧಿಸಿದಂತೆ ಶ್ರೀ ಮಧ್ವರ ನೂರೆಂಟು ನಾಮಗಳನ್ನು ಸಂಗ್ರಹಿಸಿ, ಕೊನೆಯ ಏಳೆಂಟು ಶ್ಲೋಕಗಳಲ್ಲಿ 'ಫಲಶ್ರುತಿ'ಯ ಪ್ರತಿಪಾದನೆಯನ್ನು ನಡೆಸಿದೆ. ಇದು ಛಲಾರೀಶಿಷ್ಯ ವಿರಚಿತ. ಛಲಾರೀಶಿಷ್ಯರ ಹೆಸರು ಉಲ್ಲೇಖಿಸಲ್ಪಟ್ಟಿಲ್ಲ.

೭೧. ಬಿದರಹಳ್ಳಿ ಶ್ರೀನಿವಾಸ ವಿರಚಿತ ಮಧ್ವನಾಮಾವಲಿ:

> ಅನಾದಿಭವದುಃಖೌಘಬಾಧಿತಾನಾಂ ನೃಣಾಮಿಹ
> ಶ್ರೀ ಮಧ್ವವಿಜಯೇ ಕಾವ್ಯೇ ನಾದಿರಾಯಣಪಂಡಿತೈಃ ।
> ಶ್ರೀಮಧ್ವಾಚಾರ್ಯನಾಮಾನಿ ಯಾನಿ ಪ್ರೋಕ್ತಾನಿ
> ತಾನ್ಯಹಂ ಪಾಠವೃತ್ತ್ಯಾಭೀಷ್ಟಸಿದ್ಧಾವುದ್ಧರಾಮಿ ಸುಭಕ್ತಿತಃ ॥

–ನಾರಾಯಣಪಂಡಿತರು ರಚಿಸಿರುವ ಮಧ್ವವಿಜಯದಲ್ಲಿ ಹೇಳಲಾದ ಶ್ರೀ ಮಧ್ವರ ನಾಮಗಳನ್ನು ಉದ್ಧಾರ ನಡೆಸುವೆಂದು ಪ್ರಾರಂಭದಲ್ಲೇ ಪ್ರತಿಜ್ಞೆ ಗೈದಿರುವ ಬಿದಿರಹಳ್ಳಿ ಶ್ರೀನಿವಾಸತೀರ್ಥರು 'ವಾಸುದೇವೋ ಮಾಂ ಪಾಯಾತ್....' ಇತ್ಯಾದಿಯಾಗಿ ಮಧ್ವನಾಮಗಳನ್ನು ಸಂಗ್ರಹಿಸಿರುವರು. ಅರುವತ್ತು ಪದ್ಯಗಳನ್ನೊಳಗೊಂಡ ಈ ಸ್ತೋತ್ರದ ಐವತ್ತನಾಲ್ಕು ಶ್ಲೋಕಗಳಲ್ಲಿ 'ಸಪ್ತತ್ರಿಂಶೋತ್ತರಶತದ್ವಯಸಂಖ್ಯಾನ್ಯಲಂ ನರಃ ।.... ಪಠೇನ್ನಿತ್ಯ...' ಎಂಬುದಾಗಿ ತಿಳಿಸಿದಂತೆ 237 ನಾಮಗಳನ್ನು ಸಂಗ್ರಹಿಸಿರುವುದಾಗಿ ತಿಳಿಸಲಾಗಿದೆ.

೭೨. ಮಧ್ವನಾಮ ಪದ್ಯಮಾಲಾ:

85 ಪದ್ಯಗಳನ್ನೊಳಗೊಂಡ ಈ ಸ್ತೋತ್ರದಲ್ಲೂ–

> ಶ್ರೀ ಮಧ್ವವಿಜಯೇ ಕಾವ್ಯೇ ನಾದಿರಾಯಣಪಂಡಿತೈಃ ।
> ಶ್ರೀ ಮಧ್ವಾರ್ಯಾಭಿಧಾನಾನಿ ಯಾನಿ ಪ್ರೋಕ್ತಾನಿ ತಾನ್ಯಹಮ್ ॥
> ....ಪ್ರವಕ್ಷ್ಯಾಮಿ.....'

ಎಂದು ಪ್ರತಿಜ್ಞೆಗೈದಿರುವಂತೆ ನಾರಾಯಣಪಂಡಿತರ ಮಧ್ವವಿಜಯದಲ್ಲಿ ಹೇಳಲ್ಪಟ್ಟ ಶ್ರೀ ಮಧ್ವರ ನಾಮಗಳ ಸಂಗ್ರಹ ನಡೆದಿದೆ. ಶ್ರೀ ತ್ರಾತ ಭ್ರಾತಾ ಅಪ್ಪಣಾಚಾರ್ಯಕೃತವಾದ ಇದರಲ್ಲಿ 'ಶ್ರೀಮದಾನಂದತೀರ್ಥಾರ್ಯನಾಮ್ನಾಂ ಶತಯುಗಂ ಮಹತ್ । ಚತುಶ್ಚತ್ವಾರಿಂಶತಾಽಪಿ ಯುಕ್ತಂ....' ಎಂದಿರುವಂತೆ 244 ನಾಮಗಳನ್ನು ಕ್ರೋಢೀಕರಿಸಲಾಗಿದೆ.

೭೩. **ಮಧ್ವಸ್ತುತಿ ಮಂಗಲಾಷ್ಟಕಮ್:**

'ಶ್ರೀದೇವೀರಮಣಂ ರಮಾಂ....' ಇತ್ಯಾದಿಯಾಗಿ ಪ್ರಾರಂಭವಾಗುವ ಮಧ್ವಸ್ತುತಿ ಮಂಗಲಾಷ್ಟಕ ಶ್ರೀ ಲಕ್ಷ್ಮೀವಲ್ಲಭತೀರ್ಥರ ಶಿಷ್ಯರಾದ ಶ್ರೀ ವೇಂಕಟಾಚಾರ್ಯರಿಂದ ನಿರ್ಮಿತವಾದುದು.

**ಸ ಶ್ರೀ ಮಧ್ವಮುನಿರ್ಹರಿಪ್ರಿಯತಮೋ ದದ್ಯಾದ್ವಟೋರ್ಮಂಗಲಮ್ ।**

ಎಂಬ ಪಲ್ಲವಿಯನ್ನೊಳಗೊಂಡ ಈ ಮಂಗಲಾಷ್ಟಕಸ್ತುತಿ ಮಧ್ವವಿಜಯದಲ್ಲಿ ಉಲ್ಲೇಖ ಗೊಂಡ ಕೆಲವು ಮಧ್ವಮಹಿಮೆಗಳನ್ನು, ಮಧ್ವಲೀಲೆಗಳನ್ನು ಸಾರುತ್ತಿದೆ. 'ದದ್ಯಾದ್ ವಟೋರ್ಮಂಗಲಮ್' –ಎಂದಿರುವುದರಿಂದ ಉಪನಯನದ ಸಂದರ್ಭದಲ್ಲಿ ವಿಶೇಷ ವಾಗಿ ಸ್ತುತಿಸಲು ರಚಿತವಾದ ಮಂಗಲಾಷ್ಟಕವಾಗಿದ್ದಿರಬಹುದು.

೭೪. **ಗ್ರಂಥಮಾಲಿಕಾಸ್ತೋತ್ರ:**

**ಕೃಷ್ಣಂ ವಿದ್ಯಾಪತಿಂ ನತ್ವಾ ಪೂರ್ಣಬೋಧಾದಿಸದ್ಗುರೂನ್ ।**
**ಜಯತೀರ್ಥಮುನೀನ್ ನತ್ವಾ ವಕ್ಷ್ಯೇಽಹಂ ಗ್ರಂಥಮಾಲಿಕಾಮ್ ॥**

–ಎಂದು ಪ್ರಾರಂಭವಾಗುವ ಶ್ರೀ ವ್ಯಾಸರಾಜಕೃತ ಗ್ರಂಥಮಾಲಿಕಾ ಸ್ತೋತ್ರ ಶ್ರೀ ಮಧ್ವರ 'ಗ್ರಂಥಾನ್ ಮಧ್ವಶ್ಚಕಾರಾಸೌ ಸಪ್ತತ್ರಿಂಶದ ಮಂದಧೀಃ' ಎಂಬುದಾಗಿ ಮೂವತ್ತೇಳು ಗ್ರಂಥಗಳನ್ನು ಉಲ್ಲೇಖಿಸಿದೆ. ಶ್ರೀ ಮಧ್ವರಿಂದ ಬಾಲ್ಯದಲ್ಲಿ ರಚಿತವಾದದ್ದೆಂದು ಪ್ರಸಿದ್ಧ ವಾಗಿರುವ 'ಕಂದುಕಸ್ತುತಿ'ಯ ಹಾಗೂ ತಿಥಿನಿರ್ಣಯ –ಈ ಕೃತಿಗಳ ಉಲ್ಲೇಖ ಇದರಲ್ಲಿ ಬಂದಿಲ್ಲ. ಕೊನೆಯಲ್ಲಿ 'ಏತೇಷಾಂ ಪಾಠಮಾತ್ರೇಣ ಮಧ್ವೇಶಃ ಪ್ರೀಯತೇ ಹರಿಃ' –ಗ್ರಂಥ ಗಳ ಹೆಸರುಗಳನ್ನಷ್ಟೇ ಹೇಳಿದರೂ ಮಧ್ವೇಶ ಶ್ರೀಹರಿ ಪ್ರಸನ್ನನಾಗುವನೆಂದು ಫಲಶ್ರುತಿ ಯನ್ನು ಹೇಳಲಾಗಿದೆ.

*

# ಪ್ರಾಣಚಿಂತನ - ಸಮಾನಪಾದ



ನವವೃಂದಾವನದ ವೃಂದಾವನದಲ್ಲಿ
ಸನ್ನಿಹಿತರಾದ ಶ್ರೀ ವ್ಯಾಸತೀರ್ಥರಿಂದ
ಉಪನ್ಯಾಸನಾದ ಶ್ರೀ ವ್ಯಾಸತೀರ್ಥರ
ಮುಂಭಾಗದಲ್ಲಿರುವ ಪ್ರಾಣದೇವ.

# ಪ್ರಾಣಚಿಂತನ - ಸಮಾನಪಾದ

'ದಾಸಸಾಹಿತ್ಯತರಂಗ'



* * *

ದಾಸಸಾಹಿತ್ಯತರಂಗ

# ಶ್ರೀಪಾದರಾಜರ

# • 'ಮಧ್ವನಾಮ' •



ಮುಳುಬಾಗಿಲಿನ ಶ್ರೀ ಪಾದರಾಜರು ವೃಂದಾವನದಲ್ಲಿ ಸನ್ನಿಹಿತರಾಗಿ ತಾವು ಪ್ರತಿಷ್ಠಾಪಿಸಿದ ಘಂಟೆ ಮುಖ್ಯಪ್ರಾಣನನ್ನು 'ಮಧ್ವನಾಮ'ದ ಮೂಲಕ ಸ್ತುತಿಸುತ್ತಿರುವುದು.

## ಪಲ್ಲವಿಯ ಅರ್ಥಗಾಂಭೀರ್ಯ

ಜಯಜಯ[1] ಜಗತ್ತ್ರಾಣ ಜಗದೊಳಗೆ ಸುತ್ರಾಣ
ಅಖಿಲಗುಣಸದ್ಧಾಮ[2] ಮಧ್ವನಾಮ[3]

ಜಗತ್ತಿನ ತಾಯಿತಂದೆಯರಾದ ಲಕ್ಷ್ಮೀನಾರಾಯಣರನ್ನು ಹೊರತುಪಡಿಸಿದರೆ, ಬಳಿಕ ಸಮಗ್ರ ಜಗತ್ತಿನಲ್ಲಿ ಅತ್ಯಂತ ಬಲಶಾಲಿಗಳಾದ, ಜಗತ್ತಿಗೆ ಬಲಪ್ರದರಾದ, ಅಖಿಲಗುಣ ಸಂಪನ್ನನಾದ ಶ್ರೀಹರಿಗೆ ಶ್ರೇಷ್ಠನಿವಾಸರಾದ, ಶಾಸ್ತ್ರದಲ್ಲಿ ಮಧ್ವರೆಂದು ಪ್ರಸಿದ್ಧರಾದ ವರು; ಜೀವಗಣದಲ್ಲಿಯೇ ಸರ್ವೋತ್ಕೃಷ್ಟರೆಂದು ತಿಳಿಯಲ್ಪಡುವಂತಾಗಲಿ!

**ವಿವರಣೆ:** ಅಖಿಲಗುಣಸಂಪನ್ನನಾದ ಭಗವಂತನಿಗೆ ಶ್ರೇಷ್ಠ ಆಸರೆ ಆಗಿರುವುದರಿಂದಲೇ ಮಧ್ವಗುರುಗಳು ಜಗತ್ತಿನಲ್ಲೇ ಅತ್ಯಂತ ಬಲಶಾಲಿಗಳಾಗಿ ಮೆರೆಯುತ್ತಿರುವರು. ಹಾಗಿರು ವುದರಿಂದಲೇ ಶೇಷ, ಗರುಡಾದಿ ಸಮಸ್ತ ಜಗತ್ತಿಗೂ ತ್ರಾಣಪ್ರದರಾಗಿ ಅನುಗ್ರಹಿಸುತ್ತಿರು

---

1. ಸರ್ವದಾ ಜಯತೋ ವಿಷ್ಣೋರ್ಜಯಸ್ತಸ್ಯ ಪ್ರಕಾಶನಮ್ ।
........ ಜಯ ಪಶ್ಯ ಶೃಣುಷ್ವೇತಿ ತತ್ತತ್ಜ್ಞಾಪನಮೇವ ತು ॥
-ಎಂಬ ವಿಮಲಸಂಹಿತೆಯಲ್ಲಿ (ಭಾಗ.ತಾ.ನಿ. 10-94-12) ತಿಳಿಸಿರುವಂತೆ ಶ್ರೀಹರಿಯ ಬಗ್ಗೆ ಹೇಗೋ ಹಾಗೆ ವಾಯುದೇವನ ಬಗ್ಗೆಯೂ ಅವನ ಉತ್ಕರ್ಷರೂಪವಾದ ಜಯವನ್ನು ಮನವರಿಕೆಯಾಗುವಂತೆ ಬೆಳಗಿಸಿಕೊಡಲು ಅವನಲ್ಲೇ ಸಲ್ಲಿಸಲಾಗುವ ಪ್ರಾರ್ಥನೆ.

* ಜಯಜಯ -ಎಂದು ಎರಡು ಬಾರಿ ಕೇಳಿಕೊಳ್ಳುವುದರಿಂದ ಆ ಪ್ರಾರ್ಥನೆಯಲ್ಲಿ ಆದರ ವನ್ನು, ತಾತ್ಪರ್ಯವನ್ನು ವ್ಯಕ್ತಪಡಿಸಿದಂತಾಗುವುದು.

2. ಪ್ರಧಾನಂ ಧಾಮ ವಿಷ್ಣೋಸ್ತು ಪ್ರಾಣ ಏವ ಪ್ರಕೀರ್ತಿತಃ । – *ಅ.ಉ.ಭಾ. 1-41-1.*

3. ಇಲ್ಲಿ 'ನಾಮ' -ಎಂಬ ಶಬ್ದವು 'ಪ್ರಥಮೋ ಹನೂಮಾನ್ನಾಮ.....' -ಎಂಬ ಶ್ಲೋಕದಲ್ಲಿ ಇರುವಂತೆ ಪ್ರಸಿದ್ಧ ಎಂಬ ಅರ್ಥದಲ್ಲಿ ಪ್ರಯೋಗಿಸಲಾಗಿದೆ.

ವರೆಂದು ವಿಶೇಷಣಗಳಿಗೆ ಪರಸ್ಪರವಾಗಿ ಅನ್ವಯವನ್ನು ಹಚ್ಚಿಕೊಂಡಲ್ಲಿ ಅನುಸಂಧಾನ ವಿಶೇಷಕ್ಕೆ ಅನುಕೂಲವಾಗುವುದು.

- ಆಥರ್ವಣೋಪನಿಷತ್ತಿನಲ್ಲಿ (4-1-1) 'ಸ ವೇದೈತತ್ ಪರಮಂ ಬ್ರಹ್ಮಧಾಮ......' ಪರಮಾತ್ಮನನ್ನು ಅವನ ಗುಣಪೂರ್ಣತ್ವವನ್ನು ತಿಳಿಸುವ ಬ್ರಹ್ಮನಾಮದಿಂದಲೇ ಉಲ್ಲೇಖಿಸಿ, ಅಂತಹವನಿಗೆ ಶ್ರೇಷ್ಠ ಆಶ್ರಯ ಎಂದು ತಿಳಿಸಿರುವುದರಿಂದ, ಅಂತಹ ಬ್ರಹ್ಮನಾಮದ ಛಾಯಾನುವಾದದ ರೀತಿಯಲ್ಲಿ 'ಅಖಿಲಗುಣಸದ್ಧಾಮ' ಎನ್ನಲಾಗಿದೆ.

- 'ಸತ್' ಶಬ್ದಕ್ಕೆ 'ಉತ್ತಮ' –ಎಂಬ ಅರ್ಥ ಇರುವಂತೆ, ನಿರ್ದುಷ್ಟ ಎಂಬ ಅರ್ಥವೂ ಇರುವುದರಿಂದ ಪ್ರಾಣದೇವ ಉದ್ಗೀಥನಾಮಕ ಭಗವಂತನ ನಿರ್ದುಷ್ಟವಾದ ಪ್ರತಿಮೆ ಎಂಬ ಅಭಿಪ್ರಾಯದಲ್ಲೂ 'ಸದ್ಧಾಮ' ಎಂದು ಸ್ತುತಿಸಲ್ಪಟ್ಟಿದೆ. ಉಳಿದ ರುದ್ರಾದಿ ದೇವತೆಗಳನ್ನು ಉದ್ಗೀಥನಾಮಕ ಭಗವಂತನ ಉಪಾಸನೆಗಾಗಿ ಪ್ರತಿಮೆಯಾಗಿ ವಿನಿಯೋಗಿಸಿಕೊಂಡಾಗ ಅವರಲ್ಲಿ ಆಸುರೀಶಕ್ತಿಗಳ ಆಕ್ರಮಣ ನಡೆದುದರಿಂದ ಆ ಪ್ರತಿಮೆ ದುಷ್ಟ ಎನಿಸಿ, ಕೊನೆಗೆ ಮುಖ್ಯಪ್ರಾಣನನ್ನು ಪ್ರತಿಮೆಯನ್ನಾಗಿ ಇಟ್ಟುಕೊಂಡಾಗ ಅವನನ್ನು ಆಕ್ರಮಿಸಲು ಬಂದ ಆಸುರೀಶಕ್ತಿಗಳೇ ಪುಡಿಪುಡಿಯಾದ ಪ್ರಯುಕ್ತ 'ಆಖಣಾತ್ಮಸಮ'ನಾಗಿ ಮರೆದು ನಿರ್ದುಷ್ಟ ಪ್ರತಿಮೆ ಎಂದು ಉಪನಿಷತ್ತುಗಳಲ್ಲಿ ಕೊಂಡಾಡಲ್ಪಟ್ಟದ್ದು 'ಸದ್ಧಾಮ' –ಶಬ್ದದಿಂದ ಧ್ವನಿಸಲ್ಪಡುವುದು.

- **'ಅಖಿಲಗುಣಸದ್ಧಾಮ'** –ಎಂಬುದಾಗಿ ಪರಮಾತ್ಮನನ್ನು ಯಾವುದೇ ಹೆಸರಿನಿಂದ ಕರೆಯದೆ, ಬ್ರಹ್ಮಶಬ್ದಾರ್ಥವಾದ 'ಅಖಿಲಗುಣ'ವಿಶೇಷಣದಿಂದ ಕರೆದಿರುವುದರಿಂದ **'ಆಭಾಸಕೋಽಸ್ಯ ಪವನಃ.....'** –ಎಂದಿರುವಂತೆ ಭಗವಂತನ ಮುಖ್ಯಪ್ರತಿಬಿಂಬನಾಗಿರುವ ಇವನಲ್ಲಿ ಭಗವಂತನ ಹೆಚ್ಚಿನ ಗುಣಗಳು ಪ್ರತಿಬಿಂಬಿತವಾಗಿವೆ ಎಂದೂ ಸೂಚಿತವಾಗುವುದು. **'ಸನ್ನಿಧಾನಂ ತು ತತ್ ಪ್ರೋಕ್ತಂ ಸಾಮರ್ಥ್ಯವ್ಯಂಜನಂ ಹರೇಃ'** – ಎಂದು ಭವಿಷ್ಯತ್‌ಪುರಾಣ (ಭಾಗ.ತಾ.ನಿ.4-7-50) ತಿಳಿಸುತ್ತಿರುವಂತೆ ಭಗವಂತನು ಎಲ್ಲರಲ್ಲೂ ಇರುವನಾದರೂ ಯಾರಲ್ಲಿ ತನ್ನ ಸಾಮರ್ಥ್ಯವನ್ನು, ಗುಣಧರ್ಮವನ್ನು ವಿಶೇಷವಾಗಿ ಅಭಿವ್ಯಕ್ತಗೊಳಿಸುವನೋ ಅಂತಹವರಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವನೆಂದು ವ್ಯವಹರಿಸಲ್ಪಡುವ ಕ್ರಮಕ್ಕೆ ಅನುಗುಣವಾಗಿ ಮುಖ್ಯಪ್ರಾಣನಲ್ಲಿ ಭಗವಂತನು ತನ್ನ ಹೆಚ್ಚಿನ ಗುಣಗಳನ್ನು ಅಭಿವ್ಯಕ್ತಿಗೊಳಿಸುವ ಮೂಲಕ ಅಧಿಕಸನ್ನಿಧಾನವನ್ನು ಸ್ಥಾಪಿಸಿರುವುದರಿಂದಲೇ ಮುಖ್ಯಪ್ರಾಣನು ಅವನಿಗೆ ಮುಖ್ಯಪ್ರತಿಮೆ ಎನಿಸಿರುವುದು ತಾನೇ?

- ಜಗತ್ತ್ರಾಣ...... ಇತ್ಯಾದಿ ಮುಖ್ಯಪ್ರಾಣನ ಮೂಲರೂಪದ ಗುಣಗಳನ್ನು ಉಲ್ಲೇಖಿಸಿ, ಕೊನೆಯಲ್ಲಿ 'ಮಧ್ವನಾಮ' –ಎಂದು ಮುಖ್ಯಪ್ರಾಣನ ಮಧ್ವಾವತಾರದ ಉಲ್ಲೇಖ ನಡೆದಿದೆ ಎಂದರೆ, **'ಬಳಿತ್ಥಾ ತದ್ವಪುಷೇ ಧಾಯಿ.......'** ಎಂದು ಬಳಿತ್ಥಾಸೂಕ್ತದಲ್ಲೂ, **'ಬಟ್ ತದ್ದರ್ಶತಮಿತ್ಥವೇವ ನಿಹಿತಂ.......'** –ಎಂದು ಬಳಿತ್ಥಾಸೂಕ್ತದ ಛಾಯಾನುವಾದದಂತಿರುವ ಪ್ರಮಾಣವಚನದಲ್ಲೂ ಪ್ರತಿಪಾದಿಸಿರುವಂತೆ ಮುಖ್ಯಪ್ರಾಣನ

ಮೂಲರೂಪಕ್ಕೂ ಅವತಾರರೂಪಗಳಿಗೂ '**ನೇಹ ನಾನಾಸ್ತಿ ಕಿಂಚನ**' –ಭೇದವಿಲ್ಲ ಎಂದು ಸೂಚಿಸಲ್ಪಟ್ಟಂತಾಗುವುದು.

- ಮಹಾಭಾರತ4 (ಭಾಗ.ತಾ.ನಿ. 2-2-25) ಸಾರುತ್ತಿರುವಂತೆ ವಾಯುದೇವ ರುದ್ರಾದಿಗಳಿಗೆಲ್ಲ ಚೇಷ್ಟಕನಾಗಿರುವುದರಿಂದ 'ಪ್ರಾಣ' ಎಂದೂ, ಇನ್ನೊಬ್ಬರನ್ನು ಮಣಿಸುವ ಶಕ್ತಿಯನ್ನು ಹೊಂದಿರುವುದರಿಂದ 'ಓಜಃ' ಎಂದೂ, ಮತ್ತೊಬ್ಬರಿಂದ ಸೋಲದ ಸಾಮರ್ಥ್ಯವನ್ನು ಹೊಂದಿರುವುದರಿಂದ 'ಸಹಃ' ಎಂದೂ, ಸ್ವೇಚ್ಛಾನುಸಾರ ಮಾಡುವ ಸಾಮರ್ಥ್ಯವನ್ನು ಹೊಂದಿರುವುದರಿಂದ 'ಬಲ' ಎಂದೂ ಎಲ್ಲರನ್ನೂ ಧರಿಸಿರುವುದರಿಂದ 'ವಿಧೃತಿ' –ಎಂದೂ ಪ್ರತಿಪಾದ್ಯನಾಗಿರುವುದನ್ನು ಪರ್ಯಾಲೋಚಿಸಿ 'ಜಗದೊಳಗೆ ಸುತ್ರಾಣ' – ಯಾಕೆ ಎಂಬುದನ್ನು ಅನುಸಂಧಾನ ಮಾಡಬಹುದು.

- '**ಜಗದೊಳಗೆ ಸುತ್ರಾಣ ಅಖಿಲಗುಣಸದ್ಧಾಮ**' –ಈ ಎರಡು ವಿಶೇಷಣಗಳೊಳಗೆ ಪರಸ್ಪರವಾಗಿ ಪ್ರಯೋಜ್ಯ–ಪ್ರಯೋಜಕಭಾವ ಸಂಬಂಧವಿದೆ. ಅಂದರೆ, 'ಅಖಿಲಗುಣ ಸದ್ಧಾಮ'ನಾಗಿರುವುದರಿಂದಲೇ ಮುಖ್ಯಪ್ರಾಣ 'ಜಗದೊಳಗೆ ಸುತ್ರಾಣ ಎನಿಸಿರುವುದು. ವಾಯುಸ್ತುತಿಯ '**ತ್ರಿಷ್ವಪ್ಯೇವಾವತಾರೇಷು......**' –ಎಂಬ ಶ್ಲೋಕದಲ್ಲಿ (32 ) ಮುಖ್ಯಪ್ರಾಣ ತನ್ನ ಮೂರು ಅವತಾರಗಳಲ್ಲೂ 'ಆಖಣಾಶ್ಮಸಮ' ಆಗಿರುವುದನ್ನು ವರ್ಣಿಸಿ, ಅದಕ್ಕೆ ಪ್ರಯೋಜಕವಾದ '**ದೇವ ಕಿಂ ಚಿತ್ರಮತ್ರ ತ್ರಾತಾ ಯಸ್ಯ ತ್ರಿಧಾಮಾ......**' ತ್ರಿಧಾಮಾ ಎನಿಸಿರುವ ಭಗವಂತನು ನಿನಗೆ ವಿಶೇಷವಾಗಿ ರಕ್ಷಕನಾಗಿರುವುದರಿಂದ ಇದೇನೂ ನಿನ್ನ ವಿಷಯದಲ್ಲಿ ಅಚ್ಚರಿಯ ಸಂಗತಿ ಅಲ್ಲ –ಎಂದು ತಿಳಿಸಿರುವಂತೆ ಅಖಿಲಗುಣಸಂಪನ್ನನಾದ ಭಗವಂತನು ತನ್ನ ಮನೆಯಂತೆ ಮುಖ್ಯಪ್ರಾಣನಲ್ಲಿ ಸರ್ವದಾ ವಿಶೇಷವಾಗಿ ನೆಲೆಸಿದ್ದು ಅವನಿಗೆ ವಿಶೇಷವಾಗಿ ರಕ್ಷಕನಾಗಿರುವುದರಿಂದಲೇ ಅವನು 'ಜಗದೊಳಗೆ ಸುತ್ರಾಣ'ನಾಗಿರುವನೆಂದು ಸೂಚಿತವಾಗುವುದು.

* * *

---

4. ಸರ್ವಚೇಷ್ಟಯಿತೃತ್ವಾಚ್ಚ ಪ್ರಾಣೋಽಭಿಭವಶಕ್ತಿತಃ ।
ಓಜಸ್ತನಭಿಭಾವ್ಯತ್ವಾತ್ ಸಹಶ್ಚ ಸ್ವೇಚ್ಛಯಾ ಕೃತೇಃ ॥
ಬಲಂ ವಿಧಾರಕತ್ವಾಚ್ಚ ವಿಧೃತಿರ್ವಾಯುರುಚ್ಯತೇ ॥
*– ಮ.ಭಾರತ. (ಭಾಗ.ತಾ.ನಿ. 2-5-25).*

ಆರಂಭದ ನಾಲ್ಕು ಪದ್ಯಗಳಲ್ಲಿ ಮುಖ್ಯಪ್ರಾಣನ ಮೂಲ ರೂಪದ ಮಹಿಮೆಗಳನ್ನು ಪ್ರತಿಪಾದಿಸಲಾಗುವುದು: ·

**ಓವಿ ಧರಿಸಿರುವವನು:**

**ಆವ ಕಚ್ಛಪದಿಂದಲಂಡೋದಕದಿ**
**ಓವಿ ಧರಿಸಿದ ಶೇಷಮೂರುತಿಯನು**
**ಆವವನ ಬಲ ಪಿಡಿದು ಹರಿಯ ಸುರರ್ರೈದುವರೋ**
**ಆ ವಾಯು ನಮ್ಮ ಕುಲಗುರುರಾಯನು** ॥ ೧ ॥

**ಬ್ರಹ್ಮಾಂಡೋದಕದಲ್ಲಿ ಆವೆಯ ರೂಪದಲ್ಲಿ ಇದ್ದು ಆಮೆಯ ರೂಪದಿಂದ ಬ್ರಹ್ಮಾಂಡವನ್ನು ಧರಿಸಿರುವ ಶೇಷನನ್ನು ಉಪಚರಿಸಿ (ಓವಿ) ಧರಿಸಿರುವ ಯಾವ ವಾಯುದೇವನು ಇರುವನೋ, ಹಾಗೆಯೇ ಯಾರ ಬಲವನ್ನು ಆಶ್ರಯಿಸಿ ದೇವತೆಗಳು ಶ್ರೀಹರಿಯನ್ನು ಹೊಂದುವರೋ (ಐಯ್ದುವರೋ) ಅಂತಹ ವಾಯುದೇವನೇ ನಮ್ಮ ವೈಷ್ಣವಕುಲಕ್ಕೆ ಶ್ರೇಷ್ಠಗುರು ಎನಿಸಿರುವನು.**

**ವಿವರಣೆ:** ಬೃಹದಾರಣ್ಯಕೋಪನಿಷತ್ತಿನ (3-2-3) **'.....ಸ ಪ್ರಾಣಸ್ತ್ರೇಧಾ ವಿಹಿತಸ್ತಸ್ಯ ಪ್ರಾಚೀ ದಿಕ್ ಶಿರಃ.....'** ಇತ್ಯಾದಿ ಮಾತುಗಳಲ್ಲಿ ಅಸ್ಪಷ್ಟವಾಗಿ ಪ್ರಸ್ತುತವಾದುದನ್ನು ಶ್ರೀಮಧ್ವರು ತಮ್ಮ ಭಾಷ್ಯದಲ್ಲಿ ಪ್ರಭಂಜನ, ಅಧ್ಯಾತ್ಮ, ವೈಭವ ಹಾಗೂ ಪ್ರಕೃಷ್ಟ –ಎಂಬ ನಾಲ್ಕು ಪ್ರಮಾಣಗ್ರಂಥಗಳ ಮಾತುಗಳನ್ನು ಉಲ್ಲೇಖಿಸಿ ಸ್ಪಷ್ಟಪಡಿಸಿರುವ ಕೂರ್ಮ ರೂಪದಿಂದ ಶೇಷನಿಗೆ ಆಧಾರನಾಗಿ ಬ್ರಹ್ಮಾಂಡವನ್ನು ಹೊತ್ತಿರುವ ವಾಯುದೇವನ ಮಹಿಮೆ ಈ ಪದ್ಯದ ಪೂರ್ವಾರ್ಧದಲ್ಲಿ ಉಲ್ಲೇಖಿಸಲಾಗಿದೆ.

- 'ಓವಿ ಧರಿಸಿದ' –ಎಂಬ ಪದಗಳಿಂದಾಗಿ ವಾಯುದೇವನು ಧರಿಸಿರುವುದೆಂದರೆ ಜಡ ಮನೆ ಹೇಗೋ ಹಾಗೆ ಬರೇ ಹೊರಗೆ ಧಾರಕನಾಗಿ ಅಲ್ಲ; ಶೇಷನಿಗೆ ಬ್ರಹ್ಮಾಂಡದ ಧಾರಣೆಗೆ ಬೇಕಾದ ಸಾಮರ್ಥ್ಯಾದಿಗಳನ್ನು ನೀಡುವ ಮೂಲಕ ಒಳಗಿನ ರಕ್ಷಕ ನಾಗಿಯೂ ಅನುಗ್ರಹಿಸುತ್ತಿರುವನೆಂದು ಸೂಚಿತವಾಗುವುದು.
- ಬ್ರಹ್ಮಸೂತ್ರದ (4-3-5) ವೈದ್ಯುತಾಧಿಕರಣದಲ್ಲಿ ಹಾಗೂ ಕಾರ್ಯಾಧಿಕರಣದಲ್ಲಿ ತೀರ್ಮಾನಿಸಲ್ಪಟ್ಟಿರುವಂತೆ ವ್ಯಾಪ್ತದರ್ಶಿಗಳಾದ, ಅಪ್ರತೀಕಾಲಂಬನರಾದ ದೇವತೆ ಗಳನ್ನು ವಾಯುದೇವನು ನೇರವಾಗಿ ಪರಬ್ರಹ್ಮನಲ್ಲಿಗೆ ಕರೆದೊಯ್ಯುವನು. ಇದನ್ನು ಈ ಪದ್ಯದ ಉತ್ತರಾರ್ಧದಲ್ಲಿ ತಿಳಿಸಲಾಗಿದೆ.
- **'ಆತ್ಮನಿ ಗುರೌ ಚ ಬಹುವಚನಮ್'** – ಎಂಬ ಸಂಸ್ಕೃತಭಾಷಾನಿಯಮಕ್ಕನುಗುಣವಾಗಿ ಹಾಗೆಯೇ ಬರೇ ನನಗಷ್ಟೇ ಅಲ್ಲದೆ, ನನ್ನ ಶರೀರದಲ್ಲಿ ನನ್ನ ಜೊತೆಗೇ ಇರುವ ತತ್ತ್ವಾಭಿಮಾನಿದೇವತೆಗಳಿಗೂ ಮಧ್ವರು ಗುರುಗಳಾಗಿರುವರೆಂಬ ಅಭಿಪ್ರಾಯದಲ್ಲಿ 'ನನ್ನ ಕುಲಗುರುರಾಯ' ಎನ್ನದೆ 'ನಮ್ಮ ಕುಲಗುರುರಾಯನು' ಎನ್ನಲಾಗಿದೆ.

- ಕುಲ ಎಂದರೆ ಸಮೂಹ, ಗುಂಪು ಎಂಬ ಅರ್ಥವೂ ಇದೆ. '**.......ಬಾಂಧವಾಃ ವಿಷ್ಣು ಭಕ್ತಾಶ್ಚ.....**' –ಎಂದಿರುವಂತೆ, ವಿಷ್ಣುಭಕ್ತರಾಗಿರುವ ಮಾಧ್ವರೆಲ್ಲ ಬಂಧುಗಳೆಂದಿಟ್ಟು ಕೊಂಡು ಅಂತಹವರ ಗುಂಪನ್ನು 'ಕುಲ' ಎಂದು ಕರೆಯಲಾಗಿದೆ. 'ರಾಜನ್' ಶಬ್ದದ ತದ್ಭವ 'ರಾಯ' ಎಂಬ ಶಬ್ದವಾಗಿದ್ದು 'ಗುರುರಾಯ' ಎಂದರೆ, 'ಗುರುರಾಜ–ಗುರು ಶ್ರೇಷ್ಠ' –ಎಂಬ ಅಭಿಪ್ರಾಯ. ಶ್ರೀಪಾದರಾಜರ 'ಆ ವಾಯು ನಮ್ಮ ಕುಲಗುರು ರಾಯನು!' ಎಂದು ಅಭಿಮಾನಪೂರ್ವಕವಾದ ಉದ್ಗಾರ ಶ್ರೀವಾದಿರಾಜಸ್ವಾಮಿಗಳ '**ಆಚಾರ್ಯಃ ಪವನೋಽಸ್ಮಾಕಂ.......**' –ಎಂಬ ಮಾತನ್ನು ನೆನಪಿಸಿಕೊಡಬಲ್ಲುದು.

* * *

**ದೇಹದೊಳ–ಹೊರ ನಿಯಾಮಕನು:**

**ಆವವನು ದೇಹದೊಳಗಿರಲು ಹರಿ ತಾ ನೆಲೆಸಿಹನು**
**ಆವವನು ತೊಲಗೆ ಹರಿ ತಾ ತೊಲಗುವ**
**ಆವವನು ದೇಹದೊಳ ಹೊರ ನಿಯಾಮಕನು**
**ಆ ವಾಯು ನಮ್ಮ ಕುಲಗುರುರಾಯನು** ॥ ೨ ॥

**ಯಾರು ದೇಹದೊಳಗಿದ್ದರಷ್ಟೇ ಶ್ರೀಹರಿ ತಾನೂ ಆ ದೇಹದೊಳಗಿರುವನೋ, ಯಾರು ದೇಹದಿಂದ ಹೊರಟನೆಂದರೆ ಶ್ರೀಹರಿಯೂ ಆ ದೇಹದಿಂದ ಹೊರಡು ವನೋ, ಯಾರು ಪ್ರತಿಯೊಬ್ಬರ ದೇಹದ ಒಳಗೂ ಹೊರಗೂ ನಿಯಾಮಕನಾಗಿರು ವನೋ ಅಂತಹ ವಾಯುದೇವನೇ ವೈಷ್ಣವರಾದ ನಮಗೆಲ್ಲ ಶ್ರೇಷ್ಠ ಗುರು.**

**ವಿವರಣೆ:** ಪ್ರತಿಯೊಬ್ಬರ ಶರೀರದ ಹದಿನಾರು ಕಲೆಗಳನ್ನು ಪರಿಚಯಿಸ ಹೊರಟ ಷಟ್‌ಪ್ರಶ್ನೋಪನಿಷತ್ತು (5-1-1) ಮೊತ್ತಮೊದಲನೆಯದಾಗಿ ಪ್ರಾಣಕಲೆಯ ಉತ್ಪತ್ತಿ ಯನ್ನು ತಿಳಿಸುತ್ತ '**ಸ ಈಕ್ಷಾಂಚಕ್ರೇ ಕಸ್ಮಿನ್ನಹಂ......**' ಯಾರು ಶರೀರದಿಂದ ಹೊರಡಲು ನಾನು ಹೊರಡಬೇಕು; ಯಾರು ನೆಲೆಸಲು ನೆಲೆಸಬೇಕು –ಎಂದು ಯೋಚಿಸಿದ ಭಗ ವಂತನು ಹೀಗೆ ಪ್ರತಿಯೊಬ್ಬರ ಶರೀರವನ್ನು ತಾನು ಪ್ರವೇಶಿಸಲು ದ್ವಾರನನ್ನಾಗಿ ಪ್ರಾಣ ದೇವನನ್ನು ಸೃಷ್ಟಿಸಿದನೆಂದು ಪ್ರತಿಪಾದಿಸಿದೆ.

- ಭಾಗವತ ಪ್ರಸ್ತುತಪಡಿಸುವ ಶ್ರುತಿಗೀತೆಯಲ್ಲಿ (10-94-18) ಬಂದ 'ಪರಿಸರಪದ್ಧತಿ' –ಎಂಬ ಭಗವಂತನ ಹೆಸರನ್ನು ವ್ಯಾಖ್ಯಾನಿಸಲು ಶ್ರೀಮಧ್ವರು ಉದಾಹರಿಸಿರುವ ಹಿರಣ್ಯನಾಭಶ್ರುತಿ[5] ಹೀಗಿದೆ–

ಮುಖ್ಯಪ್ರಾಣನೊಬ್ಬನೇ ದೇವರನ್ನು ಅನುಸರಿಸಿ ಪ್ರವೇಶಿಸುವನು. ಉಳಿದ ದೇವತೆ ಗಳು ಮುಖ್ಯಪ್ರಾಣನನ್ನು ಅನುಸರಿಸಿ ಪ್ರವೇಶಿಸುವರೇ ಹೊರತು ದೇವರನ್ನಲ್ಲ. ಆದುದ

---

5. 'ಪ್ರಾಣ ಏವೈನಮನುಪ್ರವಿಶತಿ ಪ್ರಾಣಮಿತರಾ ದೇವತಾ ನ ಪ್ರಾಣಾದಪರಃ ಪರಮನು ಪ್ರವಿಶತಿ...... ತಸ್ಮಾದಾಹುಃ ಪ್ರಾಣಪದ್ಧತಿರಿತಿ''

ರಿಂದ ಮುಖ್ಯಪ್ರಾಣನನ್ನು , ಬಿಟ್ಟು ಇನ್ನಾರೂ ದೇವರನ್ನು ಅನುಸರಿಸಿ ಪ್ರವೇಶಿಸುವವರಿಲ್ಲ...... ಭಗವಂತನು ಈ ಕಾರಣಕ್ಕಾಗಿ 'ಪ್ರಾಣಪದ್ಧತಿ' ಎನಿಸುವನು.

ಹಿರಣ್ಯನಾಭಶ್ರುತಿಯ ಪ್ರಾಣಪದ್ಧತಿನಾಮದ ವ್ಯಾಖ್ಯಾನದ ಹಿನ್ನೆಲೆಯಲ್ಲಿ '**ಹರಿ ದೇಹದೊಳಗಿರಲು ಆವವನು ತಾ ನೆಲಸಿಹನು....**' –ಎಂಬುದಾಗಿ ಅನ್ವಯವನ್ನು ಹಚ್ಚಿಕೊಂಡು ಶ್ರೀಹರಿ ದೇಹದೊಳಗೆ ಪ್ರವೇಶಿಸಲು ತಾನೂ ಪ್ರವೇಶಿಸುವವನು ಎಂಬ ಅರ್ಥಾನುಸಂಧಾನವನ್ನೂ ತಂದುಕೊಳ್ಳಬಹುದಾಗಿದೆ.

● ಬೃಹದಾರಣ್ಯಕೋಪನಿಷತ್ತಿನಲ್ಲಿ (5-3-2) ವಾಯುದೇವನನ್ನು '**.......ತಸ್ಮಾದ್ ವಾಯುರೇವ ವ್ಯಷ್ಟಿರ್ವಾಯುರೇವ ಸಮಷ್ಟಿಃ........**' ಎಂಬುದಾಗಿ ವ್ಯಷ್ಟಿ ಹಾಗೂ ಸಮಷ್ಟಿ ಎಂದು ಕರೆಯಲಾಗಿದ್ದು ಅದಕ್ಕೆ ದೇವತೆಗಳೇ ಮುಂತಾದ ಎಂಟು ವರ್ಗದವರನ್ನೂ ಸುಪರ್ಣನೇ ಮುಂತಾದ ಎಂಟು ಸಂಪೂರ್ಣವ್ಯಕ್ತಿಗಳನ್ನೂ ತನ್ನ ವಶದಲ್ಲಿಟ್ಟುಕೊಂಡು ಪ್ರೇರಿಸುವವನು; ಉದ್ಧರಿಸುವವನು ಎಂದು ಬೃಹದ್ಭಾಷ್ಯದಲ್ಲಿ ಉದಾಹರಿಸಿರುವ ಪರಮಸಂಹಿತೆ ಅರ್ಥೈಸಿದ್ದರೆ, ಭಾಗವತತಾತ್ಪರ್ಯನಿರ್ಣಯದಲ್ಲಿ (11-11-43) ಉದಾಹರಿಸಿರುವ 'ಪ್ರಭಂಜನ'ವ್ರೂ ಹೀಗೆ ಅರ್ಥೈಸುತ್ತದೆ–

ರುದ್ರನೇ ಕೊನೆಯವನಾಗಿ ಉಳ್ಳ ತತ್ತ್ವಾಭಿಮಾನಿದೇವತೆಗಳ ಹಾಗೂ ಜೀವರ ಪ್ರತಿಯೊಂದು ದೇಹವನ್ನೂ ಒಳಗೆ ಪ್ರೇರಿಸುವುದರಿಂದ ವ್ಯಷ್ಟಿ ಎಂದೂ, ಹೊರಗೆ ಪ್ರೇರಿಸುವುದರಿಂದ ಸಮಷ್ಟಿ ಎಂದೂ ವಾಯು ಕರೆಯಲ್ಪಡುವನು.

ಹೀಗೆ 'ಪ್ರಭಂಜನ' ನೀಡುವ ವ್ಯಾಖ್ಯಾನದ ಹಿನ್ನೆಲೆಯಲ್ಲಿ 'ವ್ಯಷ್ಟಿ', 'ಸಮಷ್ಟಿ' ಎನಿಸುವ ವಾಯುದೇವನು ಎಲ್ಲರ ದೇಹವನ್ನು ಹೊರಗೂ ಒಳಗೂ ರಕ್ಷಿಸುತ್ತಿರುವನೆಂಬ ಪ್ರಮೇಯವನ್ನು 'ಆವವನು ದೇಹದೊಳ ಹೊರ ನಿಯಾಮಕನು' ಎಂದು ಸಾರಲಾಗಿದೆ.

ವಾಯುದೇವನು ಶರೀರಧಾರಣೆಗೆ ಹೊರಗಿನಿಂದ ಬೇಕಾಗುವ ಬೆಳಕು, ಬಿಸಿಲು, ಮಳೆ, ನೀರು, ಗಾಳಿ –ಮುಂತಾದುವನ್ನು ಸೂರ್ಯ ಇತ್ಯಾದಿ ದೇವತೆಗಳನ್ನು ಪ್ರೇರಿಸಿ ಒದಗಿಸಿಕೊಡುವ ಮೂಲಕ ಶರೀರವನ್ನು ಹೊರಗಿನಿಂದ ರಕ್ಷಿಸಿದರೆ, ಶರೀರಧಾರಣೆಗೆ ಒಳಗಿನಿಂದ ಆವಶ್ಯಕಗಳಾದ ಉಸಿರಾಟ, ಪಚನ, ಮಲಮೂತ್ರವಿಸರ್ಜನೆ, ರಕ್ತಸಂಚಾರ –ಮುಂತಾದುವನ್ನು ವಾಯುದೇವನು ತನ್ನ ಪ್ರಾಣ ಮುಂತಾದ ಐದು ರೂಪಗಳಿಂದ ನಿರ್ವಹಿಸುವ ಮೂಲಕ ಶರೀರದ ಒಳಗಿನ ರಕ್ಷಣೆಯನ್ನೂ ನಡೆಸುವನು.

## ದೇಹಕ್ಕೆ ದೈಹಿಕ ಮೆರುಗು:

ಕರಣಾಭಿಮಾನಿ ಸುರರು ದೇಹವ ಬಿಡಲು
ಕುರುಡ ಕಿವುಡ ಮೂಕನೆಂದೆನಿಸುವ
ಪರಮ ಮುಖ್ಯಪ್ರಾಣ ತೊಲಗಲಾ ದೇಹವನು
ಅರಿತು ಪೆಣನೆಂದು ಪೇಳುವರು ಬುಧಜನ ॥ ೩ ॥

---

6. 'ಪಂಚಭೂತಮನೋಬುದ್ಧಿರುದ್ರಾಣಾಂ ಪ್ರತಿದೇಹಕಮ್ ।
ಬಾಹ್ಯತಶ್ಚಾಪಿ ನೇತೃತ್ವಾದ್ ವಾಯುರ್ವ್ಯಷ್ಟಿಃ ಸಮಷ್ಟಿಕಃ ॥

ಚಕ್ಷುರಿಂದ್ರಿಯಕ್ಕೆ ಅಭಿಮಾನಿಯಾದ ಸೂರ್ಯನು ದೇಹವನ್ನು ತ್ಯಜಿಸಲು ಆ ದೇಹದ ವ್ಯಕ್ತಿ ಕುರುಡ ಎಂದೆನಿಸುವನಷ್ಟೇ. ಹಾಗೆಯೇ ಶ್ರೋತ್ರೇಂದ್ರಿಯಕ್ಕೆ ಅಭಿಮಾನಿಗಳಾದ ಮಿತ್ರ, ಯಮ, ವರುಣ, ಕುಬೇರ ಹಾಗೂ ಚಂದ್ರ -ಈ ಐದು ಮಂದಿಗಳೂ ಶರೀರವನ್ನು ಬಿಟ್ಟುಹೋದರೂ, ಆ ಶರೀರದ ವ್ಯಕ್ತಿ 'ಕಿವುಡ' ಎನಿಸುವನಷ್ಟೇ. ವಾಗಭಿಮಾನಿ ಅಗ್ನಿ ಶರೀರವನ್ನು ಬಿಟ್ಟುಹೋದನೆಂದರೆ ಆ ಶರೀರದ ವ್ಯಕ್ತಿ ಮೂಕ ಎಂದೆನಿಸುವನಷ್ಟೇ. ಶ್ರೇಷ್ಠನಾದ ಮುಖ್ಯಪ್ರಾಣನು ದೇಹವನ್ನು ತ್ಯಜಿಸಿ ಹೊರಟನೆಂದರೆ ವಿವೇಕಿಗಳು, ಪ್ರಾಣ ಹೊರಟುಹೋದನೋ ಇಲ್ಲವೋ-ಎಂದು ಮೂಗಿನ ರಂಧ್ರಗಳಿಗೆ ಹತ್ತಿ ಇಡುವುದೇ ಮುಂತಾದವುಗಳಿಂದ ಚೆನ್ನಾಗಿ ಪರೀಕ್ಷಿಸಿ (ಅರಿತು) ಆ ಶರೀರದ ವ್ಯಕ್ತಿಯನ್ನು ಪೆಣನೆಂದು, ಹೆಣವೆಂದು ಹೇಳುವರು!

**ವಿವರಣೆ:** ಜೀವರ ದೇಹಗಳ ಧಾರಣೆಯ ವಿಷಯದಲ್ಲಿ ರುದ್ರನೇ ಮುಂತಾದ ಇಂದ್ರಿಯಾಭಿಮಾನಿಗಳಲ್ಲಿ ಪರಸ್ಪರವಾಗಿ ನಡೆದ ಸ್ಪರ್ಧೆಯ ಪ್ರಸ್ತಾವ ಐತರೇಯೋಪನಿಷತ್ (1-4-3....9) ಬೃಹದಾರಣ್ಯಕೋಪನಿಷತ್ (1-1.....14) ಛಾಂದೋಗ್ಯೋಪನಿಷತ್ (1-1......11) ಹಾಗೂ ಷಟ್‌ಪ್ರಶ್ನೋಪನಿಷತ್ತುಗಳಲ್ಲಿ (2-1-3.....17) ಬಂದಿದೆ.

ಈ ಸ್ಪರ್ಧೆಯ ಉದ್ದೇಶವನ್ನೂ, ಸ್ಪರ್ಧೆ ನಡೆದ ಶರೀರವನ್ನೂ ಶ್ರೀ ಮಧ್ವರು ಮಹಾಭಾರತತಾತ್ಪರ್ಯನಿರ್ಣಯದಲ್ಲಿ[7] (3-23, 24) ಸ್ಪಷ್ಟಪಡಿಸಿರುವರು-

ಅಪರೋಕ್ಷಜ್ಞಾನಿಗಳಾದ ದೇವತೆಗಳಿಗೆ ತಮಗಿಂತೆಲ್ಲ ವಾಯುದೇವನೇ ಶ್ರೇಷ್ಠ ಎಂದು ತಿಳಿದೇ ಇದೆ. ಆದರೂ ಲೋಕದ ಜನರ ನಿರ್ಣಯಕ್ಕಾಗಿ ದೇಹದ ಧಾರಣೆಯ ವಿಷಯದಲ್ಲಿ ಸ್ಪರ್ಧೆಯನ್ನು ಅಳವಡಿಸಿಕೊಂಡಿದ್ದರಷ್ಟೇ. ಚತುರ್ಮುಖನ ದೇಹದಲ್ಲಿಯೇ ಈ ಸ್ಪರ್ಧೆಯನ್ನು ನಡೆಸಿದ್ದು. ಒಬ್ಬೊಬ್ಬನೇ ಇಂದ್ರಿಯಾಭಿಮಾನಿ ದೇಹ ಬಿಟ್ಟು ತೊಲಗಲು ದೇಹ ಆಯಾ ಇಂದ್ರಿಯಶಕ್ತಿಯನ್ನಷ್ಟೇ ಕಳಕೊಂಡಿತ್ತು, ಹೊರತು ಬಿದ್ದುಹೋಗಿಲ್ಲ. ಆದರೆ ವಾಯುದೇವ ಹೊರಡಲು ದೇಹ ಪತಿತವಾಗುವುದು; ವಾಯುದೇವ ಪ್ರವೇಶಿಸಲು ದೇಹವು ಕ್ರಿಯಾಶೀಲವಾಗುವುದು.

ವಾಯ್ವಾದಿಗಳ ಬಲಪರೀಕ್ಷೆಗೆ ಸೌಕರ್ಯವನ್ನು ಒದಗಿಸಿಕೊಡುವುದಕ್ಕಾಗಿ ಆ ಸ್ಪರ್ಧೆ ನಡೆದಾಗ ಪರಮಾತ್ಮ ಹಾಗೂ ಚತುರ್ಮುಖ ಆ ದೇಹದ ವಿಷಯದಲ್ಲಿ ಉದಾಸೀನರಾಗಿದ್ದರೆಂದು ಐತರೇಯ ಭಾಷ್ಯದಲ್ಲಿ (1-4-8) ತಿಳಿಸಲಾಗಿದೆ[8]-

ಉಪನಿಷತ್ತುಗಳಲ್ಲಿ ವ್ಯಾಪಕವಾಗಿ ಬಂದಿರುವ ಈ ಪ್ರಮೇಯವನ್ನೇ ಈ ಪದ್ಯದಲ್ಲಿ ತಿಳಿಸಲಾಗಿದೆ.

---

7. ........ತೇ ಜಾನಮಾನಾ ಅಪಿ ನಿರ್ಣಯಾಯ । ನಿಃಸೃತ್ಯ ಕಾಯಾದುತ ಪದ್ಮಯೋನೇಃ । ಸಂಪ್ರಾವಿಶ್ಯನ್ ಕ್ರಮತೋ ಮಾರುತಾಂತಾಃ । ಪಪಾತ ವಾಯೋರ್ಗಮನಾಚ್ಛರೀರಂ ತಸ್ಯೈವ ಚಾವೇಶತ ಉತ್ಥಿತಂ ಪುನಃ ॥

8. ಉದಾಸೀನವದಾಸ್ತಾಂತೌ ಕೇಶವಶ್ಚಾಬ್ಜಸಂಭವಃ ।
ತೇಷಾಂ ಬಲಪರೀಕ್ಷಾರ್ಥಂ ವಾಯ್ವಾದೀನಾಂ ಸಮಸ್ತಶಃ ॥

- ಪ್ರೇರಣೆ ಮಾಡುವ ಇತರ ಇಂದ್ರಿಯಾಭಿಮಾನಿಗಳೂ 'ಪ್ರಾಣ' ಎನಿಸುವರು. ಆದುದ ರಿಂದ ಅವರೆಲ್ಲರಿಗಿರುವ ವಾಯುದೇವನಲ್ಲಿರುವ ಉತ್ತಮತ್ವವನ್ನು ಸೂಚಿಸಲು 'ಮುಖ್ಯಪ್ರಾಣ' ಎನ್ನಲಾಗುವುದು. 'ಮುಖ್ಯಪ್ರಾಣ' ಎನ್ನುವುದು ಬರೇ ಸಾಂಕೇತಿಕ ಸಂಜ್ಞೆ ಎನಿಸದೆ ಅನ್ವರ್ಥಕನಾಮವೇ ಆಗಿದೆ ಎಂದು ಸೂಚಿಸಿಕೊಡಲು ವಾಯು ದೇವನಲ್ಲಿಯ ಶ್ರೇಷ್ಠತ್ವವನ್ನು 'ಪರಮ ಮುಖ್ಯಪ್ರಾಣ......' –ಎಂದು ಪರಮವಿಶೇಷಣ ದಿಂದ ಸೂಚಿಸಲಾಗಿದೆ. 'ಶ್ರೇಷ್ಠಶ್ಚ' (2-4-9) ಎಂಬ ಬ್ರಹ್ಮಸೂತ್ರದಲ್ಲಿ ಮುಖ್ಯಪ್ರಾಣ ನನ್ನು ಶ್ರೇಷ್ಠ ಎಂದೇ ಉಲ್ಲೇಖಿಸಿ ಅವನ ಪಾರಮ್ಯವನ್ನು ಸಾರಲಾಗಿದೆ. ಆದರೆ ಇದು ಇತರ ಇಂದ್ರಿಯಾಭಿಮಾನಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡಾಗಷ್ಟೇ. ದೇವರ ಎದುರು ಅವನು ಮಧ್ಯಮಪ್ರಾಣ ಅಷ್ಟೇ. ಆಗ ಉತ್ತಮ ಪ್ರಾಣನಾಗಿದ್ದು, ಮುಖ್ಯಪ್ರಾಣ ಎನಿಸುವವನು ಶ್ರೀಹರಿಯೇ ಎಂದು ಬ್ರಹ್ಮಾಂಡ (ಐ.ಉ.ಭಾ.2-1-2-12) ನಿರ್ಣಯಿ ಸಿದೆ– '**ಮಧ್ಯಮೋ ವಾಯುರೇವೈಕ ಉತ್ತಮಃ ಕೇವಲೋ ಹರಿಃ**'.

## ಸರ್ವನಿಯಾಮಕತ್ವೇನ ಹರಿಯ ಚಿಂತನೆ:

**ಸುರರೊಳಗೆ ನರರೊಳಗೆ ಸರ್ವಭೂತಗಳೊಳಗೆ**
**ಪರತರನೆನಿಸಿ ನಿಯಾಮಿಸಿ ನೆಲೆಸಿಹ**
**ಹರಿಯನಲ್ಲದೆ ಬಗೆಯ ಅನ್ಯರನು ಲೋಕದೊಳು**
**ಗುರುಕುಲತಿಲಕ ಮುಖ್ಯಪವಮಾನನು** ॥ ೪ ॥

**ಶ್ರೀಹರಿ ದೇವತೆಗಳೊಳಗೂ, ಮನುಷ್ಯರಲ್ಲೂ ಸಕಲಭೂತಗಳೊಳಗೂ ನೆಲೆಸಿರು ವನು. ಹೇಗೆ ನೆಲೆಸಿರುವನು? 'ಪರತರ'ನೆನಿಸಿಯೇ ನೆಲೆಸಿರುವನು. ಯಾಕಾಗಿ ನೆಲೆಸಿರು ವನು? 'ನಿಯಾಮಿಸಿ' ಆಯಾ ವ್ಯಕ್ತಿಗಳನ್ನು ಅವರವರ ವ್ಯಕ್ತಿತ್ವಕ್ಕೆ ಅನುಗುಣವಾಗಿ ನಿಯಮಿಸುವುದಕ್ಕಾಗಿ.**

ಹೀಗೆ ಎಲ್ಲರಲ್ಲಿ ನಿಯಾಮಕನಾಗಿ ನೆಲೆಸಿರುವ ಶ್ರೀಹರಿಯನ್ನೇ ಗುರುಪವಮಾನನು ಬಗೆಯುತ್ತಿರುವನು; ಚಿಂತಿಸುತ್ತಿರುವನು. ಇಂತಹ ಹರಿಯನ್ನು ಬಿಟ್ಟು ಇನ್ಯಾರನ್ನೂ ಬಗೆಯ, ಅಂದರೆ ಚಿಂತಿಸನು.

**ವಿವರಣೆ:** '**...... ತದಲಂ ಬಹುಲೋಕವಿಚಿಂತನಯಾ ಪ್ರವಣಂ ಕುರು ಮಾನಸಮೀಶ ಪದೇ**' –ಲೋಕಚಿಂತನೆಯನ್ನು ನಿಲ್ಲಿಸಿ, ಲೋಕೇಶನ ಚಿಂತನೆಯಲ್ಲಿ ಚಿತ್ತವನ್ನು ಮುಳುಗಿ ಸಲು ಕರೆ ನೀಡಿರುವ ಪವಮಾನ ತಾನು ಹಾಗೆಯೇ ನಡೆದುಕೊಳ್ಳುತ್ತಿರುವನೆಂದು ಈ ಪದ್ಯದಲ್ಲಿ ಸಾರಲಾಗಿದೆ.

- ಶ್ರೀಹರಿ ಉತ್ತಮಜೀವರೆನಿಸಿರುವ ದೇವತೆಗಳಲ್ಲಷ್ಟೇ ಅಲ್ಲದೆ, ಮಧ್ಯಮಜೀವರಾದ ಮನುಷ್ಯರಲ್ಲೂ, ಕನಿಷ್ಠಜೀವರಾದ ಪಶುಪಕ್ಷಿಗಳಲ್ಲೂ, ಜಡಗಳಲ್ಲೂ –ಹೀಗೆ ಪ್ರತಿ ಯೊಂದು ಜಡಚೇತನರಲ್ಲೂ ನೆಲೆಸಿರುವನು.

- ಉತ್ತಮಜೀವರಲ್ಲಿ ಹೇಗೋ ಹಾಗೆ ಮಧ್ಯಮಜೀವ ಹಾಗೂ ಕನಿಷ್ಠಜೀವರಲ್ಲೂ, ಜಡಗಳಲ್ಲೂ ಇರುವನಾದರೂ, **'ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ'** –ಇತ್ಯಾದಿ ಮಾತುಗಳಲ್ಲಿ ತಿಳಿಸಿರುವಂತೆ ತಾನು ನೆಲೆಸಿರುವ ಅಧಿಷ್ಠಾನಗಳ ಲೋಪ ದೋಷಗಳ ಲೇಪಕ್ಕೆ ಒಳಗಾಗದೆ ಎಲ್ಲೆಡೆ ಶ್ರೀಹರಿಪರತರನಾಗಿಯೇ ಇರುವನು.

- ಲಕ್ಷ್ಮೀದೇವಿ ಪರಾ ಎನಿಸಿದರೆ, ಅಂತಹ ಲಕ್ಷ್ಮಿ ಹಾಗೂ ಪರಮಾತ್ಮ ಇವರ ಮಧ್ಯದಲ್ಲಿ ಇನ್ಯಾರೂ ಇಲ್ಲದಿರುವುದರಿಂದ ಪರಮಾತ್ಮನು ಪರತರನು. ಸರ್ವಶ್ರೇಷ್ಠ ಎಂಬ ಅರ್ಥದ ತಮಪ್ ಪ್ರತ್ಯಯದ ಅರ್ಥವನ್ನೇ ಇಲ್ಲಿಯ ತರಪ್‌ಪ್ರತ್ಯಯ ತಿಳಿಸುವುದು ಎಂದು ಗೀತಾತಾತ್ಪರ್ಯದ9 ಬೆಳಕಿನಡಿ ಬೆಳಗಿರುವ **'ಮತ್ತಃ ಪರತರಂ ನಾನ್ಯತ್......'** ಎಂಬ ಗೀತಾಚಾರ್ಯನ (7-7) ಸಂದೇಶದ ಛಾಪಿನಲ್ಲಿ ಹೊರಟ ಮಾತು– **'ಪರತರ ನೆನಿಸಿ ನಿಯಾಮಿಸಿ......'**

- ಈಶಾವಾಸ್ಯೋಪನಿಷತ್ತಿನ **'ಈಶಾವಾಸ್ಯಮಿದಂ ಸರ್ವಂ..........'** –ಎಲ್ಲವೂ ಈಶನ ಆವಾಸಕ್ಕೆ ಯೋಗ್ಯವಾದುದೆಂಬ ಸಂದೇಶಕ್ಕೆ–

ತಾನಾಗಿಯೇ ಪ್ರವೃತ್ತಿ ನಡೆಸಲು ಅಶಕ್ತವಾಗಿರುವ ಈ ಎಲ್ಲ ಜಗತ್ತಿನ ಪ್ರವೃತ್ತಿಗಾಗಿ ಈಶನು ಪ್ರೇರಕನಾಗಿ ಎಲ್ಲದರಲ್ಲಿ ನೆಲೆಸಿರುವನೆಂದು 'ಬ್ರಹ್ಮಾಂಡ'10 ನೀಡಿರುವ ಸ್ಪಷ್ಟೀಕರಣದ ಹಿನ್ನೆಲೆಯಲ್ಲಿ **'......ನಿಯಾಮಿಸಿ ನೆಲೆಸಿಹ'** –ಎಂಬುದಾಗಿ ಎಲ್ಲರಲ್ಲಿ ನೆಲೆಸಿರುವ ಉದ್ದೇಶವನ್ನೂ ತಿಳಿಸಲಾಗಿದೆ.

- **'ಪರಿವಾರತಯಾ ಗ್ರಾಹ್ಯಾಃ ಅಪಿ ಹೇಯಾ ಪ್ರಧಾನತಃ'** (ಅನುವ್ಯಾಖ್ಯಾನ 1-1-134) –ಎಂದು ನೀಡಲಾದ ಸಂದೇಶದಂತೆ ಶ್ರೀಮಧ್ವರು ಇತರ ದೇವತೆಗಳೇ ಮುಂತಾದ ವರನ್ನೆಲ್ಲ ಭಗವಂತನ ಪರಿಚಾರಕರಾಗಿ, ಭಕ್ತರಾಗಿ ಚಿಂತಿಸುವರೇ ಹೊರತು ಭಗ ವಂತನ ನಂಟಿಗೆ ಒಳಗಾಗದಂತೆ ಯಾವುದೇ ವ್ಯಕ್ತಿಯನ್ನಾಗಲೀ, ವಸ್ತುವನ್ನಾಗಲೀ ಚಿಂತಿಸುವುದೇ ಇಲ್ಲ –ಎಂಬ ಅಭಿಪ್ರಾಯದಲ್ಲಿ 'ಹರಿಯನಲ್ಲದೆ ಬಗೆಯೆ ಅನ್ಯರನು ಲೋಕದೊಳು' –ಎನ್ನಲಾಗಿದೆ.

- ಕೆಲವರು 'ಸುರರೊಳು...... ನೆಲಸಿಹ' –ಎಂಬ ಪೂರ್ವಾರ್ಧವನ್ನು ಪವಮಾನನ ಪರವಾಗಿ ಅನ್ವಯಿಸಿ, ದೇವತೆಗಳಲ್ಲೆಲ್ಲ ನಿಯಾಮಕರಾಗಿ ಇರುವವರು ಪವಮಾನ –ಎಂದು ಅರ್ಥೈಸಿಕೊಂಡಂತೆ ಕಾಣುವುದು.

ಆದರೆ ಹೀಗೆ ಅನ್ವಯಿಸಿಕೊಂಡರೆ 'ಪರತರನೆನಿಸಿ' ಎಂದು ಪವಮಾನನಲ್ಲಿ ಸ್ವರಸ ವಾಗಿ ಹೊಂದಲಾರದು. ಅಲ್ಲದೆ, ಪೂರ್ವಾರ್ಧದಲ್ಲಿ ಪವಮಾನನು ಸುರಾದಿಗಳಲ್ಲಿ

---

9. '.........ವಿಷ್ಣೋಃ ಪರತರೋ ಮತಃ ।
ಅಭಾವಾದಂತರಾನ್ಯಸ್ಯ ತ್ವಿಹೈಕಾರ್ಥೌ ತರಪ್ತಮೌ ॥'

10. 'ಸ್ವತಃ ಪ್ರವೃತ್ತ್ಯಶಕ್ತತ್ವಾದೀಶಾವಾಸ್ಯಮಿದಂ ಜಗತ್ । ಪ್ರವೃತ್ತಯೇ........'
*–(ಬ್ರಹ್ಮಾಂಡ, (ಈ.ಉ.ಭಾ.)*

ನಿಯಾಮಕನಾಗಿ ನೆಲೆಸಿರುವುದನ್ನು ಹೇಳಿ, ಮುಂದಿನ ಮಾತಿನಲ್ಲಿ ಹರಿಯನಲ್ಲದೆ ಅನ್ಯರನು ಬಗೆಯದಿರುವಂತಹ ವಿಚಾರವನ್ನು ಸ್ವರಸವಾದ ಸಂಬಂಧ ಇಲ್ಲದೆಯೇ ಹೇಳಿದಂತಾಗುವುದು.

ಆದುದರಿಂದ ಪೂರ್ವಾರ್ಧದ 'ಸುರಾದಿಗಳಲ್ಲಿ ನಿಯಾಮಕನಾಗಿ ನೆಲಸಿಹ' –ಎಂಬ ಮಾತಿಗೆ ಹರಿಗೆ ಅನ್ವಯ ಹಚ್ಚಿ ಅರ್ಥೈಸುವುದೇ ಸೂಕ್ತ.

- ಅಥವಾ 'ಸುರರೊಳಗೆ.....ನೆಲಸಿಹ' ಎಂಬುದನ್ನೂ, 'ಹರಿಯನಲ್ಲದೆ ಬಗೆಯ ಅನ್ಯರನು ಲೋಕದೊಳು' –ಎಂಬುದನ್ನೂ ಪವಮಾನನಿಗೇ ಕೊಟ್ಟ ಎರಡು ವಿಶೇಷಣಗಳೆಂದಿಟ್ಟುಕೊಂಡೂ ಅರ್ಥೈಸಬಹುದಾಗಿದೆ.

ಬೃಹದಾರಣ್ಯಕೋಪನಿಷತ್ತಿನಲ್ಲಿ (5-3-2) 'ತಸ್ಮಾದ್ ವಾಯುರೇವ ವ್ಯಷ್ಟಿಃ........' –ಎಂಬ ವಾಯುವಿಗೆ ನೀಡಲಾದ 'ವ್ಯಷ್ಟಿ' ಸಂಜ್ಞೆಯನ್ನು ವಿವರಿಸುವ 'ಪರಮ ಸಂಹಿತೆ'ಯ[11] ದೇವತೆಗಳೇ ಮುಂತಾದ ಎಂಟು ಪಂಗಡದವರನ್ನು ಪ್ರೇರಿಸುವವನೆಂದು ನೀಡಿರುವ ಸಂದೇಶದ ಛಾಯಾನುವಾದ ಇಲ್ಲಿ ನಡೆದಿದೆ –ಎಂದು ಭಾವಿಸಬಹುದಾಗಿದೆ.

ರುದ್ರಾದಿ ದೇವತೆಗಳು ಪರರೆನಿಸಿದರೆ, ಅವರಿಗಿಂತಲೂ ಉತ್ತಮನಾದ ಪವಮಾನ ಪರತರ. ಶ್ರೀಹರಿ ಪರತಮ. ಲಕ್ಷ್ಮೀದೇವಿಯನ್ನು ಈಶಕೋಟಿಯಲ್ಲಿ ಸೇರಿಸಿ ಪ್ರತ್ಯೇಕವಾಗಿ ಪರಿಗಣಿಸಿಲ್ಲ. ಹೀಗೆ ಪವಮಾನನ ಸುರಾದಿಗಳಲ್ಲಿ ಪರತರನೆನಿಸಿ ಇರುವನು.

ಹೀಗೆ ಸುರಾದಿಗಳಲ್ಲಿ ನಿಯಾಮಕನಾಗಿ ಇದ್ದು, ನಿಯಮನವನ್ನೂ ಶ್ರೀಹರಿ ತನಗೆ ವಹಿಸಿಕೊಟ್ಟ ಸೇವೆ ಎಂಬ ಅನುಸಂಧಾನದಿಂದ ನಡೆಸುವನೆಂಬ ಸೂಚನೆ ದೊರಕುವಂತೆ, ಮುಂದಿನ 'ಹರಿಯನಲ್ಲದೆ ಬಗೆಯ ಅನ್ಯರನು ಲೋಕದೊಳು' –ಎಂಬ ಮಾತು ಹೊರಟಿದೆ –ಎಂದು ಭಾವಿಸಬಹುದಾಗಿದೆ.

* * *

11. 'ದೇವಾನ್ಋಷೀನ್ ಪಿತೄನ್ ಯಕ್ಷಾನ್ ಗಂಧರ್ವಾನ್ ಮಾನುಷೋರಗಾನ್ ಅಸುರಾಂಶ್ಚ ವಶೇ ನಿತ್ಯಂ ನಯತ್ಯಮಿತಪೌರುಷಃ ।'

ಮುಂದಿನ ಏಳು ಪದ್ಯಗಳಲ್ಲಿ ಆಂಜನೇಯನ ಮಹಿಮೆಗಳನ್ನು ತಿಳಿಸ ಲಾಗುವುದು–

**ರಘುಪತಿಯ ಸೇವೆ – ತರಣಿಬಿಂಬದ ಲಂಘನೆ:**

**ತ್ರೇತೆಯಲಿ ರಘುಪತಿಯ ಸೇವೆ ಮಾಡುವೆನೆಂದು**
**ವಾತಸುತ ಹನುಮಂತನೆಂದೆನಿಸಿದ**
**ಪೋತಭಾವದಿ ತರಣಿಬಿಂಬಕ್ಕೆ ಲಂಘಿಸಿದ**
**ಈತಗೆಣೆ ಯಾರು ಮೂಲೋಕದೊಳಗೆ ॥ ೫ ॥**

**ತ್ರೇತಾಯುಗದಲ್ಲಿ ಶ್ರೀರಾಮಚಂದ್ರನ ಸೇವೆ ಮಾಡುವುದಕ್ಕಾಗಿ ಹನೂಮಂತನಾಗಿ ಅವತರಿಸಿದ ವಾಯುಸುತನು ತನ್ನ ಶೈಶವದಲ್ಲಿ (ಪೋತಭಾವದಿ- ಶಿಶುಧರ್ಮದಲ್ಲಿ) ಸೂರ್ಯಮಂಡಲಕ್ಕೆ ಜಿಗಿದಿರುವನು (ತರಣಿಬಿಂಬಕ್ಕೆ ಲಂಘಿಸಿದ) -ಇಂತಹ ಹನುಮಂತನಿಗೆ ಮೂರು ಲೋಕಗಳಲ್ಲೂ ಯಾರೂ ಸಮಾನರು ಇರಲಾರರು (ಎಣೆ ಯಾರು!)**

**ವಿವರಣೆ:** ಕೇಸರಿಯ ಪತ್ನಿ ಅಂಜನಾದೇವಿಯಲ್ಲಿ ವಾಯುದೇವನಿಂದ ಹನೂಮಂತನ ಜನನದ ಹಿನ್ನೆಲೆಯಾಗಿ ವಾಲ್ಮೀಕಿರಾಮಾಯಣದಲ್ಲಿ (ಕಿಷ್ಕಿಂಧಾ 66-14) ಅಂಜನಾ ದೇವಿಯ ಸೌಂದರ್ಯಕ್ಕೆ ಮರುಳಾಗಿ (ಕಾಮಮೋಹಿತಃ) ವಾಯುದೇವ ಆಕೆಯಲ್ಲಿ ಹನೂ ಮಂತನನ್ನು ಹುಟ್ಟಿಸಿದನೆಂದು ನಿರೂಪಿತವಾಗಿದೆ.

ಶ್ರೀಮಧ್ವರು ಮಹಾಭಾರತತಾತ್ಪರ್ಯನಿರ್ಣಯದಲ್ಲಿ (3-36, 37) ಸ್ವತಂತ್ರನಾದ ಭಗವಂತನ ಇಚ್ಚೆಗನುಗುಣವಾಗಿ, ಸ್ವೇಚ್ಛಾನುಸಾರವಾಗಿ ಅವತರಿಸುವ ಪ್ರಭಂಜನನು ಕೇಸರಿಯ ಪತ್ನಿ ಅಂಜನೆಯಲ್ಲಿ ಹನೂಮಾನ್ ಎನಿಸಿ ಪ್ರಾದುರ್ಭವಿಸಿದನು –ಎಂದು ನಿರ್ಣಯಿಸುವ[12] ಮೂಲಕ ವಾಯುದೇವ ಅಂಜನಾದೇವಿಯನ್ನು ಬರೇ ಸ್ಪರ್ಶಿಸಿ ಹನೂಮಂತನಾಗಿ ಅವತರಿಸಿರುವಲ್ಲಿ ಭಗವದಿಚ್ಛೆ ಹಾಗೂ ತನ್ನ ಇಚ್ಛೆ ಕಾರಣವೇ ಹೊರತು ಕಾಮ ಅಲ್ಲ ಸ್ಪಷ್ಟಪಡಿಸಿದಂತಾಗಿದೆ.

ಇದನ್ನೇ 'ರಘುಪತಿಯ ಸೇವೆ ಮಾಡುವೆನೆಂದು ವಾತಸುತ ಹನುಮಂತನೆನಿಸಿದ' –ಎಂಬ ಮಾತು ಧ್ವನಿಸುವುದು.

- ಅಂತೆಯೇ ಪ್ರಭಂಜನನೇ ಹನುಮಂತನಾಗಿ ಕಾಣಿಸಿಕೊಂಡ ಎಂಬ ನಿರ್ಣಯದ ಮಾತಿನಿಂದ ಹನುಮಂತ ವಾತಸುತ ಎನಿಸಿರುವನಾದರೂ ವಾಯುದೇವ ಹಾಗೂ ಹನುಮಂತ ಇವರೊಳಗೆ ಲೋಕದಲ್ಲಿ ಇರುವ ಪಿತೃ-ಪುತ್ರಸಂಬಂಧದಂತೆ ಅಲ್ಲ; ಬದಲಾಗಿ ವಾಯುದೇವನೇ ಹನೂಮಂತನಾಗಿ ಕಾಣಿಸಿಕೊಂಡದ್ದು –ಎಂದು ಸೂಚಿತ ವಾಗಿದ್ದು, ಈ ಪ್ರಮೇಯವೂ 'ವಾತಸುತ ಹನುಮಂತನೆನಿಸಿದ' –ಮಾತಿನಿಂದ

12. '........ನಾಮ್ನಾ ಹನೂಮಾನ್ ಪ್ರಭಂಜನಃ ।
ಸ್ವಸಂಭವಃ ಕೇಸರಿಣೋ ಗೃಹೇ ಪ್ರಭುರ್ಬಭೂವ...... ॥'

ಧ್ವನಿಸಲ್ಪಟ್ಟಿದೆ. ವಾಯುದೇವನೇ ವಾತಸುತ ಎನಿಸಿದ; ಹನುಮಂತನೆನಿಸಿದ –ಎಂಬ ವಾಕ್ಯಯೋಜನೆಯಿಂದ ಈ ಆಶಯ ಧ್ವನಿಸಬಲ್ಲದು.

- **'ಜ್ಞಾನೇ ವಿರಾಗೇ.......ನಾನ್ಯೋ ಹನುಮತ್ಸಮಾನಃ ಪುಮಾನ್ ಕದಾಚಿತ್ ಕ್ವ ಚ ಕಶ್ಚನೈವ'** (ಮ.ಭಾ.ತಾ.ನಿ. 2-151) ಎಂದು ಘೋಷಿಸಿರುವಂತೆ ಜ್ಞಾನವೇ ಮುಂತಾದ ಗುಣಗಳಲ್ಲಿ ಹನೂಮಂತನಿಗೆ ಸರಿದೂಗುವ ವ್ಯಕ್ತಿಯೇ ಇಲ್ಲ. ಇದನ್ನು ಅವತರಿಸಿದಾ ಕ್ಷಣ ಸಾಂಕೇತಿಕವಾಗಿ ತೋರಿಸಿಕೊಡುವುದಕ್ಕೋ ಎಂಬಂತೆ ಸೂರ್ಯನನ್ನು ನುಂಗಲು ಜಿಗಿದ ಲೀಲೆ ನಡೆದಂತಾಗಿದೆ ಎಂಬ ಧ್ವನಿ ಮೂಡುವಂತೆ, **'ಪೋತಭಾವದಿ ತರಣಿ ಬಿಂಬಕೆ ಲಂಘಿಸಿದ'** –ಎಂಬುದಾಗಿ ಹಿಂದಿನ ಮಾತಿನಲ್ಲಿ ಈ ಲೀಲೆಯನ್ನು ತಿಳಿಸಿ, ಮುಂದಿನ ಮಾತಿನಲ್ಲಿ ಅದನ್ನು ಸಮರ್ಥಿಸುವುದಕ್ಕೋ ಎಂಬಂತೆ **'ಈತಗೆಣೆ ಯಾರು ಮೂರ್ಲೋಕದೊಳಗೆ'** –ಎನ್ನಲಾಗಿದೆ.

- ಮೇಲಿನ ಮಹದಾದಿ ಲೋಕಗಳನ್ನೆಲ್ಲ ಸ್ವರ್ಲೋಕದಲ್ಲೂ, ಕೆಳಗಿನ ಅತಲಾದಿ ಲೋಕಗಳನ್ನು ಭೂರ್ಲೋಕದಲ್ಲೂ ಸೇರಿಸಿ – ಹೀಗೆ ಹದಿನಾಲ್ಕು ಲೋಕಗಳನ್ನೂ 'ಭೂರ್ಭುವಃಸ್ವಃ' ಎಂಬ ಮೂರು ಲೋಕಗಳಲ್ಲಿ ಅಂತರ್ಭಾವವನ್ನು ಹೊಂದಿಸಿ ಎಲ್ಲ ಲೋಕಗಳೂ ಬರುವಂತೆ ಮೂರ್ಲೋಕಗಳಲ್ಲಿ ಎಂದು ವ್ಯವಹರಿಸಲಾಗುವುದು. ಆದ್ದರಿಂದ ಮೂರ್ಲೋಕಗಳಲ್ಲಿ ಹನುಮಂತನಿಗೆ ಎಣೆ ಇಲ್ಲ ಎಂದರೆ ಹದಿನಾಲ್ಕು ಲೋಕಗಳಲ್ಲೂ ಎಣೆ ಇಲ್ಲ ಎಂದೇ ಅರ್ಥ.

- **'ರಘುಪತಿಯ ಸೇವೆ ಮಾಡುವೆನೆಂದು.... ಹನುಮಂತನೆಂದೆನಿಸಿದ'** –ಎಂಬ ಮಾತಿನಿಂದ ಜ್ಞಾನಪೂರ್ಣನಾಗಿದ್ದು ಅನ್ವರ್ಥಕವಾಗಿ ಹನುಮಂತ ಎಂದೆನಿಸಿರುವುದರಿಂದಲೇ ರಘುಪತಿಯ ಸೀತಾನ್ವೇಷಣೆಯೇ ಮುಂತಾದ ಜ್ಞಾನಪೂರ್ವಕವಾದ ಸೇವೆ ನಡೆಸುವಂತಾಯಿತೆಂಬುದೂ ಧ್ವನಿಸುವುದು.

- ಹನುಮಂತನೆನಿಸಿದ ಎಂದು ಮೊದಲು ತಿಳಿಸಿ, ಬಳಿಕ ಸೂರ್ಯನೆಡೆಗೆ ಧಾವಿಸಿದ ಸಂಗತಿಯನ್ನು ತಿಳಿಸಿದ್ದರಿಂದ ವಾಲ್ಮೀಕಿ ರಾಮಾಯಣದಲ್ಲಿ (ಕಿಷ್ಕಿಂಧಾ 66-24) ತಿಳಿಸಿರುವಂತೆ ದೇವೇಂದ್ರನ ಹೊಡೆತಕ್ಕೊಳಗಾಗಿ ಎಡ ಕೆನ್ನೆ ಒಡೆದದ್ದರಿಂದ 'ಹನೂಮಾನ್' ಎನಿಸಿರುವುದಲ್ಲ. ಈ ಘಟನೆ ನಡೆಯುವ ಮುಂಚೆಯೇ 'ಹನೂಮಾನ್' ಎನಿಸಿರುವನೆಂದರೆ ಕೆನ್ನೆ ಒಡೆದ ಮೇಲೆ 'ಹನೂಮಾನ್' ಎನಿಸಿದ್ದಲ್ಲ ಎಂದು ಸ್ಪಷ್ಟ ತಾನೇ? –ಎಂದು ಸೂಚಿತವಾಗುವುದು.

## ಶಬ್ದಶಾಸ್ತ್ರದ ಪಠನ ಹಾಗೂ ವಿಚಿತ್ರ ಸಂಚಾರ:

**ತರಣಿಗಭಿಮುಖನಾಗಿ ಶಬ್ದಶಾಸ್ತ್ರವ ಪಠಿಸಿ**
**ಉರವಣಿಸಿ ಹಿಂದುಮುಂದಾಗಿ ನಡೆದ**
**ಪರಮ ಪವಮಾನಸುತ ಉದಯಾಸ್ತಶೈಲಗಳ**
**ಭರದಿ ಯೈದಿದಗೀತಗುಪಮೆ ಉಂಟೇ** ॥ ೬ ॥

**ಸೂರ್ಯನಿಗೆ ಎದುರಾಗಿ ಶಬ್ದಶಾಸ್ತ್ರವ -ವ್ಯಾಕರಣಶಾಸ್ತ್ರವನ್ನು ಪಠಿಸುತ್ತ, ಆತುರ ಪಟ್ಟುಕೊಂಡು ಹಿಂದುಮುಂದಾಗಿ ನಡೆಯುತ್ತ ಉದಯಗಿರಿಯಿಂದ ಅಸ್ತಗಿರಿಯ ವರೆಗೆ ಗ್ರಂಥದ ಭಾರದಿಂದ ಕೂಡಿದವನಾಗಿ ಸಾಗಿದನು. ಇಂತಹ ಆಂಜನೇಯನಿಗೆ ಸರಿ ಸಮಾನರು ಇರಲು ಸಾಧ್ಯವೇ?**

**ವಿವರಣೆ:** ವಾಲ್ಮೀಕಿ ರಾಮಾಯಣದ ಉತ್ತರಕಾಂಡದಲ್ಲಿ (36-44) ಪ್ರಸ್ತಾವಿಸ ಲ್ಪಟ್ಟಿರುವಂತೆ ಸೂರ್ಯನ ಅಭಿಮುಖವಾಗಿ, ಅವನಿಂದ ವ್ಯಾಕರಣಶಾಸ್ತ್ರವನ್ನು ಸ್ವೀಕರಿ ಸುತ್ತ, ದೊಡ್ಡ ಗ್ರಂಥವನ್ನು ಹೊತ್ತುಕೊಂಡು ಉದಯಗಿರಿಯಿಂದ ಅಸ್ತಗಿರಿಯವರೆಗೆ ಸಾಗುವನು. ಈ ಮಹಿಮೆಯನ್ನು ಈ ಪದ್ಯದಲ್ಲಿ ಉಲ್ಲೇಖಿಸಲಾಗಿದೆ.

- ಆಂಜನೇಯನು ವ್ಯಾಕರಣಶಾಸ್ತ್ರದ ಗ್ರಹಣ, ಹಿಂದುಮುಂದಾಗಿ ಭರದಿ ಸಾಗಾಟ ಹಾಗೂ ದೊಡ್ಡದಾದ ಗ್ರಂಥದ ಧಾರಣೆ – ಈ ಮೂರನ್ನೂ ಏಕಕಾಲದಲ್ಲಿಯೇ ನಡೆಸುತ್ತ ತಾನು ವಾಯುಶಬ್ದವಾಚ್ಯ ಎಂಬುದನ್ನು ತೋರಿಸಿಕೊಟ್ಟಂತಾಯಿತು. ವಃ – ಜ್ಞಾನರೂಪೀ, ಗತಿಶೀಲತ್ವಾತ್ – ಆಯುಃ –ವಾಯುಃ ಎಂದು ವಾಯುಶಬ್ದದ ನಿರ್ವಚನ.

- ವಾಲ್ಮೀಕಿರಾಮಾಯಣದಲ್ಲಿ '**ಉದ್ಯದ್ಗಿರೇರಸ್ತಗಿರಿಂ ಜಗಾಮ**' –ಎಂದಷ್ಟೇ ಇರುವು ದಾದರೆ, ಆ ಸಂಚಾರದಲ್ಲಿರುವ ಮತ್ತೊಂದು ಚಮತ್ಕಾರವನ್ನು ಸ್ಪಷ್ಟಪಡಿಸಲಾಗಿದೆ– '**ಉರವಣಿಸಿ ಹಿಂದುಮುಂದಾಗಿ ನಡೆದ.....**' –ಎಂದು.

- 'ಉರವಣಿಸಿ' –ಎಂಬ ಮಾತಿನಿಂದ ಆತುರಪಟ್ಟುಕೊಂಡು ಎಂದು ತಿಳಿಸಿರುವುದರಿಂದ, ಮುಂದಿನ 'ಭರದಿ' –ಎಂಬುದಕ್ಕೆ ವೇಗದಿಂದ ಎಂಬ ಅರ್ಥವನ್ನು ಹೇಳದೆ, 'ಭಾರದಿಂದ' ಕೂಡಿದವನಾಗಿ ಎಂಬ ಅರ್ಥ ಹೇಳಬೇಕು. ಭರಶಬ್ದಕ್ಕೆ ಭಾರ ಎಂಬ ಅರ್ಥವೂ ಇದೆ.

ಆಂಜನೇಯ ಉದಯಾದ್ರಿಯಿಂದ ಅಸ್ತಾದ್ರಿಯವರೆಗೆ ಸಾಗುವಾಗ ದೊಡ್ಡ ಗ್ರಂಥ ವನ್ನೂ ಹೊತ್ತುಕೊಂಡಿದ್ದ ಎಂಬುದಾಗಿ '**ಗ್ರಂಥಂ ಮಹದ್ಧಾರಯನ್ ಅಪ್ರಮೇಯಃ**' –ಎಂದು ವಾಲ್ಮೀಕಿರಾಮಾಯಣದಲ್ಲಿ (ಉತ್ತರಕಾಂಡ, 36-45) ಇದ್ದರೆ, ಸಂಗ್ರಹರಾಮಾಯಣದಲ್ಲಿ (ಕಿಷ್ಕಿಂಧಾ, 1-26) ಇನ್ನಷ್ಟು ಸ್ಪಷ್ಟವಾಗಿ ಇದೆ– "**ಗ್ರಂಥಂ ಮಹಾಂತಂ ಹನೂಮಾನ್ ದಧಾನಃ**".

- ಶ್ರೀಮಧ್ವರು ವಾಸುದೇವನಾಗಿದ್ದಾಗ ತೋಟಂತಿಲ್ಲಾಯರು ಪಾಠ ಮಾಡುತ್ತಿರಲು ಸ್ವತಃ ಸರ್ವಜ್ಞರಾಗಿರುವ ತಮಗೆ ಪಾಠ ಕೇಳುವ ಆವಶ್ಯಕತೆ ಇಲ್ಲ ಎಂದು ಉಳಿದ ಸಾತ್ವಿಕರಿಗೆ ತೋರಿಸಿಕೊಡುವುದಕ್ಕಾಗಿಯೇ ಎಂಬಂತೆ ಅನ್ಯಮನಸ್ಕರಂತೆ ನಡೆದುಕೊಳ್ಳು ತ್ತಿದ್ದರೆಂದು ಮಧ್ವವಿಜಯ (3-49, 50) ಉಲ್ಲೇಖಿಸಿದೆ. ಅದರಂತೆಯೇ ಮೊದಲೇ ಹನೂಮಾನ್ ಎನಿಸಿ, ಜ್ಞಾನಪೂರ್ಣನಾಗಿರುವ ತನಗೆ ಸೂರ್ಯನಿಂದ ವ್ಯಾಕರಣ ಪಾಠ ಕೇಳುವ ಆವಶ್ಯಕತೆ ಇಲ್ಲ ಎಂದು ಸಾತ್ವಿಕರಿಗೆ ಸೂಚಿಸಿಕೊಡುವುದಕ್ಕೋ

ಎಂಬಂತೆ ಆಂಜನೇಯನು ವ್ಯಾಕರಣಪಾಠ ಕೇಳುವಾಗ ವಿಚಿತ್ರವಾಗಿ ಸಂಚಾರ ಮಾಡುತ್ತಿದ್ದನೆಂದು ಭಾವಿಸಬಹುದಾಗಿದೆ.

- ಆಂಜನೇಯನ ಈ ಲೀಲೆಯನ್ನೂ '**.....ನಾನ್ಯೋ ಹನೂಮತ್ಸಮಾನಃ ಪುಮಾನ್......**' -ಎಂಬ ಪ್ರತಿಜ್ಞೆಗೆ ಪೂರಕವಾಗಿ ವಿನಿಯೋಗಿಸಿಕೊಳ್ಳಬಹುದೆಂದು ಸೂಚಿಸಲಾಗಿದೆ- '**......ಈತನಿಗುಪಮೆ ಉಂಟೇ?**'

## ಮುಖ್ಯಪ್ರಾಣನ ವಾಗ್ವೈಭವ:

**ಅಖಿಲ ವೇದಗಳ ಸಾರವ ಧರಿಸಿ ಮುನ್ನ ತಾ ।**
**ನಿಖಿಲ ವ್ಯಾಕರಣಶಾಸ್ತ್ರವನು ಪೇಳೆ**
**ಮುಖದಲ್ಲಿ ಕಿಂಚಿದಪಶಬ್ದ ಇವಗಿಲ್ಲೆಂದು**
**ಮುಖ್ಯಪ್ರಾಣನ ರಾಮನನುಕರಿಸಿದ ॥ ೭ ॥**

**ಋಗ್ವೇದ, ಯಜುರ್ವೇದ ಹಾಗೂ ಸಾಮವೇದಗಳನ್ನು ಅಧ್ಯಯನ ಮಾಡಿ ಅವುಗಳ ಸಾರಸರ್ವಸ್ವವನ್ನೂ ಹೃದ್ಗತಮಾಡಿಕೊಂಡು ಸಕಲ ವ್ಯಾಕರಣಶಾಸ್ತ್ರವನ್ನೂ ಚೆನ್ನಾಗಿ ಅರಗಿಸಿಕೊಂಡು ಸಂಭಾಷಣೆ ನಡೆಸಲು ಮುಖ್ಯಪ್ರಾಣನ ಬಾಯಿಯಿಂದ ಒಂದೂ ಅಪಶಬ್ದ ಹೊರಡದಿದ್ದುದನ್ನು ಗಮನಿಸಿದ ಶ್ರೀರಾಮಚಂದ್ರ ಮುಖ್ಯಪ್ರಾಣನನ್ನು ಅನುಕರಿಸಿದ, ಅನುಸರಿಸಿ ಸುಗ್ರೀವಲ್ಲಿಗೆ ಸಾಗುವನು.**

## ವಿವರಣೆ:

- ವಾಲ್ಮೀಕಿರಾಮಾಯಣದಲ್ಲಿ (ಕಿಷ್ಕಿಂಧಾ, 3-28.....33) ಆರು ಶ್ಲೋಕಗಳ ವ್ಯಾಪ್ತಿಯಲ್ಲಿ ಶ್ರೀರಾಮಚಂದ್ರ ಲಕ್ಷ್ಮಣನೆದುರು ಹನೂಮಂತನ ವಾಗ್ಮಿತ್ವವನ್ನು ಪ್ರಶಂಸಿಸಿದ ವಿಚಾರವು ನಿರೂಪಿತವಾಗಿದ್ದು, ಅದರ ಕೆಲವು ಅಂಶಗಳು ಈ ಪದ್ಯದಲ್ಲಿ ಪ್ರಸ್ತಾಪಿಸಲ್ಪಟ್ಟಿದೆ.
- ದೇಹಲೀದೀಪನ್ಯಾಯದಿಂದ ಮಧ್ಯದಲ್ಲಿರುವ 'ಧರಿಸಿ' ಶಬ್ದವನ್ನು 'ಅಖಿಲವೇದಗಳ ಸಾರವ'-ಎಂಬ ಮಾತಿಗೂ, ನಿಖಿಲವ್ಯಾಕರಣಶಾಸ್ತ್ರವನು-ಎಂಬ ಮಾತಿಗೂ ಅನ್ವಯಿಸಿಕೊಂಡು ಸಕಲವೇದಗಳನ್ನೂ ಸಕಲ ವ್ಯಾಕರಣಗಳನ್ನೂ ಹೃದಯದಲ್ಲಿ ಧರಿಸಿಕೊಂಡಿರುವವನೆಂದು ಅರ್ಥೈಸಿಕೊಳ್ಳಬೇಕು.
- ಋಗ್ವೇದದಿಂದ ವಿನೀತನಲ್ಲದವನ, ಯಜುರ್ವೇದಧಾರಕನಲ್ಲದವನ, ಸಾಮವೇದ ವಿದ್ವಾಂಸನಲ್ಲದವನ ಬಾಯಿಯಿಂದ ಈ ಬಗೆಯ ಮಾತುಗಾರಿಕೆ ಶಕ್ಯವಾಗದೆಂಬ ವಾಲ್ಮೀಕಿರಾಮಾಯಣದ ನಿರೂಪಣೆಯನ್ನು 'ಅಖಿಲವೇದಗಳ ಸಾರವ ಧರಿಸಿ......' -ಎಂದು ಸರಳ ಮಾತಿನಲ್ಲಿ ಸೆರೆ ಹಿಡಿಯಲಾಗಿದೆ. "**ನೂನಂ ವ್ಯಾಕರಣಂ ಕೃತ್ಸ್ನಮನೇನ ಬಹುಧಾ ಶ್ರುತಮ್**" -ಎಂಬ ವಾಲ್ಮೀಕಿರಾಮಾಯಣದ ಮಾತಿನ ಆಶಯವನ್ನು '.........ಧರಿಸಿ ಮುನ್ನ ತಾ ನಿಖಿಲವ್ಯಾಕರಣಶಾಸ್ತ್ರವನು.....' -ಎಂಬ ಮಾತಿನಿಂದ ಸಂಗ್ರಹಿಸಲಾಗಿದೆ. '**ಬಹು ವ್ಯಾಹರತಾನೇನ ನ ಕಿಂಚಿದಪಶಬ್ದಿತಮ್**' -ಎಂಬ

ವಾಲ್ಮೀಕಿರಾಮಾಯಣದ ಮಾತಿನ ಸಾರವನ್ನು 'ಮುಖದಲ್ಲಿ ಕಿಂಚಿದಪಶಬ್ದ ಇವಗಿಲ್ಲ' ಎಂಬ ಮಾತಿನಿಂದ ತಿಳಿಸಲಾಗಿದೆ.

- ಸಂಸ್ಕೃತದಲ್ಲಿ ಮುಖ ಶಬ್ದ ಇಡೀ ಮುಖವನ್ನು ಹೇಗೋ ಹಾಗೆ ಬರೇ ಬಾಯಿ ಎಂಬರ್ಥವನ್ನೂ ತಿಳಿಸುವುದು. ಬಾಯಿ ಎಂಬ ಅರ್ಥದಲ್ಲಿ ಈ ಪದ್ಯದಲ್ಲಿ 'ಮುಖದಲ್ಲಿ ಕಿಂಚಿದಪಶಬ್ದ ಇವಗಿಲ್ಲೆಂದು.......' –ಎಂಬುದಾಗಿ ಮುಖವನ್ನು ಪ್ರಯೋಗಿಸಲಾಗಿದೆ.

- ಹೀಗೆ ಹನೂಮಂತನ ಸಂಭಾಷಣೆಯಲ್ಲಿದ್ದ ವೈಚಾರಿಕತೆಯನ್ನೂ ಶುದ್ಧಿಯನ್ನೂ ಗಮನಿಸಿ ಅದರಿಂದಲೇ ಸಂತುಷ್ಟನಾದ ಶ್ರೀರಾಮಚಂದ್ರ ಸುಗ್ರೀವನಲ್ಲಿಗೆ ಆಂಜನೇಯನನ್ನು ಅನುಕರಿಸಿದನು –ಅನುಸರಿಸಿದನು.

- ಹೀಗೆ ಈ ಪದ್ಯದಲ್ಲಿ ರಾಮಚಂದ್ರನನ್ನೂ, ಮರುಳು ಮಾಡಿದ ಹನೂಮಂತನ ಮಾತುಗಾರಿಕೆಯ ವೈಭವದ ಮೇಲೆ ಬೆಳಕು ಚೆಲ್ಲಲಾಗಿದೆ.

- ಹನೂಮಂತನನ್ನು ಅನುಸರಿಸಿ ಸುಗ್ರೀವನಲ್ಲಿಗೆ ಸಾಗಿದನೆಂಬ ಅರ್ಥವನ್ನಷ್ಟೇ ತಿಳಿಸುವ ಅಭಿಪ್ರಾಯವಿದ್ದಲ್ಲಿ 'ರಾಮನನುಸರಿಸಿದ.......' ಎಂದೇ ಪ್ರಯೋಗಿಸಲಾಗುತ್ತಿತ್ತು. ಆದರೆ ಹಾಗೆ ಪ್ರಯೋಗಿಸದೆ, 'ಅನುಕರಿಸಿದ' ಶಬ್ದದ ಪ್ರಯೋಗದಿಂದ ಹನೂಮಂತನನ್ನು ಅನುಸರಿಸಿ, ಕರಿಸಿದ – ನಡೆಸಿದ ಸುಗ್ರೀವನಲ್ಲಿಗೆ ಹೋಗುವಿಕೆ, ಸುಗ್ರೀವನ ಜೊತೆ ಸ್ನೇಹ ಮಾಡುವಿಕೆ..... –ಇತ್ಯಾದಿಯಾಗಿ ಮುಂದೆ ಏನೇನು ಘಟನೆಗಳು ನಡೆಯಬೇಕೆಂದಿದ್ದವೋ ಅವನ್ನೆಲ್ಲ ಹನೂಮಂತನನ್ನು ಅನುಸರಿಸಿಯೇ ಅಂದರೆ ಅವನ ಸೇವೆಯನ್ನು ಸ್ವೀಕರಿಸಿಯೇ ನಡೆಸುವುದಾಗಿ ಸಂಕಲ್ಪಿಸಿದ. 'ಏಷ್ಯಚ್ಚ ನಿಶ್ಚಿತಂ ಯತ್ ತದತೀತತ್ವೇನ ಭಣ್ಯತೇ' –ಎಂಬ 'ನಾರದೀಯ' (ಭಾಗ.ತಾ.ನಿ. 3-3-25) ತಿಳಿಸುತ್ತಿರುವಂತೆ ನಿಶ್ಚಿತವಾಗಿ ಮುಂದೆ ನಡೆಯುವಂತಹದ್ದು ಈಗಾಗಲೇ ನಡೆದು ಹೋಯಿತು –ಎಂದೇ ನಿರೂಪಿತವಾಗುವುದೆಂಬ ಭಾಷಾನಿಯಮಕ್ಕನುಗುಣವಾಗಿ ಮುಂದೆ ಶ್ರೀರಾಮನ ಮೂಲಕ ನಡೆಯುವ ಆಂಜನೇಯನನ್ನು ಅನುಸರಿಸಿ ನಡೆಸಲಾಗುವ ಬೇರೆಬೇರೆ ಚಟುವಟಿಕೆಗಳಲ್ಲಿ ನಿಶ್ಚಿತತ್ವದ ಸೂಚನೆ ದೊರಕುವಂತೆ 'ರಾಮನನುಕರಿಸಿದ' –ಎಂದು ತಿಳಿಸಲಾಗಿದೆ. ಆಂಜನೇಯನ ಜೊತೆ ನಡೆಸಿದ ಮೊತ್ತಮೊದಲ ಸಂಭಾಷಣೆಯಿಂದಲೇ ಅವನ ವಿಚಾರವಂತಿಕೆ, ಪ್ರಾಮಾಣಿಕತನ, ವಿನಯ –ಮುಂತಾದ ಗುಣಗಳಿಗೆ ಮಾರುಹೋದ ರಾಮಚಂದ್ರ ತಾನು ಈ ಭಕ್ತನನ್ನೇ ಅನುಸರಿಸಿ, ಮುಖ್ಯವಾಗಿ ಅವನ ಸಾಧನಾನುಷ್ಠಾನಕ್ಕೆ ಪೂರಕವಾಗುವಂತೆಯೇ ಮುಂದೆ ನಡೆದುಕೊಳ್ಳಬೇಕೆಂದು ಶ್ರೀರಾಮಚಂದ್ರನು ನಿರ್ಧರಿಸಿದನು.

## ಧರಣಿಸುತೆಯ ಸಂದರ್ಶನ:

ತರಣಿಸುತನನು ಕಾಯ್ದು ಶರಧಿಯನು ನೆರೆ ದಾಟಿ
ಧರಣಿಸುತೆಯಳ ಕಂಡು ದನುಜರೊಡನೆ

**ಭರದಿ ರಣವನೆ ಮಾಡಿ ಗೆಲಿದು ದಿವ್ಯಾಸ್ತ್ರಗಳ**
**ಉರುಹಿ ಲಂಕೆಗೆ ಬಂದ ಹನುಮಂತನು** ॥ ೮ ॥

**ಸುಗ್ರೀವನಿಗೆ ಶ್ರೀರಾಮಚಂದ್ರನ ಸ್ನೇಹ ದೊರಕುವಂತೆ ಮಾಡಿ ತರಣಿಸುತನನ್ನು -ಸೂರ್ಯಪುತ್ರನಾದ ಸುಗ್ರೀವನನ್ನು- ಕಾಯ್ದನು. ಸಮುದ್ರವನ್ನು ದಾಟಿ ಲಂಕೆಯ ಅಶೋಕವನದಲ್ಲಿದ್ದ ಧರಣಿಸುತೆಯಾದ ಸೀತೆಯನ್ನು ಕಂಡನು. ತನ್ನ ವಿರುದ್ಧ ಕಾದಾಡಲು ಬಂದ ರಾವಣನ ಪರಿವಾರದ ದನುಜರನ್ನು- ದೈತ್ಯರ ವಿರುದ್ಧ ವೇಗವಾಗಿ (ಭರದಿ) ಯುದ್ಧ ಮಾಡಿ ಅದರಲ್ಲಿ ಅವರು ಪ್ರಯೋಗಿಸಿದ ಬ್ರಹ್ಮಾಸ್ತ್ರ ಮುಂತಾದ ದಿವ್ಯಾಸ್ತ್ರಗಳನ್ನು ಗೆಲಿದನು. ಲಂಕೆಯನ್ನು ಬೆಂಕಿಯಿಂದ ಉರಿಸಿದನು. ಹೀಗೆ ಶ್ರೀರಾಮನ ಸೇವೆ ಮಾಡಿ ಹನುಮ ಹಿಂತಿರುಗಿ ಬಂದನು.**

- ಸುಂದರಕಾಂಡ ರಾಮಾಯಣದ ಕಥೆಯನ್ನು ಎರಡು ವಾಕ್ಯಗಳಲ್ಲಿ ಸೆರೆ ಹಿಡಿದಿರುವ ಈ ಚಿಕ್ಕ ಪದ್ಯದಲ್ಲಿ ಸುಗ್ರೀವನ ಸಂರಕ್ಷಣೆ, ಸಮುದ್ರೋಲ್ಲಂಘನ, ಸೀತಾದೇವಿಯ ಸಂದರ್ಶನ, ರಾವಣನ ಸೈನಿಕರ ನಿಗ್ರಹ, ಲಂಕೆಯ ದಹನ ಹಾಗೂ ಆಂಜನೇಯನ ಹಿಂತಿರುಗುವಿಕೆ –ಹೀಗೆ ಪ್ರಮುಖ ಘಟನೆಗಳೆಲ್ಲವೂ ಸರಳವಾಗಿ ನಿರೂಪಿತವಾಗಿವೆ.

- ಸುಗ್ರೀವನಿಗೆ ಶ್ರೀರಾಮಚಂದ್ರನ ಅನುಗ್ರಹ ಆಗುವಂತೆ ಮಾಡುವ ಮೂಲಕವೂ, ಶ್ರೀರಾಮಚಂದ್ರನ ಉಪಕಾರವನ್ನು ಪಡೆದು ಮತ್ತೆ ಕೃತಘ್ನನಂತೆ ನಡೆದುಕೊಂಡ ಸುಗ್ರೀವನನ್ನು ಕಾರ್ಯೋನ್ಮುಖನಾಗುವಂತೆ ಎಚ್ಚರಿಸುವ ಮೂಲಕವೂ ರಕ್ಷಿಸಿರುವ ಆಂಜನೇಯನ ರಕ್ಷಣೆಯನ್ನು ಗಮನದಲ್ಲಿಟ್ಟುಕೊಂಡು 'ತರಣಿಸುತನನು ಕಾಯ್ದು.......' ಎನ್ನಲಾಗಿದೆ.

- ಸುಗ್ರೀವನನ್ನು ಅವನ ಹೆಸರಿನಿಂದ ಉಲ್ಲೇಖಿಸದೆ, 'ತರಣಿಸುತನನು' –ಎಂದು ಸೂರ್ಯನ ಪುತ್ರನನ್ನಾಗಿ ಉಲ್ಲೇಖಿಸುವ ಉದ್ದೇಶ ಸುಗ್ರೀವನ ಪರಿಚಯವನ್ನು ನೀಡುವುದರೊಂದಿಗೆ ಸುಗ್ರೀವ ತರಣಿಸುತನೇ ಆಗಿದ್ದರೂ ಅಂತಹವನಿಗೂ ಆಂಜನೇಯನ ರಕ್ಷಣೆ ಬೇಕಾಯಿತೆಂದರೆ, ಅಂತಹ ಆಂಜನೇಯ ಸೂರ್ಯನಿಗಿಂತಲೂ ಎತ್ತರದ ವ್ಯಕ್ತಿತ್ವದವನೆಂದು ಸೂಚಿಸಿಕೊಡುವುದೂ ಉದ್ದೇಶ. ಆದುದರಿಂದ ಬಾಲ್ಯದಲ್ಲಿ ಸೂರ್ಯನಿಂದ ಶಬ್ದಶಾಸ್ತ್ರವನ್ನು ಆಂಜನೇಯ ಪಠಿಸಿದುದು ಬರೇ ವಿಡಂಬನೆ –ಎಂದು ಸೂಚಿತವಾಗುವುದು.

- ಮಾಹೇಂದ್ರಪರ್ವತದಿಂದ ಲಂಕೆಯ ತ್ರಿಕೂಟಪರ್ವತದ ವರೆಗೆ ಹರಡಿದ್ದ ನೂರು ಯೋಜನಗಳಷ್ಟು ವಿಸ್ತಾರದ ಸಮುದ್ರವನ್ನು ಮಧ್ಯೆ ಎಲ್ಲಿಯೂ ವಿಶ್ರಾಂತಿಯನ್ನು ತೆಗೆದುಕೊಳ್ಳದೆಯೇ ಅಖಂಡ ಹಾರಾಟವಾಗಿ ನಡೆಸಿದ ಲಂಘನೆಯನ್ನು ಸೂಚಿಸುವುದಕ್ಕಾಗಿಯೇ 'ನೆರೆದಾಟಿ'' ಎನ್ನಲಾಗಿದೆ. ಪೂರ್ಣ ಎಂಬ ಅರ್ಥವುಳ್ಳ ನೆರೆ ಶಬ್ದದ ಜೊತೆಗೆ ಪ್ರಯೋಗಿಸಲ್ಪಟ್ಟ 'ದಾಟಿ' ಶಬ್ದವು ದಾಟುವಿಕೆಯಲ್ಲಿಯ ಅಖಂಡತೆಯನ್ನು ಸೂಚಿಸಿಕೊಡಬಲ್ಲದು.

- 'ಧರಣಿಸುತೆಯ ಕಂಡು' –ಎಂದು ಸೀತೆಯನ್ನು ಧರಣಿಸುತೆಯನ್ನಾಗಿ ಉಲ್ಲೇಖಿಸಿರುವ ಉದ್ದೇಶ ಎಲ್ಲರಿಗೆ ತಾಯಿಯಂತೆ ಇರುವ ಧರಣಿಯ ಸುತೆಯನ್ನಾಗಿ ಆಂಜನೇಯ ಕಂಡನೆಂದುದರಿಂದಾಗಿ ಆಂಜನೇಯನಿಗೆ ಸೀತೆಯ ಬಗ್ಗೆ ಮಾತೃಭಾವನೆ ಇತ್ತೇ ಹೊರತು ಸುಂದರಿಯಾದ ಒಬ್ಬ ಸ್ತ್ರೀ ಎಂಬ ಭಾವನೆ ಇದ್ದಿರಲಿಲ್ಲ ಎಂದು ಸೂಚಿತ ವಾಗುವುದು.

ಅಶೋಕವನದಲ್ಲಿ ಮೊತ್ತಮೊದಲಾಗಿ ಸೀತೆಯನ್ನು ಕಂಡ ಆಂಜನೇಯ ಆಕೆಯ ಸೌಂದರ್ಯಕ್ಕೆ ಮಾರುಹೋಗಿ –ಇಂತಹ ಸೌಂದರ್ಯದ ಖನಿಯನ್ನು ಕಳಕೊಂಡ ರಾಮ ಅದಕ್ಕಾಗಿ ಶೋಕದಿಂದ ದೇಹವನ್ನು ತ್ಯಜಿಸದೆ ಬದುಕುಳಿದಿದ್ದಾನೆಂದರೆ ಅವನು ದೊಡ್ಡ ಸಾಹಸವನ್ನು ಮಾಡಿದಂತೆಯೇ! –ಎಂದು ಉದ್ಗರಿಸುವನೆಂದು[13] ವಾಲ್ಮೀಕಿರಾಮಾ ಯಣದ (ಸುಂದರ, 15-53) ಮಾತಿನಿಂದ ಅವನ ಮೇಲೆ ಆರೋಪಿತವಾಗುವ ಸೀತೆಯ ಸೌಂದರ್ಯಾಸ್ವಾದನೆಯ ದೌರ್ಬಲ್ಯವನ್ನು 'ಧರಣಿಸುತೆಯಳ ಕಂಡ.....' ಎಂಬ ಮಾತು ಸೀತೆಯನ್ನು ಧರಣಿಸುತೆಯನ್ನಾಗಿ ಕಂಡದ್ದನ್ನು ಸೂಚಿಸಿಕೊಡುವ ಮೂಲಕ ಪರಿಹರಿಸ ಬಲ್ಲದು.

- 'ಸರ್ವಂಸಹಾ' ಎಂದು ಪ್ರಸಿದ್ಧಳಾದ ಧರಣೀದೇವಿಯ ಸಹನಾಗುಣದ ಪ್ರತಿಫಲನ ವನ್ನು ಆಗಿನ ಸೀತಾದೇವಿಯಲ್ಲಿ ಸೂಚಿಸಿಕೊಡುವುದೂ 'ಧರಣಿಸುತೆ'ಯನ್ನಾಗಿ ಸೀತೆ ಯನ್ನು ಉಲ್ಲೇಖಿಸಿರುವ ಉದ್ದೇಶ.

- ರಾವಣನ ಸೇನಾರೂಪದಲ್ಲಿದ್ದ ದನುಜರ ವಿರುದ್ಧ ರಭಸದಿಂದ ಕಾದಾಡಿ, ಅವರು ಪ್ರಯೋಗಿಸಿದ 'ದಿವ್ಯಾಸ್ತ್ರಗಳ ಗೆಲಿದು' –ಎಂದು ಸ್ತುತಿಸುವಾಗ ಇಂದ್ರಜಿತ್ ಪ್ರಯೋಗಿಸಿದ ಬ್ರಹ್ಮಾಸ್ತ್ರಕ್ಕೆ ಮಣಿದವನಂತೆ ಆಂಜನೇಯನು ನಟಿಸಿದ್ದರೂ 'ಮಯಾ ವರಾ ವಿಲಂಘಿತಾಃ........' ಮಹಾಭಾರತ ತಾತ್ಪರ್ಯನಿರ್ಣಯದ ಮುಂತಾದ ಮಾತುಗಳಲ್ಲಿ (7-33, 34) ತಿಳಿಸಿರುವಂತೆ ಉದ್ದೇಶಪೂರ್ವಕವಾಗಿಯೇ ಆಂಜನೇಯ ಹಾಗೆ ನಡೆದುಕೊಂಡದ್ದರಿಂದ ಅದು ಸೋಲು ಅಲ್ಲ –ಎಂದು ಸೂಚಿಸಿದಂತಿದೆ.

- 'ಉರಿಸಿ ಲಂಕೆಯ' –ಎಂಬುದಾಗಿ ಬೆಂಕಿಯ ಮೂಲಕ ಲಂಕೆಯನ್ನು ಉರಿಸಿ ಎಂದು ಹೇಳುವ ಬದಲು ಪ್ರೇರಣಾರ್ಥವನ್ನು ಮರೆ ಮಾಡಿ 'ಉರುಹಿ' –ತಾನೇ ಸುಟ್ಟು ಎಂಬ ಅರ್ಥ ಹೊರಡುವಂತೆ ಪ್ರಯೋಗಿಸುವ ಮೂಲಕ 'ಸ್ವಾತಂತ್ರ್ಯಸ್ನೇಹಯೋರಂತ ರ್ಣೀತಣಿಚ್' –ಎಂಬ ವೈದಿಕ ವ್ಯಾಕರಣಸೂತ್ರ (ಬೃ.ಉ.ಭಾ. 6-3-1) ತಿಳಿಸುತ್ತಿರು ವಂತೆ ಲಂಕೆಯನ್ನು ಸುಡುವಿಕೆಯಲ್ಲಿ ಹನುಮಂತನಿಗಿರುವ ಸ್ವಾತಂತ್ರ್ಯವನ್ನು ಸೂಚಿಸಿ ಕೊಡಲಾಗಿದೆ. "ಏಷೋಽಗ್ನಿಸ್ತಪತಿ.........." –ಎಂದು ಷಟ್‌ಪ್ರಶ್ನೋಪನಿಷತ್ತಿನಲ್ಲಿ (2-1-10) ತಿಳಿಸಿರುವಂತೆ ವಾಯುದೇವನೇ ಅಗ್ನಿಯಲ್ಲಿದ್ದುಕೊಂಡು ಅಗ್ನಿಗೆ ಸುಡುವ ಸಾಮರ್ಥ್ಯವನ್ನು ನೀಡುವುದರಿಂದ ಅಗ್ನಿ ಲಂಕೆಯನ್ನು ಸುಟ್ಟಿತು

---

13. 'ದುಷ್ಕರಂ ಕೃತವಾನ್ ರಾಮೋ ಹೀನೋ ಯದನಯಾ ಪ್ರಭುಃ ।
ಧಾರಯತ್ಯಾತ್ಮನೋ ದೇಹಂ ನ ಶೋಕೇನಾವಸೀದತಿ ॥

ಎನ್ನುವುದಕ್ಕಿಂತಲೂ ಹನೂಮಂತ ಲಂಕೆಯನ್ನು ಸುಟ್ಟು ಎನ್ನುವುದೇ ಹೆಚ್ಚು ಉಚಿತ. ಇದನ್ನು 'ಅಂತರ್ಣಿತಣಿಚ್' –ಆದ 'ಉರುಹು' ಪದ ಸೂಚಿಸಿಕೊಡಬಲ್ಲದು.

- '.......ಭರದಿ ರಣವನೆ ಮಾಡಿ.......' ಎಂಬಲ್ಲಿಯ 'ಭರದಿ' ಪದವನ್ನು 'ಭರದಿ ಬಂದ ಹನುಮಂತನು' –ಎಂಬಲ್ಲಿಗೆ ಹಚ್ಚಿಕೊಳ್ಳಬೇಕು. ರಣವನ್ನು ಮಾಡುವುದರಲ್ಲಿ ಆಳವಡಿಸಿಕೊಳ್ಳುವ 'ಭರ' ಸ್ವರಸ ಎನಿಸದು. ರಾಮನ ಸೇವೆಯನ್ನು ಮುಗಿಸಿ ಮರಳಿ ಬರುವುದರಲ್ಲಿ ಆಳವಡಿಸಿಕೊಳ್ಳಬೇಕಾದ ಭರವು ತನ್ನ ಮೂಲಕ ನಡೆದ ಆ ಸೇವೆಯನ್ನು ಆದಷ್ಟು ಬೇಗ ರಾಮಚಂದ್ರನಿಗೆ ಅರ್ಪಿಸುವಲ್ಲಿಯ ಉತ್ಸಾಹವನ್ನು ಸೂಚಿಸಿಕೊಡಬಲ್ಲದು.
- 'ಭರದಿ'ಯನ್ನು 'ರಣವನೆ ಮಾಡಿ' ಎಂಬುದಕ್ಕೂ 'ಬಂದ' –ಎಂಬುದಕ್ಕೂ ತಂತ್ರಕ್ರಮ ದಿಂದ ಅನ್ವಯವನ್ನಿಟ್ಟುಕೊಂಡು ಶ್ರೀರಾಮಚಂದ್ರನ ಸೇವೆಯಾಗಿ ರಾಕ್ಷಸರ ವಿರುದ್ಧ ಕಾದುವುದರಲ್ಲೂ, ಹಾಗೆ ಕಾದಿ ಅವರನ್ನು ಸೋಲಿಸಿದ ಸಂಗತಿಯನ್ನು ಹಾಗೂ ಸೀತಾದೇವಿಯ ಸುದ್ದಿಯನ್ನು ಶ್ರೀರಾಮಚಂದ್ರನಿಗೆ ತಲುಪಿಸುವುದರಲ್ಲೂ ಹನು ಮಂತನ ಆತುರವನ್ನು ಅನುಸಂಧಾನ ಮಾಡಬಹುದಾಗಿದೆ.

## ದಶಶಿರನ ಹುಡಿಗಟ್ಟಿ ಮೆರೆದ ಹನುಮಂತ:

**ಹರಿಗೆ ಚೂಡಾಮಣಿಯನಿತ್ತು ಹರಿಗಳ ಕೂಡಿ**
**ಶರಧಿಯನು ಕಟ್ಟಿ ಬಲು ರಕ್ಕಸರನು**
**ಒರಸಿ ರಣದಲಿ ದಶಶಿರನ ಹುಡಿಗಟ್ಟಿ ತಾ**
**ಮೆರೆದ ಹನುಮಂತ ಬಲವಂತ ಧೀರ** ॥ ೯ ॥

**ಸೀತಾದೇವಿ ತನ್ನ ಜ್ಞಾಪನಾರ್ಥವಾಗಿ ಕೊಟ್ಟಿದ್ದ ಚೂಡಾಮಣಿಯನ್ನು ಶ್ರೀರಾಮ ಚಂದ್ರನಿಗೆ ಸಮರ್ಪಿಸುವನು. ನಲ, ಜಾಂಬವಂತ, ಸುಗ್ರೀವ, ಅಂಗದಾದಿ ಕಪಿಗಳಿಂದ ಕೂಡಿಕೊಂಡು ಸಮುದ್ರಕ್ಕೆ ಸೇತುವೆಯನ್ನು ಕಟ್ಟುವನು. ಅದರ ಮೂಲಕ ಲಂಕೆಗೆ ಸಾಗಿ ಅಲ್ಲಿ ರಾಕ್ಷಸರ ವಿರುದ್ಧ ಕಾದಾಡಿ, ಯುದ್ಧದಲ್ಲಿ ರಕ್ಕಸರನ್ನು ನಿಗ್ರಹಿಸುವನು. ದಶಶಿರಸ್ಸಿನ ರಾವಣನನ್ನು ಪುಡಿಗೈಯುವನು. ಹೀಗೆ ಶ್ರೀರಾಮನ ಬಗೆಬಗೆಯ ಸೇವೆಯನ್ನು ನೆರ ವೇರಿಸುತ್ತ ಹನೂಮಂತನು ಬಲವಂತನಾಗಿ, ಧೀರನಾಗಿ ಮೆರೆದನು.**

## ವಿವರಣೆ:

- ರಾಮಾಯಣದ ಸುಂದರಕಾಂಡ ಪ್ರಸ್ತುತಪಡಿಸುವ ಶ್ರೀರಾಮನ ಪಾದಾರವಿಂದದಲ್ಲಿ ಚೂಡಾಮಣಿಯ ಅರ್ಪಣೆಯ ಜೊತೆಗೆ ಯುದ್ಧಕಾಂಡ ಪ್ರಸ್ತುತಪಡಿಸುವ ಸಮುದ್ರ ಸೇತುನಿರ್ಮಾಣ, ರಾಕ್ಷಸರ ವಿರುದ್ಧ ಭಯಂಕರ ಯುದ್ಧ ಹಾಗೂ ರಾವಣನ ಸಂಹಾರ –ಈ ಮೂರು ಪ್ರಮುಖ ಘಟನೆಗಳನ್ನು ಧೀರ ಹನುಮಂತನ ಪೌರುಷಗಳನ್ನಾಗಿ ತಿಳಿಸಲಾಗುವ ಈ ಪದ್ಯದಿಂದ ಈ ಘಟನೆಗಳ ನಿರ್ವಹಣೆಯಲ್ಲಿ ರಾಮಚಂದ್ರನ ಪಾತ್ರದ ಬಳಿಕ ಆಂಜನೇಯನದ್ದೇ ಪ್ರಮುಖಪಾತ್ರ ಎಂದು ಹೇಳಿದಂತಾಗುವುದಷ್ಟೇ.

- ಸೀತಾದೇವಿಯ ಚೂಡಾಮಣಿಯನ್ನು 'ಅಭಿಜ್ಞಾನ'ವಾಗಿ ಶ್ರೀರಾಮಚಂದ್ರನಿಗೆ ಆಂಜನೇಯನು ನೀಡಿದನೆಂದಾಗ ರಾಮಚಂದ್ರನನ್ನು 'ಹರಿ' ಹೆಸರಿನಿಂದ ಉಲ್ಲೇಖಿಸಿರುವುದರಲ್ಲಿ ಔಚಿತ್ಯವಿದೆ. ಸೀತಾದೇವಿ 'ಅಭಿಜ್ಞಾನ'ವಾಗಿ ತನ್ನ ಚೂಡಾಮಣಿಯನ್ನು ನೀಡಿದ್ದಲ್ಲದೆ, ಚಿತ್ರಕೂಟ ಬೆಟ್ಟದ ತಪ್ಪಲಲ್ಲಿ ನಡೆದ, ಅವರಿಬ್ಬರಿಗಷ್ಟೇ ತಿಳಿದಿದ್ದ ಕಾಕಾಸುರನ ದುಷ್ಕೃತ್ಯವನ್ನೂ ತಿಳಿಸುವಳು. ಕಾಗೆಯ ರೂಪದ ಜಯಂತ ಕುರಂಗಾಸುರನ ಆವೇಶಕ್ಕೊಳಗಾಗಿ ಸೀತಾದೇವಿಯ ಸ್ತನದ ಮೇಲೆ ತನ್ನ ಕೊಕ್ಕಿನಿಂದ ಚುಚ್ಚಿದರೂ ಅವನಿಗೆ ಸೀತಾದೇವಿಯಲ್ಲಿ ಅನುರಾಗ ಇದ್ದು ಹಾಗೆ ಮಾಡಿದ್ದಲ್ಲ; ಅಸುರಾವೇಶಪ್ರಯುಕ್ತವಾಗಿಯಷ್ಟೇ ಹಾಗೆ ಮಾಡಿದನೆಂದು ಶ್ರೀರಾಮಚಂದ್ರ ಜಯಂತನನ್ನು ಕೊಲ್ಲದೇ ಹಾಗೆಯೇ ಬಿಟ್ಟುಬಿಡುವನು. ಇದನ್ನು 'ಹರಿ'ನಾಮ ಸೂಚಿಸಿಕೊಡುವುದು. ಹರತಿ ಪರಿಹರತಿ –ಜಯಂತನ ಪಾಪಕೃತ್ಯವನ್ನು ಅಸುರಾವೇಶವನ್ನು ಬೇರ್ಪಡಿಸುವ ಮೂಲಕ ಪರಿಹರಿಸಿರುವವನು 'ಹರಿ'. ಹಾಗೆಯೇ ಅಂತಹ ಅಪರಾಧಕ್ಕೆ ಮೂಲ ಕಾರಣನಾದ ಕುರಂಗಾಸುರನನ್ನು ಸಂಹರಿಸುವನು. ಇದನ್ನೂ ಹರಿನಾಮ ಸೂಚಿಸಿಕೊಡುವುದು. 'ಹರತಿ ಸಂಹರತಿ ಕುರಂಗಾಸುರಮಿತಿ ಹರಿಃ'. ಹಾಗೆಯೇ ಕುರಂಗಾಸುರನಿಗೆ ಆಶ್ರಯ ಕೊಟ್ಟ ಕಾಗೆಗಳ ಒಂದು ಕಣ್ಣನ್ನು ಕಿತ್ತುಕೊಳ್ಳುವನು. ಮುಂದೆ ಹುಟ್ಟುವ ಕಾಗೆಗಳೂ ಒಂದು ಕಣ್ಣನ್ನು ಕಳೆದುಕೊಳ್ಳುವಂತೆ ಮಾಡುವನು. **'ಹರತಿ ಅಪಹರತಿ ವಾಯಸಾನಾಂ ಏಕಂ ಅಕ್ಷಿ ಇತಿ ಹರಿಃ'.**

ಹೀಗೆ ಚಿತ್ರಕೂಟ ಪರ್ವತದ ತಪ್ಪಲಲ್ಲಿ ನಡೆದ 'ವಾಯಸವೃತ್ತಾಂತ'ವನ್ನೂ ಸೀತಾದೇವಿ ತನ್ನ 'ಅಭಿಜ್ಞಾನ'ವಾಗಿ ರಾಮಚಂದ್ರನಿಗೆ ತಿಳಿಸಲು ಹೇಳಿದ್ದು, ಅದನ್ನು ಶ್ರೀರಾಮಚಂದ್ರನೆದುರು ಹನೂಮಂತ ವರದಿಸಿದನೆಂಬ ಧ್ವನಿ ಹೊರಡುವಂತೆ ಆ ವೃತ್ತಾಂತದ ಪ್ರಮುಖ ಘಟನೆಗಳನ್ನು ಹರಿನಾಮರೂಢವಾಗಿಸಿ ರಾಮಚಂದ್ರನನ್ನು 'ಹರಿಗೆ ಚೂಡಾಮಣಿಯಿತ್ತು.....' –ಎಂದು ಹರಿನಾಮದಿಂದ ಉಲ್ಲೇಖಿಸಲಾಗಿದೆ.

- 'ಹರಿಗಳ ಕೂಡಿ.......' –ಎಂಬುದಾಗಿ ಕಪಿಗಳನ್ನು ಹರಿಶಬ್ದದಿಂದ ಪರಾಮರ್ಶಿಸಿರುವುದು ಕಾಡಿನ ಮರಗಿಡಗಳನ್ನು, ಪರ್ವತಗಳನ್ನು ತಂದು ಸಮುದ್ರಕ್ಕೆ ಸುರಿಯುವ ಮೂಲಕ ಶರಧಿಯ ಸೇತುಬಂಧನದಲ್ಲಿ ಪಾತ್ರವನ್ನು ವಹಿಸಿದವುಗಳು ಕಪಿಗಳೆಂದು ಸೂಚಿಸಿಕೊಡುವುದಕ್ಕಾಗಿ. **'ಹರಂತಿ ಪರ್ವತಾದೀನ್ ಸಮುದ್ರಂ ಪ್ರತಿ ಆಹರಂತೀತಿ ಹರಯಃ'** –ಎಂಬ ನಿರ್ವಚನವನ್ನಿಟ್ಟುಕೊಂಡಾಗ ಈ ಅರ್ಥವು ಸೂಚಿತವಾಗಬಲ್ಲದು.

- ಬಲು ರಕ್ಕಸರನು 'ಒರಸಿ' – 'ತಿಕ್ಕಿ' 'ಜಜ್ಜಿ' –ಎಂಬ ಮಾತು ಆಂಜನೇಯನು ಅಶೋಕವನವನ್ನು ಪುಡಿಗೈದ ಸಂದರ್ಭದಲ್ಲಿ ಸಾವಿರಾರು ರಕ್ಕಸರನ್ನು 'ಚಕಾರ ತಾನ್ ಸಮಸಶಸ್ತಲಪ್ರಹಾರಚೂರ್ಣಿತಾನ್' (ಮ.ಭಾರ.ತಾ.ನಿ. 7-21) ಅಂಗೈ ಹೊಡೆತದಿಂದ ಜಜ್ಜಿದನು' ಎಂದು ನಿರೂಪಿಸಿರುವುದನ್ನು ಜ್ಞಾಪಿಸಿಕೊಡುವುದು.

- ದಶಶಿರನ ಪುಡಿಗುಟ್ಟಿದವನು ರಾಮಚಂದ್ರ. ಆದರೆ ರಾವಣನು ಲಕ್ಷ್ಮಣನ ವಿರುದ್ಧವಾಗಿ ಶಕ್ತ್ಯಾಯುಧವನ್ನು ಪ್ರಯೋಗಿಸಿದಾಗ ಹನೂಮಂತನು ದೊಡ್ಡ ಶಿಲೆಯನ್ನು ರಾವಣನ ಎದೆಗೆ ಎಸೆದು, ಅದರಿಂದಾಗಿ ಅವನು ತನ್ನ ಹತ್ತು ಬಾಯಿಗಳಿಂದಲೂ ರಕ್ತವನ್ನು

ಕಾರುವಂತೆ ಮಾಡಿದ್ದನು . (ಮ.ಭಾರ.ತಾ.ನಿ. 8-198, 199) ಹಾಗೆಯೇ, ಹಿಂದೆ ಮತ್ತೊಮ್ಮೆ ರಾವಣನು ಚತುರ್ಮುಖದತ್ತವಾದ ಬಾಣವನ್ನು ಲಕ್ಷ್ಮಣನ ವಿರುದ್ಧವಾಗಿ ಪ್ರಯೋಗಿಸಿದಾಗ ಆಂಜನೇಯ ರಾವಣನ ಎದೆಗೆ ತನ್ನ ಮುಷ್ಟಿಯಿಂದ ಹೊಡೆದಿದ್ದನು. ಆಗಲೂ ರಾವಣನು ಪ್ರಾಣ ಕಳೆದುಕೊಂಡವನಂತೆ ಕೈಗಳನ್ನೆಲ್ಲ ಚಾಚಿ ನೆಲದ ಮೇಲೆ ಉರುಳಿದ್ದನಲ್ಲದೆ, ಎಲ್ಲ ಬಾಯಿಗಳಿಂದ ರಕ್ತ ಕಾರಿದ್ದನು. (ಮ.ಭಾರ.ತಾ.ನಿ. 8-90,91 ).

ಹೀಗೆ ಹನೂಮಂತನು ರಾವಣನನ್ನು ಚೆನ್ನಾಗಿ ನಿಗ್ರಹಿಸಿದುದನ್ನು ಗಮನದಲ್ಲಿಟ್ಟುಕೊಂಡು 'ರಣದಲಿ ದಶಶಿರನ ಹುಡಿಗುಟ್ಟಿ.......' ಎನ್ನಲಾಗಿದೆಯಷ್ಟೇ.

- ರಾಮಾಯಣಯುದ್ಧದಲ್ಲಿ ಬಲು ರಕ್ಕಸರ ವಿರುದ್ಧವಾಗಿ ಹಾಗೂ ವಿಶೇಷವಾಗಿ ದಶಶಿರನ ವಿರುದ್ಧವಾಗಿ ಆಂಜನೇಯ ನಡೆಸಿದ ಕಾದಾಟ ಅವನ ಬಲವನ್ನೂ ಧೈರ್ಯವನ್ನೂ ಸಾರಬಲ್ಲದೆಂದು ಸೂಚಿಸುವುದಕ್ಕಾಗಿ 'ಹನುಮಂತ ಬಲವಂತ ಧೀರ' –ಎಂದು ಎರಡು ವಿಶೇಷಣಗಳಿಂದ ವಿಶೇಷಿಸಲಾಗಿದೆ.

## ಸಂಜೀವನವ ಕಿತ್ತು ತಂದವ:

**ಉರಗಬಂಧಕೆ ಸಿಲುಕಿ ಕಪಿವರರು ಮೈಮರೆಯೆ**
**ತರಣಿಕುಲತಿಲಕನಾಜ್ಞೆಯನೆ ತಾಳಿ**
**ಗಿರಿಸಹಿತ ಸಂಜೀವನವ ಕಿತ್ತು ತಂದಿತ್ತ**
**ಸುರನರರೊಳಗೆ ಸರಿಯುಂಟೆ ಹನುಮಂತಗೆ ॥ ೧೦ ॥**

**ರಾಮಾಯಣಯುದ್ಧದಲ್ಲಿ ಇಂದ್ರಜಿತ್ ಪ್ರಯೋಗಿಸಿದ ನಾಗಪಾಶದ ಬಂಧನಕ್ಕೊಳಗಾಗಿ ಸುಗ್ರೀವ, ಅಂಗದ ಮುಂತಾದ ಶ್ರೇಷ್ಠ ಕಪಿಗಳೆಲ್ಲರೂ ಮೂರ್ಛಿತರಾಗುವರು. ಸೂರ್ಯಪುತ್ರ ಸುಗ್ರೀವನ ಪಕ್ಷದಲ್ಲಿ ತಿಲಕಪ್ರಾಯನಾಗಿದ್ದ ಜಾಂಬವಂತನು ಗಂಧಮಾದನ ಗಿರಿಯಿಂದ ಸಂಜೀವನಾದಿ ಔಷಧಿಸಸ್ಯಗಳನ್ನು ತರಲು ವಿನಯಪೂರ್ವಕವಾಗಿ ಆದೇಶಿಸುವನು. ಹನುಮಂತನು ಆ ಆದೇಶಾನುಸಾರವಾಗಿ ಗಂಧಮಾದನಗಿರಿಸಹಿತ ಆ ಸಸ್ಯಗಳನ್ನು ತರುವನು. ಇಂತಹ ಹನುಮಂತನಿಗೆ ಸುರನರರೊಳಗೆ ಸರಿಸಮಾನ ವ್ಯಕ್ತಿ ಇರಲು ಸಾಧ್ಯವೇ ಇಲ್ಲ.**

## ವಿವರಣೆ:

- ರಾಮಾಯಣಯುದ್ಧದ ಅವಧಿಯಲ್ಲಿ ಹನೂಮಂತ ಗಂಧಮಾದನಪರ್ವತವನ್ನೂ, ಅದರಲ್ಲಿ ಸಂಜೀವಿನೀ, ಸಂಧಾನಕರಣೀ, ಸವರ್ಣಕರಣೀ ಹಾಗೂ ವಿಲಶ್ಯಕರಣೀ –ಎಂಬ ನಾಲ್ಕು ಔಷಧದ ಸಸ್ಯಗಳನ್ನೂ ತಂದ ಹನೂಮಂತನ ಮಹಿಮೆಯ ಹಾಗೂ ಅದರ ಹಿನ್ನೆಲೆಯ ವರ್ಣನೆಯನ್ನು ಮಾಡುತ್ತಿರುವ ಈ ಪದ್ಯದಲ್ಲಿ ರಾಮಾಯಣಯುದ್ಧದಲ್ಲಿ ಕುಂಭಕರ್ಣನ ಅವಸಾನದ ಬಳಿಕ ಇಂದ್ರಜಿತ್ ಎರಡನೇ ಬಾರಿ ಪ್ರಯೋಗಿಸಿದ ಮಹಾಸ್ತ್ರಗಳ ಆಕ್ರಮಣಕ್ಕೆ ಒಳಗಾಗಿ ಮೂರ್ಛಿತರಾಗಿದ್ದ ಕಪಿಗಳ ಎಚ್ಚರಿಕೆಗಾಗಿ

ಆಂಜನೇಯ ಗಂಧಮಾದನಪರ್ವತಸಹಿತವಾಗಿ ಮೃತಸಂಜೀವಿನೀ ಮುಂತಾದ ಔಷಧಸಸ್ಯಗಳನ್ನು ತಂದ ಘಟನೆಯ ನಿರೂಪಣೆ ನಡೆದಿದೆ.

- ಕುಂಭಕರ್ಣನ ಸಾವಿನ ಬಳಿಕ ಇಂದ್ರಜಿತ್ ಮೊದಲು ಉರಗಪಾಶದಿಂದ ಸರ್ಪಪಾಶ ದಿಂದ ಲಕ್ಷ್ಮಣಸಹಿತ ಕಪಿಗಳನ್ನೆಲ್ಲ ಬಂಧಿಸಿದ್ದನು. ಆಗ ರಾಮಾವತಾರದ ಅವಧಿಯಲ್ಲಿ ಸೇವೆ ಸಲ್ಲಿಸಲು ಅವಕಾಶಕ್ಕಾಗಿ ಪ್ರಾರ್ಥಿಸಿಕೊಂಡು ಶ್ರೀರಾಮಚಂದ್ರನಿಂದ ಅವಕಾಶ ವನ್ನು ಪಡೆದುಕೊಂಡಿದ್ದ ಗರುಡ ಆಗಮಿಸಿ, ತನ್ನ ರೆಕ್ಕೆಗಳ ವಾತದ ಸ್ಪರ್ಶದಿಂದಲೇ ಬಿಡುಗಡೆ ಆಗುವಂತೆ ಮಾಡಿದ್ದನು (ಮ.ಭಾರ.ತಾ.ನಿ. 8-140.....144)

ಆದುದರಿಂದ ಉರಗಬಂಧಕ್ಕೆ ಸಿಲುಕಿ ಕಪಿವರರು ಮೈಮರೆಯೆ..... ಸಂಜೀವನವ ಕಿತ್ತು ತಂದಿತ್ತದ್ದಲ್ಲ.

ಗರುಡನ ರೆಕ್ಕೆಯ ಗಾಳಿಯಿಂದ ಚೇತರಿಸಿಕೊಂಡ ವಾನರರು ಸಂತುಷ್ಟರಾಗಿ ಸದ್ದು ಮಾಡಲು ಪುನಃ ಬಂದ ಇಂದ್ರಜಿತ್ 'ಮಹಾಸ್ತ್ರಗಳನ್ನು ಸುರಿಸುವನು'. ಈ ಅಸ್ತ್ರಗಳಿಂದ ಪೀಡಿತರಾದ ಕಪಿಗಳು ಹಾಗೂ ಲಕ್ಷ್ಮಣ ಮೂರ್ಛಿತರಾಗಿ ನೆಲದ ಮೇಲೆ ಉರುಳುವರು. ಆ ಸಂದರ್ಭದಲ್ಲಿ ಜಾಂಬವಂತನ ಆದೇಶದ ಮೇರೆಗೆ ಗಂಧಮಾದನಪರ್ವತವನ್ನು ತಂದು ಅದರ ಮೃತಸಂಜೀವಿನೀಸಸ್ಯದ ಗಾಳಿಯಿಂದಾಗಿ ಕಪಿಗಳು ಎಚ್ಚೆತ್ತುಕೊಳ್ಳುವಂತೆ ಆಂಜನೇ ಯನು ಮಾಡಿದ್ದನು (ಮ.ಭಾರ.ತಾ.ನಿ. 8-146.....157)

- ವಾಲ್ಮೀಕಿ ರಾಮಾಯಣದಲ್ಲಿ ಇಂದ್ರಜಿತ್ ಎರಡು ಬಾರಿ ಕಪಿಗಳನ್ನು ಮೂರ್ಛೆ ಗೊಳಿಸಿದ ಸಂಗತಿಯಾಗಲೀ, ಮೊದಲ ಬಾರಿ ಗರುಡ ತನ್ನ ರೆಕ್ಕೆಗಳಿಂದ ಬಿಡುಗಡೆ ಗೊಳಿಸಿದ ಸಂಗತಿಯಾಗಲೀ ಇಲ್ಲ. ಬದಲಾಗಿ ಕುಂಭಕರ್ಣನ ಸಂಹಾರದ ಬಳಿಕ ಇಂದ್ರಜಿತ್ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಲಕ್ಷ್ಮಣಸಹಿತರಾದ ಕಪಿಶ್ರೇಷ್ಠರನ್ನೆಲ್ಲ ಮೂರ್ಛಿತರನ್ನಾಗಿಸಿದ್ದು, ಆಗಲೇ ಆಂಜನೇಯ ಗಂಧಮಾದನಪರ್ವತವನ್ನು ತಂದ ವಿಚಾರ ನಿರೂಪಿತವಾಗಿದೆ (ವಾ. ರಾ. ಯುದ್ಧಕಾಂಡ, 73-54...74 ಮತ್ತು 74-1....77).

- ಸಂಗ್ರಹರಾಮಾಯಣದಲ್ಲಿ ಇಂದ್ರಜಿತ್‌ನ ಮೂಲಕ ಎರಡು ಬಾರಿ ಮೂರ್ಛೆಗೆ ಒಳಗಾದ ವಿಷಯ ಪ್ರಸ್ತುತವಾಗಿದೆಯಾದರೂ ಎರಡನೇ ಬಾರಿಯೂ ಇಂದ್ರಜಿತ್ ನಾಗಪಾಶದಿಂದಲೇ ಬಂಧಿಸಿರುವನೆಂದು ನಿರೂಪಿತವಾಗಿದೆ.[14]

- ಹೀಗೆ ಸಂಗ್ರಹರಾಮಾಯಣದಲ್ಲಿ ತಿಳಿಸಿರುವಂತೆ ಎರಡನೇ ಬಾರಿ ವಾನರರನ್ನು ಮೂರ್ಛೆಗೊಳಪಡಿಸುವಾಗಲೂ ಇಂದ್ರಜಿತ್ 'ಉರಗಪಾಶ'ವನ್ನೇ ಬಳಸಿದ್ದು, ಅದರ

14. 'ಸ ಶಂಭುವರತೋ ಗರ್ವಾತ್ ಪೂರ್ವವತ್ ಸರ್ವವಾನರಾನ್ ।
ನಾಗಭೋಗೈರ್ದೃಢಂ ಬದ್ಧ್ವಾ ರಾವಣಂ ರಾವಣಿಂ ಯಯೌ ॥
*– ಸಂಗ್ರಹ ರಾಮಾಯಣ, ಯುದ್ಧಕಾಂಡ, 10-25.*

ಆಧಾರದಲ್ಲಿ 'ಉರಗಬಂಧಕೆ ಸಿಲುಕಿ.....' ಇತ್ಯಾದಿಯಾಗಿ ನಿರೂಪಿತವಾಗಿದೆ ಎಂದಿಟ್ಟು ಕೊಳ್ಳಬೇಕು.

- ಜಾಂಬವಂತನ ಸೂಚನೆಯ ಮೇರೆಗೆ ಹನೂಮಂತ ಮೃತಸಂಜೀವಿನೀಸಸ್ಯವನ್ನು ತರಲು ತೆರಳಿದ್ದು. ಆದರೆ ಮಧ್ವನಾಮದ ಈ ಪದ್ಯದಲ್ಲಿ 'ತರಣಿಕುಲತಿಲಕನಾಜ್ಞೆಯನೆ ತಾಳಿ' –ಪರ್ವತವನ್ನು ಕಿತ್ತುತಂದಿತ್ತ ಎನ್ನಲಾಗಿದೆ. ಯಾವುದು ತರಣಿಕುಲ? ಅಂತಹ ತರಣಿಕುಲತಿಲಕನಾದರೂ ಯಾರು? ತರಣಿ ಎಂದರೆ ಸೂರ್ಯ. ಸೂರ್ಯನ ಪುತ್ರ ಸುಗ್ರೀವನನ್ನೂ ತಂದೆಯ ಹೆಸರಿನಿಂದ ಕರೆಯಲಾಗಿದೆ ಎಂದಿಟ್ಟುಕೊಂಡರೆ ತರಣಿ ಎಂದರೆ ಸೂರ್ಯನ ಪುತ್ರ ಸುಗ್ರೀವ. ಅವನ ಕುಲ ಎಂದರೆ ಪಕ್ಷ, ಸುಗ್ರೀವನ ಪಕ್ಷ ಅದರಲ್ಲಿ ತಿಲಕಪ್ರಾಯನಾದವನು ಜಾಂಬವಂತ. ಅವನ ಆದೇಶಾನುಸಾರವಾಗಿ ಹನೂಮಂತನು ಗಂಧಮಾದನವನ್ನು ತಂದಿರುವನು– ಇದನ್ನೇ 'ತರಣಿಕುಲತಿಲಕ ನಾಜ್ಞೆಯನೆ ತಾಳಿ....... ಕಿತ್ತು ತಂದಿತ್ತ' –ಎನ್ನಲಾಗಿದೆ ಎಂದಿಟ್ಟುಕೊಳ್ಳಬಹುದು.
- ಆದರೆ ಸೂರ್ಯಸುತ ಸುಗ್ರೀವ ತರಣಿ ಎನಿಸುವುದರಲ್ಲಿ ಸ್ವಾರಸ್ಯ ಇಲ್ಲ.
- ಹಾಗೆಯೇ ಜಾಂಬವಂತ ಕಪಿಸಮುದಾಯದಲ್ಲಿ ಹಿರಿಯನಾಗಿದ್ದರೂ 'ತರಣಿಕುಲ ತಿಲಕ' –ಎಂದು ಉಲ್ಲೇಖಿಸಿರುವುದರಲ್ಲಿ ಸ್ವಾರಸ್ಯ ಇಲ್ಲ.
- ಜಾಂಬವಂತ ಗಂಧಮಾದನವನ್ನು ತರಲು ಕೇಳಿಕೊಂಡದ್ದೇ ಹೊರತು ಆದೇಶಿಸಿದ್ದಲ್ಲ. ಆದುದರಿಂದ ಅವನ 'ಆಜ್ಞೆಯನೆ ತಾಳಿ.....' –ಎಂಬ ಮಾತೂ ಸ್ವರಸ ಎನಿಸದು.
- ಆದ್ದರಿಂದ ತರಣಿಕುಲ –ಎಂದರೆ ಸೂರ್ಯವಂಶ. ಇದರಲ್ಲಿ ತಿಲಕಪ್ರಾಯನಾದವನು ಶ್ರೀರಾಮಚಂದ್ರ. ಇವನ ಆಜ್ಞಾನುಸಾರವಾಗಿ ಹನೂಮಂತ ಗಂಧಮಾದನವನ್ನು ತಂದ ಎಂದು ಅರ್ಥೈಸಬೇಕು.
- ಆದರೆ ಮೊದಲ ಬಾರಿಗೆ ಗಂಧಮಾದನವನ್ನು ತರಲು ಜಾಂಬವಂತ ಹೇಳಿದ್ದೇ ಹೊರತು ರಾಮಚಂದ್ರನಲ್ಲ. ಹನೂಮಂತ ರಾವಣನ ಶಕ್ತ್ಯಾಯುಧದಿಂದ ಘಾತಿತ ನಾಗಿ ಮೂರ್ಛಿತನಾದ ಲಕ್ಷ್ಮಣನನ್ನು ಚೇತರಿಸುವುದಕ್ಕಾಗಿ ಮತ್ತೊಮ್ಮೆ ಅದೇ ಗಂಧ ಮಾದನಪರ್ವತವನ್ನು ತಂದಿರುವನು. ಸುಷೇಣನ ಸೂಚನೆಯ ಮೇರೆಗೆ ಆಗ ಗಂಧ ಮಾದನಪರ್ವತವನ್ನು ತಂದ ಎಂದು ವಾಲ್ಮೀಕಿರಾಮಾಯಣದಲ್ಲಿ (ಯುದ್ಧಕಾಂಡ 101-30.....33) ತಿಳಿಸಲಾಗಿದೆಯಾದರೂ ಮಹಾಭಾರತತಾತ್ಪರ್ಯನಿರ್ಣಯದಲ್ಲಿ (8-200) '...... ಸ ರಾಘವೋ ದಿದೇಶ ಚ ಪ್ರಾಣವರಾತ್ಮಜಂ ಪುನಃ' –ಶ್ರೀರಾಮಚಂದ್ರ ಹನೂಮಂತನಿಗೆ ಗಂಧಮಾದನಪರ್ವತವನ್ನು ತರಲು ಆದೇಶಿಸಿದನೆಂದು ನಿರ್ಣ ಯಿಸಲಾಗಿದೆ. ಈ ನಿರ್ಣಯಕ್ಕನುಗುಣವಾಗಿ 'ತರಣಿಕುಲತಿಲಕಾಜ್ಞೆಯನೆ ತಾಳಿ......' –ಎಂದು ನಿರೂಪಿಸಲಾಗಿದೆ.
- ಎರಡು ಬಾರಿ ಗಂಧಮಾದನವನ್ನು ತಂದ ಘಟನೆಯನ್ನು ಸಂಗ್ರಹಿಸುವುದಕ್ಕಾಗಿ ಎರಡು ಸಂದರ್ಭಗಳಿಗೆ ಸಂಬಂಧಿಸುವ ಬೇರೆಬೇರೆ ಘಟನೆಗಳನ್ನು ಸಂಯೋಜಿಸಿ ನಿರೂಪಿಸಲಾಗಿದೆ ಎಂದಿಟ್ಟುಕೊಳ್ಳಬಹುದಾಗಿದೆ.

● ಸಂಜೀವನಸಹಿತ ಗಿರಿಯನ್ನು ಕಿತ್ತು ತಂದಿತ್ತ...... ಎನ್ನುವ ಬದಲು ಗಿರಿಸಹಿತ ಸಂಜೀವನವನ್ನು ಕಿತ್ತುತಂದಿತ್ತ ಎಂದಿರುವುದು ಆಂಜನೇಯನಿಗೆ ಸಂಜೀವನವನ್ನು ತರುವುದರಲ್ಲಿ ತಾತ್ಪರ್ಯವೇ ಹೊರತು ಗಿರಿಯನ್ನು ತರುವುದರಲ್ಲಿ ಅಲ್ಲ. 'ಪುತ್ರೇಣ ಸಹಾಗತಃ ಪಿತಾ' -ಎನ್ನುವಲ್ಲಿ ಹೇಗೆ ತಂದೆಯ ಆಗಮನವೇ ಮುಖ್ಯವಾಗಿ ತಿಳಿಯಲ್ಪಡುವುದೋ ಹಾಗೆ ತತ್ಕಾಲಕ್ಕೆ ಉಪಯುಕ್ತವಾಗಿದ್ದ ಸಂಜೀವನಕ್ಕೇ ಮುಖ್ಯಾನಯನ -ಎಂದು ಸೂಚಿಸಿಕೊಡುವ ಉದ್ದೇಶದಿಂದ.

* * *

## ನಿಜ ಭಕುತಿಯನೆ ಬೇಡಿದ......

ವಿಜಯ ರಘುಪತಿ ಮೆಚ್ಚಿ ಧರಣಿಸುತೆಯಳಿಗೀಯೆ
ಭಜಿಸಿ ಮೌಕ್ತಿಕದ ಹಾರವನು ಪಡೆದ
ಅಜಪದವಿಯನು ರಾಮ ಕೊಡುವೆನೆನೆ ಹನುಮಂತ
ನಿಜ ಭಕುತಿಯನೆ ಬೇಡಿ ವರವ ಪಡೆದ ॥ ೧೧ ॥

ರಾಮಾಯಣಯುದ್ಧದಲ್ಲಿ ಜಯಶಾಲಿಯಾದ ಶ್ರೀರಾಮಚಂದ್ರ ಅಯೋಧ್ಯೆಯಲ್ಲಿ ನಡೆದ ಪಟ್ಟಾಭಿಷೇಕದ ಬಳಿಕ ಸೀತೆಗೆ ಮುತ್ತಿನ ಹಾರವನ್ನು ನೀಡುವನು. 'ಅದನ್ನು ನಿನಗೆ ಅತ್ಯಂತ ಪ್ರಿಯನಾದವನಿಗೆ ನೀಡು' -ಎನ್ನಲು ಸೀತಾದೇವಿ ಅದನ್ನು ಹನೂಮಂತನಿಗೆ ನೀಡುವಳು.

ಪಟ್ಟಾಭಿಷೇಕದ ಬಳಿಕ ಶ್ರೀರಾಮ ರಾಮಾಯಣಯುದ್ಧದಲ್ಲಿ ಪಾಲ್ಗೊಂಡು ಸೇವೆ ಸಲ್ಲಿಸಿದ್ದ ಕಪಿಗಳನ್ನು ಸಮ್ಮಾನಿಸುತ್ತ, ಹನೂಮಂತನಿಗೆ ಮುಂದೆ ದೊರಕಲಿರುವ ಚತುರ್ಮುಖಬ್ರಹ್ಮನ ಪದವಿಯನ್ನು ಕೊಡುವೆನೆನಲು, ಯಾವುದನ್ನೂ ಬಯಸದ ಏಕಾಂತ ಭಕ್ತನಾದ ಹನೂಮಂತನು ನಿರ್ಮಲವಾದ ಭಕ್ತಿಯ ವರವನ್ನೇ ಶ್ರೀರಾಮಚಂದ್ರನಲ್ಲಿ ಬೇಡಿಕೊಳ್ಳುವನು.

**ವಿವರಣೆ:** ವಾಲ್ಮೀಕಿರಾಮಾಯಣದ ಯುದ್ಧಕಾಂಡದ ಉಪಸಂಹಾರದಲ್ಲಿ (128-77....81) ನಿರೂಪಿಸಿರುವಂತೆ ರಾಮಾಯಣಯುದ್ಧದಲ್ಲಿ ಗೆದ್ದು ಅಯೋಧ್ಯೆಗೆ ತೆರಳಿದ ಶ್ರೀರಾಮಚಂದ್ರನಿಗೆ ಪಟ್ಟಾಭಿಷೇಕ ಆದ ಬಳಿಕ ಶ್ರೀರಾಮಚಂದ್ರ ಸೀತೆಗೆ ಮುತ್ತಿನ ಹಾರವನ್ನು ನೀಡುವನು. ನೀನು ಯಾರ ಬಗ್ಗೆ ತುಷ್ಟಳಾಗಿರುವಿಯೋ ಅವನಿಗೆ ಇದನ್ನು ನೀಡು -ಎಂದು ಶ್ರೀರಾಮಚಂದ್ರ ತಿಳಿಸಲು ಸೀತಾದೇವಿ ಆ ಹಾರವನ್ನು ಹನೂಮಂತನಿಗೆ ನೀಡುವಳು. ಇದನ್ನು ಈ ಹಾಡಿನ ಪೂರ್ವಾರ್ಧದಲ್ಲಿ ತಿಳಿಸಲಾಗಿದೆ.

● ಮಧ್ವವಿಜಯದಲ್ಲಿ (1-22) ನಮಗೆ ಅತ್ಯಂತ ಇಷ್ಟನಾದವನಿಗೆ ನೀಡು– 'ಪ್ರೇಷ್ಠಾಯ ನಸ್ತಾಂ ಭಜತಾಂ ದಿಶೇತಿ' ಎಂದೇ ರಾಮಚಂದ್ರ ಸೀತೆಗೆ ಹಾರವನ್ನು ಕೊಡುವನೆಂದು ತಿಳಿಸಲಾಗಿದೆ.

ಆದರೆ ವಾಲ್ಮೀಕಿ ರಾಮಾಯಣದ ಪ್ರಕಾರ ಸೀತೆಗಾಗಿ ಆ ಹಾರವು ನೀಡಲ್ಪಟ್ಟಿದ್ದು, ಸೀತೆ ಅದನ್ನು ಆಂಜನೇಯನಿಗೆ ನೀಡಬೇಕೆಂದು ಬಯಸಿದ್ದನ್ನು ಗಮನಿಸಿದ ರಾಮಚಂದ್ರ 'ನೀನು ಯಾರ ಬಗ್ಗೆ ತುಷ್ಟಳಾಗಿರುವಿಯೋ ಅವನಿಗೆ ನೀಡು' –ಎನ್ನಲು ಬಳಿಕ ಆಂಜನೇಯನಿಗೆ ನೀಡುವಳು.

'ವಿಜಯ ರಘುಪತಿ ಮೆಚ್ಚಿ ಧರಣಿಸುತೆಯಗೀಯೆ......' –ಎಂಬ ಮಾತು ವಾಲ್ಮೀಕಿ ರಾಮಾಯಣದ ವಿಚಾರವನ್ನೇ ತಿಳಿಸುತ್ತಿದೆ.

- 'ಭಜಿಸಿ ಮೌಕ್ತಿಕದ ಹಾರವನು ಪಡೆದ' –ಎಂಬ ಮಾತಿನಿಂದ ಹನುಮಂತನು ಭಕ್ತಿಯಿಂದ ಒಲಿಸಿಕೊಂಡು ಆ ಹಾರವನ್ನು ಪಡೆದಿರುವನೆಂದು ಸೂಚಿತವಾಗುವುದು.
- ಅಜಪದವಿಯನು ರಾಮ ಕೊಡುವೆನೆನೆ...... ಚತುರ್ಮುಖನ ಪದವಿಯನ್ನೂ ಆದರಲ್ಲಿದ್ದುಕೊಂಡು ಸಹಭೋಗವನ್ನೂ '**.....ಮಯಾ ಪ್ರದತ್ತಂ ಹನುಮಾನ್ ಸದೈವ**' –ಇದನ್ನು ಸರ್ವದಾ ನೀಡಿರುವೆನು ಎಂದು ಶ್ರೀರಾಮಚಂದ್ರ ಹನೂಮಂತನನ್ನು ಅನುಗ್ರಹಿಸುವನು.

ಆದುದರಿಂದ ಇದರ ಬದಲಾಗಿ ಹನುಮಂತನು ಭಕ್ತಿಯ ವರವನ್ನು ಕೇಳಿಕೊಳ್ಳುವನೆಂಬ ಅರ್ಥವಲ್ಲ.

ಇಷ್ಟೊಂದು ದೊಡ್ಡ ಪದವಿ ಶ್ರೀರಾಮಚಂದ್ರನಿಂದ ತನಗೆ ಅನುಗ್ರಹೀತವಾಯಿತೆಂದು ಆ ಪದವಿಯ ಬಗ್ಗೆ ಗಮನ ಹರಿಸದೆ '**ಪ್ರವರ್ಧತಾಂ ಭಕ್ತಿರಲಂ ಕ್ಷಣೇ ಕ್ಷಣೇ.....**' –ಎಂದು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ನಿರ್ಣಯಿಸಿರುವಂತೆ 'ನಿಜ ಭಕುತಿಯನೆ ಬೇಡಿ ವರವ ಪಡೆದ' –ನಿಜಭಕ್ತಿಯನ್ನು ವರರೂಪದಲ್ಲಿ ಬೇಡಿ ಪಡೆದುಕೊಂಡನು. ಯಾವುದೇ ಉದ್ದೇಶಕ್ಕಾಗಿ ಕಾಣಿಸಿಕೊಳ್ಳುವ ಕೃತಕ ಭಕ್ತಿ ಆಗಿರದೆ, ಸ್ವಾಭಾವಿಕ ಭಕ್ತಿ 'ನಿಜಭಕ್ತಿ' –ಎಂದು ಉಲ್ಲೇಖಿಸಲ್ಪಟ್ಟಿದೆ.

* * *

## ರಕ್ಕಸರ ಮುರಿದೊಟ್ಟುವ ಭೀಮವಿಕ್ರಮ:

ಆ ಮಾರುತನೆ ಭೀಮನೆನಿಸಿ ದ್ವಾಪರದಲ್ಲಿ
ಸೋಮಕುಲದಲಿ ಜನಿಸಿ ಪಾರ್ಥರೊಡನೆ
ಭೀಮವಿಕ್ರಮ ರಕ್ಕಸರ ಮುರಿದೊಟ್ಟಿದ
ಆ ಮಹಿಮ ನಮ್ಮ ಕುಲಗುರುರಾಯನು ॥ ೧೨ ॥

ಹೀಗೆ ಹನೂಮಂತನಾಗಿ ಮೆರೆದ ಮಾರುತನೆ ದ್ವಾಪರಯುಗದಲ್ಲಿ ಚಂದ್ರಕುಲದಲ್ಲಿ ಯುಧಿಷ್ಠಿರ, ಅರ್ಜುನ –ಇವರ ಜೊತೆಗೆ ಪ್ರಾದುರ್ಭವಿಸಿದನು. ಭಯಂಕರವಾದ ಪರಾಕ್ರಮವುಳ್ಳ ಆ ಭೀಮ ಭಯಂಕರ ಪರಾಕ್ರಮದ ರಾಕ್ಷಸರನ್ನು ನಾಶಗೈದನು. ಇಂತಹ ಮಹಿಮಾಶಾಲಿ ಭೀಮ ನಮ್ಮ ಕುಲಗುರುರಾಯನು!

**ವಿವರಣೆ:**

- 'ಆ ಮಾರುತನೆ ಭೀಮನೆನಿಸಿ......' –ವಾಯುದೇವನೇ ಭೀಮನಾಗಿ ಬಂದದ್ದೆಂಬ ನಿರೂಪಣೆಯಿಂದ, 'ಬಳಿತ್ಥಾ ತದ್ವಪುಷೇ ಧಾಯಿ......' –ಎಂದು ಬಳಿತ್ಥಾಸೂಕ್ತದಲ್ಲಿ ನಿರೂಪಿತವಾದಂತೆ ವಾಯುದೇವನ ಮೂಲರೂಪದ ಬಲಾದಿಗುಣಸಂಪನ್ನವಾಗಿಯೇ ಅವತಾರರೂಪಗಳಿರುವುದರಿಂದ ಮೂಲರೂಪಕ್ಕೂ ಅವತಾರರೂಪಗಳಿಗೂ ಭೇದವಿಲ್ಲ; ವ್ಯತ್ಯಾಸವಿಲ್ಲ –ಎಂದು ಸೂಚಿಸಿದಂತಾಗುವುದು.

- 'ಸೋಮಕುಲದಲಿ ಜನಿಸಿ......' –ಎನ್ನುವ ಮಾತಿನಿಂದ ನಿಯೋಗಪದ್ಧತಿಗನುಗುಣವಾಗಿ ವಾಯುದೇವನ ಮೂಲಕ ಭೀಮಸೇನ ಹುಟ್ಟಿದ್ದರೂ, 'ನಿಯೋಗಪದ್ಧತಿ'ಯ ಕ್ರಮಕ್ಕನುಗುಣವಾಗಿ ಅವನು ಚಂದ್ರಕುಲದಲ್ಲಿ ಪಾಂಡುರಾಜನ ಉತ್ತರಾಧಿಕಾರಿಯಾಗಿಯೇ ಹುಟ್ಟಿದಂತೆ ಹೊರತು ದುರ್ಯೋಧನಾದಿಗಳು ವಾದಿಸುತ್ತಿದ್ದಂತೆ ಚಂದ್ರವಂಶದ, ಭರತಕುಲದ ನಂಟು ಇಲ್ಲದವರಾಗಿ ಹುಟ್ಟಿದವರಲ್ಲ –ಎಂದು ಸೂಚಿತವಾಗುವುದು.

- 'ಪಾರ್ಥರೊಡನೆ' ಎಂಬ ಮಾತು 'ಪಾರ್ಥರೊಡನೆ ಜನಿಸಿ' –ಎಂಬುದಾಗಿ ಜನಿಸಿ ಪದದ ಜೊತೆಗೂ ಪಾರ್ಥರೊಡನೆ ರಕ್ಕಸರ ಮುದಿದೊಟ್ಟಿದ –ಎಂಬುದಾಗಿ ರಾಕ್ಷಸರನ್ನು ನಾಶಗೈಯುವಲ್ಲೂ ಅನ್ವಯವನ್ನು ಹೊಂದುವನು.

ಯುಧಿಷ್ಠಿರರೂಪದ ಪಾರ್ಥನ ತಮ್ಮನಾಗಿಯೂ, ಅರ್ಜುನರೂಪದ ಪಾರ್ಥನ ಅಣ್ಣನಾಗಿಯೂ –ಹೀಗೆ 'ಪಾರ್ಥರೊಡನೆ' ಜನಿಸಿದನು. ಯುಧಿಷ್ಠಿರನ ತಮ್ಮನಾಗಿ ಹುಟ್ಟಿದ್ದರಿಂದ ಜೂಜಾಟವೇ ಮುಂತಾದ ಅನೇಕ ಸಂದರ್ಭಗಳಲ್ಲಿ ಅಗ್ರಜ ಎಂಬ ದೃಷ್ಟಿಯಿಂದ ಯುಧಿಷ್ಠಿರನನ್ನು ಮನ್ನಿಸಿ, ಮುಂದಿನ ಬೆಳವಣಿಗೆಗಾಗಿ ಭಗವತ್‌ಸಂಕಲ್ಪಾನುಸಾರ ಸುಮ್ಮನೆ ಇರಲಿಕ್ಕೆ ಅನುಕೂಲವಾಯಿತು.

ಅರ್ಜುನನ ಅಣ್ಣನಾಗಿ ಹುಟ್ಟಿದ್ದರಿಂದ, 'ಏವಂ ಸ ಕೃಷ್ಣತನುರರ್ಜುನಮಪ್ಯರಕ್ಷದ್ ಭೀಮಾರ್ಥಮೇವ.......' –ಎಂದು (ಮ.ಭಾರ.ತಾ.ನಿ. 5-47) ನಿರ್ಣಯಿಸಿರುವಂತೆ ಅರ್ಜುನನಿಗೆ ಶ್ರೀಕೃಷ್ಣನ ರಕ್ಷಣೆ ದೊರಕುವಂತಾಯಿತು.

ಹೀಗೆ ಶ್ರೀಹರಿಯ ಸಂಕಲ್ಪಾನುಸಾರವಾಗಿ, ಉದ್ದೇಶಪೂರ್ವಕವಾಗಿಯೇ ಭೀಮಸೇನ ಯುಧಿಷ್ಠಿರನ ತಮ್ಮನಾಗಿಯೂ, ಅರ್ಜುನನ ಅಣ್ಣನಾಗಿಯೂ ಜನಿಸಿರುವನೇ ಹೊರತು ಆಕಸ್ಮಿಕವಾಗಿ ಅಲ್ಲ ಎಂಬ ಧ್ವನಿ ಮೂಡುವಂತೆ 'ಜನಿಸಿ ಪಾರ್ಥರೊಡನೆ' –ಎಂದು ನಿರೂಪಿಸಲಾಗಿದೆ.

- 'ಯುಧಿಷ್ಠಿರಾದ್ಯೇಷು ಚತುರ್ಷು ವಾಯುಸ್ಸಮಾವಿಷ್ಟಃ.......' ಇತ್ಯಾದಿಯಾಗಿ ಮಹಾಭಾರತತಾತ್ಪರ್ಯನಿರ್ಣಯದಲ್ಲಿ (12-129...131) ನಿರ್ಣಯಿಸಿರುವಂತೆ ವಾಯುದೇವ ಭೀಮನಾಗಿ ಜನಿಸಿದಾಗ ಯುಧಿಷ್ಠಿರಾದಿಗಳಲ್ಲೂ ಬೇರೆಬೇರೆ ರೂಪದಿಂದ ಆವೇಶಗೊಂಡಿದ್ದು ಜನಿಸಿದ್ದರಿಂದ ಈ ಅಭಿಪ್ರಾಯದಲ್ಲೂ 'ಜನಿಸಿ ಪಾರ್ಥರೊಡನೆ' –ಎನ್ನಲಾಗಿದೆ.

- ರಕ್ಕಸರನ್ನು ನಾಶ ಮಾಡುವಲ್ಲಿ ಯುಧಿಷ್ಠಿರನ, ಅವನಿಗಿಂತಲೂ ಅಧಿಕವಾಗಿ ಅರ್ಜುನನ ಪಾತ್ರವನ್ನೂ ತಿಳಿಸುವುದಕ್ಕಾಗಿ 'ಪಾರ್ಥರೊಡನೆ....... ರಕ್ಕಸರ ಮುರಿದೊಟ್ಟಿದ' –ಎಂದು ಅನ್ವಯಿಸಿ, ಅರ್ಥೈಸಿಕೊಳ್ಳಬಹುದಾಗಿದೆ.

- **ಭೀಮವಿಕ್ರಮ** –ಎಂಬುದನ್ನು ಭೀಮನಿಗೆ ನೀಡಲಾದ ವಿಶೇಷಣ ಎಂದಿಟ್ಟುಕೊಂಡಾಗ ಭೀಮ ಹೆಸರಿನ ಒಂದು ಅರ್ಥದ ಮೇಲೆ ಬೆಳಕು ಚೆಲ್ಲಿದಂತಾಗುವುದು. ಭೀಮ ಎಂದರೆ ಭಯಂಕರ. ಭಯಂಕರವಾದ ಪರಾಕ್ರಮವುಳ್ಳವನಾಗಿರುವುದರಿಂದ ಭೀಮನಿಗೆ ಆ ಹೆಸರು ಬಂದಿದೆ.

- ಭೀಮವಿಕ್ರಮ ಎಂಬುದನ್ನು ರಕ್ಕಸರಿಗೆ ವಿಶೇಷಣವನ್ನಾಗಿ ಇಟ್ಟುಕೊಂಡಾಗ ಭಯಂಕರ ಪರಾಕ್ರಮದ ರಾಕ್ಷಸರನ್ನು ಭೀಮಸೇನ ಸದೆಬಡಿದಿರುವನೆಂದು ತಿಳಿಯುವುದು. ಭೀಮಸೇನ ಕೊಂದಿರುವ– ಜರಾಸಂಧ, ಕೀಚಕ, ಬಕ, ಕಿರ್ಮೀರ, ಕ್ರೋಧವಶರು, ಮಣಿಮಂತ, ದುರ್ಯೋಧನಾದಿಗಳು –ಇವರೆಲ್ಲ ರಕ್ಕಸರಾಗಿದ್ದರು. ರುದ್ರಾದಿಗಳ ವರ ಬಲದಿಂದ ಭೀಮಪರಾಕ್ರಮದವರೂ ಆಗಿದ್ದರು.

- **'......ಪ್ರಧಾನ ವಾಯುಸನ್ನಿಧೇರ್ಬಲಾಧಿಕತ್ವಮಸ್ಯ ತತ್'** –ಎಂದು ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ (12-38) ನಿರ್ಣಯಿಸಿರುವಂತೆ ಪ್ರಧಾನವಾಯುವಿನ ಸನ್ನಿಧಾನದಿಂದಾಗಿ ಅಧಿಕಬಲಸಂಪನ್ನನಾಗಿದ್ದನು ದುರ್ಯೋಧನ. ಆದುದರಿಂದ 'ರಕ್ಕಸರು' –ಎಂಬ ಪದದಿಂದ ದುರ್ಯೋಧನನನ್ನು ಇಟ್ಟುಕೊಂಡಲ್ಲಿ, ಅವನಿಗೆ ನೀಡ ಲಾಗುವ 'ಭೀಮವಿಕ್ರಮ' ವಿಶೇಷಣದಿಂದ ಭೀಮ ಎನಿಸುವ ಪ್ರಧಾನ ವಾಯು ವಿನಿಂದಾಗಿ ವಿಕ್ರಮ ಸಂಪನ್ನನಾದವನೆಂಬ ಅರ್ಥದ ಧ್ವನಿಯನ್ನು ಮೂಡಿಸ ಬಹುದಾಗಿದೆ.

- 'ರಕ್ಕಸರ ಮುರಿದೊಟ್ಟಿದ' –ಎಂದು ಮುರಿದು–ತುಂಡರಿಸಿ, ಒಟ್ಟಿದ–ರಾಶಿಮಾಡಿದ –ಎಂಬ ಪದವು ಅನಾಯಸವಾಗಿ ಅವರನ್ನು ನಾಶಮಾಡಿದನೆಂಬ ಧ್ವನಿಯನ್ನು ಹೊರಡಿಸಬಲ್ಲದು.

- ಜರಾಸಂಧ, ಕೀಚಕ, ದುರ್ಯೋಧನಾದಿಗಳನ್ನು ಅವರ ಸಂಧಿ, ಅವಯವಗಳು, ಸೊಂಟ –ಇತ್ಯಾದಿಗಳನ್ನು ಮುರಿದು ಕೊಂದದ್ದರಿಂದ 'ಮುರಿದೊಟ್ಟಿದ' –ಎಂಬ ಶಬ್ದವನ್ನು ಬಳಸಿಯೇ ನಾಶಗೈದದ್ದನ್ನು ತಿಳಿಸಲಾಗಿದೆ.

- '......ನಮ್ಮ ಕುಲಗುರುರಾಯರು' –ಎಂಬುದಾಗಿ ಅಜ್ಞಾನ, ವಿಪರೀತಜ್ಞಾನಾದಿಗಳಿಗೆ ಸಂಕೇತದಂತಿದ್ದ ದುಷ್ಟರಕ್ಕಸರನ್ನು ಕೊಂದ ಭೀಮಸೇನ ಸಂಶಯ, ಅನ್ಯಥಾಜ್ಞಾನ ಗಳನ್ನು ಪರಿಹರಿಸಬಲ್ಲ ಗುರುಗಳೆನಿಸಲು ಹೆಮ್ಮೆ ಎನಿಸುವುದೆಂದು ಸೂಚಿಸಲಾಗಿದೆ.

* * *

**ಕರಿಗಳ ಕರಿಗಳಿಂ ಅರೆವ ವೀರ:**

ಕರದಿಂದ ಶಿಶುಭಾವನಾದ ಭೀಮನ ಬಿಡಲು
ಗಿರಿಯೊಡೆದು ಶತಶೃಂಗವೆಂದೆನಿಸಿತು
ಹರಿಗಳ ಹರಿಗಳಿಂ ಕರಿಗಳ ಕಂಗಳಿಂ
ಅರೆವ ವೀರನಿಗೆ ಸುರನರರು ಸರಿಯೇ ॥ ೧೩ ॥

**ಭೀಮಸೇನನು ಹುಟ್ಟಿದಾಕ್ಷಣ ಹುಲಿಗೆ ಹೆದರಿದ ತಾಯಿ ಕುಂತಿಯ ಕೈ ಜಾರಿ ಕೆಳಗೆ ಬೀಳಲು ಪರ್ವತವು ಅವನ ದೇಹದ ಸ್ಪರ್ಶಕ್ಕೊಳಗಾಗಿ ಪುಡಿಪುಡಿಯಾಗಿ ನೂರು ಶಿಖರ ಗಳನ್ನೊಳಗೊಂಡದ್ದೆಂಬ ಅರ್ಥದಲ್ಲಿ ಅನ್ವರ್ಥಕವಾಗಿ ಶತಶೃಂಗ ಎನಿಸಿತು. ಹುಡುಗ ನಾಗಿದ್ದಾಗ ಕಾಡಿನಲ್ಲಿ ಸಿಂಹ, ಆನೆಗಳ ಜೊತೆ ಆಟ ಆಡುತ್ತಿದ್ದ ಭೀಮಸೇನ ಸಿಂಹಗಳ ವಿರುದ್ಧ ಸಿಂಹಗಳನ್ನೇ ಛೂಬಿಡುತ್ತ, ಆನೆಗಳ ವಿರುದ್ಧ ಆನೆಗಳನ್ನೇ ಛೂ ಬಿಡುತ್ತ ಅವು ಅನ್ಯೋನ್ಯವಾಗಿ ಕಾದಾಡಿಕೊಳ್ಳುವಂತೆ ಮಾಡುತ್ತಿದ್ದ ವೀರ. ಅರೆವ ಎಂದರೆ ತಿಕ್ಕಾಟ ಕ್ಕೊಳಪಡಿಸುವವನೆಂದರ್ಥ.**

- ಆಗತಾನೇ ಹುಟ್ಟಿದ ಭೀಮ ಪರ್ವತದ ಮೇಲೆ ತಾಯಿಯ ಕೈಯಿಂದ ಜಾರಿಬಿದ್ದು ಪರ್ವತವನ್ನೇ ಪುಡಿಗೈದ ಲೀಲೆಯನ್ನು ಪೂರ್ವಾರ್ಧದಲ್ಲಿ ತಿಳಿಸಲಾಗಿದೆ. ಇದು ಭೀಮನ ಶರೀರದಾರ್ಢ್ಯಕ್ಕೆ ಸಂಬಂಧಪಡುವ ಮಹಿಮೆ.
- ಪದ್ಯದಲ್ಲಿ '**ಶಿಶುಭಾವನಾದ**' –ಎಂದು ಸಾಮಾನ್ಯವಾಗಿ ಶೈಶವದಲ್ಲಿ ನಡೆದ ಘಟನೆ ಎಂದಷ್ಟೇ ತಿಳಿಸಿದ್ದಾರೆ. '**ತಜ್ಜನ್ಮಮಾತ್ರೇಣ ಧರಾ ವಿದಾರಿತಾ......**' ಎಂಬುದಾಗಿ ಭೀಮಸೇನ ಹುಟ್ಟಿದಾಕ್ಷಣ ನಡೆದ ಘಟನೆಯನ್ನು ತಿಳಿಸಿ '**.........ಶಾರ್ದೂಲಭೀತಾಜ್ಜನನೀಕರಾಗ್ರಾದ್ಯದಾ ಪಪಾತ ಸಂಚೂರ್ಣಿತ ಏವ ಪರ್ವತಃ**' –ಎಂದು ಕುಂತಿಯ ಕೈಯಿಂದ ಭೀಮಪರ್ವತದ ಮೇಲೆ ಬಿದ್ದ ಘಟನೆಯನ್ನೂ ತಿಳಿಸಲಾಗುವುದರಿಂದ ಈ ಘಟನೆಯೂ ಭೀಮಸೇನನ ಜನನವಾದಾಕ್ಷಣ ನಡೆದ ಘಟನೆ ಎಂದು ಸ್ಪಷ್ಟವಾಗುವುದು.

ಮಹಾಭಾರತದಲ್ಲಿ (ಆದಿಪರ್ವ, 161-18) ಕುಂತಿ ಯುಧಿಷ್ಠಿರನಿಗೆ ಭೀಮನ ಬಲವನ್ನು ಪರಿಚಯಿಸಿಕೊಡುತ್ತ '**ಜಾತಮಾತ್ರಃ ಪುರಾ ಚೈವ ಮಮಾಂಕಾತ್ ಪತಿತೋ ಗಿರೌ**' –ಎಂಬುದಾಗಿ ಶತಶೃಂಗ ಪರ್ವತದ ಮೇಲೆ ಬಿದ್ದ ಘಟನೆ ಭೀಮಸೇನ ಹುಟ್ಟಿದಾಕ್ಷಣ ನಡೆದದ್ದೆಂದೇ ತಿಳಿಸಿರುವಳು.

- ಪದ್ಯದ ಉತ್ತರಾರ್ಧದಲ್ಲಿ ಭೀಮಸೇನ ಬಾಲ್ಯದಲ್ಲಿ ಅರಣ್ಯದಲ್ಲಿ ಸಿಂಹ, ಆನೆ –ಇತ್ಯಾದಿಗಳ ಜೊತೆಗೆ ನಡೆಸುತ್ತಿದ್ದ ಕ್ರೀಡೆಯ ಚಿತ್ರಣ ಬಂದಿದೆ. ಭೀಮಸೇನನ ಧೈರ್ಯ ಮತ್ತು ಪರಾಕ್ರಮ, ಹಾಗೂ ತಂತ್ರಗಾರಿಕೆಗಳ ಮೇಲೆ ಬೆಳಕು ಚೆಲ್ಲುವ ಮಾತಿದು. ಮಹಾಭಾರತದ ಉಪಲಬ್ಧಪಾಠದಲ್ಲಿ ಈ ಚಿತ್ರಣ ದೊರಕದಿದ್ದರೂ ಮಧ್ವವಿಜಯದಲ್ಲಿ ಭೀಮಸೇನ ಹಸ್ತಿನಪುರದಲ್ಲಿರುವಾಗ ತಾನು ಕಾಡಿನಲ್ಲಿ ಸಿಂಹಸಮೂಹವನ್ನು ಹಿಂಸಿಸುತ್ತ ನಡೆಸುತ್ತಿದ್ದ ಬಾಲ್ಯಲೀಲೆಗಳನ್ನು ಸ್ಮರಿಸುತ್ತಿದ್ದನೆಂದು

ನಿರೂಪಿತವಾಗಿರುವುದರ[15] ಹಿನ್ನೆಲೆಯಲ್ಲಿ ಭೀಮಸೇನ ಕಾಡಿನಲ್ಲಿ ಸಿಂಹಗಳ, ಆನೆಗಳ ಜೊತೆಗೆ ಆಟ ಆಡುತ್ತಿದ್ದ ಎಂದು ಸೂಚಿತವಾಗುವುದು.

* * *

## ಗರಳವ ಉಂಡು ತೇಗಿದ:

ಕುರುಪ ಗರಳವನಿಕ್ಕೆ ನೆರೆ ಉಂಡು ತೇಗಿ
ಹಸಿದುರಗಗಳ ಮ್ಯಾಲೆ ಬಿಡಲದನೊರಸಿದ
ಅರಗಿನರಮನೆಯಲ್ಲಿ ಉರಿಯನಿಕ್ಕಲು ವೀರ
ಧರಿಸಿ ಜಾಹ್ನವಿಗೊಯ್ದ ತನ್ನನುಜರ ॥ ೧೪ ॥

**ದುರ್ಯೋಧನ ಭೀಮನಿಗೆ ವಿಷವನ್ನು ನೀಡಲು, ಅದನ್ನು ಚೆನ್ನಾಗಿ ತಿಂದು, ಅರಗಿಸಿಕೊಳ್ಳುವನು. ಆಹಾರ ಬೇಕೆನ್ನುವ ಸ್ಥಿತಿಗೆ ಬಂದಂತಹವುಗಳಂತಿದ್ದ ಹಾವುಗಳನ್ನು ಭೀಮನ ಮೇಲೆ ಬಿಡಲು ಅವುಗಳನ್ನು ಒರಸಿದ- ತಿಕ್ಕಿಹಾಕಿದನು. ಅರಗಿನ ಮನೆಯಲ್ಲಿ ಬೆಂಕಿಯಿಡಲು ವೀರನಾದ ಭೀಮಸೇನ ತನ್ನ ಅನುಜರಾದ ಯುಧಿಷ್ಠಿರ, ಅರ್ಜುನ, ನಕುಲ, ಸಹದೇವ -ಇವರನ್ನು ತಾಯಿ ಕುಂತೀಸಹಿತವಾಗಿ ಗಂಗೆಗೆ ಕೊಂಡೊಯ್ಯುವನು.**

## ವಿವರಣೆ:

- ದುರ್ಯೋಧನ ಭೀಮಸೇನನನ್ನು ಮುಗಿಸಿಬಿಡಲು ಎಸಗಿದ ಮೂರು ಕುತಂತ್ರಗಳ ಬಗ್ಗೆ ಈ ಪದ್ಯದಲ್ಲಿ ಬೆಳಕು ಚೆಲ್ಲಲಾಗುತ್ತಿದೆ.
- ದುರ್ಯೋಧನನನ್ನು ವ್ಯಂಗ್ಯಾರ್ಥದಲ್ಲಿ 'ಕುರುಪ' ಎನ್ನಲಾಗಿದೆ. ಧೃತರಾಷ್ಟ್ರನ ಪ್ರತಿನಿಧಿಯಾಗಿ ಸಿಂಹಾಸನದಲ್ಲಿ ಕುಳಿತಿರುವುದರಿಂದ 'ಕುರುಪ' -ಕುರುವಂಶದ ರಾಜ -ಎಂದೇನೋ ಲೋಕದಿಂದ ಪರಿಗಣಿತನಾಗಿರುವನು. ಆದರೆ ನಿಜವಾಗಿ ಕುರುವಂಶವನ್ನು ಪಾಲಿಸುವ ಪ್ರಯುಕ್ತ 'ಕುರುಪ' ಎನಿಸಲು ಅರ್ಹನಾಗಿಲ್ಲ. ಬದಲಾಗಿ ಕುರುವಂಶದ ಶ್ರೇಷ್ಠ ವ್ಯಕ್ತಿಗಳಾದ ಭೀಮಾದಿಗಳನ್ನು ಇಲ್ಲವಾಗಿಸುವುದಕ್ಕೇ ಹೆಣಗಾಡುತ್ತಿರುವ ದುರ್ಯೋಧನ ಹೆಸರಿಗಷ್ಟೇ 'ಕುರುಪ' -ಎಂಬ ಧ್ವನಿ ಹೊರಡುವಂತೆ ಉಲ್ಲೇಖಿಸಲಾಗಿದೆ.
- ಭೀಮಸೇನನನ್ನು ಕೊಂದುಬಿಡಬೇಕೆಂದು ದುಷ್ಕೃತ್ಯಗಳನ್ನು ಎಸಗಿದುದರಲ್ಲಿ ದುರ್ಯೋಧನನಂತೆಯೇ ಅವನ ಉಳಿದ ತೊಂಬತ್ತೊಂಬತ್ತು ತಮ್ಮಂದಿರೂ '.......ವಧನಿಶ್ಚಯಮಸ್ಯ ಚಕ್ರುಃ' (ಮ.ಭಾರ.ತಾ.ನಿ. 14-67) ಎಂದು ನಿರ್ಣಯಿಸಿರು

---

15. 'ಕೈಶೋರಲೀಲಾಂ ಹತಸಿಂಹಸಂಘಾಂ ವನೇ ಪ್ರವೃತ್ತಾಂ ಸ್ಮರತಿ ಸ್ಮ ಸೂತ್ಕಃ'
*– (ಮ.ವಿ. 1-30)*

ವಂತೆ ಸೇರಿರುವರಾದರೂ ಅವರಲ್ಲಿ ದುರ್ಯೋಧನ ಹಿರಿಯವನೆಂಬ ದೃಷ್ಟಿ ಯಿಂದಷ್ಟೇ 'ಕುರುಪ' –ಎಂದು ಅವನನ್ನಷ್ಟೇ ಉಲ್ಲೇಖಿಸಲಾಗಿದೆ.

- ಭೀಮಸೇನನಿಗೆ ಅಡುಗೆಯವನ ಮೂಲಕ ಭಕ್ಷ್ಯಭೋಜ್ಯಗಳಲ್ಲಿ ವಿಷವನ್ನು ಬೆರಸಿ ನೀಡಲಾಗುವುದು. ಅದು ಕ್ಷೀರಸಾಗರದ ಮಥನದ ಸಂದರ್ಭದಲ್ಲಿ ಕಾಣಿಸಿಕೊಂಡಿದ್ದ ಕಾಲಕೂಟ ವಿಷ. ರುದ್ರದೇವನಲ್ಲಿದ್ದ ಅದನ್ನು ತಪಸ್ಸಿನ ಮೂಲಕ ಶುಕಾಚಾರ್ಯ ಪಡಕೊಂಡಿದ್ದರು. ಅವರನ್ನು ಸಂತೋಷಪಡಿಸಿ ಶಕುನಿ ಪಡೆದುಕೊಂಡಿದ್ದ. ಹೀಗೆ ಶಕುನಿಯ ಮೂಲಕ ದುರ್ಯೋಧನನಿಗೆ ದೊರಕಿದ್ದ ಅಂತಹ ದುರ್ಯೋಧನನ ಸ್ವರೂಪ ಕಲಿಯೇ ಅಭಿಮಾನಿಯಾಗಿದ್ದ ಆ ವಿಷವನ್ನು ಭಕ್ಷ್ಯಭೋಜ್ಯಗಳ ಮೂಲಕ ಸಮಗ್ರವಾಗಿಯೇ ತಿಂದ ಭೀಮಸೇನ **'......ವಿಷ್ಣೋರನುಗ್ರಹಬಲಾಜ್ಜರಯಾಂ ಚಕಾರ'** (ಮ.ಭಾರ.ತಾ.ನಿ. 14-71) ಎಂದು ನಿರ್ಣಯಿಸಿರುವಂತೆ ಪೂರ್ಣವಾಗಿ ಅರಗಿಸಿ ಕೊಂಡಿದ್ದನು. 'ಉಂಡು ತೇಗಿ' ಶಬ್ದ ತಿಂದದ್ದನ್ನು ಚೆನ್ನಾಗಿ ಜೀರ್ಣಿಸಿಕೊಂಡದ್ದನ್ನು ಸೂಚಿಸಿಕೊಡಬಲ್ಲದು. **'ಅಖಿಲಭಕ್ಷ್ಯಭೋಜ್ಯೇ'** –ಎಂದು ತಾತ್ಪರ್ಯನಿರ್ಣಯದಲ್ಲಿ ಸ್ಪಷ್ಟಪಡಿಸಿರುವಂತೆ ವಿಷವನ್ನು ಯಾವುದೋ ಒಂದು ಆಹಾರ ಪದಾರ್ಥದಲ್ಲಿ ಸೇರಿಸಿಕೊಟ್ಟದ್ದಲ್ಲ; ಎಲ್ಲ ಭಕ್ಷ್ಯಗಳಲ್ಲೂ ಭೋಜ್ಯವಸ್ತುಗಳಲ್ಲೂ ಬೆರೆಸಿಕೊಟ್ಟದ್ದು. ಅಷ್ಟು ದೊಡ್ಡ ಪ್ರಮಾಣದಲ್ಲಿ ಕೊಟ್ಟಿದ್ದರೂ ಭೀಮಸೇನ ಅದನ್ನು ಜೀರ್ಣಿಸಿಕೊಂಡ ನೆಂದು ಸೂಚಿಸುವುದಕ್ಕಾಗಿಯೇ 'ನೆರೆ ಉಂಡು'–ಎಂಬುದಾಗಿ ಅಧಿಕ, ಸಮಗ್ರ ಅರ್ಥದ ನೆರೆ ಶಬ್ದವನ್ನು ವಿಶೇಷಣವಾಗಿ ಬಳಸಲಾಗಿದೆ. ವಿಷವನ್ನು 'ಗರಳ' ಶಬ್ದದಿಂದ ಉಲ್ಲೇಖಿಸುವ ಮೂಲಕವೇ ಅದರ ಉಲ್ಬಣತೆಯನ್ನೂ ಸೂಚಿಸಿದಂತಾಗಿದೆ. 'ಗರಂ ಲಾತೀತಿ' –ತಿಂದಾಕ್ಷಣ ರೋಗವನ್ನುಂಟುಮಾಡಬಲ್ಲದೆಂಬುದಕ್ಕಾಗಿಯೇ ವಿಷ ಗರಳ ಎನಿಸುವುದು.

- ವಿಷಪ್ರಯೋಗದ ಕುತಂತ್ರ ಫಲಿಸಿಲ್ಲ ಎಂದಾಗ ಭೀಮಸೇನನನ್ನು ಕಟ್ಟಿ ಗಂಗಾ ಮಡುವಿನಲ್ಲಿ ಎಸೆಯುವರು. ಈ ಕುತಂತ್ರವೂ ನಿಷ್ಫಲವಾಯಿತೆಂದಾಗ ಎಂಟು ಹಾವು ಗಳನ್ನು ನಿದ್ರಿಸುತ್ತಿದ್ದ ಭೀಮನ ಎದೆಯ ಮೇಲೆ ಹರಿಯಬಿಡುವರು. ಆ ಹಾವುಗಳು ಅಷ್ಟಕುಲನಾಗಗಳೆಂದು ಪ್ರಸಿದ್ಧವಾದವು. ಶುಕ್ರಾಚಾರ್ಯರು ಉಪದೇಶಿಸಿದ್ದ ಮಂತ್ರದ ಬಲದಿಂದ ಅವುಗಳನ್ನು ಬರಮಾಡಲಾಗಿತ್ತು. 'ಹಸಿದುರಗಗಳ' –ಎಂಬ ಮಾತು ಆ ಹಾವುಗಳು ಹಸಿದವುಗಳಂತೆ ಕಚ್ಚಲು ಹವಣಿಸುತ್ತಿದ್ದವೆಂಬುದನ್ನು ಸೂಚಿಸಿಕೊಡ ಬಲ್ಲದು. **'ಸುಪ್ತಸ್ಯ ವಿಸ್ಮೃತ ಉರಸ್ಯಮುಚತ್.....'** –ಎಂದು ಮಹಾಭಾರತತಾತ್ಪರ್ಯ ನಿರ್ಣಯದಲ್ಲಿ (14-76) ನಿರ್ಣಯಿಸಿರುವಂತೆ ನಿದ್ರಿಸುತ್ತಿದ್ದ ಭೀಮಸೇನನ ವಿಶಾಲ ವಾದ ಎದೆಯ ಮೇಲೆ ಆ ಹಾವುಗಳನ್ನು ಹರಿಯಬಿಡಲಾಗಿತ್ತು. ಇದನ್ನೇ 'ಮ್ಯಾಲೆ ಬಿಡಲು' ಎನ್ನಲಾಗಿದೆ.

ಈ ಹಾವುಗಳಲ್ಲಿ ಎಂಟು ಶ್ರೇಷ್ಠನಾಗಗಳೂ ಗೌರವಾರ್ಹವಾದವುಗಳಾಗಿದ್ದು ಅವು ಗಳನ್ನು ಭೀಮಸೇನ ಕೊಂದಿಲ್ಲ. ಬದಲಾಗಿ, ತುಂಬ ದೂರಕ್ಕೆ ಎಸೆದುಬಿಟ್ಟನಷ್ಟೇ. ಈ

16. 'ಕ್ಷಿಪ್ತಾ ಸುದೂರಮುರುನಾಗವರಾನಥಾಷ್ಟೌ

ಎಂಟು ಹಾವುಗಳ ಜೊತೆಗೆ ಅವುಗಳ ವಂಶದಲ್ಲಿ ಹುಟ್ಟಿದ್ದ ಹಾವುಗಳನ್ನೂ ಅವನ ಮೇಲೆ ಹರಿಯಬಿಡಲಾಗಿದ್ದು, ಅವುಗಳನ್ನು ಇರುವೆಗಳನ್ನು ಹೇಗೋ ಹಾಗೆ ಸಂಹರಿಸಿದ್ದ ಎಂದು ಶ್ರೀಮಧ್ವರು ನಿರ್ಣಯಿಸಿರುವರು.16 ಭೀಮಸೇನನಿಂದ ಹಾವುಗಳ ವಿರುದ್ಧವಾಗಿ ನಡೆದ ಈ ಬಗೆಯ ಪ್ರತಿಕ್ರಿಯೆಯನ್ನು 'ಅದನೊರಸಿದ' –ಅವುಗಳಲ್ಲಿ ಕೆಲವನ್ನು ದೂರಕ್ಕೆ ಎಸೆಯುವ ಮೂಲಕವೂ ಮತ್ತೆ ಕೆಲವನ್ನು ಕೊಲ್ಲುವ ಮೂಲಕವೂ ನಿಗ್ರಹಿಸಿದನು.

- ವಾರಣಾವತದಲ್ಲಿ ಅರಗಿನ ಮನೆಯ ಮಾಡಿಸಿ, ಅದರಲ್ಲಿ ಪಾಂಡವರು ನೆಲಸುವಂತೆ ಮಾಡಿ ಅದರಲ್ಲಿ ಮಲಗಿರುವ ಪಾಂಡವರನ್ನು ತನ್ನ ಅಮಾತ್ಯ ಪುರೋಚನನ ಮೂಲಕ ಸುಟ್ಟುಹಾಕಬೇಕೆಂದು ಕುತಂತ್ರ ಹೂಡಿದ್ದ. ಆದರೆ ಭೀಮಸೇನನೇ ಆ ಅರಗಿನ ಮನೆಗೆ ಬೆಂಕಿ ಹಚ್ಚಿ, ತನ್ನ ಸಹೋದರರಾದ ಯುಧಿಷ್ಠಿರಾದಿಗಳನ್ನೂ, ತಾಯಿ ಕುಂತಿಯನ್ನೂ ಹೊತ್ತುಕೊಂಡು ಅಲ್ಲಿಂದ ಸುರಂಗಮಾರ್ಗವಾಗಿ ಗಂಗಾತೀರಕ್ಕೆ ತಲಪುವನು.

ಭೀಮಸೇನ ಪುರೋಚನಾದಿಗಳು ನಿದ್ರಿಸಿರುವುದನ್ನು ಗಮನಿಸಿ ಆ ಅರಗಿನ ಮನೆಯ ದ್ವಾರಕ್ಕೆ ಮೊದಲು ಬೆಂಕಿ ಹಚ್ಚುವನು. ಒಳಗಿನ ಪುರೋಚನಾದಿಗಳು ಎಚ್ಚೆತ್ತು ಹೊರಗೆ ಓಡಿಹೋಗಬಾರದೆಂಬ ದೃಷ್ಟಿಯಿಂದ ಬಳಿಕ ಆ ಮನೆಯ ಸುತ್ತ ಬೆಂಕಿ ಹಚ್ಚುವನು –ಎಂಬುದಾಗಿ ಮಹಾಭಾರತ (ಆದಿಪರ್ವ, 147-10, 11) ಭೀಮಸೇನನೇ ಅರಗಿನ ಮನೆಗೆ ಬೆಂಕಿ ಕೊಟ್ಟದ್ದೆಂದು ಸಾರಿದೆ.17

ಆದರೆ, ಭೀಮಸೇನ ಅಗ್ನಿಯಿಂದ ಸುಡಿಸಿಕೊಳ್ಳಬೇಕಾದ ಆಪತ್ತಿನಿಂದ ಪಾರಾಗುವುದ ಕ್ಕಾಗಿ 'ಆಪದ್ಧರ್ಮ'ವಾಗಿ ಅರಗಿನ ಮನೆಯನ್ನು ಸುಟ್ಟಿರುವನಷ್ಟೇ. ದುರ್ಯೋಧನ ಅರಗಿನ ಮನೆಯನ್ನು ಸುಡದಿರಬಹುದು. ಆದರೆ, ಪುರೋಚನನ ಮೂಲಕ ಸುಡಿಸಬೇಕೆಂದು ಸಂಕಲ್ಪಿಸಿದ್ದ. ಆ ಹಿನ್ನೆಲೆಯಲ್ಲೇ ಅರಗಿನ ಮನೆಯನ್ನು ನಿರ್ಮಿಸಿದ್ದ ಕೂಡಾ. ಆದ್ದರಿಂದ ವಾಸ್ತವವಾಗಿ ದುರ್ಯೋಧನ ಅರಗಿನ ಮನೆಯನ್ನು ಸುಡಿಸಿದವನಲ್ಲದಿದ್ದರೂ ಸಾಂಕಲ್ಪಿಕ ವಾಗಿ ಅವನೇ ಅರಗಿನ ಮನೆಯನ್ನು ಸುಟ್ಟಂತೆ. ಸದಾಚಾರಗಳಲ್ಲಿ ಹೇಗೋ ಹಾಗೆ ದುರಾಚಾರಗಳಲ್ಲೂ ಮಾನಸಿಕ ನಿರ್ಧಾರರೂಪದ ಸಂಕಲ್ಪಕ್ಕೆ ಮಹತ್ತ್ವದ ಪಾತ್ರ ಇದೆ. ಕೃಷ್ಣಾವತಾರದ ಸಂದರ್ಭದಲ್ಲಿ ಸೆರೆಮನೆಯಲ್ಲಿದ್ದ ವಸುದೇವ ಕೃಷ್ಣಾವತಾರದ ಸಂತೋಷ ಕ್ಕಾಗಿ ಹತ್ತು ಸಾವಿರ ಗೋವುಗಳನ್ನು ಮುಂದೆ ದಾನ ಮಾಡುವುದಾಗಿ ಸಂಕಲ್ಪವನ್ನಷ್ಟೇ ಮಾಡಿದ್ದರೂ 'ಕೃಷ್ಣಾವತಾರೋತ್ಸವಸಂಭ್ರಮೋಽಸ್ಪೃಶನ್ಮುದಾ ದ್ವಿಜೇಭ್ಯೋಽಯುತಮಾಪ್ಲುತೋ ಗವಾಮ್' (ಭಾಗ. 10-4-11). ಬ್ರಾಹ್ಮಣರಿಗೆ ಹತ್ತು ಸಾವಿರ ಗೋವುಗಳನ್ನು ದಾನ ಮಾಡಿಯೇ ಬಿಟ್ಟ –ಎಂದು ಶುಕ್ರಾಚಾರ್ಯರು ನಿರೂಪಿಸಿರುವಂತೆ ದುರ್ಯೋಧನ ಪಾಂಡ ವರನ್ನು ಸುಡಲು ಸಂಕಲ್ಪಿಸಿದ್ದನ್ನೇ ದೊಡ್ಡ ಅಪರಾಧವನ್ನಾಗಿ ಪರಿಗಣಿಸಿ ಅವನಿಂದ ಉರಿ

---

ತದ್ವಂಶಜಾನ್ ಸ ವಿನಿಹತ್ಯ ಪಿಪೀಲಿಕಾವತ್......' – *(ಮ.ಭಾರ.ತಾ.ನಿ. 14-77)*

17. ತತೋ ಜತುಗೃಹದ್ವಾರಂ ದೀಪಯಾಮಾಸ ಪಾಂಡವಃ ।
ಸಮಂತತೋ ದದೌ ಪಶ್ಚಾದಗ್ನಿಂ ತತ್ರ ನಿವೇಶನೇ..... ॥

ಹಚ್ಚಲ್ಪಟ್ಟಿತೆಂದೇ ನಿರೂಪಿಸಲಾಗಿದೆ. ದುರ್ಯೋಧನನನ್ನು ಆತತಾಯಿ ಎಂದು ಪರಿಗಣಿಸಿ 'ಅಗ್ನಿದಃ ಗರದಶ್ಚೈವ......' ಇತ್ಯಾದಿಯಾಗಿ ಬಂಧುಗಳಿಗೆ ಬೆಂಕಿಕೊಟ್ಟವ ಎಂಬ ಲಕ್ಷಣವನ್ನು ಹೇಗೆ ಸಮನ್ವಯಿಸಲಾಗುವುದೋ ಹಾಗೆ.

- 'ವೀರ ಧರಿಸಿ ಜಾಹ್ನವಿಗೊಯ್ದು ತನ್ನನುಜರ' –ಬೆಂಕಿಯ ದಾಹಕ್ಕೊಳಗಾದ ಅರಗಿನ ಮನೆಯಿಂದ ಸುರಂಗಮಾರ್ಗವಾಗಿ ವೀರನಾದ ಭೀಮಸೇನ ತನ್ನ ಅನುಜರನ್ನು ತಾಯಿಸಹಿತವಾಗಿ ಧರಿಸಿಕೊಂಡು ಗಂಗಾನದಿಯ ದಡದ ವರೆಗೆ ಸಾಗುವನು.

ಭೀಮಸೇನ 'ವೀರ'ನಾದುದರಿಂದ ಐವರನ್ನು ಹೊತ್ತುಕೊಂಡು ಸಾಗವುದೇನೂ ಅಸಂಭಾವಿತವಲ್ಲ ಎಂದು ಸೂಚಿಸಲು 'ವೀರ' –ಎಂಬ ವಿಶೇಷಣವನ್ನು ನೀಡಲಾಗಿದೆ.

ಯುಧಿಷ್ಠಿರಾದಿಗಳನ್ನು ಯಾಕೆ ಹೊತ್ತುಕೊಂಡು ಹೋಗಬೇಕಾಯಿತೆಂದರೆ, '......ಭೀತಿ ವಶತೋಽಬಲತಾಂ ಪ್ರಯಾತಾನ್' (ಮ.ಭಾರ.ತಾ.ನಿ. 19-41) –ಭಯದಿಂದಾಗಿ ನಡೆಯ ಲಾರದಷ್ಟು ದುರ್ಬಲರಾಗಿದ್ದುದರಿಂದ ಅವರೆಲ್ಲರನ್ನೂ ಭೀಮ ಹೊತ್ತುಕೊಂಡು ಹೋಗ ಬೇಕಾಯಿತು.

ಯುಧಿಷ್ಠಿರಾದಿ ನಾಲ್ವರನ್ನೂ, ತಾಯಿ ಕುಂತಿಯನ್ನೂ ಹೇಗೆ ಹೊತ್ತಿದ್ದ ಎಂಬ ಚಿತ್ರಣವನ್ನು ಮಹಾಭಾರತವೇ (ಆದಿ. 147-21) ಹೀಗೆ ನೀಡುತ್ತಿದೆ–

> ಭೀಮಸೇನಸ್ತು ರಾಜೇಂದ್ರ ಭೀಮವೇಗಪರಾಕ್ರಮಃ ।
> ಜಗಾಮ ಭ್ರಾತೄನಾದಾಯ ಸರ್ವಾನ್ ಮಾತರಮೇವ ಚ ॥
> ಸ್ಕಂಧಮಾರೋಪ್ಯ ಜನನೀಂ ಯಮಾವಂಕೇನ ವೀರ್ಯವಾನ್ ।
> ಪಾರ್ಥೌ ಗೃಹೀತ್ವಾ ಪಾಣಿಭ್ಯಾಂ ಭ್ರಾತರೌ ಸುಮಹಾಬಲಃ ॥

ತಾಯಿ ಕುಂತಿಯನ್ನು ಹೆಗಲ ಮೇಲೆ ಏರಿಸಿಕೊಂಡು, ನಕುಲಸಹದೇವರನ್ನು ತೊಡೆ ಗಳ ಮೇಲೆ ಕುಳ್ಳಿರಿಸಿಕೊಂಡು, ಎರಡು ಕೈಗಳಿಂದ ಯುಧಿಷ್ಠಿರ–ಅರ್ಜುನರನ್ನು ಹಿಡಿದು ಕೊಂಡು 'ಭೀಮವೇಗಪರಾಕ್ರಮ'ನಾಗಿ ಅಂದರೆ, ಭಯಂಕರವಾದ ವೇಗದಿಂದ, ಭಯಂಕರವಾದ ಪರಾಕ್ರಮದಿಂದ ಸಾಗಿದನು.

ಭೀಮಸೇನ ಅವರೆಲ್ಲರನ್ನೂ ಹೊರುವ ಪ್ರಸಂಗ ಯಾಕೆ ಬಂತೆಂಬುದಕ್ಕೆ ಶ್ರೀಮಧ್ವರು ನೀಡಿರುವ ನಿರ್ಣಯವನ್ನು ಹಾಗೂ ಭೀಮಸೇನ ಐದುವ್ಯಕ್ತಿಗಳನ್ನು ಹೇಗೆ ಹೊತ್ತಿದ್ದ ಎಂಬುದನ್ನು ನಿರೂಪಿಸಿದ್ದ ಮಹಾಭಾರತದ ಚಿತ್ರಣವನ್ನು ಗಮನದಲ್ಲಿಟ್ಟುಕೊಂಡು 'ವೀರ ಧರಿಸಿ ಜಾಹ್ನವಿಗೊಯ್ದು ತನ್ನನುಜರ' –ಎಂಬ ಮಾತಿನ ಅರ್ಥಾನುಸಂಧಾನ ನಡೆಸಬೇಕು.

* * *

ದ್ರೌಪದಿಯ ಕೈಪಿಡಿದವನುಃ

> ಅಲ್ಲಿರ್ದ ಬಕ ಹಿಡಿಂಬಕರೆಂಬ ರಕ್ಕಸರ
> ನಿಲ್ಲದೊರೆಸಿದ ಲೋಕಕಂಟಕರನು

ಬಲ್ಲಿದಸುರರ ಗೆಲಿದು ದ್ರೌಪದಿಯ ಕೈಪಿಡಿದು
ಎಲ್ಲ ಸುಜನರಿಗೆ ಹರುಷವ ತೋರಿದ ॥ ೧೫ ॥

ಭೀಮಾದಿಗಳು ಅರಗಿನ ಮನೆಯಿಂದ ಸುರಂಗಮಾರ್ಗವಾಗಿ ಗಂಗೆಯ ದಡಕ್ಕೆ ಬಂದು, ಅಲ್ಲಿಂದ ಹಿಡಿಂಬವನಕ್ಕೆ ಸಾಗುವರು. ಭೀಮಸೇನ ಆ ವನದಲ್ಲಿದ್ದ ಹಿಡಿಂಬಾಸುರನನ್ನು ಕೂಡಲೇ ಸಂಹರಿಸುವನು. ಅಲ್ಲಿಂದ ವೇದವ್ಯಾಸರ ಮಾರ್ಗದರ್ಶನಕ್ಕನುಗುಣವಾಗಿ ಏಕಚಕ್ರಾನಗರಕ್ಕೆ ಹೋಗುವರು. ಅಲ್ಲಿದ್ದ ಬಕಾಸುರನನ್ನು ಭೀಮಸೇನ ಸಂಹರಿಸುವನು. ವೇದವ್ಯಾಸರ ಸೂಚನೆಯಂತೆ ಧೌಮ್ಯರನ್ನು ಮುಂದೆ ಮಾಡಿಕೊಂಡು ಪಾಂಚಾಲದೇಶದಲ್ಲಿ ಏರ್ಪಡಿಸಲಾಗಿದ್ದ ದ್ರೌಪದಿಯ ಸ್ವಯಂವರದಲ್ಲಿ ಪಾಲ್ಗೊಳ್ಳುವರು. ಸ್ವಯಂವರದಲ್ಲಿ ಜಯಿಸುವರು. ಇದರ ವಿರುದ್ಧವಾಗಿ ಕಾದಾಡಿದ ಕರ್ಣ ಶಲ್ಯಾದಿಗಳನ್ನು ಸೋಲಿಸುವರು. ವೇದವ್ಯಾಸರ ಮಾರ್ಗದರ್ಶನದಂತೆ ದ್ರುಪದ ತನ್ನ ಮಗಳಾದ ದ್ರೌಪದಿಯನ್ನು ಐದು ಮಂದಿ ಪಾಂಡವರಿಗೂ ಮದುವೆ ಮಾಡಿಕೊಡುವನು. ಇವರಲ್ಲಿ ವಿಶೇಷವಾಗಿ ದ್ರೌಪದಿಯ ಕೈಹಿಡಿದವನು ಭೀಮಸೇನ. ಈ ವಿವಾಹ ದುರ್ಯೋಧನಾದಿ ದುಷ್ಟರಿಗೆ ದುಃಖವನ್ನುಂಟು ಮಾಡಿದ್ದರೂ, ಇದರಿಂದಾಗಿ ಸರ್ವ ಯದುಗಳು ಹಾಗೂ ವಿದುರನೇ ಮುಂತಾದ ಎಲ್ಲ ಸುಜನರಿಗೆ ಹರುಷ ಉಂಟಾಗಿತ್ತು.

**ವಿವರಣೆ:**

- 'ಅಲ್ಲಿರ್ದ' ಶಬ್ದವು ಪಾಂಡವರು ಗಂಗೆಯನ್ನು ದಾಟಿ ತಲುಪಿದ್ದ ಹಿಂಡಿಂಬವನವನ್ನು ಪರಾಮರ್ಶಿಸುವುದು. ಅಂತಹ ಹಿಡಿಂಬವನದಲ್ಲಿ ಹಿಡಿಂಬಾಸುರನೇ ಹೊರತು ಬಕ ಅಲ್ಲ. ಆದುದರಿಂದ 'ಅಲ್ಲಿರ್ದ' ಶಬ್ದದಿಂದ ಪ್ರಾಸಂಗಿಕವಾಗಿ ಹಿಡಿಂಬವನ್ನು ಪರಾಮರ್ಶಿಸಬೇಕು; ತಂತ್ರಪದ್ಧತಿಗನುಗುಣವಾಗಿ 'ಅಲ್ಲಿರ್ದ' ಶಬ್ದವನ್ನು ಪುನಃ ಇಟ್ಟುಕೊಂಡು ಅದರಿಂದ ಬುದ್ಧಿಯಲ್ಲಿ ಸನ್ನಿಹಿತವಾಗಿರುವ ಏಕಚಕ್ರಾನಗರವನ್ನು ಇಟ್ಟುಕೊಳ್ಳಬೇಕು. ಆದುದರಿಂದ ಪುನಃ ಆವೃತ್ತಿ ಮಾಡಿಕೊಂಡ 'ಅಲ್ಲಿರ್ದ' ಶಬ್ದಕ್ಕೆ ಏಕಚಕ್ರಾನಗರದಲ್ಲಿದ್ದ ಎಂದು ಅರ್ಥೈಸಬೇಕು.
- ಹತ್ತಿರಕಾಲಗಳಲ್ಲಿ ಸಂಹೃತರಾದ ಹಿಡಿಂಬಾಸುರ ಹಾಗೂ ಬಕಾಸುರ ಇವರೊಳಗೆ ಬಕಾಸುರನೇ ಹೆಚ್ಚು ಪ್ರಬಲ. '......ಜಗದಂತಕಂ ಸ ಯೋ ರಾಕ್ಷಸೋ ನ ವಶ ಆಸ ಜರಾಸುತಸ್ಯ (ಭೌಮಸ್ಯ ಪೂರ್ವಮಪಿ ನೋ ಭರತಸ್ಯ ರಾಜ್ಞೋ.......' (ಮ.ಭಾರ.ತಾ.ನಿ. 19-92) –ಎಂದು ಶ್ರೀಮಧ್ವರು ಪರಿಚಯಿಸಿ ಕೊಟ್ಟಿರುವಂತೆ ಬಕಾಸುರ ಜಗದಂತಕನಾಗಿದ್ದ. ಜರಾಸುತ, ನರಕ ಹಾಗೂ ಭರತರಾಜನ ಅಧೀನನಾಗಿಯೂ ಇರದವನು. ಹಿಡಿಂಬಾಸುರನಾದರೂ '......ಈಶವಾಕ್ಯಾತ್ ಸರ್ವೈರಜೇಯುಮಪಿ........' (ಮ.ಭಾರ. ತಾ.ನಿ. 19-56) ಎಂದಿರುವಂತೆ ರುದ್ರವರದಿಂದ ಯಾರಿಂದಲೂ ಸೋಲಿಸಲು ಆಗದವನಾಗಿದ್ದ –ಎಂಬಷ್ಟೇ ಹೆಗ್ಗಳಿಕೆಗೆ ಪಾತ್ರನಾಗಿದ್ದವನು. ಹೀಗೆ ಈ ಇಬ್ಬರು ರಾಕ್ಷಸರಲ್ಲಿ ಪ್ರಬಲನಾಗಿದ್ದವನು ಬಕಾಸುರನಾಗಿದ್ದುದರಿಂದ ಅವನ ಸಂಹಾರ ಮತ್ತೆ ನಡೆದಿದ್ದರೂ ಈ ಪದ್ಯದಲ್ಲಿ 'ಬಕ ಹಿಡಿಂಬಕರೆಂಬ ರಕ್ಕಸರ......' –ಎಂಬುದಾಗಿ ಬಕನನ್ನು ಮೊದಲು ಉಲ್ಲೇಖಿಸಲಾಗಿದೆ.

- 'ಹಿಡಿಂಬಕ' –ಎಂದು ಕುತ್ಸಿತಾರ್ಥದ ಕ ಪ್ರತ್ಯಯವನ್ನು ಪ್ರಯೋಗಿಸಿ ಹಿಡಿಂಬಾಸುರನ ಕುತ್ಸಿತತ್ವವನ್ನು, ದುಷ್ಟತ್ವವನ್ನು ಸೂಚಿಸಿ ಕೊಡಲಾಗಿದೆ.

- ನಿಲ್ಲದೊರೆಸಿದ –ಬೇಗನೆ ಕೊಂದುಹಾಕಿದನೆಂಬುದನ್ನು, 'ನಿಲ್ಲದೆ' –ವಿಶ್ರಾಂತಿಯನ್ನು ಸ್ವೀಕರಿಸದೆ, ಒರೆಸಿದ –ತಿಕ್ಕಿದ–ಗುದ್ದಿಕೊಂದ ಎಂಬ ಧ್ವನಿ ಹೊರಡುವಂತೆ ಪ್ರಯೋಗಿಸಲಾಗಿದೆ.

- 'ಲೋಕಕಂಟಕರನು' –ಎಂದು ರಕ್ಕಸರಿಗೆ ಕೊಟ್ಟ ವಿಶೇಷಣದಿಂದ ಭೀಮಸೇನ ಹಿಡಿಂಬಾಸುರನನ್ನಾಗಲೀ, ಬಕಾಸುರನನ್ನಾಗಲೀ ಕೊಂದದ್ದು ಅವರು ಲೋಕಕಂಟಕರೆಂಬ ದೃಷ್ಟಿಯಿಂದಲೇ ಹೊರತು ವೈಯಕ್ತಿಕ ದ್ವೇಷದಿಂದ ಅಲ್ಲ –ಎಂಬುದು ಸ್ಪಷ್ಟವಾಗುವುದು. ಬಕಾಸುರನ ಲೋಕಕಂಟಕ ವ್ಯಕ್ತಿತ್ವವಂತೂ ತುಂಬ ಸ್ಪಷ್ಟವಾದುದರಿಂದ ಲೋಕಕಂಟಕ ಎಂಬ ವಿಶೇಷಣ ವಿಶೇಷವಾಗಿ ಬಕಾಸುರನಿಗೇ ಅನ್ವಯಿಸುವಂತಹದ್ದು.

- ಬಲ್ಲಿದ– ಬಲವುಳ್ಳ ಅಸುರರ ಗೆಲಿದು ದ್ರೌಪದಿಯ ಕೈಹಿಡಿದ.... ದ್ರೌಪದಿಯ ಸ್ವಯಂವರದಲ್ಲಿ ಪಾಲ್ಗೊಂಡಿದ್ದ ಶಿಶುಪಾಲ, ಶಲ್ಯ, ಜರಾಸಂಧ, ಕರ್ಣ –ಮುಂತಾದವರನ್ನು ಗದ್ದಿದ್ದರೆ, ಸ್ವಯಂವರದಲ್ಲಿ ಗೆದ್ದ ಮೇಲೆ ಭೀಮಾರ್ಜುನರ ವಿರುದ್ಧ ಕಾದಾಡಲು ಬಂದಿದ್ದ ಶಲ್ಯ, ಕರ್ಣಾದಿಗಳನ್ನು ಗೆದ್ದಿದ್ದರು. ಕರ್ಣ, ಶಲ್ಯರು –ಸ್ವರೂಪತಃ ಅಸುರರಲ್ಲದಿದ್ದರೂ ಆಸುರೀಭಾವಕ್ಕೊಳಗಾಗಿ ನಡೆದುಕೊಂಡಿದ್ದರೆಂಬ ದೃಷ್ಟಿಯಿಂದ ಅಸುರರೆಂದೇ ಪರಿಗಣಿಸಲ್ಪಟ್ಟಿರುವರು.

- ಸ್ವಯಂವರದ ಸ್ಪರ್ಧೆಯಲ್ಲಿ ಗೆದ್ದವನು ಅರ್ಜುನನಾಗಿದ್ದರೂ, ಆಗ ಅವನ ವಿರುದ್ಧ ಕಾದಾಡಲು ಬಂದಿದ್ದ ಕರ್ಣಾದಿಗಳ ವಿರುದ್ಧ ಕಾದಾಡುವಲ್ಲಿ ಅರ್ಜುನನೂ ಸೇರಿದ್ದರೂ, ದ್ರುಪದ ಏರ್ಪಡಿಸಿದ ದ್ರೌಪದಿಯ ವಿವಾಹ ಪಂಚಪಾಂಡವರಿಗೂ ನಡೆದಿದ್ದರೂ –ಆ ಎಲ್ಲ ಸಂದರ್ಭಗಳಲ್ಲೂ ಭೀಮಸೇನನ ಪಾತ್ರವೇ ಪ್ರಮುಖ ಎಂಬುದನ್ನು ಸ್ಪಷ್ಟಪಡಿಸುವುದಕ್ಕಾಗಿ **'ಬಲ್ಲಿದ ಅಸುರರ ಗೆಲಿದು....... ಹರುಷವ ತೋರಿದ'** –ಇತ್ಯಾದಿಯಾಗಿ ಆ ಸಂದರ್ಭದ ಎಲ್ಲ ಸಾಧನೆಗಳನ್ನು ಭೀಮನ ಹೆಸರಲ್ಲೇ ಉಲ್ಲೇಖಿಸಲಾಗಿದೆ.

- ಭೀಮದ್ರೌಪದಿಯರ ವಿವಾಹದಿಂದಾಗಿ ಕೃಷ್ಣ, ಬಲರಾಮ, ಉಳಿದ ಯಾದವರು, ವಿದುರ, ಭೀಷ್ಮ, ದ್ರೋಣಾದಿಗಳು, ಗಾಂಧಾರಿ –ಹೀಗೆ ಆ ಕಾಲದ ಸಮಾಜದಲ್ಲಿದ್ದ ಸಜ್ಜನರಿಗೆ ಹಾಗೂ ದ್ರೌಪದಿಯ ದೇಹವನ್ನು ಸೇರಿಕೊಂಡಿದ್ದ ಶಚೀ, ಶ್ಯಾಮಲಾದಿ ದೇವಿಯರಿಗೆ, ಅಂತೆಯೇ ಮುಖ್ಯಪ್ರಾಣ–ಭಾರತಿಯರ ವಿವಾಹವೈಭವವನ್ನು ಅನುಸಂಧಾನಕ್ಕೆ ತಂದುಕೊಂಡು ಸಾಧನೆ ನಡೆಸುವ ಗರುಡ, ಶೇಷಾದಿ ದೇವತೆಗಳಿಗೆ, ಋಷಿಗಳಿಗೆ, ಇತರ ಭಕ್ತರಿಗೆ ಹರುಷ ಆಯಿತೆಂಬುದನ್ನಿಟ್ಟುಕೊಂಡು 'ಎಲ್ಲ ಸುಜನರಿಗೆ ಹರುಷವ ತೋರಿದ' –ಎಂದು ನಿರೂಪಿಸಲಾಗಿದೆ. ದುರ್ಜನರಾದ ದುರ್ಯೋಧನಾದಿಗಳು ಇದರಿಂದ ಹರುಷದ ಬದಲಾಗಿ ದುಃಖವನ್ನು ಅನುಭವಿಸಿದರೆಂಬ ಧ್ವನಿ ಹೊರಡುವುದು.

**ರಾಜಸೂಯಯಾಗವನು ಮಾಡಿಸಿದನು:**

ರಾಜಕುಲವಜ್ರನೆನಿಸಿದ ಮಾಗಧನ ಸೀಳಿ
ರಾಜಸೂಯಯಾಗವನು ಮಾಡಿಸಿದನು
ಆಜಿಯೊಳು ಕೌರವರ ಬಲವ ಸವರುವೆನೆಂದು
ಮೂಜಗವರಿಯೆ ಕಂಕಣ ಕಟ್ಟಿದ ॥ ೧೬ ॥

ಭೀಮಸೇನನು ಅರಸರ ಸಮುದಾಯದಲ್ಲೇ ವಜ್ರದಂತೆ ಶ್ರೇಷ್ಠನೆನಿಸಿದ್ದ ಜರಾಸಂಧನನ್ನು ಸೀಳಿ, ಸಂಹರಿಸಿ ಮುಂದೆ ಯುಧಿಷ್ಠಿರನ ಮೂಲಕ ರಾಜಸೂಯ ಯಾಗವನ್ನು ಮಾಡಿಸಿದನು. ಎರಡನೆಯ ಬಾರಿ ದ್ಯೂತದಲ್ಲಿ ಸೋತ ಪಾಂಡವರು ಕರಾರಿನಂತೆ ಕಾಡಿಗೆ ತೆರಳುತ್ತಿದ್ದಾಗ ದುಶ್ಶಾಸನ ಭೀಮನನ್ನೂ, ದ್ರೌಪದಿಯನ್ನೂ ಅಪಹಾಸ ಮಾಡುವನು. ಅದಕ್ಕೆ ಅವನ ಎಲ್ಲ ಸಹೋದರರು ಗಟ್ಟಿಯಾಗಿ ಅಟ್ಟಹಾಸ ಗೈಯಲು ಭೀಮಸೇನನು ಮೂರು ಜಗತ್ತುಗಳಿಗೂ ಕೇಳಿಸುವಂತೆ 'ಮುಂದೆ ನಡೆಯಲಿರುವ ಯುದ್ಧದಲ್ಲಿ ನೂರು ಮಂದಿ ಕೌರವರನ್ನೂ ತಾನೇ ಸವರುವುದಾಗಿ, ನಾಶ ಮಾಡುವುದಾಗಿ ಶಪಥ ಮಾಡುವನು.

**ವಿವರಣೆ:**

- ಇಂದ್ರಪ್ರಸ್ಥದಲ್ಲಿ ಪಾಂಡವರ ಮೂಲಕ ನಡೆದ ರಾಜಸೂಯಯಾಗಕ್ಕೆ ಯುಧಿಷ್ಠಿರ ಯಜಮಾನನಾಗಿದ್ದ. ಆದರೆ, ಶ್ರೀಕೃಷ್ಣ 'ಕ್ವ ರಾಜಸೂಯಮದ್ಯ ತೇ ಜರಾಸುತೇ ತು ಜೀವತಿ.....ಸ್ಥಿತೇ ತು ತೇ ಜರಾಸುತೇ ನ ಸೇತ್ಸ್ಯತಿ ಕ್ರತೂತ್ತಮಃ' (ಮ.ಭಾರ.ತಾ.ನಿ. 21-92,93,94) ಜರಾಸಂಧ ಬದುಕಿರುವಾಗ ರಾಜಸೂಯಯಾಗ ನಿನ್ನಿಂದ ಆಗಲಾರದು. ಜರಾಸಂಧನನ್ನು ಜಯಿಸುವವರಾದರೂ ಯಾರು? –ಎಂಬುದಾಗಿ ಯುಧಿಷ್ಠಿರನೆದುರು ಜರಾಸಂಧನ ಸಮಸ್ಯೆಯನ್ನೊಡ್ಡಿದಾಗ ಯುಧಿಷ್ಠಿರ ರಾಜಸೂಯ ಯಾಗದ ಯೋಜನೆಯಿಂದ ಹಿಂಜರಿಯುವನು. ಆಗ ಭೀಮಸೇನ ಬಂದು ಕೃಷ್ಣನ ಅನುಗ್ರಹದಿಂದ ತಾನು ಜರಾಸಂಧನನ್ನು ಸೋಲಿಸಬಹುದೆಂದು ಆತ್ಮವಿಶ್ವಾಸವನ್ನು ಸಾರುತ್ತ, ಕೃಷ್ಣಾನುಗ್ರಹದಿಂದ ಜರಾಸಂಧನ ಸಂಹಾರ ನಡೆಸಿ, ವೇದವ್ಯಾಸರ ನಿರ್ದೇಶನದಂತೆ ಪೂರ್ವದಿಕ್ಕಿನ ದಿಗ್ವಿಜಯದಲ್ಲಿ ಅರ್ಜುನಾದಿಗಳಿಗೆ ಮಣಿಯದ ಕೀಚಕ, ಕರ್ಣಾದಿಗಳಿಂದ ಕಪ್ಪ ಸ್ವೀಕರಿಸಿಕೊಂಡು ಬಂದು ಯುಧಿಷ್ಠಿರನ ಮೂಲಕ ರಾಜಸೂಯಯಾಗ ನಡೆಯಲು ಪ್ರಮುಖ ಕಾರಣನಾಗಿರುವುದರಿಂದ 'ರಾಜಸೂಯ ಯಾಗವನು ಮಾಡಿಸಿದನು' –ಎನ್ನಲಾಗಿದೆ.
- ಭೀಮಸೇನ ಜರಾಸಂಧನನ್ನು ಕೊಂದ ತಂತ್ರವನ್ನು ಶ್ರೀಮಧ್ವರು ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ (21-162) ಹೀಗೆ ನಿರ್ಣಯಿಸಿರುವರು–

  ಪೃಷ್ಠೇಽಸ್ಯ ಜಾನುಮಾದಾಯ ಕೂರ್ಮದೇಶಂ ಬಭಂಜ ಹ ।
  ಮೃತಿಕಾಲೇ ಪುನರ್ದೇಹಂ ವಿದದಾರ ಯಥಾ ಪುರಾ ॥

ಭೀಮಸೇನ ಜರಾಸಂಧನ ಬೆನ್ನ ಮೇಲೆ ಮೊಣಕಾಲಿಟ್ಟು ಸೊಂಟವನ್ನು ಮುರಿದನು. ಹಿಂದೆ ಜರಾಸಂಧ ಹುಟ್ಟುವಾಗ ಹೇಗೆ ಅವನ ದೇಹ ಎರಡು ಸೀಳಾಗಿತ್ತೋ ಹಾಗೆಯೇ ಸೀಳಿದನು. ಇದನ್ನೇ 'ಮಾಗಧನ ಸೀಳಿ' –ಎಂಬ ಮಾತಿನಲ್ಲಿ ತಿಳಿಸಲಾಗಿದೆ.

ಹೀಗೆ ಜರಾಸಂಧನನ್ನು ಸೀಳಿ ಕೊಂದುದರಿಂದ ಭೀಮಸೇನನ ಪರಾಕ್ರಮದ ಜೊತೆಗೆ **'ಅನ್ಯತ್ರ ಆಲೋಚನೇ ಸರ್ವವಿಷಯಕಂ ಜ್ಞಾನಂ ಋಜುಯೋಗಿಜ್ಞಾನಮ್'** –ಎಂದು ತಿಳಿಸಿರುವಂತೆ ಭಗವದಿತರತ್ರ ಲೋಕದ ವಿಷಯದಲ್ಲಿ ಆಲೋಚನೆ ನಡೆಸಿದರೆ ಎಲ್ಲವನ್ನೂ ಗೋಚರಿಸುವ ಋಜುಯೋಗಿಗಳ ಜ್ಞಾನವೇ ಭೀಮಸೇನನ ಜ್ಞಾನವಾಗಿರುವುದರಿಂದ ಅವನಿಗೆ ಜರಾಸಂಧನ ಉತ್ಪತ್ತಿಗೆ ಸಂಬಂಧಿಸಿದ ರಹಸ್ಯದ ತಿಳಿವಳಿಕೆಯೂ ಇದ್ದೇ ಇತ್ತೆಂದು ಸ್ಪಷ್ಟವಾಗುವುದು.

- ಭೀಮಸೇನ ಮುಂದೆ ನಡೆಯತಕ್ಕ ಮಹಾಭಾರತಯುದ್ಧದಲ್ಲಿ ದುರ್ಯೋಧನಾದಿಗಳನ್ನು ಸದೆ ಬಡಿಯುವ ವಿಷಯದಲ್ಲಿ ಮೂರು ಪ್ರತಿಜ್ಞೆಗಳನ್ನು ಕೈಗೊಂಡಿದ್ದನು.
- ದುರ್ಯೋಧನ ತನ್ನ ತೊಡೆಯನ್ನು ದ್ರೌಪದಿಗೆ ತೋರಿಸಿ, ಅದರಲ್ಲಿ ಕುಳಿತುಕೊಳ್ಳಲು ಸೂಚಿಸಿದಾಗ ಭೀಮಸೇನನು ತನ್ನ ಗದೆಯಿಂದ ದುರ್ಯೋಧನನ ತೊಡೆಯನ್ನು ಮುರಿಯುವುದಾಗಿ ಪ್ರತಿಜ್ಞೆಗೈಯುವನು.
- ಕೃಷ್ಣನನ್ನು ಪಣವಾಗಿಡು ಎಂದಾಗ 'ದುರ್ಯೋಧನನನ್ನು ನೆಲಕ್ಕೆ ಉರುಳಿಸಿ, ಅವನ ತಲೆಯನ್ನು ತುಳಿದು, ಮರ್ದನ ಮಾಡುವುದಾಗಿ ಪ್ರತಿಜ್ಞೆಗೈಯುವನು.
- ದುಶ್ಶಾಸನ ದ್ರೌಪದಿಯ ಸೀರೆ ಸೆಳೆಯಲು ಅವನ ಎದೆ ಸೀಳಿ ರಕ್ತ ಕುಡಿಯುವುದಾಗಿ ಇನ್ನೊಂದು ಪ್ರತಿಜ್ಞೆಗೈಯುವನು.
- ಪುನಃ ದ್ಯೂತದಲ್ಲಿ ಸೋತು, ಅದರ ಕರಾರಿನಂತೆ ಪಾಂಡವರು ಅರಣ್ಯಕ್ಕೆ ತೆರಳಿದಾಗ ದುಶ್ಶಾಸನ ನರ್ತನ ಮಾಡುತ್ತ, ಭೀಮನನ್ನು 'ಹಸುಹಸು' –ಎಂದು ಅಪಹಾಸ ಮಾಡುತ್ತ, 'ನಿನಗೆ ಗಂಡಂದಿರು ಇಲ್ಲ, ದುರ್ಯೋಧನನ ನಿವಾಸಕ್ಕೆ ತೆರಳು' –ಎಂದು ದ್ರೌಪದಿಯನ್ನು ಮೂದಲಿಸುತ್ತ, ಪಾಂಡವರು 'ಷಂಡತಿಲರು' ಅಂಧಂತಮಸ್ಸನ್ನು ಹೊಂದಿದ ಅವರಿಗೆ ಪುನರುತ್ಥಾನ ಇಲ್ಲ –ಎಂದು ಕಿರುಚಿಕೊಳ್ಳುತ್ತ, ಭೀಮಸೇನನ ನಡಿಗೆಯನ್ನು ಅನುಕರಿಸುತ್ತ ಇರಲು, ಅದಕ್ಕೆ ಉಳಿದ ಅವನ ತೊಂಬತ್ತೊಂಬತ್ತು ಸಹೋದರರೂ ಗಟ್ಟಿಯಾಗಿ ನಕ್ಕು ತಮ್ಮ ಧ್ವನಿಯನ್ನೂ ಸೇರಿಸುತ್ತಿರಲು ಭೀಮಸೇನ ಮತ್ತೊಂದು ಪ್ರತಿಜ್ಞೆ ಮಾಡುವನು– **'ಹಂತಾಽಸ್ಮಿ ವೋ ನಿಖಿಲಾನ್ ಸಂಗರೇಽಹಮ್'** (ಮ.ಭಾರ.ತಾ.ನಿ. 21-399) "ಮುಂದೆ ನಡೆಯಲಿರುವ ಮಹಾಭಾರತಯುದ್ಧದಲ್ಲಿ ನಿಮ್ಮನ್ನೆಲ್ಲ ಕೊಂದು ಹಾಕುವೆನು."

ಈ ಕೊನೆಯ ಪ್ರತಿಜ್ಞೆಯನ್ನೇ 'ಆಜಿಯೊಳು ಕೌರವರ ಬಲವ ಸವರುವೆನೆಂದು ಮೂಜಗವರಿಯೆ ಕಂಕಣ ಕಟ್ಟಿದ' –ಎಂಬ ಮಾತಿನಲ್ಲಿ ಪರಾಮರ್ಶಿಸಲಾಗಿದೆ. ಪ್ರತಿಜ್ಞೆ ಹೂಡಿದ್ದನ್ನೇ 'ಕಂಕಣ ಕಟ್ಟಿದ' –ಎಂದು ಆಧ್ಯಾತ್ಮಿಕ ಪರಿಭಾಷೆಯಲ್ಲಿ ತಿಳಿಸಲಾಗಿದೆ. ಹೇಗೆ ಯಜ್ಞಯಾಗಾದಿಗಳನ್ನು ಆಚರಿಸುವಾಗ ಯಜಮಾನಾದಿಗಳು ಕಂಕಣಬಂಧ

ಮಾಡಿಕೊಳ್ಳುವರೋ ಹಾಗೆ ಭೀಮಸೇನ ಮಾಡಿದ ಪ್ರತಿಜ್ಞೆ ಮುಂದೆ ನರಸಿಂಹನ ಯಜ್ಞ ರೂಪದಲ್ಲಿ ನಡೆಸುವ ಮಹಾಭಾರತ ಯುದ್ಧಕ್ಕೆ 'ಕಂಕಣಬಂಧ' ಮಾಡಿಕೊಂಡಂತೆ. ಇದರಿಂದಾಗಿ ಯುದ್ಧದ ವಿಷಯದಲ್ಲಿ ಭೀಮಸೇನನಿಗೆ ಯಜ್ಞದ ಅನುಸಂಧಾನ ಇದೆ –ಎಂದು ಸೂಚಿತವಾಗಬಲ್ಲದು.

- ಮೂರು ಲೋಕಗಳೂ ಆ ಸಂದರ್ಭದಲ್ಲಿ ಅಲ್ಲಿ ಉಪಸ್ಥಿತಗಳಾಗದಿದ್ದಿರಬಹುದಾದರೂ, ಅದು ಭಗವದ್‌ಭಕ್ತರ ಮೇಲೆ ಎಸಗಲಾದ ಮಹಾ ಅಪರಾಧದ ಅತಿಸೂಕ್ಷ್ಮ ಸಂವೇದ ನಾತ್ಮಕ ಗಳಿಗೆಯಾಗಿದ್ದುದರಿಂದ ಹೆಚ್ಚಿನ ಆ ಕಾಲದ ಸಜ್ಜನರ ದೃಷ್ಟಿ ಅಲ್ಲಿತ್ತೆಂಬ ಅಭಿಪ್ರಾಯದಲ್ಲಿ 'ಮೂಜಗವರಿಯೆ' ಮೂರು ಲೋಕಗಳ ಅಂದರೆ, ಎಲ್ಲ ಲೋಕ ಗಳ, ಎಲ್ಲ ವ್ಯಕ್ತಿಗಳೂ ತಿಳಿಯುವಂತೆ ಪ್ರತಿಜ್ಞೆಗೈದನು –ಎಂಬ ಆಂತರ್ಯ.
- ದುಷ್ಟರನ್ನು ಅವರ ದುಷ್ಟತನಕ್ಕೆ ಅನುಗುಣವಾಗಿ ದಂಡಿಸುವುದು ಕ್ಷತ್ರಿಯರ ಕರ್ತವ್ಯ ವಾದುದರಿಂದ ಅಷ್ಟೊಂದು ದುಷ್ಟತನವನ್ನು ತೋರಿಸಿದ ಕೌರವರ ವಿಷಯದಲ್ಲಿ ಆಗ ಮೌನದಲ್ಲಿದ್ದುದು ಸರಿಯೇ? –ಎಂಬ ಸಂದೇಹ ಬಾರದಂತೆ ಮುಂದೆ ಕೊಡಲಿರುವ ತಕ್ಕ ದಂಡನೆಗೆ ಬೇಕಾದ ಪ್ರತಿಜ್ಞೆಯನ್ನು ಎಲ್ಲರಿಗೂ ತಿಳಿಯುವಂತೆ ಭೀಮಸೇನ ಕೈಗೊಂಡನೆಂಬುದು ಆಶಯ.

* * *

## ಮಾನಿನಿಗೆ ಸೌಗಂಧಿಕವನೆ ತಂದ:

ಕಾನನವ ಪೊಕ್ಕು ಕಿಮ್ಮೀರಾದಿಗಳ ಮುರಿದು
ದಾನವರ ಸವರಬೇಕೆಂದು ಬ್ಯಾಗ
ಮಾನನಿಧಿ ದ್ರೌಪದಿಯ ಮನದಿಂಗಿತವನರಿತು
ಮಾನಿನಿಗೆ ಸೌಗಂಧಿಕವನೆ ತಂದ ॥ ೧೭ ॥

ಪಾಂಡವರು ವನವಾಸದ ಅಂಗವಾಗಿ ಅರಣ್ಯವನ್ನು ಪ್ರವೇಶಿಸುವರು. ಪ್ರವೇಶಿಸು ವಾಗ ದಾರಿಯಲ್ಲಿ ಸಿಕ್ಕ ಕಿರ್ಮೀರನೇ ಮುಂತಾದ ದುಷ್ಟರನ್ನು ಭೀಮಸೇನ ಮುರಿದು ಹಾಕುವನು; ಸಂಹರಿಸುವನು. ಸೌಗಂಧಿಕಾವನದಲ್ಲಿದ್ದ ಕ್ರೋಧವಶರೆಂಬ ದಾನವರ ಸವರಬೇಕೆಂದು, ನಾಶಪಡಿಸಬೇಕೆಂಬುದೇ ದ್ರೌಪದಿಯ ಮನದ ಇಂಗಿತ, ಗೂಢ ಬಯಕೆ ಎಂದು ಅರಿತು, ವಿವೇಚಿಸಿಕೊಂಡು ತನ್ನ ಪತ್ನಿ ದ್ರೌಪದಿಗೆ ಸೌಗಂಧಿಕಾಪುಷ್ಪ ವನ್ನು ತಂದನು.

**ವಿವರಣೆ:** ದ್ಯೂತದಿಂದ ನಿರ್ಜಿತರಾದ ಪಾಂಡವರು ಹಸ್ತಿನಾಪುರದಿಂದ ಮೂರು ಹಗಲುಗಳಲ್ಲೂ, ರಾತ್ರಿಗಳಲ್ಲೂ ಸಂಚರಿಸಿ ಕಾಮ್ಯಕ ಎಂಬ ವನವನ್ನು ಪ್ರವೇಶಸುವರು. ಅಲ್ಲಿ ಬಕಾಸುರನ ತಮ್ಮ ಕಿರ್ಮೀರ ಎಂಬ ರಾಕ್ಷಸನು ನೆಲೆವೂರಿರುವನು. ಮಧ್ಯರಾತ್ರಿ ಪಾಂಡವರ ದಾರಿಗೆ ಅಡ್ಡಕಟ್ಟುವನು. ಭಯಂಕರನಾದ ಅವನನ್ನು ಭೀಮನು ಸಂಹರಿಸು ವನು.

ಕಿರ್ಮೀರನ ಬಗ್ಗೆ ಅಸಹ್ಯಭಾವನೆ ಮೂಡುವಂತೆ ಅವನ ಹೆಸರನ್ನು ವಿಕೃತಗೊಳಿಸಿ 'ಕಿಮ್ಮೀರ' ಎನ್ನಲಾಗಿದೆ.

ನರನಾರಾಯಣಾಶ್ರಮದಲ್ಲಿರುವಾಗ ಬ್ರಾಹ್ಮಣವೇಷದಲ್ಲಿ ಬಂದ ಜಟಾಸುರ ದ್ರೌಪದಿ, ಯುಧಿಷ್ಠಿರ, ನಕುಲ, ಸಹದೇವ –ಇವರನ್ನು ಅಪಹರಿಸಿಕೊಂಡು ಹೋಗಲು ಭೀಮಸೇನ ಆ ಜಟಾಸುರನನ್ನು ಸಂಹರಿಸಿದ್ದನು. '**ಕಿಮ್ಮೀರಾದಿಗಳ ಮುರಿದು.......**' –ಎಂಬಲ್ಲಿ ಆದಿಪದದಿಂದ ಜಟಾಸುರನನ್ನು ತೆಗೆದುಕೊಳ್ಳಬೇಕು.

ಹಾಗೆಯೇ, ಕೋಟಿಕಾಶ್ಯಸಹಿತನಾಗಿ ಬಂದಿದ್ದ ಜಯದ್ರಥ ದ್ರೌಪದಿಯ ಅಪ ಹರಣದಲ್ಲಿ ತೊಡಗಿದಾಗ ಭೀಮಸೇನ ಕೋಟಿಕಾಶ್ಯನನ್ನು ಕೊಲ್ಲುವನು. ಆದ್ದರಿಂದ ಕಿಮ್ಮೀರಾದಿ ಎಂಬಲ್ಲಿಯ ಆದಿಪದದಿಂದ ಕೋಟಿಕಾರ್ಯನೂ ಗ್ರಾಹ್ಯ; ಜಯದ್ರಥನನ್ನು ಕೊಲ್ಲಿಸುವುದಿಲ್ಲ. ಆದರೆ ಅವನನ್ನು ದ್ರೌಪದಿಯ ಪಾದಗಳಿಗೆ ಬೀಳುವಂತೆಯೂ, 'ನಾನು ದ್ರೌಪದಿಯ ದಾಸ' –ಎಂದು ಹೇಳುವಂತೆಯೂ ಮಾಡಿ, ಹೀಗೆ ಚೆನ್ನಾಗಿ ಅವಮಾನಿಸಿ ಬಿಟ್ಟುಬಿಡುವನು. ಆದುದರಿಂದ ಕಿಮ್ಮೀರಾದಿ ಎಂಬಲ್ಲಿಯ ಆದಿಪದದಿಂದ ಜರಾಸಂಧ ನನ್ನೂ ಇಟ್ಟುಕೊಂಡು, ಅವನನ್ನು ಮುರಿಯುವುದೆಂದರೆ ಸಾಯಿಸುವುದೆಂಬ ಅರ್ಥವಲ್ಲ; ಬದಲಾಗಿ ಅವನನ್ನು ಅವಮಾನಿಸಿ, ಅವನ ಸೊಕ್ಕು ಮುರಿಯುವುದೆಂಬ ಅರ್ಥ. ಅದಕ್ಕಾಗಿಯೇ 'ಸಾಯಿಸಿ' ಎನ್ನದೆ 'ಮುರಿದು' –ಎಂಬ ಶಬ್ದವನ್ನು ಪ್ರಯೋಗಿಸಲಾಗಿದೆ.

- ವನವಾಸದಲ್ಲಿ ತೊಡಗಿದ್ದ ಪಾಂಡವರು ಬದರಿಕಾಶ್ರಮಕ್ಕೆ ಬಂದಿದ್ದರು. ಅಲ್ಲಿ ಒಮ್ಮೆ ಭೀಮಸೇನ ದ್ರೌಪದಿಯ ಜೊತೆ ಏಕಾಂತದಲ್ಲಿ ಇದ್ದಾಗ ಗರುಡನ ರೆಕ್ಕೆಯ ಗಾಳಿ ಯಿಂದಾಗಿ ಗಿರಿ ಕಂಪಿಸಲು ಒಂದು ಚಿನ್ನದ ಶ್ರೇಷ್ಠವಾದ ಪದ್ಮ ಭೀಮದ್ರೌಪದಿಯರ ಪಕ್ಕದಲ್ಲಿ ಬೀಳುವುದು. ಆಗ ದ್ರೌಪದಿ ತನಗೆ ಇನ್ನೂ ಅಂತಹ ಬಹು ಕುಸುಮಗಳು ಬೇಕೆಂದು ಅಪೇಕ್ಷೆ ಪಡುವಳು. ತನ್ನ ಅಪೇಕ್ಷೆಯನ್ನು ಈಡೇರಿಸುವ ತಾಕತ್ತು ಭೀಮಸೇನನಿಗಿದೆ ಎಂಬುದನ್ನು ಚೆನ್ನಾಗಿ ತಿಳಿದವಳು ಅವಳು. ಹೀಗೆ ದ್ರೌಪದಿಯಿಂದ ಸೌಗಂಧಿಕಾಪುಷ್ಪಗಳಿಗಾಗಿ ಬೇಡಲ್ಪಟ್ಟ ಭೀಮಸೇನ ಗದಾಧಾರಿಯಾಗಿ ಆ ಬೆಟ್ಟದ ಶಿಖರವನ್ನು ಏರಲು ಪ್ರಾರಂಭಿಸುವನು. ತನ್ನ ಪತ್ನಿಯನ್ನು ಸಂತೋಷಪಡಿಸಬೇಕೆಂದು ಭೀಮಸೇನ ಇಂತಹ ಸಾಹಸದಲ್ಲಿ ತೊಡಗುವಷ್ಟೂ ಅವಿವೇಕಿಯೇ! –ಎಂಬ ಸಂದೇಹವನ್ನು ಪರಿಹರಿಸಲು ಭೀಮಸೇನನಿಗೆ ಒಂದು ವಿಶೇಷಣ ನೀಡಲಾಗಿದೆ– 'ಮಾನನಿಧಿ'. ಮಾನಶಬ್ದಕ್ಕೆ ತಿಳಿವಳಿಕೆ, ಅಭಿಮಾನ, ಮಾನ್ಯತೆ, ಬಲ.... ಇತ್ಯಾದಿ ಅನೇಕ ಅರ್ಥಗಳಿವೆ. ಆ ಎಲ್ಲ ಅರ್ಥಗಳನ್ನಿಟ್ಟುಕೊಂಡಾಗಲೂ ಭೀಮಸೇನ ಮಾನನಿಧಿಯೇ. ವಿದ್ಯೆಗಳನ್ನೆಲ್ಲ ಧರಿಸಿಕೊಂಡಿರುವವನೆಂಬ ಅರ್ಥದಲ್ಲಿಯೇ ಭೀಮ ಎನಿಸಿರುವ ಅವನು ಜ್ಞಾನಕ್ಕೆ ನಿಧಿ ಆಗಿರುವುದರಿಂದಲೂ ಮಾನನಿಧಿ. ಹೀಗೆ ವಿವೇಕಿಯಾಗಿದ್ದು ಮಾನನಿಧಿ ಎನಿಸಿರುವವನಾದುದರಿಂದ ಹೆಂಡತಿಯನ್ನು ಸಂತೋಷಪಡಿಸುವುದಕ್ಕಾಗಿ ಅವಿವೇಕ ದಿಂದ ಸೌಗಂಧಿಕಾಪುಷ್ಪಗಳ ಆಹರಣಕ್ಕಾಗಿ ಹೊರಟನೆಂಬುದು ಉಚಿತವೆನಿಸದು. ಹಾಗೆಯೇ, ಒಳ್ಳೆಯ ಸ್ವಾಭಿಮಾನಕ್ಕೆ ಆಗರನಾದವನು ಭೀಮಸೇ. ಒಳ್ಳೆಯ ವಿವೇಕಿ, ಸ್ವಾಭಿಮಾನಿ ಎಂಬುದಾಗಿ ಕೃಷ್ಣನೇ ಮುಂತಾದವರ ಗೌರವಭಾವನೆಗೂ ಪಾತ್ರನಾಗಿರು

ವವನು. ಇಂತಹವನು ಸಾಮಾನ್ಯ ಒಬ್ಬ ಹೆಣ್ಣಿಗನಂತೆ ಹೆಂಡತಿಯ ಮಾತು ಕೇಳಿ ಸೌಗಂಧಿಕಾಪುಷ್ಪಗಳನ್ನು ತರಲು ಹೋದ; ತನ್ನ ಅಮೂಲ್ಯವಾದ ಬಾಹುಬಲವನ್ನು, ಜೀವನದ ಕ್ಷಣಗಳನ್ನು ಯಾವುದೋ ಕ್ಷುಲ್ಲಕ ಸಂಗತಿಗಾಗಿ ದುರುಪಯೋಗಪಡಿಸಿ ದನೆಂಬುದು ಕೂಡುವುದಿಲ್ಲ. ಇದನ್ನು ಸ್ಪಷ್ಟಪಡಿಸುವುದಕ್ಕಾಗಿಯೇ ಈ ಪದ್ಯದಲ್ಲಿ ಭೀಮಸೇನನನ್ನು 'ಮಾನನಿಧಿ' –ಎಂದು ಉದ್ಘೋಷಿಸಲಾಗಿದೆ. ಉತ್ತಮ ಬಲಕ್ಕೆ ಆಸರೆಯಾಗಿರುವುದರಿಂದ 'ಮಾನನಿಧಿ' ಎನಿಸಿರುವ ಭೀಮಸೇನ ಕ್ರೋಧವಶರಂತಹ ದುಷ್ಟರ ಸಂಹಾರದಿಂದ ತನ್ನ ಬಲವನ್ನು ಸಾರ್ಥಕಪಡಿಸಿಕೊಳ್ಳಬೇಕೆಂಬ ದೃಷ್ಟಿ ಯಿಂದಲೇ, ಸೌಗಂಧಿಕಾಪುಷ್ಪಹರಣವನ್ನು ನೆಪವಾಗಿಟ್ಟುಕೊಂಡು ಸೌಗಂಧಿಕಾವನದತ್ತ ಸಾಗಿರುವನು –ಎಂಬುದಾಗಿ 'ಮಾನನಿಧಿ' ವಿಶೇಷಣದಿಂದ ಸೂಚಿಸಿಕೊಟ್ಟು 'ದಾನವರ ಸವರಬೇಕೆಂದು ಬ್ಯಾಗ.....' –ಎಂಬ ಮಾತಿನಲ್ಲಿ ಸ್ಪಷ್ಟಪಡಿಸಲಾಗಿದೆ.

ಕ್ರೋಧವಶ ದಾನವರನ್ನು 'ಬ್ಯಾಗ' ಆದಷ್ಟು ಬೇಗ, ಸವರಬೇಕೆಂದು ನಾಶಗೈಯ ಬೇಕೆಂದು..... ಸೌಗಂಧಿಕವನೆ ತಂದ.

- ದ್ರೌಪದಿಯಾದರೂ ಸಾಮಾನ್ಯಸ್ತ್ರೀಯಂತೆ ಹೂವಿನ ಚಾಪಲ್ಯಕ್ಕೊಳಗಾಗಿ ತನ್ನ ಪತಿಯ ಬಾಹುಬಲಾದಿಗಳ ದುರುಪಯೋಗ ಮಾಡಿಸುವಂತಹ ಅವಿವೇಕಿ ಅಲ್ಲ. ಭೂಭಾರಹರಣದಲ್ಲಿ ತೊಡಗಿರುವ ಶ್ರೀಹರಿಗೆ ಭೀಮಸೇನನ ಬಳಿಕ ಎರಡನೇ ಅಂಗ ಎನಿಸಿರುವವಳು ಅವಳು– '......ದ್ವಿತೀಯಾಂಗಂ ಸರಸ್ವತೀ' (ಮ.ಭಾರ.ತಾ.ನಿ. 2-126). ಒಳ್ಳೆಯ ಪ್ರಜ್ಞೆ ಉಳ್ಳವಳು. ಇದನ್ನು ಸೂಚಿಸುವುದಕ್ಕಾಗಿಯೇ ಈ ಪದ್ಯದಲ್ಲಿ ಅವಳನ್ನು 'ಮಾನಿನಿ' –ಎಂದು ವಿಶೇಷಿಸಲಾಗಿದೆ. ಮಾನಿನಿ ಎಂಬುದು ರೂಢಿಯಿಂದ ಸ್ತ್ರೀವಾಚಕಶಬ್ದವಾದರೂ ಯೋಗದಿಂದ ಒಳ್ಳೆಯ ಪ್ರಜ್ಞಾವಂತಿಕೆಯನ್ನು (ಮಾನಂ ಅಸ್ಯಾಃ ಅಸ್ತೀತಿ) ತಿಳಿಸುವ ಶಬ್ದ. ಈ ಪ್ರಸಂಗದಲ್ಲಿ ದ್ರೌಪದಿಯ ವಿಷಯದಲ್ಲಂತೂ 'ಮಾನಿನಿ' ಶಬ್ದ ತನ್ನ ಪೂರ್ಣಾರ್ಥದಲ್ಲಿ ತೆರೆದುಕೊಳ್ಳಬಲ್ಲದು. ಭೀಮಸೇನ 'ಮಾನನಿಧಿ' ಆದರೆ ದ್ರೌಪದಿ 'ಮಾನಿನಿ' –ಎನಿಸುವುದು ಅತ್ಯಂತ ಉಚಿತ.

- ಭೀಮಸೇನನಿಗೂ ದ್ರೌಪದಿಯ ಸ್ವಭಾವ ಚೆನ್ನಾಗಿ ಗೊತ್ತು. ಸಾಮಾನ್ಯ ಹೆಣ್ಣಿನಂತೆ ಹೂವಿಗೆ ಮರುಳಾಗುವಷ್ಟು ಚಪಲಸ್ತ್ರೀ ದ್ರೌಪದಿ ಅಲ್ಲ. ಯಾವುದೋ ಘನೋದ್ದೇಶ ದಿಂದಲೇ ಹೀಗೆ ಪುಷ್ಪಗಳನ್ನು ಬಯಸುತ್ತಿದ್ದಾಳೆ –ಎಂದು. ಸೌಗಂಧಿಕಾಪುಷ್ಪಗಳನ್ನು ಪಡೆದು ಕೆಲವು ದಿನಗಳ ಬಳಿಕ ಐದು ಬಣ್ಣಗಳುಳ್ಳ ಮತ್ತೊಂದು ಬಗೆಯ ಹೂಗಳನ್ನು ತಂದುಕೊಡಲು ತಿಳಿಸುವಾಗ ಆಕೆಯ ಮನದ ಇಂಗಿತವನ್ನು ಶ್ರೀಮಧ್ವರು ಸ್ಪಷ್ಟ ಪಡಿಸಿರುವರು– 'ಉವಾಚ ಭೀಮಸೇನಸ್ಯ ಯಶೋಧರ್ಮಾಭಿವೃದ್ಧಯೇ....' (ಮ.ಭಾರ. ತಾ.ನಿ.22-310) ದುಷ್ಟ ಅಸುರರ ಸಂಹಾರದಿಂದಾಗಿ ಭೀಮಸೇನನಿಗೆ ಪುಣ್ಯ ಹಾಗೂ ಕೀರ್ತಿ ಬರಲೆಂಬ ಉದ್ದೇಶದಿಂದಲೇ ದ್ರೌಪದಿ ಹೂಗಳನ್ನು ಬಯಸಿದಳು.

ಸೌಗಂಧಿಕಾಪುಷ್ಪಗಳನ್ನು ಬಯಸಿದ ಉದ್ದೇಶವೂ ಇದೇ ಎಂದು ಇಟ್ಟುಕೊಳ್ಳಬೇಕು. ಭೀಮಸೇನ ದ್ರೌಪದಿಯನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿರುವವನಾದುದರಿಂದ ಅವಳ

ಸೌಗಂಧಿಕಾಪುಷ್ಪಗಳ ಬಯಕೆಯ ಉದ್ದೇಶವನ್ನು ಚೆನ್ನಾಗಿ ಅರಿತಿದ್ದ ಎಂಬುದನ್ನು ಸ್ಪಷ್ಟಪಡಿಸಲಾಗಿದೆ– '.....ದ್ರೌಪದಿಯ ಮನದಿಂಗಿತವನರಿತು.......'

* * *

**ಕುರುಪ ಕೀಚಕನ ಸವರಿದ....**

**ದುರುಳ ಕೀಚಕನು ದ್ರೌಪದಿಯ ಚೆಲುವಿಕೆಗೆ**
**ಮರುಳಾಗಿ ಕರೆಕರೆಯ ಮಾಡಲವನ**
**ಗರಡಿಮನೆಯೊಳು ಬರಸಿ ಸವರಿ ಅವನನ್ವಯವ**
**ಕುರುಪನಟ್ಟಿದ ಮಲ್ಲ ಕುಲವ ಸದೆದ** ॥ ೧೮ ॥

**ಪಾಂಡವರು ವಿರಾಟನ ಆಸ್ಥಾನದಲ್ಲಿ ಅಜ್ಞಾತವಾಸವನ್ನು ನಡೆಸುತ್ತಿರಲು ದುರುಳ ಕೀಚಕನು ದ್ರೌಪದಿಯ ಚೆಲುವಿಕೆಗೆ (ಸೌಂದರ್ಯಕ್ಕೆ) ಮರುಳಾಗಿ ಕರೆಕರೆಯ (ಚಿರಿಪಿರಿ -ತಲೆಹರಟೆ-) ಮಾಡಲು, ತೊಂದರೆ ಕೊಡಲು ಕುರುಪನಾದ ಭೀಮಸೇನ ಗರಡಿ ಮನೆಗೆ (ವ್ಯಾಯಾಮದ ಮನೆಗೆ) ಬರಿಸಿ (ಬರುವಂತೆ ಮಾಡಿ) ಅವನನ್ನು ಸವರಿದನು. ಹಾಗೂ ಅವನ ಅನ್ವಯವ -ವಂಶದ ಉಪಕೀಚಕರನ್ನು ಅಟ್ಟಿದ -ಯಮನ ಪಟ್ಟಣಕ್ಕೆ ಓಡಿಸಿದನು. ಜೀಮೂತ ಮಲ್ಲಕುಲವ ಸದೆದ; ಅಪ್ಪಳಿಸಿದನು.**

- ಪಾಂಡವರ ಅಜ್ಞಾತವಾಸದ ಸಂದರ್ಭದಲ್ಲಿ ಭೀಮಸೇನನಿಂದ ನಡೆದ ಪ್ರಮುಖ ಎರಡು ಸಾಧನೆಗಳ ಮೇಲೆ ಈ ಪದ್ಯ ಬೆಳಕು ಚೆಲ್ಲಿದೆ– ಮಲ್ಲನನ್ನು ಅಟ್ಟಿ ಸದೆದದ್ದು; ಕೀಚಕನನ್ನೂ ಉಪಕೀಚಕನನ್ನೂ ಅಟ್ಟಿ ಸವರಿದುದು.
- ಕೀಚಕಾದಿಗಳ ಸಂಹಾರಕ್ಕಿಂತ ಮೊದಲು ಜೀಮೂತ ಎಂಬ ಮಲ್ಲನನ್ನು ಅಟ್ಟಿದ ಘಟನೆ ನಡೆದದ್ದು. ಆದರೆ '**ಅಭ್ಯರ್ಹಿತಂ ಪೂರ್ವಂ**' –ಪ್ರಧಾನವಾದದ್ದು ಮೊದಲು ಎಂಬ ನ್ಯಾಯಕ್ಕನುಗುಣವಾಗಿ ಕೀಚಕಾದಿಗಳ ಸಂಹಾರವನ್ನು ಮೊದಲು ಉಲ್ಲೇಖಿಸ ಲಾಗಿದೆ.

ಸಮಸ್ತ ಭೂಮಂಡಲದಲ್ಲಿ ಅಜಿತನಾಗಿದ್ದ ಜೀಮೂತ ವಿರಾಟರಾಜನ ನಗರಕ್ಕೆ ಬರಲು ಅಡುಗೆಯವನ ವೇಷದಲ್ಲಿದ್ದ ಭೀಮಸೇನ ಅವನನ್ನು ಸದೆದು, ಅಪ್ಪಳಿಸಿ, ಯಮನ ಲೋಕಕ್ಕೆ ಅಟ್ಟಿದನು –ಓಡಿಸಿದನು. ಭೀಮಸೇನ ಜೀಮೂತ ಎಂಬ ಒಬ್ಬ ಮಲನನ್ನೇ ಕೊಂದಿದ್ದರೂ ಉಳಿದ ಮಲ್ಲರೆಲ್ಲ ಜೀಮೂತನಿಗೆ ಭಯಪಡುವರಾಗಿದ್ದು, ಅಂತಹ ಜೀಮೂತನನ್ನು ಸದೆ ಬಡಿದದ್ದರಿಂದ ಒಂದು ಅರ್ಥದಲ್ಲಿ ಮಲ್ಲರ ಸಮೂಹ ವನ್ನೇ ಸೋಲಿಸಿದಂತಾಯಿತೆಂಬ ಅಭಿಪ್ರಾಯದಲ್ಲಿ 'ಮಲ್ಲಕುಲವ ಸದೆದ' ಎನ್ನಲಾಗಿದೆ.

- ದ್ರೌಪದಿ ವಿರಾಟನ ಪತ್ನಿ ಸುದೇಷ್ಣೆಗೆ ಸೈರಂಧ್ರಿಯಾಗಿದ್ದರೆ, ಸುದೇಷ್ಣೆಯ ತಮ್ಮ ಕೀಚಕ ದ್ರೌಪದಿಯ ಸೌಂದರ್ಯಕ್ಕೆ ಮರುಳಾಗಿ ಆಕೆ ತನ್ನೆಡೆಗೆ ಬರುವಂತೆ ಮಾಡಲು ಅಕ್ಕ ಸುದೇಷ್ಣೆಗೆ ಒತ್ತಾಯಿಸಿದ. ಸುದೇಷ್ಣೆ ಅವನ ಒತ್ತಾಯಕ್ಕೆ ಮಣಿದು ಅವನ ಕೋಣೆಗೆ

ವವನು. ಇಂತಹವನು ಸಾಮಾನ್ಯ ಒಬ್ಬ ಹೆಣ್ಣಿಗನಂತೆ ಹೆಂಡತಿಯ ಮಾತು ಕೇಳಿ ಸೌಗಂಧಿಕಾಪುಷ್ಪಗಳನ್ನು ತರಲು ಹೋದ; ತನ್ನ ಅಮೂಲ್ಯವಾದ ಬಾಹುಬಲವನ್ನು, ಜೀವನದ ಕ್ಷಣಗಳನ್ನು ಯಾವುದೋ ಕ್ಷುಲ್ಲಕ ಸಂಗತಿಗಾಗಿ ದುರುಪಯೋಗಪಡಿಸಿ ದನೆಂಬುದು ಕೂಡುವುದಿಲ್ಲ. ಇದನ್ನು ಸ್ಪಷ್ಟಪಡಿಸುವುದಕ್ಕಾಗಿಯೇ ಈ ಪದ್ಯದಲ್ಲಿ ಭೀಮಸೇನನನ್ನು 'ಮಾನನಿಧಿ' –ಎಂದು ಉದ್ಘೋಷಿಸಲಾಗಿದೆ. ಉತ್ತಮ ಬಲಕ್ಕೆ ಆಸರೆಯಾಗಿರುವುದರಿಂದ 'ಮಾನನಿಧಿ' ಎನಿಸಿರುವ ಭೀಮಸೇನ ಕ್ರೋಧವಶರಂತಹ ದುಷ್ಟರ ಸಂಹಾರದಿಂದ ತನ್ನ ಬಲವನ್ನು ಸಾರ್ಥಕಪಡಿಸಿಕೊಳ್ಳಬೇಕೆಂಬ ದೃಷ್ಟಿ ಯಿಂದಲೇ, ಸೌಗಂಧಿಕಾಪುಷ್ಪಹರಣವನ್ನು ನೆಪವಾಗಿಟ್ಟುಕೊಂಡು ಸೌಗಂಧಿಕಾವನದತ್ತ ಸಾಗಿರುವನು –ಎಂಬುದಾಗಿ 'ಮಾನನಿಧಿ' ವಿಶೇಷಣದಿಂದ ಸೂಚಿಸಿಕೊಟ್ಟು 'ದಾನವರ ಸವರಬೇಕೆಂದು ಬ್ಯಾಗ.....' –ಎಂಬ ಮಾತಿನಲ್ಲಿ ಸ್ಪಷ್ಟಪಡಿಸಲಾಗಿದೆ.

ಕ್ರೋಧವಶ ದಾನವರನ್ನು 'ಬ್ಯಾಗ' ಆದಷ್ಟು ಬೇಗ, ಸವರಬೇಕೆಂದು ನಾಶಗೈಯ ಬೇಕೆಂದು..... ಸೌಗಂಧಿಕವನೆ ತಂದ.

- ದ್ರೌಪದಿಯಾದರೂ ಸಾಮಾನ್ಯಸ್ತ್ರೀಯಂತೆ ಹೂವಿನ ಚಾಪಲ್ಯಕ್ಕೊಳಗಾಗಿ ತನ್ನ ಪತಿಯ ಬಾಹುಬಲಾದಿಗಳ ದುರುಪಯೋಗ ಮಾಡಿಸುವಂತಹ ಅವಿವೇಕಿ ಅಲ್ಲ. ಭೂಭಾರಹರಣದಲ್ಲಿ ತೊಡಗಿರುವ ಶ್ರೀಹರಿಗೆ ಭೀಮಸೇನನ ಬಳಿಕ ಎರಡನೇ ಅಂಗ ಎನಿಸಿರುವವಳು ಅವಳು– '......ದ್ವಿತೀಯಾಂಗಂ ಸರಸ್ವತೀ' (ಮ.ಭಾರ.ತಾ.ನಿ. 2-126). ಒಳ್ಳೆಯ ಪ್ರಜ್ಞೆ ಉಳ್ಳವಳು. ಇದನ್ನು ಸೂಚಿಸುವುದಕ್ಕಾಗಿಯೇ ಈ ಪದ್ಯದಲ್ಲಿ ಅವಳನ್ನು 'ಮಾನಿನಿ' –ಎಂದು ವಿಶೇಷಿಸಲಾಗಿದೆ. ಮಾನಿನಿ ಎಂಬುದು ರೂಢಿಯಿಂದ ಸ್ತ್ರೀವಾಚಕಶಬ್ದವಾದರೂ ಯೋಗದಿಂದ ಒಳ್ಳೆಯ ಪ್ರಜ್ಞಾವಂತಿಕೆಯನ್ನು (ಮಾನಂ ಅಸ್ಯಾಃ ಅಸ್ತೀತಿ) ತಿಳಿಸುವ ಶಬ್ದ. ಈ ಪ್ರಸಂಗದಲ್ಲಿ ದ್ರೌಪದಿಯ ವಿಷಯದಲ್ಲಂತೂ 'ಮಾನಿನಿ' ಶಬ್ದ ತನ್ನ ಪೂರ್ಣಾರ್ಥದಲ್ಲಿ ತೆರೆದುಕೊಳ್ಳಬಲ್ಲದು. ಭೀಮಸೇನ 'ಮಾನನಿಧಿ' ಆದರೆ ದ್ರೌಪದಿ 'ಮಾನಿನಿ' –ಎನಿಸುವುದು ಅತ್ಯಂತ ಉಚಿತ.

- ಭೀಮಸೇನನಿಗೂ ದ್ರೌಪದಿಯ ಸ್ವಭಾವ ಚೆನ್ನಾಗಿ ಗೊತ್ತು. ಸಾಮಾನ್ಯ ಹೆಣ್ಣಿನಂತೆ ಹೂವಿಗೆ ಮರುಳಾಗುವಷ್ಟು ಚಪಲಸ್ತ್ರೀ ದ್ರೌಪದಿ ಅಲ್ಲ. ಯಾವುದೋ ಘನೋದ್ದೇಶ ದಿಂದಲೇ ಹೀಗೆ ಪುಷ್ಪಗಳನ್ನು ಬಯಸುತ್ತಿದ್ದಾಳೆ –ಎಂದು. ಸೌಗಂಧಿಕಾಪುಷ್ಪಗಳನ್ನು ಪಡೆದು ಕೆಲವು ದಿನಗಳ ಬಳಿಕ ಐದು ಬಣ್ಣಗಳುಳ್ಳ ಮತ್ತೊಂದು ಬಗೆಯ ಹೂಗಳನ್ನು ತಂದುಕೊಡಲು ತಿಳಿಸುವಾಗ ಆಕೆಯ ಮನದ ಇಂಗಿತವನ್ನು ಶ್ರೀಮಧ್ವರು ಸ್ಪಷ್ಟ ಪಡಿಸಿರುವರು– 'ಉವಾಚ ಭೀಮಸೇನಸ್ಯ ಯಶೋಧರ್ಮಾಭಿವೃದ್ಧಯೇ....' (ಮ.ಭಾರ. ತಾ.ನಿ.22-310) ದುಷ್ಟ ಅಸುರರ ಸಂಹಾರದಿಂದಾಗಿ ಭೀಮಸೇನನಿಗೆ ಪುಣ್ಯ ಹಾಗೂ ಕೀರ್ತಿ ಬರಲೆಂಬ ಉದ್ದೇಶದಿಂದಲೇ ದ್ರೌಪದಿ ಹೂಗಳನ್ನು ಬಯಸಿದಳು.

ಸೌಗಂಧಿಕಾಪುಷ್ಪಗಳನ್ನು ಬಯಸಿದ ಉದ್ದೇಶವೂ ಇದೇ ಎಂದು ಇಟ್ಟುಕೊಳ್ಳಬೇಕು. ಭೀಮಸೇನ ದ್ರೌಪದಿಯನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿರುವವನಾದುದರಿಂದ ಅವಳ

ಸೌಗಂಧಿಕಾಪುಷ್ಪಗಳ ಬಯಕೆಯ ಉದ್ದೇಶವನ್ನು ಚೆನ್ನಾಗಿ ಅರಿತಿದ್ದ ಎಂಬುದನ್ನು ಸ್ಪಷ್ಟಪಡಿಸಲಾಗಿದೆ– '.....ದ್ರೌಪದಿಯ ಮನದಿಂಗಿತವನರಿತು.......'

* * *

**ಕುರುಪ ಕೀಚಕನ ಸವರಿದ....**

**ದುರುಳ ಕೀಚಕನು ದ್ರೌಪದಿಯ ಚೆಲುವಿಕೆಗೆ**
**ಮರುಳಾಗಿ ಕರೆಕರೆಯ ಮಾಡಲವನ**
**ಗರಡಿಮನೆಯೊಳು ಬರಸಿ ಸವರಿ ಅವನನ್ವಯವ**
**ಕುರುಪನಟ್ಟಿದ ಮಲ್ಲ ಕುಲವ ಸದೆದ** ॥ ೧೮ ॥

**ಪಾಂಡವರು ವಿರಾಟನ ಆಸ್ಥಾನದಲ್ಲಿ ಅಜ್ಞಾತವಾಸವನ್ನು ನಡೆಸುತ್ತಿರಲು ದುರುಳ ಕೀಚಕನು ದ್ರೌಪದಿಯ ಚೆಲುವಿಕೆಗೆ (ಸೌಂದರ್ಯಕ್ಕೆ) ಮರುಳಾಗಿ ಕರೆಕರೆಯ (ಚಿರಿಪಿರಿ -ತಲೆಹರಟೆ-) ಮಾಡಲು, ತೊಂದರೆ ಕೊಡಲು ಕುರುಪನಾದ ಭೀಮಸೇನ ಗರಡಿ ಮನೆಗೆ (ವ್ಯಾಯಾಮದ ಮನೆಗೆ) ಬರಿಸಿ (ಬರುವಂತೆ ಮಾಡಿ) ಅವನನ್ನು ಸವರಿದನು. ಹಾಗೂ ಅವನ ಅನ್ವಯವ -ವಂಶದ ಉಪಕೀಚಕರನ್ನು ಅಟ್ಟಿದ -ಯಮನ ಪಟ್ಟಣಕ್ಕೆ ಓಡಿಸಿದನು. ಜೀಮೂತ ಮಲ್ಲಕುಲವ ಸದೆದ; ಅಪ್ಪಳಿಸಿದನು.**

- ಪಾಂಡವರ ಅಜ್ಞಾತವಾಸದ ಸಂದರ್ಭದಲ್ಲಿ ಭೀಮಸೇನನಿಂದ ನಡೆದ ಪ್ರಮುಖ ಎರಡು ಸಾಧನೆಗಳ ಮೇಲೆ ಈ ಪದ್ಯ ಬೆಳಕು ಚೆಲ್ಲಿದೆ– ಮಲ್ಲನನ್ನು ಅಟ್ಟಿ ಸದೆದದ್ದು; ಕೀಚಕನನ್ನೂ ಉಪಕೀಚಕನನ್ನೂ ಅಟ್ಟಿ ಸವರಿದುದು.

- ಕೀಚಕಾದಿಗಳ ಸಂಹಾರಕ್ಕಿಂತ ಮೊದಲು ಜೀಮೂತ ಎಂಬ ಮಲ್ಲನನ್ನು ಅಟ್ಟಿದ ಘಟನೆ ನಡೆದದ್ದು. ಆದರೆ '**ಅಭ್ಯರ್ಹಿತಂ ಪೂರ್ವಂ**' –ಪ್ರಧಾನವಾದದ್ದು ಮೊದಲು ಎಂಬ ನ್ಯಾಯಕ್ಕನುಗುಣವಾಗಿ ಕೀಚಕಾದಿಗಳ ಸಂಹಾರವನ್ನು ಮೊದಲು ಉಲ್ಲೇಖಿಸ ಲಾಗಿದೆ.

ಸಮಸ್ತ ಭೂಮಂಡಲದಲ್ಲಿ ಅಜಿತನಾಗಿದ್ದ ಜೀಮೂತ ವಿರಾಟರಾಜನ ನಗರಕ್ಕೆ ಬರಲು ಅಡುಗೆಯವನ ವೇಷದಲ್ಲಿದ್ದ ಭೀಮಸೇನ ಅವನನ್ನು ಸದೆದು, ಅಪ್ಪಳಿಸಿ, ಯಮನ ಲೋಕಕ್ಕೆ ಅಟ್ಟಿದನು –ಓಡಿಸಿದನು. ಭೀಮಸೇನ ಜೀಮೂತ ಎಂಬ ಒಬ್ಬ ಮಲನನ್ನೇ ಕೊಂದಿದ್ದರೂ ಉಳಿದ ಮಲ್ಲರೆಲ್ಲ ಜೀಮೂತನಿಗೆ ಭಯಪಡುವರಾಗಿದ್ದು, ಅಂತಪ ಜೀಮೂತನನ್ನು ಸದೆ ಬಡಿದದ್ದರಿಂದ ಒಂದು ಅರ್ಥದಲ್ಲಿ ಮಲ್ಲರ ಸಮೂಹ ವನ್ನೇ ಸೋಲಿಸಿದಂತಾಯಿತೆಂಬ ಅಭಿಪ್ರಾಯದಲ್ಲಿ 'ಮಲ್ಲಕುಲವ ಸದೆದ' ಎನ್ನಲಾಗಿದೆ.

- ದ್ರೌಪದಿ ವಿರಾಟನ ಪತ್ನಿ ಸುದೇಷ್ಣೆಗೆ ಸೈರಂಧ್ರಿಯಾಗಿದ್ದರೆ, ಸುದೇಷ್ಣೆಯ ತಮ್ಮ ಕೀಚಕ ದ್ರೌಪದಿಯ ಸೌಂದರ್ಯಕ್ಕೆ ಮರುಳಾಗಿ ಆಕೆ ತನ್ನೆಡೆಗೆ ಬರುವಂತೆ ಮಾಡಲು ಅಕ್ಕ ಸುದೇಷ್ಣೆಗೆ ಒತ್ತಾಯಿಸಿದ. ಸುದೇಷ್ಣೆ ಅವನ ಒತ್ತಾಯಕ್ಕೆ ಮಣಿದು ಅವನ ಕೋಣೆಗೆ

ಸುರೆಯನ್ನು ಕೊಟ್ಟು ಬರುವಂತೆ ಸೈರಂಧ್ರಿಗೆ ಆದೇಶಿಸುವಳು. ದ್ರೌಪದಿ ಒಪ್ಪದಿದ್ದರೂ, ಅವಳನ್ನು ಒತ್ತಾಯಿಸಿ ಕಳುಹಿಸುವಳು.

ದ್ರೌಪದಿ ತನ್ನ ಕೋಣೆಗೆ ಬರುತ್ತಲೇ ಕೀಚಕ ಆಕೆಯ ಕೈಯನ್ನು ಹಿಡಿದು ಜಗ್ಗುವನು. ದ್ರೌಪದಿ ತಪ್ಪಿಸಿಕೊಂಡು ಓಡುವಳು. ಕೀಚಕನೂ ಹಿಂಬಾಲಿಸುವನು. ದ್ರೌಪದಿಯನ್ನು ಕೆಳಗೆ ಬೀಳಿಸಿ ಕಾಲಿನಿಂದ ಒದೆಯುವನು. ದ್ರೌಪದಿಯಿಂದ ಪ್ರಾರ್ಥಿತನಾದ ನಾರಾಯಣನು, ಅವಳ ರಕ್ಷಣೆಗೆ ಹೇತಿ ಎಂಬ ಅಸುರನನ್ನು ಕಳುಹಿಸುವನು. ಅದೃಶ್ಯನಾಗಿದ್ದ ಆ ಹೇತಿಯಲ್ಲಿ ವಾಯುದೇವರಿದ್ದುಕೊಂಡು ಕೀಚಕನನ್ನು ಹೊಡೆದುರುಳಿಸುವರು.

ಹೀಗೆ ಕೀಚಕನಿಂದ ನಡೆದ ಅನ್ಯಾಯವನ್ನು 'ಕೀಚಕನು...... ಮರುಳಾಗಿ ಕರೆಕರೆಯ ಮಾಡಲು' –ಎಂದು ಸಂಗ್ರಹಿಸಲಾಗಿದೆ. ಕೀಚಕನಿಂದ ನಡೆದ ದೌರ್ಜನ್ಯದ ವಿವರಣೆಯನ್ನು ನೀಡಲು ಮನಸ್ಸಿಲ್ಲದೆ 'ಕರೆಕರೆಯ ಮಾಡಲು' –ಎಂಬ ಎರಡೇ ಶಬ್ದಗಳಿಂದ ಸಂಗ್ರಹಿಸಲಾಗಿದೆ ಎಂದಿಟ್ಟುಕೊಳ್ಳಬೇಕು.

- ಕೀಚಕ ಹೀಗೆ 'ಕರೆಕರೆ' ಎಸಗಿದ ರಾತ್ರಿಯಂದು ದ್ರೌಪದಿ ಭೀಮಸೇನನಲ್ಲಿಗೆ ಹೋಗಿ ಕೀಚಕನನ್ನು ಸಂಹರಿಸಲು ತಿಳಿಸುವಳು. ಭೀಮಸೇನ ಕೀಚಕನನ್ನು 'ನರ್ತನಾಗಾರ'ಕ್ಕೆ ಬರಮಾಡುವಂತೆ ದ್ರೌಪದಿಗೆ ತಿಳಿಸುವನು. ದ್ರೌಪದಿ ಕೀಚಕನಿಗೆ ಹಾಗೆ ತಿಳಿಸುವಳು. ಭೀಮಸೇನ ಮೊದಲೇ ಆ ನರ್ತನಾಗಾರಕ್ಕೆ ಹೋಗಿ ಅಡಗಿಕೊಂಡಿರುವನು. ಹೊರತು ಕೆಲವು ಹಾಡುಗಳಲ್ಲಿ ತಿಳಿಸುವಂತೆ ಭೀಮಸೇನ ದ್ರೌಪದಿಯ ವೇಷ ಹಾಕಿಕೊಂಡು ಹೋದದ್ದಲ್ಲ. **'ಭೀಮೋಽಥ ಪ್ರಥಮಂ ಗತ್ವಾ ರಾತ್ರೌ ಛನ್ನ ಉಪಾವಿಶತ್'** (ಮ.ಭಾರ. ವಿರಾಟ. 28-38) –ಎಂದು ಮಹಾಭಾರತದಲ್ಲಿ ಸ್ಪಷ್ಟವಾಗಿದೆ. ಅಲ್ಲಿ ಹೊದಿಕೆ ಹೊದ್ದುಕೊಂಡು ಮಲಗಿದ್ದ ಭೀಮಸೇನನನ್ನು ದ್ರೌಪದಿ ಎಂದು ಭ್ರಮಿಸಿ ಕೀಚಕ ಕಾಮದ ಸಂಭಾಷಣೆ ನಡೆಸಲು ಕೂಡಲೇ ಎದ್ದ ಭೀಮಸೇನ ಕೀಚಕನ ತಲೆಗೂದಲಲ್ಲಿ ಹಿಡಿದು ಜಗ್ಗಿ, ಬಾಹುಯುದ್ಧಾದಿಗಳನ್ನು ನಡೆಸಿ ಕೀಚಕನನ್ನು ಸಂಹರಿಸುವನು. ಇವಿಷ್ಟು ಘಟನೆಯನ್ನು 'ಅವನ ಗರಡಿಮನೆಯೊಳು ಬರಸಿ ಸವರಿದ' –ಎಂದು ಸಂಗ್ರಹಿಸಲಾಗಿದೆ.
- ಮಹಾಭಾರತದಲ್ಲಿ **'ಯೈಷಾ ನರ್ತನಶಾಲೇಹ...... ಕುರ್ಯಾಸ್ತಥಾ ತ್ವಂ ಕಲ್ಯಾಣಿ'** (ವಿರಾಟ. 22-3) ನರ್ತನಶಾಲೆಗೆ ಕೀಚಕನನ್ನು ಬರಮಾಡಿಸಿದನೆಂದು ಸ್ಪಷ್ಟ ಇದೆ. ರಾತ್ರಿ ಅದು ಶೂನ್ಯವಾಗಿರುವುದೆಂಬ ದೃಷ್ಟಿಯಿಂದ ಮಹಾಭಾರತತಾತ್ಪರ್ಯ ನಿರ್ಣಯದಲ್ಲಿ (23-25) **'ಜಗಾದ ಗಂತುಂ ಶೂನ್ಯಗೃಹಂ........'** ಶೂನ್ಯಗೃಹ ಎಂದೇ ಕರೆಯಲಾಗಿದೆ. ಆದರಂತೆ, ಮುಂದೆ ಅಲ್ಲಿ ಮಲ್ಲಯುದ್ಧ ನಡೆಯಲಿರುವುದರಿಂದ 'ಗರಡಿಮನೆ'ಯಂತೆ ಆಗಬಲ್ಲದೆಂಬ ದೃಷ್ಟಿಯಿಂದ ಈ ಪದ್ಯದಲ್ಲಿ 'ಗರಡಿಮನೆಯೊಳು ಬರಸಿ......' –ಎಂದು ತಿಳಿಸಲಾಗಿದೆ.
- ಭೀಮಸೇನನಿಂದ ಕೊಲ್ಲಲ್ಪಟ್ಟ ಕೀಚಕನನ್ನು ಕಂಡು, ಅವನ ನೂರ ಐದು ಅನುಜರು, ಕೀಚಕನ ಸಾವಿಗೆ ಸೈರಂಧ್ರಿಯೇ ಕಾರಣ ಎಂದು ಆಕೆಯನ್ನು ಬಂಧಿಸಿ ಸುಡಲು ಕೊಂಡೊಯ್ಯುತ್ತಿರಲು, ಅವಳ ಕೂಗನ್ನು ಕೇಳಿ ಬಂದ ಭೀಮಸೇನ ಒಂದು ದೊಡ್ಡ

ಮರವನ್ನು ಕಿತ್ತು ಅದರಿಂದ ಆ ನೂರೈದು ಉಪಕೀಚಕರನ್ನೂ ಕೊಂದನು. ಇದನ್ನೇ 'ಅವನ ಅನ್ವಯವ ಸದೆದ' –ಎನ್ನಲಾಗಿದೆ.

- ಹಿಂದೆ ೧೪ನೆಯ ಪದ್ಯದಲ್ಲಿ ದುರ್ಯೋಧನನನ್ನು 'ಕುರುಪ' –ಎಂದು ವ್ಯಂಗ್ಯಾರ್ಥದಲ್ಲಿ ಉಲ್ಲೇಖಿಸಿದ್ದರೆ ಈಗ ಭೀಮಸೇನನನ್ನು ಬಹಳ ಅಭಿಮಾನದಿಂದ 'ಕುರುಪ' –ಎಂದು ಉಲ್ಲೇಖಿಸಲಾಗಿದೆ.

- ಕೀಚಕ, ಉಪಕೀಚಕರು –ಇವರನ್ನೆಲ್ಲ ಬರೇ ಕೊಲ್ಲುವುದಲ್ಲದೆ ಅವರು ಅಂಧಂತಮಸ್ಸಿಗೆ ಹೋಗಿ ಬೀಳುವಂತೆ ಮಾಡಿರುವುದರಿಂದ ಅವರನ್ನು 'ಅಟ್ಟಿದ' –ಓಡಿಸಿದ ಎಂದು ತಿಳಿಸಲಾಗಿದೆ.

- ಬಾಹುಯುದ್ಧದಲ್ಲಿ ಕೀಚಕನನ್ನು ಕೊಂದು ಅವನ ಗುದದಲ್ಲಿ ಅವನ ತಲೆಯನ್ನೂ, ಕೈಕಾಲುಗಳನ್ನೂ ತಳ್ಳಿ ಹೊಗಿಸಿದನು– **'ಶಿರೋ ಗುದೇ ಪಾಣಿಪಾದೌ ಚ ತಸ್ಯ ಪ್ರವೇಶಯಾಮಾಸ ವಿಮೃದ್ಯ ವೀರಃ ।'** –ಎಂದು ಮಹಾಭಾರತತಾತ್ಪರ್ಯನಿರ್ಣಯದಲ್ಲಿ (23-26 ) ಚಿತ್ರಿಸಲಾಗಿದ್ದನ್ನು 'ಅವನ ಸವರಿ' ಮಾತಿನಿಂದ ಅನುಸಂಧಾನಕ್ಕೆ ತಂದುಕೊಳ್ಳಬೇಕು.

* * *

**ಕೌರವರ ಮುರಿದು ಮೆರೆದ:**

**ವೈರಿ ದುಶ್ಶಾಸನ್ನ ತೊಡೆಯ ಮೇಲೆ ಎದೆಗೆಡಹಿ**
**ವೀರ ನರಹರಿಯ ಲೀಲೆಯ ತೋರಿದ ।**
**ಕೌರವರ ಬಲ ಸವರಿ ವೈರಿಗಳ ನೆಗ್ಗೊತ್ತಿ**
**ಓರಂತೆ ಕೌರವರ ಮುರಿದು ಮೆರೆದ** ॥ ೧೯ ॥

**ಮುಖ್ಯವೈರಿ ಎನಿಸಿರುವ ದುರ್ಯೋಧನನ ತೊಡೆಯ ಮೇಲೆ ಕೆಡಹಿ –ಹೊಡೆದು, ದುಶ್ಶಾಸನನನ್ನು ಎದೆಗೆಡಹಿ –ಎದೆಯನ್ನು ಸೀಳಿ ವೀರ ನರಸಿಂಹನು ಹಿರಣ್ಯಕಶಿಪುವನ್ನು ಹೇಗೆ ಸಂಹರಿಸಿದ್ದನೋ ಹಾಗೆ ಲೀಲೆಯನ್ನು ಭೀಮಸೇನ ತೋರಿದನು. ವೈರಿಗಳ ನೆಗ್ಗೊತ್ತಿ –ಜಜ್ಜಿ ಹಾಕುತ್ತ ಕೌರವರ ಬಲವನ್ನು –ಸೇನೆಯನ್ನು ಸವರಿದನು –ಕ್ಷೀಣಗೊಳಿಸಿದನು. ಕೌರವರನ್ನು ಓರಂತೆ –ಒಂದೇ ಸವನೆ– ಮುರಿದು ನಾಶಪಡಿಸಿ ಮೆರೆದನು.**

**ವಿವರಣೆ:** ಭೀಮಸೇನ ದುಶ್ಶಾಸನನ ಎದೆ ಬಗೆದು ಅವನನ್ನು ಕೊಂದುಹಾಕಿದ್ದರೆ, ದುರ್ಯೋಧನನ ತೊಡೆಯ ಮೇಲೆ ಗದೆಯಿಂದ ಹೊಡೆದು ಅವನನ್ನು ನಾಶಪಡಿಸಿದ್ದನು. ಆದರೆ 'ವೈರಿ ದುಃಶಾಸನನನ್ನು ತೊಡೆಯ ಮೇಲೆ ಎಡೆಗೆಡಹಿ' –ಎಂಬ ಮಾತು ಮೇಲ್ನೋಟಕ್ಕೆ ಬರೇ ದುಶ್ಶಾಸನನ ಸಂಹಾರವನ್ನು ಮಾತ್ರ ತಿಳಿಸುತ್ತಿರುವಂತೆ ಕಾಣುವುದು. ದುಶ್ಶಾಸನನನ್ನು ಅವನ ತೊಡೆಯ ಮೇಲೆ ಚಚ್ಚಿ ಕೊಂದಂತೆ ತಿಳಿದುಬರುವುದು.

ಹೀಗೆ ಅರ್ಥೈಸಿಕೊಂಡರೆ ಪ್ರಮುಖನಾದ ದುಃಶಾಸನನ ಸಂಹಾರದ ಪ್ರಸ್ತಾವವೇ ಬರಲಿಲ್ಲ ಎಂದಾಗುವುದಲ್ಲದೆ, ದುಶ್ಶಾಸನನನ್ನು ತೊಡೆಯ ಮೇಲೆ ಹೊಡೆದು ಕೊಂದಂತೆ ಕಾಣಿಸುವುದು; 'ಎಡೆಗೆಡಹಿ' -ಎಂಬಲ್ಲಿಯ ಎಡೆ ಶಬ್ದಕ್ಕೆ ಅರ್ಥವೂ ಇಲ್ಲ ಎಂದಾಗುವುದು. ಒಂದುವೇಳೆ- 'ತೊಡೆಯಲಡ್ಡಗೆಡಹಿ' -ಎಂಬ ಪಾಠವನ್ನಿಟ್ಟುಕೊಂಡರೂ 'ಅಡ್ಡ' -ಎಂಬ ಶಬ್ದಕ್ಕೆ ಔಚಿತ್ಯ ಕಾಣಿಸದು.

- 'ವೈರಿ ತೊಡೆಯ ಮೇಲೆ ಕೆಡಹಿದ' -ಎಂದು ಅನ್ವಯವನ್ನು ಹಚ್ಚಿಕೊಂಡು ಗದಾಯುದ್ಧದ ನಿಯಮವನ್ನು ಮೀರದೆಯೂ, ದುರ್ಯೋಧನನ ಎರಡೂ ತೊಡೆಗಳನ್ನು ಮುರಿಯುವೆನೆಂದು ಬೇರೆಬೇರೆ ಸಂದರ್ಭಗಳಲ್ಲಿ ಭೀಮಸೇನ ಮಾಡಿದ್ದ ಪ್ರತಿಜ್ಞೆಗಳ ಪಾಲನೆಯಾಗುವಂತೆಯೂ ಭೀಮಸೇನನಿಂದ ಅವನ ಮುಖ್ಯವಾಗಿ ವೈರಿಯಾದ ದುರ್ಯೋಧನನ ಸಂಹಾರ ನಡೆಯಿತು ಎಂಬುದನ್ನು ತಿಳಿಸಿದಂತಾಗಿದೆ. ಗದಾಯುದ್ಧದ ವರಸೆಗಳು ನಡೆಯುತ್ತಿದ್ದಾಗ ಭೀಮಸೇನನಿಗೆ ನಾಭಿಯ ಮೇಲೆ ಹೊಡೆಯಬಾರದೆಂಬ ಗದಾಯುದ್ಧವನ್ನು ಪಾಲಿಸುವುದರ ಜೊತೆಗೆ ತನ್ನ ತೊಡೆಗಳನ್ನು ಮುರಿಯುವ ಪ್ರತಿಜ್ಞೆಗಳನ್ನು ಈಡೇರಿಸುವಂತಾಗಬಾರದೆಂದು ಭೀಮಸೇನನನ್ನು ವಂಚಿಸುವುದಕ್ಕಾಗಿ ದುರ್ಯೋಧನ ಶೀರ್ಷಾಸನ ಹಾಕಿದಂತೆ ತಲೆಕೆಳಗೆ ಮಾಡಿ, ತೊಡೆಗಳು ನಾಭಿಯ ಮೇಲೆ ಬರುವಂತೆ ತೊಡೆಗಳನ್ನು ಮೇಲ್ಮುಖವಾಗಿಸಿದ. ಅದೇ ಸಂದರ್ಭದಲ್ಲಿ ಶ್ರೀಕೃಷ್ಣನ ಅನುಜ್ಞೆಯನ್ನು ಪಡೆದ ಭೀಮಸೇನ ದುರ್ಯೋಧನನ ಬೆನ್ನ ಹುರಿಗೆ ಹೊಡೆದು ದುರ್ಯೋಧನನ ಎರಡೂ ತೊಡೆಗಳು ಏಕಕಾಲದಲ್ಲಿ ಮುರಿದು ಬೀಳುವಂತೆ ಮಾಡಿದ. ಇದರಿಂದಾಗಿ ನಾಭಿಯ ಮೇಲೆ ಹೊಡೆಯಬಾರದೆಂಬ ಗದಾಯುದ್ಧದ ನಿಯಮವನ್ನೂ ಪಾಲಿಸಿದಂತಾಯಿತು; ತೊಡೆಗಳನ್ನು ಮುರಿಯುವ ಪ್ರಯತ್ನವನ್ನೂ ಈಡೇರಿಸಿದಂತಾಯಿತು ಎಂದು ಶ್ರೀಮಧ್ವರು ಹೀಗೆ ನಿರ್ಣಯಿಸಿರುವರು- '......ತತೋ ಭೀಮಂ ವಂಚಯಿತುಂ ಧಾರ್ತರಾಷ್ಟ್ರಃ ಶಿರಃ ಕ್ಷಿತೌ ನ್ಯಧಾದುಚ್ಚೈ್ರತಸಕ್ಥಿಕಸ್ತದಾ ಕೃಷ್ಣಾಭ್ಯನುಜ್ಞಯಾ । ಪೃಷ್ಠವಮೂಲೇಽಹನದ್ ಭೀಮೋ ಭಿನ್ನಸಕ್ಥಿಶ್ಚ ಸೋಽಪತತ್ । ಪ್ರತಿಜ್ಞಾಪಾಲನಾರ್ಥಾಯ ನಾಭೇರ್ನೋಪರ್ಯಧಸ್ತದಾ ॥' (ಮ.ಭಾರ.ತಾ.ನಿ. 28-75, 76, 77)

ಭೀಮಸೇನ ದುರ್ಯೋಧನನನ್ನು ಕೊಲ್ಲುವಾಗ ಅಳವಡಿಸಿಕೊಂಡ ಈ ತಂತ್ರಗಾರಿಕೆಯನ್ನು ಸರಳವಾದ ಮಾತುಗಳಿಗೆ ಹೀಗೆ ತಿಳಿಸಲಾಗಿದೆ- ತೊಡೆಯ ಮೇಲೆ- 'ಮೇಲ್ಭಾಗದಲ್ಲಿ, ಬೆನ್ನಹುರಿಯ ಭಾಗದಲ್ಲಿ ಕೆಡಹಿದ' -ಎಂದು.

### ದುಃಶಾಸನನ ಎದೆ ಕೆಡಹಿದ:

ದುಃಶಾಸನನ ಎದೆ ಬಗೆದು ರಕ್ತ ಕುಡಿಯುವ ಪ್ರತಿಜ್ಞೆಯನ್ನು ಈಡೇರಿಸುವುದಕ್ಕಾಗಿ

'......ಭೂಮೌ ವಿನಿಪಾತ್ಯ ವಕ್ಷೋ ವಿದಾರಯಾಮಾಸ ಗದಾಪ್ರಹಾರತಃ ।
ಆಕ್ರಮ್ಯ ಕಂಠಂ ಚ ಪದೋದರೇಽಸ್ಯ ನಿವಿಶ್ಯ ಪಶ್ಯನ್ ಮುಖಮಾತ್ತರೋಷಃ ।
ವಿಕೋಶಮಾಕಾಶನಿಭಂ ವಿಧಾಯ ಮಹಾಸಿಮಸ್ಯೋರಸಿ ಸಂಚಖಾನ ।

**ಕೃತ್ವಾಽಸ್ಯ ವಕ್ಷಸ್ಯುರುಸತ್ತಟಾಕಂ ಪಪೌ ನಿಕಾಮಂ ತೃಷಿತೋಽಮೃತೋಪಮಮ್ ॥**
**ತಚ್ಛ್ರೋಣಿತಾಂಭೋ.........'** (ಮ.ಭಾರ.ತಾ.ನಿ. 27-144,145,146)

ದುಃಶಾಸನನನ್ನು ನೆಲದ ಮೇಲೆ ಉರುಳಿಸಿ, ಗದಾಪ್ರಹಾರದಿಂದ ಅವನ ಎದೆಯನ್ನು ಸೀಳಿದನು. ದುಃಶಾಸನನ ಗಂಟಲನ್ನು ಕಾಲಿನಿಂದ ಒತ್ತಿ ಹಿಡಿದು ಅವನ ಹೊಟ್ಟೆಯ ಮೇಲೆ ಕುಳಿತು ಕೋಪಾವಿಷ್ಟನಾಗಿ ಅವನ ಮುಖವನ್ನೇ ನೋಡುತ್ತ ಆಕಾಶದಂತೆ ಕಪ್ಪಾಗಿದ್ದ ದೊಡ್ಡ ಖಡ್ಗವನ್ನು ಒರೆಯಿಂದ ಹೊರತೆಗೆದು ಅವನ ಎದೆಗೆ ತಿವಿದನು. ಹೀಗೆ ಅವನ ಎದೆಯಲ್ಲಿ ದೊಡ್ಡ ನೆತ್ತರಿನ ಮಡುವನ್ನು ನಿರ್ಮಿಸಿ ಬಾಯಾರಿದವನು ಅಮೃತವನ್ನು ಕುಡಿಯುವ ಹಾಗೆ ಅವನ ನೆತ್ತರನ್ನು ಪಾನ ಮಾಡಿದವನಂತೆ ನಟಿಸಿದನು.

ಇಷ್ಟು ಘಟನೆಯನ್ನು 'ದುಃಶಾಸನನ ಎದೆ ಕೆಡಹಿದ....' –ಎಂಬ ಸರಳ ಮಾತಿನಿಂದ ಸೆರೆಹಿಡಿಯಲಾಗಿದೆ.

- **'........ವ್ಯಾತ್ತಾನನಾಂತಂ ವಿಲಿಹನ್ ಸ್ವಜಿಹ್ವಯಾ.......'** –ಎಂದು ಭಾಗವತದಲ್ಲಿ (7-8-30) ಚಿತ್ರಿತವಾಗಿರುವಂತೆ ನರಸಿಂಹ ತನ್ನ ಉಗುರುಗಳಿಂದ ಹಿರಣ್ಯಕಶಿಪುವಿನ ಎದೆಯನ್ನು ಬಗೆದು ಅವನ ರಕ್ತವನ್ನು ನಾಲಗೆಯಿಂದ ನೆಕ್ಕುತ್ತಿದ್ದವನಂತೆ ನಟಿಸುತ್ತಿದ್ದ. ಇದನ್ನೇ 'ವೀರನರಹರಿಯ ಲೀಲೆ ತೋರಿದ.....' ಎನ್ನಲಾಗಿದೆ.

ಅಲ್ಲದೆ, **'ಸ್ಮರನ್ ನೃಸಿಂಹಂ ಭಗವಂತಮೀಶ್ವರಂ ಸ ಮನ್ಯುಸೂಕ್ತಂ ಚ ದದರ್ಶ ಭಕ್ತ್ಯಾ.....'** –ಎಂದು ಮಹಾಭಾರತತಾತ್ಪರ್ಯನಿರ್ಣಯದಲ್ಲಿ (27-148) ತಿಳಿಸಿರುವಂತೆ ಹಿರಣ್ಯಕಶಿಪು ಮುಂತಾದ ದುಷ್ಟರ ಸಂಹಾರದ ಸಂದರ್ಭಗಳಲ್ಲೂ, ಪ್ರಳಯದ ಸಂದರ್ಭದಲ್ಲೂ ನರಸಿಂಹನ ಮೂಲಕ ನಡೆಯುವ ಸಂಹಾರಕ್ರಿಯೆಯನ್ನು ಭೀಮಸೇನ ಸ್ಮರಿಸಿಕೊಳ್ಳುತ್ತ, ತನ್ನಲ್ಲೂ ಆ ನರಸಿಂಹನೇ ಸನ್ನಿಹಿತನಾಗಿದ್ದುಕೊಂಡು ಈ ಸಂಹಾರಕ್ರಿಯೆಯನ್ನು ನಡೆಸುತ್ತಿರುವನೆಂಬ ಅನುಸಂಧಾನದೊಂದಿಗೆ, ನರಸಿಂಹನ ಮೂಲಕ ನಡೆಯುವ ಸಂಹಾರಕ್ರಿಯೆಯ ನಿರೂಪಣೆ ಉಳ್ಳ 'ಮನ್ಯುಸೂಕ್ತ'ದ ದರ್ಶನವನ್ನು ಪಡೆದನು. 'ವೀರ ನರಹರಿಯ ಲೀಲೆಯ ತೋರಿದ' –ಎಂಬ ಮಾತು ಈ ಪ್ರಮೇಯವನ್ನೂ ಸೂಚಿಸಿ ಕೊಡಬಲ್ಲದು.

- **'........ಏವಮಕ್ಷೋಹಿಣೀಷಟ್ಕಂ ಭೀಮೇನ ನಿಹತಂ ರಣೇ'** (ಮ.ಭಾರ.ತಾ.ನಿ. 28-43) ಎಂದು ನಿರ್ಣಯಿಸಿರುವಂತೆ ಹನ್ನೊಂದು ಅಕ್ಷೌಹಿಣೀಸಂಖ್ಯೆಯ ಕೌರವಸೇನೆಯಲ್ಲಿ ಆರು ಅಕ್ಷೌಹಿಣೀಸೇನೆ ಭೀಮಸೇನನಿಂದ ಪುಡಿಗೈಯಲ್ಪಟ್ಟಿತ್ತು. ಇದನ್ನೇ 'ಕೌರವರ ಬಲ ಸವರಿ.......' ಎಂಬ ಮಾತಿನಿಂದ ನಿರೂಪಿಸಲಾಗಿದೆ.

- ದುರ್ಯೋಧನ, ದುಶ್ಶಾಸನ–ಇವರಿಬ್ಬರನ್ನಷ್ಟೇ ಅಲ್ಲದೆ, ಅವರ ಅನುಜರಾದ ಉಳಿದ ತೊಂಬತ್ತೆಂಟು ಕೌರವರನ್ನೂ ಭೀಮಸೇನನೇ ತನ್ನ ಪ್ರತಿಜ್ಞೆಗೆ ಅನುಗುಣವಾಗಿ ಬೇರೆ ಬೇರೆ ಸಂದರ್ಭದಲ್ಲಿ ಸಂಹರಿಸಿದ್ದನು. **'..... ಕೌರವರ ಮುರಿದು.....'** ಎಂಬ ಮಾತಿನಿಂದ ಇದನ್ನು ತಿಳಿಸಲಾಗಿದೆ.

## ಹರಿಯ ದಿವ್ಯಾಸ್ತ್ರವನು ನೆಲೆ ಅಟ್ಟಿದ:

ಗುರುಸುತನು ಸಂಗರದಿ ನಾರಾಯಣಾಸ್ತ್ರ ಬಿಡೆ
ಉರವಣಿಸಿ ಬರಲು ಶಸ್ತ್ರವ ಬಿಸುಟದೆ ।
ಹರಿಯ ಕೃಪೆ ಪಡೆದಿದ್ದ ಭೀಮ ಹುಂಕಾರದಲಿ
ಹರಿಯ ದಿವ್ಯಾಸ್ತ್ರವನು ನೆರೆ ಅಟ್ಟಿದ ॥ ೨೦ ॥

ಗುರುಗಳಾದ ದ್ರೋಣಾಚಾರ್ಯರ ಪುತ್ರ ಅಶ್ವತ್ಥಾಮಾಚಾರ್ಯರು ನಾರಾಯಣಾಸ್ತ್ರವನ್ನು ಪ್ರಯೋಗಿಸಲು, ಅದು ರಭಸದಿಂದ ಬರಲು ಶ್ರೀಕೃಷ್ಣನ ಆದೇಶಾನುಸಾರವಾಗಿ ಉಳಿದವರೆಲ್ಲ ತಮ್ಮ ತಮ್ಮ ಶಸ್ತ್ರವನ್ನು ಕೆಳಗಿಟ್ಟು ನಮಸ್ಕರಿಸಿದರೂ ಶ್ರೀಹರಿಯ ಕೃಪಾಪಾತ್ರನಾಗಿದ್ದ ಭೀಮ ಮಾತ್ರ ತನ್ನ ಶಸ್ತ್ರವನ್ನು ಬಿಡದೆ, ಅಂದರೆ ಕೈಯಿಂದ ಕೆಳಗಿಡದೆ, ಗರ್ವದಿಂದಲೇ ಆ ನಾರಾಯಣಾಸ್ತ್ರವನ್ನು ಚೆನ್ನಾಗಿ ಓಡಿಸುವನು.

## ವಿವರಣೆ:

- ಮಹಾಭಾರತಯುದ್ಧದ ಹದಿನೈದನೇ ದಿನದಂದು ನಡೆದ ಒಂದು ಮಹತ್ತ್ವಪೂರ್ಣವಾದ ಘಟನೆಯ ಉಲ್ಲೇಖ ಇಲ್ಲಿ ಬಂದಿದೆ. ತಂದೆ ದ್ರೋಣಾಚಾರ್ಯರ ಮರಣದ ವಾರ್ತೆಯನ್ನು ಕೇಳಿದ ಅಶ್ವತ್ಥಾಮಾಚಾರ್ಯರು ಶತ್ರುಗಳನ್ನು ನಿಶ್ಶೇಷವಾಗಿ ನಾಶ ಮಾಡುವ ಪ್ರತಿಜ್ಞೆಗೈದು ಸಿಟ್ಟಿನಿಂದ ನಾರಾಯಣಾಸ್ತ್ರವನ್ನು ಪ್ರಯೋಗಿಸುವರು. ಆಗ ಶ್ರೀಕೃಷ್ಣನು ಪಾಂಡವಸೈನಿಕರಿಗೆ ಆದೇಶಿಸುವನು– 'ಎಲ್ಲರೂ ಶಸ್ತ್ರಗಳನ್ನು ಕೆಳಗಿಟ್ಟು, ವಾಹನದಿಂದ ಕೆಳಗಿಳಿಯಿರಿ. ಅಸ್ತ್ರದ ನಿವಾರಣೆಗೆ ಪರಮಾತ್ಮ ತೋರಿಸಿಕೊಟ್ಟಿರುವ ಯೋಗ–ಉಪಾಯ ಇದೇ. ಅದಕ್ಕನುಗುಣವಾಗಿ ಉಳಿದವರೆಲ್ಲ ತಮ್ಮತಮ್ಮ ಶಸ್ತ್ರವನ್ನು ಪೂಜಿಸಿ, ವಾಹನಗಳಿಂದ ಇಳಿದರು.18 ಭೀಮಸೇನ ಮಾತ್ರ ತನ್ನ ಶಸ್ತ್ರವನ್ನು ತ್ಯಜಿಸಲೇ ಇಲ್ಲ.19 ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಶ್ರೀಕೃಷ್ಣ ನಾರಾಯಣಾಸ್ತ್ರದ ಉಪಶಮನಕ್ಕಾಗಿ ನಾರಾಯಣಾಸ್ತ್ರಕ್ಕೆ ನಮಿಸುವಂತೆ ತಿಳಿಸುವನು. ಅದರಂತೆ ಎಲ್ಲರೂ ನಾರಾಯಣಾಸ್ತ್ರಕ್ಕೆ ನಮಿಸಿ, ಅದರಿಂದ ಬಿಡುಗಡೆ ಹೊಂದಿದರೆಂದಿದೆ. ಭೀಮಸೇನ ವಂದನೆ ಮಾಡಿಲ್ಲ ಎಂದಿದೆ. ಮಹಾಭಾರತದಲ್ಲಿ ತಿಳಿಸಿದಂತೆ ವಾಹನದಿಂದ ಕೆಳಗಿಳಿದು, ಶಸ್ತ್ರಗಳನ್ನು ಕೆಳಗಿಡುವುದೆಂದರೆ ಪ್ರಯುಕ್ತವಾದ ಅಸ್ತ್ರಕ್ಕೆ ಗೌರವಿಸಿದಂತೆಯೇ. ಇದನ್ನೇ ಮಧ್ವಗುರುಗಳು– 'ನಮಧ್ವಂ.....'20 –ನಮಿಸಿರಿ ಎಂಬ ಮಾತಿ

---

18. ಶೀಘ್ರಂ ನ್ಯಸ್ಯತ ಶಸ್ತ್ರಾಣಿ ವಾಹೇಭ್ಯಶ್ಚಾವರೋಹತ ।
ಏಷ ಯೋಗೋऽತ್ರ ವಿಹಿತಃ ಪ್ರತಿಷೇಧೋ ಮಹಾತ್ಮನಾ ॥
*– (ಮ.ಭಾರ.ದ್ರೋಣ.199-38)*

19. ತತಃ ಶಸ್ತ್ರಾಣಿ ತೇ ಸರ್ವೇ ಸಮುತ್ಸೃಜ್ಯ ಮಹೀತಲೇ ।
ಅವಾರೋಹನ್ ರಥೇಭ್ಯಶ್ಚ ಹಸ್ತ್ಯಶ್ವೇಭ್ಯಶ್ಚ ಸರ್ವಶಃ ॥ *– (ದ್ರೋಣ, 199-61)*

20. ನಮಧ್ವಮಸ್ತ್ರಸ್ಯ ತತೋ ವಿಮೋಕ್ಷಥೇತ್ಯಥ ಪ್ರಣೇಮುಶ್ಚ ಧನಂಜಯಾದಿಕಾಃ । ಸರ್ವೇ ನ ಭೀಮಃ...... । *– (ಮ.ಭಾರ.ತಾ.ನಿ. 26-301)*

ನಲ್ಲಿ ತಿಳಿಸಿರುವರಷ್ಟೇ ಎಂದು ಸಮನ್ವಯಿಸಿಕೊಳ್ಳಬಹುದು. ಮಹಾಭಾರತದಲ್ಲಿ ಬಂದ ವಿಚಾರವನ್ನಿಟ್ಟುಕೊಂಡು ಈ ಪದ್ಯದಲ್ಲಿ 'ಶಸ್ತ್ರವ ಬಿಸುಟದೆ' ಎನ್ನಲಾಗಿದೆ.

- ಹೀಗೆ ಉಳಿದ ಯೋಧರಂತೆ ಭೀಮಸೇನ ನಾರಾಯಣಾಸ್ತ್ರಕ್ಕೆ ಗೌರವ ಸಲ್ಲಿಸುವುದಿಲ್ಲ. ಬದಲಾಗಿ, ಯಾರೂ ಶಸ್ತ್ರವನ್ನು ತ್ಯಜಿಸಬಾರದು; ದ್ರೌಣಿಪ್ರಯುಕ್ತವಾದ ನಾರಾಯಣಾಸ್ತ್ರವನ್ನು ನಾನು ಗದೆಯಿಂದ ಉಪಶಮನಗೊಳಿಸುವೆನು' –ಎಂದು ಗಟ್ಟಿಯಾಗಿ ಭೀಮಸೇನ ಘೋಷಿಸುತ್ತಿದ್ದನು. ನಾರಾಯಣಾಸ್ತ್ರ ಬೆಂಕಿಯಂತೆ ಭೀಮಸೇನನ ತಲೆಯ ಮೇಲೆ ಜ್ವಲಿಸುತ್ತಿತ್ತು. ಅರ್ಜುನ ತನ್ನ ಪಾಲಿನ ಸೇವೆ ಸಲ್ಲಿಸುವುದಕ್ಕಾಗಿ ವಾರುಣಾಸ್ತ್ರವನ್ನು ಪ್ರಯೋಗಿಸುವನು. ಆದರೆ, ದೇಹದಲ್ಲಿ ಬಿದ್ದ ಅಸ್ತ್ರಕ್ಕೆ ಹೊರಗಿನಿಂದ ವಾರುಣಾಸ್ತ್ರದಿಂದ ಆವರಿಸುವುದರಿಂದ ಏನೂ ಫಲ ದೊರಕುವುದಿಲ್ಲ.

ಶ್ರೀಕೃಷ್ಣ ತನ್ನ ನಾರಾಯಣಾಸ್ತ್ರಕ್ಕೆ ಅಮೋಘತ್ವವನ್ನೂ, ಭೀಮಸೇನನಿಗೆ ಅವಧ್ಯತ್ವವನ್ನೂ ಸಾಧಿಸುವುದಕ್ಕಾಗಿ ಅರ್ಜುನಸಹಿತನಾಗಿ ಭೀಮಸೇನನ ರಥವನ್ನು ಏರಿ ಭೀಮನ ಕೈಯಿಂದ ಶಸ್ತ್ರವನ್ನು ಕಿತ್ತುಕೊಂಡರು. ಆಗ ನಾರಾಯಣಾಸ್ತ್ರ ಶಮನ ಹೊಂದಿತು. ನಾರಾಯಣಾಸ್ತ್ರಕ್ಕೆ ಅಭಿಮಾನಿ ವಾಯುದೇವ. ಶ್ರೀಹರಿಯೇ ದೇವತೆ. ಭೀಮಸೇನ ಕ್ಷತ್ರಿಯ ಧರ್ಮಾನುಸಾರವಾಗಿ ಶಸ್ತ್ರಕ್ಕೆ ಹೊರಗಿನಿಂದ ನಮಸ್ಕರಿಸದಿದ್ದರೂ ಮನಸ್ಸಿನಿಂದಲೇ ಅಸ್ತ್ರಕ್ಕೂ ಅಸ್ತ್ರದ ದೇವತೆಯಾದ ಶ್ರೀಹರಿಗೂ ನಮಸ್ಕರಿಸಿದನೆಂದು ಶ್ರೀಮಧ್ವರು ನಿರ್ಣಯಿಸಿರುವರು.[21]

ಈ ಪದ್ಯದಲ್ಲಿ ಭೀಮಸೇನ ಕ್ಷತ್ರಿಯಧರ್ಮಾನುಸಾರವಾಗಿ ನಾರಾಯಣಾಸ್ತ್ರದ ವಿರುದ್ಧ ಯಾವ ರೀತಿಯ ಪ್ರತಿಕ್ರಿಯೆಯನ್ನು ತೋರಿಸಿದನೆಂದು ಮಹಾಭಾರತ ನಿರೂಪಿಸಿದೆಯೋ ಅದನ್ನೇ 'ದರ್ಶನಭಾಷೆ'ಯಲ್ಲಿ ತಿಳಿಸಲಾಗಿದೆ– '.....ಹುಂಕಾರದಲಿ ಹರಿಯ ದಿವ್ಯಾಸ್ತ್ರವನು ನೆರೆ ಅಟ್ಟಿದ'' –ಭೀಮಸೇನ ನಾರಾಯಣಾಸ್ತ್ರಕ್ಕೆ ನಮಿಸಲಿಲ್ಲವಷ್ಟೇ ಹೊರತು, ಅದನ್ನು ಹುಂಕಾರದಲಿ –ಹೂಂಕಾರ ಮಾಡಿ, ನೆರೆ ಅಟ್ಟಲಿಲ್ಲ –ದೂರ ಓಡಿಸಲಿಲ್ಲ. ಆದರೆ ನಾರಾಯಣಾಸ್ತ್ರಕ್ಕೆ ಉಳಿದವರು ಭಯಪಟ್ಟಂತೆ ಕಿಂಚಿತ್ತೂ ಭಯಪಡದೆ ಧೈರ್ಯದಿಂದ ಎದುರಿಸಿದನೆಂಬುದನ್ನು ಆಲಂಕಾರಿಕವಾಗಿ 'ಹುಂಕಾರದಲಿ ನೆರೆ ಅಟ್ಟಿದ' ಎನ್ನಲಾಗಿದೆ.

- ನಾರಾಯಣಾಸ್ತ್ರವನ್ನೂ ಎದುರಿಸುವ ಸಾಮರ್ಥ್ಯ ಭೀಮಸೇನನಿಗೆ ಹೇಗೆ ಬಂತು? ವಾಯುಸ್ತುತಿಯ '**ತ್ರಿಷ್ವಪ್ಯೇವಾವತಾರೇಷು.....**' ಎಂಬ ಶ್ಲೋಕದಲ್ಲಿ ವಾಯುದೇವನು ತನ್ನ ಮೂರು ಅವತಾರಗಳಲ್ಲೂ ಬೇರೆಬೇರೆ ಶತ್ರುಗಳ ಆಕ್ರಮಣಕ್ಕೆ ಒಳಗಾದರೂ 'ಆಖಣಾಶ್ಮಸಮ' ವ್ಯಕ್ತಿತ್ವವುಳ್ಳವನಾಗಿ ಮರೆಯಲು '**ತ್ರಾತಾ ಯಸ್ಯ ತ್ರಿಧಾಮಾ**'

---

21. ಅಸ್ತ್ರಾಭಿಮಾನೀ ವಾಯುರ್ಹಿ ದೇವತಾಽಸ್ಯ ಹರಿಃ ಸ್ವಯಮ್ ...... ।
ಮನಸೈವಾದರಂ ಚಕ್ರೇ ಭೀಮೋಽಸ್ತ್ರೇ ಚ ಹರೌ ತದಾ ।
ಕ್ಷತ್ರಧರ್ಮಾನುಸಾರೇಣ ನ ನನಾಮ ಚ ಬಾಹ್ಯತಃ ॥
*– (ಮ.ಭಾರ.ತಾ.ನಿ. 26-311)*

-ಎಂದಿರುವಂತೆ ಪರಮಾತ್ಮನ ಸಂರಕ್ಷಣೆಯೇ ಹೇಗೆ ಕಾರಣ ಎಂದು ಸಾರಲಾಗಿದೆಯೋ ಅಂತೆಯೇ ಇಲ್ಲೂ 'ಹರಿಯ ಕೃಪೆ ಪಡೆದಿದ್ದ....' ಎಂಬ ಮಾತಿನಿಂದ ಶ್ರೀಹರಿಯ ಕೃಪೆಯಿಂದಾಗಿಯೇ ಭೀಮನಿಗೆ ನಾರಾಯಣಾಸ್ತ್ರವನ್ನೂ ಎದುರಿಸುವ ಸಾಮರ್ಥ್ಯ ಬಂತೆಂದು ಸ್ಪಷ್ಟಪಡಿಸಲಾಗಿದೆ.

## ಅಖಿಲ ಖಳರ ಹಿಂಡಿ ಬಿಸುಟಿದನು:

ಚಂಡವಿಕ್ರಮನು ಗದೆಗೊಂಡು ರಣದೊಳಗೆ ಭೂ-
ಮಂಡಲದೊಳುದ್ಭವಿಸಿದಖಿಲ ಖಳರ
ಹಿಂಡಿ ಬಿಸುಟಿದ ವೃಕೋದರನ ಪ್ರತಾಪವನು
ಕಂಡು ನಿಲ್ಲುವವರಾರು ತ್ರಿಭುವನದೊಳು ॥ ೨೦ ॥

ಚಂಡವಿಕ್ರಮ -ಬಹಳ ಪ್ರತಾಪಶಾಲಿ ಭೀಮಸೇನ, ಗದೆಗೊಂಡು -ಗದೆಯನ್ನು ಹಿಡಿದುಕೊಂಡು, ಗದೆಯನ್ನು ಧರಿಸಿಕೊಂಡು, ಆ ಗದೆಯ ಮೂಲಕ ರಣದೊಳಗೆ -ಯುದ್ಧದಲ್ಲಿ ಭೂಮಂಡಲದೊಳು ಆ ಕಾಲದಲ್ಲಿ ಉದ್ಭವಿಸಿದ ಅಖಿಲರೂ ಜಮಾವಣೆಗೊಂಡಿದ್ದು ಅವರೆಲ್ಲರನ್ನೂ ಹಿಂಡಿ ಬಿಸುಟಿದ್ದನು -ಪುಡಿ ಮಾಡಿ ಎಸೆದಿದ್ದನು. ಅಂತಹ ವೃಕೋದರನ ಪ್ರತಾಪವನು ಕಂಡು -ಗಮನಿಸಿ ತ್ರಿಭುವನದೊಳು ಅವನೆದುರು ನಿಲ್ಲುವವ ರಾರು? -ಅವನನ್ನು ಎದುರಿಸುವವರಾರು?

**ವಿವರಣೆ:** ಮಹಾಭಾರತಯುದ್ಧದಲ್ಲಿ ಆ ಕಾಲದ ಎಲ್ಲ ದೇಶಗಳ ಯೋಧರೂ ಪಾಲ್ಗೊಂಡಿದ್ದರು. ಅವರಲ್ಲಿ ಯಾರು ಭಗವದ್ದ್ವೇಷಿಗಳು ಇದ್ದರು ಅವರೆಲ್ಲರನ್ನು ಭೀಮಸೇನ ಸಂಹರಿಸಿದ್ದು. 'ಇದನ್ನೇ ಅಖಿಲ ಖಳರ ಹಿಂಡಿ ಬಿಸುಟಿದ' ಎನ್ನಲಾಗಿದೆ. ಭಗವದ್ದ್ವೇಷಿಗಳೇ ಖಳರು. ಅಂದರೆ ಭಗವದ್ದ್ವೇಷವೇ ಖಳತ್ವದ ಅಡಿಗಲ್ಲು. ಆದ್ದರಿಂದ ಖಳರನ್ನು ಹಿಂಡಿ ಬಿಸುಟನೆಂದರೆ, ಭಗವದ್ದ್ವೇಷಿಗಳನ್ನು ಹಿಂಡಿ ಬಿಸುಟನೆಂದೇ ಅರ್ಥ.

ಭೀಮಸೇನ ಎಂದೂ ಅವೈಷ್ಣವರ, ವಿಷ್ಣುದ್ವೇಷಿಗಳ ಜೊತೆಗೆ ಸ್ನೇಹವನ್ನು ಮಾಡಲೇ ಇಲ್ಲ. ಹಾಗೆಯೇ ವೈಷ್ಣವರ, ವಿಷ್ಣುಭಕ್ತರ ಜೊತೆಗೆ ವಿರೋಧವನ್ನೂ ಮಾಡಲೇ ಇಲ್ಲ.[22]

ಮಧ್ವರ ಈ ನಿರ್ಣಯವನ್ನೂ ಆಧಾರವಾಗಿಟ್ಟುಕೊಂಡು ಶ್ರೀ ವಾದಿರಾಜಸ್ವಾಮಿಗಳು ತಮ್ಮ ಸರಸಭಾರತೀವಿಲಾಸದಲ್ಲಿ (6-26) ಭೀಮಸೇನನ ವಿಷ್ಣುಭಕ್ತಿಯ ವೈಭವವನ್ನು ಹೀಗೆ ಸಾರಿದ್ದಾರೆ-

---

22. ಸಖ್ಯಂ ನಾವೈಷ್ಣವೈಶ್ಚಕ್ರೇ ಪ್ರತೀಪಂ ವೈಷ್ಣವೇನ ಚ । *-(ಮ.ಭಾರ.ತಾ.ನಿ. 18-19)*

23. ಪಶ್ಯ ಶ್ರೀಭೀಮಸೇನಸ್ಯ ಕೃಷ್ಣೇ ಭಕ್ತಿಮಚಂಚಲಾಮ್ ।
ನಾವಧೀದ್ ವೈಷ್ಣವಂ ಯೋಽಸೌ ನಾಶೇಷಯದವೈಷ್ಣವಮ್ ॥ *-ಸ.ಭಾ.ವಿ. 6-26*

ಶ್ರೀಕೃಷ್ಣನ ವಿಷಯದಲ್ಲಿ ಭೀಮಸೇನನಿಗಿದ್ದ ನಿಶ್ಚಲವಾದ ಭಕ್ತಿಯನ್ನು ನೋಡು– ಭೀಮಸೇನ ಒಬ್ಬ ವೈಷ್ಣವನನ್ನೂ ಕೊಂದಿಲ್ಲ. ವಿಷ್ಣುದ್ವೇಷಿಯಾಗಿದ್ದು ಅವೈಷ್ಣವ ಎನಿಸುವ ಯಾರನ್ನೂ ಬಿಟ್ಟಿಲ್ಲ.[23]

ಮಹಾಭಾರತಯುದ್ಧದ ಅವಧಿಯಲ್ಲಷ್ಟೇ ಅಲ್ಲದೆ, ರಾಜಸೂಯದ ಅಂಗವಾಗಿ ನಡೆಸಿದ ಪೂರ್ವದಿಕ್ಕಿನ ದಿಗ್ವಿಜಯದ ಪ್ರಸಂಗದಲ್ಲಿ, ವನವಾಸ, ಅಜ್ಞಾತವಾಸಗಳ ಪ್ರಸಂಗಗಳಲ್ಲಿ –ಹೀಗೆ ಅನೇಕ ಸಂದರ್ಭಗಳಲ್ಲಿ ಭೀಮಸೇನನ 'ಭೂಮಂಡಲದೊಳುದ್ಭವಿಸಿದ ಅಖಿಲಖಳರ ಹಿಂಡಿ ಬಿಸುಟಿದ್ದ'.

- ವಾಯುದೇವ ಭಗವಂತನ ಗದಾರೂಪದಲ್ಲಿ ಇರುವವನು.[24] ಆದುದರಿಂದಲೇ ಎಂಬಂತೆ ವಾಯುದೇವನ ಅವತಾರ ಭೀಮಸೇನ ಶತ್ರುಗಳ ಸಂಹಾರಕ್ಕೆ ವಿಶೇಷವಾಗಿ ಗದೆಯನ್ನೇ ಬಳಸಿಕೊಂಡಿದ್ದ. ಭೀಮಸೇನನ ಕೈಯಲ್ಲಿದ್ದ ಗದೆ ಅವನ ಮೂಲರೂಪ ವಾಯುದೇವನಿಗೆ ಸೇರಿದ ಗದೆ.

ಇಂದ್ರಪ್ರಸ್ಥದಲ್ಲಿ ಪಾಂಡವರಿಗಾಗಿ ಸಭಾಭವನವನ್ನು ನಿರ್ಮಿಸಿದ ಮಯಾಸುರ ಕೈಲಾಸದ ಉತ್ತರದಲ್ಲಿಯ ಮೈನಾಕದ ಬಳಿಯಿದ್ದ ಬಿಂದುಸರೋವರದ ಹತ್ತಿರ ವೃಷಪರ್ವ ರಾಜನ ಸಭಾಭವನದ ಅವಶೇಷಗಳಲ್ಲಿ ಒಂದಾಗಿದ್ದ ಆ ಗದೆಯನ್ನೂ ಮಯಾಸುರ ಭೀಮಸೇನನಿಗಾಗಿ ತಂದುಕೊಟ್ಟಿದ್ದ. ಶ್ರೀ ಮಧ್ವಾಚಾರ್ಯರು ಆ ಗದೆ ವಾಯುದೇವರು ಧರಿಸಿದ ಗದೆಯಾಗಿತ್ತು. ವಾಯುದೇವನ ಅನುಗ್ರಹದಿಂದ ಮುಚುಕುಂದನಿಗೆ ಅದು ಲಭ್ಯವಾಗಿತ್ತು ಎಂದು ನಿರ್ಣಯಿಸಿರುವರು.[25]

ಮಯಾಸುರ ಆ ಗದೆಯನ್ನು ಬಾಯ್ತುಂಬ ಹೊಗಳಿರುವ ಕ್ರಮ ಹೀಗಿದೆ– ಅದು ಉಗ್ರವಾದ, ಭಯಂಕರವಾದ ಗದೆ. ಪ್ರಾಯಶಃ ವೃಷಪರ್ವರಾಜ ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸಿ, ಅಲ್ಲಿಟ್ಟಿದ್ದಿರಬಹುದೆಂದು ಭಾವಿಸುವೆನು. ತುಂಬ ಭಾರವುಳ್ಳ ಆ ಗದೆ ಚಿನ್ನದ ಬಿಂದುಗಳಿಂದ ಖಚಿತವಾಗಿದೆ. ತುಂಬ ಭಾರವನ್ನೂ, ಆಘಾತವನ್ನೂ ಸಹಿಸಬಲ್ಲದ್ದಾಗಿದೆ. ಸುದೃಢವಾದದ್ದು. ಲಕ್ಷ ಗದೆಗಳಿಗೆ ಸಮಾನವೆನಿಸಿರುವ ಶತ್ರುಗಳ ಸಂಹಾರಕ್ಕೆ ಉಪಯುಕ್ತವಾದುದು. ಭೀಮಸೇನ ಧರಿಸಲು ಅತ್ಯಂತ ಯೋಗ್ಯವಾದುದು.[26]

---

24. ಗದಾ ತು ವಾಯುರ್ಬಲಸಂವಿದಾತ್ಮಾ । – *(ಮ.ಭಾರ.ತಾ.ನಿ. 3-74)*

25. '.....ದದೌ ಗದಾಂ ವೃಕೋದರೇ ।
ಸ ವಾಯುಧಾರಿತಾಂ ಗದಾಂ ಹಿ ಯೌವನಾಶ್ವಭೂಭೃತಾ ।
ಪ್ರಸಾದತೋಽಸ್ಯ ಲಂಭಿತಾಮವಾಪ್ಯ ಮೋದಮಾಪ ಹ ॥
– *(ಮ.ಭಾರ.ತಾ.ನಿ. 21-1,2)*

26. ಅಸ್ತಿ ಬಿಂದುಸರಸ್ಯುಗ್ರಾ ಗದಾ ಚ ಕುರುನಂದನ ।
ನಿಹಿತಾ ಭಾವಯಾಮ್ಯೇವಂ ರಾಜ್ಞಾ ಹತ್ವಾ ರಣೇ ರಿಪೂನ್ ।
ಸುವರ್ಣಬಿಂದುಭಿಶ್ಚಿತ್ರಾ ಗುರ್ವೀ ಭಾರಸಹಾ ದೃಢಾ ।
ಸಾ ವೈ ಶತಸಹಸ್ರಸ್ಯ ಸಮ್ಮಿತಾ ಶತ್ರುಘಾತಿನೀ ।
ಅನುರೂಪಾ ಚ ಭೀಮಸ್ಯ......... ॥ – *(ಮ.ಭಾರ.ಸಭಾಪರ್ವ 3-5,6,7)*

ಇಂತಹ 'ಗದೆಗೊಂಡು.....ಖಳರ ಹಿಂಡು ಬಿಸುಟಿದನು.....' -ಎಂದು ಅನುಸಂಧಾನ ಮಾಡಬೇಕು.

- ಮಹಾಭಾರತಯುದ್ಧದಲ್ಲಿ ದುರ್ಮುಖಿನ ಸಂಹಾರ ಭೀಮಸೇನನಿಂದ ಆಯಿತೆಂಬ ಸುದ್ದಿ ಕೇಳಿದ ಧೃತರಾಷ್ಟ್ರ ಭೀಮಸೇನನ ಪೌರುಷದ ಬಗ್ಗೆ ಹೀಗೆ ಉದ್ಗಾರ ಎತ್ತುವನು- ಅಶ್ವತ್ಥಾಮಾ, ಶಲ್ಯ, ಕೃಪ, ಕರ್ಣ ಮುಂತಾದವರು ಒಟ್ಟು ಸೇರಿಯೂ ಭೀಮನನ್ನು ಎದುರಿಸಲು ಸಮರ್ಥರಾಗಲಾರರು. ಭೀಮಸೇನನ ಹತ್ತುಸಾವಿರ ಆನೆಗಳಷ್ಟು ಬಲವನ್ನೂ, ಯಮನಂತೆ, ಪ್ರಲಯಕಾಲದಂತೆ ಹಾಗೂ ಮೃತ್ಯುದೇವತೆಯಂತೆ ಭಯಂಕರನಾದ, ಕ್ರೂರಕರ್ಮನಾದ, ಅವನ ಬಲ, ಪರಾಕ್ರಮ, ಸಿಟ್ಟು -ಇವನ್ನೆಲ್ಲ ಬಲ್ಲವರಾದ ಅಶ್ವತ್ಥಾಮಾದಿಗಳು ಹೇಗೆ ತಾನೇ ಅವನು ತಮ್ಮ ವಿರುದ್ಧ ಕೋಪಗೊಳ್ಳುವಂತೆ ಮಾಡಿಯಾರು,27 ಸಂಜಯ, ವಜ್ರಾಯುಧವನ್ನು ಎತ್ತಿದ ಇಂದ್ರನೆದುರು ಯಾವ ದಾನವರೂ ಹೋಗಲು ಉತ್ಸಾಹ ತೋರುವುದಿಲ್ಲವೋ ಹಾಗೆ ಭೀಮನೆದುರು ಯಾರು ತಾನೇ ನಿಲ್ಲಲು ಉತ್ಸಾಹಿಗಳಾಗಬಲ್ಲರು,28 ಯಮನ ಪಟ್ಟಣಕ್ಕೆ ಹೋಗಿಯಾದರೂ ಮರಳಬಹುದು. ಆದರೆ ಭೀಮಸೇನನನ್ನು ಎದುರಿಸಲು ಹೋದವನು ಖಂಡಿತಾ ಮರಳಲಾರ. ಮೋಹಗೊಂಡು ಕ್ರುದ್ಧನಾದ ಭೀಮಸೇನನ ವಿರುದ್ಧ ಕಾದಾಡಲು ಹೋಗುವರೆಂದರೆ ಅವಿವೇಕಿಗಳಾದ ಅವರು ಪತಂಗ ಬೆಂಕಿಯನ್ನು ಪ್ರವೇಶಿಸುವಂತೆ ತಮ್ಮ ನಾಶಕ್ಕೆ ತಾವೇ ಕಾರಣರಾಗುವರಷ್ಟೇ.29 ಭಯಂಕರನಾದ, ಭಯಂಕರ ಆಯುಧಧಾರಿಯಾದ, ಪ್ರಲಯಕಾಲದಂತಿರುವ ಭೀಮನ ವಿರುದ್ಧ

---

27. ಅಶ್ವತ್ಥಾಮಾ ಮದ್ರರಾಜಃ ಕೃಪಃ ಕರ್ಣಶ್ಚ ಸಂಗತಾಃ ।
ನ ಶಕ್ತಾಃ ಪ್ರಮುಖೇ ಸ್ಥಾತುಂ ನೂನಂ ಭೀಮಸ್ಯ ಸಂಜಯ ।
ಕೇಽಪಿ ಚಾಸ್ಯ ಮಹಾಘೋರಂ ಬಲಂ ನಾಗಾಯುತೋಪಮಮ್ ।
ಜಾನಂತೋ ವ್ಯವಸಾಯಂ ಚ ಕ್ರೂರಂ ಮಾರುತತೇಜಸಃ ।
ಕಿಮರ್ಥಂ ಕ್ರೂರಕರ್ಮಾಣಂ ಯಮಕಾಲಾಂತಕೋಪಮಮ್ ।
ಬಲಸಂರಂಭವೀರ್ಯಜ್ಞಾಃ ಕೋಪಯಿಷ್ಯಂತಿ ಸಂಯುಗೇ ॥
*– (ಮ.ಭಾರ.ದ್ರೋಣಪರ್ವ 135-7,8,9)*

28. ಕೋ ಹಿ ಸಂಜಯ ಭೀಮಸ್ಯ ಸ್ಥಾತುಮುತ್ಸಹತೇಽಗ್ರತಃ ।
ಉದ್ಯತಾಶನಿಹಸ್ತಸ್ಯ ಮಹೇಂದ್ರಸ್ಯೇವ ದಾನವಃ ।
*– (ಮ.ಭಾರ.ದ್ರೋಣಪರ್ವ 135-13)*

29. ಪ್ರೇತರಾಜಪುರಂ ಪ್ರಾಪ್ಯ ನಿವರ್ತೇತಾಪಿ ಮಾನವಃ ।
ನ ಭೀಮಸೇನಂ ಸಂಪ್ರಾಪ್ಯ ನಿವರ್ತೇತ ಕದಾಚನ ॥
ಪತಂಗಾ ಇವ ವಹ್ನಿಂ ತೇ ಪ್ರಾವಿಶನ್ನಲ್ಪಚೇತಸಃ ।
ಯೇ ಭೀಮಸೇನಂ ಸಂಕ್ರುದ್ಧಮನ್ವಧಾವನ್ ವಿಮೋಹಿತಾಃ ॥
*– (ಮ.ಭಾರ. ದ್ರೋಣ. 135-16.)*

ಬದುಕಲು ಇಚ್ಛಿಸುವ ಯಾವ ವ್ಯಕ್ತಿ ತಾನೇ ಕಾದಾಡಲು ಮುಂದುವರಿಯುವನು? ವಡವಾನಲಮಧ್ಯದಿಂದ ಬೇಕಾದರೂ ಪಾರಾಗಬಹುದು; ಆದರೆ ಭೀಮನ ಎದುರು ಕಾದಾಡಲು ಹೋದವನು ಎಂದೂ ಬಿಡುಗಡೆ ಪಡೆಯಲಾರ ಎಂಬುದು ನನ್ನ ನಿರ್ಧಾರ.30

ಧೃತರಾಷ್ಟ್ರ ತನಗೆ ದೊರಕಿದ ಮಾಹಿತಿಯ ಆಧಾರದಲ್ಲಿ ಭೀಮಸೇನನ ಬಲದ ಬಗ್ಗೆ, ಪೌರುಷದ ಬಗ್ಗೆ ಸಂಜಯನ ಎದುರು ತೆಗೆದಿರುವ ಈ ಬಗೆಯ ಉದ್ಗಾರದ ಹಿನ್ನೆಲೆಯಲ್ಲಿ 'ವೃಕೋದರನ ಪ್ರತಾಪವನು ಕಂಡು ನಿಲ್ಲುವವರಾರು ತ್ರಿಭುವನದೊಳು' –ಎಂಬ ಮಾತಿನ ಅನುಸಂಧಾನ ನಡೆಸಬೇಕು.

**ಪವಮಾನ ಭೂತಳದೊಳವತರಿಸಿದನು:**

**ದಾನವರು ಕಲಿಯುಗದೊಳವತರಿಸಿ ವಿಬುಧರೊಳು**
**ವೇನನ ಮತವನರುಹಲದನರಿತು**
**ಜ್ಞಾನಿ ತಾ ಪವಮಾನ ಭೂತಳದೊಳವತರಿಸಿ**
**ಮಾನನಿಧಿ ಮಧ್ವಾಖ್ಯನೆಂದೆನಿಸಿದ ॥ ೨೨ ॥**

**ಮಣಿಮಂತ ಮುಂತಾದ ದಾನವರು ಕಲಿಯುಗದಲ್ಲಿ ಅವತರಿಸಿ ವೇನ ಪ್ರಸ್ತುತ ಪಡಿಸಿದ್ದ 'ಜೀವನೇ ಬ್ರಹ್ಮ' ಎಂಬ ಮತವನ್ನು ಪ್ರಚುರಪಡಿಸಲು, ಅದನ್ನು ಅರಿತು ಆ ಮತವನ್ನು ನಿರಾಕರಿಸಿ ವಿಷ್ಣುಸರ್ವೋತ್ತಮತ್ವದ ಮತವನ್ನು ಸ್ಥಾಪಿಸುವುದಕ್ಕಾಗಿ ಜ್ಞಾನಿಯಾದ ಪವಮಾನನು ಭೂತಳದೊಳು ಅವತರಿಸಿ ಜ್ಞಾನಿಗಳ ಮಾನನಿಧಿ ಮಧ್ವಾಖ್ಯನೆಂದೆನಿಸಿದನು.**

**ವಿವರಣೆ:** ಧ್ರುವನ ವಂಶದಲ್ಲಿ ಬಂದ ಅಂಗರಾಜನ ಮಗ ವೇನ. ಮಹಾದುಷ್ಟ. ಡಂಗುರ ಬಾರಿಸಿ, ದೇವರ, ದೇವತೆಗಳ ಹೆಸರಲ್ಲಿ ನಡೆಸುತ್ತಿದ್ದ ಯಜ್ಞಯಾಗಾದಿಗಳನ್ನೆಲ್ಲ ನಿಲ್ಲಿಸಿದ್ದ. ತಾನೇ ದೇವರು ಎಂಬ ಅಭಿಪ್ರಾಯದಲ್ಲಿ ದೇವತೆಗಳಿಗೆ, ದೇವರಿಗೆ ಸಲ್ಲಿಸುವ ಪೂಜೆಪುರಸ್ಕಾರಾದಿಗಳನ್ನು ನನಗೇ ಅರ್ಪಿಸಿರಿ. ನನಗಿಂತ ಬೇರೆಯಾದ, ಅಗ್ರಪೂಜೆಗೆ ಅರ್ಹರಾದ ದೇವರು ಯಾರು ಇರುವರು? –ಎಂದು ಸಾರುತ್ತಿದ್ದ.31

---

30. ಕೋ ಹಿ ಜೀವಿತಮನ್ವಿಚ್ಛನ್ ಪ್ರತೀಪಂ ಪಾಂಡವಂ ವ್ರಜೇತ್ ।
ಭೀಮಂ ಭೀಮಾಯುಧಂ ಕ್ರುದ್ಧಂ ಸಾಕ್ಷಾತ್ ಕಾಲಮಿವ ಸ್ಥಿತಮ್ ॥
ವಡವಾಮುಖಮಧ್ಯಸ್ಥೋ ಮುಚ್ಯೇತಾಪಿ ಹಿ ಮಾನವಃ ।
ನ ಭೀಮಮುಖಸಂಪ್ರಾಪ್ತೋ ಮುಚ್ಯೇದಿತಿ ಮತಿರ್ಮಮ ॥
*– (ಮ.ಭಾರ.ದ್ರೋಣ. 135-21, 2.)*

31. ತಸ್ಮಾನ್ಮಾಂ ಕರ್ಮಭಿರ್ವಿಪ್ರಾ ಯಜಧ್ವಂ ಗತಮತ್ಸರಾಃ ।
ಬಲಿಂ ಚ ಮಹ್ಯಂ ಹರತ ಮತ್ತೋಽನ್ಯಃ ಕೋಽಗ್ರಭುಕ್ ಪುಮಾನ್ ॥
*– ಭಾಗ. 4-13-22.*

ಭಾಗವತದ ಈ ಆಂತರ್ಯವನ್ನು ಶ್ರೀಮಧ್ವರು ತಮ್ಮ ಭಾಗವತತಾತ್ಪರ್ಯ ನಿರ್ಣಯದಲ್ಲಿ 'ಭವಿಷ್ಯತ್ಪುರಾಣ'ದ ಮೂಲಕ ಸ್ಪಷ್ಟಪಡಿಸಿರುವರು.32 ವೇನನು ತಾನೇ ದೇವರು, ದೇವರಿಗೆ ನೀಡುವ ಪೂಜಾಪುರಸ್ಕಾರಗಳನ್ನೆಲ್ಲ ತನಗೆಯೇ ನೀಡಬೇಕೆಂದು ಆಗ್ರಹಿಸುವ ಹಿನ್ನೆಲೆಯಲ್ಲಿ ಅವನು 'ಅಹಂ ಬ್ರಹ್ಮ' -ಎಂದು ಧ್ಯಾನಿಸುತ್ತಿದ್ದನು. ಆ ಬಗೆಯ ಧ್ಯಾನದ ದುಷ್ಫಲವಾಗಿ ಅಂಧಂತಮಸ್ಸನ್ನು ಹೊಂದಿರುವನು. ಅವನ ಆ ಸಿದ್ಧಾಂತವನ್ನು ಹಗಲು-ರಾತ್ರಿ ನಗಾರಿ ಹೊಡೆದು ಸಾರುತ್ತಿದ್ದುದರಿಂದ ಅದು ಭೂಮಿ ತುಂಬ ಹರಡಿತ್ತು. ಅಸುರರು, ರಾಕ್ಷಸರು ಹಾಗೂ ಪಿಶಾಚಗಳು ಅವನ ಆ ಸಿದ್ಧಾಂತದ ದಾರಿಯನ್ನೇ ಅವಲಂಬಿಸಿದ್ದರು. ಮತ್ತೆ ರಾಜನಾಗಿ ಬಂದ ಪೃಥುರಾಜ ಆ ಸಿದ್ಧಾಂತವನ್ನು ಭೂಮಿಯಿಂದ ದೂರ ಮಾಡಿದ. ಪುನಃ ಕಲಿಯುಗದಲ್ಲಿ ವೈವಸ್ವತಮನುವಿನ ಇಪ್ಪತ್ತೆಂಟನೆಯ ಕಲಿಯುಗದಲ್ಲಿ ಕ್ರೋಧವಶರೆಂಬ ಕೆಟ್ಟ ರಾಕ್ಷಸರೂ, ಅವರಿಗೆ ಮುಖಂಡನಾಗಿದ್ದ ಮಣಿಮಂತನೂ ಆ ಸಿದ್ಧಾಂತವನ್ನೇ ಪ್ರಚುರಪಡಿಸಿದರು.

ಪಾಂಡವರು ವನವಾಸದ ಅಂಗವಾಗಿ ಗಂಧಮಾದನಪರ್ವತದಲ್ಲಿ ವಾಸಮಾಡುತ್ತಿದ್ದಾಗ ಪಂಚವರ್ಣದ ಪುಷ್ಪಗಳನ್ನು ತರಬೇಕೆಂದು ದ್ರೌಪದಿಯ ಅಪೇಕ್ಷೆಯ ಮೇರೆಗೆ ಭೀಮಸೇನ ಮೇರುಪರ್ವತದ ತುದಿಯಲ್ಲಿರುವ ಕುಬೇರನ ಕಮಲವನಕ್ಕೆ ಹೋಗಿ ಅಲ್ಲಿ ತನ್ನನ್ನು ತಡೆಯಲು ಬಂದ ಮೂರು ಮಹಾಪದ್ಮಸಂಖ್ಯೆಯಲ್ಲಿದ್ದ ಕ್ರೋಧವಶರೆಂಬ ರಾಕ್ಷಸರನ್ನೂ ಅವರ ಮುಖಂಡನಾಗಿದ್ದ ಮಣಿಮಂತನನ್ನೂ ಸಂಹರಿಸುವನು.33 ಆ ಮಣಿಮಂತನೇ ಕಲಿಯುಗದಲ್ಲಿ ಹುಟ್ಟಿ ಮಿಥ್ಯಾಜ್ಞಾನವನ್ನು ಪ್ರಚುರಪಡಿಸಿದನು. ಅದರ ದುಷ್ಫಲವಾಗಿ ಅಂಧಂತಮಸ್ಸನ್ನು ಹೊಂದಿದನು.34 ಹೀಗೆ ಮಣಿಮಂತ ಮಿಥ್ಯಾಜ್ಞಾನ

---

32. ಅಹಂ ಬ್ರಹ್ಮೇತಿ ವೇನಸ್ತು ಧ್ಯಾಯನ್ನಾಪಾಧರಂ ತಮಃ ।
ತದ್ರಾದ್ದಾಂತೋ ಮಹೀಂ ವ್ಯಾಪ್ತೋ ಭೇರ್ಯಾ ಖ್ಯಾಪಯತೋಽನಿಶಮ್ ॥
ಅಸುರಾ ರಾಕ್ಷಸಾಶ್ಚೈವ ಪಿಶಾಚಾಸ್ತತ್ಪಥಿ ಸ್ಥಿತಾಃ ।
ಭೂಮೌ ತತ್ ಪೃಥುನಾ ಸರ್ವಂ ನಿರಸ್ತಂ ಮಹಿತಾತ್ಮನಾ ॥
ಪುನಃ ಕಲಿಯುಗೇ ಪ್ರಾಪ್ತೇ ಅಷ್ಟಾವಿಂಶತಿಮೇ ಮನೋಃ ।
ವೈವಸ್ವತಸ್ಯ ಸಮಯೇ ಜಾತಾಃ ಕ್ರೋಧವಶಾ ಭುವಿ ॥
ಖ್ಯಾಪಯಂತಿ ದುರಾತ್ಮಾನೋ ಮಣಿಮಾಂಸ್ತತ್ಪುರಃ ಸರಃ ॥
*– ಭವಿಷ್ಯತ್ಪುರಾಣೇ (ಭಾಗ.ತಾ.ನಿ. 4-13-22)*

33. ಅಗ್ರೇ ನಿಧಾಯ ಮಣಿಮಂತಮಜೇಯಮುಗ್ರಂ
ಶಂಭೋರ್ವರಾದ್ ವಿವಿಧಶಸ್ತ್ರಮಹಾಸ್ತ್ರವೃಷ್ಟ್ಯಾ ।
ತಾನ್ ಸರ್ವರಾಕ್ಷಸಗಣಾನ್ ಮಣಿಮತ್ಸಮೇತಾನ್
ಭೀಮೋ ಜಘಾನ ಸಪದಿ ಪ್ರವರೈಃ ಶರೌಘೈಃ ॥ *– ಮ.ಭಾರ.ತಾ.ನಿ. 22-315.*

34. ಹತಃ ಸೌಗಂಧಿವನೇ ಮಣಿಮಾಂಶ್ಚ ಪುನಃ ಕಲೌ ।
ಜಾತೋ ಮಿಥ್ಯಾಮತಿಂ ಸಮ್ಯಗಾಸ್ಥಿಯಾಪ ತಮೋಽಧಿಕಮ್ ॥
*– ಮ.ಭಾರ.ತಾ.ನಿ. 32-131.*

ವನ್ನು ಪ್ರಚುರಪಡಿಸಿದಾಗ, ಕಲಿಯುಗದಲ್ಲಿ ನಾಲ್ಕು ಸಾವಿರದ ಮುನ್ನೂರು ವರ್ಷಗಳು ಕಳೆದಾಗ ಆ ಭೀಮಸೇನ ಬ್ರಾಹ್ಮಣಶರೀರವನ್ನು ಹೊತ್ತು ಅವತರಿಸಿದನು. ಮಣಿಮಂತಾದಿ ದೈತ್ಯರು ಮಿಥ್ಯಾಜ್ಞಾನವನ್ನು ಪ್ರಚುರಪಡಿಸಿ ಶ್ರೀಹರಿಯ ಸರ್ವೋತ್ತಮತ್ವದ ತತ್ತ್ವವನ್ನು ಮರೆಮಾಡಿದ್ದು, ಅದನ್ನು ಆ ಬ್ರಾಹ್ಮಣದೇಹದ ಮಧ್ವಾಚಾರ್ಯರು ಹರಿತತ್ತ್ವವನ್ನು ಪ್ರತಿಪಾದಿಸಿರುವರು.35

ಮಧ್ವಾವತಾರದ ಹಿನ್ನೆಲೆ ಹಾಗೂ ಉದ್ದೇಶಗಳಿಗೆ ಸಂಬಂಧಪಡುವ, ಭವಿಷ್ಯ ಪುರಾಣದಲ್ಲಿ ಸ್ಪಷ್ಟಪಡಿಸಲಾದ ಈ ವಿಚಾರವು ಈ ಪದ್ಯದಲ್ಲಿ ಸಂಗ್ರಹಿಸಲ್ಪಟ್ಟಿದೆ.

- 'ವಿಬುಧರೊಳು' –ಎಂಬ ಶಬ್ದವನ್ನು ಭೂತಳದೊಳವತರಿಸಿ ಎಂದಾದ ಮೇಲೆ, ಮಾನನಿಧಿ ಇತ್ಯಾದಿ ಕೊನೆಯ ಚರಣಕ್ಕಿಂತ ಮುಂಚೆ ಹಚ್ಚಿಕೊಳ್ಳಬೇಕು. ಆಗ ವಿಬುಧ ರೊಳು ಮಾನನಿಧಿ ಮಧ್ವಾಖ್ಯನೆಂದೆನಿಸಿದ ಎಂಬ ಅಭಿಪ್ರಾಯ ಹೊರಡುವುದು. ವಿಬುಧಶಬ್ದಕ್ಕೆ ಜ್ಞಾನಿಗಳೆಂದೂ, ದೇವತೆಗಳೆಂದೂ ಅರ್ಥವನ್ನಿಟ್ಟುಕೊಳ್ಳಬೇಕು.

- ಮಾನಶಬ್ದಕ್ಕೆ ಜ್ಞಾನ, ಪ್ರಮಾಣ ಮುಂತಾದ ಅರ್ಥಗಳಿದ್ದು, ಶ್ರೀಮದಾನಂದತೀರ್ಥರು 'ಅಧ್ಯಾತ್ಮಜ್ಞಾನನೇತ್ರ'ಗಳಾಗಿರುವುದರಿಂದ ಅಂತಹ ಅಧ್ಯಾತ್ಮಜ್ಞಾನಕ್ಕೆ ನಿಧಿಗಳಾಗಿರು ವರು ಹಾಗೂ ಅಂತಹ ಪ್ರಮಾಣಗಳಿಗೆ ನಿಧಿಗಳಾಗಿರುವವರು ಎಂಬ ಅಭಿಪ್ರಾಯ ದಲ್ಲಿ 'ಮಾನನಿಧಿ' –ಎಂಬ ವಿಶೇಷಣವನ್ನು ಅವರಿಗೆ ನೀಡಲಾಗಿದೆ.

- 'ಮಧ್ವಾಖ್ಯಂ ಮಂತ್ರಸಿದ್ಧಂ.......' –ಎಂದು ವಾಯುಸ್ತುತಿಯಲ್ಲಿ ಪಸ್ತುತವಾಗಿರುವಂತೆ ಮಂತ್ರಗಳಲ್ಲಿ, ವೈದಿಕವಾಙ್ಮಯದಲ್ಲಿ ಮಧ್ವ ಎಂಬ ಹೆಸರಿನಿಂದಲೇ ಪ್ರಸಿದ್ಧವಾಗಿರು ವವರು ಶ್ರೀಮದಾನಂದತೀರ್ಥರು. 'ಮಧು' –ಎಂದರೆ ಆನಂದ, 'ವ' ಎಂದರೆ ಶಾಸ್ತ್ರ. ಆನಂದಪ್ರದವಾದ ಶಾಸ್ತ್ರವನ್ನುಂಟುಮಾಡುವುದರಿಂದಲೇ ಆನಂದತೀರ್ಥರು ಮಧ್ವ ಎಂದು ಪ್ರಸಿದ್ಧರಾಗಿರುವರು. ಜಗತ್ತಿನ ಕುರಿತಾದ, ಅಪರತತ್ತ್ವವನ್ನು ಪ್ರತಿಪಾದಿಸು ವಾಗ ಅವರು ಅನುಭವಕ್ಕೆ ಅಧಿಕ ಪ್ರಾಶಸ್ತ್ಯ ನೀಡುವುದರಿಂದ ಆ ಅಂಶದಲ್ಲಿ ಅವರ ಶಾಸ್ತ್ರ ಅನುಭವಸಂವಾದಿಯಾಗಿದ್ದು ಅದನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು ಆನಂದವಾಗುವುದು. ಈ ದೃಷ್ಟಿಯಿಂದಲೂ ಅವರು ಆನಂದಪ್ರದಶಾಸ್ತ್ರಕಾರರು. ಇದಕ್ಕಿಂತಲೂ ಮುಖ್ಯವಾಗಿ, ಮೋಕ್ಷ ಎಂದರೆ ಸ್ವರೂಪಾನಂದದ ಆವಿರ್ಭಾವ ಎಂದು ಮೋಕ್ಷಸ್ವರೂಪವನ್ನು ಸ್ವರೂಪಾನಂದದ ಸ್ಥಿತಿಯನ್ನಾಗಿ ಸ್ಪಷ್ಟಪಡಿಸಿ, ಅಂತಹ ಮೋಕ್ಷದ ಪ್ರಾಪ್ತಿಗೆ ಉಪಯುಕ್ತವಾಗುವಂತಹ ಶಾಸ್ತ್ರವನ್ನು ರಚನೆ ಮಾಡಿರುವರು. ಉಳಿದ ಹೆಚ್ಚಿನ ಶಾಸ್ತ್ರಕಾರರ ಪ್ರಕಾರ ಮೋಕ್ಷದಲ್ಲಿ ದುಃಖ ಇಲ್ಲವೇ ಹೊರತು ಸುಖದ ಸ್ಪರ್ಶವೇ ಇಲ್ಲ. ಮೋಕ್ಷದಲ್ಲಿ ಸುಖ ಇದೆ ಎಂದು ಹೇಳುವ ಶಾಸ್ತ್ರಕಾರರೂ ಮುಕ್ತರ ಸಾಧನಾನುಷ್ಠಾನಕ್ಕೆ ಅನುಗುಣವಾಗಿರುವಂತೆ ಮೋಕ್ಷದಲ್ಲಿ ಸುಖದ

---

35. ಚತುಃಸಹಸ್ರೇ ತ್ರಿಶತೋತ್ತರೇ ಗತೇ ಸಂವತ್ಸರಾಣಾಂ ತು ಕಲೌ ಪೃಥಿವ್ಯಾಮ್ ।
ಜಾತಃ ಪುನರ್ವಿಪ್ರತನುಃ ಸ ಭೀಮೋ ದೈತ್ಯೈರ್ನಿಗೂಢಂ ಹರಿತತ್ತ್ವಮಾಹ ॥
*– ಮ.ಭಾರ.ತಾ.ನಿ. 32-13.*

ಸ್ಥಿತಿಯನ್ನು ವ್ಯವಸ್ಥಿತಗೊಳಿಸಲಿಲ್ಲ. ಆದುದರಿಂದ ಮೋಕ್ಷ ಸ್ವರೂಪಸುಖದ ಆವಿರ್ಭಾವವೆಂದೂ, ಅಲ್ಲಿಯ ಸುಖ ಅವರವರ ಸ್ವರೂಪಕ್ಕೆ ಅನುಗುಣವಾಗಿರುವುದೆಂದೂ ಮೋಕ್ಷದ ಸುಖಸ್ವರೂಪವನ್ನು ಜಿಜ್ಞಾಸುಗಳಿಗೆ ಮನವರಿಕೆಯಾಗುವಂತೆ ಸ್ಪಷ್ಟಪಡಿಸಿದ ಹಾಗೂ ಅಂತಹ ಮೋಕ್ಷವನ್ನು ಪಡೆಯಲು ಉಪಯುಕ್ತವಾಗುವ ಪ್ರಾಮಾಣಿಕವಾದ, ಯುಕ್ತಿಯುಕ್ತವಾದ ಶಾಸ್ತ್ರವನ್ನು ಪ್ರಸ್ತುತಪಡಿಸಿದ ಕೀರ್ತಿ ಶ್ರೀಮದಾನಂದತೀರ್ಥರಿಗೇ ಸಲ್ಲಬೇಕಾದುದರಿಂದ ಅವರನ್ನು ಶಾಸ್ತ್ರಗಳು, ಜ್ಞಾನಿಗಳು ಅನ್ವರ್ಥಕವಾಗಿ 'ಮಧ್ವ' -ಎಂದು ಕೊಂಡಾಡುತ್ತಿರುವರು. ಇದನ್ನೇ 'ಮಧ್ವಾಖ್ಯನೆಂದೆನಿಸಿದ' -ಎನ್ನಲಾಗಿದೆ.

## ತತ್ತ್ವದಾ ಮಾರ್ಗವನ್ನು ಸರ್ಬಸುಜನರಿಗರುಹಿದನು:

ಅರ್ಭಕತನವನ್ನೈದಿ ಬದರಿಯಲಿ ಮಧ್ವಮುನಿ
ನಿರ್ಭಯದಿ ಸಕಲಶಾಸ್ತ್ರವ ಪಠಿಸಿದ
ಉರ್ಬಿಯೊಳಗಾಮ್ನಾಯತತ್ತ್ವದಾ ಮಾರ್ಗವನು
ಸರ್ಬ ಸುಜನರಿಗರುಹಿದ ಮೋದದಿ || ೨೩ ||

ಮಧ್ವಮುನಿಗಳು ಆಗಾಗಲೇ ತಾವು ವಿದ್ಯಾಸಮೃದ್ಧಿಯನ್ನು ಹೊಂದಿ ಸರ್ವಜ್ಞರಾಗಿದ್ದರೂ ಬದರಿಕಾಶ್ರಮದಲ್ಲಿ ಶ್ರೀವೇದವ್ಯಾಸರ ಮೂಲಕ ಸಕಲಶಾಸ್ತ್ರವನ್ನು ಮೋದದಿಂದಲೇ ಪಠಿಸಿದರು. ಉರ್ಬಿಯೊಳು -ಉರ್ವಿಯೊಳು -ಭೂಮಿಯಲ್ಲಿ ಆಮ್ನಾಯತತ್ತ್ವದ ವೈದಿಕತತ್ತ್ವದ ಆ ಮಾರ್ಗವನ್ನು ನಿರ್ಭಯದಿ, ಸರ್ಬ -ಸರ್ವಸುಜನರಿಗೆ ಅರುಹಿದರು; ತಿಳಿಸಿದರು.

## ವಿವರಣೆ:

ನಾರಾಯಣಪಂಡಿತರ ಮಧ್ವವಿಜಯ ಶ್ರೀಮಧ್ವಗುರುಗಳ ಚರಿತ್ರೆಯ ಕುರಿತು ಅಧಿಕೃತ ಗ್ರಂಥ. ಅದರಲ್ಲೂ 'ಸ ಚಿತ್ತಾವಿಷಯತ್ವಾದ್ವಾ ಗೋಪ್ಯತ್ವಾದ್ವಾ ನ ವರ್ಣ್ಯತೇ' (ಮ.ವಿ. 15-113) ವಿಷ್ಣುತೀರ್ಥರ ಮೇಲೆ ಶ್ರೀಮಧ್ವರು ಮಾಡಿದ ಅನುಗ್ರಹವಿಶೇಷ ಅಚಿಂತ್ಯ ಹಾಗೂ ರಹಸ್ಯ ಎಂಬ ದೃಷ್ಟಿಯಿಂದ ವರ್ಣಿಸಲಾಗುವುದಿಲ್ಲ ಎಂದಿರುವಂತೆ ಮಧ್ವಚರಿತೆಗೆ ಸಂಬಂಧಿಸಿದ ಕೆಲವು ಸೂಕ್ಷ್ಮಪ್ರಮೇಯಗಳನ್ನು ಅಚಿಂತ್ಯ ಎಂದೂ, ರಹಸ್ಯ ಎಂದೂ ತಿಳಿಸದಿರುವ ಸಂಭವ ಇದೆ.

ನಾರಾಯಣಪಂಡಿತರೇ ಮಧ್ವವಿಜಯದ ತಮ್ಮ ಟೀಕೆಯಾದ ಭಾವಪ್ರಕಾಶಿಕಾದಲ್ಲಿ ಮಧ್ವವಿಜಯದಲ್ಲಿ ಶ್ರೀಮಧ್ವರ ಚರಿತ್ರೆಗೆ ಸಂಬಂಧಿಸುವ ಕೆಲವು ವಿಚಾರಗಳನ್ನು ಪ್ರತಿಪಾದಿಸದ ಬಗ್ಗೆ ಹೀಗೆ ತಿಳಿಸಿದ್ದಿದೆ-

- ಜಗದ್ಗುರುಗಳಾದ ಶ್ರೀಮಧ್ವರು ತಮ್ಮ ಸಾಮರ್ಥ್ಯದ ಒಂದು ಅಂಶವನ್ನೇ ಬೇರೆಬೇರೆ ಮಹಿಮೆಗಳ, ಲೀಲೆಗಳ ಮೂಲಕ ತೋರಿಸಿಕೊಟ್ಟಿರುವರು. ಅಂತಹ ಮಹಿಮೆಗಳಲ್ಲೂ, ಲೀಲೆಗಳಲ್ಲೂ ದೇವತೆಗಳಿಂದಷ್ಟೇ ಕಾಣಲು ಯೋಗ್ಯವಾದ ಅಂಶವನ್ನು ದೇವತೆಗಳಷ್ಟೇ ಕಂಡು ಅನುಭವಿಸಿರುವರು.

- ಕೆಲವು ಚಟುವಟಿಕೆಗಳು ನರರಿಂದ ಕಾಣಲ್ಪಟ್ಟಿದ್ದರೂ ದೇವಮಾಯೆಯಿಂದ ಅವು ಮರೆಯಲ್ಪಟ್ಟಿವೆ.
- ಮರೆಯಲ್ಪಡದ ಚಟುವಟಿಕೆಗಳಲ್ಲೂ ಎಲ್ಲವನ್ನೂ ನನಗೆ ಕೇಳಲಾಗಲಿಲ್ಲ.
- ಕೇಳಲ್ಪಟ್ಟ ವಿಚಾರಗಳಲ್ಲೂ ಕೆಲವು 'ದೇವಗುಹ್ಯ' –ದೇವತೆಗಳಷ್ಟೇ ತಿಳಿದುಕೊಳ್ಳಲು ಯೋಗ್ಯ ಎಂಬ ದೃಷ್ಟಿಯಿಂದ ನಾನು ಮಧ್ವವಿಜಯದಲ್ಲಿ ಅವನ್ನು ನಿರೂಪಿಸಲಿಲ್ಲ.
- ಮತ್ತೆ ಕೆಲವು ವಿಚಾರಗಳನ್ನು 'ಗ್ರಂಥಬಾಹುಲ್ಯಭೀತಿ'ಯಿಂದಾಗಿ ಹೇಳದೆ ಕೈಬಿಟ್ಟಿದ್ದೇನೆ.36

ಹೀಗಿರುವುದರಿಂದಲೇ ಉಡುಪಿ ಶ್ರೀಕೃಷ್ಣನ ಪ್ರತಿಮೆಯ ಹಿನ್ನೆಲೆ, ಮಧ್ವಾವತಾರದ ಉಪಸಂಹಾರದ ಸ್ಪಷ್ಟತೆ –ಇತ್ಯಾದಿಗಳ ನಿರೂಪಣೆ ಮಧ್ವವಿಜಯದಲ್ಲಿ ಬಂದಿಲ್ಲ ಎಂದು ಭಾವಿಸಬಹುದಾಗಿದೆ. ಆದರೂ **'ಗೋಪಿಕಾಪ್ರಣಯಿನಃ ಶ್ರಿಯಃ ಪತೇಃ'** (ಮ.ವಿ. 9-41) ಎಂಬ ವಿಶೇಷಣಗಳಿಂದ ಯಶೋದಾರೂಪದ ಗೋಪಿಕೆಗೆ ತೋರಿಸಿದ್ದ ಪ್ರಣಯದ ವೈಭವವನ್ನು ದೇವಕಿಗೆ ತೋರಿಸಿರುವ ರಹಸ್ಯ, ರುಗ್ಮಿಣೀರೂಪದ ಶ್ರೀದೇವಿಯ ಬಯಕೆಯನ್ನು ಪೂರೈಸಿ ಸಂರಕ್ಷಿಸಿದ ವಿಚಾರ –ಇವನ್ನು ಸೂಚ್ಯವಾಗಿ ತಿಳಿಸಲಾಗಿದೆ. ಹಾಗೆಯೇ ಮಧ್ವರ ಅದರ್ಶನಕ್ಕೆ ಸಂಬಂಧಿಸಿದಂತೆ **'ಗುರುವಿಜಯಮಹಂ ತಂ ಲಾಲಯಂತಃ......'** –ಎನ್ನಲಾದ ಮಾತು ಸಮಗ್ರ ಮಧ್ವಾವತಾರವನ್ನು 'ಗುರುವಿಜಯ'ವನ್ನಾಗಿ ತಿಳಿಸಿ, ಅದರ ಉಪಸಂಹಾರವಾಯಿತೆಂಬುದನ್ನು ಸೂಚ್ಯವಾಗಿ ತಿಳಿಸಿಕೊಡಬಲ್ಲದು.

ಆದರೆ ಶ್ರೀಮಧ್ವರು ಏಳು ವರ್ಷದವನಾಗಿದ್ದಾಗ ಬದರಿಗೆ ಹೋಗಿ ಅಲ್ಲಿ ಶ್ರೀವ್ಯಾಸರಿಂದ ವೇದಾದಿಗಳ ಪಾಠವನ್ನು ಕೇಳಿ ಬಂದಿದ್ದನೆಂದು ಒಪ್ಪಿಕೊಂಡರೆ ಅದರ ಉಲ್ಲೇಖ ಮಧ್ವವಿಜಯದಲ್ಲಿ ಬಾರದಿದ್ದದ್ದು ಮಧ್ವವಿಜಯದ ನ್ಯೂನತೆ ಎಂದೇ ಆಗುವ ಅಪಾಯ ಇದೆ. ಅನುಕ್ತಿ ದೋಷವಲ್ಲದಿದ್ದರೂ ಅತ್ಯವಶ್ಯವಾಗಿ ಪ್ರಸಕ್ತವಾದದ್ದನ್ನು ಹೇಳದಿದ್ದರೆ, ಹಾಗೂ ಪ್ರಸಕ್ತವಾದದ್ದನ್ನು ಅರ್ಧ ಮಾತ್ರ ಹೇಳಿ ಉಳಿದದ್ದನ್ನು ಏನೂ ಸೂಚನೆಯನ್ನೂ ನೀಡದೆ ತ್ಯಜಿಸಿಬಿಟ್ಟರೆ ವಿಷಯದ ಬಗ್ಗೆ ಸರಿಯಾದ ಮಾಹಿತಿ ನೀಡದ ಪ್ರಯುಕ್ತ, ಅರ್ಧಂಬರ್ಧ ಮಾಹಿತಿ ನೀಡಿ ತಪ್ಪು ಕಲ್ಪನೆ ಮೂಡುವಂತೆ ಮಾಡಿದ ಪ್ರಯುಕ್ತ ದೋಷವಾಗಿಯೇ ಪರಿಣಮಿಸುವುದು ತಾನೇ?

---

36. ಸಾಮರ್ಥ್ಯಾಂಶಾಂಶಮೇವಾತ್ರ ಪ್ರಾದುಶ್ಚಕ್ರೇ ಜಗದ್ಗುರುಃ ।
ತತ್ರಾಪ್ರಮರ್ತ್ಯದೃಶ್ಯಾಂಶೋ ದೇವೈರೇವಾನ್ವಭೂಯತ ॥
ಚರ್ಯಾ ದೃಷ್ಟಾ ನರೈಃ ಕಾಶ್ಚಿದ್ವಿಸ್ಮೃತಾ ದೇವಮಾಯಯಾ ।
ಅವಿಸ್ಮೃತಾಶ್ಚ ಪುರುಷೈರ್ನಾಸ್ಮಾಭಿಃ ಸಕಲಾಃ ಶ್ರುತಾಃ ।
ಶ್ರುತಾಶ್ಚ ಕಾಶ್ಚಿನ್ನೈವೋಕ್ತಾ ದೇವಗುಹ್ಯತ್ವನಿಶ್ಚಯಾತ್ ॥
ಅನ್ಯಾಸ್ತಥೈವ ನ ಪ್ರೋಕ್ತಾ ಗ್ರಂಥಬಾಹುಲ್ಯಭೀತಿತಃ ।
– *ಭಾವಪ್ರಕಾಶಿಕಾ – ಉಪಸಂಹಾರೇ.*

ಈ ಪದ್ಯದಲ್ಲಿ ಪ್ರಸ್ತುತವಾದ 'ಮಧ್ವಮುನಿ ಅರ್ಭಕತನವ್ಯೆದಿ ಬದರಿಯಲಿ ಸಕಲ ಶಾಸ್ತ್ರವ ಪಠಿಸಿದ' –ವಿಚಾರಕ್ಕೆ ಸಂಬಂಧಿಸಿಯೇ ನೋಡುವುದಾಗಿದ್ದರೆ ಒಂದು ವೇಳೆ ಶ್ರೀಮಧ್ವರು ಬಾಲಕನಾಗಿದ್ದಾಗ ಬದರಿಗೆ ಹೋಗಿ ವ್ಯಾಸರಲ್ಲಿ ಸಕಲಶಾಸ್ತ್ರಗಳ ಅಭ್ಯಾಸ ನಡೆಸಿದ್ದರೆ ಎರಡು ಮೂರು ಬಾರಿ ಅದರ ಪ್ರಸ್ತಾವ ಬಂದಾಗ ಅದನ್ನು ತಿಳಿಸಬೇಕಿತ್ತು. ನಾರಾಯಣಪಂಡಿತರಿಗೆ ಅದು ತಿಳಿದಿದ್ದರೆ ಅದರ ಸೂಚನೆಯನ್ನಾದರೂ ನೀಡಬೇಕಿತ್ತು.

- ಮಧ್ವವಿಜಯದ ನಾಲ್ಕನೇ ಸರ್ಗದ ಕೊನೆಯಲ್ಲಿ ಭಾಗವತದ ಐದನೇ ಸ್ಕಂಧದ ಗದ್ಯಭಾಗವನ್ನು ಮುಖೋದ್ಗತವಾಗಿ ಹೇಳಿದ ಮಧ್ವರು ತಾನು **'ಪೂರ್ವಜನ್ಮಸು ವೇದ ಪುರೇದಂ....'** (ಮ.ವಿ.4-53) ಹಿಂದಿನ ಜನ್ಮಗಳಲ್ಲಿಯೇ ಅಧ್ಯಯನ ಮಾಡಿರುವುದಾಗಿ ತಿಳಿಸುವರೇ ಹೊರತು ಸೂಚ್ಯವಾಗಿಯಾದರೂ ತಾನು ಈಗಾಗಲೇ ಶ್ರೀ ವ್ಯಾಸರಿಂದ ಸಕಲಸಚ್ಛಾಸ್ತ್ರಗಳ ಪಾಠ ಕೇಳಿದ್ದೇನೆ ಎಂದೇನೂ ತಿಳಿಸುವುದಿಲ್ಲ.

- ಮಧ್ವವಿಜಯದಲ್ಲಿ ನಿರೂಪಿಸಿರುವಂತೆ ಮಧ್ವರು ಬದರಿಕಾಶ್ರಮಕ್ಕೆ ಹೋಗುವಾಗಾಗಲೀ, ಅಲ್ಲಿ ವ್ಯಾಸರಿಂದ ಸಚ್ಛಾಸ್ತ್ರಗಳ ಪಾಠ ಕೇಳುವಾಗಾಗಲೀ **'ಋಜುಪುಂಗವಸ್ಯ ಪರಿಜಾನತಃ ಸ್ವಯಂ ಸಕಲಂ ತದಪ್ಯಲಮನಂತಜನ್ಮಸು'** (ಮ.ವಿ. 8-5) ಎಂಬುದಾಗಿ ಋಜುಪುಂಗವರಾಗಿದ್ದ ಮಧ್ವರಿಗೆ ಸ್ವಾಭಾವಿಕವಾಗಿಯೇ ತಿಳಿದಿದೆ ಎನ್ನಲಾಗಿದೆಯೇ ಹೊರತು ಈ ಅವತಾರದಲ್ಲೂ ಬಾಲ್ಯದಲ್ಲಿ ಒಮ್ಮೆ ತಿಳಿಸಲಾಗಿದೆ –ಎಂಬ ಸೂಚನೆಯನ್ನೂ ನೀಡುವುದಿಲ್ಲ.

- ವಾಯುಸ್ತುತಿಯ 'ಪುನರಪಿ ಬದರೀಂ ಪ್ರಾಪ್ಯ.....' ಮತ್ತೊಮ್ಮೆ ಬದರಿಗೆ ಹೋಗಿ ಎಂಬ ಮಾತು ಬಾಲ್ಯದಲ್ಲಿ ಒಮ್ಮೆ ಹೋಗಿದ್ದನ್ನು ಗಮನದಲ್ಲಿಟ್ಟುಕೊಂಡು ಹೇಳಲ್ಪಟ್ಟದ್ದಾಗಿದ್ದರೆ ಆ ಮಾತಿನ ಆಶಯ ಮಧ್ವವಿಜಯದಲ್ಲಿ ಸೂಚಿತವಾಗಲೇಬೇಕಿತ್ತು ತಾನೇ?

- ಆದ್ದರಿಂದ 'ಪುನರಪಿ ಬದರೀಂ ಪ್ರಾಪ್ಯ' ಮತ್ತೆಮತ್ತೆ ಬದರಿಗೆ ಹೋಗಿ –ಎಂದು ಮುಂದೆ ಮೂರು ಬಾರಿ ಬದರಿಗೆ ಹೋದುದನ್ನು ತಿಳಿಸಲಾಗಿದೆಯಷ್ಟೇ. ಶಂಕರಾಚಾರ್ಯರ ಮೋಹಮುದ್ಗರದ 'ಪುನರಪಿ ಮರಣಂ ಪುನರಪಿ ಜನನಂ.......' ಎಂಬ ಮಾತಿನಲ್ಲಿ ಮತ್ತೆಮತ್ತೆ ಸಂಭವಿಸುವ ಮರಣಜನನಗಳನ್ನು 'ಪುನರಪಿ' ಶಬ್ದಗಳಿಂದ ತಿಳಿಸಲಾಗಿದೆಯೋ ಹಾಗೆ.

- ಆದ್ದರಿಂದ ಈ ಪದ್ಯದ 'ಅರ್ಭಕತನವನ್ಯೆದಿ......' ಎಂದು 'ಅರ್ಭಕತನ' ಶಬ್ದ ರೂಢವಾಗಿ ಪ್ರಯುಕ್ತವಾದದ್ದಲ್ಲ. ಏಳು ವರ್ಷದ ಹುಡುಗ ಬಾಲಕ ಎನಿಸುವನೇ ಹೊರತು ಅರ್ಭಕ, ಶಿಶು ಎನಿಸುವುದಿಲ್ಲ ತಾನೇ? ಆದ್ದರಿಂದ **'ಋ ಗತೌ ಪ್ರಾಪಣೇ ಚ'** –ಎಂಬ ಧಾತುವಿನಿಂದ **'ಅರ್ಯತೇ ವೃದ್ಧಿಂ ಪ್ರಾಪ್ಯತೇ'** –ಎಂಬ ನಿರ್ವಚನವನ್ನಿಟ್ಟುಕೊಂಡು ವೃದ್ಧಿಯನ್ನು, ಸಮೃದ್ಧಿಯನ್ನು ಹೊಂದಿದವನೇ ಅರ್ಭಕ ಎಂದು ಯೋಗದಿಂದ ಅರ್ಥೈಸಿಕೊಳ್ಳಬೇಕು. ಆಗ 'ಅರ್ಭಕತನವನ್ಯೆದಿ' –ಎಂಬುದಕ್ಕೆ ವೃದ್ಧಿಯನ್ನು ಬೌದ್ಧಿಕವೃದ್ಧಿಯನ್ನು, ವಿಚಾರವಂತಿಕೆಯ ಸಮೃದ್ಧಿಯನ್ನು ಹೊಂದಿ ಅರ್ಥಾತ್ ಆಗಾಗಲೇ ವಿದ್ಯಾಸಮೃದ್ಧಿಯನ್ನು ಹೊಂದಿದ್ದರೂ ಮಧ್ವವಿಜಯದಲ್ಲಿ 'ಪುರ ಏವ

**ಪೂರಿತಮಪೂರಯತ್ ಪುನಃ........**' ಎಂಬ ಪದ್ಯದಲ್ಲಿ (8-3) ಶ್ರೀಕೃಷ್ಣನ ದ್ವಾರಕಾ ಪಟ್ಟಣದ ದೃಷ್ಟಾಂತ ಕೊಟ್ಟು ಹೇಗೆ ದ್ವಾರಕಾಪಟ್ಟಣ ಮೊದಲೇ ಸಮೃದ್ಧವಾಗಿದ್ದರೂ ಪುನಃಪುನಃ ತುಂಬಿಸಲಾಗಿತ್ತೋ ಹಾಗೆಯೇ ಮೊದಲೇ ವಿದ್ಯೆಗಳಿಂದ ತುಂಬಿದ್ದ ಮಧ್ವರ ಮನಸ್ಸಿನಲ್ಲಿ ಇನ್ನಷ್ಟು ಜ್ಞಾನವನ್ನು ತುಂಬಿಸಲಾಯಿತೆಂದು ಮಾಡಲಾದ ನಿರೂಪಣೆಗನುಗುಣವಾಗಿ ಪುನಃ ಶ್ರೀವೇದವ್ಯಾಸರಲ್ಲಿ 'ಸರ್ವಶಾಸ್ತ್ರವ ಪಠಿಸಿದ' ಎನ್ನಲಾಗಿದೆ.

- ಮೋದದಿ ಪಠಿಸಿದ, ನಿರ್ಭಯದಿ ಅರುಹಿದನು –ಎಂದು ಮೋದದಿ ಹಾಗೂ ನಿರ್ಭಯದಿ ಶಬ್ದಗಳ ಅನ್ವಯವನ್ನು ಬೇರೆಬೇರೆ ಕಡೆಗಳಲ್ಲಿ ಹಚ್ಚಿಕೊಳ್ಳುವುದು ಉಚಿತ. ಆಗಾಗಲೇ ಅರ್ಭಕತನವನ್ನು, ವಿದ್ಯೆಯ ಸಮೃದ್ಧಿಯನ್ನು ಹೊಂದಿದ್ದರೂ ಮೋದದಿಂದಲೇ ಶ್ರೀವ್ಯಾಸರ ಮೂಲಕ ಸಕಲಶಾಸ್ತ್ರಗಳನ್ನು ಪಠಿಸಿದರೇ ಹೊರತು ಯಾವುದೇ ಬಗೆಯ ನಿರ್ಬಂಧಕ್ಕೊಳಗಾಗಿ ಅಲ್ಲ –ಎಂಬುದು ಆಂತರ್ಯ.

- ಹಾಗೆಯೇ ಆಮ್ನಾಯ ತತ್ತ್ವದಾ ಮಾರ್ಗವನು ಉರ್ವಿಯೊಳು ಅರುಹುವಾಗ ಆ ಕಾಲದಲ್ಲಿ ಪ್ರಚಲಿತವಿದ್ದ ತತ್ತ್ವಮಾರ್ಗದ ಪ್ರತಿಪಾದಕರ ವಿರೋಧ ಸಹಜವಾದುದ ರಿಂದ ಅದನ್ನು ಎದುರಿಸಲು ಬೇಕಾದ ಧೈರ್ಯ ಇರಬೇಕು. ಅದು ಶ್ರೀಮಧ್ವರಲ್ಲಿ ಇತ್ತು ಎಂಬುದನ್ನು 'ನಿರ್ಭಯದಿ ಅರುಹಿದ'. ಯಾರ ವಿರೋಧಕ್ಕೂ ಪ್ರತಿಭಟನೆಗೂ ಸೊಪ್ಪು ಹಾಕದೆ ನಿರ್ಭಯನಾಗಿ, ಧೈರ್ಯದಿಂದ ತತ್ತ್ವವನ್ನು ಸಾರಿದರು.

**ಶರ್ವಾದಿಗೀರ್ವಾಣಸಂತತಿಯಲಿ ಅರುಹಿದರು:**

ಸರ್ವೇಶ ಹರಿ, ವಿಶ್ವ ಎಲ್ಲ ತಾ ಪುಸಿಯೆಂಬ
ದುರ್ವಾದಿಗಳ ಮತವ ನೆರೆ ಖಂಡಿಸಿ
ಸರ್ವೇಶ ಹರಿ, ವಿಶ್ವ ಸತ್ಯವೆಂದರುಹಿದ
ಶರ್ವಾದಿಗೀರ್ವಾಣಸಂತತಿಯಲಿ ॥ ೨೪ ॥

ವಿಶ್ವವೆಲ್ಲವೂ ಅವಿದ್ಯೆಯಿಂದಾಗಿ ಕಾಣಿಸಿಕೊಳ್ಳುವಂತಹದ್ದಾಗಿದ್ದು ಸುಳ್ಳು. ಅಂದರೆ ವ್ಯವಹಾರದ ಕಾಲದಲ್ಲಷ್ಟೇ ಕಾಣಿಸಿಕೊಳ್ಳುವ ವ್ಯಾವಹಾರಿಕಸತ್ಯ ಎಂದು ಪಾರಿಭಾಷಿಕ ಭಾಷೆಯಲ್ಲಿ ಕರೆಸಿಕೊಳ್ಳಲು ಯೋಗ್ಯವಾದದ್ದು. ಹೀಗೆ ವಿಶ್ವವೇ ಹುಸಿ ಎಂದ ಮೇಲೆ ಶ್ರೀಹರಿ ಸರ್ವೇಶ ಎನಿಸುವುದಾದರೂ ಹೇಗೆ ತಾನೇ ಸತ್ಯವೆನಿಸೀತು? ಬ್ರಹ್ಮನೊಬ್ಬನೇ ಪಾರಮಾರ್ಥಿಕ ಸತ್ಯ ಎನಿಸಿದ್ದು, ಮಾಯೆ ಯ ಸಂಪರ್ಕದಿಂದಷ್ಟೇ ಆ ಬ್ರಹ್ಮ ಹರಿ, ಹರ ಇತ್ಯಾದಿಯಾಗಿ ರೂಪುಗೊಳ್ಳುವನು. ಅವನಲ್ಲಿ ಅವಿದ್ಯಾಪ್ರಯುಕ್ತ ಸುಖ, ಬಲ ಇತ್ಯಾದಿ ಧರ್ಮಗಳಂತೆ ಸರ್ವೇಶತ್ವ ಅಂದರೆ ಸರ್ವಸ್ವಾಮಿತ್ವ ಕೂಡಾ ಕಾಣಿಸಿಕೊಳ್ಳುವುದಷ್ಟೇ ಎಂಬುದು ಅದ್ವೈತವಾದಿಗಳ ಬ್ರಹ್ಮವಿವರ್ತವಾದದ ಸಾರಾಂಶ. ಭಗವಂತನ ಸರ್ವೋತ್ತಮತ್ವವ್ಯಕ್ತಿತ್ವದ ಬಗ್ಗೆ ಅಪಚಾರವನ್ನು ಎಸಗುವ ಆ ಮತವನ್ನು ಚೆನ್ನಾಗಿ ಖಂಡಿಸಿ ಶ್ರೀಹರಿ ಸರ್ವೇಶ; ಅವನಿಂದ ನಿರ್ಮಿತವಾದ ವಿಶ್ವ ಪರಬ್ರಹ್ಮನಂತೆಯೇ

**ಪಾರಮಾರ್ಥಿಕ ಸತ್ಯ ಎಂದು ರುದ್ರ ಮುಂತಾದ ದೇವತೆಗಳ ಸಮುದಾಯದಲ್ಲಿ ಅರುಹಿದರು ಶ್ರೀ ಮಧ್ವ ಗುರುಗಳು.**

**ವಿವರಣೆ:** **'.........ಮಧ್ವ ಆಧವೇ ಗುಹಾಸಂತಂ ಮಾತರಿಶ್ವಾ ಮಥಾಯತಿ'** –ಎಂದು ಬಳಿತ್ಥಾಸೂಕ್ತ ಸಾರುತ್ತಿರುವಂತೆ ಶ್ರೀ ಮಧ್ವರು ಶಾಸ್ತ್ರದಲ್ಲಿ ಚೆನ್ನಾಗಿ ಚರ್ಚಿಸಿ ಸಿದ್ಧಾಂತಿಸಿದ ಪ್ರಮುಖ ತತ್ತ್ವ 'ಶ್ರೀವಿಷ್ಣುಸರ್ವೋತ್ತಮ' ಎಂಬುದು. ಇದಕ್ಕೆ ಪೂರಕವಾಗುವಂತೆ ಪಂಚಭೇದಗಳು, ಜಗತ್‌ಸತ್ಯತ್ವ, ತಾರತಮ್ಯ –ಮುಂತಾದ ಇತರ ತತ್ತ್ವಗಳ ಪ್ರತಿಪಾದನೆಯನ್ನು ಮಾಡಿರುವರು. ಈ ರೀತಿಯ ಅವರ ಸತ್‌ಸಿದ್ಧಾಂತದ ಪ್ರಮುಖತತ್ತ್ವಕ್ಕೆ ಹಾಗೂ ಪೂರಕ ತತ್ತ್ವಗಳಿಗೆ ವಿರೋಧಿಗಳಾದ ಮತಗಳನ್ನೆಲ್ಲ ನಿರಾಕರಿಸಿರುವರು. ಯಾವುದೇ ಮತವನ್ನು ವೈಯಕ್ತಿಕವಾಗಿ ಖಂಡಿಸದೆ, ತಾತ್ತ್ವಿಕವಾಗಿಯಷ್ಟೇ ಖಂಡಿಸಿರುವರು. ವಿಷ್ಣುಸರ್ವೋತ್ತಮತ್ವತತ್ತ್ವಕ್ಕೆ ತುಂಬ ವಿರೋಧಿಯಾಗಿರುವ ವೈದಿಕಮತ ಅದ್ವೈತಮತವಾಗಿರುವುದರಿಂದ ತಾತ್ತ್ವಿಕವಾಗಿ ಅದ್ವೈತಮತವನ್ನು ವಿಶೇಷವಾಗಿ ನಿರಾಕರಿಸಿರುವರು. ತಾವು ವೇದಕ್ಕೆ ಪ್ರಾಮಾಣ್ಯವನ್ನು ಒಪ್ಪುವ ವೈದಿಕರೆಂದು ಹೇಳಿಕೊಂಡು, ಅಂತಹ ವೇದದ ಆಧಾರದಲ್ಲಿಯೇ ವೇದಪ್ರತಿಪಾದ್ಯ ಶ್ರೀಹರಿಯ ವ್ಯಕ್ತಿತ್ವಕ್ಕೆ ಅಪಚಾರವನ್ನೆಸಗುತ್ತಿರುವರೆನ್ನುವುದರಿಂದಾಗಿ ಮಧ್ವಗುರುಗಳಿಗೆ ಅದ್ವೈತವಾದಿಗಳ ಬಗ್ಗೆ ತುಂಬ ಅಸಮಾಧಾನ. ಆದುದರಿಂದ ಅವರು ತಮ್ಮ ಅವತಾರದ ಅವಧಿಯಲ್ಲೂ ಅದ್ವೈತಿಗಳ ನಿರಾಕರಣೆಯನ್ನು ವಿಶೇಷವಾಗಿ ಮಾಡಿರುವರು; ಹಾಗೆಯೇ ಸರ್ವಮೂಲಗ್ರಂಥಗಳಲ್ಲೂ ಅದ್ವೈತಮತದ ನಿರಾಕರಣೆಯೇ ವಿಶೇಷವಾಗಿ ನಡೆದಿದೆ. ಇದನ್ನೇ 'ಸರ್ವೇಶಹರಿ...... ಮತವ ನೆರೆ ಖಂಡಿಸಿ' –ಚೆನ್ನಾಗಿ ಖಂಡಿಸಿರುವರೆಂದು ತಿಳಿಸಲಾಗಿದೆ.

- ಅದ್ವೈತಿಗಳು 'ವಿಶ್ವಂ ಮಿಥ್ಯಾ' –ವಿಶ್ವವೆಲ್ಲ ಪುಸಿ ಎನ್ನುವರೇ ಹೊರತು 'ಸರ್ವೇಶ ಹರಿ ಪುಸಿ' ಎನ್ನುವುದಿಲ್ಲ. ಆದರೆ ವಿಶ್ವಂ ಮಿಥ್ಯಾ ಎಂದಾಗ ಆ 'ವಿಶ್ವ'ದ ವ್ಯಾಪ್ತಿಯಲ್ಲಿ ಚೇತನಾಚೇತನಾತ್ಮಕವಾದ ಸರ್ವ, ಅದಕ್ಕೆ ಸಂಬಂಧಿಸುವ ಈಶತ್ವ, ಹರಿಶಬ್ದಾರ್ಥವಾಗಿ ಪಾಪಪರಿಹಾರಕತ್ವಾದಿ –ಇವೆಲ್ಲ ಸೇರಿದ್ದು ಇವೆಲ್ಲವನ್ನೂ ಮಿಥ್ಯಾ ಎಂದಂತೆಯೇ ಆಗುವುದು. ಈಶತ್ವಾದಿ ಧರ್ಮಗಳೂ ಮಿಥ್ಯಾ ಎಂದ ಮೇಲೆ 'ಸರ್ವೇಶ ಹರಿ' –ಸತ್ಯ ಎನಿಸುವುದಾದರೂ ಹೇಗೆ? ಅಲ್ಲದೆ, ಅವರ ಪ್ರಕ್ರಿಯೆಗನುಗುಣವಾಗಿಯೇ ಬ್ರಹ್ಮನು ಅವಿದ್ಯೆಯ ಸಂಪರ್ಕದಿಂದ ಜೀವನೆನಿಸಿದರೆ, ಮಾಯೆಯ ಸಂಪರ್ಕದಿಂದ ಹರಿ, ಹರ ಮುಂತಾದ ಸಗುಣಬ್ರಹ್ಮ ಎನಿಸುವನು. ಅವಿದ್ಯೆ ನಿವೃತ್ತವಾಗುವಾಗ ಜೀವಭಾವ ಹೇಗೆ ತೊಲಗುವುದೋ ಹಾಗೆ ಮಾಯೆ ಸರಿದಾಗ ಸಗುಣಬ್ರಹ್ಮಭಾವವೂ ಕಣ್ಮರೆಯಾಗುವುದು. ಇದರ ಪರಿಣಾಮವಾಗಿ ಹರಿಹರಾದಿಗಳು ಆಗ ಇಲ್ಲ ಎಂದಾಗುವರು. ಆದ್ದರಿಂದ 'ಸರ್ವೇಶ ಹರಿ' ಪುಸಿ ಎಂದಂತೆಯೇ ತಾನೆ?

- ಮಾಧ್ವಸಿದ್ಧಾಂತದಲ್ಲಿ ಅನೇಕ ತತ್ತ್ವಗಳಿವೆಯಾದರೂ 'ವಿಷ್ಣುಸರ್ವೋತ್ತಮತ್ವವೂ, ಅದಕ್ಕೆ ಪೂರಕವಾಗಿ ವಿಶ್ವಸತ್ಯತ್ವವೂ ಪ್ರಮುಖಗಳಾಗಿರುವುದರಿಂದ 'ಸರ್ವೇಶ ಹರಿ ವಿಶ್ವ ಸತ್ಯವೆಂದರುಹಿದ' –ಎನ್ನಲಾಗಿದೆ.

- ಶುದ್ಧ ತತ್ತ್ವಜ್ಞಾನ ಅಮೃತದಂತೆ ಶ್ರೇಷ್ಠ ವಸ್ತುವೆನಿಸಿರುವುದರಿಂದ ದೇವತೆಗಳು ಅದಕ್ಕೆ ಮುಖ್ಯಾಧಿಕಾರಿಗಳು. ಅವರು ಅದನ್ನು ವಿಶೇಷವಾಗಿ ಅಪೇಕ್ಷಿಸುತ್ತಿರುತ್ತಾರೆ. ಆದುದರಿಂದ ಶ್ರೀಮಧ್ವರು ಪ್ರಸ್ತುತಪಡಿಸಿದ ಶುದ್ಧವಾದ ತತ್ತ್ವಜ್ಞಾನಕ್ಕೆ ರುದ್ರಾದಿದೇವತೆಗಳೇ ಮುಖ್ಯಾಧಿಕಾರಿಗಳು. ಬಳಿತ್ಥಾಸೂಕ್ತ **'.......ಈಶಾನಾಸಃ ಶವಸಾ ಕ್ರಂತ ಸೂರಯಃ'** –ಎಂಬುದಾಗಿ ಶ್ರೀಮಧ್ವರ ತತ್ತ್ವಜ್ಞಾನದಿಂದಾಗಿ ಅನಾಯಾಸವಾಗಿ ಸೂರಿಗಳಾಗಿ ರೂಪಿಸಲ್ಪಟ್ಟವರು ರುದ್ರಾದಿದೇವತೆಗಳು ಎಂದು ಸಾರಿದೆ. ಮಧ್ವವಿಜಯದಲ್ಲಿ ಉಲ್ಲೇಖಗೊಂಡಂತೆ ಶ್ರೀಮಧ್ವರು ಬ್ರಹ್ಮಸೂತ್ರಭಾಷ್ಯದ ಪ್ರವಚನ ನಡೆಸುತ್ತಿರಲು ಸನಕಾದಿಮುನಿಗಳಿಂದ ಸಹಿತನಾದ ಶೇಷನೂ ಚೆನ್ನಾಗಿ ಶ್ರವಣ ನಡೆಸುತ್ತಿದ್ದನು.37 ಸನಕಾದಿಗಳು ಮಧ್ವಶಾಸ್ತ್ರದ ಶ್ರವಣದ ಫಲವನ್ನು ಶೇಷನಲ್ಲಿ ವಿಚಾರಿಸಲು ಶುಕಾಚಾರ್ಯರು, ಸರಸ್ವತೀ ಮುಂತಾದ ಜ್ಞಾನಿಗಳಿಗೆ ಮಧ್ವಶಾಸ್ತ್ರ ಮೋಕ್ಷಪ್ರದವಾದುದೆಂದು ಶೇಷನು ತಿಳಿಸುವನು.38 ಹಾಗೆಯೇ ಮಧ್ವವಿಜಯದ ಹನ್ನೊಂದನೆಯ ಸರ್ಗದ ಕೊನೆಯಲ್ಲಿ ಆನಂದತೀರ್ಥರ ಬ್ರಹ್ಮಸೂತ್ರಭಾಷ್ಯವನ್ನು ಯಾರು ಮನಸ್ಸಿನ ಮೂಲಕ ಹಾಗೂ ವಾಗಿಂದ್ರಿಯದ ಮೂಲಕ ಆವರ್ತನೆ ಮಾಡುವರೋ ಅವರು ಮುಕುಂದನ ಅನುಗ್ರಹದಿಂದ ಮೋಕ್ಷ ಹೊಂದುವರೆಂದು ಘೋಷಿಸುವಾಗ ದೇವತೆಗಳಿಂದ ಪ್ರಾರಂಭಿಸಿ ಮನುಷ್ಯರ ವರೆಗೆ ಎಂಬುದಾಗಿ ಅಧಿಕಾರಿಗಳನ್ನು ಉಲ್ಲೇಖಿಸಲಾಗಿದ್ದು,39 ಇದರಿಂದಾಗಿ ಸೂತ್ರಭಾಷ್ಯದ ಅಧ್ಯಯನಕ್ಕೆ ಹಾಗೂ ಮಾಧ್ವಶಾಸ್ತ್ರದ ಅಧ್ಯಯನಕ್ಕೆ ದೇವತೆಗಳೇ ಮುಖ್ಯಾಧಿಕಾರಿಗಳು ಎಂದು ಸ್ಪಷ್ಟವಾಗುವುದು. ಹಾಗೆಯೇ ಮಧ್ವವಿಜಯದ ಉಪಸಂಹಾರದಲ್ಲಿ ಉಲ್ಲೇಖಗೊಂಡಂತೆ ಶ್ರೀಮಧ್ವರ ವಿಜಯ ಮಹೋತ್ಸವದ ಆಚರಣೆಗಾಗಿ ಉಡುಪಿ ಅನಂತಾಸನನ ಸನ್ನಿಧಾನಕ್ಕೆ ಬಂದಿದ್ದ ಮುನಿ ಸಮೂಹ, ಗಂಧರ್ವರು ಹಾಗೂ ದೇವತೆಗಳು ಶ್ರೀಮಧ್ವರು ನಡೆಸುತ್ತಿದ್ದ ಐತರೇಯ ಉಪನಿಷತ್ತಿನ ಪಾಠದಲ್ಲಿ ಪಾಲ್ಗೊಂಡು ಕೊನೆಯಲ್ಲಿ ಸಲ್ಲಿಸಿದ ಪ್ರಾರ್ಥನೆಯಲ್ಲಿ ಶ್ರೀಮಧ್ವರ ಮಾತುಗಳಿಂದಾಗಿ ದುರಾಗಮಗಳ ಕತ್ತಲು ದೂರವಾಯಿತು; ಅದರಿಂದಾಗಿ ಮುಕುಂದನ ಗುಣಸಮೂಹದ ದರ್ಶನ ದೊರಕುವಂತಾಯಿತು.39 ಶ್ರೀಮಧ್ವಗುರುಗಳೇ ನಮಗೆ ಒಳ್ಳೆಯ ತತ್ತ್ವಜ್ಞಾನವನ್ನು ನೀಡಿ......40 ಎಂದು ಉಲ್ಲೇಖಗೊಂಡಿರುವ ಈ ಮಾತುಗಳಿಂದ ಸ್ಪಷ್ಟವಾಗುವ ಅಂಶವೆಂದರೆ ಮಾಧ್ವತತ್ತ್ವಜ್ಞಾನಕ್ಕೆ

---

37. ಪ್ರಚುರಾಂತರಪ್ರವಚನಂ ಫಣಿರಾಡುಪಶುಶ್ರುವಾನ್ ಸಸನಕಾದಿಮುನಿಃ ।
– *ಮ.ವಿ. 11-1.*

38. ಸ್ವಫಲಂ ತು ಮುಕ್ತಿಪದಮುಕ್ತಿಪದಂ ಶುಕಶಾರದಾದಿಪರಮಾರ್ಥವಿದಾಮ್ ।
– *ಮ.ವಿ. 11-6.*

39. ಆನಂದತೀರ್ಥಸ್ಯ ಯೇ ಭಾಷ್ಯಭಾವಂ ಮನೋವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ ।
ಸುರಾದ್ಯಾ ನರಾಂತಾ ಮುಕುಂದಪ್ರಸಾದಾದಿಮಂ ಮೋಕ್ಷಮೇತೇ ಭಜಂತೇ ಸದೇತಿ ॥
– *ಮ.ವಿ. 11-79.*

40. ಅಹರೋ ದುರಾಗಮತಮಃ ಸ್ವಗೋಗಣೈರಕರೋರ್ಮುಕುಂದಗುಣವೃಂದದರ್ಶನಮ್ ।
– *ಮ.ವಿ. 16-56.*

ಮುಖ್ಯಾಧಿಕಾರಿಗಳು ದೇವತೆಗಳೇ ಮುಂತಾದವರು. ಶ್ರೀಜಯತೀರ್ಥರೂ ವಿಷ್ಣುತತ್ತ್ವ ವಿನಿರ್ಣಯದ ಟೀಕೆಯ ಕೊನೆಯಲ್ಲಿ ಆನಂದತೀರ್ಥರ ಮಾತುಗಳಿಗೆ ವಿಶಿಷ್ಟ ವ್ಯಾಖ್ಯಾನ ಮಾಡಲು ದೇವತೆಗಳೇ ಅಧಿಕಾರಿಗಳೆಂದು ಸಾರಿರುವರು.[41] ಶ್ರೀ ವಾದಿರಾಜಸ್ವಾಮಿಗಳೂ ಮಹಾಭಾರತತಾತ್ಪರ್ಯನಿರ್ಣಯದ ಭಾವಪ್ರಕಾಶಿಕೆಯ ಉಪಸಂಹಾರದಲ್ಲಿ ಮಾಧ್ವಗ್ರಂಥಗಳ ಆಶಯವನ್ನು ದೇವತೆಗಳು ತಿಳಿಯುವರೇ ಹೊರತು ಮಾನವರಲ್ಲ ಎಂದಿರುವ ಮೂಲಕ[42] ಮಾಧ್ವಗ್ರಂಥಗಳಿಗೆ ದೇವತೆಗಳೇ ಮುಖ್ಯಾಧಿಕಾರಿಗಳೆಂದು ತಿಳಿಸಿದಂತಾಗಿದೆ. ಈ ಹಿನ್ನೆಲೆಯಲ್ಲಿ '......ಅರುಹಿದ ಶರ್ವಾದಿಗೀರ್ವಾಣಸಂತತಿಯಲಿ' –ಎಂದು ನಿರೂಪಿಸಲಾಗಿದೆ.

**ಶ್ರೀಕರಾರ್ಚಿತನೊಲುಮೆ ಶಾಸ್ತ್ರ ರಚಿಸಿದರು:**

**ಏಕವಿಂಶತಿ ಕುಭಾಷ್ಯಗಳ ಬೇರನು ತರಿದು**
**ಶ್ರೀಕರಾರ್ಚಿತನೊಲುಮೆ ಶಾಸ್ತ್ರ ರಚಿಸಿ ।**
**ಲೋಕತ್ರಯದೊಳಿದ್ದ ಸುರರು ಆಲಿಸುವಂತೆ**
**ಆ ಕಮಲನಾಭಾದಿಯತಿನಿಕರಕೊರೆದ ॥ ೨೫ ॥**

**ಶ್ರೀಮಧ್ವರು ಬ್ರಹ್ಮಸೂತ್ರದ ಬಗ್ಗೆ ಹೊರಟದ್ದ ಇಪ್ಪತ್ತೊಂದು ಕೆಟ್ಟ ಭಾಷ್ಯಗಳನ್ನು ಬೇರುಸಹಿತ ಕಿತ್ತು ಹಾಕಿ ಲಕ್ಷ್ಮೀದೇವಿಯಿಂದ ಮಾನ್ಯನಾದ ಶ್ರೀಪತಿಯ ಒಲುವೆ ’ಗ ಅನುಗ್ರಹಕ್ಕೆ ಪ್ರಯೋಜಕವಾದ ಸಚ್ಛಾಸ್ತ್ರವನ್ನು ರಚಿಸಿದರು. ಲೋಕತ್ರಯದಲ್ಲಿದ್ದ ದೈವೀಸಂಪತ್ತಿಗೆ ಒಳಗಾದ ಸಾತ್ವಿಕರೆಲ್ಲ ಕೇಳಿಸಿಕೊಳ್ಳುವಂತೆ ಪದ್ಮನಾಭತೀರ್ಥರೇ ಮುಂತಾದ ಸಂನ್ಯಾಸಿವರ್ಗಕ್ಕೆ ಆ ಶಾಸ್ತ್ರವನ್ನು ಒರೆದರು; ಉಪದೇಶಿಸಿದರು.**

**ವಿವರಣೆ:** ಬ್ರಹ್ಮಸೂತ್ರ ಶಾಸ್ತ್ರನಿರ್ಣಾಯಕಗ್ರಂಥವೆನಿಸಿದ್ದು ಶಾಸ್ತ್ರಕಾರರೆನಿಸಬೇಕಾದರೆ ಅವರು ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ರಚಿಸಲೇಬೇಕು –ಎಂಬ ಶಾಸ್ತ್ರಪ್ರಪಂಚದ ಪದ್ಧತಿ ಗನುಗುಣವಾಗಿ ಶ್ರೀಮಧ್ವರು ಅವತಾರದ ಮುಂಚೆ ಇದ್ದ ಇಪ್ಪತ್ತೊಂದು ಬೇರೆಬೇರೆ ಶಾಸ್ತ್ರ ಕಾರರು ತಮ್ಮ ತಮ್ಮ ಶಾಸ್ತ್ರಕ್ಕನುಗುಣವಾಗಿ ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ರಚಿಸಿದ್ದರು. ಆದ್ದರಿಂದ ಬ್ರಹ್ಮಸೂತ್ರಕ್ಕೆ ಇಪ್ಪತ್ತೊಂದು ಭಾಷ್ಯಗಳ ರಚನೆಯಾಗಿತ್ತೆಂದರೆ ಶಾಸ್ತ್ರಪ್ರಪಂಚ ದಲ್ಲಿ ಇಪ್ಪತ್ತೊಂದು ಪರಸ್ಪರ ವಿರುದ್ಧಗಳಾದ ವಿಚಾರಧಾರೆಗಳು ಇದ್ದವೆಂದರ್ಥ. ಶ್ರೀಮಧ್ವರು ಬರೇ ಈ ಇಪ್ಪತ್ತೊಂದು ಶಾಸ್ತ್ರೀಯ ವಿಚಾರಧಾರೆಗಳ ಜೊತೆಗೆ ತಮ್ಮ ಶಾಸ್ತ್ರೀಯಧಾರೆಯನ್ನೂ ಪ್ರಸ್ತುತಪಡಿಸಿದ್ದರೆ 'ಹತ್ತರ ಕೂಡೆ ಹನ್ನೊಂದು' –ಎಂದಿರುವಂತೆ ಉಳಿದವರ ವಿಚಾರಧಾರೆಯಂತೆ ಇವರದ್ದೂ ಒಂದು ವಿಚಾರಧಾರೆ ಎಂದಷ್ಟೇ ಎನಿಸು ತ್ತಿತ್ತು. ಆದ್ದರಿಂದಲೇ ಶ್ರೀಮಧ್ವರ ವಿಚಾರಧಾರೆಯೇ ಗ್ರಾಹ್ಯ ಎಂದೂ ಎನಿಸುತ್ತಿರಲಿಲ್ಲ.

---

41. ನಮಃ ಶ್ರೀಮನ್ಮಧ್ವಪ್ರದಿಶಸುದೃಶಂ ನೋ ಜಯಜಯ । – ಮ.ವಿ. *16-57.*

42. ಆನಂದತೀರ್ಥಭಗವದ್ವಚಸಾಂ ವಿಶಿಷ್ಟವ್ಯಾಖ್ಯಾನಕರ್ಮಣಿ ಸುರಾ ಅಧಿಕಾರಿಣೋಽತ್ರ ।
*– ವಿಷ್ಣುತತ್ತ್ವವಿನಿರ್ಣಯಟೀಕಾ – ಉಪಸಂಹಾರೇ.*

ಆದರೆ ಶ್ರೀಮಧ್ವರು ಆ ಇಪ್ಪತ್ತೊಂದು ಭಾಷ್ಯಕಾರರ ವಿಚಾರಧಾರೆಗಳಲ್ಲೂ ಇರುವ ಲೋಪದೋಷಗಳ ಮೇಲೆ ಬೆಳಕುಚೆಲ್ಲಿ ಅಂತಹ ಲೋಪದೋಷಗಳಿಗೆ ಎಡೆ ಇಲ್ಲದಂತಹ ಶಾಸ್ತ್ರವನ್ನು ರಚಿಸಿರುವರು. ಅದಕ್ಕೆ ಆಧಾರವಾಗಿ ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ನಿರ್ಮಿಸಿ ರುವರು. ಆದ್ದರಿಂದ ಶ್ರೀಮಧ್ವರ ಶಾಸ್ತ್ರ ವಿವೇಕಿಗಳಿಗೆ ಗ್ರಾಹ್ಯವೆನಿಸಿದೆ.

ಏಕವಿಂಶತಿಭಾಷ್ಯಗಳ ಕೆಲವು ವಿಚಾರಗಳನ್ನಷ್ಟೇ ಮೇಲ್ಮೇಲೆ ನಿರಾಕರಣೆ ಮಾಡಿರದೆ ಅವುಗಳ ಆಂತರ್ಯವನ್ನು ಕೂಲಂಕಷವಾಗಿ ವಿಮರ್ಶಿಸಿ ನಿರಾಕರಿಸಲಾಗಿದೆ. ಹಾಗೆಯೇ ಆ ಕುಭಾಷ್ಯಗಳ ಪ್ರಮುಖ ತತ್ತ್ವಗಳನ್ನೇ ನಿರಾಕರಿಸಿರುವುದರಿಂದ, ಪುನಃ ಸ್ವಲ್ಪ ಪರಿಷ್ಕಾರ ಮಾಡಿ ಅವುಗಳನ್ನು ಪ್ರಸ್ತುತಪಡಿಸುವುದಕ್ಕೆ ಅವಕಾಶವಿಲ್ಲ. 'ಕುಭಾಷ್ಯಗಳ ಬೇರನು ತರಿದು' –ಎಂಬ ಮಾತಿನಿಂದ ಈ ಆಶಯವನ್ನು ಸಾರಲಾಗಿದೆ.

ಮಾಧ್ವಶಾಸ್ತ್ರ ಕುಭಾಷ್ಯಗಳನ್ನು ನಿರಾಕರಿಸಿದೆ ಎಂಬುದಕ್ಕಷ್ಟೇ ಗ್ರಾಹ್ಯವಲ್ಲ. ಮಾನವ ಜೀವನ ಸಾರ್ಥಕವೆನಿಸಬೇಕಾದರೆ ಯಾವ ಶ್ರೀಪತಿಯ ಒಲುಮೆಗೆ ಪಾತ್ರನಾಗಬೇಕೆಂದು ಶಾಸ್ತ್ರಗಳು ಒಕ್ಕೊರಲಿನಿಂದ ಸಾರುತ್ತಿವೆಯೋ ಅಂತಹ ಶ್ರೀಪತಿಯ ಒಲುಮೆಗೆ ಪಾತ್ರ ವಾಗುವಂತೆ ರಚಿತವಾದ ಶಾಸ್ತ್ರವಾಗಿರುವುದೆಂಬುದೇ ಮಾಧ್ವಶಾಸ್ತ್ರಕ್ಕೆ ಮುಖ್ಯ ಹೆಗ್ಗಳಿಕೆ. ಶ್ರೀಪತಿಯನ್ನು ಶ್ರೀಕರಾರ್ಚಿತ –ಲಕ್ಷ್ಮೀದೇವಿಯ ಕೈಗಳಿಂದ ಪೂಜಿತನಾದವನೆಂಬುದಾಗಿ ಇಲ್ಲಿ ಉಲ್ಲೇಖಿಸುವ ಮೂಲಕ ಶ್ರೀದೇವಿಯನ್ನೂ ಶ್ರೀಪತಿಯ ಪೂಜಕಳನ್ನಾಗಿ ಪ್ರಸ್ತಾವಿಸಿ ರುವುದರಿಂದ ಶ್ರೀಪತಿಯ ಒಲುಮೆಗೆ ಹೇಗೋ ಶ್ರೀದೇವಿಯ ಒಲುಮೆಗೂ ಪಾತ್ರ ವಾಗಿರಲು ಪ್ರಯೋಜಕವಾಗುವಂತೆ ರಚಿತವಾದ ಶಾಸ್ತ್ರ ಮಧ್ವಶಾಸ್ತ್ರ ಎಂದೂ ಸೂಚಿತ ವಾಗುವುದು. ಶ್ರೀಪತಿಯ ಪಾರಮ್ಯವನ್ನು ಚೆನ್ನಾಗಿ ಪ್ರತಿಪಾದಿಸುವ ಮೂಲಕ ಅವನ ವ್ಯಕ್ತಿತ್ವದ ಯಾವ ಅಂಶಕ್ಕೂ ಅಪಚಾರ ಆಗದಂತೆ ರಚಿತವಾದ ಶಾಸ್ತ್ರವಾದುದರಿಂದ ಮಧ್ವಶಾಸ್ತ್ರ ಶ್ರೀಪತಿಯ ಒಲುಮೆಗೆ ಪಾತ್ರವಾದ ಶಾಸ್ತ್ರವಾದರೆ, ಸಕಲ ವೈದಿಕ ವಾಙ್ಮಯಕ್ಕೆ ಏಕವಾಕ್ಯತೆಯನ್ನು ಸಮರ್ಥಿಸಿ, ವೈದಿಕವಾಙ್ಮಯದ ಪ್ರತಿಯೊಂದು ಭಾಗಕ್ಕೂ ಪ್ರಾಮಾಣ್ಯವನ್ನು ಸಮರ್ಥಿಸಿ, ಅದರ ಹಿರಿಮೆಗರಿಮೆಗಳನ್ನು ಸಾರುವ ಮೂಲಕ ವೈದಿಕ ವಾಙ್ಮಯದ ಯಾವೊಂದು ಅಂಶಕ್ಕೂ ಅಪಚಾರ ಆಗದಂತೆ ರಚಿತವಾಗಿರುವ ಶಾಸ್ತ್ರ ವಾಗಿರುವುದರಿಂದ ಮಧ್ವಶಾಸ್ತ್ರ ವೈದಿಕವಾಙ್ಮಯದ ಮುಖ್ಯಾಭಿಮಾನಿನಿಯಾದ ಶ್ರೀದೇವಿಯ ಒಲುಮೆಗೆ ಪಾತ್ರವಾದ ಶಾಸ್ತ್ರವೂ ಆಗಿದೆ. 'ಕಿಂ ವೋದಿತೈರಸ್ಯ ಗುಣೈಸ್ತತೋಽನ್ಯೈರ್ನಾರಾ ಯಣಃ ಪ್ರೀತಿಮುಪೈತ್ಯತೋಽಲಮ್' –ಮಹಾಭಾರತತಾತ್ಪರ್ಯನಿರ್ಣಯದ ಉಳಿದ ಗುಣಗಳನ್ನು ಉಲ್ಲೇಖಿಸುವುದಕ್ಕಿಂತ –ಶ್ರೀಮನ್ನಾರಾಯಣನು ಇದರಿಂದ, ಇದರ ಅಧ್ಯಯ ನಾದಿಗಳಿಂದ ಚೆನ್ನಾಗಿ ಸಂತುಷ್ಟನಾಗುವನು –ಎಂಬ ಒಂದು ಮಹಾಗುಣವನ್ನು ಉಲ್ಲೇಖಿ ಸಿದರೆ ಸಾಲದೇ? –ಎಂದು ಶ್ರೀಮಧ್ವರು ತಮ್ಮ ಗ್ರಂಥಗಳಿಗೆ ಶ್ರೀಮನ್ನಾರಾಯಣನ ಒಲುಮೆಗೆ ಪಾತ್ರವಾಗುವಂತೆ ಮಾಡುವ ಹೆಗ್ಗಳಿಕೆಯನ್ನೊಳಗೊಂಡಿರುವವೆಂದು ಸಾರುವ ಮೂಲಕ ಅಂತಹ ಗ್ರಂಥಗಳು ಪ್ರಸ್ತುತಪಡಿಸುವ ತಮ್ಮ ಮತವೂ ಆ ಬಗೆಯ ಹೆಗ್ಗಳಿಕೆಗೆ ಪಾತ್ರವಾದುದೆಂದು ಸೂಚಿಸಿರುವರು.

- ಇಂತಹ ಶಾಸ್ತ್ರವನ್ನು ರಚಿಸಿದ ಶ್ರೀಮಧ್ವರು ತಮ್ಮ ಸನ್ನಿಹಿತಶಿಷ್ಯರಾಗಿದ್ದ ಕಮಲನಾಭತೀರ್ಥ-ಪದ್ಮನಾಭತೀರ್ಥ ಮುಂತಾದವರಿಗೆ ತಾವು ಸಾಕ್ಷಾತ್ತಾಗಿ ಉಪದೇಶಿಸಿರುವರು. 'ಒರೆ' ಶಬ್ದಕ್ಕೆ ತಿಕ್ಕು ಎಂಬ ಅರ್ಥವೂ ಇರುವುದರಿಂದ ಸಾಮಾನ್ಯವಾಗಿ ಉಪದೇಶಿಸದೆ, ತಿಕ್ಕಿತಿಕ್ಕಿ ಕೇಳುವವರಿಗೆ ಮನವರಿಕೆಯಾಗುವಂತೆ ಉಪದೇಶಿಸಿರುವರೆಂಬುದರ ಧ್ವನಿ ಮೂಡುವಂತೆ 'ಯತಿನಿಕರಕ್ಕೊರೆದ' –ಎನ್ನಲಾಗಿದೆ. ವಾಯುಸ್ತುತಿಯ 'ವ್ಯಾಖ್ಯಾಮುತ್ಖಾತ ದುಃಖಾಂ....' ಇತ್ಯಾದಿ ಮಾತುಗಳಲ್ಲಿ ತಿಳಿಸಿರುವಂತೆ ಶ್ರೀಮಧ್ವರ ಪ್ರವಚನದ ವೈಭವದ ಚಿತ್ರಣದ ಸೂಚನೆ ದೊರಕುವಂತೆ 'ಒರೆದ' ಶಬ್ದದ ಪ್ರಯೋಗ ನಡೆದಿದೆ.

- ಪದ್ಮನಾಭತೀರ್ಥರಿಂದ ಲಕ್ಷ್ಮೀಧರತೀರ್ಥರ ಮೂಲಕ ಹರಿದುಬಂದದ್ದು ಶ್ರೀಪಾದರಾಜರ ಮಠದ ಪರಂಪರೆಯಾಗಿರುವುದರಿಂದ, ಆ ಪರಂಪರೆಯಲ್ಲಿ ಬಂದಿರುವ ಶ್ರೀಪಾದರಾಜರು ತಮ್ಮ ಪರಂಪರೆಯ ಮೂಲವ್ಯಕ್ತಿಗಳಾದವರು ಪದ್ಮನಾಭತೀರ್ಥರು ಎಂಬ ದೃಷ್ಟಿಯಿಂದ ಮಾತ್ರ ಅವರನ್ನು ಇಲ್ಲಿ ಉಲ್ಲೇಖಿಸಿರುವುದಲ್ಲದೆ, 'ಶ್ರುತ್ವಾ ಮತ್ವಾ.......' ಇತ್ಯಾದಿಯಾಗಿ ಮಧ್ವವಿಜಯದಲ್ಲಿ (15-121) ತಿಳಿಸಿರುವಂತೆ ಶಾಸ್ತ್ರದ ಶ್ರವಣಮನನಾದಿಗಳನ್ನು ನಿರಂತರವಾಗಿ ನಡೆಸಿ ಶ್ರೀಮಧ್ವರ ಮನಗೆದ್ದವರು ಪದ್ಮನಾಭತೀರ್ಥರು. ಆದುದರಿಂದಲೂ 'ಆ ಕಮಲನಾಭಾದಿಯತಿನಿಕರ....' ಎಂದು ಅವರನ್ನೇ ಮುಖ್ಯರನ್ನಾಗಿ ಉಲ್ಲೇಖಿಸಲಾಗಿದೆ.

- ಹೀಗೆ ಸನ್ನಿಹಿತ ಶಿಷ್ಯರಿಗೆ ತಮ್ಮ ಸಿದ್ಧಾಂತವನ್ನು ಉಪದೇಶಿಸಿ, ಅವರ ಮೂಲಕ ಲೋಕತ್ರಯದಲ್ಲೂ ಅಂದರೆ ಎಲ್ಲೆಡೆ ಇರುವ ಸುರರು ಅಂದರೆ ದೇವತೆಗಳು, ಅಷ್ಟೇ ಅಲ್ಲದೆ, ದೈವೀಸ್ವಭಾವಕ್ಕೊಳಗಾದ ಎಲ್ಲ ಸಾತ್ವಿಕರು ಆಲಿಸುವಂತೆ ಮಾಡಿರುವರು. ಇತಿಹಾಸಪುರಾಣಪಂಚರಾತ್ರ ಮುಂತಾದ ಶಾಸ್ತ್ರಗಳನ್ನು ಬ್ರಹ್ಮಸೂತ್ರಗಳಿಂದ ಚೆನ್ನಾಗಿ ಸಿದ್ಧಾಂತಿಸಿಕೊಂಡು ವಿಷ್ಣುಪಾರಮ್ಯವನ್ನು ಯಾವಾಗಲೂ ಪ್ರತಿಪಾದಿಸುತ್ತಿರಬೇಕು43 –ಎಂದು ಯತಿಪ್ರಣವಕಲ್ಪದಲ್ಲಿ ಕರೆಕೊಟ್ಟಿರುವಂತೆ ಯತಿಗಳಿಗೆ ಆದೇಶ ನೀಡಿ ಸತ್ಸಿದ್ಧಾಂತದ ಪ್ರಸಾರವನ್ನು ಮಾಡಲಾಗಿತ್ತು. ಅದಕ್ಕನುಗುಣವಾಗಿ ಮಧ್ವರ ಶಿಷ್ಯರು ಪೃಥಿವಿ ತುಂಬ ಸಂಚಾರ ಮಾಡಿ ದುರಾಗಮಗಳ ಕತ್ತಲನ್ನು ಓಡಿಸಿ, ಶ್ರೀಹರಿಯ ಪಾರಮ್ಯವನ್ನು ಸಾರುತ್ತಿದ್ದರು.44 ಇದನ್ನೇ 'ಲೋಕತ್ರಯದೊಳಿದ್ದ ಸುರರು ಆಲಿಸುವಂತೆ.......' –ಎಂಬ ಮಾತಿನಿಂದ ತಿಳಿಸಲಾಗಿದೆ.

---

43. ಮಾಧ್ವಗ್ರಂಥಸ್ಯಾಭಿಸಂಧಿಂ ವಿದುರ್ದೇವಾ ನ ಮಾನವಾಃ ।
*– ಭಾವಪ್ರಕಾಶಿಕಾ – ಉಪಸಂಹಾರೇ.*

44. ಇತಿಹಾಸಪುರಾಣೇ ಚ ಪಂಚರಾತ್ರಂ ತಥೈವ ಚ ।
ತದರ್ಥಾನ್ ಬ್ರಹ್ಮಸೂತ್ರೈಶ್ಚ ಸಮ್ಯಗ್ ನಿರ್ಣಯ ತತ್ತ್ವತಃ ।
ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ ।
*– ಯತಿಪ್ರಣವಕಲ್ಪ, 24, 25.*

- 'ಸುರರು' –ಎಂಬ ಶಬ್ದದಿಂದ ದೈವೀಸ್ವಭಾವಕ್ಕೊಳಗಾದ ಸಾತ್ತ್ವಿಕವ್ಯಕ್ತಿಗಳಷ್ಟೇ ಮಧ್ವ ಶಾಸ್ತ್ರವನ್ನು ಆಲಿಸುವಂತಾಗುವುದು. ಉಳಿದವರ ಕಿವಿಗೆ ಬಿದ್ದರೂ, ಶ್ರೋತ್ರೇಂದ್ರಿಯಕ್ಕೂ ಮನಸ್ಸಿಗೂ, ಮನಸ್ಸಿಗೂ ಆತ್ಮನಿಗೂ ಸಂಬಂಧಗಳನ್ನು ಹಚ್ಚಿಕೊಂಡು ಮಧ್ವ ಶಾಸ್ತ್ರದ ಬಗ್ಗೆ ಗಮನ ಹರಿಸದ ಪ್ರಯುಕ್ತ ಅವರಿಂದ ಆಲಿಸಿದಂತಾಗುವುದಿಲ್ಲ –ಎಂದು ಸೂಚಿತವಾಗುವುದು.

## ಬ್ರಹ್ಮತ್ವವೈದಿದ ಮಧ್ವಮುನಿರಾಯ:

ಬದರಿಕಾಶ್ರಮಕೆ ಪುನರಪಿಯೈದಿ ವ್ಯಾಸಮುನಿ
ಪದಕೆರಗಿ ಅಖಿಲವೇದಾರ್ಥಗಳನು
ಪದುಮನಾಭನ ಮುಖದಿ ತಿಳಿದು ಬ್ರಹ್ಮತ್ವ–
ವೈದಿದ ಮಧ್ವಮುನಿರಾಯಗಭಿವಂದಿಪೆ ॥ ೨೬ ॥

ಸುಮಾರು ಎಂಬತ್ತು ವರ್ಷಗಳ ಕಾಲಾವಧಿಯಲ್ಲಿ ದೃಶ್ಯರಾಗಿದ್ದ ಶ್ರೀಮಧ್ವರು ತಮ್ಮ ಅವತಾರಾವಧಿಯಲ್ಲಿ ಮೂರು ಬಾರಿ ಬದರಿಕಾಶ್ರಮಕ್ಕೆ ಯಾತ್ರೆ ಮಾಡಿದ್ದು, ಅವುಗಳಲ್ಲಿ ಕೊನೆಯ ಬಾರಿಗೆ, ಅಂದರೆ ತಮ್ಮ ಅವತಾರಕಾರ್ಯಗಳನ್ನು ಮುಗಿಸಿ ಶ್ರೀವ್ಯಾಸರಲ್ಲಿಗೆ ತೆರಳಿದ ಯಾತ್ರೆಯನ್ನು ಈ ನುಡಿಯಲ್ಲಿ ತಿಳಿಸಲಾಗಿದೆ. ಹಿಂದೆ ಎರಡು ಬಾರಿ ತೆರಳಿದ್ದಂತೆ ಮೂರನೆಯ ಈ ಬಾರಿಯೂ ಶ್ರೀವೇದವ್ಯಾಸರಲ್ಲಿಗೆ ಹೋಗಿ ಅವರಿಂದ ಸಕಲವೇದಾರ್ಥಗಳ ಪಾಠವನ್ನು ಪುನಃ ಕೇಳಿ, ಅದರ ಫಲವಾಗಿಯೋ ಮುಂದೆ ಚತುರ್ಮುಖನ ಪದವಿಯನ್ನು ಪಡೆದ ಮಧ್ವಮುನಿರಾಯರಿಗೆ ಅಭಿವಂದಿಪೆನು.

**ವಿವರಣೆ:** ಮಧ್ವವಿಜಯ ಹಾಗೂ ಅಣುಮಧ್ವಚರಿತ –ಇವುಗಳ ಪ್ರಕಾರ ಶ್ರೀಮಧ್ವರು ತಮ್ಮ ಅವತಾರಾವಧಿಯಲ್ಲಿ ಮೂರು ಬಾರಿ ಬದರಿಕಾಶ್ರಮಕ್ಕೆ ಹೋಗಿದ್ದರು. ವೇದವ್ಯಾಸರಲ್ಲಿ ಇತಿಹಾಸಾದಿಗಳ ಪಾಠ ಕೇಳಿ ಸೂತ್ರಭಾಷ್ಯಾದಿಗಳ ರಚನೆಗೆ ಸ್ಫೂರ್ತಿ ಪಡೆದುಕೊಂಡದ್ದು ಒಮ್ಮೆ.[45] ವ್ಯಾಸಮುಷ್ಟಿಯನ್ನು ಪಡೆದು ಮಹಾಭಾರತತಾತ್ಪರ್ಯ ನಿರ್ಣಯರಚನೆಗೆ ಬೇಕಾದ ಸ್ಫೂರ್ತಿ ಪಡೆದದ್ದು ಮತ್ತೊಂದು ಬಾರಿ.[46] ಇವೆರಡರ ಉಲ್ಲೇಖ ಮಧ್ವವಿಜಯದಲ್ಲಿ ಬಂದಿದ್ದರೆ, ಅವತಾರಕಾರ್ಯ ಸಮಾಪ್ತವಾದಾಗ ಬದರಿಕಾಶ್ರಮಕ್ಕೆ ತೆರಳಿರುವುದನ್ನು ಅಣುಮಧ್ವಚರಿತೆ ದಾಖಲಿಸಿದೆ.[47] ಮೊದಲ ಬಾರಿಗೆ ಹೋದ ಘಟನೆಯನ್ನು ಮಧ್ವನಾಮ 'ಅರ್ಭಕತನವನೈದಿ ಬದರಿಯಲಿ......' ಎಂಬ

---

45. ಪಾದೈಃ ಪುನಂತಃ ಪೃಥಿವೀಂ ದರ್ಶಯಂತೋ ಹರೇಃ ಪದಮ್ ।
ಧೂತದುಃಸಮಯಧ್ವಾಂತಾ ಆದಿತ್ಯಾ ಇವ ಗಾಂ ಗತಾಃ ॥
– ಮ.ವಿ. *15-130.*

46. ಮಧ್ವವಿಜಯದ ಸಪ್ತಮ ಹಾಗೂ ಅಷ್ಟಮಸರ್ಗಗಳಲ್ಲಿ ಈ ವಿಚಾರ ಪ್ರಸ್ತುತವಾಗಿವೆ.

47. ಮಧ್ವವಿಜಯದ ದಶಮಸರ್ಗದಲ್ಲಿ (24, 25 ಶ್ಲೋಕಗಳಲ್ಲಿ) ಈ ವಿಚಾರ ಪ್ರಸ್ತುತವಾಗಿವೆ.

ನುಡಿಯಲ್ಲಿ (23) ಉಲ್ಲೇಖಿಸಿದ್ದರೆ, ಮೂರನೆಯ ಬಾರಿಗೆ ಬದರಿಗೆ ತೆರಳಿದ್ದನ್ನು ಈ ನುಡಿಯಲ್ಲಿ ಉಲ್ಲೇಖಿಸಿದೆ. '......ಪದುಮನಾಭನ ಮುಖದಿ ತಿಳಿದು ಬ್ರಹ್ಮತ್ವವೈದಿದ......' –ಎಂಬುದಾಗಿ ಈ ಬಾರಿಯ ಶಾಸ್ತ್ರಶ್ರವಣದ ಬಳಿಕವೇ ಚತುರ್ಮುಖಪದವಿಯ ಪ್ರಾಪ್ತಿಯನ್ನು ತಿಳಿಸಲಾಗಿರುವ ಪ್ರಯುಕ್ತ ಇದು ಅವತಾರಕಾರ್ಯದ ಸಮಾಪ್ತಿಯ ಬಳಿಕ ಕೈಗೊಂಡ ಬದರಿಯಾತ್ರೆ ಎಂದು ಸ್ಪಷ್ಟವಾಗುವುದು.

ಶ್ರೀಮಧ್ವರು ಈಗಲೂ ವೇದವ್ಯಾಸರ ಸನ್ನಿಧಿಯಲ್ಲಿ ಇರುವವರು.48

ದೇವತೆಗಳ ನೂರು ವರ್ಷಗಳು ಅಂದರೆ ಮನುಷ್ಯರ ಮೂವತ್ತಾರು ಸಾವಿರ ವರ್ಷಗಳು ಕಳೆದಾಗ ಆಚಾರ್ಯರು ಶ್ರೀಹರಿಯ ಆದೇಶಾನುಸಾರವಾಗಿ ತನ್ನ ಲೋಕದಲ್ಲಿರುವ ಮೂಲರೂಪದಿಂದ ಐಕ್ಯ ಹೊಂದುವವರು.49 ಕ್ರಮೇಣ ಬ್ರಹ್ಮಪದವಿಯನ್ನು ಪಡೆಯುವರು. ಅಷ್ಟು ವರ್ಷಗಳ ಅವಧಿಯಲ್ಲಿ ಶ್ರೀವೇದವ್ಯಾಸರಿಂದ ಅನಂತವೇದಗಳ ಅರ್ಥಗಳ ಶ್ರವಣ ನಡೆಸುತ್ತಿರುವವರು. ಇದೇ ವೇದವ್ಯಾಸರ ನಿಜವಾದ ಸೇವೆ.

- 'ಮುನೀನಾಮಪ್ಯಹಂ ವ್ಯಾಸಃ' –ಎಂದು ಗೀತಾಚಾರ್ಯ ಶ್ರೀವೇದವ್ಯಾಸರನ್ನು ಮುನಿಗಳಲ್ಲಿ ಶ್ರೇಷ್ಠರಾದ ಪ್ರತ್ಯಕ್ಷವಿಭೂತಿರೂಪವಾಗಿ ಪರಿಗಣಿಸಿರುವುದರಿಂದ, '.......ಶ್ರೀಮದ್ಭಾಗವತೇ ಮಹಾಮುನಿಕೃತೇ.....' –ಎಂದು ಭಾಗವತದಲ್ಲೂ ಭಾಗವತದ ಕರ್ತೃಗಳಾದ ವೇದವ್ಯಾಸರನ್ನು ಮುನಿಗಳೆಂದು ಕರೆದಿರುವುದರಿಂದ 'ವ್ಯಾಸಮುನಿ' –ಎಂಬ ಉಲ್ಲೇಖ ಅನುಚಿತ ಎನಿಸದು.

ಆದರೆ ವ್ಯಾಸರನ್ನು 'ಮುನಿ' ಎಂದದ್ದು 'ಕಶ್ಚನ ಋಷಿ' –ಎಂಬ ಅಭಿಪ್ರಾಯದಲ್ಲಿ ಅಲ್ಲ ಎಂದು ಸ್ಪಷ್ಟಪಡಿಸುವುದಕ್ಕಾಗಿಯೇ 'ಪದುಮನಾಭನ ಮುಖದಿ.....' –ಎಂಬುದಾಗಿ ವೇದವ್ಯಾಸರನ್ನು ಪದ್ಮನಾಭನನ್ನಾಗಿಯೇ ಗುರುತಿಸಿಕೊಡಲಾಗಿದೆ.

- 'ಅಭಿಜ್ಞಃ' ಎಂಬಲ್ಲಿ ಹೇಗೋ ಹಾಗೆ 'ಅಭಿವಂದಿಪೆ' –ಎಂಬುದಕ್ಕೆ ಸರ್ವತೋಮುಖವಾಗಿ ವಂದಿಪೆ ಎಂಬ ಅರ್ಥ. ದೈಹಿಕವಾಗಿ, ವಾಚಿಕವಾಗಿ ಹಾಗೂ ಮಾನಸಿಕವಾಗಿ –ಹೀಗೆ ತ್ರಿಕರಣಪೂರ್ವಕವಾದ ವಂದನೆಯೇ ಸರ್ವತೋಮುಖವಾದ ವಂದನೆ; ಅದೇ ಅಭಿವಂದನೆ.

**ಜಯಜಯತು ಜಗನ್ನಾಥ ಮಧ್ವನಾಥ:**

**ಜಯಜಯತು ದುರ್ವಾದಿಮತತಿಮಿರಮಾರ್ತಾಂಡ**
**ಜಯಜಯತು ವಾದಿಗಜಪಂಚಾನನ ।**
**ಜಯಜಯತು ಚಾರ್ವಾಕಗರ್ವಪರ್ವತಕುಲಿಶ**
**ಜಯಜಯ ಜಗನ್ನಾಥ ಮಧ್ವನಾಥ ॥ ೨೭ ॥**

48. .......ಪಿಂಗಲಾಬ್ದೇ ಮಾಘಶುದ್ಧನವಮ್ಯಾಂ ಬದರೀಂ ಯಯೌ । ಅಣುಮಧ್ವಚರಿತಮ್.

49. ಅದ್ಯಾಪಿ ಬದರೀಶೈಲೇ ಬದರೀಷಂಡಮಂಡಿತೇ ।
ಮಧ್ಯೇ ಮುನೀನಾಮಧ್ಯಾಸ್ತೇ ವಿದ್ವಾನ್ ವ್ಯಾಸಸ್ಯ ಸನ್ನಿಧೌ ॥
*– ಸರಸಭಾರತೀವಿಲಾಸ 7-10.*

ಕೆಟ್ಟ ವಾದಿಗಳ ಮತವೆಂಬ ಕತ್ತಲೆಗೆ ಸೂರ್ಯನಾಗಿರುವ, ದುರ್ವಾದಿಗಳೆಂಬ ಆನೆಗಳಿಗೆ ಸಿಂಹನಾಗಿರುವ, ಚಾರ್ವಾಕರ ದುರಭಿಮಾನ ಎಂಬ ಬೆಟ್ಟಕ್ಕೆ ವಜ್ರಾಯುಧ ನಾಗಿರುವ ಶ್ರೀಮಧ್ವರು ಮತ್ತೆಮತ್ತೆ ಜಯಿಸುವಂತಾಗಲಿ! ಮಧ್ವನಾಥನಾದ ಜಗನ್ನಾಥನೂ ಜಯಿಸುವಂತಾಗಲಿ!

**ವಿವರಣೆ:** ಈ ಹಾಡಿನ ಪಲ್ಲವಿಯನ್ನು ವ್ಯಾಖ್ಯಾನಿಸುವಾಗ ನಿತ್ಯ ಜಯಶಾಲಿಗಳಾದ ದೇವರ ಬಗ್ಗೆ, ವಾಯುದೇವ ಮುಂತಾದ ದೇವರ ಭಕ್ತರ ಬಗ್ಗೆ ನಡೆಸಲಾಗುವ 'ಜಯಾಶಂಸನೆ'ಯ ಆಂತರ್ಯ ಅವರು ನಿತ್ಯ ಜಯಶಾಲಿಗಳಾಗಿದ್ದಾರೆಂಬುದು ನಮಗೆ ತಿಳಿಯುವಂತಾಗಲಿ –ಎಂದು ಪ್ರಾರ್ಥಿಸಿಕೊಳ್ಳುವುದೇ ಆಗಿದೆ. ಅವರ ಪಾಲಿನ ಜಯ ಎಂದರೆ ಉತ್ಕರ್ಷ, ಹೆಚ್ಚುಗಾರಿಕೆ ಎಂದೇ ಅರ್ಥ. ಅಂತಹ ಅವರ ಉತ್ಕರ್ಷ ನಮಗೆ ಚೆನ್ನಾಗಿ ತಿಳಿಯಿತೆಂದರೆ ಅವರಲ್ಲಿ ಅಧಿಕಾಧಿಕ ಭಕ್ತಿ, ಜ್ಞಾನಗಳನ್ನು ತಳೆಯಲಾಗುವುದು. ಅವರ ಶಾಸ್ತ್ರದಲ್ಲಿ ಹೆಚ್ಚುಹೆಚ್ಚು ವಿಶ್ವಾಸ, ಅಭಿಮಾನ ತಾಳುವಂತಾಗುವುದು. ಅದಕ್ಕಾಗಿಯೇ ಅವರ ಜಯ, ಉತ್ಕರ್ಷ ನಮಗೆ ತಿಳಿಯುವಂತಾಗಲಿ –ಎಂದು ಮತ್ತೆ ಮತ್ತೆ ಪ್ರಾರ್ಥಿಸ ಲಾಗುವುದು. ಯಾವುದಾದರೊಂದು ಪ್ರಮೇಯದಲ್ಲಿ ತುಂಬ ತಾತ್ಪರ್ಯವಿದೆ ಎಂದಲ್ಲಿ ಅದನ್ನು ಮತ್ತೆಮತ್ತೆ ಹೇಳಲಾಗುವುದು. ಲೋಕದಲ್ಲೂ, ವೇದದಲ್ಲೂ ಇರುವ ಕ್ರಮ ಇದಾಗಿದೆ.[50] ಇದಕ್ಕನುಗುಣವಾಗಿ ಶ್ರೀಪಾದರಾಜರು 'ಜಯ' 'ಜಯತು' –ಎಂದು ಮತ್ತೆಮತ್ತೆ ಹೇಳಿರುವರು.

- 'ದುರ್ವಾದಿಮತತಿಮಿರಮಾರ್ತಾಂಡ' –ಎಂದು ಉಲ್ಲೇಖಿಸಿ, ಜಯಾಶಂಸನೆ ನಡೆಸಿದರೆ ದುರ್ವಾದಿಮತತಿಮಿರಮಾರ್ತಾಂಡವ್ಯಕ್ತಿತ್ವದ ಉತ್ಕರ್ಷ ನಮಗೆ ತಿಳಿಯುವಂತಾಗಲಿ –ಎಂಬ ಆಶಯ. ಶ್ರೀಮಧ್ವರು 'ದುರ್ವಾದಿಮತತಿಮಿರಮಾರ್ತಾಂಡ'ರು ಎಂಬ ವಿಷಯ ನಮಗೆ ಚೆನ್ನಾಗಿ ಮನವರಿಕೆಯಾಯಿತೆಂದರೆ ದುರ್ವಾದಿಮತದ ಕತ್ತಲ ವಿರುದ್ಧ ಜಾಗರೂಕರಾಗಿರಲು ಬೇಕಾದ ಸ್ಫೂರ್ತಿ ದೊರಕುವುದು. ಅದಕ್ಕಾಗಿ ಅಂತಹ ವ್ಯಕ್ತಿತ್ವದ ಮಧ್ವರಿಗೆ ಜಯವಾಗಲಿ, ಅಂದರೆ ಆ ಬಗೆಯ ಉತ್ಕರ್ಷ ನಮಗೆ ಮನವರಿಕೆಯಾಗುವಂತಾಗಲಿ ಎಂಬುದು ಜಯಾಶಂಸನೆಯ ಉದ್ದೇಶ.
- 'ವಾದಿಗಜಪಂಚಾನನ' –ಎಂದು ಉಲ್ಲೇಖಿಸಿ, ಜಯಾಶಂಸನೆ ನಡೆಸಿದ ಶ್ರೀಮಧ್ವರು ವಾದಿಗಜಸಿಂಹದ ವ್ಯಕ್ತಿತ್ವ ನಮ್ಮಿಂದ ಮತ್ತೆ ಮತ್ತೆ ತಿಳಿಯಲ್ಪಡಲಿ ಎಂಬುದು ಆಂತರ್ಯ. ಹಾಗೆ ತಿಳಿವಳಿಕೆ ಬಂದರೆ ಅಂತಹ ವಾದಿಗಳ ವಾದದ ಮೋಹದ ಬಲೆಗೆ ಬೀಳುವ ಪ್ರಸಂಗ ತಪ್ಪುವುದು.
- 'ಚಾರ್ವಾಕಗರ್ವಪರ್ವತಕುಲಿಶ' –ಎಂಬ ವಿಶೇಷಣದಿಂದಾಗಿ ಶ್ರೀಮಧ್ವರ ನಾಸ್ತಿಕ್ಯ ವಾದದ ನಿರಾಕರಣೆಯ ವ್ಯಕ್ತಿತ್ವವನ್ನು ಉಲ್ಲೇಖಿಸಿ ಜಯಾಶಂಸನೆ ಮಾಡಿದಂತಾಗು ವುದು. ಶ್ರೀಮಧ್ವರು ನಿರ್ದಿಷ್ಟವಾಗಿ ಚಾರ್ವಾಕಮತವನ್ನು ನಿರಾಕರಣೆ ಮಾಡದಿದ್ದರೂ

---

50. ಶರಚ್ಛತೇ ವ್ಯತೀತೇ ತು ದೇವಾನಾಮಾಜ್ಞಯಾ ಪ್ರಭೋಃ ।
ಏಕತಾಂ ಮೂಲರೂಪೇಣ ಲೋಕೇ ಸ್ವೀಯೇ ಗಮಿಷ್ಯತಿ ॥ *–ಸ.ಭಾರ.ವಿ. 7-25.*

ಹರಿಸರ್ವೋತ್ತಮತ್ವದ ಸಮರ್ಥನೆಯನ್ನು ಪ್ರಬಲವಾಗಿ ನಡೆಸಿದ್ದರಿಂದ ಅದಕ್ಕೆ ವಿರುದ್ಧ ವಾದ ಚಾರ್ವಾಕಮತವೆಂಬ ಪರ್ವತದ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿ ದಂತಾಗುವುದು.

- ಕೊನೆಯಲ್ಲಿ 'ಜಗನ್ನಾಥ'ನನ್ನು ಮಧ್ವನಾಥನನ್ನಾಗಿ ಉಲ್ಲೇಖಿಸಿ, ಶಯಾಶಂಸನೆ ಮಾಡಿದ್ದರಿಂದ ಜಗನ್ನಾಥನಿಗೂ ಶ್ರೀಮಧ್ವರಿಗೂ ಇರುವ ಸ್ವಾಮಿಭೃತ್ಯಭಾವದ ನಂಟಿನ ಅರಿವು, ಪ್ರಜ್ಞೆ ದೃಢವಾಗುವಂತೆ ಕೇಳಿಕೊಂಡಂತಾಗುವುದು. ಜಗನ್ನಾಥ ಮಧ್ವನಾಥ ನಾಗಿರುವುದರಿಂದಲೇ ಶ್ರೀಮಧ್ವರು 'ದುರ್ವಾದಿಮತತಿಮಿರಮಾರ್ತಾಂಡ' 'ವಾದಿಗಜ ಪಂಚಾನನ' ಹಾಗೂ 'ಚಾರ್ವಾಕಗರ್ವಪರ್ವತಕುಲಿಶ'ರಾಗಿ ಮೆರೆಯುತ್ತಿರುವರೆಂಬುದು ಸೂಚಿತ.

## ಭಂಗವಿಲ್ಲದ ಸುಖವ ಕೊಡುವ ರಂಗವಿಟ್ಠಲ:

**ತುಂಗಕುಲಗುರುವರನ ಹೃತ್ಕಮಲದೊಳು ನೆಲೆಸಿ**
**ಭಂಗವಿಲ್ಲದ ಸುಖವ ಸುಜನಕೆಲ್ಲ**
**ಹಿಂಗದೆ ಕೊಡುವ ಗುರುಮಧ್ವಾಂತರಾತ್ಮಕ**
**ರಂಗವಿಟ್ಠಲನೆಂದು ನೆರೆ ನಂಬಿರೋ** || ೨೮ ||

**ತುಂಗ -ಎತ್ತರದ, ಅಂದರೆ ಶ್ರೇಷ್ಠ, ಕುಲಗುರುವರನ -ಜ್ಞಾನಿಪರಂಪರೆಯ ಶ್ರೇಷ್ಠಗುರುಗಳಾದ ಶ್ರೀಮಧ್ವರ ಹೃದಯಕಮಲದಲ್ಲಿ ವಿಶೇಷವಾಗಿ ನೆಲೆಸಿ, ಅವರ ಮೂಲಕ ತತ್ವಜ್ಞಾನದ ಬೆಳಕು ಹಾಯಿಸಿ, ಆ ತತ್ತ್ವಜ್ಞಾನಕ್ಕನುಗುಣವಾಗಿ ದೊರೆ ಯುವ ಮೋಕ್ಷದಲ್ಲಿ ಕೊನೆಯಿಲ್ಲದ, ಅನಂತವಾದ ಸುಖವನ್ನು ಸಾತ್ವಿಕಜನರಿಗೆಲ್ಲ ಹಿಂಗದೆ- ಹಿಂದೆ ಸರಿಯದೆ, ಕಡಿಮೆ ಮಾಡದೆ ಕೊಡುವ ಗುರುಮಧ್ವಾಂತರಾತ್ಮಕ ರಂಗ ವಿಟ್ಠಲನೆಂದು ನಂಬಿರೋ -ಎಂದು ಮೋಕ್ಷದಲ್ಲಿ ಆನಂದ ನೀಡುವವನು ರಂಗವಿಟ್ಠಲ ನೆಂದು ನಂಬಲು ಕರೆ ನೀಡಲಾಗಿದೆ.**

**ವಿವರಣೆ:** ಮಧ್ವನಾಮದ ಉಪಸಂಹಾರಾತ್ಮಕವಾಗಿರುವ ಈ ಪದ್ಯದಲ್ಲಿ ಮಧ್ವನಾಮ ಹಾಡಿನ ಫಲಶ್ರುತಿಯಂತಿದೆ. ಶ್ರೀಮಧ್ವಾಂತರ್ಗತ ರಂಗವಿಟ್ಠಲ ಮೋಕ್ಷಸುಖವನ್ನು ನೀಡು ವನೆನ್ನಲಾಗುವ ಈ ಪದ್ಯದ ಅಂತರ್ಯ ಮಧ್ವನಾಮದ ಇಪ್ಪತ್ತೇಳು ನುಡಿಗಳಲ್ಲಿ ನಿರೂಪಿ ಸಿದಂತೆ ಶ್ರೀಮಧ್ವಗುರುಗಳ ಗುಣಮಹಿಮೆಗಳನ್ನು ತಿಳಿದರೆ ಅದರಿಂದ ಪ್ರಸನ್ನನಾಗುವ ಮಧ್ವಾಂತರ್ಗತ ರಂಗವಿಟ್ಠಲನಿಂದ ಮೋಕ್ಷಸುಖ ದೊರಕುವುದು –ಎಂದು.

- 'ಹೃತ್ಕಮಲದೊಳು ನೆಲೆಸಿ' 'ಗುರುಮಧ್ವಾಂತರಾತ್ಮಕ' –ಎಂದು ಎರಡು ಬಾರಿ ಶ್ರೀಮಧ್ವರ ಹೃದಯದಲ್ಲಿ ರಂಗವಿಟ್ಠಲ ನೆಲೆಸಿರುವುದನ್ನು ಈ ನುಡಿಯಲ್ಲಿ ಹೇಳಿ ದಂತಿದೆ.

ಆದರೆ, 'ಗುರುಮಧ್ವಾಂತರಾತ್ಮಕ ರಂಗವಿಟ್ಠಲನೆಂದು' –ಎಂಬ ಮಾತಿನಲ್ಲಿ ಮೋಕ್ಷ ಕೊಡುವ ರಂಗವಿಟ್ಠಲನನ್ನು ಗುರುಮಧ್ವಾಂತರ್ಗತನನ್ನಾಗಿ ತಿಳಿದುಕೊಳ್ಳಬೇಕೆಂದು ರಂಗ

ವಿಟ್ಠಲನನ್ನು ತಿಳಿದುಕೊಳ್ಳುವ ವಿಧಾನವನ್ನಾಗಿ ತಿಳಿಸಲಾಗಿದೆ. ಉದ್ಧವಗೀತೆಯಲ್ಲಿ 'ವಾಯೌ ಮುಖ್ಯಧಿಯಾ.....' ವಾಯುರೇವ ರುದ್ರಾದಿದೇವತೆಗಳಿಗಿಂತೆಲ್ಲ ಉತ್ತಮನಾಗಿರು ವನೆಂದು ವಿಶ್ಲೇಷಿಸಿಕೊಂಡು ಅಂತಹ ವಾಯುದೇವನಿಗಿಂತಲೂ ಉತ್ತಮ ಪರಮಾತ್ಮನಾಗಿರು ವನೆಂದು ದೇವರನ್ನು ತಿಳಿದುಕೊಳ್ಳಬೇಕೆಂದು ಸಂದೇಶಿಸಲಾಗಿದೆ.[51] ಈ ಸಂದೇಶಕ್ಕನುಗುಣ ವಾಗಿ 'ಮಧ್ವಾಂತರಾತ್ಮಕ ರಂಗವಿಟ್ಠಲ' –ಎಂದು ರಂಗವಿಟ್ಠಲನನ್ನು ತಿಳಿದುಕೊಳ್ಳಬೇಕಾದ ಬಗೆಯನ್ನು ಸಾರಲಾಗಿದೆ. 'ಗುರುವರನ ಹೃತ್ಕಮಲದೊಳು ನೆಲೆಸಿ..... ಸುಖವ ಕೊಡುವ' –ಎನ್ನುವ ಮಾತಿನಲ್ಲಿ 'ಗುರುದ್ವಾರಾ ಪ್ರಸಾದಕೃದಹಂ......' ಎಂದಿರುವಂತೆ ರಂಗವಿಟ್ಠಲ ಸುಜನರಿಗೆ ಮೋಕ್ಷವನ್ನೂ, ಮೋಕ್ಷಸುಖವನ್ನೂ ಗುರುಗಳಾದ ಶ್ರೀಮಧ್ವರ ಮೂಲಕ ಕೊಡಿಸುವನು; ಅಂದರೆ ಶ್ರೀಮಧ್ವರಿಂದ ಮೋಕ್ಷಗಳಿಕೆಗೆ ಬೇಕಾದ ತತ್ವಜ್ಞಾನವನ್ನೂ, ಭಕ್ತಿಯನ್ನೂ ಕೊಡಿಸಿ ಅವುಗಳ ಫಲವಾಗಿ ಮೋಕ್ಷವನ್ನು ಕೊಡುವನು –ಎಂದು ಮಧ್ವರ ಮಾಧ್ಯಮದಲ್ಲಿ ಮೋಕ್ಷದ ಹಾಗೂ ಮೋಕ್ಷಸುಖದ ವಿತರಣೆ ನಡೆಯುವುದೆಂಬುದನ್ನು ತಿಳಿಸಲಾಗಿದೆ. ಅಂದರೆ ದೇವರನ್ನು ಅರಿಯುವುದಕ್ಕೂ, ಅರಿತ ದೇವರಿಂದ ಫಲವನ್ನು ಪಡೆಯುವುದಕ್ಕೂ ಶ್ರೀಮಧ್ವರನ್ನು ಆಶ್ರಯಿಸಬೇಕು ಎಂದಂತಾಗುವುದು.

- ರಂಗವಿಟ್ಠಲ ಕೊಡುವ ಸುಖ ಸಾಂಸಾರಿಕಸುಖವಲ್ಲ; ಮೋಕ್ಷಸುಖ –ಎಂದು ಸ್ಪಷ್ಟಪಡಿ ಸುವುದಕ್ಕಾಗಿ ಸುಖಕ್ಕೆ 'ಭಂಗವಿಲ್ಲದ' –ಎಂಬ ವಿಶೇಷಣವನ್ನೂ 'ಹಿಂಗದೆ ಕೊಡುವ' ಎಂದು ಕ್ರಿಯಾವಿಶೇಷಣವನ್ನೂ ನೀಡಲಾಗಿದೆ. ಸಾಂಸಾರಿಕಸುಖ ಯಾವುದಾದ ರೊಂದು ಪ್ರಾಕೃತಪದಾರ್ಥದ ಭೋಗದ ಪರಿಣಾಮವಾಗಿದ್ದು, ಆ ಭೋಗ ಮುಗಿದಾ ಕ್ಷಣ ಭಂಗಕ್ಕೊಳಗಾಗುವುದು. ಮೋಕ್ಷಸುಖವಾದರೂ ಗುಣಮಯಸ್ವರೂಪದ ಅನು ಭವವಾಗಿ ಇರುವುದರಿಂದ ಅದಕ್ಕೆ ಎಂದೂ ಭಂಗವಿಲ್ಲ. 'ಭಂಗವಿಲ್ಲದ ಸುಖ' ಅದೆ ನಿಸುವುದು.

'ಸ್ವಗುಣಾಚ್ಛಾದಿತಾ' –ಎಂಬ ಪ್ರಕೃತಿಯ ಪರದೆಯನ್ನು ಸರಿಸಿ ಸ್ವರೂಪಸುಖದ ಪೂರ್ಣ ಅನುಭವ ಮುಕ್ತನಿಗೆ ಬರುವಂತೆ ಭಗವಂತನು ಅನುಗ್ರಹಿಸುವನು. ಇದನ್ನೇ 'ಹಿಂಗದೆ ಕೊಡುವ' ಎನ್ನಲಾಗಿದೆ.

- 'ರಂಗವಿಟ್ಠಲ' –ಎಂಬುದು ಶ್ರೀಪಾದರಾಜರ ಅಂಕಿತ. ತಮ್ಮ ಮೂಲಕ ಹೊರ ಹೊಮ್ಮಿದ ಯಾವುದೇ ಕೃತಿ ತಮ್ಮ ಅಂತರ್ಯಾಮಿಯ ಅನುಗ್ರಹದಿಂದಾಗಿಯೇ ಹೊರಹೊಮ್ಮಿದುದೆಂಬ ಅನುಸಂಧಾನದಿಂದ ತಮ್ಮ ಅಂತರ್ಯಾಮಿಗೆ ಸಂಬಂಧಿಸುವ ಅಂಕಿತವನ್ನು ಕೃತಿಯ ಉಪಸಂಹಾರದಲ್ಲಿ ಉಲ್ಲೇಖಿಸುವ ಕ್ರಮ ಬಂದಿದೆ. ಈ ಪದ್ಧತಿಗನುಗುಣವಾಗಿ ಶ್ರೀಪಾದರಾಜರು ಮಧ್ವನಾಮದ ಕೊನೆಯಲ್ಲಿ 'ರಂಗವಿಟ್ಠಲ' ನಾಮದಿಂದ ದೇವರನ್ನು ಉಲ್ಲೇಖಿಸಿರುವರಲ್ಲದೆ, ರಂಗವಿಟ್ಠಲನಾಮವು ಮಧ್ವರಲ್ಲಿ

---

51. ಯತ್ರಾಧಿಕಂ ತತ್ಪರತಾ ಬಹುವಾರಮಪಿ ಧ್ರುವಮ್ ।
ತದ್ ವದಂತಿ ಮಹಾಪ್ರಾಜ್ಞಾ ಲೋಕವೇದಾನುಸಾರತಃ ॥
*– ಬ್ರಹ್ಮತರ್ಕ (ಭಾಗ.ತಾ.ನಿ. 1-12-32)*

ಅಂತರ್ಯಾಮಿಯಾಗಿದ್ದು ಅವರ ವ್ಯಕ್ತಿತ್ವವನ್ನು ಬೆಳಗಿಸುವುದರಲ್ಲಿ ರಂಗವಿಟ್ಠಲನ ಪಾತ್ರವನ್ನು ಸಾರುತ್ತಿರುವುದು ಕೂಡಾ.

'**ರಗಿ ಗತೌ**' ಧಾತುವಿನಿಂದ ನಿಷ್ಪನ್ನವಾಗಿರುವ ರಂಗನಾಮವು '**ರಂಗಂತ್ಯಸ್ಮಿನ್ ಜ್ಞಾನಿನಾಂ ಮನಾಂಸಿ ಇತಿ ರಂಗಃ**' –ಎಂಬುದಾಗಿ ಜ್ಞಾನಿಗಳ ಮನಸ್ಸನ್ನು ಸೂರೆಗೊಳ್ಳುವ ವ್ಯಕ್ತಿತ್ವವನ್ನು ಸಾರುತ್ತಿದೆ. ಆದುದರಿಂದಲೇ ಜ್ಞಾನಿಶ್ರೇಷ್ಠರಾದ ಮಧ್ವರ ಮನಸ್ಸಿಗೆ ಸ್ಥಿರ ನೆಲೆ ಆಗಿರುವವನು 'ರಂಗವಿಟ್ಠಲ'. ಹೀಗೆ ಮಧ್ವರು ಯಾವಾಗಲೂ ರಂಗವಿಟ್ಠಲನಿಂದ ಆಕರ್ಷಿತರಾಗಿ ಅವನನ್ನೇ ನೆನೆಯುತ್ತಿರುವುದರಿಂದ ಅವರಿಗೆ ವಿಶೇಷವಾಗಿ ಆಶ್ರಯನಾಗಿರುವವನು 'ರಂಗವಿಟ್ಠಲ' ಎಂದು ವಿಟ್ಠಲನಾಮವು ಸೂಚಿಸಿಕೊಡಬಲ್ಲದು. ವಿತ್ + ಸ್ಥಲ ವಿಟ್ಠಲ –ವಿತ್ ಎನಿಸಿರುವ ಜ್ಞಾನಿಗಳಿಗೆ ನಿಧಿಯಾಗಿರುವವನೇ ವಿಟ್ಠಲ.

ಹೀಗೆ ರಂಗವಿಟ್ಠಲನಾಮವು ರಂಗವಿಟ್ಠಲನು ಶ್ರೀಮಧ್ವರಿಂದ '**ಸಂತತಂ ಚಿಂತಯೇಽನಂತಂ......**' –ಎಂದಿರುವಂತೆ ಕ್ಷಣಕಾಲ ಬಿಡದೆ ನೆನೆಯಲ್ಪಡುವವನಾಗಿ, ಅವರಿಗೆ ವಿಶೇಷವಾಗಿ ಆಶ್ರಯನಾಗಿದ್ದು ಅವರ ವ್ಯಕ್ತಿತ್ವವನ್ನು ಅರಳಿಸುವವನು ಎಂದು ಪ್ರತಿಪಾದಿಸಬಲ್ಲದು.

ಆದ್ದರಿಂದ ಮಧ್ವನಾಮದ ಇಪ್ಪತ್ತೇಳು ನುಡಿಗಳಲ್ಲಿ ಪ್ರತಿಪಾದಿಸಲಾದ ಶ್ರೀಮಧ್ವರ ಮೂಲರೂಪಕ್ಕೂ ಇತರ ರೂಪಗಳಿಗೂ, ಈ ರೂಪಕ್ಕೂ ಸಂಬಂಧಿಸುವ ಎಲ್ಲ ಲೀಲೆಗಳನ್ನು, ಮಹಿಮೆಗಳನ್ನು 'ರಂಗವಿಟ್ಠಲ' ನಾಮರೂಢವಾಗಿ ಚಿಂತಿಸಬೇಕು.

- 'ಮಧ್ವನಾಮ'ದ ಕೊನೆಯ 'ನೆರೆ ನಂಬಿರೋ' –ಎಂಬ ಮಾತು ಬರೇ ಇಪ್ಪತ್ತೆಂಟನೆಯ ಪದ್ಯದಲ್ಲಿ ಪ್ರಸ್ತುತನಾದ ಮಧ್ವಾಂತರ್ಗತ ರಂಗವಿಟ್ಠಲನೇ ಮೋಕ್ಷಸುಖಪ್ರದನಾಗಿರುವವನೆಂಬ ಪ್ರಮೇಯಕ್ಕಷ್ಟೇ ಸಂಬಂಧಿಸದೆ ಹಿಂದಿನ ಇಪ್ಪತ್ತೇಳು ನುಡಿಗಳಲ್ಲಿ ಪ್ರಸ್ತುತಗಳಾದ ಪ್ರತಿಯೊಂದು ಪ್ರಮೇಯಕ್ಕೂ ಸಂಬಂಧಿಸುವಂತಹದ್ದು. ಅಂದರೆ ಮಧ್ವನಾಮದಲ್ಲಿ ತಿಳಿಸಲಾದ ಒಂದೊಂದು ಪ್ರಮೇಯವೂ ಶಾಸ್ತ್ರರೂಪ ಪ್ರಮಾಣದಿಂದ ಪ್ರಮಿತವಾದದ್ದು. ಬರೇ ಭಾವುಕತೆಗೆ ಒಳಗಾಗಿ ಹೇಳಲ್ಪಟ್ಟದ್ದಲ್ಲ. ಆದುದರಿಂದ ಪ್ರತಿಯೊಂದು ಪ್ರಮೇಯವನ್ನೂ ಚೆನ್ನಾಗಿ ನಂಬಬೇಕು. ಹಾಗಾದರೆ ಮಾತ್ರ ಶ್ರೀಮಧ್ವರ, ಅವರ ಇತರ ರೂಪಗಳ, ಮತ್ತು ಮೂಲರೂಪವಾದ ಮುಖ್ಯಪ್ರಾಣನ ಸ್ವರೂಪದ ಬಗ್ಗೆ ಹಾಗೂ ಮಧ್ವರು ಪ್ರಚುರಪಡಿಸಿರುವ ತತ್ತ್ವಜ್ಞಾನದ ಬಗ್ಗೆ ಪೂರ್ಣಪ್ರಮಾಣದ ವಿಶ್ವಾಸ ಮೂಡಬಲ್ಲದು. ಇದರಿಂದಾಗಿ ಮಾಧ್ವತತ್ತ್ವಜ್ಞಾನವನ್ನು ಚೆನ್ನಾಗಿ ಜೀವನದಲ್ಲಿ ಅಳವಡಿಸಿಕೊಳ್ಳಲು ಸಾಧ್ಯವಾಗುವುದು.

*

# ಹರಿದಾಸ ಸಾಹಿತ್ಯದಲ್ಲಿ

# • ಮುಖ್ಯಪ್ರಾಣನ ಪ್ರಸ್ತಾವ •

ಹರಿದಾಸರಲ್ಲಿ ಒಬ್ಬಿಬ್ಬರನ್ನು ಬಿಟ್ಟರೆ ಉಳಿದೆಲ್ಲರೂ ಮಾಧ್ವಸಿದ್ಧಾಂತಾವಲಂಬಿಗಳಾಗಿದ್ದು, ಅಂತಹ ಮಾಧ್ವಸಿದ್ಧಾಂತದಲ್ಲಿ ಒಪ್ಪಿಕೊಂಡಿರುವಂತೆ ಮುಖ್ಯಪ್ರಾಣನನ್ನು ತಮ್ಮ ಮೂಲಗುರುವನ್ನಾಗಿ ನಂಬಿದವರು. ಆದುದರಿಂದಲೇ ಹರಿದಾಸ ಸಾಹಿತ್ಯದಲ್ಲಿ ದೇವರ ವಿಷಯದ ಬಳಿಕ ಅಧಿಕ ಪ್ರಮಾಣದ ಸಾಹಿತ್ಯ ಪ್ರಾಣದೇವ ಹಾಗೂ ಅವನ ಅವತಾರಗಳ ಕುರಿತಾದದ್ದು.

- ಶ್ರೀ ಜಗನ್ನಾಥದಾಸರ ಹರಿಕಥಾಮೃತಸಾರದ ನೂರಕ್ಕಿಂತಲೂ ಅಧಿಕ ಪದ್ಯಗಳಲ್ಲಿ ಪ್ರಾಣದೇವನ ಪರಿಚಯ, ಸಾಧನೆ, ಸ್ತುತಿ, ಪ್ರಸ್ತಾವ ಬಂದಿದೆ. ಅವುಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.
- ಹೆಚ್ಚಿನ ಹರಿದಾಸರು ಮುಖ್ಯಪ್ರಾಣನ ಮೂಲರೂಪದ ಕುರಿತೂ, ಅವತಾರರೂಪಗಳ ಕುರಿತೂ ಹಾಡುಗಳನ್ನು ರಚಿಸಿದ್ದು ಅವುಗಳಲ್ಲಿ ಶ್ರೀಪಾದರಾಜರು, ವ್ಯಾಸತೀರ್ಥರು, ವಾದಿರಾಜತೀರ್ಥರು, ಪುರಂದರದಾಸರು, ಕನಕದಾಸರು, ವಿಜಯದಾಸರು, ಗೋಪಾಲ ದಾಸರು ಹಾಗೂ ಜಗನ್ನಾಥದಾಸರು ಇವರು ರಚಿಸಿರುವ 100 ಪದ್ಯಗಳ ಸ್ಥೂಲ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ.
- ಮುಖ್ಯಪ್ರಾಣನ ಹಾಗೂ ಅವನ ಅವತಾರಗಳ ಕುರಿತಾದ ೧೪ ಸುಳಾದಿಗಳ ಸ್ಥೂಲ ಪರಿಚಯವನ್ನು ಇಲ್ಲಿ ಒದಗಿಸಲಾಗಿದೆ.
- ಮುಖ್ಯಪ್ರಾಣನ ಹಾಗೂ ಅವನ ಅವತಾರಗಳ ಕುರಿತಾದ ೮ ಉಗಾಭೋಗಗಳನ್ನೂ ಇಲ್ಲಿ ಕ್ರೋಡೀಕರಿಸಲಾಗಿದೆ.

## ಹರಿಕಥಾಮೃತದಲ್ಲಿ ಪ್ರಾಣದೇವ

ಹರಿಕಥಾಮೃತಸಾರದ 32 ಸಂಧಿಗಳ 985 ಪದ್ಯಗಳಲ್ಲಿ ನೂರಕ್ಕಿಂತಲೂ ಹೆಚ್ಚಿನ ಪದ್ಯಗಳಲ್ಲಿ ಪ್ರಾಣದೇವನ ಪರಿಚಯ, ಸ್ತುತಿ, ಪ್ರಸ್ತಾವ ಬಂದಿದೆ. ಅಲ್ಲಲ್ಲಿ ವಿಕ್ಷಿಪ್ತವಾಗಿ ಬಂದಿರುವ ಪ್ರಾಣದೇವನ ವಿಚಾರವನ್ನು ಚಿಂತನೆ ನಡೆಸಲು, ಅನುಸಂಧಾನ ಮಾಡಲು ಅನುಕೂಲವಾಗುವಂತೆ ೧) ಶ್ರೀಪ್ರಾಣದೇವನ ವ್ಯಕ್ತಿತ್ವ ೨) ಪ್ರಾಣದೇವನ ತಾರತಮ್ಯದ ಕಕ್ಷೆ ಮತ್ತು ದತ್ತ ಸ್ವಾತಂತ್ರ್ಯ ೩) ಪ್ರಾಣದೇವನ ಸಾಧನೆ ೪) ಪ್ರಾಣದೇವನ ಶ್ವಾಸಜಪ ೫) ಸಾಧಕರ ಸಾಧನೆಯಲ್ಲಿ ಪ್ರಾಣದೇವನ ಪಾತ್ರ ೬) ಪ್ರಾಣದೇವನ ರೂಪಗಳು ೭) ಪ್ರಾಣ ದೇವನಲ್ಲಿರುವ ಭಗವದ್ರೂಪಗಳು –ಹೀಗೆ ಏಳು ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ.

## ೧) ಶ್ರೀಪ್ರಾಣದೇವನ ವ್ಯಕ್ತಿತ್ವ:

ಕಮಲಸಂಭವ ಪವನರೀರ್ವರು । ಸಮರು ಸಮವರ್ತಿಗಳು ರುದ್ರಾ
ದ್ಯಮರಗಣ ಸೇವಿತರ ಅಪರಬ್ರಹ್ಮನಾಮಕರು ॥
ಯಮಳರಿಗೆ ಮಹಲಕ್ಷ್ಮಿ ತಾನು । ತ್ತಮಳು ಕೋಟಿಸಜಾತಿ ಗುಣಗಳಿಂ ।
ದಮಿತಸಂವಿಜಾತ್ಯಧಮರೆನಿಪರು ಬ್ರಹ್ಮವಾಯುಗಳು ॥ ಸಂಧಿ ೨೦-೫

ಮಾತರಿಶ್ವಬ್ರಹ್ಮರು ಜಗ । ನ್ಮಾತೆಗಧಮಾಧೀನರೆನಿಪರು ।
ಶ್ರೀತರುಣಿ ವಲ್ಲಭನು ಈರ್ವರೊಳಾವಕಾಲದಲಿ ॥
ನೀತ ಭಕ್ತಿಜ್ಞಾನಬಲರೂ । ಪಾತಿಶಯದಿಂದಿದ್ದು ಚೇತಾ- ।
ಚೇತನಗಳೊಳು ವ್ಯಾಪ್ತರೆನಿಪರು ತತ್ತದಾಹ್ವಯದಿ ॥ ಸಂಧಿ ೨೧-೮

ಋಜುಗಣಕೆ ಭಕ್ತ್ಯಾದಿಗುಣ ಸ । ಹಜವೆನಿಸುವುವು ಕ್ರಮದಿ ವೃದ್ಧ್ಯಾ ।
ಬ್ಜಜಪದವಿಪರ್ಯಂತ ಬಿಂಬೋಪಾಸನವು ಅಧಿಕ ॥
ವೃಜನವರ್ಜಿತರಿವರೊಳಗೆ ತ್ರಿಗು । ಣಜ ವಿಕಾರಗಳಿಲ್ಲವೆಂದಿಗು ।
ದ್ವಿಜಫಣಿಪಮೃಡಶಕ್ರ ಮೊದಲಾದವರೊಳಿರುತಿಹವು ॥ ಸಂಧಿ ೨೩-೧೨

ಅನಿಳಸ್ಥಿತಿ ವೈರಾಗ್ಯನಿಧಿ ರೋ । ಚನ ವಿಮುಕ್ತಿಗಾನಂದ ದಶಮತಿ ।
ಅನಿಮಿಷೇಶಾನಿದ್ರ ಶುಚಿ ಸತ್ತ್ವಾತ್ಮಕ ಶರೀರ ॥
ಅಣುಮಹದ್ರೂಪಾತ್ಮಕಾಮೃತ । ಹನುಮದಾದ್ಯವತಾರ ಪದ್ಮಾ ।
ಸನಪದವಿಸಂಪ್ರಾಪ್ತ ಪರಿಸರ ಅಖಿಣಾತ್ಮಸಮ ॥ ಸಂಧಿ ೨೧-೭

ಪುರುಷ ಬ್ರಹ್ಮ ವಿರಿಂಚಿ ಮಾಹಾ । ನ್ಮರುತ ಮುಖ್ಯಪ್ರಾಣ ಧೃತಿ ಸ್ಮೃತಿ ।
ಗುರುವರ ಮಹಾಧ್ಯಾತ ಬಲ-ವಿಜ್ಞಾತ ವಿಖ್ಯಾತ ॥
ಗರಳಭುಗ್ಭವರೋಗಭೇಷಜ । ಸ್ವರವರಣವೇದಸ್ಥ ಜೀವೇ ।
ಶ್ವರ ವಿಭೀಷಣ ವಿಶ್ವಚೇಷ್ಟಕ ವೀತಭಯ ಭೀಮ ॥ ಸಂಧಿ ೨೧-೬

ಸತ್ಯ ಲೋಕಾಧಿಪನ ಹಿಡಿದು ಶ । ತಸ್ಥದೇವಗಣಾಂತ ಎಲ್ಲರು ।
ಭಕ್ತಿಯೋಗಿಗಳೆಂದು ಕರೆಸುವರಾವಕಾಲದಲಿ ॥
ಭಕ್ತಯೋಗ್ಯರ ಮಧ್ಯದಲಿ ಸ । ದ್ಭಕ್ತಿವಿಜ್ಞಾನಾದಿಗುಣದಿಂ ।
ದುತ್ತಮೋತ್ತಮ ಬ್ರಹ್ಮವಾಯೂ ವಾಣಿವಾಗ್ದೇವಿ ॥ ಸಂಧಿ ೨೩-೧೧

ಭಿನ್ನಭಕ್ತರು ಎನಿಸುತಿಹರು ಸು । ಪರ್ಣ ಶೇಷಾದ್ಯಮರರೆಲ್ಲಾ- ।
ಭಿನ್ನಭಕ್ತರು ನಾಲ್ವರೆನಿಪರು ಭಾರತೀ ಪ್ರಾಣ ।
ಸೊನ್ನೊಡಲ ವಾಗ್ದೇವಿಯರು ಪಣಿ । ಗಣ್ಣ ಮೊದಲಾದವರೊಳಗೆ ತ ।
ತ್ತನ್ನಿಯಾಮಕರಾಗಿ ವ್ಯಾಪಾರವನು ಮಾಡುವರು ॥ ಸಂಧಿ ೨೩-೧೪

ಈ ಸಮೀರಗೆ ನೂರು ಜನ್ಮ ಮ । ಹಾ ಸುಖಪ್ರಾರಬ್ಧ ಭೋಗ ಪ್ರ ।
ಯಾಸವಿಲ್ಲದಲೈದಿದನು ಲೋಕಾಧಿಪತ್ಯವನು ॥
ಭೂಸುರನ ಒಪ್ಪಿಡಿಯವಲಿಗೆ ವಿ । ಶೇಷಸೌಖ್ಯವನಿತ್ತುದಾತನ ।
ದಾಸವರ್ಯನು ಲೋಕಪತಿಯೆನಿಸುವುದು ಅಚ್ಚರಿಯೆ ॥ ಸಂಧಿ ೨೩-೩೧

ಜ್ಞಾನಭಕ್ತ್ಯಾದ್ಯಖಿಲಗುಣ ಚತು । ರಾನನೊಳಗಿಪ್ಪಂತೆ ಮುಖ್ಯ ।
ಪ್ರಾಣನಲಿ ಚಿಂತಿಪುದು ಯತ್ಕಿಂಚಿತ್ಕೊರತೆಯಾಗಿ ॥
ನ್ಯೂನಋಜುಗಣಜೀವರಲ್ಲಿ ಕ್ರ । ಮೇಣ ವೃದ್ಧಿ ಜ್ಞಾನಭಕುತಿ ಸ ।
ಮಾನ ಭಾರತಿವಾಣಿಗಳಲಿ ಪದಪ್ರಯುಕ್ತಧಿಕ ॥ ಸಂಧಿ ೨೩-೩೭

ಮಹಿತಋಜುಗಣಕೊಂದೆ ಪರಮೋ । ತ್ಸಾಹ ವಿವರ್ಜಿತವೆಂಬ ದೋಷವು ।
ವಿಹಿತವೇ ಸರಿ ಇದನು ಪೇಳ್ದಿರಿ ಮುಕ್ತಬ್ರಹ್ಮರಿಗೆ ॥
ಬಹುದು ಸಾಮ್ಯವು ಜ್ಞಾನಭಕುತಿಯ । ದ್ರುಹಿಣಪದ ಪರಿಯಂತ ವೃದ್ಧಿಯು
ಬಹಿರುಪಾಸನೆಯುಂಟನಂತರ ಬಿಂಬದರ್ಶನವು ॥ ಸಂಧಿ ೨೩-೩೪

## ೨. ಪ್ರಾಣದೇವನ ತಾರತಮ್ಯ ಕಕ್ಷೆ ಮತ್ತು ದತ್ತ ಸ್ವಾತಂತ್ರ್ಯ

ವಿಷ್ಣು ಸರ್ವೋತ್ತಮನು ಪ್ರಕೃತಿ ಕ । ನಿಷ್ಠಳೆನಿಪನಂತಗುಣ ಪರ ।
ಮೇಷ್ಠಿ ಪವನರು ಕಡಿಮೆ ವಾಣೀಭಾರತಿಗಳಧಮ ॥ ಸಂಧಿ ೨೯-೧

ಘೋಟಕಾಸ್ಯನ ಮಡದಿಗಿಂದಲಿ । ಹಾಟಕೋದರ ಪವನರೀರ್ವರು ।
ಕೋಟಿಗುಣದಿಂದಧಮರೆನಿಸುವರಾವಕಾಲದಲಿ ॥ ಸಂಧಿ ೨೧-೫

ಪತಿಗಳಿಂದ ಸರಸ್ವತಿ ಭಾ । ರತಿಗಳಧಮರು ನೂರು ಗುಣ ಪರಿ ।
ಮಿತ ವಿಜಾತ್ಯವರರು ಬಲಜ್ಞಾನಾದಿಗುಣದಿಂದ ॥ ಸಂಧಿ ೨೧-೬

ಕಾಳಿ ಕಾಶಿಜೆ ವಿಪ್ರಜಾ ಪಾಂ । ಚಾಲಿ ಶಿವಕನ್ಯೇಂದ್ರಸೇನಾ ।
ಕಾಲಮಾನೀ ಚಂದ್ರ ದ್ಯುಸಭಾ ನಾಮ ಭಾರತಿಗೆ ॥
ಗಾಳಿಬ್ರಹ್ಮರ ಯುವತಿಯರು ಏ । ಳೇಳು ಐವತ್ತೊಂದು ಗುಣದಿಂ ।
ಕೀಳರೆನಿಪರು ತಮ್ಮ ಪತಿಗಳಿಂದಲಾವಾಗ ॥ ಸಂಧಿ ೨೧-೧೦

ಅಗಣಿತಸ್ವಾತಂತ್ರಿಯವ ನಾಲ್ಬಗೆ ವಿಭಾಗವ ಮಾಡಿ[1] ಒಂದನು ।

1. ಸ್ವಾತಂತ್ರ್ಯದ ಹಂಚಿಕೆ ಎಂದರೆ–
'ಸ್ವತಂತ್ರಮಸ್ವತಂತ್ರಂ ಚ ದ್ವಿವಿಧಂ ತತ್ವಮಿಷ್ಯತೇ' –ಸ್ವತಂತ್ರತತ್ವ ಅಸ್ವತಂತ್ರತತ್ವ ಎಂಬು ದಾಗಿ ತತ್ವದಲ್ಲಿ ಎರಡು ವಿಭಾಗಗಳನ್ನು ತತ್ವಸಂಖ್ಯಾನಗ್ರಂಥದಲ್ಲಿ ತೋರಿಸಿದ ಶ್ರೀ ಮಧ್ವ ಗುರುಗಳು ಮುಂದೆ 'ಸ್ವತಂತ್ರೋ ಭಗವಾನ್ ವಿಷ್ಣುಃ......' ಎಂದು ಸ್ವತಂತ್ರತತ್ವ ಶ್ರೀವಿಷ್ಣು ಮಾತ್ರ ಎಂದು ಸಾರಿರುವರು.

ಗೆದು ದಶವಿಧಗೈಸಿ ಪಾದರೆ ಪಂಚಪ್ರಾಣನಲಿ ॥ 'ಂಧಿ ೧೭-೪

ಸತ್ಯಲೋಕಾಧಿಪನೊಳಗೆ ಐ । ವತ್ತೆರಡು ಪವಮಾನನೊಳು ನಾ ।
ಲ್ವತ್ತು ಮೇಲೆಂಟಧಿಕ ಶಿವನೊಳಗಿಟ್ಟನಿಪ್ಪತ್ತು ॥

---

'ಸ್ವರೂಪ-ಪ್ರಮಿತಿ-ಪ್ರವೃತ್ತಿ ಲಕ್ಷಣಸತ್ತಾತ್ರೈವಿಧ್ಯೇ ಪರಾನಪೇಕ್ಷಂ ಸ್ವತಂತ್ರಮ್- ಸ್ವರೂಪದ, ತಿಳಿವಳಿಕೆಯ ಹಾಗೂ ಚಟುವಟಿಕೆಯ ವಿಷಯದಲ್ಲಿ ಬೇರೆ ಯಾರನ್ನೂ ಅಪೇಕ್ಷಿಸದೆ ಇರುವಂತಹದ್ದೇ ಸ್ವತಂತ್ರ ಎನಿಸಿದ್ದು ಯಾವುದೇ ವಿಷಯದಲ್ಲಿ ಇನ್ನಾರನ್ನೂ ಅಪೇಕ್ಷಿಸದೆಯೇ ಇರುವ ಭಗವಂತನೊಬ್ಬನೇ ಸ್ವತಂತ್ರ ಎನಿಸಲು ಸಾಧ್ಯವೇ ಹೊರತು ತಮ್ಮ ಸ್ವರೂಪ, ತಿಳಿವಳಿಕೆ, ಚಟುವಟಿಕೆ -ಇವುಗಳ ವಿಷಯದಲ್ಲಿ ಭಗವಂತನನ್ನು ಅವಲಂಬಿಸಿರುವ ಲಕ್ಷ್ಮೀದೇವಿಯೇ ಮೊದಲಾದ ಬೇರೆ ಯಾರೂ ಸ್ವತಂತ್ರ ಎನಿಸಲು ಸಾಧ್ಯವೇ ಇಲ್ಲ ಎಂಬುದನ್ನು ಶ್ರೀ ಜಯತೀರ್ಥ ಶ್ರೀಪಾದರು ಸ್ಪಷ್ಟಪಡಿಸಿರುವರು.

ಟೀಕಾಚಾರ್ಯರು ಸ್ವಾತಂತ್ರ್ಯದ ಸ್ವರೂಪವನ್ನು ಹೀಗೆ ಸ್ಪಷ್ಟಪಡಿಸಿರುವುದರಿಂದ ಅದು ವಿಭಜಿಸಿ, ವಿತರಿಸಲು ಬರುವ ಧರ್ಮವೂ ಅಲ್ಲ -ಎಂದೂ ಸ್ಫುಟಪಡಿಸಿದಂತಾಗುವುದು. ಸ್ವರೂಪಾದಿಗಳ ವಿಷಯದಲ್ಲಿ ಮತ್ತೊಬ್ಬರನ್ನು ಅವಲಂಬಿಸದಿರುವುದನ್ನು -ಅವಲಂಬಿಸಿರುವುದು, ಅವಲಂಬಿಸದೆ ಇರುವುದು -ಎಂದು ಎರಡು ವಿಭಾಗವಾಗಿ ವಿಂಗಡಿಸಬಹುದೇ ಹೊರತು ಸ್ವಲ್ಪ ಅವಲಂಬಿಸಿರುವುದು, ಸ್ವಲ್ಪ ಅವಲಂಬಿಸದೆ ಇರುವುದು -ಹೀಗೆಲ್ಲ ವಿಭಜನೆಗೆ ಅವಕಾಶವೇ ಇಲ್ಲ.

ಮಹಾಮೀಮಾಂಸೆಯ (ಬೃ.ಉ.ಭಾ.6-3-32) ಮೂಲಕ ಶ್ರೀ ಮಧ್ವರು ಹೀಗೆ ಘೋಷಿಸಿರುವರು-

ಪ್ರಕೃತೇಃ ಪುರುಷಾಣಾಂ ಚ ನಾಣುಮಾತ್ರಮಪಿ ಕ್ವಚಿತ್ ।
ಸ್ವಾತಂತ್ರ್ಯಂ ವಿಷ್ಣುನಾ ಸರ್ವೇ ನಿಯತಾಃ ಸರ್ವಥೈವ ಹಿ ॥

ಚಿತ್‌ಪ್ರಕೃತಿಗಾಗಲೀ ಚತುರ್ಮುಖಾದಿಗಳಿಗಾಗಲೀ ಶ್ರೀವಿಷ್ಣು ಎಂದೂ ಕಿಂಚಿತ್ ಪ್ರಮಾಣದಲ್ಲೂ ಸ್ವಾತಂತ್ರ್ಯವನ್ನು ನೀಡುವುದಿಲ್ಲ. ಆದುದರಿಂದಲೇ ಯಾವಾಗಲೂ ಲಕ್ಷ್ಮಿಯಿಂದ ಪ್ರಾರಂಭಿಸಿ ಪ್ರತಿಯೊಬ್ಬರೂ ಶ್ರೀವಿಷ್ಣುವಿನಿಂದ ನಿಯಮಿಸಲ್ಪಟ್ಟವರಾಗಿಯೇ ಇರುವರು.

ನ್ಯಾಯವಿವರಣದಲ್ಲಿ (3-2-1) ಉದಾಹರಿಸಲಾದ ಶ್ರುತಿಯೊಂದೂ- 'ಸ್ವಾತಂತ್ರ್ಯಾತ್ ಕ್ರೀಡತೇ ವಿಷ್ಣುರ್ನ ಚ ಸ್ವಾತಂತ್ರ್ಯಮನ್ಯಗಮ್ । ಕರೋತಿ ಕ್ವಾಪಿ.....' -ಶ್ರೀವಿಷ್ಣು ಸ್ವಾತಂತ್ರ್ಯ ಪ್ರಯುಕ್ತ ಸೃಷ್ಟ್ಯಾದಿಗಳ ಕ್ರೀಡೆಯನ್ನು ನಡೆಸುವನು. ತನ್ನ ಸ್ವಾತಂತ್ರ್ಯಧರ್ಮವನ್ನು ಎಂದೂ ಮತ್ತೊಬ್ಬರಿಗೆ ನೀಡುವುದಿಲ್ಲ -ಎಂದು ದೃಢವಾಗಿ ಸಾರಿದೆ.

ಹೀಗೆ ಭಗವಂತನ ಅಸಾಧಾರಣ ಧರ್ಮವಾದ ಸ್ವಾತಂತ್ರ್ಯವನ್ನು ಪಾಲು ಮಾಡಿ ಮತ್ತೊಬ್ಬರಿಗೆ ಹಂಚಲು ಬರುವುದಿಲ್ಲ -ಎಂದು ಶ್ರೀ ಮಧ್ವರು ತಾತ್ಪರ್ಯಪೂರ್ವಕವಾಗಿ ಪ್ರತಿಪಾದಿಸಿರುವುದರಿಂದ ಹರಿಕಥಾಮೃತಸಾರದಲ್ಲಿ 'ದತ್ತ ಸ್ವಾತಂತ್ರ್ಯ' ಮುಂತಾದ ಮಾತುಗಳಿಂದ ಸ್ವಾತಂತ್ರ್ಯದ ದಾನವು ಹೇಳಲ್ಪಡುವುದೇ ಅಲ್ಲ. ಬದಲಾಗಿ, ಸ್ವಾತಂತ್ರ್ಯಪೂರ್ವಕವಾದ ಕರ್ತೃತ್ವವು ಮುಖ್ಯವಾಗಿ ಭಗವಂತನಲ್ಲೇ ಇರುವುದಾದರೂ ಬ್ರಹ್ಮಸೂತ್ರದ ಕರ್ತೃತ್ವಾಧಿಕರಣದಲ್ಲಿ (2-3-17) ಸಿದ್ಧಾಂತಿಸಲ್ಪಟ್ಟಂತೆ, 'ಕರ್ತೃತ್ವಂ ........ಯತ್ಪ್ರಸಾದಾದಿಮೇ ಸಂತಿ...' ಪೈಂಗಿಶ್ರುತಿ (2-3-41) ಪ್ರತಿಪಾದಿಸುತ್ತಿರುವಂತೆ ಕರ್ತೃತ್ವವನ್ನು ಭಗವಂತನು ಹಂಚುವನು.

ಚಿತ್ತಜೇಂದ್ರರೊಳೈದಧಿಕ ದಶ ತತ್ತ್ವಮಾನಿಗಳೆನಿಪ ಸುರರೊಳು ।
ಹತ್ತು ಈರೈದಖಿಳ ಜೀವರೊಳಿಟ್ಟನಿರವದ್ಯ ॥ ಸಂಧಿ ೧೭-೨

ವಾಸುದೇವ ಸ್ವತಂತ್ರವ ಸರೋ । ಜಾಸನಾದ್ಯಮರಾಸುರರಿಗೀಯ ।
ಲೋಸುಗರ್ಧವ ತೆಗೆದದರೊಳರ್ಧವ ಚತುರ್ಭಾಗ ॥
ಗೈಸಿಯೊಂದನು ಶತವಿಧ ದ್ವಿಪಂ । ಚಾಶತಾಬ್ಜಜಗಷ್ಟಚತ್ವಾ ।
ರಿಂಶದನಿಲನಿಗಿತ್ತ ವಾಣೀಭಾರತಿಗರ್ಧ ॥ ಸಂಧಿ ೨೪-೧೧

ಸ್ವೋದರಸ್ಥಿತಪ್ರಾಣರುದ್ರೇಂ । ದ್ರಾದಿ ಸುರರಿಗೆ ದೇಹಗಳ ಕೊ ।
ಟ್ಟಾದರದಲವರವರ ಸೇವೆಯ ಕೊಂಬನನವರತ ॥ ಸಂಧಿ ೨೩-೪೯

ಶುದ್ಧ ಸತ್ವಾತ್ಮಕ ಶರೀರದೊ । ಳಿದ್ದ ಕಾಲಕು ಲಿಂಗದೇಹವು ।
ಬದ್ಧವಾಗದು ದಗ್ಧಪಟದೋಪಾದಿ ಇರುತಿಹುದು ॥
ಸಿದ್ಧ ಸಾಧನ ಸರ್ವರೊಳಗನವದ್ಯನೆನಿಸುವ ಗರುಡಶೇಷಕ- ।
ಪರ್ದಿ ಮೊದಲಾದಮರರೆಲ್ಲರು ದಾಸರೆನಿಸುವರು ॥ ಸಂಧಿ ೨೩-೧೮

ಗರುಡ ಶೇಷ ಭವಾದಿ ನಾಮವ । ಧರಿಸಿ ಪವನ ಸ್ವರೂಪದೇಹದಿ ।
ಕರುಣನಿಯ್ಯಾಮಕನು ತಾನಾಗಿಪ್ಪ ಹರಿಯಂತೆ ॥
ಸರಸಿಜಾಸನ ವಾಣಿ ಭಾರತಿ । ಭರತನಿಂದೊಡಗೂಡಿ ಲಿಂಗದ ।
ಲಿರುತಿಹರು ಮಿಕ್ಕಾದಿತೇಯರಿಗಿಲ್ಲವಾಸ್ಥಾನ ॥[1] ಸಂಧಿ ೯-೧೨

---

1. ಸ್ವರೂಪದೇಹದಲ್ಲೂ ಲಿಂಗದೇಹದಲ್ಲೂ ವಾಯುದೇವ

'ಗರುಡಶೇಷಭವಾದಿ.....' -ಎಂಬ ನುಡಿಯಲ್ಲಿ ತಿಳಿಸಿರುವಂತೆ ವಾಯುದೇವನು ಎಲ್ಲ ಜೀವರ ಸ್ವರೂಪದೇಹದಲ್ಲೂ ಇರುವನು. ಸ್ವರೂಪದೇಹದಲ್ಲಿ ಭಗವಂತನನ್ನು ಬಿಟ್ಟರೆ ಬೇರೆ ಯಾವುದೇ ದೇವತೆಗಳು ಇರುವುದಿಲ್ಲ. ಆದರೆ ವಾಯುದೇವನು ಇರುವನು. ನ್ಯಾಯ ವಿವರಣದಲ್ಲಿ (4-2-2) ಉದಾಹರಿಸಲಾದ ಶ್ರುತಿಯೊಂದು 'ಜೀವಸ್ಥಿತೇನ ರೂಪೇಣ ವೇದಯತ್ಯಹಮಿತ್ಯಪಿ। ಪ್ರಾಣ ಏಕೋವಶೀ....'-ಎಂದು ಮುಖ್ಯಪ್ರಾಣನು ಜೀವನ ಸ್ವರೂಪ ದಲ್ಲಿರುವ ತನ್ನ ರೂಪದಿಂದ ಅವನು ಅಹಂಪ್ರಜ್ಞೆಗೆ ಒಳಗಾಗುವಂತೆ ಮಾಡುವನೆಂದು ತಿಳಿಸಿದೆ. ಭಾಗವತತಾತ್ಪರ್ಯನಿರ್ಣಯದಲ್ಲಿ (7-2-45) ಉದಾಹರಿಸಲಾದ 'ಪ್ರಕಾಶಿಕಾ'- 'ಚಕ್ಷುರಾದ್ಯಂ ಮನೋ ಜೀವೋ ದೃಷ್ಟ್ಯಾದಿಶ್ಚಾಪಿ ಯದ್ವಶೇ । ಸ ಪ್ರಾಣ ಇತಿ ವಿಜ್ಞೇಯೋ ಜ್ಞಾತಾ ಮಂತಾ ಚ ಸ ಪ್ರಭುಃ ॥ -ಚಕ್ಷುರಾದಿ ಇಂದ್ರಿಯಗಳಂತೆ ಜೀವಸ್ವರೂಪವೂ ಮುಖ್ಯಪ್ರಾಣನ ಅಧೀನ; ಅವನೇ ಮುಖ್ಯವಾಗಿ ಜ್ಞಾತಾ, ಮಂತಾ ಎನಿಸಿದ್ದು ಅವನಿಂದಾಗಿ ಯಷ್ಟೇ ಜ್ಞಾತೃತ್ವ ಮಂತೃತ್ವ -ಜೀವರಲ್ಲಿ ಸಂಭವಿಸುವುದೆಂದು ತಿಳಿಸುವ ಮೂಲಕ ಜೀವನ ಸ್ವರೂಪ ಮುಖ್ಯಪ್ರಾಣನ ಅಧೀನ ಎಂದು ಸೂಚಿಸುತ್ತವೆ.

* ಹೀಗೆ ವಾಯುದೇವ ಜೀವರ ಸ್ವರೂಪದೇಹದಲ್ಲಿರುವುದಷ್ಟೇ ಅಲ್ಲದೆ, ಭಗವಂತನು ಹೇಗೆ 'ಬ್ರಹ್ಮಣಿ ಬ್ರಹ್ಮರೂಪೋಽಸೌ....' ಎಂದಿರುವಂತೆ ಆಯಾ ಜೀವರ ಬಿಂಬರೂಪಿ ಯಾಗಿ ಆಯಾ ಹೆಸರಿನಿಂದ ಇರುವನೋ ಅಂತೆಯೇ ವಾಯುದೇವನೂ 'ಗರುಡಶೇಷ

ವಾಣಿ ಭಾರತಿ ಕಮಲಭವ ಪವ । ಮಾನರಿವರಚ್ಛಿನ್ನಭಕ್ತರು ।
ಪ್ರಾಣ ಅಸುರಾವೇಶರಹಿತರು ಆಖಣಾಶ್ಮಸಮ ॥ ಸಂಧಿ ೩೦-೨೦

ಧೌತಪಾಪೆ ವಿರಿಂಚಿಪವನರ ಮಾತೆಯೆನಿಪ ಮಹಾಲಕುಮಿ ವಿ ।
ಖ್ಯಾತಳಾಗಿಹಳೆಲ್ಲಕಾಲದಿ ಶ್ರುತಿಪುರಾಣದೊಳು ॥ ಸಂಧಿ ೨೦-೪

ಪ್ರತಿ ಪ್ರತೀಕಲ್ಪದಲಿ ಸೃಷ್ಟಿ । ಸ್ಥಿತಿ ಲಯವ ಮಾಡುತಲೆ ಮೋದಿಪ ।
ಚತುರಮುಖ ಪವಮಾನರನ್ನವ ಮಾಡಿ ಭುಂಜಿಸುವ... ॥ ಸಂಧಿ ೨೩-೫೦

ಸೌರಿಸೂರ್ಯನ ತೆರದಿ ಬ್ರಹ್ಮ ಸ । ಮೀರ ಗಾಯತ್ರೀ ಗಿರಿಗಳೊಳು
ತೋರುವುದು ಅಸ್ಪಷ್ಟರೂಪದಿ ಮುಕ್ತಿಪರಿಯಂತ ॥
ವಾರಿಜಾಸನ ವಾಯುವಾಣೀ । ಭಾರತಿಗಳಿಗೆ ಮಹಾಪ್ರಳಯದಿ ।
ಬಾರದಜ್ಞಾನಾದಿ ದೋಷವು ಹರಿಕೃಪಾಬಲದಿ ॥ ಸಂಧಿ ೨೩-೩೮

ಎನಗೆ ನಿನ್ನಲಿ ಭಕ್ತಿಜ್ಞಾನಗ । ಳೆನಿತಿಹವು ಪ್ರಾಣನಲಿ ತಿಳಿಯದೆ ।
ಹನುಮದಾದ್ಯವತಾರಗಳ ಭೇದಗಳ ಪೇಳುವವ ॥
ದನುಜ ಘೋರಾಂಧಂತಮಸಿಗ್ಯೋ । ಗ್ಯನು ನ ಸಂಶಯ ನಿನ್ನ ಬೈವರ ।
ಕೊನೆಯ ನಾಲಿಗೆ ಪಿಡಿದು ಭೇದಿಪೆನೆಂದನಬ್ಜಭವ ॥ ಸಂಧಿ ೩೦-೧

ಮಧ್ಯನಾಡಿನ ಮಧ್ಯದಲಿ ಹೃ । ತ್ಪದ್ಮ ಮೂಲದಿ ಮೂಲಪತಿಪದ- ।
ಪದ್ಮಮೂಲದಲಿಪ್ಪ ಪವನನ ಪಾದಮೂಲದಲಿ ॥
ಪೊದ್ದಿಕೊಂಡಿಹ ಜೀವಲಿಂಗನ । ರುದ್ಧ ದೇಹ ವಿಶಿಷ್ಟನಾಗಿ ಕ ।
ಪರ್ದಿ ಮೊದಲಾದಮರರೆಲ್ಲರು ಕಾದುಕೊಂಡಿಹರು ॥ ಸಂಧಿ ೯-೧೯

೩. **ಪ್ರಾಣದೇವನ ಸಾಧನೆ:**

ಆ ಪಿತಾಮಹ ನೂರು ಕಲ್ಪರ । ಮಾಪತಿಯು ಗುಣ ಜಪಿಸಿ ಒಲಿಸಿ ಮ ।
ಹಾ ಪರಾಕ್ರಮ ಹನುಮ ಭೀಮಾನಂದ ಮುನಿಯೆನಿಸಿ ॥

---

ಭವಾದಿ ನಾಮವ ಧರಿಸಿ....' ಇರುವನು. 'ಆಭಾಸಕೋಽಸ್ಯ ಪವನಃ ಪವನಸ್ಯ ರುದ್ರಃ.....' (ಮ.ಭಾರ.ತಾ.ನಿ. ೧-೧೪) ಎಂದಿರುವಂತೆ ರುದ್ರಾದಿಗಳ ಬಿಂಬರೂಪ ದಲ್ಲಿರುವ ಪವನ ಅವರ ರೂಪ, ನಾಮಗಳನ್ನು ಹೊತ್ತಿರುವನೆಂಬುದು ಸೂಕ್ತವಾದುವೇ.

* ಲಿಂಗದೇಹದಲ್ಲಾದರೂ ಇತರ ದೇವತೆಗಳು ಅಭಿಮಾನಿಗಳಾಗಿ ಇರಲಾರರಾದರೂ ಚತುರ್ಮುಖ, ಸರಸ್ವತಿ, ಭಾರತಿ -ಇವರು ವಾಯುದೇವನ ಜೊತೆಗೆ ಇರುವರು.

* ಹೀಗೆ ವಾಯುದೇವ ಜೀವಾತ್ಮರ ಸ್ವರೂಪದೇಹ, ಲಿಂಗದೇಹ, ಅನಿರುದ್ಧದೇಹ ಹಾಗೂ ಸ್ಥೂಲದೇಹ -ಈ ನಾಲ್ಕೂ ಶರೀರಗಳಲ್ಲಿ ಇದ್ದುಕೊಂಡು ಭಾರತೀಪ್ರಾಣೇಶ ಹಂಸ ಜಪ ನಡೆಸುತ್ತಿರುವನೆಂದು - 'ಈ ಶರೀರಚತುಷ್ಟಯಗಳೊಳು ಕೋಶಧಾತುಗಳ ಭಾರತೀ ಪ್ರಾಣೇಶನು....' (ಸಂಧಿ ೭-೫) 'ಈರೆರಡು ದೇಹಗಳೊಳಿರ್ದು ಸಮೀರದೇವನು ಶ್ವಾಸಜಪ....' (೧೨-೪೪) -ಎಂದು ಸಾರಲಾಗಿದೆ.

ಆ ಪರಬ್ರಹ್ಮನ ಸುನಾಭಿ । ಕೂಪಸಂಭವ ನಾಮದಲಿ ಮೆರೆ ।
ವಾಪಯೋಜಾಸನ ಸಮೀರನಿಗಭಿನಮಿಪೆ ಸತತ ॥ ಸಂಧಿ ೩೨-೬

ಗಣದೊಳಗೆ ತಾನಿದ್ದು ಋಜುವೆಂ । ದೆನಿಸಿಕೊಂಬನು ಕಲ್ಪಶತಸಾ- ।
ಧನವಗೈದಾನಂತರದಿ ತಾ ಕಲ್ಕಿಯೆನಿಸುವನು ॥
ದ್ವಿನವಶೀತಿಯ ಪ್ರಾಂತಭಾಗದಿ । ಅನಿಳ ಹನುಮದ್ಭೀಮರೂಪದಿ ।
ದನುಜರೆಲ್ಲರ ಸದೆದು ಮಧ್ವಾಚಾರ್ಯರೆನಿಸಿದನು ॥ ಸಂಧಿ ೨೩-೧೯

ಸಾಧನಾತ್ಪೂರ್ವದಲಿ ಈ ಋ । ಜ್ವಾದಿ ತಾತ್ತ್ವಿಕರೆನಿಪ ಸುರಗಣ ।
ನಾದಿಸಾಮಾನ್ಯಾಪರೋಕ್ಷಿಗಳೆಂದು ಕರೆಸುವರು ॥
ಸಾಧನೋತ್ತರ ಸ್ವಸ್ವಬಿಂಬ ಉ । ಪಾಧಿರಹಿತಾದಿತ್ಯನಂದದಿ ।
ಸಾದರದಿ ನೋಡುವರು ಅಧಿಕಾರಾನುಸಾರದಲಿ ॥ ಸಂಧಿ ೨೩-೧೩

ಏನು ಧನ್ಯರೊ ಬ್ರಹ್ಮಗುರುಪವ । ಮಾನರಾಯರು ಈ ಪರಿಯಲಿ ರ ।
ಮಾನಿವಾಸನ ವಿಮಲ ಲಾವಣ್ಯಾತಿಶಯಗಳನು ॥
ಸಾನುರಾಗದಿ ನೋಡಿ ಸುಖಿಪ ಮ । ಹಾನುಭಾವರ ಭಾಗ್ಯವೆಂತೋ ಭ ।
ವಾನಿಧವನಿಗಸಾಧ್ಯವೆಣಿಸಲು ನರರ ಪಾಡೇನು ॥ ಸಂಧಿ ೩೨-೫

ದ್ವಿಶತಕಲ್ಪಗಳಲ್ಲಿ ಬಿಡದೀ । ಪೆಸರಿನಿಂದಲಿ ಕರೆಸಿದವನು ತ ।
ನ್ನೊಳಗೆ ಅಮರದೊಳಿದ್ದು ಮಾಡುವನವರ ಸಾಧನವ ॥
ಅಸದುಪಾಸನೆ ಗೈವ ಕಲ್ಯಾ । ದ್ಯಸುರಪರ ಸಂಹರಿಸಿ ತಾ ಪೊಂ ।
ಬಸಿರಪದವೈದುವನು ಗುರುಪವಮಾನ ಸತಿಯೊಡನೆ ॥ ಸಂಧಿ ೨೩-೩೨

ಚಾರುತನ ನವವಿಧ ಭಕುತಿ ಗಂ । ಭೀರವಾರಾಶಿಯೊಳು ಪರಮೋ ।
ದಾರಮಹಿಮನ ಹೃದಯ ಫಣಿಪತಿ ಪೀಠದಲಿ ಭಜಿಪ ॥
ಭೂರಿಕರ್ಮಾಕರನೆನಿಸುವ ಶ । ರೀರಮಾನಿ ಪ್ರಾಣಪತಿ ಪದ ।
ವಾರಿರುಹಕಾ ನಮಿಪೆ ಮದ್ಗುರುರಾಯರಹಾದೆಂದು ॥ ಸಂಧಿ ೩೨-೧೮

ವಿಶ್ವವ್ಯಾಪಕ ಹರಿಗೆ ತಾ ಸಾ । ದೃಶ್ಯರೂಪವಧರಿಸಿ ಬ್ರಹ್ಮ ಸ ।
ರಸ್ವತೀಭಾರತಿಗಳಿಂದೊಡಗೂಡಿ ಪವಮಾನ ॥
ಶಾಶ್ವತಸುಭಕ್ತಿಯಲಿ ಸುಜ್ಞಾ । ನ ಸ್ವರೂಪನ ರೂಪಗುಣಗಳ ।
ನಶ್ವರವು ಎಂದೆನುತ ಪೊಗಳುವ ಶ್ರುತಿಗಳೊಳಗಿದ್ದು ॥ ಸಂಧಿ ೨೩-೨೦

ಅನಿಮಿಷರ ನಾಮದಲಿ ಕರೆಸುವ । ನನಿಲದೇವನು ಒಂದು ಕಲ್ಪಕೆ ।
ವನಜಸಂಭವನೆನಿಸಿ ಎಂಭತ್ತೇಳುವರೆ ವರುಷ ॥

ಗುಣತ್ರಯವಿವರ್ಜಿತನ ಮಂಗಳ । ಗುಣಕ್ರಿಯೆ ಸುರೂಪಂಗಳುಪಾ- ।
ಸನವು ಅವ್ಯಕ್ತಾದಿ ಪೃಥಿವ್ಯಂತರದಿ ಇರುತಿಹುದು ॥ ಸಂಧಿ ೨೩-೩೩

ಸತ್ವಜೀವರ ಮಾನಿ ಬ್ರಹ್ಮನು । ನಿತ್ಯಬದ್ಧರೊಳಗೆ ಪುರಂಜನ ।
ದೈತ್ಯಸಮುದಾಯಾಧಿಪತಿ ಕಲಿಯೆನಿಪ ಪವಮಾನ ॥
ನಿತ್ಯದಲಿ ಅವರೊಳಗೆ ಕರ್ಮ ಪ್ರ । ವರ್ತಕನು ತಾನಾಗಿ ಶ್ರೀಪುರು ।
ಷೋತ್ತಮನ ಸಂಪ್ರೀತಿಗೋಸುಗ ಮಾಡಿ ಮಾಡಿಸುವ ॥ ಸಂಧಿ ೨೯-೧೪

ಖೇಟಪತಿಶೇಷಾಮರೇಂದ್ರರ । ಪಾಟಿಮಾಡದೆ ಶ್ರೀಶನ ಕೃಪಾ ।
ನೋಟದಿಂದಲಿ ಸರ್ವರೊಳು ವ್ಯಾಪಾರ ಮಾಡುವರು ॥ ಸಂಧಿ ೨೧-೫

ಪೇಳಲೇನು ಸಮೀರದೇವನು । ಕಾಳಕೂಟವನುಂಡು ಲೋಕವ ।
ಪಾಲಿಸಿದ ತದ್ದಾಸನೋರ್ವನು ಅಮೃತನೆನಿಸಿದನು ॥ ಸಂಧಿ ೪-೨೮

ಪೊಕ್ಕಳಡಿವಿಡಿದೊಂದೆ ನಾಡಿಯು । ಸುಕ್ಕದಲೆ ಧಾರಾಳರೂಪದಿ ।
ಸಿಕ್ಕಿಹುದು ನಡುದೇಹದೊಳಗೆ ಸುಷುಮ್ನನಾಮದಲಿ ॥
ರಕ್ಕಸರನೊಳಪೊಗಗೊಡದೆ ದಶ । ದಿಕ್ಕಿನೊಳಗೆ ಸಮೀರದೇವನು ।
ಲೆಕ್ಕಿಸದೆ ಮತ್ತೊಬ್ಬರನು ಸಂಚರಿಪ ದೇಹದೊಳು ॥ ಸಂಧಿ ೧೨-೧೩

ಕ್ಷಿತಿಯೊಳಗೆ ಮಣಿಮಂತ ಮೊದಲಾ । ದತಿದುರಾತ್ಮರು ಒಂದಧಿಕ ವಿಂ ।
ಶತಿ ಕುಭಾಷ್ಯವ ರಚಿಸಿ ನಡುಮನೆಯೆಂಬ ಬ್ರಾಹ್ಮಣನ ॥
ಸತಿಯ ಜಠರದೊಳವತರಿಸಿ ಭಾ । ರತಿರಮಣ ಮಧ್ವಾಭಿಧಾನದಿ ।
ಚತುರದಶಲೋಕದಲಿ ಮೆರೆದಪ್ರತಿಮಗೊಂದಿಸುವೆ ॥ ಸಂಧಿ ೧-೮

ಭೂಸುರರೊಳಿಪ್ಪಬ್ಜಭವನೊಳು । ವಾಸುದೇವನು ವಾಯುಖಗಪ ಸ ।
ದಾಶಿವಹಿಪೇಂದ್ರನು ವಿವಸ್ವಾನ್ನಾಮಕನು ಸೂರ್ಯ ॥
ಭೇಶ ಕಾಮಮರಾಸ್ಯ ವರುಣಾದೀಸುರರು ಕ್ಷತ್ರಿಯರೊಳಿಪ್ಪರು ।
ವಾಸವಾಗಿಹ ಸಂಕರುಷಣನ ನೋಡಿ ಮೋದಿಪರು ॥ ಸಂಧಿ ೫-೨೯

ಏಕವಿಂಶತಿ ಮತಪ್ರವರ್ತಕ । ಕಾಕುಮಾಯ್ಗಳ ಕುಹಕಯುಕ್ತಿ ನಿ ।
ರಾಕರಿಸಿ ಸರ್ವೋತ್ತಮನು ಹರಿಯೆಂದು ಸ್ಥಾಪಿಸಿದ ॥
ಶ್ರೀಕಳತ್ರನ ಸದನ ದ್ವಿಜಪ ಪಿ । ನಾಕಿಸನ್ನುತಮಹಿಮ ಪರಮ ಕೃ ।
ಪಾಕಟಾಕ್ಷದಿ ನೋಡು ಮಧ್ವಾಚಾರ್ಯ ಗುರುವರ್ಯ ॥ ಸಂಧಿ ೨೩-೧

ಪಂಚಭೇದಾತ್ಮಕ ಪ್ರಪಂಚಕೆ । ಪಂಚರೂಪಾತ್ಮಕನೆ ದೈವತ ।
ಪಂಚಮುಖಶಕ್ರಾದಿಗಳು ಕಿಂಕರರು ಶ್ರೀಹರಿಗೆ ॥

ಪಂಚವಿಂಶತಿ ತತ್ವ ತರತಮ । ಪಂಚಿಕೆಗಳನು ಪೇಳ್ದ ಭಾವಿ ವಿ ।
ರಿಂಚಿಯೆನಿಪಾನಂದತೀರ್ಥರ ನೆನೆವೆನನುದಿನವು ॥ ಸಂಧಿ ೧-೯

### ೪. ಪ್ರಾಣದೇವನ ಶ್ವಾಸಜಪ:

ಆರು ಮೂರೆರಡೊಂದು ಸಾವಿರ । ಮೂರೆರಡು ಶತ ಶ್ವಾಸ ಜಪಗಳ ।
ಮೂರುವಿಧ ಜೀವರೊಳಗಬ್ಜಜ ಕಲ್ಪಪರಿಯಂತ ॥
ತಾ ರಚಿಸಿ ಸತ್ವರಿಗೆ ಸುಖ ಸಂ । ಸಾರ ಮಿಶ್ರರಿಗಧಮ ಜನರಿಗ ।
ಪಾರ ದುಃಖಗಳೀವ ಗುರು ಪವಮಾನ ಸಲಹೆಮ್ಮ ॥ ಸಂಧಿ ೧-೪

ಗುಪ್ತನಾಗಿದ್ದನಿಲದೇವ ದ್ವಿ । ಸಪ್ತಲೋಕದ ಜೀವರೊಳಗೆ ತ್ರಿ ।
ಸಪ್ತ ಸಾವಿರದಾರುನೂರು ಶ್ವಾಸಜಪಗಳನು ॥
ಸುಪ್ತಿ ಸ್ವಪ್ನದಿ ಜಾಗ್ರತೆಗಳಲಿ । ಆಪ್ತನಂದದಿ ಮಾಡಿ ಮಾಡಿಸಿ ।
ಕ್ಲಪ್ತಭೋಗಗಳೀವ ಪ್ರಾಂತಕೆ ತೃತೀಯರೂಪದಲಿ ॥ ಸಂಧಿ ೨೩-೧೭

ಭಾರತೀಶನು ಘಳಿಗೆಯೊಳು ಮು । ನ್ನೂರು ಅರವತ್ತುಸಿರುಜಪಗಳ ।
ತಾ ರಚಿಸುವನು ಸರ್ವ ಜೀವರೊಳಿದ್ದು ಬೇಸರದೆ ॥
ಕಾರುಣಿಕನವರವರ ಸಾಧನ । ಪೂರಯಿಸಿ ಭೂಸ್ವರ್ಗನರಕವ ।
ಸೇರಿಸುವ ಸರ್ವಜ್ಞ ಸಕಲೇಷ್ಟಪ್ರದಾಯಕನು ॥ ಸಂಧಿ ೧೫-೧

ತಾಸಿಗೊಂಬೈನೂರು ಶ್ವಾಸೋ । ಚ್ಛ್ವಾಸಗಳ ನಡೆಸುತಲಿ ಚೇತನ ।
ರಾಶಿಯೊಳು ಹಗಲಿರುಳು ಜಾಗ್ರತನಾಗಿ ನಿತ್ಯದಲಿ ॥
ಈ ಸುಮನೋತ್ತಂಸ ಲೇಶಾ । ಯಾಸವಿಲ್ಲದೆ ಪೋಷಿಸುತ ಮೂ ।
ಲೇಶನಂಘ್ರಿಸರೋಜಮೂಲದಲಿಪ್ಪ ಕಾಣಿಸದೆ ॥ ಸಂಧಿ ೧೫-೨

ಅರಿವುದೊಂದ್ಯಾಮದೊಳು ಶ್ವಾಸಗ । ಳೆರಡು ಸಾವಿರದೇಳುನೂರನು ।
ಶರ ಸಹಸ್ರದ ಮೇಲ ನಾನ್ನೂರಹವು ದ್ವಿತೀಯಕ್ಕೆ ॥
ಮರಳಿ ಯಾಮತ್ರಯಕೆ ವಸು ಸಾ । ವಿರದ ಮೇಲ್ನೂರೆಣಿಕೆಯಲಿ ಹ ।
ನ್ನೆರಡು ತಾಸಿಗೆ ಹತ್ತುಸಾವಿರದೆಂಟುನೂರಹವು ॥ ಸಂಧಿ ೧೫-೩

ಒಂದುದಿನದೊಳಗನಿಳನಿಪ್ಪ । ತ್ತೊಂದುಸಾವಿರದಾರುನೂರು ಮು ।
ಕುಂದನಾಜ್ಞದಿ ಮಾಡಿ ಮಾಡಿಸಿ ಲೋಕಗಳ ಪೊರೆವ ॥
ನೆಂದು ಪವನನ ಪೊಗಳುತಿರುಯೆಂ । ದೆಂದು ಮರೆಯದೆ ಈ ಮಹಿಮೆ ಸಂ ।
ಕ್ರಂದನಾದ್ಯರಿಗುಂಟೆ ನೋಡಲು ಸರ್ವಕಾಲದಲಿ ॥ ಸಂಧಿ ೧೫-೪

ಈರೆರಡು ದೇಹಗಳೊಳಿದ್ದ ಸ । ಮೀರ ದೇವನು ಶ್ವಾಸಜಪ ನಾ ।
ನೂರಧಿಕವಾಗಿಪ್ಪ ಎಂಭತ್ತಾರು ಸಾಹಸ್ರ ॥

ತಾ ರಚಿಸುವನು ದಿವಸವೊಂದಕೆ । ಮೂರು ವಿಧ ಜೀವರೊಳಗಿದ್ದು ಖ- ।
ರಾರಿ ಕರುಣಾಬಲವದೆಂತುಟೋ ಪವನರಾಯನೊಳು ॥ ಸಂಧಿ ೧೨-೪೪

ಮೂರು ಲಕ್ಷದ ಮೇಲೆ ವಿಂಶತಿ । ಈರೆರಡು ಸಾವಿರವು ಪಕ್ಷಕೆ ।
ಆರು ಲಕ್ಷದ ಮೇಲೆ ನಾಲ್ವತ್ತೆಂಟು ಸಾವಿರವು ॥
ಮಾರುತನು ಮಾಸಕೆ ಜಪಿಸಿ ಸಂ । ಸಾರಸಾಗರದಿಂದ ಸುಜನರ ।
ಪಾರುಗಾಣಿಸಿ ಸಲಹುವನು ಬಹು ಭೋಗಗಳನಿತ್ತು ॥ ಸಂಧಿ ೧೫-೫

ಎರಡು ತಿಂಗಳಿಗಹದು ಋತು ಭೂ । ಸುರರು ತಿಳಿವುದು ಶ್ವಾಸಜಪ ಹ ।
ನ್ನೆರಡು ಲಕ್ಷದ ಮೇಲೆ ತೊಂಭತ್ತಾರು ಸಾಹಸ್ರ ॥
ಕರೆಸುವುದು ಅಯನಾಹ್ವಯದಿ ಅರೆ । ವರುಷ ಮೂವತ್ತೆಂಟು ಲಕ್ಷೋ ।
ಪರಿ ತಿಳಿವುದೆಂಭತ್ತಯೆಂಟು ಸಹಸ್ರ ಕೋವಿದರು ॥ ಸಂಧಿ ೧೫-೬

ವರುಷಕಿದರಿಮ್ಮಡಿ ಜಪಂಗಳ । ಗುರುವರಿಯ ತಾ ಮಾಡಿ ಮಾಡಿಸಿ ।
ದುರಿತಗಳ ಪರಿಹರಿಸುವನು ಚಿಂತಿಸುವ ಸಜ್ಜನರ ॥
ಸುರವಿರೋಧಿಗಳೊಳಗೆ ನೆಲೆಸಿ । ದ್ದರವಿದೂರ ತಮೋಧಿಕಾರಿಗ ।
ಳಿರವರಿತು ಸೋಹಮ್ಮುಪಾಸನೆ ಮಾಳ್ಪನವರಂತೆ ॥ ಸಂಧಿ ೧೫-೭

ಸ್ಥೂಲದೇಹದೊಳಿದ್ದು ವರುಷಕೆ । ಏಳಧಿಕ ಎಪ್ಪತ್ತು ಲಕ್ಷದ ।
ಮೇಲೆ ಎಪ್ಪತ್ತಾರು ಸಾವಿರ ಶ್ವಾಸಜಪಗಳನು ॥
ಗಾಳಿ ದೇವನು ಕರಣದಲಿ ಈ । ರೇಳು ಲೋಕದೊಳುಳ್ಳ ಚೇತನ ।
ಜಾಲದೊಳು ಮಾಡುವನು ತ್ರಿಜಗದ್ವ್ಯಾಪ್ತ ಪರಮಾಪ್ತ ॥ ಸಂಧಿ ೧೨-೪೩

ದ್ವಿದಳಪದ್ಮವು ಶೋಭಿಪುದು ಕಂ । ಠದಲಿ ಮುಖ್ಯಪ್ರಾಣ ತನ್ನಯ ।
ಸುದತಿಯಿಂದೊಡಗೂಡಿ ಹಂಸೋಪಾಸನೆಯ ಮಾಳ್ಪ ॥ ಸಂಧಿ ೮-೭

ಇನಿತುಪಾಸನೆ ಸರ್ವಜೀವರೊ । ಳನಿಲದೇವನು ಮಾಡತಿರೆ ಚಿಂ ।
ತನೆಯ ಮಾಡದೆ ಕಂಡ ನೀರೊಳು ಮುಳುಗಿ ನಿತ್ಯದಲಿ ॥
ಮನೆಯೊಳಗೆ ಕೃಷ್ಣಾಜಿನಾದ್ಯಾ । ಸನದಿ ಕುಳಿತು ವಿಶಿಷ್ಟ ಬಹು ।
ಸಜ್ಜನನೆನಿಸಿ ಜಪಮಣಿಗಳೆಣಿಸಿದರೇನು ಬೇಸರದೆ ॥ ಸಂಧಿ ೧೫-೮

## ೫. ಸಾಧಕನ ಸಾಧನೆಯಲ್ಲಿ ಪ್ರಾಣದೇವನ ಪಾತ್ರ:

ಪ್ರಾಣದೇವನು ತ್ರಿವಿಧರೊಳಗೆ ಪ್ರ । ವೀಣ ತಾನೆಂದೆನಿಸಿ ಅಧಿಕಾ ।
ರಾನುಸಾರದಿ ಕರ್ಮಗಳ ತಾ ಮಾಡಿ ಮಾಡಿಸುವ ॥
ಜ್ಞಾನಭಕ್ತಿ ಸುರರ್ಗೆ ಮಿಶ್ರ । ಜ್ಞಾನ ಮಧ್ಯಮ ಜೀವರಿಗೆ ಅ- ।
ಜ್ಞಾನ ಮೋಹ ದ್ವೇಷಗಳ ದೈತ್ಯರಿಗೆ ಕೊಡುತಿಪ್ಪ ॥ ಸಂಧಿ ೨೯-೧೫

ದಹಿಕ ದೈಹಿಕ ಕಾಲಿಕ ತ್ರಯ । ಗಹನ ಕರ್ಮಗಳುಂಟು ಇದರೊಳು ।
ವಿಹಿತಕರ್ಮಗಳರಿತು ನಿಷ್ಕಾಮಕನು ನೀನಾಗಿ ॥
ಬೃಹತಿನಾಮಕ ಭಾರತೀಶನ । ಮಹಿತರೂಪವ ನೆನೆದು ಮನದಲಿ ।
ಅಹರಹರ್ಭಗವಂತಗರ್ಪಿಸು ಪರಮ ಭಕುತಿಯಲಿ ॥ ಸಂಧಿ ೯-೪

ಮನವಚನಕಾರ್ಯಗಳ ದೆಸೆಯಿಂ । ದನುದಿನದಿ ಬಿಡದಾಚರಿಸುತಿ ।
ಪ್ಪನುಚಿತೋಚಿತಕರ್ಮಗಳ ಸದ್ಭಕ್ತಿಪೂರ್ವಕದಿ ॥
ಅನಿಲದೇವನೊಳಿಪ್ಪ ನಾರಾ । ಯಣಗಿದನ್ನವುಯೆಂದು ಕೃಷ್ಣಾ ।
ರ್ಪಣವೆನುತ ಕೊಡೆ ಸ್ವೀಕರಿಸಿ ಸಂತೈಪ ಕರುಣಾಳು ॥ ಸಂಧಿ ೧೪-೧೩

ಓದನೋದಕವೆರಡು ತೇಜದೊ । ಳೈದುವವು ಲಯ ತದಭಿಮಾನಿಗ ।
ಳಾದ ಶಿವಪವನರು ರಮಾಧೀನತ್ವವೈದುವರು ॥
ಈ ದಿವಿಜರೊಡಗೂಡಿ ಶ್ರೀಮಧು । ಸೂದನನ್ನೈದುವಳು ಎಂದರಿ ।
ದಾದರದಲನ್ನೋದಕವ ಕೊಡುತುಣುತ ಸುಖಿಸುತಿರು ॥ ಸಂಧಿ ೧೫-೯

ಸೂತ್ರನಾಮಕ ಪ್ರಾಣಪತಿ ಗಾ । ಯತ್ರಿ ಸಂಪ್ರತಿಪಾದ್ಯನಾಗೀ ।
ಗಾತ್ರದೊಳು ನೆಲೆಸಿರಲು ತಿಳಿಯದೆ ಕಂಡಕಂಡಲ್ಲಿ ॥
ಧಾತ್ರಿಯೊಳು ಸಂಚರಿಸಿ ಪುತ್ರ ಕ । ಳತ್ರ ಸಹಿತನು ದಿನದಿ ತೀರ್ಥ ।
ಕ್ಷೇತ್ರಯಾತ್ರೆಯ ಮಾಡಿದೆವು ಎಂದೆನುತ ಹಿಗ್ಗುವರು ॥ ಸಂಧಿ ೯-೨೫

ಹೀನಸತ್ಕರ್ಮಗಳೆರಡು ಪವ । ಮಾನದೇವನು ಮಾಳ್ಪನಿದಕನು ।
ಮಾನವಿಲ್ಲೆಂದೆನುತ ದೃಢಭಕ್ತಿಯಲಿ ಭಜಿಪರ್ಗೆ ॥
ಪ್ರಾಣಪತಿ ಸಂಪ್ರೀತನಾಗಿ ಕು । ಯೋನಿಗಳ ಕೊಡನೆಲ್ಲ ಕರ್ಮಗ ।
ಳಾನೆ ಮಾಡುವೆನೆಂಬ ಮನುಜರ ನರಕವೈದಿಸುವ ॥ ಸಂಧಿ ೨೩-೧೫

ಕೃತ್ತಿವಾಸನೆ ಹಿಂದೆ ನೀ ನಾ । ಲ್ವತ್ತು ಕಲ್ಪ ಸಮೀರನಲಿ ಶಿಷ್ಯತ್ವ ।
ವಹಿಸಿ ಅಖಿಳಾಗಮಾರ್ಥಗಳೋದಿ ಜಲಧಿಯಲಿ ॥
ಪತ್ತುಕಲ್ಪದಿ ತಪವಗೈದಾ । ದಿತ್ಯರೊಳಗುತ್ತಮನೆನಿಸಿ ಪುರು ।
ಷೋತ್ತಮನ ಪರಿಯಂಕಪದವೈದಿದೆಯೋ ಮಹದೇವ ॥ ಸಂಧಿ ೧-೧೧

ವಜನಸಂಭವನಬ್ದ ಶತ ಒ । ಬ್ಬನೆ ಮಹಾಕಲಿಶಬ್ದವಾಚ್ಯನು ।
ದಿನದಿನಗಳಲಿ ಬೀಳ್ವರಂಧಂತಮದಿ ಕಲಿಮಾರ್ಗ ॥
ದನುಜರೆಲ್ಲ ಪ್ರತೀಕ್ಷಿಸುತ ಬ್ರ । ಹ್ಮನ ಶತಾಬ್ದಾಂತದಲಿ ಲಿಂಗವು ।
ಅನಿಳನ ಗದಾಪ್ರಹಾರದಿಂದಲಿ ಭಂಗವೈದುವುದು ॥ ಸಂಧಿ ೩೦-೧೦

ಮಾರುತನ ಗದೆಯಿಂದ ಲಿಂಗ ಶ । ರೀರ ಪೋದಾನಂತರ ತಮೋ ।
ದ್ವಾರವೈದಿ ಸ್ವರೂಪದುಃಖಗಳನುಭವಿಸುತಿಹರು ॥ ಸಂಧಿ ೩೦-೧೧

ಈ ತನೂರುಹಂಗಳೆ ವನಂಗಳು । ಮಾತರಿಶ್ವನು ಪಂಚರೂಪದಿ ।
ಪಾತಕಗಳೆಂಬರಿಗಳನು ಸಂಹರಿಪ ತಳವಾರ ॥ ಸಂಧಿ ೫-೨೦

ಮಾತರಿಶ್ವನು ದೇಹರಥದೊಳು । ಸೂತನಾಗಿಹ ಸರ್ವಕಾಲದಿ ।
ಶ್ರೀತರುಣಿವಲ್ಲಭ ರಥಿಕನೆಂದರಿದು ನಿತ್ಯದಲಿ ॥
ಪ್ರೀತಿಯಿಂದಲಿ ಪೋಷಿಸುತ ವಾ । ತಾತಪಾದಿಗಳಿಂದ ಲವಿರತ ।
ಈ ತನುವಿನೊಳು ಮಮತೆ ಬಿಟ್ಟಿಹನವನೆ ಮಹಯೋಗಿ ॥ ಸಂಧಿ ೫-೨೫

ಮಾರುತನು ನಾಗಾದಿರೂಪದಿ । ಮೂರನೇ ಗುಣಮಾನಿ ಶ್ರೀದು ।
ರ್ಗಾರಮಣ ವಿದ್ಯಾಕುಮೋಹನ ಕೊಡುವ ಕರಣಕ್ಕೆ ॥ ಸಂಧಿ ೬-೧೨

ಈ ಶರೀರ ಚತುಷ್ಟಯಗಳೊಳು । ಕೋಶಧಾತುಗ ಭಾರತೀ ಪ್ರಾ ।
ಣೇಶನಿಪ್ಪತ್ತೊಂದುಸಾವಿರದಾರುನೂರೆನಿಪ ॥
ಶ್ವಾಸರೂಪಕ ಹಂಸಭಾಸ್ಕರ । ಭೇಶರೊಳಗಿದ್ದವರ ಕೈಪಿಡಿ ।
ದೀ ಸರೋಜಭವಾಂಡದೊಳ ಸರ್ವತ್ರ ತುಂಬಿಹನು ॥ ಸಂಧಿ ೭-೫

ಅನಿಲದೇವನು ವಾಙ್ಮನೋಮಯ । ನೆನಿಸಿ ಪಾವಕವರುಣಸಂಕ್ರಂ ।
ದನ ಮುಖಾದ್ಯರೊಳಿದ್ದು ಭಗವದ್ರೂಪಗುಣಗಳನು ॥
ನೆನೆನೆನೆದು ಉಚ್ಚರಿಸುತಲಿ ನ । ಮ್ಮನು ಸದಾ ಸಂತೈಸುವನು ಸ ।
ನ್ಮುನಿಗಣಾರಾಧಿತಪದಾಂಬುಜ ಗೋಜ ಸುರರಾಜ ॥ ಸಂಧಿ ೧೫-೧೩

## ೬. ಪ್ರಾಣದೇವನ ರೂಪಗಳು

ಖೇಟಕುಕ್ಕುಟಜಲಟವೆಂಬ ತ್ರಿ । ಕೋಟಿ ರೂಪವ ಧರಿಸಿ ಸತತ ನಿ ।
ಶಾಟರನು ಸಂಹರಿಸಿ ಸಲಹುವ ಸರ್ವ ಸಜ್ಜನರ ॥
ಕೈಟಭಾರಿಯ ಪುರದ ಪ್ರಥಮ ಕ । ವಾಟವೆನಿಸುವ ಗರುಡಶೇಷ ಲ ।
ಲಾಟಲೋಚನಮುಖ್ಯ ಸುರರಿಗೆ ಆವ ಕಾಲದಲಿ ॥ ಸಂಧಿ ೨೩-೨೧

ದೇವಋಷಿಪಿತೃಪನರರೆನಿಸುವ । ಐವರೊಳು ನೆಲೆಸಿದ್ದು ಅವರ ಸ್ವ- ।
ಭಾವ ಕರ್ಮವ ಮಾಡಿ ಮಾಡಿಪ ಒಂದು ರೂಪದಲಿ ॥
ಭಾವಿ ಬ್ರಹ್ಮನು ಕೂರ್ಮ ರೂಪದಿ । ಈ ವಿರಿಂಚಾಂಡವನು ಬೆನ್ನಿಲಿ ।
ತಾ ವಹಿಸಿ ಲೋಕಗಳ ಪೊರೆವನು ದ್ವಿತೀಯರೂಪದಲಿ ॥ ಸಂಧಿ ೨೩-೧೬

ಮನವೆ ಮೊದಲಾದಿಂದ್ರಿಯಗಳೊಳ । ಗನಿಲ ದೇವನು ಶುಚಿಯೆನಿಸಿ ಕೊಂ ।
ಡನವರತ ನೆಲೆಸಿದ್ದ ಶುಚಿಷದ್ದೋತನೆಂದೆನಿಸಿ ॥ ಸಂಧಿ ೧೧-೧೨

ಸ್ವರಮಣನು ಯೆಪ್ಪತ್ತೆರಡು ಸಾ । ವಿರ ಸಮೀರನ ರೂಪದೊಳಗಿ ।
ದ್ದುರು ಪರಾಕ್ರಮ ಕರ್ತೃಯೆನಿಸುವ ನಾಡಿಗಳೊಳಗಿದ್ದು ॥ ಸಂಧಿ ೧೧-೭

ಉದಕವನ್ನಾದಿಗಳಿಗವಕಾ । ಶದನು ತಾನಾದ್ದುದಾನಾ ।
ಭಿಧನು ಶಬ್ದವ ನುಡಿದು ನುಡಿಸುವ ಸರ್ವಜೀವರೊಳು ॥ ಸಂಧಿ ೮-೭

ನಾಸಿಕದಿ ನಾಸತ್ಯದಸ್ರರು । ಶ್ವಾಸಮಾನಿ ಪ್ರಾಣಭಾರತಿ ।
ಹಂಸ ಧ್ವನಂತ್ರಿಗಳು ಅಲ್ಲಲ್ಲಿಪ್ಪರವರೊಳಗೆ ॥ ಸಂಧಿ ೮-೮

ಸ್ತಂಭರೂಪದಲಿಪ್ಪ ದಕ್ಷಿಣ । ವಂಬಕದಿ ಪ್ರದ್ಯುಮ್ನ ಗುಣರೂ ।
ಪಾಂಭ್ರಣಿಯು ತಾನಾಗಿ ಇಪ್ಪಳು ವತ್ಸರೂಪದಲಿ ॥

ಪೊಂಬಸುರಪದ ಯೋಗ್ಯಪವನ ತ್ರಿ । ಯಂಬಕಾದಿಸಮಸ್ತ ದಿವಿಜಕ ।
ದಂಬಸೇವಿತನಾಗಿ ಸರ್ವಪದಾರ್ಥಗಳ ತೋರ್ಪ ॥ ಸಂಧಿ ೮-೯

## ೭. ಪ್ರಾಣದೇವನಲ್ಲಿರುವ ಭಗವದ್ರೂಪಗಳು:

ವಿಧಿಭವಾದಿಸಮಸ್ತ ಜೀವರ । ಹೃದಯದೊಳಗೇಕಾತ್ಮನೆನಿಸುವ ।
ಪದುಮನಾಭನು ಅಚ್ಯುತಾದಿ ಅನಂತ ರೂಪದಲಿ ॥
ಅಧಿಸುಭೂತಾಧ್ಯಾತ್ಮವಧಿ ದೈ । ವದೊಳು ಕರೆಸುವ ಪ್ರಾಣನಾಗಾಭಿಧನು ।
ದಶರೂಪದಲಿ ದಶವಿಧ ಪ್ರಾಣರೊಳಗಿದ್ದು ॥ ಸಂಧಿ ೬-೯

ನೂರ ಇಪ್ಪತ್ತೇಳಧಿಕ ಮೂ । ರಾರು ಸಾವಿರ ರೂಪದಿಂ ದಶ ।
ಮಾರುತರೊಳಿದ್ದವರವರ ಪೆಸರಿಂದೆ ಕರೆಸುವನು ॥ ಸಂಧಿ ೬-೧೦

ಮೂರಧಿಕ ಐವತ್ತು ಪ್ರಾಣ ಶ । ರೀರದೊಳಗನಿರುದ್ಧನಿಪ್ಪೈ ।
ನೂರು ಹನ್ನೊಂದಧಿಕ ಪಾನನೊಳಿಪ್ಪ ಪ್ರದ್ಯುಮ್ನ ॥
ಮೂರನೇ ವ್ಯಾನದೊಳಗೈದರೆ । ನೂರು ರೂಪದಿ ಸಂಕರುಷಣೈ- ।
ನೂರು ಮೂವತ್ತೈದುದಾನನೊಳಿಪ್ಪ ಮಾಯೇಶ ॥ ಸಂಧಿ ೪-೧೯

ಮೂಲನಾರಾಯಣ ಐವ । ತ್ತೇಳಧಿಕ ಐನೂರು ರೂಪವ ।
ತಾಳಿ ಸರ್ವತ್ರದಿ ಸಮಾನನೊಳಿಪ್ಪ ಸರ್ವೇಶ ॥
ಲೀಲೆಗೈವನು ಸಾವಿರದ ಮೇ । ಲೇಳುನೂರ್ಹನ್ನೊಂದು ರೂಪವ ।
ತಾಳಿ ಪಂಚಪ್ರಾಣರೊಳು ಲೋಕಗಳ ಸಲಹುವನು ॥ ಸಂಧಿ ೪-೨೦

ಚತುರಮೂರ್ತ್ಯಾತ್ಮಕ ಹರಿಯು ತ್ರಿಂ । ಶತಿಸರೂಪದಿ ಬ್ರಹ್ಮನೊಳು ಮಾ ।
ರುತನೊಳಿಪ್ಪತ್ತೇಳು ರೂಪದೊಳಿಪ್ಪ.... ॥ ಸಂಧಿ ೭-೧೮

....ದಕ್ಷಿಣ । ಪಾದದಂಗುಟದಲ್ಲಿ ಪವನನು ಭಾರಭೃದ್ರೂಪ ॥
ಕಾದುಕೊಂಡಿಹ ॥ ಸಂಧಿ ೮-೧

ಮೂರು ಸಾವಿರದರ್ಧಶತ ಮೇ । ಲೀರಧಿಕರೂಪಗಳ ಧರಿಸಿ ಶ ।
ರೀರ ದೊಳಗಾನಂದಮಯ ನಾರಾಯಣಾಹ್ವಯನು ॥
ಈರೆರಡು ಸಾವಿರದ ಮೇಲ್ಮು । ನ್ನೂರು ಐದು ಸುರೂಪದಿಂದಲಿ ।
ಭಾರತೀಶನೊಳಿಪ್ಪ ನವನೀತಸ್ಥ ಘೃತದಂತೆ ॥ ಸಂಧಿ ೪-೧೮

* * *

# ಪ್ರಾಣದೇವನ ಕುರಿತಾದ 100 ಹಾಡುಗಳು

## [ಸ್ಥೂಲ ಪರಿಚಯ]

## ಮುಖ್ಯಪ್ರಾಣನ ಬರೇ ಮೂಲರೂಪದ ಕುರಿತಾದ ಹಾಡುಗಳು

**೧. ಕರವ ಮುಗಿಯುತ್ತಿರುವ ಮುಖ್ಯಪ್ರಾಣ ಸಲ್ಲಿಸುವ ಪ್ರಾರ್ಥನೆ:**

'ಕರವ ಮುಗಿದ ಮುಖ್ಯಪ್ರಾಣ....' ಎಂದು ಪ್ರಾರಂಭವಾಗುವ ಐದು ನುಡಿಗಳ ನ್ನೊಳಗೊಂಡ ಶ್ರೀ ಪುರಂದರದಾಸರ ಹಾಡಿನಲ್ಲಿ ಆಂಜನೇಯ ಕೈಮುಗಿದು ಶ್ರೀಹರಿಯಲ್ಲಿ ಬೇರೆಬೇರೆ ಸಾಧನೆಯ ವಿಷಯದಲ್ಲಿ ಬೇಡುತ್ತಿರುವನೆಂಬ ಮಾಹಿತಿ ಇದೆ.

**೨. ಸಾಧನೆಯ ವಿಷಯದಲ್ಲಿ ಪವಮಾನನಲ್ಲಿ ಬಿನ್ನಹ:**

'ಪವಮಾನ ಜಗದ ಪ್ರಾಣ..' –ಎಂದು ಪ್ರಾರಂಭವಾಗುವ ಮೂರು ಸೊಲ್ಲುಗಳುಳ್ಳ ಶ್ರೀ ವಿಜಯದಾಸರ ಪದ್ಯದಲ್ಲಿ ಪ್ರಾಣಪ್ರದತ್ವ, ಭಯಪರಿಹಾರಕತ್ವ ಮುಂತಾದ ಮಹಿಮೆ ಗಳನ್ನು ತಿಳಿಸಿರುವುದಲ್ಲದೆ, 'ಹೇಮಕಚ್ಚುಟ' ಉಪವೀತ ಧರಿಪ....' ಇತ್ಯಾದಿಯಾಗಿ ಆಂಜನೇಯನ ರೂಪದ ವರ್ಣನೆಯನ್ನು ಮಾಡಲಾಗಿದೆ.

ಪಲ್ಲವಿಯಲ್ಲಿ 'ಪವಮಾನ ಜಗದ ಪ್ರಾಣ ಸಂಕರುಷಣ' ಎಂಬಲ್ಲಿ ನಿಲ್ಲಿಸದೆ 'ಸಂಕರು ಷಣಭವ'–'ಭಯಾರಣ್ಯದಹನ' –ಎಂದು ವಿಭಾಗ ಮಾಡಿಕೊಂಡು ಹಾಡಬೇಕು. ಪವ ಮಾನ ಸಂಕರ್ಷಣ ಜಯಾ ದಂಪತಿಗಳಲ್ಲಿ ಹುಟ್ಟುವನೆಂದಿರುವುದರಿಂದ 'ಸಂಕರುಷಣಭವ' –ಎಂದರೆ ಸಮುಚಿತವಾಗುವುದು.

**೩. ಮಾತರಿಶ್ವನ ಮಹಾಮಹಿಮೆಗಳು:**

'ಪವಮಾನ ನಮ್ಮ ಗುರು ಪವಮಾನ...' ಎಂದು ಪ್ರಾರಂಭವಾಗುವ, ಒಂಬತ್ತು ನುಡಿಗಳನ್ನೊಳಗೊಂಡ ಶ್ರೀ ಜಗನ್ನಾಥದಾಸರ ಹಾಡು ಪವಮಾನನ ವ್ಯಕ್ತಿತ್ವಕ್ಕೆ ಸಂಬಂಧಿಸಿ ಉಪನಿಷತ್ ಪ್ರತಿಪಾದ್ಯಗಳಾದ ಅಮೃತಪದ ಪ್ರತಿಪಾದ್ಯತ್ವ, ಗೋವತ್ಸರೂಪದಿಂದಿರುವಿಕೆ

ಮುಂತಾದ ಪ್ರಮೇಯಗಳನ್ನೂ, ಚತುರ್ಮುಖನ ತನಯನಾಗಿ ಅವತರಿಸಿದ್ದು, ತಿಮ್ಮಣ್ಣ ಮುಂತಾದ ಪ್ರಸಿದ್ಧ ಮಾಯಾವಾದಿಗಳನ್ನು ಗೆದ್ದದ್ದು ಮುಂತಾದ ಅಪೂರ್ವ ವಿಚಾರಗಳ ನಿರೂಪಣೆ ನಡೆದಿದೆ.

**೪. ಅಪಮೃತ್ಯು ಪರಿಹರಿಸಲು ಬಿನ್ನಹ:**

ಜಗನ್ನಾಥದಾಸರ 'ಅಪಮೃತ್ಯು ಪರಿಹರಿಸೊ ಅನಿಲದೇವ' ಎಂಬ ಐದು ನುಡಿಗಳನ್ನೊಳಗೊಂಡ ಪದ್ಯ ಸಾಧನೆಯ ವಿಷಯದಲ್ಲಿ ಅನಿಲದೇವನ ಪಾತ್ರವನ್ನು ಸ್ಪಷ್ಟಪಡಿಸಿ, ಅಂತಹ ಅನಿಲದೇವನಲ್ಲಿ ಭವರೋಗಮೋಚಕನಾಗಿ, ಸುಜನರಿಗೆ ಜವನ ಬಾಧೆಯ ಬಿಡಿಸುವಂತೆ ನಡೆಸಲಾಗುವ ಬಿನ್ನಹವನ್ನು ಪ್ರಸ್ತುತಪಡಿಸುತ್ತಿದೆ.

**೫. ಗುರು ಪವಮಾನನಲ್ಲಿ ವಾಕನ್ನು ಕೇಳಲು ಬಿನ್ನಹ:**

ಶ್ರೀ ವಿಜಯದಾಸರ 'ಪವಮಾನ ಶ್ರೀಗುರುವೆ ಪವಮಾನ' ಎಂಬ ಏಳು ನುಡಿಗಳುಳ್ಳ ಹಾಡಿನಲ್ಲಿ ಉಪನಿಷತ್ತುಗಳಲ್ಲಿ ಪ್ರಸ್ತಾಪಿಸಲ್ಪಡುವ ಇಂದ್ರಿಯಾಭಿಮಾನಿಗಳ ಸ್ಪರ್ಧೆಯ ಪ್ರಮೇಯವನ್ನು ವಿಶೇಷವಾಗಿ ಉಲ್ಲೇಖಿಸಲಾಗಿದೆ. 'ಚತುತಾನನ ಸಿರಿಪತಿ ನೋಡುತಲಿಂ' ಎಂದು ಚತುರ್ಮುಖ ಮತ್ತು ಶ್ರೀಹರಿ ಆ ಸ್ಪರ್ಧೆಯಲ್ಲಿ ಪಾಲ್ಗೊಳ್ಳದೆ ಬರೇ ನೋಡುತ್ತಿದ್ದರಷ್ಟೇ ಎಂದು ಸ್ಪಷ್ಟಪಡಿಸಿರುವುದು ಗಮನಾರ್ಹ.

**೬. ಮುಖ್ಯಪ್ರಾಣ ನಮ್ಮಿಂದ ಹೇಗೆ ಸಾಧನೆ ನಡೆಸಬೇಕು?**

'ನಂಬಿದೆ ನಿನ್ನಯ ಪಾದ ಮುಖ್ಯಪ್ರಾಣ' –ಎಂಬ ಐದು ನುಡಿಗಳುಳ್ಳ ಹಾಡಿನಲ್ಲಿ ವಿಜಯದಾಸರು ವಿಶೇಷವಾಗಿ ಸಾಧಕರು ತಮ್ಮಿಂದ ಮುಖ್ಯಪ್ರಾಣ ಹೇಗೆ ಸಾಧನೆ ನಡೆಸಬೇಕೆಂಬುದನ್ನು ಪ್ರಾರ್ಥಿಸಿಕೊಳ್ಳಬೇಕೆಂಬುದರ ಬಗ್ಗೆ ಬೆಳಕು ಚೆಲ್ಲಿರುವರು.

**೭. ಎನಗೆ ಎಲ್ಲವೂ ನೀನೆನಿಸಿದ ಮುಖ್ಯಪ್ರಾಣ:**

'ಮುಖ್ಯಪ್ರಾಣ ಎನ್ನ ಮೂಲಗುರುವೇ' –ಎಂಬ ಪಲ್ಲವಿಯ, ಎರಡು ನುಡಿಗಳನ್ನೊಳಗೊಂಡ ಪುರಂದರದಾಸರ ಪುಟ್ಟ ಹಾಡಿನಲ್ಲಿ ಮುಖ್ಯಪ್ರಾಣ ಮೂಲಗುರು ಅಷ್ಟೇ ಅಲ್ಲದೆ ತಂದೆ, ತಾಯಿ ಮುಂತಾದ ಬಂಧುವೂ ಆಗಿರುವನೆಂದು ಸ್ತುತಿಸಲಾಗಿದೆ.

**೮. ಬೇರೆ ಬೇರೆ ಬಗೆಯ ಸಾಧನಾನುಷ್ಠಾನಕ್ಕಾಗಿ ಬೇಡಿಕೆ:**

'ಮುಖ್ಯಪ್ರಾಣನೆ ಕೈಯ ಮುಗಿದು ಬೇಡುವೆನಯ್ಯ....' –ಎಂಬ ಗೋಪಾಲದಾಸರ ಮೂರು ನುಡಿಗಳ ಕೀರ್ತನೆಯಲ್ಲಿ ಭಕ್ತಿವಿಷಯಕ ಮುಂತಾದ ಬೇರೆ ಬೇರೆ ಸಾಧನೆಗಳ ಅನುಷ್ಠಾನಕ್ಕಾಗಿ ಮುಖ್ಯಪ್ರಾಣನಲ್ಲಿ ಬೇಡಿಕೊಳ್ಳಲಾಗುವುದು.

**೯. ಮುಖ್ಯಪ್ರಾಣ ಕರಮುಗಿದು ಸಲ್ಲಿಸುವ ಬೇಡಿಕೆಗಳು:**

'ಕರವ ಮುಗಿದ ಮುಖ್ಯಪ್ರಾಣ....' ಎಂಬ ಐದು ನುಡಿಗಳುಳ್ಳ ಗೋಪಾಲದಾಸರ ಕೀರ್ತನೆ, ಇದೇ ಬಗೆಯ ಪುರಂದರದಾಸರ ಕೀರ್ತನೆಯಂತೆಯೇ ಇದೆ. 'ತಾರತಮ್ಯ ಪಂಚಭೇದ ಸತ್ಯವೆಂಬ ಸಾರಮಧ್ವಶಾಸ್ತ್ರ ಉದ್ಧಾರ ಮಾಡೆಂದು' ಪುರಂದರದಾಸರ ಹಾಡಲ್ಲಿ

ಇದ್ದರೆ, ಈ ಹಾಡಿನ ಈ ನುಡಿಯ ಉತ್ತರಾರ್ಧ 'ಮಾರುತಮತ ಪೊಂದಿದವರನು ಪೊರೆಯೆಂದು' ಎಂದಿದೆ. ಇಷ್ಟು ಮಾತ್ರ ವ್ಯತ್ಯಾಸ. ಉಳಿದೆಲ್ಲ ಒಂದೇ ರೀತಿಯಾಗಿದೆ.

೧೦. **ಜೀವರ ಉದ್ಧಾರದಲ್ಲಿ ಮುಖ್ಯಪ್ರಾಣನ ಪಾತ್ರ:**

'ಎಂತು ತುತಿಸಲಿ ಎನ್ನ ದೇವನ....' ಎಂಬ ಗೋಪಾಲದಾಸರ ಕೀರ್ತನೆ ಜೀವರ ಉದ್ಧಾರದಲ್ಲಿ ಮುಖ್ಯಪ್ರಾಣನ ಬಹುಮುಖದ ಪಾತ್ರವನ್ನು ಬಣ್ಣಿಸುತ್ತಿದೆ.

೧೧. **ಸುಖತೀರ್ಥಗುರುವಿನಲ್ಲಿ ಸಲ್ಲಿಸಲಾದ ಬೇಡಿಕೆಗಳು:**

'ಸುಖತೀರ್ಥಗುರುವೆ ಲೌಕಿಕ ಧರ್ಮಕರ್ಮವೈದಿಕವಾಗಲೆನಗೆ....' ಎಂದು ಪ್ರಾರಂಭವಾಗುವ ೧೧ ನುಡಿಗಳ ತತ್ವಸುವ್ವಾಲಿಯಲ್ಲಿ ಶ್ರೀ ಜಗನ್ನಾಥದಾಸರು ವಾಯುದೇವನನ್ನು ಸಂಬೋಧಿಸಿ, ಕೆಲವು ಮಾತುಗಳಲ್ಲಿ ಅವನ ಗುಣಗಳನ್ನು ನಿವೇದಿಸಿದ್ದರೆ, ಮತ್ತೆ ಕೆಲವು ಮಾತುಗಳಲ್ಲಿ ಕೆಲವು ಬೇಡಿಕೆಗಳನ್ನು ಅವನಲ್ಲಿ ಸಲ್ಲಿಸಿರುವರು.

೧೨. **ಜಗದೊಳಗಿನ ಚರಿತ ಭಾರತೀರಮಣ:**

'ಭಾರತೀರಮಣಾ ಮನ್ಮನದಲಿ ತೋರು ತವ ಚರಣಾ....' ಎಂದು ಪಲ್ಲವಿಯಿಂದ ಪ್ರಾರಂಭವಾಗುವ ಜಗನ್ನಾಥದಾಸರ ಐದು ನುಡಿಗಳನ್ನೊಳಗೊಂಡ ಕೀರ್ತನೆಯಲ್ಲಿ ಪ್ರತಿಯೊಬ್ಬರ ಪಿಂಡಾಂಡದಲ್ಲಿ ನಡೆಸುತ್ತಿರುವ ಶ್ವಾಸಮಂತ್ರಜಪ ಇತ್ಯಾದಿ ಮಹಿಮೆಗಳನ್ನು ಭಾರತೀರಮಣನಲ್ಲಿ ನಿವೇದಿಸಿಕೊಂಡು 'ಜಗನ್ನಾಥವಿಠಲನ ಪ್ರೀತಿಯಿಂದಲಿ ತೋರೋ' ಎಂದು ಬಿನ್ನವಿಸಿಕೊಳ್ಳಲಾಗಿದೆ.

## ಮುಖ್ಯಪ್ರಾಣನ ಮೂರೂ ಅವತಾರಗಳ ಪ್ರಸ್ತಾವವುಳ್ಳ ಹಾಡುಗಳು

೧೩. **ಕನ್ನಡದ ವಾಯುಸ್ತುತಿ:**

'ಕನ್ನಡದ ವಾಯುಸ್ತುತಿ' ಎಂಬ ಹೆಗ್ಗಳಿಕೆಗೆ ಪಾತ್ರವಾದ ಶ್ರೀಪಾದರಾಜರ 'ಮಧ್ವನಾಮ' ಇಪ್ಪತ್ತೆಂಟು ನುಡಿಗಳನ್ನೊಳಗೊಂಡಿದೆ. ಇದು ಮೊದಲ ಹದಿನಾಲ್ಕು ನುಡಿಗಳಲ್ಲಿ ಮುಖ್ಯಪ್ರಾಣನ ಮೂಲರೂಪದ ಮಹಿಮೆಗಳನ್ನೂ, ಅನಂತರದ ಏಳು ನುಡಿಗಳಲ್ಲಿ ಆಂಜನೇಯನ ಸಾಧನೆ-ಮಹಿಮೆಗಳನ್ನೂ, ಮುಂದಿನ ಹತ್ತು ನುಡಿಗಳಲ್ಲಿ ಭೀಮಾವತಾರದ ಸಾಧನೆ-ಮಹಿಮೆಗಳನ್ನೂ, ಕೊನೆಯ ಏಳು ನುಡಿಗಳಲ್ಲಿ ಮಧ್ವಾವತಾರದ ಸಾಧನೆ-ಮಹಿಮೆಗಳನ್ನೂ ಸಾರುತ್ತಿದೆ. 'ಆ ವಾಯು ನಮ್ಮ ಕುಲಗುರುರಾಯರು' ಎಂದು ಅಭಿಮಾನಪೂರ್ವಕವಾಗಿ ಉದ್ಘೋಷಿಸಲಾಗುವುದು.

೧೪. **ಭಾರತೀರಮಣ ಜಗದ್ಗುರು ಎಂದು ಡಂಗುರ ಬಾರಿಸಲು ಕರೆ:**

'ಸಾರಿರೋ ಡಂಗುರವ....' ಎಂದು ಪ್ರಾರಂಭವಾಗುವ ೫ ನುಡಿಗಳುಳ್ಳ ಶ್ರೀ ವ್ಯಾಸತೀರ್ಥರ ಕೀರ್ತನೆ ಭಾರತೀರಮಣನ ಮೂರೂ ಅವತಾರಗಳ ಕೆಲವು ಸಾಧನೆಗಳನ್ನು ಸಾರುತ್ತಿದೆ.

೧೫. ಸಂಜೀವರಾಯರ ಸ್ಮರಣೆಯಿಂದ ಅಂಜಿಕೆಯ ಪರಿಹಾರ:

'ಅಂಜಿಕಿನ್ಯಾತಕಯ್ಯ ಸಜ್ಜನರಿಗೆ....' ಎಂದು ಪ್ರಾರಂಭವಾಗುವ, ಮೂರು ನುಡಿಗಳ ನ್ನೊಳಗೊಂಡ ಪುರಂದರದಾಸರ ಪ್ರಸಿದ್ಧ ಕೀರ್ತನೆ ಅಂಜಿಕೆಯ ಪರಿಹಾರಕ್ಕೆ ಆಂಜನೇಯಾದಿ ರೂಪತ್ರಯದ ಸ್ಮರಣೆ ನಡೆಸಬೇಕೆಂದು ಪ್ರತಿಪಾದಿಸಿದೆ.

ಈ ಹಾಡಿನ ಎರಡನೇ ನುಡಿಯಲ್ಲಿ ಉಲ್ಲೇಖಗೊಂಡಂತೆ ಭೀಮಸೇನ 'ರೋಮ ರೋಮಕೆ ಕೋಟಿಲಿಂಗ ಉದುರಿಸಿದ್ದು ಯಾವ ಪ್ರಸಂಗದಲ್ಲೆಂದು ವಿಚಾರಣೀಯ.[1]

---

1. ಪುರಂದರದಾಸರ 'ಅಂಜಿಕನ್ಯಾತಕಯ್ಯ....' -ಎಂಬ ಹಾಡಿನಲ್ಲಿ ಭೀಮಾವತಾರದ ಪ್ರಸ್ತಾವದಲ್ಲಿ 'ರೋಮರೋಮಕ್ಕೆ ಕೋಟಿಲಿಂಗವುದುರಿಸಿದ' -ಎಂದು ಸ್ತುತಿಸಲಾಗುವುದು.

ಭೀಮ ಹನುಮಂತನ ರೋಮರೋಮದಿಂದ ಕೋಟಿಕೋಟಿಲಿಂಗಗಳನ್ನು ಉದುರಿಸಿದ ಘಟನೆ ಯಾವುದೇ ಪ್ರಸಿದ್ಧ ಶಾಸ್ತ್ರದಲ್ಲಿ ಉಲ್ಲೇಖಿಸಲ್ಪಟ್ಟಿರುವಂತಿಲ್ಲ.

ಆದರೆ ಮಹಾಭಾರತಕ್ಕೆ ಸಂಬಂಧಿಸಿದಂತೆ ಒಂದು ಜನಪದಕತೆ ಪ್ರಚಲಿತವಾಗಿದೆ. 'ಪುರುಷಾಮೃಗ'ದ ಆ ಕಥೆಯಲ್ಲಿ ಹನುಮಂತನ ರೋಮದಿಂದ ಶಿವಲಿಂಗದ ಉದ್ಭವವಾದ ವಿಚಾರವಿದೆ.

ಕುಮಾರವ್ಯಾಸ ಭಾರತದಲ್ಲಿಯೂ [ಸಭಾಪರ್ವದ ಏಳನೇ ಸಂಧಿ] ಪುರುಷಾಮೃಗದ ಕಥೆ ಉಲ್ಲೇಖಿಸಲ್ಪಟ್ಟಿದೆ.

ಪಾಂಡವರ ರಾಜಸೂಯಯಾಗದ ಸಂದರ್ಭದಲ್ಲಿ ಸಾವಿರಾರು ಜನ ಉಂಡ ಭೋಜನದ ಎಂಜಲಿನ ಶುದ್ಧಿ ಹೇಗೆ ಎಂಬ ಸಮಸ್ಯೆ ಯುಧಿಷ್ಠಿರನದ್ದು. ಮಾನಸಸರೋವರದ ತೀರದಲ್ಲಿರುವ 'ಪುರುಷಾಮೃಗ'ವನ್ನು ಕರೆತಂದಲ್ಲಿ ಶುದ್ಧಿ ಆಗುವುದೆಂದು ಶ್ರೀಕೃಷ್ಣನ ಸಲಹೆ. ಆ ಪುರುಷಾಮೃಗವನ್ನು ಕರೆತರಲು ಭೀಮಸೇನನನ್ನು ಕಳುಹಿಸಲಾಗುವುದು. ದಾರಿಯಲ್ಲಿ ಹನೂ ಮಂತನ ಸಮಾಗಮ ಆಗುವುದು. ಆ ಪುರುಷಾಮೃಗದ ಮನೋವೇಗದ ಕುರಿತು ತಿಳಿಸಿದ ಹನುಮಂತ ಅದರ ವೇಗವನ್ನು ಕಡಿಮೆಗೊಳಿಸಲು ಒಂದು ಉಪಾಯವನ್ನು ಸೂಚಿಸುವನು. ತನ್ನ ಬಾಲದ ಏಳೆಂಟು ರೋಮಗಳನ್ನು ಕಿತ್ತುಕೊಟ್ಟು, ಆ ಪುರುಷಾಮೃಗದ ಎದುರು ಒಂದು ರೋಮವನ್ನು ಹಾಕಲು 'ಅವನಿಯೊಳಗೀಡಾಡಿದಾಕ್ಷಣ ಶಿವಭವನ ಪುಷ್ಪಾಪಚಯ ಸಂಭವಿಸುವುದು'. ಮಹಾಶಿವ ಭಕ್ತ ಎನಿಸಿದ ಆ ಪುರುಷಾಮೃಗ ಶಿವಲಿಂಗ ವನ್ನು ಕಂಡಾಕ್ಷಣ ಅದನ್ನು ಪೂಜಿಸಿಯೇ ಮುಂದುವರಿಯುವುದು. ಅಷ್ಟರಲ್ಲಿ ಭೀಮಸೇನ ಸಾಕಷ್ಟು ವೇಗವಾಗಿ ಸಾಗಬಹುದು. ಭೀಮಸೇನ ಹೀಗೆಯೇ ಮಾಡುವನು. ಆದರೆ ಕೊನೆಗೆ ಆಂಜನೇಯನ ರೋಮಗಳೆಲ್ಲ ಖಾಲಿಯಾಗಿದ್ದವು. ಅಂತೂ 'ಕಳವಳಿಸುತತಿವೇಗದಲ್ಲಿ.... ಭಯಗೊಳುವಂದು ಹೊಕ್ಕನು ಬಳಿಕ ತಾನಧ್ವರದ ಬಾಗಿಲಲಿ' ಪ್ರವೇಶಿಸುವ ಬರದಲ್ಲಿ ಭೀಮಸೇನ ಎಡವಿ ಬೀಳುವನು. ಅರ್ಜುನ ಎತ್ತುವನು. ಅಷ್ಟರಲ್ಲಿ ಓಡಿಬಂದ ಪುರುಷಾಮೃಗ ಭೀಮನ ಕಾಲು ಗಳನ್ನು ಗಟ್ಟಿಯಾಗಿ ಹಿಡಿಯುತ್ತ ಭೀಮನ ಮುಖದ ಭಾಗ ಒಳಗೆಯೇ ಇತ್ತೆಂದು ವಾದಿಸಿ, ಯುಧಿಷ್ಠಿರ ಅದರಿಂದ ಭೀಮಸೇನನನ್ನು ಬಿಡಿಸುವನು. ಶ್ರೀಕೃಷ್ಣನ ಆದೇಶದಂತೆ ರಾಜಸೂಯ ಯಾಗದ ಭೋಜನಶಾಲೆಯಲ್ಲಿ ಸ್ವಣಕಂಭಕ್ಕೆ ಪುರುಷಾಮೃಗ ವನ್ನು ಕಟ್ಟಿಹಾಕಿ ಅದರಿಂದಾಗಿ ಅಲ್ಲಿ ಶುದ್ಧಿ ಸಂಭವಿಸುವಂತೆ ಮಾಡಲಾಯಿತು.

**೧೬. ವರಗುರು ಮುಖ್ಯಪ್ರಾಣನ ಅವತಾರಗಳ ಸಾಧನೆಗಳು:**

'ನೀನೆ ವರಗುರು ಮುಖ್ಯಪ್ರಾಣ....' ಎಂದು ಪ್ರಾರಂಭವಾಗುವ, ಮೂರು ನುಡಿಗಳ ನ್ನೊಳಗೊಂಡ ವ್ಯಾಸತೀರ್ಥರ ಈ ಕೀರ್ತನೆ ಭಾರತೀಶನ ಮೂಲರೂಪದ ಮಹಿಮೆಯ ಪ್ರಸ್ತಾವ ಮಾಡಿ ಅವನ ಮೂರೂ ಅವತಾರ ರೂಪಗಳ ಒಂದೊಂದು ಪ್ರಮುಖ ಮಹಿಮೆಯನ್ನು ಸಾರುತ್ತಿದೆ.

**೧೭. ಈತನೇ ಲೋಕಗುರು ಲೋಕವಿಖ್ಯಾತ:**

ಶ್ರೀ ವಾದಿರಾಜತೀರ್ಥರು ಮುಖ್ಯಪ್ರಾಣನ ಮೂರು ಅವತಾರಗಳ ಅಸಾಧಾರಣ ಮಹಿಮೆಗಳನ್ನು ಸಾರುತ್ತಿರುವ 'ಈತನೇ ಲೋಕಗುರು ಲೋಕವಿಖ್ಯಾತ....' ಎಂಬ ಕೀರ್ತನೆಯ ಉಪಸಂಹಾರದಲ್ಲಿ ಹಯವದನರಾಯನನ್ನು 'ಶ್ರೀ ಹರಿಯವದನ ರಾಯನಿಗೆ....' ಎಂದು ಉಲ್ಲೇಖಿಸಲಾಗಿದೆ.

**೧೮. ಅರ್ಥಿಯ ಪೆಸರುಳ್ಳ ಆನಂದತೀರ್ಥರು:**

'ಆನಂದತೀರ್ಥರೆಂಬ ಅರ್ಥಿಯ ಪೆಸರುಳ್ಳ...' ಎಂದು ಪ್ರಾರಂಭವಾಗುವ, ಐದು ನುಡಿಗಳನ್ನೊಳಗೊಂಡ ಪುರಂದರದಾಸರ ಕೀರ್ತನೆಯಲ್ಲಿ ಆಂಜನೇಯ ರೂಪದ ಸಾಧನೆಯನ್ನು ಒಂದು ನುಡಿಯಲ್ಲೂ, ಭೀಮಸೇನನ ಸಾಧನೆಯನ್ನು ಒಂದು ನುಡಿಯಲ್ಲೂ ತಿಳಿಸಿ ಉಳಿದ ಮೂರು ನುಡಿಗಳಲ್ಲಿ ಮಧ್ವರೂಪದ ಸಾಧನೆಯನ್ನು ಸಾರಲಾಗಿದೆ.

ಆನಂದಸ್ವರೂಪಿ ಪರಮಾತ್ಮನ ಸನ್ನಿಧಾನವಿಶೇಷಕ್ಕೆ ಪಾತ್ರರಾದವರು ಆನಂದ ತೀರ್ಥರು ಎಂದು ಅರ್ಥಾನುಸಂಧಾನಪೂರ್ವಕವಾಗಿ ಆನಂದತೀರ್ಥ ಎಂಬ ನಾಮವನ್ನು

---

ಹೀಗೆ ಕುಮಾರವ್ಯಾಸ ಭಾರತದಲ್ಲಿ ಉಲ್ಲೇಖಿಸಲ್ಪಟ್ಟಿರುವ ಈ ಜಾನಪದಕತೆ ಮೂಲ ಮಹಾಭಾರತದಲ್ಲಿ ಕಾಣಿಸುವುದಿಲ್ಲ. ಶ್ರೀಮದಾಚಾರ್ಯರೂ ಮಹಾಭಾರತತಾತ್ಪರ್ಯ ನಿರ್ಣಯದಲ್ಲಿ ಉಲ್ಲೇಖಿಸಿಲ್ಲ. ಹೀಗಿರುವಾಗ ಇದನ್ನು ಪ್ರಾಮಾಣಿಕ ಎಂದು ಹೇಗೆ ಒಪ್ಪುವುದು? ಭೀಮಸೇನನ ವೇಗ ಪೌರುಷಗಳನ್ನು ಕೆಳಗಿಳಿಸುವ ಮೂಲಕ ಅವನ ಜೀವೋತ್ತಮ ವ್ಯಕ್ತಿತ್ವಕ್ಕೆ ಮಸಿ ಬಳಿಯುವ ಈ ಕಥೆಯ ಒಂದು ವಿಚಾರವನ್ನು ಒಪ್ಪಿಕೊಂಡಲ್ಲಿ ಅದನ್ನೊಳ ಗೊಂಡ ಸಮಗ್ರ ಕಥೆಯನ್ನೂ ಒಪ್ಪಿಕೊಂಡಂತೆಯೇ ತಾನೇ!

ವಾಸ್ತವವಾಗಿ ಕುಮಾರವ್ಯಾಸಭಾರತದಲ್ಲಿ '....ರೋಮವೀಶ್ವರಮೂರ್ತಿ ತಾನಾಗಿ ಭುವನದಲಿ ಸ್ವಾಯಂಭು ತಾನುದ್ಭವಿಸೆ.....' ಎಂದಿರುವಂತೆ ಒಂದೊಂದು ರೋಮದಿಂದ ಒಂದೊಂದು ಶಿವಲಿಂಗದ ಉದ್ಭವ. ಆದರೆ ಪುರಂದರದಾಸರು ಆಲಂಕಾರಿಕವಾಗಿ '.....ಲಿಂಗವುದುರಿಸಿದ' ಅಥವಾ 'ಲಿಂಗ ಉದ್ಧರಿಸಿದ' -ಎಂದು ವರ್ಣಿಸಿರುವರೆಂದು ಇಟ್ಟುಕೊಳ್ಳಬಹುದು. ಅಲ್ಲದೆ, ಒಂದೊಂದು ರೋಮದಿಂದ ಒಂದೊಂದೇ ಲಿಂಗದ ಉದ್ಭವವಾದರೂ 'ರೋಮರೋಮಕೆ ಕೋಟಿಲಿಂಗವುದುರಿಸಿದ' ಎಂದು ಅತಿಶಯೋಕ್ತಿಯಾಗಿ ಹೊರಹೊಮ್ಮಿದೆ ಎಂದೂ ಇಟ್ಟುಕೊಳ್ಳಬಹುದು. ಆದರೆ ಭೀಮಸೇನನ ಮಹಿಮೆಗೆ ಚ್ಯುತಿ ತರತಕ್ಕ ಅಪ್ರಮಾಣಿಕವಾದ ಕಥೆಯ ಆಧಾರದಲ್ಲಿ ಹೊರಟ ಮಾತು ಇದು ಎನ್ನುವ ಬದಲು ಯಾವುದಾದರೂ ಶಾಸ್ತ್ರೀಯ ಪ್ರಮೇಯದ ಹಿನ್ನೆಲೆಯಲ್ಲಿ ಹೊರಹೊಮ್ಮಿರಬಹುದೇ? -ಎಂಬುದು ವಿಚಾರಣೀಯ.

ಪಠಿಸಿದಲ್ಲಿ ಅರ್ಥಿಗಳ– ಮೋಕ್ಷ ಪುರುಷಾರ್ಥಪೇಕ್ಷುಗಳ ಆ ಅಪೇಕ್ಷೆ ಕ್ರಮೇಣ ಈಡೇರುವುದೆಂಬ ಅಭಿಪ್ರಾಯದಲ್ಲಿ 'ಆನಂದತೀರ್ಥರೆಂಬ ಅರ್ಥಿಯ ಪೆಸರುಳ್ಳ' ಎಂದು ಸಾರಲಾಗಿದೆ.

**೧೯. ಭಗವಂತನ ಕೂಸಿನ ದರ್ಶನಕ್ಕೆ ಕರೆ:**

'ಕೂಸಿನ ಕಂಡಿರಾ ಮುಖ್ಯಪ್ರಾಣನ ಕಂಡಿರಾ....' –ಎಂಬ ಪುರಂದರದಾಸರ ಮೂರು ನುಡಿಗಳ ಕೀರ್ತನೆ ಮುಖ್ಯಪ್ರಾಣನ ಮೂರು ಅವತಾರಗಳ ಸಾಧನೆಗಳನ್ನು ಉಲ್ಲೇಖಿಸಿ, 'ಪುರಂದರವಿಠಲನ ದಯದಿಂದ ಕೂಸು ಸುಮ್ಮನೆ ಉಡುಪಿಲಿ ನಿಂತಿತು ಕೂಸು ।' –ಎಂದು ಉಡುಪಿಯ ಶ್ರೀ ವಾದಿರಾಜತೀರ್ಥರು ಪ್ರತಿಷ್ಠಾಪಿಸಿದ ಮುಖ್ಯಪ್ರಾಣನೆಂಬ ಭಗವಂತನ ಕೂಸಿನ ದರ್ಶನಕ್ಕೆ ಕರೆನೀಡುವಂತಿದೆ. ಅಥವಾ ಉಡುಪಿಯಲ್ಲಿ ವಿಶೇಷವಾಗಿ ನೆಲೆಸಿದ್ದ ಮಧ್ವರೂಪದ ಮುಖ್ಯಪ್ರಾಣನನ್ನೇ 'ಸುಮ್ಮನೆ ಉಡುಪಿಲಿ ನಿಂತಿತು ಕೂಸು....' ಎಂದಿರುವ ಸಾಧ್ಯತೆಯೂ ಇದೆ.

**೨೦. ರೂಪತ್ರಯದಲ್ಲಿ ಬೇರೆ ಬೇರ ಬಗೆಯ ಬಾಂಧವ್ಯ:**

'ಹನುಮ ನಮ್ಮ ತಾಯಿ ತಂದೆ....' –ಎಂಬ ಪುರಂದರದಾಸರ ಮೂರು ನುಡಿಗಳ ಹಾಡು ಆಂಜನೇಯ ರೂಪದಿಂದ ಕಪಿಗಳಿಗೆ ತಂದೆತಾಯಿಗಳಂತೆ ಭೀಮರೂಪದಿಂದ ಪಾರ್ಥನಿಗೆ ಬಂಧುಬಳಗದಂತೆ, ಆನಂದತೀರ್ಥರೂಪದಿಂದ ಸಾಧುತತಿಗಳಿಗೆ ಗತಿಗೋತ್ರರಂತೆ ನೆರವು ನೀಡಿದ್ದನ್ನು ಸಾರುತ್ತ 'ಮಾತರ್ಮೇ ಮಾತರಿಶ್ವನ್.....' ಎಂಬ ವಾಯು ಸ್ತುತಿಯ ಪ್ರಾರ್ಥನೆಗೆ ಭಾಷ್ಯರೂಪದಂತೆ ಇದೆ.

**೨೧. ಹನುಮಂತ ಬಲವಂತನೂ ಮೂಲಗುರುವೂ ಅಹುದು:**

'ಅಹುದಹುದು ಹನುಮಂತ ಅಹುದು ನೀ ಬಲವಂತ....' ಎಂದು ಆರಂಭವಾಗುವ ಮೂರು ನುಡಿಗಳ ಪದ್ಯದಲ್ಲಿ ಶ್ರೀ ವಾದಿರಾಜಗುರುಗಳು ಮುದ್ದು ಶ್ರೀ ಹಯವದನದಾಸ ಮುಖ್ಯಪ್ರಾಣನ ಮೂರು ಅವತಾರಗಳ ಸಾಧನೆಗಳನ್ನು ಉಲ್ಲೇಖಿಸಿ, ಪಲ್ಲವಿಯಲ್ಲಿ ಹನುಮಂತ ಬಲವಂತನೂ ಅಹುದು; ಮೂಲರೂಪದಿಂದ ಮೂಲಗುರುವೂ ಅಹುದು –ಎಂದು ಸಾರಿರುವರು.

**೨೨. ಯಂತ್ರೋದ್ಧಾರನ ವಿಚಿತ್ರ ಚರಿತ:**

'ಇದು ಏನೋ ಚರಿತ ಯಂತ್ರೋದ್ಧಾರ....' ಎಂಬ ಐದು ನುಡಿಗಳ ಕೀರ್ತನೆಯಲ್ಲಿ ಗೋಪಾಲದಾಸರು ಪ್ರಾಣದೇವನ ಮೂರು ಅವತಾರಗಳ ಸಾಧನೆಗಳನ್ನು ಉಲ್ಲೇಖಿಸಿ ಪಂಪೆಯ ಕುಳಿತ ಭಂಗಿಯ ಯಂತ್ರೋದ್ಧಾರ ಪ್ರಾಣನಲ್ಲಿ 'ಗೋಪಾಲವಿಠಲಗೆ ನೀ ಪ್ರೀತಿಮಂತ್ರಿಯು ವ್ಯಾಪಾರ ಮಾಡದೆ ಈ ಪರಿ ಕುಳಿತಿಹೆ' ಎಂದು ವಿಚಾರಿಸುತ್ತಿರುವಂತಿದೆ.

**೨೩. ಪ್ರೀತಿಸುವವರಿಗೆ ಮುಕುತಿ ಈವ ಭಾರತೀಶ:**

'ಈತನೀಗ ಭಾರತೀಶನು ತನ್ನ ಪ್ರೀತಿಸುವವರ....' ಇತ್ಯಾದಿಯಾಗಿ ಪ್ರಾರಂಭವಾಗುವ ಮೂರು ನುಡಿಗಳುಳ್ಳ ಕೀರ್ತನೆಯಲ್ಲಿ ವಿಜಯದಾಸರು ಭಾರತೀಶನ ಮೂರು

ಅವತಾರಗಳ ಮಹಿಮೆಯನ್ನು ಬಣ್ಣಿಸಿ, 'ಈತನೀಗ ಭಾರತೀಶನು ತನ್ನ ಪ್ರೀತಿಸುವವರ ಮನವ ಮಾತು ಸಲಿಸಿ ಮುಕುತಿ ಈವ' ಎಂಬ ಪಲ್ಲವಿಯಲ್ಲಿ ಭಾರತೀಶನು ತನ್ನನ್ನು ಪ್ರೀತಿಸುವ ಭಕ್ತರ ಹಾರ್ದಿಕ ಪ್ರಾರ್ಥನೆಯನ್ನು ಮುಕುಂದನ ಅಡಿಗೆ ಸಲ್ಲಿಸಿ '.....ವಾಯುಸ್ತು ತದನುಜ್ಞಯಾ' ಎಂದಿರುವಂತೆ ಮುಕುಂದನ ಅನುಜ್ಞೆಗನುಗುಣವಾಗಿ '....ಮುಕುತಿ ಈವ' ಎಂದು ಸಾರಿರುವರು.

**೨೪. ವಾತಜಾತನ ಮೂರು ರೂಪಗಳ ಸಾಧನೆಗಳು:**

'ಈತನೀಗ ವಾತಜಾತನು....' ಎಂಬ ಏಳು ನುಡಿಗಳ ಕೀರ್ತನೆಯಲ್ಲಿ ವ್ಯಾಸ ತೀರ್ಥರು ವಾತಜಾತನ ಮೂರು ರೂಪಗಳ ಸಾಧನೆಗಳನ್ನು ಉಲ್ಲೇಖಿಸುತ್ತ 'ಸುರರ ಗಣಕೆ ಶಾಸ್ತ್ರಾಮೃತವೆರೆದು ಶ್ರೀಕೃಷ್ಣನ್ನ ತೋರಿ....' ಎಂದು ಶ್ರೀ ಮಧ್ವರ ವಾಙ್ಮಯ ಕೊಡುಗೆ ಮುಖ್ಯವಾಗಿ ಸುರರಿಗಾಗಿ ಎಂದೂ, ಅದು ಭಗವಂತನ ಸಾಕ್ಷಾತ್ಕಾರಕ್ಕೆ ಉಪಯುಕ್ತ ವಾದುದೆಂದೂ ಸಾರಿರುವರು.

**೨೫. ಯತಿಕುಲ ಶಿರೋರತ್ನನ್ನ ತುತಿಸುವ ಹಂಬಲ:**

'ಎಂತು ತುತಿಸಲೋ ನಿನ್ನ ಯತಿಕುಲಶಿರೋರತ್ನ.....' –ಎಂಬ ಮೂರು ನುಡಿಗಳ ಕೀರ್ತನೆಯಲ್ಲಿ ಆಂಜನೇಯ, ಭೀಮ ರೂಪಗಳ ಸಾಧನೆಗಳ ಜೊತೆಗೆ ಶ್ರೀ ಮಧ್ವಾ ವತಾರದ ವಿಶಿಷ್ಟ ಸಾಧನೆಯಾಗಿ 'ಕ್ಷಿತಿಗಧಿಕ ಉಡುಪಿಯಲಿ ಶ್ರೀಕೃಷ್ಣನನು ನಿಲಿಸಿ....' ಎಂದು ಉಡುಪಿ ಶ್ರೀಕೃಷ್ಣನ ಪ್ರತಿಷ್ಠೆಯನ್ನು ಸಾರಲಾಗಿದೆ.

**೨೬. ಭಾರತೀಕಾಂತನ ಮಹಿಮೆಗಳು:**

'ಎಂಥ ಬಲವಂತನೋ ಕುಂತಿಯ ಸುಜಾತನೋ....' ಎಂದು ಭೀಮನ ಬಲಾತಿಶ ಯದ ಉದ್ಗಾರದೊಂದಿಗೆ ಪ್ರಾರಂಭವಾಗುವ ಪುರಂದರದಾಸರ ಐದು ನುಡಿಗಳ ಕೀರ್ತನೆ ಯಲ್ಲಿ ಭಾರತೀಕಾಂತನ ಮೂರು ರೂಪಗಳ ಕೆಲವು ಮಹಿಮೆಗಳ ಸಂಗ್ರಹ ನಡೆದಿದೆ.

**೨೭. ಹರಿಕಾರ್ಯಧುರ್ಯ ಕರುಣಾತಿಶಯ:**

'ಏನೆಂಬೆ ನಿಮ್ಮ ಕರುಣಕೆ....' ಎಂದು ಶ್ರೀಮದಾನಂದತೀರ್ಥರ ಕರುಣಾತಿಶಯದ ಉದ್ಗಾರದೊಂದಿಗೆ ಪ್ರಾರಂಭವಾಗುವ ಒಂಬತ್ತು ನುಡಿಗಳ ಕೀರ್ತನೆಯಲ್ಲಿ ವ್ಯಾಸತೀರ್ಥರು ಆಂಜನೇಯಾವತಾರದ ಹಾಗೂ ಭೀಮಾವತಾರದ ಸಾಧನೆಗಳಿಗೆ ಹೋಲುವ ಆಧ್ಯಾತ್ಮಿಕ ಸಾಧನೆಗಳು ಮಧ್ವಾವತಾರದಲ್ಲಿ ಸಾತ್ವಿಕರ ಕುರಿತಾದ ಕರುಣೆಯಿಂದಾಗಿ ನಡೆದಿವೆ ಎಂದು ಬಣ್ಣಿಸಿರುವರು.

**೨೮. ಮಹಿಪತಿ ಮುಖ್ಯಪ್ರಾಣನ ಗುಣಧರ್ಮಗಳು:**

'ಗುರುಮಧ್ವಮುನಿರನ್ನ....' ಎಂಬ ಮಹಿಪತಿದಾಸರ ಮೂರು ನುಡಿಗಳ ಕಿರು ಪದ್ಯ ಅರ್ಥೈಸಿಕೊಳ್ಳಲು ಕ್ಲೇಶವೆನಿಸುವುದಾದರೂ 'ಹರಿಭಕ್ತಿಯಲಿ ಅವಿಚ್ಛಿನ್ನ ಸರಿ ಯಾರು. ಧರೆಯೊಳು ನಿನ್ನ' 'ಶ್ರೀಹರಿಸಾನ್ನಿಧ್ಯಪೂರ್ಣ ಇಹ' 'ಮುಖ್ಯಪ್ರಾಣ ಸ್ವಹಿತಸಾಧನ'

-ಮುಂತಾದ ಮಾತುಗಳಿಂದ ಮುಖ್ಯಪ್ರಾಣನ ಕೆಲವು ವಿಶಿಷ್ಟ ಗುಣಧರ್ಮಗಳನ್ನು ಉಲ್ಲೇಖಿಸುತ್ತಿರುವುದು ಎದ್ದು ಕಾಣಿಸುವುದು.

೨೯. **ಗುರುರಾಯರ ನಂಬಲು ಕರೆ:**

'ಗುರುರಾಯರ ನಂಬಿರೋ....' ಎಂದು ಮಾರುತಿ ಎಂಬ ಗುರುರಾಯರನ್ನು ನಂಬಲು ಕರೆ ಕೊಟ್ಟಿರುವ ಪುರಂದರದಾಸರು, ಆ ಕರೆಗೆ ಪೂರಕವಾಗಿ ಗುರುರಾಯರು ತಮ್ಮ ಅವತಾರಗಳಲ್ಲಿ ನಡೆಸಿದ ಸಾಧನೆಗಳನ್ನು ಉಲ್ಲೇಖಿಸಿರುವರು. 'ದುರಿತವ ಕಳೆದು ಸದ್ಗತಿಯ ಪಡೆವವರೆಲ್ಲ....' ಎಂಬ ಪಲ್ಲವಿಯ ಮಾತಿನಿಂದ ದುರಿತವ ಕಳೆಯುವಲ್ಲೂ, ಸದ್ಗತಿಯನ್ನು ಪಡೆಯುವಲ್ಲೂ ಗುರುರಾಯರ ನಂಬಿಕೆ ಹೇಗೆ ಪ್ರಯೋಜಕವಾಗಬಲ್ಲವೆಂದು ಸೂಚಿತವಾಗಿದೆ.

೩೦. **ಮಧ್ವಾಖ್ಯ ಮುನಿರಾಯಗೆ ಜಯ:**

'ಜಯ ಜಯತು ಶುಭಕಾಯ....' ಎಂದು ಶ್ರೀ ಮಧ್ವರ ಜಯದ ಘೋಷಣೆಯೊಂದಿಗೇ ಪ್ರಾರಂಭವಾಗುವ ಶ್ರೀ ವಾದಿರಾಜತೀರ್ಥರ ಐದು ನುಡಿಗಳ ಕೀರ್ತನೆಯಲ್ಲಿ ಮಧ್ವಮುನಿರಾಯರನ್ನು ಸಂಬೋಧಿಸಿ ಅವರ ಹಿಂದಿನ ಎರಡು ಅವತಾರಗಳಲ್ಲಿ ನಡೆಸಿದ ಸಾಧನೆಗಳನ್ನು ಉಲ್ಲೇಖಿಸಿ, ಮಧ್ವಾವತಾರದ ವಾಙ್ಮಯ ಕೊಡುಗೆಯನ್ನು ಸಾರುತ್ತ 'ನಿನ್ನ ಮತವೇ ವೇದಶಾಸ್ತ್ರಗಳ ಸಮ್ಮತವು; ನಿನ್ನ ಮತವೇ ಇಹಂಪರಂಗಳಿಗೆ ಸಾಧನವು' ಎಂದು ಉದ್ಘೋಷಿಸಲಾಗಿದೆ.

೩೧. **ಪುರಂದರವಿಠಲನ ಮಂತ್ರಿಗೆ ಜಯಮಂಗಳಮ್:**

'ಜಯಮಂಗಳಂ ನಿತ್ಯ ಶುಭಮಂಗಳಮ್' -ಎಂದು ಪ್ರಾರಂಭವಾಗುವ ಪುರಂದರ ದಾಸರ ಮೂರು ನುಡಿಗಳ ಕೀರ್ತನೆಯಲ್ಲಿ ಮುಖ್ಯಪ್ರಾಣನ ಮೂರು ಅವತಾರಗಳ ಕೆಲವು ಮಹಿಮೆಗಳ ಉಲ್ಲೇಖದೊಂದಿಗೆ ಆ ಮೂರೂ ರೂಪಗಳಿಗೆ ಮಂಗಳವನ್ನು ಹಾರೈಸ ಲಾಗಿದೆ. ಉಪಸಂಹಾರದಲ್ಲಿ ಮುಖ್ಯಪ್ರಾಣನನ್ನು ಪುರಂದರವಿಠಲನ ಮಂತ್ರಿಯನ್ನಾಗಿ ಪರಿಚಯಿಸಿಕೊಡಲಾಗಿ.

೩೨. **ವೇದವ್ಯಾಸರ ಮಾರ್ಗವ ತೋರಿದಗೆ ಜಯಮಂಗಳ:**

'ಜಯಮಂಗಳಂ ನಿತ್ಯ ಶುಭಮಂಗಳಮ್' -ಎಂದು ಮಂಗಳದ ಉದ್ಘೋಷಣದೊಂದಿಗೆ ಪ್ರಾರಂಭವಾಗುವ ಮೂರು ನುಡಿಗಳ ಪುರಂದರದಾಸರ ಈ ಹಾಡಿನಲ್ಲಿ ವಾಯುದೇವನ ಅವತಾರತ್ರಯದ ಪ್ರಸ್ತಾವ ಮಾಡಿ 'ಪುರಂದರವಿಠಲನ್ನ ಗತಿ ಮಾರ್ಗವ ತೋರಿದ ಮಧ್ವಮುನಿಗೆ' -ಎಂದು ಮಧ್ವರ ಕೊಡುಗೆಯ ಉದ್ಘೋಷದೊಂದಿಗೆ ಉಪಸಂಹರಿಸಲಾಗಿದೆ.

೩೩. **ಜಯ ವಾಯುಹನುಮಂತ ಜಯ ಭೀಮಬಲವಂತ:**

'ಜಯ ವಾಯುಹನುಮಂತ ಜಯ ಭೀಮಬಲವಂತ....' ಇತ್ಯಾದಿಯಾಗಿ ವಾಯು ದೇವನ ಮೂಲರೂಪ, ಹಾಗೂ ಅವತಾರರೂಪಗಳಿಗೆ ಜಯಕಾರದೊಂದಿಗೇ ಪ್ರಾರಂಭ

ವಾಗುವ ವ್ಯಾಸತೀರ್ಥರ ಐದು ನುಡಿಗಳ ಈ ಪದ್ಯ ಅವತಾರತ್ರಯದ ಕೆಲವು ಮಹಿಮೆ ಗಳನ್ನು ಉಲ್ಲೇಖಿಸಿದೆ.

**೩೪. ಸುಲಲಿತ ಮುಖ್ಯಪ್ರಾಣನಿಗೆ ಶುಭಮಂಗಳ:**

'ಜಲಧಿ ಲಂಘಿಸಿದವಗೆ ಜಯಮಂಗಳ....' –ಎಂದು ಪ್ರಾರಂಭವಾಗುವ ಪುರಂದರ ದಾಸರ ಮೂರು ನುಡಿಗಳ ಈ ಪದ್ಯದಲ್ಲಿ ಮುಖ್ಯಪ್ರಾಣನ ಅವತಾರತ್ರಯದ ಕೆಲವು ಮಹಿಮೆಗಳ ಉಲ್ಲೇಖ ನಡೆದಿದೆ.

**೩೫. ಭಾವಿ ಅಜನ ನೋಡಲು, ಪಾಡಲು ಕರೆ:**

'ಧೀರನ ನೋಡಿರೈ ಕರುಣಾಪೂರನ ನೋಡಿರೈ....' ಎಂದು ಪ್ರಾರಂಭವಾಗುವ ವ್ಯಾಸತೀರ್ಥರ ಮೂರ ನುಡಿಗಳ ಈ ಕೀರ್ತನೆಯಲ್ಲಿ ವಾಯುದೇವನ ಅವತಾರತ್ರಯದ ಪ್ರಸ್ತಾವ ಬಂದಿದೆ.

**೩೬. ಹನುಮಭೀಮರ ಸಮಾಗಮ:**

ಪುರಂದರದಾಸರ 'ನರವರ್ಯ ಭೀಮಸೇನ ನಾರಿಗೆ ಕುಸುಮ ತರುವೆನೆನುತ....' ಇತ್ಯಾದಿಯಾಗಿ ಪ್ರಾರಂಭವಾಗುವ ೧೦ ನುಡಿಗಳ ಪದ್ಯದಲ್ಲಿ ಹನುಮ-ಭೀಮರ ಸಮಾಗಮದ ವಿವರಣೆ ಬಂದಿದೆ. ಕೊನೆಯ ನುಡಿಯಲ್ಲಿ ಫಲಶ್ರುತಿಯನ್ನೂ ತಿಳಿಸಲಾಗಿದೆ.

**೩೭. ಮಧ್ವಮುನಿಯ ನೆರೆನಂಬಿ ಹಿತವ ಪಡೆಯಲು ಕರೆ:**

'ನೆರೆನಂಬಿ ಪಡೆಯಿರೋ ಹಿತವ....' –ಎಂದು ವಾದಿರಾಜತೀರ್ಥರ ಕೀರ್ತನೆಯಲ್ಲಿ ವಾಯುದೇವನ ಅವತಾರತ್ರಯದ ಕೆಲವು ಸಾಧನೆಗಳನ್ನು ಉಲ್ಲೇಖಿಸಿ, ಗುರುಗಳಾದ ಮಧ್ವಮುನಿಯನ್ನು ನೆರೆ ನಂಬಿ ಹಿತವ ಪಡೆಯಲು ಕರೆ ನೀಡಲಾಗಿದೆ.

**೩೮. ಪರಮಯೋಗಿ ಪ್ರಾಣದೇವನನ್ನು ನೋಡಲು ಕರೆ:**

'ಪರಮಯೋಗಿಯ ನೋಡಿರೋ....' ಎಂದು ಪ್ರಾರಂಭವಾಗುವ ವಿಜಯದಾಸರ ಮೂರು ನುಡಿಗಳ ಕೀರ್ತನೆಯಲ್ಲಿ ಪ್ರಾಣಪತಿಯ ಅವತಾರತ್ರಯದ ಸಾಧನೆಗಳನ್ನು ತಿಳಿಸಲಾಗಿದೆ.

೩೯. ಸದ್ವೈಷ್ಣವರನುದ್ಧಾರ ಮಾಡಿದ ಪುರಂದರವಿಠಲನ ದಾಸ:

'ಪರಾಕು ಭೀಮನೆಂದು ಸ್ತುತಿಸಿವೆ.....' ಎಂದು ಪ್ರಾರಂಭವಾಗುವ ಮೂರು ನುಡಿಗಳ ಈ ಕೀರ್ತನೆ ವಾಯುದೇವನ ಅವತಾರತ್ರಯದ ಕುರಿತಾಗಿ ಇದೆ.

**೪೦. ಪ್ರಾಣನಾಥನಲ್ಲಿ ಪಾಲಿಸಲು ಬಿನ್ನಹ:**

'ಪ್ರಾಣನಾಥ ಪಾಲಿಸೋ ನೀ ಎನ್ನ....' ಎಂದು ಪ್ರಾರಂಭವಾಗುವ ಪುರಂದರದಾಸರ ಕೀರ್ತನೆಯಲ್ಲಿ ಅವತಾರತ್ರಯದ ಪ್ರಸ್ತಾವ ಬಂದಿದೆ.

**೪೧. ಭಾರತೀಶನಲ್ಲಿ ಭವಜನಿತ ದುಃಖವ ದೂರಮಾಡಲು ಬೇಡಿಕೆ:**

'ಭಾರತೀಶನೇ ಎನ್ನ ಭವಜನಿತ ದುಃಖವ ದೂರಮಾಡು....' ಎಂದು ಪ್ರಾರಂಭ ವಾಗುವ, ಪುರಂದರದಾಸರ ಮೂರು ನುಡಿಗಳ ಕೀರ್ತನೆ ಮುಖ್ಯಪ್ರಾಣನ ಅವತಾರ ತ್ರಯದ ಕೆಲವು ಮಹಿಮೆಗಳ ಮೇಲೆ ಬೆಳಕು ಚೆಲ್ಲುತ್ತಿದೆ.

**೪೨. ಪುರಂದರವಿಠಲನ ದಾಸ ಮಧ್ವರಾಯ:**

'ಮಧ್ವರಾಯ ಮಧ್ವರಾಯ ಗುರುಮಧ್ವರಾಯ....' -ಎಂದು ಪ್ರಾರಂಭವಾಗುವ ಎರಡು ನುಡಿಗಳ ಪುರಂದರದಾಸರ ಹಾಡಿನಲ್ಲಿ ಮುಖ್ಯಪ್ರಾಣನ ಮೂರು ಅವತಾರಗಳ ಪ್ರಸ್ತಾವ ಬಂದಿದೆ.

**೪೩. ಪುರಂದರವಿಠಲನ ನೆನೆಯುವ ಕರುಣಾಸಾಗರ:**

'ಮಂಗಳಂ ಮಂಗಳಂ ಮುಖ್ಯಪ್ರಾಣರಾಯರಿಗೆ....' -ಎಂದು ಪ್ರಾರಂಭವಾಗುವ ಪುರಂದರದಾಸರ ಮೂರು ನುಡಿಗಳ ಕೀರ್ತನೆಯಲ್ಲಿ ಮುಖ್ಯಪ್ರಾಣನ ಹನುಮಂತ, ಭೀಮಸೇನ, ಮಧ್ವ ಈ ಮೂರು ರೂಪಗಳಿಗೆ ಮಂಗಳವನ್ನು ಸಾರಲಾಗಿದೆ.

**೪೪. ಪ್ರತಿಯಿಲ್ಲದೆಲೆ ಮೆರೆದ ವಿಜಯ ಹನುಮಂತ:**

ಪುರಂದರದಾಸರ 'ಮಾ ಮಝು ಬಾಪುರೆ ಹನುಮಂತ....' -ಎಂದು ಪ್ರಾರಂಭ ವಾಗುವ ಐದು ನುಡಿಗಳ ಹಾಡಿನಲ್ಲಿ ಕೊನೆಯದಾಗಿ ಐದನೆಯ ನುಡಿಯಲ್ಲಿ ಭೀಮಾವ ತಾರದ ಹಾಗೂ ಮಧ್ವಾವತಾರದ ಕಿಂಚಿತ್ ಪ್ರಸ್ತಾವವಿದ್ದು ಉಳಿದೆಲ್ಲ ನುಡಿಗಳಲ್ಲಿ ಹನೂಮಂತನ ಮಹಿಮೆಗಳ ಪ್ರತಿಪಾದನೆಯೇ ನಡೆದಿದೆ.

**೪೫. ಮೂಲಗುರುಗಳಾದ ಮಧ್ವರನ್ನು ಕಾಣಲು ಕರೆ:**

'ಮಾರುತಾವತಾರನೀತ ನಮ್ಮ ಗುರು ಕಾಣಿರೋ....' -ಎಂದು ಪ್ರಾರಂಭವಾಗುವ ಎರಡು ನುಡಿಗಳ ಪುರಂದರದಾಸರ ಹಾಡಿನಲ್ಲಿ ಮುಖ್ಯಪ್ರಾಣನ ಮೂರೂ ಅವತಾರಗಳ ಪ್ರಸ್ತಾವ ಮಾಡಿ ಕೊನೆಯ ನುಡಿಯಲ್ಲಿ ಪುರಂದರವಿಠಲನ ದಾಸರಾದ ಶ್ರೀ ಮಧ್ವಾಚಾ ರ್ಯರೇ ನಮ್ಮ ಮೂಲಗುರು ಕಾಣಿರೋ.....' ಎಂದು ಉದ್ಘೋಷಿಸಲಾಗಿದೆ.

**೪೬. ಜ್ಞಾನ ಕರುಣಿಸಲು ಮಾರುತಿಯಲ್ಲಿ ಪ್ರಾರ್ಥನೆ:**

'ಮಾರುತಿ ಮಜ್ಜನಕ ಮಾರುತಿ....' -ಎಂದು ಪ್ರಾರಂಭವಾಗುವ ಜಗನ್ನಾಥದಾಸರ ನುಡಿಗಳ ಹಾಡಿನಲ್ಲಿ ಮಾರುತಿಯ ಮೂರು ಅವತಾರಗಳ ಮಹಿಮೆಗಳನ್ನು, ಲೀಲೆಗಳನ್ನು ಪ್ರಸ್ತಾಪಿಸಿ 'ಅಜ್ಞಾನವನ್ನು ದೂರ ಓಡಿಸಿ ಜ್ಞಾನ ಕರುಣಿಸಲು ಪ್ರಾರ್ಥಿಸಿಕೊಳ್ಳಲಾಗಿದೆ.

**೪೭. ಮುದ್ದು ಮುಖದ ಮುಖ್ಯಪ್ರಾಣ:**

'ಮುದ್ದು ಮುಖದಾತ ನಮ್ಮ ಮುಖ್ಯಪ್ರಾಣನಾಥನೋ....' -ಎಂದು ಪ್ರಾರಂಭ ವಾಗುವ ವಾದಿರಾಜಗುರುಗಳ ಐದು ನುಡಿಯ ಹಾಡಿನಲ್ಲಿ ವಾಯುದೇವನ ಮೂರು ಅವತಾರಗಳ ಪ್ರಸ್ತಾವ ಬಂದಿದೆ.

೪೮. ಸಾರಗ್ರಂಥಗಳ ಅರ್ಪಿಸಿದ ಗುರು:

'ರಾಮದೂತನ ಪಾದತಾಮರಸವ ಕಂಡ ಆ ಮನುಜನೆ ಧನ್ಯನು....' –ಎಂದು ಪ್ರಾರಂಭವಾಗುವ, ಗೋಪಾಲದಾಸರ ಎರಡು ನುಡಿಗಳ ಕೀರ್ತನೆಯಲ್ಲಿ ಮುಖ್ಯಪ್ರಾಣನ ಮೂರು ಅವತಾರಗಳ ಮಹಿಮೆಗಳನ್ನು ಉಲ್ಲೇಖಿಸುತ್ತ, ಶ್ರೀ ಮಧ್ವರ ವಾಙ್ಮಯ ಸೇವೆಯನ್ನು ಹೀಗೆ ಸಾರಲಾಗಿದೆ– 'ಧೀರ ನೀನೇಳಧಿಕ ತ್ರಿದಶ ಸಾರ ಗ್ರಂಥಗಳ ವಿರಚಿಸುವ ಮಹಶೂರ ಶ್ರೀ ಗೋಪಾಲವಿಠಲನ ಚಾರುಚರಣಕೆ ಅರ್ಪಿಸಿದ ಗುರು''

೪೯. ರಾಮ–ಕೃಷ್ಣ–ವ್ಯಾಸರಿಗೆ ಪ್ರಿಯರಾದವರಿಗೆ ಲಾಲಿ:

'ಲಾಲಿ ಲಾಲಿ ಹನುಮಭೀಮಮಧ್ವಾರ್ಯ ಲಾಲಿ....' –ಎಂದು ಪ್ರಾರಂಭವಾಗುವ ಲಾಲಿ ಹಾಡಿನಲ್ಲಿ ವಾಯುದೇವನ ಮೂರು ಅವತಾರಗಳನ್ನು 'ರಾಮ–ಕೃಷ್ಣ–ವ್ಯಾಸ' ಪ್ರಿಯರನ್ನಾಗಿ ಉಲ್ಲೇಖಿಸಿ, ಅವರ ಕೆಲವು ಸಾಧನೆಗಳನ್ನು ಉಲ್ಲೇಖಿಸಿ ಲಾಲಿ ಹಾಡಲಾಗಿದೆ. ಮಧ್ವರೂಪದ ಪ್ರಸ್ತಾವದಲ್ಲಿ 'ಬಂದು ಉಡುಪಿಯಲಿ ನೆಲೆಯಾಗಿ ನಿಂದ ವಂದಿಸುವೆ ನಿದ್ರೆಗೈ ಹರಿಧ್ಯಾನದಿಂದ....' ಎಂದು ಶ್ರೀ ಮಧ್ವರ ನಿದ್ದೆಯ ವೈಶಿಷ್ಟ್ಯವನ್ನು ಸಾರಲಾಗಿದೆ.

೫೦. ವೀರ ಹನುಮನಲ್ಲಿ ಸುಜ್ಞಾನವಿತ್ತು ಪಾಲಿಸಲು ಪ್ರಾರ್ಥನೆ:

'ವೀರಹನುಮ ಬಹುಪರಾಕ್ರಮಿ....' –ಎಂದು ಪ್ರಾರಂಭವಾಗುವ ಮೂರು ನುಡಿಗಳ ಹಾಡಿನಲ್ಲಿ ಪುರಂದರದಾಸರು ವಾಯುದೇವನ ಮೂರೂ ಅವತಾರಗಳನ್ನು ಪ್ರಸ್ತಾವಿಸಿರುವರು. ಹನೂಮಂತನನ್ನು ಜೀವೋತ್ತಮನನ್ನಾಗಿ ಕರೆದು 'ಸುಜ್ಞಾನವಿತ್ತು ಪಾಲಿಸೆನ್ನ....' –ಎಂದು ಬೇಡಿಕೊಳ್ಳಲಾಗಿದೆ.

೫೧. ಶರಣಾಗ್ರೇಸರನಲ್ಲಿ ಮನಕೆ ಒದಗಿಸಲು ಬಿನ್ನಹ:

'ಶರಣು ಹರಿಯ ಶರಣಾಗ್ರೇಸರನೆ....' –ಎಂದು ಪ್ರಾರಂಭವಾಗುವ ಗೋಪಾಲದಾಸರ ನುಡಿಗಳ ಹಾಡಿನಲ್ಲಿ ವಾಯುದೇವನ ಮೂರು ಅವತಾರಗಳ ಮಹಿಮೆಗಳನ್ನು ತಿಳಿಸಲಾಗಿದೆಯಲ್ಲದೆ, 'ಮೂರು ಅವತಾರದಲ್ಲಿ ಮೂರು ಭಕುತಿಯಿಂದ ಮೂರು ಮೂರ್ತಿಗಳನ್ನು ಭಜಿಪ ಮೂಲಗುರುವೇ' –ಎಂದು ಉದ್ಘೋಷಿಸಲಾಗಿದೆ.

೫೨. ಪ್ರಾಣೇಶ ತನ್ನ ಯಾವ ಯಾವ ರೂಪದಿಂದ ಏನೇನು ಮಾಡಿದ?

'ಸಾರಿ ಬಂದನೆ ಪ್ರಾಣೇಶ ಬಂದನೆ....' –ಎಂದು ಪ್ರಾರಂಭವಾಗುವ ಪುರಂದರ ದಾಸರ ಮೂರು ನುಡಿಗಳ ಹಾಡಿನಲ್ಲಿ ಮುಖ್ಯಪ್ರಾಣನ ಮೂರು ಅವತಾರಗಳ ಕೆಲವು ಮಹಿಮೆಗಳನ್ನು ಸಾರಲಾಗಿದೆ. ಉಪಸಂಹಾರದಲ್ಲಿ ಶ್ರೀ ಮಧ್ವರೂಪಕ್ಕೆ ಸಂಬಂಧಿಸಿದಂತೆ –'ಅದ್ವೈತವ ಗೆದ್ದು ಪುರಂದರವಿಠಲನ ಮುಂದೆ ನಿಂತನೆ' –ಎಂದು ಸಾರಲಾಗಿದೆ. ಹೀಗೆ ಶ್ರೀ ಮಧ್ವರು ಪುರಂದರವಿಠಲನ ಮುಂದೆ ನಿಂತದ್ದು ಯಾವಾಗ? –ಎಂಬುದು ವಿಚಾರಣೀಯ.

**೫೩. ಜಯವಂತನಾದ ಹನುಮಂತ:**

'ಹನುಮಂತ ನೀ ಬಲು ಜಯವಂತನಯ್ಯ....' –ಎಂದು ಪ್ರಾರಂಭವಾಗುವ ಹಾಡಿನಲ್ಲಿ ಶ್ರೀ ವಾದಿರಾಜಸ್ವಾಮಿಗಳು 'ಧೃತರಾಷ್ಟ್ರವಂಶವನು ಕಷ್ಟವಿಲ್ಲದೆ ಕೊಂದು ಕೃಷ್ಣಗರ್ಪಿಸಿದೆ' ಎಂದು ದುಷ್ಟರ ಸಂಹಾರದ ಬಗ್ಗೆ ಭೀಮಸೇನನಿಗಿದ್ದ ಅನುಸಂಧಾನದ ಮೇಲೆ ಬೆಳಕು ಚೆಲ್ಲಿರುವರು.

**೫೪. ಹನುಮ ಭೀಮ ಮಧ್ವರ ನೆನೆದು ಬದುಕಲು ಕರೆ:**

'ಹನಮ ಭೀಮ ಮಧ್ವಮುನಿಯ ನೆನೆದು ಬದುಕಿರೋ....' –ಎಂದು ಪ್ರಾರಂಭವಾಗುವ ಎರಡು ನುಡಿಗಳ ಪುರಂದರದಾಸರ ಹಾಡಿನಲ್ಲಿ ಹನುಮ ಭೀಮ ಮಧ್ವಮುನಿಯ ನೆನೆದು ಬದುಕಲು ಕರೆ ನೀಡಲಾಗಿದೆ.

**೫೫. ಶುದ್ಧಾತ್ಮರನ್ನು ಮಾಳ್ಪ ಗುರುಗಳನ್ನು ಭಜಿಸಲು ಕರೆ:**

'ಶ್ರೀತತ್ವವಾದ ಮತವ....' –ಎಂದು ಪ್ರಾರಂಭವಾಗುವ ಒಂಬತ್ತು ನುಡಿಗಳನ್ನೊಳಗೊಂಡ ದೀರ್ಘ ಹಾಡಿನಲ್ಲಿ ಪುರಂದರದಾಸರು ವಾಯುದೇವನ ಅವತಾರಗಳ ಕೆಲವು ಮಹಿಮೆಗಳನ್ನು ಸಾರಿರುವರು.

**೫೬. ಭಾರತಿಯನ್ನು ಮರಳುಗೊಳಿಸಿದವನು:**

'ಏನು ಮರುಳಾದ್ಯಮ್ಮ ಎಲೆ ಭಾರತಿ....' –ಎಂದು ಪ್ರಾರಂಭವಾಗುವ ಮೂರು ನುಡಿಗಳ ಪುರಂದರದಾಸರ ಈ ಹಾಡಿನಲ್ಲಿ ವಾಯುದೇವನ ಮೂರು ಅವತಾರಗಳ ಕೆಲವು ಸಂಗತಿಗಳನ್ನು ನಿಂದಾಸ್ತುತಿಯಾಗಿ ಒಗಟು ರೂಪದಲ್ಲಿ ಪ್ರಸ್ತುತ ಪಡಿಸಲಾಗಿದೆ. 'ಕಣ್ಣಿಲ್ಲದವಳ ಗರ್ಭದಲಿ ಜನಿಸಿ ಬಂದು ಕೇಸರಿಯ ಪತ್ನಿಗೆ ಕಣ್ಣು ಇದ್ದಿಲ್ಲ' ಎಂದು ಇದರಿಂದ ಸೂಚಿತವಾಗಬಲ್ಲದು. ಹಣ್ಣಿಗಾಗಿ ಪೋಗಿ ವನವ ಕಿತ್ತೀಡಾಡಿ –ಎನ್ನುವ ಮಾತಿನಲ್ಲಿ ಹಣ್ಣಿಗಾಗಿ ಎನ್ನುವ ಬದಲು 'ಹೆಣ್ಣಿಗಾಗಿ' –ಸೀತೆಗಾಗಿ ಎಂದು ಇದ್ದರೆ ಚೆನ್ನಾಗಿರುವುದು. ಶ್ರೀ ಮಧ್ವರು ಸಂನ್ಯಾಸವನ್ನು ಸ್ವೀಕರಿಸಿ ತತ್ವಪ್ರಚಾರಕ್ಕಾಗಿ ಸಂಚಾರ ನಡೆಸಿದುದನ್ನು– 'ಮಂಡೆ ಬೋಳಾಗಿ ಭೂಮಂಡಲವ ತಿರುಗಿದನು' ಎಂಬ ಮಾತಿನಲ್ಲಿ ತಿಳಿಸಲಾಗಿದೆ.

**೫೭. ಪರಮಪದವೀವ ಗುರುಮುಖ್ಯಪ್ರಾಣನ ಭಜಿಸಲು ಕರೆ:**

'ಪರಮಪದವೀವ ಗುರುಮುಖ್ಯಪ್ರಾಣ....' –ಎಂದು ಪ್ರಾರಂಭವಾಗುವ ಮೂರು ನುಡಿಗಳ ಕನಕದಾಸರ ಕೀರ್ತನೆಯಲ್ಲಿ ಮುಖ್ಯಪ್ರಾಣನ ಮೂರು ಅವತಾರಗಳ ಘಟನೆಗಳನ್ನು ತಿಳಿಸಿ, 'ಧರೆಯೊಳಗೆ ಉತ್ತಮ ಮಾನವರೆಲ್ಲ ಭಜಿಸಿ....' ಎಂದು ಉತ್ತಮ ಮಾನವರಿಗೆ ಕರೆ ನೀಡಲಾಗಿದೆ.

**೫೮. ವೈಷ್ಣವಮತವಿಲಾಸನಲ್ಲಿ ಶರಣಾಗತಿ:**

'ಶರಣು ಶರಣು ಶರಣು' ಎಂದು ಆರಂಭವಾಗುವ ಮೂರು ನುಡಿಗಳ ಕನಕದಾಸರ ಕೀರ್ತನೆ ಮುಖ್ಯಪ್ರಾಣನ ಮೂರು ರೂಪಗಳ ಮಹಿಮೆಗಳನ್ನು ತಿಳಿಸುತ್ತಿದೆ.

'ಸಾರತತ್ವಗಳೆಲ್ಲ ಶೋಧಿಸಿ ಸೂರೆ ಮಾಡಿದಾತಗೆ....' ಎಂದು ಶ್ರೀ ಮಧ್ವರ ಸಾಧನೆಯನ್ನು ಸಾರಿದೆ.

**೫೯. ವಿಮಲಶಾಸ್ತ್ರದಿ ಮರೆದ ಸುಖಮಾನಿ:**

'ಸುತ್ತಲು ಕಾಣೆನು ಪಿರಿಯ ಸುಖಮುನಿಗೆ....' –ಎಂಬ ವಾದಿರಾಜತೀರ್ಥರ ಮೂರು ನುಡಿಗಳ ಕೀರ್ತನೆ ವಾಯುದೇವನ ಮೂರೂ ಅವತಾರಗಳ ಪ್ರಸ್ತಾಪ ಮಾಡುತ್ತಿದೆ. 'ಆ ಮಹಾಭುಜಬಲನೆ ಮಧ್ವಾಚಾರ್ಯನೆಂಬುದು ನಿಗಮಸಿದ್ಧ' –ಎಂದು ಉಪಸಂಹಾರ ಮಾಡಲಾಗಿದೆ.

**೬೦. ಸಿರಿಪುರಂದರವಿಠಲನಿಗೆ ಅಚ್ಛಿನ್ನಭಕ್ತ:**

'ಈತ ಮುಖ್ಯಪ್ರಾಣನಾಥ ಈತ ಶ್ರೀರಾಮಸೇವಕನೆನಿಸಿದಾತ....' –ಎಂದು ಪ್ರಾರಂಭವಾಗುವ ಪುರಂದರದಾಸರ ಐದು ನುಡಿಗಳನ್ನೊಳಗೊಂಡ ಈ ಕೀರ್ತನೆಯಲ್ಲಿ ಮುಖ್ಯಪ್ರಾಣನ ಅವತಾರತ್ರಯದ ಕೆಲವು ಸಾಧನೆಗಳನ್ನು ಉಲ್ಲೇಖಿಸಿ, ಉಪಸಂಹಾರದಲ್ಲಿ 'ಸಿರಿಪುರಂದರವಿಠಲಗೆ ಅಚ್ಛಿನ್ನಭಕ್ತನೀತ' –ಎಂದು ಸಾರುವ ಮೂಲಕ ಹೀಗೆ ಭಕ್ತನಾಗಿರುವುದರಿಂದಲೇ ಹಿಂದೆ ತಿಳಿಸಿದ ಸಾಧನೆಗಳನ್ನೆಲ್ಲ ನೆರವೇರಿಸುವಂತಾಗಿದೆ –ಎಂದು ಸೂಚಿಸಲಾಗಿದೆ.

## ಬರೇ ಹನೂಮದ್ರೂಪದ ಪ್ರಸ್ತಾವವುಳ್ಳ ಹಾಡುಗಳು

**೬೧. ಅಮರವಂದಿತ ಆಂಜನೇಯನ ಸಾಧನೆಗಳು:**

ಆಂಜನೇಯ ಅಮರವಂದಿತ..' ಎಂದು ಪ್ರಾರಂಭವಾಗುವ, ಐದು ನುಡಿಗಳ ಹಾಡಿನಲ್ಲಿ ಶ್ರೀ ವಾದಿರಾಜಗುರುಗಳು ಆಂಜನೇಯನ ಕೆಲವು ಮಹಿಮೆಗಳನ್ನು ಸಾರಿರುವರು. ಉಪಸಂಹಾರದಲ್ಲಿ '.....ಹಯವದನನ ಪರಮಭಕ್ತನೆಂದೆನಿಸಿದೆ' –ಎಂದು ಆಂಜನೇಯನ ಮುಖ್ಯ ಸಾಧನೆಯನ್ನು ಪರಿಚಯಿಸಲಾಗಿದೆ.

**೬೨. ಸುಂದರಕಾಂಡ ರಾಮಾಯಣದ ಹನೂಮಂತ:**

'ಎಷ್ಟು ಸಾಹಸವಂತ ನೀನೆ ಬಲವಂತ....' –ಎಂದು ಪ್ರಾರಂಭವಾಗುವ ಇಪ್ಪತ್ತ ಮೂರು ನುಡಿಗಳ ದೀರ್ಘವಾದ ಕೀರ್ತನೆ ಶ್ರೀ ವಾದಿರಾಜತೀರ್ಥ ವಿರಚಿತ. ಇದರಲ್ಲಿ ಸುಂದರಕಾಂಡ ರಾಮಾಯಣದ ಚಿತ್ರಣವನ್ನು ನೀಡಲಾಗಿದೆ. ಲಂಕೆಯ ದಹನವನ್ನು ಸೀತಾರಾಮಚಂದ್ರರ ಮಂಗಳಾರತಿಯನ್ನಾಗಿ ನಡೆಸಿದ ಆಂಜನೇಯನ ಅನುಸಂಧಾನವನ್ನು ಹೀಗೆ ವಿಶೇಷವಾಗಿ ಗುರುತಿಸಲಾಗಿದೆ– 'ಎಣಿಕೆಯಿಲ್ಲದೆ ಮನೆ ಮನೆ ದಹಿಸುತ ಮಣಿದೆತ್ತಿದ ರಾಘವಗಾರತಿಯ ಮಂಗಳಂ ಶ್ರೀರಾಮಚಂದ್ರಮೂರುತಿಗೆ । ಮಂಗಳಂ ಸೀತಾದೇವಿ ಚರಣಂಗಳಿಗೆ ಮಂಗಳವೆನುತ ಲಂಕೆಯ ಸುಟ್ಟು....'

ಆಂಜನೇಯನಿಂದ ಇಷ್ಟು ಸಾಧನೆ ನಡೆಯಲು ಶ್ರೀರಾಮಚಂದ್ರನ ಕಡೆಗಣ್ಣ ಕುಡಿ ನೋಟದ ಪ್ರಭಾವವೇ ಕಾರಣ ಎಂದು ಉಪಸಂಹಾರ ನಡೆಸಿರುವುದು ತುಂಬ

ಔಚಿತ್ಯಪೂರ್ಣ– 'ಪಂಕಜಾಕ್ಷ ಹಯವದನನ ಕಟಾಕ್ಷದಿ ಲಂಕೆಯ ಸುಟ್ಟಿಯಾ ಜೈ ಸಂಜೀವ'

### ೬೩. ಹನುಮ ಶ್ರೀರಾಮನಿಗೆ ತಲುಪಿಸಿದ ಪ್ರತಿವಚನ:

'ಏನೆಂದಳಯ್ಯ ಸೀತೆ.....' ಎಂದು ಪ್ರಾರಂಭವಾಗುವ ಪುರಂದರದಾಸರ ಐದು ನುಡಿಗಳ ಈ ಹಾಡಿನಲ್ಲಿ ಶ್ರೀರಾಮನಿಂದ ಸೀತೆಯ ಪ್ರತಿವಚನದ ಬಗ್ಗೆ ವಿಚಾರಿಸಲ್ಪಟ್ಟ ಹನೂಮಂತ ಸೀತೆಯ ಪ್ರತಿವಚನವನ್ನು ಒಪ್ಪಿಸುವಿಕೆಯ ಚಿತ್ರಣ ನಡೆದಿದೆ. 'ಪಂಜರದ ಅರಗಿಣಿ ಎಂದಳು ರಾಮ' ಎಂದು ಅಶೋಕವನದಲ್ಲಿದ್ದ ಸೀತೆಗೆ ಪಂಜರದ ಪಕ್ಷಿಯ ರೂಪಕವನ್ನು ನೀಡಿ ಉಪಸಂಹಾರ ನಡೆಸಲಾಗಿದೆ.

### ೬೪. ರಘುಪತಿಪಾದವ ಬದ್ಧಾಂಜಲಿಯಿಂದ ಅಸುರರ ಗೆದ್ದವ:

'ಗೆದ್ಯೋ ಹನುಮಂತ ಅಸುರರ ಗೆದ್ಯೋ....' –ಎಂಬ ಮೂರು ನುಡಿಗಳ ಪುರಂದರ ದಾಸರ ಕೀರ್ತನೆಯಲ್ಲಿ ಹನುಮಂತನು ಅಸುರರನ್ನು ಸೋಲಿಸಿದುದೇ ಮುಂತಾದ ಒಂದೆರಡು ಮಹಿಮೆಗಳನ್ನು ತಿಳಿಸಿ, 'ಬದ್ಧಾಂಜಲಿಯಿಂದ ರಘುಪತಿಪಾದವ' –ಎಂದು ಶ್ರೀರಾಮಚಂದ್ರನ ಪಾದಾರವಿಂದಕ್ಕೆ ನಮಿಸಿದ ಫಲವಾಗಿ ಈ ಬಗೆಯ ಮಹಿಮೆಗಳನ್ನು ನಡೆಸುವಂತಾಗಿದೆ ಎಂದು ಸೂಚಿಸಲಾಗಿದೆ.

### ೬೫. ಘಟಿಕಾಚಲದಿ ನಿಂತ ಹನುಮಂತನ ಅನುಗ್ರಹ:

'ಘಟಿಕಾಚಲದಿ ನಿಂತ ಪಟು ಹನುಮಂತ....' –ಎಂದು ಪ್ರಾರಂಭವಾಗುವ ಮೂರು ನುಡಿಗಳ ಪುರಂದರದಾಸರ ಕೀರ್ತನೆ ಘಟಿಕಾಚಲದ ಹನೂಮಂತ ತಾನು ಕುಳಿತ ಭಂಗಿ ಹಾಗೂ ಧರಿಸಿದ ಆಯುಧಾದಿಗಳಿಂದ ಸೂಚ್ಯವಾಗಿ ನೀಡುವ ಸಂದೇಶಾದಿಗಳ ಬಗ್ಗೆ ಬೆಳಕು ಚೆಲ್ಲುತ್ತಿದೆ. ಪದ್ಯದ ಉಪಸಂಹಾರದಲ್ಲಿ ಹನೂಮಂತನನ್ನು 'ಶ್ರೀಪುರಂದರವಿಠಲನ ಬಂಕದ ಸೇವಕ' ಎಂದು ಸಾರಲಾಗಿದೆ.

### ೬೬. ಮನೆಗೆ ಬಂದ ಮುಖ್ಯಪ್ರಾಣ:

'ಸುಂದರ ಮೂರುತಿ ಮುಖ್ಯಪ್ರಾಣ ಬಂದ ಮನೆಗೆ....' –ಎಂದು ಪ್ರಾರಂಭವಾಗುವ ಮೂರು ನುಡಿಗಳ ಪುರಂದರದಾಸರ ಕೀರ್ತನೆಯಲ್ಲಿ ಹನೂಮಂತನ ಹೆಸರಿನ ಉಲ್ಲೇಖವಿಲ್ಲದೆ, 'ಮುಖ್ಯಪ್ರಾಣ ಮನೆಗೆ ಬಂದ' ಎಂದಿರುವುದಾದರೂ 'ಶ್ರೀರಾಮನಾಮ ಧನಿಗೆ ....ಝುಣ ಝುಣರೆನುತ' 'ಶ್ರೀರಾಮನಾಮ ಪಾಡುತ' –ಈ ಮಾತುಗಳಲ್ಲಿ ವಿಶೇಷವಾಗಿ ಶ್ರೀರಾಮಚಂದ್ರನ ಪ್ರಸ್ತಾವ ಇರುವುದರಿಂದ ಶ್ರೀರಾಮಚಂದ್ರನ ರೂಪದ ನಂಟು ಉಳ್ಳ ಹನೂಮಂತನ ವರ್ಣನೆಯೇ ಇದರಲ್ಲಿ ನಡೆದಿದೆ ಎಂದು ನಿರ್ಧರಿಸಿಕೊಳ್ಳ ಬಹುದಾಗಿದೆ. ನಾರದರಂತೆ ಭಕ್ತರ ಮನೆಮನೆಗೆ ಹೋಗಿ ಭಗವಂತನ ಸ್ಮರಣೆಯನ್ನುಂಟು ಮಾಡುವ ಹರಿದಾಸರ ವ್ಯಕ್ತಿತ್ವವನ್ನು ಹನೂಮಂತನಲ್ಲಿ ಕಂಡು ವರ್ಣಿಸಲಾಗಿದೆ.

**೬೭. ಭಕ್ತರಿಗೆ ಎಲ್ಲವೂ ಆಗಿರುವ ಮೂಲಗುರು ಮುಖ್ಯಪ್ರಾಣ:**

'ಮುಖ್ಯಪ್ರಾಣ ತನ್ನ ಮೂಲಗುರುವೆ....' -ಎಂದು ಪ್ರಾರಂಭವಾಗುವ ಮೂರು ನುಡಿಗಳ ಪುರಂದರದಾಸರ ಹಾಡಿನಲ್ಲಿ ಹನೂಮಂತನ ರೂಪಕ್ಕೆ ಸಂಬಂಧಿಸಿ 'ರಕ್ಕಸಾಂತಕ ಶ್ರೀರಾಮನ ನಿಜದಾಸ' -ಎಂಬ ಒಂದು ಮಾತು ಮಾತ್ರ ಇದ್ದು, ಉಳಿದೆಲ್ಲ ಮಾತುಗಳಲ್ಲಿ 'ತಂದೆ ನೀನೆ ಎನಗೆ ತಾಯಿ ನೀನೆ...' ಇತ್ಯಾದಿಯಾಗಿ ಮುಖ್ಯಪ್ರಾಣನ ಬೇರೆ ಬೇರೆ ಬಗೆಯ ಬಂಧುತ್ವದ ಮುಖಗಳನ್ನು ಬಿನ್ನವಿಸಿಕೊಳ್ಳಲಾಗಿದೆ. ವಾಯುದೇವನನ್ನು 'ನನ್ನ ತಾಯಿಯೇ' 'ನನ್ನ ತಂದೆಯೇ' -ಎಂದೆಲ್ಲ ಬೇರೆ ಬೇರೆ ಬಂಧುವಾಚಕ ಶಬ್ದಗಳಿಂದ ಸಂಬೋಧಿಸುವ 'ಮಾತರ್ಮೇ ಮಾತರಿಶ್ವನ್....' ಎಂಬ ವಾಯುಸ್ತುತಿಯ ಈ ಮಾತನ್ನು ನೆನಪಿಸಿಕೊಡುವ ಪದ್ಯ ಇದಾಗಿದೆ.

**೬೮. ಗುರುಮುಖ್ಯಪ್ರಾಣನ ಜಾಣತನ, ಧೀರತನ, ದಿಟ್ಟತನ ಹಾಗೂ ಚಂಡತನ:**

'ಜಾಣ ನೀನಹುದೋ ಗುರುಮುಖ್ಯಪ್ರಾಣ....' -ಎಂದು ಪ್ರಾರಂಭವಾಗುವ ಮೂರು ನುಡಿಗಳ ಶ್ರೀ ವ್ಯಾಸತೀರ್ಥರ ಕೀರ್ತನೆಯ ಪಲ್ಲವಿಯಲ್ಲಿ 'ಸರ್ವಪ್ರಾಣಿಗಳ ಹೃದಯದಲ್ಲಿ ಮುಖ್ಯಪ್ರಾಣನೆಂದೆನಿಸಿದೆಯೋ ಸ್ವಾಮಿ' -ಎಂದು ಮುಖ್ಯಪ್ರಾಣನ ಮೂಲರೂಪದ ಮಹಿಮೆಯನ್ನು ತಿಳಿಸಿ ಉಳಿದ ಮೂರು ನುಡಿಗಳಲ್ಲಿ ವಾಯುಕುಮಾರನ ಧೀರತನದ, ದಿಟ್ಟತನದ ಹಾಗೂ ಚಂಡತನದ ಲೀಲೆಗಳನ್ನು ಸಾರಲಾಗಿದೆ.

**೬೯. ಹನುಮಂತನ ಮಹಿಮೆಯ ನೋಡಲು ಕರೆ:**

'ನೋಡಿರಯ್ಯ ಹನುಮಂತನ ಮಹಿಮೆಯ.....' -ಎಂಬ ಪಲ್ಲವಿಯ, ಮೂರು ನುಡಿಗಳ ಪುರಂದರದಾಸರ ಈ ಕೀರ್ತನೆ ಮೂರು ನುಡಿಗಳಲ್ಲಿ ಹನುಮಂತನ ಕೆಲವು ಮಹಿಮೆಗಳನ್ನು ಸಾರುತ್ತಿದೆ.

**೭೦. ಮುಖ್ಯಪ್ರಾಣನ ಪಾಡಲು ಕರೆ:**

'ಪ್ರಾಣನ ನೋಡಿರೈ ಮುಖ್ಯಪ್ರಾಣನ ನೋಡಿರೈ....' -ಎಂಬ ಪಲ್ಲವಿಯೊಂದಿಗೆ ಪ್ರಾರಂಭವಾಗುವ ಶ್ರೀ ವಾದಿರಾಜಯತಿ ನಿರ್ಮಿತವಾದ ಈ ಹಾಡಿನಲ್ಲಿ ಮೂರು ನುಡಿಗಳಿವೆ. ಆಂಜನೇಯನ ಕೆಲವು ಗುಣಮಹಿಮೆಗಳ ಉಲ್ಲೇಖವಿದೆ.

**೭೧. ಹನುಮರಾಯನ ವೈರಾಗ್ಯಭಾಗ್ಯ:**

'ಸೇವಕತನದ ರುಚಿ ಏನ ಪೇಳ್ವ್ಯೇ....' ಎಂಬ ಪಲ್ಲವಿಯಿಂದ ಆರಂಭವಾಗುವ ಪುರಂದರದಾಸರ ಈ ಹಾಡು ಮೂರು ನುಡಿಗಳನ್ನೊಳಗೊಂಡಿದ್ದು, ಅವುಗಳಲ್ಲಿ ಆಂಜನೇಯನು ತಾನು ಸಲ್ಲಿಸಿದ ಸೀತಾನ್ವೇಷಣೆಯ ಸೇವೆಗಾಗಿ ಯಾವುದೇ ಬೇಡಿಕೆಯನ್ನು ಶ್ರೀರಾಮನಲ್ಲಿ ಕೇಳಿಕೊಳ್ಳದೆ, 'ಸರ್ವ ತೊರೆದು ಶ್ರೀಪುರಂದರವಿಠಲನ್ನ ನಿರ್ವ್ಯಾಜಭಕುತಿ ಬೇಡಿಕೊಂಡ್ಯಲ್ಲದೆ' -ಎಂದು ಉಪಸಂಹಾರದಲ್ಲಿ ತಿಳಿಸಿರುವಂತೆ ಯಾವುದೇ ನೆಪವಿಲ್ಲದ ಶುದ್ಧ ಭಕುತಿಯನ್ನು ಬೇಡಿಕೊಳ್ಳುವ ಮೂಲಕ ವೈರಾಗ್ಯಭಾಗ್ಯವನ್ನು ಬೇಡಿಕೊಂಡಂತಾಗಿದೆ. ಇದನ್ನೇ ಪಲ್ಲವಿಯಲ್ಲಿ 'ವೈರಾಗ್ಯಭಾಗ್ಯ ಬೇಡಿ' ಎಂದು ಉದ್ಘೋಷಿಸಲಾಗಿದೆ.

೭೨. **ಪಂಪಾಕ್ಷೇತ್ರದಿ ನಿಂತ ಯಂತ್ರೋದ್ಧಾರಕ:**

'ಸ್ವಾಮಿ ಮುಖ್ಯಪ್ರಾಣ ನಿನ್ನ ಮರೆವರ ಗಂಟಲ ಗಾಣ....' -ಎಂಬ ಪಲ್ಲವಿಯಿಂದ ಪ್ರಾರಂಭವಾಗುವ, ಪುರಂದರದಾಸರ ಮೂರು ನುಡಿಗಳ ಈ ಕೀರ್ತನೆಯಲ್ಲಿ ಹಂಪೆಯ ಯಂತ್ರೋದ್ಧಾರಕ ಹನುಮಂತನನ್ನು ಸಂಭೋದಿಸಿ, ಕೆಲವು ಗುಣಗಳ ಉಲ್ಲೇಖದೊಂದಿಗೆ ಸ್ತುತಿಸಲಾಗುವುದು. 'ವೈಕುಂಠದಿಂದ ಬಂದು ನೀ ಪಂಪಾಕ್ಷೇತ್ರದಿ ಯಂತ್ರೋದ್ಧಾರಕನೆಂದು ನಿಂದು' -ಎಂದು ಉಪಸಂಹರಿಸಲಾಗಿದೆ.

೭೩. **ಹನುಮಂತನಿಗೆ ಪ್ರಣಾಮ:**

'ಹನುಮಂತದೇವ ನಮೋ' -ಎಂಬ ಪಲ್ಲವಿಯನ್ನೊಳಗೊಂಡ ಐದು ನುಡಿಗಳ ಪುರಂದರದಾಸರ ಈ ಕೀರ್ತನೆಯಲ್ಲಿ ಸುಂದರಕಾಂಡ ರಾಮಾಯಣ ಪ್ರಸ್ತುತಪಡಿಸುವ ಆಂಜನೇಯನ ಕೆಲವು ಲೀಲೆಗಳನ್ನು, ಮಹಿಮೆಗಳನ್ನು ಬಣ್ಣಿಸಲಾಗಿದೆ. 'ಹೇಮಕುಂಡಲ ಹೇಮ ಯಜ್ಞೋಪವೀತಧರ ಕಟಿಸೂತ್ರ ಕೌಪೀನವನು ಧರಿಸಿ...' -ಎಂದು ಹನೂಮಂತನ ವೇಷಭೂಷಣಗಳ ವರ್ಣನೆ ನಡೆದಿದೆ. 'ರೋಮ ರೋಮಕೆ ಕೋಟಿಲಿಂಗ ಸರ್ವಾಂಗ' -ಈ ಘಟನೆ ನಡೆದ ಸಂದರ್ಭವಾಗಲೀ, ಅದರ ಸ್ವರೂಪವಾಗಲೀ ವಿಚಾರಣಾರ್ಹ.

೭೪. **ರಾಮರಾಯರಿಗೆ ಪ್ರೇಮದ ಬಂಟ ಭೀಮರಾಯ:**

'ಭೀಮನೆಂಬುವರಿಗೆ ಯಾತರ ಭಯವಿಲ್ಲ....' -ಎಂದು ಪ್ರಾರಂಭವಾಗುವ ಕನಕದಾಸರ ಐದು ನುಡಿಗಳ ಹಾಡಿನಲ್ಲಿ ಆಂಜನೇಯನನ್ನು ಭೀಮರಾಯ ಎಂದು ಸಂಬೋಧಿಸಿ, ಅವನಲ್ಲಿ ಕೆಲವು ಬೇಡಿಕೆಗಳನ್ನು ಸಲ್ಲಿಸಲಾಗಿದೆ.

೭೫. **ಹನುಮಂತನ ಸಂದರಕಾಂಡದಲ್ಲಿಯ ಮಹಿಮೆಗಳು:**

'ಎದ್ದುನಿಂತ ಬಂದು ನಿಂತ ಮುಂದೆ ನಿಂದಂಥ....' -ಎಂದು ಪ್ರಾರಂಭವಾಗುವ ಆರು ನುಡಿಗಳ ಕೀರ್ತನೆಯಲ್ಲಿ ಶ್ರೀ ವಾದಿರಾಜಸ್ವಾಮಿಗಳು ಸುಂದರಕಾಂಡ ರಾಮಾಯಣ ದಲ್ಲಿ ಬಂದ ಆಂಜನೇಯನ ಮಹಿಮೆಗಳನ್ನು, ಲೀಲೆಗಳನ್ನು ಸಂಗ್ರಹಿಸಿರುವರು.

೭೬. **ಎಣೆಯಿಲ್ಲದ ಹನುಮಂತರಾಯ:**

'ಎಣೆಯಾರೋ ನಿನಗೆ ಹನುಮಂತರಾಯ.....' -ಎಂಬ ಮೂರು ನುಡಿಗಳ ಶ್ರೀ ವಾದಿರಾಜಗುರುಗಳ ಕೀರ್ತನೆಯಲ್ಲಿ ಹನುಮಂತನಿಂದ ನಡೆದ ಸೀತಾನ್ವೇಷಣೆಯ ಸೇವೆ ಸಂಗ್ರಹಿಸಲ್ಪಟ್ಟಿದೆ. 'ಅಡಿಗಡಿಗೆ ರಾಮಪದಾಂಬುಜಕೆ ವಂದಿಸುತ..........' ಎಂಬುದಾಗಿ ಆಂಜನೇಯ ರಾಮಕಾರ್ಯ ನಡೆಸುವಾಗ ಅಳವಡಿಸಿಕೊಂಡಿದ್ದ ಅನುಸಂಧಾನದ ಮೇಲೆ ಬೆಳಕು ಚೆಲ್ಲಬಲ್ಲದು.

೭೭. **ಮುದ್ದುರಾಮರ ಬುದ್ಧಿವುಳ್ಳ ಬಂಟ:**

'ಮುದ್ದುರಾಮರ ಬಂಟ ಬುದ್ಧಿವುಳ್ಳ ಹನುಮಂತ....' -ಎಂದು ಪ್ರಾರಂಭವಾಗುವ ಶ್ರೀ ವಾದಿರಾಜತೀರ್ಥರ ಮೂರು ನುಡಿಗಳ ಹಾಡು ಸುಂದರಕಾಂಡ ರಾಮಾಯಣದ ಪ್ರಮೇಯವನ್ನು ಸೂಕ್ಷ್ಮವಾಗಿ ಸಾರುತ್ತಿದೆ.

**೭೮. ಹನುಮನ ಹಾಗೂ ಹರಿಯ ಮತಗಳ ಐಕ್ಯ:**

'ಹನುಮನ ಮತವೆ ಹರಿಯ ಮತವು....' ಇತ್ಯಾದಿಯಾಗಿ ಪ್ರಾರಂಭವಾಗುವ ಪುರಂದರದಾಸರ ಮೂರು ನುಡಿಗಳ ಹಾಡಿನಲ್ಲಿ ಹನುಮಂತ ಹಾಗೂ ಶ್ರೀರಾಮರೂಪದ ಹರಿಯ ಅಭಿಪ್ರಾಯಗಳಲ್ಲಿ ಐಕ್ಯವನ್ನು ಸುಗ್ರೀವ ಮತ್ತು ವಿಭೀಷಣರ ದೃಷ್ಟಾಂತ ಗಳೊಂದಿಗೆ ಸಮರ್ಥಿಸಲಾಗಿದೆ. ಈ ಬಗೆಯ ಅಭಿಪ್ರಾಯಗಳಲ್ಲಿಯ ಐಕ್ಯಕ್ಕೆ ಹೇತು ಎಂಬಂತೆ 'ಹನುಮನೊಳ್ ಪುರಂದರವಿಠಲನಾವಾಸ' –ಎಂದು ಹಾಡನ್ನು ಮಹತ್ತ್ವದ ಪ್ರಮೇಯದೊಂದಿಗೆ ಉಪಸಂಹರಿಸಲಾಗಿದೆ.

**೭೯. ಅರಸಿನಂತೆ ಬಂಟನೆಂಬುದ ತೋರಿದವನು:**

'ಅರಸಿನಂತೆ ಬಂಟನೋ ಹನುಮರಾಯ....' –ಎಂದು ಪ್ರಾರಂಭವಾಗುವ ಕನಕ ದಾಸರ ಮೂರು ನುಡಿಗಳ ಕೀರ್ತನೆಯಲ್ಲಿ ಹನುಮಂತನ ಮಹಿಮೆಗಳನ್ನು ತಿಳಿಸಲಾಗಿದೆ. 'ಸಿಂಧು ಬಂಧನಕೆ ಸಮಸ್ತ ಪರ್ವತಗಳ ತಂದು ನಳನ ಕೈಯೊಳಗಿತ್ತೆ ಹನುಮ' ಎಂಬ ಮಾತು ಸಮುದ್ರಕ್ಕೆ ಸೇತು ನಿರ್ಮಿಸುವಲ್ಲಿ ಹನೂಮಂತನ ಪಾತ್ರವನ್ನು ಸ್ಪಷ್ಟಪಡಿಸುತ್ತಿದೆ.

**೮೦. ಅಂದು ಅರಮನೆಯಲ್ಲಿ ಇಂದು ಅರಣ್ಯದಲ್ಲಿ:**

'ಎನ್ನ ಕಂದ ಹಳ್ಳಿಯ ಹನುಮ....' –ಎಂಬ ಕನಕದಾಸರ ಮೂರು ನುಡಿಗಳ ಹಾಡಿನಲ್ಲಿ ಶ್ರೀರಾಮಚಂದ್ರನ ಅರಮನೆಯ ಸ್ಥಿತಿಯನ್ನೂ, ಅರಣ್ಯದ ಸ್ಥಿತಿಯನ್ನೂ ತುಲನೆಮಾಡಿ ಅಂತಹ ರಾಮಚಂದ್ರನ 'ಹನುಮೇಶರಾಘವ ಕ್ಷೇಮದಲ್ಲೈದಾರೆ....' –ಎಂದು ಕ್ಷೇಮಚಿಂತನೆ ಹನುಮಂತನ ಮೂಲಕ ನಡೆಸಿರುವಂತಿದೆ. ಸ್ಪಷ್ಟ ಅಭಿಪ್ರಾಯ ತಿಳಿಯಲಾರದು.

## ಬರೇ ಭೀಮಾವತಾರದ ಕುರಿತಾದ ಹಾಡುಗಳು

**೮೧. ದುರ್ಜನತಿಮಿರಮಾರ್ತಾಂಡದ ಸಾಧನೆ:**

'ಜಯ ಭೀಮಸೇನ...' ಇತ್ಯಾದಿಯಾಗಿ ಪ್ರಾರಂಭವಾಗುವ ಮೂರು ನುಡಿಗಳ ಶ್ರೀ ವಾದಿರಾಜತೀರ್ಥರ ಕೃತಿ ಭೀಮಸೇನನಿಂದ ನಡೆದ ಕಿಮ್ಮೀರ, ಬಕ, ಹಿಡಿಂಬಕ, ಕೀಚಕ, ಧಾರ್ತರಾಷ್ಟ್ರ –ಮುಂತಾದ ದುಷ್ಟರ ಸಂಹಾರವನ್ನು ಉಲ್ಲೇಖಿಸಿದೆ. ಭೀಮಸೇನನನ್ನು 'ಸಕಲವಿದ್ಯಾಪ್ರದೀಪ'ನನ್ನಾಗಿ ಸಾರಲಾಗಿದೆ.

**೮೨. ನಿಸ್ಸೀಮಮಹಿಮನಲ್ಲಿ ಬೇಡಿಕೆಗಳು:**

'ಭೀಮ ನಿಸ್ಸೀಮಮಹಿಮ....' ಇತ್ಯಾದಿಯಾಗಿ ಪ್ರಾರಂಭವಾಗುವ ಐದು ನುಡಿಗಳ, ಶ್ರೀ ವಾದಿರಾಜತೀರ್ಥರ ಕೃತಿಯಲ್ಲಿ ಭೀಮಸೇನನ ಕಲಿ ನಿಗ್ರಹಾದಿ ಗುಣಗಳನ್ನು ಉಲ್ಲೇಖಿಸಿ 'ಎನ್ನ ನೀ ರಕ್ಷಿಸಯ್ಯ ಓಡಿ ಬ್ಯಾಗ ಕಯ್ಯ' –ಇತ್ಯಾದಿಯಾಗಿ ಪ್ರಾರ್ಥಿಸಿಕೊಳ್ಳ ಲಾಗಿದೆ.

**೮೩. ಹರಿಯು ನಿರೂಪವ ಧರಿಸಿದವನ ಮಹಿಮೆ:**

'ಮೆರೆದೆ ಮಹಿಮೆ ಉದಾರ ನಮ್ಮ....' –ಎಂದು ಪ್ರಾರಂಭವಾಗುವ ಶ್ರೀ ವಾದಿರಾಜತೀರ್ಥರ ಮೂರು ನುಡಿಗಳ ಕೀರ್ತನೆ ಭೀಮಸೇನನ ಬಕ, ಹಿಡಿಂಬಾದಿಗಳ ಸಂಹಾರದ ಜೊತೆಗೆ 'ಹರನೊಳು ವಾದಿಸಿ ಜೈಸಿ ಹರಿಸರ್ವೋತ್ತಮನೆಂದೆನಿಸಿ....' ಇತ್ಯಾದಿ ಯಾಗಿ ಜ್ಞಾನಭಕ್ತಿಗಳಿಗೆ ಸಂಬಂಧಿಸಿದ ಸಾಧನೆಯನ್ನೂ ಸಾರುತ್ತಿದೆ.

**೮೪. ತಮ್ಮ ಮೊರೆಹೊಕ್ಕ ಸುಜನರ ಕಾವ ಭೀಮಸೇನ:**

'ಭೀಮರಾಯನ ನಂಬಿ....' –ಎಂದು ಪ್ರಾರಂಭವಾಗುವ ಶ್ರೀ ವಾದಿರಾಜತೀರ್ಥರ ಐದು ನುಡಿಗಳ ಹಾಡಿನಲ್ಲಿ ಬಕ ಮೊದಲಾದ ದುಷ್ಟರ ಸಂಹಾರ ನಡೆಸಿದ ಭೀಮಸೇನನ ಉದ್ದೇಶ ಸಜ್ಜನರನ್ನು ಸುಖಪಡಿಸುವುದೆಂದು ಸೂಚಿಸಿ, 'ಭೀಮ ಭವವಾರಿಧಿಯ ಬೇಗ ದಾಟುವರೆ ನಮ್ಮ ಭೀಮರಾಯನ ನಂಬಿ' ಎಂದು ಕರೆ ನೀಡಿ 'ಭೀಮ ತನ್ನ ಮೊರೆಹೊಕ್ಕ ಸಜ್ಜನರ ಕಾವ' –ಎಂಬ ಆಶ್ವಾಸನೆಯನ್ನು ನೀಡಲಾಗಿದೆ. 'ಸ್ವಾಮಿಶ್ರೀ ಹಯವದನ ರಾಮನಾಣೆ ಸತ್ಯವಿದು' –ಎಂದು ಅದರಲ್ಲಿ ದಾರ್ಢ್ಯವನ್ನು ತೋರಿಸಲಾಗಿದೆ. 'ಕಡುತೃಷೆಗೆ ದುಶ್ಶಾಸನನೊಡಲ ಬಗಿದು ರಕ್ತ ಕುಡಿದಂತೆ ತೋರ್ವ.....' –ಎಂದು ಭೀಮಸೇನನ ರಕ್ತಪಾನದ ಬಗ್ಗೆ ಸ್ಪಷ್ಟೀಕರಣವನ್ನು ನೀಡಲಾಗಿದೆ.

**೮೫. ಕಾಮಿನಿಯಾಗಿ ಕೀಚಕನನ್ನು ಸಂಹರಿಸಿದ ಭೀಮಸೇನ:**

'ಭೀಮಸೇನ ಕಾಮಿನಿಯಾದನು......' –ಎಂದು ಪ್ರಾರಂಭವಾಗುವ ಇಪ್ಪತ್ತಮೂರು ನುಡಿಗಳ ಹಾಡಿನಲ್ಲಿ ಶ್ರೀ ವಾದಿರಾಜಸ್ವಾಮಿಗಳು ಸ್ತ್ರೀವೇಷ ಧರಿಸಿಕೊಂಡು ಹೋಗಿ ಕೀಚಕನ ಸಂಹಾರ ನಡೆಸಿದ ಭೀಮಸೇನನ ಪೌರುಷದ, ಚಮತ್ಕಾರದ ವರ್ಣನೆಯನ್ನು ನಡೆಸಿರುವರು. '.....ಎದ್ದು ಸಮೀರಜ ಗುದ್ದಲು ಕೀಚಕ ಬಿದ್ದನು ಭೂಮಿಲಿ ಗೆದ್ದೆನೆನುತ ಅನಿರುದ್ಧನ ಸ್ಮರಿಸುತಲೆದ್ದ ಭೀಮ' –ಎಂಬ ಮಾತು ಕೀಚಕನ ಸಂಹಾರದ ಅವಧಿಯಲ್ಲೂ ಭೀಮಸೇನನ ಭಗವದನುಸಂಧಾನವನ್ನು ಬೆಳಗಬಲ್ಲದು.

**೮೬. ರಣಾಗ್ರದಿ ಅಡ್ಡಯಿಪರಿಲ್ಲದ ಭೀಮ:**

'ಆ ರಣಾಗ್ರದಿ ಭೀಮಗಡ್ಡಯಿಪರಾರು......' –ಎಂದು ಪ್ರಾರಂಭವಾಗುವ ಎರಡು ನುಡಿಗಳ, ಪುರಂದರದಾಸರ ಕೀರ್ತನೆ ಮಹಾಭಾರತಯುದ್ಧದಲ್ಲಿ ಹಾಗೂ ಕೀಚಕನ ಸಂಹಾರದಲ್ಲಿ ಭೀಮನ ಎದುರಿಲ್ಲದ ಪೌರುಷವನ್ನು ವರ್ಣಿಸುತ್ತದೆ.

**೮೭. ಭಾರತಮಲ್ಲ ಮರುತಾವತಾರ:**

'ಭೀಮ ಪರಿಪೂರ್ಣಕಾಮ......' –ಎಂದು ಪ್ರಾರಂಭವಾಗುವ ಐದು ನುಡಿಗಳ ವಿಜಯದಾಸರ ಹಾಡು ದುಷ್ಟಸಂಹಾರದ ವಿಷಯದಲ್ಲಿ ಭೀಮಸೇನನ ಪರಾಕ್ರಮವನ್ನು ವರ್ಣಿಸುತ್ತದೆ.

೮೮. **ಕುರುಬಲವ ಗೆದ್ದ ಚಲುವ:**

'ವಂದಿಪ ಬನ್ನಿ ನೀವೆಲ್ಲ ಚೆನ್ನಾಗಿ......' –ಎಂದು ಪ್ರಾರಂಭವಾಗುವ ಐದು ನುಡಿಗಳ, ವಿಜಯದಾಸರ ಹಾಡು ಭೀಮಸೇನನ ಮೂಲರೂಪದ ಮಹಿಮೆಗಳನ್ನೂ, ಹನುಮದವತಾರ, ಮಧ್ವಾವತಾರಗಳ ಪ್ರಸ್ತಾವವನ್ನೂ ತಿಳಿಸಿ, ಭೀಮಸೇನನ ಪರಾಕ್ರಮದ ಮೇಲೆ ಬೆಳಕು ಚೆಲ್ಲುತ್ತಿದೆ. 'ಜ್ಞಾನವೈರಾಗ್ಯ ನಾನಾ ಪ್ರಕಾರಭೀಷ್ಟೆ ಮಾಡದೆ ಕೊಡು ವನು.....' –ಎಂದು ಭೀಮಸೇನನ ಜ್ಞಾನಾದಿ ದಾನಗುಣವನ್ನೂ ಸಾರಲಾಗಿದೆ.

೮೯. **ಜಗನ್ನಾಥವಿಠಲನೊಲುಮೆ ಪಾತ್ರ:**

'ಕೀಚಕಾಂತ ಭೀಮಸೇನರಾಯ ಯಾಚಿಸುವೆ......' –ಎಂದು ಪ್ರಾರಂಭವಾಗುವ ಜಗನ್ನಾಥದಾಸರ ಐದು ನುಡಿಗಳ ಪದ್ಯದಲ್ಲಿ 'ಸರ್ವಾಂತರಾತ್ಮಕ ಸುಖದ ಸಮೇಶ ಶಕ್ರಾದಿನುತ....' ಇತ್ಯಾದಿಯಾಗಿ ಮೂಲರೂಪದ ಗುಣಮಹಿಮೆಗಳೊಂದಿಗೆ ಭೀಮಸೇನನ ಪರಾಕ್ರಮವನ್ನು ಉಲ್ಲೇಖಿಸಲಾಗಿದೆ.

೯೦. **ಜಗನ್ನಾಥವಿಠಲನ ಶ್ರೀಚರಣಭಜಕ:**

ಜಗನ್ನಾಥದಾಸರ 'ಬಿನ್ನಪ ನಿನಗಾನು ಭೀಮಸೇನ' ಎಂಬ ಐದು ನುಡಿಗಳ ಹಾಡು ಭೀಮಸೇನನ ಮಹಿಮೆಗಳನ್ನು ಮೂಲರೂಪದ ಗುಣಧರ್ಮಗಳೊಂದಿಗೆ ಭೀಮಸೇನನ ಪರಾಕ್ರಮವನ್ನು ವರ್ಣಿಸುತ್ತಿದೆ. ಈ ಹಾಡಿನಲ್ಲಿ ಭೀಮಸೇನನನ್ನು ಸಂಬೋಧನೆ ಮಾಡಿ ಬಿನ್ನವಿಸಿಕೊಳ್ಳಲಾಗುವುದು.

೯೧. **ಗೋಪಾಲವಿಠಲನ ಅಚ್ಚಿನ್ನದಾಸ:**

'ಭೀಮನ ನೋಡಿರ್ರೈ ಕುರುಕುಲ ಸೋಮನ ಪಾಡಿರ್ರೈ....' –ಎಂಬ ಪಲ್ಲವಿಯಿಂದ ಪ್ರಾರಂಭವಾಗುವ ಗೋಪಾಲದಾಸರ ಐದು ನುಡಿಗಳ ಪದ್ಯ ಭೀಮಸೇನನ ಗುಣ ಮಹಿಮೆಗಳ ಮೇಲೆ ಬೆಳಕು ಚೆಲ್ಲುತ್ತಿದೆ.

೯೨. **ನಿರ್ಭಯ ವೈಷ್ಣವಾಗ್ರಣಿ:**

'ಜಯ ಜಯ ಭೀಮಸೇನ......' –ಎಂದು ಪ್ರಾರಂಭವಾಗುವ ಐದು ನುಡಿಗಳ ಗೋಪಾಲದಾಸರ ಹಾಡು ಭೀಮಸೇನನ 'ಬಕಮದಧ್ವಂಸಿ ಜಟಾಸುರಾಂತಕ....' ಇತ್ಯಾದಿಯಾಗಿ ದುಷ್ಟನಿಗ್ರಹದ ಜೊತೆಗೆ 'ದೀನೋದ್ಧಾರಿ' 'ವಿಜ್ಞಾನಾಂಬುಧಿ' ಇತ್ಯಾದಿಯಾಗಿ ಇತರ ಗುಣಧರ್ಮಗಳ ಮೇಲೂ ಬೆಳಕುಚೆಲ್ಲುತ್ತಿದೆ.

## ಬರೇ ಮಧ್ವಾವತಾರದ ಪ್ರಸ್ತಾವವುಳ್ಳ ಹಾಡುಗಳು

೯೩. **ಪೂರ್ಣಪ್ರಜ್ಞರ ಸ್ಮರಣೆಯ ಫಲ:**

'ಒಂದು ಬಾರಿ ಸ್ಮರಣೆ ಸಾಲದೆ......' –ಎಂದು ಪ್ರಾರಂಭವಾಗುವ ಶ್ರೀ ವಾದಿರಾಜರ ಐದು ನುಡಿಗಳ ಕೀರ್ತನೆ 'ಇಂದಿರೇಶನ ಪಾದವನ್ನು ಹೊಂದಬೇಕೆಂಬುವರಿಗೆ' ಎಂಬುದಾಗಿ ಪೂರ್ಣಪ್ರಜ್ಞರ ಸ್ಮರಣೆಯ ಆವಶ್ಯಕತೆಯನ್ನು ಸಾರುತ್ತಿದೆ.

೯೪. ಸಾರ ಶಾಸ್ತ್ರವನೊರೆದ ಸರ್ವಜ್ಞ ಮುನಿರಾಯ:

ಶ್ರೀ ವ್ಯಾಸತೀರ್ಥರ 'ಆರು ನಿನಗಿದಿರಧಿಕ ಧಾರುಣಿಯೊಳಗೆ....' ಎಂಬ ಮೂರು ನುಡಿಗಳ ಹಾಡಿನಲ್ಲಿ ಶ್ರೀ ಮಧ್ವರಿಂದ ಉಪದೇಶಿಸಲ್ಪಟ್ಟ ತತ್ವಗಳನ್ನು ತಿಳಿಸಿ, ಅಂತಹ ಗುರುಗಳಿಗೆ ಧಾರುಣಿಯೊಳಗೆ ಅಧಿಕ ಅಥವಾ ಸಮಾನ ಗುರುಗಳು ಮತ್ತೊಬ್ಬರಿಲ್ಲ –ಎಂದು ಮಧ್ವರನ್ನು ಸಂಬೋಧಿಸಿ ಸಾರಲಾಗಿದೆ.

೯೫. ಸಮರಿಲ್ಲದ ಗುರು ಶ್ರೀ ಮಧ್ವರಾಯರು:

'ಇದಿರ್ಯಾರೋ ಗುರುವೇ ಸಮರ್ಯಾರೋ......' –ಎಂದು ಪ್ರಾರಂಭವಾಗುವ ಮೂರು ನುಡಿಗಳ ಪುರಂದರದಾಸರ ಹಾಡಿನಲ್ಲಿ 'ಸಾಧಿಸಿ ಹರಿಯೇ ಸರ್ವೋತ್ತಮನೆಂತೆಂದು ಮೋದಭರಿತವಾದ ದಿವ್ಯ ಶಾಸ್ತ್ರವ ಮಾಡ್ದ....' –ಎಂದು ಶ್ರೀ ಮಧ್ವರ ಸಾಧನೆಯನ್ನು ಸಾರಲಾಗಿದೆ.

೯೬. ಹಯವದನನ ಚರಣಾಂಬುಜಭೃಂಗನ್ನ ಭಜಿಸಲು ಕರೆ:

'ಆರ್ಯನ್ನ ಯೋಗಧುರ್ಯನ್ನ ಭಜಿಸಿ......' –ಎಂದು ಪ್ರಾರಂಭವಾಗುವ ಮೂರು ನುಡಿಗಳ ಶ್ರೀ ವಾದಿರಾಜತೀರ್ಥರ ಕೀರ್ತನೆ ಶ್ರೀ ಮಧ್ವರ ಅಕಳಂಕಮಹಿಮ ಚರಿತ್ರೆ –ಮುಂತಾದ ಗುಣಗಳನ್ನು ಉಲ್ಲೇಖಿಸಿ, ಆದ್ದರಿಂದ ಅವರನ್ನು ಭಜಿಸಲು ಕರೆ ನೀಡ ಲಾಗಿದೆ.

೯೭. ಹಯವದನನ ದಿವ್ಯ ಪಾದಸೇವಕ ಮಧ್ವಮುನಿ:

'ಈತನೇ ಕಾಣಿರೋ ಮಧ್ವಮುನಿ......' –ಎಂದು ಪ್ರಾರಂಭವಾಗುವ ಶ್ರೀ ವಾದಿರಾಜ ತೀರ್ಥರ ಮೂರು ನುಡಿಗಳ ಹಾಡಿನಲ್ಲಿ ಶ್ರೀ ಮಧ್ವರಿಂದ ಸಂದ ಅಧ್ಯಾತ್ಮ ಕೊಡುಗೆಗಳನ್ನು ಉಲ್ಲೇಖಿಸಿ, ಅಂತಹ ಅಮೂಲ್ಯ ಕೊಡುಗೆಯನ್ನು ಕೊಟ್ಟ ಮಧ್ವಮುನಿಗಳನ್ನು 'ಈತನೇ ಕಾಣಿರೋ ಮಧ್ವಮುನಿ.....' –ಎಂದು ಸಾರಲಾಗಿದೆ.

೯೮. ಬಣ್ಣಿಪಲಾಗದ ಪೂರ್ಣಪ್ರಜ್ಞರು:

'ಏನ ಬಣ್ಣಿಪೆನಮ್ಮ......' –ಎಂದು ಪ್ರಾರಂಭವಾಗುವ ಮೂರು ನುಡಿಗಳ ಶ್ರೀ ವಾದಿರಾಜತೀರ್ಥರ ಹಾಡಿನಲ್ಲಿ ಉಡುಪಿಯ ಮುದ್ದುಕೃಷ್ಣನ ಪೂಜೆ ಮುಂತಾದ ಶ್ರೀ ಮಧ್ವರ ಆಧ್ಯಾತ್ಮಿಕ ಸಾಧನೆಗಳನ್ನು ತಿಳಿಸಲಾಗಿದೆ.

೯೯. ಬದರಿಯಲ್ಲಿ ಪುರಂದರವಿಠಲದಾಸನಾದ ಮಧ್ವರಾಯ:

'ನೆನೆವೆನು ಅನುದಿನ ನಿಮ್ಮ ಮಹಿಮೆಯನು......' –ಎಂದು ಪ್ರಾರಂಭವಾಗುವ ಐದು ನುಡಿಗಳ ಪುರಂದರದಾಸರ ಹಾಡು ಶ್ರೀ ಮಧ್ವರ ಮಹಿಮೆಗಳನ್ನು ಪ್ರತಿಪಾದಿಸಿದೆ.

೧೦೦. ಮಧ್ವರನ್ನು ಗುರುಗಳನ್ನಾಗಿ ಪಡೆಯುವಲ್ಲಿ ಪುಣ್ಯಾತಿಶಯ:

'ಇಂಥಾತನು ಗುರುವಾದದ್ದು ನಮಗೆ ಇನ್ನೆಂಥಾ ಪುಣ್ಯದ ಫಲವೋ' –ಎಂಬ ಪುರಂದರದಾಸರ ಮೂರು ನುಡಿಗಳ ಹಾಡಿನಲ್ಲಿ ಶ್ರೀ ಮಧ್ವರಿಂದ ಸಂದ ಆಧ್ಯಾತ್ಮಿಕ

ಕೊಡುಗೆಗಳನ್ನು ಉಲ್ಲೇಖಿಸಿ, ಪುಣ್ಯದ ಫಲವಾಗಿಯೇ ಅಂತಹವರನ್ನು ಗುರುಗಳನ್ನಾಗಿ ಹೊಂದುವಂತಾಗಿದೆ ಎಂದು ಸಾರಲಾಗಿದೆ.

**೧೦೧. ಜನ್ಮದ ಸಾಫಲ್ಯಕ್ಕೆ ಕಾರಣ ಶ್ರೀ ಮಧ್ವರಾಯರ ಸೇವೆ:**

'ಶ್ರೀ ಮಧ್ವರಾಯರ ಸೇವೆ ದೊರಕುವುದು ಜನುಮ ಸಫಲ ಕಾಣಿರೋ......' –ಎಂದು ಪ್ರಾರಂಭವಾಗುವ ಏಳು ನುಡಿಗಳ ಪುರಂದರದಾಸರ ಹಾಡಿನಲ್ಲಿ ಶ್ರೀ ಮಧ್ವರು ಸಾರಿದ ಸಂದೇಶಗಳನ್ನು ಸಂಗ್ರಹಿಸಿ ಅಂತಹ ಅಮೂಲ್ಯ ಸಂದೇಶಗಳನ್ನು ನೀಡಿದ ಶ್ರೀ ಮಧ್ವರಾಯರ ಸೇವೆ ದೊರಕುವುದು ಜನುಮದ ಸಾಫಲ್ಯಕ್ಕೆ ಕಾರಣವೆಂದು ಸಾರಲಾಗಿದೆ.

**೧೦೨. ಜಗನ್ನಾಥವಿಠಲನಿಗತಿಪ್ರಿಯ ಗುರುಮಧ್ವ:**

'ಮುನಿರಾಯಗೊಂದಿಸುವೆನನುದಿನದಲಿ......' –ಎಂದು ಪ್ರಾರಂಭವಾಗುವ ಐದು ನುಡಿಗಳ ಜಗನ್ನಾಥದಾಸರ ಹಾಡಿನಲ್ಲಿ ಶ್ರೀ ಮಧ್ವರ ಗುಣಗಳನ್ನು 'ವಾಸುದೇವ, ಅಮಾನವಪ್ರತಿಮ ವಿಷ್ಣುಹರಿದಾಸವರ....' ಇತ್ಯಾದಿಯಾಗಿ ಹೆಸರುಗಳ ರೂಪದಲ್ಲಿ ಉಲ್ಲೇಖಿಸಲಾಗಿದೆ.

**೧೦೩. ಶುಕಪಿತನ ಪದಕಂಜಮಧುಪಾ:**

'ಶುಕಪಿತನ ಪದಕಂಜ ಮಧುಪಾ......' –ಎಂದು ಪ್ರಾರಂಭವಾಗುವ ವಿಜಯದಾಸರ ಏಳು ನುಡಿಗಳ ಹಾಡಿನಲ್ಲಿ ಶ್ರೀ ಮಧ್ವರ ಮಹಿಮೆಯನ್ನು ಸಾರಲಾಗಿದೆ.

**೧೦೪. ವಿಜಯವಿಠ್ಠಲಪ್ರಿಯ ಮಧ್ವರಾಯಾ:**

'ನಿನ್ನನೆ ನಂಬಿದೆ ಅನ್ಯರೊಬ್ಬರ ಕಾಣೆ ಮಧ್ವರಾಯಾ......' –ಎಂದು ಪ್ರಾರಂಭವಾಗುವ ಐದು ನುಡಿಗಳ ಹಾಡಿನಲ್ಲಿ ಶ್ರೀ ವಿಜಯದಾಸರು ಮಧ್ವರಾಯರ ಆಧ್ಯಾತ್ಮಿಕ ಕೊಡುಗೆಗಳನ್ನು ಸಂಗ್ರಹಿಸಿರುವರು.

★

# ಮುಖ್ಯಪ್ರಾಣನ ಕುರಿತ ಸುಳಾದಿಗಳು

## [ಸ್ಥೂಲ ಮಾಹಿತಿ]

೧. **ಜಯಸಂಕರುಷಣದೇವನ ಪುತ್ರನ ಗುಣಮಹಿಮೆಗಳು:**

'ಧಾತ್ರಿತ್ರಯಕೆ ಗುರು ಸೂತ್ರನಾಮಕ ವಾಯು....' ಎಂದು ಪ್ರಾರಂಭವಾಗುವ ವಿಜಯದಾಸರ ಎಂಟು ನುಡಿಗಳನ್ನೊಳಗೊಂಡ ಸುಳಾದಿ ಮೊದಲ ಮೂರು ನುಡಿಗಳಲ್ಲಿ ಮುಖ್ಯಪ್ರಾಣನ ಮೂಲರೂಪದ ಗುಣಮಹಿಮೆಗಳನ್ನು ತಿಳಿಸುತ್ತಿದ್ದರೆ, ಮುಂದಿನ ನಾಲ್ಕು ನುಡಿಗಳಲ್ಲಿ ಅವತಾರತ್ರಯದ ಮಹಿಮೆಗಳನ್ನು ನಿರೂಪಿಸಿ, 'ವನಜಾಂಡಗಳೆಲ್ಲವನು ದಿನ ದಿನ ಪಾಲಿಪ ಧನುರ್ಧರ ವಿಜಯವಿಠ್ಠಲನ ಪ್ರೇಮದ ದಾಸಾ' –ಎಂಬ ಉಪಸಂಹಾರದ ಮಾತಿನೊಂದಿಗೆ ಕೊನೆಗೊಳ್ಳುವುದು.

೨. **ಉಪನಿಷತ್‌ಪ್ರತಿಪಾದ್ಯ ಹರಿಗೆ ಕೇವಲ ಮುಖ್ಯದಾಸ:**

'ಪ್ರಾಣ ಅಪಾನ ವ್ಯಾನ ಉದಾನ ಸಮಾನ.....' ಎಂಬ ಪಂಚಪ್ರಾಣಗಳ ನಾಮಗಳೊಂದಿಗೆ ಪ್ರಾರಂಭವಾಗುವ ವಿಜಯದಾಸರ ಆರು ನುಡಿಗಳ ಸುಳಾದಿಯ ಐದು ನುಡಿಗಳಲ್ಲೂ ಪ್ರಾಣದೇವನ ಉಪನಿಷದಾದಿಗಳಲ್ಲಿ ಬಂದಿರುವ ಗುಣಮಹಿಮೆಗಳ ಪ್ರತಿ ಪಾದನೆ ನಡೆದಿದ್ದು 'ಮೂರವತಾರದ ಗುರವೇ ಸುರತರುವೆ ವಾರವಾರಕ್ಕೆ ವಿಜಯವಿಠಲನ್ನ ಪ್ರತಿಬಿಂಬಾ' ಎಂದು ಅವತಾರತ್ರಯದ ಪ್ರಸ್ತಾವದೊಂದಿಗೆ ಕೊನೆಗೊಳ್ಳುವುದು.

೩. **ಹನುಮಂತನ ಬಲಗೊಂಡರೆ ಏನೇನು ಸಿದ್ಧಿಸುವುದು?**

'ಹನುಮಂತನ ಬಲಗೊಂಡರೆ ಹರಿಪದಸೇವೆ ದೊರೆಕೊಂಬುದು....' ಎಂದು ಹನುಮಂತನ ಅನುಗ್ರಹದ ಪ್ರಭಾವ, ಹನುಮಂತನ ಮಹಿಮೆಗಳನ್ನು ತಿಳಿಸುವ ಪುರಂದರದಾಸರ ಒಂಬತ್ತು ನುಡಿಗಳ ಸುಳಾದಿ 'ವಿಜಯೀಭವ ಹನುಮಂತ ವಿಜಯೀಭವ ಗುಣವಂತ ವಿಜಯೀಭವ ಪುರಂದರವಿಠಲನ ಬಲುಬಿಂಬ ಹನುಮಂತ' –ಎಂಬ ಮಾತಿನೊಂದಿಗೆ ಕೊನೆಗೊಳ್ಳುವುದು.

೪. **ಸ್ವಾಮಿಕಾರ್ಯಧುರಂಧರ್ಯನ ಕಾರ್ಯವಿಶೇಷಗಳು:**

'ಜಲಜಸಂಭವನ ಪಟ್ಟಕ್ಕೇರುವ ಗುರುವೆ.....' ಎಂದು ಪ್ರಾರಂಭವಾಗುವ ವಿಜಯ ದಾಸರ ಒಂಬತ್ತು ನುಡಿಗಳ ಸುಳಾದಿ ಆಂಜನೇಯನ ಲೀಲೆ–ಮಹಿಮೆಗಳನ್ನು ಕೊಂಡಾಡು ವುದರ ಜೊತೆಗೆ 'ದ್ವಿತೀಯ ಕೂರ್ಮನಾಗಿ ಜಗವ ಪೊತ್ತ ಶಕ್ತ.....' ಇತ್ಯಾದಿಯಾಗಿ ವಾಯುದೇವನ ಮೂಲರೂಪದ ಗುಣಮಹಿಮೆಗಳನ್ನೂ ಸಾರುತ್ತಿದೆ.

'ಒಡೆಯನಾಜ್ಞವ ತಾಳಿ ಕಾರ್ಯ ಮಾಡಿದ ಗುರುವೆ ಕಡು ಸಮರ್ಥ ವಿಜಯ ವಿಠಲನ ನಿಜವಾಸ' ಎಂಬ ಮಾತಿನೊಂದಿಗೆ ಉಪಸಂಹಾರಗೊಳ್ಳುವುದು.

**೫. ಪಿಂಡಾಂಡದಲ್ಲಿ ವಾಯುದೇವನ ರೂಪಗಳ ಕಾರ್ಯಭಾರ:**

ನಾಸಿಕದಲ್ಲಿ ಇಡಾ ಪಿಂಗಳ ನಾಡಿಗಳು..... ಎಂದು ಪ್ರಾರಂಭವಾಗುವ ವಿಜಯ ದಾಸರ ಮೂರು ನುಡಿಗಳ ಸುಳಾದಿ ವಾಯುದೇವನ ಪ್ರಾಣಾಪಾನಾದಿ ರೂಪಗಳೂ, ನಾಗ ಕೂರ್ಮಾದಿ ರೂಪಗಳೂ ಪ್ರತಿಯೊಬ್ಬನ ಪಿಂಡಾಂಡದಲ್ಲಿ ನಡೆಸುವ ಕಾರ್ಯ ಭಾರವನ್ನು ಸಾರುತ್ತಿದೆ.

**೬. ಸುಂದರಕಾಂಡದ ನೀತಿ:**

'ಅಯ್ಯಯ್ಯ ಕೈಕೆ ಮುನಿದರೆ ಏನವ್ವ....' ಎಂದು ಆರಂಭವಾಗುವ ಆರು ನುಡಿಗಳ ಪುರಂದರದಾಸರ ಸುಳಾದಿ ಸುಂದರಕಾಂಡ ರಾಮಾಯಣದ ಕೆಲವು ಪ್ರಮುಖ ಘಟನೆಗಳನ್ನು ತಿಳಿಸಿ, 'ರಾಮಪುರಂದರವಿಠಲನ ಪೊಂದಿ ಬದುಕಿರೋ' –ಇತ್ಯಾದಿ ನೀತಿ ಗಳನ್ನು ಉದ್ಘೋಷಿಸಲಾಗಿದೆ. 'ಸಹಸ್ರನಾಮಸಮರಾಮನಾಮ' –ಎಂದು ಉಪಸಂಹಾರ ದಲ್ಲಿ ಸಾರಲಾಗಿದೆ.

**೭. ಹಸ್ತಾರೂಢವಾಗಿ ಮಹಿಮಾಪ್ರತಿಪಾದನೆ:**

'ಕಡಗ ಕಂಕಣದಿಂದ ಶೋಭಿತವಾದ ಹಸ್ತಾ....' ಇತ್ಯಾದಿಯಾಗಿ ಪ್ರಾರಂಭವಾಗುವ ಆರು ನುಡಿಗಳ ಸುಳಾದಿಯಲ್ಲಿ ವಿಜಯದಾಸರು ವಾಯುದೇವನ ಮೂರೂ ಅವತಾರಗಳ ಮಹಿಮೆಗಳನ್ನು, ಲೀಲೆಗಳನ್ನು ಅವನ ಹಸ್ತಾರೂಢವಾಗಿ ಪ್ರಸ್ತುತಪಡಿಸಿರುವರು. ಹೀಗೆ ಹಸ್ತಕ್ಕೆ ಸಂಬಂಧಿಸಿದಂತೆ ಮಹಿಮೆಗಳನ್ನು, ಲೀಲೆಗಳನ್ನು ಸಾರಿ ಉಪಸಂಹಾರದಲ್ಲಿ ಹೀಗೆ ಸಾರಲಾಗಿದೆ –ಮೂರಾವತಾರದಲ್ಲಿ ಕಾರ್ಯ ಮಾಡಿದ ಹಸ್ತಾ 'ಧೀರ ಶ್ರೀ ವಿಜಯವಿಟ್ಠಲಗೆರಗಿದ ಹಸ್ತಾ....'

**೮. ಚರಣಾರೂಢವಾಗಿ ಮಹಿಮೆಗಳ ಚಿಂತನೆ:**

'ಅಂದಿಗೆ ಪೊಂಗೆಜ್ಜೆ ಬಿರುದಿನ ಕಾಲ್ಪೆಂಡೆ....' ಎಂದು ಪ್ರಾರಂಭವಾಗುವ ಆರು ನುಡಿಗಳ ವಿಜಯದಾಸರ ಸುಳಾದಿ ಮುಖ್ಯಪ್ರಾಣನ ಮೂಲರೂಪದ ಹಾಗೂ ಅವತಾರ ತ್ರಯಗಳ ಗುಣಮಹಿಮೆಗಳನ್ನು ಅವನ ಚರಣಾರೂಢವಾಗಿ ಸಾರುತ್ತಿದೆ. ಉಪಸಂಹಾರ ದಲ್ಲಿ 'ಚಿತ್ತದಲ್ಲಿ ಚರಣ ಭಾವಿಸಿದ ಜೀವಿಗೆ ನಿತ್ಯಾಯು ಉತ್ಸಹ ವಿಜಯವಿಠ್ಠಲ ಕೊಡುವ' –ಎಂದು ಚರಣಸ್ತುತಿಯ ಫಲಶ್ರುತಿಯನ್ನು ಘೋಷಿಸಲಾಗಿದೆ.

**೯. ವಿಜಯವಿಠಲ ರೇಯನ ಪಾದರೇಣು ಧರಿಸುವವನ ಮಹಿಮೆ:**

'ಕೋತಿಯಾದರೆ ಬಿಡೆನೊ ಬಲುಪರಿ....' –ಎಂದು ಪ್ರಾರಂಭವಾಗುವ ೬ ನುಡಿಗಳ, ವಿಜಯದಾಸರ ಸುಳಾದಿಯಲ್ಲಿ ಹನುಮಂತನ ಗುಣಮಹಿಮೆಗಳನ್ನು, ಅವನನ್ನು ಸಂಬೋಧಿಸಿ ನಿವೇದಿಸಿಕೊಳ್ಳಲಾಗಿದೆ. 'ಅನಂತ ಜನುಮಕ್ಕೆ ನೀನೆ ಗುರು ಎಂಬ ಜ್ಞಾನವೇ ಕೊಡು ಜೀಯಾ ವಿಜಯವಿಠಲನ ದಾಸಾ' –ಎಂಬ ಪ್ರಾರ್ಥನೆಯೊಂದಿಗೆ ಉಪಸಂಹರಿಸ ಲಾಗಿದೆ.

೧೦. **ವಿಜಯವಿಠ್ಠಲನಂಘ್ರಿದಾಸನ ಮಹಿಮೆಗಳು:**

'ಭೀಮಸೇನನೆ ಪೂರ್ಣಕಾಮನೆ....' ಎಂದು ಪ್ರಾರಂಭವಾಗುವ, ೬ ನುಡಿಗಳ ವಿಜಯದಾಸರ ಸುಳಾದಿಯ ಮೊದಲ ನುಡಿಯಲ್ಲಿ ಭೀಮಸೇನನ ಗುಣಗಳನ್ನು ಸ್ಥೂಲವಾಗಿ ಹೇಳಲಾಗಿದೆ. ಎರಡನೇ ನುಡಿಯಲ್ಲಿ 'ಗುರುವೇ ಮೂಲಗುರುವೇ....' ಇತ್ಯಾದಿಯಾಗಿ ಗುರುತ್ವದ ಉಲೇಖದೊಂದಿಗೆ ನಾನಾ ನಾಮಗಳಿಂದ ಸಂಬೋಧನೆಯನ್ನು ಮಾಡಲಾಗಿದೆ. ಮೂರು, ನಾಲ್ಕು ಹಾಗೂ ಐದನೆಯ ಸುಳಾದಿಗಳಲ್ಲಿ ಭೀಮಸೇನನ ಚರಿತ್ರೆಯ ಮಹತ್ವದ ಘಟನೆಗಳನ್ನು ಸ್ತುತಿಸಲಾಗಿದೆ. 'ನರಹರಿ ಮನಮೆಚ್ಚಿ ನಡೆದಾ ಭೀಮಾವತಾರಾ....' ಎಂದು ಉಪಸಂಹಾರದಲ್ಲಿ ಭೀಮಾವತಾರದಲ್ಲಿ ದುರ್ಯೋಧನಾದಿಗಳ ಸಂಹಾರ ನರಹರಿ ಎನಿಸುವ ನೃಸಿಂಹನು ಮೆಚ್ಚಿಕೊಳ್ಳುವಂತೆ ಅವನ ಆರಾಧನಾ ರೂಪದಲ್ಲಿ ನಡೆಸಲಾಗಿದೆ –ಎಂದು ಸಾರಲಾಗಿದೆ.

೧೧. **ವ್ಯಾಸಶಿಷ್ಯ ಮಧ್ವಮುನಿಯ ಸಾಧನೆಗಳು:**

'ಶ್ರೀಮದ್ವಿಠಲಪಾದಾಂಬುಜ ಮಧುಪರಾಜಾ....' –ಎಂದು ಪ್ರಾರಂಭವಾಗುವ, ಆರು ನುಡಿಗಳ ಸುಳಾದಿಯಲ್ಲಿ ಶ್ರೀ ವಿಜಯದಾಸರು ಶ್ರೀ ಮಧ್ವರ ಗುಣಗಳನ್ನೂ, ಸಂದೇಶವನ್ನೂ, ಆಧ್ಯಾತ್ಮಿಕ ಕೊಡುಗೆಯನ್ನೂ ನಿರೂಪಿಸಿ, 'ಅದ್ವೈತಮತಾರಣ್ಯದಾವಾ ವ್ಯಾಸಶಿಷ್ಯ ಮಧ್ವಮುನಿ ವಿಜಯವಿಠ್ಠಲನ ನಿಜದಾಸಾ....' –ಎಂದು ಉಪಸಂಹರಿಸಿರುವರು.

೧೨. **ಪಂಚತಿರುಪತಿ ವಾಸನ ಮಹಿಮೆ:**

'ಲೋಕವಾಹಕನಾಗಿ.....' ಎಂದು ಪ್ರಾರಂಭವಾಗುವ ಮೂರು ನುಡಿಗಳ ಸುಳಾದಿಯಲ್ಲಿ ಶ್ರೀ ವಿಜಯದಾಸರು ಹನೂಮಂತನ ಕೆಲವು ಸಾಧನೆಗಳನ್ನು ಸಂಗ್ರಹಿಸಿರುವರು.

೧೩. **ಯಂತ್ರೋದ್ಧಾರಕ ಹನುಮನ ಪರಿಚಯ:**

'ಯಂತ್ರೋದ್ಧಾರಕ ಹನುಮಾ....' ಎಂದು ಪ್ರಾರಂಭವಾಗುವ ನುಡಿಯ ಸುಳಾದಿ ಯಂತ್ರೋದ್ಧಾರಕ ಹನುಮಂತನ ಪ್ರತಿಷ್ಠೆ, ಪ್ರಭಾವ ಇತ್ಯಾದಿಗಳ ಮಾಹಿತಿಯನ್ನು ನೀಡುತ್ತಿದೆ. 'ವ್ಯಾಸಮುನಿಪೂಜಿತ ಯಂತ್ರೋದ್ಧಾರಕ ಹನುಮಾ ಈಶಾನಾ ವಿಜಯವಿಠ್ಠಲನ ದಾಸರ ಪ್ರೇಮಾ' –ಎಂದು ಉಪಸಂಹರಿಸಲಾಗಿದೆ.

೧೪. **ಸಿರಿ ಮಧ್ವಾಚಾರ್ಯರೇ ಗುರುಗಳು ತ್ರೈಲೋಕ್ಯಕ್ಕೆ:**

'ಒಬ್ಬ ಆಚಾರ್ಯನು ದೈವವೇ ಇಲ್ಲವೆಂಬ.....' ಇತ್ಯಾದಿಯಾಗಿ ಆರಂಭವಾಗುವ ಏಳು ನುಡಿಗಳ ಸುಳಾದಿಯಲ್ಲಿ ಶ್ರೀ ಪುರಂದರದಾಸರು ಶ್ರೀ ಮಧ್ವಾಚಾರ್ಯರ ಮೂಲಕ ನಡೆದ ಶ್ರೀವಿಷ್ಣುಪಾರಮ್ಯದ ಸಮರ್ಥನೆಯನ್ನು ಎತ್ತಿ ತೋರಿಸಿ, 'ಸುರಗುರು ಮಧ್ವಾಚಾರ್ಯರೇ ಚಕ್ರವರ್ತಿ ಶರಣುಗಿರಿ ಮಧ್ವಾಚಾರ್ಯರಿಗೆ ಪುರಂದರವಿಠಲಗೆ । ಶರಣು ಶರಣೆಂಬೆ ನಾನನವರತ' ಎಂದು ಘೋಷಿಸಿರುವರು.

೧೫. **ಮಧ್ವರಾಯರ ಮತದ ಭಾಗ್ಯವೇ ಸೌಭಾಗ್ಯ:**

'ಮಧ್ವಮತದ ಭಾಗ್ಯ ಎಂಥದೊ ಎಂಥದೊ....' ಎಂದು ಪ್ರಾರಂಭವಾಗುವ ಶ್ರೀ ವಿಜಯದಾಸರ ಐದು ನುಡಿಗಳ ಸುಳಾದಿ ಮಧ್ವಮತದ ತತ್ವಗಳ ವೈಶಿಷ್ಟ್ಯವನ್ನೂ, 'ಶ್ರೀಮದಾನಂದತೀರ್ಥ ಗುರುಗಳೇ ಗುರುಗಳು' ಎಂದು ಸಾರಿ 'ಮಧ್ವರಾಯರ ಕರುಣ ಪಡೆದು ಪಾವನರಾಗಿ ಸಿದ್ಧನಾಗುವುದು ವಿಜಯವಿಠಲನ ಪೊಂದಿ' –ಎಂದು ಘೋಷಿಸ ಲಾಗಿದೆ.

★

# ಮುಖ್ಯಪ್ರಾಣನ ಕುರಿತ ಉಗಾಭೋಗಗಳು

## ಗುರುಪರಂಪರೆ

ಶ್ರೀಪತಿಯ ನಾಭಿಯಿಂದ ಅಜ ಜನಿಸಿದನು
ಅಜನ ಮಾನಸ ಪುತ್ರರೇ ಸನಕಾದ್ಯರು
ಸನಕಾದ್ಯರ ಶಿಷ್ಯರೇ ದೂರ್ವಾಸರು
ದೂರ್ವಾಸರ ಶಿಷ್ಯರೇ ಪರತೀರ್ಥರು
ಪರತೀರ್ಥರ ಶಿಷ್ಯರೇ ಸತ್ಯಪ್ರಜ್ಞರು
ಸತ್ಯಪ್ರಜ್ಞರ ಶಿಷ್ಯರೇ ಪ್ರಾಜ್ಞತೀರ್ಥರು
ಪ್ರಾಜ್ಞತೀರ್ಥರ ಶಿಷ್ಯರೇ ಅಚ್ಯುತಪ್ರೇಕ್ಷರು
ಅಚ್ಯುತಪ್ರೇಕ್ಷರ ಕರಸಂಜಾತರೇ ಪೂರ್ಣಪ್ರಜ್ಞರು
ಪೂರ್ಣಪ್ರಜ್ಞರೇ ನಮ್ಮ ಭಾಷ್ಯಕಾರರು
ಭಾಷ್ಯಕಾರರೇ ನಮ್ಮ ಗುರು ಮುಖ್ಯಪ್ರಾಣರು
ಗುರುಮುಖ್ಯಪ್ರಾಣಪತಿ ನಮ್ಮ ಪುರಂದರವಿಠಲ ॥

* * *

## ಹಯವದನ ದೂತ ದುರಿತದೂರ

ಹನುಮ ಭೀಮ ಮಧ್ವಮುನಿರಾಯ
ಗುಣಧಾಮ ಹರಿಪಾದ ಸೇವೆಯೊಳಧಿಕ ಪ್ರೇಮ
ಆಂಜನೇಯ ವರಪುತ್ರ ಅಕಳಂಕಚರಿತ್ರ
ಸಂಜೀವ ಗಿರಿಧರನೆ ಸಾಧುವರನೆ
ಸೀತೆಗುಂಗುರವಿತ್ತು ಪ್ರೀತಿ ಪಡಿಸಿದ ಹನುಮ
ರಾಮದೂತನೆಂದು ಎನಿಸಿಕೊಂಡಿ

ಶರಣು ಶರಣೆಂಬೆ ನಾ ನಿನ್ನ ಚರಣಗಳಿಗೆ ದುಷ್ಟಸಂ-
ಹಾರ ಭಕ್ತರುದ್ಧಾರ ಹಯವದನದೂತ ದುರಿತದೂರ ॥

* * *

## ರೋಮಕೋಟಿಲಿಂಗನೆಂದೆನಿಸಿದ ಹನುಮ

ರೋಮಕೋಟಿಲಿಂಗನೆಂದೆನಿಸಿದ ಹನುಮನೊಂದೊಂದು
ರೋಮಕೆ ಕೋಟಿ ಶಿವರ ಮಾಡುವ ಶಕ್ತ ಕಾಣಿರೊ
ಆ ಮಹಾತ್ಮನ್ನ ತನ್ನ ಆಳು ಮಾಡಿ ನಡೆಸಿಕೊಂಡ
ರಾಮಚಂದ್ರನೆ ಜಗಕೆ ಪರದೈವ ಕಾಣಿರೊ
ಸಾಮಿ ಹಯವದನ ವೇದವ ತಂದು ಕಮಲಜನ
ಕಾಮಿತವನಿತ್ತನಾಗಿ ಅವನೆ ಜಗದೊಡೆಯ ॥

* * *

## ಮಧ್ವರಾಯರ ಭಾಗ್ಯ

ಮಧ್ವರಾಯರ ಭಾಗ್ಯ ಎಂಥದೊ ವರ್ಣಿಸಲು
ಶುದ್ಧಸತ್ವಾತ್ಮಕವಾದ ಶರೀರವು
ಅದ್ವೈತಮತವೆಂಬೊ ಅರಣ್ಯವ ಪೊಕ್ಕು
ವಿಧ್ವಂಸ ಮಾಡಿ ವಾದಿಗಳನೆ ಗೆದ್ದು
ಪದ್ಧತಿ ತಪ್ಪದಂತೆ ಮತವನುದ್ಧರಿಸಿ
ವೃದ್ಧಿಗೈಸಿದರು ಸರ್ವಸಜ್ಜನರನ್ನು
ಸಿದ್ಧರಾವೆಂದು ಗೀರ್ವಾಣರೆಲ್ಲರು
ಎದ್ದೆದ್ದು ಕುಣಿದರು ಕರವ ಹೊಡೆದು
ವಿದ್ವಾಂಸ ನಾನೆಂದು ಅಹಂಕರಿಸದೆ ಇವರ
ಪಾದಪದ್ಮದಲ್ಲಿ ಅತಿದೃಢಭಕುತಿ ಮಾಡಿ
ಮಧ್ವರಾಯರೆ ನಮಗೆ ಉದ್ಧಾರಕೆಂದು
ಪದೇ ಪದೆಗೆ ತಿಳಿದು ಕೊಂಡಾಡಿದರೆ
ಸಿದ್ಧಿಕಾರ್ಯ ಸಿರಿಮೋಹನ್ನವಿಠಲ
ಹೃದ್‌ದೃಷ್ಟಿಯಲಿ ನಿಂತು ಸಲಹುವನು ಬೇಗ ॥

* * *

ವಿಜ್ಞಾನವನಿತ್ತು ಪರಿಪಾಲಿಸಲು ಮಾರುತಿಯಲಿ ಬಿನ್ನಹ
ಮಾರುತಿ ನಿನ್ನ ನಿರುತದಿ ಭಜಿಪೆ
ತ್ವರಿತದಿ ಹರಿ ಸರ್ವೋತ್ತಮನೆಂಬೊ
ಸರಸವಿಜ್ಞಾನವ ಸರಿ ಇಲ್ಲದೆ ಇತ್ತು
ಪರಿಪಾಲಿಸು ಎಂದು ಶಿರಸದಿ ನಮಿಪೆ
ಸರಿಯಾರಯ್ಯ ನಿನಗೆ ಸರಸಿಜಾಂಡದೊಳು
ಅರಸಿ ನೋಡಲು ಆರಾರು ಇಲ್ಲವೊ
ಕಾರುಣ್ಯಸಾಗರ ಕರುಣಿಸೆ ನೀ ಎನ್ನ
ಹರಿ ತಾ ಕರುಣಿಪನೆಂದು ಅರಿತು ನಿನ್ನಯ ದಿವ್ಯಚರಣ
ಸೇರಿದೆನಯ್ಯ ಸರಿ ಬಂದದ್ದು ಮಾಡೊ
ಹರಿಕುಲವರಿಯನೆ ಪರಿಪರಿ ಜನರನ್ನು ಪಾಲಿಸಿ ಎನ್ನನು
ದೂರದಿ ಇಟ್ಟರೆ ದೊರೆತನವೇನಯ್ಯ
ಸಾರುವೆ ಸಾರುವೆ ಸರಸಿಜಾಭನ ಸುತನೆ
ಆರು ಮೂರೆರಡೊಂದು ಸಾವಿರ
ಮೂರೆರಡು ಶತಶ್ವಾಸ ಜಪಗಳನು
ಮೂರು ಜೀವರಲ್ಲಿ ನೀರಜಕಲ್ಪ-
ಪರಿಯಂತರ ಮಾಡಿ ಅವರವರ ಗತಿಯ
ಮರೆಯದೆ ನೀಡುವಿ ಗಿರಿಶನುತ ಪಾದ
ಗುರುಜಗನ್ನಾಥವಿಠಲನ್ನ ಅರಿವಂತೆ ಮಾಡೋ ಧೀರ

* * *

## ಸಕಲ ಜೀವೋತ್ತಮ

ಅಖಿಲಬೊಮ್ಮಾಂಡನಾಯಕ ಸಕಲಜೀವೋತ್ತಮ
ವಿಖನಸಾರ್ಚಿತಪಾದ ನಿಖಿಳಲೋಕವ್ಯಾಪ್ತ
ಲಕುಮಿರಮಣನ ಪ್ರಾಣಸಂಭೂತ
ಸುಖಜ್ಞಾನಮಯಸ್ವರೂಪ ಸುಮನಸೋತ್ತರಿಸ
ಶಿಖಿಸಬೋದಿತರವಿ ಪ್ರಕರಸನ್ನಿಭಮುಖ
ಸುಖಪೂರ್ಣ ಶುದ್ಧ ಸತ್ವಶರೀರ
ಆಖಣಾಶ್ಮಸಮಚರಣ ಭಕ್ತಾಭರಣ
ಲೋಕೈಕವೈದ್ಯ ಭಾರತೀಕಾಂತಾ-
ಲೌಕಿಕಸುಖದಾತಾ ಪ್ರಖ್ಯಾತಾ

ಕಾಕೋದರಶಾಯಿ ನಮ್ಮ ಗುರುಜಗನ್ನಾಥವಿಠಲನಾ-
ಲೋಕನವಿತ್ತು ಪೊರೆಯೊ ಪ್ರಾಣರಾಯ
ಭಾರತೀರಮಣನೆ ಬಾರೊ ಮನೆಗಿಂದು ॥

* * *

**ಮನೆಗೆ ಬರಲು ಬಿನ್ನಹ**

ಬಾರಿ ಬಾರಿಗೆ ನಿನ್ನ ಚರಣಕ್ಕೆ ಶರಣೆಂಬೆ
ಭಾರತೀರಮಣನೆ ಬಾರೋ ಮನೆಗಿಂದು
ಶ್ರೀ ಪುರಂದರವಿಠಲರಾಯನೆ
ಎಂದೆಂದಿಗು ನೀನೆ ಜಗಕೆ ಬಂಧು ॥

* * *

**ಭಾರತಿಯ ಗಂಡ ಸತ್ಯಲೋಕವನಾಳ್ವ ಶೌಂಡ**

ದಾಸನಾದವಗೆ ವೈಕುಂಠದಲಿ ವಾಸ
ದಾಸನಾಗದವನೆಲ್ಲಿ ಪೋದರಾಭಾಸ
ದಾಸನೆಂದೆನಿಸಿದ ಭಾರತಿಯ ಗಂಡ
ಸತ್ಯಲೋಕವನಾಳ್ವ ಶೌಂಡ
ದಾಸರ ಹೃದಯದಿ ಮಿನುಗುವ
ಶೀಶ ವಾಸವಾದಿವಂದ್ಯ ದ್ವಿ-
ಸಾಸಿರಾಂಬಕ ಶರಣ್ಯ
ದಾಸರಿಗೊಲಿದ ಪುರಂದರವಿಠಲ ॥

* * *

**ನಿತ್ಯಪುರಭಾವ ಬೊಮ್ಮಪ್ರಾಣರಿಗೆ**

ನಿತ್ಯ ಪತಿಭಾವ ಶ್ರೀಲಕುಮಿದೇವಿಗಯ್ಯ
ನಿತ್ಯ ಪುತ್ರಭಾವ ಬೊಮ್ಮಪ್ರಾಣರಿಗೆ
ನಿತ್ಯ ಪೌತ್ರಭಾವ ಗರುಡಶೇಷರುದ್ರರಿಗೆ
ನಿತ್ಯ ಭೃತ್ಯಭಾವ ಇಂದ್ರಕಾಮ ಆತ್ಮ ಜೀವರಿಗೆ
ಇಂತೆಂದ ಪುರಂದರವಿಠಲ ॥

* * *

**ನಮಸ್ತಸ್ಮೈ ನಮಸ್ತಸ್ಮೈ ಸಮಸ್ತಸ್ವಾಮಿನೇಽಸ್ತು ತೇ ।**
**ನಮಸ್ತಸ್ಮೈ ಚ ಯಸ್ತಸ್ಮೈ ನಮಸ್ಕರ್ತಾ ಗುರುಸ್ಸದಾ ॥**

ಸಮಸ್ತ ಪ್ರಪಂಚಕ್ಕೆ ಒಡೆಯನಾದ, ಶಾಸ್ತ್ರಪ್ರಪಂಚದಲ್ಲಿ ಪ್ರಸಿದ್ಧ ನಾದ ನಿನಗೆ ಮತ್ತೆ ಮತ್ತೆ ಪ್ರಣಾಮ. ಅಂತಹ ನಿನಗೆ ಸರ್ವದಾ ನಮಸ್ಕರಿಸುತ್ತಿರುವ ಮಧ್ವಗುರುಗಳಿಗೂ ಪ್ರಣಾಮ.





## ಪ್ರಾಣಚಿಂತನಸಮರ್ಪಣೆಯ ವೈಭವ

ಪ್ರಾಣಚಿಂತನಕೃತಿಯನ್ನು ಕಳೆದ ದೀಪಾವಳಿ ಹಬ್ಬದಂದು (8-11-2007ರಂದು) ಮಧ್ವಾಂತರ್ಗತವೇದವ್ಯಾಸರಿಗೆ ಅರ್ಪಿಸಿದ ವೈಭವ ಹೀಗಿದೆ–

ಅಂದು ಮೊದಲು ಕುಂಜಾರುಗಿರಿಯಲ್ಲಿ ವಿರಾಜಮಾನಳಾಗಿರುವ ದುರ್ಗಾದೇವಿಗೆ ಅಲ್ಲಿಯ ಅರ್ಚಕರ ಮೂಲಕ ಸಮರ್ಪಿಸಲಾಯಿತು. ಬಳಿಕ ಪಾಜಕಕ್ಷೇತ್ರಕ್ಕೆ ಹೋಗಿ ಅಲ್ಲಿಯ ಅರ್ಚಕರಾದ ಶ್ರೀ ಮಾಧವಾಚಾರ್ಯರು ಅಲ್ಲಿಯ ಆರಾಧ್ಯನಾದ ಶ್ರೀ ಅನಂತಾಸನನಿಗೆ ಅರ್ಪಿಸಿದರು. ಅನಂತರ ಶ್ರೀ ಮಧ್ವರ ಮಂದಿರಕ್ಕೆ ಸಾಗಿ, ಅಲ್ಲಿ ವಾದಿರಾಜಪ್ರತಿಷ್ಠಿತ ಮಧ್ವರ ಮೂಲಕ ಅವರ ಅಂತರ್ಯಾಮಿ ಶ್ರೀವೇದವ್ಯಾಸರಿಗೆ ಸಮರ್ಪಿಸಲಾಯಿತು.

ಶ್ರೀ ಮಾಧವಾಚಾರ್ಯರು 'ಅಂ ಅಜಾಯ ನಮಃ, ಆಂ ಆನಂದಾಯ ನಮಃ.... ' –ಎಂದು ಮಾತೃಕಾನ್ಯಾಸದ ಮೂಲಕ ಪ್ರಾಣಚಿಂತನಕೃತಿಯ ಪ್ರತಿಯೊಂದು ಅಕ್ಷರವನ್ನೂ ಅಜಾದಿ ಭಗವದ್ರೂಪಗಳಿಗೆ ಸಮರ್ಪಿಸುವ ಮೂಲಕ ವೈಶಿಷ್ಟ್ಯಪೂರ್ವಕವಾಗಿ ಪ್ರಾಣಚಿಂತನವನ್ನು ಮಧ್ವಾಂತರ್ಗತ ಅಜಾದ್ಯಭಿನ್ನ ಶ್ರೀ ವೇದವ್ಯಾಸರಿಗೆ ಸಮರ್ಪಿಸಿರುವರು.

# ವಾಯುವಾಹನತ್ವಕ್ಕೊಂದು ಪ್ರಾತ್ಯಕ್ಷಿಕೆ



ಭಗವಂತನಿಗೆ ಗರುಡ ಹೇಗೋ, ಹಾಗೆಯೇ ವಾಯುದೇವನೂ ವಾಹನ. ಹಿಗಿದ್ದರು ಭಗವಂತ "ಗರುಡವಾಹನ" ಎಂದು ಪ್ರಸಿದ್ಧನೇ ಹೊರತು "ವಾಯುವಾಹನ ಎಂದು ಯಾಕೆ ಪ್ರಸಿದ್ಧನಾಗಿಲ್ಲ ? ಎಂಬ ಪ್ರಶ್ನೆಗೆ ಹೀಗೆ ಸಮಾಧಾನ - ಭಗವಂತನನ ಗರುಡ ಹೊತ್ತು ಸಾಗುವುದನ್ನು ಆ ಕಾಲದ ಜನಸಾಮಾನ್ಯರೂ ಕಂಡಿರುವರು ಜೀವನು ಒಂದು ದೇಹವನ್ನು ತ್ಯಜಿಸಿ ಮತ್ತೊಂದು ದೇಹವನ್ನು ಪ್ರವೇಶಿಸುವಾ ವಾಯುದೇವನು ತನ್ನ ಬಲ ಹೆಗಲಲ್ಲಿ ಭಗವಂತನನ್ನೂ ಎಡ ಹೆಗಲಲ್ಲಿ ಆಯ ಜೀವನನ್ನು ಹೊತ್ತು ಕೊಂಡಿರುವನು. ಹೀಗೆ ಭಗವಂತ "ವಾಯುವಾಹನ ನಾಗಿರುವುದು ಜ್ಞಾನಿಗಳಿಗಷ್ಟೇ ದೃಶ್ಯವಾದುದು. ಆದುದರಿಂದ ಅವನ ವಾಯುವಾಹನತ್ವ ಜ್ಞಾನಿಗಳಿಗೆ ಪ್ರಸಿದ್ಧವೇ ಹೊರತು ಜನಸಾಮಾನ್ಯರ ಪ್ರಪಂಚದಲ್ಲಿ ಪ್ರಸಿದ್ಧವಲ್ಲ.

ಆದರೂ ಭಗವಂತನ ವಾಯುವಾಹನತ್ವವನ್ನು ಅನುಸಂಧಾನಕ್ಕೆ ತಂದುಕೊಳ್ಳಲು ಅನುಕೂಲವಾಗಲೋ ಎಂಬಂತೆ ಕಿಷ್ಕಿಂಧೆಯಲ್ಲಿ ಆಂಜನೇಯನು ರಾಮಲಕ್ಷ್ಮಣರನ್ನು ಸುಗ್ರೀವನಲ್ಲಿಗೆ ಕರೆದೊಯ್ಯುವಾಗ ತನ್ನ ಬಲ ಹೆಗಲ ಮೇಲೆ ಶ್ರೀರಾಮನನ್ನೂ, ಎಡ ಹೆಗಲ ಮೇಲೆ ಲಕ್ಷ್ಮಣನನ್ನೂ ಕುಳ್ಳಿರಿಸಿ ಕೊಂಡಿರುವನು. ಆ ಪ್ರಸಂಗದಲ್ಲಿ ನಗುವ ಮೂಲಕ ರಾಮಚಂದ್ರ ಹೀಗೆ ತಮ್ಮನ್ನು ಹೊರುವುದು ಮೂಲರೂಪದ ಪ್ರಕ್ರಿಯೆಗನುಗುಣವಾದದ್ದೆಂದು ಸೂಚಿಸಿದ್ದನು.

# ಭಗವದನುಗೃಹೀತ ಪ್ರಶಸ್ತಿಗಳು

## ಆಂಜನೇಯ ಪಡೆದ ಪ್ರಶಸ್ತಿ

"ಮದ್‌ಭಕ್ತೌ ಜ್ಞಾನಪೂರ್ತಾವನುಪಧಿಕಬಲಪ್ರೋನ್ನತಿಸ್ಥೈರ್ಯಧೈರ್ಯ-
ಸ್ವಾಭಾವ್ಯಾಧಿಕ್ಯತೇಜಸ್ಸುಮತಿದಮಶಮೇಷ್ವಸ್ಯ ತುಲ್ಯೋ ನ **ಕಶ್ಚಿತ್**"

ನನ್ನ ಬಗೆಗಿನ ಭಕ್ತಿಯಲ್ಲಿ, ಪೂರ್ಣ ತಿಳುವಳಿಕೆಯಲ್ಲಿ, ಸಹಜಬಲ, ಎತ್ತರದ ಸ್ಥಿತಿ, ಸ್ಥೈರ್ಯ, ಧೈರ್ಯ, ಸ್ವಾಭಾವಿಕವಾದ ಆಧಿಕ್ಯ, ತೇಜಸ್ಸು- ಇವುಗಳಲ್ಲಿ ಒಳ್ಳೆಯ ಮನನ, ಇಂದ್ರಿಯನಿಗ್ರಹ, ಭಗವನ್ನಿಷ್ಠೆ- ಇವುಗಳಲ್ಲಿ ಇವನಿಗೆ ಸರಿದೂಗುವ ವ್ಯಕ್ತಿ ಮತ್ತೊಬ್ಬನಿಲ್ಲ.

ಆಂಜನೇಯರೂಪದಲ್ಲಿ ಶ್ರೀ ರಾಮಚಂದ್ರನಿಂದ ಪಡೆದುಕೊಂಡ ಪ್ರಶಸ್ತಿ
(ಮ.ಭಾರ.ತಾ.ನಿ. 8-233)

## ಭೀಮ ಪಡೆದ ಪ್ರಶಸ್ತಿ

"ಯತ್ಕಿಂಚಾತ್ಮನಿ ಕಲ್ಯಾಣಂ ಸಂಭಾವಯಸಿ ಪಾಂಡವ |
ಸಹಸ್ರಗುಣಮಪ್ಯೇತತ್ತ್ವಯಿ ಸಂಭಾವಯಾಮ್ಯಹಮ್ ||"

ಭೀಮಸೇನ, ನೀನು ನಿನ್ನಲ್ಲಿ ಜ್ಞಾನಭಕ್ತ್ಯಾದಿ ಕಲ್ಯಾಣ ಗುಣಗಳನ್ನು ಎಷ್ಟಿವೆ ಎಂದು ತಿಳಿದಿರುವಿಯೋ ಅದಕ್ಕಿಂತ ಸಾವಿರಾರು ಪಟ್ಟು ಹೆಚ್ಚಾಗಿಯೇ ನಿನ್ನಲ್ಲಿ ಇವೆ ಎಂದು ನಾನು ಬಲ್ಲೆನು.

ಭೀಮಸೇನರೂಪದಲ್ಲಿ ಶ್ರೀಕೃಷ್ಣನಿಂದ ಪಡೆದ ಪ್ರಶಸ್ತಿ.
(ಮ.ಭಾ.ಉದ್ಯೋಗ 77-3)

## ಮಧ್ವರು ಪಡೆದ ಪ್ರಶಸ್ತಿ

"ಭವಿತಾಽನ್ಯದುಷ್ಕರತರಂ ವಿಧಾಯ ಯತ್
ತರುಣಂ ತವಾವತರಣಂ ಮಹಾಫಲಮ್ |"

ಬೇರೆಯಾರಿಂದಲೂ ಮಾಡಲಾಗದ ಈ ದೇವತಾಕಾರ್ಯವನ್ನು ಮಾಡಿದಾಗಲೇ ನಿಮ್ಮ ಈ ನೂತನ ಅವತಾರವು ಮಹಾ ಫಲದಿಂ[illegible] ಕೂಡಿದಂತಾಗುವುದು.

ಮಧ್ವರೂಪದಲ್ಲಿ ಶ್ರೀನಾರಾಯಣನಿಂದ ಪಡೆದುಕೊಂಡ [illegible] [illegible]ದಲ್ಲಿ [illegible]

([illegible] 8-44)